

ಮೈಸೂರು ವಿಶ್ವವಿದ್ಯಾನಿಲಯ

ಕನ್ನಡ ಅಧ್ಯಯನ ಸಂಸ್ಥೆಯ

# ಕನ್ನಡ ಸಾಹಿತ್ಯ ಚರಿತ್ರೆ



ಎರಡನೆಯ ಸಂಪುಟ

ಸುದೀರ್ಘವೂ ಸಂಪದ್ಯುಕ್ತವೂ ಆದ ಕನ್ನಡ ಸಾಹಿತ್ಯದ ಚರಿತ್ರೆಯನ್ನು ನಿರೂಪಿಸುವ ಹಲವು ಗ್ರಂಥಗಳು ಈವರೆಗೆ ಪ್ರಕಟವಾಗಿದ್ದರೂ, ಅವುಗಳಿಗೆ ಬಗೆಬಗೆಯ ಸೀಮಿತಗಳಿವೆ. ಮುಖ್ಯವಾಗಿ ಸಾಹಿತ್ಯದ ಪ್ರಾಚೀನತೆ ಹರವುಗಳ ಎದುರಿನಲ್ಲಿ ಈ ಚರಿತ್ರೆಗಳು ಸಂಕ್ಷೇಪವಾದವು; ಸಾಹಿತ್ಯ ಚರಿತ್ರೆಯನ್ನು ಬರೆಯುವವರಿಗೆ ಒದಗುವ ತೊಡಕುಗಳ ಕಾರಣದಿಂದ ಅಪರಿಪೂರ್ಣವಾದವು. ಆದುದರಿಂದ ಸಮಗ್ರವಾದ ಒಂದು ಸಾಹಿತ್ಯ ಚರಿತ್ರೆ ಕನ್ನಡದ ಬಹುದಿನಗಳ ಅಗತ್ಯವಾಗಿತ್ತು. ಇಂಥದೊಂದು ಕೃತಿಯ ನಿರ್ಮಾಣಕ್ಕೆ ಸಾಂಸ್ಥಿಕ ಪ್ರಯತ್ನವೂ ಆವಶ್ಯಕವಾಗಿತ್ತು. ಕನ್ನಡ ಸಾಹಿತ್ಯದ ವ್ಯಾಪ್ತಿ ವೈವಿಧ್ಯಗಳನ್ನು ಗಮನಿಸಿದಾಗಲೆಲ್ಲ ಈ ಮಹಾಸಾಹಿತ್ಯದ ಚರಿತ್ರೆಯ ರಚನೆಗೆ

ದರ

ಶ್ವ

ವು

ಡ

ದು





ಕನ್ನಡ ಅಧ್ಯಯನ ಸಂಸ್ಥೆಯ ಪ್ರಕಟಣೆ – ೩೪೪

ಸಾಮಾನ್ಯಮಾಲೆ – ೧೫

ಪ್ರಧಾನ ಸಂಪಾದಕ

ಡಾ. ಹಾ. ಮಾ. ನಾಯಕ

ಕನ್ನಡ ಅಧ್ಯಯನ ಸಂಸ್ಥೆಯ

# ಕನ್ನಡ ಸಾಹಿತ್ಯ ಚರಿತ್ರೆ

ಎರಡನೆಯ ಸಂಪುಟ

ಕನ್ನಡ ಅಧ್ಯಯನ ಸಂಸ್ಥೆಯ

# ಕನ್ನಡ ಸಾಹಿತ್ಯ ಚರಿತ್ರೆ

## ಎರಡನೆಯ ಸಂಪುಟ

ಡಾ. ಹಾ. ಮಾ. ನಾಯಕ, ಪ್ರಧಾನ ಸಂಪಾದಕ
ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರೀ, ಸಂಪಾದಕ



ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
೧೯೭೪

*Kannaḍa Adhyayana Samstheya Kannaḍa Sahitya Caritre* (Eraḍaneya Sampuṭa), being the second volume of a 10-volume History of Kannada Literature, prepared and published by the Institute of Kannada Studies, University of Mysore, Mysore. Chief Editor : Dr. H. M. Nayak ; Editor : Dr. T. V. Venkatachala Sastry. First edition : May, 1975 ; pp. 839. Price Rs. 30/-





ಬೆಲೆ: ಮೂವತ್ತು ರೂಪಾಯಿಗಳು

ಮಾರಾಟಗಾರರು: ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು
ಮುದ್ರಕರು: ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್, ಮೈಸೂರು

ಕನ್ನಡ ಭಾಷಾಸಾಹಿತ್ಯಗಳ ಪುನರುಜ್ಜೀವನಕರ್ತರಲ್ಲಿ ಗಣ್ಯರೂ
ಕನ್ನಡ ಸಾಹಿತ್ಯ ಚರಿತ್ರೆಯನ್ನು ಬರೆದ ಮೊದಲಿಗರಲ್ಲಿ ಒಬ್ಬರೂ
'ಬಿಬ್ಲಿಯೋಥಿಕ ಕರ್ನಾಟಿಕ' ಗ್ರಂಥಮಾಲೆಯನ್ನು ಆರಂಭಿಸಿ (೧೮೮೪)
ಕನ್ನಡ ನಾಡಿನಲ್ಲಿ ಕನ್ನಡ ಸಾಹಿತ್ಯದ ವಿಶೇಷ ಅಧ್ಯಯನಕ್ಕೆ
ಅಡಿಗಲ್ಲು ಹಾಕಿದವರೂ ಆದ

**ಬೆಂಜಮಿನ್ ಲೂಯಿ ರೈಸ್** ಸಿ.ಐ.ಇ., ಎಂ.ಆರ್.ಎ.ಎಸ್.
(೧೮೩೭-೧೯೨೭)

ಅವರ ನೆನಪಿಗೆ

# ಪರಿವಿಡಿ



## ಅಧ್ಯಾಯ ಒಂದು



## ಅಧ್ಯಾಯ ಎರಡು



## ಅಧ್ಯಾಯ ಮೂರು

## ಅಧ್ಯಾಯ ನಾಲ್ಕು



## ಅಧ್ಯಾಯ ಐದು



## ಅಧ್ಯಾಯ ಆರು



## ಅಧ್ಯಾಯ ಏಳು



## ಅಧ್ಯಾಯ ಎಂಟು

# ಮುನ್ನುಡಿ

ಸುದೀರ್ಘವೂ ಸಂಪದ್ಯುಕ್ತವೂ ಆದ ಕನ್ನಡ ಸಾಹಿತ್ಯದ ಚರಿತ್ರೆಯನ್ನು ನಿರೂಪಿಸುವ ಹಲವು ಗ್ರಂಥಗಳು ಈವರೆಗೆ ಪ್ರಕಟವಾಗಿದ್ದರೂ, ಅವುಗಳಿಗೆ ಬಗೆಬಗೆಯ ಸೀಮಿತ ಗಳಿವೆ. ಮುಖ್ಯವಾಗಿ, ಸಾಹಿತ್ಯದ ಪ್ರಾಚೀನತೆ ಹರವುಗಳ ಎದುರಿನಲ್ಲಿ ಈ ಚರಿತ್ರೆಗಳು ಸಂಕ್ಷೇಪವಾದವು; ಸಾಹಿತ್ಯ ಚರಿತ್ರೆಯನ್ನು ಬರೆಯುವವರಿಗೆ ಒದಗುವ ತೊಡಕುಗಳ ಕಾರಣದಿಂದ ಅಪರಿಪೂರ್ಣವಾದವು. ಆದುದರಿಂದ ಸಮಗ್ರವಾದ ಒಂದು ಸಾಹಿತ್ಯ ಚರಿತ್ರೆ ಕನ್ನಡದ ಬಹುದಿನಗಳ ಅಗತ್ಯವಾಗಿತ್ತು. ಇಂಥದೊಂದು ಕೃತಿಯ ನಿರ್ಮಾಣಕ್ಕೆ ಸಾಂಸ್ಥಿಕ ಪ್ರಯತ್ನವೂ ತುಂಬ ಆವಶ್ಯಕವಾಗಿತ್ತು. ಕನ್ನಡ ಸಾಹಿತ್ಯದ ವ್ಯಾಪ್ತಿ ವೈವಿಧ್ಯ ಗಳನ್ನು ಗಮನಿಸಿದಾಗಲೆಲ್ಲ ಈ ಮಹಾಸಾಹಿತ್ಯದ ಚರಿತ್ರೆಯ ರಚನೆಗೆ ಅನೇಕ ಕೈಗಳು ಕೂಡಬೇಕಾದುದರ ಅಗತ್ಯ ಸ್ಪಷ್ಟವಾಗುತ್ತಿತ್ತು. ಇದನ್ನು ಬಲ್ಲವರಾಗಿದ್ದ ದಿವಂಗತ ಪ್ರೊ. ತೀ. ನಂ. ಶ್ರೀಕಂಠಯ್ಯನವರು ೧೯೫೩ರಷ್ಟು ಹಿಂದೆಯೇ ತಾವು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದಾಗ, ವಿಶ್ವವಿದ್ಯಾಲಯದ ಆಶ್ರಯ ದಲ್ಲಿ ಕನ್ನಡ ನಾಡಿನ ವಿದ್ವಾಂಸರೆಲ್ಲರ ನೆರವಿನಿಂದ 'ಕನ್ನಡ ಸಾಹಿತ್ಯದ ಇತಿಹಾಸ' ವೊಂದನ್ನು ದೊಡ್ಡ ಪ್ರಮಾಣದಲ್ಲಿ ಸಿದ್ಧಪಡಿಸುವ ಯೋಜನೆಯನ್ನು ಕೈಗೊಂಡಿದ್ದರು. ಆದರೆ, ದುರದೃಷ್ಟದಿಂದ, ಆ ಯೋಜನೆ ಇತಿಹಾಸರಚನೆಯ ಸಾಮಾನ್ಯ ರೂಪರೇಖೆ ಗಳನ್ನು ವಿವರಿಸುವ ಕಿರುಹೊತ್ತಗೆಯ ಪ್ರಕಟಣೆ ಹಂಚಿಕೆಗಳಲ್ಲಿಯೇ ನಿಂತುಹೋಯಿತು. ಪ್ರೊ. ಶ್ರೀಕಂಠಯ್ಯನವರು ನಮಗೆ ಬೇಕಾದ ಸಮರ್ಪಕವಾದ ಸಾಹಿತ್ಯ ಇತಿಹಾಸದ ಸಾಮಾನ್ಯ ರೂಪರೇಖೆಗಳನ್ನೇನೋ ಗೊತ್ತುಮಾಡಿದರು. ಆದರೆ ಅವರು ಬಯಸಿದಂಥ ಇತಿಹಾಸದ ನಿರ್ಮಾಣ, ಪ್ರಕಟಣೆಗಳು ಮಾತ್ರ ಇಪ್ಪತ್ತು ವರ್ಷ ತಡವಾಗಿವೆ.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಈಗ ಕುಲಪತಿಗಳಾಗಿರುವ ಪ್ರೊ. ದೇ. ಜವರೇ ಗೌಡರು ತಾವು ಕನ್ನಡ ಪ್ರಾಧ್ಯಾಪಕರಾದ ಆರಂಭದಲ್ಲಿಯೇ (ಅಕ್ಟೋಬರ್, ೧೯೬೪) ಕನ್ನಡ ವಿಭಾಗದ ಆಶ್ರಯದಲ್ಲಿ ಸಮಗ್ರವಾದ ಸಾಹಿತ್ಯ ಚರಿತ್ರೆಯ ರಚನೆಗೆ ಒಂದು ಯೋಜನೆ ಹಾಕಿದರು. ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಾಪಕರು, ಸಂಶೋಧಕರ ನೆರವಿ ನಿಂದ ಹಲವು ಸಂಪುಟಗಳಲ್ಲಿ ವಿವರಣಾತ್ಮಕವೂ, ಅಧಿಕೃತವೂ ಆದ ಕನ್ನಡ ಸಾಹಿತ್ಯ ಚರಿತ್ರೆಯನ್ನು ಸಿದ್ಧಗೊಳಿಸಿ ಪ್ರಕಟಿಸಬೇಕೆಂದು ತೀರ್ಮಾನಿಸಿ, ರೂಪರೇಖೆಗಳನ್ನು ಕೂಲಂಕಷವಾಗಿ ಚರ್ಚಿಸಿ ಸಿದ್ಧಪಡಿಸಿ, ಬರೆಯಬೇಕಾದ ಲೇಖನಗಳ ಸ್ವರೂಪ ವ್ಯಾಪ್ತಿ ಗಳನ್ನು ಗೊತ್ತುಪಡಿಸಿ, ಲೇಖಕರಿಗೆ ವಿಷಯಗಳನ್ನು ಹಂಚಿ, ಕಾರ್ಯವನ್ನು ಆಗಲೇ ಆರಂಭಿಸಲಾಯಿತು. ಕೆಲವರು ತಮ್ಮ ಪಾಲಿನ ಲೇಖನಗಳನ್ನೂ ಬರೆದರು. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗ ೧೯೬೬ರಲ್ಲಿ ಕನ್ನಡ ಅಧ್ಯಯನ ಸಂಸ್ಥೆಯಾಗಿ

ಮಾರ್ಪಟ್ಟು, ವಿಶ್ವವಿದ್ಯಾನಿಲಯದ ಕನ್ನಡ ಚಟುವಟಿಕೆಗಳನ್ನೆಲ್ಲ ಕೇಂದ್ರೀಕರಿಸಿಕೊಂಡು ಹಲವು ಯೋಜನೆಗಳಿಗೆ ಕೈಹಾಕಿತು. ವಿಶ್ವಕೋಶ, ವಿಷಯ ವಿಶ್ವಕೋಶ, ಗ್ರಂಥ ಸಂಪಾದನೆ, ಭಾಷಾಂತರ ಮತ್ತು ಪಠ್ಯಪುಸ್ತಕಗಳ ನಿರ್ಮಾಣ, ಜಾನಪದ ವಸ್ತು ಸಂಗ್ರಹಾಲಯ, ಹರಿದಾಸ ಸಾಹಿತ್ಯ ಸಂಗ್ರಹ-ಸಂಪಾದನೆ, ವೃತ್ತಿಪದಕೋಶ ಸಿದ್ಧತೆ, ಎಪಿಗ್ರಾಫಿಯ ಕರ್ನಾಟಿಕ ಪರಿಷ್ಕರಣ ಮರುಮುದ್ರಣ—ಮೊದಲಾದ ಹತ್ತು ಹಲವು ಯೋಜನೆಗಳಲ್ಲಿ ಸಂಸ್ಥೆ ಮಗ್ನವಾಯಿತು. ಇದರಿಂದಾಗಿ ಸಾಹಿತ್ಯ ಚರಿತ್ರೆಯ ಯೋಜನೆ ಕುಂಟಿತು, ಸಾಯಲಿಲ್ಲ. ಪ್ರತಿ ವರ್ಷ ವಿಶ್ವವಿದ್ಯಾನಿಲಯದ ವರದಿಗಳಲ್ಲಿ ಇದರ ಉಲ್ಲೇಖ ಇರುತ್ತಿತ್ತು, ೧೯೬೯ ಮತ್ತು ೧೯೭೨ರಲ್ಲಿ ಪ್ರಕಟವಾದ ಕನ್ನಡ ಅಧ್ಯಯನ ಸಂಸ್ಥೆಯ ಪರಿಚಯ ಪುಸ್ತಕಗಳಲ್ಲಿ ಯೋಜನೆಯ ಸ್ವರೂಪ ಪ್ರಗತಿಗಳನ್ನು ಸಾಕಷ್ಟು ವಿವರವಾಗಿ ಸೂಚಿಸಲಾಗಿತ್ತು. ಅನೇಕರು ಇದರ ಬಗೆಗೆ ಆಗಾಗ ವಿಚಾರಿಸುತ್ತಿದ್ದರು. ಆದರೂ ಗ್ರಂಥದ ಪ್ರಕಟಣೆಗೆ ಕಾಲ ಕೂಡಿಬರಲಿಲ್ಲ. ಪ್ರೊ. ಜವರೇಗೌಡರು ಯೋಜಿಸಿದ ಒಂದು ದಶಕದ ಅನಂತರ ಈಗ 'ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ'ಯ ಮೊದಲ ಸಂಪುಟ ಪ್ರಕಟವಾಗುತ್ತಿದೆ.

ಹತ್ತು ಸಂಪುಟಗಳಲ್ಲಿ ಪೂರ್ಣಗೊಳ್ಳುವ ಈ ಸಾಹಿತ್ಯ ಚರಿತ್ರೆಯ ಮುಂದಿನ ಸಂಪುಟಗಳು ಪ್ರತಿ ಆರೆಂಟು ತಿಂಗಳಿಗೆ ಒಂದೊಂದರಂತೆ ಪ್ರಕಟವಾಗುವ ಹಾಗೆ ನೋಡಿಕೊಳ್ಳಲಾಗುವುದು. ಇದರ ಸಿದ್ಧತೆಯಲ್ಲಿ ನಾವು ಪ್ರೊ. ತೀ. ನಂ. ಶ್ರೀಕಂಠಯ್ಯನವರು ಸಿದ್ಧಪಡಿಸಿದ್ದ ರೂಪರೇಖೆಗಳ ಅನೇಕ ಅಂಶಗಳನ್ನು ಯಥಾವತ್ತಾಗಿ ಸ್ವೀಕರಿಸಿದ್ದೇವೆ; ನಮಗೆ ಅಗತ್ಯವೆನಿಸಿದ ಅನೇಕ ಬದಲಾವಣೆಗಳನ್ನೂ ಮಾಡಿಕೊಂಡಿದ್ದೇವೆ. ಈಗ ನಾವು ಯೋಜಿಸಿರುವಂತೆ ಒಟ್ಟು ಯೋಜನೆಯ ಸ್ಥೂಲ ಸ್ವರೂಪ ಹೀಗಿರುತ್ತದೆ:

ಸಂಪುಟ ೧ : ಹಿನ್ನೆಲೆ
ಸಂಪುಟ ೨ : ಆದಿಕಾಲದಿಂದ ಕ್ರಿ.ಶ. ಸು. ೮೫೦
ಸಂಪುಟ ೩ : ಕ್ರಿ.ಶ. ಸು. ೮೫೦–ಕ್ರಿ.ಶ. ಸು. ೧೧೫೦
ಸಂಪುಟ ೪ : ಕ್ರಿ.ಶ. ಸು. ೧೧೫೦–ಕ್ರಿ.ಶ. ಸು. ೧೩೫೦
ಸಂಪುಟ ೫ : ಕ್ರಿ.ಶ. ಸು. ೧೩೫೦–ಕ್ರಿ.ಶ. ಸು. ೧೬೫೦
ಸಂಪುಟ ೬ : ಕ್ರಿ.ಶ. ಸು. ೧೬೫೦–ಕ್ರಿ.ಶ. ಸು. ೧೮೫೦
ಸಂಪುಟ ೭-೮ : ಕ್ರಿ.ಶ. ಸು. ೧೮೫೦–ಕ್ರಿ.ಶ. ಸು. ೧೯೭೦
ಸಂಪುಟ ೯ : ಕೆಲವು ವಿಶೇಷ ರೂಪಗಳು, ವಿಷಯಗಳು
ಸಂಪುಟ ೧೦ : ಅನುಬಂಧಗಳು

ಹಿನ್ನೆಲೆಯ ಸಂಪುಟದಲ್ಲಿ ಸಾಹಿತ್ಯ ಚರಿತ್ರೆಯ ಸ್ವರೂಪ; ಕನ್ನಡ ಸಾಹಿತ್ಯ ಚರಿತ್ರೆಯ ಸ್ವರೂಪ, ಸಮೀಕ್ಷೆ, ವಿಸ್ತಾರ, ಪರಿಮಿತಿ, ರಚನೆಗೆ ಇರುವ ಸಾಧನಗಳು, ವಿಭಜನಕ್ರಮ; ಕವಿಕಾಲ ನಿರ್ಣಯದ ಆಧಾರಗಳು, ತೊಡಕುಗಳು: ಭಾರತೀಯ ಹಿನ್ನೆಲೆ; ಕನ್ನಡ ನಾಡು ನುಡಿ ಜನತೆ; ಕರ್ನಾಟಕ ಚರಿತ್ರೆಯ ಅವಲೋಕನ, ಸಾಂಸ್ಕೃತಿಕ ಧಾರ್ಮಿಕ ಸಾಮಾಜಿಕ ಜನಜೀವನ; ಕನ್ನಡ ಹಾಗೂ ಇತರ ಭಾಷೆಗಳ ಪರಸ್ಪರ ಸಂಬಂಧ,

ಪ್ರಭಾವ—ಮೊದಲಾದ ಸಾಮಾನ್ಯವಿಷಯಗಳಿರುತ್ತವೆ. ಎರಡರಿಂದ ಎಂಟನೆಯ ಸಂಪುಟಗಳ ವರೆಗೆ ಪ್ರತಿಯೊಂದು ಸಂಪುಟದಲ್ಲಿಯೂ ಆಯಾ ಅವಧಿಯ ಕವಿಕೃತಿಗಳ ವಿವರವಾದ ಪರಿಚಯ ಮಾತ್ರವಲ್ಲದೆ, ಭಾರತೀಯ ಹಿನ್ನೆಲೆ, ಜನಜೀವನ ಮತ್ತು ಸಾಹಿತ್ಯ; ದಕ್ಷಿಣ ಭಾರತದ ಇತರ ಭಾಷಾಸಾಹಿತ್ಯಗಳ ಸ್ಥಿತಿಗತಿಗಳು; ರಾಜಕೀಯ ಚರಿತ್ರೆ, ರಾಜಾಶ್ರಯ, ಕನ್ನಡ ನಾಡಿನ ಧಾರ್ಮಿಕ, ಸಾಂಸ್ಕೃತಿಕ ಹಾಗೂ ಸಾಮಾಜಿಕ ಜನಜೀವನ; ಭಾಷೆಯ ಸ್ವರೂಪ—ಮೊದಲಾದ ವಿಷಯಗಳ ವ್ಯಾಪಕ ಚರ್ಚೆಯೂ ಇರುತ್ತದೆ. ಆಯಾ ಸಂದರ್ಭಗಳಲ್ಲಿ ಪ್ರತಿಯೊಂದು ಸಾಹಿತ್ಯ ಪ್ರಕಾರದ ಉಗಮ ವಿಕಾಸಗಳ ನಿರೂಪಣೆಯನ್ನೂ ಸೇರಿಸಲಾಗುವುದು. ಗೊತ್ತಾದ ಅವಧಿಯ ಸಾಹಿತ್ಯದ ವೈಶಿಷ್ಟ್ಯ ಸಿದ್ಧಿಗಳನ್ನು ಪ್ರತಿ ಸಂಪುಟದಲ್ಲಿಯೂ ಗುರುತಿಸಲಾಗುವುದು. ಏಳು ಎಂಟನೆಯ ಸಂಪುಟಗಳು ಆಧುನಿಕ ಸಾಹಿತ್ಯಕ್ಕೆ ಸಂಬಂಧಿಸಿದ್ದು, ಮೊದಲನೆಯದರಲ್ಲಿ ಕಾದಂಬರಿ, ಸಣ್ಣ ಕತೆ, ಕಾವ್ಯಪ್ರಕಾರಗಳು ಸೇರುತ್ತವೆ. ಮಿಕ್ಕ ಸಾಹಿತ್ಯಪ್ರಕಾರಗಳು, ಶಾಸ್ತ್ರಗಳು ಎರಡನೆಯದರಲ್ಲಿ ಸಮಾವೇಶಗೊಳ್ಳುತ್ತವೆ. ಒಂಬತ್ತನೆಯ ಸಂಪುಟದಲ್ಲಿ ಒಟ್ಟು ಸಾಹಿತ್ಯದ ದೃಷ್ಟಿಯಿಂದ ಜನಪದ ಸಾಹಿತ್ಯ, ಶಾಸನ ಸಾಹಿತ್ಯ, ಗದ್ಯ ಸಾಹಿತ್ಯ ಮತ್ತು ಶಾಸ್ತ್ರ ಸಾಹಿತ್ಯಗಳನ್ನು ಕುರಿತು ವಿಚಾರ ಮಾಡುವುದಲ್ಲದೆ, ಕನ್ನಡ ಸಾಹಿತ್ಯಕ್ಕೆ ದೊರೆತ ರಾಜಾಶ್ರಯ, ಜನಾಶ್ರಯ; ಸಾಹಿತ್ಯಿಕ ಸಂಘ ಸಂಸ್ಥೆಗಳು, ಅವುಗಳ ಸಾಧನೆ; ಇತರ ಭಾಷೆಗಳಲ್ಲಿ ಕನ್ನಡಿಗರ ಕೃತಿಗಳು; ಕನ್ನಡದಲ್ಲಿ ಇತರ ಭಾಷೆಗಳ ಕೃತಿಗಳು; ಕನ್ನಡ ಸಾಹಿತ್ಯದ ಮಹತ್ವ, ಪರಿಮಿತಿ; ಭಾರತೀಯ ಸಾಹಿತ್ಯದಲ್ಲಿ ಕನ್ನಡದ ನೆಲೆಬೆಲೆ; ವಿಶ್ವ ಸಾಹಿತ್ಯಕ್ಕೆ ಕನ್ನಡದ ಕೊಡುಗೆ—ಮೊದಲಾದ ವಿಚಾರಗಳನ್ನು ಚರ್ಚಿಸಲಾಗುತ್ತದೆ. ಕೊನೆಯ ಸಂಪುಟದಲ್ಲಿ ನಾನಾ ಬಗೆಯ ಉಪಯುಕ್ತ ಅನುಬಂಧಗಳಿರುತ್ತವೆ. ಪ್ರತಿಯೊಂದು ಸಂಪುಟವೂ ಡೆಮಿ ಆಕಾರದ ಸುಮಾರು ೭೫೦ ಪುಟಗಳನ್ನು ಹೊಂದಿರುತ್ತದೆ.

ಕನ್ನಡ ಅಧ್ಯಯನ ಸಂಸ್ಥೆಯ ಬೋಧನ ಸಂಶೋಧನ ವಿಭಾಗಗಳ ಸದಸ್ಯರಿಂದ, ಬೇಕಾದಾಗ ವಿಶ್ವವಿದ್ಯಾನಿಲಯದ ಇತರ ವಿಭಾಗಗಳ ಸದಸ್ಯರಿಂದ, ಬರೆಸಿದ ಲೇಖನಗಳಿಂದ ಪ್ರಕೃತ ಸಾಹಿತ್ಯ ಚರಿತ್ರೆ ಸಿದ್ಧಗೊಳ್ಳುತ್ತಿದೆ. ಇದು ಕನ್ನಡಕ್ಕೆ ಅಗತ್ಯವಾದ ಸಮಗ್ರವೂ ಅಧಿಕೃತವೂ ಆದ ಸಾಹಿತ್ಯ ಚರಿತ್ರೆಯಾಗಬೇಕೆಂಬುದು ನಮ್ಮ ಉದ್ದೇಶ. ಈ ಯೋಜನೆಗೆ ಸಂಬಂಧಿಸಿದವರೆಲ್ಲರ ದುಡಿಮೆ ಅದೇ ದಿಕ್ಕಿನಲ್ಲಿ. ಸಾಹಿತ್ಯ ಚರಿತ್ರೆಯ ನಿರ್ಮಾಣಕ್ಕೆ ಅಗತ್ಯವಾದ ಮೂಲ ಆಕರಗಳ ಕೊರತೆ ಬಹುವಾಗಿರುವ ಕನ್ನಡದಂಥ ಸಾಹಿತ್ಯದ ಚರಿತ್ರೆಯ ಬರವಣಿಗೆ ಎಷ್ಟು ಶ್ರಮಸಾಧ್ಯವಾದದ್ದು, ಯಾವ ಬಗೆಯ ಸೀಮಿತಗಳನ್ನು ಒಳಗೊಂಡದ್ದು ಎನ್ನುವುದು ಎಲ್ಲರಿಗೂ ತಿಳಿದ ವಿಚಾರ. ಕನ್ನಡ ಅಧ್ಯಯನ ಸಂಸ್ಥೆ ತನ್ನಲ್ಲಿರುವ ಅನುಕೂಲಗಳನ್ನೆಲ್ಲ ಬಳಸಿಕೊಂಡು ಸ್ವಲ್ಪಮಟ್ಟಿಗಾದರೂ ಕನ್ನಡ ಸಾಹಿತ್ಯ ಚರಿತ್ರೆಯ ನಿರೂಪಣೆಯ ಹಾದಿಯಲ್ಲಿ ಮುಂದುವರಿಯಬೇಕೆಂದು ನಿರ್ಧರಿಸಿ ಈ ಮಹಾಸಾಹಸವನ್ನು ಕೈಗೊಂಡಿದೆ.

ಇದುವರೆಗೆ ಗಮನಿಸಲಾಗಿರುವ ಪ್ರತಿಯೊಬ್ಬ ಕವಿಯ ಕಾಲ ದೇಶ ಜೀವನ ಸಾಧನೆ

ಮೊದಲಾದ ವಿಷಯಗಳನ್ನು ಚರ್ಚಿಸುವುದು; ಸಮಯೋಚಿತ ಉದ್ಧರಣಗಳೊಡನೆ ಪ್ರತಿಯೊಂದು ಕೃತಿಯನ್ನೂ ಪರಿಚಯ ಮಾಡಿಕೊಡುವುದು; ಕವಿಕೃತಿಗಳ ವಿಷಯದಲ್ಲಿ ಇದುವರೆಗೆ ನಡೆದಿರುವ ಚರ್ಚೆಯೆಲ್ಲವನ್ನೂ ಇರಬಹುದಾದ ಹೊಸ ಸಂಶೋಧನೆಗಳೊಡನೆ ಸಂಕ್ಷಿಪ್ತವಾಗಿ ನಿರೂಪಿಸುವುದು; ಸಾಧ್ಯವಾದ ಮಟ್ಟಿಗೂ ವಿಮರ್ಶಾತ್ಮಕವಾಗಿ ಕೃತಿಗಳ ಮೌಲ್ಯವನ್ನು ನಿರ್ಧರಿಸುವುದು—ಈ ಸಾಹಿತ್ಯ ಚರಿತ್ರೆಯ ಮುಖ್ಯ ಉದ್ದೇಶ. ಈ ಉದ್ದೇಶವನ್ನು ಈಡೇರಿಸುವಾಗ ಅತ್ಯುತ್ತಮ ಇತಿಹಾಸಕಾರನ, ಲೇಖಕನ, ವಿಮರ್ಶಕನ ಆದರ್ಶಗಳನ್ನು ಗಮನದಲ್ಲಿಟ್ಟುಕೊಂಡು ಕೆಲಸಮಾಡಲಾಗುವುದು. ಪ್ರತಿಯೊಂದು ಸಂದರ್ಭದಲ್ಲಿಯೂ ಭಾವನಾತ್ಮಕವಾದ ಅತಿರೇಕದ ಅಭಿಪ್ರಾಯಗಳಿಗಾಗಲಿ, ವ್ಯಕ್ತಿ ಸಂಸ್ಥೆ ಮತಧರ್ಮಗಳಿಗೆ ಸಂಬಂಧಿಸಿದಂತೆ ವ್ಯಂಗ್ಯ ನಿಂದನೆಗಳಿಗಾಗಲಿ ಆಸ್ಪದಕೊಡದೆ ವಸ್ತುನಿಷ್ಠ ನಿಷ್ಪಕ್ಷಪಾತ ದೃಷ್ಟಿಗೇ ಆದ್ಯಗಮನ ಕೊಡಲಾಗುವುದು.

ಸಾಹಿತ್ಯ ಚರಿತ್ರೆಯ ಮಹತ್ವವನ್ನು ಬಲ್ಲವರಾದ ನಮಗೆ ಪ್ರಕೃತ ಗ್ರಂಥದ ಸೀಮಿತಗಳೂ ಚೆನ್ನಾಗಿ ತಿಳಿದಿವೆ. ಕೊರತೆಗಳನ್ನು ತುಂಬಲು, ಸೀಮಿತಗಳನ್ನು ದಾಟಲು ನಾವು ಶಕ್ತಿಮೀರಿ ಶ್ರಮಿಸುತ್ತೇವೆ; ಅಲ್ಲದೆ ಕನ್ನಡ ವಿದ್ವಾಂಸರ ಹಾಗೂ ಇತರರ ರಚನಾತ್ಮಕವಾದ ಸಲಹೆ ಸೂಚನೆ ವಿಮರ್ಶೆಗಳನ್ನು ಹೃತ್ಪೂರ್ವಕವಾಗಿ ಸ್ವಾಗತಿಸುತ್ತೇವೆ. ಇದರಿಂದ ಮುಂದಿನ ಸಂಪುಟಗಳು ಇನ್ನೂ ಉತ್ತಮಗೊಳ್ಳಬಹುದೆಂದು ಆಶಿಸುತ್ತೇವೆ.

ಈ ಚರಿತ್ರೆಯ ಪ್ರಕಟಣೆಯಿಂದ ಕನ್ನಡದ ಬಹುದಿನಗಳ ಕೊರತೆಯೊಂದು ತಕ್ಕ ಮಟ್ಟಿಗೆ ತುಂಬಿದಂತಾಗುತ್ತದೆಂದು ಭಾವಿಸುತ್ತೇವೆ. ಕನ್ನಡ ಭಾಷೆ ಸಾಹಿತ್ಯ ಸಂಸ್ಕೃತಿಗಳ ಕ್ಷೇತ್ರದಲ್ಲಿ ಆಗಬೇಕಾಗಿರುವ ಕೆಲಸಗಳು ಇನ್ನೂ ಅಗಾಧವಾಗಿವೆ. ವಿಶ್ವವಿದ್ಯಾನಿಲಯಗಳು, ಸರ್ಕಾರ, ಸಾಹಿತ್ಯ ಪರಿಷತ್ತಿನಂಥ ಸಂಸ್ಥೆಗಳು ನೂರಾರು ಉಪಯುಕ್ತ ಯೋಜನೆಗಳನ್ನು ಕೈಗೊಂಡು ಕೆಲಸಮಾಡಲು ಅವಕಾಶ ಬೇಕಾದಷ್ಟಿದೆ. ಆಗಿರುವ ಕೆಲಸ ಏನೇನೂ ಸಾಲದು. ಇಂಥ ಸಂದರ್ಭದಲ್ಲಿ, ಸಂಬಂಧಿಸಿದವರೆಲ್ಲ ಪರಸ್ಪರ ಸಮಾಲೋಚಿಸಿ ಹೊಸ ಹೊಸ ಯೋಜನೆಗಳಲ್ಲಿ ತೊಡಗುವುದು ನಾಡಿನ ಹಿತದೃಷ್ಟಿಯಿಂದ ಒಳ್ಳೆಯದು. ಯೋಜಕರು ಕಲ್ಪನೆ ದೂರದೃಷ್ಟಿಗಳನ್ನು ಹೊಂದಿದ್ದು, ಪೈಪೋಟಿಯ ಮನೋಭಾವ ತಾಳದೆ, ಯೋಜನೆಗಳ ಉಪಯುಕ್ತತೆಯನ್ನು ಗಮನದಲ್ಲಿಟ್ಟುಕೊಳ್ಳುವುದು ಎಂದಿಗಿಂತ ಈಗ ಅಗತ್ಯವಾಗಿದೆ. ದುಪ್ಪಟ್ಟು ಕೆಲಸಮಾಡಲು, ನಮಗೆಲ್ಲರಿಗಿರುವ ಆರ್ಥಿಕ ನೆರವಿನ ಮೂಲ ಒಂದೇ; ಅದೂ ದುರ್ಬಲವಾದುದು; ಆದುದರಿಂದ ನಮ್ಮ ಹೊಣೆ ದೊಡ್ಡದಾಗಿದೆಯೆಂಬುದನ್ನು ನಾವು ಮರೆಯಬಾರದು. ಇದನ್ನು ಮರೆಯದೆಯೆ ಕನ್ನಡ ಅಧ್ಯಯನ ಸಂಸ್ಥೆ ಹತ್ತು ವರ್ಷಗಳ ಹಿಂದಿನ ತನ್ನ ಯೋಜನೆಯೊಂದನ್ನು ಕಾರ್ಯರೂಪಕ್ಕೆ ತರುತ್ತಿದೆ. ಇದು ಸಂಸ್ಥೆಯ ಚಟುವಟಿಕೆಗಳ ಹಾಗೂ ಕನ್ನಡ ಸಾಹಿತ್ಯ ಚರಿತ್ರೆಯ ಬರಹಗಳ ಇತಿಹಾಸದಲ್ಲಿ ಒಂದು ಮಹತ್ವದ ಘಟನೆಯಾಗಿದೆ.

ಇಂಥದೊಂದು ಸಾಹಸದ ಯೋಜನೆಯಲ್ಲಿ ನೆರವಾಗುತ್ತಿರುವ ಕನ್ನಡ ಅಧ್ಯಯನ ಸಂಸ್ಥೆಯ ನನ್ನ ಸಹೋದ್ಯೋಗಿಗಳ ಬೆಂಬಲ ಸಹಕಾರಗಳನ್ನು ನಾನು ಕೃತಜ್ಞತೆಯಿಂದ

ನೆನಸುತ್ತೇನೆ. ಈ ಯೋಜನೆಯನ್ನು ಆರಂಭಿಸಿದ ಪ್ರೊ. ಜವರೇಗೌಡರು ಈಗ ವಿಶ್ವವಿದ್ಯಾನಿಲಯದ ಕುಲಪತಿಗಳಾಗಿದ್ದಾರೆ. ಆದರೂ ಈ ಯೋಜನೆ ಅವರದೇ. ಅವರೇ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿದ್ದಿದ್ದರೆ ಯೋಜನೆ ಇದಕ್ಕೂ ಮೊದಲೇ ಕಾರ್ಯ ರೂಪಕ್ಕೆ ಬರುತ್ತಿತ್ತೆಂಬುದರಲ್ಲಿ ಸಂದೇಹವಿಲ್ಲ. ಅವರು ಈ ವಿಳಂಬವನ್ನು ಮನ್ನಿಸಿಯಾರು ಎಂದುಕೊಂಡಿದ್ದೇನೆ. ಇದರ ಪ್ರಕಟಣೆಯಲ್ಲಿ ವಿಶ್ವವಿದ್ಯಾನಿಲಯದ ಅಧಿಕಾರಿಗಳು ಔದಾರ್ಯದಿಂದ ವರ್ತಿಸಿದ್ದಾರೆ. ಎಂದಿನಂತೆ ಸಂಸ್ಥೆಯ ಮೇಲಿನ ಪ್ರೀತಿ ಅಭಿಮಾನಗಳಿಂದ ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸಿನ ಶ್ರೀ ಜಿ. ಎಚ್. ರಾಮರಾವ್ ಮತ್ತು ಶ್ರೀ ಜಿ. ಎಚ್. ಕೃಷ್ಣಮೂರ್ತಿ ಮುದ್ರಣಕಾರ್ಯವನ್ನು, ಅವಸರವಸರವಾಗಿ ಯಾದರೂ, ಸೊಗಸಾಗಿ ನಿರ್ವಹಿಸಿದ್ದಾರೆ. ಇವರೆಲ್ಲರಿಗೂ ನನ್ನ ವಂದನೆಗಳು ಸಲ್ಲುತ್ತವೆ.

ಕೊನೆಯದಾಗಿಯಾದರೂ, ಮುಖ್ಯವಾಗಿ, ನಾನು ಸಂಪಾದಕರಾದ ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರಿಗಳನ್ನು ವಿಶೇಷವಾಗಿ ಸ್ಮರಿಸಬೇಕು. ಈ ಯೋಜನೆಯ ಕಾರ್ಯ ನಿರ್ವಹಣೆಯಲ್ಲಿ, ಅದರಲ್ಲೂ ಈ ಸಂಪುಟದ ಸಿದ್ಧತೆಯಲ್ಲಿ, ಅವರು ಎಷ್ಟು ಶ್ರಮಪಟ್ಟು ದುಡಿದಿದ್ದಾರೆ, ಸಹನೆಯಿಂದ ವರ್ತಿಸಿದ್ದಾರೆ ಎಂಬುದನ್ನು ನಾನು ಬಲ್ಲೆ; ಅವರ ಕೆಲಸ ವನ್ನು ಹತ್ತಿರದಿಂದ ನೋಡಿದವರೆಲ್ಲ ಬಲ್ಲರು. ತರುಣ ಪೀಳಿಗೆಯ ವಿದ್ವಾಂಸರಲ್ಲಿ ಗಣ್ಯ ರಾಗಿರುವ ಅವರ ಪಾಂಡಿತ್ಯ ದುಡಿಮೆಗಳು 'ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ'ಯ ಸಿದ್ಧತೆಗೆ ದೊರಕಿರುವುದು ನನಗೆ ತುಂಬ ಸಂತೋಷ ನೆಮ್ಮದಿ ಗಳನ್ನು ತಂದಿದೆ. ಅವರ ಬತ್ತದ ಉತ್ಸಾಹದಿಂದ ಮುಂದಿನ ಸಂಪುಟಗಳೆಲ್ಲ ಯೋಜನೆ ಯಂತೆ ಸಿದ್ಧಗೊಳ್ಳುತ್ತವೆಂಬುದರಲ್ಲಿ ನನಗೆ ಭರವಸೆಯಿದೆ.*

ಕನ್ನಡ ಅಧ್ಯಯನ ಸಂಸ್ಥೆ
ಅಕ್ಟೋಬರ್ ೨೫, ೧೯೭೪
ವಿಜಯದಶಮಿ

ಹಾ. ಮಾ. ನಾಯಕ
ಪ್ರಧಾನ ಸಂಪಾದಕ

---

* ಮೊದಲನೆಯ ಸಂಪುಟಕ್ಕೆ ಬರೆದುದು.

# ಸಂಪಾದಕರ ಮಾತು

'ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ'ಯ ಎರಡನೆಯ ಸಂಪುಟ ಈಗ ಪ್ರಕಟವಾಗುತ್ತಿದೆ. ಇದರಲ್ಲಿ ಆದಿಕಾಲದಿಂದ ಕ್ರಿ.ಶ. ಸು. ೮೫೦ರ ವರೆಗೆ ಕನ್ನಡ ಸಾಹಿತ್ಯದ ಚರಿತ್ರೆಯನ್ನು ತಕ್ಕ ವ್ಯಾಪ್ತಿ ಮತ್ತು ವಿವರಗಳೊಡನೆ ವಿವೇಚಿಸಿದೆ.

ಭಾರತೀಯ ಮತ್ತು ಕರ್ಣಾಟಕ ಜನಜೀವನಗಳ ರಾಜಕೀಯ ಸಾಮಾಜಿಕ ಮುಂತಾದ ರಂಗಗಳಲ್ಲಿಯೂ ಸಂಸ್ಕೃತ ಪ್ರಾಕೃತಾದಿ ಭಾಷಾಸಾಹಿತ್ಯಗಳ ಕ್ಷೇತ್ರಗಳಲ್ಲಿಯೂ ಈ ಸಂಪುಟದ ಸಂಗತಿಗಳ ಕಾಲಮಾನವು ವಿಶಾಲವೂ ವಿವಿಧವೂ ಆದ ಸಂಘಟನಪರಂಪರೆಯನ್ನೂ ಸಂಪನ್ನತೆಯನ್ನೂ ಒಳಕೊಂಡಿದೆಯೆಂಬುದು ಸುವಿದಿತ. ಆದ್ದರಿಂದ ಇಲ್ಲಿಯ ವ್ಯಾಪ್ತಿಯೂ ವಿವರಗಳೂ ಅಡಕದಲ್ಲಿಯೂ ವಿಸ್ತಾರ ಎನ್ನುವಂತಾಗಿವೆ. ಇಂಥ ಸಂದರ್ಭಗಳು ಇದೇ ಆಧಿಕ್ಯ, ಇದೇ ಆಢ್ಯತೆಯಲ್ಲಿ ಮುಂದಿನ ಅವಧಿಯಲ್ಲಿ ಕಾಣಿಸಿಕೊಳ್ಳುವುದಿಲ್ಲವಾದ್ದರಿಂದ ಅಲ್ಲಿ ಸಹಜವಾಗಿಯೇ ಅವುಗಳ ಸ್ಥಾನ ಕಿರಿದುಗೊಳ್ಳುತ್ತದೆ; ಸಾಹಿತ್ಯ ವಿಷಯಗಳಿಗೆ ಪ್ರಾಶಸ್ತ್ಯ ದೊರೆಯುತ್ತದೆ. ಅಲ್ಲದೆ ಆ ಅವಧಿ ಕನ್ನಡ ಸಾಹಿತ್ಯದ ಉತ್ಕೃಷ್ಟ ಕಾಲವಾಗಿರುವುದರಿಂದ, ಆದರ ಸಂದರ್ಭ-ಸನ್ನಿವೇಶಗಳನ್ನೂ ಕವಿ-ಕೃತಿಗಳನ್ನೂ ಯಥೋಚಿತವಾಗಿ ವಿವೇಚಿಸಬೇಕಾದ್ದು ಅವಶ್ಯವಾಗಿ, ಹಿನ್ನೆಲೆಯ ವಿವರಗಳನ್ನು ಅಲ್ಲಿ ಬಹು ಸಂಕ್ಷೇಪವಾಗಿ ಹೇಳಿ ಮುನ್ನಡೆಯಬೇಕಾಗುತ್ತದೆ. ಪ್ರಕೃತ ಸಂಪುಟದದಲ್ಲಿ, ನೇರವಾಗಿ ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದಂತೆ 'ಕನ್ನಡ ಸಾಹಿತ್ಯೋದಯ' ಮತ್ತು 'ಕವಿರಾಜಮಾರ್ಗ' ಇವು ಪ್ರಮುಖ ಭಾಗಗಳಾಗಿದ್ದು, ಇಲ್ಲಿಯೂ 'ಕವಿರಾಜಮಾರ್ಗ'ದಂತಹ ಒಂದು ಸಣ್ಣ ಕೃತಿಯ ವಿಷಯದಲ್ಲಿ ಇಷ್ಟು ವಿಸ್ತಾರವಾದ ವಿಚಾರ ವಿಮರ್ಶೆಗಳ ಅಗತ್ಯವಿತ್ತೇ ಎಂದು ಕೆಲವರಿಗೆ ತೋರಬಹುದು. 'ಕವಿರಾಜಮಾರ್ಗ' ಕನ್ನಡ ಸಾಹಿತ್ಯದ ಉಪಲಬ್ಧ ಗ್ರಂಥಗಳಲ್ಲಿ ಅತ್ಯಂತ ಪ್ರಾಚೀನವಾದ್ದು, ಆ ಸಾಹಿತ್ಯದ ಪೂರ್ವೋತ್ತರ ಕಾಲಗಳ ಸ್ಥಿತಿಗತಿಗಳ ಸ್ವರೂಪವನ್ನೂ ಘಟ್ಟಗಳನ್ನೂ ಗುರುತಿಸುವುದಕ್ಕಿರುವ ಒಂದು ಉಜ್ಜ್ವಲ ದೀಪಸ್ತಂಭ, ಪರೀಕ್ಷೆಯ ನಿಕಷ; ಅನೇಕ ವಿಷಯಗಳಲ್ಲಿ 'ತದಾದ್ಯಕಾವ್ಯಕ್ಕೆಂದುಂ ಲಕ್ಷ್ಯಂ' ಎನ್ನುವಂತಿರುವ ಕೃತಿ. ಆದ್ದರಿಂದ ಅದರ ವಿವೇಚನೆಯನ್ನು ಸ್ವಲ್ಪ ವಿಸ್ತಾರದಲ್ಲಿಯೇ ಇಲ್ಲಿ ಕೈಗೊಂಡಿದೆ. ಇಂಥ ಕೆಲವು ಕಾರಣಗಳಿಂದಾಗಿ ಪ್ರಕೃತ ಗ್ರಂಥದಲ್ಲಿ ಕೆಲವು ಅಧ್ಯಾಯಭಾಗಗಳು ಅನಿವಾರ್ಯವಾಗಿ ವಿಸ್ತೃತಗೊಂಡಿವೆ ಎಂಬುದನ್ನು ಇಲ್ಲಿ ಅರಿಕೆ ಮಾಡಬೇಕಾಗಿದೆ; ಇದನ್ನು ಓದುಗರು ಗಮನಿಸಬೇಕು.

* * *

ಈ ಸಂಪುಟದ ರಚನೆಯಲ್ಲಿ ಕೂಡ, ಹಿಂದಿನ ಸಂಪುಟದ ರಚನೆಯಲ್ಲಿ ಅನುಸರಿಸಿದ

ಕೆಲವು ಸಾಮಾನ್ಯ ಸಂಗತಿಗಳನ್ನೇ ಅನುಸರಿಸಿದೆ; ಒಂದೆರಡು ಬೇರೆಯವೂ ಇವೆ. ಆ ಎಲ್ಲವೂ ಈ ರೀತಿಯಾಗಿವೆ:

೧. ಯಾವುದಾದರೂ ವಿಷಯದ ಮಂಡನೆ ಖಂಡನೆಗಳಲ್ಲಿ ಬಹುಜನ ಸಮ್ಮತವಾದ ವಿದ್ವದಭಿಪ್ರಾಯಗಳನ್ನೇ ಸಾಮಾನ್ಯವಾಗಿ ಮಾನ್ಯಮಾಡಿದೆ. ಆದರೆ ಕೆಲವೊಮ್ಮೆ ಪ್ರಬಲವಾದ ಆಧಾರಗಳ ಮೇಲೆ ಲೇಖಕರು ತಮ್ಮ ವೈಯಕ್ತಿಕವಾದ ಅಭಿಪ್ರಾಯಗಳನ್ನು ವ್ಯಕ್ತಮಾಡಿದ್ದರೆ, ಸ್ವೀಕೃತವಾದ ಸಾಮಾನ್ಯಾಭಿಪ್ರಾಯಗಳ ಜೊತೆಗೆ ಅವನ್ನೂ ಒಪ್ಪಿ ಹಾಗೆಯೇ ಉಳಿಸಿಕೊಂಡಿದೆ. ಇಂಥ ಸಂದರ್ಭಗಳಲ್ಲಿಯೂ ಅನ್ಯತ್ರವೂ ವಿಷಯದ ಮಂಡನೆ ಖಂಡನೆಗಳಲ್ಲಿ, ಸ್ವಾಭಿಪ್ರಾಯ ನಿವೇದನೆಯಲ್ಲಿ ಉತ್ತರವಾದಿತ್ವ ಆಯಾ ಭಾಗವನ್ನು ಬರೆದ ಲೇಖಕರವೇ ಆಗಿರುತ್ತದೆ; ಕನ್ನಡ ಅಧ್ಯಯನ ಸಂಸ್ಥೆಯದಾಗಲಿ, ಪ್ರಧಾನ ಸಂಪಾದಕರದಾಗಲಿ ಅಥವಾ ಸಂಪಾದಕರದಾಗಲಿ ಅಲ್ಲ.

೨. ವಾಕ್ಯವೇಷ್ಟನಗಳನ್ನೂ ಉದ್ಧೃತ ಗದ್ಯಪದ್ಯಗಳನ್ನೂ ಅವುಗಳ ಭಾಗಗಳನ್ನೂ ಸಾಧ್ಯವಿದ್ದಮಟ್ಟಿಗೆ ಅವುಗಳ ಮೂಲಗಳನ್ನು ನೋಡಿಕೊಂಡು ಶೋಧಿಸಿದೆ.

೩. ಮೂಲಗಳಲ್ಲಿ ಆಕಸ್ಮಿಕವಾಗಿ ಆಗಿರುವ ಅಚ್ಚಿನ ತಪ್ಪುಗಳನ್ನೂ ಕಾಗುಣಿತದ ತಪ್ಪುಗಳನ್ನೂ ಸರಿಪಡಿಸಿ ಉದ್ಧೃತ ರೂಪಗಳನ್ನಿಟ್ಟಿದೆ.

೪. ಪ್ರಾಚೀನ ಗದ್ಯಪದ್ಯಗಳನ್ನೂ ಅವುಗಳ ಭಾಗಗಳನ್ನೂ ಉದ್ಧರಿಸುವಾಗ ಅವುಗಳು ಅಸಂಪಾದಿತವಾಗಿದ್ದರೆ, ಸಂಪಾದಿತವಾಗಿಯೂ ತುಂಬ ಸಂದಿಗ್ಧವಾಗಿದ್ದರೆ ಅಥವಾ ಈಚೆಗೆ ಖಚಿತವಾದ ತಿದ್ದುಪಡಿಗಳಿಗೆ ಒಳಗಾಗಿದ್ದರೆ ಅರ್ಥವಿಶದತೆಯ ದೃಷ್ಟಿಯಿಂದ ಸಣ್ಣಪುಟ್ಟ ಸಂಪಾದಕೀಯ ಮಾರ್ಪಾಡುಗಳನ್ನು ಮಾಡಿದೆ.

೫. ಪ್ರಾಚೀನ ಗದ್ಯಪದ್ಯಗಳಿಗೆ, ಅವುಗಳ ಭಾಗಗಳಿಗೆ ಅರ್ಥ ತಾತ್ಪರ್ಯಗಳನ್ನು ಇತರ ಕಡೆಗಳಿಂದ ಉದ್ಧರಿಸಿ ಕೊಡುವಾಗ ಆಯಾ ಲೇಖಕರು ಅನುಸರಿಸುವ ಮೂಲದಲ್ಲಿರುವಂತೆಯೇ ಅಥವಾ ಲೇಖಕರು ತಮ್ಮ ತಿಳಿವಳಿಕೆಗೆ ಸರಿಯೆಂದು ತೋರಿ ಬರೆದಿರುವಂತೆಯೇ ಅವನ್ನು ಉಳಿಸಿಕೊಂಡಿದೆ.

೬. ಅನ್ಯಮೂಲದಿಂದ ಎತ್ತಿದವು ಹೊರತು, ಉಳಿದ ಕಡೆಗಳಲ್ಲಿ ಸ್ಥಳ, ವ್ಯಕ್ತಿ, ಕೃತಿ ಮುಂತಾದುವುಗಳನ್ನು ಹೇಳುವ ಶಬ್ದರೂಪಗಳನ್ನು ವಿಶೇಷವಾಗಿ ಜನರೂಢಿಯಲ್ಲಿರುವಂತೆಯೇ ಇಟ್ಟುಕೊಂಡಿದೆ. ಹೀಗೆ ಮಾಡುವಾಗ ಇಡಿಯ ಗ್ರಂಥದಲ್ಲಿ, ಕನಿಷ್ಠಪಕ್ಷ ಆಯಾ ಅಧ್ಯಾಯದಲ್ಲಿ, ಒಂದೇ ರೂಪದ ಬಳಕೆಯಿರುವಂತೆ ಯತ್ನಿಸಿದೆ.

೭. ಕವಿ, ಕೃತಿಗಳಿಗೆ ಸಂಬಂಧಿಸಿದ ಇತಿವೃತ್ತಾತ್ಮಕ ವಿವರಗಳು ಅಥವಾ ಬೇರಾವುವೇ ವಿಷಯಗಳು ಒಂದಕ್ಕಿಂತ ಹೆಚ್ಚು ಕಡೆ ಅವಶ್ಯವಾಗಿ ಆವೃತ್ತಿಗೊಳ್ಳಬೇಕಾಗಿ ಬಂದಾಗ, ಭಿನ್ನವೋ ವಿರುದ್ಧವೋ ಆದ ರೀತಿಯಲ್ಲಿ ಅವುಗಳ ಉಲ್ಲೇಖ ಬಾರದ ಹಾಗೆ ನೋಡಿಕೊಂಡಿದೆ. ಹೀಗೆ ಮಾಡುವಾಗ ಲೇಖಕರಲ್ಲಿ ಪರಸ್ಪರವಾಗಿ ಪ್ರಬಲ ಭಿನ್ನಾಭಿಪ್ರಾಯಗಳಿದ್ದಾಗ, ಸರ್ವಸಮ್ಮತವಾದ ನಿರ್ಣಯ ಬಹುಮಟ್ಟಿಗೆ ಅಶಕ್ಯವೆಂದು

ತೋರಿದಾಗ, ಆಯಾ ಲೇಖಕರೊಡನೆ ವಿಚಾರ ವಿನಿಮಯಮಾಡಿ, ಬಹುಜನ ಸಮ್ಮತವಾದ ವಿದ್ವದಭಿಪ್ರಾಯವನ್ನು ಮೊದಲು ಮನ್ನಿಸಿ, ಬೇರೆಯದಾದ ಅಭಿಪ್ರಾಯವನ್ನೂ ಗ್ರಾಹ್ಯವೆಂದೇ ಮಾನ್ಯಮಾಡಿದೆ; ಅತ್ಯವಶ್ಯವೆನಿಸಿದಾಗ ಗಣ್ಯವಾದ ವೈಯಕ್ತಿಕ ಅಭಿಪ್ರಾಯವನ್ನು ಸಾಮಾನ್ಯಾಭಿಪ್ರಾಯದ ಜೊತೆಯಲ್ಲಿಯೇ ಉಲ್ಲೇಖಿಸಬಹುದು.

೮. ಶಕೆ ಅಥವಾ ಇಸವಿಗಳನ್ನು ನಮೂದಿಸುವಾಗ, ಕ್ರಿಸ್ತಶಕದ ಸಂವತ್ಸರಗಳನ್ನು ಬರಿಯ ಸಂಖ್ಯೆಯನ್ನಷ್ಟೇ ಕೊಟ್ಟು (ಉದಾ. ೬೩೪ರ ಐಹೊಳೆ ಶಾಸನದ), ಅಥವಾ ಸಂದಿಗ್ಧತೆಯಿದ್ದರೆ 'ಸು.' (=ಸುಮಾರು) ಎಂಬ ಸಂಕೇತಾಕ್ಷರವನ್ನು ಸೇರಿಸಿ (ಉದಾ. ಸು. ೪೫೦ರ ಹಲ್ಮಿಡಿ ಶಾಸನದಲ್ಲಿ) ನಮೂದಿಸಿದೆ; ಉಳಿದ ಶಕೆಗಳ ವರ್ಷಗಳನ್ನು, ಅವುಗಳನ್ನು ನಿರ್ದೇಶಿಸುವ ಸೂಕ್ತ ಸಂಕೇತಾಕ್ಷರಗಳೊಡನೆ ಹೇಳಿದೆ.

* * *

ಹತ್ತು ಸಂಪುಟಗಳ ಕನ್ನಡ ಸಾಹಿತ್ಯ ಚರಿತ್ರೆಯ ಸಿದ್ಧತೆಗೆ ತಕ್ಕ ರೂಪರೇಷೆಗಳು ರೂಪುಗೊಂಡದ್ದು, ಕೆಲಸ ಮೊದಲಾದ್ದು ಈಗ ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿರುವ ಪ್ರೊ. ದೇ. ಜವರೇಗೌಡ ಅವರು ಕನ್ನಡ ಇಲಾಖೆಯ ಪ್ರಾಧ್ಯಾಪಕರಾಗಿದ್ದಾಗ (೧೯೬೪). ಅವರ ನುಡಿಯೊಲುಮೆ ಮುನ್ನೋಟಗಳ ಫಲವಾಗಿ ವ್ಯವಸ್ಥೆಯಂತೆ ಕೆಲಸ ತೃಪ್ತಿಕರವಾಗಿ ನಡೆದರೂ ಕಾರಣಾಂತರಗಳಿಂದ ಈ ಗ್ರಂಥಶ್ರೇಣಿಯ ಆರಂಭ ಸ್ವಲ್ಪ ಕಾಲ ತಡೆಗೊಂಡಿತ್ತು. ಎಲ್ಲ ಸುಮುಖವಾಗಿ, ಅಕ್ಟೋಬರ್ ೧೯೭೪ ರಲ್ಲಿ ಮೊದಲನೆಯ ಸಂಪುಟ ಪ್ರಕಟವಾಯಿತು. ಪ್ರಾಯಃ ಕಿಟ್ಟೆಲ್ ಇಂಗ್ಲಿಷ್ ಭಾಷೆಯಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯ ಪ್ರಥಮ ಸಮೀಕ್ಷೆಯನ್ನು ಪ್ರಕಟಿಸಿದ (ಅಕ್ಟೋಬರ್ ೧೮೭೪) ಒಂದುನೂರು ವರ್ಷಗಳಿಗೆ ಸರಿಯಾಗಿ 'ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ'ಯ ಪ್ರಕಟಣೆ ಆರಂಭವಾಗಲಿ ಎಂದು ಕಾಲ ಪುರುಷನು ಹಂಚಿಕೆ ಹಾಕಿರಬೇಕು. ಅದು ನೆರವೇರಿದೆ.

ಈ ಎರಡನೆಯ ಸಂಪುಟದ ಕೆಲಸದಲ್ಲಿ ಕೂಡ, ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರೂ ಕನ್ನಡ ಪ್ರಾಧ್ಯಾಪಕರೂ ಈ ಗ್ರಂಥಶ್ರೇಣಿಯ ಪ್ರಧಾನ ಸಂಪಾದಕರೂ ಆಗಿರುವ ಡಾ. ಹಾ. ಮಾ. ನಾಯಕ ಅವರಿಂದ ನನಗೆ ಅಮೂಲ್ಯವಾದ ಮಾರ್ಗದರ್ಶನ ದೊರತಿದೆ. ಸಹೋದ್ಯೋಗಿಗಳ ವಿಷಯದಲ್ಲಿ ಅವರಿಗಿರುವ ಪ್ರೀತ್ಯಾದರಗಳೂ ದೊಡ್ಡ ಯೋಜನೆಗಳನ್ನು ಕೈಗೂಡಿಸುವುದರಲ್ಲಿ ಅವರಿಗಿರುವ ಸಾಮರ್ಥ್ಯ ಕೌಶಲಗಳೂ ಮತ್ತೆ ಮತ್ತೆ ಅಭಿಮಾನದಿಂದ ನೆನೆಯಬೇಕಾದವು. ಅವುಗಳ ಫಲವಾಗಿಯೇ, ಮೊದಲನೆಯ ಸಂಪುಟ ಬಿಡುಗಡೆಯಾದ ೬-೭ ತಿಂಗಳ ಅಲ್ಪಾವಧಿಯಲ್ಲೇ ಈ ಎರಡನೆಯ ಸಂಪುಟದ ಬಿಡುಗಡೆಯೂ ಸಾಧ್ಯವಾಗಿದೆ. ಈ ಸಂಪುಟದ ಸಂಪಾದನಕಾರ್ಯವನ್ನೂ ನನಗೇ ಒಪ್ಪಿಸಿದ ಅವರ ವಾತ್ಸಲ್ಯಕ್ಕೆ ನಾನು ಋಣಿ.

ಈ ಸಂಪುಟದ ಅಧ್ಯಾಯಭಾಗಗಳನ್ನು ಕನ್ನಡ ಅಧ್ಯಯನ ಸಂಸ್ಥೆಯ, ಇತರ ಶೈಕ್ಷಣಿಕ ಮತ್ತು ಅನ್ಯಸಂಸ್ಥೆಗಳ ಹಿರಿಯರೂ ಮಿತ್ರರೂ ಬರೆದುಕೊಟ್ಟು ಉಪಕರಿಸಿ

ದ್ದಾರೆ. ನಮ್ಮ ನಿಯಮ ನಿಬಂಧನೆಗಳ ಅಡೆತಡೆಗಳನ್ನು ತಾಳ್ಮೆಯಿಂದ ಸಹಿಸಿ, ಗೊತ್ತಾದ ಕಾಲದಲ್ಲಿ ತಮ್ಮ ಬರಹಗಳನ್ನು ಅವರು ನಮಗೆ ಒದಗಿಸಿದ್ದಾರೆ; ಇಲ್ಲಿಯ ಇತಿಮಿತಿಗಳ ಸಲುವಾಗಿ, ಅವನ್ನು ಯಥೋಚಿತವಾಗಿ ಸಂಪಾದಿಸಿ ಪ್ರಕಟಿಸಲೂ ವಿಶ್ವಾಸದಿಂದ ಒಪ್ಪಿಗೆಯಿತ್ತು ಸಹಕರಿಸಿದ್ದಾರೆ. ಈ ತೆರದ ಕೆಲಸದಲ್ಲಿ ಇದು ಅವಶ್ಯ.

ಹಿಂದಿನ ಸಂಪುಟದ ವಿಷಯದಲ್ಲಿ ಹೇಗೋ ಹಾಗೆಯೇ ಈ ಸಂಪುಟದ ಸಿದ್ಧತೆಯಲ್ಲಿಯೂ ಕನ್ನಡ ಅಧ್ಯಯನ ಸಂಸ್ಥೆಯ ಬೇರೆ ಬೇರೆ ವಿಭಾಗಗಳ ಹಲವರು ಮಿತ್ರರೂ ಸಂಶೋಧನ ವಿದ್ಯಾರ್ಥಿಗಳೂ ನನಗೆ ನೆರವಾಗಿದ್ದಾರೆ. ಶಾಸನತಜ್ಞ ಡಾ. ಬಾ. ರಾ. ಗೋಪಾಲ್ ಅವರು ಕೆಲವು ಲೇಖನಗಳ ಪರಿಷ್ಕರಣಕಾರ್ಯದಲ್ಲಿ, ಇತರ ವಿಧಗಳಲ್ಲಿ ಸಹಾಯವಾಗಿದ್ದಾರೆ. ಈ ಸಂಸ್ಥೆಯಲ್ಲಿ ಸಂಶೋಧನ ಸಹಾಯಕರಾಗಿರುವ ಶ್ರೀ ಎನ್. ಎಸ್. ತಾರಾನಾಥ್ ಅವರು ಲೇಖನಗಳನ್ನು ಸಂಗ್ರಹಿಸುವುದರಿಂದ ಹಿಡಿದು ತಿದ್ದಿದ ಕರಡಚ್ಚುಗಳು ಅಚ್ಚುಕೂಟ ಸೇರಿ ಮುದ್ರಣಗೊಳ್ಳುವವರೆಗೆ ನಡುವಣ ಎಲ್ಲ ಹಂತಗಳಲ್ಲಿಯೂ ನನ್ನೊಂದಿಗೆ ಕೆಲಸಮಾಡಿದ್ದಾರೆ. ಅವರ ಶ್ರದ್ಧೆ, ಉತ್ಸಾಹ ಮತ್ತು ಬುದ್ಧಿಕೌಶಲಗಳನ್ನು ನಾನು ಬಹುವಾಗಿ ಮೆಚ್ಚಿಕೊಂಡಿದ್ದೇನೆ; ಇಲ್ಲಿ ಬಳಸಿಕೊಂಡಿದ್ದೇನೆ.

ಇನ್ನು ಮುದ್ರಣಕಾರ್ಯದಲ್ಲಿ, ಮಿತ್ರರಾದ ಶ್ರೀ ಜಿ. ಎಚ್. ಕೃಷ್ಣಮೂರ್ತಿಯವರು ಕಳೆದ ಸಲದಂತೆ ಈ ಸಲವೂ ನನ್ನಿಂದಾದ ನಾನಾ ವಿಧವಾದ ತಡೆ ತೊಂದರೆಗಳನ್ನೆಲ್ಲ ತಾಳ್ಮೆಯಿಂದಲೇ ಸಹಿಸಿ, ವಿಶ್ವಾಸವಿಟ್ಟು ಸಹಕರಿಸಿದ್ದಾರೆ. ಅವರ ಸಹನೆ ಸಹಕಾರಗಳನ್ನು ಪರಿಭಾವಿಸಿದಾಗ, ಅವು ಕೇವಲ ಸ್ನೇಹಭಾವದ ಉದಾರದೃಷ್ಟಿಯ ಫಲವೆಂದು ನನಗೆ ತೋರಿದೆ.

ಈ ಎಲ್ಲ ಮಹನೀಯರಿಗೂ ನನ್ನ ಹಾರ್ದಿಕ ಕೃತಜ್ಞತೆಗಳು, ವಂದನೆಗಳು.

ಟಿ. ವಿ. ವೆಂಕಟಾಚಲ ಶಾಸ್ತ್ರೀ

ಕನ್ನಡ ಅಧ್ಯಯನ ಸಂಸ್ಥೆ
ಮೇ ೧೫, ೧೯೭೫

# ಸಂಕ್ಷಿಪ್ತ ಸೂಚಿ

| | |
|---|---|
| *ASWI* | Archaeological Survey of Western India |
| *EC* | Epigraphia Carnatica |
| *EHD* | The Early History of Deccan |
| *EI* | Epigraphia Indica |
| *GOKI* | A Grammar of the Oldest Kanarese Inscriptions |
| *HGOK* | Historical Grammar of Old Kannada |
| *HKL* | History of Kannada Language |
| *HKLit* | History of Kannada Literature |
| *IA* | Indian Antiquary |
| *IHQ* | Indian Historical Quarterly |
| *JAHRS* | Journal of Andhra Historical Research Society |
| *JBBRAS* | Journal of the Bombay Branch of the Royal Asiatic Society |
| *JRAS* | Journal of the Royal Asiatic Society of Great Britain and Ireland |
| *KI* | Karnatak Inscriptions |
| *KTA* | Karnataka Through the Ages |
| *LSI* | Linguistic Survey of India |
| *MAR* | Mysore Archaeological Report |
| *QJMS* | Quarterly Journal of the Mythic Society |
| *SII* | South Indian Inscriptions |
| *SVOI* | Journal of Sri Venkateswara Oriental Institute |

| | |
|---|---|
| ಇಂಆ | ಇಂಡಿಯನ್ ಆಂಟಿಕ್ವೆರಿ |
| ಎಕ | ಎಪಿಗ್ರಾಫಿಯ ಕರ್ನಾಟಿಕ |
| ಕಅಸಂ ಕಸಾಚ | ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ |
| ಕಕಚ | ಕರ್ಣಾಟಕ ಕವಿಚರಿತೆ |
| ಕಭಾ | ಕರ್ನಾಟಕ ಭಾರತಿ |
| ಕಸಾಪ | ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ |
| | ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ |
| ಜಕ | ಜಯ ಕರ್ನಾಟಕ |
| ಪ್ರಕ | ಪ್ರಬುದ್ಧ ಕರ್ಣಾಟಕ |
| ಮೈಆರಿ | ಮೈಸೂರ್ ಆರ್ಕಿಯಲಾಜಿಕಲ್ ರಿಪೋರ್ಟ್ |
| ಸಕಸಾಚ | ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ |

# ಲೇಖನದಾರರು

ಬಾ. ರಾ. ಗೋಪಾಲ್ (ಡಾ.) : ಶಾಸನತಜ್ಞ, ಕನ್ನಡ ಅಧ್ಯಯನ ಸಂಸ್ಥೆ.

ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ : ಮಾನವಿಕ ಸಂಪಾದಕ, 'ಕನ್ನಡ ವಿಶ್ವಕೋಶ', ಕನ್ನಡ ಅಧ್ಯಯನ ಸಂಸ್ಥೆ

ಎಚ್. ಕೆ. ರಾಮಚಂದ್ರಮೂರ್ತಿ: ಸಂಪಾದಕ, 'ಇಂಗ್ಲಿಷ್-ಕನ್ನಡ ನಿಘಂಟು' ಪರಿಷ್ಕರಣ ಯೋಜನೆ, ಪ್ರಸಾರಾಂಗ, ಮಾನಸಗಂಗೋತ್ರಿ

ಎಸ್. ಲಕ್ಷ್ಮೀನಾರಾಯಣ ಆರೋರಾ: ಅಧ್ಯಾಪಕ, ಭಾಷಾಂತರ ಮತ್ತು ಪಠ್ಯಪುಸ್ತಕ ವಿಭಾಗ, ಕನ್ನಡ ಅಧ್ಯಯನ ಸಂಸ್ಥೆ

ಬಿ. ಕೆ. ಶಿವರಾಮಯ್ಯ : ರೀಡರ್, ಸಂಸ್ಕೃತ ವಿಭಾಗ, ಮಾನಸಗಂಗೋತ್ರಿ

ಆ. ನೇ. ಉಪಾಧ್ಯೆ (ಡಾ.) : ಪ್ರಾಧ್ಯಾಪಕ, ಜೈನಶಾಸ್ತ್ರ ಮತ್ತು ಪ್ರಾಕೃತ ವಿಭಾಗ, ಮಾನಸಗಂಗೋತ್ರಿ

ಪ. ವಿ. ಚಂದ್ರಶೇಖರ ರಾವ್ : ಕನ್ನಡ ರೀಡರ್, ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆ, ಮಾನಸಗಂಗೋತ್ರಿ

ಆರ್. ವಿ. ಎಸ್. ಸುಂದರಂ (ಡಾ.) : ತೆಲುಗು ಅಧ್ಯಾಪಕ, ಕನ್ನಡ ಅಧ್ಯಯನ ಸಂಸ್ಥೆ

ಸುಧಾಕರ : ಕನ್ನಡ ರೀಡರ್, ಕನ್ನಡ ಅಧ್ಯಯನ ಸಂಸ್ಥೆ

ಎಸ್. ನಾಗರಾಜು : ಸಹ ಸಂಪಾದಕ, 'ಕನ್ನಡ ವಿಶ್ವಕೋಶ', ಕನ್ನಡ ಅಧ್ಯಯನ ಸಂಸ್ಥೆ

ರಾಮೇಗೌಡ: ಕನ್ನಡ ಅಧ್ಯಾಪಕ, ಕನ್ನಡ ಅಧ್ಯಯನ ಸಂಸ್ಥೆ

ಕೆ. ಅನಂತರಾಮು : ಕನ್ನಡ ಅಧ್ಯಾಪಕ, ಮೈಸೂರು ವಿಶ್ವವಿದ್ಯಾನಿಲಯದ ಸಂಜೆ ಕಾಲೇಜು

ಸಿ. ಪಿ. ಕೃಷ್ಣಕುಮಾರ್ (ಡಾ.) : ಕನ್ನಡ ರೀಡರ್, ಕನ್ನಡ ಅಧ್ಯಯನ ಸಂಸ್ಥೆ

ಟಿ. ವಿ. ವೆಂಕಟಾಚಲ ಶಾಸ್ತ್ರೀ (ಡಾ.): ಕನ್ನಡ ರೀಡರ್, 'ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ'ಯ ಸಂಪಾದಕ

ಎನ್. ಎಸ್. ತಾರಾನಾಥ್ : ಸಂಶೋಧನ ಸಹಾಯಕ, ಕನ್ನಡ ಅಧ್ಯಯನ ಸಂಸ್ಥೆ

ಡಿ. ವಿಜಯ : ಕನ್ನಡ ಅಧ್ಯಾಪಕಿ, ಕನ್ನಡ ಅಧ್ಯಯನ ಸಂಸ್ಥೆ

ಜಿ. ವರದರಾಜ ರಾವ್ (ಡಾ.) : ಕನ್ನಡ ಪ್ರಾಧ್ಯಾಪಕರು, ಮಂಗಳಗಂಗೋತ್ರಿ, ಮಂಗಳೂರು

ಪ್ರಧಾನ್ ಗುರುದತ್ತ : ರೀಡರ್, ಭಾಷಾಂತರ ಮತ್ತು ಪಠ್ಯಪುಸ್ತಕ ವಿಭಾಗ, ಕನ್ನಡ ಅಧ್ಯಯನ ಸಂಸ್ಥೆ

ಸೀತಾರಾಮ್ ಎಸ್. ಜಾಗೀರ್‌ದಾರ್ : ಶಾಸನ ಸಹಾಯಕ, ಕನ್ನಡ ಅಧ್ಯಯನ ಸಂಸ್ಥೆ

ಹಾ. ಮಾ. ನಾಯಕ (ಡಾ.) : ನಿರ್ದೇಶಕ, ಕನ್ನಡ ಅಧ್ಯಯನ ಸಂಸ್ಥೆ

ಅಧ್ಯಾಯ ಒಂದು

# ಹಿನ್ನೆಲೆ

## ಭಾರತೀಯ ಜನಜೀವನ

ಯಾವುದೇ ದೇಶದ ಸಾಹಿತ್ಯವನ್ನು ತಿಳಿಯಬೇಕಾದರೂ ಆ ದೇಶದ ಇತಿಹಾಸದ ಪರಿಚಯ ಅಗತ್ಯವಾಗುತ್ತದೆ. ಇತಿಹಾಸ ಕೇವಲ ಸಮಕಾಲೀನ ರಾಜಕೀಯ ವಿದ್ಯಮಾನಗಳ ಆಗುಹೋಗುಗಳಿಗಷ್ಟೇ ಸೀಮಿತವಲ್ಲ; ಅದು ಸಾಹಿತ್ಯ ಸಂಸ್ಕೃತಿಗಳ ಕೈಗನ್ನಡಿ ಕೂಡ ಎಂದಾಗ, ಅಂದಿನ ಸಮಾಜ, ಆರ್ಥಿಕವ್ಯವಸ್ಥೆ, ಧಾರ್ಮಿಕಪ್ರವೃತ್ತಿ, ಜನಜೀವನ, ಕಲೆ, ಪರಿಸರಪ್ರಭಾವ ಈ ಮುಂತಾದವು ಕೂಡ ಅದರಲ್ಲಿ ಸೇರುತ್ತವೆ. ಸಮಕಾಲೀನ ಸಾಹಿತ್ಯವನ್ನು ಅರ್ಥಮಾಡಿಕೊಳ್ಳಲು ಹಿನ್ನೆಲೆಯಾಗಿ ಆ ಕಾಲದ ಐತಿಹಾಸಿಕ ರೂಪರೇಷೆಗಳ ಪರಿಚಯವಾಗಬೇಕು—ಎನ್ನುವುದು ಸಾಹಿತ್ಯಚರಿತ್ರೆಕಾರರಿಗೆ ಒಪ್ಪಿಗೆಯಾದ ವಿಷಯ.

ಕರ್ಣಾಟಕ ಭಾರತದ ಅವಿಭಾಜ್ಯ ಅಂಗ; ಕರ್ಣಾಟಕ ಸಂಸ್ಕೃತಿ ಭಾರತೀಯ ಸಂಸ್ಕೃತಿಯ ಒಂದು ಪ್ರಾದೇಶಿಕ ಮುಖ. ತನ್ನದೇ ಆದ ವೈಶಿಷ್ಟ್ಯಗಳನ್ನು ಪಡೆದಿದ್ದರೂ ಅದು ಭಾರತೀಯ ಸಂಸ್ಕೃತಿಯನ್ನು ಆಧರಿಸಿದೆ, ಅಳವಡಿಸಿಕೊಂಡಿದೆ.

ಭಾರತಕ್ಕೆ ೨೦ ಶತಮಾನಗಳಷ್ಟು ದೀರ್ಘವಾದ ಇತಿಹಾಸವಿದೆ. ಪ್ರಪಂಚದ ಇತರ ಪುರಾತನ ಸಂಸ್ಕೃತಿಗಳು ಇಂದು ಕೇವಲ ಅವಶೇಷಗಳಾಗಿ ಉಳಿದಿವೆ. ಅದರ ಪ್ರಾಚೀನ ಸಂಸ್ಕೃತಿಗೂ ಇಂದಿನ ಇರುವಿಕೆಗೂ ಸಂಬಂಧವೇ ಇಲ್ಲ. ಅನುಸ್ಯೂತವಾಗಿ ಶತಮಾನಗಳಿಂದ ಹರಿದುಕೊಂಡು ಬರುತ್ತಿರುವ ಸಂಸ್ಕೃತಿಯೆಂದರೆ ನಮ್ಮದೊಂದೇ. ಇದರಲ್ಲಿ ಪರಿವರ್ತನೆಯಾಗಿಲ್ಲವೆಂದಲ್ಲ; ಆದರೆ ಎಲ್ಲ ಪರಿವರ್ತನೆಗಳೂ ಕೆಲವು ಮೂಲಭೂತ ತತ್ತ್ವಗಳನ್ನು ಆಧರಿಸಿಯೇ ಆಗಿವೆ. ಅವನ್ನು ಉಳಿಸಿಕೊಂಡು ಬಂದಿವೆ. ಭೂಸ್ಥಿತಿ, ವಾಯುಗುಣ, ಸಸ್ಯಸೃಷ್ಟಿ, ಪ್ರಾಣಿವರ್ಗ ಮುಂತಾದವುಗಳಲ್ಲಿ ವೈವಿಧ್ಯ ವ್ಯತ್ಯಾಸ ವಿಷಮತೆಗಳಿದ್ದರೂ ಭಾರತದ ಪ್ರಾಕೃತಿಕ ರಚನೆ, ಅನ್ಯೋನ್ಯ ಹೋಲಿಕೆಯ ಜೀವನರೀತಿ ಮತ್ತು ಮನೋಧರ್ಮ ಇವು ಕಾರಣವಾಗಿ ನಮ್ಮ ನಾಗರಿಕತೆ ಮತ್ತು ಸಂಸ್ಕೃತಿಯಲ್ಲಿ ಏಕರೂಪತೆ ಸಾಧಿತವಾಗಿದೆ.

ಪ್ರಾಕೃತಿಕವಾಗಿ ಉತ್ತರಭಾರತ ದಕ್ಷಿಣ ಭಾರತದಿಂದ ಬೇರ್ಪಟ್ಟಿದೆ. ಎಂತಲೇ

ರಾಜಕೀಯವಾಗಿ ಈ ಎರಡು ವಿಭಾಗಗಳಲ್ಲಿ ವ್ಯತ್ಯಾಸಗಳಿವೆ. ದಕ್ಷಿಣ ಭಾರತದಲ್ಲಿ ಹೆಚ್ಚುಕಾಲ ಸ್ವತಂತ್ರವಾದ ರಾಜ್ಯಗಳಿದ್ದು, ಪಾರತಂತ್ರ್ಯ ತಡವಾಗಿ ಬಂದಿತು. ಇದರ ಪರಿಣಾಮವಾಗಿ ಹಿಂದುಧರ್ಮದ ಮೂಲಭೂತ ಆಚಾರಗಳೂ ಸಂಪ್ರದಾಯಗಳೂ ಇಲ್ಲಿ ಉಳಿದುಕೊಂಡುವು. ಆದರೆ ದಕ್ಷಿಣ ಭಾರತದಲ್ಲಿ ಇತಿಹಾಸಯುಗ ಆರಂಭವಾಗುವ ವೇಳೆಗೆ ಉತ್ತರದಲ್ಲಿ ಹಲವಾರು ರಾಜ್ಯಗಳು, ಸಾಮ್ರಾಜ್ಯಗಳು ಆಳಿ ಅಳಿದಿದ್ದುವು. ಕರ್ಣಾಟಕದಲ್ಲಿ ನವಶಿಲಾಯುಗ ಇನ್ನೂ ಪ್ರಚಲಿತವಿದ್ದಾಗ, ಉತ್ತರದಲ್ಲಿ ಹರಪ್ಪ-ಮೊಹೆಂಜೊದಾರೊ ನಾಗರಿಕತೆಗಳು ಮೆರೆದು ಮುಳುಗಿದ್ದುವು. ಇತರ ದ್ರಾವಿಡ ಭಾಷೆಗಳೂ ಕನ್ನಡ ಭಾಷೆಯೂ ಅಭಿವೃದ್ಧಿಗೊಂಡು ಸಾಹಿತ್ಯಕೃತಿಗಳು ಕಾಣಿಸಿಕೊಳ್ಳುವ ವೇಳೆಗಾಗಲೇ ಆರ್ಯಭಾಷೆ ಎನಿಸಿದ ಸಂಸ್ಕೃತ ಭಾಷೆ ಪ್ರೌಢವಾಗಿ ಬೆಳೆದು ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ಸರ್ವತೋಮುಖ ಅಭಿವೃದ್ಧಿಯಾಗಿ ಹುಲುಸಾದ ಚಿನ್ನದ ಬೆಳೆ ಬಂದಿತ್ತು. ಇದರ ಪ್ರಭಾವ ವಿವಿಧ ರೀತಿಗಳಲ್ಲಿ ಸಮಾಜದ ಮೇಲೂ ಭಾಷೆಗಳ ಮೇಲೂ ಉಂಟಾಗಿತ್ತು. ಈ ದೃಷ್ಟಿಯಿಂದ ಸಹ ಭಾರತೀಯ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯನ್ನು ಅಧ್ಯಯನ ಮಾಡಬೇಕು.

## ಹರಪ್ಪ ಸಂಸ್ಕೃತಿ

೧೯೨೧ರಲ್ಲಿ ಸಿಂಧುಕೊಳ್ಳದ ನಾಗರಿಕತೆ ಬಯಲಿಗೆ ಬರುವವರೆಗೂ ಪ್ರಾಚೀನ ಭಾರತದ ಚರಿತ್ರೆ ಆರಂಭವಾಗುತ್ತಿದ್ದುದು ಅಲೆಕ್ಸಾಂಡರನ ದಂಡಯಾತ್ರೆಯಿಂದ. ಆರ್ಯರ ನಾಗರಿಕತೆ, ಅವರ ಸಾಹಿತ್ಯಸೃಷ್ಟಿ ಮುಂತಾದವು ವಿದ್ವಾಂಸರ ಕುತೂಹಲ ಕೆರಳಿಸಿದ್ದುವು; ಆದರೆ ಆ ವರ್ಷ ನಡೆದ ಹೊಸದೊಂದು ಶೋಧ ಭಾರತದ ಇತಿಹಾಸವನ್ನು ಸು. ಕ್ರಿ.ಪೂ. ೩೦೦೦ದ ವರೆಗೆ ಹಿಂದೂಡಿತು. ಆರ್ಯರಿಗಿಂತಲೂ ಮೊದಲು ಬೇರೊಂದು ಜನಾಂಗದ ಜನ ಬೇರೊಂದು ನಾಗರಿಕತೆಯನ್ನು ಸ್ಥಾಪಿಸಿ ಸಿಂಧುಕಣಿವೆಯ ಮತ್ತು ಅದರ ಸುತ್ತಲಿನ ವಿಸ್ತಾರವಾದ ಪ್ರದೇಶದಲ್ಲಿ ಬಾಳಿದ್ದರೆಂಬ ಅಂಶ ಗೋಚರಿಸಿತು. ಅಂದಿನಿಂದ ಹರಪ್ಪ-ಮೊಹೆಂಜೊದಾರೊಗಳಲ್ಲಿ, ಗುಜರಾತಿನ ರಂಗಪುರ, ಲೋಥಲ್, ಪಂಜಾಬಿನ ರೂಪರ್, ರಾಜಸ್ಥಾನದ ಕಾಲಿಬಂಗನ್ ಮುಂತಾದ ಸ್ಥಳಗಳಲ್ಲಿ ಪುರಾತತ್ತ್ವ ಶೋಧನೆ ನಡೆದಿದೆ. ಹರಪ್ಪ-ಮೊಹೆಂಜೊದಾರೊಗಳು ೧೯೪೭ರಲ್ಲಿ ಪಾಕಿಸ್ಥಾನಕ್ಕೆ ಸೇರಿದ ಬಳಿಕ ಹರಪ್ಪ ಸಂಸ್ಕೃತಿಗೆ ಸೇರಿದ ಹಲವಾರು ನಿವೇಶನಗಳನ್ನು ಭಾರತದಲ್ಲಿಯೇ ಈಚೆಗೆ ಹುಡುಕಲಾಗಿದೆ. ಈ ನಾಗರಿಕತೆಗಿಂತ ವಿಭಿನ್ನವಾದ ಲಕ್ಷಣಗಳನ್ನುಳ್ಳ ಗ್ರಾಮೀಣ ನಾಗರಿಕತೆ ಕೂಡ ಬಲೂಚಿಸ್ಥಾನದ ಬೆಟ್ಟಗಳ ತಪ್ಪಲಿನ ಕ್ವೆಟ್ಟ, ನಾಲ್, ಕುಲ್ಲಿ ಮುಂತಾದ ಕಡೆಗಳಲ್ಲಿ ಕಂಡುಬಂದಿವೆ. ಇವು ಸಿಂಧು ಸಂಸ್ಕೃತಿ (ಹರಪ್ಪ ಸಂಸ್ಕೃತಿ)ಗೂ ಹಿಂದೆ ಚೆನ್ನಾಗಿ ಬೆಳೆದು ನಿಂತಿದ್ದಂತೆ ತೋರುವ ಗ್ರಾಮೀಣ ಸಂಸ್ಕೃತಿಗಳು.

ಹರಪ್ಪ ಸಂಸ್ಕೃತಿಯಲ್ಲಿ ಕಂಡುಬಂದಿರುವ ಅಂಶಗಳು ವಿಶ್ವದ ಇತರ ಅತಿಪುರಾತನ ಸಂಸ್ಕೃತಿಗಳಿಗೆ ನೆಲೆಯಾದ ಇರಾನ್, ಮೆಸೊಪೊಟೇಮಿಯ, ಈಜಿಪ್ಟ್ ದೇಶಗಳ ಸಾಲಿಗೆ

ಭಾರತವೂ ಜೊತೆಗೂಡುವಂತೆ ಮಾಡಿವೆ. ತಾಮ್ರ (ಅಥವಾ ಕಂಚಿನ) ಹಾಗೂ ಒಮ್ಮೊಮ್ಮೆ ಕಲ್ಲಿನ ಆಯುಧಗಳ ಬಳಕೆ, ವ್ಯವಸಾಯ, ಕ್ರಮಬದ್ಧ ನಗರಜೀವನ, ಬರೆವಣಿಗೆಯ ಉಪಯೋಗ, ಸೌಂದರ್ಯಪ್ರಜ್ಞೆ ಇವು ಈ ಪುರಾತನ ನಾಗರಿಕತೆಗಳಲ್ಲಿ ಕಂಡುಬಂದಿರುವ ಸಮಾನಾಂಶಗಳು. ಆದರೆ ಸಮಾನಾಂಶಗಳಿಗಿಂತ ಹೆಚ್ಚಾಗಿ ವಿಭಿನ್ನಾಂಶಗಳೇ ತಿಳಿದುಬಂದಿವೆ.

ಈಗ ಬಹುತೇಕ ಮರಳುಗಾಡಾಗಿರುವ ಸಿಂಧು ಮೈದಾನ ೫೦೦೦ ವರ್ಷಗಳ ಹಿಂದೆ ತಂಪಾದ, ಹಿತಕರವಾದ ವಾಯುಗುಣವನ್ನು ಪಡೆದಿದ್ದಿತು. ಈ ನಿವೇಶನಗಳಲ್ಲಿನ ಕಟ್ಟಡಗಳಿಗೆ ಸುಟ್ಟ ಇಟ್ಟಿಗೆಗಳನ್ನು ಉಪಯೋಗಿಸಿರುವುದನ್ನು ಗಮನಿಸಿದರೆ ಇಲ್ಲಿ ಅಂದು ದಟ್ಟವಾದ ಕಾಡುಗಳೂ ಇದ್ದವೆನ್ನಬಹುದು. ಇಲ್ಲಿ ನಾವು ಕಾಣುವುದು ಸುವ್ಯವಸ್ಥಿತವಾದ ನಗರಜೀವನವನ್ನು. ನಗರರಕ್ಷಣೆಗಾಗಿ ಸುತ್ತಲೂ ಎತ್ತರದ ಕೋಟೆ ಇದ್ದಿತು; ಕಾವಲುಗಾರರ ಠಾಣ್ಯಗಳಿದ್ದುವು. ನಗರ ನಿರ್ಮಾಣದಲ್ಲಿ ಒಂದೇ ತಲವಿನ್ಯಾಸವನ್ನು ಕಾಣುತ್ತೇವೆ. ಹರಪ್ಪ ನಗರಗಳನ್ನು ಸರಳರೇಖೆಯಲ್ಲಿ ಉತ್ತರ-ದಕ್ಷಿಣ, ಪೂರ್ವ-ಪಶ್ಚಿಮವಾಗಿ ಕಟ್ಟಿದ್ದು, ಅವು ಒಂದಕ್ಕೊಂದು ಸಮಕೋಣದಲ್ಲಿ ಸಂಧಿಸುತ್ತಿದ್ದವು. ಇದು ಅವರಿಗೆ ಜ್ಯೋತಿಷಜ್ಞಾನ ಹಾಗೂ ವಾಸ್ತುಶಿಲ್ಪ ತತ್ತ್ವಗಳ ಅರಿವು ಇದ್ದಿತೆಂಬುದನ್ನು ಸೂಚಿಸುತ್ತದೆ ಎಂದು ಎಸ್. ಶ್ರೀಕಂಠಶಾಸ್ತ್ರಿಯವರು ಅಭಿಪ್ರಾಯಪಟ್ಟಿದ್ದಾರೆ.[1] ಈ ನಗರಗಳ ದೈನಂದಿನ ಜೀವನದ ವ್ಯವಹಾರಗಳಿಗಾಗಿ ಮಾಡಿಕೊಂಡ ಬಗೆಬಗೆಯ ಏರ್ಪಾಟುಗಳನ್ನವಲೋಕಿಸಿದಾಗ ಇಲ್ಲಿ ವಾಸಿಸಿದ ಜನ ನೈರ್ಮಲ್ಯ ನಾಗರಿಕ ಆರೋಗ್ಯಗಳಲ್ಲಿ ಆಸಕ್ತಿ ವಹಿಸಿದ್ದರೆಂಬುದು ತಿಳಿಯುವುದು. ಓರಣ ದಕ್ಷತೆಗಳುಳ್ಳ ಈ ನಗರದ ಆಡಳಿತ ಸಮರ್ಥರಾದ ಶಾಸಕರಿಂದ ನಡಸಲ್ಪಟ್ಟಿರಬೇಕು. ಇವು ಪ್ರತ್ಯೇಕ ನಗರ ರಾಜ್ಯಗಳಾಗಿದ್ದವೋ ಅಥವಾ ಯಾವೊಂದು ಸಾಮ್ರಾಜ್ಯದ ಆಧಿಪತ್ಯದಲ್ಲಿದ್ದವೋ ಹೇಳಲಾಗದು.

ಜನರು ಬಹುಮಟ್ಟಿಗೆ ಶಾಕಾಹಾರಿಗಳು. ಗೋಧಿ, ಜವೆಗೋಧಿ, ಅಕ್ಕಿ, ಹಾಲು, ಹಣ್ಣು ಹಂಪಲು ಇವರ ಆಹಾರ ಪದಾರ್ಥಗಳು. ಪಾರಿವಾಳ, ಆಮೆ ಮೀನುಗಳನ್ನು ಕುರಿ ಕೋಳಿಗಳ ಮಾಂಸವನ್ನು ಸೇವಿಸುತ್ತಿದ್ದರು. ಎತ್ತು, ಎಮ್ಮೆ, ಹಸು, ಆಡು, ಕತ್ತೆ, ನಾಯಿ, ನವಿಲು ಬೆಕ್ಕುಗಳು, ಸಾಕುಪ್ರಾಣಿಗಳು; ಸಿಂಹ, ಹುಲಿ, ಆನೆ, ಕಾಡುಕೋಣ, ಘೇಂಡಾಮೃಗ, ಕರಡಿ, ಮುಂಗ, ಮೊಲಗಳು ಇವರಿಗೆ ಪರಿಚಿತವಾದ ಇತರ ಪ್ರಾಣಿಗಳು. ಈ ಜನ ವ್ಯವಹಾರಕುಶಲರು, ರಸಿಕರು ಆಗಿದ್ದರು. ಹತ್ತಿಯ ಉಣ್ಣೆಯ ಬಟ್ಟೆಗಳನ್ನು ಸ್ತ್ರೀಪುರುಷರು ಧರಿಸುತ್ತಿದ್ದರು. ಬಟ್ಟೆಗಳಿಗೆ ಕಸೂತಿ ಹಾಕುತ್ತಿದ್ದರು. ಪುರುಷರು ಮೀಸೆಯನ್ನು ಮಾತ್ರ ತೆಗೆಯುವ ಅಥವಾ ಗಡ್ಡವನ್ನು ಮಾತ್ರ ಬೆಳಸಿ ತಲೆಯನ್ನು ಬೋಳಿಸುವ ಪದ್ಧತಿಯನ್ನು ಅನುಸರಿಸಿದರೆ, ಸ್ತ್ರೀಯರ ಕೇಶವಿಧಾನಗಳಲ್ಲಿ ವೈವಿಧ್ಯಗಳನ್ನು ಕಾಣಬಹುದಾಗಿತ್ತು. ಚಿನ್ನ, ಬೆಳ್ಳಿ, ತಾಮ್ರ ಹಾಗೂ ಕಂಚಿನ ಕಡಗ, ಬಳೆ, ಓಲೆ, ಉಂಗುರ ಹಾರಗಳು ಸ್ತ್ರೀಯರ ಒಡವೆಗಳು. ಕಂಚಿನ ಕನ್ನಡಿ, ದಂತದ ಹೆಣಿಗೆ, ಕಣ್ಣಿಗೆ ಕಾಡಿಗೆ, ಮುಖಕ್ಕೆ ಬಣ್ಣ, ತುಟಿಗೆ ಕೆಂಪು ಮುಂತಾದ

ಸೌಂದರ್ಯ ಸಾಧನಗಳನ್ನು ಉಪಯೋಗಿಸುತ್ತಿದ್ದರು. ಲಭ್ಯವಾಗಿರುವ ಆಧಾರದ ಮೇಲೆ ಇವರಿಗೆ ಸಂಗೀತ ನೃತ್ಯಗಳಲ್ಲಿ ಆಸಕ್ತಿ ಅಭಿರುಚಿಗಳಿದ್ದುವೆಂದು ತಿಳಿದಿದೆ. ತಂತೀ ವಾದ್ಯ, ಕರತಾಳ, ಮೃದಂಗ ತಮಟೆಗಳ ಚಿತ್ರಗಳನ್ನು ಇಲ್ಲಿ ದೊರೆತ ಮುದ್ರಿಕೆಗಳ ಮೇಲೆ ಕಾಣಬಹುದು.

ವ್ಯಾಪಾರದಲ್ಲಿ ಮುಂದುವರಿದಿದ್ದ ಈ ಜನ ಭಾರತದ ಇತರ ಪ್ರದೇಶಗಳೊಂದಿಗೂ, ಪರದೇಶಗಳೊಂದಿಗೂ ಸಂಪರ್ಕ ಹೊಂದಿದ್ದರೆಂದು ತಿಳಿದುಬರುತ್ತದೆ. ರಾಜಸ್ಥಾನ ದಿಂದ ಸಾಬೂನುಗಲ್ಲು, ತಾಮ್ರ ಸೀಸಗಳು ಮತ್ತು ಸ್ಲೇಟುಗಳು ಕಾಥೇವಾಡದಿಂದ, ಹೊಳೆಯುವ ಬೆಣಚುಕಲ್ಲು, ಕಡುಗೆಂಪಿನ ಶಿಲೆ, ಗೋಮೇದ, ಪಾರದರ್ಶಕ ಹರಳು ಗಳು, ಆಫ್ಘನಿಸ್ಥಾನ ಬೆಲೂಚಿಸ್ಥಾನ ಮತ್ತು ಪಶ್ಚಿಮದ ತುದಿಗಳಿಂದ, ಕರ್ಣಾಟಕ ದಿಂದ ತಾಮ್ರ, ಬೆಳ್ಳಿ, ಚಿನ್ನ ಈ ಲೋಹಗಳು, ಪರ್ಷಿಯ ಕೊಲ್ಲಿಯ ಹಾಮರ್ಜ್ ಮತ್ತು ಇತರ ದ್ವೀಪಗಳಿಂದ ಕಬ್ಬಿಣದ ಅದುರು ಮತ್ತು ಜೇಡಿಮಣ್ಣು, ಖೊರಾ ಸಾನ್‌ನಿಂದ ಪಚ್ಚೆಮಣಿಗಳು, ಬಡಕ್‌ಷಾನ್‌ನಿಂದ ಆಕಾಶನೀಲವರ್ಣದ ಶಿಲೆಗಳು ಇವರು ಆಮದು ಮಾಡಿಕೊಳ್ಳುತ್ತಿದ್ದ ವಸ್ತುಗಳು. ಇದರಿಂದ ಈ ಸಂಸ್ಕೃತಿಯ ಜನ ಭಾರತದ ಸಮಕಾಲೀನ ನಾಗರಿಕತೆಗಳೊಡನೆ ಮತ್ತು ಇತರ ದೇಶಗಳೊಡನೆ ಸಂಬಂಧ ಹೊಂದಿದ್ದರೆಂಬುದು ಖಚಿತವಾಗುತ್ತದೆ. ಭಾರತದ ಹೊರಗೆ ಪಶ್ಚಿಮದ ನಾಡು, ಮಧ್ಯಏಷಿಯ, ಸುಮೇರಿಯ, ಈಜಿಪ್ಟ್, ಕ್ರೀಟ್ ಮೊದಲಾದ ದೇಶಗಳೊಂದಿಗೆ ವ್ಯಾಪಾರ ನಡೆಯುತ್ತಿತ್ತು.[2] ಸುಮೇರಿಯದ ಜನರ ಸಂಬಂಧ ನಿಕಟವಾಗಿತ್ತು. ಇಲ್ಲಿಯ ಲಿಪಿಯ ಲೇಖನವುಳ್ಳ ಮುದ್ರಿಕೆ ಸುಮೇರಿಯನ್ ಪ್ರದೇಶದಲ್ಲಿ ದೊರೆತಿದೆ. ಗುಜರಾತದ ಲೋಥಲ್‌ನಲ್ಲಿ ಒಂದು ಹಡಗುಕಟ್ಟೆ ಇದ್ದಿತೆಂದು ಈಗ ತಿಳಿದಿದೆ. ಇದು ಈ ಜನರಿಗೆ ಸಮುದ್ರಯಾನ ಪರಿಚಿತವಾಗಿತ್ತೆಂಬುದನ್ನು ಸೂಚಿಸುತ್ತದೆ.

ವಿಶಾಲವ್ಯಾಪ್ತಿಯ ಈ ಸಂಸ್ಕೃತಿಯಲ್ಲಿ ಯಾವ ಶಾಸನಗಳೂ ಬರೆವಣಿಗೆಗಳೂ ಕಂಡುಬಂದಿಲ್ಲ. ಲಭಿಸಿರುವ ಲಿಪಿ ಬಳಪದ ಕಲ್ಲಿನ ಮುದ್ರಿಕೆಗಳಿಗೆ ಮಾತ್ರ ಸೀಮಿತ ವಾಗಿದೆ. ಈ ಲಿಪಿಯನ್ನು ಕುರಿತು ಹಲವಾರು ಊಹೆಗಳನ್ನು ಮಾಡಲಾಗಿದೆ. ಇದು ಸುಮೇರಿಯನ್, ಹಿಟ್ಟೈಟ್—ಇತ್ಯಾದಿ ಲಿಪಿಗಳಿಂದ ಹುಟ್ಟಿದ ಲಿಪಿ ಎಂದು ಕೆಲವರೂ ದ್ರಾವಿಡಲಿಪಿ ಎಂದು ಇನ್ನು ಕೆಲವರೂ ಪಾಲಿನೀಷಿಯ ಅಥವಾ ಪ್ರಾಚೀನ ಚೀನಾಲಿಪಿ ಗಳಿಗೆ ಸಂಬಂಧಿಸಿದುದೆಂದು ಮತ್ತಿತರರೂ ಬೇರೆಬೇರೆ ವಾದಗಳನ್ನು ಮುಂದೂಡಿದ್ದಾರೆ. ಅದರಂತೆಯೇ ಈ ಲಿಪಿಯಲ್ಲಿ ಉಪಯೋಗಿಸಲಾದ ಭಾಷೆಯು ಆರ್ಯ ಸಂಸ್ಕೃತ, ತಾಂತ್ರಿಕ ಸಂಸ್ಕೃತ, ವೈದಿಕ ಸಂಸ್ಕೃತ, ದ್ರಾವಿಡ, ಪ್ರೋಟೋ-ಹಿಟ್ಟೈಟ್ ಆಗಿರಬಹುದೆಂಬ ಭಿನ್ನ ಹೇಳಿಕೆಗಳಿವೆ. ಇಂಡೋ-ಯೂರೋಪಿಯನ್ ಗುಂಪಿಗೆ ಸೇರಿದ ವೈದಿಕ ಭಾಷೆ, ಅದರಲ್ಲೂ ಋಗ್ವೇದದಲ್ಲಿನ ಭಾಷಾಸ್ವರೂಪಗಳನ್ನು ಎಸ್. ಆರ್. ರಾವ್ ಅವರು ಇದರಲ್ಲಿ ಕಂಡಿ ದ್ದಾರೆ.[3] ಋಗ್ವೇದಸಂಸ್ಕೃತಕ್ಕಿಂತ ಪ್ರಾಚೀನ ರೂಪವುಳ್ಳ ಭಾಷೆ ಇದು ಎನ್ನುವ ಈ ವಿದ್ವಾಂಸರು ಈ ಲಿಪಿಗಳಲ್ಲಿ ವ್ರಿಷ, ಶದ್, ಶಕ, ದೃಹ, ಪೈ ಮುಂತಾದ ಬಿರುದುಗಳನ್ನೂ

ಜನಾಂಗಗಳ ಹೆಸರುಗಳನ್ನೂ ಓದಿದ್ದಾರೆ. ಈ ಮುದ್ರಿಕೆಗಳನ್ನು ವರ್ತಕರು ತಾವು ಹೊರ ಕಳು ಹುತ್ತಿದ್ದ ವಸ್ತುಗಳ ಮೇಲೆ ಒತ್ತಲು ಮುದ್ರೆಗಳಾಗಿ ಉಪಯೋಗಿಸುತ್ತಿದ್ದರೆಂಬು ದೊಂದು ಊಹೆಯಿದೆ. ಇವು ತಾಯತಿ (Amulet)ಗಳಂತೆ ಉಪಯೋಗಿಸಲ್ಪಡು ತ್ತಿದ್ದುವೆಂದೂ ಹೇಳಿದೆ. ಆದರೆ ಇವೆಲ್ಲ ಇನ್ನೂ ಊಹೆಗಳೇ.

ಇಷ್ಟು ಮುಂದುವರಿದಿದ್ದ ನಾಗರಿಕತೆಯನ್ನು ಹೊಂದಿದ್ದ ಈ ಜನರ ಧರ್ಮ ಯಾವುದು, ಧಾರ್ಮಿಕ ಭಾವನೆಯೆಂತಹುದು ?—ಈ ಕುರಿತು ಖಚಿತವಾಗಿ ಏನನ್ನೂ ಹೇಳಲಾಗದು. ಇಲ್ಲಿನ ಭೂಶೋಧನೆಯಲ್ಲಿ ಧರ್ಮಕ್ಕೆ ಮುಖ್ಯ ಆಧಾರವಾದ ದೇವಾ ಲಯಗಳಾಗಲಿ, ದೇವರ ವಿಗ್ರಹಗಳಾಗಲಿ ದೊರೆತಿಲ್ಲ. ಲೋಹದ, ಮಣ್ಣಿನ, ಕಲ್ಲಿನ, ಚಿಕ್ಕದೊಡ್ಡ ವಿಗ್ರಹಗಳನ್ನೂ ಮುದ್ರಿಕೆಗಳ ಮೇಲಿನ ಕೆಲವೊಂದು ಆಕೃತಿಗಳನ್ನೂ ಆಧರಿಸಿ ಹಲವಾರು ಊಹೆಗಳನ್ನು ಮಾಡಲಾಗಿದೆ. ಮಾತೃದೇವತೆಯನ್ನು ಇವರು ಪೂಜಿಸುತ್ತಿದ್ದವರೆನ್ನಲು ನೆರವಾಗುವ ಹಲವು ದೇವತಾಪ್ರತಿಮೆಗಳು ಸಿಕ್ಕಿವೆ. ದೊರೆತ ಗರ್ಭಿಣಿ ಸ್ತ್ರೀಯರ ಹಾಗೂ ಮಕ್ಕಳೊಡನಿರುವ ಸ್ತ್ರೀಯರ ವಿಗ್ರಹಗಳಿಂದ ಫಲಶಕ್ತಿಯ ಆರಾಧನಾವಿಧಿ (Fertility cult) ಪ್ರಚಲಿತವಿತ್ತೆಂಬುದನ್ನು ಸೂಚಿಸುತ್ತದೆ ಎನ್ನ ಲಾಗಿದೆ. ಕೊಂಬಿನ ಶಿರೋಭೂಷಣದಿಂದ ಒಪ್ಪುವ ಯೋಗಾಸನದಲ್ಲಿ ಕುಳಿತ ಮೂರು ಮುಖದ ಒಬ್ಬ ದೇವನ ಆಕೃತಿಯನ್ನು ಒಂದು ಮುದ್ರಿಕೆಯ ಮೇಲೆ ಕೊರೆದಿದೆ. ಈತನ ಎರಡೂ ಕಡೆಗಳಲ್ಲಿ ಆನೆ ಹುಲಿ ಕೋಣ ಜಿಂಕೆ ಖಡ್ಗಮೃಗಗಳು ಇವೆ. ಈತನನ್ನು ಮಹಾಯೋಗಿ, ಪಶುಪತಿ ಎಂದು ಕರೆಯಲಾದ ಶಿವನ ಮೂಲರೂಪನೆಂದು ವರ್ಣಿಸ ಲಾಗಿದೆ. ಲಿಂಗಾಕಾರದ ಹಲವು ಕಲ್ಲಿನ ವಸ್ತುಗಳು ದೊರೆತಿವೆ. ಅರಳಿಮರದ ಚಿತ್ರ ಗಳು ದೊರೆತಿರುವುದರಿಂದ ಆ ಮರವನ್ನು ಪೂಜಿಸುತ್ತಿದ್ದರೆಂದು ಊಹಿಸಿದೆ. ಇಲ್ಲಿ ದೊರೆತಿರುವ ಮುದ್ರಿಕೆಗಳಲ್ಲಿ ವಿಚಿತ್ರತಲೆಯ ಅರ್ಧಮನುಷ್ಯ, ಅರ್ಧಮೃಗವಾಗಿ ತೋರುವ ಪ್ರಾಣಿಗಳು ಹುಲಿ ಆನೆ ಕೋಣ ಏರುಹಿಣಿಲಿನ ಬಸವ, ಒಂದು ಕೋಡಿನ ಕುದುರೆಯಂತಹ ಯೂನಿಕಾರ್ನ್ ಮುಂತಾದುವು ಕಾಣಿಸಿವೆ. ಬೆಂಕಿ ನೀರು ಸಹ ಪೂಜಾರ್ಹವಾಗಿದ್ದವು. ಸತ್ತವರ ಶವಗಳನ್ನು ಸಾಮಾನ್ಯವಾಗಿ ಹುಗಿಯುತ್ತಿದ್ದ ರಾದರೂ ಸುಡುವ ಪದ್ಧತಿಯೂ ಇದ್ದಿರಬೇಕು. ಮುಂದಿನ ಜನ್ಮದಲ್ಲಿ ಉಪಯೋಗ ಕ್ಕಾಗಿ ಎಂದು ಪಾತ್ರೆ ಮುಂತಾದ ವಸ್ತುಗಳನ್ನೂ ಆಹಾರಪದಾರ್ಥಗಳನ್ನೂ ಅವರ ಸಮಾಧಿಯಲ್ಲಿ ಇಡುತ್ತಿದ್ದುದು ಕಂಡುಬಂದಿದೆ.

ದೊರೆತ ಅವಶೇಷಗಳಿಂದ ಇವರ ಧರ್ಮಕ್ಕೆ ಸಂಬಂಧಿಸಿದಂತೆ ಕೆಲವು ಊಹೆಗಳನ್ನು ಮಾಡಲಾಗಿವೆ. ಈಜಿಪ್ಟ್ ಸುಮೇರಿಯ ಮುಂತಾದ ಕಡೆಗಳಲ್ಲಿದ್ದಂತೆ ಇಲ್ಲಿ ಪುರೋಹಿತ ರಾಜ (Priest-king) ಇರಲಿಲ್ಲ. ಯಾವುದೇ ಮುಖ್ಯ ದೇವತೆ ಇರಲಿಲ್ಲ. ಅವೈದಿಕ ವೆನಿಸಿದ ಶೈವಮತ ಪ್ರಧಾನವಾಗಿದ್ದು ಅಶ್ವತ್ಥ, ಗರುಡ, ಬೃಂದಾವನ, ಮಾತೃದೇವತೆ ಇವುಗಳ ಪೂಜೆಯೂ ವೈಷ್ಣವ ಹಾಗೂ ಶಾಕ್ತ ಮತಗಳೂ ಪ್ರಚಾರದಲ್ಲಿದ್ದವೆಂದು ಹೇಳ ಲಾಗಿದೆ. ಮೊಹೆಂಜೊದಾರೊದಲ್ಲಿ ಕೆಲಸಗಾರರ ಮನೆಗಳ ಸಮೀಪದಲ್ಲಿ ಹತ್ತು ಅಡಿ

ವಿನ್ಯಾಸದ ಇಟ್ಟಿಗೆಗಳಿಂದ ಮಾಡಿದ ಚಕ್ರಾಕಾರದ ವೇದಿಕೆಗಳಿದ್ದು, ಅವುಗಳ ಮಧ್ಯೆ ಗುಳಿಯಿರುವುದನ್ನಾಧರಿಸಿ ಅದು ಧಾನ್ಯವನ್ನು ಕುಟ್ಟುವ ಸಾಧನವೆಂದು ಹೇಳಿವೆ. ಆದರೆ ಆ ಗುಳಿಗಳಲ್ಲಿ ಧಾನ್ಯಗಳೇ ಅಲ್ಲದೆ ಪ್ರಾಣಿಗಳ ಮೂಳೆಗಳೂ ಲಭಿಸಿರುವುದನ್ನು ಲಕ್ಷಿಸಿ, ಇವು ಈ ಗುಳಿಗಳಲ್ಲಿ ಯೂಪಸ್ತಂಭಗಳನ್ನು ನೆಟ್ಟು ಯಜ್ಞಗಳನ್ನು ಮಾಡಲು ನಿರ್ಮಿಸಲಾದ ರಥಚಕ್ರಚಿತಿಗಳು ಎಂದು ವಾದಿಸಲಾಗಿದೆ. ಆ ವೇದಿಕೆ ಧಾನ್ಯಕುಟ್ಟುವ ಸಾಧನವೆಂಬ ಊಹೆ ಹೆಚ್ಚು ಸಮರ್ಥನೀಯವಾಗಿದೆ. ನಗ್ನವಿಗ್ರಹಗಳು ದೊರಕಿದ್ದು ಇವು ಜೈನಮತ ಅಂದು ಪ್ರಚಾರದಲ್ಲಿತ್ತೆಂಬ ಊಹೆಗೂ ಎಡೆಮಾಡಿವೆ. ಆದರೆ ಇವುಗಳನ್ನು ಕುರಿತು ಏನನ್ನೂ ಹೇಳಲಾಗದು.

ಹರಪ್ಪ ಸಂಸ್ಕೃತಿಯ ಸಮಾಜದಲ್ಲೂ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಚಾತುರ್ವರ್ಣ್ಯವ್ಯವಸ್ಥೆ ಇದ್ದಿತು. ಮಣ್ಣಿನ ಕುಡಿಕೆಗಳನ್ನು ಉದ್ದೇಶಪೂರ್ವಕವಾಗಿ ಒಡೆದುಹಾಕಿರುವುದರಿಂದ ಅಸ್ಪೃಶ್ಯತೆ ಸಹ ಅಸ್ತಿತ್ವದಲ್ಲಿತ್ತು ಎಂದಿದ್ದಾರೆ ಶ್ರೀಕಂಠ ಶಾಸ್ತ್ರಿಯವರು. ಆದರೆ ಉತ್ತರಭಾರತದ ಅನೇಕ ಕಡೆ ಈಗಲೂ ಒಂದು ಬಾರಿ ಉಪಯೋಗಿಸಿದ ಕುಡಿಕೆಗಳನ್ನು ಎಸೆದುಬಿಡುವ ಪದ್ಧತಿ ಇದೆ. ಆದ್ದರಿಂದ ಇದು ಅಸ್ಪೃಶ್ಯರು ಅಂದಿನ ಸಮಾಜದಲ್ಲಿದ್ದರೆಂದು ಊಹಿಸಲು ಸಮರ್ಥವಾದ ಆಧಾರವಲ್ಲವೆನ್ನಬೇಕು.

ಈ ನಾಗರಿಕರು ಯಾವ ಜನಾಂಗದವರು? ಈ ವಿಷಯದಲ್ಲಿಯೂ ಭಿನ್ನಾಭಿಪ್ರಾಯಗಳಿವೆ. ಇವರು ಸುಮೇರಿಯನ್ನರಿಗೆ ಸಂಬಂಧಿಸಿದವರೆಂಬ ಊಹೆಯನ್ನು ಈಗ ಕೈಬಿಡಲಾಗಿದೆ. ಇವರು ಆರ್ಯರೆಂಬ ಅಭಿಪ್ರಾಯವೂ ಇದೆ. ಆದರೆ ಈ ನಾಗರಿಕತೆಯಲ್ಲಿ ಮೂರ್ತಿಪೂಜೆಗೆ ಕೊಡಲಾದ ಪ್ರಾಮುಖ್ಯ ಆರ್ಯರಲ್ಲಿರಲಿಲ್ಲ. ಆರ್ಯರಲ್ಲಿ ಗೋಮಾತೆಯ ಹಿರಿಮೆ ಕಂಡುಬಂದರೆ, ಸಿಂಧುಜನರಲ್ಲಿ ವೃಷಭವು ಹೆಚ್ಚಳ ಪಡೆದಿದ್ದಿತು. ಆರ್ಯರು ನಗರ ಮಹಾನಗರಗಳನ್ನು ನಿರ್ಮಿಸಿದ್ದರು ಎನ್ನುವುದಕ್ಕೆ ಆಧಾರಗಳಿಲ್ಲ. ಸಿಂಧುಜನರ ಈ ವಿಶಿಷ್ಟ ಪದ್ಧತಿಗಳು—ಶಿವನ ಪೂಜೆ, ದೇವೀ ಆರಾಧನೆ, ನಗರನಿರ್ಮಾಣ—ಇತ್ಯಾದಿಗಳು ದ್ರಾವಿಡ ಜನವರ್ಗದವರಲ್ಲಿ ಕಂಡುಬಂದಿರುವುದರಿಂದ ಇವರು ದ್ರಾವಿಡರಾಗಿರಬಹುದೆಂಬ ಊಹೆಗೆ ಕೆಲವರು ಪುಷ್ಟಿಯನ್ನಿತ್ತಿದ್ದಾರೆ.

ಸಿಂಧು ಸಂಸ್ಕೃತಿಯ ಅಳಿವು ಹೇಗಾಯಿತು? ಮಿತಿಯಿಲ್ಲದೆ ಕಾಡುಗಳನ್ನು ಸುಟ್ಟು ಹಾಕಿದುದರಿಂದ ಅಲ್ಲಿನ ವಾಯುಗುಣ ಬದಲಾಗಿ, ವ್ಯವಸಾಯ ಇಳಿಮುಖವಾದುದು ಕಾರಣಗಳಲ್ಲೊಂದಾಗಿರಬಹುದು. ಪಶ್ಚಿಮದಿಂದ ವಾಯುವ್ಯ ಕಣಿವೆಯ ಮಾರ್ಗವಾಗಿ ಆರ್ಯಜನಾಂಗದ ಸಾಹಸಿಗಳು ಮಾಡಿದ ದಾಳಿ ಹರಪ್ಪ ನಗರಗಳ ನಾಶಕ್ಕೆ ಕಾರಣವೆಂಬ ಇನ್ನೊಂದು ವಾದವನ್ನು ಕಲ್ಪನೆ ಎಂದು ತಳ್ಳಿಹಾಕಲಾಗಿದೆ. ಬಹು ಸಂಖ್ಯೆಯ ಈ ನಗರಗಳು ಸಿಂಧುನದಿಯ ತೀರದಲ್ಲಿ ಕಟ್ಟಲ್ಪಟ್ಟದ್ದು, ಮೇಲಿಂದ ಮೇಲೆ ಉಂಟಾದ ಮಹಾಪೂರಗಳಿಗೆ ತುತ್ತಾಗಿ ಅಳಿದುಹೋದುವು—ಎಂಬ ಅಂಶ ಇತ್ತೀಚಿನ ಶೋಧನೆಗಳ ವಿಮರ್ಶೆಯಿಂದ ಮಾಡಲಾದ ಬೇರೊಂದು ಊಹೆ. ಇದು ಗಮನಾರ್ಹವಾದ್ದು. ಯಾವೊಂದು ನಾಗರಿಕತೆಯಾಗಲಿ, ರಾಜ್ಯವಾಗಲಿ ಸೃಷ್ಟ್ಯಾದಿ ಅವಸ್ಥೆಗಳನ್ನು ಏರಿ

ಚಿರಕಾಲ ಬಾಳಲಿಲ್ಲವೆಂಬುದಂತೂ ಐತಿಹಾಸಿಕ ಸತ್ಯ, ನಿಸರ್ಗದ ಕ್ರಮ.

ಇಂತಹ ಭವ್ಯವಾದ ನಾಗರಿಕತೆ ಕ್ರಿ. ಪೂ. ೨೭೦೦ ವರ್ಷಗಳ ಹಿಂದೆ ಉನ್ನತಿ ಹೊಂದಿತು. ಸಾವಿರ ವರ್ಷಗಳ ಕಾಲ ಉತ್ಕರ್ಷಾವಸ್ಥೆಯಲ್ಲಿದ್ದು ಸುಮಾರು ಕ್ರಿ. ಪೂ. ೧೫೦೦ ವರ್ಷಗಳ ಹೊತ್ತಿಗೆ ಇಳಿಮುಖವಾಯಿತು. ಈ ವೇಳೆಗೆ ಭಾರತದಲ್ಲಿ ಆರ್ಯರ ನಾಗರಿಕತೆ ತಲೆದೋರಿತು.

## ಆರ್ಯ ಸಂಸ್ಕೃತಿ

ಪುರಾಣಗಳಲ್ಲಿಯೂ ಬ್ರಾಹ್ಮಣಗಳಲ್ಲಿಯೂ ಭಾರತದ ಮೊದಲ ಅರಸನ ಆರಂಭದ ಬಗೆಗೆ ಸಾಂಪ್ರದಾಯಿಕ ಕತೆಗಳನ್ನು ಹೇಳಿದೆ. ವಿಶ್ವಕರ್ತನೆನಿಸಿದ ಬ್ರಹ್ಮನ ಮಗ ಮನುಸ್ವಯಂಭು. ಈತನಿಗೆ ಎರಡು ಗಂಡು, ಮೂರು ಹೆಣ್ಣುಮಕ್ಕಳು. ಇವರಿಂದ ಮುಂದೆ ಹಲವಾರು ಮನುಗಳು ಆಗಿಹೋದರು. ಅವರಲ್ಲಿ ಪೃಥು ಒಬ್ಬ. ಈತನಿಂದಲೇ ಭೂಮಿಗೆ ಪೃಥ್ವಿ ಎಂಬ ಹೆಸರಾಯಿತು. ಈತ ಕಾಡುಗಳನ್ನು ಕಡಿಸಿ, ಭೂಮಿಯನ್ನು ಉತ್ತು, ಗೋವುಗಳನ್ನು ರಕ್ಷಿಸಿ, ವ್ಯವಸಾಯ ವ್ಯವಹಾರಗಳಿಗೆ ಬುನಾದಿ ಹಾಕಿದನು. ಈ ವಂಶದಲ್ಲಿ ಹತ್ತನೆಯ ಮನು ರಾಜ್ಯವಾಳುತ್ತಿದ್ದಾಗ ಮಹಾಪೂರವೊಂದು ಸಂಭವಿಸಿತು. ಇವನೊಬ್ಬನನ್ನುಳಿದು ಭೂಮಿಯೆಲ್ಲ ಮುಳುಗಿದಾಗ ದೇವನಾದ ವಿಷ್ಣುವಿನ ಆದೇಶದಂತೆ ಮನು ದೋಣಿಯೊಂದನ್ನು ಕಟ್ಟಿ ತನ್ನ ಕುಟುಂಬದವರನ್ನೂ ಸಪ್ತರ್ಷಿಗಳನ್ನೂ ಅದರಲ್ಲಿ ಕೂರಿಸಿದಾಗ ವಿಷ್ಣು ಮತ್ಸ್ಯಾವತಾರ ತಾಳಿ ದೋಣಿಯನ್ನು ಗಿರಿಶೃಂಗವೊಂದರ ಮೇಲೆ ನಿಲ್ಲಿಸಿದನು. ಈ ಮನುವಿನಿಂದಲೇ ಸೂರ್ಯ ಹಾಗೂ ಚಂದ್ರ ವಂಶಗಳು ಆರಂಭವಾದುವು. ಈ ಮನುವಿನ ವಂಶಕ್ಕೆ ಸೇರಿದವರೇ ಮಹಾಭಾರತ ರಾಮಾಯಣಗಳ ನಾಯಕರು. ಇದು ಪುರಾಣೋಕ್ತ ಕತೆ; ಹಲವಾರು ಐತಿಹಾಸಿಕ ಘಟನೆಗಳನ್ನು ಕತೆಗಳ ನಡುವೆ ಪೋಣಿಸಿ ನೆಯ್ದ ಕತೆ.

೧೯–೨೦ನೆಯ ಶತಮಾನಗಳಲ್ಲಿ ಭಾಷಾಪಂಡಿತರೂ ಪುರಾತತ್ತ್ವಶೋಧಕರೂ ನಡಸಿದ ಸಂಶೋಧನೆಗಳ ಫಲವಾಗಿ ಭಾರತೀಯ ಸಂಸ್ಕೃತಿಗೆ ಆಧಾರವೆನಿಸಿದ ವೈದಿಕ ಸಂಸ್ಕೃತಿ ಹಾಗೂ ಹರಪ್ಪ ಸಂಸ್ಕೃತಿಗಳ ಅನೇಕ ವಿವರಗಳು ಗೋಚರವಾದುವು. ಸಂಸ್ಕೃತ ಭಾಷೆಗೂ ಪುರಾತನ ಗ್ರೀಕ್ ಲ್ಯಾಟಿನ್ ಭಾಷೆಗಳಿಗೂ ಅನೇಕ ಸಾಮ್ಯಗಳಿರುವುದರಿಂದ ಇವುಗಳೆಲ್ಲ ಮೂಲತಃ ಇಂಡೋ-ಯೂರೋಪಿಯನ್ ಗುಂಪಿಗೆ ಸೇರಿದ ಭಾಷೆಯೊಂದರ ಕವಲುಗಳೆಂಬ ಊಹೆ ಕಾರಣವಾಗಿ ಆರ್ಯರೆಂಬ ಜನಾಂಗದವರು ಕ್ಯಾಸ್ಪಿಯನ್ ಸಮುದ್ರ ಮತ್ತು ದಕ್ಷಿಣ ರಷ್ಯ ಪ್ರದೇಶಗಳಲ್ಲಿದ್ದು, ಅಲ್ಲಿಯ ಹುಲ್ಲುಗಾವಲು ಒಣಗಿ ಹೋದುದರಿಂದಲೋ ಜನಸಂಖ್ಯೆಯ ಒತ್ತಡದಿಂದಲೋ ಕ್ರಮೇಣ ವಲಸೆಹೋಗಿ ಗ್ರೀಸ್, ಏಷಿಯಾಮೈನರ್, ಇರಾನ್ ಭಾರತಗಳಿಗೆ ಗುಂಪುಗಳಾಗಿ ಚದರಿಹೋದರು ಎಂಬ ವಾದಕ್ಕೆ ಎಡೆಯಾಗಿದೆ. ಇದು ಸು. ಕ್ರಿ. ಪೂ. ೨೦೦೦ ವರ್ಷಗಳಷ್ಟು ಹಿಂದೆ.

ಹರಪ್ಪ ಸಂಸ್ಕೃತಿಯ ವಿವರಗಳು ಗೋಚರವಾದ ನಂತರ ಪುರಾಣೋಕ್ತ ಮನುವಿನ

ಕತೆಯ ಸತ್ಯತೆಯನ್ನು ಕುರಿತು ಸಂದೇಹಗಳುದ್ಭವಿಸಿವೆ. ಕ್ರಿ. ಪೂ. ೩೦೦೦ದಿಂದ ೧೫೦೦ರ ವರೆಗಿನ ಹರಪ್ಪ ಸಂಸ್ಕೃತಿಯ ಕಾಲದಲ್ಲಿಯೇ ಮನುಕುಲದ ಅರಸರೂ ಆಳಿದರೆನ್ನುವುದು ಸಂಭವನೀಯವಲ್ಲ. ಪುರಾಣಗಳು ಅಂತಿಮರೂಪ ಪಡೆದುದು ಅನೇಕ ಶತಮಾನಗಳ ನಂತರ ಸು. ಕ್ರಿ. ಪೂ. ೫೦೦ರಿಂದ ಕ್ರಿ.ಶ. ೫೦೦ರೊಳಗಣ ಕಾಲದಲ್ಲಿ. ಪುರಾಣೋಕ್ತ ಕತೆಗಳನ್ನು ಕಾಲ್ಪನಿಕವೆಂದು ತಳ್ಳಿಹಾಕಲಾಗದಾದರೂ ಅವುಗಳನ್ನು ಒಪ್ಪುವಲ್ಲಿ ಅನೇಕ ತೊಡಕುಗಳಿವೆ ಎಂಬುದನ್ನು ಮರೆಯಲಾಗದು. ಪೃಥು ಕಾಡುಗಳನ್ನು ಕಡಿಸಿದನೆಂಬುದು ಬಹುಶಃ ಆರ್ಯರು ಗಂಗಾಯಮುನಾ ಬಯಲಿನಲ್ಲಿ ನೆಲಸಿದಾಗ ವ್ಯವಸಾಯಕ್ಕೆ ಆರಂಭಿಸಿದ ಕಾರ್ಯಾಚರಣೆಗಳನ್ನು ಸೂಚಿಸುತ್ತದೆ. ಬೆಬಿಲೋನಿಯದಲ್ಲಿಯೂ ಮಹಾಪೂರದ ಒಂದು ಐತಿಹ್ಯವಿದೆ. ಬಹುಶಃ ಆರ್ಯರು ಇರಾನ್ ದೇಶದಲ್ಲಿದ್ದಾಗ ಅದನ್ನೇ ಕೇಳಿರಬಹುದು; ಅದೇ ಪುರಾಣಗಳಲ್ಲಿಯೂ ಪ್ರತಿಧ್ವನಿತವಾಗಿರಬಹುದು.

'ಆರ್ಯ' ಎಂಬ ಪದಕ್ಕೆ ಉಜ್ವಲ, ಸುಸಂಸ್ಕೃತ ಎಂಬ ಅರ್ಥವಿರುವುದನ್ನು ಆಶ್ರಯಿಸಿದರೆ, ಆರ್ಯರು ಎಂದರೆ ಉಜ್ವಲಸಂಸ್ಕೃತಿಯನ್ನುಳ್ಳವರು, ಸುಸಂಸ್ಕೃತರು ಎಂದಾಗುತ್ತದೆ. ಈ ಪದ ಸಾಂಸ್ಕೃತಿಕ ಮಟ್ಟವನ್ನು ಸೂಚಿಸುವ ಪದವೇ ಹೊರತು ಜನಾಂಗವಾಚಕ ಪದವಲ್ಲ ಎಂದು ಕೆಲವರು ಪಂಡಿತರು ವಾದಿಸಿದ್ದಾರೆ. ದಾಸ ಅಥವಾ ದಸ್ಯು ಎಂಬ ಪದ ಅಸಂಸ್ಕೃತ ಅಥವಾ ಅನಾರ್ಯರಿಗೆ ಅನ್ವಯಿಸುತ್ತದೆಂದೂ ಅವರು ಹೇಳುತ್ತಾರೆ. ಆರ್ಯರ ಮೂಲನಿವಾಸ ಭಾರತದಲ್ಲಿಯೇ ಕಾಶ್ಮೀರ ಮತ್ತು ಹಿಮಾಲಯ ಪ್ರದೇಶವೆಂದೂ ಮುಲ್ತಾನ್ ಸಮೀಪದ ದೀವಿಕಾ ನದೀಪ್ರದೇಶವೆಂದೂ ಬ್ರಹ್ಮರ್ಷಿದೇಶವೆಂದೂ ಗಂಗಾ ಯಮುನಾ ನದೀ ಬಯಲುಪ್ರದೇಶವೆಂದೂ ಬೇರೆ ಬೇರೆಯಾಗಿ ಸೂಚಿಸಲಾಗಿದೆ. ಆರ್ಯರು ಹೊರಗಿನಿಂದ ಬಂದವರೆಂಬ ವಾದವನ್ನು ಹೀಗೆ ಹೇಳುವವರು ತೀವ್ರವಾಗಿ ವಿರೋಧಿಸಿದ್ದಾರೆ. ಈ ವಿಷಯದಲ್ಲಿ ಇನ್ನೂ ಇತರ ವಾದಗಳಿವೆ; ನಿಶ್ಚಿತವಾದ ಒಮ್ಮತಾಭಿಪ್ರಾಯಕ್ಕೆ ಬರಲಾಗಿಲ್ಲ. ಹರಪ್ಪ ಸಂಸ್ಕೃತಿಯ ನಾಶಕ್ಕೆ ಆರ್ಯರು ಕಾರಣ ಎಂಬುದು ಈಚೆಗೆ ಮೂಡಲಾಗಿರುವ ಊಹೆ. ಆರ್ಯರು ಹೊರಗಿನಿಂದ ಬಂದವರೆಂಬ ಈ ಮೊದಲೇ ಪ್ರಚಲಿತವಾಗಿದ್ದ ವಾದಕ್ಕೂ ಸಿಂಧು ಸಂಸ್ಕೃತಿಯ ನಾಶಕ್ಕೂ ಈ ಮೂಲಕ ಒಂದು ಸಂಬಂಧ ಕಲ್ಪಿಸಲಾಗಿದೆ, ಅಷ್ಟೆ.

ಆರ್ಯರನ್ನು ಕುರಿತು ನಮಗೆ ತಿಳಿದಿರುವುದೆಲ್ಲ ಅವರು ರಚಿಸಿದ ವೇದ ಮತ್ತು ತತ್ಸಂಬಂಧವಾದ ಇತರ ಸಾಹಿತ್ಯಗಳಿಂದ ಮಾತ್ರ. 'ವಿದ್' ಎಂದರೆ ತಿಳಿ, ವೇದ ಎಂದರೆ ಜ್ಞಾನ. ಹಿಂದುಗಳಿಗೆ ಪವಿತ್ರವಾದ ಈ ಗ್ರಂಥಗಳಲ್ಲಿ ಸನಾತನ ಸತ್ಯದ ಬೋಧೆ ಇದೆ. ಸಮಕಾಲೀನ ಸಾಮಾಜಿಕ ರಾಜಕೀಯ ಧಾರ್ಮಿಕ ವಿಷಯಗಳನ್ನೂ ಆಚಾರ ವಿಚಾರ ನಂಬಿಕೆಗಳನ್ನೂ ಪ್ರತಿಬಿಂಬಿಸುವ ಸಾಹಿತ್ಯ ಗ್ರಂಥಗಳೆಂದು ಆಧುನಿಕ ಪಂಡಿತರಿಂದ ಇವು ಮಾನ್ಯತೆ ಪಡೆದಿವೆ. ವೇದಗಳು ಋಗಾದಿಯಾಗಿ ನಾಲ್ಕು. ಇವು ಯಾವುದೇ ಒಬ್ಬ ವ್ಯಕ್ತಿಯಿಂದ ನಿಶ್ಚಿತವಾದ ಕಾಲದಲ್ಲಿ ರಚಿತವಾದವಲ್ಲ. ಕ್ರಿ.ಪೂ. ೨೦೦೦ದಿಂಧ ೧೫೦೦ದ ವರೆಗೆ ಋಗ್ವೇದದ ರಚನಾಕಾಲದ ಬಗ್ಗೆ ಭಿನ್ನಮತವಿದೆ. ಅದರ

ಭಾಷಾಸ್ವರೂಪವನ್ನು ಆಧರಿಸಿ ಅದು ಕ್ರಿ.ಪೂ. ೧೫೦೦ರಷ್ಟಾದರೂ ಪ್ರಾಚೀನವೆಂದು ಭಾಷಾಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ.

ಋಕ್ಕುಗಳಿಂದ ಎಂದರೆ ಶ್ಲೋಕ ಅಥವಾ ಪದ್ಯಗಳಿಂದ ಕೂಡಿದುದು ಋಗ್ವೇದ. ಇದರಲ್ಲಿ ೧೦೧೭ ಋಕ್‌ಗಳು ಹತ್ತು ಮಂಡಲಗಳಲ್ಲಿವೆ. ಹತ್ತನೆಯದರಲ್ಲಿ ಅಂದಿನ ಸಾಮಾಜಿಕ, ರಾಜಕೀಯ, ಆರ್ಥಿಕ ಮುಂತಾದ ಸ್ಥಿತಿಗತಿಗಳ ವಿವರಗಳಿವೆ. ಋಗ್ವೇದದಲ್ಲಿ ಉಕ್ತವಾಗಿರುವ ನದೀಸ್ತುತಿಗಳಿಂದ ಆ ವೇಳೆಗೆ ಅವರು ಪಂಜಾಬ್ ದೆಹಲಿ ಪ್ರದೇಶಗಳಲ್ಲಿ ನೆಲಸಿದ್ದು, ಇನ್ನೂ ಪೂರ್ವಕ್ಕೆ ವಲಸೆ ಹೋದಂತೆ ತೋರುವುದಿಲ್ಲ. ನಂತರ ವೇದಗಳಲ್ಲಿ ಎರಡು ಸಮುದ್ರಗಳು, ಹಿಮಾಲಯ ಮತ್ತು ವಿಂಧ್ಯ ಪರ್ವತಗಳ ವಿಸ್ತಾರವಾದ ಗಂಗಾ ಯಮುನಾ ಬಯಲುಪ್ರದೇಶದ ಉಲ್ಲೇಖಗಳಿವೆ. ಋಗ್ವೇದಕಾಲದಲ್ಲಿ ಈ ಪ್ರದೇಶ ದಟ್ಟವಾದ ಅರಣ್ಯಗಳಿಂದ ಕೂಡಿತ್ತು. ಇದಕ್ಕಾಗಿ ಮೊದಲಲ್ಲಿ ಕಲ್ಲು, ಕಂಚು ಮತ್ತು ತಾಮ್ರದ ಕೊಡಲಿಗಳನ್ನು ಉಪಯೋಗಿಸುತ್ತಿದ್ದರು. ಕ್ರಿ.ಪೂ. ೮೦೦ರ ನಂತರವಷ್ಟೇ ಕಬ್ಬಿಣಲೋಹ ಆರ್ಯರ ಸಂಸ್ಕೃತಿಯನ್ನು ಪ್ರವೇಶಿಸಿದುದು. ಇತ್ತೀಚೆಗೆ ಹಸ್ತಿನಪುರದಲ್ಲಿ ನಡೆದ ಉತ್ಖನನದಿಂದ ಅವರು ಕ್ರಿ.ಪೂ. ೭೦೦ರ ವೇಳೆಗೆ ಕಬ್ಬಿಣದ ಉಪಯೋಗವನ್ನರಿತಿದ್ದರೆಂದು ತಿಳಿದಿದೆ. ಇದರ ಪರಿಣಾಮವಾಗಿ ವ್ಯವಸಾಯದಲ್ಲಿ ಉತ್ತಮವಾದ ಅಭಿವೃದ್ಧಿ, ಸೌಕರ್ಯ ತಲೆದೋರಿತು. ಪರಿಣಾಮವಾಗಿ ಜನರಿಗೆ ಹೆಚ್ಚಿನ ವಿರಾಮ ದೊರಕಿ ಅವರು ಧಾರ್ಮಿಕ ಪ್ರವೃತ್ತಿಯನ್ನೂ ತಾತ್ತ್ವಿಕ ಮನೋಭಾವವನ್ನೂ ಬೆಳಸಿಕೊಳ್ಳಲು ಸಹಾಯವಾಯಿತು.

ಅನೇಕ ಬಣ ಅಥವಾ ಕುಲಗಳ ಉಲ್ಲೇಖ ಋಗ್ವೇದದಲ್ಲಿ ಕಂಡುಬರುತ್ತದೆ. ಭರತ, ಪುರು, ಯದು, ತುರ್ವಸು ಇತ್ಯಾದಿ. ಭರತಕುಲದ ಅರಸ ಸುದಾಸ. ರಾವಿ (ಪರುಷ್ಣಿ) ನದೀತೀರದಲ್ಲಿ ಈತನ ರಾಜ್ಯ. ಈತನ ಪುರೋಹಿತ ವಿಶ್ವಾಮಿತ್ರ. ಈತನ ಸ್ಥಾನದಲ್ಲಿ ವಶಿಷ್ಠನನ್ನು ನೇಮಿಸಬೇಕೆಂದು ದೊರೆ ಯೋಚಿಸಿದ. ಕುಪಿತನಾದ ವಿಶ್ವಾಮಿತ್ರ ಹತ್ತು ಅರಸರ ಒಕ್ಕೂಟವನ್ನು ಸಂಘಟಿಸಿ ಸುದಾಸನನ್ನು ಕದನದಲ್ಲಿ ಎದುರಿಸಿದನು. ಈ ಕದನ 'ದಾಶರಾಜ್ಞ' (ಹತ್ತು ರಾಜರ ಕಾಳಗ) ಎಂದು ಪ್ರಸಿದ್ಧಿಯಾಗಿದೆ. ಅಂತಿಮ ವಿಜಯ ಭರತಕುಲದ್ದಾಗಿತ್ತು. ಈ ಭರತಕುಲದಿಂದ ನಮ್ಮ ದೇಶಕ್ಕೆ ಭಾರತವೆಂದು ಹೆಸರು ಬಂದಿದೆ ಎಂದು ಹಲವರು ಪಂಡಿತರು ಸೂಚಿಸಿದ್ದಾರೆ.

ಕುಲಗಳಲ್ಲಿ ತಮ್ಮ ತಮ್ಮಲ್ಲಿಯೇ ಆಗುವ ಘರ್ಷಣೆಗಳಿಗಿಂತಲೂ ಭಿನ್ನವಾದವು, ಆರ್ಯರು ಸ್ಥಳೀಯ ಜನರೊಂದಿಗೆ ಹೂಡಿದ ಕದನಗಳು. ಈ ಸಾಧಾರಣಶತ್ರುವನ್ನು ದಸ್ಯುವೆಂದಿದೆ. ಹೀಗೆಯೇ ಪಣಿಗಳು ಆರ್ಯರ ದನಗಳನ್ನು ಕದಿಯುತ್ತಿದ್ದರು; ಕೋಟೆಗಳಿಂದ ಸುತ್ತುವರಿದ ನಗರಗಳಲ್ಲಿ ವಾಸಿಸುತ್ತಿದ್ದವರು ದಾಸರು. ದಾಸ ಎಂಬ ಪದ ಕಾಲಾನುಕ್ರಮದಲ್ಲಿ ಗುಲಾಮ ಎಂಬ ಅರ್ಥವನ್ನು ಹೊಂದಿತಾದರೂ ಋಗ್ವೇದ ಕಾಲದಲ್ಲಿ ಬಹುಶಃ ಯುದ್ಧದಲ್ಲಿ ಸೆರೆಸಿಕ್ಕ ಜನರಿಗೆ ಅದು ಅನ್ವಯಿಸುತ್ತಿತ್ತು.

ಆರಂಭದಲ್ಲಿ ಪಶುಪಾಲನೆ ಆರ್ಯರ ಮುಖ್ಯ ಕಸುಬಾಗಿತ್ತು. ಗೋವು ಅಂದಿನ

ಅರ್ಥವ್ಯವಸ್ಥೆಯಲ್ಲಿ ಮೌಲ್ಯಮಾಪಕವಾಗಿತ್ತು. ಪವಿತ್ರವಾದ ಪೂಜಾರ್ಹವಾದ ಪ್ರಾಣಿ ಎಂದು ಸಹ ಪರಿಗಣಿಸಲಾಗಿದ್ದಿತು. ಗೋಗ್ರಹಣ ಗೋಹರಣಗಳು ಅಂದು ಸಾಮಾನ್ಯ ವಾಗಿತ್ತು. ಈಚೆಗೆ ವ್ಯವಸಾಯ ಹೆಚ್ಚು ಬಳಕೆಗೆ ಬಂದಿತು. ಕಬ್ಬಿಣದ ಉಪಯೋಗ ತಿಳಿದ ಮೇಲೆ ಅರಣ್ಯಗಳನ್ನು ಕಡಿದು ಹೆಚ್ಚು ಭೂಮಿಯನ್ನು ಸಾಗುವಳಿಗೆ ಸಿದ್ಧಪಡಿಸಲು, ನೇಗಿಲಿನ ಮೂಲಕ ವ್ಯವಸಾಯ ಹೆಚ್ಚು ಸುಲಭವಾಗುವಂತೆ ಮಾಡಲು ಸಾಧ್ಯ ವಾಯಿತು. ಕಬ್ಬಿಣದ ಬಳಕೆ ಹೆಚ್ಚಿದಂತೆ ಕಮ್ಮಾರ ವೃತ್ತಿಯೂ ಅಭಿವೃದ್ಧಿ ಹೊಂದಿತು. ಅಂತೆಯೇ ಇಂತಹ ವೃತ್ತಿಗಳವರು–ಬಡಗಿ, ಅಕ್ಕಸಾಲೆ, ಕುಂಬಾರ, ಮೇದ ನೇಕಾರ ಇತ್ಯಾದಿ–ತಮ್ಮ ತಮ್ಮ ಕಸಬನ್ನು ಹೆಚ್ಚುಹೆಚ್ಚಾಗಿ ರೂಢಿಸಿಕೊಂಡು ಆರ್ಥಿಕವಾಗಿ ಮುನ್ನಡೆದರು.

ವ್ಯವಸಾಯದ ಮುಂದಿನ ಹೆಜ್ಜೆ ವ್ಯಾಪಾರ. ನದಿಯ ತೀರದಲ್ಲಿ ಅನೇಕ ವ್ಯಾಪಾರ ಕೇಂದ್ರಗಳೂ ಪಟ್ಟಣಗಳೂ ಬೆಳೆದುವು. ಆರ್ಥಿಕವಾಗಿ ಮುಂದುವರಿದ ಜನ ಭೂಮಾಲಿಕ ರಾಗಿ, ಕೆಲಸಗಾರರ ಮೂಲಕ ವ್ಯವಸಾಯವನ್ನು ಸಾಗಿಸಿಕೊಂಡು, ತಾವು ಅದರಿಂದ ಬಂದ ಬೆಳೆಯನ್ನು ವ್ಯಾಪಾರ ಮಾಡುವುದರ ಮೂಲಕ ಸಮಾಜದ ಸಂಪದಭಿವೃದ್ಧಿಗೆ ಕಾರಣರಾದರು. ವ್ಯಾಪಾರ ವಿಶೇಷವಾಗಿ ಒಳನಾಡಿಗೇ ಸೀಮಿತವಾಗಿದ್ದರೂ ಋಗ್ವೇದ ದಲ್ಲಿ ನೌಕೆಗಳ ಹಾಗೂ ಜಲಯಾನದ ಉಲ್ಲೇಖವಿರುವುದರಿಂದ ಪರದೇಶವ್ಯಾಪಾರ ಸಹ ನಡೆಯುತ್ತಿರುವುದು ಸಾಧ್ಯ. ನಿಷ್ಕ, ಸುವರ್ಣ, ಹಿರಣ್ಯ ಎಂಬ ಆಭರಣಗಳನ್ನು ನಾಣ್ಯ ಗಳಂತೆ ವಿನಿಮಯಕ್ಕಾಗಿ ಬಳಸುತ್ತಿದ್ದರು. ಆದರೂ ವಸ್ತುವಿನಿಮಯವೇ ವಿಶೇಷವಾಗಿ ಬಳಕೆಯಲ್ಲಿತ್ತು.

ಹಲವಾರು ಕುಟುಂಬಗಳ ಸಮೂಹಕ್ಕೆ ಕುಲ ಎಂದು ಹೆಸರು. ಪಿತೃಪ್ರಧಾನ ಕುಟುಂಬ ಪದ್ಧತಿ ರೂಢಿಯಲ್ಲಿತ್ತು. ಗೃಹಪತಿ ಕುಟುಂಬದ ಮುಖ್ಯಸ್ಥ. ಈ ವ್ಯವಸ್ಥೆ ಯಲ್ಲಿ ಗಂಡುಮಕ್ಕಳಿಗೆ ಹೆಚ್ಚಿನ ಪ್ರಾಧಾನ್ಯ. ವಂಶಾಭಿವೃದ್ಧಿಗೆಂದು ಗಂಡುಮಕ್ಕಳನ್ನು ದಂಪತಿಗಳು ಬಯಸುತ್ತಿದ್ದರು. ಏಕಪತ್ನಿತ್ವ ಸಾಮಾನ್ಯ. ಬಹುಪತ್ನಿತ್ವ ಹೆಚ್ಚಾಗಿ ರಾಜರಲ್ಲಿ ಕಂಡುಬರುತ್ತಿತ್ತು. ಬಾಲ್ಯವಿವಾಹಪದ್ಧತಿ ಇರಲಿಲ್ಲ. ಕುಟುಂಬದಲ್ಲಿಯೂ ಸಮಾಜದಲ್ಲಿಯೂ ಸ್ತ್ರೀಗೆ ಹೆಚ್ಚಿನ ಸ್ವಾತಂತ್ರ್ಯವಿತ್ತು, ವಿದ್ಯಾಭ್ಯಾಸದ ಅನುಕೂಲತೆ ಗಳಿದ್ದುವು. ಋಷಿಗಳಂತೆ ಕೆಲವರು ಜ್ಞಾನಸಂಪನ್ನರೂ ತಪೋನಿಷ್ಠರೂ ತತ್ವಜ್ಞಾನಿ ಗಳೂ ಆಗಿದ್ದರು. ವಿಶ್ವಾವಾರ, ಲೋಪಾಮುದ್ರಾ, ಆತ್ರೇಯಿ ಈ ಕೆಲವರು ವೇದ ಮಂತ್ರಗಳ ದ್ರಷ್ಟಾರರಾಗಿದ್ದರು. ಕುಟುಂಬದಲ್ಲಿ ಗೃಹಿಣಿ ಪತಿಗೆ ಸಮಾನವಾಗಿ ಪಾಲು ಗಾರಳೆಂಬ ಭಾವನೆ ಆಗಲೇ ರೂಢವಾಗಿತ್ತು.

ಮರ ಅಥವಾ ಬೊಂಬಿನಿಂದ ನಿರ್ಮಿಸಿದ ಮನೆಗಳು, ಸ್ತ್ರೀಯರಿಗೆ ಪ್ರತ್ಯೇಕ ಭಾಗ, ಪ್ರತಿಯೊಂದು ಮನೆಯಲ್ಲೂ ಅಗ್ನಿಶಾಲೆ. ಹತ್ತಿ, ಉಣ್ಣೆ, ಸೆಣಬು, ನಾರುಗಳಿಂದ ನೆಯ್ದ ಬಟ್ಟೆಗಳನ್ನು ಅವರು ಉಪಯೋಗಿಸುತ್ತಿದ್ದರು. ಅಧಿವಾಸ ಮತ್ತು ನೀವಿಗಳೆಂಬ ಎರಡು ವಸ್ತ್ರಗಳಲ್ಲಿ ಒಂದನ್ನು ಸೊಂಟದ ಸುತ್ತಲೂ ಮತ್ತೊಂದನ್ನು ಹೆಗಲಮೇಲೂ ಧರಿಸು

ತ್ತಿದ್ದರು. ಪುರುಷರಿಗೆ ಧನುರ್ವಿದ್ಯೆ, ಗದೆ ಹಾಗೂ ಖಡ್ಗಗಳ ಉಪಯೋಗ ತಿಳಿದಿತ್ತು. ಧನುರ್ವಿದ್ಯೆಯಂತೂ ಕ್ರಮೇಣ ಒಂದು ಉಪವೇದ ಎನ್ನುವಷ್ಟು ಹಿರಿಯ ವಿದ್ಯೆ ಎನಿಸಿ ಕೊಂಡಿತು. ವಸಂತಸಮಯ, ಸಂಕ್ರಾಂತಿ ಇತ್ಯಾದಿ ಪರ್ವಕಾಲಗಳಲ್ಲಿ, ಜಯಪ್ರಾಪ್ತಿ ಯಾದಾಗ, ಯಜ್ಞಯಾಗಗಳು ಮುಗಿದಾಗ ಹಬ್ಬಗಳನ್ನು ಆಚರಿಸಿ ಆರ್ಯರು ಸೋಮಪಾನಮಾಡುತ್ತಿದ್ದರು, ದ್ಯೂತವಾಡುತ್ತಿದ್ದರು.

ಆರ್ಯರು ಪ್ರಕೃತಿ ಪೂಜಕರು. ಪ್ರಕೃತಿಯೇ ತಮಗೆ ಜೀವನಾಧಾರವೆಂದು ಅವರು ಭಾವಿಸಿದ್ದು, ಸಿಡಿಲು, ಗುಡುಗು, ಮಳೆ, ವಾಯು, ಸೂರ್ಯನನ್ನು ಸ್ತುತಿಸಿ ಪೂಜಿಸು ವಂತೆ ಮಾಡಿತು. ಇಂದ್ರ, ಅಗ್ನಿ, ವರುಣ, ಮತ್ತಿತರ ದೇವತೆಗಳನ್ನು ಕುರಿತ ಸೂಕ್ತ ಗಳು ಋಗ್ವೇದದಲ್ಲಿ ಅರ್ಧಕ್ಕಿಂತ ಹೆಚ್ಚು ಭಾಗವನ್ನಾಕ್ರಮಿಸಿವೆ. ದೇವತೆಗಳನ್ನು ಭೌಮ, ಆಕಾಶ ಮತ್ತು ಅಂತರಿಕ್ಷದ ದೇವತೆಗಳೆಂದು ವಿಂಗಡಿಸಲಾಗಿದೆ. ಪೃಥ್ವಿ, ಅಗ್ನಿ, ಸೋಮ, ಬೃಹಸ್ಪತಿ ಮತ್ತು ನದಿ ಪೃಥ್ವಿಯ ದೇವತೆಗಳು; ಇಂದ್ರ ರುದ್ರ ವಾಯು ಪರ್ಜನ್ಯ ಮುಂತಾದವು ಸ್ವರ್ಗಲೋಕದವು; ದ್ಯೌ ವರುಣ, ಮಿತ್ರ ಸೂರ್ಯ, ವಿಷ್ಣು, ಉಷಸ್, ಆದಿತ್ಯ ಅಶ್ವಿನಿ:ದೇವತೆಗಳು ಅಂತರಿಕ್ಷಕ್ಕೆ ಸೇರಿದವರು. ಈ ಒಂದೊಂದನ್ನೂ ಅವರು ಸೃಷ್ಟಿಕರ್ತ, ಪರದೇವ, ಜಗದ್ರಕ್ಷಕ, ಸುಖಕರ ಮುಂತಾಗಿ ವರ್ಣಿಸಿದ್ದಾರೆ.

ಆರಂಭದಲ್ಲಿ ಆರ್ಯರು ಇನ್ನೂ ಪರ್ಯಟನಶೀಲರಾಗಿದ್ದ ಕಾರಣ 'ರಾಜ್ಯ' ಎಂಬು ದಿರಲಿಲ್ಲ. ಕ್ರಮೇಣ ಅವರು ಕೃಷಿಕರಾಗಿ ಅಲ್ಲಲ್ಲಿ ನೆಲಸಿದಾಗ ಒಂದು ರಾಜಕೀಯ ವ್ಯವಸ್ಥೆ ಬೇಕಾಯಿತು. ಅಸುರರಿಂದ ಸತತವಾಗಿ ಸೋಲಿಸಲ್ಪಟ್ಟ ದೇವತೆಗಳು ತಮಗೆ ಸಮರ್ಥವಾದ ನೇತೃತ್ವವಿಲ್ಲದಿರುವುದು ಈ ಸೋಲಿಗೆ ಕಾರಣವೆಂಬುವನ್ನು ಕಂಡುಕೊಂಡು ತಮ್ಮಲ್ಲಿಯೇ ಒಬ್ಬನನ್ನು, ಇಂದ್ರನನ್ನು, ರಾಜನನ್ನಾಗಿ ಆರಿಸಿದರು—ಎಂಬ ಕತೆ ವೇದ ದಲ್ಲಿ ಹೇಳಿದೆ. ರಾಜತ್ವ ಬಂತು. ಕುಲಪತಿಯಾದವನು ತನ್ನ ಕುಟುಂಬದ ಸದಸ್ಯರ ಮೇಲೆ, ಒಟ್ಟು ಆಸ್ತಿಯಮೇಲೆ ಸಂಪೂರ್ಣ ಅಧಿಕಾರ ಪಡೆದಿದ್ದನು. ಇಂತಹ ಒಂದು ವ್ಯವಸ್ಥೆಗೆ ಒಗ್ಗಿದ್ದ ಆರ್ಯರು ರಾಜನಿಗೂ ವಿಶಾಲವ್ಯಾಪ್ತಿಯ ಅಧಿಕಾರ ನೀಡಿದ್ದು ಆಶ್ಚರ್ಯವೇನಲ್ಲ. ಅನೇಕ ಕುಟುಂಬಗಳು ಸೇರಿದ ಒಂದು ಗ್ರಾಮ ವಿಶ್ಪತಿಯ ಅಧೀನ ದಲ್ಲಿ ಒಂದು ವಿಶ್ ಆಯಿತು. ಅನೇಕ ವಿಶ್‌ಗಳು ಸೇರಿ ಜನ, ಅದರ ಅಧಿಪ ಜನಪತಿ. ಜನಪತಿಯನ್ನು ಆರಿಸುತ್ತಿದ್ದುದು ಹೇಗೆ ಎಂಬುದು ಖಚಿತವಾಗಿ ತಿಳಿಯದು. ಕುಲದ ಜ್ಯೇಷ್ಠ ಕುಲಪತಿಯಾದಂತೆ ಜನಗಳಲ್ಲಿ ಜ್ಯೇಷ್ಠನನ್ನು ಜನಪತಿಯಾಗಿ ಆರಿಸಿರಬೇಕು. ಆದರೆ ಈ ಸ್ಥಾನಕ್ಕಾಗಿ ಕುಲಪತಿ ವಿಶ್ಪತಿಗಳಲ್ಲಿ ಜಗಳಗಳುಂಟಾದ ಉದಾಹರಣೆಗಳಿವೆ.

ರಾಜ ನಿರಂಕುಶಾಧಿಕಾರಿಯಾಗದಿರಲು ಆತನಿಗೆ ನೆರವಾಗಿ ಸಭೆ ಸಮಿತಿಗಳೆಂಬ ಸಂಸ್ಥೆಗಳಿದ್ದವು. ರಾಜನ ಕರ್ತವ್ಯಗಳಾಗಲಿ, ಈ ಸಂಸ್ಥೆಗಳ ಕಾರ್ಯಕ್ಷೇತ್ರಗಳಾಗಲಿ ನಿರ್ದಿಷ್ಟವಾಗಿಲ್ಲ. ಪ್ರಜೆಗಳ ರಕ್ಷಣೆ ರಾಜನ ಕರ್ತವ್ಯ. ಇದರ ನಿರ್ವಹಣೆಗಾಗಿ ಪುರೋ ಹಿತರೂ ಸೇನಾಪತಿಗಳೂ ಇವನಿಗೆ ನೆರವಾಗಿದ್ದರು. ಪುರೋಹಿತ ಯಜ್ಞಯಾಗಾದಿ ಗಳಲ್ಲಿ, ಧಾರ್ಮಿಕ ಕಾರ್ಯಗಳಲ್ಲಿ, ನ್ಯಾಯಪಾಲನೆಯಲ್ಲಿ ಅರಸನಿಗೆ ಮಾರ್ಗದರ್ಶಿ-

ಸೇನಾನಿಯ ಪ್ರಮುಖಕರ್ತವ್ಯ ರಕ್ಷಣೆ, ಸೇನೆಯ ನಾಯಕತ್ವ. ರಾಜನ ಕಾರ್ಯ ನಿರ್ವಹಣೆಗಾಗಿ ಅವನಿಗೆ ಪ್ರಜೆಗಳಿಂದ ತೆರಿಗೆ ದೊರೆಯುತ್ತಿತ್ತು. ಸೋತ ಶತ್ರುಗಳಿಂದ ಪಡೆದ ಕಪ್ಪಕಾಣಿಕೆಗಳೂ ಯುದ್ಧದ ಸೂರೆಯೂ ಅವನ ಪಾಲೇ. ಆದರೆ ಕ್ರಮೇಣ ರಾಜನ ಪ್ರತಿಷ್ಠೆ ವರ್ಧಿಸಿತು. ಆಡಂಬರ ಹೆಚ್ಚಿತು. ರಾಜನು ಬಲವಾದ ಸೈನಿಕ ದಳದ ನೇತೃವಾದ; ರಾಜತ್ವ ಆನುವಂಶಿಕವಾಯಿತು. ವೇದಕಾಲದಲ್ಲಿ ರಾಜನಿಗೆ ದೇವತ್ವ ಆರೋಪಿಸಲ್ಪಟ್ಟಿರಲಿಲ್ಲ. ನಂತರದ ಸ್ಮೃತಿಗಳ ಕಾಲದಲ್ಲಿ ರಾಜನು ದೇವಪ್ರಮುಖನಾದ ಪ್ರಜಾಪತಿಯ ಪ್ರತ್ಯಕ್ಷ ಪ್ರತಿರೂಪವೆಂಬ ವಾದ ಅಂಗೀಕಾರವಾಯಿತು.

ವೈದಿಕ ಸಾಹಿತ್ಯದಲ್ಲಿ ವಿದಥ, ಸಭೆ ಸಮಿತಿಗಳ ಉಲ್ಲೇಖವಿದೆ. ವಿದಥ ಎಂಬುದು ಪಂಡಿತರ ಸಭೆ. ಆರಿಸಲ್ಪಟ್ಟ ಕೆಲವೇ ಜನಗಳನ್ನೊಳಗೊಂಡ ಸಂಸ್ಥೆ ಸಭೆ. ಇದರ ಸದಸ್ಯತ್ವ ಕುಲಶ್ರೇಷ್ಠ (ಮಘವನ್)ರಿಗೂ ಸ್ಥಿತಿವಂತರಿಗೂ ಬ್ರಾಹ್ಮಣರಿಗೂ ಮಾತ್ರ ಸೀಮಿತವಾಗಿದ್ದಂತೆ ತೋರುತ್ತದೆ. ಸಭೆ ಎನ್ನುವ ಪದ ಸಭಾಮಂದಿರಕ್ಕೂ ಅನ್ವಯ ವಾಗುತ್ತಿತ್ತು. ಇನ್ನು ಸಮಿತಿಯೆಂಬುದು ಪಂಗಡಗಳಿಗೆ ಸಂಬಂಧಿಸಿದ ರಾಜಕೀಯ ಸಮಸ್ಯೆಗಳ ಮತ್ತು ಇತರ ವಿಷಯಗಳ ಚರ್ಚೆಗೆ ಮೀಸಲಾಗಿದ್ದ ಸಂಸ್ಥೆ. ಇದರ ಸದಸ್ಯತ್ವಕ್ಕೆ ಎಲ್ಲ ಪಂಗಡಗಳಲ್ಲಿಯ, ಎಲ್ಲ ಆರ್ಯರ ಕುಲಮುಖ್ಯರೂ ಅರ್ಹರಾಗಿದ್ದರು. ಇದನ್ನು ಪ್ರಜೆಗಳ ಹಿತಸಾಧನೆಗೆ ಸಹಾಯಕವಾದ ಬಹುಸಂಖ್ಯೆಯ ಸಾಮಾನ್ಯಜನರ ಸಮ್ಮೇಲನ ಎನ್ನಬಹುದು. ಗ್ರಾಮದ ಮುಖ್ಯಸ್ಥನಾದ ಗ್ರಾಮಣಿಗೂ ಸಮಿತಿಯಲ್ಲಿ ಸದಸ್ಯತ್ವವಿತ್ತು.

ವೇದಕಾಲದಲ್ಲಿ ಜಾತಿಪದ್ಧತಿಯಿರಲಿಲ್ಲವೆಂದು ಹಲವರು ಸಾಧಿಸಿದ್ದರೆ, ಅದಕ್ಕೆ ವಿರುದ್ಧ ವಾದ ಅಭಿಪ್ರಾಯವನ್ನೂ ಕೆಲವರು ಮುಂದೂಡಿದ್ದಾರೆ. ಋಗ್ವೇದದ 'ಪುರುಷಸೂಕ್ತ' ದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ಜಾತಿಗಳ ಹೆಸರುಗಳನ್ನು ಸ್ಪಷ್ಟವಾಗಿ ಹೇಳಿದೆ. ಆದರೆ ಈ ವಿಷಯ ನಂತರ ಸೇರಿಸಲ್ಪಟ್ಟದ್ದೆಂಬ ಅಭಿಪ್ರಾಯವೂ ಇದೆ. ಆದರೆ ಮೊದಲು ಮೂರು ವಿಭಾಗಗಳಿದ್ದುವೆಂದು ಇತರ ಸೂಕ್ತಗಳಿಂದ ತೋರು ತ್ತದೆ. ಆರ್ಯರಲ್ಲಿ ಜಾತಿ ಭಾವನೆ ಇರಲಿಲ್ಲ, ಸಾಮಾಜಿಕ ವರ್ಗಗಳಿದ್ದುವು. ವೃತ್ತಿಗಳು ಆನುವಂಶಿಕವಾಗಿರಲಿಲ್ಲ. ಅಂತರ್ವರ್ಗಗಳಲ್ಲಿ ವಿವಾಹ, ಪಂಕ್ತಿಭೋಜನ ನಿಷಿದ್ಧ ವಾಗಿರಲಿಲ್ಲ. ವರ್ಣ ಎಂಬ ಪದಕ್ಕೆ ಬಣ್ಣ ಎಂಬರ್ಥವಿದೆ. ತಮಗೂ ಮೊದಲೇ ನೆಲ ಸಿದ್ದ, ಭಿನ್ನವರ್ಣದ ದಸ್ಯುಗಳನ್ನು ಸಮಾಜಬಾಹಿರರೆಂದು ಪರಿಗಣಿಸಲಾಗಿತ್ತು. ಅವರೊಡನೆ ಸಂಬಂಧ ತಮ್ಮ ವ್ಯಕ್ತಿತ್ವಕ್ಕೆ ಕಳಂಕಪ್ರಾಯವೆಂದು ಭಾವಿಸಲಾಗಿತ್ತು. ನಾವು ಅಂದು ವಿಶಿಷ್ಟವಾಗಿ ಕಾಣುವ ವಿಭಜನೆ ಆರ್ಯ ಮತ್ತು ಅನಾರ್ಯರಲ್ಲಿ. ಆರ್ಯರೆಲ್ಲರೂ,—ಕ್ಷತ್ರಿಯ ಬ್ರಾಹ್ಮಣ ಹಾಗೂ ವೈಶ್ಯರು–ದ್ವಿಜರು; ದಾಸರನ್ನೇ ಶೂದ್ರ ರೆಂದು ಕರೆಯಲಾಗಿತ್ತು.

ಋಗ್ವೇದಕಾಲದ ನಂತರದ ಕಾಲವನ್ನು ಬ್ರಾಹ್ಮಣಗಳ ಅಥವಾ ಪುರಾಣ–ಮಹಾ ಕಾವ್ಯಗಳ ಕಾಲವೆಂದು ಗುರುತಿಸಿದೆ. ಈ ವೇಳೆಗೆ ಆರ್ಯರು ಸಪ್ತಸಿಂಧು ಪ್ರದೇಶದಿಂದ

ಮುಂದುವರಿದು ಉತ್ತರ ಭಾರತದಲ್ಲೆಲ್ಲ ಹಬ್ಬಿದರು. ಈ ಕಾಲ ವ್ಯಾಪ್ತಿ ಕ್ರಿ.ಪೂ. ೧೦ನೆಯ ಶತಮಾನದಿಂದ ೭ನೆಯ ಶತಮಾನದವರೆಗೂ ಇದೆ. ಈ ಕಾಲಕ್ಕೆ ಸೇರಿದ 'ಐತರೇಯ ಬ್ರಾಹ್ಮಣ'ದಲ್ಲಿ ಭಾರತದೇಶವನ್ನು ಧ್ರುವಮಧ್ಯಮ (ಮಧ್ಯದೇಶ) ಉದೀಚಿ (ಉತ್ತರ), ಪ್ರಾಚಿ(ಪೂರ್ವ), ದಕ್ಷಿಣಪಥ ಮತ್ತು ಪ್ರತೀಚಿ(ಪಶ್ಚಿಮ) ಎಂದು ಐದು ಭಾಗಗಳಾಗಿ ವಿಂಗಡಿಸಲಾಗಿದೆ. ಋಗ್ವೇದದ ಕುಲಗಳು ಈಗ ಹೊಸ ರೂಪ ತಳೆದು ಕುಲಗಳು ನೆಲಸಿದ ಪ್ರದೇಶಕ್ಕೆ ಕುಲದ ಹೆಸರೇ ಬಂದಿತು. ಹಿಂದಿನ ಪ್ರಬಲವಾದ ಕುಲಗಳ ಸ್ಥಾನದಲ್ಲಿ ಈಗ ಹೊಸ ಕುಲಗಳು ಪ್ರಾಮುಖ್ಯ ಪಡೆದಿದ್ದವು. ಕುರು, ಪಾಂಚಾಲ, ಕೋಸಲ, ವಿದೇಹ, ಕಾಶಿ, ಮಗಧ ಮುಂತಾದುವು ಅವುಗಳಲ್ಲಿ ಕೆಲವು. ಈಗ ರಾಜ್ಯಗಳು ಬೆಳೆದು, ರಾಜರು ರಾಜ್ಯವಿಸ್ತಾರವನ್ನು ಬಯಸಿದರಾಗಿ ಯುದ್ಧಗಳು ಸಾಮಾನ್ಯವಾದುವು. ರಾಜನು ಸದಾ ಯುದ್ಧಸನ್ನದ್ಧನಾಗಿರಬೇಕಾದ ಕಾರಣ ಆವನ ಅಧಿಕಾರ ಸಹ ವಿಸ್ತರಿಸಿತು. ಇವನ ಈ ಕಾರ್ಯದಲ್ಲಿ ನೆರವಾಗಲು ಅಮಾತ್ಯ, ಸುಹೃತ್, ಕೋಶ, ದುರ್ಗ, ಬಲ ಮುಂತಾದ ಅಂಗಗಳು ಹುಟ್ಟಿಕೊಂಡವು. ಆರ್ಥಿಕಾಭಿವೃದ್ಧಿಯಿಂದ ನಗರಗಳು ಹುಟ್ಟಿಕೊಂಡವು. ಆಡಳಿತ ಪದ್ಧತಿ ವ್ಯವಸ್ಥಿತವಾಯಿತು.

ಧರ್ಮದಿಂದ ಪ್ರಜಾಪಾಲನೆ ಮಾಡುವುದು ರಾಜನ ಕರ್ತವ್ಯ. ಆಡಳಿತದ ಮೂಲ ಸೂತ್ರ ಧರ್ಮ. ಅಧಾರ್ಮಿಕ ರಾಜನನ್ನು ಹೊರದೂಡುವ ಹಕ್ಕು ಪ್ರಜೆಗಳಿಗಿತ್ತು. ಧರ್ಮಕ್ಕಾಗಿ, ದುಷ್ಟರ ಶಿಕ್ಷೆಗೆ, ನ್ಯಾಯಪಾಲನೆಗೆ ದಂಡದ ಉಪಯೋಗ ಹೆಚ್ಚಿದಂತೆ ಅರಸನ ಅಧಿಕಾರಿಗಳ ಸಂಖ್ಯೆಯೂ ಹೆಚ್ಚಿತು. ಈತನಿಗೆ ಮಂತ್ರಿಮಂಡಲ ಸಹಾಯಕವಾಗಿತ್ತು. ಇದರ ಸದಸ್ಯರನ್ನು ರತ್ನಿಗಳೆಂದಿದೆ. ಪುರೋಹಿತ ಹಾಗೂ ಸೇನಾನಿಗಳಲ್ಲದೆ ಸೂತ(ಸಾರಥಿ), ಸಂಗ್ರಹೀತೃ(ಕೋಶಾಧ್ಯಕ್ಷ) ಭಾಗದುಘ್(ಸುಂಕಾಧಿಕಾರಿ), ಗ್ರಾಮಣಿ ಅಕ್ಷಾವಾಪ, ಕ್ಷತ್ರಿ, ಸಚಿವ ಮುಂತಾದವರು ರಾಜನಿಂದ ನಿಯಮಿತಗೊಂಡ ಇತರ ಅಧಿಕಾರಿಗಳು. ಪುರೋಹಿತನ ಸ್ಥಾನ ಪ್ರಬಲವಾಗಿತ್ತು. ರಾಜನಿಗೆ ಹಿತಬೋಧೆ, ಧರ್ಮೋಪದೇಶ, ರಾಜ್ಯಶಾಸನಕ್ಕೆ ಧರ್ಮಗ್ರಂಥಗಳ ಸಾಧಾರವಿವರಣೆ—ಇವು ಇವನ ಕರ್ತವ್ಯಗಳಾದುವು.

ಆರ್ಯರ ಪ್ರಾದೇಶಿಕ ವಿಸ್ತರಣೆಯ ಒಂದು ಫಲ ಆರ್ಯರು ಅನಾರ್ಯ ಕನ್ಯೆಯರನ್ನು ಲಗ್ನವಾದುದು. ಆರ್ಯಸ್ತ್ರೀ ಅನಾರ್ಯಪುರುಷರ ನಡುವೆಯೂ ಹೀಗೆಯೇ ಸಂಬಂಧಗಳುಂಟಾದುವು. ಇವು ಅನುಲೋಮ ಪ್ರತಿಲೋಮ ವಿವಾಹಗಳೆನಿಸಿಕೊಂಡುವು. ವಿವಾಹಗಳಲ್ಲಿ ಬ್ರಹ್ಮ, ದೈವ, ಆರ್ಷ, ಅಸುರ, ಪ್ರಾಜಾಪತ್ಯ, ಪೈಶಾಚ, ರಾಕ್ಷಸ ಮತ್ತು ಗಾಂಧರ್ವವೆಂಬ ಪದ್ಧತಿಗಳಿದ್ದುವು. ಮೊದಲೆರಡರಲ್ಲಿ ಕನ್ಯೆಯನ್ನು ಸಾಲಂಕೃತಳಾಗಿ ಕನ್ಯಾಪಿತೃ ದಾನಮಾಡುತ್ತಿದ್ದನು. ಇದು ವರದಕ್ಷಿಣೆಯ ಪದ್ಧತಿ ಪ್ರಚಲಿತವಿತ್ತೆಂಬುದನ್ನು ಸೂಚಿಸುತ್ತದೆ ಎನ್ನಲಾಗಿದೆ. ನಂತರದ ಎರಡು ಪದ್ಧತಿಗಳಲ್ಲಿ ವರನೇ ಕನ್ಯಾಶುಲ್ಕ ಕೊಡಬೇಕಾಗಿದ್ದಿತು. ಪ್ರಾಜಾಪತ್ಯ ಪದ್ಧತಿಯಲ್ಲಿ ಗಂಡನು ಇನ್ನೊಬ್ಬ ಪತ್ನಿಯನ್ನು ಹೊಂದುವ ಅಧಿಕಾರವಿರಲಿಲ್ಲ. ಒತ್ತಾಯದ ವಿವಾಹವೇ

ಪೈಶಾಚ ಮತ್ತು ರಾಕ್ಷಸ; ಇಷ್ಟಪಟ್ಟು ಹೆಣ್ಣುಗಂಡುಗಳೇ ಮದುವೆಯಾಗುವುದು ಗಾಂಧರ್ವ ವಿವಾಹ. ವಿಧವೆಯರು ಪುನರ್ವಿವಾಹ ಮಾಡಿಕೊಳ್ಳುವ ಅವಕಾಶವಿತ್ತು. ಆರಂಭದಲ್ಲಿ ಸ್ತ್ರೀಯರಿಗೆ ಸ್ವಾತಂತ್ರ್ಯ ಬಹಳವಾಗಿತ್ತಾದರೂ ಕ್ರಮೇಣ ಯುದ್ಧದಲ್ಲಿ ಸೋತವರ ಸ್ತ್ರೀಯರನ್ನೂ ಸಾಲ ತೀರಿಕೆಗಾಗಿ ಕೊಡಲಾದ ಸ್ತ್ರೀಯರನ್ನೂ ದಾನ ಗಳೆಂದು ಪರಿಗಣಿಸುವ ಪದ್ಧತಿ ಬಂದಿತು. ಆದರೆ ಉಪನಿಷತ್ತುಗಳ ಕಾಲದಲ್ಲಿ ಹೆಂಗಸ ರಲ್ಲಿ ಕೂಡ ಅನೇಕ ವಿದ್ಯಾವಂತರೂ ಜ್ಞಾನಿಗಳೂ ಇದ್ದರು.

ವರ್ಣದ ಜೊತೆಗೆ ಆಶ್ರಮದ ಪದ್ಧತಿಯೂ ಈ ನಂತರದ ಕಾಲದಲ್ಲಿ ಆಚರಣೆಗೆ ಬಂದಿತು. ಬ್ರಹ್ಮಚರ್ಯ ಗೃಹಸ್ಥ ವಾನಪ್ರಸ್ಥ ಹಾಗೂ ಸಂನ್ಯಾಸಗಳು ಮಾನವ ಜೀವನದ ನಾಲ್ಕು ಪ್ರಮುಖ ಘಟ್ಟಗಳೆಂದು ಭಾವಿಸಲಾಯಿತು. ವಿದ್ಯಾಭ್ಯಾಸ ಗುರು ಕುಲಗಳಲ್ಲಿ ನಡೆಯುತ್ತಿತ್ತು. ಹರಪ್ಪ ಸಂಸ್ಕೃತಿಯಲ್ಲಿ ಅಸೋಂದು ಬಗೆಯ ಲಿಪಿಯ ಉಪಯೋಗವಿದ್ದುದನ್ನು ಗಮನಿಸಿದ್ದೇವೆ. ಆದರೆ ಆರ್ಯರು ಆರಂಭದಿಂದ ಲಿಪಿಯನ್ನು ಉಪಯೋಗಿಸುತ್ತಿದ್ದರೇ ? ಅವರಿಗೆ ಬರೆವಣಿಗೆ ತಿಳಿದುದು ಎಂದು ?—ಎಂಬುದನ್ನು ಕುರಿತು ವಾದವಿವಾದಗಳಿವೆ. ಕ್ರಿ.ಪೂ. ೭೦೦ರ ಸುಮಾರಿಗೆ ಇವರು ಲಿಪಿಯೊಂದನ್ನು ಉಪಯೋಗಿಸತೊಡಗಿದರೆನ್ನುತ್ತಾರೆ. ವಿದ್ಯಾಭ್ಯಾಸ ಬಹಳಮಟ್ಟಿಗೆ ಮೌಖಿಕ ವಿಧಾನ ದಿಂದಲೇ ಆಗುತ್ತಿತ್ತು. ವೇದಗಳನ್ನೆಲ್ಲ ಗುರುವಿನೊಡನೆ ಮಂತ್ರಗಳನ್ನು ಪಠಿಸುವ ಹಾಗೂ ಕಂಠಪಾಠ ಮಾಡುವ ಪದ್ಧತಿಯಲ್ಲಿಯೇ ಕಲಿಯಲಾಯಿತು. ಋಕ್ಕುಗಳನ್ನು ಮರೆಯದಿರಲು ಪದಪಾಠ, ಕ್ರಮಪಾಠ ಮುಂತಾದ ವೈಜ್ಞಾನಿಕ ಪದ್ಧತಿಗಳನ್ನು ಬಳಸ ಲಾಯಿತು. ಆರಂಭದಲ್ಲಿ ಶಿಕ್ಷಣ ಜಾತಿಗನುಸಾರವಾಗಿರದೆ ಸಮಾನವಾಗಿತ್ತು. ಜಾತಿ ಭೇದಗಳು ಜನ್ಮದಿಂದ ಬಂದ ಅಧಿಕಾರವಾಗಲಿ, ನ್ಯೂನತೆಯಾಗಲಿ ಆಗಿರಲಿಲ್ಲ. ತಾನು ಬಯಸಿದ ವೃತ್ತಿಯನ್ನು ಅವಲಂಬಿಸಿದ ನಂತರವೇ ವ್ಯಕ್ತಿಯ ಜಾತಿ ನಿಶ್ಚಿತವಾಗುತ್ತಿತ್ತು. ಆದರೆ ಕ್ರಮೇಣ ವೇದಾಭ್ಯಾಸ ಒಂದು ಜಾತಿಗೆ ಮಾತ್ರ ಸೀಮಿತವಾದುದು ವೈದಿಕ ಸಂಸ್ಕೃತಿಯ ಅವನತಿಗೆ ನಿದರ್ಶನ.

ಋಗ್ವೇದ ನಂತರದ ಕಾಲದ ವೈಶಿಷ್ಟ್ಯವಿರುವುದು ಅಂದಿನ ವಿಪುಲವಾದ ಸಾಹಿತ್ಯ ಸೃಷ್ಟಿಯಲ್ಲಿ. ಯಜುರ್ವೇದಾದಿ ವೇದಗಳಲ್ಲದೆ ಬ್ರಾಹ್ಮಣ ಆರಣ್ಯಕ, ಉಪನಿಷತ್ತು, ರಾಮಾಯಣ ಮಹಾಭಾರತಾದಿಗಳೂ ಇತರ ಲೌಕಿಕ ಸಾಹಿತ್ಯಕೃತಿಗಳೂ ಆ ಕಾಲದಲ್ಲಿ ಹುಟ್ಟಿಕೊಂಡವು. ಋಗ್ವೇದಕಾಲದ ಆರ್ಯರಲ್ಲಿ ಇದ್ದಷ್ಟು ದಿನ ಉಲ್ಲಾಸ ದಿಂದ ಬಾಳಬೇಕೆಂಬ ಉತ್ಸಾಹ, ಇಲ್ಲಿ ಆರ್ಜಿಸಿದ ಪುಣ್ಯಫಲದಿಂದ ಇನ್ನೂ ಹೆಚ್ಚು ಸುಖಮಯವಾದ ಸ್ವರ್ಗಲೋಕಕ್ಕೆ ಹೋಗಬೇಕೆಂಬ, ಅದಕ್ಕಾಗಿ ಯಜ್ಞಯಾಗಾದಿ ಗಳನ್ನು ಮಾಡಬೇಕೆಂಬ ಆಸೆ, ಇವನ್ನು ಕಾಣುತ್ತೇವೆ. ಇದು ಕರ್ಮಮಾರ್ಗ. ಇದಕ್ಕೂ ಮಿಗಿಲಾದ ಜ್ಞಾನಮಾರ್ಗವನ್ನು ನಂತರದ ಉಪನಿಷತ್ತುಗಳಲ್ಲಿ ಕಾಣುತ್ತೇವೆ. ವಿಶ್ವ ಸೃಷ್ಟಿ, ಆತ್ಮಪರಮಾತ್ಮಗಳ ಜಿಜ್ಞಾಸೆ ಋಗ್ವೇದದಲ್ಲಿ ಸ್ಥೂಲವಾಗಿದೆ. ಆದರೆ ಅದು ಉಪನಿಷತ್ತುಗಳಲ್ಲಿ ಮಿಗಿಲಾಗಿದೆ. ಕರ್ಮಮಾರ್ಗದಿಂದ ಮನಸ್ಸು ಬಹಿರ್ಮುಖವಾಗು

ತ್ತದೆ; ಆದರೆ ಜ್ಞಾನಮಾರ್ಗ ಅಂತರ್ಮುಖಿಯಾಗಿ ಚಿತ್ತವನ್ನು ಪರಮಾತ್ಮನಲ್ಲಿ ಕೇಂದ್ರೀಕರಿಸಿ ತಾದಾತ್ಮ್ಯಭಾವವನ್ನು ಹೊಂದುವುದರ ಮೂಲಕ ಆತ್ಮಜ್ಞಾನವನ್ನು ಸಾಧಿಸುತ್ತದೆ ಎಂಬುದು ಉಪನಿಷತ್ತುಗಳ ಬೋಧೆ. ಇವುಗಳ ಸಂಖ್ಯೆಯನ್ನಾಗಲಿ, ಕಾಲವನ್ನಾಗಲಿ ನಿರ್ಧರಿಸುವುದು ಕಷ್ಟ. ೧೦೮ ಉಪನಿಷತ್ತುಗಳೆಂಬುದು ಸಾಮಾನ್ಯಾಭಿಪ್ರಾಯ; ಈಶ, ಕೇನ, ಕಠ, ಪ್ರಶ್ನ, ಮುಂಡಕ, ಮಾಂಡೂಕ್ಯ, ತೈತ್ತಿರೀಯ, ಐತರೇಯ, ಬೃಹದಾರಣ್ಯಕ ಮತ್ತು ಛಾಂದೋಗ್ಯಗಳು ಇವುಗಳಲ್ಲಿ ಮುಖ್ಯವಾದ ಹತ್ತು.

ಭಾರತೀಯ ಸಂಸ್ಕೃತಿಯ ವಿಶಿಷ್ಟ ಗುಣವಾದ ಆಧ್ಯಾತ್ಮಿಕ ಸತ್ಯಾನ್ವೇಷಣೆಯನ್ನು ಉಪನಿಷತ್ತುಗಳಲ್ಲಿ ಕಾಣುತ್ತೇವೆ. ಧರ್ಮ ಎಂಬ ಪದಕ್ಕೆ ಖಚಿತವಾದ ಅರ್ಥವನ್ನು ಹೇಳಲಾಗದು. ನ್ಯಾಯ, ಆಚಾರ, ನಡವಳಿಕೆ ಎಂಬ ಅರ್ಥಗಳೂ ಇದಕ್ಕಿವೆ. ಒಳ್ಳೆಯ ಬಾಳನ್ನು ಬಾಳಬೇಕೆಂಬ ಮನೋಧರ್ಮದ ಮೂಲ ಧರ್ಮ. ಎಲ್ಲ ಜನರನ್ನೂ ಒಗ್ಗೂಡಿಸಿ ಪರಸ್ಪರವಾಗಿ ಸಹಕರಿಸುವಂತೆ ಪ್ರೇರಿಸುವ ಶಕ್ತಿ ಅದಕ್ಕಿದೆ.

ಆರ್ಯರಲ್ಲದವರು ಆರ್ಯರೊಡನೆ ಸಮ್ಮಿಳಿತರಾಗುತ್ತಿದ್ದಂತೆ ಜನರ ಧಾರ್ಮಿಕ ಕಲ್ಪನೆಗಳೂ ಬದಲಾಗುತ್ತಿದ್ದುವು. ಋಗ್ವೇದಕಾಲದ ಇಂದ್ರ, ವರುಣ ಇತ್ಯಾದಿ ದೇವತೆಗಳಿಗೆ ಬದಲು ಶಿವ-ವಿಷ್ಣುಗಳು ಈಗ ಹೆಚ್ಚು ಪೂಜಾರ್ಹರಾದರು. ಆರ್ಯ ಸಂಸ್ಕೃತಿಯಲ್ಲಿ ಬೆರೆತ ಆರ್ಯೇತರರನ್ನು ಒಲಿಸಿಕೊಳ್ಳಲು ಶಕ್ತಿಪೂಜೆ ಸಹ ಆರಂಭವಾಯಿತು. ಈ ದೇವತೆಗಳ ಉಪಾಸನೆ ಬೆಳೆಯಿತು. ಪುರಾಣೇತಿಹಾಸಗಳು ಇದಕ್ಕೆ ಪೋಷಕವಾದುವು. ಪುರಾಣ ಎಂದರೆ ಪ್ರಾಚೀನ, ಪುರಾತನ ಎಂದರ್ಥ. ಕ್ರಿಸ್ತಶಕಾರಂಭದ ವೇಳೆಗೆ ಅನೇಕ ಪುರಾಣಗಳು ರಚಿತವಾಗಿದ್ದುವು. ಸರ್ಗ, ಉಪಸರ್ಗ, ವಂಶ, ಮನ್ವಂತರ, ವಂಶಾನುಚರಿತ ಎಂಬುವು ಇವುಗಳ ಐದು ಲಕ್ಷಣಗಳು. ಋಷಿಗಳ, ದೇವತೆಗಳ, ಹಿಂದೆ ಆಳಿದ ಅರಸರ ಕತೆಗಳು ಇದರಲ್ಲಿವೆ. ಕ್ರಿಸ್ತಪೂರ್ವಕಾಲದಿಂದ ಕ್ರಿಸ್ತಶಕ ೫-೬ನೆಯ ಶತಮಾನಗಳವರೆಗಿನ ಭಾರತದ ಇತಿಹಾಸರಚನೆಗೆ ಇವು ಬಹಳ ಸಹಾಯಕವಾಗಿವೆ. ಇವುಗಳಲ್ಲಿ ಹೇಳಲಾದ ವಿವರಗಳೆಲ್ಲ ಸರಿಯಲ್ಲದಿರಬಹುದು; ಆದರೆ ಇತರ ಆಧಾರಗಳೊಡನೆ ಹೋಲಿಸಿದಾಗ ಕೆಲವು ಚಾರಿತ್ರಿಕ ಅಂಶಗಳನ್ನು ಇಲ್ಲಿ ಕಾಣಬಹುದು. ಹದಿನೆಂಟು ಪುರಾಣಗಳಲ್ಲಿ ಭಾಗವತ, ವಿಷ್ಣು, ವಾಯು, ಮತ್ಸ್ಯ, ಮಾರ್ಕಂಡೇಯ, ಸ್ಕಾಂದ, ಅಗ್ನಿ ಇವು ಮುಖ್ಯವಾದವು.

ಮಹಾಕಾವ್ಯಗಳೆನಿಸಿದ ರಾಮಾಯಣ ಮಹಾಭಾರತಗಳು ಆರ್ಯಸಂಸ್ಕೃತಿಗೆ ವಿಶ್ವಕೋಶಗಳಂತಿವೆ. ಇಂದಿನ ರಾಮಾಯಣ ಮೂಲತಃ ರಾಜ್ಯಭ್ರಷ್ಟನಾಗಿದ್ದ ರಾಮನನ್ನು ಕುರಿತಾದ ಸಣ್ಣ ಕತೆ. ಕ್ರಮೇಣ ಇದರ ರೂಪ ಬೇರೆಯಾಗಿ ರಾಮನು ದಕ್ಷಿಣಾಪಥದ ಕಡೆಗೆ ಹೋಗಿ ಲಂಕಾಧಿಪನಾದ ರಾವಣನನ್ನು ಸೋಲಿಸಿದ ದೊಡ್ಡ ಕತೆಯಾಗಿ ಮಾರ್ಪಟ್ಟಿದೆ. ಐತಿಹಾಸಿಕವಾಗಿ ಈ ಕಾವ್ಯದಲ್ಲಿನ ಘಟನೆಗಳು ವಾಸ್ತವಿಕವಾದವೆಂದು ಹೇಳಲಾಗದಿದ್ದರೂ ಆರ್ಯಸಂಸ್ಕೃತಿ ಈ ವೇಳೆಗೆ ಇಡೀ ಭರತಖಂಡವನ್ನೇ ವ್ಯಾಪಿಸಿತ್ತು ಎಂಬುದು ಸ್ಪಷ್ಟ. ಗಾತ್ರ ಹಾಗೂ ವೈವಿಧ್ಯಗಳಲ್ಲಿ ಮಹಾಭಾರತ ಹಿರಿದು.

ಆದರ್ಶಮಾನವನ ಚಿತ್ರಣವನ್ನು ನಾವು ರಾಮಾಯಣದಲ್ಲಿ ಕಂಡರೆ ಮಹಾಭಾರತದಲ್ಲಿ ಮಾನವನ ಗುಣ ದೋಷಗಳೂ ಸ್ವಭಾವಗಳೂ ಸಂಕೀರ್ಣತೆಯಿಂದ ಚಿತ್ರಿತವಾಗಿವೆ. ಮೂಲತಃ ವ್ಯಾಸಮಹರ್ಷಿಗಳಿಂದ ರಚಿತವಾದ ಭಾರತಕ್ಕೆ ನಂತರ ಅನೇಕಾನೇಕ ಕಥೆಗಳೂ ಉಪಕಥೆಗಳೂ ಸೇರಿಕೊಂಡಿವೆ. ಇದರ ಒಂದು ಅಂಗ ಭಗವದ್ಗೀತೆ. ಎಲ್ಲ ಉಪನಿಷತ್ತುಗಳ ಸಾರ ಇದರಲ್ಲಡಗಿದೆ. ಭಾರತವನ್ನು ಪಂಚಮವೇದವೆಂದು ಪರಿಗಣಿಸಲಾಗಿದೆ.

ಕ್ರಿ.ಪೂ. ೭–೬ನೆಯ ಶತಮಾನದ ಆರ್ಯರ ಸಂಸ್ಕೃತಿಯ ಚಿತ್ರವಿದು. ಈ ವೇಳೆಗೆ ಆರ್ಯರ ಸಂಸ್ಕೃತಿ ವಿಕಾಸಗೊಂಡಿತ್ತು, ವಿಸ್ತಾರಗೊಂಡಿತ್ತು. ಒಂದು ನಿಶ್ಚಿತ ಸ್ವರೂಪ ತಳೆದು ಪ್ರಭಾವಶಾಲಿಯಾಗಿತ್ತು. ಆರಂಭದಲ್ಲಿ ಬ್ರಾಹ್ಮಣರಿಗಿಂತ ಕ್ಷತ್ರಿಯರು ಮಿಗಿಲಿನ ಸ್ಥಾನಮಾನ ಪಡೆದಿದ್ದರು. ಕ್ರಮೇಣ ರಾಜನಿಗೆ ದೇವತ್ವವನ್ನು ಆರೋಪಿಸಲಾಯಿತು. ಪಟ್ಟಾಭಿಷೇಕದ ಮೂಲಕ ಇಂದ್ರವೈಭವವನ್ನು ಪಡೆಯುತ್ತಾನೆಂಬ ನಂಬಿಕೆ ಹೆಚ್ಚಿತು. ಯಜ್ಞಯಾಗಾದಿಗಳನ್ನು ಮಾಡಬೇಕಾದರೆ ರಾಜನಿಗೆ ಪುರೋಹಿತನ ನೆರವು ಬೇಕಾಯಿತು. ಅವನ ಆವಶ್ಯಕತೆ ಉಂಟಾಯಿತು. ಇದರಿಂದ ಪುರೋಹಿತನ ವ್ಯಕ್ತಿತ್ವದಲ್ಲಿ ಬದಲಾವಣೆಯಾಯಿತು. ತನ್ನ ದೇವತ್ವವನ್ನು ಸ್ಥಾಪಿಸಿಕೊಳ್ಳಲು ಆರಂಭದಲ್ಲಿದ್ದ ರಾಜನನ್ನು ಆಯ್ಕೆ ಮಾಡುವ ಪದ್ಧತಿ ಹೋಗಿ ಕ್ರಮೇಣ ಅದು ವಂಶಪಾರಂಪರ್ಯವಾಯಿತು. ಜ್ಞಾನಾರ್ಜನೆ ಹೆಚ್ಚಿದಂತೆಲ್ಲ ಶಿಕ್ಷಣದಲ್ಲಿ ಪ್ರಗತಿಯುಂಟಾಗಿ, ಒಂದೊಂದು ವೃತ್ತಿಯೂ ಒಂದೊಂದು ವಿದ್ಯೆಯಾಗಿ ಪರಿಣಮಿಸಿ ಅದರಲ್ಲಿ ನೈಪುಣ್ಯ ಪಡೆಯಲು ಕ್ರಮಬದ್ಧ ಶಿಕ್ಷಣ ಆವಶ್ಯಕವಾಯಿತು. ಸಹಜವಾಗಿಯೇ ವೃತ್ತಿಗಳನ್ನು ಬೇಕಾದಂತೆ ಬದಲಾಯಿಸುವುದು ಕಠಿಣವಾಗಿ ಅವುಗಳು ಬೇರೆಯಾದವು. ತಂದೆಯ ವೃತ್ತಿಯನ್ನೇ ಮಗನೂ ಅವಲಂಬಿಸುವುದರಿಂದ ಅವನಿಗೆ ಅದರಲ್ಲಿ ಶಿಕ್ಷಣ ಸುಲಭವಾಯಿತು. ಹೀಗೆ ವೃತ್ತಿಗಳು ವಂಶಪಾರಂಪರ್ಯವೂ ಆದವು. ಈ ವೃತ್ತಿಭೇದಗಳು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ವರ್ಣಗಳು ಸ್ಥಿರವಾಗಲು ಪ್ರೇರಕವಾದುವು.

ಉಪನಿಷತ್ತುಗಳ, ಸೂತ್ರಗಳ ಕಾಲಕ್ಕೆ ವೇದಾಧ್ಯಯನ, ಅಧ್ಯಾಪನ ಹಾಗೂ ಯಜ್ಞಯಾಗಾದಿಗಳನ್ನು ತಮಗಾಗಿ ಹಾಗೂ ಇತರರಿಗಾಗಿ ಮಾಡುವ ಹಕ್ಕು ಬ್ರಾಹ್ಮಣರದಾಗಿತ್ತು. ಆಧ್ಯಾತ್ಮಿಕ ಮನೋಭಾವವನ್ನು ಹೊಂದಿದ್ದ ನೀತಿಯುತನಾದ ಬ್ರಾಹ್ಮಣ ಗೌರವಾರ್ಹನೆಂಬ ಮಾತನ್ನು ಗೃಹ್ಯಸೂತ್ರಗಳಲ್ಲಿ ಕಾಣುತ್ತೇವೆ. ಇಂತಹ ಬ್ರಾಹ್ಮಣನಿಗೆ ಸಮಾಜದಲ್ಲಿ ಕೆಲವು ವಿಶಿಷ್ಟ ಸ್ಥಾನಮಾನಗಳನ್ನು ನೀಡುವುದು ಯೋಗ್ಯ ಎಂಬುದು ಅಂದಿನ ದೃಷ್ಟಿಯಾಗಿತ್ತು. ದುಷ್ಟಶಿಕ್ಷಣ ಶಿಷ್ಟರಕ್ಷಣ ಕರ್ತವ್ಯವನ್ನು ಹೊಂದಿದ್ದ ಕ್ಷತ್ರಿಯನಿಗೆ ಸಮಾಜದಲ್ಲಿ ದ್ವಿತೀಯ ಸ್ಥಾನ. ಸಮಾಜದ ಲೌಕಿಕ ಜೀವನಕ್ಕೆ ಕ್ಷತ್ರಿಯ ಆಧಾರಸ್ತಂಭವಾಗಿದ್ದನು. ನಂತರದ ಸ್ಥಾನ, ವ್ಯವಸಾಯ ವ್ಯವಹಾರಗಳಲ್ಲಿ ತೊಡಗಿದ್ದ ವೈಶ್ಯನದು. ಈ ಮೂವರಿಗೂ ಶೂದ್ರರಿಗೂ ನಡುವಣ ಅಂತರ ಅಗಾಧ. ಈ ಜಾತಿಪದ್ಧತಿ ಕ್ರಿ.ಪೂ. ೭–೬ನೆಯ ಶತಮಾನಗಳ ವೇಳೆಗೆ ದೃಢ

ವಾಗಿ ಬೇರೂರಿ ಬೇರೆಬೇರೆ ಜಾತಿಗಳವರು ಸಾಲದ ಮೇಲೆ ಕೊಡಬೇಕಾದ ಬಡ್ಡಿಗಳನ್ನು ಅವಲಂಬಿಸಿ ಜಾತಿಯನ್ನು ನಿರ್ಣಯಿಸಲಾಗುತ್ತಿತ್ತೆಂದು ಧರ್ಮಸೂತ್ರಗಳಿಂದ ತಿಳಿದುಬರುತ್ತದೆ. ನ್ಯಾಯಪದ್ಧತಿಯಲ್ಲೂ ಈ ವ್ಯತ್ಯಾಸಗಳು ಕಾಣಿಸಿಕೊಂಡವು. ಆದರೂ ಅಂತರ್ವಿವಾಹ ಇತ್ಯಾದಿಗಳನ್ನು ಸಂಪೂರ್ಣವಾಗಿ ನಿಷೇಧಿಸಿರಲಿಲ್ಲ. ಕೀಳುಜಾತಿಯವರ ಕೇವಲ ಸಂಪರ್ಕದಿಂದಲೇ ಉತ್ತಮಜಾತಿಯವನು ತನ್ನ ಪರಿಶುದ್ಧತೆಯನ್ನೂ ಜಾತಿಯನ್ನೂ ಕಳೆದುಕೊಳ್ಳುತ್ತಾನೆ ಎಂದು ನಂತರ ಪ್ರಚಲಿತವಾದ ನಂಬಿಕೆಗಳು ಆಗ ಇರಲಿಲ್ಲ.

## ಜೈನ ಬೌದ್ಧಮತಗಳು

ಧರ್ಮಾಚರಣೆಯಲ್ಲಿ ಯಜ್ಞಸಂಸ್ಥೆ ಬೆಳೆದು ಕರ್ಮಮಾರ್ಗದ ಜಂಜಾಟ ಹೆಚ್ಚಾಗಿತ್ತು. ಉಪನಿಷತ್ತುಗಳು ಕರ್ಮಕ್ಕಿಂತಲೂ ಮಿಗಿಲಾದ ಜ್ಞಾನ ವೈರಾಗ್ಯಗಳ ಮಹತ್ತ್ವವನ್ನು ಬೋಧಿಸುವುದರ ಮೂಲಕ ವಿಚಾರಕ್ರಾಂತಿಗೆ ಎಡೆಮಾಡಿದರೂ ಅವು ವೇದಮಾರ್ಗವನ್ನೇ ಮುಂದುವರಿಸಿದುವು. ಯಜ್ಞದ ಕರ್ಮಾಚರಣೆ ಇದರಿಂದ ಕುಗ್ಗಿದರೂ ನಿಂತುಹೋಗಲಿಲ್ಲ. ಇಂಥ ಪರಿಸ್ಥಿತಿಯಲ್ಲಿ ಕ್ರಿ.ಪೂ. ಆರನೆಯ ಶತಮಾನದಲ್ಲಿ ಇಬ್ಬರು ಧರ್ಮಸುಧಾರಕರು ಜನ್ಮವೆತ್ತಿದರು. ಆತ್ಮೋನ್ನತಿಗೆ ವೇದಗಳ ಸಾಂಪ್ರದಾಯಿಕ ಮಾರ್ಗ ಬೇಕಿಲ್ಲ, ಬೇರೆ ಸಾಧನಗಳಿಂದಲೂ ಸಾಧಿಸಬಹುದು ಎಂದರು. ಸಾಮಾಜಿಕ ಸ್ಥಾನ ಹಾಗೂ ವರ್ಣಾಶ್ರಮಗಳ ಭೇದವಿಲ್ಲದೆ ಸಮಾಜದ ಎಲ್ಲರಿಗೂ ಈ ಧಾರ್ಮಿಕ ಸಂಸ್ಥೆಗಳಿಗೆ ಸ್ವಾಗತವಿತ್ತು.

ಜೈನಧರ್ಮ ಅತಿ ಪ್ರಾಚೀನವಾದುದೆಂದು ಜೈನರು ಭಾವಿಸಿದ್ದಾರೆ. ಹರಪ್ಪ ಮೊಹೆಂಜೊದಾರೊಗಳಲ್ಲಿ ದೊರೆತ ಮುದ್ರಿಕೆಯೊಂದರಲ್ಲಿ ದಿಗಂಬರನಾಗಿ ನಿಂತಿರುವ ಒಬ್ಬನನ್ನು ಜೈನಧರ್ಮಾನುಯಾಯಿಯೆಂದು ಹಲವರು ಊಹಿಸಿದ್ದಾರೆ. ಆದರೆ ಜೈನಧರ್ಮದ ಮೊದಲ ಪ್ರವರ್ತಕ ಋಷಭದೇವ. ಕ್ರಿ.ಪೂ. ಸು. ೮ನೆಯ ಶತಮಾನದಲ್ಲಿ ವೇದಪ್ರಾಮಾಣ್ಯವನ್ನೂ ಪ್ರಾಣಿಬಲಿಯನ್ನೂ ವಿರೋಧಿಸಿದ ಪಂಥವೊಂದಿತ್ತೆಂದು ಬ್ರಾಹ್ಮಣ ಸಾಹಿತ್ಯದಿಂದ ತಿಳಿದುಬರುತ್ತದೆ. ಜೈನಸಂಪ್ರದಾಯದಂತೆ ಈ ಪಂಥದ ನಾಯಕ ೨೨ನೆಯ ತೀರ್ಥಂಕರನಾದ ನೇಮಿನಾಥ. ೨೩ನೆಯ ಪಾರ್ಶ್ವನಾಥನ ನೇತೃತ್ವದಲ್ಲಿ ಈ ಪಂಥ ಪ್ರಾಬಲ್ಯಪಡೆಯಿತು. ಶ್ರಮಣ ಸಂಘ (ಅವೈದಿಕ ಪಂಥ)ವೆಂದು ಗಣಿಸಲಾದ ಇದೇ ಮುಂದೆ ಜೈನ ಮತ್ತು ಬೌದ್ಧಧರ್ಮಗಳಾಯಿತು.

ತೀರ್ಥಂಕರ ಎಂದರೆ ತೀರ್ಥವನ್ನು (ಪವಿತ್ರ ಮತತತ್ತ್ವವನ್ನು) ತಿಳಿಸುವಾತ, ಜ್ಞಾನಿ, ಧರ್ಮಸ್ಥಾಪಕ. ೨೩ನೆಯ ಪಾರ್ಶ್ವನಾಥನು ವಾರಣಾಸಿಯ ಅರಸನಾದ ಅಶ್ವಸೇನನ ಮಗನು. ಸಿಂಹಾಸನವನ್ನು ತ್ಯಜಿಸಿ ಆಧ್ಯಾತ್ಮಿಕ ಜೀವನವನ್ನು ಸ್ವೀಕರಿಸಿದನು. ಕ್ಷಮೆ, ಮಾರ್ದವ ಮೊದಲಾದ ದಶವಿಧ ಧರ್ಮಗಳನ್ನು ಪ್ರತಿಪಾದಿಸಿದನು. ತೀರ್ಥಂಕರರಲ್ಲಿ ಕೊನೆಯವನು ಮಹಾವೀರನು. ಸುಮಾರು ಕ್ರಿ.ಪೂ. ೫೪೦ರಲ್ಲಿ ವೈಶಾಲೀನಗರದ ಕುಂಡನಪುರದಲ್ಲಿ, ಜ್ಞಾತೃಕ ಕುಲದ ಸಿದ್ಧಾರ್ಥ ಮತ್ತು ವೈಶಾಲಿಯ ಲಿಚ್ಛವಿಯ ರಾಜ

ಪುತ್ರಿ ತ್ರಿಶಲೆ ಇವರಿಗೆ ಜನಿಸಿದನು. ಜನ್ಮನಾಮ ವರ್ಧಮಾನ. ಮೊದಲಿನಿಂದಲೂ ವರ್ಧಮಾನಮಹಾವೀರ ಅಂತರ್ಮುಖಿ. ಪತ್ನಿ ಯಶೋದೆ. ಮಗಳು ಅನೊಜ್ಜಾ. ಆದರೆ ಪಾರಮಾರ್ಥಿಕ ಜೀವನವನ್ನೇ ಬಯಸಿದ ಮಹಾವೀರನು ತಂದೆತಾಯಿಗಳ ಮನ ನೋಯದಿರಲೆಂದು ಅವರಿರುವರೆಗೂ ಗೃಹಸ್ಥನಾಗಿದ್ದು, ನಂತರ ತನ್ನ ೩೦ನೆಯ ವಯಸ್ಸಿನಲ್ಲಿ, ಮಾರ್ಗಶೀರ್ಷ ಕೃಷ್ಣಪಕ್ಷ ದಶಮಿಯಂದು ಸಂನ್ಯಾಸಿಯಾದನು. ಹನ್ನೆರಡು ವರ್ಷಗಳ ಕಠೋರ ತಪಸ್ಸನ್ನು ಮಾಡುತ್ತ, ಹತ್ತುವರ್ಷಗಳು ದೇಶಾಟನೆ ಮಾಡುತ್ತ, ಸಾಧನೆಯಲ್ಲಿ ನಿರತನಾಗಿ, ಕೊನೆಗೆ ೪೨ನೆಯ ವಯಸ್ಸಿನಲ್ಲಿ ಜೃಂಭಿಕಾಗ್ರಾಮದಲ್ಲಿದ್ದಾಗ ವೈಶಾಖ ಶುಕ್ಲ ದಶಮಿಯಂದು ದಿವ್ಯಜ್ಞಾನವನ್ನು ಪಡೆದನು. ಕರ್ಮಬಂಧನಗಳನ್ನು ಕಡಿದು ದೇಹೇಂದ್ರಿಯಗಳಮೇಲೆ ಜಯ ಸಂಪಾದಿಸಿದ ಈತನಿಗೆ ಜಿನ ಎಂದರೆ ಗೆದ್ದವನು ಎಂಬ ಹೆಸರು ಬಂದಿತು. ಈತನ ಅನುಯಾಯಿಗಳು ಜೈನರು. ಈತನ ತತ್ತ್ವವನ್ನೊಪ್ಪಿ ಶಿಷ್ಯರಾದ ಯತಿಗಳಿಗೆ ನಿರ್ಗ್ರಂಥರೆಂದೂ ಗೃಹಸ್ಥ ಧರ್ಮಾನುಯಾಯಿಗಳಿಗೆ ಉಪಾಸಕರೆಂದೂ ಹೆಸರಿದೆ.

ಮಾನವಜೀವನದ ಗುರಿ ಆತ್ಮೋದ್ಧಾರ. ಇದಕ್ಕಾಗಿ ಸಮ್ಯಕ್ (ಯಥಾರ್ಥವಾದ) ದರ್ಶನ, ಜ್ಞಾನ ಮತ್ತು ಚಾರಿತ್ರಗಳೆಂಬ ಮೂರು ತತ್ತ್ವಗಳನ್ನು ಸಾಧಿಸಬೇಕು. ಕರುಣೆಯಿಂದ ಕೂಡಿದ ಅಹಿಂಸೆ, ತ್ಯಾಗದಿಂದ ಕೂಡಿದ ಸತ್ಯ, ಅಪರಾಧವರಿಯದ ಸಾಧುಶೀಲ, ಕಾಯಾ ವಾಚಾ ಮನಸಾ ಪರಿಶುದ್ಧತೆ, ಸಂಸಾರದಲ್ಲಿ ವಿರಕ್ತಿ ಇವು ಸಮ್ಯಗಾಚರಣೆಗಳು. ಕರ್ಮದ ತೊಡಕನ್ನು ಬಿಡಿಸುವ ಸುಲಭೋಪಾಯ ತ್ರಿರತ್ನ. ಅಹಿಂಸೆ, ಸತ್ಯ, ಆಸ್ತೇಯ, ಅಪರಿಗ್ರಹ ಮತ್ತು ಬ್ರಹ್ಮಚರ್ಯ ಇವು ಮಹಾವೀರನು ಜಿನಮುನಿಗಳಿಗೆ ವಿಧಿಸಿದ ಆಚಾರಗಳು.

ಮಹಾವೀರನು ಅಂದು ಅಸ್ತಿತ್ವದಲ್ಲಿದ್ದ ಗಂಗಾನದೀ ಪರಿಸರದ ಮಗಧ, ವಿದೇಹ ಅಂಗರಾಜ್ಯಗಳಲ್ಲಿ ಸಂಚರಿಸುತ್ತ ತನ್ನ ಈ ಧರ್ಮಬೋಧನೆಯನ್ನು ಮಾಡಿದನು. ಮಗಧದ ಬಿಂಬಿಸಾರ ಅಜಾತಶತ್ರುಗಳು ಇವನ ಪ್ರಮುಖ ಶಿಷ್ಯರಾದರು. ಜಾತಿಭೇದ ಲಿಂಗಭೇದವಿಲ್ಲದೆ ತನ್ನ ಈ ಮತಕ್ಕೆ ಅನೇಕರನ್ನು ಸೇರಿಸಿ ಜೈನಸಮಾಜವನ್ನು ವ್ಯವಸ್ಥೆಗೊಳಿಸಿ ೭೨ನೆಯ ವಯಸ್ಸಿನಲ್ಲಿ ಕ್ರಿ.ಪೂ. ೫೨೭ರಲ್ಲಿ ಕಾಲವಾದನು. ಬುದ್ಧನಿಗಿಂತ ಒಂದು ವರ್ಷ ಮೊದಲು ಈತನು ಮರಣ ಹೊಂದಿದನೆಂಬ ಹೇಳಿಕೆಯೊಂದನ್ನವಲಂಬಿಸಿ ಈ ತೇದಿ ಕ್ರಿ.ಪೂ. ೪೬೮ ಎಂದು ಕೆಲವರು ಅಭಿಪ್ರಾಯಪಟ್ಟಿದ್ದಾರೆ. ಮಹಾವೀರನ ಶಿಷ್ಯನಾದ ಸ್ಥೂಲಭದ್ರ ಮತ್ತು ಇತರರು ಈ ಧರ್ಮ ಉತ್ತರ ಭಾರತದಲ್ಲಿ ವಿಶೇಷವಾಗಿ ಪ್ರಸಾರವಾಗುವಂತೆ ಮಾಡಿದರು. ಬಿಹಾರ, ಉತ್ತರಪ್ರದೇಶ, ರಾಜಸ್ಥಾನ, ಗುಜರಾತ್, ಕಾಥೇವಾಡ, ಒರಿಸ್ಸಗಳಲ್ಲಿ ಜೈನರ ಸಂಖ್ಯೆ ಹೆಚ್ಚಿತು. ಶತ್ರುಂಜಯ ಮತ್ತು ಅಬು ಪರ್ವತಗಳು ಉತ್ತರದಲ್ಲಿ ಜೈನರ ಪುಣ್ಯಸ್ಥಳಗಳು. ಕ್ರಿ.ಪೂ. ನಾಲ್ಕನೆಯ ಶತಮಾನದ ಕೊನೆಗೆ ಭದ್ರಬಾಹುವಿನ ಮೂಲಕ ಜೈನಧರ್ಮ ದಕ್ಷಿಣಭಾರತವನ್ನು ಪ್ರವೇಶಿಸಿತು. ಕರ್ಣಾಟಕ ತಮಿಳುನಾಡುಗಳಲ್ಲಿ ಈ ಮತ ಬೇರೂರಿತು. ಅನೇಕ ಅರಸರ ಮತ್ತು

ನಾಯಕರ ಪ್ರೋತ್ಸಾಹ ಪೋಷಣೆಗಳಿಂದ ಅದು ನೆಲೆಗೊಂಡಿತು. ಭಾರತದ ಭಾಷೆಗಳ ಬೆಳವಣಿಗೆಗೆ ಜೈನರ ಕೊಡುಗೆ ಅಪಾರವಾದುದು. ತತ್ತ್ವಪ್ರಚಾರಕ್ಕಾಗಿ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ಕಾಲಗಳಲ್ಲಿ ಅಲ್ಲಲ್ಲಿ ಪ್ರಚಲಿತವಿದ್ದ ಭಾಷೆಗಳನ್ನು ಬಳಸಿದುದು ಇದಕ್ಕೊಂದು ಪ್ರಬಲ ಕಾರಣ. ಇದರಿಂದ ಪ್ರಾಕೃತ ಭಾಷೆಗಳು ಬೆಳೆದುವು. ಕನ್ನಡ ಮುಂತಾದ ಹಲವು ದೇಶಭಾಷೆಗಳಲ್ಲಿ ಪ್ರಥಮವಾಗಿ ಸಾಹಿತ್ಯನಿರ್ಮಾಣವೂ ಆಯಿತು.

ಜೈನ ದೇವಾಲಯಕ್ಕೆ ವಸತಿ (ಬಸದಿ) ಎಂದು ಹೆಸರು. ಅನೇಕ ಸುಂದರ, ಕಲಾತ್ಮಕ ಬಸದಿಗಳನ್ನು ಕಟ್ಟಿ, ತೀರ್ಥಂಕರ ವಿಗ್ರಹಗಳನ್ನು ಸ್ಥಾಪಿಸಿದ ಜೈನರಿಂದ ವಾಸ್ತು ಹಾಗೂ ಮೂರ್ತಿಶಿಲ್ಪ ಕಲೆಗಳು ಅಭಿವೃದ್ಧಿ ಹೊಂದಿದುವು.

ಬೌದ್ಧ ಮತಸ್ಥಾಪಕನಾದ ಗೌತಮನೂ ಕ್ಷತ್ರಿಯನೇ. ನೇಪಾಳದಲ್ಲಿ ಶಾಕ್ಯಕುಲದ ಗಣರಾಜ್ಯದ ದೊರೆ ಶುದ್ಧೋದನನಿಗೆ ರಾಣಿ ಮಾಯಾದೇವಿಯಲ್ಲಿ ಈತ ಜನಿಸಿದನು. ರಾಣಿಯು ಹೆರಿಗೆಗೆಂದು ತವರಿಗೆ ಹೋಗುತ್ತಿದ್ದಾಗ ಮಾರ್ಗದ ಲುಂಬಿನೀವನದಲ್ಲಿ, ವೈಶಾಖ ಪೂರ್ಣಿಮೆಯಂದು ಈತ ಹುಟ್ಟಿದ. ಏಳನೆಯ ದಿನ ತಾಯಿ ತೀರಿಕೊಂಡ ಬಳಿಕ ಮಲತಾಯಿ ಗೌತಮಿಯ ಪೋಷಣೆಯಲ್ಲಿ ಬೆಳೆದ. ಯಾವ ವಿಧದ ದುಃಖವೂ ಇವನಿಗೆ ತಾಗದಂತೆ, ತಿಳಿಯದಂತೆ ಅರಸು ಇವನನ್ನು ಸಲಹಿ, ಯಶೋಧರೆಯೆಂಬ ಕನ್ನೆಯನ್ನು ತಂದು ಲಗ್ನಮಾಡಿದನು. ಈ ದಂಪತಿಗಳಿಗೆ ರಾಹುಲನೆಂಬ ಮಗನೂ ಜನಿಸಿದನು. ಆದರೂ ಒಮ್ಮೆ ವಿಹಾರಸಮಯದಲ್ಲಿ ಮುಪ್ಪು, ಸಾವು, ರೋಗ, ಸಂನ್ಯಾಸಗಳ ದೃಶ್ಯಗಳನ್ನು ಕಂಡ ಗೌತಮ ಮಾನವನ ಬಾಳು ಕ್ಷಣಿಕ, ಪ್ರಪಂಚ ದುಃಖಮಯ ಎಂಬುದನ್ನರಿತನು. ಅದರಿಂದ ಮುಕ್ತಿಗೆ ಮಾರ್ಗ ಹುಡುಕುವುದರಲ್ಲಿ ಮಗ್ನನಾದನು. ಒಂದು ರಾತ್ರಿ ಅನ್ವೇಷಣೆಗೆಂದು ಅರಮನೆಯಿಂದ ನಿಷ್ಕ್ರಮಿಸಿದನು. ವರ್ಷಗಳ ಕಾಲ ಅಧ್ಯಯನ, ಚಿಂತನ ತಪಸ್ಸುಗಳಲ್ಲಿ ತೊಡಗಿ ಬ್ರಹ್ಮಜ್ಞಾನದ ಸ್ವರೂಪವನ್ನೂ ಧ್ಯಾನದ ರಹಸ್ಯವನ್ನೂ ಅರಿತನು; ದೇಹವನ್ನು ದಂಡಿಸಿದನು. ಕೊನೆಗೊಮ್ಮೆ ಗಯಾ ನಗರಿಯ ಬಳಿ ಉರುವೇಲ ಗ್ರಾಮದಲ್ಲಿ ಅರಳಿಯ ಮರದ ಕೆಳಗೆ ಕುಳಿತಿರುವಾಗ, ಸುಜಾತ ಎಂಬ ಕೃಷಿಕನ ಕನ್ಯೆ ನೀಡಿದ ಅಕ್ಕಿಯ ಪಾಯಸವನ್ನು ಸೇವಿಸಿ ಚಿಂತನದಲ್ಲಿರುವಾಗ, ಜ್ಞಾನೋದಯವಾಯಿತು. ಅಂದಿನಿಂದ ಬುದ್ಧನಾದನು.

ಬುದ್ಧ ಎಂದರೆ ಜ್ಞಾನಿ ಎಂದರ್ಥ. ಶಾಕ್ಯಮುನಿ, ಸಿದ್ಧಾರ್ಥ, ಶಾಕ್ಯಸಿಂಹ, ಜಿನ, ತಥಾಗತ (ಸತ್ಯವನ್ನು ಕಂಡವ) ಇವು ಈತನಿಗೆ ಅನಂತರ ಕೊಡಲಾದ ಹೆಸರುಗಳು. ಗಯಾನಗರಿಯಿಂದ ವಾರಣಾಸಿಗೆ ಬಂದ ಬುದ್ಧ ಅಲ್ಲಿ ಹರಿಣವನದಲ್ಲಿದ್ದ ಐವರು ಬ್ರಾಹ್ಮಣರಿಗೆ ಮೊದಲ ಬಾರಿ ಧರ್ಮಬೋಧೆಮಾಡುವುದರ ಮೂಲಕ ಧರ್ಮಚಕ್ರ ಪ್ರವರ್ತನವನ್ನಾರಂಭಿಸಿದನು. ಈ ಸ್ಥಳ ಈಗ ಸಾರನಾಥ ಎಂದು ಪ್ರಸಿದ್ಧವಾಗಿದೆ. ಜೀವನ ದುಃಖಮಯ; ದುಃಖಕ್ಕೆ ಕಾರಣ ಆಸೆ, ಲೋಭ; ಇವುಗಳನ್ನು ತೊರೆದರೆ ದುಃಖನಿವಾರಣೆ, ತೊರೆಯಲು ಸಾಧುಮಾರ್ಗವಿದೇ. ಇದು ಬುದ್ಧನ ನಾಲ್ಕು ಆರ್ಯ

ಸತ್ಯಗಳು. ಆತ ತೋರಿಸಿದ ಅಷ್ಟಾಂಗಿಕ ಸಾಧುಮಾರ್ಗ ಎಂದರೆ ಸಾಧುವಿಚಾರ, ನಿರ್ಧಾರ, ವಚನ, ಆಚರಣೆ, ಶೀಲ, ಪ್ರಯತ್ನ, ಚಿತ್ತಸ್ಥಿತಿ ಮತ್ತು ಚಿಂತನ. ಸಂಸಾರ ಚಕ್ರ ಕಾರ್ಯಕಾರಣ ಸರಪಳಿಯಿಂದ ಸದಾ ತಿರುಗುವುದು. ಅಜ್ಞಾನ ಅಸಾಧುಧರ್ಮ ಗಳು ಮಾನವನನ್ನು ಈ ಚಕ್ರಕ್ಕೆ ಸಿಲುಕಿಸುತ್ತವೆ. ಇದರಿಂದ ಬಿಡುಗಡೆಹೊಂದಲು ಅಷ್ಟವಿಧಮಾರ್ಗ ಆವಶ್ಯಕ. ಇದು ಮಧ್ಯಮ ಮಾರ್ಗ. ಇದರಲ್ಲಿ ಯಾವುದೂ ಅತಿಯಾಗ ಬಾರದೆಂದು ಹೇಳಿದೆ. ದೇವರುಗಳ ಗೊಡವೆ ಇಲ್ಲ, ಯಜ್ಞಯಾಗಾದಿಗಳ ಜಂಜಾಟವಿಲ್ಲ, ವಿಚಾರಸಂತಿಕೆಗೆ, ಸ್ವಪ್ರಯತ್ನಕ್ಕೆ, ನೀತಿಗೆ ಪ್ರಾಮುಖ್ಯ. ಮಾನವರೆಲ್ಲ ಒಂದೇ ಎಂಬ ಔದಾರ್ಯ ತೋರಿದೆ. ಮಾನವತೆಗೆ ಗೌರವವನ್ನೂ ಉದ್ಧಾರದ ಆಶ್ವಾಸನೆಯನ್ನೂ ತೋರಿಸಿದೆ.

ನಲವತ್ತೈದು ವರ್ಷಗಳ ಪ್ರಚಾರಕಾರ್ಯದ ಬಳಿಕ ೮೦ನೆಯ ವಯಸ್ಸಿನಲ್ಲಿ ಬುದ್ಧನು ಪರಿನಿರ್ವಾಣ ಹೊಂದಿದನು. ಈತನ ಜನನ, ಜ್ಞಾನಪ್ರಾಪ್ತಿ, ನಿರ್ವಾಣಗಳೆಲ್ಲ ವೈಶಾಖ ಪೂರ್ಣಿಮೆಯಂದೇ ಆಯಿತು. ಈತನ ಜೀವನಕಾಲದ ಬಗೆಗೆ ಭಿನ್ನಾಭಿಪ್ರಾಯಗಳಿವೆ. ಸ್ಥೂಲವಾಗಿ ಕ್ರಿ.ಪೂ. ೫೬೦ರಿಂದ ೪೮೦ ಎಂದಿಟ್ಟುಕೊಂಡಿದೆ. ಈತನ ಅನುಯಾಯಿ ಗಳಲ್ಲಿ ಸಂನ್ಯಾಸ ಸ್ವೀಕಾರಮಾಡಿದವರೂ ಗೃಹಸ್ಥರೂ ಇದ್ದಾರೆ. ಸಂನ್ಯಾಸಿಗಳನ್ನೆಲ್ಲ ಸಂಘವೊಂದರಲ್ಲಿ ಕೂಡಿಸಿ ಅವರ ಆಚರಣೆಗೆ ನಿಯಮ ನಿರ್ಬಂಧಗಳನ್ನು ಈತ ರೂಪಿಸಿ ದನು. ಬಳಿಕ ಇವರು ಮತಪ್ರಚಾರಕರಾದರು. ಬುದ್ಧ, ಬೌದ್ಧಧರ್ಮ ಮತ್ತು ಸಂಘ ಗಳು ತ್ರಿರತ್ನಗಳೆನಿಸಿದವು. "ಬುದ್ಧಂ ಶರಣಂ ಗಚ್ಛಾಮಿ, ಧರ್ಮ ಶರಣಂ ಗಚ್ಛಾಮಿ, ಸಂಘಂ ಶರಣಂ ಗಚ್ಛಾಮಿ"—ಇದು ಅವರ ಮೂಲ ಮಂತ್ರ. ಸಾರಿಪುತ್ರ ಮೊಗ್ಗಲಾನ, ಆನಂದ, ಅನುರುದ್ಧ, ಮಹಾಕಶ್ಯಪ, ಉಪಲಿ ಇವರು ಗೌತಮನ ಪ್ರಮುಖ ಶಿಷ್ಯರು.

ಬುದ್ಧನ ತರುವಾಯ ಮೂರು ಬೌದ್ಧಮಹಾಸಭೆಗಳು ನಡೆದು, ಬೌದ್ಧಸಾಹಿತ್ಯವನ್ನು ತ್ರಿಪಿಟಕಗಳಲ್ಲಿ ಸಂಗ್ರಹಿಸಲಾಯಿತು. ಪಿಟಕ ಎಂದರೆ ಪೆಟ್ಟಿಗೆ. ವಿಷಯಗಳನ್ನು ಸಂಗ್ರಹಿಸಿದ ಗ್ರಂಥಗಳು ಎಂಬ ಅರ್ಥದಲ್ಲಿ ಈ ಪದವನ್ನು ಉಪಯೋಗಿಸಲಾಗಿದೆ. ಇವು ಮೂರು : ವಿನಯ, ಸುತ್ತ, ಅಭಿಧಮ್ಮ. ಮೊದಲನೆಯದರಲ್ಲಿ ಸಂಘದಲ್ಲಿ ವಾಸಿಸುವರ ಕರ್ತವ್ಯಗಳನ್ನೂ ಕಟ್ಟಳೆಗಳನ್ನೂ ನಿರೂಪಿಸಿದೆ. ಉಳಿದೆರಡರಲ್ಲಿ ಬೌದ್ಧಸಿದ್ಧಾಂತಗಳೂ ತತ್ತ್ವಗಳೂ ವಿವರಿಸಲ್ಪಟ್ಟಿವೆ. ಬೌದ್ಧಮತ ಭಾರತದ ಎಲ್ಲೆಗಳನ್ನು ಮೀರಿ ಬೇರೆ ದೇಶ ಗಳಿಗೂ ಹರಡಿತು. ಇದಕ್ಕಾಗಿ ಅರಸರ ಪ್ರೋತ್ಸಾಹವಿತ್ತು ; ಬೌದ್ಧಭಿಕ್ಷುಗಳ ಪರಿಶ್ರಮ ವಿತ್ತು. ಬುದ್ಧಾನುಯಾಯಿಗಳು ವಿದ್ಯೆಗೆ ಅತ್ಯಂತ ಪ್ರೋತ್ಸಾಹ, ನೀಡಿದರು. ವಿವಿಧ ಜ್ಞಾನಶಾಖೆಗಳ ಅಧ್ಯಯನ ಅಧ್ಯಾಪನಗಳಿಗೆ ಮೀಸಲಾದ ನಾಲಂದ, ವಲಭಿ, ವಿಕ್ರಮ ಶಿಲೆಯಂತಹ ವಿದ್ಯಾಪೀಠಗಳು ಸ್ಥಾಪಿಸಲ್ಪಟ್ಟವು. ಸಾಂಚಿಯಲ್ಲಿರುವಂತಹ ಭವ್ಯಸ್ತೂಪ ಗಳು, ಕಾರ್ಲೆಯಲ್ಲಿನಂತಹ ಚೈತ್ಯಾಲಯಗಳು ಮತ್ತು ವಿಹಾರಗಳು ನಿರ್ಮಿತವಾದುವು. ಶಿಲ್ಪಕಲೆಗೆ ಪ್ರೋತ್ಸಾಹ ಲಭಿಸಿತು. ಈ ದೃಷ್ಟಿಯಲ್ಲಿ ಭಾರತೀಯ ಸಾಹಿತ್ಯ, ವಿದ್ಯೆ ಕಲೆಗಳಿಗೆ ಬೌದ್ಧರು ಸಲ್ಲಿಸಿದ ಉಪಕಾರ ಚಿರಸ್ಮರಣೀಯ.

"ಬೌದ್ಧಧರ್ಮವು ತನ್ನ ಜನ್ಮಭೂಮಿಯಿಂದ ಕಣ್ಮರೆಯಾಗಿದ್ದು ಚರಿತ್ರೆಯಲ್ಲಿ ಒಂದು ವಿಷಾದಪೂರ್ಣ ವಿಡಂಬನೆ. ಭಾರತದ ಧರ್ಮ ಮತ್ತು ಸಂಸ್ಕೃತಿಗಳ ಇತಿಹಾಸಕಾರನಿಗೆ ದಿಗ್ಭ್ರಮೆಗೊಳಿಸುವ ಒಂದು ಒಗಟು. ಬೌದ್ಧಧರ್ಮವು ದೇಶದ ಬೌದ್ಧಿಕ ಮತ್ತು ಆಧ್ಯಾತ್ಮಿಕ ಸಂಪತ್ತನ್ನು ಪ್ರಚೋದಿಸಿ ಶ್ರೀಮಂತಗೊಳಿಸಿತು. ಅದರ ಸಾಧನೆಗಳು ಹಾಗೂ ಅದು ನೀಡಿದ ಕಾಣಿಕೆಗಳು ಭಾರತದಲ್ಲೂ ಮತ್ತು ಹೊರಗೂ ಅಸಂಖ್ಯವಾದವು, ವಿವಿಧರೂಪದವು. ಭಾರತದಲ್ಲಿ ವಿಕಾಸಗೊಂಡು ತನ್ನ ಅಂತರ್ಗತ ಸತ್ತ್ವ ಹಾಗೂ ಆಧ್ಯಾತ್ಮಿಕ ಶಕ್ತಿಗಳಿಂದಾಗಿ ಅದರ ಗಡಿಗಳನ್ನು ದಾಟಿ, ವಿಸ್ತಾರವಾದ ಏಷ್ಯದಲ್ಲಿ ಮತ್ತು ಉತ್ತರ ಆಫ್ರಿಕದ ಕೆಲವು ಭಾಗಗಳಲ್ಲಿ ಹರಡಿದ ಮೊತ್ತಮೊದಲ ವಿಶ್ವಧರ್ಮ ಅದು."[1] ಬೌದ್ಧಧರ್ಮ ಸಾಮಾಜಿಕ ಸಮಸ್ಯೆಗಳ ಕಡೆಗೆ ಗಮನ ಹರಿಸದೆ ಆಧ್ಯಾತ್ಮಿಕ ಜೀವನಕ್ಕೆ ಮಹತ್ತ್ವ ಕೊಟ್ಟಿತು. ವೈದಿಕಧರ್ಮ ವೈಯಕ್ತಿಕ ಹಾಗೂ ಸಾಮಾಜಿಕಾದಿ ಸ್ತರಗಳಲ್ಲಿ ಕೂಡ ಇಹಪರಲೋಕಗಳ ಹಿತಾಸಕ್ತಿಗಳನ್ನೊಳಗೊಂಡಿತ್ತು. ಬುದ್ಧನು ವೈದಿಕ ಧರ್ಮದ ಈ ಮುಖವನ್ನು ತಿರಸ್ಕರಿಸಲಿಲ್ಲ. ಬೌದ್ಧಧರ್ಮದಿಂದ ಹಿಂದುಧರ್ಮ ಅನೇಕ ತಾತ್ತ್ವಿಕ ಧಾರ್ಮಿಕ ಚಿಂತನೆಗಳನ್ನು ಸೆಳೆದುಕೊಂಡು ಅಳವಡಿಸಿಕೊಂಡಿತು. ಬೌದ್ಧಧರ್ಮದ ಬೌದ್ಧಿಕ ಸಾಮರ್ಥ್ಯಕ್ಕೆ ಬ್ರಾಹ್ಮಣ ಅನುಯಾಯಿಗಳೇ ಆಧಾರಸ್ತಂಭಗಳಾಗಿದ್ದರು. ಎಲ್ಲಿಯವರೆಗೆ ಅದು ಅಮಿತವಾದ ಆಧ್ಯಾತ್ಮಿಕ ಸಾಮರ್ಥ್ಯ ಮತ್ತು ಬೌದ್ಧಿಕ ತೀಕ್ಷ್ಣತೆ ಯಿದ್ದ ಜನರನ್ನು ಹೊಂದಿತ್ತೋ ಅಲ್ಲಿಯವರೆಗೂ ಅದು ವಿದ್ಯಾವಂತರ ಹಾಗೂ ಶ್ರೀಮಂತರ ಮೆಚ್ಚುಗೆ ಪ್ರೋತ್ಸಾಹಗಳನ್ನು ಪಡೆದಿತ್ತು. ಅಲ್ಲದೆ ಆರಂಭದಿಂದಲೂ ಅದು ತನ್ನ ಅಸ್ತಿತ್ವಕ್ಕೆ ಅರಸರನ್ನೇ ಅವಲಂಬಿಸಿತ್ತು. ಅವರ ಉದಾರ ದಾನಗಳಿಂದ, ಕಾಣಿಕೆಗಳಿಂದ ಬೌದ್ಧಾರಾಮಗಳಂತಹ ಬೃಹತ್ ಸಂಸ್ಥೆಗಳನ್ನು ನಡಸಲು ಅದಕ್ಕೆ ಸಾಧ್ಯವಿತ್ತು. ಆದರೆ ಆದರ ಪರಿಣಾಮವಾಗಿ ಬೌದ್ಧಸಂಘಗಳು ಅನೇಕವೇಳೆ ಅಲಸಿಗಳ, ಬುದ್ಧಿಹೀನರ ಆಶ್ರಯಸ್ಥಾನಗಳಾಗಿದ್ದುವು. ದೈನಂದಿನ ಆವಶ್ಯಕತೆಗಳ ಸೌಲಭ್ಯ ಅಲ್ಲಿ ಸುಲಭವಾಗಿ ಸಿಗುತ್ತಿತ್ತು. ಇದು ಮೊದಲಿನಿಂದಲೂ ದುರ್ಬಲತೆಗೆ ಮೂಲವಾಯಿತು. ರಾಜಾಶ್ರಯ ಕಡಿಮೆಯಾದಾಗ ಇಲ್ಲದಾದಾಗ ಸಹಜವಾಗಿಯೇ ಈ ಸಂಘಗಳು ನಶಿಸಿದುವು.

## ಕ್ರಿ.ಪೂ. ಆರನೆಯ ಶತಮಾನದ ಭಾರತ

ವೇದಗಳ ಕಾಲದಲ್ಲಿ ಯುದ್ಧಪ್ರಯಾಸದ ಪರಿಣಾಮವಾಗಿ ರಾಜತ್ವ ರೂಪುಗೊಂಡು ರಾಜ್ಯಗಳು ಅಸ್ತಿತ್ವಕ್ಕೆ ಬಂದಿದ್ದುವೆಂಬುದನ್ನು ನೋಡಿದ್ದೇವೆ. ಆರಂಭದಲ್ಲಿ ಈ ರಾಜ್ಯ ಗಳು ವಿಸ್ತೀರ್ಣದಲ್ಲಿ ಸಣ್ಣದಾಗಿದ್ದು ಗ್ರೀಸ್‌ದೇಶದ ನಗರರಾಜ್ಯಗಳಂತಿದ್ದುವು. ಉತ್ತರ ಕಾಲೀನ ವೇದಗಳ ಕಾಲದಲ್ಲಿ ಇವು ಕ್ರಮೇಣ ವಿಸ್ತೀರ್ಣಗೊಂಡವು. ಚಕ್ರವರ್ತಿ ಎಂಬುದು ಹಿಮಾಲಯದಿಂದ ಸಮುದ್ರಗಳವರೆಗಿನ ಪ್ರದೇಶವನ್ನಾಳುತ್ತಿದ್ದಾತನಿಗೆ ಸಲ್ಲುವ ಬಿರುದೆಂಬ ಭಾವನೆ ಬ್ರಾಹ್ಮಣಗಳಲ್ಲಿ ಧ್ವನಿತವಾಗಿದೆ. ರಾಜತ್ವ ಆನುವಂಶಿಕ

ವಾಗಿ, ಕ್ಷೇತ್ರ ವಿಸ್ತರಿಸಿ, ರಾಜನ ಸ್ಥಾನಮಾನಗಳಲ್ಲಿ ಬದಲಾವಣೆಗಳಾದಾಗ ರಾಜ, ಮಹಾರಾಜ, ಮಹಾರಾಜಾಧಿರಾಜರೆಂಬ ಅಂತಸ್ತುಗಳು ಕಾಣಿಸಿಕೊಂಡವು. ಏಕರಾಟ್ (ಸಾರ್ವಭೌಮ) ಎಲ್ಲರಿಗೂ ಮಿಗಿಲಾದ ಸ್ಥಾನಪಡೆದಿದ್ದನು.

ಪಾಣಿನಿ (ಕ್ರಿ.ಪೂ. ೭ನೆಯ ಶತಮಾನ)ಯು ೨೨ ಜನಪದಗಳನ್ನು ಹೆಸರಿಸಿದ್ದಾನೆ. ಕೇಕಯ, ಗಾಂಧಾರ, ಕಾಂಭೋಜ, ಮದ್ರ, ಅವಂತಿ, ಕುರು, ಶಾಲ್ವ ಇವುಗಳಲ್ಲಿ ಕೆಲವು. ಪಾಂಚಾಲ, ವಿದೇಹ, ಅಂಗ ಮತ್ತು ವಂಗಗಳನ್ನು ಪ್ರಾಚ್ಯ ಜನಪದಗಳೆಂದು ಕರೆದಿದೆ. ಬೌದ್ಧಗ್ರಂಥಗಳಿಂದಲೂ ಪುರಾಣಗಳಿಂದಲೂ ಕ್ರಿ.ಪೂ. ೬ನೆಯ ಹಾಗೂ ನಂತರದ ಒಂದೆರಡು ಶತಮಾನಗಳ ರಾಜಕೀಯ ಪರಿಸ್ಥಿತಿಗಳು ತಿಳಿದುಬರುತ್ತವೆ. ರಾಜ್ಯಗಳು, ಗಣರಾಜ್ಯಗಳು ಮತ್ತು ಸ್ವಲ್ಪಜನಾಧಿಪತ್ಯ (oligarchy)ಗಳು ಅಂದು ಅಸ್ತಿತ್ವದಲ್ಲಿದ್ದುವು. ಬೌದ್ಧಸಾಹಿತ್ಯದಲ್ಲಿ ಇವುಗಳನ್ನು ಷೋಡಶಮಹಾಜನಪದಗಳೆಂದು ಕರೆಯಲಾಗಿದೆ. ಪುರಾಣಗಳಲ್ಲೂ ಇವುಗಳ ಉಲ್ಲೇಖವಿದೆ. ಆದರೆ ಈ ಆಧಾರಗಳಲ್ಲಿ ಹೆಸರಿಸಲಾದ ರಾಜ್ಯಗಳು ಒಂದೇ ಆಗಿಲ್ಲ, ಕೇವಲ ೧೬ ಜನಪದಗಳು ಮಾತ್ರ ಇದ್ದುವೆಂದೂ ಅಲ್ಲ. ಅವು ಅಂದು ಪ್ರಬಲವಾಗಿದ್ದ ರಾಜ್ಯಗಳಷ್ಟೆ. ಈ ಸಾಹಿತ್ಯಕೃತಿಗಳು ಸಹ ನಿಶ್ಚಿತವಾದ ಒಂದು ಕಾಲದಲ್ಲಿ ರಚಿತವಾದವಲ್ಲ. ಬೇರೆಬೇರೆ ಕಾಲದಲ್ಲಿ ರಚಿತವಾದ ಈ ಗ್ರಂಥಗಳಲ್ಲಿ ಆಯಾ ಕಾಲಗಳಲ್ಲಿ ಪ್ರಬಲವಾಗಿದ್ದ ರಾಜ್ಯಗಳನ್ನು ಹೆಸರಿಸಿದೆ. ಪುರಾಣಗಳಲ್ಲಿ ಕಾಂಭೋಜ, ಗಾಂಧಾರ, ಅಂಗ, ಅವಂತಿ, ಪೌರವ, ಐಕ್ಷ್ವಾಕ, ಮೈಥಿಲ, ಶೂರಸೇನ, ಹೈಹಯ, ಕಲಿಂಗ, ಅಶ್ಮಕ, ಪಾಂಚಾಲ, ಕಾಶಿ, ವೀತಿಹೋತ್ರ, ಕೋಸಲ ಮತ್ತು ಮಗಧ ರಾಜ್ಯಗಳ ಉಲ್ಲೇಖವಿದೆ. ಆದರೆ ಬೌದ್ಧಗ್ರಂಥಗಳಲ್ಲಿ ಪೌರವ ರಾಜ್ಯವನ್ನು ಕುರು ಎಂದು ಕರೆದಿದೆ. ಐಕ್ಷ್ವಾಕ, ಮೈಥಿಲ, ಹೈಹಯ, ಕಲಿಂಗ ಮತ್ತು ವೀತಿಹೋತ್ರಗಳಿಗೆ ಬದಲು ವ್ರಿಜಿ, ಮಲ್ಲ, ಚೇದಿ, ವತ್ಸ ಮತ್ತು ಮತ್ಸ್ಯ ಎಂಬ ರಾಜ್ಯಗಳ ಹೆಸರುಗಳಿವೆ. ಆಯಾ ಸಾಹಿತ್ಯದ ಧರ್ಮದೃಷ್ಟಿಯನ್ನನುಸರಿಸಿ ಅವು ತಮ್ಮ ಧರ್ಮಕ್ಕೆ (ವೈದಿಕ ಅಥವಾ ಬೌದ್ಧ) ಪ್ರಾಶಸ್ತ್ಯ ಹಾಗೂ ಉತ್ತೇಜನಗಳನ್ನು ಕೊಟ್ಟ ರಾಜ್ಯಗಳನ್ನು ಮಟ್ಟಿಗೆ ಹೆಸರಿಸಿವೆ ಎಂಬುದು ಸ್ಪಷ್ಟ. ವ್ರಿಜಿ, ಮಲ್ಲ ಗಣರಾಜ್ಯಗಳು ಬೌದ್ಧಮತೀಯರ ಕೇಂದ್ರಗಳಾಗಿದ್ದ ಕಾರಣ, ಪುರಾಣಗಳಲ್ಲಿ ಅವು ಕಾಣಿಸಿಕೊಂಡಿಲ್ಲ. ಇದಲ್ಲದೆ ಬುದ್ಧನ ಕಾಲದಲ್ಲಿ ಕಪಿಲವಸ್ತುವಿನ ಶಾಕ್ಯ ಪಾವಾ ಮತ್ತು ಕುಶಿನಾರದ ಮಲ್ಲ, ವೈಶಾಲಿಯ ಲಿಚ್ಛವಿ ಇತ್ಯಾದಿ ಜನಾಂಗಗಳಿದ್ದುವೆಂದು ಬೌದ್ಧಗ್ರಂಥಗಳಿಂದ ತಿಳಿದುಬರುತ್ತದೆ. 'ಭಗವತೀ' ಎಂಬ ಜೈನ ಗ್ರಂಥದಲ್ಲಿ ಮಲಯ, ಮಾಲವ, ಲಾಢ, ಪಾಢ ಎಂಬ ರಾಜ್ಯಗಳನ್ನು ಹದಿನಾರರಲ್ಲಿ ಸೇರಿಸಲಾಗಿದೆ. ಇದು ಹೆಚ್ಚು ವಿಸ್ತಾರವಾದ ಭಾರತದೇಶದ ಪರಿಚಯ ಆ ಗ್ರಂಥಕರ್ತನಿಗಿತ್ತೆಂಬುದನ್ನೂ ಈ ಕೃತಿ ಇನ್ನೂ ನಂತರದ ಕಾಲದ್ದೆಂಬುದನ್ನೂ ಸೂಚಿಸುತ್ತದೆ. ಮಹಾಭಾರತದ ಯುದ್ಧಾನಂತರ ವಾಯವ್ಯ ಮತ್ತು ಈಶಾನ್ಯ ಭಾಗಗಳಲ್ಲಿ ಗಣರಾಜ್ಯಗಳೂ ಮಧ್ಯಭಾಗದಲ್ಲಿ ರಾಜಪ್ರಧಾನ ರಾಜ್ಯಗಳೂ ಅಭಿವೃದ್ಧಿಯಾದಂತೆ ತೋರುವುದು.

ಈ ರಾಜ್ಯಗಳ ನಡುವೆ ಕ್ರಮೇಣ ವೈಷಮ್ಯ ತಲೆದೋರಿತು. ರಾಜ್ಯವಿಸ್ತರಣಾಕಾಂಕ್ಷೆ ಇದರ ಕಾರಣ. ಸಹಜವಾಗಿಯೇ ಬಲಿಷ್ಠ ರಾಜ್ಯಗಳು ಸಣ್ಣ ರಾಜ್ಯಗಳನ್ನು ಒತ್ತರಿಸಿ, ಅವುಗಳನ್ನು ಸ್ವಾಧೀನಪಡಿಸಿಕೊಂಡು ತಮ್ಮ ರಾಜ್ಯವನ್ನು ವಿಸ್ತರಿಸುತ್ತಿದ್ದವು. ಸಾಹಿತ್ಯಕೃತಿಗಳಲ್ಲಿ ಈ ರಾಜ್ಯಗಳ ಉಲ್ಲೇಖವಿದ್ದರೂ ಅವುಗಳ ವಿವರವಾದ ಚರಿತ್ರೆ ದೊರೆಯದು. ಗೌತಮನ ಕಾಲದ ವೇಳೆಗಾಗಲೇ ಕಾಶಿ, ಕೋಸಲ, ಅವಂತಿ ಮತ್ತು ಮಗಧರಾಜ್ಯಗಳು ಮಾತ್ರ ಪ್ರಬಲವಾಗಿದ್ದು ಕಾಶಿ ಕೋಸಲದ ವಿರುದ್ಧ ಹೆಣಗಿ ಕೊನೆಗೊಮ್ಮೆ, ಆದರೊಡನೆ ವಿಲೀನಗೊಂಡಿತು. ಪುರಾಣಗಳಲ್ಲಿ ಕೌರವ ರಾಜ್ಯವೆಂದಿರುವುದನ್ನೇ ಬೌದ್ಧಗ್ರಂಥಗಳಲ್ಲಿ ಕುರುರಾಜ್ಯವೆನ್ನಲಾಗಿದೆ. ಸರಸ್ವತೀ ನದಿಯಿಂದ ಗಂಗೆಯವರೆಗಿನ ಈ ರಾಜ್ಯ ಥಾನೇಶ್ವರ ದೆಹಲಿ ಮುಂತಾದ ನಗರಗಳನ್ನೊಳಗೊಂಡಿತ್ತು. ಇದರ ರಾಜಧಾನಿ ಹಸ್ತಿನಪುರ. ಮಹಾಭಾರತದ ನಂತರ ಶ್ರೀಕೃಷ್ಣನ ಮರಣದೊಡನೆ ಕಲಿಯುಗ ಆರಂಭವಾಯಿತೆಂಬ ಪ್ರತೀತಿ ಇದೆ. ಪರೀಕ್ಷಿತ ಆಗ ಆಳತೊಡಗಿದ ಅರಸ, ಇವನನ್ನು ಗಾಂಧಾರದ ತಕ್ಷಶಿಲೆಯಲ್ಲಿ ಆಳುತ್ತಿದ್ದ ತಕ್ಷಕ ಮಹಾರಾಜನು ಕೊಂದನು. ನಂತರ ಆಳಿದ ಜನಮೇಜಯನು ತಕ್ಷಕನ ಮೇಲಿನ ಸೇಡನ್ನು ತೀರಿಸಿ ನಾಗವಂಶವನ್ನೇ ನಾಶಗೊಳಿಸಲು ಯತ್ನಿಸಿದನು. ನಾಲ್ಕು ತಲೆಮಾರಿನ ಬಳಿಕ ಉಂಟಾದ ಜಲಪ್ರಳಯದಲ್ಲಿ ಹಸ್ತಿನಪುರ ಕೊಚ್ಚಿಹೋಯಿತು. ಕುರು ಜನರು ವತ್ಸದೇಶಕ್ಕೆ ವಲಸೆಹೋದರು. ಕೌಶಾಂಬಿ ಅವರ ರಾಜಧಾನಿ. ಇಲ್ಲಿಂದ ಆಳತೊಡಗಿದ ಅರಸರಲ್ಲಿ ಭಾಸಕವಿಯ 'ಸ್ವಪ್ನವಾಸವದತ್ತಾ'ದ ನಾಯಕನಾದ ಉದಯನ ಪ್ರಮುಖ. ಈತನು ಅವಂತಿಯ ಚಂಡಪ್ರದ್ಯೋತಮಹಾಸೇನನ ಮತ್ತು ಮಗಧರಾಜ್ಯದ ಅಜಾತಶತ್ರುವಿನ ಸಮಕಾಲೀನ.

ಕೋಸಲ ಈಗಿನ ಅಯೋಧ್ಯಾಜಿಲ್ಲೆಯನ್ನೊಳಗೊಂಡಿತ್ತು. ಅಯೋಧ್ಯ, ಸಾಕೇತ ಮತ್ತು ಶ್ರಾವಸ್ತಿ ನಗರಗಳು ಕ್ರಮವಾಗಿ ಇದರ ರಾಜಧಾನಿಗಳಾಗಿ ಮೆರೆದುವು. ಇಕ್ಷ್ವಾಕು ಇದರ ಮೊದಲ ಅರಸ. ಬುದ್ಧನ ಕಾಲದಲ್ಲಿ ಪ್ರಸೇನಜಿತನು ಕೋಸಲದ ಅರಸನಾಗಿದ್ದ. ತಂಗಿಯಾದ ಕೋಸಲದೇವಿಯನ್ನು ಮಗಧದ ಬಿಂಬಿಸಾರನಿಗೆ ಮದುವೆ ಮಾಡಿಕೊಟ್ಟಾಗ ಕಾಶಿಯನ್ನು ಅಳಿಯನಿಗೆ ಬಳುವಳಿಯಾಗಿ ಕೊಟ್ಟನು. ವಿದೇಹರಾಜ್ಯ ಖ್ಯಾತಿಹೊಂದಿದ್ದು ಬ್ರಹ್ಮಜ್ಞಾನಿಯೂ ವೇದಾಂತಿಯೂ ಆಗಿದ್ದ ಜನಕಮಹಾರಾಜನಿಂದ. ಈಗ ನೇಪಾಲದ ಸರಹದ್ದಿನಲ್ಲಿರುವ ಜನಕಪುರ ಅಂದಿನ ಮಿಥಿಲಾರಾಜ್ಯದ ರಾಜಧಾನಿ. ಬುದ್ಧನ ಕಾಲದಲ್ಲಿ ವಿದೇಹವು ವ್ರಿಜ್ಜ ಎಂಬ ಹೆಸರಿನ ಖ್ಯಾತಿವೆತ್ತ ಗಣರಾಜ್ಯವಾಗಿದ್ದಿತು. ಅವಂತಿ ರಾಜಕೀಯವಾಗಿ ವಾಣಿಜ್ಯ ದೃಷ್ಟಿಯಿಂದ ಪ್ರಮುಖವಾಗಿತ್ತು. ಬೌದ್ಧ, ಜೈನ ಗ್ರಂಥಗಳಲ್ಲಿ ಈ ದೇಶವನ್ನು ವಿಂಧ್ಯಪರ್ವತ ಇಬ್ಭಾಗ ಮಾಡಿತ್ತೆಂದೂ ಉತ್ತರಕ್ಕೆ ಉಜ್ಜಯಿನಿ, ದಕ್ಷಿಣಕ್ಕೆ ಮಹಿಷ್ಮತೀ ನಗರಗಳು ರಾಜಧಾನಿಗಳಾಗಿದ್ದುವೆಂದೂ ಹೇಳಿದೆ. ಅವಂತಿಯ ಅರಸನಾದ ಚಂಡಪ್ರದ್ಯೋತನನ್ನು ಕ್ರೂರಿ ಎಂದೂ ನಯವರ್ಜಿತನೆಂದೂ ವರ್ಣಿಸಿದೆ. ಇವನ ಮಗಳು ವಾಸವದತ್ತೆ ವತ್ಸದೇಶದ ಉದಯನನನ್ನು ಲಗ್ನವಾದಳು. ಉದಯನನ ನಂತರ ವತ್ಸ ಅವಂತಿಯಲ್ಲಿ ಲೀನವಾಯಿತು. ಪಾಂಚಾಲ (ರಾಜಧಾನಿ–

ಅಹಿಚ್ಛತ್ರ) ಮತ್ತು ಶೂರಸೇನ (ರಾಜಧಾನಿ–ಮಥುರ) ಅಂದು ಖ್ಯಾತಿವೆತ್ತ ಇತರ ರಾಜ್ಯಗಳು. ಆದರೆ ಕ್ರಮೇಣ ಇವುಗಳಲ್ಲಿ ಅಂತಃಕಲಹಗಳೂ ಯುದ್ಧಗಳೂ ಉಂಟಾಗಿ, ಕೊನೆಗೆ ಇವುಗಳೆಲ್ಲವನ್ನೂ ಮೀರಿಸಿ ನಿಂತು ಸಾಮ್ರಾಜ್ಯವಾಗಿ ಮೆರೆದುದು ಮಗಧ.

ಇಲ್ಲಿ ಒಂದು ವಿಷಯವನ್ನು ಗಮನಿಸಬೇಕು. ಆನುವಂಶಿಕ ರಾಜತ್ವವನ್ನು ಅವಲಂಬಿಸಿದ ಪೂರ್ವೋಕ್ತ ರಾಜ್ಯಗಳೆಲ್ಲ ಹೆಚ್ಚಾಗಿ ಗಂಗಾ-ಯಮುನಾ ಬಯಲು ಪ್ರದೇಶಕ್ಕೆ ಸೀಮಿತವಾಗಿತ್ತು. ಗಣರಾಜ್ಯಗಳೂ ಸಣ್ಣ ಜನಪದಗಳೂ ಹಿಮಾಲಯದ ತಪ್ಪಲು ಪ್ರದೇಶಗಳಲ್ಲಿ ವಾಯುವ್ಯಭಾಗದ ಗುಡ್ಡಗಾಡುಗಳಲ್ಲಿ ತಮ್ಮ ಅಸ್ತಿತ್ವವನ್ನುಳಿಸಿಕೊಂಡಿದ್ದವು. ಕ್ರಿ.ಶ. ೪ನೆಯ ಶತಮಾನದಲ್ಲಿಯೂ ಈ ಕೆಲವು ಗಣರಾಜ್ಯಗಳಿದ್ದುವೆಂದು ತಿಳಿದಿದೆ.[೫] ಉಳಿದ ಭಾಗಗಳಲ್ಲಿ ರಾಜ್ಯಗಳಿದ್ದು ಅವುಗಳಲ್ಲಿ ಸ್ಪರ್ಧೆ ಏರ್ಪಟ್ಟುವೆಂದು ಮೇಲೆ ಹೇಳಿದೆ. ಈ ಸ್ಪರ್ಧೆಗೆ ಒಂದು ಮುಖ್ಯಕಾರಣ ದೇಶದ ಆರ್ಥಿಕಾಭಿವೃದ್ಧಿ. ಅರಣ್ಯಗಳನ್ನು ಸವರಿ ಫಲವತ್ತಾದ ಪ್ರದೇಶದಲ್ಲಿ ಹೆಚ್ಚಿನ ಫಸಲನ್ನು ಬೆಳೆಯಲಾಯಿತು. ಇದರ ಮಾರಾಟಕ್ಕೂ ಸಾಗಾಣಿಕೆಗೂ ನದಿಗಳು ಸಹಾಯಕವಾದುವು. ಎಂತಲೇ ನದೀತೀರಗಳಲ್ಲಿ ಹೊಸ ನಗರಗಳು, ಶ್ರಾವಸ್ತಿ, ಚಂಪ, ರಾಜಗೃಹ, ಅಯೋಧ್ಯೆ, ಕೌಶಾಂಬಿ, ಕಾಶಿ ಇತ್ಯಾದಿಗಳು ಹುಟ್ಟಿಕೊಂಡವು. ಕೈಗಾರಿಕೆಗಳು ಕೇಂದ್ರೀಕೃತಗೊಂಡುವು. ಇದರಿಂದ ಸಾರಿಗೆ ಮುಂತಾದ ವಿಶಿಷ್ಟ ಸೌಲಭ್ಯಗಳನ್ನು ಮಾಡಿಕೊಳ್ಳಲು ಸಾಧ್ಯವಾಯಿತು. ಜಮೀನುದಾರರಾದ ಕ್ಷತ್ರಿಯರು ನಗರಗಳಲ್ಲಿ ನೆಲಸಿದರು. ಭೂಮಿಯ ಸಾಗುವಳಿಯನ್ನು ಶೂದ್ರರ ಮೂಲಕ ಮಾಡಿಸಿ, ಉತ್ಪತ್ತಿಯನ್ನು ವಾಣಿಜ್ಯದಲ್ಲಿ ತೊಡಗಿಸಿದರು. ವೈಶಾಲಿ, ಉಜ್ಜಯಿನ್ನಿ ತಕ್ಷಶಿಲ ಮುಂತಾದ ನಗರಗಳು ಪರದೇಶದೊಡನೆ ವ್ಯಾಪಾರ–ವ್ಯವಹಾರಗಳಿಗೂ ಕೇಂದ್ರಗಳೆನಿಸಿದುವು. ಕಡಲಕರೆಯ ಬರುಕಚ್ಚ ಉತ್ತಮವಾದ ಬಂದರನ್ನು ಹೊಂದಿದ್ದು ಆರ್ಥಿಕವಾಗಿ ಪ್ರಾಮುಖ್ಯವನ್ನು ಪಡೆಯಿತು. ಗಣರಾಜ್ಯಗಳಿದ್ದಲ್ಲಿ ವಿಚಾರಸ್ವಾತಂತ್ರ್ಯವೂ ಇದ್ದಿತು. ಸಾಂಪ್ರದಾಯಿಕವಲ್ಲದ ದೃಷ್ಟಿಕೋನಗಳನ್ನೂ ವಿಚಾರಗಳನ್ನೂ ಸ್ವಾಗತಿಸಿದುವು; ಸ್ವೀಕರಿಸದಿದ್ದರೂ ತಿರಸ್ಕರಿಸಲಿಲ್ಲ. ಎಂತಲೇ ಜೈನ ಮತ್ತು ಬೌದ್ಧಮತಸ್ಥಾಪಕರು, ಆ ಧರ್ಮಗಳ ಹೆಚ್ಚಿನ ಅನುಯಾಯಿಗಳು, ಈ ಪ್ರದೇಶಗಳಿಗೆ ಸೇರಿದವರಾಗಿದ್ದರು. ಅವರ ಕಾರ್ಯಕ್ಷೇತ್ರ ಇಲ್ಲಿ ಹೆಚ್ಚು ವ್ಯಾಪಕವಾಗಿದ್ದಿತು. ನಂತರ ಭಾರತಕ್ಕೆ ಬಂದ ಗ್ರೀಕ್, ಶಕ, ಕುಶಾನ, ಹೂಣ ಜನಾಂಗದವರು ಸಹ ಇಲ್ಲಿ ನೆಲಸಿದರು. ಭಾರತೀಯ ಸಂಸ್ಕೃತಿಯೊಡನೆ ಮಿಳಿತರಾದರು. ರಾಜತ್ವವಿದ್ದ ರಾಜ್ಯಗಳಲ್ಲಿ ರಾಜ ತನ್ನ ಅಧಿಕಾರಕ್ಕೆ ಚ್ಯುತಿಬರಬಹುದಾದ ಯಾವುದೇ ವಿಚಾರವ್ಯವಹಾರಕ್ಕೂ ವಿರುದ್ಧವಾಗಿದ್ದುದು ಸಹಜ. ಮಗಧ ಸಾಮ್ರಾಜ್ಯದ ಅಜಾತಶತ್ರು ಬುದ್ಧನ ಸಮಕಾಲೀನ. ಆರಂಭದಲ್ಲಿ ಆತನು ಬುದ್ಧನ ವೈರಿಯಂತೆ ನಡೆದುಕೊಂಡು ಸಾಮ್ರಾಜ್ಯದಾಹ ಹೊಂದಿದ್ದ. ಆತ ಲಿಚ್ಛವಿ ಗಣರಾಜ್ಯದ ವಿರುದ್ಧ ತೀವ್ರವಾಗಿ ದೀರ್ಘಕಾಲ ಕಾದಬೇಕಾಯಿತು ಲಿಚ್ಛವಿ ಜನ ಒಗ್ಗಟ್ಟನಿಂದಿರುವವರೆಗೂ ಅವರನ್ನು ಸೋಲಿಸುವುದು ಅಸಾಧ್ಯವೆಂದು ಬುದ್ಧ ಆ ಜನರಿಗೆ ತಿಳಿಸಿದ್ದ. ಎಂತಲೇ

ಭೇದೋಪಾಯವನ್ನು ಅಜಾತಶತ್ರು ಉಪಯೋಗಿಸಿ ಕೊನೆಗೆ ಅವರನ್ನು ಗೆದ್ದ. ಆ ಬಳಿಕ ಅಜಾತಶತ್ರು ಬುದ್ಧನ ಪ್ರಮುಖ ಅನುಯಾಯಿಯಾದವನೆಂಬ ಮಾತು ಬೇರೆ.

ಮಗಧರಾಜ್ಯ ಮೂಲತಃ ಈಗಿನ ಬಿಹಾರರಾಜ್ಯದ ಗಯ ಮತ್ತು ಪಾಟ್ನ ಜಿಲ್ಲೆಗಳನ್ನೊಳಗೊಂಡಿದ್ದಿತು. ಮಹಾಭಾರತಯುದ್ಧಕ್ಕೂ ಮೊದಲು ಇಲ್ಲಿ ಬಾರ್ಹದ್ರಥ ವಂಶದ ಅರಸರು ಆಳುತ್ತಿದ್ದರು. ಬೃಹದ್ರಥ ಮೂಲಪುರುಷ. ಈತನ ಮಗ ಜರಾಸಂಧ, ಮೊಮ್ಮಗ ಸಹದೇವ. ಸಹದೇವನು ಮಹಾಭಾರತ ಯುದ್ಧದಲ್ಲಿ ಮಡಿದನು. ಇವರ ಮೊದಲ ರಾಜಧಾನಿ ಗಿರಿವ್ರಜ. ಇದರ ಸುತ್ತಲೂ ಸಂತರದ ರಾಜಗೃಹ (ಪಾಟ್ನ) ಬೆಳೆಯಿತು. ಈ ವಂಶದ ಅರಸರು ಕ್ರಿ.ಪೂ. ೬ನೆಯ ಶತಮಾನದವರೆಗೂ ಆಳಿದರು. ಕೊನೆಯ ಅರಸ ರಿಪುಂಜಯ. ನಂತರ ಹರ್ಯಂಕ ಕುಲದ ಬಿಂಬಿಸಾರ ಪಟ್ಟಕ್ಕೆ ಬಂದ. ಈತನು ರಿಪುಂಜಯನ ಮಂತ್ರಿಯಾಗಿದ್ದ ಬಟ್ಟಿಯನ ಮಗ. ಅರಸನನ್ನು ಕೊಂದು ಸ್ವತಃ ಆಳತೊಡಗಿದ ಭಟ್ಟಿಯ ಬಿಂಬಿಸಾರನ ೧೫ನೆಯ ವಯಸ್ಸಿನಲ್ಲಿ ಆತನನ್ನು ಪಟ್ಟಕ್ಕೇರಿಸಿದ. ಕ್ರಿ.ಪೂ. ೫೪೫–೪೪ರಲ್ಲಿ ಪಟ್ಟಕ್ಕೆ ಬಂದ ಬಿಂಬಿಸಾರ ತನ್ನ ರಾಜ್ಯವನ್ನು ವಿಸ್ತರಿಸಲು ಯುದ್ಧನೀತಿಗಿಂತ ಹೆಚ್ಚಾಗಿ ವಿವಾಹ ಸಂಬಂಧ ನೀತಿಯನ್ನನುಸರಿಸಿ ಆ ಮೂಲಕ ಸಮಕಾಲೀನರ ಪ್ರೀತಿಪಾತ್ರನಾದ. ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡ. ಅಂಗದೇಶದ ಬ್ರಹ್ಮದತ್ತ ಈತನ ತಂದೆಯನ್ನು ಸೋಲಿಸಿದ್ದ. ಆ ಸೇಡನ್ನು ತೀರಿಸಲು ಬಿಂಬಿಸಾರ ಆವನ ವಿರುದ್ಧ ಮಾತ್ರ ದಂಡೆತ್ತಿ ಅಂಗರಾಜ್ಯವನ್ನು ವಶಪಡಿಸಿಕೊಂಡ. ಅದರ ರಾಜಧಾನಿ ಚಂಪ. ಈ ನಗರ ಖ್ಯಾತಿವೆತ್ತ ವ್ಯಾಪಾರ ಕೇಂದ್ರವಾಗಿದ್ದುದು ಬಿಂಬಿಸಾರನಿಗೆ ಹೆಚ್ಚು ಅನುಕೂಲವಾಯಿತು. ಆದರೆ ಉಳಿದಂತೆ ಆತನದು ಸಮಕಾಲೀನರೊಡನೆ ರಕ್ತಸಂಬಂಧನೀತಿ. ಕೋಸಲದ ಕುಮಾರಿಯನ್ನು ಲಗ್ನವಾಗಿ ಕಾಶಿಯನ್ನು ಬಳುವಳಿಯಾಗಿ ಪಡೆದನು. ಅಂತೆಯೇ ವೈಶಾಲೀನಗರದ ಲಿಚ್ಛವಿ ಕುಲದ ಚೇತಕನ ಮಗಳು ಚೆಲ್ಲನಾದೇವಿ, ಪಂಜಾಬಿನ ಮದ್ರದೇಶದ ರಾಜಕುಮಾರಿಯರಾದ ಕ್ಷೇಮ ಮತ್ತು ವೈದೇಹಿ, ವಾಸವಿ ಇವರು ಇತರ ಪತ್ನಿಯರು. ಅವಂತಿಯ ಚಂಡಪ್ರದ್ಯೋತನು ಗಾಂಧಾರದ ಪುಕ್ಕುಸಾತಿ (ಪುಷ್ಕರಸಾರಿ)ಯ ಮೇಲೇರಿ ಹೋದಾಗ ಬಿಂಬಿಸಾರನ ನೆರವನ್ನು ಆತನು ಬಯಸಿದನು. ಆದರೆ ಗಾಂಧಾರದ ರಾಜದೂತರನ್ನು ಗೌರವಿಸಿದರೂ ನೆರೆಯ ಅವಂತಿಯ ಅರಸನೊಡನೆ ದ್ವೇಷಬೆಳಸಲಿಚ್ಛಿಸದೆ ತಟಸ್ಥ ನೀತಿಯನ್ನು ಅವಲಂಬಿಸಿದನು. ಈ ನೀತಿ ಮಗಧರಾಜ್ಯದ ಹಿರಿಮೆಗೆ ಪೋಷಕವಾಯಿತು. ಆಂತರಿಕವಾಗಿ ರಾಜ್ಯವನ್ನು ಬಲಗೊಳಿಸಲೆಂದು ಬಿಂಬಿಸಾರನು ರಾಜ್ಯವನ್ನು ವಿಭಾಗಗಳಾಗಿ ವಿಂಗಡಿಸಿ ಅವುಗಳಿಗೆ ಆಡಳಿತಸ್ವಾತಂತ್ರ್ಯವಿತ್ತನು. ಅವನ ರಾಜ್ಯದ ಗ್ರಾಮಗಳು ತಮ್ಮದೇ ಆದ ಸಭೆಗಳನ್ನು ಪಡೆದಿದ್ದುವು. ಗ್ರಾಮಕ ಅಂತಹ ಸಭೆಯ ನಾಯಕ. ಈ ಕ್ರಮಗಳಿಂದ ಬಿಂಬಿಸಾರ ಪ್ರಜೆಗಳ ಪ್ರೀತಿಯನ್ನು ಗಳಿಸಿದನು. ಗೌತಮ ಬುದ್ಧನನ್ನು ಆದರದಿಂದ ಕಂಡು ಆಶ್ರಯವಿತ್ತನು. ಬುದ್ಧಸಂಘಕ್ಕೆ ಕರಂದವೇಣುವನವನ್ನು ದತ್ತಿಯಾಗಿ ನೀಡಿದನು. ಬೌದ್ಧಸಂನ್ಯಾಸಿಗಳಿಂದ ಪ್ರಯಾಣ ಶುಲ್ಕ ಪಡೆಯಬಾರದೆಂದು

ಆಣತಿಮಾಡಿದ್ದನು. ಅದೇ ರೀತಿ ಇತರ ಜೈನ ಮುಂತಾದ ಧರ್ಮಗಳನ್ನೂ ಗೌರವಿಸಿದನು. ಇದರ ಪರಿಣಾಮವಾಗಿ ಈತನು ಮಡಿದರೂ ಈತ ಬೌದ್ಧಮತಾವಲಂಬಿಯೆಂದು ಕೆಲವರೂ ಜೈನಮತಾವಲಂಬಿಯೆಂದು ಇತರರೂ ಸಾರಿಕೊಂಡರು.[೬]

ಬಿಂಬಿಸಾರನ ಮಗ ಅಜಾತಶತ್ರು; ಈತ ಮಹತ್ವಾಕಾಂಕ್ಷಿ. ಸಾಮ್ರಾಜ್ಯಸ್ಥಾಪನೆಯಲ್ಲಿ ತಂದೆ ಆಚರಿಸುತ್ತಿದ್ದ ನೀತಿಯಿಂದ ಅತೃಪ್ತಗೊಂಡು, ಆತನನ್ನು ವಧಿಸಿ ಸಿಂಹಾಸನವನ್ನೇರಿದನೆಂದು ಆಪಾದಿಸಲಾಗಿದೆ. ಈತನ ಈ ಕೃತ್ಯದಿಂದ ಹೇಸಿದ ಸೋದರಮಾವನಾದ ಪ್ರಸೇನಜಿತ್ ಕಾಶೀನಗರವನ್ನು ಹಿಂದಕ್ಕೆ ಪಡೆದನು. ಪರಿಣಾಮ ಎರಡೂ ರಾಜ್ಯಗಳ ನಡುವೆ ದೀರ್ಘವಾದ ಕದನ. ಕೊನೆಗೊಮ್ಮೆ ಪ್ರಸೇನಜಿತ್ ತನ್ನ ಮಗಳಾದ ವಜಿರಾಳನ್ನು ಅಜಾತಶತ್ರುವಿಗೆ ಮದುವೆಮಾಡಿಕೊಟ್ಟು ಕಾಶಿಯನ್ನು ಹಿಂತಿರುಗಿಸುವುದರೊಂದಿಗೆ ಇದು ಕೊನೆಗೊಂಡಿತು. ಆದರೆ ಇದಕ್ಕೂ ತೀವ್ರವಾದ ಕದನ ಅಜಾತಶತ್ರು ಮತ್ತು ಲಿಚ್ಛವಿಗಣರಾಜ್ಯದ ವಿರುದ್ಧ ನಡೆಯಿತು. ಜೈನ ಹಾಗೂ ಬೌದ್ಧ ಸಾಹಿತ್ಯಗಳಲ್ಲಿ ಈ ಕದನಕ್ಕೆ ಕಾರಣವನ್ನು ಬೇರೆಬೇರೆಯಾಗಿ ಕೊಟ್ಟಿದೆ. ಆದರೆ ವಾಸ್ತವಿಕವಾದ ಕಾರಣ ಅಜಾತಶತ್ರುವಿನ ಸಾಮ್ರಾಜ್ಯದಾಹ. ಆದರೆ ಲಿಚ್ಛವಿಗಣರಾಜ್ಯಗಳ ಐಕ್ಯವನ್ನು ಮುರಿಯದೆ ಅವರನ್ನು ಸೋಲಿಸುವುದು ಅಸಾಧ್ಯವಾಗಿತ್ತು. ಇದಕ್ಕಾಗಿ ಈತನ ಮಂತ್ರಿಗಳಾದ ಸುನೀಥ ಮತ್ತು ವಸ್ಸಕಾರರು ಉಪಲಾಪ ಮತ್ತು ಮಿತ್ರಭೇದ ಎಂಬ ಉಪಾಯಗಳನ್ನು ಅವಲಂಬಿಸಿದರು. ಸೈನ್ಯವನ್ನು ಬಲಗೊಳಿಸಿ ಪಾಟಲಿಗ್ರಾಮದ ಸುತ್ತಲೂ ಅಭೇದ್ಯವಾದ ಕೋಟೆಯನ್ನು ಕಟ್ಟಿಸಿ, ಕೊನೆಗೊಮ್ಮೆ ಅಜಾತಶತ್ರು ಜಯಶಾಲಿಯಾದನು. ಕ್ರಿ.ಪೂ. ೪೮೪ರಲ್ಲಿ ಆರಂಭವಾದ ಈ ಹೋರಾಟ ಕ್ರಿ.ಪೂ. ೪೬೮ರ ವೇಳೆಗೆ ಕೊನೆಗೊಂಡಿತು. ೬-೭ ವರ್ಷಗಳಲ್ಲಿ ಅಜಾತಶತ್ರು ಮಡಿದನು (ಕ್ರಿ.ಪೂ. ೪೬೧).

ತನ್ನ ಆಸೆಯನ್ನು ಬಹಳಮಟ್ಟಿಗೆ ನೆರವೇರಿಸಿಕೊಂಡ ಅಜಾತಶತ್ರು ಮಗಧ ಸಾಮ್ರಾಜ್ಯದ ವಿಸ್ತಾರಕ್ಕೆ ಕಾರಣನಾದನು. ಅಸಹನೆಯಿಂದ ತಂದೆಯನ್ನು ಹತ್ಯೆ ಮಾಡಿದ ಆತನು ನಂತರ ಪಶ್ಚಾತ್ತಾಪಪಟ್ಟನು. ಬುದ್ಧನಿಗೆ ಶರಣಾದನು; ಬೌದ್ಧಮತವನ್ನು ಪುರಸ್ಕರಿಸಿದನು. ರಾಜಧಾನಿಯ ಸುತ್ತಲೂ ಬೌದ್ಧಭಿಕ್ಷುಗಳಿಗಾಗಿ ವಿಹಾರಗಳನ್ನು ವಿಸ್ತರಿಸಿದನು, ಚೈತ್ಯಾಲಯಗಳನ್ನು ಕಟ್ಟಿದನು. ಈತನ ಕಾಲದಲ್ಲಿ ಮಹಾವೀರ ಮತ್ತು ಬುದ್ಧರು ನಿರ್ವಾಣ ಹೊಂದಿದರು. ಬುದ್ಧನ ನಿಧನಾನಂತರ, ಅವನ ತತ್ತ್ವಗಳನ್ನೂ ಸಾಹಿತ್ಯವನ್ನೂ ಸಂಗ್ರಹಿಸಿ ಮೊದಲಬಾರಿಗೆ ರಾಜಗೃಹದಲ್ಲಿ ಬೌದ್ಧಮಹಾಸಮ್ಮೇಲನವನ್ನು ನಡಸಿದನು. ಅಜಾತಶತ್ರುವಿನ ನಂತರ ಆಳಿದವರು ದುರ್ಬಲರು. ಶಿಶುನಾಗನ ಕಾಲದಲ್ಲಿ ಅವಂತಿಯೂ ಮಗಧಸಾಮ್ರಾಜ್ಯದಲ್ಲಿ ಲೀನಗೊಳಿಸಲ್ಪಟ್ಟಿತು. ಈತನ ಮಗ ಕಾಲಾಶೋಕ ಅಥವಾ ಕಾಕವರ್ಣನು ವೈಶಾಲಿಯಲ್ಲಿ ಎರಡನೆಯ ಬೌದ್ಧಮಹಾಸಮ್ಮೇಲನವನ್ನು ನಡಸಿದನು.

ಹರ್ಯಂಕವಂಶದ ಆಳಿಕೆ ಕ್ರಿ.ಪೂ. ೩೬೪ರಲ್ಲಿ ಮುಕ್ತಾಯಗೊಂಡಿತು. ಹೀನ

ಕುಲಕ್ಕೆ ಸೇರಿದವನೆನ್ನಲಾದ ನಂದವಂಶದ ಮಹಾಪದ್ಮನು ಸಿಂಹಾಸನವನ್ನು ಆಕ್ರಮಿಸಿದನು. ಕ್ಷತ್ರಿಯ ಅರಸರನ್ನು ದಮನಮಾಡಿದ ಖ್ಯಾತಿ ಈತನದು. ಕ್ಷತ್ರಿಯ ಕುಲಾಂತಕನಾದ ಪರಶುರಾಮನ ಅವತಾರವೆಂದು ಈತನನ್ನು ಇತಿಹಾಸಕಾರರು ವರ್ಣಿಸಿದ್ದಾರೆ. ಇವನ ರಾಜ್ಯ ಉತ್ತರಭಾರತವನ್ನೆಲ್ಲ ವ್ಯಾಪಿಸಿ, ದಕ್ಷಿಣದಲ್ಲಿ ಗೋದಾವರಿಯವರೆಗೆ ಹಬ್ಬಿತ್ತು. ಕಲಿಂಗ ಸಹ ಇವನ ವಶವಾಯಿತೆಂದು ಊಹಿಸಲಾಗಿದೆ. ಬಹುಶಃ ಕರ್ಣಾಟಕದ ಕೆಲವು ಭಾಗಗಳು ಸಹ ಇವನ ಅಧೀನಕ್ಕೊಳಪಟ್ಟಂತೆ ತೋರುತ್ತದೆ. ಹಿರಿದಾದ ಸೈನ್ಯವೊಂದನ್ನು ಇದಕ್ಕಾಗಿ ಸಿದ್ಧಗೊಳಿಸಲಾಗಿತ್ತು. ಅರಸ ಪ್ರಜಾನುರಾಗಿಯಾಗಿರಲಿಲ್ಲ. ಜನರ ಮೇಲೆ ಕರಭಾರ ಹೇರಿ ಅಪಾರ ಸಂಪತ್ತನ್ನು ಗಳಿಸಿ ಜನರ ದ್ವೇಷಕ್ಕೆ ಗುರಿಯಾದ. ಸಮಯ ಸಾಧಿಸಿ ಮೌರ್ಯಕುಲದ ಚಂದ್ರಗುಪ್ತ ನಂದನನ್ನು ಸೋಲಿಸಿ ಮಗಧ ಸಾಮ್ರಾಜ್ಯಾಧಿಪತಿಯಾದ (ಕ್ರಿ. ಪೂ. ೩೨೬–೨೫).

ಇದೇ ಸಮಯದಲ್ಲಿ ವಾಯವ್ಯ ಭಾರತದಲ್ಲಿ ಮಹತ್ತ್ವದ ಘಟನೆಯೊಂದು ಜರುಗಿತು. ಅದು ಮೆಸಿಡೋನಿಯದ ಅಲೆಕ್ಸಾಂಡರನ ದಂಡಯಾತ್ರೆ. ಕ್ರಿ. ಪೂ. ೬ನೆಯ ಶತಮಾನದಲ್ಲಿಯೇ (ಕ್ರಿ. ಪೂ. ಸು. ೫೩೦) ಪರ್ಷಿಯಾದೇಶದ ಚಕ್ರವರ್ತಿ ಸೈರಸ್ಸನು ಭಾರತದ ಭಾಗವಾಗಿದ್ದ ಈಗಿನ ಅಫ್ಘನಿಸ್ಥಾನ ಮತ್ತು ಸಿಂಧ್ ಪ್ರಾಂತದ ಮೇಲೆ ದಂಡೆತ್ತಿದನು. ಗಾಂಧಾರ ಮುಂತಾದ ರಾಜ್ಯಗಳೊಡನೆ ವ್ಯಾಪಾರ ಸಂಬಂಧಗಳೇರ್ಪಟ್ಟು ಭಾರತದ ವಿಪುಲೈಶ್ವರ್ಯದ ಪರಿಚಯ ಹೊರದೇಶದವರಿಗಿತ್ತು. ಸೈರಸ್ಸನು ಕಾಬೂಲ್ ಮತ್ತು ಪೆಷಾವರ್‌ವರೆಗೂ ತನ್ನ ಸೈನ್ಯವನ್ನು ತಂದಿದ್ದನು. ಅವನ ಉತ್ತರಾಧಿಕಾರಿಯಾದ ಕ್ಯಾಂಬೈಸಿಸ್ (Cambyses)ನ ಮಗ ದರ್ಯವುಷ (Darius)ನು ಉತ್ತರ ಪಂಜಾಬನ್ನೊಳಗೊಂಡ ಸಿಂಧುದೇಶವನ್ನಾಕ್ರಮಿಸಿದನು. ಅವನ ಬೆಹಿಸ್ತುನ್ ಪೆರ್ಸಿಪೊಲಿಸ್ ಮತ್ತು ನಕ್-ಇ-ರುಸ್ತುಮ್ ಶಾಸನಗಳಲ್ಲಿ ಅವನ ಅಧೀನದಲ್ಲಿದ್ದ ೨೫ ಪ್ರಾಂತಗಳ ಪೈಕಿ ಗದಾರ (ಗಾಂಧಾರ) ಮತ್ತು ಹಿದು (ಹಿಂದು)ಗಳನ್ನು ಹೆಸರಿಸಲಾಗಿದೆ. ಸಿಂಧು ಪ್ರಾಂತದ ಒಂದು ಕೋಟಿ ರೂಪಾಯಿಗಳಿಗೂ ಮಿಕ್ಕಿದ ಚಿನ್ನದ ಹುಡಿ ಅವನ ಬೊಕ್ಕಸವನ್ನು ತುಂಬುತ್ತಿತ್ತು. ಈ ಸಂಬಂಧಗಳಿಂದ ಭಾರತವನ್ನು ಕುರಿತು ಅನೇಕ ವಿಷಯಗಳು ಇತರ ದೇಶಗಳಿಗೂ ಹಬ್ಬಿತು. ಕ್ರಿಪೂ. ೩೩೦ರಲ್ಲಿ ನಡೆದ ಗುಗೆಮಾಲಾ ಕದನದಲ್ಲಿ ಮೆಸಿಡೋನಿಯದ ಆಲೆಕ್ಸಾಂಡರನು ಪರ್ಷಿಯಾದೇಶದ ಅರಸನನ್ನು ಸೋಲಿಸಿದಾಗ ಅಲ್ಲಿಂದ ಭಾರತಕ್ಕೂ ಮುನ್ನಡೆವ ಆಸೆಯನ್ನು ತಾಳಿದನು.

ಇಡೀ ಗ್ರೀಸ್‌ದೇಶವನ್ನು ಸ್ವಾಧೀನಮಾಡಿಕೊಂಡು, ಪರ್ಷಿಯವನ್ನು ಗೆದ್ದ ಅಲೆಕ್ಸಾಂಡರನಿಗೆ ಅಂದಿನ ಪೃಥ್ವಿಯನ್ನೆಲ್ಲ ಜಯಿಸಬೇಕೆಂಬ ಹೆಬ್ಬಯಕೆ ಇತ್ತು. ಕೆಲಕಾಲ ಪರ್ಷಿಯದ ಒಂದು ಭಾಗವಾಗಿದ್ದ ಸಿಂಧ್‌ಪ್ರಾಂತವೂ ತನ್ನ ಅಧೀನ ಎಂಬುದು ಅವನ ವಾದವಾಗಿತ್ತು. ಭಾರತದ ವಾಯುವ್ಯದಲ್ಲಿ ಅಸ್ಪೇಷಿಯನ್, ಗೌರಿ ಮತ್ತು ಅಶ್ವಕಾಯನರು ಕುನಾರ್‌ಪಂಜಕೋರ ಹಾಗೂ ಸ್ವಾಟ್‌ನದೀ ಕಣಿವೆಗಳಲ್ಲಿ ಪ್ರಬಲರಾಗಿದ್ದರು. ಸಿಂಧೂ ನದಿಯ ಈಶಾನ್ಯಕ್ಕೆ ನೀಸಾರಾಜ್ಯ. ಇಲ್ಲಿ ಹೆಚ್ಚಾಗಿ ಗ್ರೀಕ್ ಜನರೇ ನೆಲಸಿದ್ದರು.

ಗಾಂಧಾರ ಇಬ್ಭಾಗವಾಗಿದ್ದು ಪೆಷಾವರಿನ ಸಮೀಪದ ಪುಷ್ಕಳಾವತಿ ಮತ್ತು ರಾವಲ್ಪಿಂಡಿಯ ಹತ್ತಿರ ತಕ್ಷಶಿಲೆ ಎರಡು ರಾಜಧಾನಿಗಳಾಗಿ ಇಬ್ಬರು ಅರಸರು ಆಳುತ್ತಿದ್ದರು. ತಕ್ಷಶಿಲೆಯ ಆಂಭಿ ಪ್ರಮುಖ. ಝೀಲಮ್ ಮತ್ತು ರಾವಿ ನದಿಗಳ ನಡುವೆ ಪೌರವ ಎಂಬ ಹೆಸರನ್ನು ಹೊಂದಿದ್ದ ಇಬ್ಬರು ಸೋದರರೂ ತಕ್ಷಶಿಲೆಯ ಮೇಲ್ಭಾಗದಲ್ಲಿನ ಪರ್ವತಪ್ರದೇಶದಲ್ಲಿ ಅಭಿಸಾರನೂ ಆಳುತ್ತಿದ್ದರು. ಅಲ್ಲದೆ ಶಿಬಿ, ಮಾಲವ, ಕ್ಷುದ್ರಕ, ಮೌಷಿಕ ಮುಂತಾದ ಜನಾಂಗದವರಿದ್ದರು. ಕ್ರಿ.ಪೂ. ೩೨೬ರಲ್ಲಿ ಅಲೆಕ್ಸಾಂಡರನು ದಂಡೆತ್ತಿದಾಗ ಆಂಬಿಯು ಇವನಿಗೆ ಶರಣಾಗಿ ತನ್ನ ಶತ್ರುಗಳ ವಿರುದ್ಧ ಸಹಾಯ ಕೋರಿದನು. ಸ್ವಕೀಯರ ಮೇಲಿನ ದ್ವೇಷದಿಂದ ಪರಕೀಯರ ನೆರವು ಬಯಸಿ ಅವರಿಗೆ ನೆರವಾಗುವುದು ದೇಶದ್ರೋಹ. ಭಾರತದ ಇತಿಹಾಸದಲ್ಲಿ ಇಂತಹ ದೇಶದ್ರೋಹದ ಮೊದಲನೆಯ ಉದಾಹರಣೆ ಇದು.

ಅಲೆಕ್ಸಾಂಡರನ ದಂಡಯಾತ್ರೆ ಸುಗಮವಾಗಿರಲಿಲ್ಲ. ಹೆಜ್ಜೆ ಹೆಜ್ಜೆಗೂ ಇವನು ಸ್ವಾತಂತ್ರ್ಯಪ್ರಿಯ ಯೋಧರನ್ನು ಎದುರಿಸಬೇಕಾಯಿತು. ದುರ್ಗಮವಾದ ಕೋಟೆಗಳನ್ನು ತೀವ್ರ ಹೋರಾಟದ ನಂತರವೇ ವಶಪಡಿಸಿಕೊಳ್ಳಬೇಕಾಯಿತು. ಆಂಭಿಯ ರಾಜಧಾನಿ ತಕ್ಷಶಿಲೆಯಲ್ಲಿ ವಿಶ್ರಮಿಸಿದ ಬಳಿಕ ಪೌರವನನ್ನು ಝೀಲಮ್ ನದೀತೀರದಲ್ಲಿ ಎದುರಿಸಿದನು. ಅಂತಿಮ ಜಯ ಅಲೆಕ್ಸಾಂಡರನದೇ ಆದರೂ, ಅದನ್ನು ಅವನು ಗಳಿಸಿದ ಮಾರ್ಗ ಆತನ ಕೀರ್ತಿಗೆ ತಕ್ಕುದಾಗಿರಲಿಲ್ಲ. ತನಗೆ ಸಮಾನರೇ ಇಲ್ಲವೆಂದು ಭಾವಿಸಿದ್ದ ಅಲೆಕ್ಸಾಂಡರ್ ಹೆಜ್ಜೆ ಹೆಜ್ಜೆಗೂ ತೊಂದರೆಗಳನ್ನೆದುರಿಸಿ, ಅನೇಕಬಾರಿ ಧರ್ಮಬಾಹಿರವಾದ ವರ್ತನೆಗಳ ಮೂಲಕವೇ ಗೆಲುವನ್ನು ಸಾಧಿಸಿದನು. ಝೀಲಮ್ ಕದನದಲ್ಲೂ ಆತ ಕುಟಿಲೋಪಾಯದಿಂದಲೇ ಶತ್ರುವನ್ನು ಸೆರೆಹಿಡಿದನು. ಈ ಘಟನೆಯ ನೆನಪಿಗಾಗಿ ಆತ ಬೆಳ್ಳಿಯ ನಾಣ್ಯಗಳನ್ನು ಅಚ್ಚುಹಾಕಿಸಿದನು. ನಂತರ ಸೇನೆಯೊಡನೆ ಮುಂದುವರಿದ ಈತನು ಬಿಯಾಸ್ ನದೀತೀರಕ್ಕೆ ಬಂದು ಗಂಗಾನದೀ ಬಯಲಿಗೆ ಕಾಲಿಡಲು ಉತ್ಸುಕನಾಗಿದ್ದನು. ಮಗಧರಾಜ್ಯದ ಖ್ಯಾತಿ ಅವನನ್ನು ಆಕರ್ಷಿಸಿತ್ತು. ಆದರೆ ಅವನ ಸೈನಿಕರು ಬಗೆದುದೇ ಬೇರೆ. ಅವನ ಈ ದಂಡಯಾತ್ರೆ ಸುಲಭವೂ ಬೇಗನೇ ಮುಗಿಯತಕ್ಕದ್ದೂ ಎಂದು ಭಾವಿಸಿದ್ದ ಆ ಗ್ರೀಕರು ಪ್ರತಿಯೊಂದು ಕಡೆಯೂ ಉಗ್ರಕದನವನ್ನು ಕಾದಬೇಕಾಯಿತು. ಪೌರವನೊಡನೆಯ ಹೋರಾಟ.ಅವರ ತಾಳ್ಮೆಯನ್ನು ಕಲಕಿತ್ತು. ಇನ್ನು ಮಗಧದ ಅರಸರು ಬಹಳ ಪ್ರಬಲರೆಂದು ಅವರು ಕೇಳಿದ ಸುದ್ದಿ ಅವರನ್ನು ತಲ್ಲಣಗೊಳಿತ್ತು. ಅಲೆಕ್ಸಾಂಡರನ ಆಜ್ಞೆಯನ್ನು ಉಲ್ಲಂಘಿಸಿ ಹಿಂತಿರುಗುವ ಹಟತೊಟ್ಟರು. ತನ್ನ ಎಲ್ಲ ಪ್ರಯತ್ನಗಳೂ ವಿಫಲವಾಗಿ ಗೊನೆಗೊಮ್ಮೆ ಅಲೆಕ್ಸಾಂಡರ್ ಹಿಂದಿರುಗಬೇಕಾಯಿತು. ಹಿಂದಿರುಗುವ ಮಾರ್ಗದಲ್ಲಿಯೂ ಮಾಲವ, ಕ್ಷುದ್ರಕ, ಶಿಬಿ ಜನಾಂಗದವರು ಅವನನ್ನು ಎದುರಿಸಿ ಕಾದಿದರು. ದೈವಬಲ ಅವನಿಗೆ ಸಹಾಯವಾಗಿದ್ದ ಕಾರಣ ಹೇಗೋ ವಿಜಯವನ್ನು ಸಾಧಿಸಿ ಮುನ್ನಡೆದ ಅವನು ಬಾರಾಮುಲ ಕಣಿವೆಯ ಮೂಲಕ ಸ್ವದೇಶಕ್ಕೆ ಹಿಂತಿರುಗಿದನು. ಆ ಮೊದಲು ತಾನು

ಜಯಿಸಿದ್ದ ಝೀಲಮ್-ಬೀಯಾಸ್ ನದಿಗಳ ನಡುವಣ ಪ್ರದೇಶ ಹಾಗೂ ಇತರ ಕೆಲವು ಗಣರಾಜ್ಯಗಳನ್ನು ಪೌರವನಿಗೂ ಕಾಶ್ಮೀರ ಹಾಗೂ ಉರ ಪ್ರಾಂತಗಳನ್ನು ಅಭಿಸಾರನಿಗೂ ಝೀಲಮ್‌ನ ಪಶ್ಚಿಮ ಪ್ರದೇಶಗಳನ್ನು ಅಂಭಿಗೂ ಹಂಚಿಕೊಟ್ಟನು.

ಅಲೆಕ್ಸಾಂಡರನ ದಂಡಯಾತ್ರೆಗಳ ವಿವರಗಳು ನಮಗೆ ತಿಳಿದಿರುವುದೆಲ್ಲ ಗ್ರೀಕ್ ಇತಿಹಾಸಕಾರರ ಬರವಣಿಗೆಗಳಿಂದ ಮಾತ್ರ. ಇವುಗಳಿಂದ ಭಾರತೀಯ ಸೈನಿಕರ ಶೌರ್ಯ ಸಾಹಸಗಳ ಪರಿಚಯವಾಗುತ್ತದೆ. ಆಂತರಿಕ ವೈಷಮ್ಯ, ಅನೈಕ್ಯ ಪರಕೀಯರಿಗೆ ಸಹಾಯವಾಗಿದ್ದುವೇ ಹೊರತು ಭಾರತೀಯರು ಶೌರ್ಯದಲ್ಲಿ ಯಾವ ವಿಧದಲ್ಲೂ ಕಡಿಮೆಯವರಾಗಿರಲಿಲ್ಲವೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಭಾರತದಂತಹ ಹಿರಿದಾದ ದೇಶದ ಒಂದು ಮೂಲೆಯಲ್ಲಿ ಕ್ಷುದ್ರವೆನಿಸುವಂತಹುದಾದ ಈ ದಂಡಯಾತ್ರೆ ಭಾರತದ ಮೇಲೆ ಯಾವ ಪ್ರಭಾವವನ್ನೂ ಬೀರಲಿಲ್ಲ. ವಿಪುಲವಾದ ಭಾರತೀಯ ಸಾಹಿತ್ಯದಲ್ಲೆಲ್ಲೂ ಈ ಯಾತ್ರೆ ಕುರಿತಾದ ಪರೋಕ್ಷ ಪ್ರಸ್ತಾಪವೂ ಇಲ್ಲದಿರುವುದು ಇದು ಎಷ್ಟು ಉಪೇಕ್ಷಣೀಯವಾಗಿತ್ತೆಂಬುದನ್ನು ಸೂಚಿಸುತ್ತದೆ.

ಚಂದ್ರಗುಪ್ತ ಮೌರ್ಯಸಾಮ್ರಾಜ್ಯದ ಸ್ಥಾಪಕ. ನಂದವಂಶದ ಅರಸರು ಪ್ರಜಾಬೆಂಬಲವನ್ನು ಕಳೆದುಕೊಂಡಿದ್ದರು. ಚಂದ್ರಗುಪ್ತನು ಮೌರ್ಯವಂಶಕ್ಕೆ ಸೇರಿದವನು. ಮೌರ್ಯ ಎಂಬ ಪದಕ್ಕೆ ಮುರಾ ಎಂಬವಳ ಮಗನೆಂಬ ಅರ್ಥವನ್ನೂ ಹೇಳಲಾಗಿದೆ. ನೇಪಾಳದ ದಕ್ಷಿಣಕ್ಕಿದ್ದ ಪಿಪ್ಪಲಿವನದ ಅರಸನಾದ ಮೊರಿಯ ಎಂಬ ಕ್ಷತ್ರಿಯ ಕುಲಕ್ಕೆ ಸೇರಿದವನೆಂದು ಜೈನಪರಿಶಿಷ್ಟಪರ್ವದ ಹೇಳಿಕೆ. ಇವನ ವಂಶಸ್ಥರು ತಮಗಿರಬಹುದಾಗಿದ್ದ ಅಧಿಕಾರವನ್ನು ಕಳೆದುಕೊಂಡು ಮಗಧರಾಜ್ಯದ ಸಾಮಾನ್ಯ ಪ್ರಜೆಗಳಾಗಿದ್ದರೆಂಬುದು ಮಾತ್ರ ನಿಜ.

ಇವನನ್ನು ಕುರಿತು ಹಲವಾರು ಕತೆಗಳು ಹುಟ್ಟಿಕೊಂಡಿವೆ. ಈತ ನಮ್ಮ ದೃಷ್ಟಿಗೆ ಬೀಳುವುದು ಕ್ರಿ.ಪೂ. ೩೨೬-೨೫ರ ಸುಮಾರಿಗೆ. ಇವನ ಸಲಹೆ ಅಲೆಕ್ಸಾಂಡರನಿಂದ ತಿರಸ್ಕೃತವಾದ ನಂತರ ಇವನು ವಿಷ್ಣುವರ್ಮನೆಂಬ ಬ್ರಾಹ್ಮಣನನ್ನು ಕಂಡನು. ಆತ ಇವನ ಪೋಷಕ, ಸಲಹೆಗಾರ, ಮಿತ್ರ. ವಿಶಾಖದತ್ತನ 'ಮುದ್ರಾರಾಕ್ಷಸ' ನಾಟಕದಿಂದ ಈ ಬ್ರಾಹ್ಮಣನು ನಂದರಿಂದ ಅವಮಾನಿತನಾಗಿ ಅವರನ್ನು ನಿರ್ಮೂಲಿಸುವ ನಿಶ್ಚಯ ಮಾಡಿ ತಕ್ಷಶಿಲೆಯ ವಿದ್ಯಾಪೀಠದಲ್ಲಿದ್ದನೆಂದೂ ಇವನ ಮತ್ತು ಚಂದ್ರಗುಪ್ತನ ಪರಸ್ಪರ ಪರಿಚಯ ಮುಂದಿನ ಘಟನೆಗಳಿಗೆ ನಾಂದಿಯಾಯಿತೆಂದೂ ತಿಳಿದುಬರುತ್ತದೆ. ಇವುಗಳ ವಾಸ್ತವಿಕತೆಯ ಬಗೆಗೆ ಸಂದೇಹಗಳಿವೆ.

ಅಲೆಕ್ಸಾಂಡರನ ದಂಡಯಾತ್ರೆ ಭಾರತೀಯರಿಗೆ ಐಕ್ಯದ ಪಾಠವನ್ನು ಕಲಿಸಿತು. ಕ್ಷತ್ರಿಯ ಕುಲಗಳನ್ನೆಲ್ಲ ಒಟ್ಟುಗೂಡಿಸಿ ನಂದನಮೇಲೆ ದಂಡೆತ್ತಿಹೋದ ಚಂದ್ರಗುಪ್ತನಿಗೆ ಯಶಸ್ಸು ಕಾದಿತ್ತು. ಇದರ ಪರಿಣಾಮವಾಗಿ ಸಿಂಧುನದಿಯಿಂದ ಬಂಗಾಲ ಕೊಲ್ಲಿಯವರೆಗೂ ವಿಶಾಲವಾದ ನಂದರ ಮಗಧಸಾಮ್ರಾಜ್ಯ ಚಂದ್ರಗುಪ್ತನ ವಶವಾಯಿತು. ಚಂದ್ರಗುಪ್ತನ ಮತ್ತೊಂದು ಸಾಧನೆ ಯವನರನ್ನು ಹೊಡೆದೋಡಿಸಿದುದು.

ಅಲೆಕ್ಸಾಂಡರನು ಭಾರತದಿಂದ ಕಾಲ್ತೆಗೆಯುತ್ತಿದ್ದಂತೆಯೇ ಅವನ ಅಧೀನಕ್ಕೊಳಪಟ್ಟಿದ್ದ ಪ್ರದೇಶಗಳು ಅವನಿಂದ ನಿಯಮಿತರಾಗಿದ್ದ ಅಧಿಕಾರಿಗಳನ್ನು ಹೊರದೂಡಿ ಸ್ವತಂತ್ರವಾದವು. ತಕ್ಷಶಿಲೆಯಲ್ಲಿ ಪ್ರಾಂತಾಧಿಕಾರಿಯಾಗಿದ್ದ ಫಿಲಿಪ್‌ನನ್ನು ಪ್ರಜೆಗಳು ದಂಗೆ ಎದ್ದು ಕೊಂದರು. ಆತನಿಗೆ ಬದಲು ಇನ್ನೊಬ್ಬನನ್ನು ನೇಮಿಸಲು ಸಹ ಅಲೆಕ್ಸಾಂಡರನಿಗೆ ಸಾಧ್ಯವಾಗಿರಲಿಲ್ಲ. ಕ್ರಿ ಪೂ. ೩೨೩ರಲ್ಲಿ ಅಲೆಕ್ಸಾಂಡರನು ಮರಣಹೊಂದಿದ ಬಳಿಕ ಅವನ ರಾಜ್ಯ ಎರಡು ಬಾರಿ ವಿಭಜನೆಗೊಳಪಟ್ಟಿತು. ಅತನ ಸೇನಾನಿಗಳಲ್ಲಿ ಪರಸ್ಪರ ಕಲಹಗಳೇರ್ಪಟ್ಟವು. ಬೇಬಿಲೋನಿನ ಸೆಲ್ಯೂಕಸ್ ಅಂತಿಮವಾಗಿ ಜಯವನ್ನು ಸಾಧಿಸಿ ಅಲೆಕ್ಸಾಂಡರನ ಉತ್ತರಾಧಿಕಾರಿ ಎನಿಸಿಕೊಂಡನು (ಕ್ರಿ. ಪೂ. ೩೧೨–೧೧). ಈತನು ೩೦೫–೩೦೪ರಲ್ಲಿ ಬ್ಯಾಕ್ಟ್ರಿಯಾ ದೇಶವನ್ನು ಮುತ್ತಿ ವಶಪಡಿಸಿಕೊಂಡು ಭಾರತದ ಮೇಲೆ ದಂಡೆತ್ತಿದನು. ಆದರೆ ಈ ವೇಳೆಗೆ ಭಾರತದ ರಾಜಕೀಯ ಪರಿಸ್ಥಿತಿ ಬದಲಾಗಿತ್ತು. ಹಿಂದಿನ ಅನೈಕ್ಯ ಇರಲಿಲ್ಲ. ಚಂದ್ರಗುಪ್ತನ ನೇತೃತ್ವದಲ್ಲಿ ಒಗ್ಗಟ್ಟಿನಿಂದ ಎದುರಿಸಿದ ಭಾರತೀಯ ಸೈನ್ಯ ಸೆಲ್ಯೂಕಸ್‌ನನ್ನು ಸೋಲಿಸಿತು. ಗ್ರೀಕ್ ಬರೆವಣಿಗೆಗಳಲ್ಲಿ ಈ ಘಟನೆಯ ಪ್ರಸ್ತಾಪವಿಲ್ಲದಿರುವುದು ಆಶ್ಚರ್ಯಕರ. ಆದರೆ ಅಪ್ಪಿಯನ್ ಪ್ಲುಟಾರ್ಕ್ ಮತ್ತು ಸ್ಟ್ರಾಬೊಗಳು ಈ ಕುರಿತು ಬರೆದಿದ್ದಾರೆ. ಆಂಡ್ರೊಕೊಟ್ಟೀಸ್ (ಚಂದ್ರಗುಪ್ತ) ಮತ್ತು ಸೆಲ್ಯೂಕಸರ ನಡುವಣ ಕದನ ಅವರಲ್ಲಿ ಪರಸ್ಪರ ವಿವಾಹಸಂಬಂಧನೊಡನೆ ಮುಗಿಯಿತು ಎಂಬರ್ಥದಲ್ಲಿ ಇವರು ಬರೆದಿದ್ದಾರೆ. ಗಾಂಧಾರ, ಆರಿಯ (ಹೆರಾಟ್) ಮತ್ತು ಗೆಡ್ರೊಸಿಯ (ಈಗಿನ ಬೆಲೂಚಿಸ್ಥಾನ)ಗಳ ಭಾಗಗಳು ಸಹ ಚಂದ್ರಗುಪ್ತನ ವಶವಾದುವು. ಇವಕ್ಕೂ ಮಿಗಿಲಾಗಿ ಸೆಲ್ಯೂಕಸ್ ಚಂದ್ರಗುಪ್ತನಿಗೆ ನೀಡಿದ ಬಳುವಳಿ ಅವನ ರಾಯಭಾರಿಯಾದ ಮೆಗಾಸ್ತನೀಸ್. ಈತನು ಚಂದ್ರಗುಪ್ತನ ರಾಜಧಾನಿಯಾದ ಪಾಟಲಿಪುತ್ರದಲ್ಲಿ ಸುಮಾರು ಒಂದು ದಶಕದ ಕಾಲ (ಕ್ರಿ.ಪೂ. ೩೦೪–೨೯೪) ವಾಸಿಸಿದ್ದನು.

ಚಂದ್ರಗುಪ್ತಮೌರ್ಯನ ಕಾಲದ ಭಾರತವನ್ನು ಕುರಿತು ಮೆಗಾಸ್ತನೀಸ್ ಬರೆದಿದ್ದಾನೆ. ಪುಷ್ಕಲಾವತಿ, ತಕ್ಷಶಿಲೆ, ಹಸ್ತಿನಪುರ, ಕನ್ಯಾಕುಬ್ಜ, ಪ್ರಯಾಗ, ಕಾಶಿ ಮುಂತಾದ ನಗರಗಳನ್ನು ಸಂದರ್ಶಿಸಿದ ಈತನು ಭಾರತೀಯರ ನಡೆನುಡಿ, ಆಚಾರ ವ್ಯವಹಾರ, ಸಾಮಾಜಿಕ ರಾಜಕೀಯ ಪರಿಸ್ಥಿತಿಗಳನ್ನು ಕುರಿತು ತಾನು ಅರ್ಥಮಾಡಿಕೊಂಡಂತೆ ಬರೆದಿಟ್ಟಿದ್ದಾನೆ. ಅನೇಕ ಕಡೆಗಳಲ್ಲಿ ಇವನು ನೀಡಿರುವ ವಿವರಗಳು ಉತ್ಪ್ರೇಕ್ಷೆಯಿಂದ ಕೂಡಿವೆ. ಆದರೆ ಅಂದಿನ ನಮ್ಮ ಜನಜೀವನ, ಗುಣಶೀಲಗಳು, ಸಮಾಜಪದ್ಧತಿಗಳು ಪಾಶ್ಚಾತ್ಯನ ದೃಷ್ಟಿಗೆ ಹೇಗೆ ಕಂಡುವು ಎಂಬುದು ಈ ಗ್ರಂಥದಿಂದ ತಿಳಿಯುತ್ತದೆ. ಆದರೆ ದುರದೃಷ್ಟವಶಾತ್ ಈ ಗ್ರಂಥ ದೊರೆತಿಲ್ಲ, ಅದರಿಂದ ಆಯ್ದು ಉದ್ಧರಿಸಿದ ಹೇಳಿಕೆಗಳು ಮಾತ್ರ ಇತರರ ಬರೆವಣಿಗೆಗಳಲ್ಲಿ ಲಭ್ಯವಿವೆ.

ಚಂದ್ರಗುಪ್ತನ ಸಾಧನೆಗಳಿಗೆ ಪ್ರೇರಕಶಕ್ತಿ ಕೌಟಿಲ್ಯ ಅಥವಾ ಚಾಣಕ್ಯ. ವೀರವರ್ಮನೆಂಬ ಹೆಸರಿನ ಬ್ರಾಹ್ಮಣ ನಂದರಿಂದಾದ ಅವಮಾನದ ಸೇಡನ್ನು ತೀರಿಸಿ

ಕೊಳ್ಳಲು ಅವರನ್ನು ನಾಶಗೊಳಿಸುವ ಪಣತೊಟ್ಟನೆಂದೂ ಚಂದ್ರಗುಪ್ತನನ್ನು ಕಿರಿಯ ವಯಸ್ಸಿನಿಂದಲೆ ಇದಕ್ಕಾಗಿ ತರಬೇತುಗೊಳಿಸಿದನೆಂದೂ ಈತನ ಸುತ್ತ ಕತೆಗಳನ್ನು ಹೆಣೆಯಲಾಗಿದೆ. ಇದು ಎಷ್ಟರಮಟ್ಟಿಗೆ ಸತ್ಯ ಎಂಬುದು ಹೇಳಲಾಗದು. ಕೌಟಿಲ್ಯನು ಅರ್ಥಶಾಸ್ತ್ರ ಗ್ರಂಥದ ಕರ್ತೃ. ಇದೊಂದು ರಾಜನೀತಿಗೆ ಸಂಬಂಧಿಸಿದ ಗ್ರಂಥ. ಇದನ್ನು ಕೌಟಿಲ್ಯನು ಬರೆದನೆಂಬುದರ ಬಗೆಗೂ ಇದರ ಕಾಲದ ಬಗೆಗೂ ಭಿನ್ನಾಭಿಪ್ರಾಯಗಳಿವೆ. ಏನಿದ್ದರೂ ಇದು ಮೌರ್ಯಕಾಲದ ಗ್ರಂಥವೆಂಬುದನ್ನು ಈಗ ಸಾಮಾನ್ಯವಾಗಿ ಒಪ್ಪಲಾಗಿದೆ. ಮೆಗಾಸ್ತನೀಸನ 'ಇಂಡಿಕಾ' ಮತ್ತು ಈ ಗ್ರಂಥ ಅಂದಿನ ಸ್ಥಿತಿಗತಿಗಳನ್ನರಿಯಲು ಪ್ರಮುಖ ಸಾಹಿತ್ಯಾಧಾರಗಳು.

ಚಂದ್ರಗುಪ್ತ ಭಾರತದ ಇತಿಹಾಸದಲ್ಲಿ ಪ್ರಪ್ರಥಮ ಚಕ್ರಾಧಿಪತಿ ಎನಿಸಿಕೊಂಡ. ರಾಮಾಯಣ ಮಹಾಭಾರತಗಳಲ್ಲಿ ಸಕಲ ಆರ್ಯಾವರ್ತದ ಸಾರ್ವಭೌಮ ಪದವಿಯನ್ನು ಸಾಧಿಸಿ ಅಶ್ವಮೇಧಾದಿ ಯಜ್ಞಗಳನ್ನು ಮಾಡಿದ ಅರಸರ ಉಲ್ಲೇಖಗಳಿವೆಯಾದರೂ ಅವುಗಳ ಐತಿಹಾಸಿಕತೆಯ ಬಗೆಗೆ ಸಂದೇಹಗಳಿವೆ. ಅಲ್ಲದೆ ಅವರು ಸಹ ಸಿಂಧುನದಿಯ ಹೊರಗೆ ಆಫ್ಘನಿಸ್ಥಾನ ಮುಂತಾದ ಪ್ರದೇಶಗಳ, ದಕ್ಷಿಣಾಪಥದ ಭಾಗಗಳ ಅರಸರಾಗಿರಲಿಲ್ಲವೆಂಬುದು ಗಮನಾರ್ಹ. ರಾಜ ಮತ್ತು ರಾಜ್ಯಗಳನ್ನು ಕುರಿತು ಈ ವೇಳೆಗೆ ಸಾಕಷ್ಟು ತಾತ್ತ್ವಿಕ ಚರ್ಚೆಗಳು ನಮ್ಮ ಸಾಹಿತ್ಯದಲ್ಲಿ ಆಗಿವೆ. ರಾಜನ ಅಧಿಕಾರದ ಮೂಲ ಯಾವುದು? ಮಾನಸಿಕವಾಗಿ, ಬೌದ್ಧಿಕವಾಗಿ ಇತರರಿಗೆ ಸಂಸಮನಾದ ಗುಣಗಳುಳ್ಳ ರಾಜನು ಇತರರನ್ನು ಆಳುವುದು ಹೇಗೆ ಎಂಬ ಯುಧಿಷ್ಠಿರನ ಪ್ರಶ್ನೆಗಳಿಗೆ ಭೀಷ್ಮನು ಕೊಟ್ಟಿರುವ ಉತ್ತರಕ್ಕೆ ಮಹಾಭಾರತದಲ್ಲಿ ಎರಡು ಅಧ್ಯಾಯಗಳೇ ಮೀಸಲಾಗಿವೆ. ಇದರಲ್ಲಿ ರಾಜತ್ವಕ್ಕೆ ದೇವತ್ವವನ್ನು ಆರೋಪಿಸಿರುವುದು ಕಂಡುಬರುತ್ತದೆ. 'ಬೌಧಾಯನ ಸೂತ್ರ'ದಲ್ಲಿ ಪ್ರಜೆಗಳ ರಕ್ಷಣೆ ರಾಜನ ಕರ್ತವ್ಯವೆಂದೂ ಅದಕ್ಕಾಗಿ ಆತ ಅವರಿಂದ ಆದಾಯದಲ್ಲಿ ಷಡ್ಭಾಗವನ್ನು ಧಾನ್ಯರೂಪದಲ್ಲಿ ಪಡೆಯ ತಕ್ಕದ್ದೆಂದೂ ಹೇಳಿದೆ. ಕಳ್ಳತನವಾದ ಆಸ್ತಿಪಾಸ್ತಿಗಳನ್ನು ಹುಡುಕಿ ಅದರ ಮಾಲಿಕನಿಗೆ ಹಿಂದಿರುಗಿಸಲು ಅಶಕ್ತನಾದ ಅರಸ ತಾನೇ ಸ್ವತಃ ಅದರ ಮಾಲಿಕನಿಗೆ ನಷ್ಟವನ್ನು ಭರಿಸಿಕೊಡಬೇಕೆಂಬ ಅರ್ಥಶಾಸ್ತ್ರದ ಹೇಳಿಕೆ ಬಹುಶಃ ಇದರ ಪರಿಣಾಮವಾಗಿಯೇ ಮೂಡಿದ್ದಾಗಿರಬೇಕು. ಆದ್ದರಿಂದಲೇ ರಾಜನಿಗೆ ದಂಡದ ಆವಶ್ಯಕತೆಯೂ ಉಂಟಾಗಿ ದಂಡಧರನಾದ. ದಂಡನೀತಿ ರಾಜನೀತಿಯ ಒಂದು ಭಾಗವಾಯಿತು. ಇಂತಹ ಜವಾಬ್ದಾರಿಯುತ ಸ್ಥಾನವನ್ನು ಆಕ್ರಮಿಸುವ ರಾಜ ಅದಕ್ಕೆ ಸೂಕ್ತವಾದ ವಿದ್ಯಾಭ್ಯಾಸವನ್ನೂ ತರಬೇತಿಯನ್ನೂ ಪಡೆಯಬೇಕಾದುದು ಅವಶ್ಯವಾಗಿತ್ತು.

ರಾಜ ರಾಜ್ಯದ ಒಂದು ಅಂಗ ಮಾತ್ರ. ರಾಜ್ಯ, ಅಮಾತ್ಯ, ಕೋಶ, ಬಲ, ಜನಪದ, ದುರ್ಗ ಇವು ಸಪ್ತಾಂಗಗಳಲ್ಲಿ ಉಳಿದವು. 'ಸಹಾಯಸಾಧ್ಯಂ ರಾಜತ್ವಂ' ಎಂದಿದ್ದಾನೆ ಕೌಟಿಲ್ಯ. ಈ ಒಂದೊಂದು ಅಂಗಗಳ ನಡುವೆಯೂ ಪರಸ್ಪರ ಸಹಕಾರವಿದ್ದಾಗ ಮಾತ್ರ ರಾಜ್ಯರಥ ಸುಸೂತ್ರವಾಗಿ ಸಾಗೀತು. ರಾಜನಿಗೆ ಸ್ವಂತ ಸುಖವೆಂಬು

ದಿಲ್ಲ. ಪ್ರಜೆಗಳ ಸುಖ ಅವನ ಸುಖ, ಅವರ ಹಿತ ಅವನ ಹಿತ. ಇದರ ಸಾಧನೆ ಅವನ ಹೊಣೆ. ಇವುಗಳು ಅರಸನ ನಿರಂಕುಶಾಧಿಕಾರಕ್ಕೆ ತಡೆಗಳಾಗಿದ್ದುವು. ರಾಜನು ಪ್ರತ್ಯಕ್ಷ ದೈವವೆನಿಸಿದರೂ ಸರ್ವತಂತ್ರಸ್ವತಂತ್ರನೆನಿಸಿದರೂ ಅವನ ಕರ್ತವ್ಯಗಳೂ ತತ್ಪರಿಣಾಮ ವಾಗಿ ಅವನ ಪರಾವಲಂಭನ ಸ್ಥಿತಿಯೂ ಅವನ ಅಧಿಕಾರವನ್ನು ಮೊಟಕುಗೊಳಿಸಿದುವು. ಅರಸನಲ್ಲಿರಬೇಕಾದ ಮುಖ್ಯ ಗುಣ ಉತ್ಥಾನ, ಎಂದರೆ ಚಟುವಟಿಕೆ ಕಾರ್ಯತತ್ಪರತೆ. ಇದರಿಂದ ಸುಖಸಮೃದ್ಧಿಗಳನ್ನು ಸಾಧಿಸಬಹುದು; ಇಲ್ಲದಿದ್ದಲ್ಲಿ ಅನರ್ಥವಾಗುತ್ತದೆ. ಸರ್ವಲೋಕಹಿತ, ಸರ್ವಜನಹಿತ ಅರಸನ ಆದ್ಯಕರ್ತವ್ಯ. ಅದಕ್ಕೆಂದು ಆತನು ಆಗಾಗ ರಾಜ್ಯದಲ್ಲಿ ಸಂಚರಿಸಬೇಕು. ಜನರಲ್ಲಿ ತಿಳಿವಳಿಕೆ ಸಹನೆಗಳು ಮೂಡುವಂತೆ ಮಾಡು ವುದು, ನೆರೆಹೊರೆಯವರಲ್ಲಿ ನಿರ್ಭಯತೆ ವಿಶ್ವಾಸಗಳನ್ನು ಮೂಡಿಸುವುದು, ಜನಹಿತಕ್ಕಾಗಿ ನೀರು ನೆರಳು ಔಷಧೋಪಚಾರ ಇತ್ಯಾದಿಗಳನ್ನೊದಗಿಸುವುದು ರಾಜನ ಹೊಣೆ. ಇವು ಗಳನ್ನು ಗಮನಿಸಿದಾಗ ಸ್ಥಾನಮಾನದೃಷ್ಟಿಯಿಂದ ಮೌರ್ಯ ಅರಸ ಸಾಮ್ರಾಜ್ಯದ ಅತ್ಯುನ್ನತಾಧಿಕಾರಿಯಾದರೂ ಅವನ ಅಧಿಕಾರವನ್ನು ಪ್ರಶ್ನಿಸುವ ಹಕ್ಕು ಯಾರಿಗೂ ಇಲ್ಲದಿದ್ದರೂ ಆತ ನಿಬಂಧನೆಗೊಳಪಟ್ಟಿದ್ದ ಎಂಬುದು ಸ್ಪಷ್ಟವಾಗುತ್ತದೆ. ಧರ್ಮ ಎಂಬುದೇ ಆ ನಿಬಂಧನೆ. ಧರ್ಮವೇ ಪರಮೋಚ್ಚಪ್ರಭು. ಅರಸ ಅದರ ಅಧೀನ.

ಈ ತತ್ತ್ವವನ್ನು ಪಾಲಿಸಿದುದರಿಂದ ರಾಜ್ಯದಲ್ಲಿ ಸುಭದ್ರವಾದ ಆಡಳಿತ ವ್ಯವಸ್ಥೆ ಸಾಧ್ಯವಾಯಿತು. ಅಮಾತ್ಯವೆಂಬ ಅಂಗದ ಉಲ್ಲೇಖವಿದ್ದರೂ ಕೌಟಿಲ್ಯನ ಅರ್ಥಶಾಸ್ತ್ರ ದಲ್ಲಿ ಅಮಾತ್ಯರ ಸಂಖ್ಯೆ ಅರ್ಹತೆಗಳ ವಿವರಗಳು ಸಿಕ್ಕಿಲ್ಲ. ಇವರು ಕೇವಲ ಸಲಹೆಗಾರ ರಾಗಿರದೆ ಬೇರೆ ಬೇರೆ ಕಾರ್ಯಭಾಗಗಳ ಮುಖ್ಯಸ್ಥರಾಗಿದ್ದು, ಆಡಳಿತದ ಹೊಣೆಯನ್ನು ಹೊತ್ತಿದ್ದರೆಂಬುದು ಸ್ಪಷ್ಟ. ರಾಜ್ಯವನ್ನು ಪ್ರಾಂತಗಳಾಗಿ ವಿಂಗಡಿಸಲಾಗಿದ್ದು ಪ್ರತಿ ಯೊಂದು ಪ್ರಾಂತಕ್ಕೂ ಪ್ರತ್ಯೇಕ ಪ್ರಾಂತಾಧಿಕಾರಿಗಳಿದ್ದರು. ಮೆಗಾಸ್ತನೀಸನು ಇವರನ್ನು ಅಗ್ರೊನೊಮೊಯ್ (Agronomoi) ಎಂದು ಕರೆದಿದ್ದಾನೆ. ಭೂಮಿಯನ್ನು ಅಳೆಯುವ, ಕಂದಾಯವನ್ನು ನಿಗದಿಗೊಳಿಸುವ, ನೀರಾವರಿ, ಅರಣ್ಯ, ಮರಗೆಲಸ, ಲೋಹಗಾರಿಕೆ, ಗಣಿಗಳು, ರಸ್ತೆಗಳು ಇತ್ಯಾದಿಗಳಿಗೆಲ್ಲ ಸಂಬಂಧಿಸಿದಂತೆ ಅಧಿಕಾರಿಗಳಿದ್ದರು. ನಗರಾಡಳಿತ ಸಹ ಮೆಗಾಸ್ತನೀಸನ ದೃಷ್ಟಿಗೆ ಬಿದ್ದಿದೆ. ಐದು ಜನರನ್ನೊಳಗೊಂಡ ಆರು ಸಮಿತಿಗಳು ನಗರದ ಮೇಲ್ವಿಚಾರಕಗಳಾಗಿದ್ದವು. ಕೈಗಾರಿಕೆ, ಪರದೇಶಪ್ರವಾಸಿಗಳು, ಜನನ-ಮರಣ, ವಾಣಿಜ್ಯ-ವ್ಯವಹಾರ, ಸಿದ್ಧವಸ್ತುಗಳ ಮಾರಾಟ ಹಾಗೂ ಸುಂಕಗಳಿಗೆ ಸಂಬಂಧಿಸಿದ ವಿಷಯಗಳು ಈ ಸಮಿತಿಗಳ ಹೊಣೆಯಾಗಿದ್ದುವು. ಕೌಟಿಲ್ಯನು ಸಹ ಇಂತಹ ಆಡಳಿತ ಖಾತೆಗಳ, ಅದರ ಅಧಿಕಾರಿಗಳ ಪ್ರಸ್ತಾಪ ಮಾಡಿದ್ದಾನೆ. ಸನ್ನಿಧಾತ ಹಾಗೂ ಸಮಾಹರ್ತ ಅಂದಿನ ಉಚ್ಚತರಗತಿಯ ಅಧಿಕಾರಿಗಳು; ಸನ್ನಿಧಾತ ಕೋಶಾಧಿಕಾರಿ, ಸಮಾಹರ್ತ ಭೂಕಂದಾಯವನ್ನು ಸಂಗ್ರಹಿಸುವಾತ. ಪುರೋಹಿತ, ದೌವಾರಿಕ (ದ್ವಾರಪಾಲ), ಅಂತರ್ವಂಶಿಕ (ಅನ್ತಃಪುರಾಧಿಕಾರಿ), ದುರ್ಗಪಾಲ, ಅನ್ತಪಾಲ (ಗಡಿ ಪ್ರದೇಶದ ಅಧಿಕಾರಿ) ಇವರು ಇತರ ಅಧಿಕಾರಿಗಳು. ಗ್ರಾಮೀಣ ಆಡಳಿತಕ್ಕೆ ಸಂಬಂಧಿ

ಸಿದಂತೆ ಗ್ರಾಮಿಕ, ಗೋಪ, ಪ್ರದೇಷ್ಟಿ ಮುಂತಾದವರಿದ್ದರು.

ಇಂತಹ ಆಡಳಿತವನ್ನು ನಡಸಲು, ರಾಜ್ಯರಥವನ್ನು ಓಡಿಸಲು ಆರ್ಥಿಕ ಬೆಂಬಲ ಆವಶ್ಯಕ. ರಾಜ ಮತ್ತು ರಾಜ್ಯ ಅಭಿನ್ನವಾದಂತೆಲ್ಲ ಭೂಮಿಯ ರಾಜನಿಗೆ ಸೇರಿದ್ದೆಂಬ ಭಾವನೆಯೂ ಬೇರೂರಿತು. ರಾಜ ಭೂಮಿಯ ಒಡೆಯನಾದ. ಸಮಾಜದಲ್ಲಿ ವೈಯಕ್ತಿಕ ಆಸ್ತಿ ಇರಲಿಲ್ಲವೆಂದಲ್ಲ. ಆದರೆ ವ್ಯಕ್ತಿ ಭೂಮಾಲಿಕ, ಆಸ್ತಿಯ ಮಾಲಿಕನಾಗಬೇಕಾದಲ್ಲಿ ತನ್ನ ಅನುಭವಣೆಯಲ್ಲಿರುವ ಭೂಮಿ ತಾತ್ತ್ವಿಕವಾಗಿ ರಾಜನಿಗೆ ಸೇರಿದುದೆಂಬ ಕಾರಣ ಅದಕ್ಕಾಗಿ ಆತನಿಗೆ ಭೂಕಂದಾಯವನ್ನು ತೆರಬೇಕಾಗಿತ್ತು. ಹೀಗೆ ವಸೂಲಾದ ಕಂದಾಯ ರಾಜನ ಬೊಕ್ಕಸಕ್ಕೆ ಮುಖ್ಯ ಆಧಾರ. ಭೂಕಂದಾಯ ಒಂದು ವಿಧದಲ್ಲಿ ಬಾಡಿಗೆ. ಆದರೆ ಆ ಭೂಮಿಯಲ್ಲಿ ಬೆಳೆದ ಫಸಲಿನ ಒಂದು ಭಾಗ ಸಹ ರಾಜನಿಗೆ ತೆರಿಗೆಯ ರೂಪದಲ್ಲಿ ಸಲ್ಲುತ್ತಿತ್ತು. ಸಾಮಾನ್ಯವಾಗಿ ಉತ್ಪನ್ನದ ಷಡ್ಭಾಗ ಕರವಾಗಿತ್ತು. ಮೆಗಾಸ್ತನೀಸನು ನಾಲ್ಕನೆಯ ಒಂದುಭಾಗ ಎಂದಿದ್ದಾನೆ. ಆದ್ದರಿಂದ ಸ್ಪಷ್ಟವಾಗಿ ಇಂತಿಷ್ಟೇ ಎಂದು ಹೇಳುವುದು ಕಠಿಣ. ಈ ಕರಸಂಗ್ರಹಣೆ ಅರಸನ ಕೆಲಸಗಳಲ್ಲೊಂದು. ಇದಕ್ಕಾಗಿ ಅಧಿಕಾರಿಗಳು ನಿಯಮಿತರಾಗಿದ್ದರು. ಇಲ್ಲೂ ಕೆಲವು ನಿರ್ದಿಷ್ಟ ತತ್ತ್ವಗಳನ್ನು ಪಾಲಿಸಬೇಕಾಗುತ್ತಿತ್ತು. ಒತ್ತಾಯಕರಸಂಗ್ರಹಣೆ ಸಲ್ಲದು. ಧಾರ್ಮಿಕ ಮತ್ತು ಇತರ ಕಾರ್ಯಗಳಿಗೆ ವಿನಾಯಿತಿ ತೋರಿಸಬೇಕು. ಪ್ರಜೆಗಳಿಂದ ಪಡೆದ ಈ ಹಣ ಪ್ರಜೆಗಳಿಗಾಗಿಯೇ ವಿನಿಯೋಗಿಸಲ್ಪಡಬೇಕು. ಇವು ಅಂದು ಅನುಸರಿಸಲಾದ ಸಾಮಾನ್ಯ ತತ್ತ್ವಗಳು. ಚಂದ್ರಗುಪ್ತನ ಕಾಲದಲ್ಲಿ ನೀರಾವರಿಗಾಗಿ ಸುದರ್ಶನವೆಂಬ ಕೆರೆಯೊಂದನ್ನು ಆತನು ದೂರದ ಸೌರಾಷ್ಟ್ರದಲ್ಲಿ ತೋಡಿಸಿದನೆಂಬುದು ನಮಗೆ ತಿಳಿದಿದೆ.

ಒಕ್ಕಲುತನ ರಾಜ್ಯಾದಾಯದ ಪ್ರಮುಖಸಾಧನವಾದರೂ ಇತರ ವೃತ್ತಿ-ಕಸುಬುಗಳಿಗೂ ಅಗತ್ಯವಾದ ಉತ್ತೇಜನವನ್ನು ನೀಡಲಾಗಿತ್ತು. ಕೈಕೆಲಸಗಾರರನ್ನೊಳಗೊಂಡ ಬೇರೆ ಬೇರೆ ಕಸುಬಿನ ಶ್ರೇಣಿಗಳು ಈ ವೇಳೆಗೆ ಅಸ್ತಿತ್ವಕ್ಕೆ ಬಂದಿದ್ದುವು. ಸರ್ಕಾರವೇ ನಡಸುತ್ತಿದ್ದ ಕೈಗಾರಿಕೆಗಳಲ್ಲಿ ಇವರನ್ನು ಕೆಲಸಕ್ಕೆ ಸೇರಿಸಿಕೊಳ್ಳಲಾಗುತ್ತಿತ್ತು. ಶಸ್ತ್ರಗಳನ್ನು ತಯಾರಿಸುವುದು, ನಾವೆಗಳನ್ನು ಕಟ್ಟುವುದು, ಲೋಹದ ಗಣಿಗಳನ್ನು ತೋಡುವುದು, ನೇಕಾರಿಕೆ ಇತ್ಯಾದಿಗಳು ಸರ್ಕಾರದ ಅಧೀನಕ್ಕೊಳಪಟ್ಟ ಕೆಲವು ಕೈಗಾರಿಕೆಗಳು. ಶ್ರೇಣಿಗಳ ಸದಸ್ಯರಾಗುವುದರಿಂದ ಕಸುಬುದಾರರಿಗೆ ಹೆಚ್ಚಿನ ಅನುಕೂಲಗಳಿದ್ದುವು. ವೈಯಕ್ತಿಕ ಕಷ್ಟನಷ್ಟಗಳಿಲ್ಲದೆ, ಪೈಪೋಟಿಯಿಲ್ಲದೆ ವೃತ್ತಿಯನ್ನು ನಡಸಿಕೊಂಡು ಹೋಗುವುದು ಸಾಧ್ಯವಾಯಿತು. ಸೌಲಭ್ಯಗಳನ್ನವಲಂಬಿಸಿ ಕಸುಬುಗಳು ಕೆಲವು ಕಡೆಗಳಲ್ಲಿ ಕೇಂದ್ರೀಕೃತವಾದುವು. ಸರ್ಕಾರದ ಸ್ವಾಧೀನದಲ್ಲಿದ್ದ ವೃತ್ತಿಗಾರರನ್ನು ತೆರಿಗೆಯಿಂದ ಮುಕ್ತಗೊಳಿಸಲಾಗಿತ್ತು. ಶ್ರೇಣಿಗಳ ರಚನೆ ಕಟ್ಟುಪಾಡುಗಳು ಹೆಚ್ಚು ನಿರ್ದಿಷ್ಟವೂ ವ್ಯಾಪ್ತವೂ ಆಗಿ, ಇವುಗಳಿಂದ ತೆರಿಗೆಗಳನ್ನೂ ಸುಂಕಗಳನ್ನೂ ವಸೂಲು ಮಾಡುವುದು ಸುಲಭವಾಯಿತು. ಉತ್ಪಾದಿತ ಸಾಮಗ್ರಿಗಳ ಮೇಲೆ ತೆರಿಗೆ ವಿಧಿಸಲಾಯಿತು. ತೆರಿಗೆ ಸಂದಾಯವಾಗಿದೆ ಎಂಬುದನ್ನು ಸೂಚಿಸುವ ಮುದ್ರೆಗಳನ್ನು ಸಹ

ಆ ವಸ್ತುಗಳ ಮೇಲೆ ಒತ್ತಲಾಗುತ್ತಿತ್ತು. ಮಾರಾಟಗಳು ಕಟ್ಟುನಿಟ್ಟಾದ ತನಿಖೆಗೊಳ ಪಟ್ಟಿದ್ದುವು. ಸಾಮಗ್ರಿಗಳ ಬೆಲೆಗಳನ್ನು ನಿಷ್ಕರ್ಷಿಸುವ ಮೊದಲು ಅವುಗಳ ದಾಸ್ತಾನು, ಬೇಡಿಕೆ, ಉತ್ಪಾದನೆವೆಚ್ಚ ಇತ್ಯಾದಿಗಳನ್ನು ಗಮನಿಸಲಾಗುತ್ತಿತ್ತು. ಬೆಲೆಯ ಐದನೆಯ ಒಂದು ಭಾಗ ಸುಂಕ, ಸುಂಕದ ಐದನೆಯ ಒಂದು ಭಾಗ ವಾಣಿಜ್ಯ ತೆರಿಗೆ ವಸೂಲ್ಮಾಡ ಲಾಗುತ್ತಿತ್ತು. ಬೆಲೆಗಳ ಮೇಲೆ ನಿಯಂತ್ರಣವಿತ್ತು. ಬಡ್ಡಿಯ ದರ ಸಾಮಾನ್ಯವಾಗಿ ಶೇಕಡ ೧೫. ಒಮ್ಮೊಮ್ಮೆ, ಅನಿಶ್ಚಿತ ಪರಿಸ್ಥಿತಿಗಳಲ್ಲಿ, ಇದು ಶೇಕಡ ೬೦ರಷ್ಟು ಸಹ ಆಗುತ್ತಿತ್ತು. ಇವು ನಮಗೆ ಕೌಟಿಲ್ಯನಿಂದ ತಿಳಿದುಬರುವ ವಿವರಗಳಲ್ಲಿ ಕೆಲವು.

ಮೌರ್ಯರ ಕಾಲದ ಸಮಾಜವನ್ನು ಕುರಿತು ಬರೆಯುತ್ತ ಮೆಗಾಸ್ತನೀಸನು ಅದು ತತ್ತ್ವಜ್ಞಾನಿಗಳು (ದಾರ್ಶನಿಕರು), ಒಕ್ಕಲಿಗರು, ಸೈನಿಕರು, ಗೊಲ್ಲರು, ಕೈಕೆಲಸ ಗಾರರು, ಮಂತ್ರಿಗಳು ಮತ್ತು ನ್ಯಾಯಾಧೀಶರೆಂಬ ಏಳು ವರ್ಗಗಳನ್ನೊಳಗೊಂಡಿತ್ತೆಂದಿ ದ್ದಾನೆ. ಆತ ಜಾತಿ ಮತ್ತು ವೃತ್ತಿಗಳನ್ನು ಅರ್ಥಮಾಡಿಕೊಳ್ಳುವಲ್ಲಿ ಗೊಂದಲ ಕ್ಕೀಡಾಗಿದ್ದಾನೆ. ದಾರ್ಶನಿಕರಲ್ಲಿ ಬ್ರಾಹ್ಮಣರು, ಬೌದ್ಧಸಂನ್ಯಾಸಿಗಳು ಹಾಗೂ ಇತರ ಧರ್ಮಾನುಯಾಯಿಗಳು ಸೇರ್ಪಡೆಯಾಗಿದ್ದಾರೆ. ಇವರಿಗೆ ತೆರಿಗೆಗಳಿಂದ ವಿನಾಯಿತಿ ದೊರೆತಿತ್ತು.

ಮೌರ್ಯ ಸಾಮ್ರಾಜ್ಯದಲ್ಲಿ ಹಿರಿದಾದ ಸೇನೆ ಇತ್ತು. ಮೆಗಾಸ್ತನೀಸ್ ಹೇಳಿಕೆ ಯಂತೆ ಚಂದ್ರಗುಪ್ತನ ಸೈನ್ಯದಲ್ಲಿ ಆರು ಲಕ್ಷ ಸೈನಿಕರು, ೯೦೦೦೦ ಆನೆಗಳು, ೨೦೦೦೦ ಅಶ್ವಗಳೂ ಇದ್ದುವು. ಐವೈದು ಜನರ ಆರು ಸಮಿತಿಗಳು ಸೈನ್ಯದ ಬೇರೆಬೇರೆ ವಿಭಾಗ ಗಳ ಆಡಳಿತವನ್ನು ನೋಡಿಕೊಳ್ಳುತ್ತಿದ್ದವು. ಒಂದೊಂದು ವಿಭಾಗಕ್ಕೂ ಒಬ್ಬೊಬ್ಬ ಅಧ್ಯಕ್ಷ: ಪದಾಧ್ಯಕ್ಷ, ಅಶ್ವಾಧ್ಯಕ್ಷ, ಹಸ್ತ್ಯಧ್ಯಕ್ಷ, ರಥಾಧ್ಯಕ್ಷ, ನಾವಾಧ್ಯಕ್ಷ ಮತ್ತು ಆಯುಧಾಗಾರಾಧ್ಯಕ್ಷ. ರಾಜನ ಅಧೀನದಲ್ಲಿ ಅಣಿಯಾಗಿದ್ದ ಈ ಸ್ಥಿರಸೈನ್ಯವಲ್ಲದೆ ಅವಶ್ಯ ವಾದಾಗಲೆಲ್ಲ ಶ್ರೇಣಿಗಳೂ ಮಿತ್ರ ರಾಜ್ಯಗಳೂ ಅವನಿಗೆ ಸೈನ್ಯಗಳನ್ನು ಒದಗಿಸು ತ್ತಿದ್ದುವು. ಶಾಂತಿಯ ಕಾಲದಲ್ಲಿ ಸೈನಿಕರು ಸೋಮಾರಿಗಳಾಗಿ ಕುಡಿತದಲ್ಲಿ ಕಾಲಹರಣ ಮಾಡುತ್ತಿದ್ದರೆಂದೂ ಅವರ ವೆಚ್ಚಗಳನ್ನು ಸರ್ಕಾರದ ಬೊಕ್ಕಸದಿಂದಲೇ ಪೂರೈಸಲಾಗು ತ್ತಿತ್ತೆಂದೂ ಗ್ರೀಕ್ ರಾಯಭಾರಿ ಹೇಳಿದ್ದಾನೆ.

ಈ ವೇಳೆಗೆ ವರ್ಣಪದ್ಧತಿ ಮೊದಲಿನಂತೆ ಅನಿರ್ಬಾಧಿತವಾಗಿರಲಿಲ್ಲ. ವಾಣಿಜ್ಯ ವ್ಯವಹಾರಗಳಲ್ಲಿ ನಿರತರಾಗಿ ವೈಶ್ಯರು, ಬ್ರಾಹ್ಮಣ ಕ್ಷತ್ರಿಯರಿಗಿಂತ ಕೆಳಮಟ್ಟದವರೆನಿಸಿ ದರೂ ಆರ್ಥಿಕವಾಗಿ ಮುಂದುವರಿದಿದ್ದರು. ಮೇಲಿನ ಎರಡು ವರ್ಗಗಳು ಸಾಮಾನ್ಯ ವಾಗಿ ವೈಶ್ಯನನ್ನು ಕಡೆಗಣಿಸಿದ್ದವು. ಸಹಜವಾಗಿಯೇ ವರ್ಗವೈಷಮ್ಯಗಳು ಏರ್ಪಟ್ಟಿದ್ದವು. ತಾರತಮ್ಯ ಅಸೂಯೆಗೆ ನಾಂದಿಯಾಗಿತ್ತು. ಅದರಲ್ಲಿಯೂ ನಗರಗಳಲ್ಲಿ ಆರ್ಥಿಕವಾಗಿ ಮುಂದುವರಿದಿದ್ದು, ಶ್ರೇಣಿಗಳ ಮೇಲೆ ಹಿಡಿತಹೊಂದಿದ್ದ ಜನರು ಸಮಾಜದಲ್ಲಿ ಗೌರವ ಚ್ಯುತರಾಗಿದ್ದ ಕಾರಣ ಸಮಾಜದಲ್ಲಿ ಬಿಗುವುಗಳೇರ್ಪಟ್ಟಿದ್ದುವು. ಎಂತಲೇ ಈ ವರ್ಗದ ಜನ ಜೈನ ಬೌದ್ಧ ಮುಂತಾದ ಅವೈದಿಕ ಮತಗಳ ಅನುಯಾಯಿಗಳಾಗಿದ್ದರು. ಇದು

ಚಂದ್ರಗುಪ್ತಮೌರ್ಯನ ಕಾಲದ ಸಮಾಜದ ಒಂದು ಚಿತ್ರ.

ಕ್ರಿ. ಪೂ. ೩೨೨ರಿಂದ ೨೯೮ರವರೆಗೆ ಮಗಧ ಸಾಮ್ರಾಜ್ಯವನ್ನು ಆಳಿದ ಚಂದ್ರ-ಗುಪ್ತನ ಕಾಲ ಶಾಂತಿಸುಭಿಕ್ಷಗಳ ಕಾಲ. ಈತನು ಅನುಸರಿಸಿದ ಆಡಳಿತವ್ಯವಸ್ಥೆ ನಂತರ ಆಳಿದ ಅರಸರಿಗೂ ಮಾದರಿಯಾಯಿತು. ಮೆಗಾಸ್ತನೀಸ್ ಇವನ ರಾಜಧಾನಿಯಾದ ಪಾಟಲಿಪುತ್ರದ ವೈಭವವನ್ನು ಕಂಡು ಅಚ್ಚರಿಪಟ್ಟಿದ್ದಾನೆ. ೯ × ೭ ಮೈಲುಗಳಷ್ಟು ಉದ್ದಗಲದ ಆ ನಗರದಲ್ಲಿ ೫೭೦ ಗೋಪುರಗಳು, ೬೪ ಬಾಗಿಲುಗಳೂ ಇದ್ದುವಂತೆ. ೩೦೦ ಜನ ಸ್ತ್ರೀ ಅಂಗರಕ್ಷಕರು ಅರಸನಿಗಿದ್ದರು. ಪ್ರತಿನಿತ್ಯ ಓಲಗವನ್ನು ನಡಸಿ, ರಾಜ್ಯದ ವಿವಿಧ ಭಾಗಗಳಿಂದ ಪ್ರಜೆಗಳ ಕ್ಷೇಮಸಮಾಚಾರವನ್ನು ಪಡೆದು, ಅವರ ಹಿತಸಾಧನೆಗಾಗಿ ಶ್ರಮಿಸುತ್ತಿದ್ದ ಅರಸನನ್ನು ಗ್ರೀಕ್‌ರಾಯಭಾರಿ ಬಹಳವಾಗಿ ಹೊಗಳಿದ್ದಾನೆ. ಜೀವನದ ಕೊನೆಯ ವರ್ಷಗಳಲ್ಲಿ ಚಂದ್ರಗುಪ್ತ ಜೈನಮತದಿಂದ ಪ್ರಭಾವಿತನಾದ. ಜೈನಗುರು ಭದ್ರಬಾಹು ಇವನಿಗೆ ಜೈನಮತದ ತತ್ತ್ವಗಳನ್ನು ಬೋಧಿಸಿದ. ಹನ್ನೆರಡು ವರ್ಷಗಳು ಮಗಧದಲ್ಲಿ ಘೋರ ಕ್ಷಾಮ ಬರಲಿದೆಯೆಂಬ ಭವಿಷ್ಯದ ನುಡಿಯನ್ನು ನಂಬಿ, ಆ ಸಮಯದಲ್ಲಿ ಪ್ರಜೆಗಳ ಸಂಕಟವನ್ನು ಕಾಣುವ ಬದಲು ದೇಶತ್ಯಾಗವೇ ಹೆಚ್ಚು ಸೂಕ್ತವೆಂದು ಭಾವಿಸಿ ಗುರುವಿನೊಡನೆ ದಕ್ಷಿಣಾಭಿಮುಖವಾಗಿ ಹೊರಟು ಕರ್ಣಾಟಕದ ಶ್ರವಣಬೆಳಗೊಳದಲ್ಲಿ ನೆಲಸಿದ. ಅಲ್ಲಿಯೇ ಸಲ್ಲೇಖನವ್ರತದಿಂದ ದೇಹತ್ಯಾಗ ಮಾಡಿದ. ಇವು ನಮಗೆ ಜೈನರ ಮೂಲಕ ತಿಳಿದುಬಂದಿರುವ ಐತಿಹ್ಯ. ಈ ಕುರಿತು ಭಿನ್ನಾಭಿಪ್ರಾಯಗಳೂ ಇವೆ. ಆದರೆ ಇದನ್ನು ಸಂಪೂರ್ಣವಾಗಿ ಅಲ್ಲಗಳೆಯಲೂ ಸಾಧ್ಯವಾಗಿಲ್ಲ.

ಚಂದ್ರಗುಪ್ತನ ಮಗ ಬಿಂದುಸಾರ. ಅಮಿತ್ರಘಾತನೆನಿಸಿದ ಈತ ೨೪ ವರ್ಷಗಳ ಕಾಲ ಪಿತ್ರಾರ್ಜಿತ ರಾಜ್ಯವನ್ನು ಪಾಲಿಸಿದ. ಇವನನ್ನು ಕುರಿತು ಹೆಚ್ಚಾಗಿ ಏನೂ ತಿಳಿಯದು. ಈತನು ತನ್ನ ಸಮಕಾಲೀನನಾದ ಸಿರಿಯಾದೇಶದ ಅಂಟಿಯೋಕಸನಿಗೆ ಒಬ್ಬ ತತ್ತ್ವಶಾಸ್ತ್ರಜ್ಞ, ಅಂಜೂರದ ಹಣ್ಣು, ದ್ರಾಕ್ಷಾರಸ—ಈ ಮೂರನ್ನು ತನಗೆ ಕಳುಹಿಸಬೇಕೆಂದೂ ಅದಕ್ಕೆ ತಗಲುವ ವೆಚ್ಚವನ್ನು ಭರಿಸುವುದಾಗಿಯೂ ಪತ್ರವನ್ನು ಬರೆದು ಕೇಳಿದನಂತೆ. ಕೊನೆಯ ಎರಡನ್ನೂ ಈತನಿಗೆ ಕಳುಹಿಸಿದ ಆ ಅರಸ ತತ್ತ್ವಶಾಸ್ತ್ರಜ್ಞರ ಮಾರಾಟ ಯವನಪದ್ಧತಿಯಲ್ಲವೆಂದನಂತೆ. ಇದೊಂದು ಈ ಅರಸನನ್ನು ಕುರಿತಾದ ಪ್ರಚಲಿತ ಕತೆ. ಈಜಿಪ್ಟ್ ದೇಶದಿಂದ ಡಯೊನಿಸಸ್ ಎಂಬಾತನೂ ಸೆಲ್ಯೂಕಸನ ರಾಯಭಾರಿಯಾಗಿ ಡೈಮಾಕಸನೂ ಇವನ ಆಸ್ಥಾನಕ್ಕೆ ಬಂದಿದ್ದರು. ವಿಂಧ್ಯಪರ್ವತದ ದಕ್ಷಿಣದಲ್ಲಿದ್ದ ಹದಿನಾರು ರಾಜಧಾನಿಗಳನ್ನು ಈತನು ವಶಪಡಿಸಿಕೊಂಡನೆಂದು ತಾರಾನಾಥನೆಂಬ ಟಿಬೆಟ್‌ದೇಶದ ೧೭ನೆಯ ಶತಮಾನದ ಇತಿಹಾಸಕಾರ ಹೇಳಿದ್ದಾನೆ. ಇದರ ಸತ್ಯಾಸತ್ಯತೆಗಳನ್ನು ಕುರಿತು ಸಂದೇಹಗಳಿವೆ. ಅಶೋಕ ಮತ್ತು ವಿಗತಾಶೋಕ ಎಂಬುವರು ಈತನ ರಾಣಿಯಾದ ಸುಭದ್ರೆಯ ಮಕ್ಕಳೆಂದೂ ಚಂಪಾದೇಶಕ್ಕೆ ಸೇರಿದ ಆಕೆಗೆ 'ಜನಪದಕಲ್ಯಾಣಿ' ಎಂಬ ಬಿರುದಿದ್ದಿತೆಂದೂ 'ದಿವ್ಯಾವದಾನ'ದಲ್ಲಿ ಹೇಳಿದೆ.

ಅಶೋಕ ಬಿಂದುಸಾರನ ಉತ್ತರಾಧಿಕಾರಿ. ಈತನನ್ನು ಕುರಿತು ಬೌದ್ಧ ಸಾಹಿತ್ಯ ಗ್ರಂಥಗಳಲ್ಲಿ ಹಲವಾರು ಕತೆಗಳನ್ನು ಹೆಣೆಯಲಾಗಿದೆ. ಯುವರಾಜನಾಗಿದ್ದ ಈತ ಅವಂತೀರಾಜ್ಯದ ಪ್ರಾಂತಾಧಿಕಾರಿಯಾಗಿದ್ದ. ಅದರ ರಾಜಧಾನಿ ಉಜ್ಜಯಿನಿ. ಇನ್ನೊಂದು ನಗರ ವಿದಿಶೆ. ಅಶೋಕ ಅಲ್ಲಿಯ ವಣಿಕನೊಬ್ಬನ ಮಗಳನ್ನು—ವಿದಿಶಾಮಹಾದೇವಿ ಅಥವಾ ಶಾಕ್ಯಕುಮಾರಿ—ಮೋಹಿಸಿ ಲಗ್ನವಾದ. ಈಕೆಯಲ್ಲಿ ಜನಿಸಿದವನೇ ಮಹೇಂದ್ರನೆಂಬ ಮಗ, ಸಂಘಮಿತ್ರ ಎಂಬ ಮಗಳು. ತಕ್ಷಶಿಲೆಯಲ್ಲಿ ಈತನ ಸೋದರ ಸುಮನ ಅಧಿಕಾರದಲ್ಲಿದ್ದ. ಅವನ ಆಳಿಕೆ ಪ್ರಜೆಗಳಿಗೆ ರುಚಿಸಲಿಲ್ಲ. ಅವನ ವಿರುದ್ಧ ದಂಗೆ ಎದ್ದರು. ಆಗ ಅಲ್ಲಿಗೆ ಬಂದ ಅಶೋಕನನ್ನು ಸ್ವಾಗತಿಸಿದರು. ಸುಮನ ದ್ವೇಷಾಸೂಯೆಗಳಿಂದ ತನ್ನ ೯೮ ಮಂದಿ ಸಹೋದರರೊಡಗೂಡಿ ಅಶೋಕನನ್ನು ಕದನದಲ್ಲಿ ಎದುರಿಸಿ ಸೋತನು. ಇದೊಂದು ಕತೆ.

ಬೌದ್ಧಮತದ ಶ್ರೇಷ್ಠತೆಯನ್ನು ಸಾರಲೆಂಬಂತೆ, ಬೌದ್ಧಮತಾವಲಂಬಿಯಾಗುವ ಮುನ್ನ ದುಷ್ಟನೂ ಕ್ರೂರಿಯೂ ಆಗಿದ್ದ ಕಾಲಾಶೋಕ, ಚಂಡಾಶೋಕನೆಂದು ಖ್ಯಾತಿವೆತ್ತಿದ್ದ. ಅಶೋಕನು ಅನಂತರ ಪರಿವರ್ತನೆಗೊಂಡು ಶ್ವೇತಾಶೋಕ, ಧರ್ಮಾಶೋಕ ಎನಿಸಿದ ಎಂದು ಬೌದ್ಧಸಾಹಿತ್ಯಗ್ರಂಥಗಳು ಹೇಳಿವೆ. ಅಶೋಕನ ಸಹೋದರ ವೀತಾಶೋಕ. ಬೌದ್ಧಸಂನ್ಯಾಸಿಗಳು ಸುಖಲೋಲುಪರೆಂದು ಈತ ಒಮ್ಮೆ ಆಪಾದಿಸಿದ. ಆಗ ಅಶೋಕ ಆತನನ್ನು ಉಪಾಯದಿಂದ ತನ್ನ ವಿರುದ್ಧ ದಂಗೆಯೆದ್ದು ರಾಜ್ಯಾಡಳಿತ ನಡಸುವಂತೆ ಮಾಡಿ, ಬಳಿಕ ಆತನನ್ನು ರಾಜದ್ರೋಹಿಯೆಂದು ಪರಿಗಣಿಸಿ ಮರಣ ದಂಡನೆಗೆ ಗುರಿಪಡಿಸಿ, ಗಲ್ಲಿಗೇರುವ ಒಂದು ವಾರದ ಮೊದಲು ಸರ್ವಸುಖಗಳನ್ನೂ ಅನುಭವಿಸೆಂದು ಅನುವುಮಾಡಿಕೊಟ್ಟಾಗ ಮರಣೋನ್ಮುಖನಾದ ರಾಜಕುಮಾರ ಸುಖಲೋಲುಪನಾಗಿರುವುದು ಅಸಾಧ್ಯವೆಂದು ಮನಗಂಡನಂತೆ. ತನ್ನೊಬ್ಬನದೇ ಈ ಪರಿಸ್ಥಿತಿಯಾದರೆ ಇನ್ನು ಸಹಸ್ರಾರು ಜನರ ಮರಣ ಕುರಿತು ಯೋಚಿಸುವ ಬೌದ್ಧಸಂನ್ಯಾಸಿಗಳು ಸುಖಲೋಲುಪರಾಗಿರುವುದು ಹೇಗೆ ಸಾಧ್ಯವಾದೀತು ಎಂಬುದನ್ನರಿತ ಆತ ಅಂತಿಮವಾಗಿ ತಾನೇ ಬೌದ್ಧಭಿಕ್ಷುವಾದನಂತೆ !

ದೊಡ್ಡ ಸಣ್ಣ ಬಂಡೆಗಳ ಮೇಲೆ, ಏಕಶಿಲಾಸ್ತಂಭಗಳಮೇಲೆ ಹಾಗೂ ಗವಿಗಳಲ್ಲಿ ಆಚಂದ್ರಾರ್ಕ ಸ್ಥಾಯಿಯಾಗಿರುವಂತೆ ಕೆತ್ತಿಸಲಾದ ಅಶೋಕನ ಶಾಸನಗಳು ಒಂದು ವಿಧದಲ್ಲಿ ಆತನ ಆತ್ಮಕತೆ. ಆತನ ಜೀವನ ಹಾಗೂ ಸಾಧನೆಗಳನ್ನೂ ಅವಕ್ಕಿಂತಲೂ ಮುಖ್ಯವಾಗಿ ಆವನ ಧ್ಯೇಯ-ಧೋರಣೆಗಳನ್ನೂ ಆ ಶಾಸನಗಳು ಪ್ರಸ್ತಾಪಿಸಿವೆ. ಇವುಗಳಲ್ಲಿನ ಹೇಳಿಕೆಗಳು ಹಲವಾರು ಸಾಹಿತ್ಯಾಧಾರಗಳಲ್ಲಿ ಹೇಳಲಾಗಿರುವ ಆತನ ವ್ಯಕ್ತಿಪರ ಅಂಶಗಳಿಗಿಂತ ಭಿನ್ನವಾಗಿದ್ದು ಅವುಗಳು ಸತ್ಯದೂರವೆಂಬುದನ್ನು ತೋರಿಸಿಕೊಟ್ಟಿವೆ. ರಾಜಧಾನಿಯಾದ ಪಾಟಲೀಪುರದಲ್ಲಿಯೂ ಅನ್ಯತ್ರವೂ ತನಗೆ ಭ್ರಾತೃಗಳಿರುವುದಾಗಿ ಅಶೋಕನು ಹೇಳಿಕೊಂಡಿದ್ದಾನೆ. ಅಂತೆಯೇ ಇಬ್ಬರಾದರೂ ಪತ್ನಿಯರಿದ್ದರು ; ಅವರಲ್ಲಿ ಕಿರಿಯಳ ಹೆಸರು ಕಾರುವಾಕಿ ಮತ್ತು ಆಕೆಯ ಮಗ ತೀವಲನೆಂಬುದು ಶಾಸನಗಳಿಂದ

ವ್ಯಕ್ತವಾಗುವ ಅಂಶಗಳು.

ವಿಸ್ತಾರವಾದ ಸಾಮ್ರಾಜ್ಯಕ್ಕೆ ಉತ್ತರಾಧಿಕಾರಿಯಾದ ಅಶೋಕನಿಗೆ ಕಲಿಂಗದೇಶ ಮಾತ್ರ ಸಾಮ್ರಾಜ್ಯದ ಹೊರಗುಳಿದದ್ದು ರುಚಿಸಲಿಲ್ಲ. ಕಲಿಂಗದೇಶದೊಡನೆ ಹಿಂದೊಮ್ಮೆ ನಂದವಂಶದ ಅರಸರು ಸಂಬಂಧಹೊಂದಿದ್ದರು. ಭುವನೇಶ್ವರದ ಸಮೀಪದಲ್ಲಿನ ಹಾಥಿ ಗುಂಫ ಶಾಸನದಲ್ಲಿ ಈ ಪ್ರಸ್ತಾಪ ಬಂದಿದೆ. ಆ ವಂಶದ ಅರಸ ಕಲಿಂಗವನ್ನು ಮುತ್ತಿದ್ದ. ಅದು ಅವನ ಸ್ವಾಧೀನವಾಗಿತ್ತೆಂದಾಗಲಿ ಅಥವಾ ಹಾಗೆ ಸ್ವಾಧೀನಕ್ಕೆ ಬಂದಿರಬಹುದಾದ ಕಲಿಂಗ ಮತ್ತೆ ಸ್ವತಂತ್ರವಾಯಿತೆಂದಾಗಲಿ ಖಚಿತವಾಗಿ ಹೇಳಲು ಆಧಾರಗಳಿಲ್ಲ. ಅಶೋಕನ ಕಾಲಕ್ಕೆ ಅದು ಮೌರ್ಯ ಸಾಮ್ರಾಜ್ಯದ ಹೊರಗುಳಿದಿತ್ತೆಂಬಷ್ಟು ನಿಜ. ಎಂತಲೇ ಅಶೋಕ ಅದನ್ನು ಅಧೀನಪಡಿಸಿಕೊಳ್ಳಲೆಂದು ಕಲಿಂಗದ ಮೇಲೆ ದಂಡೆತ್ತಿದ, ವಿಜಯಿಯಾದ. ಆದರೆ ಈ ವಿಜಯೋನ್ಮಾದ ಈತನ ಬಾಳದಿಕ್ಕನ್ನೇ ಬದಲಿಸಿತು. ಯುದ್ಧ ಭೀಕರ ಸ್ವರೂಪದ್ದಾಗಿದ್ದು, ಪರಿಣಾಮ ಭಯಾನಕವಾಗಿತ್ತು. ಅಶೋಕನೇ ಹೇಳಿ ಕೊಳ್ಳುವಂತೆ ಶತಸಹಸ್ರಜನರು ರಣರಂಗದಲ್ಲಿ ಹತರಾದರು, ಇದಕ್ಕೂ ಹೆಚ್ಚಿನ ಸಂಖ್ಯೆಯ ಜನ ಮೃತರಾದರು, ಒಂದೂವರೆಲಕ್ಷ ಜನ ಸೆರೆಹಿಡಿಯಲ್ಪಟ್ಟರು. ಈ ಸಂಖ್ಯೆ ಒಂದು ವೇಳೆ ಉತ್ಪ್ರೇಕ್ಷಿತವಾಗಿರಬಹುದು. ಚಂದ್ರಗುಪ್ತನ ಸೈನ್ಯಬಲ ಅಶೋಕನ ಕಾಲಕ್ಕೆ ಇಮ್ಮಡಿಸಿರಬಹುದು, ಇಲ್ಲದಿದ್ದಲ್ಲಿ ಇದು ಎರಡೂ ಪಕ್ಷಗಳಿಗಾದ ಹಾನಿಯ ಮೊತ್ತ ವಾಗಿರಬಹುದು. ಹೇಗೇ ಇದ್ದರೂ ಕದನದ ತೀವ್ರತೆಗೆ ಆ ಉಲ್ಲೇಖ ಸಾಕ್ಷಿ. ಕದನದಲ್ಲಿ ನೇರಾಗಿ ಪಾಲುಗೊಂಡು ಹತರಾದವರಿಗಿಂತ ಹೆಚ್ಚಿನ ಸಂಖ್ಯೆಯ ಜನ ಪರೋಕ್ಷವಾಗಿ ಕದನಪರಿಣಾಮವಾಗಿ ಮಡಿದರು. ಅಶೋಕನೇ ಇದರಿಂದ ಅತಿ ದುಃಖಿತನಾದ. ಸ್ವತಂತ್ರವಾದ ಒಂದು ದೇಶ ಪರಾಧೀನವಾಗುವ ಮುನ್ನ ಎಂತಹ ಹತ್ಯಾಕಾಂಡಕ್ಕೊಳ ಗಾಗಬಹುದೆಂಬುದರ ಅರಿವು ಅವನಿಗಾಯಿತು. ಹತರಾದವರ ಬಂಧುಬಾಂಧವ ರಾದಿಯಾಗಿ ಸಕಲರಿಗೂ ಈ ಯುದ್ಧದ ಝಳ ತಾಗುತ್ತದೆ, ಅವರೂ ಸಾವುನೋವು ಗಳಿಗೀಡಾಗುತ್ತಾರೆ ಎಂಬ ವ್ಯಥೆ ಅಶೋಕನ ಮನಸ್ಸನ್ನು ಕದಡಿತು.

ಕಲಿಂಗ ಯುದ್ಧ ಅವನ ಜೀವನದ ಪ್ರಮುಖ ಘಟನೆ. ಇದು ಅವನ ಭವಿತವ್ಯವನ್ನೇ ಬದಲಿಸಿತು. ಇದು ನಡೆದುದು ಅವನ ಆಳಿಕೆಯ ೯ನೆಯ ವರ್ಷದಲ್ಲಿ. ಅಭಿಷಿಕ್ತನಾಗಿ ಎಂಟು ವರ್ಷಗಳಾದಾಗ ಕಲಿಂಗದೇಶವನ್ನು ಜಯಿಸಿದುದಾಗಿ ಅವನೇ ಹೇಳಿಕೊಂಡಿದ್ದಾನೆ. ಅವರೆಗೂ ಆತನ ಜೀವನದ ಧೋರಣೆ ಭಿನ್ನವಾದುದಾಗಿತ್ತು. ಮೊದಲು ಆತನು ಮಾಂಸಾಹಾರಿಯಾಗಿದ್ದು, ದಿನಂಪ್ರತಿ ಸಹಸ್ರಾರು ಪ್ರಾಣಿಗಳು ಅರಮನೆಯಲ್ಲಿ ವಧೆ ಗೀಡಾಗುತ್ತಿದ್ದವು. ಆದರೆ ಕಲಿಂಗ ಯುದ್ಧಾನಂತರ, ಅಹಿಂಸೆಯ ಹಾದಿಯನ್ನು ಹಿಡಿ ದಾಗ, ಕೇವಲ ಮೂರು ಪ್ರಾಣಿಗಳನ್ನು (ಎರಡು ಮಯೂರಗಳು ಮತ್ತು ಒಂದು ಹರಿಣ) ಮಾತ್ರ ಕೊಲ್ಲುವುದಾಗಿ, ಕ್ರಮೇಣ ಅದೂ ಕಡಿಮೆಯಾಗಬೇಕು ಎಂಬ ಆಶಯ ವನ್ನು ತಳೆದ. ಪ್ರಜಾಕ್ಷೇಮಕ್ಕಾಗಿ ವೃಕ್ಷಗಳನ್ನು ನೆಡಿಸಿದ, ಬಾವಿಗಳನ್ನು ತೋಡಿಸಿದ, ಛತ್ರಗಳನ್ನು ಕಟ್ಟಿಸಿ ಅಲ್ಲಲ್ಲಿ ಅರವಟ್ಟಿಗೆಗಳನ್ನು ಸ್ಥಾಪಿಸಿದ. ಮಾನವರಿಗೂ ಪ್ರಾಣಿ

ಗಳಿಗೂ ಅನುಕೂಲವಾಗಲೆಂದು ರೋಗಚಿಕಿತ್ಸೆಗಾಗಿ ಔಷಧಿಗಳನ್ನು ಸರಬರಾಜು ಮಾಡುವ ಏರ್ಪಾಡನ್ನು ಮಾಡಿದ. ಇವು ಕೇವಲ ಅವನ ರಾಜ್ಯಕ್ಕಷ್ಟೇ ಸೀಮಿತ ಗೊಳ್ಳದೆ ಗಡಿರಾಜ್ಯಗಳಲ್ಲಿಯೂ ವಾಯವ್ಯದಲ್ಲಿ ಯವನರಾಜ್ಯ ಹಾಗೂ ಅದರ ಸಮೀಪದ ರಾಜ್ಯಗಳಲ್ಲೂ ಆತನು ಕೈಗೊಂಡ ಕಾರ್ಯಕ್ರಮಗಳಲ್ಲಿ ಸೇರಿದ್ದುವು.

ಕಲಿಂಗಯುದ್ಧವೇ ಅವನು ಹೂಡಿದ ಪ್ರಥಮ ಹಾಗೂ ಅಂತಿಮ ಯುದ್ಧ. ಈ ವಿಧದ ಯುದ್ಧ ಅನರ್ಥಹೇತು ಎಂಬ ಸತ್ಯವನ್ನು ಮನಗಂಡ. ಪ್ರೀತಿಯಿಂದ ಜಯಿಸು ವುದು ಕ್ಷೇಮಕರ ಎಂದು ತಿಳಿದ. ಭೇರೀಘೋಷಕ್ಕೆ ಬದಲು ಅವನ ರಾಜ್ಯದಲ್ಲಿ ಅಂದಿನಿಂದ ಧರ್ಮಘೋಷ ಮೊಳಗಿತು. ಹೊಸದಾಗಿ ಆಡಳಿತಕ್ಕೊಳಪಟ್ಟ ಕಲಿಂಗ ದೇಶದ ಪ್ರಜೆಗಳಿಗಾಗಿಯೇ ಪ್ರತ್ಯೇಕವಾಗಿ ಎರಡು ಶಾಸನಗಳನ್ನು ಬರೆಸಿದ. ತನ್ನ "ಬಹು ಸಹಸ್ರ ಜನರ ಮೇಲೆ ಆದರೆ, ಪ್ರೀತಿಯನ್ನು ಗಳಿಸಲು ನಿಮ್ಮನ್ನು ನಾನು ನಿಯಮಿಸಿರುವೆನು. ಎಲ್ಲ ಮನುಷ್ಯರೂ ನನ್ನ ಮಕ್ಕಳು, ನನ್ನ ಮಕ್ಕಳು ಇಹಲೋಕ ದಲ್ಲೂ ಎಲ್ಲ ಹಿತಸುಖಗಳನ್ನು ಹೊಂದಬೇಕೆಂದು ನಾನು ಆಶಿಸುವಂತೆಯೇ ಎಲ್ಲ ಮನುಷ್ಯರ ವಿಷಯದಲ್ಲೂ ಆಶಿಸುತ್ತೇನೆ ನನ್ನನ್ನು ಕುರಿತು ಅವರು ಭಯಪಡದೆ ಇರಲಿ. ನನ್ನಲ್ಲಿ ಅವರು ವಿಶ್ವಾಸವಿಡಲಿ. ನನ್ನಿಂದ ಅವರು ಹೊಂದಬೇಕಾದುದು ಸುಖವನ್ನು, ದುಃಖವನ್ನಲ್ಲ" ಎಂದು ಹೇಳಿದ.

ಕಲಿಂಗ ಯುದ್ಧಾನಂತರ ತೀರ್ಥಯಾತ್ರೆಗೆಂದು ಹೊರಟ ಅಶೋಕ ಸಂಬೋಧಿ (ಬುದ್ಧಗಯೆ)ಗೆ ಹೋದ. ಲುಂಬಿನೀವನ, ಕಪಿಲವಸ್ತು, ಶ್ರಾವಸ್ತಿ, ವೈಶಾಲಿ, ವಾರಾಣಸಿ, ಕುಶೀನಗರಗಳಿಗೂ ಭೇಟಿಯಿತ್ತ. ಎಲ್ಲೆಲ್ಲೂ ತನ್ನ ಪ್ರಜೆಗಳನ್ನು ದರ್ಶಿಸಿದ. ಅವರೊಡನೆ ಧರ್ಮಪ್ರಸಂಗಮಾಡಿದ, ದಾನಧರ್ಮಾದಿಗಳನ್ನು ಮಾಡಿದ, ಬೌದ್ಧ ಧರ್ಮ ದಿಂದ ಪ್ರಭಾವಿತನಾಗಿ ಸ್ವತಃ ಆ ಮತವನ್ನು ಅವಲಂಬಿಸಿದ. "ಮೊದಲು ಉಪಾಸಕ ನಾಗಿದ್ದು ಒಂದು ಸಂವತ್ಸರಕ್ಕಿಂತ ಹೆಚ್ಚುಕಾಲ ಸಂಘವನ್ನು ಸೇರಿ ಚೆನ್ನಾಗಿ ಪ್ರಯತ್ನಿಸು ತ್ತಿರುವೆನು" ಎಂಬ ಅವನ ಶಾಸನ ಹೇಳಿಕೆಯನ್ನಾಧರಿಸಿ ಅವನು ಬೌದ್ಧ ಸಂನ್ಯಾಸಿ ಯಾದನೆಂದು ಹಲವರು ಊಹಿಸಿದ್ದಾರೆ. ಆದರೆ ಆಧ್ಯಾತ್ಮಿಕದ ಕಡೆ ಒಲವಿದ್ದ ಅರಸನು ಕೇವಲ ಆತ್ಮೋನ್ನತಿಗಾಗಿ ಮನಃಸ್ಥೈರ್ಯ ಆತ್ಮಜ್ಞಾನಗಳನ್ನು ರೂಢಿಸಿಕೊಳ್ಳಲು ಆಗಾಗ ಬೌದ್ಧಸಂಘಕ್ಕೆ ಹೋಗಿ ಅಲ್ಲಿ ತಪೋನಿರತನಾಗಿರುತ್ತಿದ್ದನೆಂದು ಅರ್ಥೈಸುವುದು ಹೆಚ್ಚು ಸಮಂಜಸವೆಂದು ತೋರುತ್ತದೆ.

ಅಶೋಕ ಧರ್ಮಪ್ರಚಾರಕ್ಕಾಗಿ ಶ್ರಮಿಸಿದ. ಆತನ ಈ ಧರ್ಮ ಯಾವುದೇ ಮತದ, ಪಂಥದ ಉಪದೇಶಗಳಾಗಿರಲಿಲ್ಲ. ಮಾತಾಪಿತೃಗಳ, ಗುರುಗಳ ಶುಶ್ರೂಷೆ, ಅವರಲ್ಲಿ ದೃಢಭಕ್ತಿ, ಮಿತ್ರರಲ್ಲಿ ಬಾಂಧವರಲ್ಲಿ ನೆರೆಯವರಲ್ಲಿ—ಕೊನೆಗೆ ತನ್ನ ಸೇವಕರಲ್ಲಿಯೂ—ಸೌಹಾರ್ದಯುತ ನಡೆವಳಿಕೆ ಎಂಬಿವು ಯಾವುದೇ ವಿಶಿಷ್ಟವಾದ ಪಂಥ ರೂಪಿಸಿದ, ಬೋಧಿಸಿದ ತತ್ತ್ವಗಳಾಗಿರದೆ ವಿಶ್ವಸಾಮಾನ್ಯ ತತ್ತ್ವಗಳಾಗಿದ್ದುವು. ಇವುಗಳನ್ನು ತನ್ನ ಪ್ರಜೆಗಳೆಲ್ಲ ತಿಳಿಯಬೇಕು, ಪಾಲಿಸಬೇಕು ಎಂದು ಆತ ಬಯಸಿದ. ಅದಕ್ಕಾಗಿ ಸ್ವತಃ

ತಾನೇ ಅವುಗಳನ್ನು ಪಾಲಿಸಿದ. "ನಾನೂ ದುಡಿಯುತ್ತಿದ್ದೇನೆ, ನೀವೂ ಹಾಗೆ ಮಾಡಿ, ಇದಕ್ಕೆ ಯಾವ ಭೇದಭಾವವೂ ಇಲ್ಲ" ಎಂದ. ಶಸ್ತ್ರದಿಂದ ಸಾಧಿಸಲಾಗದುದನ್ನು ಪ್ರೀತಿಯಿಂದ ಸಾಧಿಸಲು ಸಾಧ್ಯ ಎಂದು ಸಾರಿದ.

ಅಶೋಕನು ಬೋಧಿಸಿದುದೆಲ್ಲಾ 'ಧರ್ಮ' ಎಂಬ ಒಂದು ಪದದಲ್ಲಿ ಅಡಗಿದೆ. ತನ್ನ ಶಾಸನಗಳಲ್ಲಿ ಈ ಪದವನ್ನು ಇತರ ಪದಗಳೊಂದಿಗೆ ಧರ್ಮವಿಜಯ, ಧರ್ಮದಾನ, ಧರ್ಮಸಂವಿಭಾಗ, ಧರ್ಮಸಂಸ್ತುತ, ಧರ್ಮಸಂಬಂಧ, ಧರ್ಮಮಂಗಲ, ಧರ್ಮರತಿ, ಧರ್ಮಯಾತ್ರೆ, ಧರ್ಮಾನುಶಾಸ್ತಿ, ಧರ್ಮಮಹಾಮಾತ್ರ, ಧರ್ಮಪಾಲನ, ಧರ್ಮಕಾರ್ಯ—ಎಂದು ವಿಧವಿಧವಾಗಿ ಬಳಸಿದ್ದಾನೆ. ಕೊನೆಗೊಮ್ಮೆ ತಾನೇ ಈ ಧರ್ಮ ಎಂಬ ಪದದ ಅರ್ಥವನ್ನು ಹೀಗೆ ವಿವರಿಸಿದ್ದಾನೆ: ಪಾಪಭೀರುತ್ವ, ಪರಹಿತ, ಅನುಶೋಚನೆ—ಇವಕ್ಕಾಗಿ ದಾನ, ಒಳಿತಾದ ನುಡಿ; ಹಸನಾದ ನಡೆ; ಇದೇ ಧರ್ಮ. ಈ ಧರ್ಮರತಿ ಇಹಲೌಕಿಕವೂ ಪಾರಲೌಕಿಕವೂ ಹೌದು. ಎಂತಲೇ ಇದನ್ನು ಕೇವಲ ತಾನೂ ತನ್ನ ಪ್ರಜೆಗಳೇ ಅಲ್ಲದೆ ಅಂದಿನ ವಿಶ್ವದ ಎಲ್ಲರೂ ಪಾಲಿಸಬಹುದು, ಪಾಲಿಸಬೇಕೆಂದು ಆತನು ಬಯಸಿದನು. ಇದರಿಂದಾಗಿ ಈತನ ಧರ್ಮಪ್ರಸಾರ ತನ್ನ ಸಾಮ್ರಾಜ್ಯಕ್ಕಷ್ಟೇ ಸೀಮಿತಗೊಳ್ಳದೆ ಪರದೇಶಗಳಿಗೂ ವಿಸ್ತರಿಸಿತು. ಹೀಗೆ ಅಶೋಕ ಧರ್ಮವಿಜಯವನ್ನು ಸಾಧಿಸಿದ. ಈತನ ರಾಜ್ಯದ ಮೇರೆಯಿಂದ ೬೦೦ ಯೋಜನಗಳಷ್ಟು (ಸು. ೫೫೦೦ ಕಿ.ಮೀ.ಗಳಷ್ಟು) ದೂರದವರೆಗೆ ಯವನರಾಜ ಅಂತಿಯೋಕ (ಸೆಲ್ಯೂಕಸನ ಮೊಮ್ಮಗನಾದ ಸಿರಿಯಾ ದೇಶದ ಆಂಟಿಯೋಕಸ್ ಥಿಯಾಸ್) ಹಾಗೂ ತುರಮಾಯ (ಈಜಿಪ್ಟಿನ ಇಮ್ಮಡಿ ಟಾಲೆಮಿ ಫಿಲಡೆಲ್ಫಸ್), ಅಂತಿಕೆನಿ (ಮೆಸಿಡೋನಿಯಾದ ಆಂಟಿಗೊನಸ್ ಗೊನಟಾಸ್), ಮಕ (ಗ್ರೀಸ್ ದೇಶದ ಸಿರಿನ್‌ನ ಮೆಗಾಸ್) ಮತ್ತು ಅಲಿಕಸುದರ (ಎಪಿರಸ್‌ನ ಅಥವಾ ಕಾರಿಂಥ್‌ನ ಅಲೆಕ್ಸಾಂಡರ್)—ಇವರುಗಳ ರಾಜ್ಯದಲ್ಲೆಲ್ಲ ಇವನ ಧರ್ಮದುಂದುಭಿ ಮೊಳಗಿತು. ಭಾರತದ ದಕ್ಷಿಣದಲ್ಲಿ ಚೋಳ, ಪಾಂಡ್ಯ, ಕೇರಳ, ಸತಿಯಪುತ್ರ (ಬಹುಶಃ ಈಗಿನ ದಕ್ಷಿಣಕನ್ನಡಜಿಲ್ಲೆ) ಮತ್ತು ತಾಮ್ರಪರ್ಣಿ (ಸಿಂಹಳ) ಈ ದೇಶಗಳಲ್ಲೆಲ್ಲ ಇವನು ಧರ್ಮಪ್ರಸಾರ ಮಾಡಿದನು. ಬೌದ್ಧ ಸಾಹಿತ್ಯ ಗ್ರಂಥಗಳಿಂದ ಧರ್ಮಪ್ರಚಾರಕ್ಕಾಗಿ ಅಶೋಕನಿಂದ ಅನೇಕ ಭಿಕ್ಷುಗಳು ಕಾಶ್ಮೀರ, ಗಾಂಧಾರ, ಹಿಮಾಲಯಪ್ರದೇಶ, ಯವನರಾಜ್ಯ, ಅಪರಾಂತ, ಮಹಾರಾಷ್ಟ್ರ, ವನವಾಸಿ, ಮಹಿಷಮಂಡಲ, ಸುವರ್ಣ ಭೂಮಿ ಮತ್ತು ಲಂಕಾದ್ವೀಪಗಳಿಗೆ ಕಳುಹಲ್ಪಟ್ಟರೆಂದು ತಿಳಿದುಬರುತ್ತದೆ.

ವಿಶ್ವದಲ್ಲೆಲ್ಲ ಕೀರ್ತಿವೆತ್ತ ಸಾಮ್ರಾಟರಲ್ಲಿ ಧ್ರುವತಾರೆ ಅಶೋಕ. ಈತನು ಅನುಸರಿಸಿದ ನೀತಿ ವಿಶಿಷ್ಟವಾದುದು. ಆದರೆ ಈ ನೀತಿ ಸಹ ಟೀಕೆಗಳಿಗೆ ಒಳಗಾಗಿದೆ. ಹಿಂದೆಂದೂ ಇಲ್ಲದುದನ್ನು ಸಾಧಿಸಿದ ಹೆಮ್ಮೆಯ ಮನೋಭಾವ ಇದರಲ್ಲಿ ವ್ಯಕ್ತವಾಗುತ್ತದೆ ಎನ್ನುತ್ತಾರೆ ರೊಮಿಲಾ ಥಾಪರ್[7]. ಬೌದ್ಧಮತಪಕ್ಷಪಾತದ ಪರಿಣಾಮವಾಗಿ ಬ್ರಾಹ್ಮಣವರ್ಗದಲ್ಲಿ ಅಸಂತೋಷವುಂಟಾಯಿತು. ಎಂತಲೇ ಶುಂಗವಂಶದ ಪುಷ್ಯಮಿತ್ರ ಮೌರ್ಯಸಾಮ್ರಾಜ್ಯದ ಅಳಿವಿಗೆ ಕಾರಣನಾದ. ಅಶೋಕನ ನೀತಿಯಿಂದ ರಾಷ್ಟ್ರದ

ಶಕ್ತಿಯಾದ ಸೈನ್ಯಬಲ ಕುಂದಿತು—ಎಂಬುದಿನ್ನೊಂದು ಆಪಾದನೆ. ಇನ್ನೂ ಗುರುತರವಾದ ಟೀಕೆ ಎಂದರೆ ಅಶೋಕ ಈ ನೀತಿಪಾಠವನ್ನು ಪ್ರಜೆಗಳಿಗೆ ಬೋಧಿಸಿದುದು ಅರಸೊತ್ತಿಗೆಯ ನಿರಂಕುಶಾಧಿಕಾರವನ್ನು ಬಲಪಡಿಸಲು ಹೂಡಿದ ಯೋಜನೆ ಎಂಬುದು. ಎಲ್ಲ ಪ್ರಜೆಗಳೂ ತನ್ನ ಮಕ್ಕಳೇ ಎಂಬ ಧೋರಣೆ, ಮಕ್ಕಳು ತಂದೆಯ ಮೇಲೆ ಎಲ್ಲದಕ್ಕೂ ಸಂಪೂರ್ಣವಾಗಿ ಅವಲಂಬಿಸಿರುವಂತೆಯೇ ಪ್ರಜೆಗಳು ಕೂಡ ಅರಸನನ್ನು ಅವಲಂಬಿಸಿರಲಿ ಎಂಬ ಧೋರಣೆಯನ್ನು ಪ್ರತಿಬಿಂಬಿಸುತ್ತದೆ—ಎಂದು ಆಕ್ಷೇಪಿಸಬಹುದು.

ಇವುಗಳು ಭಿನ್ನದೃಷ್ಟಿಕೋನಗಳನ್ನು ಹೊಂದಿರುವ ಸಾಧಾರವಲ್ಲದ ವಾದಗಳು. ಅಶೋಕನ ಧರ್ಮಪ್ರಸಾರದ ಪುನರುಚ್ಚಾರ ತನ್ನ ಪ್ರಜೆಗಳಿಗೆ ಅದು ಮನದಟ್ಟಾಗಲಿ, ಅವರು ಅದನ್ನು ಅರಿತು ಚೆನ್ನಾಗಿ ಬಾಳಲಿ ಎಂಬ ಉದ್ದೇಶ ಹೊಂದಿದೆಯೇ ಹೊರತು ಧರ್ಮಾಂಧತೆಯನ್ನು ಸೂಚಿಸದು. ಒಳಿತೆಂದು ತಾನು ಕಂಡುಕೊಂಡ ತತ್ತ್ವವನ್ನು 'ಸರ್ವಜನಹಿತಾಯ' ಇತರರಿಗೂ ತಿಳಿಸಲು ಮುಂದಾಗುವುದರಲ್ಲಿ, ಅದಕ್ಕಾಗಿ ವಿವಿಧ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಅದು ನಿರೀಕ್ಷಿತ ಫಲನೀಡಿದೆ ಎಂದೆನಿಸಿದಾಗ ಅದನ್ನು ಕುರಿತು ಹೇಳಿಕೊಳ್ಳುವುದರಲ್ಲಿ, ತಪ್ಪೇನಿಲ್ಲ. ಅಶೋಕ ಬೌದ್ಧಮತಪಕ್ಷಪಾತಿ ಎಂಬುದು ಸಹ ಸರಿಯಲ್ಲ. ವೈಯಕ್ತಿಕವಾಗಿ ಆ ಧರ್ಮವನ್ನು ಆತ ಅವಲಂಬಿಸಿರಬಹುದು. ಸಂಘಕ್ಕೆ ಭೇಟಿನೀಡಿದಾಗ ಅಲ್ಲಿನ ಭಿಕ್ಷುಗಳಿಗೆ ಉಪದೇಶನೀಡಿ ಬುದ್ಧನ ತತ್ತ್ವಗಳನ್ನಾಚರಿಸುವುದರಲ್ಲಿ ಅವರು ನಿರತರಾಗಬೇಕು, ಕಾರ್ಯಚ್ಯುತರಾಗಕೂಡದು ಎಂದು ಅವರಿಗೆ ತಿಳಿಸಿದುದೂ. ಅವರಿಗಾಗಿಯೇ ಪ್ರತ್ಯೇಕವಾದ ಶಾಸನಗಳನ್ನು ಕೊರೆಯಿಸಿದುದೂ ನಿಜ. ಆದರೆ ಇದು ಪಕ್ಷಪಾತವನ್ನು ತೋರಿಸುವುದಿಲ್ಲ. ಬ್ರಾಹ್ಮಣರನ್ನೂ ಶ್ರಮಣರನ್ನೂ ಅನ್ಯಪಾಷಂಡರನ್ನೂ ಗೌರವಿಸಬೇಕೆಂದು ಆತನೇ ಶಾಸನಗಳಲ್ಲಿ ಸಾರಿದ್ದಾನೆ. ಇದು ಶಾಂತಿಯುತ ಸಹಜೀವನತತ್ತ್ವ. ತನ್ನ ದೇಶದಲ್ಲಿಯಾಗಲೀ ಇತರ ದೇಶಗಳಲ್ಲಿಯಾಗಲಿ ಒಂದೇ ಮತಾವಲಂಬಿಗಳು ಇರುವುದಿಲ್ಲ. ಎಲ್ಲ ಮತಗಳ ಸಾರ ಧ್ಯೇಯ ಒಂದೇ. ಅವುಗಳ ಅಂತಃಸತ್ತ್ವದ ವೃದ್ಧಿಗಾಗಿ ಶ್ರಮಿಸಬೇಕು. ವಿಭಿನ್ನ ಮತಗಳಿಗೆ ಸೇರಿದ ಜನ ಒಂದು ಕಡೆ ವಾಸಿಸುವಾಗ ಪರಸ್ಪರ ತಿಳಿವಳಿಕೆ ಅಗತ್ಯ. ಮಾತಿನಲ್ಲಿ ಸಂಯಮ ಆವಶ್ಯಕ, ಆತ್ಮಪ್ರಶಂಸೆ ಪರನಿಂದೆಗಳು ಹಾನಿಕರ—ಎಂದೆಲ್ಲಾ ಹೇಳಿರುವ ಅಶೋಕ ಬೌದ್ಧಮತಪಕ್ಷಪಾತಿ ಎನ್ನುವುದಾದರೂ ಹೇಗೆ? ಅಂದಿನ ಬದಲಾದ ಸಾಮಾಜಿಕ ಪರಿಸ್ಥಿತಿಗಳಿಗೆ ಅನುಗುಣವಾಗಿ ತನ್ನ ಪ್ರಜೆಗಳು ಸಹ ಉದಾತ್ತ ಜೀವನದ ತತ್ವಗಳನ್ನು ಪಾಲಿಸಬೇಕಾಗಿತ್ತು. ಅದನ್ನೇ ಆತ ಒತ್ತಿ ಹೇಳಿದ.

ಅಶೋಕನ ನೀತಿಯಿಂದ ಸೈನ್ಯದ ಬಲ ಕುಗ್ಗಿತು ಎಂಬ ಆಪಾದನೆ ಸಹ ಅರ್ಥರಹಿತ. ತಾನು ಹೊಸದಾಗಿ ಅನುಸರಿಸಿದ ನೀತಿಗಾಗಿ ಶಸ್ತ್ರಸಂನ್ಯಾಸವನ್ನೇನೂ ಆತ ಹಿಡಿಯಲಿಲ್ಲ. ಆಟವಿಕ ಜನರೂ ಇತರರೂ ತನ್ನ ಈ ನೀತಿಯನ್ನು ಅಪಾರ್ಥಮಾಡಿಕೊಳ್ಳದಿರಲಿ ಎಂದೂ ದುಷ್ಟಶಿಕ್ಷಣ ತನಗೆ ಸಾಧ್ಯ, ಆದರೆ ಕ್ಷಮಿಸಲು ಸಾಧ್ಯವಿದ್ದ ಮಟ್ಟಿಗೆ ತಪ್ಪಿತಸ್ಥರನ್ನು ಕ್ಷಮಿಸುತ್ತೇನೆ, ದಂಡಿಸಬೇಕಾದಲ್ಲಿ ಹಿಂಜರಿಯುವುದಿಲ್ಲ—ಎಂದೂ ಹೇಳಿದ್ದಾನೆ.

ತನ್ನ ನಂತರ ಆಳುವ ತನ್ನ ವಂಶಸ್ಥರೂ ಈ ನೀತಿಯನ್ನು ಅನುಸರಿಸಲಿ ಎಂದೂ ಹೇಳಿದ್ದಾನೆ. ಪ್ರಜೆಗಳ ಹಿತ ತನ್ನ ಕರ್ತವ್ಯ, ತನ್ನ ಕಾಲ ಶಕ್ತಿಗಳು ಅವರಿಗೆ ಮುಡಿಪು ಎಂದಿರುವ ದೊರೆ ನಿರಂಕುಶಾಧಿಕಾರವನ್ನು ಬಯಸಿದನೆಂಬುದು ಸತ್ಯದೂರ.

ಅಶೋಕನ ಶಾಸನಗಳಲ್ಲಿ ಸಾಹಿತ್ಯಕ ಮೌಲ್ಯಗಳಿಲ್ಲ. ಜನರಿಗೆ ಸುಲಭವಾಗಿ ತಿಳಿಯುವಂತೆ ಸರಳವಾದ ನೇರವಾದ ಮಾತುಗಳಲ್ಲಿ ಶಾಸನಗಳನ್ನು ಬರೆಸಿದ್ದಾನೆ. ಅವುಗಳನ್ನು ರೂಪಿಸಲು ಯಾವ ಕವಿಯ ಅಥವಾ ಸಾಹಿತಿಯ ಸಹಾಯವನ್ನೂ ಆತ ಪಡೆದಂತೆ ತೋರುವುದಿಲ್ಲ. ಆಡಿರುವ ಮಾತುಗಳು ಅನುಭವದ ಪರಿಪಾಕ. 'ದೇವಾನಾಂಪ್ರಿಯ', 'ಪ್ರಿಯದರ್ಶಿ ರಾಜ' ಎಂದು ಶಾಸನಗಳು ಇವನನ್ನು ಹೆಸರಿಸಿವೆ. ಕೇವಲ ಎರಡು ಶಾಸನಗಳಲ್ಲಿ—ಕರ್ಣಾಟಕದ ಮಾಸ್ಕಿ ಮತ್ತು ಮಧ್ಯಪ್ರದೇಶದ ಗುಜರ್ರಾ ಎಂಬಲ್ಲಿ ದೊರೆತ ಲಘುಶಿಲಾಶಾಸನಗಳು ಮಾತ್ರ ಈತನ ಅಶೋಕ ಎಂಬ ಹೆಸರನ್ನು ಉಲ್ಲೇಖಿಸಿವೆ. ಆಳಿಕೆಯ ಹನ್ನೆರಡನೆಯ ವರ್ಷದಿಂದ ಈ ಶಾಸನಗಳನ್ನು ಈತ ಬರೆಸಲು ಆರಂಭಿಸಿದ. ಲಘುಶಿಲಾಶಾಸನಗಳು ಕರ್ಣಾಟಕದ ಮಾಸ್ಕಿ, ಕೊಪ್ಪಳ, ಪಾಲ್ಕಿಗುಂಡು, ಬ್ರಹ್ಮಗಿರಿ, ಜಟಿಂಗ ರಾಮೇಶ್ವರ ಮತ್ತು ಸಿದ್ಧಾಪುರಗಳಲ್ಲಿ ದೊರೆತಿವೆ. ಆಫ್ಘನಿಸ್ಥಾನದ ಕಾಂದಹಾರ್‌ನಲ್ಲಿ ಇತ್ತೀಚೆಗೆ ಅವನ ದ್ವಿಲಿಪಿ ದ್ವಿಭಾಷಾ ಶಾಸನವೊಂದು (ಅರಮೈಕ ಮತ್ತು ಗ್ರೀಕ್ ಲಿಪಿ ಮತ್ತು ಭಾಷೆಗಳಲ್ಲಿ) ದೊರೆತಿದೆ. ನೇಪಾಳೀತರೈ, ಆಂಧ್ರಪ್ರದೇಶ, ಕರ್ಣಾಟಕ, ಮಹಾರಾಷ್ಟ್ರ, ಗುಜರಾತ್‌ಗಳಲ್ಲಿ ಸಹ ಶಾಸನಗಳು ಲಭಿಸಿದ್ದು ಇವೆಲ್ಲ ಅವನ ರಾಜ್ಯದ ಭಾಗಗಳಾಗಿದ್ದುವೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಆಫ್ಘನಿಸ್ಥಾನವನ್ನೊಳಗೊಂಡು ಸಮಗ್ರ ಉತ್ತರ ಭಾರತ ಹಾಗೂ ದಕ್ಷಿಣದಲ್ಲಿ ಕರ್ಣಾಟಕದ ಉತ್ತರ ಭಾಗಗಳು ಈತನ ಆಳಿಕೆಗೊಳಪಟ್ಟಿದ್ದುವು.

ಇಷ್ಟು ವಿಸ್ತಾರವಾದ ರಾಜ್ಯ ಪ್ರಬಲವಾದ ಕೇಂದ್ರೀಕೃತ ಆಡಳಿತಕ್ಕೊಳಪಟ್ಟಿದ್ದನ್ನು ನೋಡಿದ್ದೇವೆ. ಅಶೋಕನು ತಾನು ಅನುಸರಿಸಿದ ನೀತಿಗನುಗುಣವಾಗಿ ಆಡಳಿತವ್ಯವಸ್ಥೆಯಲ್ಲಿ ಸೂಕ್ತವಾದ ಮಾರ್ಪಾಡುಗಳನ್ನು ಮಾಡಿಕೊಂಡನು. ಮಹಾಮಾತ್ರರು ಅಂದಿನ ಆಡಳಿತಾಧಿಕಾರಿಗಳು. ತಾನು ಬೋಧಿಸಿದ ಧರ್ಮ ಪ್ರಜೆಗಳಲ್ಲಿ ಪರಿಣಾಮಕಾರಿಯಾಗಿ ಪ್ರಭಾವ ಬೀರುವುದನ್ನು ಗಮನಿಸಲು ಧರ್ಮಮಹಾಮಾತ್ರರೆಂಬ ಅಧಿಕಾರಿಗಳನ್ನು ಹೊಸದಾಗಿ ನೇಮಿಸಿದ್ದ. ಯಾವ ವೇಳೆಯಲ್ಲಿಯೇ ಆಗಲಿ ತನಗೆ ತಿಳಿಯಬೇಕಾದ ವಿಷಯಗಳನ್ನು ತಿಳಿಸಲು ಪ್ರತಿವೇದಕರೆಂಬ ಅಧಿಕಾರವರ್ಗದವರನ್ನು ವ್ಯವಸ್ಥೆಗೊಳಿಸಿದ. ಕೌಟಿಲ್ಯ ಪ್ರತಿಪಾದಿಸಿದ್ದ ಮಂಡಲನೀತಿಯನ್ನು—ಅದರಂತೆ ಪ್ರತಿಯೊಬ್ಬ ಅರಸನ ನೆರೆಯವನು ಶತ್ರು. ಆ ಶತ್ರುವಿನ ನೆರೆಯವನು ಸಹಜವಾಗಿಯೇ ಮಿತ್ರ. ಈ ಸಂಬಂಧ ಹೀಗೆಯೆ ವಿಸ್ತಾರಗೊಳ್ಳುತ್ತ ಹೋಗುತ್ತದೆ—ಅಶೋಕ ಮನ್ನಿಸಲಿಲ್ಲ. ದ್ವೇಷಾಸೂಯೆಗಳು ಅವನ ಧರ್ಮಕ್ಕೆ ಹೊರತು, ಹಾಗಿರುವಾಗ ನೆರೆಯವನು ಶತ್ರುವಾಗುವುದು ಸಾಧ್ಯವೇ ಇಲ್ಲ. ಎಂತಲೇ ಎಲ್ಲರೊಡನೆಯೂ ಆತನು ಸೌಹಾರ್ದಯುತ ಸಂಬಂಧಗಳನ್ನು ಪಡೆದ.

ಅಶೋಕನ ಆಳಿಕೆಯ ವರ್ಷವನ್ನು ಖಚಿತವಾಗಿ ನಿರ್ಧರಿಸುವಲ್ಲಿ ತೊಡಕುಗಳಿದ್ದರೂ ಈತನು ಕ್ರಿ.ಪೂ. ೨೬೩ರಿಂದ ೨೩೭ರ ವರೆಗೂ ಆಳಿದನೆಂಬುದು ಸಾಮಾನ್ಯವಾಗಿ ಒಪ್ಪಲಾಗಿದೆ. ಈತನು ನಿಧನಹೊಂದಿದ ೫೦ ವರ್ಷಗಳೊಳಗಾಗಿಯೇ ವಿಸ್ತಾರವಾದ ಮೌರ್ಯಸಾಮ್ರಾಜ್ಯ ಅಳಿಯಿತು. ಸಾಮ್ರಾಜ್ಯದ ಈ ಪತನಕ್ಕೆ ಹಲವಾರು ಕಾರಣಗಳನ್ನು ಮುಂದೂಡಲಾಗಿದೆ. ಅಶೋಕನಷ್ಟು, ಅವನ ತಂದೆತಾತಂದಿರಷ್ಟು ಬಲಶಾಲಿಗಳಾದವರಾರೂ ಅಶೋಕನ ಬಳಿಕ ಪಟ್ಟಕ್ಕೆ ಬರಲಿಲ್ಲ. ಅಶೋಕನು ಪಾಲಿಸಿದ ನೀತಿಯೇ ಅಳಿವಿಗೆ ಕಾರಣವೆಂಬುದು ಸಮರ್ಥನೀಯವಲ್ಲ. ವಿಸ್ತಾರವಾದ ಈ ಸಾಮ್ರಾಜ್ಯದ ಆರ್ಥಿಕ ಪರಿಸ್ಥಿತಿ ಬರಬರುತ್ತ ಹದಗೆಟ್ಟು, ಅದರ ಒತ್ತಡದಿಂದ ಕುಸಿಯಿತು ಎಂಬ ವಾದವೂ ಇದೆ. ಇದನ್ನು ಸಮರ್ಥಿಸಲು ಆ ಕಾಲಕ್ಕೆ ಸೇರಿದ ಬೆಳ್ಳಿ, ಕಡಿಮೆಯಿರುವ ಕೀಳುಮಟ್ಟದ ನಾಣ್ಯಗಳನ್ನು ತೋರಿಸಲಾಗಿದೆ. ಆದರೆ ಅಂದಿನ ಪ್ರಮುಖ ನಗರಗಳಾದ ಹಸ್ತಿನಪುರ, ಶಿಶುಪಾಲಘಡ ಮುಂತಾದ ಕಡೆ ನಡೆದ ಉತ್ಖನನಗಳು ಅವು ಅತ್ಯುಚ್ಚ ಮಟ್ಟದ ನಾಗರಿಕ ಸೌಲಭ್ಯಗಳನ್ನು ಪಡೆದಿದ್ದುವೆಂಬುದನ್ನು ಸೂಚಿಸುತ್ತವೆ.

ಕುಣಾಲ ಅಶೋಕನ ಮಗ. ದಶರಥ ಮೊಮ್ಮಗ. ಗಯಾ ಸಮೀಪದ ನಾಗಾರ್ಜುನಿ ಬೆಟ್ಟಗಳಲ್ಲಿ ಈ ದಶರಥನ ೩ ಶಾಸನಗಳು ಲಭಿಸಿವೆ. ಸಂಪ್ರತಿ ಸಹ ಇನ್ನೊಬ್ಬ ಮೊಮ್ಮಗನಾಗಿರಬಹುದು. ಅಶೋಕನ ಬಳಿಕ ರಾಜ್ಯ ವಿಭಜನೆಗೊಳಗಾಗಿ ಕುಣಾಲ ಹಾಗೂ ದಶರಥರು ಹಂಚಿಕೊಂಡರೆಂದು ಥಾಪರ್ ಹೇಳಿದ್ದಾರೆ. ಸಂಪ್ರತಿ ಹಾಗೂ ದಶರಥರ ನಡುವೆ ಹಂಚಿತ್ತೆಂದು ಹಿಂದೆ ಸ್ಮಿತ್ ತಿಳಿಸಿದ್ದರು. ವಾಯುವ್ಯ ಪ್ರಾಂತಗಳೂ ಗಾಂಧಾರ ಕಾಶ್ಮೀರಗಳೂ ಕುಣಾಲನ ಆಳಿಕೆಗೆ ಒಳಪಟ್ಟು ಅವನ ನಂತರ ದಶರಥನ ಸೋದರನಾದ ಸಂಪ್ರತಿಯ ಕಾಲದಲ್ಲಿ ಪುನಃ ಒಂದಾದುವೆಂದೂ ಹೇಳಲಾಗಿದೆ. ಏನೇ ಇರಲಿ, ಸಮರ್ಥನಾದ ಅರಸನಿಲ್ಲದಿದ್ದುದು ಸಾಮ್ರಾಜ್ಯದ ಪತನಕ್ಕೆ ಪ್ರಮುಖಕಾರಣ. ಈ ಕಾಲದ ಆಡಳಿತ ಅತಿಕೇಂದ್ರೀಕೃತವಾಗಿದ್ದುದನ್ನು ನೋಡಿದ್ದೇವೆ. ಅಂತಹ ಪರಿಸ್ಥಿತಿಯಲ್ಲಿ ರಾಜ್ಯದ ಆಗುಹೋಗುಗಳು ಬಹಳಮಟ್ಟಿಗೆ ಅರಸನ ಸಾಮರ್ಥ್ಯವನ್ನವಲಂಬಿಸಿರುತ್ತವೆ. ರಾಜ್ಯಕ್ಕೆ ಪ್ರಜೆಗಳು ಸಲ್ಲಿಸಬೇಕಾದ ನಿಷ್ಠೆ ಗೌರವ ಮುಂತಾದ ರಾಷ್ಟ್ರೀಯ ಭಾವನೆಗಳು ಆಗ ಬೆಳೆದಿರಲಿಲ್ಲ. ರಾಜನಿಗಿಂತಲೂ ಮಿಗಿಲಾದುದು ರಾಜ್ಯವೆಂಬ ಭಾವನೆಯೂ ಇರಲಿಲ್ಲ. ನಾವು ಕಾಣುವುದೆಲ್ಲ ವ್ಯಕ್ತಿಗತ ನಿಷ್ಠೆ. ಇದು ಸಹಜವಾಗಿಯೇ ಅರಸನ ವ್ಯಕ್ತಿತ್ವವನ್ನೂ ದಕ್ಷತೆಯನ್ನೂ ಅವಲಂಬಿಸಿತ್ತು. ಇಂತಹ ಪರಿಸ್ಥಿತಿಯಲ್ಲಿ ರಾಜ್ಯವನ್ನು ಭಾಗಮಾಡಿದಾಗ ಕೇಂದ್ರಾಪಗಾಮೀ ಶಕ್ತಿಗಳು ಹೆಚ್ಚಿದುವು, ಅದು ಕೊನೆಗೊಮ್ಮೆ ಕುಸಿಯಿತು.

ಮಗಧಸಾಮ್ರಾಜ್ಯವನ್ನು ಆಳಿದ ಮೌರ್ಯವಂಶದ ಕೊನೆಯ ಅರಸ ಬೃಹದ್ರಥ. ಈತನನ್ನು ಕ್ರಿ.ಪೂ. ಸು. ೧೮೭ರಲ್ಲಿ ಶುಂಗ ಮನೆತನದ ಪುಷ್ಯಮಿತ್ರನು ಕೊಂದನು. ಬೃಹದ್ರಥನ ಸೇನಾನಿ ಪುಷ್ಯಮಿತ್ರನೆಂದು ಬಾಣಕವಿಯ 'ಹರ್ಷಚರಿತ'ದಲ್ಲಿ ಹೇಳಿದೆ. ಈ ಕೃತಿ ಹಾಗೂ 'ಗಾರ್ಗಿಸಂಹಿತೆ', ಪತಂಜಲಿಯ 'ಮಹಾಭಾಷ್ಯ', 'ದಿವ್ಯಾವದಾನ',

'ಮಾಲವಿಕಾಗ್ನಿಮಿತ್ರ ನಾಟಕ'-ಇವು ಈ ಕಾಲದ ಘಟನೆಗಳನ್ನು ಅರಿಯಲು ಸ್ವಲ್ಪಮಟ್ಟಿಗೆ ಸಹಾಯಕವಾಗಿವೆ. ಈ ಪುಷ್ಯಮಿತ್ರನು ಕಾಶ್ಯಪಗೋತ್ರದ ಬೈಂಬಿಕ ವಂಶದವನೆಂಬುದು ಕಾಳಿದಾಸ ಕವಿಯ ಹೇಳಿಕೆ. ಆದರೆ ಪುರಾಣಗಳಲ್ಲಿ ಈತನನ್ನು ಭಾರದ್ವಾಜಗೋತ್ರಜನೆಂದೂ ಶುಂಗವಮನೆತನಕ್ಕೆ ಸೇರಿದವನೆಂದೂ ಹೇಳಿದ್ದು, ಇದನ್ನು ಒಪ್ಪಲಾಗಿದೆ. ಪುಷ್ಯಮಿತ್ರನು ಆಳತೊಡಗುವ ವೇಳೆಗಾಗಲೇ ಸಾಮ್ರಾಜ್ಯ ವಿಸ್ತಾರದಲ್ಲಿ ಕುಗ್ಗಿತ್ತು. ನರ್ಮದಾನದಿಯವರೆಗಿನ ಪಾಟಲೀಪುತ್ರ, ಅಯೋಧ್ಯೆ, ವಿದಿಶಾ ನಗರಗಳನ್ನೊಳಗೊಂಡ ಅದರ ಮಧ್ಯಭಾಗ ಈಗ ಶುಂಗರ ಆಳ್ವಿಕೆಗೊಳಪಟ್ಟಿತ್ತು.

ಎಂಟು ಶತಮಾನಗಳ ನಂತರ ಬಾಣಕವಿ ಬರೆದಿರುವ 'ಹರ್ಷಚರಿತ'ದಲ್ಲಿ ಈ ಪುಷ್ಯಮಿತ್ರನನ್ನು ಕುರಿತ ವಿವರಗಳು ಇವೆ. ಸೇನಾಪತಿಯಾದ ಪುಷ್ಯಮಿತ್ರ ತನ್ನ ಸೈನ್ಯದ ಶಿಸ್ತನ್ನೂ ದಕ್ಷತೆಯನ್ನೂ ವೀಕ್ಷಿಸಬೇಕೆಂದು ಅರಸನನ್ನು ಆಹ್ವಾನಿಸಿ, ಪ್ರದರ್ಶನವನ್ನು ವೀಕ್ಷಿಸುತ್ತಿದ್ದಾಗ ಅರಸನನ್ನು ಕೊಂದನು ಎಂದಿದೆ. ಪುಷ್ಯಮಿತ್ರನು ಕೊಲೆಯ ಒಳಸಂಚನ್ನು ಮೊದಲೇ ಯೋಚಿಸಿ ನಡಸಿದನೆಂಬುದನ್ನು ಇದು ತೋರಿಸುತ್ತದೆ. ಈ ಘಟನೆಯ ನಂತರ ಮಗಧರಾಜ್ಯ ಪುಷ್ಯಮಿತ್ರನ ವಶವಾಯಿತು. ಈತನ ಮಗ ಅಗ್ನಿಮಿತ್ರ. ಈತ ವಿದಿಶಾನಗರದಲ್ಲಿ ಅರಸನ ಪ್ರತಿನಿಧಿಯಾಗಿ ಅಧಿಕಾರ ವಹಿಸಿದ್ದ.

ಪುಷ್ಯಮಿತ್ರನು ಬೃಹದ್ರಥನ ಸೇನಾಪತಿಯಾಗಿದ್ದ. ಅರಸನಿಗೆ ಮತ್ತೊಬ್ಬ ಸಚಿವನಿದ್ದ. ಈ ವೇಳೆಗೆ ಸ್ವತಂತ್ರವಾಗಿದ್ದ ವಿದರ್ಭರಾಜ್ಯದ ಅರಸನಾದ ಯಜ್ಞಸೇನನು ಈ ಸಚಿವನ ಮೈದುನನಾಗಿದ್ದ. ಈ ಸಚಿವನನ್ನು ಪುಷ್ಯಮಿತ್ರನು ಸೆರೆಯಲ್ಲಿರಿಸಿದ. ವಿದರ್ಭ ಹಾಗೂ ವಿದಿಶಾನಗರಗಳ ನಡುವೆ ಇದರ ಪರಿಣಾಮವಾಗಿ ವಿರಸವೇರ್ಪಟ್ಟಿತು. ಯಜ್ಞಸೇನನ ಸೋದರಸಂಬಂಧಿ ಮಾಧವಸೇನನು ಅಗ್ನಿಮಿತ್ರನ ಮಿತ್ರ. ವಿದಿಶಾ ನಗರಕ್ಕೆ ಹೊರಟಿದ್ದ ಈತನನ್ನು ವಿದರ್ಭರಾಜ್ಯದ ಗಡಿಯಲ್ಲಿ ಬಂಧಿಸಲಾಯಿತು. ತನ್ನ ಭಾವನಾದ ಸಚಿವನನ್ನು ಬಂಧಮುಕ್ತಗೊಳಿಸಿದಲ್ಲಿ ಮಾಧವಸೇನನನ್ನು ತಾನು ಬಿಡುವುದಾಗಿ ಯಜ್ಞಸೇನ ತಿಳಿಸಿದನು. ಪರಿಣಾಮವಾಗಿ ಎರಡೂ ರಾಜ್ಯಗಳ ನಡುವೆ ಕದನವೇರ್ಪಟ್ಟಿತು. ಅಂತಿಮವಾಗಿ ವಿದರ್ಭ ಇಬ್ಭಾಗವಾಗಿ ಯಜ್ಞಸೇನ ಮತ್ತು ಮಾಧವಸೇನರಲ್ಲಿ ಹಂಚಲ್ಪಟ್ಟಿತು. ಇದು ಈ ಕಾಲದ ಪರಿಸ್ಥಿತಿಗಳನ್ನು ಸೂಚಿಸುವ ಕಾಳಿದಾಸನ 'ಮಾಲವಿಕಾಗ್ನಿಮಿತ್ರ'ದಲ್ಲಿನ ಕತೆ.

ಪುಷ್ಯಮಿತ್ರನು ಇನ್ನೂ ಸೇನಾನಿಯಾಗಿದ್ದಾಗಲೇ ಒಮ್ಮೆ ಯವನರನ್ನು ಎದುರಿಸಿ ಸೋಲಿಸಿದಂತೆ ತೋರುತ್ತದೆ. ಪತಂಜಲಿ 'ಮಹಾಭಾಷ್ಯ'ದಲ್ಲಿ ಪ್ರಯೋಗಾರ್ಥವಾಗಿ ಉಪಯೋಗಿಸಿರುವ 'ಅರುಣದ್‌ಯವನ ಸಾಕೇತಂ' 'ಅರುಣದ್‌ಯವನೋ ಮಾಧ್ಯಮಿಕಾಂ' ಎಂಬ ವಾಕ್ಯಗಳು ಆಗತಾನೇ ಮುಗಿದ, ಆದರೆ ನೆನಪಿನಲ್ಲಿ ಇನ್ನೂ ಹಸಿರಾಗಿಯೇ ಉಳಿದಿರುವ ಘಟನೆಗಳನ್ನು ಸೂಚಿಸುತ್ತವೆ. ಯವನರು ಸಾಕೇತ (ಅಯೋಧ್ಯೆ) ಮತ್ತು ಮಾಧ್ಯಮಿಕ (ಚಿತ್ತೋರಿನ ಸಮೀಪದ ನಗರ)ಗಳನ್ನು ಮುತ್ತಿದ್ದರೆಂಬುದು ಇದರಿಂದ ತಿಳಿದು ಬರುತ್ತದೆ. ಆದೇ ಪತಂಜಲಿಯು "ಇಹಂ ಪುಷ್ಯಮಿತ್ರ ಯಾಜ

ಯಾಮಃ" (ಇಲ್ಲಿ ಪುಷ್ಯಮಿತ್ರನಿಗಾಗಿ ಯಜ್ಞವನ್ನು ಮಾಡುತ್ತೇವೆ) ಎಂಬ ಮಾತು ಗಳನ್ನು ವರ್ತಮಾನಕಾಲದ, ಆರಂಭವಾಗಿರುವ ಆದರೆ ಇನ್ನೂ ಮುಕ್ತಾಯಗೊಳ್ಳದ, ಘಟನೆಗೆ ನಿರ್ದರ್ಶನವಾಗಿ ಉಪಯೋಗಿಸಿದ್ದಾನೆ. ಇದರಿಂದ ಪುಷ್ಯಮಿತ್ರನು ಯಜ್ಞಗಳನ್ನು ಮಾಡಿದನೆಂದು ಊಹಿಸಲಾಗಿದೆ. ಕಾಲಿದಾಸನ 'ಮಾಲವಿಕಾಗ್ನಿಮಿತ್ರ'ದಲ್ಲಿ ಅಗ್ನಿಮಿತ್ರನ ಮಗ ಪುಷ್ಯಮಿತ್ರನ ಮೊಮ್ಮಗನಾದ ರಾಜಕುಮಾರ ವಸುಮಿತ್ರನು ಪುಷ್ಯಮಿತ್ರನು ಅಶ್ವಮೇಧಯಾಗಮಾಡುವ ಸಂದರ್ಭದಲ್ಲಿ ಸಿಂಧುನದಿಯ ದಕ್ಷಿಣತೀರದ ಮೇಲೆ ಯವನರನ್ನು ಎದುರಿಸಿದನೆಂದು ಹೇಳಿದೆ. ಇದರಿಂದ ಪುಷ್ಯಮಿತ್ರನ ಆಳಿಕೆಯ ಕಾಲ ದಲ್ಲಿಯೂ ಇನ್ನೊಮ್ಮೆ ಯವನರು ಇವನ ರಾಜ್ಯದ ಮೇಲೆ ದಾಳಿಮಾಡಿದಂತೆ ತೋರು ತ್ತದೆ. ಈತನು ಎರಡು ಅಶ್ವಮೇಧಯಾಗಗಳನ್ನು ಮಾಡಿದನೆಂದು ಹೇಳಲಾಗಿದೆ.

ಪುಷ್ಯಮಿತ್ರನು ಕ್ರಿ.ಪೂ. ೧೪೮ರ ವರೆಗೆ ೩೬ ವರ್ಷಗಳಕಾಲ ಆಳಿದನು. ಈತನ ಮಗ ಅಗ್ನಿಮಿತ್ರನು ತಂದೆಗೆ ಬೆಂಬಲವಾಗಿದ್ದನು. ಬಳಿಕ ಆಳಿದ ಇತರ ಶುಂಗ ಅರಸರು ಸುಜ್ಯೇಷ್ಠ, ವಸುಮಿತ್ರ, ವಜ್ರಮಿತ್ರ, ಭಾಗವತ ಮತ್ತು ದೇವಭೂತಿಗಳು. ಅಗ್ನಿಮಿತ್ರನ ಮಗನಾದ ಸುಮಿತ್ರನನ್ನು ಮಿತ್ರದೇವನೆಂಬುವನು ನಾಟಕ ಸಮಾರಂಭವೊಂದರಲ್ಲಿ ಕೊಂದನೆಂದು ಬಾಣಕವಿಯಿಂದ ತಿಳಿದುಬರುತ್ತದೆ. ಈ ಸುಮಿತ್ರನೇ ವಸುಮಿತ್ರನಾಗಿರ ಬಹುದು. ಭಿಲ್ಸಾ ನಗರದಲ್ಲಿ ಯವನ ಹೆಲಿಯೋಡೊರಸ್‌ನು ಒಂದು ಗರುಡಗಂಭವನ್ನು ನಿಲ್ಲಿಸಿದನೆಂದು ಅಲ್ಲಿನ ಶಾಸನವೊಂದರಿಂದ ತಿಳಿದಿದೆ. ಈತನನ್ನು ಶಾಸನದಲ್ಲಿ ತಕ್ಷ ಶಿಲೆಯ ವಾಸಿಯೆಂದೂ ಭಾಗವತನೆಂದೂ ವರ್ಣಿಸಿದೆ. ಭಾಗಭದ್ರ ಕಾಸೀಪುತ್ರನೆಂಬ ಅರಸನ ಆಸ್ಥಾನಕ್ಕೆ ಯವನರಾಜ ಆಂಟಿಯಾಲ್ಸಿಡಸ್‌ನ ರಾಯಭಾರಿಯಾಗಿ ಈತನು ನೇಮಕಗೊಂಡಿದ್ದನು. ಈ ಭಾಗಭದ್ರನು ಶುಂಗಮನೆತನದ ಅರಸನೆಂದೂ ಪುರಾಣ ಗಳಲ್ಲಿ ಉಕ್ತವಾದ ಭದ್ರಕನೇ ಈತನೆಂದೂ ಊಹಿಸಲಾಗಿದೆ.

ಈ ಮನೆತನದ ಕೊನೆಯ ಅರಸ ದೇವಭೂತಿ. ಈತನನ್ನು ದೇವದಾಸಿಯೊಬ್ಬಳ ಮೂಲಕ ಸಚಿವನಾದ ವಸುದೇವನು ಕೊಲ್ಲಿಸಿದನು (ಕ್ರಿ.ಪೂ. ಸು. ೭೨). ವಸುದೇವನು ಕಣ್ವ ಮನೆತನದವನು. ಮಗಧದಲ್ಲಿ ಆಳಿದ ಈತನ ವಂಶಜರು ಭೂಮಿ ಮಿತ್ರ, ನಾರಾಯಣ ಮತ್ತು ಸುಶರ್ಮರು. ಇವರ ಆಳ್ವಿಕೆಯ ಕಾಲ ೪೫ ವರ್ಷಗಳು. ಕ್ರಿ.ಪೂ. ಸು. ೨೭ರಲ್ಲಿ ಈ ಮನೆತನದ ಕೊನೆಯ ಅರಸ ಸುಶರ್ಮನು ಕೊಲೆಗೀಡಾ ದನು. ಆಂಧ್ರಭೃತ್ಯ (ಅಥವಾ ಆಂಧ್ರ)ನೆನಿಸಿದ ಸೀಮುಕನು ಈ ಘಟನೆಯ ನಾಯಕ. ಮಗಧರಾಜ್ಯ ಅಸ್ತಂಗತವಾಗಲು ಈತನು ಕಾರಣನಾದನು. ಆಶ್ಚರ್ಯವೆಂದರೆ, ಸುಶರ್ಮನನ್ನು ಕೊಂದ ಸೀಮುಕನು ಸ್ವತಃ ಮಗಧರಾಜ್ಯವನ್ನಾಳದೆ, ತನ್ನ ದೇಶಕ್ಕೆ ಹಿಂತಿರುಗಿದುದು. ಇದರ ಪರಿಣಾಮವಾಗಿ ಮಗಧ ತನ್ನ ವ್ಯಕ್ತಿತ್ವವನ್ನು ಕಳೆದು ಕೊಂಡಿತು.

ಶುಂಗ ಅರಸರ ಆಳ್ವಿಕೆಯ ಆರಂಭದಲ್ಲಿ ಹಿಂದಿನ ಮೌರ್ಯಸಾಮ್ರಾಜ್ಯ ಗಂಗಾ ನದೀಕೊಳ್ಳವನ್ನೂ ಉತ್ತರಭಾರತದ ಕೆಲವು ಪ್ರದೇಶಗಳನ್ನು ಒಳಗೊಂಡಿತ್ತು. ಕೆಲವು

ಭಾಗಗಳಲ್ಲಿ ಇತರ ಅರಸರು ಇವರಿಗೆ ಸಾಮಂತರಾಗಿದ್ದರು. ಆದರೆ ಕ್ರಮೇಣ ಈ ಭಾಗಗಳು ಈ ಅರಸರ ಕೈತಪ್ಪಿತು. ಕಾಣ್ವಮನೆತನದ ಆಳ್ವಿಕೆಯ ಕಾಲಕ್ಕೆ ಈ ರಾಜ್ಯ ಕೇವಲ ಮಗಧಕ್ಕೆ ಮಾತ್ರ ಸೀಮಿತವಾಗಿತ್ತು. ಆದರೂ ಬಹುಮಟ್ಟಿಗೆ ತನ್ನ ಪ್ರಾಬಲ್ಯವನ್ನು ಕಳೆದುಕೊಂಡಿದ್ದ ಮೌರ್ಯಸಾಮ್ರಾಜ್ಯವನ್ನು ಇನ್ನೂ ಒಂದು ಶತಮಾನ ಕಾಲ ಅಸ್ತಿತ್ವದಲ್ಲಿಟ್ಟ ಕೀರ್ತಿ ಶುಂಗರಿಗೆ ಸಲ್ಲುತ್ತದೆ. ಅಲ್ಲದೆ ನುಗ್ಗಿ ಬರುತ್ತಿದ್ದ ಯವನರ ದಾಳಿಯನ್ನು ತಡೆಗಟ್ಟಿದ ಯಶಸ್ಸು ಪುಷ್ಯಮಿತ್ರ ಹಾಗೂ ಅಗ್ನಿಮಿತ್ರರದಾಗಿದೆ. ಇವರು ಬ್ರಾಹ್ಮಣರೆಂದೂ ಬ್ರಾಹ್ಮಣ ಮತವನ್ನು ರಕ್ಷಿಸಲು ಯತ್ನಿಸಿದರೆಂದೂ ಹೇಳಿದೆ. ಪ್ರಬಲವಾಗಿದ್ದ ಬೌದ್ಧಮತವನ್ನು ದಮನಗೊಳಿಸಲು ಇವರು ಶ್ರಮಿಸಿದರೆಂದೂ ಇವರ ಆಳಿಕೆಯು ಬ್ರಾಹ್ಮಣ ಪ್ರತಿಕ್ರಿಯೆಯ ಫಲವೆಂದೂ ಸಹ ಹೇಳಲಾಗಿದೆ. ಪುಷ್ಯಮಿತ್ರನು ೮೦೦ ಬೌದ್ಧಸ್ತೂಪಗಳನ್ನು ನಿರ್ಮೂಲಗೊಳಿಸಿದನೆಂದು ಆಪಾದಿಸಲಾಗಿದೆ. ಆದರೆ ಈ ಹೇಳಿಕೆಗಳು ಸತ್ಯದೂರವಾಗಿವೆ. ವಾಸ್ತವಿಕವಾಗಿ ಸಾಂಚಿಯಲ್ಲಿಯ ಬೌದ್ಧಸ್ತೂಪಗಳನ್ನು ಈ ಮನೆತನದ ಅರಸರ ಕಾಲದಲ್ಲಿ ವಿಸ್ತರಿಸಲಾಯಿತೆನ್ನಲು ಆಧಾರಗಳಿವೆ.

ಕಾಣ್ವಮನೆತನದ ಅರಸರ ನಂತರ ಮಗಧರಾಜ್ಯ ಪ್ರಾಮುಖ್ಯವನ್ನು ಕಳೆದುಕೊಂಡಿತು. ಉತ್ತರಭಾರತದಲ್ಲಿ ಮೂರು ಶತಮಾನಗಳಕಾಲ ಸಣ್ಣಸಣ್ಣ ರಾಜ್ಯಗಳು ತಲೆಯೆತ್ತಿದುವು. ಕ್ರಿಸ್ತಶಕಾರಂಭದ ಹಿಂದಿನ ಎರಡು ಮೂರು ಶತಮಾನಗಳ ರಾಜಕೀಯ ಚಿತ್ರ ಸ್ಪಷ್ಟವಾಗಿಲ್ಲ. ಒಂದೆರಡು ರಾಜ್ಯಗಳ ಒಬ್ಬಿಬ್ಬರು ಅರಸರ ವಿಷಯಗಳು ಅಳಿದುಳಿದ ಶಾಸನಗಳ, ನಾಣ್ಯಗಳ, ಹಾಗೂ ಸಾಹಿತ್ಯ ಕೃತಿಗಳ ಮೂಲಕ ತಿಳಿದುಬರುತ್ತವೆ. ಅಂತಹ ಅರಸರ ರಾಜ್ಯಗಳಲ್ಲಿ ಕಲಿಂಗ ಒಂದು.

## ಕಲಿಂಗ : ಖಾರವೇಲ

ಈಗಿನ ಒರಿಸ್ಸ ರಾಜ್ಯವನ್ನೊಳಗೊಂಡಿದ್ದ ಕಲಿಂಗವನ್ನು ಅಶೋಕನು ತನ್ನ ರಾಜ್ಯಕ್ಕೆ ಸೇರಿಸಿಕೊಂಡುದು ತಿಳಿದಿದೆ. ಆದರೆ ಅಶೋಕನ ನಂತರ ಕಲಿಂಗರಾಜ್ಯ ಮತ್ತೊಮ್ಮೆ ಅತಿ ಶೀಘ್ರದಲ್ಲಿಯೇ ಸ್ವತಂತ್ರವಾಯಿತು. ಭಾರತದಲ್ಲಿ ಅಂದು ಆಳಿದ ಸ್ವತಂತ್ರ ರಾಜ್ಯಗಳಲ್ಲಿ ಇದೂ ಒಂದು. ಆದರೆ ಇದರ ಇತಿಹಾಸ ನಮಗೆ ಸಂಪೂರ್ಣವಾಗಿ ತಿಳಿಯದು. ತಿಳಿದಿರುವುದೆಲ್ಲ ಭುವನೇಶ್ವರದ ಸಮೀಪದ ಹಾಥಿಗುಂಫ ಎಂಬ ಜೈನಗುಹೆಯಲ್ಲಿ ಲಭಿಸಿದ ಶಾಸನದ ಮೂಲಕ ಮಾತ್ರ. ಈ ಶಾಸನ ಕೂಡ ಬಹುಮಟ್ಟಿಗೆ ಪ್ರಕೃತಿಯ ವಿಕೋಪಕ್ಕೆ ತುತ್ತಾಗಿ ಭಗ್ನವಾಗಿದೆ. ಶಾಸನಪಾಠವನ್ನು ಕುರಿತು ಅನೇಕ ಅಂಶಗಳಲ್ಲಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಆದರೂ ಇದೊಂದು ಉಪಯುಕ್ತ ಆಧಾರವಾಗಿದೆ. ಲಿಪಿಯ ಆಧಾರದ ಮೇಲೂ ಶಾಸನಸಾಹಿತ್ಯದಲ್ಲಿ ಉಪಯೋಗಿಸಲಾದ ಕಾವ್ಯಶೈಲಿಯಿಂದಲೂ ಇತರ ಆಂತರಿಕ ಆಧಾರಗಳಿಂದಲೂ ಕ್ರಿ.ಪೂ. ಸು. ೧ನೆಯ ಶತಮಾನಕ್ಕೆ ಸೇರಿದ ಶಾಸನವೆಂದು ಸಾಮಾನ್ಯವಾಗಿ ಒಪ್ಪಲಾಗಿದೆ. ಚೇದಿರಾಜವಂಶಕ್ಕೆ ಸೇರಿದ ಮಹಾಮೇಘವಾಹನನ ಸಂತತಿಯವನಾದ ಖಾರವೇಲನೆಂಬ ಅರಸನು

ಉದಯಗಿರಿ ಬೆಟ್ಟದ ಈ ಗುಹೆಯಲ್ಲಿ ಜೈನಋಷಿಗಳ ವಾಸಕ್ಕಾಗಿ ವೈಭವೋಪೇತವಾದ ಆಲಯವನ್ನು ಕಟ್ಟಿಸಿದನೆಂದು ಶಾಸನ ತಿಳಿಸುತ್ತದೆ. ಸಾಂದರ್ಭಿಕವಾಗಿ ಈ ಅರಸನ ಸಾಧನೆಗಳನ್ನು ಶಾಸನದಲ್ಲಿ ಸ್ಮರಿಸಲಾಗಿದೆ. ಸಮಕಾಲೀನ ಅರಸರ ರಾಜ್ಯಗಳ ಉಲ್ಲೇಖ ಗಳು ಸಹ ಶಾಸನದಲ್ಲಿವೆ.

ಖಾರವೇಲ ಬಾಲ್ಯವನ್ನು ರಾಜಕುಮಾರರಿಗೆ ಯೋಗ್ಯವಾದ ಆಟಪಾಟಗಳಲ್ಲಿ ಕಳೆದ. ರೂಪಗಣನಾವ್ಯವಹಾರವಿಧಿವಿಶಾರದನೆಂದಿರುವುದರಿಂದ ಅರ್ಥಶಾಸ್ತ್ರ ಲೌಕಿಕಧರ್ಮ ಗಳಿಗೆ ಸಂಬಂಧಿಸಿದಂತೆ ನ್ಯಾಯಶಾಸ್ತ್ರದಲ್ಲೂ ಆಡಳಿತವ್ಯವಹಾರಪದ್ಧತಿಯಲ್ಲೂ ತರಬೇತಿ ಪಡೆದನೆಂದು ಹೇಳಬಹುದು. ೧೬ನೆಯ ವರ್ಷದಲ್ಲಿ ಯುವರಾಜಪದವಿಗೇರಿಸ ಲ್ಪಟ್ಟನು. ೨೪ನೆಯ ವರ್ಷದಲ್ಲಿ ಪಟ್ಟಾಭಿಷೇಕವಾಗಿ ಕಲಿಂಗಾಧಿಪತಿಯಾದನು. ಲಲಾಕ ವಂಶದ ಹಸ್ತಿಸಿಂಹನ ಮರಿಮಗನ ಮಗಳು (ಹೆಸರು ತಿಳಿದಿಲ್ಲ). ಇವನ ಪಿರಿಯರಸಿಯೆಂದು ನಮಗೆ ಸಮೀಪದ ಮಂಚಪುರಿಗುಹೆಯಲ್ಲಿನ ಶಾಸನದಿಂದ ತಿಳಿದು ಬರುತ್ತದೆ.

ದಿಗ್ವಿಜಯಕಾಂಕ್ಷಿಯಾದ ಖಾರವೇಲನು ತತ್ಸಂಬಂಧವಾದ ಸಿದ್ಧತೆಗಳನ್ನು ಮಾಡಿ ಕೊಂಡನು. ರಾಜಧಾನಿಯ ಕೋಟೆಗಳನ್ನೂ ದ್ವಾರಗಳನ್ನೂ ಭದ್ರಪಡಿಸಿದನು. ನಂತರ ತನ್ನ ಆಳಿಕೆಯ ಎರಡನೆಯ ವರ್ಷದಲ್ಲಿ ಕಲಿಂಗದ ಪಶ್ಚಿಮದಿಶೆಯಲ್ಲಿ ಆಳುತ್ತಿದ್ದ ಶಾತಕರ್ಣಿಯನ್ನುಲೆಕ್ಕಿಸದೆ ಕೃಷ್ಣಾನದೀತೀರದವರೆಗೂ ತನ್ನ ಸೈನ್ಯವನ್ನು ಒಯ್ದು ಋಷಿಕ ನಗರದಲ್ಲಿ ಭಯೋತ್ಪಾದನೆಮಾಡಿದನು. ಶಾಸನೋಕ್ತ ಶಾತಕರ್ಣಿ ಸಾತವಾಹನ ಮನೆ ತನದ ಅರಸ. ಈತನು ಆಗ ಕಲಿಂಗಕ್ಕೆ ಪಶ್ಚಿಮದಲ್ಲಿ ಆಳುತ್ತಿದ್ದನೇ ಹೊರತು ದಕ್ಷಿಣದಲ್ಲಿ (ಆಂಧ್ರಪ್ರದೇಶದಲ್ಲಿ) ಅಲ್ಲ ಎಂಬುದೊಂದು ವಾದ. ಋಷಿಕ ನಗರದ ಹೆಸರನ್ನು ಕೆಲವರು ಮೂಷಿಕನಗರವೆಂದು ಓದಿದ್ದಾರೆ. ಇತ್ತೀಚಿಗೆ ಪಶ್ಚಿಮ ಗೋದಾವರೀ ಜಿಲ್ಲೆಯ ಗುಂಟು ಪಲ್ಲಿ ಎಂಬಲ್ಲಿ ಇದೇ ಅರಸನದೆಂದು ಹೇಳಲಾದ ಶಾಸನವೊಂದು ಲಭಿಸಿದೆ. ಕಲಿಂಗಾಧಿ ಪತಿಮಹಾರಾಜ ಎಂದೆಲ್ಲ ವರ್ಣಿತನಾದ ಈ ಮಹಾಮೇಘವಾಹನನನ್ನು ಮಹಿಷ ಕಾಧಿಪತಿ ಎಂದು ವರ್ಣಿಸಿದೆ. ಈ ಮಹಿಷಕ ಎಂಬುದು ಆಂಧ್ರಪ್ರದೇಶದ ಮೇದಕ್ ಜಿಲ್ಲೆಯ ಕೊಂಡಾಪುರವೆಂದು ಗುರುತಿಸಿ ಶಾತಕರ್ಣಿಯ ರಾಜ್ಯ ಪೂರ್ವತೀರ ಪ್ರದೇಶ ಗಳನ್ನೂ ತೆಲಂಗಾಣದ ದಕ್ಷಿಣಭಾಗವನ್ನೂ ಒಳಗೊಂಡಿತ್ತೆಂದು ಈಗ ಹೇಳಲಾಗಿದೆ.

ಆಳ್ವಿಕೆಯ ೮, ೧೦ ಮತ್ತು ೧೨ನೆಯ ವರ್ಷಗಳಲ್ಲಿ ಮೂರು ಬಾರಿ ಖಾರವೇಲ ಉತ್ತರಭಾರತದಲ್ಲೂ ವಿಜಯಯಾತ್ರೆ ಕೈಗೊಂಡ. ಆಗ ಸಮಕಾಲೀನ ಮಗಧರಾಜ್ಯದ ಒಬ್ಬ ಅರಸ ಶರಣಾದ. ಈ ಅರಸನ ಹೆಸರು ಬಹಸತಿಮಿತ ಎಂದಿದ್ದು, ಈತನು ಪುಷ್ಯ ಮಿತ್ರನೆಂದು ಹಲವರೂ ಅಹಿಚ್ಛತ್ರದ ಅರಸನಾದ ಆಷಾಢಸೇನನ ಸೋದರಳಿಯನೆಂದು ಕೆಲವರೂ ಮಧುರೆಯ ಅರಸನೆಂದು ಇತರರೂ ಗುರುತಿಸಿದ್ದಾರೆ. ಖಾರವೇಲನ ಈ ಖ್ಯಾತಿಯನ್ನು ಕೇಳಿದ ಯವನರು ಸಹ ಹಿಂದಕ್ಕೆ ಸರಿದರು. ಈ ಯವನರ ಅರಸನನ್ನು ಗುರುತಿಸುವುದು ಸಹ ಕಠಿಣವಾಗಿದೆ. ಈತ ಯವನ ಡಿಮೆಟ್ರಿಯಸ್ (ದಿಮಿತ) ಆಗಿರ ಬಹುದೇನೋ. ಅಂಗ ಮತ್ತು ಮಗಧ ರಾಜ್ಯಗಳ ಅಪಾರಸಂಪತ್ತನ್ನು ಈತ ಸೂರೆ

ಮಾಡಿದ. ದಕ್ಷಿಣದಲ್ಲಿ ಪಾಂಡ್ಯವಂಶದ ಅರಸನೊಬ್ಬನನ್ನು ಸೋಲಿಸಿದ. ಇದು ಖಾರವೇಲನ ಸಾಧನೆಗಳು. ಆದರೆ ದುರದೃಷ್ಟವಶಾತ್ ಇತಿಹಾಸದ ಪುಟಗಳಲ್ಲಿ ಮಿಂಚಿನಂತೆ ಕಾಣಿಸಿಕೊಂಡ ಈತನ ನಂತರದ ಕತೆ ತಿಳಿದಿಲ್ಲ. ಈತನ ಪೂರ್ವಿಕರ, ಉತ್ತರಾಧಿಕಾರಿಗಳ ವಿಷಯಗಳೇನೂ ತಿಳಿಯದು.

ಜೈನಧರ್ಮಾವಲಂಬಿಯಾದ ಈತ ಉದಯಗಿರಿಬೆಟ್ಟಗಳಲ್ಲಿ ಜೈನಮುನಿಗಳ ವಸತಿಗಾಗಿ ಮಂದಿರ (ಜೀವದೇಹಾಶ್ರಯಿಕ)ವನ್ನು ಕಟ್ಟಿಸಿದ. ಪ್ರಜೆಗಳ ಸೌಕರ್ಯಕ್ಕಾಗಿ ತನಸುಲಿಯಿಂದ ತನ್ನ ರಾಜಧಾನಿಗೆ ನೀರಿನ ಕಾಲುವೆಯೊಂದನ್ನು ತೋಡಿಸಿದ. ಬೊಕ್ಕಸದಿಂದ ಅಪಾರಧನವನ್ನು ವ್ಯಯಿಸಿ ಪ್ರಜೆಗಳಿಗೆ ಸೌಲಭ್ಯವನ್ನು ಕಲ್ಪಿಸಿದ. ತನ್ಮೂಲಕ ತನ್ನ ವೈಭವವನ್ನು ಮೆರಸಿದ. ಪ್ರಜೆಗಳಿಗಾಗಿ ಆಗಾಗ ಸಮಾಜ ಉತ್ಸವಗಳನ್ನು ಏರ್ಪಡಿಸಿದ. ಅಲ್ಲಿ ಗೀತ, ನೃತ್ಯ, ವಾದ್ಯಗೋಷ್ಠಿ ಹಾಗೂ ನಾಟಕಗಳನ್ನು ಏರ್ಪಡಿಸಿದ. ಪ್ರಜೆಗಳ ಪ್ರೀತಿಯನ್ನು ಸಂಪಾದಿಸಿದ. ಇಂತಹ ಅರಸನನ್ನು ಶಾಸನದಲ್ಲಿ ಕ್ಷೇಮರಾಜ, ವೃದ್ಧರಾಜ, ಭಿಕ್ಷುರಾಜ, ಧರ್ಮರಾಜ ಎಂದೂ ಸರ್ವಪಾಷಂಡಪೂಜಕ, ಸರ್ವದೇವಾಯತನಸಂಸ್ಕಾರಕಾರಕ, ಅಪ್ರತಿಹತಚಕ್ರವಾಹನಬಲ, ಚಕ್ರಧರ ಎಂದೂ ವರ್ಣಿಸಲಾಗಿದೆ.

## ಇತರ ರಾಜ್ಯಗಳು

ಈ ಶತಮಾನಗಳಲ್ಲಿ (ಕ್ರಿ.ಪೂ. ೨ರಿಂದ ಕ್ರಿ.ಶ. ೨ನೆಯ ಶತಮಾನ) ಉತ್ತರ ಭಾರತದ ಇತರ ಕಡೆಗಳಲ್ಲೂ ಹಲವಾರು ಅರಸರು ಸಣ್ಣಸಣ್ಣ ರಾಜ್ಯಗಳನ್ನು ಆಳುತ್ತಿದ್ದರು. ಇವರು ತಾವು ಪ್ರಚಾರಕ್ಕೆ ತಂದ ನಾಣ್ಯಗಳ ಮೂಲಕ, ಕೆಲವು ಶಾಸನಗಳ ಮೂಲಕ ಬೆಳಕಿಗೆ ಬಂದಿದ್ದಾರೆ. ಕೋಸಲದಲ್ಲಿ ಮೂಲದೇವ, ಧರ್ಮದೇವ, ಇಂದ್ರಾಗ್ನಿಮಿತ್ರ ಎಂಬ ಹೆಸರಿನ ಅರಸರು ಆಳುತ್ತಿದ್ದರು. ಕ್ರಿ.ಶ. ೧ನೆಯ ಶತಮಾನದಲ್ಲಿ ಕೋಸಲ ಕುಷಾಣರ ಅಧೀನದಲ್ಲಿತ್ತು. ನಂತರ ಪುನಃ ಸ್ಥಳೀಯ ಅರಸರು ಆಳತೊಡಗಿದರು. ಅಹಿಚ್ಛತ್ರ ಪಾಂಚಾಲದ ರಾಜಧಾನಿ. ಮಿತ್ರ ಎಂಬ ನಾಮಾಂತ್ಯದ ಹಲವರು ಅರಸರು ಇಲ್ಲಿ ಆಳಿದರು. ಆಷಾಢಸೇನನೆಂಬೊಬ್ಬ ಇವರಲ್ಲಿ ಖ್ಯಾತಿವೆತ್ತವನು. ಈತನು ಪುಷ್ಯಮಿತ್ರನ ಸಾಮಂತನಾಗಿದ್ದನೆಂದು ಊಹಿಸಲಾಗಿದೆ. ಈ ಅರಸರು ಕೌಶಾಂಬಿಯ ಅರಸರೊಡನೆ ಬಾಂಧವ್ಯವನ್ನು ಬೆಳಸಿದ್ದರು. ಕೌಶಾಂಬಿಯ ಅರಸರಲ್ಲಿ ಬಹಸತಿಮಿತ (ಬೃಹಸ್ಪತಿಮಿತ್ರ)ನೆಂಬಾತ ಪ್ರಮುಖ. ಈತನನ್ನು ಗುರುತಿಸುವುದರಲ್ಲಿ ತೊಡಕುಗಳಿವೆ. ಈ ಹೆಸರಿನ ಇಬ್ಬರಾದರೂ ಅರಸರು ಇಲ್ಲಿ ಆಳಿದಂತೆ ತೋರುತ್ತದೆ. ಕ್ರಿ.ಪೂ. ೨ನೆಯ ಶತಮಾನದಿಂದ ಸುಮಾರು ೧ನೆಯ ಶತಮಾನದ ಮಧ್ಯಭಾಗದವರೆಗೂ ಮಿತ್ರವಂಶದ ಅರಸರು ಮಥುರೆಯಲ್ಲಿ ಆಳಿದರು. ನಂತರ ಪುರುಷದತ್ತ, ಉತ್ತಮದತ್ತ ಮುಂತಾದವರು ಅಧಿಕಾರಕ್ಕೆ ಬಂದರು. ಇವರು ನಾಗವಂಶಕ್ಕೆ ಸೇರಿದವರೆಂಬ ಊಹೆಯನ್ನು ಒಪ್ಪಲಾಗಿಲ್ಲ. ಕ್ರಿ. ಪೂ. ಸು. ೭೫ರಲ್ಲಿ ಮಥುರೆ ಶಕರ ಸ್ವಾಧೀನ

ವಾಯಿತು. ನಂತರ ೫೫೦ ವರ್ಷಗಳಕಾಲ ಮಥುರೆ ಪರಕೀಯರ ಆಡಳಿತಕ್ಕೊಳಪಟ್ಟಿತ್ತು. ಆಗ್ರದಿಂದ ಜಯಪುರದವರೆಗೂ ಹಬ್ಬಿದ್ದ, ಮತ್ಸ್ಯದೇಶವೆನಿಸಿದ್ದ ಪ್ರದೇಶದಲ್ಲಿ ಅರ್ಜುನಾಯನರು ಆಳುತ್ತಿದ್ದರು. ಪುರಾತನ ಜನಾಂಗಕ್ಕೆ ಸೇರಿದ ಇವರು ಕ್ಷತ್ರಿಯವರ್ಗಕ್ಕೆ ಸೇರಿದವರೆಂದು ಪಾಣಿನಿಯೇ ಹೇಳಿದ್ದಾನೆ. ಶುಂಗರ ನಂತರದ ಕಾಲದಲ್ಲಿ ಇವರು ಇಲ್ಲಿ ಸ್ವತಂತ್ರವಾಗಿ ಆಳುತ್ತಿದ್ದರೆಂಬುದು ಇವರ ನಾಣ್ಯಗಳಿಂದ ತಿಳಿದಿದೆ. ನೆರೆಯ ಪ್ರದೇಶದಲ್ಲಿ ದಾಳಿ ಮಾಡಿದ ಶಕರ ಆಕ್ರಮಣಕ್ಕೆ ಇವರು ಸಹ ತುತ್ತಾದರು.

ಪುಷ್ಯಮಿತ್ರನ ಕಾಲದಲ್ಲಿ ಪಂಜಾಬ್ ಪ್ರಾಂತ ಅವನಿಗೆ ಸೇರಿತ್ತು. ಅನಂತರ ಅವನ ಉತ್ತರಾಧಿಕಾರಿಗಳು ಅದನ್ನು ಕಳೆದುಕೊಂಡರು. ರಾವಿನದಿಯವರೆಗಿನ ಪ್ರದೇಶವನ್ನು ಯವನರ ಮಿನಾಂಡರ್ ವಶಪಡಿಸಿಕೊಂಡಿದ್ದ. ರಾವಿ ಮತ್ತು ಯಮುನಾ ನಡುವಣ ಭಾಗದಲ್ಲಿ ಹಲವು ಜನಾಂಗಗಳ ಅರಸುಮನೆತನಗಳು ಶುಂಗರ ನಂತರದ ಕಾಲದಲ್ಲಿ ಪ್ರಾಬಲ್ಯಕ್ಕೆ ಬಂದುವು. ಅವುಗಳಲ್ಲಿ ಔದುಂಬರರು ಪ್ರಮುಖರು. ರಾವಿ-ಬಿಯಾಸ್ ನಡುವಣ ಸೀಮೆ ಇವರದು. ಶಿವದಾಸ, ರುದ್ರದಾಸ, ಮಹಾದೇವ ಇವರಲ್ಲಿ ಕೆಲವರು. ಬಿಯಾಸ್-ಯಮುನಾನದಿಗಳ ಮೇಲ್ಭಾಗದಲ್ಲಿ ಸಿವಾಲಿಕ್ ಬೆಟ್ಟಗಳ ಬುಡದ ಪ್ರಾಂತದಲ್ಲಿ ಕುಣಿಂದರು ಇದ್ದರು. ಬ್ರಾಹ್ಮಿ ಮತ್ತು ಖರೋಷ್ಠಿ ಲಿಪಿಗಳಲ್ಲಿರುವ ಇವರ ನಾಣ್ಯಗಳ ಮೇಲಿನ ಆಲೇಖಗಳು ಪ್ರಾಕೃತಭಾಷೆಯಲ್ಲಿವೆ. ವಿಷ್ಣುಪುರಾಣ, ಮಹಾಭಾರತ, ಬೃಹತ್ಸಂಹಿತೆಗಳಲ್ಲಿ ಇವರ ಉಲ್ಲೇಖವಿದೆ. ಅಮೋಘಭೂತಿ ಇವರಲ್ಲಿ ಒಬ್ಬ ಅರಸ. ಇವರೂ ಸಹ ಶಕರ ದಾಳಿಗೆ ತುತ್ತಾದರು. ಕುಷಾಣರ ಪ್ರಾಬಲ್ಯ ಇಳಿಮುಖವಾದಾಗ ಇವರು ಪುನಃ ತಲೆ ಎತ್ತಿದರು. ಯಮುನಾ-ಸಟ್ಲೆಜ್ ನಡುವಣ ಪ್ರಾಂತದಲ್ಲಿ ಯೌಧೇಯರಿದ್ದರು. ಹಿಂದೆಯೇ ಇವರನ್ನು ಪಾಣಿನಿಯು ಶಸ್ತ್ರಜೀವಿಗಳೆಂದು ವರ್ಣಿಸಿದ್ದಾನೆ. ಶಕರನ್ನು ಎದುರಿಸಿ ತಮ್ಮ ಸ್ವಾತಂತ್ರ್ಯವನ್ನೂ ಅಸ್ತಿತ್ವವನ್ನೂ ಇವರು ಉಳಿಸಿಕೊಂಡರು. ಅನಂತರ ಕುಷಾಣರನ್ನು ಹೊಡೆದೋಡಿಸುವಲ್ಲಿ ಪ್ರಮುಖಪಾತ್ರ ವಹಿಸಿದರು.

ವಾಯವ್ಯ ಪ್ರದೇಶದಲ್ಲಿ ರಾಜತ್ವವನ್ನು ಉಳಿಸಿಕೊಂಡಿದ್ದ ರಾಜ್ಯಗಳೇ ಅಲ್ಲದೇ ಗಣರಾಜ್ಯಗಳಂತಿದ್ದ ಸಂಘಗಳೂ ಅಸ್ತಿತ್ವದಲ್ಲಿದ್ದುವು. ಪಾಣಿನಿಯೇ ಇಂತಹ ಸಂಘಗಳನ್ನು ಉಲ್ಲೇಖಿಸಿದ್ದಾನೆ. ಅಲೆಕ್ಸಾಂಡರನು ತನ್ನ ದಂಡಯಾತ್ರೆಯ ಸಮಯದಲ್ಲಿ ಹಲವಾರು ಇಂತಹ ಸಂಘಗಳನ್ನು ಎದುರಿಸಬೇಕಾಯಿತು. ಕ್ಷುದ್ರಕರು, ಮಾಲವರು ಅಲೆಕ್ಸಾಂಡರನನ್ನು ಆರಂಭದಲ್ಲಿ ಎದುರಿಸಿ ನಂತರ ಶರಣಾದರು. ಕರ್ಟಿಯಸ್ ಎಂಬ ಗ್ರೀಕ್‌ಲೇಖಕ ಇವರ ಶೌರ್ಯಪ್ರತಾಪಗಳನ್ನು ಕುರಿತು ವಿವರವಾಗಿ ಬರೆದಿದ್ದಾನೆ. ಅನಾದಿಕಾಲದಿಂದಲೂ ಸ್ವತಂತ್ರರಾಗಿದ್ದ ಇವರು ಮಾಡಿದ ಮಹಾಪರಾಧವೆಂದರೆ ಸ್ವಾತಂತ್ರ್ಯಾಪೇಕ್ಷೆ! ಇದನ್ನು ಇವರ ಬಾಯಿಂದ ಕೇಳಿದ ಅಲೆಕ್ಸಾಂಡರ್ ಇವರನ್ನು ಮುಕ್ತಗೊಳಿಸಿದನಂತೆ. ಪತಂಜಲಿ ಇವರಿಬ್ಬರೂ ಕೂಡಿ ಸ್ಥಾಪಿಸಿದ ಸೈನ್ಯವನ್ನು ಕ್ಷುದ್ರಕಮಾಲಿವೀಸೇನಾ ಎಂಬುದಾಗಿ ಹೆಸರಿಸಿದ್ದಾನೆ. ಅಲೆಕ್ಸಾಂಡರನ ನಂತರದ ಕಾಲದಲ್ಲಿ

ಇವರು ನಿಧಾನವಾಗಿ ತಮ್ಮ ಮೂಲಸ್ಥಾನದಿಂದ ವಲಸೆಹೊರಟು ರಾಜಸ್ಥಾನದ ಪಶ್ಚಿಮಭಾಗಗಳಲ್ಲಿ ನೆಲಸಿದರು. ಈ ವೇಳೆಗೆ (ಕ್ರಿ.ಪೂ. ಸು. ೨ನೆಯ ಶತಮಾನ) ಕ್ಷುದ್ರಕರು ಮಾಲವರಲ್ಲಿ ಸಮ್ಮಿಳಿತರಾದಂತೆ ತೋರುತ್ತದೆ. ವಿಕ್ರಮ ಅಥವಾ ಕೃತ ಎಂಬ ಹೆಸರಿನ ಕ್ರಿ.ಪೂ. ೫೮–೫೭ರಿಂದ ಗಣಿಸಲು ಆರಂಭವಾದ ಶಕೆಯೊಂದು ಇವರಿಗೆ ಸಂಬಂಧಿಸಿದುದೆಂಬುದೊಂದು ವಾದವಿದೆ. ಸಂಘಗಳನ್ನು ಕುರಿತು ಬರೆಯುವಾಗ ಕೌಟಿಲ್ಯನು ಕೆಲವರನ್ನುವಾರ್ತಾಜೀವಿಗಳೆಂದೂ ಇತರರನ್ನು ರಾಜಶಬ್ದೋಪಜೀವಿಗಳೆಂದೂ ವ್ಯತ್ಯಾಸವನ್ನು ತೋರಿಸುತ್ತಾನೆ. ಕಾಂಭೋಜ, ಸುರಾಷ್ಟ್ರ, ಶ್ರೇಣಿ ಮುಂತಾದವರು ವಾರ್ತಾಜೀವಿಗಳು ಎಂದರೆ ವ್ಯವಸಾಯ ವ್ಯಾಪಾರಗಳಲ್ಲಿ ತೊಡಗಿದವರು. ಲಿಚ್ಛವಿಕ, ವ್ರಿಜ್ಜ, ಕುರು, ಪಾಂಚಾಲ ಮುಂತಾದವರು ರಾಜಾ ಎಂಬ ಬಿರುದನ್ನು ಪಡೆದವರು. ಕಾಂಭೋಜರನ್ನು ಅಶೋಕನ ಶಾಸನಗಳಲ್ಲಿಯೂ ಉಲ್ಲೇಖಿಸಿದೆ. ಪಶ್ಚಿಮ ಆಫ್ಘನಿಸ್ಥಾನದಲ್ಲಿ ನೆಲಸಿದ್ದವರಿವರು. ಸುರಾಷ್ಟ್ರರು ಕಾಥೇವಾಡದ ಸುತ್ತಲೂ ನೆಲಸಿದ್ದರು. ಕ್ರಿ.ಶ. ೨ನೆಯ ಶತಮಾನದಲ್ಲಿಯೂ ಇವರು ಈ ಪ್ರದೇಶದಲ್ಲಿದ್ದರೆಂಬುದು ರುದ್ರದಾಮನ ಶಾಸನದಿಂದ ವ್ಯಕ್ತವಾಗುತ್ತದೆ. ಪಹ್ಲವ ಸುವಿಶಾಖನ ಪಾಲನೆಗೆ ಸುರಾಷ್ಟ್ರರೂ ಆನರ್ತರೂ ಒಳಪಟ್ಟಿದ್ದರೆಂದು ಇಲ್ಲಿ ಹೇಳಿದೆ.

## ಯವನರು

ಕ್ರಿ.ಪೂ. ೨–೧ನೆಯ ಶತಮಾನಗಳಲ್ಲಿ ಭಾರತದಲ್ಲಿ ರಾಜ್ಯಸ್ಥಾಪನೆ ಮಾಡಿ ಇಲ್ಲಿನ ರಾಜಕೀಯವ್ಯವಹಾರಗಳಲ್ಲಿ ಹಸ್ತಕ್ಷೇಪ ಮಾಡಿದ ಪರಕೀಯರಲ್ಲಿ ಯವನರು ಪ್ರಮುಖರು. ಬಹಳ ಹಿಂದಿನಿಂದ ಖಾನ್‌ದೇಶದ ಪೂರ್ವದಲ್ಲಿ ಗ್ರೀಕರು ವಾಸಿಸಿದ್ದರು. ಪರ್ಷಿಯಾದೇಶದ ಸಲ್ಯೂಸಿಡ್ ಸಾಮ್ರಾಜ್ಯದ ಪ್ರಜೆಗಳೂ ಆಗಿದ್ದು, ಕ್ರಮೇಣ ಇರಾನ್ ದೇಶದವರೊಡನೆ ರಕ್ತಸಂಬಂಧಗಳನ್ನು ಬೆಳಸಿದ್ದರು. ಸೆಲ್ಯೂಕಸನ ಪಾಲಿಗೆ ಬಂದ ಅಲೆಕ್ಸಾಂಡರನ ರಾಜ್ಯದಲ್ಲಿ ಬ್ಯಾಕ್ಟ್ರಿಯ ಮತ್ತು ಪಾರ್ಥಿಯ ಪ್ರಾಂತಗಳು ಸೇರಿದ್ದುವು. ಖುರಾಸಾನ್ ಮತ್ತು ಕ್ಯಾಸ್ಪಿಯನ್ ಸಮುದ್ರದ ಆಗ್ನೇಯ ಭಾಗಗಳನ್ನೊಳಗೊಂಡ ಪ್ರದೇಶ ಪಾರ್ಥಿಯ. ಇದಕ್ಕೆ ಪೂರ್ವದಲ್ಲಿ ಉತ್ತರ ಆಫ್ಘನಿಸ್ಥಾನದ ಬಾಲ್ಖ್ ಸುತ್ತಲಿನ ಪ್ರದೇಶ ಬ್ಯಾಕ್ಟ್ರಿಯ. ಸೆಲ್ಯೂಕಸನ ನಂತರ ಈ ಪ್ರಾಂತಗಳು ಕೇಂದ್ರಾಡಳಿತದ ವಿರುದ್ಧ ದಂಗೆ ಎದ್ದು ಸ್ವತಂತ್ರವಾದುವು. ಇದಕ್ಕೆ ಮುಖ್ಯ ಕಾರಣ ಬ್ಯಾಕ್ಟ್ರಿಯದ ಡಿಯೋಡೋಟಸ್. ಇವನ ಬಳಿಕ ಇಮ್ಮಡಿ ಡಿಯೋಡೋಟಸ್ ನೆರೆಯಲ್ಲಿನ ಪಾರ್ಥಿಯನರೊಡನೆ ಸ್ನೇಹಸಾಧಿಸಿ ಸೆಲ್ಯೂಸಿಡ್ ಅರಸನನ್ನು ಹಿಮ್ಮೆಟ್ಟಿದನು. ಕೆಲವರ್ಷಗಳ ನಂತರ ಅಧಿಕಾರಕ್ಕೆ ಬಂದ ಯೂಥಿಡಿಮಸ್‌ನ ಮಗ ಡಿಮಿಟ್ರಿಯಸ್ (ದಿಮಿತ)ನು ತನ್ನ ರಾಜ್ಯವನ್ನು ಭದ್ರಪಡಿಸಿಕೊಂಡು ಭಾರತದ ವಾಯವ್ಯ ಗಡಿಪ್ರಾಂತಗಳನ್ನು ಆಕ್ರಮಿಸತೊಡಗಿದನು. ಪುಷ್ಯಮಿತ್ರ ಶುಂಗನು ಎದುರಿಸಿ ಹೊರದೂಡಿದ ಯವನ ಈತನೇ ಆಗಿರಬಹುದು. ಆದರೆ ಇದೇ ಸಮಯದಲ್ಲಿ ದಿಮಿತನನ್ನು ಯೂಕ್ರಟೈಡಿಸ್ ಎಂಬಾತನು ಬ್ಯಾಕ್ಟ್ರಿಯ

ದಿಂದ ಹೊರದೂಡಿದನು. ಪದಚ್ಯುತನಾದ ದಿಮಿತನು ಭಾರತದಲ್ಲಿ ತಾನು ಆಕ್ರಮಿಸಿದ್ದ ಪ್ರದೇಶಗಳನ್ನೇ ಸ್ಥಿರಪಡಿಸಿಕೊಳ್ಳಬೇಕಾಯಿತು. ಪಾರ್ಥಿಯದಲ್ಲಿ ಆಳುತ್ತಿದ್ದ ಮಿತ್ರಡೇಟಸ್ ಬ್ಯಾಕ್ಟ್ರಿಯದ ಅರಿಯ (ಹೆರಾಟ್) ಮತ್ತು ಅರಕೋಸಿಯ (ಕಾಂದಹಾರ್) ಗಳನ್ನು ಆಕ್ರಮಿಸಿದಾಗ ಅಲ್ಲಿದ್ದ ಯವನರು ಸಹ ಭಾರತದ ಗಡಿ ಸೀಮೆಗಳಿಗೆ ಸರಿದರು. ಹೀಗೆ ಭಾರತಕ್ಕೆ ಬಂದು ಇಲ್ಲಿ ಪಟ್ಟಭದ್ರರಾದ ಗ್ರೀಕ್‌ಅರಸರ—ದಿಮಿತನ ಹಾಗೂ ಯೂಕ್ರಟೈಡಿಸ್‌ನ ವಂಶಜರ—೩೦ ಹೆಸರುಗಳು ಅವರು ಚಲಾವಣೆಗೆ ತಂದ ನಾಣ್ಯಗಳ ಮೂಲಕ ತಿಳಿದುಬಂದಿವೆ. ಇವರಲ್ಲಿ ಮಿನಾಂಡರ್ ಪ್ರಮುಖ. ಈತ ಬೌದ್ಧಮತವನ್ನವಲಂಬಿಸಿದ. ಮಿಳಿಂದಪ್ರಶ್ನೆಗಳು (ಮಿಳಿಂದಪನ್ಹೊ) ಎಂಬುದು ಇವನಿಗೆ ಸಂಬಂಧಿಸಿದುದೆಂದು ಹೇಳಲಾದ ಗ್ರಂಥ. ನಾಗಸೇನನೆಂಬ ಬೌದ್ಧಸಂನ್ಯಾಸಿ ಮಿಳಿಂದನ ಪ್ರಶ್ನೆಗಳಿಗೆ ಕೊಟ್ಟ ಉತ್ತರಗಳನ್ನೆಲ್ಲಾ ಇದರಲ್ಲಿ ಕ್ರೋಡೀಕರಿಸಲಾಗಿದೆ. ಇನ್ನೊಬ್ಬ ಗ್ರೀಕ್‌ಅರಸ ಅಂತಿಲಿಕಿತ. ಬೆಸ್ನಗರ(ಭಿಲ್ಸಾ)ದಲ್ಲಿ ಗರುಡಧ್ವಜ (ಮೇಲ್ಭಾಗದಲ್ಲಿ ಗರುಡನ ಪ್ರತಿಮೆಯನ್ನು ಹೊಂದಿದ್ದ ಕಂಬ)ವನ್ನು ಈತನ ಪ್ರತಿನಿಧಿಯಾದ ಹೆಲಿಯೊಡೊರಸನು ನಿಲ್ಲಿಸಿದನೆಂದು ಈಗಾಗಲೇ ಹೇಳಿದೆ. ಅಂತಿಲಿಕಿತನು ತಕ್ಷಶಿಲೆ ಮತ್ತು ಸುತ್ತಲಿನ ಪ್ರದೇಶಗಳಲ್ಲಿ ಆಳುತ್ತಿದ್ದನು. ಕ್ರಿ.ಪೂ. ೧ನೆಯ ಶತಮಾನದ ಕೊನೆಯಲ್ಲಿ ಗಾಂಧಾರ ಆಫ್ಘನಿಸ್ಥಾನಗಳು ಸಹ ಇವರ ಕೈಬಿಟ್ಟುವು. ಕ್ರಮೇಣ ಕಾಥೇವಾಡ ಮತ್ತು ಮೇವಾಡ ಪ್ರದೇಶಗಳಲ್ಲಿ ಇವರು ಸಣ್ಣಪುಟ್ಟ ಮಾಂಡಲಿಕರಾಗಿ ಅಧಿಕಾರದಲ್ಲುಳಿಯಬೇಕಾಯಿತು.

ಗ್ರೀಕರ ಈ ದಾಳಿಗಳು ಹಾಗೂ ಅಲ್ಪಕೆ ಅಲೆಕ್ಸಾಂಡರನ ದಾಳಿಗಿಂತಲೂ ಹೆಚ್ಚು ಪರಿಣಾಮಕಾರಿಯಾದುದಾಗಿವೆ. ಎರಡು ಶತಮಾನಗಳ ಅವಧಿಯಲ್ಲಿ ಎರಡು ಸಂಸ್ಕೃತಿಗಳು ಪರಸ್ಪರ ಪ್ರಭಾವಿತವಾದುವೆಂಬುದು ನಿಜ. ಭಾರತದಲ್ಲಿ ಪ್ರಚಲಿತವಾಗಿದ್ದ ಬೌದ್ಧ ವೈಷ್ಣವಧರ್ಮಗಳು ಗ್ರೀಕರನ್ನು ಆಕರ್ಷಿಸಿದುವು. ಈ ಮತಗಳನ್ನು ಅವರಲ್ಲಿ ಕೆಲವರು ಅವಲಂಬಿಸಿದರು. ಕ್ರಿ.ಪೂ. ೨ನೆಯ ಶತಮಾನದಲ್ಲಿ ಥಿಯೊಡೊರಸ್ ಎಂಬ ಯವನ ಅಧಿಕಾರಿ ಸ್ವಾಟ್ ನದೀಕೊಳ್ಳದ ಉದ್ಯಾನ ದೇಶದಲ್ಲಿ ಭಗವಾನ್ ಬುದ್ಧನ ಅವಶೇಷಗಳನ್ನು ರಕ್ಷಿಸಲು ಸ್ತೂಪಗಳನ್ನು ಕಟ್ಟಿಸಿದನು. ಇನ್ನೊಬ್ಬ ಥಿಯೊಡೊರಸ್ ಸರ್ವಜೀವಿಗಳ ಸೌಕರ್ಯಕ್ಕಾಗಿ ಉದ್ಯಾನದಲ್ಲಿ ಕೆರೆಯೊಂದನ್ನು ತೋಡಿಸಿದನು. ತಕ್ಷಶಿಲೆಯ ಸಮೀಪದಲ್ಲಿ ಬೌದ್ಧಸ್ತೂಪವೊಂದು ಕ್ರಿ.ಪೂ. ೧ನೆಯ ಶತಮಾನದಲ್ಲಿ ಯವನರಿಂದ ಕಟ್ಟಲ್ಪಟ್ಟಿತು. ನಾಣ್ಯಗಳ ಅಚ್ಚನ್ನು ತಯಾರಿಸುವ, ನಾಣ್ಯಗಳನ್ನು ಅಚ್ಚುಹಾಕಿಸುವ ಕಲೆ ಭಾರತಕ್ಕೆ ಗ್ರೀಕರ ಕೊಡುಗೆ ಎನ್ನಬಹುದು. ಗ್ರೀಸ್ ದೇಶದ ಸ್ತಾತರ್ ಮತ್ತು ದಿನಾರ್‌ಗಳು ನಮ್ಮಲ್ಲೂ ಪ್ರಚಾರಕ್ಕೆ ಬಂದವು. ಇದರಿಂದ ಎರಡೂ ದೇಶಗಳ ನಡುವಣ ವಾಣಿಜ್ಯ ಸಂಬಂಧಗಳು ಹೆಚ್ಚಿದುವು. ಗ್ರೀಕರ ವಾಸ್ತುಶಿಲ್ಪ ಮತ್ತು ಕಲೆ ಸಹ ಭಾರತದಲ್ಲಿ ತಮ್ಮ ಪ್ರಭಾವವನ್ನು ಬೀರಿದವು.

ಯವನರ ಅರಸನನ್ನು ಓಡಿಸಿದ ಪಾರ್ಥಿಯದ ಮಿತ್ರಡೇಟಸ್ ಬ್ಯಾಕ್ಟ್ರಿಯನನ್ನು ಆಕ್ರಮಿಸಿದ. ಆದರೆ ಅಲ್ಪಕಾಲದಲ್ಲಿಯೇ ಚೀನದಿಂದ ವಲಸೆ ಹೊರಟಿದ್ದ ಮಂಗೋಲಿ

ಯನ್ ಬುಡಕಟ್ಟಿಗೆ ಸೇರಿದ ಜನರು ಶಕರನ್ನು ಪೂರ್ವಾಭಿಮುಖವಾಗಿ ಒತ್ತಿದರು. ಈ ಶಕರು ಬ್ಯಾಕ್ಟ್ರಿಯಕ್ಕೂ ಬಂದರು. ಇಮ್ಮಡಿ ಮಿತ್ರಡೇಟಸ್ ಇವರನ್ನು ತಡೆಗಟ್ಟಿ ಅಧೀನದಲ್ಲಿಟ್ಟುಕೊಂಡನು. ಆದರೆ ಗ್ರೀಕರಲ್ಲಿದ್ದ ಅಂತಃಕಲಹಗಳೇ ಅವರ ಶಕ್ತಿಯನ್ನು ಮುರಿದು ಶಕರು ಅಲ್ಲಿ ಪ್ರಬಲರಾಗಿ ಆ ದೇಶವನ್ನು ಆಕ್ರಮಿಸಲು ಸಹಾಯಕವಾಯಿತು.

## ಶಕರು

ಬ್ಯಾಕ್ಟ್ರಿಯಾದೇಶದ ಮೇಲಿನ ತಮ್ಮ ಹಿಡಿತವನ್ನು ಗ್ರೀಕರು ಕಳೆದುಕೊಳ್ಳಲು ಶಕರು ಬಹುಮಟ್ಟಿಗೆ ಕಾರಣರು. ಶಕ ಮತ್ತು ಯೂಚಿಗಳು ಮಧ್ಯಏಸಿಯದ ಅಲೆಮಾರಿ ಜನಾಂಗ. ಚೀನೀ ಭಾಷೆಯಲ್ಲಿ ಇವರನ್ನು ಸೈವಾಂಗ್ (Saiwang) ಎಂದು ಕರೆಯಲಾಗಿದೆ. ಪರ್ಷಿಯದೇಶಕ್ಕೆ ಸೇರಿದ ಡ್ರಾಂಗಿಯಾನಾ ಇವರ ಮೂಲಸ್ಥಳ. ಶಕಸ್ಥಾನ (ಸೈಸ್ತಾನ್) ಎಂದು ಇದನ್ನು ನಂತರ ಕರೆಯಲಾಯಿತು. ಮೊದಲನೆಯ ಡೇರಿಯಸ್ಸನ ಶಾಸನದಲ್ಲಿ ಇವರ ಪ್ರಥಮ ಉಲ್ಲೇಖವಿದೆ. ಮೊನಚಾದ ಶಿರಸ್ತ್ರಾಣಗಳನ್ನು ಧರಿಸಿದ ಶಕರು (ಶಕತೀಗ್ರಖೌದಾ) ಇವರೆಂದು ಇವರು. ಶಕಹೌಮವರ್ಗ ಅಥವಾ ಶಕತರದ್ರಯಾ (ಸಮುದ್ರದ ಹೊರಗಿನ) ಎಂಬ ಇತರರಿಗಿಂತ ಭಿನ್ನರೆಂದು ಹೇಳಿದೆ. ಚೀನಾ ತುರ್ಕಸ್ತಾನದಲ್ಲಿದ್ದ ಯೂಚಿ ಜನಾಂಗದವರನ್ನು ಹಿಯಾಂಗ್ ನು (Hiang nu) ಎಂಬ ಮತ್ತೊಂದು ಜನಾಂಗದವರು ಅಲ್ಲಿಂದ ಹೊರದೂಡಿದರು. ಅವರು ಶಕರನ್ನು ಒತ್ತರಿಸಿ ಸೈಸ್ತಾನವನ್ನು ಆಕ್ರಮಿಸಿದರು. ಕ್ರಿ.ಪೂ. ೨ನೆಯ ಶತಮಾನದಲ್ಲಿ ಬ್ಯಾಕ್ಟ್ರಿಯದಲ್ಲಿ ಆಂತರಿಕ ಕಲಹಗಳಾದಾಗ ಅದರ ಉಪಯೋಗ ಪಡೆದ ಶಕರು ಆ ದೇಶವನ್ನು ಆಕ್ರಮಿಸಿದರು. ಕ್ರಮೇಣ ಪೂರ್ವಾಭಿಮುಖವಾಗಿ ಸರಿಯುತ್ತ ಭಾರತಕ್ಕೂ ಈ ಶಕರು ಕಾಲಿಟ್ಟರು. ಮೊದಲು ಇವರು ಹಿಂದುಕುಷ್ ಪರ್ವತದ ದಕ್ಷಿಣಭಾಗದಲ್ಲಿ ನೆಲಸಿದರು. ಆದರೆ ಇವರ ಮುನ್ನಡೆ ಕೆಲವು ಕಾಲ ಸ್ಥಗಿತಗೊಂಡಿತು. ಪಾರ್ಥಿಯನರು ಇವರನ್ನು ತಡೆದರು. ಅನೇಕ ವರ್ಷಗಳ ವಾಸದಿಂದ ಈ ಎರಡೂ ಪಂಗಡಗಳಲ್ಲಿ ರಕ್ತಸಂಬಂಧ ವೇರ್ಪಟ್ಟಿತು. ಆ ಬಳಿಕ ಶಕರು ಕಿಪಿನ್ (ಕಾಪಿಶ)ದಲ್ಲಿ ನೆಲಸಿದರು. ಇದಕ್ಕೂ ಮೊದಲೇ ಶಕರ ಸಣ್ಣ ಗುಂಪುಗಳು ಭಾರತಕ್ಕೆ ಕಾಲಿಟ್ಟಂತೆ ತೋರುತ್ತದೆ. ಪತಂಜಲಿ ತನ್ನ ಮಹಾಭಾಷ್ಯದಲ್ಲಿ ಇವರನ್ನು ಅನಿರವಸಿತ (ಶುಚಿಯಾದ) ಶೂದ್ರರೆಂದು ಕರೆದಿದ್ದಾನೆ. 'ಮನುಸಂಹಿತೆ' ಇವರನ್ನು ಕೀಳುಮಟ್ಟದ ಕ್ಷತ್ರಿಯರೆಂದು ಪರಿಗಣಿಸಿದೆ.

ಪಾರ್ಥಿಯರೊಡನೆ ಬೆರೆತುಹೋಗಿ ಪೂರ್ವಇರಾನ್‌ನಲ್ಲಿ ಆಳಿದ ಶಕರಲ್ಲಿ ಮೊದಲಿಗನು ವನಾನ (Vonones). ಈತನ ನಾಣ್ಯಗಳಲ್ಲಿ ಈತನನ್ನು ಬೆಸಿಲಿಯಸ್ ಬೆಸಿಲಿಯಾನ್ (Besileus Besileon). (ರಾಜಾಧಿರಾಜ) ಎಂದು ಕರೆದಿದೆ. ಇದೇ ಬಿರುದನ್ನು ಮಾಉಸ್ (Maus) ಎಂಬ ಇನ್ನೊಬ್ಬ ಅರಸನ ನಾಣ್ಯಗಳಲ್ಲಿಯೂ ಕಾಣಬಹುದು. ವನಾನ ದಕ್ಷಿಣ ಆಫ್ಘನಿಸ್ಥಾನವನ್ನು ಆಳುತ್ತಿದ್ದ. ಈತನು ಕ್ರಿ. ಪೂ. ೫೮ರಿಂದ ಗಣಿಸಲ್ಪಟ್ಟ ವಿಕ್ರಮಸಂವತ್ಸರದ ಮೂಲಪುರುಷನೆಂದೂ ಹೇಳಲಾಗಿದೆ. ಕ್ರಿಸ್ತಶಕಾರಂಭ

ದಲ್ಲಿ ಭಾರತದ ವಾಯುವ್ಯಭಾಗದ ಕೆಲ ಪ್ರದೇಶಗಳನ್ನು ಆಕ್ರಮಿಸಿ ಆಳುತ್ತಿದ್ದವನು ಮಾಉಸ್. ತಕ್ಷಶಿಲೆಯಲ್ಲಿ ಇವನ ಶಾಸನವೊಂದು ದೊರೆತಿದೆ. ಇವನ ಕಾಲದಲ್ಲಿ ಶಕರು ಮಥುರೆಯವರೆಗೂ ರಾಜ್ಯವನ್ನು ವಿಸ್ತರಿಸಿದರು. ಕಿಪಿನ್ ಮತ್ತು ಕಾಬೂಲ್ ಭಾಗ ಗಳಲ್ಲಿನ ಈ ಶಕರನ್ನು ಹೊರದೂಡಿದವನು ಪಾರ್ಥಿಯನರ ಗುಡುವಹರ ಅಥವಾ ಗೊಂಡೊಫರ್ನೆಸ್. ನಾಣ್ಯಗಳೇ ಅಲ್ಲದೆ ಪೆಷಾವರ್ ಸಮೀಪದ ತಾಖ್ತ್ ಇ ಬಾಹಿಯಲ್ಲಿ ಇವನ ಶಾಸನವೂ ದೊರೆತಿದೆ. ಕ್ರಿ.ಶ. ೧ನೆಯ ಶತಮಾನದಲ್ಲಿ (೨೧ರಿಂದ ೪೬) ಆಳಿದ ಈತನು ಏಸುಕ್ರಿಸ್ತನ ಶಿಷ್ಯನಾದ ಸಂತ ಥಾಮುಸನನ್ನು ಆದರಿಸಿ ಸ್ವತಃ ಕ್ರೈಸ್ತಮತ ವನ್ನಪ್ಪಿದನೆಂಬುದೊಂದು ಕತೆ. ಶಕರ ರಾಜ್ಯವನ್ನು ಕುಷಾಣರು ಕಸಿದರೂ ಶಕರು ಅಲ್ಲಲ್ಲಿ ಮಾಂಡಲಿಕರಾಗಿ ಪಶ್ಚಿಮಭಾರತದ ಕೊಂಕಣಪ್ರದೇಶದಲ್ಲಿ ಇನ್ನೂ ೨ ಶತ ಮಾನಗಳ ಕಾಲ ನೆಲಸಿದ್ದರು.

## ಕುಷಾಣರು

ಕ್ರಿಸ್ತಶಕಾರಂಭದಲ್ಲಿ ಭಾರತದ ಈ ಭಾಗದಲ್ಲಿ ಆಳಿದ ಪರಕೀಯರಲ್ಲಿ ಕುಷಾಣರು ಇತಿಹಾಸಪುಟಗಳಲ್ಲಿ ಅಮರರಾಗಿದ್ದಾರೆ. ಇವರು ಮೂಲತಃ ಯಾವ ದೇಶದವರೆಂದು ಖಚಿತವಾಗಿ ಹೇಳಲಾಗಿಲ್ಲ. ಯೂಚಿ ಜನಾಂಗದವರಲ್ಲಿ ಎರಡು ಗುಂಪುಗಳು, ಸಣ್ಣ ಗುಂಪಿನ ಜನ ಟಿಬೆಟ್ ಕಡೆ ಸರಿದರು. ದೊಡ್ಡ ಗುಂಪಿಗೆ ಸೇರಿದವರು ಶಕರ ನಂತರ ಬ್ಯಾಕ್ಟ್ರಿಯದಲ್ಲಿ ನೆಲಸಿದರು. ಸಣ್ಣಸಣ್ಣ ಗುಂಪುಗಳಾಗಿ ಒಡೆದು ವಲಸೆ ಹೊರಟ ಇವರಲ್ಲಿ ಭಾರತಕ್ಕೆ ಬಂದವರು ಕುಷಾಣರು (Kueishuang). ಪುರಾಣಗಳಲ್ಲಿ ಯವನರ ನಂತರ ತುಖಾರ ಅಥವಾ ತುಷಾರ ವಂಶದ ೧೪ ಅರಸರು ಶತಮಾನಕ್ಕೂ ಹೆಚ್ಚುಕಾಲ ಭಾರತದಲ್ಲಿ ಆಳಿದರೆಂದು ಹೇಳಿದೆ. ಇವರೇ ಕುಷಾಣರು ಎಂಬುದೊಂದು ಊಹೆ.

ಕುಷಾಣರು ಪಾರ್ಥಿಯನರನ್ನು ಸೋಲಿಸಿ ಗಾಂಧಾರವನ್ನು ಆಕ್ರಮಿಸಿದರು. ಕುಜಲಕಥ ವೀಸನು ಕಾಬೂಲ್, ಕಾಂದಹಾರ, ಕಾಫಿರಿಸ್ಥಾನ್ ದೇಶಗಳನ್ನು ವಶಪಡಿಸಿಕೊಂಡಿದ್ದನು. ಈತನು ಕ್ರಿ.ಶ. ೧೫ರಿಂದ ೬೪ರ ಅಥವಾ ೪೫ರಿಂದ ೭೮ ರವರೆಗೆ ಆಳಿದನೆಂದು ಹಲವರು ಹೇಳಿದ್ದಾರೆ. ಆದರೆ ಈತನ ಖರೋಷ್ಠೀ ಲಿಪಿಯ ಶಾಸನಗಳಲ್ಲಿ ಸೂಚಿಸಲ್ಪಟ್ಟ ವರ್ಷಗಳು ಕ್ರಿ.ಪೂ. ೫೮ರಲ್ಲಿ ಆರಂಭವಾದ ಕಾಲಗಣನೆಗೆ ಸಂಬಂಧಿಸಿದ್ದು, ತತ್ಕಾರಣ ಈತನು ಕ್ರಿ.ಶ. ೪೫ರಿಂದ ೭೮ರವರೆಗೆ ಆಳಿದನೆಂದು ಇತ್ತೀಚೆಗೆ ಹೂಡಲಾಗಿರುವ ವಾದ ಬಹು ಮಟ್ಟಿಗೆ ಒಪ್ಪಿಗೆಯಾಗಿದೆ. ಕ್ರಿ.ಶ. ಸು. ೬೪ರಲ್ಲಿ ಈತನು ವಾಯುವ್ಯ ಭಾರತವನ್ನು ಗೆದ್ದುಕೊಂಡನು. ತಕ್ಷಶಿಲೆಯ ೧೩೬ನೆಯ ವರ್ಷದ (ಕ್ರಿ.ಶ. ೭೮) ಶಾಸನದಲ್ಲಿ ಈತನನ್ನು ಮಹಾರಾಜ ರಾಜಾತಿರಾಜ ದೇವಪುತ್ರ ಎಂದು ವರ್ಣಿಸಲಾಗಿದೆ. ಈತನು ಬೌದ್ಧಮತ ವನ್ನವಲಂಬಿಸಿದ್ದನು. ವೀಮಕಥವೀಸನು ಇವನ ಮಗ. ಈತನ ಆಳಿಕೆಯ ಕಾಲ ಕ್ರಿ.ಶ. ೬೪ರಿಂದ ೭೮ ಅಥವಾ ೭೮ರಿಂದ ೧೨೫, ಮೊದಲಬಾರಿಗೆ ಚಿನ್ನದ ನಾಣ್ಯಗಳನ್ನು ಅಚ್ಚು ಹಾಕಿಸಿ ಪ್ರಚಾರಕ್ಕೆ ತಂದ ಹಿರಿಮೆ ಈತನದು. ತಾಮ್ರ ಮತ್ತು ಕಂಚಿನ ನಾಣ್ಯಗಳು

ಸಹ ಚಲಾವಣೆಯಲ್ಲಿದ್ದುವು. ಈ ಕಾಲದಲ್ಲಿ ರೋಮ್ ದೇಶದಿಂದ ಅಪಾರವಾದ ಚಿನ್ನ ಭಾರತಕ್ಕೆ ಆಮದಾಗಿತ್ತು. ಎಂತಲೇ ಚಿನ್ನದ ನಾಣ್ಯಗಳನ್ನು ಅಚ್ಚುಹಾಕಿಸಲಾಯಿತು. ಕ್ರಿ.ಶ. ೭೮ರಿಂದ ಗಣಿಸಲ್ಪಟ್ಟ ಶಕ ಕಾಲವನ್ನು ಈತನು ಆರಂಭಿಸಿದನೆಂದು ಹೇಳಿದೆ. ಆದರೆ ಇದು ಇನ್ನೂ ವಿವಾದಾಸ್ಪದ. ಈ ಕಾಲಗಣನೆಯನ್ನು ಈತನ ಉತ್ತರಾಧಿಕಾರಿಗಳಾರೂ ಉಪಯೋಗಿಸದಿದ್ದುದು ಸಂದೇಹಕ್ಕೆ ಕಾರಣ. ಈತನು ಶಿವಭಕ್ತನಾಗಿದ್ದಂತೆ ತೋರುತ್ತದೆ. ಇವನ ಕೆಲವು ನಾಣ್ಯಗಳಲ್ಲಿ ಖರೋಷ್ಠೀ ರಜಲಿಪಿಯಲ್ಲಿ 'ಮಹರಜಸ ರಾಜಾಧಿರಜಸ ಸರ್ವಲೋಗ ಇಶ್ವರಸ ಮಹಿಶ್ವರಸ ವಿಮುಕಥವಿಶಸ'—ಎಂಬ ಆಲೇಖ್ಯವಿದೆ. ಹಿಮ್ಮುಖದಲ್ಲಿ ಶಿವನ ಚಿತ್ರವೂ ಇದೆ.

ಗ್ರೀಕ್ ಭಾಷೆ ಮತ್ತು ಲಿಪಿಯ 'ಬೆಸಿಲಿಯಸ್ ಬೆಸಿಲಿಯಾನ್ ಸೂತೆರ್ ಮೆಗಸ್' ಎಂಬ ಖರೋಷ್ಠಿ ಲಿಪಿಯಲ್ಲಿ 'ಮಹರಜಸ ರಜಧಿರಜಸ ಮಹತಸ ತ್ರತರಸ' ಎಂಬ ಆಲೇಖ್ಯವುಳ್ಳ ನಾಣ್ಯಗಳು ದೊರೆತಿವೆ. ಈ ಮಹಾರಾಜಾಧಿರಾಜನ ಹೆಸರು ತಿಳಿಯದಾಗಿದೆ. ಈತನನ್ನು ಗುರುತಿಸುವುದು ಕಷ್ಟ. ವೀಮಕಥವೀಸನ ಕಾಲಕ್ಕೆ ಸೇರಿದ ನಾಣ್ಯಗಳಿವು. ದೇವಪುತ್ರ ಎಂಬ ಬಿರುದುಳ್ಳ ಕುಜಲಕರ ಕಥವೀಸನೆಂಬಾತನ ಇದೇ ಕಾಲದ ನಾಣ್ಯಗಳೂ ದೊರೆತಿವೆ. ಈತನು ವೀಮನ ಉತ್ತರಾಧಿಕಾರಿಯಾಗಿರಬಹುದೆಂದೂ ಹೆಸರಿಲ್ಲದ ಅರಸನ ಮೇಲೆ ಹೇಳಲಾದ ನಾಣ್ಯಗಳು ಈತನವೆಂದೂ ಒಂದು ಊಹೆ ಇದೆ. ಆದರೆ ಕುಜಲ ಕಥವೀಸನ ಪ್ರತಿನಿಧಿಯಾಗಿದ್ದಿರಬಹುದಾದ ಸೂತೆರ್ ಮೆಗಸ್‌ನು ಸ್ವತಃ ತನ್ನ ಹೆಸರಿನಲ್ಲಿಯೇ ನಾಣ್ಯಗಳನ್ನು ಚಲಾವಣೆಗೆ ತರುವ ಅಧಿಕಾರ ಹೊಂದಿದ್ದನೆಂದೂ ವೀಮನ ಮರಣಾನಂತರ ಈತನು ಸ್ವತಂತ್ರನಾದನೆಂದೂ ಇತ್ತೀಚೆಗೆ ಊಹಿಸಲಾಗಿದೆ.

ಕನಿಷ್ಕ ಕುಷಾಣರಲ್ಲಿ ಖ್ಯಾತಿವೆತ್ತ ಅರಸ. ವೀಮನಿಗೂ ಈತನಿಗೂ ಇದ್ದ ಸಂಬಂಧವೆಂತಹುದು ಎಂಬುದು ತಿಳಿದಿಲ್ಲ. ಈತನು ಅದೇ ವಂಶದ ಬೇರೊಂದು ಶಾಖೆಗೆ ಸೇರಿದವನಿರಬಹುದು. ಮೌರ್ಯರ ನಂತರ ಉತ್ತರ ಭಾರತದಲ್ಲಿ ವಿಸ್ತಾರವಾದ ರಾಜ್ಯವನ್ನು ಕಟ್ಟಿ ಆಳಿದವನೀತ. ಪೂರ್ವದಲ್ಲಿ ಬಿಹಾರದಿಂದ ಪಶ್ಚಿಮದಲ್ಲಿ ಖೊರಾಸಾನ್‌ವರೆಗೆ, ಉತ್ತರದಲ್ಲಿ ಖೋಟಾನ್‌ದಿಂದ ದಕ್ಷಿಣದಲ್ಲಿ ಕೊಂಕಣದವರೆಗೆ ಇವನ ರಾಜ್ಯ ಹಬ್ಬಿತ್ತು. ಇವನ ಶಾಸನಗಳು ಅಲಹಾಬಾದ್ ಜಿಲ್ಲೆಯ ಕೋಸಮ್, ಸಾರನಾಥ, ಮಥುರ ಸಿಂಧ್ ಪ್ರಾಂತದಲ್ಲಿ, ಬಹವಾಲ್‌ಪುರದ ಸಮೀಪದಲ್ಲಿನ ಸುಇವಿಹೆ, ರಾವಲ್ಪಿಂಡಿಯ ಸಮೀಪದ ಮಾಣಿಕೆಯಾಲ ಮತ್ತು ಉಂಡ್ (Und)ನ ಜೆಡ (Zeda)ಗಳಲ್ಲಿ ದೊರೆತಿವೆ. ಇಷ್ಟು ವಿಸ್ತಾರವಾದ ರಾಜ್ಯಕ್ಕೆ ಅಧಿಪತಿಯಾದ ಕನಿಷ್ಕನು ಚೀನಾದೇಶವನ್ನು ಆಕ್ರಮಿಸಲು ಯತ್ನಿಸಿದ. ಆದರೆ ಚೀನಿ ದಂಡನಾಯಕ ಪಾನ್‌ಚೋ ಈತನನ್ನು ಸೋಲಿಸಿದ. ಚಕ್ರವರ್ತಿ ಹೊ-ಟಿ (Ho-Ti)ಗೆ ಈತನು ಕಪ್ಪವನ್ನು ಸಲ್ಲಿಸಬೇಕಾಯಿತು.

ಶಕಕಾಲಗಣನೆಯನ್ನು ಆರಂಭಿಸಿದವನು ಈತನೆಂದು ಅನೇಕರು ಅಭಿಪ್ರಾಯಪಟ್ಟಿದ್ದಾರೆ. ಈ ಕಾಲಗಣನೆಯನ್ನು ಈತನ ಶಾಸನಗಳಲ್ಲಿಯೇ ಅಲ್ಲದೆ, ನಂತರ ಆಳಿದ

ಪಶಿಷ್ಕ, ಹುವಿಷ್ಕ, ಇಮ್ಮಡಿ ಕನಿಷ್ಕ ಮತ್ತು ವಾಸುದೇವರ ಶಾಸನಗಳಲ್ಲಿಯೂ ಬಳಸಲಾಗಿದೆ. ಈತನು ಆರಂಭಿಸಿದ ಕಾಲಗಣನೆಯನ್ನು ನಂತರದ ಅರಸರು ಮುಂದುವರಿಸಿಕೊಂಡು ಹೋದರೆಂಬುದು ಇದರಿಂದ ತಿಳಿಯುತ್ತದೆ.

ಕನಿಷ್ಕನು ಬೌದ್ಧಮತವನ್ನು ಸ್ವೀಕರಿಸಿದನು. ಪೆಷಾವರಿನಲ್ಲಿ ದೊಡ್ಡ ಸ್ತೂಪವೊಂದನ್ನು ಕಟ್ಟಿಸಿದನು. ಪಾರ್ಶ್ವ (ಪಾರ್ಶ್ವಕ)ನೆಂಬ ಬೌದ್ಧಭಿಕ್ಷುವಿನ ಸೂಚನೆಯಂತೆ ಬೌದ್ಧರ ಮಹಾಸಭೆಯೊಂದನ್ನು ಸೇರಿಸಿದ. ಇದು ಕಾಶ್ಮೀರದ ಕುಂಡಲಿವನವಿಹಾರದಲ್ಲಿ ಜರುಗಿತು. ಸಭೆಯ ಅಧ್ಯಕ್ಷತೆಯನ್ನು ವಸುಮಿತ್ರನು ವಹಿಸಿದ. ಪ್ರಸಿದ್ಧ ವಿದ್ವಾಂಸ ಅಶ್ವಘೋಷ ಇದರ ಉಪಾಧ್ಯಕ್ಷ. ಒಮ್ಮೆ ಪಾಟಲಿಪುತ್ರವನ್ನು ಮುತ್ತಿದಾಗ ಕನಿಷ್ಕನು ಇವನನ್ನು ಸೆರೆಹಿಡಿದು ಬಲಾತ್ಕಾರವಾಗಿ ತನ್ನೊಡನೆ ಒಯ್ದನಂತೆ! ಈ ಸಮ್ಮೇಳನದಲ್ಲಿ ಬೌದ್ಧ ಗ್ರಂಥಗಳ ಹಸ್ತಪ್ರತಿಗಳನ್ನು ಶೇಖರಿಸಿ ಅವುಗಳಿಗೆ ಭಾಷ್ಯಗಳನ್ನು ಬರೆಸುವ ಕಾರ್ಯವನ್ನು ಕೈಗೊಳ್ಳಬೇಕೆಂದು ತೀರ್ಮಾನಿಸಲಾಯಿತು. ಅಂತೆಯೇ ಕಾರ್ಯಾರಂಭವೂ ಆಯಿತು. ಆದರೆ ಇದಕ್ಕೂ ತೀವ್ರಸ್ವರೂಪದ ಘಟನೆಯೆಂದರೆ ಬೌದ್ಧಮತಾನುಯಾಯಿಗಳಲ್ಲಿ ಏರ್ಪಟ್ಟ ಒಡಕು. ಇದರ ಫಲವಾಗಿ ಮಹಾಯಾನ ಮತ್ತು ಹೀನಯಾನ ಎಂಬ ಎರಡು ಪಂಗಡಗಳು ಅಸ್ತಿತ್ವಕ್ಕೆ ಬಂದುವು. ಬುದ್ಧನು ಅವತಾರಪುರುಷನೆನಿಸಿಕೊಂಡ. ಬುದ್ಧವಿಗ್ರಹಗಳ ಪೂಜೆ ಆರಂಭವಾಯಿತು. ಕಲೆಯಲ್ಲಿಯೂ ಇದು ತನ್ನ ಪ್ರಭಾವವನ್ನು ಬೀರಿತು. ಕನಿಷ್ಕನ ಪ್ರೋತ್ಸಾಹದಿಂದ ಅನೇಕ ಪಂಡಿತರು ಸಾಹಿತ್ಯ ಕೃತಿಗಳನ್ನು ರಚಿಸಿದರು. ಕನಿಷ್ಕನ ಆಸ್ಥಾನದಲ್ಲಿದ್ದ ಅಗಿಸಲಾಸ್ ಎಂಬ ಗ್ರೀಕ್ ಶಿಲ್ಪಿ ಪೆಷಾವರಿನ ಸ್ತೂಪವನ್ನು ಕಟ್ಟಿಸಿದನೆಂದು ಹೇಳಿದೆ. ಈತನೇ ಕನಿಷ್ಕಪುರ (ಕನಿಸ್ಪುರ)ವೆಂಬ ನಗರವನ್ನು ತಕ್ಷಶಿಲೆಯ ಸಮೀಪದಲ್ಲಿ ಕಟ್ಟಿಸಿದನು. ಕನಿಷ್ಕನು ಧರ್ಮಾಂಧನಾಗಿರದೆ ಪರಮತಸಹಿಷ್ಣುವಾಗಿದ್ದನು. ಇವನ ನಾಣ್ಯಗಳ ಮೇಲೆ ಶಾಕ್ಯಮುನಿ ಬುದ್ಧನ ಚಿತ್ರವೇ ಅಲ್ಲದೆ, ಶಿವ, ವಾಯು, ಅಗ್ನಿ, ಪರ್ಷಿಯದ ಮಿಹಿರ್, ಸುಮೇರಿಯದ ಮಾತೃದೇವತೆ ನಾನಾ (ನಯನಾದೇವಿ), ಯುದ್ಧದೇವತೆ ಆರ್ಲ್ಲಂಗ್ನೊ, ಗ್ರೀಕರ ಸೂರ್ಯದೇವತೆಯಾದ ಹೆಲಿಯಾಸ್ ಮುಂತಾದವರ ಚಿತ್ರಗಳನ್ನು ಕಾಣುತ್ತೇವೆ. ಇವನು ಆಳುತ್ತಿದ್ದ ವಿಸ್ತಾರವಾದ ರಾಜ್ಯದ ಬೇರೆ ಬೇರೆ ಕಡೆಗಳಲ್ಲಿ ಪೂಜಿಸಲ್ಪಡುತ್ತಿದ್ದ ದೇವರುಗಳ ವಿಗ್ರಹಗಳನ್ನು ಇವು ಪ್ರತಿನಿಧಿಸಿವೆ. ಇವನ ನಾಣ್ಯಗಳ ಮೇಲೆ ಖರೋಷ್ಠಿ ಲಿಪಿಗೆ ಬದಲಾಗಿ ಗ್ರೀಕ್‌ಲಿಪಿಯನ್ನೂ ಒಮ್ಮೊಮ್ಮೆ ಪರ್ಷಿಯನ್ ಲಿಪಿಯನ್ನೂ ಬಳಸಿದೆ.

ಕ್ರಿ.ಶ. ೭೮ರಿಂದ ೧೦೨ರವರೆಗೆ ಸುಮಾರು ೨೪ ವರ್ಷಗಳಕಾಲ ಆಳಿದ ಕನಿಷ್ಕ ಆಳಿಕೆಯ ಬಹುಭಾಗವನ್ನು ದಂಡಯಾತ್ರೆಗಳಲ್ಲಿ ಕಳೆದ ಕಾರಣ ಬೇಸತ್ತ ಜನತೆ ಅವನನ್ನು ಕೊಂದಿತೆಂದು ಒಂದು ಪ್ರತೀತಿ ಇದೆ. ವಾಸಿಷ್ಕ, ಹುವಿಷ್ಕ, ಇಮ್ಮಡಿ ಕನಿಷ್ಕ ಮತ್ತು ವಾಸುದೇವ—ಇವರು ಕನಿಷ್ಕನ ನಂತರ ಕ್ರಮವಾಗಿ ಆಳಿದ ಅರಸರು. ಕನಿಷ್ಕ ಮತ್ತು ವಾಸಿಷ್ಕರ ನಡುವಣ ಸಂಬಂಧ ಸ್ಪಷ್ಟವಾಗಿಲ್ಲ. ಸೋದರನೋ ಮಗನೋ

ಆಗಿದ್ದ ವಾಸಿಷ್ಕ ಕನಿಷ್ಕನೊಡನೆ ಕೆಲಕಾಲ ಆಳಿದನು. ಈ ಅರಸರನ್ನು ಕುರಿತು ಹೆಚ್ಚಿನ ವಿವರಗಳು ತಿಳಿಯದು. ಕ್ರಿ.ಶ. ೩ನೆಯ ಶತಮಾನದ ಅಂತ್ಯಭಾಗದಲ್ಲಿ ಇವರ ಆಳಿಕೆ ಕೊನೆಗೊಂಡಿತು. ಆದರೂ ಈ ಸಂತತಿಗೆ ಸೇರಿದ ಹಲವರು ಅಲ್ಲಲ್ಲಿ ಸಣ್ಣ ಸಣ್ಣ ಅಧಿಕಾರಗಳಲ್ಲಿ ಕ್ರಿ.ಶ. ೪ನೆಯ ಶತಮಾನದವರೆಗೆ ಮುಂದುವರಿದಿದ್ದರು.

ಮೌರ್ಯರ ನಂತರ ಚದರಿದ್ದ ಉತ್ತರ ಭಾರತದ ಬಹುಭಾಗಗಳನ್ನು ಮತ್ತೊಮ್ಮೆ ಒಟ್ಟುಗೂಡಿಸಿ ಏಕರಾಜ್ಯಾಧಿಪತ್ಯಕ್ಕೊಳಪಡಿಸಿದ ಕೀರ್ತಿ ಕುಷಾಣರದಾಗಿದೆ. ಪರಕೀಯರಾದರೂ ಭಾರತೀಯಸಂಸ್ಕೃತಿಯ ಪ್ರಭಾವಕ್ಕೊಳಗಾಗಿ ಈ ಸಂಸ್ಕೃತಿಯನ್ನು ಅಳವಡಿಸಿಕೊಂಡ ಇವರು ಬೌದ್ಧಮತ ಚೀನಾ ಮುಂತಾದ ದೂರದೇಶಗಳಿಗೆ ಹಬ್ಬಲು ಶ್ರಮಿಸಿದರು. ಆ ದೇಶಗಳೊಡನೆ ಸಾಂಸ್ಕೃತಿಕ ವ್ಯಾವಹಾರಿಕ ಸಂಬಂಧಗಳು ಹೆಚ್ಚಿದುವು. ಶಿಲ್ಪಕಲೆಗೆ ಪ್ರೋತ್ಸಾಹ ದೊರಕಿತು. ವಿದ್ವಾಂಸರಿಗೆ ರಾಜಾಶ್ರಯ ಲಭಿಸಿದುದರ ಫಲವಾಗಿ ಜ್ಞಾನಭಂಡಾರ ಬೆಳೆಯಿತು.

ಕುಷಾಣರ ಬಲ ಕ್ಷೀಣಿಸಿದಾಗ ಮತ್ತೊಮ್ಮೆ ಭಾರತದ ಸಣ್ಣ ರಾಜ್ಯಗಳೂ, ಗಣರಾಜ್ಯಗಳೂ ತಲೆಯೆತ್ತಿದುವು. ಅರ್ಜುನಾಯನ, ಮಾಳವ, ಯೌಧೇಯ ಜನಪದಗಳೂ ಅಹಿಚ್ಛತ್ರ, ಅಯೋಧ್ಯಾ ಕೌಶಾಂಬಿ, ಮಥುರಾಗಳಲ್ಲಿ ಇತರ ಅರಸು ಮನೆತನಗಳೂ ಹುಟ್ಟಿಕೊಂಡುವು. ಈ ಕುರಿತು ಈಗಾಗಲೇ ಹೇಳಿದೆ. ಕುಷಾಣರ ಅಧೀನದಲ್ಲಿ ಮಾಂಡಲಿಕರಾಗಿದ್ದವರಲ್ಲಿ ಶಕರು ಪ್ರಮುಖರು. ಇವರು ತಮ್ಮ ರಾಜ್ಯವನ್ನು ಕಳೆದುಕೊಂಡ ಬಳಿಕ ಸಿಂಧ್, ಸೌರಾಷ್ಟ್ರ, ರಾಜಾಸ್ಥಾನ ಮುಂತಾದ ಕಡೆಗಳಲ್ಲಿ ಸಣ್ಣ ಅಧಿಕಾರಗಳನ್ನು ಹೊಂದಿದ್ದರು. ಇವರಲ್ಲಿ ಮುಂಬಾರಸ್ ಎಂಬಾತ ಕ್ರಿ.ಶ. ೧ನೆಯ ಶತಮಾನದಲ್ಲಿ ದ್ವಾರಕಾ, ಬ್ರೋಚ್, ಲಾಟ, ಆಭೀರ ಮತ್ತು ಸೌರಾಷ್ಟ್ರಗಳ ಮೇಲೆ ಒಡೆತನವನ್ನು ಸ್ಥಾಪಿಸಿದ್ದ. ಕನಿಷ್ಕನು ಇವನನ್ನು ಸೋಲಿಸಿ ಇವನ ಸ್ಥಾನದಲ್ಲಿ ತನ್ನ ಕ್ಷತ್ರಪನನ್ನು ನೇಮಿಸಿದ.

‘ಕ್ಷತ್ರಪ’ ಎಂಬುದು ಪರ್ಷಿಯದ ‘ಸತ್ರಪ’ ಎಂಬುದರ ರೂಪಾಂತರ. ಅಲ್ಲಿ ಇವರು ಪ್ರಾಂತಾಧಿಕಾರಿಗಳಾಗಿದ್ದರು. ಯವನರು, ಪಾರ್ಥಿಯನರು ಇಂತಹ ಅಧಿಕಾರಿಗಳನ್ನು ಭಾರತದ ತಮ್ಮ ಅಧೀನ ಪ್ರಾಂತಗಳಲ್ಲಿಯೂ ನೇಮಿಸಿದರು. ಇಲ್ಲಿ ಇವರು ಕ್ಷತ್ರಪರೆನಿಸಿಕೊಂಡರು. ಈ ಪ್ರಾಂತಾಧಿಕಾರಿಗಳು ಆಡಳಿತದಲ್ಲಿ ಬಹಳ ಸ್ವಾತಂತ್ರ್ಯವನ್ನು ಪಡೆದಿದ್ದರು. ಅರಸನು ಬಲಹೀನನಾಗಿದ್ದಾಗ ಇವರು ಆ ಪ್ರಾಂತಗಳನ್ನು ತಮ್ಮದಾಗಿಸಿಕೊಂಡು ಸ್ವತಂತ್ರವಾಗಿ ಆಳಲು ಸಾಧ್ಯವಿತ್ತು. ಮೊದಲನೆಯ ಕನಿಷ್ಕನ ಕಾಲದಲ್ಲಿ ಹೀಗೆ ಕ್ಷತ್ರಪರಾಗಿದ್ದ ಕ್ಷಹರಾತ ಮತ್ತು ಕರ್ದಮಕ ಮನೆತನಗಳಿಗೆ ಸೇರಿದ ಇಬ್ಬರು ಕ್ಷತ್ರಪರು ಪಶ್ಚಿಮ ಭಾರತದಲ್ಲಿ ಕನಿಷ್ಕನ ಮರಣಾನಂತರ ಸ್ವತಂತ್ರರಾದರು. ಅವರಿಗೆ ಸಂಬಂಧಿಸಿದಂತೆ ಕೆಲವು ವಿವರಗಳು ಅವರ ನಾಣ್ಯಗಳ, ಶಾಸನಗಳ ಮೂಲಕ ತಿಳಿದಿದೆ.

## ಕ್ಷಹರಾತರು

ಕ್ಷಹರಾತ ಕುಲಕ್ಕೆ ಸೇರಿದವ ಭೂಮಕ. ಗುಜರಾತ್, ಕಾಥೇವಾಡ ಮತ್ತು ಮಾಳವದ ತೀರಪ್ರದೇಶಗಳಲ್ಲಿ ಇವನ ತಾಮ್ರದ ನಾಣ್ಯಗಳು ಲಭಿಸಿವೆ. ಇವುಗಳ ಒಂದು ಮುಖದಲ್ಲಿ ಬಿಲ್ಲು, ಚಕ್ರ ಮತ್ತು ಸಿಡಿಲುದಂಡದ ಚಿತ್ರಗಳು, ಹಿಮ್ಮುಖದಲ್ಲಿ ಸಿಂಹಾರೂಢಧರ್ಮಚಕ್ರದ ಗುರುತು ಮತ್ತು ಖರೋಷ್ಠಿ ಮತ್ತು ಬ್ರಾಹ್ಮೀ ಲಿಪಿಗಳಲ್ಲಿ 'ಕ್ಷಹರಾತಸ ಕ್ಷತ್ರಪಭೂಮಕ' ಎಂಬ ಆಲೇಖ್ಯವಿರುವುದು ಕಾಣುತ್ತದೆ. ಭೂಮಕನ ಉತ್ತರಾಧಿಕಾರಿ ನಹಪಾಣ. ಇವರಿಬ್ಬರ ಸಂಬಂಧ ತಿಳಿಯದು. ಈತನ ಬೆಳ್ಳಿ ಹಾಗೂ ತಾಮ್ರದ ನಾಣ್ಯಗಳು ದೊರೆತಿವೆ. ಅಲ್ಲದೆ ಈತನ ಅಳಿಯ ಉಷವದಾತ (ಋಷಭದತ್ತ) ಮತ್ತು ಸಚಿವ ಅಯಾಮ ಇವರು ನೀಡಿದ ದತ್ತಿಗಳನ್ನು ಉಲ್ಲೇಖಿಸುವ ಶಾಸನಗಳ ಮೂಲಕ ಸಹ ನಹಪಾಣನನ್ನು ಕುರಿತು ಹೆಚ್ಚಿನ ವಿವರಗಳು ತಿಳಿದಿವೆ. ಪೆರಿಪ್ಲಸ್ ಗ್ರಂಥಗಳಲ್ಲಿ ಹೆಸರಿಸಿದ ಮುಂಬಾರಸ್ ಎಂಬವನು ನಹಪಾಣನೆಂದೇ ಹಲವರು ಸೂಚಿಸಿದ್ದಾರೆ. ಆ ಹೆಸರನ್ನು ನಂಬಾನಸ್ ಎಂದು ಓದಿ ಅದು ನಹಪಾಣ ಎಂಬ ಹೆಸರಿನ ಗ್ರೀಕ್ ರೂಪವೆಂದು ಇವರು ಭಾವಿಸಿದ್ದಾರೆ. ಇದು ಸಂದೇಹಾಸ್ಪದ. ನಾಸಿಕ್ ಜಿಲ್ಲೆಯ ಜೋಗಲ್ತೆಂಬಿ ಎಂಬಲ್ಲಿ ಈತನ ನಾಣ್ಯಗಳ ಹಿರಿದಾದ ಸಂಗ್ರಹವೊಂದು ದೊರೆಯಿತು. ಇವುಗಳಲ್ಲಿ ಮೂರರಲ್ಲಿ ಎರಡು ಭಾಗದಷ್ಟು ನಾಣ್ಯಗಳನ್ನು ಸಾತವಾಹನರ ಅರಸನಾದ ಗೌತಮೀಪುತ್ರ ಸಾತಕರ್ಣಿಯು ಪುನರ್ಚಲಾವಣೆಗೆ ತಂದಿರುವುದು ಸ್ಪಷ್ಟವಾಗಿದೆ. ಆ ನಾಣ್ಯಗಳ ಮೇಲೆ ನಹಪಾಣನ ಹೆಸರಿನ ಸ್ಥಾನದಲ್ಲಿ ಸಾತಕರ್ಣಿಯ ಹೆಸರನ್ನು ಪುನಃ ಅಚ್ಚಿಸಿ ಅದೇ ನಾಣ್ಯಗಳನ್ನು ಚಲಾವಣೆಗೆ ಬಿಡಲಾಗಿದೆ. ಇದರಿಂದ ನಹಪಾಣನು ಸಾತವಾಹನನ ಕೈಯಲ್ಲಿ ಸೋಲನ್ನನುಭವಿಸಿದನೆಂದು ಊಹಿಸಲಾಗಿದೆ. ಈ ಸಾತಕರ್ಣಿಯ ತಾಯಿ ಗೌತಮೀಬಾಲಶ್ರೀಯ ನಾಸಿಕದ ಶಾಸನದಲ್ಲಿ ಸಾತಕರ್ಣಿಯ ಖಕರಾತರನ್ನು ನಿರ್ಮೂಲಗೊಳಿಸಿದನೆಂದು ಹೇಳಿರುವುದು ಈ ಊಹೆಗೆ ಪುಷ್ಟಿಕರವಾಗಿದೆ. ನಾಸಿಕ್, ಕಾರ್ಲೆ ಮತ್ತು ಜುನ್ನಾರ್‌ಗಳಲ್ಲಿ ನಹಪಾಣನದೇ ಶಾಸನಗಳೂ ದೊರೆತಿವೆ. ಈತನ ನಾಣ್ಯಗಳಲ್ಲೆಲ್ಲಾ ಈತನನ್ನು 'ರಾಜನ್' ಎಂದು ಕರೆಯಲಾಗಿದೆ. ಆದರೆ ಈತನ ಮೊದಲ ವರ್ಷಗಳ ಶಾಸನಗಳಲ್ಲಿ 'ಕ್ಷತ್ರಪ' ಎಂದೂ ನಂತರದ ಶಾಸನಗಳಲ್ಲಿ 'ಮಹಾಕ್ಷತ್ರಪ' ಎಂದೂ ಸಂಬೋಧಿಸಿದೆ. ಆರಂಭದಲ್ಲಿ ಕುಷಾಣರ ಸಾಮಂತಿಕೆಯನ್ನು ಸೂಚಿಸುವಂತೆ 'ಕ್ಷತ್ರಪ' ಎಂದು ಕರೆದುಕೊಂಡು, ನಂತರ ಆ ಬಳಿಕ ತನ್ನ ಪ್ರಾಬಲ್ಯವನ್ನು ಸೂಚಿಸುವ 'ಮಹಾಕ್ಷತ್ರಪ' ಎಂಬ ಬಿರುದನ್ನು ಧರಿಸಿದನೆಂದು ಇದರಿಂದ ತಿಳಿದುಬರುತ್ತದೆ. ಇವನ ಮಗಳು ದಕ್ಷಮಿತ್ರೆ. ಶಕ ಋಷಭದತ್ತನನ್ನು ಮದುವೆಯಾಗಿದ್ದಳು. ಇವನ ಆಳಿಕೆಗೆ ಧಕ್ಕೆಯುಂಟುಮಾಡಿದವನು ಗೌತಮೀಪುತ್ರ ಸಾತಕರ್ಣಿ. ಇರ್ವರ ನಡುವಣ ಕದನದಲ್ಲಿ ನಹಪಾಣನು ಅಸುನೀಗಿದನು. ಇವನೊಂದಿಗೆ ಕ್ಷಹರಾತಕುಲ ನಾಶವಾಯಿತು.

## ಕಾರ್ದಮಕರು

ಇವರ ಸ್ಥಾನದಲ್ಲಿ ಕಾರ್ದಮಕ ವಂಶದವರು ಅಧಿಕಾರಾರೂಢರಾದರು. ಬ್ಯಾಕ್ಟ್ರಿಯ ದಲ್ಲಿನ ಕರ್ದಮ ಎಂಬ ನದಿಯ ಹೆಸರಿನಿಂದ ಈ ವಂಶದ ಹೆಸರು ಬಂದಿದೆ ಎಂಬುದೊಂದು ಊಹೆ. ಕುಷಾಣರ ಅಧೀನದಲ್ಲಿ ಸಿಂಧ್ ಪ್ರಾಂತದಲ್ಲಿ ಆಳುತ್ತಿದ್ದ ಜಾಮೊತಿಕ (Ysamotika)ನನ್ನು ನಹಪಾಣನ ಸ್ಥಾನದಲ್ಲಿ ನೇಮಿಸಲಾಯಿತು. ಈತನ ಮಗ ಚಷ್ಟನ. ಅವಂತಿಯ ರಾಜಧಾನಿಯಾದ ಒಜೆನೆ (ಉಜ್ಜಯಿನಿ)ಯಲ್ಲಿ ಟಿಯಾಸ್ಟನಿಸ್ ಆಳುತ್ತಿದ್ದನೆಂದು ಟಾಲೆಮಿಯ ಹೇಳಿಕೆ. ಈತನೇ ಚಷ್ಟನನಾಗಿರಬಹುದೆಂದು ಊಹಿಸ ಲಾಗಿದೆ. ಮೊದಲು ಕ್ಷತ್ರಪನೆನಿಸಿಕೊಂಡ ಈತ ತನ್ನ ಆಳಿಕೆಯ ಕೊನೆಯ ವರ್ಷಗಳಲ್ಲಿ ಮಹಾಕ್ಷತ್ರಪನಾದ. ತನ್ನ ಮಗ ಜಯದಾಮನನ್ನು ಈತನು ಯುವರಾಜ ಪದವಿಗೇರಿ ಸಿದ್ದ. ಅಲ್ಪಾಯುಷಿಯಾದ ಆತನ ಮರಣಾನಂತರ ಆತನ ಮಗ ರುದ್ರದಾಮ ಚಷ್ಟನನೊಡನೆ ಕ್ಷತ್ರಪನಾಗಿ ಆಳಿದ. ಚಷ್ಟನನ ರಾಜ್ಯ ಸಾತವಾಹನರ ರಾಜ್ಯಕ್ಕೆ ಹೊಂದಿದಂತಿತ್ತೆಂಬುದು ಕಛ್‌ಪ್ರಾಂತದ ಅಂಧೌದಲ್ಲಿ ದೊರೆತ ಅವನ ಶಾಸನದಿಂದ ತಿಳಿಯಬರುತ್ತದೆ.

ಅಜ್ಜನು ಕಾಲವಶನಾದ ಬಳಿಕ ರುದ್ರದಾಮ ಮಹಾಕ್ಷತ್ರಪನಾದ. ಕಾಥೇವಾಡದ ಬಳಿಯ ಜುನಾಗಢ (ಗಿರಿನಗರ-ಗಿರ್ನಾರ್) ಬೆಟ್ಟದ ಬಳಿ ಇವನ ಶಾಸನವೊಂದು ದೊರೆತಿದೆ. ಬ್ರಾಹ್ಮೀಲಿಪಿಯಲ್ಲಿರುವ ಸಂಸ್ಕೃತ ಶಾಸನವಿದು. ಈ ಶಾಸನದ ಮೇಲ್ಭಾಗ ದಲ್ಲಿಯೇ ಅಶೋಕನ ಒಂದು ಶಾಸನವೂ ಕೆಳಗಡೆ ಸ್ಕಂದಗುಪ್ತನ ಶಾಸನವೂ ಇವೆ. ಮೌರ್ಯಚಂದ್ರಗುಪ್ತನ ಕಾಲದಲ್ಲಿ ಇಲ್ಲಿನ ಪ್ರಾಂತಾಧಿಕಾರಿಯಾಗಿದ್ದ ವೈಶ್ಯ ಪುಷ್ಯ ಗುಪ್ತನು ಸುದರ್ಶನವೆಂಬ ಸರೋವರವನ್ನು ತೋಡಿಸಿದ್ದನು. ಇದಕ್ಕೆ ಯವನರ ತುಷಾಷ್ಪನು ಅಶೋಕನ ಕಾಲದಲ್ಲಿ ನಾಲೆಗಳನ್ನು ಕಟ್ಟಿಸಿದ್ದನು. ಆದರೆ ಶತಮಾನಗಳ ಬಳಿಕ ಈಗ ಅತಿವೃಷ್ಟಿಯಿಂದ ಊರ್ಜಯತ್ (ಗಿರಿನಾರ್) ಬೆಟ್ಟದ ಸುವರ್ಣಸಿಕತಾ, ಫಲಾಶಿನೀ ಮತ್ತು ಇತರ ನದಿಗಳಲ್ಲಿ ಪ್ರವಾಹ ಉಂಟಾಗಿ ಸರೋವರದ ದಡ ಕಡಿದು ಪ್ರಜೆಗಳಿಗೆ ಹಾನಿ ಉಂಟಾಯಿತು. ಸುದರ್ಶನವೆನಿಸಿದ್ದ ಸರೋವರ ದುರ್ದರ್ಶನವಾಯಿತು. ರುದ್ರದಾಮನ ಅಮಾತ್ಯರಲ್ಲಿ ಒಬ್ಬನಾದ ಕುಲೈಪನ ಮಗ ಸುವಿಶಾಖನು ಈ ಅಣೆ ಕಟ್ಟನ್ನು ಸರಿಪಡಿಸಿದನು. ಇದು ಶಾಸನದಲ್ಲಿ ಪ್ರಸ್ತಾಪಿಸಲ್ಪಟ್ಟಿರುವ ವಿಷಯ. ಈ ಕೆರೆ ಇನ್ನೊಮ್ಮೆ ಸ್ಕಂದಗುಪ್ತನ ಕಾಲದಲ್ಲಿ ಜೀರ್ಣೋದ್ಧಾರಗೊಳಿಸಲ್ಪಟ್ಟಿತು. ಆ ಶಾಸನದ ಮೇಲಿನ ರುದ್ರದಾಮನ ಶಾಸನವನ್ನೂ ಗಮನದಲ್ಲಿಟ್ಟುಕೊಂಡು, ಶಾಸನವನ್ನು 'ಸುದರ್ಶನ ತಟಾಕಸಂಸ್ಕಾರಗ್ರಂಥರಚನೆ' ಎಂದು ಕರೆಯಲಾಗಿದೆ.

ಪ್ರಾಸಂಗಿಕವಾಗಿ ಶಾಸನದಲ್ಲಿ ರುದ್ರದಾಮನನ್ನು ಕುರಿತು ಅನೇಕ ವಿಷಯಗಳನ್ನು ಹೇಳಲಾಗಿದೆ. ಶಬ್ದಾರ್ಥ (ವ್ಯಾಕರಣ), ಗಾಂಧರ್ವ, ನ್ಯಾಯ ಮುಂತಾದ ಶಾಸ್ತ್ರಗಳಲ್ಲಿ ಪರಿಣತನಾದ ಈತನು ಸಮರವಿದ್ಯೆಯಲ್ಲಿಯೂ ಅಷ್ಟೇ ಪರಿಣತ. ಆಕರ, ಅವಂತಿ, ಅನೂಪ, ಅಪರಾಂತ, ನಿಷಾದ (ಇವು ಕ್ರಮವಾಗಿ ಪೂರ್ವಮಾಲವ, ಪಶ್ಚಿಮ

ಮಾಲವ, ನರ್ಮದಾತೀರದ ಮಾಂಧಾತದ ಸುತ್ತಲಿನ ಪ್ರದೇಶ, ಉತ್ತರ ಕೊಂಕಣ, ಪಶ್ಚಿಮವಿಂಧ್ಯಪ್ರದೇಶಗಳು) ಇವನ ಅಧೀನದಲ್ಲಿದ್ದವು. ಯೌಧೇಯರನ್ನು ಸೋಲಿಸಿದ ಈತ ಸಾತಕರ್ಣಿಯನ್ನು ಎರಡುಬಾರಿ ಸೋಲಿಸಿದ. ಆದರೆ ಅವನೊಡನಿದ್ದ ರಕ್ತಸಂಬಂಧ ಅವನ ಜೀವವನ್ನುಳಿಸಿತು. ಇವು ನಮಗೆ ಶಾಸನದಿಂದ ತಿಳಿಯುವ ವಿವರಗಳು. ಇದರಿಂದ ನಹಪಾಣನನ್ನು ಸೋಲಿಸಿದ ಗೌತಮೀಪುತ್ರನು ರುದ್ರದಾಮನಿಂದ ಸೋಲನ್ನನುಭವಿಸಿ ತಾನು ಕಸಿದಿದ್ದ ಪ್ರದೇಶಗಳನ್ನು ಹಿಂದಿರುಗಿಸಬೇಕಾಯಿತೆಂಬುದು ಸ್ಪಷ್ಟ. ಈತನ ಮಗ ವಾಸಿಷ್ಠೀ ಪುತ್ರ ಪುಳುಮಾವಿ ರುದ್ರದಾಮನ ಮಗಳನ್ನು ಮದುವೆಯಾಗಿದ್ದನೆಂದು ಇತರ ಶಾಸನಗಳಿಂದ ಕಂಡುಬರುತ್ತದೆ. ಶಾಸನದ ಕಾಲ ೧೫೧–೫೨. ಈ ವೇಳೆಗೆ ರುದ್ರದಾಮ ಮಹಾಕ್ಷತ್ರಪನಾಗಿದ್ದ.

ದಾಮಜದಶ್ರೀ ಮತ್ತು ರುದ್ರಸಿಂಹ ಎಂಬಿಬ್ಬರು ರುದ್ರದಾಮನ ಮಕ್ಕಳು. ರುದ್ರಸಿಂಹನ ಮಗ ರುದ್ರಸೇನ. ಈತನು ೧೯೯ರಿಂದ ೨೨೨ರವರೆಗೆ ಆಳಿದನು. ಆದರೆ ಈ ವೇಳೆಗೆ ಯಜ್ಞಶ್ರೀ ಶಾತಕರ್ಣಿ ಪ್ರಬಲನಾಗಿ ಇವರ ರಾಜ್ಯದ ದಕ್ಷಿಣದ ಭಾಗಗಳನ್ನು ಕಸಿದುಕೊಂಡನು. ಉತ್ತರದಲ್ಲಿ ಮಾಳವರು, ಆಭೀರರು ಸಹ ಬಲಯುತರಾಗಲು ಅವರ ದರ್ಪವನ್ನಡಗಿಸಿದನು. ೪ನೆಯ ಶತಮಾನದಲ್ಲಿ ಇಮ್ಮಡಿ ಚಂದ್ರಗುಪ್ತನು ಇವರನ್ನು ಸಂಪೂರ್ಣವಾಗಿ ಸೋಲಿಸಿ ಓಡಿಸಿದನು.

## ಸಾತವಾಹನರು

ನಹಪಾಣನನ್ನು ಸೋಲಿಸಿದ ಸಾತವಾಹನರು ದಕ್ಷಿಣಪ್ರಸ್ಥಭೂಮಿಯ ಅರಸರು. ಕಾಣ್ವಮನೆತನದ ಕೊನೆಯ ಅರಸನಾದ ಸುಶರ್ಮನನ್ನು ಕೊಂದು, ತನ್ಮೂಲಕ ಮೌರ್ಯ ಸಾಮ್ರಾಜ್ಯದ ಸಂಪೂರ್ಣ ಅಳಿವಿಗೆ ಕಾರಣನಾದವನು ಆಂಧ್ರಭೃತ್ಯನೆನಿಸಿದ ಸೀಮುಕ. ನಂತರ ಈತನು ತಾನೇ ಮಗಧರಾಜ್ಯವನ್ನು ಆಳದೇ ಇದ್ದುದು ಆಶ್ಚರ್ಯಕರ. ಈತನು ದಕ್ಷಿಣಾಪಥದಲ್ಲಿ ಈ ವೇಳೆಗೆ ತಲೆಯೆತ್ತುತ್ತಿದ್ದ ಸಾತವಾಹನ ಕುಲಕ್ಕೆ ಸೇರಿದವನು. ಒಮ್ಮೆ ಮೌರ್ಯರ ಅಧೀನದಲ್ಲಿದ್ದ ದಕ್ಷಿಣಾಪಥದ ರಾಜ್ಯಗಳು ನಂತರ ಸ್ವತಂತ್ರವಾದುವು. ಆ ಬಳಿಕ ದಕ್ಷಿಣಾಪಥದಲ್ಲಿ ತಲೆಯೆತ್ತಿದ ಅರಸುಮನೆತನ ಸಾತವಾಹನರದು. ದಕ್ಷಿಣಾಪಥದ ಅರಸರೆಂದು ಇವರನ್ನು ಕರೆಯಲಾಗಿದೆ. ದಕ್ಷಿಣಾಪಥ ಎಂಬುದು ಭೌಗೋಳಿಕವಾಗಿ ವಿಂಧ್ಯಪರ್ವತಕ್ಕೆ ದಕ್ಷಿಣದಲ್ಲಿರುವ ಭಾರತದ ಎಲ್ಲ ಪ್ರದೇಶಗಳಿಗೂ ಒಮ್ಮೊಮ್ಮೆ ಅನ್ವಯಿಸಿದರೂ ಹೆಚ್ಚಾಗಿ ಈಗಿನ ಮಹಾರಾಷ್ಟ್ರವನ್ನೊಳಗೊಂಡಂತೆ ದಖನ್ ಪ್ರಸ್ಥಭೂಮಿಯ ಪೂರ್ವಪಶ್ಚಿಮ ಪ್ರದೇಶಗಳಿಗೆ ಅನ್ವಯವಾಗುತ್ತಿತ್ತು. ಸಾತವಾಹನರು ಈ ದೃಷ್ಟಿಯಲ್ಲಿ ದಕ್ಷಿಣಾಪಥಾಧಿಪತಿಗಳಾಗಿದ್ದರು.

ಸಾತವಾಹನರು ಯಾರು ? ಇವರ ಮೂಲಪ್ರದೇಶ ಯಾವುದು ?—ಎಂಬ ಪ್ರಶ್ನೆಗಳು ಇನ್ನೂ ಚರ್ಚಾಸ್ಪದಗಳಾಗಿಯೇ ಉಳಿದಿವೆ. ಶಾಸನಗಳಲ್ಲಿ ಇವರನ್ನು ಸಾತವಾಹನರೆಂದು ಕರೆದಿದೆ. ಪುರಾಣಗಳಲ್ಲಿ ಉಕ್ತವಾದ ಆಂಧ್ರ ಅಥವಾ ಆಂಧ್ರಭೃತ್ಯರು ಇವರೇ

ಎಂದು ಹಲವರು ತೋರಿಸಿದ್ದಾರೆ. ಮೂಲತಃ ಕೃಷ್ಣಾ-ಗೋದಾವರೀ ನದಿಗಳ ನಡುವಣ ತೆಲುಗು ಪ್ರದೇಶದಲ್ಲಿದ್ದ ಆಂಧ್ರರಿವರೆಂದೂ ಕೃಷ್ಣಾನದೀತೀರದ ಶ್ರೀಕಾಕುಲಂ ಇವರ ಮೊದಲ ರಾಜಧಾನಿಯೆಂದೂ ಕ್ರಮೇಣ ಇವರು ಪೂರ್ವದಿಂದ ಪಶ್ಚಿಮಕ್ಕೆ ರಾಜ್ಯವನ್ನು ವಿಸ್ತರಿಸಿಕೊಂಡರೆಂದೂ ಹಲವರು ಸೂಚಿಸಿದ್ದಾರೆ. ದಖ್ಖನ್ನಿನ ಪಶ್ಚಿಮಭಾಗದಲ್ಲಿ ನಾಸಿಕ್, ನಾನಾಘಾಟ್ ಮುಂತಾದ ಕಡೆಗಳಲ್ಲಿ ಇವರ ಮೊದಲ ಶಾಸನಗಳು ದೊರೆತಿವೆ. ಆದ್ದರಿಂದ ಇವರು ಮೊದಲು ಈ ಪ್ರದೇಶಗಳಲ್ಲಿ ವಾಸಿಸಿದ್ದು, ನಂತರ ವಾಸಿಷ್ಠೀಪುತ್ರ ಪುಳುಮಾವಿಯ ಕಾಲದಲ್ಲಿ ಪೂರ್ವಾಭಿಮುಖವಾಗಿ ಸರಿದರೆಂದು ಇನ್ನೊಂದು ವಾದ. 'ಸಾತವಾಹನ' ಎಂಬ ಪದದ ಅರ್ಥ, ಈ ವಂಶದ ಅರಸರು ಎಷ್ಟು ಮಂದಿ, ಅವರು ಆಳಿದ ಒಟ್ಟು ಕಾಲ ಎಷ್ಟು—ಈ ಎಲ್ಲ ಪ್ರಶ್ನೆಗಳೂ ತೊಡಕಿನವು.

ನಮಗೆ ಸದ್ಯಕ್ಕೆ ತಿಳಿದುಬಂದಿರುವಂತೆ ಸೀಮುಕ ವಂಶದ ಮೊದಲ ಅರಸ. ಸಾತವಾಹನ ಎಂಬುದು ಇವನ ಬಿರುದಾಗಿರಬಹುದು. ಕ್ರಿ. ಪೂ. ೩೦ನೆಯ ವರ್ಷದಲ್ಲಿ ಕಾಣ್ವ ಮನೆತನದ ಅರಸನನ್ನು ಕೊಂದ ಈತ ನಂತರ ೨೩ ವರ್ಷಗಳ ಕಾಲ ಆಳಿದ. ಬಳಿಕ ಈತನ ತಮ್ಮ ಕೃಷ್ಣ (ಕನ್ಹರ), ಅವನ ಮಗ ಸಾತಕರ್ಣಿ (I) ಆಳಿದರು. ಸಾತಕರ್ಣಿ ರಥಿಕ ಮತ್ತು ಭೋಜವಂಶಕ್ಕೆ ಸೇರಿದ ತನ್ನ ಸೇನಾನಿಗಳ ಸಹಾಯದಿಂದ ರಾಜ್ಯವನ್ನು ವಿಸ್ತರಿಸಿದ. ಈತನ ಪತ್ನಿ ಮಹಾರಥಿಕುಲದ ನಾಗನಿಕ. ರಾಜಸೂಯ ಅಶ್ವಮೇಧಾದಿ ವೈದಿಕಯಜ್ಞಗಳನ್ನು ಮಾಡಿದ ಈತ ದಖ್ಖನ್ನಿನ ಮೇಲ್ಭಾಗ, ಪಶ್ಚಿಮ ಹಾಗೂ ಮಧ್ಯದ ಪ್ರದೇಶಗಳನ್ನು ಸ್ವಾಧೀನಮಾಡಿಕೊಂಡಿದ್ದ. ಕಲಿಂಗದ ಖಾರವೇಲನ ಸಮಕಾಲೀನ ಸಾತಕರ್ಣಿ ಈತನೇ ಆಗಿರಬಹುದು. ಈತನು ಯಾಗಮಾಡಿದ ಸಂದರ್ಭದಲ್ಲಿ ನೀಡಿದ ದಕ್ಷಿಣೆ ೪೨,೭೦೦ ಹಸುಗಳು, ೧೦ ಆನೆಗಳು, ೧೦೦೦ ಕುದುರೆಗಳು, ೧೭ ಬೆಳ್ಳಿಯ ತಂಬಿಗೆ ಹಾಗೂ ೬೮೦೦೦ ಕಾರ್ಷಾಪಣಗಳನ್ನೊಳಗೊಂಡಿದ್ದುವಂತೆ. ಈತನು ಮರಣಹೊಂದಿದಾಗ ಮಕ್ಕಳು ಇನ್ನೂ ಕಿರಿಯ ವಯಸ್ಸಿನವರಾಗಿದ್ದ ಕಾರಣ ಇವನ ಪತ್ನಿ ರಾಜ್ಯಾಡಳಿತದ ಹೊಣೆಹೊತ್ತಿದ್ದಳು.

ಮೊದಲನೆಯ ಸಾತಕರ್ಣಿಯ ಬಳಿಕ ಕ್ರಮೇಣ ಕುಗ್ಗಿದ ಸಾತವಾಹನರ ಬಲ ಪುನಃ ಪ್ರಕಾಶಕ್ಕೆ ಬಂದುದು ಗೌತಮಿಪುತ್ರ ಸಾತಕರ್ಣಿಯ ಕಾಲದಲ್ಲಿಯೇ. ಈತನು ಕ್ಷಹರಾತಕುಲದ ನಹಪಾಣನನ್ನು ಸೋಲಿಸಿದನೆಂದು ಮೇಲೆ ಹೇಳಿದೆ. ನಹಪಾಣನ ಅಳಿಯನಾದ ಋಷಭದತ್ತನಿಗೆ ಸೇರಿದ್ದ ಭೂಮಿಯನ್ನು ದಿಗ್ವಿಜಯಾನಂತರ ಗೋವರ್ಧನ (ನಾಸಿಕ್) ಜಿಲ್ಲೆಯ ಬೇಣಾಕಟಕದಲ್ಲಿದ್ದ ಸಾತಕರ್ಣಿಯು ದತ್ತಿಯಾಗಿ ಕೊಟ್ಟನೆಂದು ಆತನ ಆಳಿಕೆಯ ೧೮ನೆಯ ವರ್ಷದ (೧೨೪) ಶಾಸನದಲ್ಲಿ ಹೇಳಿದೆ. ಇದರಿಂದ ಈ ವೇಳೆಗೆ ನಹಪಾಣನನ್ನು ಇವನು ಸೋಲಿಸಿದ್ದನೆನ್ನಬಹುದು. ಈತನ ಮಗ ವಾಸಿಷ್ಠೀಪುತ್ರ ಪುಳುಮಾವಿಯ ನಾಸಿಕಶಾಸನದಲ್ಲಿ ಈತನನ್ನು 'ಶಕಯವನಪಹ್ಲವನಿಸೂದನ್', 'ಕ್ಷತ್ರಿಯದರ್ಪಮಾನಮರ್ದನ', 'ಕ್ಷಹರಾತವಂಶನಿರವಶೇಷಕರ', 'ಸಾತವಾಹನಕುಲಯಶಃಪ್ರತಿಷ್ಠಾಪನಕರ' ಎಂದೆಲ್ಲ ವರ್ಣಿಸಿದೆ. ಋಷಿಕ, ಅಶ್ಮಕ, ಮೂಲಕ, ಸುರಾಷ್ಟ್ರ,

ಕುಕುರ, ಅಪರಾಂತ, ಅನುಪ, ವಿದರ್ಭ, ಆಕರ, ಆವಂತಿಗಳೆಲ್ಲ ಇವನ ಆಳ್ವಿಕೆ ಗೊಳಪಟ್ಟಿದ್ದುವೆನ್ನಲಾಗಿದೆ. ದಕ್ಷಿಣದಲ್ಲಿ ಕೃಷ್ಣೆಯಿಂದ ಉತ್ತರದ ಮಾಲವದವರೆಗೆ, ಬೀರಾರ್‌ನಿಂದ ಕೊಂಕಣದವರೆಗೆ ಇವನ ರಾಜ್ಯ ವಿಸ್ತರಿಸಿತ್ತೆನ್ನಬಹುದು. ಆದರೆ ಇಷ್ಟೆಲ್ಲ ಯಶಸ್ಸಿಗೆ ಪಾತ್ರನಾದ ಈತನು ಕೊನೆಯ ವರ್ಷಗಳಲ್ಲಿ ತನ್ನ ರಾಜ್ಯವನ್ನೇ ಕಳೆದುಕೊಳ್ಳುವ ದುರ್ಭರಸ್ಥಿತಿಗೀಡಾದನು. ಆಕರ, ಅವಂತಿ, ಅನಂತ, ಅಪರಾಂತ, ಸುರಾಷ್ಟ್ರ, ಆನರ್ತಗಳನ್ನೆಲ್ಲ ಮಹಾಕ್ಷತ್ರಪ ರುದ್ರದಾಮನು ಗೆದ್ದುಕೊಂಡನು. ವಾಸಿಷ್ಠೀಪುತ್ರ ಪುಳುಮಾವಿಯ ಮಲಸೋದರನಾದ ವಾಸಿಷ್ಠೀಪುತ್ರ ಸಾತಕರ್ಣಿಗೆ ರುದ್ರದಾಮನು ತನ್ನ ಮಗಳನ್ನು ಲಗ್ನಮಾಡಿಕೊಟ್ಟಿದ್ದನು. ಎಂತಲೇ ಗೌತಮೀ ಪುತ್ರನನ್ನು ನಿರ್ಮೂಲವಮಾಡಲಿಲ್ಲವೆಂದು ರುದ್ರದಾಮನು ಹೇಳಿಕೊಂಡಿದ್ದಾನೆ.

ಗೌತಮೀಪುತ್ರನ ಮಗನಾದ ವಾಸಿಷ್ಠೀಪುತ್ರ ಪುಳುಮಾವಿ ಸು. ೧೩೦ರಿಂದ ೧೫೪ರ ವರೆಗೆ ಆಳಿದನು. ಈತನು ತನ್ನ ರಾಜ್ಯವನ್ನು ಪೂರ್ವದಿಕ್ಕಿಗೆ (ಈಗಿನ ಆಂಧ್ರ ಪ್ರದೇಶದ ತೀರಪ್ರದೇಶ) ವಿಸ್ತರಿಸಿದನು. ಈತನ ನಾಣ್ಯಗಳು ಆಂಧ್ರದ ಅಮರಾವತಿ ಹಾಗೂ ಸುತ್ತಲಿನ ಪ್ರದೇಶಗಳಲ್ಲಿ ದೊರೆತಿವೆ. ಕರ್ಣಾಟಕದ ಬಳ್ಳಾರಿ ಜಿಲ್ಲೆ ಮತ್ತು ತೀರಪ್ರದೇಶದ ಭಾಗಗಳೂ ಇವನ ಅಧೀನಕ್ಕೆ ಬಂದುವು. ಈತನ ಬಳಿಕ ಶಿವಶ್ರೀ ಸಾತ ಕರ್ಣಿ ಅಧಿಕಾರಕ್ಕೆ ಬಂದನು. ಈತನನ್ನು ರುದ್ರದಾಮನ ಅಳಿಯನಾದ ವಾಸಿಷ್ಠೀ ಪುತ್ರ ಸಾತಕರ್ಣಿ ಎಂದು ಗುರುತಿಸಲಾಗಿದೆಯಾದರೂ ಇದು ವಿವಾದಾಸ್ಪದ. ಪುರಾಣ ಗಳಲ್ಲಿ ಶಿವಸ್ಕಂದ ಸಾತಕರ್ಣಿ ಮತ್ತು ಯಜ್ಞಶ್ರೀ ಸಾತಕರ್ಣಿಗಳು ವಾಸಿಷ್ಠೀಪುತ್ರನ ನಂತರದ ಅರಸರೆಂದು ಹೇಳಿದೆ. ಯಜ್ಞಶ್ರೀ (೧೭೪–೨೦೩) ಸಾತವಾಹನರ ಕೊನೆಯ ಅರಸ. ಇವನ ಬಳಿಕ ಸಾತವಾಹನರ ಪ್ರಾಬಲ್ಯ ಕುಗ್ಗಿತು. ಈ ಮನೆತನದ ಕೆಲವರು ಕರ್ಣಾಟಕದ ಕುಂತಲ, ದಕ್ಷಿಣ ಕೋಸಲ, ಮಹಾರಾಷ್ಟ್ರದ ಕೊಲ್ಹಾಪುರ ಮುಂತಾದ ಕಡೆಗಳಲ್ಲಿ ಸಾಮಂತರಾಗಿ ಆಳುತ್ತಿದ್ದರು.

## ದಕ್ಷಿಣ ಭಾರತ

ಉತ್ತರಭಾರತದ ರಾಜಕೀಯದಲ್ಲಿ ಇಷ್ಟೆಲ್ಲ ಘಟನೆಗಳು ನಡೆದ ಸಮಯದಲ್ಲಿ ದಕ್ಷಿಣಭಾರತ ರಾಜಕೀಯಕ್ಷೇತ್ರದಲ್ಲಿ ಇನ್ನೂ ಪ್ರಬುದ್ಧತೆಯನ್ನು ಪಡೆದಿರಲಿಲ್ಲ. ಮೌರ್ಯರ ಸಾಮ್ರಾಜ್ಯ ದಕ್ಷಿಣದ ಕರ್ಣಾಟಕವನ್ನೊಳಗೊಂಡಿತ್ತೆಂಬುದನ್ನೂ ನೋಡಿ ದ್ದೇವೆ. ಅಶೋಕನು ಇಲ್ಲಿ ಹಾಕಿಸಿದ ಶಾಸನಗಳ ಲಿಪಿ ಹಾಗೂ ಭಾಷೆಯಲ್ಲಿ ವ್ಯತ್ಯಾಸ ವಿದೆಯೆಂದೂ, ಭಾಷೆಯಲ್ಲಿ ದಾಕ್ಷಿಣಾತ್ಯರ ರೂಪಗಳನ್ನು ಅಳವಡಿಸಲಾಗಿದೆಯೆಂದೂ ಇದು ಇಲ್ಲಿನ ಜನರಿಗೆ ಅರ್ಥವಾಗಲು ಮಾಡಿದ ಬದಲಾವಣೆಯೆಂದೂ ಹೇಳಲಾಗಿದೆ. ಈ ಶಾಸನಗಳನ್ನು ಓದುವ ಅರ್ಥಮಾಡಿಕೊಳ್ಳುವ ಜನ ಇಲ್ಲಿದ್ದರೆಂದಾಗ ಕರ್ಣಾಟಕದ ಹಾಗೂ ದಕ್ಷಿಣಭಾರತದ ಈ ಪ್ರದೇಶಗಳು ಈ ವೇಳೆಗೆ ನಾಗರಿಕವಾಗಿದ್ದುವೆಂದು ಸಹಜವಾಗಿಯೇ ನಿರ್ಣಯಿಸಬಹುದು. ಆದರೆ ರಾಜ್ಯವನ್ನು ಕಟ್ಟಿ ಆಳುವ ಯಾವ

ಅರಸುಮನೆತನವೂ ಆಗ ಅಸ್ತಿತ್ವದಲ್ಲಿದ್ದಂತೆ ತೋರದು.

ದಕ್ಷಿಣಾಪಥದಲ್ಲಿ ಮೊದಲ ಅರಸುಮನೆತನ ಸಾತವಾಹನರದು. ಈ ಮನೆತನದ ಶಾಖೆಗೆ ಸೇರಿದ ಹಲವರು ಕರ್ನಾಟಕದಲ್ಲಿಯೂ ಆಳಿದರು. ಆದರೆ ದಕ್ಷಿಣ ಭಾರತದಲ್ಲಿ ದ್ರಾವಿಡಶಾಖೆಗೆ ಸೇರಿದ ತಮಿಳು ಭಾಷೆ ಹಾಗೂ ಸಂಸ್ಕೃತಿಗಳು ಸ್ವತಂತ್ರವಾಗಿ ಬೆಳೆಯುತ್ತಿದ್ದವು. ದಕ್ಷಿಣ ಭಾರತದ ಇತಿಹಾಸ ಆರಂಭವಾದುದೆಂದು? ಈ ಕುರಿತು ಅನೇಕ ಚರ್ಚೆಗಳಿವೆ. ಸಾಮಾನ್ಯವಾಗಿ ಕ್ರಿ. ಪೂ. ೧೦೦೦ ವರ್ಷದಿಂದ ಆರ್ಯರು ವಿಂಧ್ಯ ಪರ್ವತವನ್ನು ದಾಟಿ ದಕ್ಷಿಣಕ್ಕೆ ವಲಸೆಬರತೊಡಗಿದರೆನ್ನಬಹುದು. ಋಗ್ವೇದದಲ್ಲಿ, ನಂತರ ಸೇರಿಸಲಾದ ಶ್ಲೋಕವೊಂದರಲ್ಲಿ, ಆರ್ಯರಿಂದ ಬಹಿಷ್ಕೃತನಾದವನು ತನ್ನ ಪಾದಗಳನ್ನು ದಕ್ಷಿಣಾಪಥದಲ್ಲಿಟ್ಟನೆಂದಿದೆ. ಪಾಣಿನಿ (ಕ್ರಿ. ಪೂ. ಸು. ೬೦೦)ಗೆ ಕಲಿಂಗದೇಶ ಮತ್ತು ಗೋದಾವರಿ ಸಮೀಪದ ಅಶ್ಮಕ ದೇಶದ ಪರಿಚಯವಿತ್ತೆಂಬುದು ಆತನ 'ಅಷ್ಟಾಧ್ಯಾಯೀ'ಯಿಂದ ತಿಳಿದಿದೆ. ಕಾತ್ಯಾಯನ(ಕ್ರಿ.ಪೂ. ಸು. ೪೦೦)ನು ಪಾಂಡ್ಯ, ಚೋಳ, ಹಾಗೂ ಕೇರಳ ದೇಶಗಳನ್ನು ಹೆಸರಿಸಿದ್ದಾನೆ. ಕೌಟಿಲ್ಯನು ಪಾಂಡ್ಯದೇಶ ಮುತ್ತುಗಳಿಗೂ ಮಸ್ಲಿನ್‌ಬಟ್ಟೆಗೂ ಪ್ರಸಿದ್ಧವಾಗಿತ್ತೆಂದಿದ್ದಾನೆ. ಬೌಧಾಯನ ಧರ್ಮಸೂತ್ರದಲ್ಲಿ ದಾಕ್ಷಿಣಾತ್ಯದ ವಿಚಿತ್ರಪದ್ಧತಿಗಳಲ್ಲಿ ಸೋದರತ್ತೆಯ ಹಾಗೂ ಸೋದರಮಾವನ ಮಕ್ಕಳ ರಕ್ತಸಂಬಂಧ, ತಂಗಳನ್ನವನ್ನು ತಿನ್ನುವುದು—ಇವುಗಳನ್ನು ಪಟ್ಟಿಮಾಡಿದ್ದಾನೆ. ಇವು ಇಂದಿಗೂ ರೂಢಿಯಲ್ಲಿರುವ ಪದ್ಧತಿಗಳೆಂಬುದು ಗಮನಾರ್ಹ.

ಇವುಗಳಿಂದ ಕ್ರಿ.ಪೂ. ಸು. ೧೦೦೦ದಿಂದ ದಕ್ಷಿಣಭಾರತದ ಆರ್ಯೀಕರಣ ಆರಂಭವಾಯಿತು. ಮೌರ್ಯರ ಕಾಲದ ವೇಳೆಗೆ ದ್ರಾವಿಡರೊಡನೆ ಬೆರೆತು ಬೆಳೆದುಬಂದು ರೂಪಿತನಾದ ಆರ್ಯಸಂಸ್ಕೃತಿ ಇಲ್ಲಿ ಬೇರೂರಿತು ಎಂಬ ಅಂಶ ಸ್ಪಷ್ಟವಾಗುತ್ತದೆ. ಈ ಹಿನ್ನೆಲೆಯಲ್ಲಿ ಅಗಸ್ತ್ಯಮಹರ್ಷಿಗೆ ಸಂಬಂಧಿಸಿದಂತೆ ಪ್ರಚಾರದಲ್ಲಿರುವ ಸಾಂಪ್ರದಾಯಿಕ ಕತೆಗಳನ್ನು ಅರ್ಥೈಸಬೇಕು. ಋಗ್ವೇದದಲ್ಲಿ ಈತನನ್ನು ಕುಂಭಸಂಭವನೆಂದು ಹೇಳಿದೆ. ಮಹಾಭಾರತದಲ್ಲಿ ಹೆಚ್ಚಿನ ವಿವರಗಳಿವೆ. ಲೋಪಾಮುದ್ರೆ ವಿದರ್ಭದೇಶದ ರಾಜಕುಮಾರಿ. ಇವನನ್ನು ಮದುವೆಯಾದಾಗ ತಂದೆಯ ಮನೆಯಲ್ಲಿ ತನಗಿದ್ದ ಸೌಲಭ್ಯಗಳನ್ನೆಲ್ಲ ಒದಗಿಸಬೇಕೆಂಬ ಕರಾರುಹಾಕಿದಳು. ಋಷಿಯಾದ ಈತ ಅದಕ್ಕಾಗಿ ಇಲ್ವಲ ಮತ್ತು ವಾತಾಪಿ ಎಂಬ ದೈತ್ಯರನ್ನು ಕೊಂದ ಎಂಬುದೊಂದು ಕತೆ. ಸಮುದ್ರದಲ್ಲಿ ಅವಿತುಕೊಂಡಿದ್ದ ದೈತ್ಯರನ್ನು ಹೊರಗೆಳೆದು ಅವರನ್ನು ಕೊಲ್ಲಲು ದೇವತೆಗಳಿಗೆ ಸಹಾಯಮಾಡಲೆಂದು ಅದರ ನೀರನ್ನೆಲ್ಲ ಕುಡಿದನಂತೆ. ತಮಿಳುದೇಶದಲ್ಲಿ ಪ್ರಚಲಿತವಾಗಿರುವ ಕತೆಯಂತೆ ಹಿಮಾಲಯದ ಶಿವಪಾರ್ವತಿಯರ ವಿವಾಹವನ್ನು ನೋಡಲು ದಕ್ಷಿಣದ ಪ್ರಜೆಗಳೆಲ್ಲ ಉತ್ತರಕ್ಕೆ ಧಾವಿಸಿದಾಗ ಪೃಥ್ವಿಯ ಸಮತೂಕ ತಪ್ಪಿಸಲು ಶಿವನು ಅಗಸ್ತ್ಯನನ್ನು ದಕ್ಷಿಣಭಾರತಕ್ಕೆ ಕಳಿಸಿದನಂತೆ. ಅಗಸ್ತ್ಯನ ಈ ಸಾಧನೆಗಳು ದಕ್ಷಿಣಕ್ಕೆ ವಲಸೆಬಂದ ಆರ್ಯರು ಇಲ್ಲಿ ಎದುರಿಸಿದ ಸಮಸ್ಯೆಗಳ ಪ್ರತಿಧ್ವನಿಗಳೆನ್ನಬಹುದು.

ಅಗಸ್ತ್ಯನು ತಮಿಳು ಭಾಷೆಯ ಪಿತಾಮಹ. 'ಅಗತ್ತಿಯಂ' ಈತನು ಬರೆದ

ತಮಿಳು ವ್ಯಾಕರಣ. ಪಾಂಡ್ಯ ಅರಸರ ಕುಲಗುರುವಾದ ಈತನು, ಮಿತ್ರನಾದ ಚೋಳರಕಾಂತನೆಂಬ ಅರಸನ ಕೋರಿಕೆಯ ಮೇರೆಗೆ ಕುಂಭದಲ್ಲಡಗಿದ್ದ ಕಾವೇರಿ ನದಿಯನ್ನು ಬಿಡುಗಡೆ ಮಾಡಿದ. ಪೂಹರ್ ಎಂಬ ಇಂದ್ರೋತ್ಸವವನ್ನು ಪ್ರತಿವರ್ಷ ಆಚರಿಸಬೇಕೆಂದು ಇನ್ನೊಬ್ಬ ಅರಸನಿಗೆ ಸೂಚಿಸಿದವ. ಆದರೆ ಇವುಗಳೆಲ್ಲ ಸಾಂಪ್ರದಾಯಿಕ ಕತೆಗಳೇ. ಆರ್ಯೀಕರಣ, ಸಂಸ್ಕೃತಭಾಷೆಯ ಪ್ರಭಾವ ದಖನ್ ಹಾಗೂ ಪಶ್ಚಿಮ ಕರಾವಳಿಯ ಪ್ರದೇಶಗಳಲ್ಲಿ ಪರಿಣಾಮಕಾರಿಯಾದಷ್ಟು ಪೂರ್ವತೀರದಲ್ಲೂ ತಮಿಳು ನಾಡಿನಲ್ಲೂ ಆಗಲಿಲ್ಲವೆನ್ನಬೇಕು. ಈ ಭಾಗಗಳಲ್ಲಿ ವಲಸೆಬಂದ ಆರ್ಯರು ಇಲ್ಲಿನ ಜನರೊಡನೆ ಬೆರೆತು ಇವರ ಭಾಷೆಗಳನ್ನೂ ಆಚಾರವ್ಯವಹಾರಗಳನ್ನೂ ಕಲಿಯಬೇಕಾಯಿತು. ಇವುಗಳ ಪ್ರಮಾಣ ಎಷ್ಟು ಎಂಬುದನ್ನು ಖಚಿತವಾಗಿ ಹೇಳಲಾಗದಾದರೂ ಪ್ರಾಚೀನ ತಮಿಳು ಸಾಹಿತ್ಯಕೃತಿಗಳನ್ನು ಅಧ್ಯಯನ ಮಾಡಿದಾಗ ಈ ಹೊಸ ಅಲೆಯನ್ನು ಅಂದಿನ ಜನ ಉತ್ಸಾಹದಿಂದ ಸ್ವೀಕರಿಸಿದರು. ಕೊಟ್ಟು ತೆಗೆದುಕೊಳ್ಳುವ ಮನೋಭಾವದ ಪರಿಣಾಮವಾಗಿ ಹೊಸದೊಂದು ಸಮಾಜ, ಸಾಮಾಜಿಕ ನಡೆನುಡಿ, ತಲೆಯೆತ್ತಿತು ಎನ್ನಬೇಕು.

ಕ್ರಿ.ಪೂ. ಸು. ೧೦೦೦ದಿಂದ ಆರ್ಯೀಕರಣ ಆರಂಭವಾದ ಸಮಯದಲ್ಲಿಯೇ ದಕ್ಷಿಣ ಭಾರತದ ಜನ ಸಮುದ್ರಯಾನದ ಮೂಲಕ ಪರದೇಶಗಳೊಡನೆ ಸಂಪರ್ಕಹೊಂದಿದ್ದರು. ಇಲ್ಲಿಂದ ಸಮುದ್ರಮಾರ್ಗವಾಗಿ ಬೆಬಿಲೋನಿಯಕ್ಕೆ ಅಕ್ಕಿ, ನವಿಲು, ಶ್ರೀಗಂಧ ಮುಂತಾದವು ರಫ್ತಾಗುತ್ತಿದ್ದುವು. ಕ್ರಿ.ಪೂ. ೭-೬ನೆಯ ಶತಮಾನಗಳಲ್ಲಿ ಬೆಬಿಲೋನಿಯ ವೈಭವದ ಪರಾಕಾಷ್ಠತೆಯನ್ನು ಮುಟ್ಟಿತು. ಆ ನಂತರ ಅವನತಿಯುಂಟಾದಾಗ ಅವರ ವ್ಯಾಪಕವ್ಯವಹಾರಗಳು ಅರಬ್ ವರ್ತಕರಿಗೆ ಲಭಿಸಿತು. ಅಂದಿನಿಂದ ಜಲಮಾರ್ಗವಾಗಿ ದಕ್ಷಿಣ ಭಾರತ ಅರೇಬಿಯ ಪರ್ಷಿಯಗಳೊಡನೆ ಸಂಪರ್ಕಹೊಂದಿತ್ತು. ಇದೇ ಸುಮಾರಿನಲ್ಲಿಯೇ ಚೀನಾದೇಶದೊಡನೆ ಸಹ ದಕ್ಷಿಣಭಾರತ ವಾಣಿಜ್ಯಸಂಬಂಧವನ್ನೇರ್ಪಡಿಸಿಕೊಂಡಂತೆ ಕಂಡುಬರುತ್ತದೆ.

## ಸಂಘ ಕಾಲ

ಇಷ್ಟೆಲ್ಲ ಆದರೂ ರಾಜಕೀಯ ಇತಿಹಾಸಕ್ಕೆ ಸಂಬಂಧಿಸಿದಂತೆ ದಕ್ಷಿಣ ಭಾರತದಲ್ಲಿ ಅಶೋಕನ ಕಾಲದ ಸ್ಥಿತಿ ಹೇಗಿತ್ತು ಎಂಬುದು ಹೆಚ್ಚಾಗಿ ತಿಳಿದಿಲ್ಲ. ಕಲಿಂಗದ ಖಾರವೇಲನ ಶಾಸನದಲ್ಲಿ ಅವನು ತಮಿಳುದೇಶದ ಸಂಘ, ಅಲ್ಲಿನ ರಾಜ್ಯಗಳ ಸಂಘಟಿತ ಸೈನ್ಯವನ್ನು ನಾಶಗೊಳಿಸಿದನೆಂದಿದೆ. ತಮಿಳುನಾಡಿನ ಪ್ರಾಚೀನ ಇತಿಹಾಸಕ್ಕೆ ಸಂಘಂ ಸಾಹಿತ್ಯ ಪ್ರಮುಖ ಆಧಾರ. ಈ ಸಾಹಿತ್ಯದ ಕಾಲ ಕುರಿತು ವಾದವಿವಾದಗಳಿವೆ. ಕ್ರಿ.ಪೂ.ದ ಶತಮಾನಗಳಿಗೆ ಸೇರಿದ್ದು ಎನ್ನುವ ವಾದವಿದ್ದರೂ ಕ್ರಿಸ್ತಶಕಾರಂಭದಿಂದ ಅದು ಬೆಳೆದು ಬಂದಿತೆಂದು ತೋರುತ್ತದೆ. 'ಸಂಘಂ' ಎಂಬುದು ಮಧುರೆಯಲ್ಲಿ ರಾಜಾಶ್ರಯ ಪಡೆದಿದ್ದ ಕವಿಗಳ ಸಂಘ. ಇಂತಹ ಮೂರು 'ಸಂಘ'ಗಳಿವೆ. ಒಂದೊಂದರ

ನಡುವೆಯೂ ದೀರ್ಘಕಾಲದ ಅಂತರವಿದ್ದು, ಇವು ಒಟ್ಟು ೯೯೯೦ ವರ್ಷಗಳ ಕಾಲ ಇದ್ದುವೆಂದೂ ೮೫೯೮ ಕವಿಗಳು ಇದಕ್ಕೆ ಸದಸ್ಯರಾಗಿದ್ದು, ೧೯೭ ಪಾಂಡ್ಯ ಅರಸರು ಆಶ್ರಯನೀಡಿದರು ಎಂದೂ ಸಾಂಪ್ರದಾಯಿಕ ಹೇಳಿಕೆ. ಆದರೆ ಇವುಗಳನ್ನು ಕೂಲಂಕಷವಾಗಿ ಪರಿಶೋಧಿಸಿದಾಗ ಚಾರಿತ್ರಿಕ ವಿಷಯಗಳು ಕತೆಗಳೊಡನೆ, ಐತಿಹ್ಯಗಳೊಡನೆ ಸಮಾವೇಶಗೊಂಡಿವೆ ಎಂಬ ಅಂಶ ತಿಳಿಯುತ್ತದೆ. ಇವುಗಳಲ್ಲಿ ಸುಮಾರು ನಾಲ್ಕೈದು ತಲೆಮಾರಿನ, ಎಂದರೆ ೧೨೦–೧೫೦ ವರ್ಷಗಳ ಅಂತರದೊಳಗೆ ನಡೆದಿರಬಹುದಾದ ಘಟನೆಗಳನ್ನು ಗುರುತಿಸಬಹುದು. ಸಂಘಂ ಕಾಲ ೧೦೦ರಿಂದ ೨೫೦ರ ವರೆಗಿನದು ಎನ್ನಬಹುದು.

ಸಂಘಂ ಸಾಹಿತ್ಯಕಾಲದಲ್ಲಿ ಚೇರ, ಚೋಳ ಹಾಗೂ ಪಾಂಡ್ಯವಂಶಗಳ ಅರಸರು ಆಳಿದರು. ಉದಿಯಂಜೇರಲ್ ಮೊದಲ ಚೇರ ಅರಸ. (ಸು.೧೩೦). ಈತನ ಮಗ ನೆಡುಂಜೇರಲ್. ಇವನ ರಾಜಧಾನಿ ಮರುಂದೈ. 'ಇಮಯವರಂಬನ್' ಎಂಬುದು ಈತನ ಬಿರುದು. ಹಿಮಾಲಯವನ್ನು ರಾಜ್ಯದ ಮೇರೆಯಾಗಿ ಹೊಂದಿದ್ದನೆಂದು ಇದರ ಅರ್ಥ. ಇವನ ಇಬ್ಬರು ಮಕ್ಕಳಲ್ಲಿ ಶೆಂಗುಟ್ಟವನ್ ಎಂಬಾತ ನೌಕಾಯುದ್ಧಗಳನ್ನು ಹೂಡಿದನು. ಪರನಾರ್ ಎಂಬ ಸಂಘಂ ಕವಿ ಈತನನ್ನು ಹೊಗಳಿ ಹಾಡಿದ್ದಾನೆ. 'ಶಿಲಪ್ಪದಿಕಾರಮ್' ಗ್ರಂಥದ ನಾಯಕಿ ಕನ್ನಗಿ. ಈಕೆ ಆದರ್ಶಸತಿ. ಅವಳ ಹೆಸರಿನಲ್ಲಿ ಒಂದು ಪಂಥ(ಪತ್ತಿನೀಮತ) ಬೆಳೆದು ಕನ್ನಗಿಯನ್ನು ಸ್ತ್ರೀದೇವತೆಯಂತೆ ಪೂಜಿಸುವ ಸಂಪ್ರದಾಯ ಆರಂಭವಾಯಿತು.

ಚೇರರ ಸಮಕಾಲೀನರಾಗಿ ಸಣ್ಣ ವೇಳ್‌ಪಾಳೆಯಗಾರರಾಗಿದ್ದವರು ಆಮ್ ಮತ್ತು ಪಾರಿ. ಉರೈಯೂರಿನ ಬ್ರಾಹ್ಮಣಕವಿಯ ಆಶ್ರಯದಾತ ಆಮ್ ಕುಲದ ಆಂಡಿವನ್. ಫಲವತ್ತಾದ ಈತನ ರಾಜ್ಯದಲ್ಲಿ ಆನೆಗಳು ಅಸಂಖ್ಯಾತವಾಗಿದ್ದುವಂತೆ. ಪಾರಿ ಇನ್ನೊಬ್ಬ ವೇಳ್‌ನಾಯಕ. ಪಿರಾನ್‌ಮಲೈ ಸುತ್ತಲಿನ ಪ್ರದೇಶದ ಅಧಿಪತಿ. ಖ್ಯಾತಿವೆತ್ತ ಕಪಿಲರ್ ಈತನ ಸಲಹೆಗಾರ ಹಾಗೂ ಮಿತ್ರ. ಪಾರಿ ಕೊಡುಗೈ ದಾನಿ. ಪಾರಿಯ ರಾಜ್ಯನ್ನು ಮೂವರು ಅರಸರು ಮುತ್ತಿದಾಗ ಕಪಿಲನು ಅವನಿಗೆ ಬೆನ್ನೆಲುಬಾಗಿ ನಿಂತು ಅವನನ್ನು ಕಾಪಾಡಿದ. ಶತ್ರುಗಳ ಕೈ ಮೇಲಾದಾಗ ಅವನ ಇಬ್ಬರು ಹೆಣ್ಣುಮಕ್ಕಳನ್ನು ರಕ್ಷಿಸುವ ಹೊಣೆಹೊತ್ತ.

ಈಗಿನ ಧರ್ಮಪುರಿಯ ಪ್ರದೇಶದ ನಾಯಕ ಅಡಿಗೈಮಾನ್. ಅವ್ವೈಯಾರ್ ಎಂಬ ಕವಯಿತ್ರಿಯ ಆಶ್ರಯದಾತ. ಈತ ಚೇರರೊಡನೆ ಕಾದಬೇಕಾದಾಗ ಆಕೆ ಈತನ ಪರವಾಗಿ ತೊಂಡೈಮಾನನ ಆಸ್ಥಾನಕ್ಕೆ ಭೇಟಿಯಿತ್ತಳು. ಕೊನೆಗೊಮ್ಮೆ ಈತನು ಚೇರನ ಸಾರ್ವಭೌಮತ್ವವನ್ನು ಒಪ್ಪಬೇಕಾಯಿತು.

ಪಾಂಡ್ಯ ನೆಡುಂಜೆಳಿಯನ್ ಪ್ರಖ್ಯಾತನು. ಈತನ ಕಾಲ ಸು. ೨೧೦. ಮಾಗುಡಿ ಕಿಳಾರ್ ಮತ್ತು ನಕ್ಕಿರಾರ್ ಎಂಬ ಕವಿಗಳು ಈತನನ್ನು ಕುರಿತು ಹಾಡಿದ್ದಾರೆ. ಚೋಳರಲ್ಲಿ ಪ್ರಸಿದ್ಧನು ಕರಿಕಾಲ (ಸು. ೧೯೦). ಇಳಜೆಚ್ಚೆನ್ನಿಯ ಮಗ,

ಮಗ, ಅಪ್ರತಿಮಶೂರ. ಬೆಂಕಿಯ ಅನಾಹುತದಲ್ಲಿ ಕಾಲು ಸುಟ್ಟಿದ್ದರಿಂದ ಕರಿಕಾಲನೆನಿಸಿಕೊಂಡ. ಆರಂಭದಲ್ಲಿ ರಾಜ್ಯವನ್ನು ಕಳೆದುಕೊಂಡು ದೀರ್ಘಪರಿಶ್ರಮದ ಬಳಿಕ ಅದನ್ನು ಪುನಃ ಪಡೆದುಕೊಂಡ ಈತ ತಂಜಾವೂರಿನ ಸಮೀಪದ ವೆಣ್ಣೆ ಎಂಬಲ್ಲಿನ ಕದನದಲ್ಲಿ ಹನ್ನೊಂದು ಜನ ಅರಸರನ್ನು ಸೋಲಿಸಿದನು. 'ಪಟ್ಟಿನಪ್ಪಾಲೈ' ಗ್ರಂಥದಲ್ಲಿ ಇವನನ್ನು ಕುರಿತ ವಿವರಗಳಿವೆ. ಇವನ ಸಾಧನೆಗಳ ಪರಿಣಾಮವಾಗಿ ಕಾವೇರೀಪಟ್ಟಣ ಸಂಪದ್ಭರಿತ ನಗರವಾಯಿತು. ತಮಿಳುದೇಶದ ಅರಸರ ಮೇಲಿನ ಸಾರ್ವಭೌಮತ್ವ ಪಡೆದ ಈತ ಒಳಹೊರದೇಶಗಳ ವ್ಯಾಪಾರವನ್ನು ವಿಸ್ತರಿಸಿದ. ವ್ಯವಸಾಯಕ್ಕೆ ಸೌಲಭ್ಯಗಳನ್ನು ಕಲ್ಪಿಸಿದ. ದೇಶದಲ್ಲಿ ಶಾಂತಿಸಮೃದ್ಧಿಗಳು ನೆಲಸುವಂತೆ ಮಾಡಿದನು.

ಇವುಗಳು ನಮಗೆ ಸಂಘಂ ಸಾಹಿತ್ಯದಲ್ಲಿ ದೊರಕುವ ರಾಜಕೀಯ ಪರಿಸ್ಥಿತಿಗಳ ಸ್ಥೂಲಚಿತ್ರ. ಸಾಂಸ್ಕೃತಿಕವಾಗಿ ಈ ಸಾಹಿತ್ಯದಲ್ಲಿ ಭಿನ್ನಸಂಸ್ಕೃತಿಗಳು—ಆರ್ಯ ಹಾಗೂ ಪ್ರಾಚೀನ ತಮಿಳು—ಬೆರೆಯುವುದನ್ನು ಕಾಣುತ್ತೇವೆ. ತಮಿಳುದೇಶ ಫಲವತ್ತಾದ ದೇಶ. ಜನರನ್ನು ಕಸುಬಿಗನುಗುಣವಾಗಿ ವರ್ಗೀಕರಿಸಲಾಗಿತ್ತು. ಅವರು ಒಂದೊಂದು ಗ್ರಾಮ ಅಥವಾ ಪಟ್ಟಣದಲ್ಲಿ ತಮ್ಮದೇ ಗುಂಪುಗಳಲ್ಲಿ ವಾಸಿಸುತ್ತಿದ್ದರು. ಆನುವಂಶಿಕ ರಾಜಪದ್ಧತಿಯನ್ನು ಅನುಸರಿಸಲಾಗಿತ್ತು. ರಾಜ ನಿರಂಕುಶಾಧಿಕಾರಿ ಎನಿಸಿದರೂ ಸಾಂಪ್ರದಾಯಿಕ ನೀತಿನಿಯಮಗಳೂ ಮಂತ್ರಿ ಮತ್ತು ಮಿತ್ರಕವಿಗಳ ಉಪದೇಶಗಳೂ ಅವನ ಚಟುವಟಿಕೆಗಳಿಗೆ ತಡೆಯಾಗಿದ್ದುವು. ಸಭಾ ಅಥವಾ ಮನ್ರಂ ಶ್ರೇಷ್ಠ ನ್ಯಾಯಾಸ್ಥಾನ. ಭೂಕಂದಾಯ ಮತ್ತು ವ್ಯಾಪಾರಗಳಿಂದ ಬಂದ ವರಮಾನ ರಾಜ್ಯದ ಬೊಕ್ಕಸವನ್ನು ತುಂಬಿಸುತ್ತಿತ್ತು. ಇದು ಅಂದಿನ ಚಿತ್ರ.

## ಮೌರ್ಯೋತ್ತರ ಕಾಲದ ಆರ್ಥಿಕ ಪರಿಸ್ಥಿತಿ

ಮೌರ್ಯಸಾಮ್ರಾಜ್ಯದ ಪತನಾನಂತರದ ಸುಮಾರು ಐದು ಶತಮಾನಗಳಲ್ಲಿನ ರಾಜಕೀಯ ಪರಿಸ್ಥಿತಿಗಳ ಸೂಕ್ಷ್ಮ ಪರಿಚಯವನ್ನು ಮೇಲೆ ಕೊಡಲಾಗಿದೆ. ಉತ್ತರ ಭಾರತವನ್ನೆಲ್ಲಾ ಒಂದುಗೂಡಿಸುವ ಯಾವ ಅರಸುಮನೆತನವೂ ಈ ದೀರ್ಘಕಾಲದಲ್ಲಿ ಅಸ್ತಿತ್ವಕ್ಕೆ ಬರಲಿಲ್ಲ. ಹಲವಾರು ರಾಜ್ಯಗಳೂ ನೂರಾರು ಅರಸರೂ ಈ ಸಮಯದಲ್ಲಿ ಬೇರೆ ಬೇರೆ ಕಡೆ ಅಧಿಕಾರದಲ್ಲಿದ್ದರು. ಹೆಚ್ಚಿನ ವಿವರಗಳು ತಿಳಿಯಲು ಸಾಕಷ್ಟು ಆಧಾರಗಳೂ ಇಲ್ಲ. ಕಲಿಂಗದಲ್ಲಿ ಖಾರವೇಲ, ಪಾಟಲೀಪುತ್ರದಲ್ಲಿ ಪುಷ್ಯಮಿತ್ರ, ಪೆಷಾವರದಲ್ಲಿ ಕುಷಾಣರ ಕನಿಷ್ಕ, ಜುನಾಗಢದಲ್ಲಿ ರುದ್ರದಾಮ—ಹೀಗೆ ಆಗೊಬ್ಬ ಈಗೊಬ್ಬ ಇತಿಹಾಸದ ಪುಟಗಳಲ್ಲಿ ಮೆರೆದು ಮರೆಯಾದರು. ಮಧ್ಯಏಷಿಯದಲ್ಲಿ ಈ ಸಮಯದಲ್ಲಿ ನಡೆದ ಜನಾಂಗಗಳ ವಲಸೆ ಭಾರತದ ಮೇಲೂ ತನ್ನ ಪ್ರಭಾವವನ್ನು ಬೀರಿತು. ಮೇಲ್ನೋಟಕ್ಕೆ ಇವುಗಳಲ್ಲಿ ಯಾವ ತತ್ತ್ವವೂ ಸೂತ್ರವೂ ಇದ್ದಂತೆ ತೋರದು.

ಈ ೫೦೦ ವರ್ಷಗಳಲ್ಲಿ ಭಾರತ ಆರ್ಥಿಕವಾಗಿ ಬಹಳ ಅಭಿವೃದ್ಧಿಗೊಂಡಿತ್ತು. ಭಾರತದಾದ್ಯಂತ ಹೆದ್ದಾರಿಗಳೂ ಉಪಮಾರ್ಗಗಳೂ ಬೆಳೆದು ಅನೇಕ ನಗರಗಳು

ಸಂಪರ್ಕಗಳನ್ನು ಹೊಂದಿದ್ದುವು. ಜಲಮಾರ್ಗಗಳು ಸಹ ಉಪಯುಕ್ತವಾಗಿದ್ದುವು. ನದಿಗಳಿಗೆ ಸೇತುವೆಗಳನ್ನು ಕಟ್ಟಿರದಿದ್ದರೂ ದೋಣಿಗಳ ಮೂಲಕ ನದಿಗಳನ್ನು ದಾಟಲು ಸೌಲಭ್ಯಗಳಿದ್ದುವು. ಶ್ರಾವಸ್ತಿಯಿಂದ ನೈರುತ್ಯಕ್ಕೆ ಪ್ರತಿಷ್ಠಾನ ಹಾಗೂ ಆಗ್ನೇಯಕ್ಕೆ ರಾಜಗೃಹಗಳಿಗೆ ನೇರವಾದ ಮಾರ್ಗಗಳಿದ್ದುವೆಂದೂ ಬೌದ್ಧಸಾಹಿತ್ಯಾಧಾರಗಳಿಂದ ತಿಳಿದಿದೆ. ಪಶ್ಚಿಮ ಏಷಿಯ ಹಾಗೂ ಗ್ರೀಸ್‌ದೇಶಗಳೊಡನೆ ತಕ್ಷಶಿಲೆಯ ಮೂಲಕ ಹೋಗಲು ಮಾರ್ಗಗಳಿದ್ದುವು. ಮೌರ್ಯರ ಕಾಲದಲ್ಲಿ ತಕ್ಷಶಿಲೆಯಿಂದ ಪಾಟಲೀಪುತ್ರಕ್ಕೆ ನೇರವಾದ ರಾಷ್ಟ್ರೀಯವೆನಿಸಬಹುದಾದ ಹೆದ್ದಾರಿಯಿತ್ತು. ಅಂದಿನಿಂದ ಇಂದಿನ ವರೆಗೂ ಈ ಮಾರ್ಗ ನೂರಾರು ಬಾರಿ ಜೀರ್ಣೋದ್ಧಾರಕ್ಕೊಳಗಾಗಿದೆ. ತಕ್ಷಶಿಲೆಯಿಂದ ಕಾಬೂಲಿಗೆ ಹೋಗುವ ಮಾರ್ಗ ಚಟುವಟಿಕೆಗಳಿಂದ ಕೂಡಿತ್ತು. ಅಲ್ಲಿಂದ ಬ್ಯಾಕ್ಟ್ರಿಯ, ಆಕ್ಸಸ್, ಕ್ಯಾಸ್ಪಿಯನ್ ಸಮುದ್ರ ಮತ್ತು ಕಾಕಸಸ್ ಬೆಟ್ಟಗಳ ಮೂಲಕ ಕಪ್ಪು ಸಮುದ್ರವನ್ನು ತಲುಪಬಹುದಾಗಿತ್ತು. ಅರಬ್ಬೀಸಮುದ್ರದ ಮೂಲಕ ಪಶ್ಚಿಮ ಏಷಿಯಕ್ಕೆ ಜಲಮಾರ್ಗವಿದ್ದರೂ, ಅದು ಶ್ರಮದಾಯಕವೂ ವೆಚ್ಚದ್ದೂ ಆಗಿತ್ತು. ಭಾರತ ಮತ್ತು ಆಫ್ಘನಿಸ್ಥಾನಗಳ ನಡುವೆ ಈಗ ಸಾಂಸ್ಕೃತಿಕ ಸಂಬಂಧಗಳೂ ಹೆಚ್ಚಿದ್ದು ಒಂದು ವಿಧದಲ್ಲಿ ರಾಜಕೀಯ ಹಾಗೂ ಸಾಂಸ್ಕೃತಿಕ ದೃಷ್ಟಿಗಳಿಂದ ಆಫ್ಘನಿಸ್ಥಾನವನ್ನು ವಾಯವ್ಯ ಭಾರತದ ಒಂದು ಭಾಗವಾಗಿಯೇ ಪರಿಗಣಿಸಲಾಗಿತ್ತು. ಮಧ್ಯ ಏಷಿಯದಲ್ಲೂ ಕಷ್ಕರ್, ಯಾರ್ಕಂಡ್, ಖೋಟಾನ್, ಮಿರಾನ್, ಕುಟಿ, ತುರ್ಫಾನ್ ಮುಂತಾದ ನಗರಗಳಲ್ಲಿ ಭಾರತದ ವರ್ತಕರು ತಮ್ಮ ಕೋಠಿಗಳನ್ನು ಕಟ್ಟಿಕೊಂಡಿದ್ದರು. ಇವುಗಳಿಂದ ಒಂದು ಅಂಶ ಸ್ಪಷ್ಟವಾಗುತ್ತದೆ. ಎಷ್ಟೇ ರಾಜಕೀಯ ವ್ಯತ್ಯಯಗಳಿದ್ದರೂ ಭಾರತದ ವಾಣಿಜ್ಯ ಪ್ರಗತಿಪಥದಲ್ಲಿತ್ತು ; ವರ್ತಕರು ತಮ್ಮ ಧನ, ಶಕ್ತಿ, ಪ್ರಾಬಲ್ಯ ಪ್ರಭಾವಗಳನ್ನು ಹೆಚ್ಚಿಸಿಕೊಳ್ಳುತ್ತಿದ್ದರು; ಯವನರು, ಶಕರು, ಪಾರ್ಥಿಯನರು, ಭಾರತದ ವರ್ತಕರು ಅವರ ದೇಶಗಳೊಡನೆ ವ್ಯಾಪಾರ ಸಂಬಂಧಗಳನ್ನು ಹೆಚ್ಚಿಸಿಕೊಳ್ಳಲು ಸಹಾಯಕರಾದರು.

ಇಲ್ಲಿ ನಾವು ಈ ಕಾಲದಲ್ಲಿ ಸಂಘಗಳೂ ಶ್ರೇಣಿಗಳೂ ವಹಿಸಿದ ವಿಶಿಷ್ಟವಾದ ಪಾತ್ರವನ್ನು ಗಮನದಲ್ಲಿಡಬೇಕು. ವೇದಗಳ ಕಾಲದಲ್ಲಿ ಈ ಪದಗಳಿಗೆ ಗುಂಪು, ಪಂಗಡ ಎಂಬ ಅರ್ಥವಿದ್ದಿತು. ಆದರೆ ಈ ಕಾಲದಲ್ಲಿ ಇವು ಪಾರಿಭಾಷಿಕ ಪದಗಳೆನಿಸಿಕೊಂಡುವು. ಶ್ರೇಣಿಗಳಲ್ಲಿ ಕೈಗಾರಿಕಾಶ್ರೇಣಿ ಮತ್ತು ವಾಣಿಜ್ಯಶ್ರೇಣಿಗಳೆಂಬ ಎರಡು ಪ್ರಮುಖವಾಗಿ ತಲೆಯೆತ್ತಿದುವು. ಈ ಸಂಸ್ಥೆಗಳು ತಮ್ಮ ತಮ್ಮ ಪ್ರಮುಖರ ಆಶ್ರಯದಲ್ಲಿ ಸುವ್ಯವಸ್ಥಿತವಾಗಿದ್ದುವು. ಬೌದ್ಧ ಜಾತಕಗಳಲ್ಲಿ ಹದಿನೆಂಟು ಸೇಣಿ(ಶ್ರೇಣಿ)ಗಳನ್ನು ಹೆಸರಿಸಲಾಗಿದೆ. ಮಾರಾಟದ ವಸ್ತುಗಳಿಗೆ ಬೇಡಿಕೆ ಹೆಚ್ಚಿದಂತೆಲ್ಲ ಉತ್ಪನ್ನವೂ ಅಧಿಕಗೊಂಡಿತು. ವ್ಯಕ್ತಿ ವೈಯಕ್ತಿಕವಾಗಿ ವ್ಯವಹಾರದ ಪ್ರತಿಸ್ಪರ್ಧೆಯನ್ನು ಎದುರಿಸಲಾರದೆ ಹೋದಾಗ, ಈ ಶ್ರೇಣಿಗಳ ಆವಶ್ಯಕತೆ ಹೆಚ್ಚಿತು. ಒಂದೊಂದು ವೃತ್ತಿಗೂ ಒಂದೊಂದೂ ಶ್ರೇಣಿ ಹುಟ್ಟಿತು. ವೃತ್ತಿ ಆನುವಂಶಿಕವಾಗಿ, ಕೈಗಾರಿಕೆಗಳು ಕೇಂದ್ರೀಕೃತವಾದುವು. ಪ್ರತಿ

ಶ್ರೇಣಿಗೂ ಒಬ್ಬ ಪ್ರಮುಖನಿದ್ದ. ಆತನಿಗೆ ಸಮಾಜದಲ್ಲಿ ಉನ್ನತ ಸ್ಥಾನಮಾನವೂ ಹೆಚ್ಚಿನ ಜವಾಬ್ದಾರಿಯೂ ಇದ್ದಿತು. ಸಂಘಗಳು, ಗಣಗಳು 'ಮುಖ್ಯ'ರ ಆಧೀನದಲ್ಲಿ ಕಾರ್ಯನಿರತ ವಾಗಿದ್ದುವೆಂದು ಅರ್ಥಶಾಸ್ತ್ರದಲ್ಲಿ ಹೇಳಿದೆ. ವೃತ್ತಿಗಳು ಕೇಂದ್ರೀಕೃತವಾಗಿ ವೃತ್ತಿಪ್ರಧಾನ ವಾದ ಗ್ರಾಮಗಳೇ ಹುಟ್ಟಿಕೊಂಡುವು. ಕುಂಬಾರ, ಕಮ್ಮಾರ ಕವಾಟಕರ ಗ್ರಾಮಗಳೇ ಇದ್ದುದು ಸಾಹಿತ್ಯಾಧಾರಗಳಿಂದ ತಿಳಿದಿದೆ. ನಗರಗಳಲ್ಲಿ ಈ ವೃತ್ತಿಕಾರರಿಗಾಗಿ ಕುಂಬಾರ ಗೇರಿ, ಕಮ್ಮಾರಗೇರಿ ಇತ್ಯಾದಿ ಪ್ರತ್ಯೇಕ ವಸತಿಗಳೋ ಬೀದಿಗಳೋ ಇದ್ದುವು. ಬೇಗ ಕೊಳೆತು ಹೋಗುವ ಆಹಾರ ಪದಾರ್ಥಗಳಿಗಾಗಿ ನಗರಗಳ ದ್ವಾರದಲ್ಲಿಯೇ ಮಾರುಕಟ್ಟೆ ಗಳಿದ್ದುವು. ಶ್ರಾವಸ್ತಿಯ ಮಹಾದ್ವಾರದಲ್ಲಿನ ಮೀನಿನ ಮಾರುಕಟ್ಟೆ, ಉತ್ತರ ಪಾಂಚಾ ಲದ ನಾಲ್ಕು ದ್ವಾರಗಳಲ್ಲಿನ ತರಕಾರಿ ಮಾರುಕಟ್ಟೆ, ವಾರಾಣಸಿಯ ಹೊರವಲಯದಲ್ಲಿ ರಸ್ತೆಗಳು ಕೂಡುವ ಸ್ಥಳದಲ್ಲಿನ ಜಿಂಕೆಯ ಮಾಂಸದ ಮಾರುಕಟ್ಟೆ—ಇವುಗಳ ಉಲ್ಲೇಖ ಸಮಕಾಲೀನ ಸಾಹಿತ್ಯದಲ್ಲಿ ಇದೆ.

ಶ್ರೇಣಿಗಳು ತಾವು ಸಿದ್ಧಗೊಳಿಸುವ ಸಾಮಗ್ರಿಗಳಿಗೆ ಸಂಬಂಧಿಸಿದಂತೆ ಕಟ್ಟುನಿಟ್ಟಾದ ನಿಯಮಗಳನ್ನು ಹೊಂದಿದ್ದುವು. ಕೆಲಸಗಾರರ ಕೆಲಸದ ವೇಳೆ, ಉತ್ಪಾದನೆಯ ಮೌಲ್ಯ, ಸಾಮಗ್ರಿಗಳ ಬೆಲೆ ಇತ್ಯಾದಿಗಳೆಲ್ಲ ನಿಯಂತ್ರಣಕ್ಕೊಳಪಟ್ಟಿದ್ದವು. ತಮ್ಮದೇ ಆದ ಪ್ರತ್ಯೇಕ ನ್ಯಾಯಾಲಯಗಳಲ್ಲಿ ಈ ನಿಯಮಗಳನ್ನು ಉಲ್ಲಂಘಿಸಿದವರ ವಿಚಾರಣೆಯಾಗು ತ್ತಿತ್ತು. ಶ್ರೇಣಿಧರ್ಮ ನ್ಯಾಯಾಲಯದ ಕಟ್ಟಳೆಯಷ್ಟೇ ಬಿಗಿಯಾಗಿತ್ತು. ವಿವಾಹ ವಾದ ಸ್ತ್ರೀಯೊಬ್ಬಳು ಬೌದ್ಧಭಿಕ್ಷುಣಿಯಾಗಲು ತನ್ನ ಗಂಡನ ಅನುಮತಿಯನ್ನೇ ಅಲ್ಲದೆ ತಾನು ಸೇರಿದ್ದ ಶ್ರೇಣಿಯ ಅನುಮತಿಯನ್ನು ಪಡೆಯುವುದೂ ಆವಶ್ಯಕವಾಗಿತ್ತೆಂಬು ದನ್ನು ಗಮನಿಸಿದರೆ ಕೆಲಸಗಾರರ ವೈಯಕ್ತಿಕ ಜೀವನದ ಮೇಲೂ ಶ್ರೇಣಿ ಹತೋಟಿಯನ್ನು ಪಡೆದಿತ್ತು ಎಂಬ ಅಂಶ ವ್ಯಕ್ತವಾಗುತ್ತದೆ.

ವಸ್ತುವಿನಿಮಯ ಪದ್ಧತಿ ಮುಂದುವರಿದಿದ್ದರೂ ನಾಣ್ಯಗಳೂ ಈಗ ಚಲಾವಣೆಗೆ ಬಂದುವು. ಕಹಪಣ (ಕಾರ್ಷಾಪಣ) ನಾಣ್ಯದ ಹೆಸರು. ನಿಷ್ಕ ಸುವರ್ಣಗಳು ಚಿನ್ನದ ನಾಣ್ಯಗಳು. ಕಾಂಸಿ, ಪಾದ, ಮಾಸಕ, ಕಾಕಣಿಕಾಗಳು ತಾಮ್ರದ ಮತ್ತು ಹಿತ್ತಾ ಳೆಯ ನಾಣ್ಯಗಳು. ಕಾಲಕಾಲಕ್ಕೆ, ಇವುಗಳ ಮೌಲ್ಯಗಳು ಬದಲಾಗುತ್ತಿದ್ದುವು. ಬೇರೆಬೇರೆ ಪ್ರದೇಶಗಳಲ್ಲಿ ಬೇರೆಬೇರೆ ಮೌಲ್ಯಗಳೂ ಇದ್ದುವು. ಹಣವನ್ನು ಸಾಲವಾಗಿ ನೀಡುವ ಪದ್ಧತಿ ಇತ್ತು. 'ವೃದ್ಧಿ' ಎಂಬುದು ಸಾಲಕ್ಕೆ ನೀಡಬೇಕಾಗಿದ್ದ ಬಡ್ಡಿ. ಇದರ ದರಗಳೂ ಭಿನ್ನವಾಗಿದ್ದುವು. ಸಾಮಾನ್ಯವಾಗಿ ಶ್ರೇಣಿಗಳು ಸಹ ಸಾಲ ಕೊಡುತ್ತಿದ್ದುವು, ಬಡ್ಡಿಯನ್ನು ಪಡೆಯುತ್ತಿದ್ದುವು. ಈ ದೃಷ್ಟಿಯಲ್ಲಿ ಇವು ಬ್ಯಾಂಕುಗಳ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದುವೆನ್ನಬಹುದು. ಆದರೆ ಈ ವ್ಯವಹಾರಗಳಲ್ಲಿ ಸಾಮಾನ್ಯವಾಗಿ ಶ್ರೇಷ್ಠಿಗಳೇ ನಿರತರಾಗಿದ್ದರು. ನಾಸಿಕದಲ್ಲಿ ದೊರೆತ ನಹಪಾಣನ ಅಳಿಯನಾದ ಉಷವದತ್ತ (ಋಷಭದತ್ತ)ನ ಶಾಸನ ಈ ದೃಷ್ಟಿಯಲ್ಲಿ ಮಹತ್ತ್ವಪೂರ್ಣವಾದ್ದಾಗಿದೆ. ಸಂಘವೊಂದಕ್ಕೆ ದತ್ತಿಯನ್ನು ನೀಡುವ ಸಂದರ್ಭದಲ್ಲಿ ೩೦೦೦ ಕಾರ್ಷಾಪಣಗಳನ್ನು ನೇಕಾರರ ಶ್ರೇಣಿಗೆ

ಕೊಡಲಾಯಿತು. ಈ ದತ್ತಿಯ ಮೇಲಿನ ವೃದ್ಧಿಯಿಂದ ಸಂಘದಲ್ಲಿನ ಭಿಕ್ಷುಗಳಿಗೆ ಬೇಕಾದ ವಸ್ತ್ರವನ್ನು ಸರಬರಾಜು ಮಾಡಲು ಈ ಶಾಸನ ಆವಶ್ಯಕ ಏರ್ಪಾಡುಗಳನ್ನು ಮಾಡಿತು.

ಸರ್ಕಾರ ಸಾಮಾನ್ಯವಾಗಿ ಈ ಶ್ರೇಣಿಗಳ, ಸಂಘಗಳ ಆಂತರಿಕವ್ಯವಹಾರದಲ್ಲಿ ಆಸಕ್ತಿ ತೋರದಿದ್ದರೂ ಅವುಗಳ ಮೇಲೆ ಅದರ ಹತೋಟಿಯಿತ್ತು. ಗಣಿಗಳು ರಾಜ್ಯದ ಅಧೀನದಲ್ಲಿದ್ದುವು. ಬಂಗಾರ, ಬೆಳ್ಳಿ, ವಜ್ರ, ಹರಳುಗಳು, ತಾಮ್ರ, ಸೀಸ, ತವರ, ಕಬ್ಬಿಣಗಳ ಗಣಿಗಳಿದ್ದುದು ತಿಳಿದುಬಂದಿದೆ. ಸರ್ಕಾರದ ಹತ್ತಿ, ಎಣ್ಣೆ ಹಾಗೂ ಸಕ್ಕರೆಯ ಕಾರ್ಖಾನೆಗಳಿದ್ದುವು. ನಾಣ್ಯಗಳನ್ನು ಅಚ್ಚುಹಾಕಿಸುವುದು ಸರ್ಕಾರದ ಸ್ವಾಮ್ಯದಲ್ಲಿತ್ತು. ಅದು ಶ್ರೇಣಿಗಳಿಗೂ ಸಂಘಸಂಸ್ಥೆಗಳಿಗೂ ನಾಣ್ಯಗಳನ್ನು ಅಚ್ಚು ಮಾಡುತ್ತಿತ್ತು. ಅದಕ್ಕಾಗಿ ನಿಯಮಿತದರವನ್ನು ಪಡೆಯುತ್ತಿತ್ತು. ವ್ಯಾಪಾರದ ಮೇಲೂ ಬೆಲೆಗಳ ಮೇಲೂ ಸರ್ಕಾರದ ನಿಯಂತ್ರಣವಿದ್ದಿತು. ಸುಂಕ ಹಾಗೂ ತೆರಿಗೆಗಳನ್ನು ವಸೂಲ್ಮಾಡುವುದರ ಮೂಲಕ ರಾಜ್ಯದ ಬೊಕ್ಕಸ ತುಂಬುತ್ತಿತ್ತು.

ವ್ಯಾಪಾರಕ್ಕಿಂತ ಮುಖ್ಯವಾಗಿದ್ದ ಕಸುಬು ಎಂದರೆ ವ್ಯವಸಾಯ. ೩೦ರಿಂದ ೧೦೦೦ದ ವರೆಗಿನ ಗೃಹಗಳನ್ನು, ಕುಲಗಳನ್ನು ಹೊಂದಿದ್ದ ಗ್ರಾಮಗಳ ಸುತ್ತಲೂ ವ್ಯವಸಾಯ ಯೋಗ್ಯ ಕ್ಷೇತ್ರಗಳಿದ್ದುವು. ಭೂಹಿಡುವಳಿಗಳು ಸಾಮಾನ್ಯವಾಗಿ ಸಣ್ಣದಾಗಿದ್ದು, ಕೂಲಿಗಳ ನೆರವಿಲ್ಲದೆ ಒಂದು ಕುಟುಂಬ ಉಳುವಷ್ಟು ವಿಸ್ತಾರವುಳ್ಳದ್ದಾಗಿದ್ದವು. ಆದರೆ ೧೦೦೦ ಕರೀಸಗಳಿಗೂ ಹೆಚ್ಚಿನ ವಿಸ್ತಾರದ ಕ್ಷೇತ್ರಗಳೂ ಇದ್ದುವು. ವ್ಯವಸಾಯ ಭೂಮಿಗೆ ಸೇರಿದಂತೆ ಹುಲ್ಲುಗಾವಲುಗಳೂ ವನಗಳೂ ಇದ್ದುವು. ಕೌಟಿಲ್ಯ ಭೂಮಿಯನ್ನು ಕೃಷ್ಟ, ಅಕೃಷ್ಟ, ಸ್ಥಲ, ಕೇದಾರ, ಆರಾಮ, ಷಂಡ, ಮೂಲವಾಪ, ವಾಟ, ವನ, ವಿವಿತ ಮತ್ತು ಪಥಿ ಎಂದು ವಿಂಗಡಿಸಿದ್ದಾನೆ. ಪ್ರತಿಯೊಂದು ವಾಸಯೋಗ್ಯವಾದ ಗ್ರಾಮದಲ್ಲೂ ವಾಸ್ತು, ಚೈತ್ಯ, ದೇವಗೃಹ, ಸೇತುಬಂಧ, ಶ್ಮಶಾನ, ಸತ್ರ, ಪ್ರಪೆ, ಪುಣ್ಯಸ್ಥಾನ ಮತ್ತು ಪ್ರೇಕ್ಷೆಗಳಿರಬೇಕೆಂದಿದ್ದಾನೆ. ವಿವಿಧವಾದ ಅಕ್ಕಿಯಲ್ಲದೆ, ಕೊದ್ರವ, ತಿಲ, ಪ್ರಿಯಂಗು (ಮೆಣಸು ಮತ್ತು ಅರಿಶಿನ), ಮುದ್ಗ, ಮಾಷ, ಮಸೂರವೆಂಬ ಬೇಳೆಗಳೂ ಕುಲಿತ್ಥ, ಯವ, ಗೋಧೂಮಾದಿ ಧಾನ್ಯಗಳೂ ಕಲಮ, ಅತಶಿ, ಸರ್ಷಪಗಳೂ ಶಾಕ ಮತ್ತು ಮೂಲಗಳೆಂಬ ತರಕಾರಿಗಳೂ ಬಾಳೆ, ದ್ರಾಕ್ಷಿ ಮುಂತಾದ ಹಣ್ಣುಗಳೂ ಮತ್ತು ಕಬ್ಬೂ ಕೌಟಿಲ್ಯ ಅರ್ಥಶಾಸ್ತ್ರದಲ್ಲಿ ಉಲ್ಲೇಖಗೊಂಡಿವೆ.

ಪ್ರತಿಗ್ರಾಮದಲ್ಲೂ ಸಂಬಳ ಪಡೆದ ಬಡಗಿ (ಕುಟ್ಟಕ), ಕಮ್ಮಾರ, ಕುಂಬಾರ, ನಾಪಿತ, ಅಗಸ, ರಜ್ಜುವರ್ತಕ ಮುಂತಾದ ಅಧಿಕಾರಿಗಳಿರುತ್ತಿದ್ದರು. ಆಡಳಿತಕ್ಕೆ ಸಂಬಂಧಿಸಿದಂತೆ ಅಧ್ಯಕ್ಷ, ಸಂಖ್ಯಾಯಕ (ಲೆಕ್ಕಿಗ), ಗೋಪ, ಸ್ಥಾನಿಕ, ಚಿಕಿತ್ಸಕರು ಇತರ ಗ್ರಾಮಭೃತಕರು. ಸಾಧಾರಣವಾಗಿ ಅರಸನಿಗೆ ಬೆಳೆಯಲ್ಲಿ ಷಡ್ಭಾಗ ಸಲ್ಲುತ್ತಿತ್ತು. ಅಶೋಕನು ಲುಂಬಿನಿಗ್ರಾಮದಲ್ಲಿ ಇದನ್ನು ಅಷ್ಟಭಾಗಕ್ಕೆ ಇಳಿಸಿದುದನ್ನು ಇಲ್ಲಿ ನೆನೆಯ ಬಹುದು. ವ್ಯವಸಾಯದ ಮೇಲೆ ಹಾಕುವ ತೆರಿಗೆಗಳನ್ನೂ ಭಾಗ, ಬಲಿ (ಭಾಗವನ್ನು

ಹೊರತುಪಡಿಸಿ ತೆರಬೇಕಾದ ಅನಿಶ್ಚಿತ ಸುಂಕ), ಕರ (ಆಸ್ತಿಸುಂಕ), ವಿವಿತ (ಹುಲ್ಲು ಗಾವಲು ತೆರಿಗೆ), ರಜ್ಜು (ಭೂಮಿಯನ್ನು ಅಳತೆಮಾಡಲು ನೀಡಬೇಕಾದ ಶುಲ್ಕ) ಮತ್ತು ಚೋರರಜ್ಜು (ಯಾಮಿಕ ಶುಲ್ಕ) ಎಂದು ಕೌಟಿಲ್ಯನು ವಿಂಗಡಿಸಿದ್ದಾನೆ. ಈ ವಿವರಗಳನ್ನು ಪರಿಶೀಲಿಸಿದಾಗ ವ್ಯವಸಾಯ ವಾಣಿಜ್ಯಗಳು ವಿಶೇಷವಾಗಿ ಅಭಿವೃದ್ಧಿ ಹೊಂದಿದ್ದು, ಇದು ಮುಂದಿನ ಸುವರ್ಣಯುಗಕ್ಕೆ ಎಡೆಮಾಡಿಕೊಟ್ಟಿತು ಎಂಬುದು ಸ್ಪಷ್ಟವಾಗುತ್ತದೆ.

## ಸಾಮಾಜಿಕ ಪರಿಸ್ಥಿತಿ

ಭಾರತೀಯ ಸಮಾಜದಲ್ಲಿ ಈ ಮೊದಲು ಅಸ್ತಿತ್ವಕ್ಕೆ ಬಂದಿದ್ದ ವರ್ಣಾಶ್ರಮ ಪದ್ಧತಿ ಹೆಚ್ಚು ಗಡುಸಾಗುತ್ತ ಬಂದಿತು. ಆದರೂ ಮುಂದಿನ ಶತಮಾನಗಳಲ್ಲಿ ನಿಶ್ಚಿತ ರೂಪವನ್ನು ತಳೆದಂತೆ, ಹಿಂದುಸಮಾಜ ಈಗ ಇನ್ನೂ ಮಧ್ಯಂತರ ಸ್ಥಿತಿಯಲ್ಲಿತ್ತು. ಗೃಹ್ಯಸೂತ್ರಗಳು, ಧರ್ಮಸೂತ್ರಗಳು, ಅರ್ಥಶಾಸ್ತ್ರ ಇತ್ಯಾದಿಗಳನ್ನು ಪರಿಶೀಲಿಸಿದಾಗ ಬೇರೆ ಬೇರೆ ವರ್ಣಗಳ ಕರ್ತವ್ಯಗಳು ನಿಗದಿಗೊಳಿಸಲ್ಪಟ್ಟಿದ್ದವು ಎಂಬ ಅಂಶ ಗೋಚರ ವಾಗುತ್ತದೆ. ಸಮಾಜದ ಮೊದಲ ಮೂರು ವರ್ಣಗಳಿಗೆ ಸೇರಿದವರಿಗೆ (ಬ್ರಾಹ್ಮಣ, ಕ್ಷತ್ರಿಯ, ವೈಶ್ಯ) ಅಧ್ಯಯನ, ಯಜನ (ಯಾಗಮಾಡುವುದು) ಮತ್ತು ದಾನಗಳು ಆದ್ಯ ಕರ್ತವ್ಯಗಳಾಗಿದ್ದುವು. ಇವುಗಳ ಜೊತೆಗೆ ಅಧ್ಯಾಪನ (ಕಲಿಸುವುದು), ಯಾಜನ (ಯಾಗ ಮಾಡಿಸುವುದು, ಪೌರೋಹಿತ್ಯ), ಮತ್ತು ಪರಿಗ್ರಹ (ದಾನ ಸ್ವೀಕರಿಸುವುದು) ಬ್ರಾಹ್ಮ ಣನ ಕರ್ತವ್ಯಗಳಾಗಿದ್ದುವು. ಶಸ್ತ್ರಜೀವ (ಶಸ್ತ್ರಗಳ ಉಪಯೋಗದಿಂದ ಜೀವಿಸುವುದು) ಮತ್ತು ಭೂತರಕ್ಷಣೆ ಕ್ಷತ್ರಿಯನ ಕರ್ತವ್ಯಗಳು. ಕೃಷಿ, ಪಶುಪಾಲ್ಯ ಮತ್ತು ವಾಣಿಜ್ಯ ಗಳು ವೈಶ್ಯನವು. ಈ ಮೂವರೂ ದ್ವಿಜರು. ಇವರ ಶುಶ್ರೂಷೆ, ಕಲೆ ಮತ್ತು ಕಸುಬು ಶೂದ್ರನ ಪಾಲಿಗೆ ಬಂದುವು. ಈತನಿಗೆ ಯಾವ ಸಂಸ್ಕಾರಗಳೂ ಇರಲಿಲ್ಲ. ಆದರೆ ಈ ಕಾಲದಲ್ಲಿ ಶಾಸ್ತ್ರೋಕ್ತ ವಿವಾಹ, ಶ್ರಾದ್ಧಾದಿಕರ್ಮಗಳಿಗೆ ಶೂದ್ರನು ಬಾಧ್ಯನಾಗಿದ್ದನು. ವಿದ್ಯಾಭ್ಯಾಸಕ್ಕೂ ಅವನಿಗೆ ಆಸ್ಪದವಿತ್ತು. ಕ್ರಮೇಣ ಸಮಾಜದಲ್ಲಿ ಶೂದ್ರನ ಸ್ಥಾನ ಇಳಿಮುಖವಾಯಿತು.

ಅನುಲೋಮವಿವಾಹ ನಿಷೇಧಿಸಲ್ಪಟ್ಟಿರಲಿಲ್ಲ. ಪ್ರತಿಲೋಮ ಪದ್ಧತಿ ಕ್ರಮೇಣ ಇಳಿ ಮುಖವಾಗುತ್ತಿತ್ತು. ಅಂತರ್ವಿವಾಹದಂತೆಯೇ ಅಂತರ್ಭೋಜನಪದ್ಧತಿಯನ್ನು ಕೂಡ ಇನ್ನೂ ವಿಶಾಲ ದೃಷ್ಟಿಯಿಂದಲೇ ಕಾಣಲಾಗುತ್ತಿತ್ತು. ಶ್ರಾದ್ಧಕರ್ಮಗಳನ್ನು ಮಾಡದ ಶೂದ್ರನು ತಯಾರಿಸಿದ ಅಡಿಗೆಯನ್ನು ಬ್ರಾಹ್ಮಣನು ಸ್ವೀಕರಿಸಬಾರದೆಂದು ಹೇಳಿದೆ. ಇದರಿಂದ ಶೂದ್ರನ ಅಡಿಗೆ ತಿರಸ್ಕೃತವಲ್ಲವೆಂಬುದು ವಿದಿತವಾಗುತ್ತದೆ. ಈ ಸಂದರ್ಭದಲ್ಲಿ ಮನು ಒಂದು ಪಟ್ಟಿಯನ್ನು ಮಾಡಿ ಅದರಲ್ಲಿ ಸೂಚಿಸಲ್ಪಟ್ಟವರು ಮಾಡಿದ ಅಡಿಗೆಯನ್ನು ಇತರರು (ಬ್ರಾಹ್ಮಣರು) ಉಪಯೋಗಿಸಬಾರದೆಂದಿದ್ದಾನೆ. ಆದರೆ ಇದು ಹೆಚ್ಚಾಗಿ ವ್ಯಕ್ತಿಯ ಗುಣವನ್ನು ಆಧರಿಸಿದೆಯೇ ಹೊರತು ವರ್ಣವನ್ನಲ್ಲ. ಇವರೊಡನೆ ವ್ಯವಹರಿ

ಸುವುದರಿಂದ ಅಶುಚಿ, ಮೈಲಿಗೆ ಉಂಟಾಗುತ್ತದೆ ಎಂಬ ಭಾವನೆ ನಂತರದ ಶತಮಾನಗಳಲ್ಲಿ ತೀವ್ರರೂಪ ತಾಳಿತು. ಆದರೆ ಮನುವಿನ ಕಾಲಕ್ಕೆ ಆ ಭಾವನೆ ಇನ್ನೂ ಬಂದಿರಲಿಲ್ಲ. ಅಂತರ್ಜಾತೀಯ ವಿವಾಹಗಳಿಂದ ವರ್ಣಸಂಕರ ಉಂಟಾಗಿ ಮಿಶ್ರಜಾತಿಗಳೇರ್ಪಟ್ಟುವು. ಹೊರದೇಶಗಳಿಂದ ಬಂದ ಯವನ, ಶಕ, ಪಹ್ಲವ ಜನಾಂಗಗಳವರು ಸಹ ಇಲ್ಲಿ ರಕ್ತಸಂಬಂಧಗಳನ್ನು ಮಾಡಿದ ಕಾರಣ ಇಲ್ಲಿನ ಸಮಾಜ ವ್ಯವಸ್ಥೆಯಲ್ಲಿ ಸ್ಥಾನವನ್ನು ಪಡೆದರಾದರು. ಆದರೆ ಇವರನ್ನು ಅನಿರವಸಿತವೆಂದೂ ವ್ರಾತ್ಯರೆಂದೂ ಪರಿಗಣಿಸಲಾಯಿತು. ಮಿಶ್ರಜಾತಿಗಳಿಗೆ ವೃತ್ತಿ ಶ್ರೇಣಿಗಳು ಒಂದು ಕಾರಣವೆಂದು ಹೇಳಲಾಗಿದೆ. ಈ ಶ್ರೇಣಿಗಳು ಕಸುಬುಗಳನ್ನು ಆಧರಿಸಿದ್ದುವೇ ಹೊರತು ಜನ್ಮವನ್ನಲ್ಲ. ಆದ್ದರಿಂದ ಬೇರೆ ಬೇರೆ ವರ್ಣಗಳಲ್ಲಿ ಜನಿಸಿದ, ಆದರೆ ಒಂದೇ ಕಸಬನ್ನವಲಂಬಿಸಿದ್ದ ಜನರು ಆಯಾ ಕಸುಬಿನ ಶ್ರೇಣಿಯ ಸದಸ್ಯರಾಗಿ ಪರಿಗಣಿಸಲ್ಪಟ್ಟ ಕಾರಣ ಅವರಲ್ಲಿ ಅಂತರ್ವಿವಾಹಗಳ ಸಾಧ್ಯತೆ ಉಂಟಾಯಿತು. ಅದರ ಫಲವಾಗಿ ಮಿಶ್ರಜಾತಿಗಳು ಅಸ್ತಿತ್ವಕ್ಕೆ ಬಂದುವು. ಇಲ್ಲಿ ಒಂದು ಅಂಶವನ್ನು ಗಮನಿಸಬೇಕು. ಸಾಮಾನ್ಯವಾಗಿ ನಾಲ್ಕು ವರ್ಣಗಳಿಗೆ ಸೇರಿದ ಜನರು ಮಾಡಬೇಕಾದ ಕರ್ತವ್ಯಗಳನ್ನೂ ಕರ್ಮಗಳನ್ನೂ ನಿರೂಪಿಸಿದ್ದರೂ ಅವರು ಬೇರೆ ಕರ್ಮಗಳನ್ನು (ವೃತ್ತಿಗಳನ್ನು) ಅನುಸರಿಸಲು ಯಾವ ತಡೆಯೂ ಇರಲಿಲ್ಲ. ಬ್ರಾಹ್ಮಣನು ಕೃಷೀವಲನಾಗಬಹುದಿತ್ತು. ಕ್ಷತ್ರಿಯನು ಬ್ರಹ್ಮಜ್ಞಾನಿಯಾಗಬಹುದಿತ್ತು. ವಾಸ್ತವಿಕವಾಗಿ ಈ ದೀರ್ಘಕಾಲದಲ್ಲಿ ನಾವು ಕಾಣುವುದು ಇಂತಹ ಚಿತ್ರವನ್ನೇ. ನಂದರು, ಮೌರ್ಯರು ಕ್ಷತ್ರಿಯರೇ ಅಲ್ಲವೆಂದು ಹೇಳಿದೆ. ಆದರೂ ಅವರು ಸಾಮ್ರಾಜ್ಯಾಧಿಪತಿಗಳಾದರು. ಕ್ಷತ್ರಿಯರಾದ ಮಹಾವೀರ ಗೌತಮರು ವಿಶಿಷ್ಟ ಧರ್ಮಗಳ ಸ್ಥಾಪಕರಾದರು. ಹೀಗೆಯೇ ಅನೇಕ ಬ್ರಾಹ್ಮಣರು ಸೇನಾನಿಗಳಾಗುವುದೂ ಸಾಮಾನ್ಯವಾಗಿತ್ತು.

ಸಹಕುಟುಂಬ ಪದ್ಧತಿಯಲ್ಲಿ ತಂದೆಗೆ ವಿಶಿಷ್ಟ ಗೌರವಯುತ ಸ್ಥಾನವಿತ್ತು. ಹಿರಿಯರನ್ನು ಗೌರವಿಸುವುದು ಸಾಮಾನ್ಯಧರ್ಮವಾಗಿತ್ತು. ಪತಿಪತ್ನಿಯರ ಸಂಬಂಧ ಪ್ರೇಮಪೂರಿತವೂ ಸೌಹಾರ್ದಯುತವೂ ಆಗಿದ್ದಿತು. ಹಾಗೆಂದಾಕ್ಷಣಕ್ಕೆ ದಾಂಪತ್ಯ ದ್ರೋಹಗಳಿರಲಿಲ್ಲವೆಂದಲ್ಲ. ಬೌದ್ಧಜಾತಕಗಳಲ್ಲಿ, ಮನುಧರ್ಮಶಾಸ್ತ್ರದಲ್ಲಿ ಇಂತಹ ಹಲವಾರು ನಿದರ್ಶನಗಳನ್ನು ಕೊಡಲಾಗಿದೆ. ಆದರೆ ಇವನ್ನು ಅಪವಾದ[illegible]ಂದು ಭಾವಿಸಬೇಕು. ಬಹುಪತ್ನೀತ್ವ ಕುಟುಂಬದ ಶಾಂತಿಯನ್ನು ಸ್ವಲ್ಪಮಟ್ಟಿಗೆ ಕ[illegible]ುದೇ ಅಲ್ಲದೆ ಕುಟುಂಬದಲ್ಲಿ ಪತ್ನಿಯ ಸ್ಥಾನಕ್ಕೆ ಧಕ್ಕೆಯನ್ನೂ ತಂದಿತ್ತು. ಸಾಮಾನ್ಯವಾಗಿ ಮೊದಲ ಪತ್ನಿ ಸಮಾನವರ್ಣದವಳಾಗಿದ್ದು ಕುಟುಂಬದಲ್ಲಿ ವಿಶಿಷ್ಟವಾದ ಹಕ್ಕುಬಾಧ್ಯತೆಗಳನ್ನು ಪಡೆದಿರುತ್ತಿದ್ದಳು. ಇತರ ಪತ್ನಿಯರು ಸವರ್ಣದವರಾದರೂ ಆಗಿರಬಹುದು, ಇಲ್ಲದೆಯೂ ಇರಬಹುದು. ಕುಟುಂಬ ಜೀವನದಲ್ಲಿ ಇದರಿಂದ ಅಶಾಂತಿ ತಲೆಹಾಕುವುದು ಸಹಜವಾಗಿತ್ತು. ಬಹುಪತಿತ್ವ ಪದ್ಧತಿಯ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ದ್ರೌಪದಿ ಐವರು ಸೋದರರನ್ನು ಮದುವೆಯಾದುದು ಇದಕ್ಕೆ ನಿದರ್ಶನ. ಆದರೆ ಈ ಪದ್ಧತಿ

ಸ್ವೀಕರಾರ್ಹವಾಗಿರಲಿಲ್ಲವೆಂಬುದನ್ನು ಆಕೆಯ ಸ್ವಯಂವರವನ್ನು ಎತ್ತಿ ಹಿಡಿಯಲು ಮುಂದೂಡಲಾದ ವಾದಗಳಿಂದಲೇ ಊಹಿಸಬಹುದು.

ವಿವಾಹ ಒಂದು ಧಾರ್ಮಿಕಪದ್ಧತಿ. ಸವರ್ಣದಲ್ಲಿ ವಿವಾಹ ಪ್ರಚಲಿತವಾಗಿದ್ದರೂ ಈಗಾಗಲೇ ಹೇಳಿದಂತೆ ಅಂತರ್ಜಾತಿವಿವಾಹ ನಿಷೇಧವಾಗಿರಲಿಲ್ಲ. ಒಂದೇ ವರ್ಣದಲ್ಲಿಯೂ ಸಗೋತ್ರವಿವಾಹ ನಿಷಿದ್ಧ. ಸೋದರಮಾವನ ಮಗಳನ್ನು ಮದುವೆಯಾಗುವುದನ್ನು ಮನು ಖಂಡಿಸಿದ್ದಾನಾದರೂ ದಾಕ್ಷಿಣಾತ್ಯರಲ್ಲಿ ಈ ಪದ್ಧತಿ ಅಂಗೀಕೃತವಾಗಿತ್ತು. ಬೃಹಸ್ಪತಿಯು ಗತಿಸಿದ ಸೋದರನ ಪತ್ನಿಯನ್ನು ಮದುವೆಯಾಗುವುದನ್ನು ಸಹ ಒಪ್ಪಿದ್ದಾನೆ. ಕನ್ಯೆಯ ವಿವಾಹದ ವಯಸ್ಸಿನಲ್ಲಿ ಮತಭೇದಗಳಿದ್ದರೂ ಸಾಮಾನ್ಯವಾಗಿ ಎಂಟು ವರ್ಷದ ಕನ್ಯೆಯನ್ನು ವಿವಾಹಯೋಗ್ಯಳೆಂದು ಪರಿಗಣಿಸಲಾಗಿತ್ತು. ಆದರೆ ಈ ಕಾಲದಲ್ಲಿ ಕನ್ಯೆಯರು ಮೈನೆರೆದ ಬಳಿಕ ಮದುವೆಯಾಗುವ ಪದ್ಧತಿ ಹೆಚ್ಚು ಪ್ರಚಾರದಲ್ಲಿದ್ದು ಬಾಲ್ಯವಿವಾಹ ಅನಂತರ ರೂಢಿಗೆ ಬಂದಿತೆನ್ನಬೇಕು.

ಕನ್ಯೆಯ ವಿವಾಹದ ವಯಸ್ಸನ್ನು ಕಡಿಮೆ ಮಾಡಿದುದರ ಫಲವಾಗಿ ಆಕೆಗೆ ವಿದ್ಯಾಭ್ಯಾಸದ ಸೌಕರ್ಯಗಳೂ ಅವಕಾಶಗಳೂ ಕಡಿಮೆಯಾದುವು. ಇದರಿಂದ ಸಮಾಜದಲ್ಲಿ ಆಕೆಯ ಸ್ಥಾನಮಾನಗಳಿಗೆ ಕುಂದುಂಟಾಯಿತು. ಕಟ್ಟುನಿಟ್ಟಾದ ಪಾತಿವ್ರತ್ಯ ಹಾಗೂ ಗಂಡನಿಗೆ ಸಂಪೂರ್ಣ ವಿಧೇಯತೆ ಇವುಗಳಿಗೆ ಅತಿಯಾದ ಮಹತ್ತ್ವವನ್ನು ನೀಡಲಾಯಿತು. ಆದರೆ ಪ್ರಸ್ತುತ ಕಾಲದಲ್ಲಿ ಈ ವಿಷಯದಲ್ಲಿಯೂ ಕಟ್ಟುಪಾಡುಗಳು ಸಡಿಲವಾಗಿದ್ದುವು. ಸಮಕಾಲೀನ ಸಾಹಿತ್ಯದಲ್ಲಿ ಎರಡು ವಿಧದ ಸ್ತ್ರೀಯರ ವರ್ಣನೆ ಇದೆ. ಒಂದು ಕಡೆ 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂಬ ಧೋರಣೆ. ಸ್ತ್ರೀ ಬಾಲ್ಯದಲ್ಲಿ ತಂದೆಯ, ಯೌವನದಲ್ಲಿ ಪತಿಯ, ಮುಪ್ಪಿನಲ್ಲಿ ಮಕ್ಕಳ ಅಧೀನ ಎಂಬ ದೃಷ್ಟಿ; ಇನ್ನೊಂದು ಕಡೆ ಈಕೆ ಪತಿಗೆ ಮಾತೆ, ಸಖಿ, ದಾಸಿಯಾಗಿದ್ದು ಆತನ ಜೀವನವನ್ನು ಮಧುರಗೊಳಿಸುವ ಅರ್ಧಾಂಗಿ. ವಿದ್ಯಾಭ್ಯಾಸದ ಅವಕಾಶಗಳು ಇನ್ನೂ ಇದ್ದುವು. ಬ್ರಹ್ಮವಾದಿನಿಯರು ಆಜೀವಪರ್ಯಂತ ಅಧ್ಯಯನನಿರತರಾಗಿದ್ದರು. 'ಸದ್ಯೋದ್ವಾಹಾ' ಎಂಬುದು ಮದುವೆಯಾಗುವವರೆಗೂ ವಿದ್ಯಾಭ್ಯಾಸನಿರತರಾಗಿದ್ದ ಸ್ತ್ರೀಯರನ್ನು ಕುರಿತಾದ ಮಾತು. ಸಂಗೀತ, ನೃತ್ಯ ಹಾಗೂ ಚಿತ್ರಕಲೆಗಳಲ್ಲಿ ಸ್ತ್ರೀಯರಿಗೆ ತರಬೇತಿ ನೀಡಲಾಗುತ್ತಿತ್ತು. ಕೆಲವು ಸ್ತ್ರೀಯರು ರಾಜ್ಯಾಡಳಿತದಲ್ಲಿ ಪಾತ್ರವಹಿಸಿದುದೂ ಉಂಟು. ದೇವದಾಸಿಯರಿಗೆ ಸಮಾಜದಲ್ಲಿ ಗೌರವಯುತ ಸ್ಥಾನವಿದ್ದಿತು ಎಂಬುದು ಗಮನಾರ್ಹ. ಕೌಟಿಲ್ಯನು ಇಂತಹ ಸ್ತ್ರೀಯರನ್ನು ತನ್ನ ಆಸ್ಥಾನದಲ್ಲಿ ರಾಜನು ನೇಮಿಸಿಕೊಳ್ಳಬೇಕೆಂದೂ ಗೂಢಚರ್ಯೆಗೆ ಇವರನ್ನು ಬಳಸಬೇಕೆಂದೂ ಹೇಳಿದ್ದಾನೆ. ಬೌದ್ಧಸಾಹಿತ್ಯದಲ್ಲಿ ವೈಶಾಲೀನಗರದ ಮಹಾನಾಮ ಎಂಬಾತನ ಮಗಳಾದ, ದೇವದಾಸಿಯಾದ ಅಮ್ರಪಾಲಿ ಪ್ರಸಿದ್ಧಳಾಗಿದ್ದಾಳೆ.

ವಿದ್ಯಾಭ್ಯಾಸದ ಗುರಿ ವ್ಯಕ್ತಿತ್ವವನ್ನು ಅರಳಿಸುವುದು. ಇದಕ್ಕಾಗಿ ವಿದ್ಯಾರ್ಥಿ ಶ್ರಮಿಸಬೇಕು, ವಿದ್ಯೆಯನ್ನು ಉಪಾರ್ಜಿಸಬೇಕು ಎಂಬ ಭಾವನೆ ಇತ್ತು. ಐದನೆಯ ವರ್ಷದಲ್ಲಿ

ವಿದ್ಯಾರಂಭಮಾಡಬೇಕು. ಅಕ್ಷರಾಭ್ಯಾಸದಲ್ಲಿ ಲಿಪಿಯ ಜೊತೆಗೆ ಸಂಖ್ಯೆಯ ಪರಿಚಯವೂ ಬಾಲಕನಿಗೆ ಆವಶ್ಯಕವಾಗಿತ್ತು. ಉಪನಯನಾನಂತರ ವಿದ್ಯಾರ್ಥಿ ಗುರುವಿನೊಡನೆ ವಾಸಿಸುತ್ತಿದ್ದ. ವಿದ್ಯಾಭ್ಯಾಸ ಪೂರೈಸುವವರೆಗೂ ಗುರು ಯಾವ ವಿಧವಾದ ದಕ್ಷಿಣೆ ಯನ್ನೂ ಪಡೆಯಬಾರದು. ಗುರುಕುಲದಲ್ಲಿದ್ದಾಗ ಕಠಿಣವಾದ ವ್ರತಗಳನ್ನು ಆಚರಿಸಿ ಕಷ್ಟಪಟ್ಟು ವಿದ್ಯೆ ಕಲಿಯಬೇಕು. ಗುರುಗಳನ್ನೂ ಗುರುಕುಲಗಳನ್ನೂ ಬದಲಿಸುವುದು ಅಪೇಕ್ಷಣೀಯವಾಗಿರಲಿಲ್ಲ. ಅಂತಹ ವಿದ್ಯಾರ್ಥಿಯನ್ನು ತೀರ್ಥಕಾರನೆಂದು ಕರೆಯ ಲಾಗಿದೆ. ಕುಮಾರೀದಾಕ್ಷ, ಭಿಕ್ಷಾಮಾಣವ, ಓದನಪಾಣಿನೀಯ, ಘೃತರೌಢೀಯ, ಕಂಬಲಚಾರಾಯಣೀಯ, ಎಂದು ವಿದ್ಯಾರ್ಥಿಗಳನ್ನು ತೆಗಳಲಾಗುತ್ತಿತ್ತು. ಭಿಕ್ಷಾನ್ನದಲ್ಲಿ ಪಾಲ್ಗೊಳ್ಳಲೆಂದು ಬರುವ, ಉದಾರವಾಗಿ ನೀಡಲಾಗುವ ಅನ್ನಕ್ಕಾಗಿ ಪಾಣಿನೀಯವನ್ನು ಕಲಿಯಲು ಬರುವ, ತುಪ್ಪವನ್ನು ಬಯಸಿ ಬರುವ, ಕಂಬಳಿಯನ್ನು ಬಯಸಿ ಬರುವ ವಿದ್ಯಾರ್ಥಿಗಳಿದ್ದರೆಂದು ಇದರಿಂದ ತಿಳಿಯುತ್ತದೆ. ಶುಶ್ರೂಷಾ, ಶ್ರವಣ, ಗ್ರಹಣ, ಧಾರಣ, ಊಹಾಪೋಹ (ಚರ್ಚೆ), ವಿಜ್ಞಾನ ಮತ್ತು ತತ್ತ್ವಾಭಿನಿವೇಶಗಳು ವಿದ್ಯಾಭ್ಯಾಸದ ವಿವಿಧ ಹಂತಗಳು.

ಭಾರತದಲ್ಲಿ ಲಿಪಿ ಈ ವೇಳೆಗೆ ಪ್ರಬುದ್ಧವಾಗಿತ್ತು. ಅಶೋಕನ ಶಾಸನಗಳಲ್ಲಿ ಬ್ರಾಹ್ಮಿ ಹಾಗೂ ಖರೋಷ್ಠೀ ಲಿಪಿಗಳನ್ನು ಬಳಸಿದೆ. ಖರೋಷ್ಠೀಲಿಪಿ ಅರೆಮಿಕ್ ಲಿಪಿಯಿಂದ ಬಂದುದು. ಇದು ಸಾಮಾನ್ಯವಾಗಿ ಭಾರತದ ವಾಯವ್ಯಪ್ರಾಂತದಲ್ಲಷ್ಟೇ ಪ್ರಚಾರವಾಗಿತ್ತು. ಆದರೂ ವಿದ್ಯಾಭ್ಯಾಸ ಇನ್ನೂ ಮೌಖಿಕವಾಗಿಯೇ ಇತ್ತು. ಬರೆದಿಟ್ಟ ಗ್ರಂಥಗಳ ಉಪಯೋಗ ಇನ್ನೂ ಆರಂಭವಾಗಿರಲಿಲ್ಲ. ಹಾಗೆಂದಾಕ್ಷಣ ಗ್ರಂಥಗಳೇ ಇರಲಿಲ್ಲವೆಂದು ಹೇಳಲಾಗದು. ಗ್ರಂಥಗಳಿಗಿಂತಲೂ ಹೆಚ್ಚಾಗಿ ಜ್ಞಾಪಕಶಕ್ತಿ ವಿದ್ಯಾರ್ಜನೆಯಲ್ಲಿ ಹೆಚ್ಚು ಫಲಕಾರಿ ಎಂಬ ಭಾವನೆ ಇದ್ದುದರಿಂದ ಉಪಾಧ್ಯಾಯರಿಗೆ ಹೆಚ್ಚಿನ ಸ್ಥಾನ ನೀಡಲಾಗಿತ್ತು. ಗ್ರಂಥಗಳು ಗೌಣವಾಗಿದ್ದುವು. ವೈದಿಕ ಸಾಹಿತ್ಯದ ಜೊತೆಗೆ, ಧರ್ಮಶಾಸ್ತ್ರ, ಇತಿಹಾಸ, ಪುರಾಣ, ಸೂತ್ರಗಳು, ಅರ್ಥಶಾಸ್ತ್ರ, ಆನ್ವೀಕ್ಷಕಿ (ತರ್ಕ), ದಂಡನೀತಿಗಳು ಸಹ ಅಧ್ಯಯನಾರ್ಹವಾದವು. ವೈದ್ಯಶಾಸ್ತ್ರ ಸಹ ಬಹುಮಟ್ಟಿಗೆ ಮುಂದುವರಿದಿದ್ದಿತು. ಬಿಂಬಿಸಾರನ ಆಸ್ಥಾನದಲ್ಲಿ ಜೀವಕನೆಂಬ ವೈದ್ಯನಿದ್ದನೆಂದು ತಿಳಿಯುವುದು.

ಬೌದ್ಧ ವಿಹಾರಗಳು ವೈದಿಕ ಗುರುಕುಲಗಳಿಗಿಂತ ಭಿನ್ನವಾಗಿದ್ದುವು. ಗುರುಕುಲ ಪದ್ಧತಿಯಲ್ಲಿ ಒಬ್ಬ ಗುರು ತಾನು ಸ್ವತಃ ಗಮನವಿಟ್ಟು ವಿದ್ಯಾರ್ಥಿಗಳಿಗೆ ಕಲಿಸುತ್ತಿದ್ದನು. ಈ ಪದ್ಧತಿಯಲ್ಲಿ ಸಹಜವಾಗಿಯೇ ಹೆಚ್ಚು ಸಂಖ್ಯೆಯ ವಿದ್ಯಾರ್ಥಿಗಳನ್ನು ಒಬ್ಬ ಗುರು ಏಕಕಾಲದಲ್ಲಿ ಸ್ವೀಕರಿಸುವುದು ಸಾಧ್ಯವಿರಲಿಲ್ಲ. ಆದರೆ ಬೌದ್ಧವಿಹಾರಗಳಲ್ಲಿ ಗುರುಗಳೂ ಅನೇಕ ವಿದ್ಯಾರ್ಥಿಗಳೂ ಒಟ್ಟಿಗೆ ವಾಸಿಸುತ್ತ, ಸಹಜೀವನದ ಶಿಸ್ತಿಗೆ ಒಳಪಟ್ಟಿದ್ದರು. ಈ ವಿಹಾರಗಳನ್ನು ನಡಸಲೆಂದೇ ಭೂದಾನಗಳನ್ನು ಮಾಡಲಾಗಿತ್ತು. ಇವು ಸ್ವಾವಲಂಬಿ ಸಂಸ್ಥೆಗಳಾಗಿದ್ದು, ಅಲ್ಲಿನ ವಿದ್ಯಾರ್ಥಿಗಳ, ಭಿಕ್ಷುಗಳ ಅಶನಾಚ್ಛಾದನಕ್ಕಾಗಿ ವ್ಯವಸಾಯ, ಪಶುಪಾಲನೆ ಮುಂತಾದ ಕಾರ್ಯಗಳನ್ನು ಸಹ ಕೈಗೊಳ್ಳ

ಲಾಗುತ್ತಿತ್ತು. ಇದರಿಂದ ವಿದ್ಯಾರ್ಥಿ ಸಂಘಜೀವಿಯಾಗಿ ಬಾಳಲು ಅವಶ್ಯವಾದ ತರಬೇತಿಯನ್ನು ಪಡೆದಂತಾಗುತ್ತಿತ್ತು. ಕ್ರಮೇಣ ಇಂತಹ ಬೌದ್ಧವಿಹಾರಗಳು ವಿಶ್ವವಿದ್ಯಾಲಯಗಳಾಗಿ ಮಾರ್ಪಟ್ಟುವು. ತಕ್ಷಶಿಲೆ ಮುಂತಾದ ವಿದ್ಯಾಕೇಂದ್ರಗಳನ್ನು ಇಲ್ಲಿ ಉದಾಹರಿಸಬಹುದು. ಭಾರತದ ವಿವಿಧ ಭಾಗಗಳಿಂದ ವಿದ್ಯಾರ್ಥಿಗಳು ಇಲ್ಲಿಗೆ ಬರುತ್ತಿದ್ದರು.

## ಧಾರ್ಮಿಕ ಪರಿಸ್ಥಿತಿ

ಕ್ರಿ.ಪೂ. ೬ನೆಯ ಶತಮಾನದಲ್ಲಿಯೇ ಅವೈದಿಕ ಮತಗಳೆನಿಸಿದ ಜೈನ ಮತ್ತು ಬೌದ್ಧಮತಗಳು ಹುಟ್ಟಿಕೊಂಡುದನ್ನು ಗಮನಿಸಿದ್ದೇವೆ. ಆ ನಂತರದ ಶತಮಾನಗಳಲ್ಲಿ ಈ ಎರಡೂ ಮತಗಳು ಪ್ರಬಲವಾಗಿ ಬೇರೂರಿದುವು. ಅರಸರ ಆಶ್ರಯ, ಜನಸಾಮಾನ್ಯರ ಒಲವು, ಸರಳರೀತಿಯಲ್ಲಿನ ಬೋಧೆ ಇದಕ್ಕೆ ಮುಖ್ಯಕಾರಣ. ಆದರೂ ಇವುಗಳ ಜೊತೆಗೆ ವೈಷ್ಣವ ಹಾಗೂ ಶೈವಧರ್ಮಗಳು ಸಹ ಈ ಶತಮಾನಗಳಲ್ಲಿ ಪ್ರಬಲವಾದುವು. ಇವೆರಡೂ ಆಸ್ತಿಕ ಧರ್ಮಗಳು. ಹಿಂದಿನ ವೈದಿಕ ಧರ್ಮಗಳಲ್ಲಿ ಹಲವಾರು ಸುಧಾರಣೆಗಳನ್ನು ಆಚರಣೆಗೆ ತಂದ ಪಂಥಗಳಿವು ಎಂದು ಹೇಳಲಾಗಿದೆ. ಕಾವ್ಯಗಳಲ್ಲಿ, ಪುರಾಣಗಳಲ್ಲಿ ಈ ಧರ್ಮಗಳ ವ್ಯಾಖ್ಯಾನಗಳನ್ನು ಕಾಣಬಹುದು. ವೈಷ್ಣವ ಶೈವ ಧರ್ಮಗಳ ಮುಖ್ಯಾಂಶಗಳು ಭಕ್ತಿ ಮತ್ತು ಪ್ರಸಾದ. ವಿಷ್ಣು ಮತ್ತು ಶಿವ ಕ್ರಮವಾಗಿ ಈ ಧರ್ಮಾನುಯಾಯಿಗಳ ದೇವತೆಗಳು. ಈ ಎರಡೂ ದೇವತೆಗಳಿಗೆ ಸಂಬಂಧಿಸಿದಂತೆ ಹಲವಾರು ಕತೆಗಳು ಹೆಣೆಯಲಾದವು.

ಆದರೆ ಈ ಕಾಲದಲ್ಲಿ ಬೌದ್ಧ ಜೈನಧರ್ಮಗಳಲ್ಲಿ ಪಂಥಗಳೂ, ಪಂಗಡಗಳೂ ಹುಟ್ಟಿಕೊಂಡುವು. ಬುದ್ಧನ ನಿರ್ವಾಣದ ನಂತರ ಅವನು ಯೋಜಿಸಿದ ನಿಯಮಗಳ ಪಾಲನೆಗೆ ದಕ್ಷನಾದ ಯಾವ ಒಬ್ಬ ವ್ಯಕ್ತಿಯೂ ಕಾಣಬರುವುದಿಲ್ಲ. ಸ್ವತಃ ಬುದ್ಧನೇ ತನ್ನ ಸ್ಥಾನಕ್ಕೆ ನಾಯಕನಾಗಬಹುದಾದಂಥ ಯಾವಾತನನ್ನೂ ಸೂಚಿಸದೆ ಧರ್ಮವೇ ಅದನ್ನು ಸ್ವೀಕರಿಸುವವರಿಗೆ ಶಿಕ್ಷಣವನ್ನು ಕೊಡುತ್ತದೆ ಎಂದನು. ಎಂತಲೇ ಬಗೆಬಗೆಯ ವಿಚಾರ ಪ್ರಣಾಳಿಕೆಗಳು ಹುಟ್ಟಿಕೊಂಡು, ಪಂಗಡಗಳಿಗೆ ದಾರಿಮಾಡಿಕೊಟ್ಟುವು.

ಬುದ್ಧನ ನಿರ್ಯಾಣದ ಒಂದು ಶತಮಾನದ ನಂತರ ವೈಶಾಲಿ, ಪಾಟಲೀಪುತ್ರ ಮುಂತಾದ ಪೂರ್ವಪ್ರದೇಶಗಳ ಶ್ರಮಣರು 'ವಿನಯ'ದಲ್ಲಿನ ನಿಯಮಾವಳಿಗಳಲ್ಲಿ ಕೆಲವು ಬದಲಾವಣೆಗಳನ್ನು ಮಾಡಿಕೊಳ್ಳಬಯಸಿದರು. ಆದರೆ ಪಾವಾ, ಕೌಶಾಂಬಿ, ಅವಂತಿ ಮೊದಲಾದ ಪಶ್ಚಿಮ ಪ್ರದೇಶಗಳ ಶ್ರಮಣರು ಈ ಬದಲಾವಣೆಗಳನ್ನು ಒಪ್ಪಲಿಲ್ಲ. ಮಧ್ಯಾಹ್ನದ ವೇಳೆಯಲ್ಲಿ ಆಹಾರ ಸ್ವೀಕರಿಸುವುದು, ಬೆಳ್ಳಿಬಂಗಾರಗಳನ್ನು ಸ್ವೀಕರಿಸುವುದು, ಅವಶ್ಯವಿದ್ದಾಗ ಉಪಯೋಗಿಸಲು ಉಪ್ಪನ್ನು ಶೇಖರಿಸುವುದು ಇತ್ಯಾದಿಗಳು ಸೂಚಿತ ಬದಲಾವಣೆಗಳು. ರೇವತನ ಅಧ್ಯಕ್ಷತೆಯಲ್ಲಿ ೭೦೦ ಶ್ರಮಣರು ಸಭೆ ಸೇರಿದರಾದರೂ ಯಾವ ಇತ್ಯರ್ಥಕ್ಕೂ ಬರಲಾಗಲಿಲ್ಲ. ಆದರೆ ಮಹಾಸಂಗೀತಿ ಎಂಬ

ಸಭೆಯಲ್ಲಿ ವೈಶಾಲಿಯ ಶ್ರಮಣರು ಸೂಕ್ತ ಬದಲಾವಣೆಗಳನ್ನು ಮಾಡಿಕೊಂಡರು. ಇದು ಬೌದ್ಧಾನುಯಾಯಿಗಳಲ್ಲಿ ಕಾಣಿಸಿಕೊಂಡ ಮೊದಲ ಬಿರುಕು. ಹೊಸ ನಿಯಮಾವಳಿಗಳನ್ನು ರೂಪಿಸಿಕೊಂಡವರು 'ಮಹಾಸಾಂಘಿಕ'ರೆನಿಸಿಕೊಂಡರು. ಸಂಪ್ರದಾಯನಿಷ್ಠರು 'ಸ್ಥವಿರವಾದಿ' (ಥೇರವಾದಿ)ಗಳೆನಿಸಿಕೊಂಡರು. ಈ ಸಂದರ್ಭದಲ್ಲಿ ನಡೆದ ಸಭೆಯ ಕಾಲದಲ್ಲಿ ಕಾಲಾಶೋಕನೆಂಬ ಅರಸನು ಆಳುತ್ತಿದ್ದ. ಆಗ ಸೇರಿದುದು ಎರಡನೆಯ ಬೌದ್ಧ ಮಹಾಸಭೆ.

ಈ ಬಿರುಕು ಕ್ರಮೇಣ ಹೆಚ್ಚಾಗುತ್ತ ಹೋಯಿತು. ಇವುಗಳಲ್ಲಿಯೇ ಇತರ ಪಂಥಗಳು ಹುಟ್ಟಿಕೊಂಡುವು. ವಸುಮಿತ್ರನ ಪ್ರಕಾರ ೧೮ ಪಂಥಗಳು. ಥೇರವಾದದ ಮತ್ತೊಂದು ಶಾಖೆ ಸರ್ವಾಸ್ತಿವಾದ. ಇದರ ಮೂಲಪುರುಷ ರಾಹುಲಭದ್ರ. ಮಥುರಾ ಮುಖ್ಯ ಕೇಂದ್ರವಾಗಿದ್ದು, ಕ್ರಮೇಣ ಗಾಂಧಾರ ಕಾಶ್ಮೀರಗಳಿಗೂ ಈ ಶಾಖೆ ಪಸರಿಸಿತು. ಉತ್ತರ ಭಾರತದಲ್ಲೆಲ್ಲ ಜನಪ್ರಿಯವಾಯಿತು. ಕುಷಾಣರ ಕಾಲದಲ್ಲಿ ಇದು ಮಧ್ಯಏಷಿಯ ಮತ್ತು ಚೀನಾದೇಶಗಳಿಗೂ ಹಬ್ಬಿತು. ಥೇರವಾದದ ಮೂಲಪುರುಷ ಉಜ್ಜಯಿನಿಯ ನಿವಾಸಿಯಾದ ಮಹಾಕಾತ್ಯಾಯನ. ಕೌಶಾಂಬಿ ಈ ಪಂಥೀಯರ ಇನ್ನೊಂದು ಕೇಂದ್ರ. ಇವರು ಪಾಳೀ ಭಾಷೆಯನ್ನು ಪಿಟಕಗಳಲ್ಲಿ ಬಳಸಿದರು. ಅಶೋಕನ ಮಗನಾದ ಮಹೇಂದ್ರನು ಈ ಪಂಥವನ್ನು ಸಿಂಹಳದ್ವೀಪದಲ್ಲಿ ಪ್ರಚಾರಗೊಳಿಸಿದ. ಮಹಾಸಾಂಘಿಕ ಪಂಥದ ಮೂಲಪುರುಷ ಮಹಾಕಾಶ್ಯಪ. ಮೊದಲು ವೈಶಾಲಿ ಇದರ ಕೇಂದ್ರವಾಗಿತ್ತು. ಕ್ರಮೇಣ ಆಂಧ್ರಪ್ರದೇಶದ ಅಮರಾವತಿ ಮತ್ತು ನಾಗಾರ್ಜುನ ಕೊಂಡಗಳು ಈ ಪಂಥದ ಕೇಂದ್ರಗಳಾದುವು. ಮಹಾಸಾಂಘಿಕರು ಬುದ್ಧನಿಗೆ ದೇವತ್ವವನ್ನು ಆರೋಪಿಸಿದರು. ಮೊದಲು ಬುದ್ಧನನ್ನು ಕಮಲ, ಆನೆ, ಧರ್ಮಚಕ್ರ ಮುಂತಾದ ಲಾಂಛನಗಳ ಮೂಲಕ ಆರಾಧಿಸಲಾಗುತ್ತಿತ್ತು. ಕ್ರಮೇಣ ಭಕ್ತಿನಿವೇದನೆಗೆ ಅನುಕೂಲವಾಗುವಂತೆ ಬುದ್ಧನ ವಿಗ್ರಹಾರಾಧನೆ ಆರಂಭವಾಯಿತು. ಇದು ಮಹಾಯಾನವೆನಿಸಿಕೊಂಡಿತು. ಕ್ರಿ.ಪೂ. ೧ನೆಯ ಶತಮಾನದಲ್ಲಿಯೇ ಈ ಮಹಾಯಾನ ಆರಂಭವಾಯಿತಾದರೂ ಕನಿಷ್ಕನ ಕಾಲದಲ್ಲಿ ನಡೆದ ಮಹಾಸಭೆಯಲ್ಲಿ ಇದಕ್ಕೆ ಒಂದು ಸ್ಪಷ್ಟವಾದ ರೂಪ ಬಂದಿತು.

ಜೈನಧರ್ಮದಲ್ಲಿ ಪ್ರಮುಖವಾದ ಒಡಕು ಬಹುಶಃ ಪಾಟಲೀಪುತ್ರದಲ್ಲಿ ನಡೆದ ಮೊದಲ ಮಹಾಸಭೆಯಲ್ಲಿ ಕಾಣಿಸಿಕೊಂಡಂತೆ ತೋರುತ್ತದೆ. ಚಂದ್ರಗುಪ್ತಮೌರ್ಯನ ಕಾಲದಲ್ಲಿ ಉಂಟಾದ ಕ್ಷಾಮ ಜೈನಧರ್ಮ ಪಾಟಲೀಪುತ್ರದಿಂದ ಪೂರ್ವ ಮತ್ತು ಪಶ್ಚಿಮಗಳ ಕಡೆ ವಲಸೆ ಹೋಗಲು ಕಾರಣವಾಯಿತು. ಪೂರ್ವದಲ್ಲಿ ಕಲಿಂಗ ಜೈನಧರ್ಮದ ಕೇಂದ್ರವಾಯಿತು. ಖಾರವೇಲನು ಈ ಧರ್ಮಕ್ಕೆ ವಿಶೇಷವಾದ ಪ್ರೋತ್ಸಾಹವನ್ನು ನೀಡಿದನು. ಪಶ್ಚಿಮದಲ್ಲಿ ಮಥುರೆ ಮತ್ತೊಂದು ಕೇಂದ್ರ. ಕ್ರಿ.ಪೂ. ಕಾಲದಲ್ಲಿ ಮಥುರೆಯಲ್ಲಿ ಜೈನರ ಬಸ್ತಿಯೊಂದಿದ್ದಂತೆ ತೋರುತ್ತದೆ. ಅಶೋಕನ ಮೊಮ್ಮಗನಾದ ಸಂಪ್ರತಿ ಜೈನಧರ್ಮವನ್ನು ಅವಲಂಬಿಸಿ ಮಾಲವದೇಶದಲ್ಲಿ ಅದರ ಪ್ರಚಾರಕ್ಕೆ ಶ್ರಮಿಸಿದನೆಂದು

ಐತಿಹ್ಯವಿದೆ. ಜುನಾಗಢದ ಗುಹೆಯೊಂದರಲ್ಲಿ ಜಯದಾಮನ ಮೊಮ್ಮಗ (ದಾಮಜದ ಅಥವಾ ರುದ್ರಸಿಂಹ I)ನ ಶಾಸನವಿದೆ. ಈ ಗುಹೆ ಜೈನಸಂನ್ಯಾಸಿಗಳ ವಾಸಕ್ಕಾಗಿ ಕಟ್ಟಿಸಿದಂತೆ ತೋರುತ್ತದೆ. ಸ್ವಸ್ತಿಕ, ಭದ್ರಾಸನ ಮತ್ತು ಮೀನಯುಗ್ಮಗಳ ಚಿತ್ರವಿದೆ. ಶಾಸನದಲ್ಲಿ ಕೇವಲ ಜ್ಞಾನಪಡೆದವರ, ಜರಾಮರಣಮುಕ್ತರ ಉಲ್ಲೇಖವಿರುವುದನ್ನು ಗಮನಿಸಿದರೆ ಇದೊಂದು ಜೈನಶಾಸನವಿದ್ದಂತೆ ತೋರುತ್ತದೆ. ದಿಗಂಬರ ಪಂಥದವರು ದಕ್ಷಿಣಾಭಿಮುಖವಾಗಿ ವಲಸೆ ಹೋಗಿ ಕರ್ಣಾಟಕದಲ್ಲೂ ತಮಿಳುನಾಡಿನಲ್ಲೂ ಜೈನ ಧರ್ಮ ಇವರ ಮೂಲಕ ಪ್ರಚಾರವಾಯಿತು.

ಮಹಾವೀರನು ತನ್ನ ಸಿದ್ಧಾಂತಗಳನ್ನು ಮಾಗಧಿ ಮತ್ತು ಶೌರಸೇನಿಗಳನ್ನು ಮಾತ ನಾಡುವ ಎರಡು ಜನರಿಗೂ ಅರ್ಥವಾಗಲೆಂದು ಮಿಶ್ರಭಾಷೆಯಾದ ಅರ್ಧಮಾಗಧಿಯಲ್ಲಿ ಬೋಧಿಸಿದನು. ಶತಮಾನಗಳ ನಂತರ ಇವನ ಬೋಧನೆಗಳನ್ನೊಳಗೊಂಡ ಶ್ರುತಾಂಗ ಗಳು ಶ್ವೇತಾಂಬರ ಜೈನರ ಪರಿಶ್ರಮದಿಂದ ಪುನರ್ರಚಿತವಾದುವು. ದಕ್ಷಿಣಕ್ಕೆ ಸರಿದ ದಿಗಂಬರರು ಆಯಾ ಪ್ರದೇಶದಲ್ಲಿನ ಭಾಷೆಗಳಲ್ಲಿಯೇ ಧರ್ಮಪ್ರಚಾರಕಾರ್ಯಗಳನ್ನು ಕೈಗೊಂಡರು. ಎಂತಲೇ ಪ್ರಾಕೃತ ಹಾಗೂ ಕನ್ನಡ ಸಾಹಿತ್ಯಗಳಿಗೆ ಇವರ ಕೊಡುಗೆ ಅಪಾರವಾದುದಾಗಿದೆ. ಕಲ್ಲಿನ ಕಟಾಂಜನಗಳು, ಅಲಂಕೃತ ದ್ವಾರಗಳು, ಕೊಡೆ ಗಳು, ಸೂಕ್ಷ್ಮಕೆತ್ತನೆಯ ಕಂಬಗಳು ಮತ್ತು ವಿಗ್ರಹಗಳಿಂದೊಡಗೂಡಿದ ಸ್ಮಾರಕ ಕಟ್ಟಡಗಳನ್ನು ಸಹ ಜೈನರು ಕಟ್ಟಿಸಿದರು.

ಮಹಾಕಾವ್ಯಗಳು, ಅರ್ಥಶಾಸ್ತ್ರ, ಬೌದ್ಧಗ್ರಂಥಗಳು ಇತ್ಯಾದಿಗಳ ಆಧಾರದಿಂದ ಮೌರ್ಯರ ಕಾಲದ ನಗರಗಳ ಕಲ್ಪನೆ ಮಾಡಿಕೊಳ್ಳಬಹುದು. ನಗರಗಳು ವಿಶಾಲವೂ ಜನಭರಿತವೂ ಆಗಿದ್ದುವು. ನಗರದ ಸುತ್ತಲೂ ಬಲವಾದ ಕೋಟೆ, ಕೋಟೆಯ ಹೊರಗಡೆ ಕಂದಕ. ನಾಲ್ಕೂ ದಿಕ್ಕುಗಳಲ್ಲಿರುವ ಮಹಾದ್ವಾರಗಳಿಗೆ ಕಂದಕದ ಮೇಲಿನ ಸೇತುವೆಯ ಮೂಲಕ ಪ್ರವೇಶ. ಎದುರುಬದುರಿನ ದ್ವಾರಗಳನ್ನು ಕೂಡಿಸುವ ಉದ್ದನೆಯ ರಸ್ತೆ ಗಳು. ಈ ರಸ್ತೆಗಳು ಕೂಡುವ ಪ್ರದೇಶದಲ್ಲಿ ಒಂದು ದೇವಾಲಯ; ಅವುಗಳ ಅಕ್ಕಪಕ್ಕ ಗಳಲ್ಲಿ ಸಾಲುಮನೆಗಳು. ಅಹಿಚ್ಛತ್ರದಲ್ಲಿ ಇಂತಹ ಕೋಟೆಗೋಡೆಯ ಅವಶೇಷಗಳು ಇವೆ. ಶ್ರಾವಸ್ತಿ, ವಾರಾಣಸಿ ನಗರಗಳೂ ಹೀಗೆಯೇ ಇದ್ದಿರಬಹುದೆಂದು ಅಮರಾವತಿ ಮತ್ತು ಸಾಂಚಿಯ ಸ್ತೂಪಗಳಲ್ಲಿರುವ ಚಿತ್ರಗಳಿಂದ ಊಹಿಸಬಹುದು. ಪಾಟಲೀಪುತ್ರದ ಕುಮ್ರಹರ ಎಂಬಲ್ಲಿ ನಡೆದ ಉತ್ಖನನಗಳಲ್ಲಿ ಮೌರ್ಯ ಅರಸರ ಅರಮನೆಯ ಅವಶೇಷ ಗಳು ಸಿಕ್ಕಿವೆ. ಇಲ್ಲಿನ ಕಲ್ಲಿನ ಕಂಬಗಳು ಬಹಳ ನಯವಾಗಿದ್ದು ಹೊಳಪುಳ್ಳವಾಗಿವೆ.

### ಕಲೆ—ವಾಸ್ತುಶಿಲ್ಪ

ಮೌರ್ಯಕಾಲದ ವಾಸ್ತುಶಿಲ್ಪಗಳನ್ನು ಸ್ತೂಪ, ಚೈತ್ಯ ಮತ್ತು ವಿಹಾರಗಳೆಂದು ವಿಂಗಡಿಸಬಹುದು. ವೇದಗಳಲ್ಲಿ ಉಲ್ಲೇಖವಾಗಿರುವ ಶ್ಮಶಾನದ ಮಣ್ಣುಗುಡ್ಡೆಯೇ ಸ್ತೂಪದ ಕಲ್ಪನೆಗೆ ಮೂಲವಾಗಿರಬಹುದು. ಸ್ತೂಪ ಕಟ್ಟುವ ಸಂಪ್ರದಾಯ ಬುದ್ಧನ

ನಂತರದ ಕಾಲದ್ದು ಎಂದು ಹೇಳಲಾಗದು. ಬುದ್ಧನು ತನ್ನ ಶಿಷ್ಯ ಆನಂದನಿಗೆ ತನ್ನ ಅಸ್ಥಿ ಅವಶೇಷಗಳನ್ನು ನಾಲ್ಕು ರಸ್ತೆಗಳು ಕೂಡುವ ಚೌಕದಲ್ಲಿ ಹೂತು ಅದರ ಮೇಲೆ ಸ್ತೂಪವನ್ನು ಕಟ್ಟಬೇಕೆಂದು ಹೇಳಿದನೆಂಬುದು ಈ ಊಹೆಗೆ ಪ್ರಬಲವಾದ ಆಧಾರ. ಸ್ತೂಪ ಎಂಬುದು ಸಾಮಾನ್ಯವಾಗಿ ನೆಲದ ಮೇಲೆ ಅರ್ಧಗೋಲಾಕೃತಿಯ ಒಂದು ಗುಡ್ಡೆ. ಇದೇ ಅಂಡ. ಇದರ ಸುತ್ತಲೂ ಒಂದು ಪ್ರದಕ್ಷಿಣಾಪಥದ ಒಂದು ಕಟ್ಟೆ. ಈ ಕಟ್ಟೆಯನ್ನು ಹತ್ತಲು ಒಂದು ಕಡೆ ಸ್ವಲ್ಪ ಮುಂಚಾಚಿದ ಕಟ್ಟೆಯ ಎರಡೂ ಬದಿಗಳಲ್ಲಿ ಮೆಟ್ಟಲುಗಳು. ಅಂಡದ ಚಪ್ಪಟೆಯಾದ ಮೇಲ್ಭಾಗದ ಮಧ್ಯದಲ್ಲಿ ಚೌಕೋನದ ಒಂದು ಕಟಾಂಜನ. ಇದರ ಮಧ್ಯೆ ಚೌಕಾಕಾರದ ಒಂದು ಪೆಟ್ಟಿಗೆ. ಇದರ ಮೇಲೆ ರಾಜ ಲಾಂಛನವಾದ ಛತ್ರ. ಇದು ಅಶೋಕನ ಕಾಲದಲ್ಲಿ ಸಾಂಚಿಯಲ್ಲಿ ಕಟ್ಟಲಾದ ಇಟ್ಟಿಗೆಯ ಸ್ತೂಪದ ಒಂದು ಚಿತ್ರ.

ಚೈತ್ಯ ಎಂದರೆ ಪ್ರಾರ್ಥನಾಮಂದಿರ. ಇದರ ಮುಂಭಾಗ ಚೌಕ. ಹಿಂದುಗಡೆ ಅರ್ಧವರ್ತುಳ. ಚೌಕದ ಭಾಗ ಸಭಾಂಗಣ. ಅರ್ಧವರ್ತುಳದ ಭಾಗದ ಮಧ್ಯೆ ಸ್ತೂಪ. ಪ್ರದಕ್ಷಿಣೆಗೆ ಸುತ್ತಲೂ ಸ್ಥಳವಿರುತ್ತದೆ. ಗಯಾದ ಬರಾಬರ್ ಬೆಟ್ಟದಲ್ಲಿ ಜೈನ ಆಜೀವಿಕರಿಗಾಗಿ ಅಶೋಕನು ಕಲ್ಲಿನ ಒಂದು ಚೈತ್ಯ ಕಟ್ಟಿಸಿದ್ದನು. ಸಾಂಚಿ, ಸಾರನಾಥಗಳಲ್ಲಿ ಇಂತಹ ಚೈತ್ಯಗಳಿವೆ. ಇದರ ಸಭಾಂಗಣ ಮತ್ತು ವರ್ತುಳಭಾಗದ ಮಧ್ಯೆ ಒಂದು ಗೋಡೆ. ಅದರಲ್ಲಿ ಇಕ್ಕಟ್ಟಾದ ಒಂದು ದ್ವಾರ. ಇದೇ ಚೈತ್ಯದ ಇನ್ನೊಂದು ಭಾಗದಲ್ಲಿ ಕಲ್ಲಿನಲ್ಲಿ ಕೊರೆದ ಲೋಮಶಋಷಿಯ ಗುಹೆಯ ದ್ವಾರದ ಮೇಲೆ ಆನೆಸಾಲಿನ ಉಬ್ಬು ಚಿತ್ರದ ಪಟ್ಟಿಕೆಯಿದೆ.

ಬೌದ್ಧಭಿಕ್ಷುಗಳ ವಿಹಾರಾರ್ಥವಾಗಿ ಕಟ್ಟಿಸಿದ ಕಟ್ಟಡಗಳು ಸಂಘಾರಾಮಗಳು. ಮೌರ್ಯ ದಶರಥನು ಇಂತಹ ವಿಹಾರಗಳನ್ನು ಬರಾಬರ್ ಬೆಟ್ಟದ ಬಂಡೆಗಳಲ್ಲಿ ಕೊರಸಿದನು. ಇಲ್ಲಿನ ಕಲ್ಲಿನ ಗೋಡೆಗಳು ಹೊಳೆಯುತ್ತವೆ. ಇಂತಹ ಕಲ್ಲಿನಲ್ಲಿ ಹೊಳಪು ತರುವುದು ಮೌರ್ಯರ ಕಲೆಯ ವೈಶಿಷ್ಟ್ಯ. ಸ್ತಂಭಗಳು ಮೌರ್ಯರ ಇನ್ನೊಂದು ಕೊಡುಗೆ. ಸಾಂಚಿ, ಸಾರನಾಥ, ರುಮಿನ್ದೈ, ಲೌರಿಯ, ನಂದನಘರ್ ಮುಂತಾದ ಕಡೆಗಳಲ್ಲಿ ಅಶೋಕನು ಮಾಡಿಸಿದನೆನ್ನಲಾದ ೩೨ ಸ್ತಂಭಗಳು ದೊರೆತಿವೆ. ಈ ಕಂಬಗಳಲ್ಲಿ ಎರಡು ಭಾಗಗಳು. ಉದ್ದನೆಯ ಕಾಂಡ ದುಂಡಾಗಿದ್ದು ಮೇಲೆ ಹೋದಂತೆಲ್ಲ ಸೂಕ್ಷ್ಮವಾಗಿ ಸಣ್ಣದಾಗುತ್ತ ಹೋಗುತ್ತದೆ. ಮೇಲ್ಭಾಗದಲ್ಲಿ ಮೂರ್ತಿಯುಳ್ಳ ಬೋದಿಗೆ. ಬೋದಿಗೆಯಲ್ಲಿ ಒಂದರ ಮೇಲೊಂದರಂತೆ ಮೂರು ಭಾಗಗಳು. ಕವುಚಿ ಹಾಕಿದ ಕಮಲ, ವೃತ್ತ ಅಥವಾ ಚೌಕೋನದ ಫಲಕ, ಮತ್ತು ಸಿಂಹ ಅಥವಾ ಗೂಳಿಯ ವಿಗ್ರಹ. ಫಲಕದ ಪಕ್ಕದಲ್ಲಿ ಬಳ್ಳಿಯ ಚಿತ್ರಗಳ ಅಥವಾ ಧರ್ಮಚಕ್ರಗಳ ನಡುವೆ ಆನೆ ಕುದುರೆ ಗೂಳಿಗಳ ಚಿತ್ರಗಳು. ಸಾರನಾಥದಲ್ಲಿನ ಕಂಬದಲ್ಲಿ ಫಲಕದ ಮೇಲೆ ನಾಲ್ಕು ಸಿಂಹಗಳು ನಾಲ್ಕು ದಿಕ್ಕಿಗೆ ಕುಳಿತಿವೆ. ಈ ಕಂಬಗಳ ಕಾಂಡ ಸಾಮಾನ್ಯವಾಗಿ ೧೦ ಮೀಟರ್ ಎತ್ತರ, ೫೦ ಟನ್ ಭಾರ ಇರುತ್ತದೆ. ಕಾಂಡ ಮತ್ತು ಬೋದಿಗೆ ಒಂದೊಂದೇ ಕಲ್ಲಿನವು.

ಇಷ್ಟು ಎತ್ತರದ ಭಾರದ ಕಂಬಗಳನ್ನು ದೂರದ ಪ್ರದೇಶಗಳಿಗೆ ಸಾಗಿಸಿ ನಿಲ್ಲಿಸಿರುವುದು ಆಶ್ಚರ್ಯಕರ.

ಕ್ರಿ.ಪೂ. ೧ನೆಯ ಶತಮಾನದ ಶುಂಗ–ಕಣ್ವ ಕಾಲದಲ್ಲಿ ಮಾನವದೇಹದ ಚಿತ್ರಣವನ್ನು ಕಾಣಬಹುದು. ಬಾರ್ಹುತ್ ಸ್ತೂಪದಲ್ಲಿ ಈ ವಿಗ್ರಹಗಳನ್ನು ಎಲ್ಲ ಭಂಗಿಗಳಲ್ಲಿಯೂ ನೋಡಬಹುದು. ಆದರೆ ಅವುಗಳ ನೈಜತೆಯನ್ನು ಹೆಚ್ಚಾಗಿ ಬೋಧಗಯೆಯಲ್ಲಿ ಕಾಣಬೇಕಾಗುತ್ತದೆ. ಸಾಂಚಿಯ ಬೃಹತ್ ಸ್ತೂಪದಲ್ಲಿ ಸಮಕಾಲೀನ ಜೀವನದ ವೈಭವ, ಶಾಂತಿ, ಸೌಂದರ್ಯ ಮತ್ತು ಪ್ರೇಮದ ಚಿತ್ರಣವನ್ನು ಕಾಣಬಹುದು. ಜಾತಕಕತೆಗಳನ್ನು ಈ ಸ್ತೂಪದ ನಾಲ್ಕೂ ದ್ವಾರಗಳಲ್ಲಿ ಚಿತ್ರಿಸಲಾಗಿದೆ.

ಕ್ರಿಸ್ತಶಕಾರಂಭದ ವೇಳೆಗಾಗಲೇ ಗಾಂಧಾರ ಕಲೆ ಭಾರತದಲ್ಲಿ ಅಡಿಯಿರಿಸಿತ್ತು. ಬುದ್ಧನ ಶಿಲಾಪ್ರತಿಮೆಗಳು ಈ ಕಲೆಯ ವೈಶಿಷ್ಟ್ಯ. ಭೌಗೋಳಿಕವಾಗಿ ಈ ಕಲೆಗೆ ಪ್ರೋತ್ಸಾಹ ದೊರೆತ ಪ್ರದೇಶ ಪರ್ಷಿಯ, ಗ್ರೀಸ್, ರೋಮ್ ದೇಶಗಳ ಜನರ, ಶಕರ, ಕುಷಾಣರ ಪ್ರಭಾವಕ್ಕೆ ಒಳಗಾಗಿದ್ದರೂ ಶಕರು ಮತ್ತು ಕುಷಾಣರು ಈ ಕಲೆಗೆ ಹೆಚ್ಚಿನ ಪ್ರೋತ್ಸಾಹ ಕೊಟ್ಟರು. ಈ ಕಲೆಯ ಮಹತ್ತ್ವಪೂರ್ಣ ಸಾಧನೆ ಶಿಲ್ಪಗಳು. ಇವುಗಳಲ್ಲೆಲ್ಲ ಸಾಮಾನ್ಯವಾಗಿ ಬುದ್ಧನನ್ನು ಧ್ಯಾನಾಸಕ್ತನಾಗಿರುವಂತೆಯೋ ಕಾವಿ ಧರಿಸಿದ ಯತಿಯೊಬ್ಬ ಅಭಯ ನೀಡುತ್ತಿರುವಂತೆಯೋ ಚಿತ್ರಿಸಲಾಗಿದೆ ಮುಖಭಾವ ಗ್ರೀಕ್ ದೇವತೆಗಳ ಮುಖಭಾವವನ್ನು ಹೋಲುತ್ತದೆ. ಬಾಹ್ಯಸೌಂದರ್ಯಕ್ಕೆ ಹೆಚ್ಚು ಪ್ರಾಧಾನ್ಯ. ಚಿತ್ರಿತವಾಗಿರುವ ಉಗ್ರದೇವತೆಗಳು ಸಹ ಗ್ರೀಕ್ ದೇವತೆಗಳ ಪ್ರತಿಕೃತಿಗಳಂತೆ ಕಾಣುತ್ತವೆ.

## ಗುಪ್ತರ ಕಾಲ

ಕ್ರಿ.ಶ. ೪ನೆಯ ಶತಮಾನದ ಆರಂಭದಿಂದ ಭಾರತ ಇತಿಹಾಸದ ಹೆಚ್ಚು ಸ್ಪಷ್ಟವಾದ ಚಿತ್ರ ಲಭಿಸಿದೆ. ಇದಕ್ಕೆ ಶಾಸನ ಹಾಗೂ ನಾಣ್ಯಾಧಾರಗಳೂ ಸಾಹಿತ್ಯಾಧಾರಗಳೂ ವಿಪುಲವಾಗಿವೆ. ಮೌರ್ಯರ ಪತನಾನಂತರದ ಐದು ಶತಮಾನಗಳು ಒಂದು ಘಟ್ಟ. ಕ್ರಿ.ಶ. ೪ನೆಯ ಶತಮಾನದಿಂದ ಮತ್ತೊಂದು ಘಟ್ಟ ಆರಂಭವಾಗುತ್ತದೆ. ಕಳೆದ ಶತಮಾನಗಳಲ್ಲಿ ಭಾರತ ರಾಜಕೀಯವಾಗಿ ಛಿದ್ರವಾಗಿದ್ದುದಲ್ಲದೆ ಪರಕೀಯ ದಾಳಿಗಳಿಗೆ ತುತ್ತಾಗಿತ್ತು. ಆದರೆ ಅಧಿಕಾರಕ್ಕಾಗಿ ತಿಕ್ಕಾಟಗಳು ನಡೆದಿದ್ದರೂ ಆರ್ಥಿಕ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಗಣನೀಯ ಪುರೋಭಿವೃದ್ಧಿಯಾಗಿತ್ತು. ಸಾಮಾಜಿಕ ಜೀವನ ಹಾಗೂ ಪದ್ಧತಿಗಳಲ್ಲಿ ನೂತನಾಂಶಗಳು ಪ್ರವೇಶಿಸಿದ್ದುವು. ಆದರೆ ೪ನೆಯ ಶತಮಾನದ ನಂತರ ಇನ್ನೊಮ್ಮೆ ಉತ್ತರ ಭಾರತವನ್ನೆಲ್ಲ ಒಗ್ಗೂಡಿಸುವ ಪ್ರಯತ್ನ ನಡೆದು ಬಹುಮಟ್ಟಿಗೆ ಆ ದಿಶೆಯಲ್ಲಿ ಯಶಸ್ಸು ಲಭಿಸಿತು. ಪರಕೀಯ ಪ್ರಭಾವಕ್ಕೊಳಗಾಗಿದ್ದ ಜೀವನದಲ್ಲಿ, ಸಂಸ್ಕೃತಿಯಲ್ಲಿ ಭಾರತೀಯತೆಯನ್ನು ಮೂಡಿಸುವ ಪ್ರಯತ್ನಗಳಾದುವು. ಇವುಗಳಿಗೆ ಬೆಂಬಲವಾಗಿ ಖ್ಯಾತ ರಾಜಮನೆತನವೊಂದು ಅಸ್ತಿತ್ವಕ್ಕೆ ಬಂದಿತು. ಇದೇ ಗುಪ್ತಮನೆತನ.

ಚಂದ್ರಗುಪ್ತ (I) : ಗುಪ್ತವಂಶದ ಮೊದಲ ಅರಸ ಚಂದ್ರಗುಪ್ತ. ಈತನ ಅಜ್ಜ ಶ್ರೀಗುಪ್ತ, ತಂದೆ ಘಟೋತ್ಕಚ. ಇವರಿಬ್ಬರೂ 'ಮಹಾರಾಜ' ಬಿರುದಾಂಕಿತರು. ಆದರೆ ಮೂರನೆಯ ತಲೆಮಾರಿಗೆ ಸೇರಿದ ಈತ 'ಮಹಾರಾಜಾಧಿರಾಜ'ನೆನಿಸಿಕೊಂಡ. ಚೀನೀ ಯಾತ್ರಿಕನಾದ ಇತ್ಸಿಂಗ್‌ನು ತಾನು ಭಾರತಕ್ಕೆ ಬರುವುದಕ್ಕಿಂತಲೂ ಸು. ೫೦೦ ವರ್ಷಗಳ ಹಿಂದೆ ಚೆ-ಲಿ-ತೆ-ತೊ ಎಂಬ ಅರಸನೊಬ್ಬ ಚೀನಾದೇಶದ ಯಾತ್ರಿಕರ ಸಲುವಾಗಿ ಒಂದು ದೇವಾಲಯವನ್ನು ಕಟ್ಟಿಸಿ ಆದರ ಪೋಷಣೆಗೆ ೨೪ ಗ್ರಾಮಗಳ ದತ್ತಿಯೊಂದನ್ನು ನೀಡಿದ್ದನೆಂದು ಹೇಳಿದ್ದಾನೆ. ಈ ಅರಸನನ್ನು ಗುರುತಿಸುವುದರಲ್ಲಿ ಭಿನ್ನಾಭಿಪ್ರಾಯಗಳಿವೆ; ಶ್ರೀಗುಪ್ತನೇ ಇರಬಹುದೆಂದು ಸಾಮಾನ್ಯವಾಗಿ ಒಪ್ಪಲಾಗಿದೆ. ಈತನು ದೇವಾಲಯವನ್ನು ಕಟ್ಟಿಸಿದುದೆಲ್ಲಿ ಎಂಬುದನ್ನು ಹೇಳಿಲ್ಲ. ಬಹುಶಃ ಇದು ಉತ್ತರ ಅಥವಾ ಮಧ್ಯ ಬಂಗಾಲದಲ್ಲಿದ್ದಿರಬಹುದೆಂದು ಊಹಿಸಲಾಗಿದೆ. ಈ ಶ್ರೀಗುಪ್ತನ ಮಗ ಘಟೋತ್ಕಚ. ಈತನನ್ನು ಕುರಿತು ಹೆಚ್ಚಿಗೆ ತಿಳಿಯದು. ನಂತರದ ಶಾಸನಗಳಲ್ಲಿ ಈತನನ್ನೇ ಗುಪ್ತ ವಂಶದ ಮೊದಲ ಅರಸನೆಂದು ಪರಿಗಣಿಸಿರುವುದನ್ನು ಗಮನಿಸಿ ಈತನು ಪ್ರಬಲನಾಗಿದ್ದ ಅರಸನೇ ಆಗಿರಬಹುದೆಂದು ಹೇಳಬಹುದು. ಇವರಿಬ್ಬರೂ 'ಮಹಾರಾಜ' ಎಂಬ ಬಿರುದನ್ನು ಪಡೆದಿದ್ದ ಕಾರಣ ಇವರು ಸಾಮಂತಪದವಿಯಲ್ಲಿದ್ದರೆಂದು ಕೆಲವರ ಹೇಳಿಕೆ. ಆದರೆ ಸ್ವತಂತ್ರರಾಗಿ ಆಳುತ್ತಿದ್ದ ಕೆಲವು ಸಮಕಾಲೀನ ಅರಸರು ಸಹ ಕೇವಲ 'ಮಹಾರಾಜ' ಎಂಬ ಬಿರುದನ್ನಷ್ಟೇ ಧರಿಸಿದ್ದುದು ಕಂಡುಬರುತ್ತದೆ. ಆದ್ದರಿಂದ ಇವರು ಸಾಮಂತರಾಗಿದ್ದರೆಂದು ಹೇಳಲಾಗದು.

ವಾಸ್ತವಿಕವಾಗಿ ಚಂದ್ರಗುಪ್ತ (I)ನನ್ನೇ ಗುಪ್ತ ವಂಶದ ಮೊದಲ ಅರಸನೆಂದು ಪರಿಗಣಿಸಬೇಕು. ರಾಜಕೀಯವಾಗಿ ಈ ಮನೆತನ ಇತರರ ದೃಷ್ಟಿಗೆ ಬಂದುದು ಈತನ ಕಾಲದಲ್ಲಿಯೇ. ಬಹಳ ಪ್ರಾಚೀನವಾದ ಲಿಚ್ಛವಿ ಗಣರಾಜ್ಯ ಈಗಲೂ ಅಸ್ತಿತ್ವದಲ್ಲಿತ್ತು; ತನ್ನ ಖ್ಯಾತಿಯನ್ನು ಉಳಿಸಿಕೊಂಡಿತ್ತು. ಇಂತಹ ಮನೆತನಗಳೊಡನೆ ಚಂದ್ರಗುಪ್ತ ಸಂಬಂಧ ಬೆಳಸಿದ. ಈತನ ಪತ್ನಿ ಕುಮಾರದೇವಿ ಲಿಚ್ಛವಿವಂಶದವಳು. ಚಂದ್ರಗುಪ್ತನ ಬಾಳಿನಲ್ಲಿ ಇದೊಂದು ಮಹತ್ತ್ವದ ಘಟನೆ. ಎಂತಲೇ ಇದರ ನೆನಪಿಗಾಗಿ ಚಿನ್ನದ ನಾಣ್ಯಗಳನ್ನು ಅಚ್ಚುಹಾಕಿಸಿದ. ಅದರ ಒಂದು ಮುಖದಲ್ಲಿ ಈತನ ಹಾಗೂ ಈತನ ಪತ್ನಿಯ ಚಿತ್ರವಿದೆ; ಇವರ ಹೆಸರುಗಳನ್ನೂ ಕೆತ್ತಿದೆ. ಹಿಮ್ಮುಖದಲ್ಲಿ ಸಿಂಹವಾಹಿನಿ ದೇವತೆಯೊಬ್ಬಳ ಚಿತ್ರವಿದ್ದು ಕೆಳಗೆ 'ಲಿಚ್ಛವಯಃ' ಎಂಬ ಆಲೇಖ್ಯವಿದೆ. ಇಷ್ಟೇ ಅಲ್ಲದೆ ಸಮುದ್ರಗುಪ್ತನನ್ನು ಶಾಸನಗಳಲ್ಲಿ ಉಲ್ಲೇಖಿಸುವಾಗ ಅವನನ್ನು ಚಂದ್ರಗುಪ್ತನ ಮಗನೆಂದಷ್ಟೇ ಹೇಳದೆ ಲಿಚ್ಛವಿ ರಾಜಕುಮಾರಿಯ ಮಗ (ಲಿಚ್ಛವಿದೌಹಿತ್ರ)ನೆಂದು ವರ್ಣಿಸಿದೆ. ಈ ಸಂಬಂಧದ ಫಲವಾಗಿ ಚಂದ್ರಗುಪ್ತನು ಮಗಧ ಹಾಗೂ ಸುತ್ತಲಿನ ಪ್ರದೇಶಗಳ ಮೇಲೆ ಸ್ಥಿರವಾದ ಅಧಿಕಾರವನ್ನು ಪಡೆದನು. ಉತ್ತರಾಧಿಕಾರಿಗಳಿಲ್ಲದಿದ್ದ ಕಾರಣ ಲಿಚ್ಛವಿಗಳಿಗೆ ಸೇರಿದ್ದ ವೈಶಾಲಿ ಮತ್ತು ನೇಪಾಳಗಳ ನಡುವಣ ಪ್ರದೇಶ ಸಹ ಇವನ ಅಧೀನಕ್ಕೆ ಬಂದಿತು.. ಈತನು ಸಾಕೇತ (ಅವಧ) ಪ್ರಯಾಗ

ಮತ್ತು ಮಗಧಗಳ ಅರಸನಾಗಿದ್ದನೆಂಬುದು ಪುರಾಣಗಳಲ್ಲಿನ ಹೇಳಿಕೆ. ಇದು ಸಂದೇಹಾಸ್ಪದ. ಆದರೆ ಈತನ ಮಗನು ಕೈಗೊಂಡ ದಿಗ್ವಿಜಯ ಯಾತ್ರೆಯನ್ನು ಪರಿಶೀಲಿಸಿ ಈತನು ಬಿಹಾರ ಹಾಗೂ ಬಂಗಾಲ ಮತ್ತು ಅವಧಗಳ ಕೆಲಭಾಗಗಳ ಅರಸನಾಗಿದ್ದನೆಂದು ಹೇಳಬಹುದು.

ಕ್ರಿ.ಶ. ೩೧೯–೨೦ (ಫೆಬ್ರವರಿ ೨೬, ೩೨೦)ರಿಂದ ಉತ್ತರ ಭಾರತದಲ್ಲಿ ಗುಪ್ತರ ಹೆಸರಿನ ಕಾಲಗಣನೆ ಪ್ರಚಾರಕ್ಕೆ ಬಂದಿತು. ಇದು ಚಂದ್ರಗುಪ್ತನ ಆಳಿಕೆಯ ಮೊದಲನೆಯ ವರ್ಷವೆಂದೂ ಈ ಶಕೆಯನ್ನು ಸ್ಥಾಪಿಸಿದಾತ ಈತನೇ ಎಂದೂ ಹಲವರ ಅಭಿಪ್ರಾಯ. ಈ ಅರಸನ ಆಳಿಕೆಯ ಅವಧಿಗಳನ್ನು ಇದೇ ಶಕೆಯ ಆಧಾರದ ಮೇಲೆ ನಿಶ್ಚಯಿಸಬೇಕಾಗಿದೆ. ಕೆಲವರು ಈ ಶಕೆಯನ್ನು ಆರಂಭಿಸಿದಾತ ಸಮುದ್ರಗುಪ್ತನೆಂದಿದ್ದಾರೆ. ಹಾಗಿದ್ದಲ್ಲಿ ಚಂದ್ರಗುಪ್ತನ ಆಳಿಕೆಯ ಕಾಲವನ್ನು ಇನ್ನೂ ಹಿಂದೂಡಬೇಕಾಗುತ್ತದೆ. ಆತ ಈ ಶಕೆಯ ಮೂಲಪುರುಷನೆಂಬ ಹೆಚ್ಚು ಸಮ್ಮತವಾದ ಅಭಿಪ್ರಾಯವನ್ನು ಒಪ್ಪಿದೆ. 'ಕೌಮುದೀ ಮಹೋತ್ಸವ'ವೆಂಬ ನಾಟಕದಲ್ಲಿ ಹೀನಪುರುಷನಾದ ಚಂಡಸೇನನನ್ನು ಮಗಧದ ಅರಸನಾದ ಸುಂದರವರ್ಮನು ದತ್ತಪುತ್ರನೆಂದು ಭಾವಿಸಿ ತನ್ನ ಸೇನಾನಿಯಾಗಿ ನೇಮಿಸಿದ್ದನೆಂದೂ ಅಸಂಸ್ಕೃತರಾದ ಲಿಚ್ಛವಿಯರೊಡಗೂಡಿ ಚಂಡಸೇನನು ಸುಂದರವರ್ಮನನ್ನು ಕೊಂದು ಮಗಧವನ್ನು ಆಕ್ರಮಿಸಿದನೆಂದೂ ಹೇಳಿದೆ. ಇದರಲ್ಲಿನ ಚಂಡಸೇನನನ್ನು ಚಂದ್ರಗುಪ್ತನೊಡನೆ ಸಮೀಕರಿಸಿ ಮಗಧ ರಾಜ್ಯ ಚಂದ್ರಗುಪ್ತನ ವಶವಾದ ರೀತಿಯನ್ನು ಇದರಲ್ಲಿ ಪ್ರಸ್ತಾಪಿಸಿದೆ ಎಂದು ಕೆಲವರು ಹೇಳಿದ್ದಾರೆ. ಆದರೆ ಇದು ಸತ್ಯದೂರ. ಆ ನಾಟಕ ಶತಮಾನಗಳ ನಂತರ ಬರೆದುದು. ಅದರಲ್ಲಿ ನಿರೂಪಿತವಾದ ಘಟನೆಗಳು ವಿಲಕ್ಷಣವೂ ಅಸಂಬದ್ಧವೂ ಆಗಿವೆ. ಚಂದ್ರಗುಪ್ತನ ಇತಿಹಾಸವನ್ನು ಪುನರ್ರಚಿಸಲು ಇತಿಹಾಸಕಾರರು ಮಾಡಿದ ಈ ಯತ್ನ ಹುರುಳಿಲ್ಲದ್ದು. ಖಚಿತವಾಗಿ ತಿಳಿದುಬರುವ ವಿಷಯಗಳನ್ನು ಮೇಲೆ ಹೇಳಿದೆ. ಚಂದ್ರಗುಪ್ತನು 'ಮಹಾರಾಜಾಧಿರಾಜ'ನೆಂದು ಕರೆದುಕೊಂಡಿರುವುದು ಗಮನಾರ್ಹ. ಇದು ಅಧಿಕಾರದಲ್ಲಿ ಅವನ ಅಭಿವೃದ್ಧಿಯನ್ನು ಸೂಚಿಸುತ್ತದೆ. ತನ್ನ ಪೂರ್ವಜರಿಗಿಂತ ಹೆಚ್ಚು ಪ್ರಭಾವಶಾಲಿಯೂ ಶಕ್ತಿಯುತನೂ ಆಗಿ ತನ್ನ ಹೆಸರಿನಲ್ಲಿ ಶಕೆಯೊಂದನ್ನು ಪ್ರಾರಂಭಿಸಿದ ಈತ ಅಂದಿನ ರಾಜಕೀಯದಲ್ಲಿ ಮುಂದುವರಿದಿದ್ದನೆಂಬುದು ನಿಜ.

**ಸಮುದ್ರಗುಪ್ತ :** ಚಂದ್ರಗುಪ್ತನ ನಂತರ ಆಳಿದವನು ಸಮುದ್ರಗುಪ್ತ. ಅಲಹಾಬಾದಿನಲ್ಲಿರುವ ಸ್ತಂಭಶಾಸನ ಈತನ ಪ್ರಶಸ್ತಿ. ಈ ಶಾಸನದ ಆರಂಭದ ಭಾಗದಲ್ಲಿ ಕೆಲವು ಕಡೆ ಅಕ್ಷರಗಳು ಲುಪ್ತವಾಗಿ ಹಲವು ವಿವರಗಳು ಸ್ಪಷ್ಟವಾಗಿಲ್ಲ. ಇಲ್ಲಿ ಚಂದ್ರಗುಪ್ತನ ಆಸ್ಥಾನದ ವರ್ಣನೆ ಇದೆ. ತನ್ನ ಆಳಿಕೆಯ ಅಂತಿಮ ವರ್ಷಗಳಲ್ಲಿ ತನ್ನ ಉತ್ತರಾಧಿಕಾರಿಯಾಗಲು ಸಮುದ್ರಗುಪ್ತನೇ ಸಮರ್ಥನೆಂದು ಭಾವಿಸಿದ ಆತ ಆಸ್ಥಾನಿಕರ ಸಮ್ಮುಖದಲ್ಲಿ ತನ್ನ ನಂತರ ರಾಜನಾಗಿ ಆಳಲು ಈತನನ್ನು ಆರಿಸಿದನೆಂದು ಹೇಳಿದೆ. ಇದರಿಂದ ಸಮುದ್ರಗುಪ್ತನು ಆತನ ಹಿರಿಯ ಮಗನಲ್ಲವೆಂದೂ ಅವನಿಗೂ

ಹಿರಿಯನೊಬ್ಬ ಇದ್ದಿರಬಹುದೆಂದೂ ತಿಳಿಯಬಹುದು. ಈತನು ಯಾರು ಎಂಬುದಾಗಲಿ, ಇತರ ವಿವರಗಳಾಗಲಿ ತಿಳಿಯದು. ಸಮುದ್ರಗುಪ್ತನು ಅಚ್ಚುಹಾಕಿಸಿದ ನಾಣ್ಯಗಳನ್ನೇ ಹೋಲುವ ಕೆಲವು ಚಿನ್ನದ ನಾಣ್ಯಗಳು ಲಭಿಸಿದ್ದು ಅವುಗಳ ಮೇಲೆ ಕಾಚ ಎಂಬ ಅರಸನ ಹೆಸರಿದೆ. ಕಾಚಗುಪ್ತ ಸಮುದ್ರಗುಪ್ತನ ಅಣ್ಣನೆಂದೂ ಇವನನ್ನು ನಿರ್ಲಕ್ಷಿಸಿಯೇ ಚಂದ್ರಗುಪ್ತನು ಕಿರಿಯನನ್ನು ಆರಿಸಿದನೆಂದೂ ಊಹಿಸಲಾಗಿದೆ. ಕಾಚ ಎಂಬುದು ಸಮುದ್ರಗುಪ್ತನದೇ ಇನ್ನೊಂದು ಹೆಸರೆಂಬ ವಾದವೂ ಇದೆ. ಏನೇ ಇರಲಿ ಚಂದ್ರ ಗುಪ್ತನು ಸಮುದ್ರಗುಪ್ತನನ್ನು ಆಯ್ಕೆಮಾಡಿದನೆಂಬುದೂ ಬಹುಶಃ ಸಿಂಹಾಸನವನ್ನೂ ಮಗನಿಗೆ ಬಿಟ್ಟುಕೊಟ್ಟನೆಂಬುದೂ ಇದರಿಂದ ತಿಳಿಯುತ್ತದೆ.

ಇದು ಸಹಜವಾಗಿಯೇ ಹಿರಿಯ ಸೋದರನಿಗೂ ಆತನ ಬೆಂಬಲಿಗರಿಗೂ ನೋವ ನ್ನುಂಟುಮಾಡಿತು. ಅವರು ಹೊಸ ಅರಸನ ವಿರುದ್ಧ ದಂಗೆ ಎದ್ದರು.. ಶಾಸನದಲ್ಲಿ ಈ ವಿವರಗಳನ್ನೊಳಗೊಂಡ ಭಾಗ ಹಾಳಾಗಿದೆ. ಅಚ್ಯುತ ಮತ್ತು ನಾಗಸೇನ ಎಂಬಿಬ್ಬರು ಮತ್ತು ಕೋಟಕುಲದ ಒಬ್ಬ ಸಾಮಂತ ಸಮುದ್ರಗುಪ್ತನನ್ನು ಎದುರಿಸಿದಂತೆ ತೋರು ತ್ತದೆ. ಆದರೆ ಬಲಶಾಲಿಯಾದ ಅರಸನು ಇವರನ್ನು ಅಡಗಿಸಿ ತನ್ನ ಸ್ಥಾನವನ್ನು ದೃಢ ಪಡಿಸಿಕೊಂಡನು. ಅಚ್ಯುತನು ಅಹಿಚ್ಛತ್ರದ ಅರಸನೆಂದೂ ನಾಗಸೇನ ಗ್ವಾಲಿಯರ್ ಸಮೀಪದ ಪದಮ್‌ಪವಾಯ (ಪದ್ಮಾವತಿ)ದ ಅರಸನೆಂದೂ ಹೇಳಲಾಗಿದೆ. ದೆಹಲಿ ಮತ್ತು ಪೂರ್ವ ಪಂಜಾಬ್ ಪ್ರದೇಶಗಳ ಕೋಟ ಅರಸರ ನಾಣ್ಯಗಳು ದೊರಕಿದ್ದು ಸಮುದ್ರಗುಪ್ತನು ಸೋಲಿಸಿದ ಕೋಟ ಕುಲಜನು ಈ ಪ್ರದೇಶದವನಾಗಿರಬಹುದು. ಈ ಶತ್ರುಗಳನ್ನು ಅಡಗಿಸಿದ ಬಳಿಕವೇ ಈತನು ಪುಷ್ಪವೆಂಬ ನಗರವನ್ನು ಪ್ರವೇಶಿಸಿದು ದೆಂದು ಶಾಸನದಲ್ಲಿ ಹೇಳಿದೆ. ಈ ಪುಷ್ಪಪುರವನ್ನು ಕನೋಜೆಂದು ಕೆಲವರೂ ಪಾಟಲೀ ಪುತ್ರವೆಂದು ಇತರರೂ ಗುರುತಿಸಿದ್ದಾರೆ.

ಅನಂತರ ಸಮುದ್ರಗುಪ್ತ ದಿಗ್ವಿಜಯಕ್ಕೆ ಹೊರಟ. ಅಲಹಾಬಾದಿನ ಸ್ತಂಭದಲ್ಲಿ ಈತನ ಪ್ರಶಸ್ತಿಶಾಸನದ ಮೇಲ್ಭಾಗದಲ್ಲಿ ಅಶೋಕನದೊಂದು ಶಾಸನವಿದೆ. ಬಹುಶಃ ಸಮುದ್ರಗುಪ್ತನಿಗೆ ಅಶೋಕನ ಹಿರಿಮೆ, ಸಾಧನೆಗಳ ಪರಿಚಯವಿದ್ದಿರಬೇಕು. ಕೇವಲ ಆರು ಶತಮಾನಗಳ ಹಿಂದೆ ಆಳಿದ ಆ ಅರಸ ಅಂದಿನ ಭಾರತವನ್ನೆಲ್ಲಾ ಚಕ್ರವರ್ತಿ ಕ್ಷೇತ್ರಾಧೀನವಾಗಿಸಿದ್ದ. ಅನಂತರ ಯಾರೂ ಅಂತಹ ಸಾಧನೆಗೆ ಕೈಹಾಕಿರಲಿಲ್ಲ. ಒಮ್ಮೊಮ್ಮೆ ಅಂತಹ ಪ್ರಯತ್ನ ನಡೆದಿತ್ತಾದರೂ ಯಶಸ್ಸು ದೊರಕಿರಲಿಲ್ಲ. ಬಹುಶಃ ಸಮುದ್ರಗುಪ್ತನು ಈಗ ಆ ಕೆಲಸಕ್ಕೆ ಕೈಹಾಕಿದಂತೆ ತೋರುತ್ತದೆ. ಆದರೆ ಈ ಶತ ಮಾನಗಳಲ್ಲಿ ದೇಶದ ಪರಿಸ್ಥಿತಿ ಬದಲಾಗಿತ್ತು. ಇಡೀ ಭಾರತವನ್ನೆಲ್ಲಾ ಏಕಚಕ್ರಾಧಿ ಪತ್ಯಕ್ಕೊಳಪಡಿಸುವುದು ಸಾಧ್ಯವಿರಲಿಲ್ಲ. ಎಂತಲೇ ತನ್ನ ನೀತಿಯಲ್ಲಿ ಸೂಕ್ತವಾದ ಬದಲಾವಣೆಗಳನ್ನು ಆತ ಮಾಡಿಕೊಂಡ. ಅಲಹಾಬಾದಿನ ಶಾಸನದಲ್ಲಿ ಈ ನೀತಿಯ ಸ್ಪಷ್ಟವಾದ ಪ್ರಸ್ತಾಪವಿದೆ.

ಆರ್ಯಾವರ್ತದ ರಾಜರನ್ನೆಲ್ಲಾ ಸೋಲಿಸಿ ಅವರ ರಾಜ್ಯಗಳನ್ನು ತನ್ನದಾಗಿಸಿಕೊಂಡು

ಎಂತಲೇ ಆತ ಸೋಲಿಸಿದ ರಾಜರ ಹೆಸರುಗಳನ್ನು ಮಾತ್ರ ಹೇಳಿದೆ, ಆಳುತ್ತಿದ್ದ ರಾಜ್ಯಗಳ ಪ್ರಸ್ತಾಪವಿಲ್ಲ. ಆದರೆ ದಕ್ಷಿಣಾಪಥದ ಅರಸರನ್ನು ಸೋಲಿಸಿದರೂ ಅವರನ್ನು ಬಂಧನದಿಂದ ಮುಕ್ತಗೊಳಿಸಿ ಅವರ ರಾಜ್ಯಗಳನ್ನು ಅವರಿಗೇ ಹಿಂದಿರುಗಿಸಿದ. ತನ್ನ ಸಾರ್ವಭೌಮತ್ವವನ್ನು ಒಪ್ಪಿಕೊಂಡು ಅವರು ತನಗೆ ವಿಧೇಯರಾಗಿರುವಂತೆ ಮಾಡಿದ. ಇದು ಆತನ ಗ್ರಹಣ ಮೋಕ್ಷಾನುಗ್ರಹಜನಿತಪ್ರತಾಪ. ಎಂತಲೇ ಆ ಅರಸರ ಹೆಸರನ್ನೂ ಅವರು ಆಳುತ್ತಿದ್ದ ಪ್ರದೇಶಗಳನ್ನೂ ಹೇಳಿದೆ.

ಶಾಸನದಲ್ಲಿ ಮೊದಲು ದಕ್ಷಿಣಾಪಥದ, ನಂತರ ಆರ್ಯಾವರ್ತದ ಅರಸರ ವಿಜಯಗಳನ್ನು ಹೇಳಿದೆ. ಆದರೆ ನೆರೆಹೊರೆಯ ಅರಸರನ್ನು ಸೋಲಿಸದೆ ದಕ್ಷಿಣಾಪಥದ ಕಡೆಗೆ ಹೊರಳುವುದು ಅಸಮಂಜಸವೆನಿಸುತ್ತದೆ. ಆದ್ದರಿಂದ ಶಾಸನದಲ್ಲಿ ಹೇಳಿದಂತೆಯೇ ದಿಗ್ವಿಜಯಯಾತ್ರೆ ನಡೆಯಿತೆಂದು ಹೇಳಲಾಗದು. ಮೊದಲು ಉತ್ತರ ಭಾರತದ ಅರಸರಾದ ರುದ್ರದೇವ, ಮತಿಲ, ನಾಗದತ್ತ, ಚಂದ್ರವರ್ಮ, ಗಣಪತಿನಾಗ, ನಾಗಸೇನ, ಅಚ್ಯುತ, ನಂದಿ ಮತ್ತು ಬಲವರ್ಮರನ್ನು ಸಮುದ್ರಗುಪ್ತನು ಸೋಲಿಸಿದನು. ಇವರಲ್ಲಿ ಅಚ್ಯುತ ಮತ್ತು ನಾಗಸೇನರು ಪಟ್ಟಾಭಿಷೇಕಕ್ಕೆ ಮೊದಲೇ ಸೋಲಿಸಿದ ಅರಸರಾಗಿರಬಹುದು. ಪದ್ಮಾವತಿ, ವಿದಿಶಾ ಮತ್ತು ಮಥುರಾಗಳಲ್ಲಿ ಆಗ ನಾಗಕುಲದ ಮೂರು ಶಾಖೆಗಳ ಅರಸರು ಬೇರೆ ಬೇರೆಯಾಗಿ ಆಳುತ್ತಿದ್ದರು. ಗಣಪತಿನಾಗನು ಅವರಲ್ಲಿ ಒಬ್ಬನಾಗಿರಬಹುದು. ಇತರ ಅರಸರನ್ನು ಗುರುತಿಸುವುದರಲ್ಲಿ ಭಿನ್ನಾಭಿಪ್ರಾಯಗಳಿವೆ. ಇವರುಗಳನ್ನು ಸೋಲಿಸಿದ ಪರಿಣಾಮವಾಗಿ ಸಮುದ್ರಗುಪ್ತನು ಉತ್ತರಪ್ರದೇಶ, ಮಧ್ಯಭಾರತ, ಬಂಗಾಲ, ಬಿಹಾರಗಳನ್ನೊಳಗೊಂಡ ವಿಸ್ತಾರವಾದ ಪ್ರದೇಶದ ಅಧಿಪತಿಯಾದನು.

ದಕ್ಷಿಣಾಪಥದಲ್ಲಿ ಸೋಲಿಸಲ್ಪಟ್ಟ ಅರಸರ ಸಂಖ್ಯೆ ಹನ್ನೆರಡು. ಕೋಸಲದ ಮಹೇಂದ್ರ, ಮಹಾಕಾಂತಾರದ ವ್ಯಾಘ್ರರಾಜ, ಕೌರಾಲದ ಮಂಟರಾಜ, ಪಿಷ್ಟಪುರದ ಮಹೇಂದ್ರ, ಗಿರಿಕೊಟ್ಟೂರಿನ ಸ್ವಾಮಿದತ್ತ, ಏರಂಡಪಲ್ಲದ ದಮನ, ಕಾಂಚಿಯ ವಿಷ್ಣುಗೋಪ, ಅವಮುಕ್ತದ ನೀಲರಾಜ, ವೆಂಗಿಯ ಹಸ್ತಿವರ್ಮ, ಪಾಲಕ್ಕದ ಉಗ್ರಸೇನ, ದೇವರಾಷ್ಟ್ರದ ಕುಬೇರ ಮತ್ತು ಕೌಸ್ಥಲಪುರದ ಧನಂಜಯ. ಇವುಗಳಲ್ಲಿ ಮಹಾಕಾಂತಾರ, ಅವಮುಕ್ತ, ಕೌಸ್ಥಲಪುರಗಳನ್ನು ಖಚಿತವಾಗಿ ಗುರುತಿಸಲು ಸಾಧ್ಯವಾಗಿಲ್ಲ. ಕೋಸಲ ಮಧ್ಯಪ್ರದೇಶದ ಬಿಲಾಸಪುರ, ರಾಯಪುರ, ಸಂಭಲ್ಪುರಗಳನ್ನೊಳಗೊಂಡಿದೆ. ಪಿಷ್ಟಪುರ, ಕೊಟ್ಟೂರು, ಏರಂಡಪಲ್ಲ, ದೇವರಾಷ್ಟ್ರಗಳು ಆಂಧ್ರಪ್ರದೇಶದ ಗೋದಾವರಿ ಹಾಗೂ ವಿಶಾಖಪಟ್ಟಣದ ಜಿಲ್ಲೆಗಳನ್ನೊಳಗೊಂಡ ಭಾಗಗಳು. ವೆಂಗಿಯು ಕೃಷ್ಣಾ-ಗೋದಾವರಿಗಳ ನಡುವಣ ಎಲ್ಲೂರು ಸಮೀಪದ ಪೆದ್ದವೇಗಿ, ಈಗಿನ ಕಂಚಿ ಕಾಂಚೀಪುರ, ಕೌರಾಳವನ್ನು ಕೇರಳವೆಂದು ಓದಿ ಇದು ದಕ್ಷಿಣದ ಕೇರಳವೆಂದೂ ಪಾಲಕ್ಕ ಎಂಬುದು ಕೇರಳದಲ್ಲಿನ ಪಾಲ್ಘಾಟ್ ಎಂದೂ ಹಲವರು ಅಭಿಪ್ರಾಯಪಟ್ಟಿದ್ದಾರೆ. ದೇವರಾಷ್ಟ್ರವನ್ನು ಮಹಾರಾಷ್ಟ್ರವೆಂದು ಗುರುತಿಸಿದ್ದಾರೆ. ಅಂತೆಯೇ ಏರಂಡಪಲ್ಲವನ್ನು ಮಹಾರಾಷ್ಟ್ರದ ಖಾನ್

ದೇಶ ಜಿಲ್ಲೆಯ ಏರಂಡೋಲ್ ಎಂದೂ ಕೆಲವರು ಸೂಚಿಸಿದ್ದಾರೆ. ಈ ರಾಜ್ಯಗಳೆಲ್ಲಾ ಪೂರ್ವ ತೀರದ ಪ್ರದೇಶಗಳೆನ್ನುವುದಾದರೆ ಸಮುದ್ರಗುಪ್ತನು ಈ ದಿಗ್ವಿಜಯದಲ್ಲಿ ಪೂರ್ವತೀರದ ತುದಿಯವರೆಗೂ ಬಂದು ಅದೇ ಮಾರ್ಗವಾಗಿ ಹಿಂತಿರುಗಿದನೆನ್ನಬೇಕು. ಕೇರಳ ಹಾಗೂ ಮಹಾರಾಷ್ಟ್ರ ಪ್ರದೇಶಗಳು ಇದರಲ್ಲಿ ಸಮಾವೇಶಗೊಂಡಿದ್ದಾದರೆ, ಈ ದಿಗ್ವಿಜಯ ಪೂರ್ವತೀರದಿಂದ ಆರಂಭಿಸಿ ದಕ್ಷಿಣ ತುದಿಯಲ್ಲಿ ಚೇರರ ರಾಜ್ಯದ ಮೂಲಕ ಪಶ್ಚಿಮಕ್ಕೆ ತಿರುಗಿ, ಮಹಾರಾಷ್ಟ್ರದ ಮೂಲಕ ರಾಜಧಾನಿಗೆ ಹೋಗುವ ಮಾರ್ಗವನ್ನವಲಂಬಿಸಿತ್ತು ಎನ್ನಬೇಕು.

ರಾಜ್ಯದ ಸರಹದ್ದಿನಲ್ಲಿರುವ ಸಮತಟ (ಬಂಗಾಲದ ಆಗ್ನೇಯ ಭಾಗ), ಡವಾಕ (ಬಹುಶಃ ಅಸ್ಸಾಮಿನ ನೌಗಾಂಗ್ ಜಿಲ್ಲೆ), ಕಾಮರೂಪ (ಅಸ್ಸಾಮಿನ ಮೇಲ್ಭಾಗ), ನೇಪಾಲ ಮತ್ತು ಕರ್ತೃಪುರ (ಪಂಜಾಬಿನ ಜಲಂಧರ್ ಜಿಲ್ಲೆಯ ಕರ್ತರ್‌ಪುರ್)ದ ಅರಸರೂ ಸಮುದ್ರಗುಪ್ತನಿಗೆ ಶರಣಾದರು. ಕಪ್ಪಕಾಣಿಕೆಗಳನ್ನು ಸ್ವತಃ ತಾವೇ ಬಂದು ಸಲ್ಲಿಸಿದರು. ಇದಲ್ಲದೆ ಮಾಲವ, ಅರ್ಜುನಾಯನ, ಯೌಧೇಯ, ಮದ್ರಕ, ಆಭೀರ, ಪ್ರಾರ್ಜುನ, ಸನಕಾನೀಕ, ಕಾಕ ಮತ್ತು ಖರಪರಿಕಗಳೆಂಬ ಒಂಬತ್ತು ಜನಾಂಗಗಳ ಅಧಿಪತಿಗಳು ತಮ್ಮ ವಿಧೇಯತೆಯನ್ನು ವ್ಯಕ್ತಗೊಳಿಸಿದರು, ಅಳಿದುಳಿದ ಕುಷಾಣ, ಶಕ, ಮುರುಂಡ ಮುಂತಾದವರೂ ಸಿಂಹಳದ ಅರಸನೂ ಕಪ್ಪಕಾಣಿಕೆಗಳನ್ನು ಸಲ್ಲಿಸಿದರು. ಕುಷಾಣರನ್ನು ಶಾಸನದಲ್ಲಿ ದೈವಪುತ್ರಷಾಹಿ, ಷಾಹಾನುಷಾಹಿ ಎಂಬ ಅವರ ಬಿರುದಿನಿಂದ ಸೂಚಿಸಿದೆ.

ಶಾಸನ ನೀಡುವ ಈ ವಿವರಗಳಲ್ಲಿ ಉತ್ಪ್ರೇಕ್ಷೆಗಳಿದ್ದಿರಬಹುದಾದರೂ ಅಂದಿನ ಪರಿಸ್ಥಿತಿಯನ್ನು ಪರಿಶೀಲಿಸಿದಾಗ ಇದು ಹೆಚ್ಚುಕಡಿಮೆ ನೈಜಚಿತ್ರವೆನಿಸುತ್ತದೆ. ಇಲ್ಲಿ ಕೆಲವು ಅಂಶಗಳನ್ನು ಗಮನಿಸಬೇಕು. ದೂರದ ದಕ್ಷಿಣಾಪಥದ ರಾಜ್ಯಗಳ ಮೇಲೆ ನೇರವಾಗಿ ಆಡಳಿತದ ಹತೋಟಿ ಇಡುವುದು ಕಷ್ಟಸಾಧ್ಯವೆಂಬುದನ್ನು ಗಮನಿಸಿ ಅವುಗಳನ್ನು ಸ್ವಾಧೀನಪಡಿಸಿಕೊಳ್ಳಲು ಸ್ವತಃ ಹಿಂದೆಗೆದಿರಬಹುದು. ಕುಷಾಣರನ್ನು ಇವನು ಹೊರದೂಡದೆ ಅವರ ವಿಧೇಯತೆಯನ್ನು ಮಾತ್ರ ಸ್ವೀಕರಿಸಿದ. ಮಾಲವ ಮುಂತಾದ ರಾಜಸ್ಥಾನದ ಜನಾಂಗಗಳು ಸಹ ಇವನ ರಾಜ್ಯದ ಹೊರಗೇ ಉಳಿದುವು. ಇವನ್ನು ಗಮನಿಸಿದರೆ ಈತನು ನೆನೆದಷ್ಟು ಸುಲಭವಾಗಿರಲಿಲ್ಲ, ಈ ದಂಡಯಾತ್ರೆ ಎನಿಸುತ್ತದೆ. ಪಂಜಾಬ್, ರಾಜಸ್ಥಾನಗಳು ಇವನ ರಾಜ್ಯದ ಹೊರಗುಳಿದುವು. ಉಳಿದಂತೆ ಉತ್ತರದ ಗಂಗಾ ನದಿಯ ಬಯಲುಪ್ರದೇಶ ಮತ್ತು ಬಂಗಾಲಗಳು (ಸಕಲೋತ್ತರಾಪಥ) ಇವನ ನೇರ ಆಡಳಿತಕ್ಕೆ ಒಳಪಟ್ಟಿದ್ದವು.

ಈತನ ತಂದೆ ಪ್ರಾಬಲ್ಯಕ್ಕೆ ಬಂದುದು ಲಿಚ್ಛವಿ ಗಣರಾಜ್ಯದೊಡನಾದ ಬಾಂಧವ್ಯದ ಪರಿಣಾಮವಾಗಿ. ಆದರೆ ಈತನು ಭಾರತದ ನೈರುತ್ಯದ ಎಲ್ಲ ಗಣರಾಜ್ಯಗಳೂ ಅಳಿಯಲು ಕಾರಣನಾದನು. ಸ್ವತಃ ಅವು ಇವನ ಅಧೀನಕ್ಕೆ ಬಾರದಿದ್ದರೂ ಅವುಗಳ ಬಲ ಮುರಿಯಿತು. ಇದರ ಪರಿಣಾಮವಾಗಿ ಆ ಮೂಲೆಯಿಂದ ಭಾರತಕ್ಕೆ ದಾಳಿ ಮಾಡು

ತ್ತಿದ್ದ ಪರಕೀಯರನ್ನು ತಡೆಹಿಡಿಯುತ್ತಿದ್ದ, ತಡೆರಾಜ್ಯಗಳಂತಿದ್ದ, ಈ ಗಣರಾಜ್ಯಗಳು ಸತ್ತ್ವಗುಂದಿ, ಅಂತಹ ದಾಳಿಗಳು ಹೆಚ್ಚು ಸುಗಮವಾಗುವಂತೆ ಮಾಡಿದುವು. ಯಾವುದೋ ಒಂದು ರೂಪದಲ್ಲಿ ಅಸ್ತಿತ್ವವನ್ನು ಕಾಪಾಡಿಕೊಂಡು ಬಂದಿದ್ದ ಈ ಗಣ ರಾಜ್ಯಗಳಿಗೆ ಸಮುದ್ರಗುಪ್ತನ ದಂಡಯಾತ್ರೆ ಮೃತ್ಯುಸ್ವರೂಪಿಯಾಯಿತು.

ಶಾಸನದಲ್ಲಿ ಸಮುದ್ರಗುಪ್ತನು ಅಶ್ವಮೇಧಯಾಗವನ್ನು ಮಾಡಿದುದರ ಉಲ್ಲೇಖವಿಲ್ಲ. ಈತನ ಕೀರ್ತಿ ಭೂಮಿಯನ್ನೆಲ್ಲಾ ವ್ಯಾಪಿಸಿ ಸ್ವರ್ಗಕ್ಕೂ ಏರಿತು ಎಂದು ಸೂಚಿಸುವ ಶಾಸನದಲ್ಲಿನ ಪದ್ಯವೊಂದರ ಆಧಾರದಿಂದ ಈ ಶಾಸನ ಮರಣೋತ್ತರದ್ದು ಎಂದು ಕೆಲವರು ಊಹಿಸಿದ್ದರಾದರೂ ಈಗ ಸಾಮಾನ್ಯವಾಗಿ ಈ ಅಭಿಪ್ರಾಯವನ್ನು ಕೈಬಿಡ ಲಾಗಿದೆ. ತಾನು ಕೈಗೊಂಡ ಅಶ್ವಮೇಧದ ಕುರುಹಾಗಿ ನಾಣ್ಯವೊಂದನ್ನು ಈತನು ಅಚ್ಚುಹಾಕಿಸಿದನು. ಯಜ್ಞಸ್ತಂಭದ ಮುಂದೆ ಕಟ್ಟಿದ ಕುದುರೆಯ ಚಿತ್ರ ಒಂದು ಮುಖ ದಲ್ಲಿ, ಮಹಾರಾಣಿಯ ಚಿತ್ರ ಇನ್ನೊಂದು ಕಡೆ ಇದ್ದು, "ಅಶ್ವಮೇಧಯಾಗ ಮಾಡಿ ಭೂಮಿ ಯನ್ನು ರಕ್ಷಿಸುವ ರಾಜಾಧಿರಾಜನು ಸ್ವರ್ಗವನ್ನು ಜಯಿಸುತ್ತಾನೆ" ಎಂಬರ್ಥದ ಆಲೇಖ್ಯ ವಿದೆ. ಅಲಹಾಬಾದ್ ಶಾಸನ ಈ ಯಜ್ಞವನ್ನು ಮಾಡುವ ಮುನ್ನ ಕೆತ್ತಿಸಿದ್ದಾಗಿರಬೇಕು.

ಸಮುದ್ರಗುಪ್ತನನ್ನು ಕೆಲವರು ಇತಿಹಾಸಕಾರರು ಭಾರತದ ನೆಪೋಲಿಯನ್ ಎಂದು ವರ್ಣಿಸಿದ್ದಾರೆ. ಆದರೆ ಇದು ಸಮಂಜಸವಲ್ಲ. ನೆಪೋಲಿಯನ್‌ಗೆ ಅತೀವ ರಾಜ್ಯ ದಾಹ. ತನ್ನ ಸಾಧನೆಗಳಲ್ಲಿ ಮಿತಿಮೀರಿದ ದುರಹಂಕಾರ. ಆದರೆ ಈ ರಾಜ್ಯದಾಹ ಸಮುದ್ರಗುಪ್ತನಲ್ಲಿರಲಿಲ್ಲ. ಪರಿಸ್ಥಿತಿಯ ಪ್ರಜ್ಞೆ, ತನ್ನ ಇತಿಮಿತಿಗಳ ಜ್ಞಾನ ಇವನಿಗಿತ್ತು. ಎಂತಲೇ ಆತನು ಬೇರೆಬೇರೆ ಭಾಗಗಳಿಗೆ ಸಂಬಂಧಿಸಿದಂತೆ ಭಿನ್ನವಾದ ರಾಜನೀತಿಯನ್ನ ಅವಲಂಬಿಸಿದ. ಅವನ ದೇಹ ನೂರು ಕದನಗಳಲ್ಲಿ ಉಂಟಾದ ಗಾಯಗಳಿಂದ ಕೂಡಿತ್ತು ಎಂದು ಶಾಸನ ತಿಳಿಸುತ್ತದೆ. ಈತ ದಕ್ಷ ಸೈನಿಕನಾಗಿದ್ದನೆಂಬುದು ಇದರಿಂದ ತಿಳಿಯು ತ್ತದೆ. ಆಳಿಕೆಯ ಬಹುಕಾಲ ಈ ದಂಡಯಾತ್ರೆಗಳನ್ನು ಯೋಜಿಸುವುದರಲ್ಲಿ, ಅದರಲ್ಲಿ ಪಾಲುಗೊಳ್ಳುವುದರಲ್ಲಿ ಈತನು ಕಳೆದಿರಬೇಕು. ಆದರೂ ಈತನ ವ್ಯಕ್ತಿತ್ವದ ಬಹು ಮುಖಪ್ರತಿಭೆಯ ಚಿತ್ರ ಇತರ ಆಧಾರಗಳಿಂದ ತಿಳಿದಿದೆ. ಸ್ವತಃ ಕಾವ್ಯ ರಚಿಸುವುದರ ಮೂಲಕ ಕವಿರಾಜನೆಂಬ ಬಿರುದನ್ನು ಪಡೆದಿದ್ದ ಈತನ ಆಸ್ಥಾನದಲ್ಲಿನ ಅಧಿಕಾರಿಗಳು ಸಹ ಪಂಡಿತರಾಗಿದ್ದರು. ಉಚ್ಚಮಟ್ಟದ ಕಾವ್ಯದ ರೀತಿರಚನೆಗಳನ್ನುಳ್ಳ ಈ ಪ್ರಶಸ್ತಿ ಶಾಸನದ ಕರ್ತೃವಾದ ಹರಿಷೇಣ ವೃತ್ತಿಯಲ್ಲಿ ಸಂಧಿವಿಗ್ರಹಿಕ, ಕುಮಾರಾಮಾತ್ಯ, ಮಹಾದಂಡನಾಯಕ. ಈತನ ತಂದೆ ಧ್ರುವಭೂತಿ ಸಹ ಮಹಾದಂಡನಾಯಕನೇ. ಸಮುದ್ರಗುಪ್ತ ಸಂಗೀತಜ್ಞ. ಸಂಗೀತ ಶಾಸ್ತ್ರದಲ್ಲಿ ತುಂಬುರನನ್ನೂ ಮೀರಿಸಿದ್ದನೆಂದು ಹೇಳಿದೆ. ಇದನ್ನು ಪುಷ್ಟೀಕರಿಸುವಂತೆ ಅರಸನು ಸ್ವತಃ ವೀಣೆಯನ್ನು ನುಡಿಸುತ್ತಿರುವಂತೆ ಚಿತ್ರಿತವಾದ ನಾಣ್ಯಗಳು ದೊರೆತಿವೆ.

ಇಮ್ಮಡಿ ಚಂದ್ರಗುಪ್ತ : ಚಂದ್ರಗುಪ್ತ I ನ (ಸು. ೩೨೦ರಿಂದ ೩೪೦ ಅಥವಾ ೩೪೫) ನಂತರದ ೩೫–೪೦ ವರ್ಷಗಳ ಕಾಲ, ಸು. ೩೮೦ರ ವರೆಗೆ ಸಮುದ್ರಗುಪ್ತನು

ಆಳಿದನು. ಈತನ ಬಳಿಕ ಇಮ್ಮಡಿ ಚಂದ್ರಗುಪ್ತನು ಪಟ್ಟಕ್ಕೆ ಬಂದನು. ಇವನಿಗೂ ಮೊದಲು ಕೆಲಸಮಯ ಈತನ ಹಿರಿಯ ಸೋದರನಾದ ರಾಮಗುಪ್ತನು ಆಳಿದಂತೆ ತೋರುತ್ತದೆ. ವಿಶಾಖದತ್ತನ 'ದೇವೀ ಚಂದ್ರಗುಪ್ತ' ನಾಟಕದಲ್ಲಿ ಕೆಲ ವಿವರಗಳಿವೆ. ರಾಮಗುಪ್ತನು ಸಮುದ್ರಗುಪ್ತನ ನಂತರ ಪಟ್ಟಕ್ಕೆ ಬಂದ ಇವನನ್ನು ಯುದ್ಧ ವೊಂದರಲ್ಲಿ ಸೋಲಿಸಿದ ಶಕರು ಈತನನ್ನು ಅವಮಾನಗೊಳಿಸಲೆಂದು ಈತನ ಪತ್ನಿಯಾದ ಧ್ರುವದೇವಿಯನ್ನು ಶಕ ಅರಸನಿಗೆ ಒಪ್ಪಿಸಬೇಕೆಂದು ಕರಾರನ್ನು ಹಾಕಿದರು. ರಾಮ ಗುಪ್ತ ಒಪ್ಪಿದ. ಆದರೆ ಅವನ ಕಿರಿಯ ಚಂದ್ರಗುಪ್ತ ಹಿರಿಯನ ಈ ನಡವಳಿಕೆಯಿಂದ ಬೇಸತ್ತು, ಈ ವ್ಯವಹಾರದಲ್ಲಿ ತಲೆಹಾಕಿ ಸ್ವತಃ ತಾನೇ ರಾಣಿಯ ವೇಷ ಧರಿಸಿ ಶಕರ ಅರಸನ ಠಾಣೆಗೆ ಹೋಗಿ ಅವನನ್ನು ಉಪಾಯದಿಂದ ಕೊಂದ. ರಾಜ್ಯದ ಪ್ರಜೆಗಳು ಇದರಿಂದ ಸಂತೋಷಿಸಿದರು. ಆದರೆ ಸೋದರರಲ್ಲಿದ್ದ ಸೌಹಾರ್ದಕ್ಕೆ ಚ್ಯುತಿಬಂದಿತು. ಕೊನೆಗೊಮ್ಮೆ ಇವರಲ್ಲಿ ಕದನ ಉಂಟಾಗಿ ರಾಮಗುಪ್ತ ಕೊಲ್ಲಲ್ಪಟ್ಟ. ಚಂದ್ರಗುಪ್ತ ಧ್ರುವದೇವಿಯ ಕೈಹಿಡಿದ; ರಾಜ್ಯವನ್ನೂ ಪಡೆದ. ಇದು ನಾಟಕದ ಕತೆ. ಇಮ್ಮಡಿ ಚಂದ್ರಗುಪ್ತನಿಗೆ ಇದು ಸಂಬಂಧಿಸಿದುದೆಂದು ಊಹಿಸಲಾಗಿದೆ. ರಾಮಗುಪ್ತನವೆನ್ನಲಾದ ನಾಣ್ಯಗಳು ಲಭಿಸಿವೆ. ಚಂದ್ರಗುಪ್ತನು ಶಕರನ್ನು ಎದುರಿಸಿ, ಸೋಲಿಸಿ ಶಕಾರಿ ಎನಿಸಿ ಕೊಂಡುದು ಐತಿಹಾಸಿಕ ಸತ್ಯ. ಇತ್ತೀಚೆಗೆ ದೊರೆತ ಎರಡು ಶಾಸನಗಳು ಸಹ ಈ ರಾಮಗುಪ್ತನವೆಂದು ಹೇಳಿದೆ. ನಾಟಕದ ಘಟನೆಗಳು ಐತಿಹಾಸಿಕ ಸತ್ಯವೆಂಬ ಊಹೆಗೆ ಇವು ಪುಷ್ಟಿಕೊಡುತ್ತವೆ. ಆದರೂ ಖಚಿತವೆನ್ನಬಹುದಾದ ಹೆಚ್ಚಿನ ಆಧಾರಗಳ ಆವಶ್ಯಕತೆ ಇದೆ.

ಇಮ್ಮಡಿ ಚಂದ್ರಗುಪ್ತನ ಆಳಿಕೆಯ ಕಾಲದಲ್ಲಿ ಗುಪ್ತರ ಸಾಮ್ರಾಜ್ಯ ಕೀರ್ತಿಶಿಖರ ವನ್ನೇರಿತು. ಈತ ದತ್ತಾದೇವಿಯ ಪುತ್ರ. ಧ್ರುವದೇವಿಯನ್ನಲ್ಲದೆ ಕುಬೇರನಾಗ ಎಂಬ ಇನ್ನೊಬ್ಬಳನ್ನೂ ಈತ ವರಿಸಿದ್ದ. ದೇವಗುಪ್ತ, ದೇವರಾಜ, ದೇವಶ್ರೀ ಎಂಬುವು ಈತನ ಬಿರುದುಗಳು. ಈತನು ಸುಮಾರು ೩೫ ವರ್ಷಗಳ ಕಾಲ (೩೮೦–೪೧೫) ಆಳಿದ. ಈತ ವಿಷ್ಣು ಭಕ್ತನಾಗಿದ್ದಂತೆ ತೋರುತ್ತದೆ. ಪರಮ ಭಾಗವತನೆಂದು ಇವನನ್ನು ವರ್ಣಿಸ ಲಾಗಿದೆ.

ಶಕರನ್ನು ಸೋಲಿಸಿ ಪಶ್ಚಿಮ ಭಾರತದಲ್ಲಿನ ಅವರ ಆಳಿಕೆಯ ಪ್ರದೇಶಗಳನ್ನು ಸ್ವಾಧೀನ ಪಡಿಸಿಕೊಂಡ ಹಿರಿಮೆ ಈತನದು. ಶಕ ಮತ್ತು ಕುಷಾಣರು ಸಮುದ್ರಗುಪ್ತನಿಗೆ ಕಪ್ಪ ಕಾಣಿಕೆಗಳನ್ನು ಸಲ್ಲಿಸಿದ್ದರು. ಆದರೂ ಪರಕೀಯರಾದ ಅವರನ್ನು ಹೊಡೆದೋಡಿಸುವುದು ರಾಜ್ಯದ ರಕ್ಷಣೆಯ ದೃಷ್ಟಿಯಿಂದ ಇವನ ಆದ್ಯಕರ್ತವ್ಯವಾಗಿದ್ದಿತು. ಇದಕ್ಕಾಗಿ ಇವನು ಮೊದಲೇ ವಿಸ್ತೃತವಾದ ಯೋಜನೆಯೊಂದನ್ನು ರೂಪಿಸಿದ. ಇತರರು ತನ್ನ ಮೇಲೆರಗ ದಂತೆ ನೋಡಿಕೊಂಡ. ಅದಕ್ಕೆಂದೇ ಇತರ ಹಿಂದು ಅರಸುಮನೆತನಗಳೊಡನೆ ರಕ್ತ ಸಂಬಂಧ ಬೆಳಸಿದ. ಇವನ ಪತ್ನಿ ಕುಬೇರನಾಗ ನಾಗವಂಶಕ್ಕೆ ಸೇರಿದಾಕೆ. ಸಮುದ್ರ ಗುಪ್ತನು ದಖನ್ನಿನ ಪೂರ್ವಭಾಗಗಳಲ್ಲಿ ತನ್ನ ಸಾರ್ವಭೌಮತ್ವವನ್ನು ಸ್ಥಾಪಿಸಿದ್ದರೂ

ಪಶ್ಚಿಮದ ಭಾಗಗಳನ್ನು ಹಾಗೆಯೇ ಬಿಟ್ಟಿದ್ದನು. ಇಲ್ಲಿ ಮೊದಲು ಸಾತವಾಹನರು ಆಳುತ್ತಿದ್ದರು. ನಂತರ ಇದು ವಾಕಾಟಕ ವಂಶದ ಅರಸರಿಗೆ ಸೇರಿತು. ಚಂದ್ರಗುಪ್ತನು ಕುಬೇರನಾಗಳಲ್ಲಿ ಜನಿಸಿದ ತನ್ನ ಮಗಳಾದ ಪ್ರಭಾವತೀಗುಪ್ತಳನ್ನು ಈ ವಾಕಾಟಕರ ಇಮ್ಮಡಿ ರುದ್ರಸೇನನಿಗೆ ಲಗ್ನಮಾಡಿಕೊಟ್ಟನು. ಆದರೆ ರುದ್ರಸೇನನು ಅಲ್ಪಾಯುಷಿ. ಅವನ ಇಬ್ಬರು ಮಕ್ಕಳಾದ ದಿವಾಕರಸೇನ ಮತ್ತು ದಾಮೋದರಸೇನರು ಇನ್ನೂ ಕಿರಿಯರಾಗಿದ್ದ ಕಾರಣ ಪ್ರಭಾವತೀಗುಪ್ತಳೇ ಅವರ ಹೆಸರಿನಲ್ಲಿ ರಾಜಪ್ರತಿನಿಧಿಯಾಗಿ ಅಧಿಕಾರ ವಹಿಸುವಂತೆ ಚಂದ್ರಗುಪ್ತನು ಪ್ರೇರಿಸಿದನು. ವಾಕಾಟಕರ ರಾಜ್ಯವನ್ನು ಸುಲಭವಾಗಿ ವಶಪಡಿಸಿಕೊಳ್ಳುವ ಅವಕಾಶ ಅವನಿಗೆ ಈಗ ಲಭಿಸಿದ್ದರೂ ಶಕರನ್ನು ಹೊಡೆದೋಡಿಸುವ ಸಂಕಲ್ಪವನ್ನು ಈಡೇರಿಸಿಕೊಳ್ಳಲು ಈ ನೀತಿ ಅವನಿಗೆ ಹೆಚ್ಚು ಸಹಾಯಕವಾಗಿತ್ತು. ಇದರಿಂದ ವಾಕಾಟಕರ, ಅವರ ದೇಶದ ಪ್ರಜೆಗಳ ಬೆಂಬಲವನ್ನೂ ಗಳಿಸಿದಂತಾಯ್ತು. ಅಂತೆಯೇ ಕರ್ಣಾಟಕದಲ್ಲಿ ಕದಂಬವಂಶದ ಕಾಕುಸ್ಥವರ್ಮನ ಒಬ್ಬ ಮಗಳನ್ನು ತನ್ನ ಪತ್ನಿಯಾಗಿಯೋ ಸೊಸೆಯಾಗಿಯೋ ಸ್ವೀಕರಿಸಿದ.

ಇಷ್ಟೆಲ್ಲ ಪೂರ್ವಸಿದ್ಧತೆಗಳು ಗುಜರಾತ್-ಕಾಥೇವಾಡ ಪ್ರದೇಶದಲ್ಲಿದ್ದ ಶಕರನ್ನು ಹೊಡೆದೋಡಿಸಲೆಂದು ಮಾಡಿಕೊಂಡವಾಗಿದ್ದುವು. ಈಗ ಈತ ಅವರ ಮೇಲೆ ದಂಡೆತ್ತಿ ಹೋದ. ಇದು ಸು. ೩೮೮-೪೦೯ರ ನಡುವೆ ಆದ ಘಟನೆ. ಶಕರು ಅಂತಿಮವಾಗಿ ಸೋಲನ್ನೊಪ್ಪಿ ಆ ಪ್ರದೇಶದಿಂದ ಕಾಲ್ತೆಗೆದರು. ಅವರು ಆಳುತ್ತಿದ್ದ ರಾಜ್ಯ ಇವನ ವಶವಾಯಿತು. ಈತನು ಸೋಲಿಸಿದ ಶಕ ಅರಸ ಮುಮ್ಮಡಿ ರುದ್ರಸಿಂಹ. ಇವನೊಂದಿಗೆ ಸುಮಾರು ೩ ಶತಮಾನಗಳ ಕಾಲ ಈ ಪ್ರದೇಶದಲ್ಲಿ ಆಳಿದ ಶಕಕ್ಷತ್ರಪರ ಆಳಿಕೆ ಕೊನೆಗೊಂಡಿತು. ಗುಪ್ತರಾಜ್ಯ ಈಗ ಬಂಗಾಳಕೊಲ್ಲಿಯಿಂದ ಅರಬ್ಬೀಸಮುದ್ರದವರೆಗೆ ಹಬ್ಬಿತು.

ದೆಹಲಿಯ ಮೆಹರೌಲಿ ಗ್ರಾಮದಲ್ಲಿರುವ ಕಬ್ಬಿಣದ ಸ್ತಂಭಶಾಸನದಲ್ಲಿ ಚಂದ್ರನೆಂಬ ಅರಸನು ಸಿಂಧುನದಿಯನ್ನು ದಾಟಿ ವಾಹ್ಲಿಕ ದೇಶವನ್ನು ವಶಪಡಿಸಿಕೊಂಡನೆಂದೂ ಪೂರ್ವದಲ್ಲಿ ವಂಗದೇಶದ (ಬ್ಯಾಕ್ಟ್ರಿಯ, ಸಮತಟ). ಶತ್ರುಗಳನ್ನು ಸೋಲಿಸಿದನೆಂದೂ ಹೇಳಿದೆ. ಈ ಚಂದ್ರನನ್ನು ಇಮ್ಮಡಿ ಚಂದ್ರಗುಪ್ತನೆಂದು ಹಲವರು ಗುರುತಿಸಿದ್ದಾರೆ. ಚಂದ್ರನು ಇಮ್ಮಡಿ ಚಂದ್ರಗುಪ್ತನೇ ಆದಲ್ಲಿ ಸಮುದ್ರಗುಪ್ತನ ರಾಜ್ಯವನ್ನು ಪೂರ್ವ ಪಶ್ಚಿಮ ದಿಶೆಗಳಲ್ಲಿ ಮತ್ತಷ್ಟು ವಿಸ್ತರಿಸಿದ ಯಶಸ್ಸು ಈತನಿಗೆ ಸಲ್ಲುತ್ತದೆ. ಇದರಿಂದ ಸಮಗ್ರ ಉತ್ತರಭಾರತ ಈತನ ಅಧೀನಕ್ಕೆ ಬಂದಿತೆಂದು ಹೇಳಬಹುದು.

ಇಮ್ಮಡಿ ಚಂದ್ರಗುಪ್ತನು ವಿಕ್ರಮಾದಿತ್ಯನೆಂಬ ಬಿರುದನ್ನು ಹೊಂದಿದ್ದನು. ಪಾಟಲೀಪುತ್ರ ರಾಜಧಾನಿಯಾಗಿ ಮುಂದುವರಿದರೂ, ಮಾಳವದೇಶದ ಉಜ್ಜಯಿನಿ ಇವನ ಕಾಲದಲ್ಲಿ ಖ್ಯಾತಿಹೊಂದಿತು. ಇವನ ಶಾಸನಗಳು ಬಹುಮಟ್ಟಿಗೆ ಮಾಳವದೇಶದಲ್ಲಿ ದೊರೆತಿದೆ. ಬಹುಶಃ ಉಜ್ಜಯಿನಿಯಲ್ಲಿ ಈತ ಬಹುಕಾಲ ವಾಸಿಸಿರಬೇಕು. ಪೌರಾಣಿಕ ಖ್ಯಾತಿಯನ್ನು ಪಡೆದ ಉಜ್ಜಯಿನಿಯ ವಿಕ್ರಮಾದಿತ್ಯನು ಈತನೇ ಎಂಬ ಒಂದು ಊಹೆ

ಇದೆ. ಅಯೋಧ್ಯೆ ಈತನ ಇನ್ನೊಂದು ನೆಲೆವೀಡು. ತಂದೆಯಂತೆಯೇ ಶೌರ್ಯಸಾಮರ್ಥ್ಯಗಳಲ್ಲಷ್ಟೇ ಅಲ್ಲದೆ ಕಲೆ ಸಾಹಿತ್ಯಗಳಲ್ಲೂ ಪರಿಣತನಾಗಿ ಅವುಗಳಿಗೆ ಪೋಷಕನಾಗಿದ್ದ. ನವರತ್ನಗಳೆನಿಸಿದ ಕಾಳಿದಾಸ ಮುಂತಾದ ಪಂಡಿತೋತ್ತಮರು ಇವನ ಆಸ್ಥಾನವನ್ನು ಶೋಭಿಸಿದರೆಂದು ಪ್ರತೀತಿ. ಸು. ೪೦೦ರಿಂದ ೪೧೧ರವರೆಗೆ ಭಾರತದಲ್ಲಿ ಪ್ರವಾಸ ಮಾಡಿದ ಚೀನೀಯಾತ್ರಿಕನಾದ ಫಾಹಿಯಾನ್ ಸಮಕಾಲೀನ ಭಾರತದ ಪರಿಸ್ಥಿತಿಗಳನ್ನು ಬರೆದಿಟ್ಟಿದ್ದಾನೆ. ಈತನಿಗೆ ರಾಜಕೀಯದಲ್ಲಿ ಅಷ್ಟು ಆಸಕ್ತಿ ಇರಲಿಲ್ಲ. ಆಗ ಆಳುತ್ತಿದ್ದ ಅರಸನ ಹೆಸರನ್ನೇ ಈತ ಎಲ್ಲೂ ನಮೂದಿಸಿಲ್ಲ. ಆದರೆ ಅಂದಿನ ಆಡಳಿತದ ಸುವ್ಯವಸ್ಥೆಯನ್ನು ಕುರಿತು ತನ್ನ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾನೆ. ಶಾಂತಿಸುಭಿಕ್ಷೆಗಳು ದೇಶದಲ್ಲಿ ತುಂಬಿತುಳುಕುತ್ತಿದ್ದುವು, ಪ್ರಜೆಗಳು ಸುಖಸಂತೋಷದಿಂದ ಬಾಳುತ್ತಿದ್ದರು ಎಂದು ಆತನೇ ಹೇಳಿದ್ದಾನೆ.

ಅನಂತರದ ಅರಸರು : ಚಂದ್ರಗುಪ್ತ-ಧ್ರುವದೇವಿಯರ ಮಗ ಕುಮಾರಗುಪ್ತ. ಸು. ೪೧೫ರಿಂದ ೪೫೫ರವರೆಗೆ ಆಳಿ ಈತ ಪಿತ್ರಾರ್ಜಿತರಾಜ್ಯವನ್ನು ದಕ್ಷತೆಯಿಂದ ಕಾಪಾಡಿಕೊಂಡು ಬಂದನು. ಅಶ್ವಮೇಧಯಾಗ ಮಾಡಿದನು. ತನ್ನನ್ನು ಮಹೇಂದ್ರಾದಿತ್ಯನೆಂದು ಕರೆದುಕೊಂಡ ಈತ ಕಾರ್ತಿಕೇಯನ ಭಕ್ತ. ಆ ದೇವರ ಚಿತ್ರವುಳ್ಳ ಚಿನ್ನದ ನಾಣ್ಯಗಳನ್ನು ಅಚ್ಚುಹಾಕಿಸಿದನು. ಈತನ ಬೆಳ್ಳಿಯ ನಾಣ್ಯಗಳ ಮೇಲೆ ಮಯೂರದ ಚಿತ್ರವಿದೆ. ಆದರೆ ಆಳಿಕೆಯ ಕೊನೆಯ ವರ್ಷಗಳಲ್ಲಿ ಭಾರತದ ವಾಯುವ್ಯದಿಂದ ಅನಾಗರಿಕ ಜನಾಂಗವೊಂದರ ದಾಳಿ ಆರಂಭವಾಯಿತು. ಭಿಟಾರಿ ಶಾಸನದಲ್ಲಿ ಇವರನ್ನು ಪುಷ್ಯಮಿತ್ರರೆಂದು ಹೇಳಿದೆ. ರಾಜಕುಮಾರನಾದ ಸ್ಕಂದಗುಪ್ತನು ಇವರನ್ನು ಹಿಮ್ಮೆಟ್ಟಿಸಲು ಶ್ರಮಿಸಿದನು. ಸಾಮ್ರಾಜ್ಯಾಧಿಪತಿಯು ಇಡೀ ರಾತ್ರಿ ಬರಿಯ ನೆಲದ ಮೇಲೆ ಕಳೆಯಬೇಕಾಯಿತೆಂದು ಶಾಸನ ಪ್ರಲಾಪಿಸಿರುವುದು ಈ ಶತ್ರುಬಾಧೆಯ ತೀಕ್ಷ್ಣತೆಯನ್ನು ತೋರಿಸುತ್ತದೆ. ಶತ್ರುಗಳನ್ನು ಹಿಮ್ಮೆಟ್ಟಿಸುತ್ತಿದ್ದಾಗಲೇ ಕುಮಾರಗುಪ್ತನು ಮಡಿದನು.

ಸ್ಕಂದಗುಪ್ತನು ೪೫೫ರಲ್ಲಿ ಪಟ್ಟಕ್ಕೆ ಬಂದನು. ಈತನ ಶಾಸನಗಳಲ್ಲಿ ಅಜ್ಜ ಮುತ್ತಜ್ಜರನ್ನು ನೆನೆಯುವಾಗ ಅವರ ಪಟ್ಟದರಸಿಯರ ಉಲ್ಲೇಖವಿದೆ. ಆದರೆ ಎಲ್ಲಿಯೂ ಈತನ ತಾಯಿಯ ಹೆಸರು ಕಾಣಬಂದಿಲ್ಲ. ಈತನ ನಂತರ ಆಳಿದ ಅರಸರ ಶಾಸನಗಳಲ್ಲಿ ಕೊಟ್ಟಿರುವ ವಂಶಾವಳಿಗಳಲ್ಲಿ ಈತನ ಹೆಸರೇ ಇಲ್ಲ. ಸ್ಕಂದಗುಪ್ತನು ತಾನು ಶತ್ರುಗಳೊಡನೆ ಹೋರಾಡಿದ ವಿವರಗಳನ್ನು ತಾಯಿಗೆ ನಿವೇದಿಸಿದಾಗ ಆಕೆಯು, ಬಾಷ್ಪಾಶ್ರುಗಳಿಂದ ದೇವಕಿಯು ಕೃಷ್ಣನನ್ನು ಅಪ್ಪಿಕೊಂಡಂತೆ ಬರಮಾಡಿಕೊಂಡಳೆಂದು ಶಾಸನದಲ್ಲಿ ಹೇಳಿರುವುದನ್ನು ಆಧರಿಸಿ ಸ್ಕಂದಗುಪ್ತನ ತಾಯಿಯ ಹೆಸರು ದೇವಕಿ ಎಂದು ಕೆಲವರು ಊಹಿಸಿದ್ದಾರೆ. ಈತನು ಕುಮಾರಗುಪ್ತನ ಪಟ್ಟದ ಮಗನಲ್ಲವೆಂದೂ ಇವನು ರಣರಂಗದಲ್ಲಿದ್ದಾಗ ಇವನ ಮಲಸೋದರನಾದ ಪುರುಗುಪ್ತನು ಸಿಂಹಾಸನವನ್ನೇರಿದನೆಂದೂ ಈತನು ಪ್ರತಿಸ್ಪರ್ಧಿಗಳೊಡನೆ ಹೋರಾಡಬೇಕಾಯಿತೆಂದೂ ಹೇಳಿದೆ. ಇವುಗಳಿಂದ ಒಂದು ವಿಷಯ ಸ್ಪಷ್ಟವಾಗುತ್ತದೆ: ಇವನ ಆಳ್ವಿಕೆ ವಿಪತ್ತಿನ ಪರಂಪರೆಗಳೊಡನೆಯೇ ಆರಂಭವಾಯಿತು.

ಆಂತರಿಕ ವಿರೋಧಕ್ಕಿಂತ ಪ್ರಬಲವಾದುದು ಮ್ಲೇಂಛರೆಂದು ವರ್ಣಿಸಲಾದ ಶತ್ರುಗಳೊಡನೆ ಸೆಣಸಾಟ. ಇವರು ಅನಾಗರಿಕರಾದ ಹೂಣರು. ಐನೆಯ ಶತಮಾನದ ಮಧ್ಯಭಾಗದಲ್ಲಿ ಆಕ್ಸಸ್ ಕೊಳ್ಳದಿಂದ ಇಳಿದು ಪರ್ಷಿಯ ಹಾಗೂ ಭಾರತಗಳ ಮೇಲೆ ದಾಳಿಮಾಡಿದ ಇವರನ್ನು ಬಿಳಿಯ ಹೂಣರು ಅಥವಾ ಎಫ್ತಲೈಟ್ಸ್ ಎಂದು ಕರೆಯಲಾಗಿದೆ. ಮೊದಲು ಗಾಂಧಾರವನ್ನು ಆಕ್ರಮಿಸಿ ಅಲ್ಲಿಂದ ಪೂರ್ವಾಭಿಮುಖವಾಗಿ ಸರಿದು ಗುಪ್ತಸಾಮ್ರಾಜ್ಯವನ್ನು ಇವರು ಮುತ್ತಿದರು. ಕುಮಾರಗುಪ್ತನ ಕಾಲದಲ್ಲಿ ಆರಂಭವಾದ ಇವರ ದಾಳಿ ಸಂತರದ ಒಂದು ಶತಮಾನ ಕಾಲ ಉತ್ತರ ಭಾರತದ ರಾಜಕೀಯವನ್ನು ಕದಡಿತು. ರಾಜ್ಯದ ಆರ್ಥಿಕಪರಿಸ್ಥಿತಿ ಹದಗೆಡುವಷ್ಟರ ಮಟ್ಟಿಗೆ ಇವರ ದಾಳಿ ತೀವ್ರಸ್ವರೂಪ ತಾಳಿತ್ತು. ಸ್ಕಂದಗುಪ್ತನ ಚಿನ್ನದ ನಾಣ್ಯಗಳು ದೊರೆತಿರುವುದು ಬಹು ವಿರಳವಾಗಿ. ಅವುಗಳಲ್ಲಿನ ಪರಿಶುದ್ಧತೆ ಸಹ ಕಡಿಮೆ.

ಈ ಹೂಣರು ಯೂರೋಪ್‌ಖಂಡದಲ್ಲಿಯೂ ತಮ್ಮ ಕೈವಾಡವನ್ನು ತೋರಿಸಿದ್ದರು. ವಿಖ್ಯಾತವಾದ ರೋಂ ಸಾಮ್ರಾಜ್ಯ ಇವರ ಹೊಡೆತಕ್ಕೆ ತತ್ತರಿಸಿ ಕುಸಿದುಬಿದ್ದಿತು. ಇಂತಹವರನ್ನು ಅತಿ ಪ್ರಯಾಸದಿಂದಲಾದರೂ ತಡೆ ಹಿಡಿದು ರಾಜ್ಯಕ್ಕೆ ಉಳಿಸಿಕೊಂಡುದು ಸ್ಕಂದಗುಪ್ತನ ಸಾಮರ್ಥ್ಯಕ್ಕೆ ಸಾಕ್ಷಿ. ಎಂತಲೇ ಈತ ವಿಕ್ರಮಾದಿತ್ಯನೆಂಬ ಸಾರ್ಥಕವಾದ ಬಿರುದನ್ನು ಧರಿಸಿದನು. ಸೋಮದೇವನ 'ಕಥಾಸರಿತ್ಸಾಗರ'ದಲ್ಲಿ ಉಜ್ಜಯಿನಿಯ ಅರಸನಾದ ಮಹೇಂದ್ರಾದಿತ್ಯನ ಮಗ ವಿಕ್ರಮಾದಿತ್ಯ ಪ್ರಪಂಚವನ್ನೇ ತಲೆಕೆಳಗು ಮಾಡುತ್ತಿದ್ದ ಹೂಣರೆಂಬ ಮ್ಲೇಚ್ಛರನ್ನು ಸೋಲಿಸಿದ ಕತೆಯೊಂದಿದೆ. ಇದು ಸ್ಕಂದಗುಪ್ತನ ಸಾಧನೆಯ ಪ್ರತಿಧ್ವನಿ ಎನಿಸುತ್ತದೆ. ಇಂತಹ ವಿಪತ್ಕಾಲದಲ್ಲಿಯೂ ಪ್ರಜೆಗಳ ಕ್ಷೇಮಚಿಂತನೆಯನ್ನು ಅರಸನು ಮಾಡುತ್ತಿದ್ದ. ಜುನಾಗಢದಲ್ಲಿ ದೊರೆತ, ಈ ಮೊದಲೇ ಹೇಳಲಾದ ಶಾಸನದಲ್ಲಿ ಅರಸನ ಪ್ರಾಂತಾಧಿಕಾರಿಯಾಗಿದ್ದ ಪರ್ಣದತ್ತ ಮತ್ತು ಆತನ ಮಗ ಚಕ್ರಪಾಲಿತ ಮುರಿದುಬಿದ್ದಿದ್ದ ಸುದರ್ಶನ ಕೆರೆಯ ಜೀರ್ಣೋದ್ಧಾರಕ್ಕೆ ಸೂಕ್ತವಾದ ಏರ್ಪಾಡುಗಳನ್ನು ಮಾಡಿದರು. ಸ್ಕಂದಗುಪ್ತನ ಆಳಿಕೆಯ ಕಾಲ ಭಾರತದ ಇತಿಹಾಸದಲ್ಲಿ ಒಂದು ಪರ್ವಕಾಲವೆನ್ನಬಹುದು.

ಸ್ಕಂದಗುಪ್ತನ ಬಳಿಕ (೪೬೭) ಆಳಿದ ಗುಪ್ತ ಅರಸರ ವಿಷಯ ಹೆಚ್ಚಾಗಿ ತಿಳಿಯದು. ಮಲಸಹೋದರ ಪುರುಗುಪ್ತ ಸ್ಕಂದಗುಪ್ತನ ಉತ್ತರಾಧಿಕಾರಿ, ಅನಂತಾದೇವಿಯ ಪುತ್ರ. ಬುಧಗುಪ್ತ ಮತ್ತು ನರಸಿಂಹಗುಪ್ತ ಈತನ ಮಕ್ಕಳು. ಇವರು ಕ್ರಮವಾಗಿ ಆಳಿದರೆಂಬುದರಲ್ಲಿ ಸಂದೇಹವಿಲ್ಲದಿದ್ದರೂ ಇವರಿಗೂ ೪೭೭ರಲ್ಲಿ ಆಳುತ್ತಿದ್ದ ಕುಮಾರಗುಪ್ತನೆಂಬುವನಿಗೂ ನಡುವಣ ಬಾಂಧವ್ಯವೆಂತಹದೋ ತಿಳಿಯದಾಗಿದೆ. ಸ್ಕಂದಗುಪ್ತನ ಮಗನಾಗಿರಬಹುದೆಂಬುದೊಂದು ಊಹೆ. ೪೭೭ರಲ್ಲಿ ಪಟ್ಟಕ್ಕೆ ಬಂದ ಬುಧಗುಪ್ತ ಚಂದ್ರಾದೇವಿಯ ಮಗ. ಮೇಲ್ನೋಟಕ್ಕೆ ಇವನ ರಾಜ್ಯ ಸುಭದ್ರವೆನಿಸಿದ್ದರೂ ಸಾಮಂತರು ಸ್ವತಂತ್ರರಾಗುವ ಸನ್ನಾಹದಲ್ಲಿದ್ದರು. ಗುಜರಾತಿನ ವಲಭಿಯಲ್ಲಿದ್ದ ಮೈತ್ರಕ ವಂಶದವರು, ಬುಂದೇಲಖಂಡದ ಪರಿವ್ರಾಜಕ ವಂಶದ ಹಸ್ತಿ, ಸಮೀಪದಲ್ಲಿ ಪಾಂಡು

ವಂಶದ ಉದಯನ, ಮಾಹಿಷ್ಮತಿಯ ಸುಬಂಧು, ಉಚ್ಚಕಲ್ಪದ ಜಯನಾಥ, ಅಲಹಾಬಾದ್ ಸುತ್ತಲಿನ ಪ್ರದೇಶದಲ್ಲಿದ್ದ ಮಹಾರಾಜ ಲಕ್ಷ್ಮಣ—ಇವರೆಲ್ಲ ಬುಧಗುಪ್ತನ ಸಮಕಾಲೀನರು. ಇವರ ಶಾಸನಗಳಲ್ಲಿ ಇವರನ್ನು ಸ್ವತಂತ್ರ ಅರಸರೆಂದಿದೆ. ಗುಪ್ತರನ್ನು ಇವರು ಸಾಮ್ರಾಟರೆಂದು ಹೇಳಿಕೊಂಡಿಲ್ಲ. ಕೋಸಲ ಮತ್ತು ಮಾಳವದೇಶಗಳು ಈಗ ವಾಕಾಟಕ ನರೇಂದ್ರಸೇನನ ವಶದಲ್ಲಿದ್ದುವು. ಕುಮಾರಗುಪ್ತನ ಮರಣಾನಂತರ ಸಿಂಹಾಸನಕ್ಕಾಗಿ ನಡೆದ ದಾಯಾದಿ ಮಾತ್ಸರ್ಯಗಳು, ಆಂತರಿಕ ಕಲಹಗಳು ಗುಪ್ತರ ಶಕ್ತಿಯನ್ನು ಇನ್ನಷ್ಟು ಕುಗ್ಗಿಸಿದುವು. ಈ ಅಂತಃಕಲಹಗಳು ಬುಧಗುಪ್ತನ ನಂತರ ಹೆಚ್ಚಿದುವು. ಹೂಣರು ಈ ವೇಳೆಗೆ ತಮ್ಮ ದಾಳಿಗಳನ್ನು ತೀವ್ರಗೊಳಿಸಿದರು. ಪರಿಣಾಮವಾಗಿ ಗುಪ್ತಸಾಮ್ರಾಜ್ಯ ಸುಮಾರು ೫೭೦ರ ವೇಳೆಗೆ ಅಸ್ತಂಗತವಾಯಿತು.

ಸ್ಕಂದಗುಪ್ತನಿಂದ (೪೬೦) ಸೋಲಿಸಲ್ಪಟ್ಟ ಹೂಣರು ಪರ್ಷಿಯಾದೇಶದ ಅರಸನನ್ನು ಸೋಲಿಸಿ ಅಲ್ಲಿ ನೆಲಸಿದರು. ಬಾಲ್ಖ್ ನಗರ ಇವರ ರಾಜಧಾನಿಯಾಯಿತು. ಕ್ರಿ.ಶ. ೬ನೆಯ ಶತಮಾನದ ಮೊದಲ ವರ್ಷಗಳಲ್ಲಿ ಗಾಂಧಾರದಲ್ಲಿ ಆಳುತ್ತಿದ್ದ ಹೂಣರಿಗೆ ಸಂಬಂಧಿಸಿದ ತೋರಮಾನನು ಪಶ್ಚಿಮ ಭಾರತದ ಬಹುಭಾಗಗಳನ್ನೂ, ಮಧ್ಯಪ್ರದೇಶದ ಏರಾಣ ನಗರದವರೆಗಿನ ಪ್ರದೇಶಗಳನ್ನೂ ಆಕ್ರಮಿಸಿದನು. ಉತ್ತರಪ್ರದೇಶ, ರಾಜಸ್ಥಾನ, ಪಂಜಾಬ್ ಮತ್ತು ಕಾಶ್ಮೀರಗಳಲ್ಲಿ ಇವನ ಬೆಳ್ಳಿಯ ನಾಣ್ಯಗಳು ದೊರೆತಿವೆ. ಆದ್ದರಿಂದ ಆ ಪ್ರದೇಶಗಳ ಕೆಲಭಾಗಗಳಾದರೂ ಇವನ ವಶದಲ್ಲಿದ್ದಿರಬಹುದೆಂದು ಇದು ಸೂಚಿಸುತ್ತದೆ.

ತೋರಮಾನನ ಮಗ ಮಿಹಿರಗುಲ. ೫೧೫ರಲ್ಲಿ ಪಟ್ಟಕ್ಕೆ ಬಂದ ಈತನನ್ನು ಚೀನಾ ಯಾತ್ರಿಕನಾದ ಹುಯೆನ್‌ತ್ಸಾಂಗ್ ತನ್ನ ಬರವಣಿಗೆಯಲ್ಲಿ ಪ್ರಸ್ತಾಪಿಸಿದ್ದಾನೆ. ಸಾಕಲ (Sialkot) ಇವನ ರಾಜಧಾನಿ. ಈತ ಕ್ರೂರಿ; ಛಲವಾದಿ. ಇದೇ ಮಾತನ್ನು ಸು. ೫೪೭ರ ವೇಳೆಗೆ ಅಂತಿಮವಾಗಿ ಸಿದ್ಧಪಡಿಸಲಾದ Christian Topography ಎಂಬ ಗ್ರಂಥದ ಕರ್ತೃ ಕಾಸ್ಮಸ್ ಆಡಿದ್ದಾನೆ. ಗೊಲ್ಲಾಸ್ ಎಂದು ಮಿಹಿರಗುಲನನ್ನು ಕರೆದಿದ್ದಾನೆ. ಭಾರತದ ಅನೇಕ ಭಾಗಗಳು ಇವನ ಅಧೀನದಲ್ಲಿದ್ದುವು. ಗ್ವಾಲಿಯರ್ ಸಮೀಪದಲ್ಲಿನ ಶಾಸನವೊಂದರ ಆಧಾರದ ಮೇಲೆ ಇವನ ರಾಜ್ಯ ಅಲ್ಲಿಯವರೆಗೆ ವಿಸ್ತರಿಸಿತ್ತೆನ್ನಬಹುದು. ಇವನ ಸಮಕಾಲೀನನಾದ ನರಸಿಂಹಗುಪ್ತ ಬಾಲಾದಿತ್ಯನು ಇವನಿಂದ ಅವಮಾನಿತನಾಗಿ ಇವನಿಗೆ ಕಪ್ಪವನ್ನು ಸಲ್ಲಿಸಬೇಕಾಯಿತು. ಔಲಿಕ ವಂಶಕ್ಕೆ ಸೇರಿದ ಮಾಲವದ ಯಶೋಧರ್ಮ ಸಹ ಗುಪ್ತ ಅರಸನ ಮೇಲೆ ಎರಗಿದನು. ಹೀಗೆ ಶತ್ರುಗಳಿಂದ ಪರಾಜಿತನಾದರೂ ಎದೆಗುಂದದ ಬಾಲಾದಿತ್ಯನು ಚೇತರಿಸಿಕೊಂಡು ಮಿಹಿರಗುಲನನ್ನು ಎದುರಿಸಿ ಸೋಲಿಸಿದನು. ಇದರಲ್ಲಿ ಇವನಿಗೆ ಇವನ ಸಮಕಾಲೀನನಾಗಿದ್ದ ಮೌಖಾರಿ ಈಶಾನವರ್ಮನು ನೆರವು ನೀಡಿದನು. ಇತ್ತ ಯಶೋಧರ್ಮನು ಸಹ ಮಿಹಿರಕುಲನನ್ನು ಸೋಲಿಸಿ ಮಾಲವದೇಶವನ್ನು ಮುಕ್ತಗೊಳಿಸಿದನು. ಇದು ಯಶೋಧರ್ಮನಿಗೆ ಖ್ಯಾತಿಯನ್ನು ತಂದಿತು. ಆದರೆ ಇವೆಲ್ಲಕ್ಕಿಂತಲೂ

ಮಿಗಿಲಾದುದು ಹೂಣರು ತಮ್ಮ ಕೇಂದ್ರಸ್ಥಾನವಾದ ಆಕ್ಸಸ್‌ಕೊಳ್ಳದಲ್ಲಿ ತುರುಷ್ಕರಿಂದ ಮತ್ತು ಪರ್ಷಿಯನರಿಂದ ಪಡೆದ ಮಿಂಚಿನ ಹೊಡೆತ. ಇದು ಹೂಣರ ಪ್ರಾಬಲ್ಯಕ್ಕೆ ಸಂಚು ತಂದಿತು. ಮಿಹಿರಗುಲನ ಮರಣದೊಂದಿಗೆ ಭಾರತದಲ್ಲಿ ಹೂಣರ ಹಾವಳಿ ತಪ್ಪಿತು.

## ೬ನೆಯ ಶತಮಾನದನಂತರ ಉತ್ತರ ದಕ್ಷಿಣ ರಾಜ್ಯಗಳು

ಮತ್ತೊಮ್ಮೆ ಸುಮಾರು ಎರಡು ಶತಮಾನಗಳ ಕಾಲ ಉತ್ತರ ಭಾರತದಲ್ಲಿ ಸಣ್ಣ ಸಣ್ಣ ಅರಸು ಮನೆತನಗಳು ತಲೆಯೆತ್ತಿದುವು. ಇವರು ಮೊದಲು ಗುಪ್ತರ ಅಧೀನದಲ್ಲಿದ್ದವರು. ದಕ್ಷಿಣ ಬಿಹಾರ ಮತ್ತು ಉತ್ತರ ಪ್ರದೇಶಗಳಲ್ಲಿ ಬುಧಗುಪ್ತನ ನಂತರ ಕ್ಷೀಣಿಸಿದ ಗುಪ್ತರ ಅಸಹಾಯಕಸ್ಥಿತಿಯ ಪ್ರಯೋಜನ ಪಡೆದು ಸ್ವತಂತ್ರರಾದವರು ಮೌಖರಿಗಳು. ಇವರಲ್ಲಿ ನಾಲ್ಕನೆಯ ಅರಸನಾದ ಈಶಾನವರ್ಮನು ಮಹಾರಾಜಾಧಿರಾಜನೆನಿಸಿಕೊಂಡನು. ೫೫೪ರಲ್ಲಿ ಇವನು ಸ್ವತಂತ್ರನಾಗಿ ಆಳುತ್ತಿದ್ದುದು ತಿಳಿದಿದೆ. ಈ ಮನೆತನದ ಅವಮಾತ್ಯವರ್ಮನನ್ನು ಬಾಣಭಟ್ಟನು 'ಹರ್ಷ ಚರಿತ'ದಲ್ಲಿ ಮೌಖರಿ ವಂಶದ ಹೆಮ್ಮೆ ಎಂದು ಬಣ್ಣಿಸಿದ್ದಾನೆ. ಗುಪ್ತರ ಸಂಬಂಧಿಕರೂ ಅವರ ವಂಶದ ಒಂದು ಬಳ್ಳಿಗೆ ಸೇರಿದವರೂ ಆದ ಮಗಧದ ಗುಪ್ತರ ಮೂಲಪುರುಷ ಕೃಷ್ಣಗುಪ್ತ. ಇವನಿಗೂ ಮೂಲ ಗುಪ್ತ ಅರಸರಿಗೂ ನಡುವಣ ಸಂಬಂಧದ ಬಗೆಗೆ ಭಿನ್ನಾಭಿಪ್ರಾಯಗಳಿವೆ. ಇವನ ನಂತರದ ೩ನೆಯ ತಲೆಮಾರಿನ ಅರಸ ಕುಮಾರಗುಪ್ತ. ಈತನು ಮೌಖರಿ ಈಶಾನವರ್ಮನನ್ನು ಸೋಲಿಸಿದನು. ಆದರೆ ಪ್ರಯಾಗದವರೆಗೂ ಸೈನ್ಯದೊಡನೆ ಮುಂದುವರಿದ ಈತನು ಅಲ್ಲಿ ಮೃತನಾದನು. ಆಗ ಇವನ ಮಗ ದಾಮೋದರಗುಪ್ತನು ಇನ್ನೊಮ್ಮೆ ಮೌಖರಿಗಳನ್ನು ಸೋಲಿಸಿದನು. ಈತನ ಮಗ ಮಹಾಸೇನಗುಪ್ತನು ಮಾಲವದಿಂದ ಕಾಮರೂಪದವರೆಗೂ ತನ್ನ ರಾಜ್ಯವನ್ನು ವಿಸ್ತರಿಸಿದನು. ಆದರೆ ಆಳಿಕೆಯ ಅಂತಿಮ ವರ್ಷಗಳಲ್ಲಿ ವಲಭಿಯ ಶೀಲಾದಿತ್ಯ, ಕಲಚುರಿ ಶಂಕರಗಣರು ಮಾಲವ, ಉಜ್ಜಯಿನಿ ಮುಂತಾದ ಪ್ರದೇಶಗಳನ್ನು ಇವನಿಂದ ಕಸಿದುಕೊಂಡರು. ಮಹಾಸೇನನ ಸಾಮಂತನಾಗಿದ್ದ ಶಶಾಂಕನು ಗೌಡದೇಶಾಧಿಪತಿಯಾದನು. ಇವನ ಇಬ್ಬರು ಮಕ್ಕಳಾದ ಕುಮಾರಗುಪ್ತ–ಮಾಧವಗುಪ್ತರು ಥಾನೇಶ್ವರದ ಪ್ರಭಾಕರವರ್ಧನನ ಆಸರೆಯನ್ನು ಪಡೆದರು.

ಉತ್ತರ ಮತ್ತು ಪಶ್ಚಿಮ ಬಂಗಾಲದ ಭಾಗಗಳು ಸೇರಿದಂತಹ ಪ್ರದೇಶ ಗೌಡದೇಶವೆನಿಸಿಕೊಂಡಿತ್ತು. ಈ ಪ್ರದೇಶದಲ್ಲಿ ಸ್ವತಂತ್ರವಾಗಿ ಆಳತೊಡಗಿದ ಶಶಾಂಕನು ದಂಡಭುಕ್ತಿ, ಉತ್ಕಲ ಮತ್ತು ಕೊಂಗೋಡ (ಈಗಿನ ಮಿಡ್ನಾಪುರ, ಉತ್ತರ ಮತ್ತು ದಕ್ಷಿಣ ಒರಿಸ್ಸಾ)ಗಳಲ್ಲಿದ್ದ ಮಾಂಡಲೀಕರನ್ನು ಅಧೀನಪಡಿಸಿಕೊಂಡನು. ಮಹೇಂದ್ರಗಿರಿಯನ್ನೊಳಗೊಂಡ ದಕ್ಷಿಣ ಒರಿಸ್ಸಾದ ಗಂಜಾಂ ಜಿಲ್ಲೆಯವರೆಗೆ ತನ್ನ ರಾಜ್ಯವನ್ನು ವಿಸ್ತರಿಸಿದನು. ಈತನು ಪ್ರಭಾಕರವರ್ಧನನ ಸಮಕಾಲೀನ.

ವಲಭಿಯ ಮೈತ್ರಕರ ಮೊದಲ ಅರಸ ಭಟಾರ್ಕ. ಗುಪ್ತರ ಅಧೀನದಲ್ಲಿ ಪ್ರಾಂತಾಧಿ

ಕಾರಿಯಾಗಿದ್ದ ಈತನು, ಈತನ ಮಗ ಧರಸೇನನು ಸಹ ಸೇನಾಪತಿಗಳೆಂದೇ ಕರೆಯಲ್ಪಟ್ಟಿದ್ದಾರೆ. ಇವರ ಸಂತರದವರು ಮಹಾರಾಜನೆನಿಸಿಕೊಂಡರು. ವಲಭಿ (ಗುಜರಾತಿನ ವಲ) ಇವರ ರಾಜಧಾನಿ. ಈ ಮನೆತನದ ಶೀಲಾದಿತ್ಯನನ್ನು ಹ್ಯುಯೆನ್ ತ್ಸಾಂಗ್ ಹೆಸರಿಸಿದ್ದಾನೆ; ಮೊ-ಲ-ಪೊ (Mo-La-Po)ದ ಅರಸನಾಗಿದ್ದ ಶೀಲಾದಿತ್ಯನು ದಕ್ಷ ಆಡಳಿತಗಾರನಾಗಿದ್ದನೆಂದೂ ಪ್ರತಿವರ್ಷ ಬೌದ್ಧ ಸಮ್ಮೇಳನವನ್ನು ಏರ್ಪಡಿಸುತ್ತಿದ್ದನೆಂದೂ ಹೇಳಿ ಈತನನ್ನು ಧರ್ಮಾದಿತ್ಯನೆಂದು ವರ್ಣಿಸಿದ್ದಾನೆ.

ಕಲಚುರಿಗಳು ಹೈಹಯ ವಂಶದ ಕಾರ್ತವೀರ್ಯಾರ್ಜುನನ ಸಂತತಿಗೆ ಸೇರಿದವರೆಂದೂ ಮಾಹಿಷ್ಮತೀಪುರಾಧೀಶ್ವರರೆಂದೂ ನರ್ಮದಾತೀರದ ಅನೂಪ ರಾಷ್ಟ್ರದಲ್ಲಿ ಆಳುತ್ತಿದ್ದರೆಂದೂ ಶಾಸನಗಳ ಹೇಳಿಕೆ. ಇವರನ್ನು ಕಲತ್ಸೂರಿ, ಕಾಲಚ್ಚುರಿ, ಕಟಚ್ಚುರಿ ಎಂದೂ ಕರೆಯಲಾಗಿದ್ದು. ಈ ಹೆಸರಿನ ಆಧಾರದ ಮೇಲೆ ಹೂಣರಂತೆ, ಗೂರ್ಜರರಂತೆ ಇವರೂ ಹೊರಗಿನಿಂದ ಬಂದವರೆಂದು ಮಾಡಲಾದ ವಾದ ಸಹೇತುಕವಲ್ಲ. ಆರಂಭದಲ್ಲಿ ಕರ್ಣಾಟಕದ ಬಾದಾಮಿ ಚಾಲುಕ್ಯರ ಅರಸ ಮಂಗಲೇಶನಿಂದ ಸೋಲಿಸಲ್ಪಟ್ಟು ಗೂರ್ಜರರು ಮತ್ತು ಮೈತ್ರಕರಿಂದ ತೊಂದರೆಗೀಡಾಗಿದ್ದ ಇವರು ಕೊನೆಗೊಮ್ಮೆ ಮಧ್ಯಪ್ರದೇಶದ ಜಬ್ಬಲ್‌ಪುರದ ಸುತ್ತಲಿನ ಪ್ರದೇಶದಲ್ಲಿ ನೆಲಸಿದರು.

ದಖನ್ ಪ್ರದೇಶದಲ್ಲಿ ಸಾತವಾಹನರ ಉತ್ತರಾಧಿಕಾರಿಗಳಾಗಿ ಈಗ ವಾಕಾಟಕರು ಆಳುತ್ತಿದ್ದರು. ಸಾತವಾಹನರ ಸಾಮಂತರಾಗಿದ್ದ ಇಕ್ಷ್ವಾಕು, ಚುಟು, ಆಭೀರರು ಕರ್ಣಾಟಕ, ಗುಂಟೂರು ಮತ್ತು ಬೆಜವಾಡ ಜಿಲ್ಲೆಗಳಲ್ಲಿ ಕೆಲಕಾಲ ಅಧಿಕಾರದಲ್ಲಿದ್ದರು. ಆದರೆ ಇವರು ವಾಕಾಟಕರಷ್ಟು ಪ್ರಾಬಲ್ಯಕ್ಕೆ ಬರಲಿಲ್ಲ. ವಾಕಾಟಕರ ಮೂಲಸ್ಥಾನ, ಆರಂಭದ ಅರಸರು ಮುಂತಾದವು ವಿವಾದಾಸ್ಪದ. ಈಗ ತಿಳಿದಂತೆ ಮೊದಲ ಅರಸ ವಿಂಧ್ಯಶಕ್ತಿ (ಸು. ೨೫೫–೭೫). ಇವರ ಶಾಸನಗಳು ಅರಸರ ಆಳಿಕೆಯ ವರ್ಷಗಳನ್ನೇ ಸೂಚಿಸುತ್ತವೆ. ಈಚೆಗೆ (೧೯೬೨–೬೩) ದೊರೆತ ಹಿಸ್ಸೆಬೊರಾಲ ಎಂಬಲ್ಲಿ ವಾಕಾಟಕ ದೇವಸೇನನ ಶಾಸನದಲ್ಲಿ ಪ್ರಥಮಬಾರಿಗೆ ಶಕಕಾಲದ ೩೮೦ನೆಯ ವರ್ಷದ ಉಲ್ಲೇಖ ಇದೆ. (ಬಾದಾಮಿಯ ಪುಲಕೇಶಿಯ ಶಕ ೪೬೫ನೆಯ ವರ್ಷದ ಶಾಸನ ವರೆಗೂ ಲಭ್ಯವಿದ್ದ ಅತಿಪ್ರಾಚೀನ ಶಕಸಂವತ್ಸರದ ಉಲ್ಲೇಖವಾಗಿತ್ತು.)

ವಿಂಧ್ಯಶಕ್ತಿಯ ಮಗ ಪ್ರವರಸೇನ. ಸಮ್ರಾಟ್ ಎಂಬ ಬಿರುದನ್ನು ಧರಿಸಿದ ಈತ ೩ ವಾಜಪೇಯ ಮತ್ತು ೪ ಅಶ್ವಮೇಧಯಾಗಗಳನ್ನು ಮಾಡಿದನೆಂದು ಪುರಾಣಗಳಲ್ಲಿ ಹೇಳಿದೆ. ಇದು ಈತ ರಾಜ್ಯವನ್ನು ವಿಸ್ತರಿಸಿದನೆಂಬುದನ್ನು ಸೂಚಿಸುತ್ತದೆ. ಈ ರಾಜ್ಯವನ್ನು ನಾಲ್ಕು ಪ್ರಾಂತಗಳಾಗಿ ವಿಂಗಡಿಸಿ ತನ್ನ ಮಕ್ಕಳನ್ನು ಅವುಗಳ ಅಧಿಕಾರಿಗಳನ್ನಾಗಿ ನಿಯಮಿಸಿದ. ಇವನ ನಂತರ ಅವರು ಆಯಾ ಪ್ರಾಂತಗಳಲ್ಲಿ ಸ್ವತಂತ್ರರಾದರು. ಬಾಸೀಮ್‌ನಲ್ಲಿ ಎರಡನೆಯ ಮಗ ಸರ್ವಸೇನ ಸ್ವತಂತ್ರವಾಗಿ ಆಳತೊಡಗಿದ. ಪ್ರವರಸೇನನ ಮೊಮ್ಮಗ ರುದ್ರಸೇನ. ಈತನ ತಾಯಿ ಪದ್ಮಾವತಿಯ ನಾಗಕುಲದ ಭವನಾಗನ ಮಗಳು, ಗೌತಮೀಪುತ್ರನ ಪತ್ನಿ. ಶಾಸನಗಳು ಈ ಸಂಬಂಧವನ್ನು ಮೇಲಿಂದ ಮೇಲೆ

ಸ್ಮರಿಸಿವೆ. ಬಹುಶಃ ಮಾತಾಮಹನು ರುದ್ರಸೇನನಿಗೆ ಕಷ್ಟಕಾಲದಲ್ಲಿ ಬೆನ್ನೆಲುಬಾಗಿ ಸಹಾಯ ಮಾಡಿರಬಹುದು. ರುದ್ರಸೇನನ ಮಗ ಪೃಥ್ವೀಸೇನ. ಈತನು ಬಾಸಿಮ್ ಶಾಖೆಯ ವಿಂಧ್ಯಸೇನನು ಕುಂತಲದೇಶವನ್ನು ಮುತ್ತಲು ಸಹಾಯಮಾಡಿದನು. ಈ ಕುಂತಲಾಧಿಪ ಕದಂಬ ಕಂಗವರ್ಮ. ಇದರಿಂದ ವಾಕಾಟಕರ ಖ್ಯಾತಿ ಹಬ್ಬಿತು. ಗುಪ್ತರ ಇಮ್ಮಡಿ ಚಂದ್ರಗುಪ್ತ ತನ್ನ ಮಗಳಾದ ಪ್ರಭಾವತೀಗುಪ್ತಳನ್ನು ಇಮ್ಮಡಿ ರುದ್ರಸೇನನಿಗೆ ಲಗ್ನಮಾಡಿಕೊಟ್ಟನು. ಈ ವಿಷಯ ಮೊದಲೇ ಹೇಳಿದೆ. ಈಕೆಯ ಎರಡನೆಯ ಮಗ ದಾಮೋದರಸೇನ. ಹಿರಿಯ ಮಗನಾದ ದಿವಾಕರನೂ ಅಲ್ಪಾಯುಷಿಯೇ ಆದನು. ಎಂತಲೇ ರಾಜ್ಯ ಕಿರಿಯನ ಪಾಲಾಯಿತು. ಈತನು ಪಟ್ಟಾಭಿಷೇಕ ಸಮಯದಲ್ಲಿ ಪ್ರವರಸೇನ (II) ಎಂದು ಹೊಸ ಹೆಸರನ್ನು ಧರಿಸಿದನು. ಮಹಾರಾಷ್ಟ್ರೀಪ್ರಾಕೃತ ಭಾಷೆಯ 'ಸೇತುಬಂಧ' ಕಾವ್ಯದ ಕರ್ತೃ ಈತ. ಕಾಳಿದಾಸ ಕವಿ ಈ ಕಾವ್ಯವನ್ನು ತಿದ್ದಿದನೆಂಬ ಪ್ರತೀತಿ ಇದೆ. ಈತನ ಮಗ ನರೇಂದ್ರಸೇನನು ಕದಂಬ ಕಾಕುತ್‌ಸ್ಥವರ್ಮನ ಮಗಳಾದ ಅಜ್ಝಿತಭಟ್ಟಾರಿಕೆಯನ್ನು ಮದುವೆಯಾದನು. ಮೂಲ ವಾಕಾಟಕ ಮನೆತನದ ಕೊನೆಯ ಅರಸ ಇಮ್ಮಡಿ ಪೃಥ್ವೀಸೇನ. ಈತನ ನಂತರ ಇವನ ರಾಜ್ಯ ವತ್ಸಗುಲ್ಮಶಾಖೆಯ ಹರಿಸೇನನಿಗೆ ಸೇರಿತು. ಹರಿಸೇನ ವಾಕಾಟಕ ಮನೆತನದ ಪ್ರಮುಖ ಅರಸ. ಮೂಲ ಮನೆತನಗಳ ರಾಜ್ಯವನ್ನೇ ಅಲ್ಲದೆ ಗುಜರಾತ್, ಮಾಲವ, ದಕ್ಷಿಣ ಕೋಸಲ, ಆಂಧ್ರ, ಕುಂತಲಗಳು ಇವನ ಪ್ರಭಾವಕ್ಕೊಳಪಟ್ಟುವು. ಮಾಲವ ಬಹುಶಃ ಇವನ ರಾಜ್ಯಕ್ಕೆ ಸೇರಿರಬಹುದು. ಆರನೆಯ ಶತಮಾನದ ಮಧ್ಯಭಾಗದಲ್ಲಿ ವಾಕಾಟಕ ಮನೆತನ ಅಳಿಯಿತು.

ಗುಪ್ತರ ಸಮಕಾಲೀನರಾಗಿ ಕರ್ಣಾಟಕದಲ್ಲಿ ಕದಂಬರೂ ದಕ್ಷಿಣ ಭಾರತದಲ್ಲಿ ಪಲ್ಲವರೂ ಆಳಿದರು. ಪಲ್ಲವ ಮತ್ತು ಪಹ್ಲವ ಎಂಬ ಶಬ್ದಗಳ ಸಾಮ್ಯದಿಂದ ಪಲ್ಲವರು ಪಾರ್ಥಿಯನರೆಂದು ಒಂದು ವಾದವಿದ್ದಿತು. ಇದಕ್ಕೆ ಈಗ ಅಂತಹ ಮನ್ನಣೆ ದೊರೆತಿಲ್ಲ. ಇವರು ಉತ್ತರ ಭಾರತದಿಂದ ದಕ್ಷಿಣಕ್ಕೆ ಬಂದವರೆಂಬ ವಾದದಲ್ಲಿಯೂ ಹೆಚ್ಚಿನ ಹುರುಳಿಲ್ಲ. ಆರಂಭದಿಂದಲೂ ಇವರ ರಾಜಧಾನಿ ಕಾಂಚೀಪುರ. ಮೂಲತಃ ಇವರು ಅದೇ ಪ್ರದೇಶದವರಿರಬೇಕು. ಬಹುಶಃ ಸಾತವಾಹನರ ಸಾಮಂತರಾಗಿದ್ದ ಇವರು ಕ್ರಮೇಣ ದಕ್ಷಿಣ ಭಾರತದಲ್ಲಿ ಅವರ ಉತ್ತರಾಧಿಕಾರಿಗಳಾದರು. ಇವರ ಮೊದಲ ಕೆಲವು ಶಾಸನಗಳು ಕರ್ಣಾಟಕದ ಬಳ್ಳಾರಿ ಜಿಲ್ಲೆ ಮತ್ತು ಆಂಧ್ರಪ್ರದೇಶಗಳಲ್ಲಿ ದೊರೆತದ್ದರಿಂದ ಒಮ್ಮೆ ಸಾತವಾಹನರಿಗೆ ಸೇರಿದ್ದ ಆ ಪ್ರದೇಶಗಳು ಇವರ ಅಧೀನಕ್ಕೆ ಬಂದುವೆಂದು ಊಹಿಸಬಹುದು. ಆದರೆ ಕರ್ಣಾಟಕದಲ್ಲಿಯೇ ಕದಂಬ ಮತ್ತು ಚಾಲುಕ್ಯ ಮನೆತನಗಳು ತಲೆಯೆತ್ತಿದಾಗ ಇವರ ಅಧಿಕಾರ ದಕ್ಷಿಣದ ಪ್ರದೇಶಕ್ಕೆ ಸೀಮಿತಗೊಳ್ಳಬೇಕಾಯಿತು.

ಉಪಲಬ್ಧವಿರುವ ಆಧಾರಗಳ ಮೇಲೆ ಪಲ್ಲವ ಅರಸರನ್ನು ಪ್ರಾಕೃತ ಶಾಸನಗಳ ಪಲ್ಲವರು, ಸಂಸ್ಕೃತ ಶಾಸನಗಳ ಪಲ್ಲವರು ಹಾಗೂ ನಂತರದ ಪಲ್ಲವರು ಎಂದು ಮೂರು ಗುಂಪುಗಳಾಗಿ ವಿಂಗಡಿಸಿದೆ. ಮೊದಲ ಗುಂಪಿನ ಮೊದಲ ಅರಸ ಶಿವಸ್ಕಂದ

ವರ್ಮ. ೪ನೆಯ ಶತಮಾನದ ಆದಿಭಾಗಕ್ಕೆ ಸೇರಿದ ಇವನ ಮೂರು ತಾಮ್ರಶಾಸನಗಳು ದೊರೆತಿವೆ. ಧರ್ಮಮಹಾರಾಜನೆನಿಸಿದ ಈತ ಅಗ್ನಿಷ್ಟೋಮಾದಿ ಯಜ್ಞಗಳನ್ನು ಮಾಡಿದನು. ತಂದೆ ಸಿಂಹವರ್ಮ. ಮಗ ಬುದ್ಧವರ್ಮ. ಮೊಮ್ಮಗ ಬುದ್ಧ್ಯಂಕುರ

ಇವರ ನಂತರ ಪಲ್ಲವರ ಉಲ್ಲೇಖ ನಮಗೆ ಸಿಗುವುದು ಸಮುದ್ರಗುಪ್ತನ ಅಲಹಾಬಾದ್ ಪ್ರಶಸ್ತಿಯಲ್ಲಿಯೇ. ಅವರಲ್ಲಿ ಉಕ್ತವಾದ ಕಾಂಚೀಯ ವಿಷ್ಣುಗೋಪ ಪಲ್ಲವ ಮನೆತನಕ್ಕೆ ಸೇರಿದವನು. ಸಮುದ್ರಗುಪ್ತನಿಂದ ಸೋಲಿಸಲ್ಪಟ್ಟು ಅವನ ಸಾಮಂತನಾದನು.

೪ನೆಯ ಶತಮಾನದ ಉತ್ತರಾರ್ಧದ ತಾಮ್ರಶಾಸನಗಳು ಸಂಸ್ಕೃತಭಾಷೆಯಲ್ಲಿವೆ. ಅವುಗಳಿಂದ ಹತ್ತು ಅರಸರ ಹೆಸರುಗಳು ದೊರೆತಿವೆ. ಕುಮಾರವಿಷ್ಣು ಇವರಲ್ಲಿ ಪ್ರಥಮ. ಕೊನೆಯವನು ಅದೇ ಹೆಸರಿನ ಮೂರನೆಯವನು. ಇವನ ಕಾಲದಲ್ಲಿ ಕಳಭ್ರರೆಂಬ ಜನ ದಕ್ಷಿಣದ ರಾಜಕೀಯದಲ್ಲಿ ಅಲ್ಲೋಲಕಲ್ಲೋಲವನ್ನುಂಟುಮಾಡಿದರು. ಪಲ್ಲವರು ಇವರ ದಾಳಿಗಳಿಗೆ ತುತ್ತಾದರು. ನಂತರದ ಪಲ್ಲವರ ಚಿತ್ರ ನಮಗೆ ದೊರಕುವುದು ೬ನೆಯ ಶತಮಾನದಿಂದಲೇ.

## ಸುವರ್ಣಯುಗ

ಈ ಮೇಲೆ ನೀಡಲಾಗಿರುವುದು ಸು. ೬ನೆಯ ಶತಮಾನದವರೆಗಿನ ಭಾರತದ ರಾಜಕೀಯ ವಿದ್ಯಮಾನಗಳ ಹಕ್ಕಿನೋಟ. ಇದನ್ನು ಸುವರ್ಣಯುಗವೆಂದು ಕರೆಯಲಾಗಿದೆ. ಪ್ರಾಚೀನ ಗ್ರೀಕ್ ಇತಿಹಾಸದಲ್ಲಿನ ಪೆರಿಕ್ಲಿಸ್‌ನ ಯುಗದೊಂದಿಗೆ ಇದನ್ನು ಹೋಲಿಸಲಾಗಿದೆ. ಇದು ಭಾರತೀಯರ, ಹಿಂದುಧರ್ಮದ ಪುನರುಜ್ಜೀವನಕಾಲ. ನಮ್ಮ ಸಾಹಿತ್ಯ, ಕಲೆ ವಿಜ್ಞಾನಾದಿಗಳು ಈ ಹಿಂದೆ ಕುಂಠಿತವಾಗಿತ್ತೆಂದಲ್ಲ. ಆದರೆ ಈ ಕಾಲದಲ್ಲಿ ಭಾರತೀಯ ಸಂಸ್ಕೃತಿಯ ವ್ಯಾಪ್ತಿ ಹಬ್ಬಿ ದ್ವೀಪಾಂತರಗಳಲ್ಲಿಯೂ ತನ್ನ ಪ್ರಭಾವವನ್ನು ಬೀರಿತು. ಜೊತೆಗೆ ಪರಕೀಯ ಪ್ರಭಾವಕ್ಕೊಳಗಾಗಿದ್ದ ಅಂಶಗಳಲ್ಲಿ ಒಂದು ವಿಧವಾದ ನವೀಕರಣ, ಭಾರತೀಕರಣ ಈ ಯುಗದಲ್ಲಿ ಕಾಣಿಸಿಕೊಂಡಿತು.

ಈ ವೇಳೆಗೆ ಸಂಸ್ಕೃತ ದೇಶದ ಪ್ರಮುಖಭಾಷೆಯಾಗಿತ್ತು. ಪ್ರಾಕೃತ ಒಂದು ಪಂಥದವರಿಗೆ (ಜೈನರ) ಧಾರ್ಮಿಕ ಕಾರ್ಯಗಳಿಗೆ ಮಾತ್ರ ಸೀಮಿತವಾಗಿದ್ದಿತು. ಲಿಪಿಯಲ್ಲೂ ಬಹಳಮಟ್ಟಿನ ಸುಧಾರಣೆಗಳಾಗಿದ್ದುವು. ಬ್ರಾಹ್ಮಿಲಿಪಿಯಿಂದ ರೂಪುಗೊಂಡ ನಾಗರೀಲಿಪಿ ರೂಢಿಗೆ ಬಂದಿತು. ಸಾಹಿತ್ಯಕ್ಕೆ ರಾಜಾಶ್ರಯ ದೊರೆತು ವಿಪುಲವಾದ ಸಾಹಿತ್ಯಸೃಷ್ಟಿ ಈ ಕಾಲದಲ್ಲಿ ಆಯಿತು. ಕಾಳಿದಾಸ, ವಿಶಾಖದತ್ತ, ಭಾರವಿ, ದಂಡಿ, ಸುಬಂಧು, ಶೂದ್ರಕ ಮುಂತಾದ ಖ್ಯಾತ ಕವಿಗಳು ಈಗ ಆಗಿಹೋದರು. ಪುರಾಣಗಳು, ಧರ್ಮಶಾಸ್ತ್ರಗಳು ಈ ಕಾಲದಲ್ಲಿ ತಮ್ಮ ಈಗಿನ ರೂಪವನ್ನು ಪಡೆದುಕೊಂಡವು. ಶಬರನ ಪೂರ್ವಮೀಮಾಂಸಗಳ ಮೇಲಿನ ಭಾಷ್ಯ, ಈಶ್ವರಭಟ್ಟನ ಸಾಂಖ್ಯಕಾರಿಕೆ, ವಾತ್ಸ್ಯಾಯನ ಮತ್ತು ವ್ಯಾಸರ ಭಾಷ್ಯಗಳು ಈ ಕಾಲದವು. ಬೌದ್ಧಮತೀಯ

ಗ್ರಂಥಗಳಿಗೆ ಪಾಲೀಭಾಷೆಯಲ್ಲಿ ಬರೆಯಲಾದ ತ್ರಿಪಿಟಕಗಳ ಮೇಲಿನ ಟೀಕಾಗ್ರಂಥ ಬುದ್ಧಘೋಷನದು. ಸಿಂಹಳದ್ವೀಪದಲ್ಲಿ ಬೌದ್ಧಮತವನ್ನು ಅಭ್ಯಾಸಮಾಡಿದವನೀತ. ಪೆಷಾವರದ ಅಸಂಗನ ಕಿರಿಯ ಸೋದರ ವಸುಬಂಧು, ಮೂಲತಃ ದಕ್ಷಿಣದ ಕಾಂಚೀಪುರ ನಿವಾಸಿಯಾದ ವಸುಬಂಧುವಿನ ಶಿಷ್ಯ ದಿಙ್ನಾಗ, ಇವನ ಶಿಷ್ಯರಾದ ಶಂಕರಸ್ವಾಮಿ ಮತ್ತು ಧರ್ಮಪಾಲರು ಬೌದ್ಧಧರ್ಮಕ್ಕೆ ಸಂಬಂಧಿಸಿದ ಸಾಹಿತ್ಯಕಾರರು.

ವಿಜ್ಞಾನಶಾಸ್ತ್ರ ಈ ಕಾಲದಲ್ಲಿ ಹೆಚ್ಚು ಪ್ರೋತ್ಸಾಹ ಪಡೆಯಿತು. ವಾಗ್ಭಟನ ಅಷ್ಟಾಂಗಸಂಗ್ರಹ, ಪ್ರಾಣಿಶಾಸ್ತ್ರಕ್ಕೆ ಸಂಬಂಧಿಸಿದ ಹಸ್ತ್ಯಾಯುರ್ವೇದ ಮತ್ತು ಅಶ್ವಶಾಸ್ತ್ರ, ಆರ್ಯಭಟೀಯವೆಂಬ ಖಗೋಳಶಾಸ್ತ್ರಗ್ರಂಥ, ವರಾಹಮಿಹಿರನ ಬೃಹಜ್ಜಾತಕ ಈ ಕಾಲದ ಪ್ರಮುಖ ಗ್ರಂಥಗಳು. ಲೋಹಶಾಸ್ತ್ರದಲ್ಲಿ ಗಣನೀಯವಾದ ಅಭಿವೃದ್ಧಿಯಾಗದ್ದಿತೆಂದು ಕಂಡುಬರುತ್ತದೆ. ಇಂದಿಗೂ ತುಕ್ಕು ಹಿಡಿಯದ ಡೆಹಲಿಯ ಮೆಹರೌಲಿಯ ಕಬ್ಬಿಣದ ಕಂಬ ಇದಕ್ಕೆ ಸಾಕ್ಷಿಯಾಗಿದೆ. ಈಗ ಬರ್ಮಿಂಗ್‌ಹ್ಯಾಂನ ವಸ್ತುಸಂಗ್ರಹಾಲಯದಲ್ಲಿರುವ ತಾಮ್ರದ ಬುದ್ಧವಿಗ್ರಹ ಎರಡಚ್ಚುಗಳಿಂದ ಎರಕಹೊಯ್ದುದ್ದಾಗಿದೆ. ಅಂದಿನ ನಾಣ್ಯಗಳು ಆರ್ಥಿಕಾಭಿವೃದ್ಧಿಯನ್ನು ಸೂಚಿಸುವುದರ ಜೊತೆಗೆ ನಾಣ್ಯಗಳನ್ನು ಅಚ್ಚು ಹಾಕುವ ಆ ಕಲೆ ಎಷ್ಟರಮಟ್ಟಿಗೆ ಉತ್ಕೃಷ್ಟತೆಯನ್ನು ಪಡೆದಿತ್ತೆಂಬುದನ್ನೂ ತೋರಿಸುತ್ತದೆ. ಅಂತೆಯೇ ಮುದ್ರಿಕೆಗಳು ಸಹ.

ಗುಪ್ತರ ಕಾಲದ ಕಲೆ ಮತ್ತು ವಾಸ್ತುಶಿಲ್ಪಗಳನ್ನು ಕುರಿತು ಬಹಳಮಟ್ಟಿಗೆ ನಮಗೆ ಏನೂ ತಿಳಿಯದು. ಆ ಕಾಲದ ಅನೇಕ ಕಟ್ಟಡಗಳು, ಆಲಯಗಳು, ವಿಗ್ರಹಗಳು ಹೂಣರ ಹಾಗೂ ನಂತರ ಬಂದ ಪರಕೀಯರ ದುಷ್ಕೃತ್ಯಗಳಿಗೀಡಾದುದು ನಮ್ಮ ದುರ್ದೈವ. ಬಹುಶಃ ದೇವಾಲಯದ ವಾಸ್ತುಶಿಲ್ಪ ಈ ವೇಳೆಗೆ ಇನ್ನೂ ಅಷ್ಟಾಗಿ ರೂಪಿತವಾಗಿರಲಿಲ್ಲವೆನ್ನಬೇಕು. ಹಿಂದು ದೇವಾಲಯಗಳು ಆರಂಭವಾದುದು ಗರ್ಭಗೃಹಗಳೊಂದಿಗೆ. ಇದರಲ್ಲಿ ದೇವರ ವಿಗ್ರಹವನ್ನಿಟ್ಟು ಪೂಜಿಸಲಾಗುತ್ತಿತ್ತು. ಈ ಗರ್ಭಗೃಹದ ಮುಂದೆ ಒಂದು ಮೊಗಸಾಲೆ ಅಥವಾ ನವರಂಗ. ಇದರ ಮುಂದಿನ ಭಾಗ ಹಜಾರ ಮತ್ತು ದ್ವಾರಮಂಟಪ. ಗುಪ್ತರ ಕಾಲದಲ್ಲಿ ದೇವಾಲಯಗಳನ್ನು ಹಿಂದಿನ ಕಾಲದಲ್ಲಿದ್ದಂತೆ ಮನೆಗಳಲ್ಲಿ ಕಟ್ಟದೆ ಕಲ್ಲಿನಲ್ಲಿ ಕಟ್ಟಲಾಗುತ್ತಿತ್ತು. ಝಾನ್ಸಿನಗರದ ಸಮೀಪದ ದೇವಗಡದ ೬ನೆಯ ಶತಮಾನದ ದಶಾವತಾರ ದೇವಾಲಯ ಪ್ರಥಮ ಕಲ್ಲಿನ ಕಟ್ಟಡ. ಭೀತರ್‌ಗಾಂವ್‌ದಲ್ಲಿನ ದೇವಾಲಯವನ್ನು ಇಟ್ಟಿಗೆಯಿಂದ ಕಟ್ಟಲಾಗಿದೆ. ಮೂರ್ತಿಶಿಲ್ಪ ಈ ಕಾಲದ ಧಾರ್ಮಿಕಸ್ಥಿತಿಗನುಗುಣವಾಗಿ ಪ್ರಶಾಂತತೆ ಮತ್ತು ತೃಪ್ತಿಯನ್ನು ಎತ್ತಿ ತೋರಿಸುತ್ತದೆ. ಇದನ್ನು ಸಾರನಾಥದಲ್ಲಿಯ ಬುದ್ಧನ ಮೂರ್ತಿಗಳಲ್ಲಿ ಕಾಣಬಹುದು. ಅಲಹಾಬಾದ್‌ನ ಬಳಿಯ ಗರ್‌ವಾ ಎಂಬಲ್ಲಿಯ ವಿಗ್ರಹಗಳನ್ನು ಈ ಕಾಲದ ಮೂರ್ತಿಶಿಲ್ಪಕ್ಕೆ ಮಾದರಿಗಳಾಗಿ ಉದಾಹರಿಸಬಹುದು. ಮಥುರದಲ್ಲಿನ ನಿಂತಿರುವ ಬುದ್ಧಮೂರ್ತಿ ಅತಿಸುಂದರವಾದುದು. ಈ ಶಿಲ್ಪಗಳಲ್ಲಿ ಶುದ್ಧವಾದ ಭಾರತೀಯ ಶೈಲಿಯನ್ನು ಈಗ ನಾವು ಕಾಣುತ್ತೇವೆ.

ನಾಣ್ಯಗಳು ಭಾರತದಲ್ಲಿ ಈ ಮೊದಲು ಪ್ರಚಾರದಲ್ಲಿದ್ದರೂ ಅವುಗಳನ್ನು ಅಚ್ಚು ಹಾಕಿಸುವ ಕಲೆ ಇಂಡೊ-ಬ್ಯಾಕ್ಟ್ರಿಯನ್, ಕುಷಾಣ ಮತ್ತು ಇತರ ಪರದೇಶೀಯರಿಂದ ನಾವು ಪಡೆದ ಬಳುವಳಿಯಾಗಿತ್ತು. ಅವುಗಳಲ್ಲಿ ಗ್ರೀಕರ ಉಡುಗೆ ತೊಡುಗೆಯ ಶೈಲಿ ಚಿತ್ರಿತವಾಗಿರುತ್ತಿತ್ತು. ಆದರೆ ಈ ಶೈಲಿಯನ್ನು ಭಾರತೀಯ ಸಂಪ್ರದಾಯಕ್ಕೆ ಅಳವಡಿಸಿದ ಹಿರಿಮೆ ಗುಪ್ತರದು. ಭಾರತೀಯ ಅಲಂಕಾರಪದ್ಧತಿಗಳು, ಪ್ರಾಣಿಗಳು, ದೇವತೆಗಳು ಗುಪ್ತರ ನಾಣ್ಯಗಳಲ್ಲಿವೆ. ಭಾರತೀಯ ನಾಣ್ಯಗಳ ಇತಿಹಾಸದಲ್ಲಿ ಗುಪ್ತರದು ಕ್ರಾಂತಿ ಕಾರಕ ಕಾಲವೆಂದು ಅಭಿಪ್ರಾಯಪಡಲಾಗಿದೆ.

ಬೌದ್ಧ ಹಾಗೂ ಹಿಂದೂಧರ್ಮಗಳೆರಡೂ ಈಗ ಸಮಾನವಾದ ಪ್ರೋತ್ಸಾಹ ಪಡೆದುವು. ಬುದ್ಧನನ್ನು ಅವತಾರಪುರುಷನೆಂದು ಭಾವಿಸಿ ಅವನ ವಿಗ್ರಹಾರಾಧನೆಯ ಸಂಪ್ರದಾಯ ಆರಂಭವಾದಾಗ, ಆ ಸಂಪ್ರದಾಯದಲ್ಲಿ, ಪೂಜಾವಿಧಿಗಳಲ್ಲಿ ಬ್ರಾಹ್ಮಣ ಪದ್ಧತಿಗಳನ್ನು ಅನುಸರಿಸಲಾಯಿತು. ಇದರ ಪರಿಣಾಮವಾಗಿ ಬೌದ್ಧಧರ್ಮ ಪ್ರತ್ಯೇಕ ವಾದ ಧರ್ಮವೆನಿಸದೆ ಹಿಂದುಧರ್ಮದ ಒಂದು ಉಪಶಾಖೆಯಾಗಿ ಪರಿಗಣಿಸಲ್ಪಟ್ಟಿತು. ಜೈನಧರ್ಮದಲ್ಲಿ ಇಂತಹ ಯಾವ ಬದಲಾವಣೆಗಳೂ ಇರಲಿಲ್ಲ. ಅಲ್ಲದೆ ಅದಕ್ಕೆ ಅರಸರ ಪ್ರೋತ್ಸಾಹಕ್ಕಿಂತ ಮಿಗಿಲಾಗಿ ವಣಿಕರ ಪ್ರೋತ್ಸಾಹ ದೊರೆತದ್ದರಿಂದ ಅದು ಸ್ಥಳೀಯ ಪ್ರಜೆಗಳ ಅನುರಾಗವನ್ನು ಸಂಪಾದಿಸಿಕೊಂಡಿತು. ಕ್ರೈಸ್ತಧರ್ಮ ಸಹ ಈ ವೇಳೆಗಾಗಲೇ ಭಾರತದಲ್ಲಿ ಕಾಲಿರಿಸಿತ್ತಾದರೂ ಅದರ ವ್ಯಾಪ್ತಿ ದಕ್ಷಿಣ ಮಲಬಾರ್ ಪ್ರದೇಶಕ್ಕಷ್ಟೇ ಸೀಮಿತವಾಗಿತ್ತು. ಗುಪ್ತವಂಶದ ಅರಸರು ವೈಷ್ಣವಧರ್ಮಾನುಯಾಯಿಗಳಾಗಿದ್ದ ಕಾರಣ ಶೈವ ವೈಷ್ಣವ ಧರ್ಮಗಳಿಗೆ ಮಿಗಿಲಾದ ಆಶ್ರಯ ಲಭಿಸಿದಂತಾಯಿತು. ಅನ್ಯ ಮತಗಳ ಹಲವಾರು ಅಂಶಗಳನ್ನು ಬ್ರಾಹ್ಮಣಧರ್ಮ ತನ್ನಲ್ಲಿ ಈಗ ಅಳವಡಿಸಿಕೊಂಡ ದ್ದರ ಪರಿಣಾಮವಾಗಿ ಸಮಾಜದಲ್ಲಿ ಹಲವಾರು ಸಾಮಾಜಿಕ ಬದಲಾವಣೆಗಳಾದುವು. ಈ ಧರ್ಮಗಳು ಪ್ರಬಲಿಸಿದುವು.

ಸಾಮಾಜಿಕವಾಗಿ ಜಾತಿಪದ್ಧತಿಗಳು ಈ ಕಾಲದಲ್ಲಿ ಸ್ಥಿರವಾಗಿ, ಕಟ್ಟುಪಾಡು ಗಳನ್ನು ಕಠಿಣವಾಗಿ ಪಾಲಿಸಬೇಕೆಂಬ ಭಾವನೆ ಜನರಲ್ಲಿ ಮೂಡಿತು. ಅಂದಿನ ಸ್ಮೃತಿ ಶಾಸ್ತ್ರಗಳು ಇದನ್ನೇ ಸೂಚಿಸಿವೆಯಾದರೂ ಬಿಗಿ ಇನ್ನೂ ಬಂದಿರಲಿಲ್ಲವೆಂದೇ ಹೇಳ ಬೇಕು. ಬ್ರಾಹ್ಮಣನಾದ ಮಯೂರಶರ್ಮ ಕ್ಷಾತ್ರಧರ್ಮವನ್ನು ಹಿಡಿದು ರಾಜ್ಯ ಕಟ್ಟಿದುದು ವೈಶ್ಯರೂ ಶೂದ್ರರೂ ವರ್ಗಭೇದದಲ್ಲಿ ತಮಗಿಂತ ಉತ್ತಮರೆನಿಸಿಕೊಂಡ ಕ್ಷತ್ರಿಯವೃತ್ತಿಯನ್ನವಲಂಬಿಸಿದುದು ಇದಕ್ಕೆ ಸಾಕ್ಷಿ. ಅನುಲೋಮ ಪ್ರತಿಲೋಮ ವಿವಾಹಗಳಿಗೂ ಉದಾಹರಣೆಗಳಿವೆ. ವಾಕಾಟಕ ಇಮ್ಮಡಿ ರುದ್ರಸೇನ ಬ್ರಾಹ್ಮಣ. ಇಮ್ಮಡಿ ಚಂದ್ರಗುಪ್ತನ ಮಗಳನ್ನು ಲಗ್ನವಾದ. ಗುಪ್ತವಂಶದ ಅರಸರು ಬ್ರಾಹ್ಮಣ ಕದಂಬ ಕಾಕುತ್ಸ್ಥವರ್ಮನ ಮಗಳನ್ನು ಮದುವೆಯಾದರು. ಅಂದಿನ ಸಾಹಿತ್ಯದಲ್ಲಿ ಇದರ ಪ್ರತಿಧ್ವನಿಯನ್ನು ಕಾಣಬಹುದು. 'ಮೃಚ್ಛಕಟಿಕ'ದಲ್ಲಿ ಬ್ರಾಹ್ಮಣ ಚಾರುದತ್ತ ದೇವದಾಸಿ ವಸಂತಸೇನೆಯನ್ನು ಲಗ್ನವಾದುದನ್ನು ಗಮನಿಸಬಹುದು. ಆದರೂ ಬ್ರಾಹ್ಮಣರು

ಸಮಾಜದಲ್ಲಿ ಉನ್ನತ ಸ್ಥಾನವನ್ನು ಪಡೆದಿದ್ದರು.

ಸ್ತ್ರೀಯರು ಸಾಹಿತ್ಯದಲ್ಲಿ ಗಣನೀಯ ಸ್ಥಾನವನ್ನು ಪಡೆದಿದ್ದಂತೆ ಚಿತ್ರಿತರಾಗಿದ್ದರೂ ವಾಸ್ತವಿಕವಾಗಿ ಅವರು ತಮ್ಮ ಮೊದಲಿನ ಸ್ವಾತಂತ್ರ್ಯಗಳನ್ನು ಕಳೆದುಕೊಂಡಿದ್ದರೆನ್ನ ಬಹುದು. ಮೇಲ್ತರಗತಿಯ ಸ್ತ್ರೀಯರಿಗೆ ವಿದ್ಯಾಭ್ಯಾಸ ಆವಶ್ಯಕವಾಗಿದ್ದರೂ ಅದು ಜಾಣ್ಮೆಯಿಂದ ವ್ಯವಹರಿಸಲು ಅವರಿಗೆ ನೀಡುವ ತರಬೇತಿ ಮಾತ್ರ ಆಗಿತ್ತು. ಸಾರ್ವಜನಿಕ ಜೀವನದಲ್ಲಿ ಪಾಲುಗೊಳ್ಳುವ ಅವಕಾಶ ಅವರಿಗೆ ಈಗ ಕಡಿಮೆಯಾಗಿತ್ತು. ಪ್ರೌಢಾವಸ್ಥೆಗೂ ಮೊದಲೇ ಹೆಣ್ಣುಮಕ್ಕಳಿಗೆ ಮದುವೆಮಾಡಬೇಕೆನ್ನುವ, ವಿಧವೆಯಾದ ಸ್ತ್ರೀ ಕಠಿಣವಾದ ಬ್ರಹ್ಮಚರ್ಯವನ್ನು ಪಾಲಿಸಬೇಕೆನ್ನುವ, ಸತಿಯಾಗಬೇಕೆನ್ನುವ ಸಂಪ್ರದಾಯಗಳು ಈಗ ಆರಂಭವಾಗಿದ್ದುವು.

ಸಂಗೀತ ನೃತ್ಯಕೂಟಗಳು ರಾಜಾಸ್ಥಾನಗಳಲ್ಲಿ ಶ್ರೀಮಂತರ ಮನೆಗಳಲ್ಲಿ ಜರುಗುತ್ತಿದ್ದವು. ದ್ಯೂತ, ಹುಂಜಗಳ ಜಗಳ ಇತ್ಯಾದಿಗಳು, ಪುರುಷರ ಕ್ರೀಡೆಗಳು, ವಸಂತೋತ್ಸವ ಇವನ್ನು ವಿಜೃಂಭಣೆಯಿಂದ ಆಚರಿಸಲಾಗುತ್ತಿತ್ತು.

ಮೌರ್ಯರ ಆಡಳಿತಪದ್ಧತಿ ಈಗಲೂ ಮುಂದುವರಿದಿದ್ದಿತು. ಆದರೆ ಹಲವಾರು ಆವಶ್ಯಕ ಬದಲಾವಣೆಗಳನ್ನು ಮಾಡಿಕೊಳ್ಳಲಾಗಿತ್ತು. ರಾಜಪ್ರಭುತ್ವವೇ ಪ್ರಚಲಿತ ಪದ್ಧತಿ. ಈ ವೇಳೆಗೆ ಗಣರಾಜ್ಯಗಳ ಪ್ರಭಾವ ಕಡಿಮೆಯಾಗಿತ್ತು. ಅರಸನೇ ಎಲ್ಲ ಅಂಗಗಳಿಗೂ ಸರ್ವೋಚ್ಚ ಅಧಿಪತಿ. ಈತನು ದೇವಾಂಶ ಸಂಭೂತನೆಂಬ, ಪ್ರತ್ಯಕ್ಷದೈವವೆಂಬ ನಂಬುಗೆ ಈಗ ಸ್ಥಿರಗೊಂಡಿತ್ತು. ಮಹಾರಾಜ, ಮಹಾರಾಜಾಧಿರಾಜ ಎಂಬ ಬಿರುದುಗಳನ್ನೇ ಅಲ್ಲದೆ ಪರಮೇಶ್ವರ, ಪರಮದೈವತ, ಪರಮಭಾಗವತ ಎಂಬ ಬಿರುದುಗಳನ್ನು ಇವರು ಧರಿಸಿದ್ದರು. ಆದರೂ ಕಾಳಿದಾಸ ಹೇಳುವಂತೆ ಪ್ರಜಾರಂಜನೆಯಿಂದಲೇ ಅರಸನಿಗೆ ರಾಜನೆಂಬ ಹೆಸರು ಶೋಭಾಯಮಾನ. ಆನುವಂಶಿಕತೆ, ಹಿರಿಯ ಮಗನಿಗೆ ಪಟ್ಟ—ಇವು ಅಂದಿನ ಪದ್ಧತಿಗಳಾದರೂ ಯೋಗ್ಯತೆಗೆ ಮಹತ್ತ್ವಕೊಡಲಾಗಿತ್ತು. ಎಂತಲೇ ಸಮುದ್ರಗುಪ್ತ ಅರಸನಾಗಿ ಆರಿಸಲ್ಪಟ್ಟ.

ಮಂತ್ರಿಗಳು ಅರಸನ ಸಲಹೆಗಾರರು. ಮಂತ್ರಿಗಳ ಪದವಿ ಸಹ ಕ್ರಮೇಣ ಆನುವಂಶಿಕವಾಗತೊಡಗಿತು. ಸರ್ವಾಧ್ಯಕ್ಷ, ರಹಸ್ಯಾಧ್ಯಕ್ಷ, ಸಂಧಿವಿಗ್ರಹಿ ಮುಂತಾದವರು ಉಚ್ಚ ಅಧಿಕಾರಿಗಳು. ನ್ಯಾಯವಿತರಣೆಗಾಗಿಯೇ ಪ್ರತ್ಯೇಕವಾದ ಅಧಿಕಾರಿಗಳಿದ್ದರು. ನ್ಯಾಯಾಧಿಕರಣ, ಧರ್ಮಾಧಿಕರಣ ಮುಂತಾದವರಿವರು. ಗ್ರಾಮಗಳಲ್ಲಿ ಹಿರಿಯರನ್ನೊಳಗೊಂಡ ಸಭೆ ಪ್ರಬಲವಾಗಿತ್ತು. ಅಶ್ವಪತಿ, ಪೀಲುಪತಿ, ಮಹಾಬಲಾಧಿಕೃತ, ಮಹಾಸೇನಾಪತಿ, ದಂಡನಾಯಕ, ರಣಭಾಂಡಾಗಾರಿಕ—ಇವರು ಸೈನ್ಯಬಲಕ್ಕೆ ಸೇರಿದವರು.

ಸಾಮ್ರಾಜ್ಯವನ್ನು ದೇಶ, ಭುಕ್ತಿ, ವಿಷಯಗಳೆಂದು ವಿಭಾಗಿಸಿ ಒಂದೊಂದಕ್ಕೂ ಅಧಿಕಾರಿಗಳನ್ನು ನೇಮಿಸಲಾಗಿತ್ತು. ನೇರವಾಗಿ ಅರಸನ ಅಧೀನಕ್ಕೆ ಒಳಪಟ್ಟ ಪ್ರದೇಶಗಳಲ್ಲದೆ ಅರಸನ ವಿಧೇಯರಾಗಿದ್ದು, ಆಂತರಿಕ ವ್ಯವಹಾರದಲ್ಲಿ ಸ್ವತಂತ್ರರಾಗಿ ಅರಸನಿಗೆ

ಕಪ್ಪಕಾಣಿಕೆ ಸಲ್ಲಿಸುವ ಸಾಮಂತರಾಜ್ಯಗಳೂ ಇದ್ದುವು. ವಿಭಾಗಗಳ ಆಡಳಿತ ವಿಷಯ ಪತಿಗಳಿಗೊಳಪಟ್ಟಿತ್ತು. ಆತನ ನೆರವಿಗೆ ಮಂಡಳಗಳಿರುತ್ತಿದ್ದುವು. ಇದರಲ್ಲಿ ಸಮಾಜದ ಭಿನ್ನವರ್ಗಗಳ ಪ್ರತಿನಿಧಿಗಳಿರುತ್ತಿದ್ದರು. ನಗರಶ್ರೇಷ್ಠ, ಸಾರ್ಥವಾಹ, ಕುಲಿಕ, ಕಾಲಮಾನ ಮುಂತಾದವರು ಈ ಪ್ರತಿನಿಧಿಗಳು. ನಗರಾಡಳಿತ ಪುರಪಾಲನ ಹೊಣೆ. ಈತನಿಗೆ ಸಹಾಯಕವಾಗಿ ನಾಗರಿಕ ಮಂಡಳಗಳಿದ್ದುವು. ಗ್ರಾಮಗಳಲ್ಲಿ ಗ್ರಾಮೇಯಕ, ಗ್ರಾಮಾಧ್ಯಕ್ಷ ಎಂಬ ಅಧಿಕಾರಿಗಳಿರುತ್ತಿದ್ದರು. ಅಲ್ಲಿನ ಶಾಂತಿಪಾಲನೆ, ಕರಸಂಗ್ರಹ ಮುಂತಾದುವು ಇವರ ಕರ್ತವ್ಯಗಳಾಗಿದ್ದುವು.

ಭಾರತದ ಇತಿಹಾಸದಲ್ಲಿ ಗುಪ್ತರಕಾಲ ಇನ್ನೊಂದು ಮಹತ್ತ್ವದ ಘಟ್ಟ. ಅವರ ರಾಜ್ಯದ ವಿಸ್ತಾರ, ಅವರ ನಾಣ್ಯಗಳು, ಅಭಿವೃದ್ಧಿಯಾದ ಸಾಹಿತ್ಯ ಕಲೆಗಳು ಅಂದಿನ ಆಡಳಿತದ ಸುಭದ್ರತೆಯ ಕುರುಹುಗಳು, ಅರಸರ ದಕ್ಷತೆಗೆ ಸಾಕ್ಷಿ. ಅರಸ ನಿರಂಕುಶಾಧಿಕಾರಿ ಎಂಬುದು ತಾತ್ತ್ವಿಕವಾಗಿದ್ದು ದೇಶದಲ್ಲಿ ಸಾಮಾಜಿಕ ಸಾಂಸ್ಕೃತಿಕ ಅಭಿವೃದ್ಧಿಗೆ, ನೆಮ್ಮದಿಗೆ ಹೇತುವಾಗುವ ಕರ್ತವ್ಯ ತಮ್ಮದೆಂದು ಅರಸರು ಅರಿತಿದ್ದರು. ಎಂತಲೇ ಅದು ಸುವರ್ಣಯುಗವೆನಿಸಿತು.

## ಕನೋಜ್ : ಹರ್ಷವರ್ಧನ

೭ನೆಯ ಶತಮಾನದ ಭಾರತದ ಕತೆಯನ್ನು ಕನೋಜದ ಕತೆಯೆನ್ನಬಹುದು. ಆವರೆಗೆ ಪಾಟಲಿಪುತ್ರ ಭಾರತದ ಚರಿತ್ರೆಯ ಕೇಂದ್ರವಾಗಿತ್ತು. ಈಗ ಅದು ಕನೋಜಿಗೆ (ಕಾನ್ಯಕುಬ್ಜಕ್ಕೆ) ಬದಲಾಯಿತು. ಹರ್ಷವರ್ಧನನ ಕಾಲದಲ್ಲಿ, ನಂತರದ ೨-೩ ಶತಮಾನಗಳು ಸಹ ಕನೋಜ್ ಇತಿಹಾಸದಲ್ಲಿ ಪ್ರಮುಖಪಾತ್ರ ವಹಿಸಿತು. ಉತ್ತರದ ಅನೇಕ ಅರಸರು ಕನೋಜನ್ನು ಆಕ್ರಮಿಸಲು ಹೆಣಗಿದರು; ಅದಕ್ಕಾಗಿ ಕದನಗಳಾದವು.

ಹರ್ಷವರ್ಧನ ಪುಷ್ಪಭೂತಿಮನೆತನಕ್ಕೆ ಸೇರಿದವನು. ಮಥುರಾನಗರಕ್ಕೆ ೮೨ ಮೈಲು ಗಳ ದೂರದಲ್ಲಿ ವಾಯುವ್ಯಕ್ಕೆ ಸಂಸ್ಕೃತೀ ತೀರದಮೇಲೆ ಶ್ರೀಕಂಠವೆಂಬ ಜನಪದದ ಮುಖ್ಯಸ್ಥಳವೆನ್ನಿಸಿದ ಸ್ಥಾಣೇಶ್ವರವೆಂಬ ನಗರವಿತ್ತು. ಅಲ್ಲಿ ವರ್ಧನ ಸಂತತಿಗೆ ಸೇರಿದ ಅರಸರು ಆಳುತ್ತಿದ್ದರು. ಮನೆತನದ ಮೂಲಪುರುಷ ಪುಷ್ಪಭೂತಿ. ಅವನಿಂದಲೇ ಮನೆತನಕ್ಕೆ ಆ ಹೆಸರು. ಈ ಮನೆತನಕ್ಕೆ ಸೇರಿದವನು ಪ್ರಭಾಕರವರ್ಧನನ ಮಗ ಹರ್ಷವರ್ಧನ. ಬಾಣಕವಿಯ 'ಹರ್ಷಚರಿತ', ಹುಯೆನ್‌ತ್ಸಾಂಗ್‌ನ 'ಹ್ಸಿ ಯು ಚಿ' (Hsi Yu Chi) ಎಂಬ ಗ್ರಂಥ ಈ ಕಾಲದ ಪ್ರಮುಖ ಸಾಹಿತ್ಯಿಕ ಆಧಾರಗಳು. ಹರ್ಷ ೬೦೬ರಿಂದ ಆಳತೊಡಗಿದ. ಯಶೋಮತಿಯ ಮಗನಾದ ಈತನಿಗೆ ಹಿರಿಯ ಸೋದರ ರಾಜ್ಯವರ್ಧನ. ರಾಜ್ಯಶ್ರೀ ಕಿರಿಯ ಸೋದರಿ. ಮೌಖರಿ ವಂಶದ ಕನೋಜದ ಗೃಹವರ್ಮ ಈಕೆಯನ್ನು ಲಗ್ನವಾಗಿದ್ದ. ಗೃಹವರ್ಮನನ್ನು ಮಾಲವದೇಶದ ದೇವಗುಪ್ತ ಕೊಂದಾಗ ತಂಗಿಯನ್ನು ರಕ್ಷಿಸಲು ರಾಜ್ಯವರ್ಧನ ಕನೋಜಿಗೆ ಧಾವಿಸಿದ. ಆದರೆ ಅಲ್ಲಿ ಗೌಡದೇಶದ ಶಶಾಂಕ ಇವನನ್ನು ಮೋಸದಿಂದ ಕೊಂದ. ಸ್ಥಾಣೇಶ್ವರದ ರಾಜ್ಯ ಹರ್ಷವರ್ಧನನ

ಪಾಲಾಯಿತು. ಸೇಡುತೀರಿಸಿಕೊಳ್ಳಲೆಂದು ಈತ ದಿಗ್ವಿಜಯ ಮತ್ತೆ ಕೈಗೊಂಡ. ರಾಜಧಾನಿಯಿಂದ ಓಡಿಹೋಗಿದ್ದ ರಾಜ್ಯಶ್ರೀಯನ್ನ ರಕ್ಷಿಸಿ ರಾಜಧಾನಿಗೆ ಕರೆತಂದ ಬಳಿಕ ಯಾತ್ರೆಯನ್ನು ಮುಂದುವರಿಸಿದ. ಹರ್ಷ ಕನೋಜನ್ನು ಮುತ್ತಿದಾಗ ಅಲ್ಲಿನ ಅರಸ ಭೀತಿಯಿಂದ ಓಡಿಹೋದ. ಕನೋಜದ ಸಿಂಹಾಸನ ಇವನಿಗೆ ದಕ್ಕಿತು. ಮಾಳವ, ಗುರ್ಜರ, ಸಿಂಧು, ಮಗಧ, ಗೌಡ, ಓಡ್ರ ಮತ್ತು ಕೊಂಗೋಡದ ಅರಸರು ಇವನೊಡನೆ ಕಾದಿದರು. ಆದರೆ ಈತನಿಗೆ ಹೆಚ್ಚಿನ ಯಶಸ್ಸು ದೊರೆತುದು ಪೂರ್ವ ಭಾರತದಲ್ಲಿ ಮಾತ್ರ. ಶಶಾಂಕನ ಮರಣಾನಂತರ ಮಗಧರಾಜ್ಯ ಇವನ ವಶವಾಯಿತು. ಅಲ್ಲಿಂದ ಬಂಗಾಲ, ಒರಿಸ್ಸಗಳ ಕಡೆ ಸೈನ್ಯವನ್ನು ಅಟ್ಟಿ ಹರ್ಷ ಆ ಪ್ರಾಂತಗಳನ್ನು ಗೆದ್ದಂತೆ ತೋರುತ್ತದೆ. ನೇಪಾಳದ ಅರಸನೂ ಇವನಿಂದ ಸೋಲಿಸಲ್ಪಟ್ಟು ಇವನ ಸಾಮಂತನಾಗಿ ಆಳುತ್ತಿದ್ದನೆಂದು ಹೇಳಿದೆ. ಆದರೆ ವಲಭಿ, ಸಿಂಧುಪ್ರಾಂತಗಳಲ್ಲಿ ಇವನ ಯತ್ನ ಫಲಿಸಲಿಲ್ಲ. ಅಂತೆಯೇ ಈತನು ಪಾಲ್ಗೊಂಡ ತೀವ್ರತಮವೆನ್ನಬಹುದಾದ ಯುದ್ಧ ಈತನು ಕರ್ಣಾಟಕದ ಪುಲಕೇಶಿಯೊಡನೆ ಹೂಡಿದ್ದಾಗಿದೆ. ಐಹೊಳೆಯ ಶಾಸನದ ಮೂಲಕ ಪುಲಕೇಶಿ ಇವನನ್ನು ಸೋಲಿಸಿದನೆಂಬುದು ತಿಳಿದಿದೆ.

ಸಕಲೋತ್ತರಾಪಥೇಶ್ವರನೆನಿಸಿಕೊಂಡನೆಂದು ಹರ್ಷನು ಉತ್ತರ ಹಿಂದುಸ್ಥಾನವನ್ನೆಲ್ಲ ಆಳುತ್ತಿದ್ದನೆನ್ನಲಾಗದು. ಮಾಳವ, ಗುಜರಾತ, ಲಾಟ, ಸಿಂಧು ಹಾಗೂ ಗಾಂಧಾರಗಳು ಮೊದಲು ಪ್ರಭಾಕರವರ್ಧನನ ಅಧೀನದಲ್ಲಿದ್ದರೂ ಆ ಬಳಿಕ ಹರ್ಷನ ಕಾಲದಲ್ಲಿ ಸ್ವತಂತ್ರವಾದವು. ಶಶಾಂಕನಿರುವವರೆಗೂ ಮಗಧ ಬಂಗಾಲಗಳು ಇವನಿಗೆ ಸೇರಲಿಲ್ಲ. ದಕ್ಷಿಣದಲ್ಲಿಯಂತೂ ಸೋಲು ಇವನಿಗೆ ಕಟ್ಟಿಟ್ಟ ಬುತ್ತಿಯಾಗಿತ್ತು. ಇದರಿಂದ ಇವನು ಹಿಂದಿನ ಖ್ಯಾತಿವೆತ್ತ ಅರಸರ ಸಾಲಿನಲ್ಲಿ ನಿಲ್ಲಲಾರನೆನ್ನಬೇಕು. ಆದರೂ ಹುಯೆನ್ ತ್ಸಾಂಗ್ ಈತನನ್ನು ಚಿರಸ್ಥಾಯಿಯಾಗಿ ಮಾಡಿದ್ದಾನೆ. ರಣರಂಗಕ್ಕಿಂತಲೂ ಇತರ ಕ್ಷೇತ್ರಗಳಲ್ಲಿ ಹರ್ಷನ ಸಾಧನೆಗಳು ಗಣನೀಯವೆಂಬುದನ್ನು ನೆನೆಯಬೇಕು.

ಆಡಳಿತ ವ್ಯವಸ್ಥೆಯಲ್ಲಿ ಹೆಚ್ಚಿನ ಅಧಿಕಾರಿಗಳು ಈಗ ಕಾಣಿಸಿಕೊಳ್ಳುತ್ತಾರೆ. ಆದರೆ ಈತನು ವಿದ್ಯಾಭ್ಯಾಸಕ್ಕಿಂತ ಪ್ರೋತ್ಸಾಹ ಮಹತ್ವದ್ದು. ರಾಜಕಾರ್ಯವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿ ಒಂದನ್ನು ಆಡಳಿತವೆಚ್ಚಕ್ಕೆ, ಎರಡನೆಯದನ್ನು ಸಾರ್ವಜನಿಕ ಸೇವೆಮಾಡಿ ಪ್ರಸಿದ್ಧರಾದವರಿಗೆ ಕೊಡಲು, ಮೂರನೆಯ ಭಾಗವನ್ನು ಮೇಧಾವಿಗಳನ್ನೂ ಜ್ಞಾನಿಗಳನ್ನೂ ಗೌರವಿಸಲು, ನಾಲ್ಕನೆಯದನ್ನು ದಾನಧರ್ಮಗಳಿಗಾಗಿ ವಿನಿಯೋಗಿಸಲು ವಿಂಗಡಿಸಲಾಗಿತ್ತು. ಇದರಿಂದ ವಿದ್ಯಾಭ್ಯಾಸಕ್ಕೆ ಒಳ್ಳೆಯ ಪ್ರೋತ್ಸಾಹ ಕೊಟ್ಟಂತಾಯಿತು ಅರಸನು ಸ್ವತಃ ವಿದ್ವಾಂಸ. 'ರತ್ನಾವಲೀ', 'ಪ್ರಿಯದರ್ಶಿಕಾ' ನಾಟಕಗಳ ಕರ್ತೃ. ಸುಪ್ರಭಾತಸ್ತೋತ್ರ ಮತ್ತು ಅಷ್ಟಮಹಾಶ್ರೀಚೈತ್ಯ ಸಂಸ್ಕೃತಸ್ತೋತ್ರಗಳು ಇವನವು ಎನ್ನಲಾಗಿದೆ. ಇವನ ಕಾಲದಲ್ಲಿ ಖ್ಯಾತಿವೆತ್ತ ನಾಲಂದಾ ವಿಶ್ವವಿದ್ಯಾಲಯ ತಡೆಯಿಲ್ಲದೆ ಯಾವಾಗಲೂ ದಾನ ನಡೆಯುತ್ತಿದ್ದುದರಿಂದ (ನ+ಅಲಂ+ದಾ) ನಾಲಂದಾ ಎಂಬ ಹೆಸರನ್ನು ಪಡೆಯಿತಂತೆ! ಎಂಟು ಮಹಾ ಪಾಠಶಾಲೆಗಳು; ಒಂದೊಂದರಲ್ಲೂ ೩೦-೪೦

ಉಪನ್ಯಾಸಭವನಗಳು, ರತ್ನಸಾಗರ, ರತ್ನೋದಧಿ, ರತ್ನರಂಜಕಗಳೆಂಬ ಮೂರು ಕಟ್ಟಡಗಳನ್ನೊಳಗೊಂಡ ಗ್ರಂಥಾಲಯ, ಜ್ಯೋತಿಶ್ಶಾಸ್ತ್ರಾಧ್ಯಯನಕ್ಕಾಗಿ ವೀಕ್ಷಣಶಾಲೆ—ಇವು ಅಲ್ಲಿಯ ವೈಶಿಷ್ಟ್ಯ. ಅಲ್ಲಿನ ಘಟೀಯಂತ್ರ ಇಡೀ ಮಗಧಕ್ಕೆ ಸರಿಯಾದ ಕಾಲವನ್ನು ತಿಳಿಸುತ್ತಿತ್ತಂತೆ.

ಹುಯೆನ್‌ತ್ಸಾಂಗ್ ಬಂದಾಗ ಅಲ್ಲಿ ೧೦,೦೦೦ ವಿದ್ಯಾರ್ಥಿಗಳಿದ್ದರು. ಪ್ರವೇಶಕ್ಕಾಗಿ ಕಠಿಣವಾದ ಪರೀಕ್ಷೆಗಳಿರುತ್ತಿದ್ದುವು. ದ್ವಾರಪಂಡಿತರು ಈ ಪರೀಕ್ಷೆಗಳನ್ನು ನಡಸುತ್ತಿದ್ದರು. ಒಪ್ಪೊತ್ತಿನ್ನೆ ಹತ್ತರಲ್ಲಿ ಎಂಟುಮಂದಿಯೂ ಈ ಪರೀಕ್ಷೆಯಲ್ಲಿ ಸಫಲರಾಗುತ್ತಿರಲಿಲ್ಲವಂತೆ. ನಾಗಾರ್ಜುನ, ಅಸಂಗ, ವಸುಬಂಧು, ದಿಙ್ನಾಗ, ಆರ್ಯದೇವ, ಧನಕೀರ್ತಿ, ಧರ್ಮಪಾಲ, ಶೀಲಭದ್ರರಂತಹ ಪ್ರಕಾಂಡಪಂಡಿತರು ಇಲ್ಲಿ ಪ್ರಾಧ್ಯಾಪಕರಾಗಿರುತ್ತಿದ್ದರು. ಗುಪ್ತರ ಕಾಲದಲ್ಲಿಯೇ ಇದು ಆರಂಭವಾದರೂ ೬ರಿಂದ ೧೩ನೆಯ ಶತಮಾನದವರೆಗೆ ಇದು ವರ್ಧಿಸಿ ವಿಶ್ವವಿಖ್ಯಾತಿಯನ್ನು ಪಡೆದಿತ್ತು. ಹೆಚ್ಚಾಗಿ ಬೌದ್ಧಮತದ ಮಹಾಯಾನ ಪಂಥದ ಬೋಧನೆಗೆ ಇದು ಪ್ರಖ್ಯಾತವಾಗಿದ್ದರೂ ವೇದ, ವೇದಾಂಗ, ಯೋಗ, ಹೇತುವಿದ್ಯೆ, ಶಬ್ದವಿದ್ಯೆ, ತಂತ್ರಶಾಸ್ತ್ರ ಮುಂತಾದ ವಿಷಯಗಳನ್ನೂ ಇಲ್ಲಿ ಬೋಧಿಸುತ್ತಿದ್ದರು. ಶುಲ್ಕವನ್ನು ಕೊಡಬೇಕೆಂಬ ಕಟ್ಟುನಿಟ್ಟಾದ ನಿಯಮವಿರಲಿಲ್ಲ. ಆದರೆ ಗುರುವನ್ನ ಆಶ್ರಯಿಸಿ, ಆತನ ಸೇವೆಮಾಡಿ ಬ್ರಹ್ಮಚರ್ಯವನ್ನು ಪಾಲಿಸುತ್ತ ಜ್ಞಾನಾರ್ಜನೆ ಮಾಡಬೇಕಾಗಿದ್ದಿತು.

ಹರ್ಷವರ್ಧನ ಖ್ಯಾತಿಹೊಂದಲು ಮತ್ತೊಂದು ಕಾರಣ ಅವನ ಧಾರ್ಮಿಕನೀತಿ. ಹುಯೆನ್‌ತ್ಸಾಂಗ್ ಬೌದ್ಧಮತ ಉತ್ತಮಸ್ಥಿತಿಯಲ್ಲಿದ್ದುದನ್ನು ಗಮನಿಸಿದ್ದಾನೆ. ಆದರೂ ಹಿಂದು (ವೈದಿಕ) ಧರ್ಮ ಸಹ ಒಳ್ಳೆಯ ಸ್ಥಿತಿಯಲ್ಲಿತ್ತು ಎಂದಿದ್ದಾನೆ. ಬ್ರಾಹ್ಮಣರು ಶುದ್ಧರೂ ಗೌರವಾನ್ವಿತರೂ ಆಗಿದ್ದರು. ಈ ದೇಶವನ್ನೇ ಬ್ರಾಹ್ಮಣದೇಶವೆಂದು ಕರೆಯಲಾಗಿದೆ ಎಂದಿದ್ದಾನೆ. ಭೂತನಿರ್ಗ್ರಂಥ, ಕಾಪಾಲಿಕ, ಚುಂಡಿಕ ಮುಂತಾದ ಇತರ ಧರ್ಮಗಳ ಪಂಥಗಳ ಅನುಯಾಯಿಗಳೂ ಇದ್ದರು. ಅನ್ಯಮತಸಹಿಷ್ಣುತೆ ಎಂದಿನಂತೆ ದೇಶದ ವಿಶಿಷ್ಟಗುಣ. ಬೌದ್ಧವಿಹಾರಗಳೂ ದೇವಾಲಯಗಳೂ ಅಕ್ಕಪಕ್ಕದಲ್ಲಿದ್ದುವು.

ವಿಷ್ಣು, ಶಿವ, ಸೂರ್ಯರ ಪೂಜೆ ನಡೆಯುತ್ತಿತ್ತು. ದುರ್ಗಿ, ಭೀಮಾದೇವಿ ಪೃಥ್ವೀದೇವಿಯರು ಪೂಜಾರ್ಹರಾಗಿದ್ದರು. ಇವರು ಜನಪದ ದೇವರುಗಳು. ಹುಯೆನ್‌ತ್ಸಾಂಗ್ ಬರೆದಿದ್ದ ಮಹಾಯಾನದ ಹಿರಿಮೆಯನ್ನು ಕುರಿತ ಗ್ರಂಥವನ್ನು ಎಲ್ಲರೂ ಕೇಳಬೇಕೆಂದು ಕಾನ್ಯಕುಬ್ಜದಲ್ಲಿ ಒಂದು ಸಮ್ಮೇಲನ ಕೂಡಿತು. ೩೦೦ ಬೌದ್ಧಭಿಕ್ಷುಗಳೂ ೩೦೦೦ ಬ್ರಾಹ್ಮಣರೂ ಜೈನರೂ ನಾಲಂದ ವಿಶ್ವವಿದ್ಯಾಲಯದ ಸಾವಿರ ಭಿಕ್ಷುಗಳೂ ಇದರಲ್ಲಿ ಪಾಲ್ಗೊಂಡಿದ್ದರು. ಕಾಮರೂಪ ಮುಂತಾದ ದೇಶಗಳ ಅರಸರೂ ಇಲ್ಲಿ ನೆರೆದಿದ್ದರು. ಇದಕ್ಕಾಗಿಯೇ ಎರಡು ಸಭಾಭವನಗಳನ್ನು ನಿರ್ಮಿಸಿ ಅವುಗಳಲ್ಲೊಂದರಲ್ಲಿ ಸ್ವರ್ಣ ವಿಗ್ರಹಗಳನ್ನಿಡಲಾಗಿತ್ತು. ಈ ಸಮ್ಮೇಳನದ ಅಧ್ಯಕ್ಷ ಹುಯೆನ್‌ತ್ಸಾಂಗ್‌ನು ಸಮ್ಮೇಳನದ ಮಹಾನ್‌ವ್ಯಕ್ತಿಯಾಗಿ ಮೆರೆದನು. ಕೆಲವು ಪಾಷಂಡರೂ ಬ್ರಾಹ್ಮಣರೂ ಹರ್ಷ

ನನ್ನೇ ಕೊಲ್ಲಲು ಯೋಜಿಸಿದ್ದುಂಟು. ಬುದ್ಧನ ಪ್ರತಿಮೆಯಿದ್ದ ಸಭಾಭವನಕ್ಕೇ ಬೆಂಕಿ ಹಚ್ಚಲಾಯಿತು. ಆದರೆ ವಿಪತ್ತಿನಿಂದ ಪಾರಾದ ಅರಸ ತಪ್ಪಿತಸ್ಥರನ್ನು ಶಿಕ್ಷಿಸಿದನು.

ಸಿಂಹಾಸನಾರೂಢನಾದಾಗ ಎದುರಿಸಬೇಕಾಗಿದ್ದ ಪರಿಸ್ಥಿತಿಗಳನ್ನು ಗಮನಿಸಿ, ಎದೆಗುಂದದೆ ವಿಪತ್ತನ್ನು ಎದುರಿಸಿದ ಹರ್ಷನ ಧೈರ್ಯವನ್ನು ಮೆಚ್ಚಬೇಕು. ಸಾರ್ವಭೌಮನಲ್ಲದಿದ್ದರೂ ಉಚ್ಚಮಟ್ಟದ ಗೌರವಕ್ಕೆ ಪಾತ್ರನಾಗಿದ್ದ ಈತ ಸ್ವತಃ ಸಾಹಿತಿ, ಸಾಹಿತ್ಯ ಕಲೆಗಳ ಪೋಷಕ. ೬೦೬ರಿಂದ ಇವನ ಹೆಸರಿನಲ್ಲಿಯೂ ಒಂದು ಶಕೆ ಆರಂಭವಾಯಿತೆನ್ನಲಾಗಿದೆಯಾದರೂ ಈ ಕುರಿತು ಭಿನ್ನಾಭಿಪ್ರಾಯಗಳಿವೆ. ಉತ್ತರ ಭಾರತದ ಕೊನೆಯ ಹಿಂದುಅರಸ ಹರ್ಷನೆಂದಿರುವ ಹಲವು ಇತಿಹಾಸಕಾರರ ವಿಮರ್ಶೆ ಸಮಂಜಸವಾಗಿಲ್ಲ. ಇವನ ರಾಜ್ಯಕ್ಕಿಂತ ವಿಸ್ತಾರವಾದ, ಪ್ರಬಲವಾದ ಪ್ರತೀಹಾರರ ರಾಜ್ಯವಿತ್ತು; ಕರ್ಣಾಟಕದಲ್ಲಿ ಚಾಲುಕ್ಯರ ರಾಜ್ಯವಿತ್ತು.

## ಹರ್ಷನ ನಂತರದ ರಾಜಕೀಯ ಪರಿಸ್ಥಿತಿ

ಹರ್ಷನ ನಂತರದ ಉತ್ತರ ಭಾರತದ ಕತೆ ಕನೋಜಿನ ಕತೆಯಾಗಿಯೇ ಮುಂದುವರಿಯುತ್ತದೆ. ೮ನೆಯ ಶತಮಾನದ ಆರಂಭದಲ್ಲಿ ಇದು ಯಶೋವರ್ಮನೆಂಬ ಅರಸನ ರಾಜಧಾನಿಯಾಯಿತು. ವಾಕ್ಪತಿ ಕವಿಯ ಪ್ರಾಕೃತ ಭಾಷೆಯ 'ಗೌಡವಹೋ'ದಲ್ಲಿ ಇದರ ಪ್ರಸ್ತಾಪವಿದೆ. ಯಶೋವರ್ಮನ ಆಶ್ರಿತ ಈ ಕವಿ. ಇದು ಯಶೋವರ್ಮನ ಸಾಧನೆಗಳನ್ನು ಕುರಿತಾದ ಪ್ರಶಸ್ತಿಪರ ಗ್ರಂಥ. ಮಗಧದ ಅರಸನನ್ನು ಸೋಲಿಸಿ ಸಮುದ್ರ ಮಾರ್ಗವಾಗಿ ವಂಗದೇಶಕ್ಕೆ ಹೋಗಿ ಆ ಬಳಿಕ ದಕ್ಷಿಣದ ಅರಸನನ್ನು ಮತ್ತು ಪಾರಸಿಕರನ್ನು ಸೋಲಿಸಿ, ಸ್ಥಾಣೇಶ್ವರವನ್ನು ಆಕ್ರಮಿಸಿ, ಅಯೋಧ್ಯೆಗೆ ಹೋಗಿ ಕಪ್ಪಕಾಣಿಕೆಗಳನ್ನು ಪಡೆದು, ಕನೋಜಿಗೆ ಹಿಂತಿರುಗಿದ ಈ ಅರಸನ ಪ್ರಶಸ್ತಿಗಳಲ್ಲಿ ಎಷ್ಟರಮಟ್ಟಿಗೆ ಐತಿಹಾಸಿಕ ಸತ್ಯ ಅಡಗಿದೆ ಎಂಬುದನ್ನು ಹೇಳಲಾಗದು. ಮಗಧ, ಗೌಡ, ಬಂಗಾಲಗಳು ಇವನ ಅಧೀನವಾಗಿದ್ದಿರಬಹುದು. ದಕ್ಷಿಣದಲ್ಲಿ ಸಮಕಾಲೀನ ದೊರೆ ಎಂದರೆ ಚಾಲುಕ್ಯರ ವಿನಯಾದಿತ್ಯ. ಆದರೆ ಇಲ್ಲಿ ಹೆಚ್ಚು ಗಮನಾರ್ಹವಾದುದು ಪಾರಸಿಕರ ಉಲ್ಲೇಖ. ಈ ವೇಳೆಗೆ ಸಿಂಧ್‌ಪ್ರಾಂತದಲ್ಲಿ ಕಾಲಿಟ್ಟಿದ್ದ ಅರಬರು ಇವರು. ಇವರು ಕನೋಜಿನ ವಿರುದ್ಧ ಒಂದು ಸೇನೆಯನ್ನು ಕಳಿಸಿದರೆಂದು ಅನ್ಯ ಆಧಾರಗಳಿಂದ ತಿಳಿದಿವೆ. ಕಾಶ್ಮೀರದ ಲಲಿತಾದಿತ್ಯ ಇದರಲ್ಲಿ ಯಶೋವರ್ಮನನಿಗೆ ನೆರವು ನೀಡಿದನು. ಆದರೆ ಕೊನೆಗೆ ಇವರ್ವರ ನಡುವೆಯೇ ವೈಷಮ್ಯವೇರ್ಪಟ್ಟು ಯಶೋವರ್ಮ ಸೋತನು. ಭವಭೂತಿ ಮತ್ತು ವಾಕ್ಪತಿ ಇವನ ಆಶ್ರಿತರು. ಈತ 'ರಾಮಾಭ್ಯುದಯ' ಎಂಬ ನಾಟಕದ ಕರ್ತೃ ಎನ್ನಲಾಗಿದೆ.

ಲಲಿತಾದಿತ್ಯ ಮುಕ್ತಾಪೀಡನು ಕಾಶ್ಮೀರದ ಕಾರ್ಕೋಟ ವಂಶಕ್ಕೆ ಸೇರಿದವನು. ಚಂದ್ರಾಪೀಡನ ಸೋದರ. ಚಂದ್ರಾಪೀಡನ ಕಾಲದಲ್ಲಿ ಮುಹಮ್ಮದ್ ಬಿನ್ ಕಾಸಿಮ್ ಎಂಬ ಅರಬ ಕಾಶ್ಮೀರವನ್ನು ಮುತ್ತಿದನಾದರೂ ಸೋತು ಹಿಮ್ಮೆಟ್ಟಿದ. ಲಲಿತಾದಿತ್ಯನು

೭೨೪ರಲ್ಲಿ ಪಟ್ಟಕ್ಕೆ ಬಂದ. ಆಳಿಕೆಯ ಬಹುಕಾಲ ರಣರಂಗದಲ್ಲಿಯೇ ಕಳೆದನು. ಟಿಬೆಟ್‌ನ ಅರಸ ಇವನ ಮೇಲೆರಗಿದಾಗ, ಈತನು ಮಿತ್ರತ್ವ ಬೆಳಸಿದ ಚೀನಿ ಅರಸನ ಸಹಾಯ ಕೋರಿದನು. ಆದರೆ ಆತ ಸಹಾಯಮಾಡಲಿಲ್ಲ. ಕನೋಜಿನ ಯಶೋವರ್ಮನ ಸಹಾಯ ಪಡೆದು ಟಿಬೆಟ್ ಅರಸನನ್ನು ಸೋಲಿಸಿದನು. ರಾಜ್ಯದ ವಾಯುವ್ಯದಲ್ಲಿ ದರ್ದ್, ಕಾಂಭೋಜ ಮತ್ತು ತುರ್ಕೀಜನರನ್ನೆಲ್ಲ ಸೋಲಿಸಿದನು. ರಾಜ್ಯವಿಸ್ತರಣಾಕಾಂಕ್ಷೆಯಿಂದ ಮಿತ್ರನಾಗಿದ್ದ ಯಶೋವರ್ಮನನ್ನೇ ಸೋಲಿಸಿ ಅವನ ರಾಜ್ಯವನ್ನು ತಾತ್ತ್ವಿಕವಾಗಿ ವಶಪಡಿಸಿಕೊಂಡು ದಿಗ್ವಿಜಯಕ್ಕೆ ಹೊರಟು ಕಲಿಂಗ, ಗೌಡದೇಶಗಳ ಅರಸರನ್ನೂ ಶರಣಾಗುವಂತೆ ಮಾಡಿದನು. ಕರ್ಣಾಟಕಕ್ಕೆ ಹೋಗಿ ರಾಣಿ ರಟ್ಟಾದೇವಿಯನ್ನು ಸೋಲಿಸಿದನು. ಈ ಸಂಗತಿಗಳೆಲ್ಲ ಕಲ್ಹಣನ 'ರಾಜತರಂಗಿಣಿ'ಯಿಂದ ನಮಗೆ ತಿಳಿದುಬರುತ್ತವೆ. ಉತ್ಪ್ರೇಕ್ಷೆಗಳಿದ್ದಿರಬಹುದಾದರೂ ಅದು ಐತಿಹಾಸಿಕ ಗ್ರಂಥವೆಂಬ ದೃಷ್ಟಿಯಿಂದ ಲಲಿತಾದಿತ್ಯನ ಈ ದಂಡಯಾತ್ರೆಯ ಹಲವಾರು ಅಂಶಗಳು ಸತ್ಯಘಟನೆಗಳೆನ್ನಬಹುದು. ಕಾಶ್ಮೀರದಲ್ಲಿ ಈತನು ಕಟ್ಟಿಸಿದ ಮಾರ್ತಾಂಡಾಲಯ ಈತನನ್ನು ಅಮರಗೊಳಿಸಿದೆ.

ವಲಭಿಯಲ್ಲಿ ಮೈತ್ರಕ ವಂಶದ ಅರಸರು ಆಳಿದುದನ್ನು ಗಮನಿಸಿದ್ದೇವೆ. ಧರಸೇನ (೬೪೪–೫೪) ಹರ್ಷನ ಸಮಕಾಲೀನ. ಈತ ಗೂರ್ಜರರ ಭರುಕಚ್ಛವನ್ನು ಸ್ವಲ್ಪಕಾಲ ಅಧೀನಕ್ಕೆ ತಂದುಕೊಂಡಿದ್ದ. 'ರಾವಣವಧ'ದ ಕರ್ತೃ ಭಟ್ಟಿ ಇವನ ಆಸ್ಥಾನಕವಿ. ಶೀಲಾದಿತ್ಯ (V)ನ ಕಾಲದಲ್ಲಿ ಅರಬರು ವಲಭಿಯನ್ನು ಮುತ್ತಿದರು. ಗೂರ್ಜರ ಜಯಭಟನು ವಲಭಿ ನಗರದ ಪ್ರಜೆಗಳನ್ನು ಹಿಂಸಿಸುತ್ತಿದ್ದ ತಜ್ಜಿಕ್ (ಅರಬ)ನನ್ನು ಸೋಲಿಸಿದನೆಂದು ಹೇಳಿದೆ. ಅರಬರೇ ವಲಭಿಯ ನಾಶಕ್ಕೆ ಅಂತಿಮವಾಗಿ ಕಾರಣರಾದರು (೭೭೦). ವಲಭಿನಗರ ಹೀನಯಾನಸಂಘದ ಅಧ್ಯಯನ ಕೇಂದ್ರವಾಗಿತ್ತು. ಹುಯೆನ್‌ತ್ಸಾಂಗನ ಕಾಲದಲ್ಲಿ ನಾಲಂದಾ ವಿಶ್ವವಿದ್ಯಾಲಯದಲ್ಲಿದ್ದಂತೆ ಇಲ್ಲಿಯೂ ೬,೦೦೦ ವಿದ್ಯಾರ್ಥಿಗಳಿದ್ದರು.

ಉತ್ತರಭಾರತದಲ್ಲಿ ಹರ್ಷನ ನಂತರ, ೮೫೦ರ ವರೆಗಿನ ಕಾಲದ ರಾಜ್ಯಗಳಲ್ಲಿ ಖ್ಯಾತಿವೆತ್ತುದು ಬಂಗಾಲದ ಪಾಲ ಹಾಗೂ ಮಾಳವರಾಜಪುತಾನದ ಗೂರ್ಜರ ಪ್ರತೀಹಾರ ಮನೆತನಗಳು. ಬಂಗಾಲದ ಕೆಲಭಾಗಗಳು ಹರ್ಷನ ಅಧೀನದಲ್ಲಿದ್ದುವು. ನಂತರ ಯಶೋವರ್ಮ ಹಾಗೂ ಲಲಿತಾದಿತ್ಯರ ವಶವಾಗಿದ್ದುವು. ನಂತರ ಎಲ್ಲ ಗೊಂದಲಮಯ ಪರಿಸ್ಥಿತಿ. ೮ನೆಯ ಶತಮಾನದ ಮಧ್ಯಭಾಗದಲ್ಲಿ ಅಲ್ಲಿನ ಪ್ರಜೆಗಳು ಈ ಪರಿಸ್ಥಿತಿಗೆ ತಮ್ಮಲ್ಲಿನ ಅನೈಕ್ಯ ಕಾರಣವೆಂದು ಮನಗಂಡರು; ಎಲ್ಲ ಸಾಮಂತರೂ ನಾಯಕರೂ ಸ್ವೇಚ್ಛೆಯಿಂದ ತಮ್ಮ ಅಧಿಕಾರಗಳನ್ನು ಬಿಟ್ಟು ಸರ್ವಸಮ್ಮತ ನಾಯಕನೊಬ್ಬನನ್ನು ಆರಿಸಿದರು. ಹೀಗೆ ಆರಿಸಲ್ಪಟ್ಟ ಗೋಪಾಲನು ಪಾಲ ಮನೆತನದ ಮೂಲ ಪುರುಷ.

ಈತನ ಮಗ ಧರ್ಮಪಾಲ ೭೭೦ರಲ್ಲಿ ಪಟ್ಟಕ್ಕೆ ಬಂದ. ಇದೇ ವೇಳೆಗೆ ಗೂರ್ಜರ ಪ್ರತೀಹಾರರು ಪೂರ್ವಾಭಿಮುಖವಾಗಿ ತಮ್ಮ ರಾಜ್ಯವನ್ನು ವಿಸ್ತರಿಸುತ್ತಿದ್ದರು. ಈತನದು ಪಶ್ಚಿಮಾಭಿಮುಖ ವಿಜಯಯಾತ್ರೆ. ನಡುವೆ ಕರ್ಣಾಟಕದ ರಾಷ್ಟ್ರಕೂಟರು

ತಮ್ಮ ಪ್ರತಿಷ್ಠೆಯನ್ನು ಮೆರೆಸಲು ಉತ್ತರಾಭಿಮುಖವಾಗಿ ದಾಳಿಮಾಡುತ್ತಿದ್ದರು. ಈ ಮೂವರ ತ್ರಿಕೋನ ಸ್ಪರ್ಧೆ ಸುಮಾರು ಒಂದು ಶತಮಾನಕಾಲ ನಡೆದಿತ್ತು.

ಈಗಿನ ರಾಜಸ್ಥಾನದ ಬಹುಭಾಗ ಹಿಂದೆ ಗೂರ್ಜರಾತ್ರವೆಂದು ಕರೆಯಲ್ಪಟ್ಟಿತ್ತು. ಕ್ರಿ.ಶ. ೬ನೆಯ ಶತಮಾನದಲ್ಲಿ ಇಲ್ಲಿ ಗೂರ್ಜರರ ಒಂದು ಸಣ್ಣ ರಾಜ್ಯ ಅಸ್ತಿತ್ವಕ್ಕೆ ಬಂದಿತು. ಗೂರ್ಜರರು ಯಾರು–ಎಂಬುದು ಪ್ರಶ್ನೆಯಾಗಿಯೇ ಉಳಿದಿದೆ. ಗೂರ್ಜರ ಎಂಬುದು ಮೂಲತಃ ಒಂದು ಜನಾಂಗದ ಹೆಸರೆಂಬ ವಾದ ಸಮರ್ಪಕವೆನಿಸಿದರೂ ಅವರು ಪರಕೀಯರು, ಹೂಣರೊಡಗೂಡಿ ಭಾರತಕ್ಕೆ ವಲಸೆ ಬಂದವರು ಎನ್ನಲು ಸ್ಪಷ್ಟ ಆಧಾರಗಳಿಲ್ಲ. ಈ ರಾಜ್ಯದ ಮೂಲಪುರುಷ ಹರಿಶ್ಚಂದ್ರ. ವೇದವಿದ್ಯಾಪಾರಂಗತನಾದ ಬ್ರಾಹ್ಮಣ. ಈತನ ಬ್ರಾಹ್ಮಣಪತ್ನಿಯಲ್ಲಿ ಜನಿಸಿದವರು ಪ್ರತೀಹಾರರೆನಿಸಿಕೊಂಡರು. ಕ್ಷತ್ರಿಯ ಕುಲದ ಪತ್ನಿ ಸುಭದ್ರೆ. ಈತನ ಮೊಮ್ಮಗ ನಾಗಭಟ. ಅವನ ಮಗ ತಾತ. ತಾತನ ರಾಜಧಾನಿ ಭಿಲ್ಲಮಾಲ. ೬–೭ನೆಯ ಶತಮಾನಗಳ ನಂತರ ಈ ಕುಲದ ಭಿನ್ನ ಶಾಖೆಗಳಿಗೆ ಸೇರಿದ ಸಣ್ಣ ರಾಜ್ಯಗಳು ತಲೆಯೆತ್ತಿದುವು. ಅವರಲ್ಲಿ ಉಜ್ಜಯಿನಿಯನ್ನು ರಾಜಧಾನಿಯಾಗಿ ಹೊಂದಿದ್ದ ಗೂರ್ಜರ ಪ್ರತೀಹಾರರು ಖ್ಯಾತರು. ಈ ಮನೆತನದ ನಾಗಭಟ ಅರಬರ ವಿರುದ್ಧ ಹೋರಾಡಿ ಅವರನ್ನು ಹಿಮ್ಮೆಟ್ಟಿಸಿದ. ಈತನ ಸೋದರನ ಮೊಮ್ಮಗ ವತ್ಸರಾಜ. ೭೭೮ರಲ್ಲಿ ಪಟ್ಟಕ್ಕೆ ಬಂದ. ಮಾಳವ ಮತ್ತು ಪೂರ್ವ ರಾಜಸ್ಥಾನಗಳನ್ನೊಳಗೊಂಡ ಈತನ ರಾಜ್ಯ ಕ್ರಮೇಣ ಪೂರ್ವಾಭಿಮುಖವಾಗಿ ವಿಸ್ತಾರವಾಗುತ್ತ ಹೋಯಿತು. ಈ ಸಂದರ್ಭದಲ್ಲಿಯೇ ಈತನು ಪಾಲರನ್ನೂ ರಾಷ್ಟ್ರಕೂಟರನ್ನೂ ಎದುರಿಸಿದ್ದು.

ಕನೋಜ್ ಖ್ಯಾತಿವೆತ್ತ ನಗರವಾಗಿದ್ದು ಅದನ್ನು ಸ್ವಾಧೀನಪಡಿಸಿಕೊಳ್ಳುವುದು ಹೆಮ್ಮೆಯ ವಿಷಯವಾಗಿತ್ತು. ೮ನೆಯ ಶತಮಾನದ ಉತ್ತರಾರ್ಧದಲ್ಲಿ ಇಲ್ಲಿ ಆಯುಧ ಮನೆತನದ ಅರಸರು ಆಳುತ್ತಿದ್ದರು. ಇವರಲ್ಲಿ ಇಂದ್ರಾಯುಧ ಚಕ್ರಾಯುಧರೆಂಬ ಸೋದರರಲ್ಲಿ ಪ್ರತಿಸ್ಪರ್ಧೆಗಳುಂಟಾದುವು. ಇದರ ಪ್ರಯೋಜನ ಪಡೆದ ವತ್ಸರಾಜ ಇಂದ್ರಾಯುಧನನ್ನು ಸೋಲಿಸಿದ. ಧರ್ಮಪಾಲ ವತ್ಸರಾಜನನ್ನು ಎದುರಿಸಿದ, ಆದರೆ ಸೋತ. ಇಷ್ಟರಲ್ಲಿ ರಾಷ್ಟ್ರಕೂಟರ ಧ್ರುವ ಉತ್ತರಕ್ಕೆ ಬಂದು ವತ್ಸರಾಜನನ್ನು ಓಡಿಸಿದ. ಹೀಗೆ ಆರಂಭವಾಯಿತು ತ್ರಿಕೋನ ಸ್ಪರ್ಧೆ. ಇದರಂತೆಯೇ ಪ್ರತೀಹಾರರ ನಾಗಭಟ, ಪಾಲರ ಧರ್ಮಪಾಲ ಮತ್ತು ರಾಷ್ಟ್ರಕೂಟ ಗೋವಿಂದರ ನಡುವೆ (ಸು. ೮೦೯–೧೦) ಎರಡನೆಯ ಬಾರಿ, ಭೋಜ, ದೇವಪಾಲ ಹಾಗೂ ಗುಜರಾತ ರಾಷ್ಟ್ರಕೂಟ ಕುಲದ ಧ್ರುವರ ನಡುವೆ ಇನ್ನೊಮ್ಮೆ—ಹೀಗೆ ಕದನಗಳುಂಟಾದುವು. ವಿಜಯಲಕ್ಷ್ಮಿ ಇವರನ್ನು ವಂಚಿಸುತ್ತಲೇ ಇದ್ದಳು. ಸು. ೮೫೦ರ ವೇಳೆಗೆ ಈ ಸ್ಪರ್ಧೆ ಇನ್ನೂ ಅಂತ್ಯಗೊಂಡಿರಲಿಲ್ಲ.

ಕಲಚುರಿಗಳನ್ನು ಕುರಿತು ಮೇಲೆ ಹೇಳಿದೆ. ಸು. ೮೫೦ರ ವೇಳೆಗೆ ಈ ಮನೆತನದ ಮೂರು ಶಾಖೆಗಳು ತ್ರಿಪುರಿ, ಸರಯೂಪಾರ ಮತ್ತು ತುಮ್ಮಾನ ಅಥವಾ ರತ್ನಪುರಿಗಳಲ್ಲಿ

ಪ್ರಬಲವಾದುವು. ಅಂತೆಯೇ ಇಲ್ಲಿಂದ ಮುಂದಿನ ಶತಮಾನಗಳಲ್ಲಿ ಪರಮಾರರು, ಗುಜರಾತಿನ ಚಾಲುಕ್ಯರು, ಚೌಹಮಾನರು, ಸೇನರು ಉತ್ತರಭಾರತದ ರಾಜಕೀಯದಲ್ಲಿ ಮೆರೆದರು. ಅವರ ಕುರಿತು ಪ್ರಸ್ತಾಪ ಈಗ ಅನಾವಶ್ಯಕ. ೮–೧೨ನೆಯ ಶತಮಾನಗಳಲ್ಲಿ ನಡೆದ ಮಹತ್ತ್ವದ ಘಟನೆ ಭಾರತಕ್ಕೆ ಮಹಮ್ಮದೀಯರು ಕಾಲಿರಿಸಿದುದು. ೩ ಶತಮಾನಗಳ ಬಳಿಕ ಇವರು ಭಾರತದಲ್ಲಿ ಮಹಮ್ಮದೀಯ ರಾಜ್ಯವನ್ನೇ ಕಟ್ಟಿ ಇತಿಹಾಸದ ಗತಿಯನ್ನೇ ಬದಲಾಯಿಸಿದರಾದರೂ ಅದರ ಮೊದಲ ಹೆಜ್ಜೆಗಳನ್ನು ಈ ಕಾಲದಲ್ಲಿಯೇ ನೋಡಬಹುದು.

ಮಹಮ್ಮದೀಯರು ಭಾರತಕ್ಕೆ ಬಂದುದೂ ವ್ಯಾಪಾರಕ್ಕಾಗಿಯೇ. ಇಲ್ಲಿನ ಅಪಾರ ಐಶ್ವರ್ಯ ಅವರನ್ನು ಆಕರ್ಷಿಸಿತು. ಪರಕೀಯರು ಭಾರತಕ್ಕೆ ಬಂದು ನೆಲಸುವುದು ನಮಗೆ ಹೊಸತಲ್ಲ. ಭಾರತ ಸಂಸ್ಕೃತಿಯ ಸಮೀಕರಣ ಪ್ರವೃತ್ತಿ ಅವರೆಲ್ಲ ನಮ್ಮವರಲ್ಲಿ ಬೆರೆತು ಒಂದಾಗುವಂತೆ ಮಾಡುತ್ತಿತ್ತು. ಆದರೆ ಮಹಮದೀಯರ ಬರುವಿಕೆ ಭಿನ್ನವಾಗಿತ್ತು. ಇವರು ಬರುವಾಗಲೇ ತಮ್ಮ ಧರ್ಮಪ್ರಚಾರ ಹಾಗೂ ಮತಾಂತರ ಕಾರ್ಯಕ್ರಮಗಳಿಗೆ ಪ್ರಾಮುಖ್ಯ ನೀಡಿದರು. ಅನ್ಯಮತದ ಅಸಹನೆಯನ್ನು ಬೆಳಸಿಕೊಂಡೇ ಬಂದರು. ಇದು ಮಹತ್ತ್ವದ ಘಟನೆಗಳಿಗೆ ಕಾರಣವಾಯಿತು.

ಪ್ರವಾದಿ ಮಹಮ್ಮದನ ಮರಣದ (೬೩೨) ಶತಮಾನದೊಳಗೆ ಆತನ ಲೌಕಿಕ ಅಧಿಕಾರ ಉತ್ತರಾಧಿಕಾರಿಗಳ ಕಾರ್ಯಾಚರಣೆಗಳಿಂದ ಉತ್ತರಆಫ್ರಿಕ, ಸ್ಪೈನ್, ಫ್ರಾನ್ಸ್ ದೇಶಗಳಿಗೆ ವಿಸ್ತರಿಸಿತು. ಪರ್ಷಿಯನರ ಸಾಮ್ರಾಜ್ಯ ಇವರದಾಯಿತು. ಕೆಲವೇ ವರ್ಷಗಳಲ್ಲಿ ಇವರು ಆಕ್ಸಸ್ ನದಿಯ ಕೊಳ್ಳವನ್ನು ವಶಪಡಿಸಿಕೊಂಡು ಭಾರತದತ್ತ ಸರಿದರು. ಇವರ ನೌಕಾದಳ ಠಾಣ, ಭಡೋಚ ಮತ್ತು ದೇಬಲ್‌ಗಳಿಗೂ ಬಂದಿತು. ೭೧೨ರಲ್ಲಿ ಮಹಮದ್ ಬಿನ್ ಕಾಸಿಮನು ದೇಬಲ್ ಕೋಟೆಯನ್ನು ಹಿಡಿದನು. ಸಿಂಧ್‌ನ ಹೈದರಾಬಾದ್, ಬ್ರಾಹ್ಮಣಾಬಾದ್, ಮುಲ್ತಾನ್ ನಗರಗಳು ಸಹ ಇವನ ವಶವಾದುವು. ಇವನನ್ನು ಎದುರಿಸಿದ ದಾಹಿರ್ ಮತ್ತು ಆತನ ಮಗ ಜಯಸಿಂಹ ಸಾವನ್ನಪ್ಪಿದರು. ಅಂದಿನಿಂದ ಸಿಂಧ್‌ಪ್ರಾಂತ ಮಹಮ್ಮದೀಯರ ವಶವಾಯಿತೆನ್ನಬೇಕು. ಪ್ರತೀಹಾರ, ಚಾಲುಕ್ಯ ಮುಂತಾದ ಮನೆತನದ ಅರಸರು ಇಲ್ಲಿಂದ ಮಹಮ್ಮದೀಯರನ್ನು ಹಿಂದಕ್ಕೆ ಸರಿಸಲು ಯತ್ನಿಸಿದರು. ಬಹಳಮಟ್ಟಿಗೆ ಯಶಸ್ವಿಯಾದರು. ಆದರೂ ಆಗ ನೆಲಸಿದ ಮಹಮ್ಮದೀಯರು ಕ್ರಮೇಣ ತಮ್ಮ ಪ್ರಾಬಲ್ಯವನ್ನು ಹೆಚ್ಚಿಸಿಕೊಳ್ಳುತ್ತಲೇ ಹೋದರು. ಇದು ಮುಂದಿನ ಕತೆ.

## ದಕ್ಷಿಣಭಾರತ ಪಲ್ಲವರು

ದಕ್ಷಿಣಭಾರತದಲ್ಲಿ ೬ನೆಯ ಶತಮಾನದಲ್ಲಿ ಪಲ್ಲವರು ಪುನಃ ಪ್ರಬಲರಾದರು. ಕಳಭ್ರರ ವಶವಾಗಿದ್ದ ದೇಶವನ್ನು ಪಲ್ಲವ ಸಿಂಹವಿಷ್ಣು ಮುಕ್ತಗೊಳಿಸಿದ. ಈತ ನೆರೆಯ ಪಾಂಡ್ಯ ಮತ್ತು ಚೋಳರನ್ನು ಸೋಲಿಸಿ ಪಲ್ಲವರಾಜ್ಯವನ್ನು ಕಾವೇರಿಯವರೆಗೂ

ವಿಸ್ತರಿಸಿದ. ಈತನ ಮಗ ಗನೆಯ ಮಹೇಂದ್ರವರ್ಮ. ಈತನು ರಾಜ್ಯವನ್ನು ವಿಸ್ತರಿಸಿದನು. ಕಲೆ ಸಾಹಿತ್ಯಗಳನ್ನೂ ಪೋಷಿಸಿದನು. ಸ್ವತಃ ಕವಿ, ಸಂಗೀತಜ್ಞ. 'ಮತ್ತವಿಲಾಸಪ್ರಹಸನ'ವೆಂಬ ನಾಟಕದ ಕರ್ತೃ ಈತ. 'ಚೇತ್ತಕಾರಪುಲಿ' 'ವಿಚಿತ್ರಚಿತ್ತ' ಇತ್ಯಾದಿಗಳು ಇವನ ವಿಶಿಷ್ಟ ಬಿರುದುಗಳು. ಇವನ ಆಳಿಕೆಯ ಕೊನೆಗಾಲದಲ್ಲಿ ಇವನು ಚಾಲುಕ್ಯ ಇಮ್ಮಡಿ ಪುಲಕೇಶಿಯನ್ನು ಸೋಲಿಸಿದನು.

ಈ ಪಲ್ಲವ ಅರಸನ ಕಾಲದಿಂದ ದಕ್ಷಿಣ ಭಾರತದ ಇತಿಹಾಸದಲ್ಲಿ ಪ್ರಮುಖವೆನಿಸಿದ ಕರ್ಣಾಟಕ ಹಾಗೂ ತಮಿಳುನಾಡಿನ ಅರಸುಮನೆತನಗಳ ನಡುವೆ ರಾಜಕೀಯ ಮಹತ್ತ್ವಕ್ಕಾಗಿ ಪ್ರತಿಸ್ಪರ್ಧೆಗಳು ಆರಂಭವಾದುವು. ಅಂದು ಆರಂಭವಾದ ಈ ಸ್ಪರ್ಧೆ ೧೩ನೆಯ ಶತಮಾನದವರೆಗೂ ಮುಂದುವರಿಯಿತು. ದಕ್ಷಿಣ ಭಾರತದ ರಾಜಕೀಯ ಇತಿಹಾಸ ಈ ಪ್ರತಿಸ್ಪರ್ಧೆಗಳ ಸುತ್ತ ನೆಯ್ದ ಕತೆಯಾಗಿದೆ.

ಮಹೇಂದ್ರವರ್ಮನ ಮಗ ನರಸಿಂಹವರ್ಮ. ಈತ ತಂದೆಯ ಸೋಲಿನ ಸೇಡನ್ನು ತೀರಿಸಲೆಂದು ಚಾಲುಕ್ಯ ಪುಲಕೇಶಿಯನ್ನೆದುರಿಸಿದ, ಸೋಲಿಸಿದ. ಚಾಲುಕ್ಯ ರಾಜಧಾನಿಯಿಂದ ಬಾದಾಮಿಯನ್ನು ೧೩ ವರ್ಷಗಳ ಕಾಲ ಆಕ್ರಮಿಸಿದ. ಅನಂತರ ಹಿಂದಕ್ಕೆ ಸರಿಯಬೇಕಾಯಿತೆಂಬ ಮಾತು ಬೇರೆ. ಸಿಂಹಳದ ಮಾನವರ್ಮ ಪದಚ್ಯುತನಾಗಿದ್ದು, ಅವನನ್ನು ಪುನಃ ರಾಜ್ಯದಲ್ಲಿ ನೆಲೆಗೊಳಿಸಲು ಪಲ್ಲವ ಅರಸನು ನೆರವನ್ನು ನೀಡಿದ.

ನರಸಿಂಹವರ್ಮನ ಮೊಮ್ಮಗ ಗನೆಯ ಪರಮೇಶ್ವರವರ್ಮನೂ ಚಾಲುಕ್ಯರೊಡನೆ ಹೋರಾಡಿದ. ಆದರೆ ಆತನ ಮಗ ಇಮ್ಮಡಿ ನರಸಿಂಹವರ್ಮ ರಾಜಸಿಂಹನ ಕಾಲದಲ್ಲಿ ಶಾಂತಿ ನೆಲಸಿತ್ತು. ಕಲೆ ಸಾಹಿತ್ಯಗಳಿಗೆ ಹೆಚ್ಚು ಪ್ರೋತ್ಸಾಹ ದೊರೆಯಿತು. ಮಹಾಬಲಿಪುರದ ಕಡಲತೀರದ ದೇವಾಲಯ, ಕಂಚಿಯ ಕೈಲಾಸನಾಥಾಲಯ, ವೈಕುಂಠ ಪೆರುಮಾಳ್ ದೇವಾಲಯಗಳು ಇವನ ಕಾಲದ ಶಿಲ್ಪಕೃತಿಗಳು. ದಂಡಿ ಇವನ ಆಸ್ಥಾನದಲ್ಲಿ ಕೆಲಕಾಲ ಇದ್ದನೆಂದು ಪ್ರತೀತಿ ಇದೆ. ನಂತರ ಬಂದ ಪರಮೇಶ್ವರವರ್ಮ ಚಾಲುಕ್ಯರೊಡನೆ ಕದನವನ್ನು ಪುನರಾರಂಭಿಸಿದ, ಕದನದಲ್ಲಿ ಮಡಿದ. ಮಕ್ಕಳಿಲ್ಲದ ಈತನ ಉತ್ತರಾಧಿಕಾರಿಯನ್ನು ರಾಜ್ಯದ ಅಧಿಕಾರಿಗಳೂ ಘಟಿಕಾಸ್ಥಾನದ ಮಹಾಜನರೂ ಕೂಡಿಕೊಂಡು ಆರಿಸಿದರು. ಹಾಗೆ ಪಟ್ಟಕ್ಕೆ ಬಂದಾತ ಪಲ್ಲವ ಮನೆತನಕ್ಕೆ ಸಂಬಂಧಿಸಿದ ನಂದಿವರ್ಮ. ಈ ಘಟನೆಗಳನ್ನು ವಿವರಿಸುವ ಶಿಲ್ಪಗಳನ್ನೊಳಗೊಂಡ ಶಾಸನ ವೈಕುಂಠ ದೇವಾಲಯದಲ್ಲಿದೆ. ರಾಜ್ಯವನ್ನು ಶತ್ರುಗಳಿಂದ ಕಾಪಾಡಲು ಈತ ಬಹಳ ಶ್ರಮಿಸಿದನು. ಇವನ ಕಾಲದಲ್ಲಿಯೇ ಚಾಲುಕ್ಯ ಇಮ್ಮಡಿ ವಿಕ್ರಮಾದಿತ್ಯ ಮತ್ತು ಇಮ್ಮಡಿ ಕೀರ್ತಿವರ್ಮರು ಕಂಚಿಯನ್ನು ಮುತ್ತಿ, ಆಕ್ರಮಿಸಿ ದಾನಧರ್ಮಗಳನ್ನು ಮಾಡಿದರು. ವೈಷ್ಣವರ ಪ್ರಸಿದ್ಧ ಸಂತ ತಿರುಮಂಗೈ ಆಳ್ವಾರ್ ಈ ಕಾಲದಲ್ಲಿದ್ದನು.

ಕರ್ಣಾಟಕದಲ್ಲಿ ಚಾಲುಕ್ಯರ ಆಳಿಕೆ ಮುಗಿದು ರಾಷ್ಟ್ರಕೂಟರು ಬಂದಾಗ ಅವರೊಡನೆಯೂ ಪಲ್ಲವರು ಕಾದಬೇಕಾಯಿತು. ದಂತಿವರ್ಮನ ಮಗ ನಂದಿವರ್ಮ (III) ಪಾಂಡ್ಯರೊಡನೆಯೂ ಸೆಣಸಿ ತೆಳ್ಳಾರ ಕದನದಲ್ಲಿ ರಾಷ್ಟ್ರಕೂಟರ ಸಹಾಯದಿಂದ ಸೋಲಿ

ಸಿದನು. ೧ನೆಯ ಅಮೋಘವರ್ಷನ ಮಗಳಾದ ಶಂಖಳನ್ನು ಈತ ಮದುವೆಯಾಗಿದ್ದ ಕಾರಣ ಈ ಸಹಾಯ ಲಭಿಸಿತು. ಆದರೂ ಕ್ರಮೇಣ ಪಲ್ಲವರ ಪ್ರಾಬಲ್ಯ ಇಳಿಮುಖ ವಾಗತೊಡಗಿತು. ೯ನೆಯ ಶತಮಾನದ ಅಂತ್ಯದಲ್ಲಿ ಅಸ್ತಂಗತವಾಯಿತು.

ಭಾರತೀಯ ಸಂಸ್ಕೃತಿಯ ಬೆಳವಣಿಗೆಗೆ ಪಲ್ಲವರ ಕೊಡುಗೆ ಉನ್ನತಮಟ್ಟದ್ದು. ಇವರ ಕಾಲದಲ್ಲಿ ಜೈನ, ಶೈವ, ವೈಷ್ಣವ ಮತಗಳು ಊರ್ಜಿತಗೊಂಡವು. ಶೈವಸಂತರಾದ ಅಪ್ಪರ್, ಜ್ಞಾನಸಂಬಂಧರ್, ವೈಷ್ಣವ ತಿರುಮೊಳಿಶೈ ಮತ್ತು ತಿರುಮಂಗೈ ಆಳ್ವಾರರು ಈ ಕಾಲದವರು. ವಾಸ್ತು ಮತ್ತು ಶಿಲ್ಪಕಲೆಯಲ್ಲೂ ಇವರ ಸಾಧನೆ ಹಿರಿದು. ಮಹಾ ಬಲಿಪುರ ಮತ್ತು ಕಾಂಚೀಪುರಗಳಲ್ಲಿನ ದೇವಾಲಯಗಳು ಇವರ ಕಲಾಭಿರುಚಿಯ ಕೈಗನ್ನಡಿಗಳಾಗಿವೆ. ತಿರುಚಿನಾಪಲ್ಲಿ, ಮಂಡಗಪ್ಪಟ್ಟು ಮತ್ತು ಮಹೇಂದ್ರಮಂಗಲ ಗಳಲ್ಲಿರುವ ಗುಹಾದೇವಾಲಯಗಳು ದಕ್ಷಿಣ ಭಾರತದಲ್ಲಿ ಪ್ರಾಚೀನವಾದವು. ಚಾಲುಕ್ಯ ಪಲ್ಲವರ ನಡುವಣ ರಾಜಕೀಯ ಸಂಬಂಧ ದ್ವೇಷಯುಕ್ತವಾದುದಾದರೂ ಇದರ ಪರಿಣಾಮವಾಗಿ ಸಂಸ್ಕೃತಿ ಕಲೆಗಳಲ್ಲಿ ಉಂಟಾದ ಪರಸ್ಪರ ವಿನಿಮಯ ಗಮನಾರ್ಹ ವಾದುದು.

ಈವರೆಗೆ ಆರಂಭದಿಂದ ೮೫೦ರ ವರೆಗಿನ ಭಾರತದ ರಾಜಕೀಯ ಘಟನೆಗಳ ಹಕ್ಕಿನೋಟವನ್ನು ಕಂಡಿದ್ದೇವೆ; ಸಾಮಾಜಿಕ, ಆರ್ಥಿಕ ಸಾಂಸ್ಕೃತಿಕ ಕ್ಷೇತ್ರಗಳಲ್ಲಾದ ಬದಲಾವಣೆಗಳನ್ನೂ ಸಾಧನೆಗಳನ್ನೂ ಗಮನಿಸಿದ್ದೇವೆ. ಇವೆಲ್ಲದರ ಪರಸ್ಪರ ಪ್ರಭಾವ ಭಾರತ ಸಂಸ್ಕೃತಿಯ ಬೆಳವಣಿಗೆಗೆ ಮಾರ್ಗ. ಸಾಹಿತ್ಯ ಜನಜೀವನದ ಕೈಗನ್ನಡಿ ಎಂದಾಗ ಇವುಗಳನ್ನು ಸಾಹಿತ್ಯದಲ್ಲಿ ಕಾಣುವುದು ಸಹಜ. ಕನ್ನಡ ಸಾಹಿತ್ಯ ಇದಕ್ಕೆ ಹೊರತಲ್ಲ. ಈ ಕಾಲದಲ್ಲಿ ಕನ್ನಡ ಬೆಳವಣಿಗೆಯು ಆರಂಭಘಟ್ಟದಲ್ಲಿತ್ತು. ಆದರೂ ಉತ್ತರದ ಪ್ರಾಕೃತ ಸಂಸ್ಕೃತಗಳು, ದಕ್ಷಿಣದ ತಮಿಳು ಈ ಭಾಷೆಗಳ ಪ್ರಭಾವ ಸಮಕಾಲೀನ ಭಾಷೆ ಸಾಹಿತ್ಯಗಳಲ್ಲಿ ಗೋಚರಿಸಿವೆ. ಮಹಾಕಾವ್ಯಗಳೆನಿಸಿದ ರಾಮಾಯಣ ಮಹಾ ಭಾರತದ ಕತೆಗಳು ಸಾಹಿತ್ಯಕ್ಕೂ ಕಲೆಗೂ ಆವಶ್ಯಕವಾದ ಸಾಮಗ್ರಿಯನ್ನೊದಗಿಸಿವೆ. ಜೈನಧರ್ಮ ಕರ್ಣಾಟಕಕ್ಕೆ ಕಾಲಿಟ್ಟ ಬಳಿಕ ಈ ಕಾವ್ಯಗಳಲ್ಲಿಯ ಜೈನಧರ್ಮದ ಪ್ರಭಾವ ನಮ್ಮ ಸಾಹಿತ್ಯದ ಮೇಲೆ ಉಂಟಾಗಿರುವುದನ್ನೂ ಕಾಣುತ್ತೇವೆ. ನಮ್ಮ ಜನ ಜೀವನ ಸಂಸ್ಕೃತಿಗಳು, ಸಂಪ್ರದಾಯ ಆಚಾರವ್ಯವಹಾರಗಳು ಶತಮಾನಗಳಿಂದ ರೂಢಿಸಿಕೊಂಡು ಬಂದ ಭಾರತೀಯ ಸಂಸ್ಕೃತಿಯ ಪ್ರತೀಕಗಳೇ ಆಗಿವೆ. ನಮ್ಮ ಅರಸರು ಆಡಳಿತ ಕ್ಷೇತ್ರದಲ್ಲಿ, ರಾಜಕೀಯ ವ್ಯವಹಾರಗಳಲ್ಲಿ ಪುರಾತನ ಪ್ರಚಲಿತ ಪದ್ಧತಿಗಳನ್ನೇ ಅನುಸರಿಸಿದರು. ಆದರೆ ಇಲ್ಲಿನ ಪ್ರಾಕೃತಿಕಲಕ್ಷಣ, ಸೌಕರ್ಯಗಳಿಗೆ ಅನುಗುಣವಾಗಿ ಸೂಕ್ತ ಮಾರ್ಪಾಡುಗಳನ್ನು ಮಾಡಿ ಅಳವಡಿಸಿಕೊಂಡರು. ಭಾರತೀಯ ಸಂಸ್ಕೃತಿಯ ಒಂದು ಮುಖವೇ ಆದರೂ ವಿಶಿಷ್ಟತೆಯನ್ನು ಕಾಪಾಡಿಕೊಂಡು ಕರ್ಣಾಟಕ ಸಂಸ್ಕೃತಿ ಎಂಬುದು ಈ ಶತಮಾನಗಳಲ್ಲಿ ತಲೆಯೆತ್ತಿತು.

## ಸಾಹಿತ್ಯ

ಪ್ರವೇಶ : ಭಾರತ ಹಲವು ಭಾಷೆಗಳ ದೇಶ. ಭಾರತ ಸಂವಿಧಾನದ ಎಂಟನೆಯ ಅನುಸೂಚಿಯಲ್ಲಿ ಉಲ್ಲೇಖಿತವಾಗಿರುವ ಭಾಷೆಗಳ ಸಂಖ್ಯೆಯೇ ೧೫. ಇವಲ್ಲದೆ ೭೨೦ ಉಪಭಾಷೆಗಳೂ ಸ್ವತಂತ್ರಭಾಷೆಗಳೆನಿಸಿಕೊಳ್ಳಬಲ್ಲ ತಾಯಿನುಡಿಗಳೂ ಇವೆ. ಇವು ಗಳಲ್ಲಿ ಹಲವಕ್ಕೆ ದೀರ್ಘಸಾಹಿತ್ಯೇತಿಹಾಸವಾಗಲಿ, ಲಿಪಿಗಳಾಗಲಿ, ವಿಪುಲ ಶಬ್ದಸಂಪತ್ತಿ ಯಾಗಲಿ ಇಲ್ಲದಿರಬಹುದು ; ಆದರೆ ಇವೆಲ್ಲವುಗಳಿಂದ ಕೂಡಿ ಪರಿಪುಷ್ಟವಾದ, ಜನರ ಬಾಯಲ್ಲಿ ಜೀವಂತವಾಗಿರುವ ಭಾಷೆಗಳ ಸಂಖ್ಯೆಯೇನೂ ಕಡಿಮೆಯಿಲ್ಲ. ಭಾರತದ ಉತ್ತರ ಮತ್ತು ವಾಯುವ್ಯ ಭಾಗಗಳಲ್ಲಿ ಪ್ರಚಾರದಲ್ಲಿರುವ ಹಿಂದಿ, ಕಾಶ್ಮೀರಿ, ಪಂಜಾಬಿ, ಉರ್ದು ; ಪೂರ್ವದ ರಾಜ್ಯಗಳಲ್ಲಿ ಪ್ರಚಲಿತವಿರುವ ಒರಿಯ, ಬಂಗಾಲಿ, ಅಸ್ಸಾಮಿ ; ಪಶ್ಚಿಮ ಭಾರತದ ಗುಜರಾತಿ, ಮರಾಠಿ, ಸಿಂಧಿ ; ದಕ್ಷಿಣದ ತಮಿಳು, ಕನ್ನಡ, ತೆಲುಗು, ಮಲಯಾಳ—ಇವುಗಳಲ್ಲಿ ಒಂದೊಂದೂ ವೈಶಿಷ್ಟ್ಯಪೂರ್ಣ. ಸಂಸ್ಕೃತವಂತೂ ಆಧುನಿಕ ಭಾರತೀಯ ಭಾಷೆಗಳೆಲ್ಲವರ ಮೇಲೂ ಪ್ರಭಾವ ಬೀರಿದೆ ; ಹಲವು ಭಾಷೆಗಳ ತಾಯಿ ಬೇರಾಗಿದೆ. ಇವು ಮಾತ್ರವೇ ಅಲ್ಲ, ಡೋಗ್ರಿ, ಕೊಂಕಣಿ, ತುಳು, ಮೈಥಿಲಿ ಮುಂತಾ ದವೂ ಭಾಷೆ ಹಾಗೂ ಸಾಹಿತ್ಯ ದೃಷ್ಟಿಯಿಂದ ಮಹತ್ತ್ವದವಾಗಿವೆ. ಭಾರತದ ವೈಶಾಲ್ಯ ಹಾಗೂ ಜನಸಂಖ್ಯೆಯ ದೃಷ್ಟಿಯಿಂದ ಈ ಪರಿಸ್ಥಿತಿ ಅಸಹಜವೇನೂ ಅಲ್ಲ. ಪೂರ್ವ-ಪಶ್ಚಿಮವಾಗಿ ಸುಮಾರು ೨,೫೦೦ ಮೈಲಿಗಳೂ ದಕ್ಷಿಣೋತ್ತರವಾಗಿ ಸುಮಾರು ೨,೦೦೦ ಮೈಲಿಗಳೂ ಇರುವ ಭಾರತದ ವಿಸ್ತೀರ್ಣ ಸುಮಾರು ೩೨,೭೬,೧೪೧ ಚ. ಕಿಮೀ ; ಜನಸಂಖ್ಯೆ ೫೪,೭೯,೪೯,೪೮೯ (೧೯೭೧).

ಆಧುನಿಕ ಭಾರತೀಯ ಭಾಷೆಗಳ ಸಾಹಿತ್ಯವನ್ನೆಲ್ಲ ಒಂದು ಕಡೆ ರಾಶಿ ಹಾಕಿದರೆ ಅದು ಇಡೀ ಯೂರೋಪಿನ ಎಲ್ಲ ಭಾಷೆಗಳ ಒಟ್ಟು ಸಾಹಿತ್ಯದಷ್ಟೇ ಆಗುವುದೆಂದು ನಗೇಂದ್ರ ಅವರು ಹೇಳುತ್ತಾರೆ. ವೈದಿಕ ಸಂಸ್ಕೃತ, ಸಂಸ್ಕೃತ, ಪಾಳಿ ಪ್ರಾಕೃತ ಗಳು, ಅಪಭ್ರಂಶ ಇವೆಲ್ಲವನ್ನೂ ಸೇರಿಸಿದರಂತೂ ಭಾರತದ ಒಟ್ಟು ಸಾಹಿತ್ಯರಾಶಿ ಊಹೆಯನ್ನೂ ಮೀರಿಸುವಂಥದು.[8]

ಭಾರತದ ಭಾಷಾಸಾಹಿತ್ಯಗಳು ವೈವಿಧ್ಯಮಯವೂ ವೈಶಿಷ್ಟ್ಯಪೂರಿತವೂ ಆದಂಥ ವಾದರೂ, ವಿವಿಧ ಮತಧರ್ಮಗಳೂ ಜೀವನವಿಧಾನಗಳೂ ಇರುವ ಭಾರತದಲ್ಲಿ ಎಲ್ಲ ರಿಗೂ ಸಮಾನವಾದ ಕೆಲವು ಗುಣಲಕ್ಷಣಗಳಿರುವಂತೆ, ಈ ಎಲ್ಲ ಭಾಷೆಗಳಿಗೂ ಸಮಾನ ವಾದ ಕೆಲವು ಸೂತ್ರಗಳುಂಟು. ಹುಟ್ಟು, ಬೆಳೆವಣಿಗೆ, ಮನೋಧರ್ಮಗಳು ಬೇರೆಬೇರೆ ಯಾದರೂ ಇವುಗಳ ಮೂಲಭೂತವಾದ ಏಕತೆ ಬೆರಗುಗೊಳಿಸುವಂಥದು. ರಾಜಕೀಯ ವಾಗಿ, ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ, ಭಾಷಿಕವಾಗಿ ಹಲವು ವಿಭಿನ್ನ ಪ್ರಭಾವ ಗಳಿಗೆ ಒಳಗಾಗಿಯೂ ಭಾರತ ಅಖಂಡರಾಷ್ಟ್ರವಾಗಿ ಉಳಿದಿರುವುದೇ ಒಂದು ಮಹತ್ತ್ವದ ಸಂಗತಿ. ರಾಧಾಕೃಷ್ಣನ್ ಅವರು ಹೇಳುವಂತೆ ಭಾರತದ ಭಾಷೆಗಳು ಹಲವಾದರೂ ಭಾರತೀಯರ ಸಾಹಿತ್ಯ ಒಂದೇ.

ಸಾಹಿತ್ಯದ ಪ್ರಾಚೀನತೆ: ಭಾರತೀಯ ಸಾಹಿತ್ಯ ಕನಿಷ್ಠ ೩,೦೦೦ ವರ್ಷಗಳಷ್ಟಾದರೂ ಪ್ರಾಚೀನವಾದ್ದೆಂಬುದು ನಿರ್ವಿವಾದ. ಈ ದೀರ್ಘಕಾಲದಲ್ಲಿ ಭಾರತದ ಭಾಷೆ ಸಾಹಿತ್ಯಗಳು ಹಲವು ಪರಿವರ್ತನೆಗಳಿಗೆ ಒಳಗಾಗಿವೆ, ಹಲವು ಕವಲುಗಳಾಗಿ ಒಡೆದಿವೆ. ಒಮ್ಮೆ ಜನರು ಆಡುತ್ತಿದ್ದ ಭಾಷೆಗಳು ಈಗ ಆಡುಭಾಷೆಗಳಾಗಿಲ್ಲವಾದರೂ ಅವು ಸಾಹಿತ್ಯ ಕೃತಿಗಳಲ್ಲೂ ವ್ಯಾಕರಣಗ್ರಂಥಗಳಲ್ಲೂ ಚಿರಂತನವಾಗಿ ಉಳಿದಿವೆ; ಆಧುನಿಕಭಾಷೆಗಳಿಗೆ ಸ್ಫೂರ್ತಿಕೇಂದ್ರಗಳಾಗಿವೆ. ಮೂರು ಸಾವಿರ ವರ್ಷಗಳಿಗೂ ಬಹು ಹಿಂದಿನಿಂದಲೂ ಭಾಷೆ ಸಾಹಿತ್ಯಗಳು ಇಲ್ಲಿ ಬೆಳೆದುಬಂದಿರಬೇಕು. ಹರಪ್ಪ–ಮೊಹೆಂಜೊದಾರೊಗಳಲ್ಲಿ ದೊರಕಿರುವ ಮುದ್ರೆಗಳ ಲಿಪಿಯನ್ನು ತೃಪ್ತಿಕರವಾಗಿ ಓದುವುದು ಸಾಧ್ಯವಾದರೆ ಭಾರತದ ಭಾಷೆ ಸಾಹಿತ್ಯಗಳ ಇತಿಹಾಸವನ್ನು ಇನ್ನೂ ಒಂದೆರಡು ಸಹಸ್ರಮಾನಗಳಷ್ಟು ಹಿಂದಕ್ಕೆ ಕೊಂಡೊಯ್ಯುವುದು ಸಾಧ್ಯ. ಸದ್ಯಕ್ಕೆ ಇದು ಲಿಪಿವಿಜ್ಞಾನಿಗಳಿಗೂ ಭಾಷಾ ಸಾಹಿತ್ಯಗಳ ಇತಿಹಾಸಕಾರರಿಗೂ ಒಂದು ಒಗಟಾಗಿದೆ.

ಇತಿಹಾಸಪೂರ್ವ ಭಾರತದಲ್ಲಿ ವಾಸವಾಗಿದ್ದ ಜನರ ಮತ್ತು ಅವರು ಆಡುತ್ತಿದ್ದ ಭಾಷೆಗಳ ವಿಚಾರವಾಗಿ ನಾನಾ ವಾದಗಳುಂಟು. ಪ್ರಾಗಿತಿಹಾಸಕಾಲದಲ್ಲಿ ಭಾರತದಲ್ಲಿ ಮಾನವ ವಾಸವಾಗಿದ್ದನೇ ಎಂಬುದನ್ನು ನಿರ್ವಿವಾದವಾಗಿ ಹೇಳುವುದು ಇನ್ನೂ ಸಾಧ್ಯವಾಗಿಲ್ಲ. ಆ ಕಾಲದ ಮಾನವನ ಪಳೆಯುಳಿಕೆಗಳು ಇಲ್ಲವೇ ಇಲ್ಲವೆನ್ನುವಷ್ಟು ಅಲ್ಪ. ಎರಡು ಸಾವಿರ ವರ್ಷಗಳಿಗೂ ಹಿಂದೆ ಸಂಭವಿಸಿದ ಮಾನವವಲಸೆಗಳ ಸ್ವರೂಪವನ್ನು ಸ್ಥೂಲವಾಗಿಯಾದರೂ ಅರಿಯುವುದು ಸಾಧ್ಯವಾದರೆ, ಆ ಕಾಲದ ಭಾಷೆಗಳ ಸ್ವರೂಪವನ್ನು ಕೆಲಮಟ್ಟಿಗೆ ಅರಿಯುವುದು ಸಾಧ್ಯ. ಏಕೆಂದರೆ ಭಾಷೆ ಒಂದು ಜನಾಂಗದ ಸಂಸ್ಕೃತಿಯ ಅಭಿವ್ಯಕ್ತಿಗಳಲ್ಲೊಂದು.

ಜನಾಂಗಗಳು, ಭಾಷೆಗಳು: ಭಾರತದಲ್ಲಿ ಮಾನವನ ಉಗಮವಾಗಲಿಲ್ಲವೆಂದೂ ಇಲ್ಲಿಯ ನಿವಾಸಿಗಳೆಲ್ಲ ಮೂಲತಃ ಹೊರಗಿನಿಂದ ಬಂದವರೆಂದೂ ಭಾರತದಲ್ಲಿ ಇವರು ಹಲವು ಪ್ರಧಾನ ಗುಣಲಕ್ಷಣಗಳನ್ನು ಬೆಳಸಿಕೊಂಡು ಅನ್ಯದೇಶಗಳಲ್ಲಿ ಇವನ್ನು ಪ್ರಸರಿಸಿರಬಹುದೆಂದೂ ಒಂದು ವಾದವುಂಟು.[9] ಇದನ್ನು ತರ್ಕಬದ್ಧವಾಗಿ ಮುಂದುವರಿಸಿರುವವರಲ್ಲಿ ಮುಖ್ಯರಾದವರು ಜೆ. ಎಚ್. ಹಟನ್. ಇತಿಹಾಸಪೂರ್ವಕಾಲದಲ್ಲಿ ಭಾರತಕ್ಕೆ ಕಾಲಾನುಕ್ರಮವಾಗಿ ವಲಸೆಬಂದ ಜನಾಂಗಗಳು ನೀಗ್ರಿಟೊಗಳು, ಪ್ರೋಟೊ–ಆಸ್ಟ್ರಲಾಯ್ಡರು, ಆದಿ ಮೆಡಿಟರೇನಿಯನರು, ಮುಂದುವರಿದ ಮೆಡಿಟರೇನಿಯನರು, ಆರ್ಮೆನಾಯ್ಡರು, ಆಲ್ಪೈನರು, ವೈದಿಕ ಆರ್ಯರು ಮತ್ತು ಮಾಂಗೊಲಾಯ್ಡರು. ಈ ವಿದ್ವಾಂಸರ ಪ್ರಕಾರ ಭಾರತಕ್ಕೆ ಬಂದ ಅತ್ಯಂತ ಪ್ರಾಚೀನ ಜನ ನೀಗ್ರಿಟೊಗಳು. ಇವರು ಆಫ್ರಿಕದಿಂದ ಬಂದ ಪೃಥುಕಪಾಲ (Brachycephal) ನೀಗ್ರಾಯ್ಡರು. ಇವರನ್ನು ಈಗ ಭಾರತದ ಅಂಡಮಾನ್ ದ್ವೀಪಗಳಲ್ಲಿ ಮಾತ್ರ ಕಾಣಬಹುದು. ಅಲ್ಲಿ ಇಂದಿಗೂ ಇವರ ಭಾಷೆ ಉಳಿದುಬಂದಿದೆ. ಅಸ್ಸಾಮಿನ ನಾಗಾಗಳಲ್ಲೂ ದಕ್ಷಿಣ ಭಾರತದ ಕೆಲವು ಬುಡಕಟ್ಟುಗಳಲ್ಲೂ ಇವರ ಗುರುತುಗಳಿವೆ. ಪ್ರೋಟೊ–ಆಸ್ಟ್ರಲಾಯ್ಡರು ಮೆಡಿಟರೇನಿಯನ್ ಜನಾಂಗದ ಒಂದು

ಹಳೆಯ ಕವಲು. ಇವರು ಪೂರ್ವ ಮೆಡಿಟರೇನಿಯನ್ ಪ್ರದೇಶ(ಪ್ಯಾಲಸ್ಟೈನ್)ದಿಂದ ಬಂದವರು. ಇವರು ಭಾರತದಲ್ಲೂ ಆದರ ಹೊರಗೂ ಹಲವು ಮಾರ್ಪಾಟುಗಳಿಗೆ ಒಳಗಾದರು. ಆಸ್ಟ್ರಿಕ್ ಭಾಷೆಯ ಆರಂಭದ ರೂಪಗಳನ್ನು ಭಾರತಕ್ಕೆ ತಂದವರು ಮೂರನೆಯ ಜನಾಂಗದವರಾದ ಆದಿ ಮೆಡಿಟರೇನಿಯನರು. ನಾಗರಿಕರಾದ ಅಥವಾ ಮುಂದುವರಿದ ಮೆಡಿಟರೇನಿಯನರೇ ಭಾರತದಲ್ಲಿ ದ್ರಾವಿಡರೆನಿಸಿಕೊಂಡರು. ಮುಂದುವರಿದ ಮೆಡಿಟರೇನಿಯನರೊಂದಿಗೇ–ದ್ರಾವಿಡರೊಂದಿಗೇ–ಬಂದವರು ಆರ್ಮೆನಾಯ್ಡರು. ಇವರು ಶಿಷ್ಟ ಆಲ್ಪೈನ್ ಬುಡಕಟ್ಟಿನ ಒಂದು ವಿಶಿಷ್ಟ ಕವಲು. ಆಲ್ಪೈನ್ ಜನರ ಕುರುಹುಗಳನ್ನು ಗುಜರಾತ್ ಬಂಗಾಲಗಳಲ್ಲಿ ಕಾಣಬಹುದು. ಇವರು ವೈದಿಕ ಆರ್ಯರಿಗಿಂತ ಮುಂಚೆ ಬಂದವರು. ಇವರು ಬಹುಶಃ ಆರ್ಯನ್ ಉಪಭಾಷೆಗಳನ್ನೇ ಆಡುತ್ತಿದ್ದರು. ಇವರ ಅನಂತರ ಬಂದವರು ವೈದಿಕ ಆರ್ಯರು. ವೈದಿಕ ಆರ್ಯನ್ ಭಾಷೆಯಾದ ಸಂಸ್ಕೃತವನ್ನು ತಂದವರು ಇವರೇ. ಕೊಟ್ಟಕೊನೆಗೆ ಬಂದವರೆಂದರೆ ಮಾಂಗೊಲಾಯ್ಡರು. ಇವರು ಭಾರತದ ಉತ್ತರ ಹಾಗೂ ಪೂರ್ವದ ಅಂಚುಗಳಲ್ಲಿ ಮಾತ್ರ ನೆಲಸಿದರು. ಆದ್ದರಿಂದ ಇವರ ಪ್ರಭಾವ ಹೆಚ್ಚೇನೂ ಇಲ್ಲವೆಂದು ಹೇಳಲಾಗಿದೆ.[10]

ಪ್ರಾಗಿತಿಹಾಸಕಾಲದ ಭಾರತದ ಜನಾಂಗಗಳ ಬಗ್ಗೆ ಇತ್ತೀಚೆಯ ಗಣ್ಯ ಅಭಿಪ್ರಾಯವೆಂದರೆ ಬಿ. ಎಸ್. ಗುಹಾ ಅವರದು.[11] ಪ್ರಾಗಿತಿಹಾಸ ಭಾರತದ ಜನರನ್ನು ಸ್ಥೂಲವಾಗಿ ಆರು ಜನಾಂಗಗಳಾಗಿ ಅವರು ವಿಂಗಡಿಸಿದ್ದಾರೆ: (೧) ನೀಗ್ರಿಟೊಗಳು. ಈ ಜನಾಂಗ ಅಂಡಮಾನ್ ಬಿಟ್ಟರೆ ಭಾರತದ ಉಳಿದ ಭಾಗದಲ್ಲಿ ಬಹುತೇಕ ಅಳಿಸಿ ಹೋಯಿತು. (೨) ಪ್ರೋಟೋ–ಆಸ್ಟ್ರಲಾಯ್ಡರು. ಬಹುಶಃ ಪಶ್ಚಿಮದಿಂದ ಬಂದಿರಬೇಕು. ಭಾರತದ ಹಲವು ಆದಿವಾಸಿ ಜನರು ಈ ಬುಡಕಟ್ಟಿನವರು. ಇವರು ಇತರ ಜನಾಂಗಗಳೊಂದಿಗೆ ಬೆರೆತುಹೋದರು. (೩) ಮಾಂಗೊಲಾಯ್ಡರು. ಅಸ್ಸಾಮಿನಲ್ಲೂ ಭಾರತ–ಬರ್ಮ ಗಡಿಪ್ರದೇಶದಲ್ಲೂ ಸಿಕ್ಕಿಮ್–ಭೂತಾನಗಳಲ್ಲೂ ಕಂಡುಬರುವವರು. (೪) ಮೆಡಿಟರೇನಿಯನ್ ಜನಾಂಗಗಳಲ್ಲಿ ಮುಖ್ಯವಾಗಿ ಮೂರು ಪ್ರರೂಪಗಳುಂಟು : (i) ಪೇಲಿಯೊ ಮೆಡಿಟರೇನಿಯನರು ಮುಖ್ಯವಾಗಿ ಕನ್ನಡ, ತಮಿಳು ಮತ್ತು ಮಲಯಾಳ ಭಾಷೆಗಳನ್ನಾಡುವ ಪ್ರದೇಶಗಳಲ್ಲಿದ್ದಾರೆ; (ii) ನಿಜವಾದ ಮೆಡಿಟರೇನಿಯನ್ ಅಥವಾ ಯೂರೋಪಿಯನ್ ಪ್ರರೂಪ ಪಂಜಾಬ್ ಮತ್ತು ಗಂಗಾನದಿಯ ಮೇಲ್ದಂಡೆ ಪ್ರದೇಶದಲ್ಲಿ ಕಂಡುಬರುತ್ತದೆ. ಆರ್ಯರು ಬರುವುದಕ್ಕೆ ಮುಂಚೆ ಉತ್ತರ ಭಾರತದಲ್ಲಿ ಇದ್ದ 'ದ್ರಾವಿಡ'ರು ಇವರೇ ಎಂದು ಊಹಿಸಲಾಗಿದೆ. (iii) ಮೂರನೆಯ ಮೆಡಿಟರೇನಿಯನ್ ಪ್ರರೂಪವನ್ನೇ ಪ್ರಾಚ್ಯ ಶಾಖೆಯೆಂದು ಕರೆಯಲಾಗಿದೆ. ಈ ಶಾಖೆಯನ್ನೇ ಸೆಮೆಟಿಕ್ ಅಥವಾ ಯೆಹೂದ್ಯ ಎಂದು ತಪ್ಪಾಗಿ ಕರೆದಿದೆ. ಈ ಶಾಖೆಯ ಲಕ್ಷಣಗಳನ್ನು ಪಂಜಾಬ್, ಸಿಂಧ್, ರಾಜಸ್ಥಾನ, ಉತ್ತರ ಪ್ರದೇಶಗಳಲ್ಲೂ ಭಾರತದ ಇತರ ಕಡೆಗಳಲ್ಲೂ ವಿರಳವಾಗಿ ಕಾಣಬಹುದು. (೫) ವಾಸ್ತವವಾಗಿ ಮಧ್ಯಏಷ್ಯದ ಪರ್ವತ ಪ್ರದೇಶಗಳ ಮೂಲದ ಪೃಥುಕಪಾಲ ಗುಂಪುಗಳ ಆಲ್ಪೈನ್ ಮತ್ತು ಡಿನಾರಿಕ್ ಜನ ಭಾರತದ

ಬಹುಭಾಗಗಳಲ್ಲಿ ಹರಡಿಕೊಂಡರು. ಇವರ ಕುರುಹುಗಳನ್ನು ಬಂಗಾಲ, ಒರಿಸ್ಸ, ಕಾಥೇವಾಡ, ಕರ್ಣಾಟಕ ಮತ್ತು ತಮಿಳು ನಾಡುಗಳಲ್ಲಿ (ಕೊಡಗಿನಲ್ಲಿ ಶುದ್ಧ ರೂಪದಲ್ಲಿ) ಕಾಣಬಹುದು. ಮುಂಬಯಿಯ ಪಾರಸಿಗಳು ಕೂಡ ಸ್ವಲ್ಪ ಆನಂತರ ಬಂದ ಪೃಥುಕಪಾಲ ಗುಂಪುಗಳವರು. ಇವರು ಆರ್ಮೆನಾಯ್ಡ್ ಸಂಬಂಧಿಗಳು. ಕೊನೆಯ ಗುಂಪು ಆರ್ಯನ್ ಭಾಷೆ ಆಡುವ ನಾರ್ಡಿಕ್ ಜನಾಂಗದ್ದು. ನಾರ್ಡಿಕರು ಕ್ರಿ. ಪೂ. ಎರಡನೆಯ ಸಹಸ್ರಮಾನದ ಸುಮಾರಿನಲ್ಲಿ ಭಾರತಕ್ಕೆ ಬಂದಿರಬೇಕು. ಇವರು ಯೂರೋಪಿಯನ್ ಪ್ರರೂಪಿಗಳು. ಭಾರತದ ಸಾಂಸ್ಕೃತಿಕ ಸಾಮರಸ್ಯಕ್ಕೆ ಕಾರಣರಾಗಿ ಹಿಂದು ನಾಗರಿಕತೆಗೆ ಬುನಾದಿ ಹಾಕಿದವರು ಇವರೇ.

ಭಾರತದಲ್ಲಿ ಈ ವಿವಿಧ ಪ್ರರೂಪಗಳು ಪರಸ್ಪರವಾಗಿ ಮಿಳಿತವಾದುದರಿಂದ ಇವನ್ನು ಪ್ರತ್ಯೇಕಿಸಿ ನೋಡುವುದು ಸಾಧ್ಯವಿಲ್ಲವಾದರೂ ಸ್ಥೂಲವಾಗಿ ವಾಯವ್ಯ ಭಾರತದಲ್ಲಿ ಪ್ರಧಾನವಾಗಿ ನಾರ್ಡಿಕ್ ಅಂಶವನ್ನೂ ಪರ್ಯಾಯದ್ವೀಪೀಯ ಭಾರತದಲ್ಲಿ ಪೇಲಿಯೊ ಮೆಡಿಟರೇನಿಯನ್ ಅಂಶವನ್ನೂ ಗುರುತಿಸಬಹುದು. ವಾಯವ್ಯ ಭಾರತದ ನಾರ್ಡಿಕ್ ಜನರು ಮೆಡಿಟರೇನಿಯನ್ ಹಾಗೂ ಪ್ರಾಚ್ಯ ಜನರೊಂದಿಗೆ ಬೆರೆತರು. ಈ ಎರಡೂ ಪ್ರದೇಶ ಗಳ ಉಭಯ ಪಾರ್ಶ್ವಗಳಲ್ಲಿ ಆಲ್ಪೊ-ಡಿನಾರಿಕ್ ಗುಂಪುಗಳು ಇತರ ಗುಂಪುಗಳೊಂದಿಗೆ ಬೆರೆತುವು. ಆದಿಮ ಕಪ್ಪು ಜನರ ಅಂಶಗಳು, ಮುಖ್ಯವಾಗಿ ಪೇಲಿಯೊ ಮೆಡಿಟರೇನಿಯನ್ ಅಂಶಗಳು, ಎಲ್ಲೆಡೆಯಲ್ಲೂ ಮಿಶ್ರಗೊಂಡುವಾದರೂ ಕೆಳವರ್ಗಗಳ ಜನರಲ್ಲಿ ಇವು ಪ್ರಧಾನವಾಗಿ ಎದ್ದು ಕಾಣುತ್ತವೆ. ಉತ್ತರ-ಪೂರ್ವ ಪರ್ವತಪ್ರದೇಶಗಳಲ್ಲಿ ಮಾಂಗೊಲಾಯ್ಡರ ಪ್ರಧಾನ ಲಕ್ಷಣಗಳಿವೆ.

ಆದರೆ ಯಾವುದೇ ಜನಾಂಗದ ಲಕ್ಷಣಗಳು ಒಂದು ಪ್ರದೇಶದಲ್ಲಿ ಪ್ರಧಾನವಾಗಿ ಕಂಡುಬಂದ ಮಾತ್ರಕ್ಕೆ ಆ ಜನಾಂಗ ಅಲ್ಲಿಯ ಜನರ ಮಾನಸಿಕ ಹಾಗೂ ಭಾವ ನಾತ್ಮಕ ಧೋರಣೆಗಳ ಮೇಲೆ ಮಹತ್ತ್ವದ ಪ್ರಭಾವ ಬೀರಿದೆಯೆಂದು ಇದುವರೆಗೆ ಸಿದ್ಧ ಪಡಿಸಲಾಗಿಲ್ಲ. ಆದ್ದರಿಂದ ಒಂದು ಜನಾಂಗದ ಲಕ್ಷಣಗಳು ಅಳಿಸಲಾಗದಂಥವೇನೂ ಅಲ್ಲ. ಒಂದು ಸಂಘಟಿತ ಜನವ್ಯವಸ್ಥೆಯ ಆರ್ಥಿಕಸ್ಥಿತಿಯೂ ಅಲ್ಲಿಯ ಜನರು ವಿಶಿಷ್ಟ ವಾಗಿ ಪಡೆಯುವ ಮಾನಸಿಕ ಹಾಗೂ ಭಾವನಾತ್ಮಕ ಅನುಭವಗಳೂ ಅಭಿವ್ಯಕ್ತ ಗೊಳ್ಳುವುದು ಅವರ ಭಾಷೆಯ ಮೂಲಕ. ಆದ್ದರಿಂದ ಆರ್ಯ ಸಂಸ್ಕೃತಿ, ದ್ರಾವಿಡ ಸಂಸ್ಕೃತಿ ಎಂದು ಮುಂತಾಗಿ ವ್ಯವಹರಿಸುವುದಕ್ಕಿಂತ ಆಯಾ ಜನರ ಭಾಷಾಸಂಸ್ಕೃತಿಗಳನ್ನು ಕುರಿತು ವ್ಯವಹರಿಸುವುದೂ ಅವನ್ನು ಪ್ರತ್ಯೇಕವಾಗಿ ಗುರುತಿಸುವುದೂ ಹೆಚ್ಚು ವೈಜ್ಞಾನಿಕ ವೆನಿಸುತ್ತದೆ. ಇತಿಹಾಸದ ಆರಂಭಕಾಲದಿಂದಲೂ ಭಾರತದಲ್ಲಿ ವಿವಿಧ ಜನಾಂಗಗಳು ಪರಸ್ಪರವಾಗಿ ಸಮ್ಮಿಶ್ರಗೊಂಡಿವೆ. ಈ ಪ್ರಕ್ರಿಯೆಯೇ ಸದಾ ಮುಂದುವರಿದಿದೆ. ಯಾವುದೇ ಜನಾಂಗದ ವಿಶಿಷ್ಟ ಲಕ್ಷಣಗಳು ಈ ಪ್ರಕ್ರಿಯೆಯಿಂದಾಗಿ ಕರಗಿಹೋಗುತ್ತಿವೆ. ಮೇಲೆ ಹೇಳಿದ ಆರು ಮುಖ್ಯ ಜನಾಂಗಗಳನ್ನೂ ನಾಲ್ಕು ನಿರ್ದಿಷ್ಟ ಭಾಷಾ ಕುಟುಂಬಗಳ ನಡುವೆ ವಿಂಗಡಿಸಬಹುದು: (i) ಆಸ್ಟ್ರಿಕ್ (ಕೋಲ ಅಥವಾ ಮುಂಡ),

(ii) ಟಿಬೆಟೊ-ಚೀನಿ, (iii) ದ್ರಾವಿಡ ಮತ್ತು (iv) ಇಂಡೊ-ಯೂರೋಪಿಯನ್ (ಆರ್ಯ).

ಆದಿಮ ಘಟ್ಟದಲ್ಲಿ ಭಾರತಕ್ಕೆ ಬಂದ, ಭಾರತದಲ್ಲಿ ವಾಸವಾಗಿದ್ದ ಜನಾಂಗಗಳ ಭಾಷೆಗಳನ್ನು ಕುರಿತು ಖಚಿತವಾಗಿ ಏನನ್ನೂ ಹೇಳುವುದು ಸದ್ಯಕ್ಕೆ ಸಾಧ್ಯವಿಲ್ಲ. ಪ್ರಾಗಿತಿಹಾಸಕಾಲದಲ್ಲಿ ಭಾರತಕ್ಕೆ ಮೊತ್ತಮೊದಲು ಬಂದ ಜನರಾದ ನೀಗ್ರಾಯಿಡ್ ಅಥವಾ ನೀಗ್ರಿಟೊಗಳು ಭಾರತದಿಂದ ಬಹುತೇಕ ಅದೃಶ್ಯರಾದ್ದರಿಂದ, ಅನಂತರ ಭಾರತಕ್ಕೆ ವಲಸೆ ಬಂದ ಜನಾಂಗಗಳು ಅವರನ್ನು ಬಹುಶಃ ಕೊಂದದ್ದರಿಂದ ಅಥವಾ ವಿಲೀನಗೊಳಿಸಿಕೊಂಡದ್ದರಿಂದ, ಅವರು ಭಾರತದ ಭಾಷೆಗಳ ಮೇಲೆ ಹೆಚ್ಚೇನೂ ಪ್ರಭಾವ ಬೀರಲಿಲ್ಲ. ಆರ್ಯನ್ ಭಾಷೆ ಭಾರತಕ್ಕೆ ಬರುವುದಕ್ಕೆ ಮುಂಚೆಯೇ ಆಸ್ಟ್ರಿಕ್ ಮತ್ತು ದ್ರಾವಿಡ ಭಾಷಾಸ್ತರಗಳು ಇವರ ಭಾಷೆಯನ್ನು ಮುಳುಗಿಸಿರಬೇಕು. ಆದ್ದರಿಂದ ನೀಗ್ರಿಟೋ ಭಾಷೆಯಿಂದ ಆರ್ಯನ್ ಭಾಷೆ ಹೆಚ್ಚಾಗಿ ಏನನ್ನೂ ನೇರವಾಗಿ ಪಡೆದುಕೊಳ್ಳಲಿಲ್ಲ. ಆದರೆ ಪ್ರೋಟೊ-ಆಸ್ಟ್ರಲಾಯ್ಡ್ ಮತ್ತು ದ್ರಾವಿಡಭಾಷೆಗಳಿಗೆ ಇವುಗಳ ಹಲವು ಶಬ್ದಗಳು ನುಸುಳಿರಬೇಕು; ಅವುಗಳಿಂದ ಕೆಲವು ಶಬ್ದಗಳು ಆರ್ಯನ್ ಭಾಷೆಗೂ ಬಂದಿರಬೇಕು.

ನೀಗ್ರಿಟೊಗಳ ಅನಂತರ ಬಂದ ಪ್ರೋಟೊ-ಆಸ್ಟ್ರಲಾಯ್ಡರು ಪಶ್ಚಿಮದಿಂದ ಪೂರ್ವದ ವರೆಗೆ ವಿಸ್ತರಿಸಿದರಲ್ಲದೆ ಇಲ್ಲಿದ್ದವರೊಂದಿಗೆ, ಮುಖ್ಯವಾಗಿ ನೀಗ್ರಿಟೊ ಮತ್ತು ಮಾಂಗೊಲಾಯ್ಡರೊಂದಿಗೆ, ಬೆರೆತರು. ಕೋಲ ಮತ್ತು ಮುಂಡ, ನಿಕೋಬಾರೀಸ್, ಅಸ್ಸಾಮಿನ ಮಾನ್-ಖ್ಮೇರ್ ಇವು ಇದರ ಫಲ. ಇವು ಆಸ್ಟ್ರಿಕ್ ಭಾಷಾಪರಿವಾರದ ಒಂದು ಕವಲು. ಇವನ್ನು ಆಸ್ಟ್ರೋ-ಏಷ್ಯಾಟಿಕ್ ಭಾಷೆಗಳೆಂದು ಕರೆಯಲಾಗಿದೆ. ಇನ್ನೊಂದು ಕವಲು (ಆಸ್ಟ್ರೋನೇಷ್ಯನ್) ಆಗ್ನೇಯ ಏಷ್ಯ ಪ್ರದೇಶದಲ್ಲಿ ವಿಸ್ತರಿಸಿತು. ಈ ಕವಲಿನ ಭಾಷೆಗಳನ್ನಾಡುವ ಜನರು ಭಾರತಕ್ಕೆ ವಲಸೆ ಬಂದಾಗ ಇವುಗಳ ಪ್ರಭಾವ ಮತ್ತೆ ಇಲ್ಲಿಯ ಭಾಷೆಗಳ ಮೇಲೆ ಉಂಟಾಯಿತು. ಇಂಡೊ-ಆರ್ಯನ್ ಭಾಷೆಯ ಮೇಲೆ ದ್ರಾವಿಡ ಭಾಷೆಯಲ್ಲದೆ ಬೇರೆ ಭಾಷೆಗಳ ಪ್ರಭಾವ ಬಿದ್ದಿರುವುದೆಂದರೆ ಆಸ್ಟ್ರೋ-ಏಷ್ಯಾಟಿಕ್ ಭಾಷೆಗಳದೇ. ಈ ಭಾಷೆಗಳನ್ನಾಡುವ ಜನ ಭಾರತ ನಾಗರಿಕತೆಯ ಮೇಲೆ ಮಹತ್ತ್ವದ ಪ್ರಭಾವ ಬೀರಿದರೆಂಬುದರಲ್ಲಿ ಸಂಶಯವಿಲ್ಲ. ಭಾರತದ ಮುಖ್ಯ ಕಸುಬಾದ ವ್ಯವಸಾಯ ಬಹುಶಃ ಈ ಭಾಷೆಗಳನ್ನಾಡುತ್ತಿದ್ದ ಪ್ರೋಟೊ-ಆಸ್ಟ್ರಲಾಯ್ಡರಿಂದ ಬಂದಿರಬೇಕೆಂಬುದು ವಿದ್ವಾಂಸರ ಮತ. ಪುನರ್ಜನ್ಮದ ಭಾವನೆ, ಹಲವಾರು ಮತೀಯ ಆಚರಣೆಗಳು ಇವು ಇವರಿಂದ ದತ್ತವಾದವು. ಬ್ರಹ್ಮಾಂಡದ ಕಲ್ಪನೆ, ವಿಷ್ಣುವಿನ ಅವತಾರಗಳು, ಮತ್ಸ್ಯಗಂಧಿಯ ಮತ್ತು ನಾಗರ ಕಥೆಗಳು—ಮುಂತಾದವು ಆರ್ಯರಿಂದಾಗಲಿ ದ್ರಾವಿಡರಿಂದಾಗಲಿ ಬಂದವಲ್ಲವೆಂದೂ ಇವು ಪ್ರೋಟೊ-ಆಸ್ಟ್ರಲಾಯ್ಡರ ಕೊಡುಗೆಗಳೆಂದೂ ಹೇಳಲಾಗಿದೆ. ಹಿಂದುಗಳ ಹಲವು ಪುರಾಣಗಳಿಗೆ ಇವೇ ಆಧಾರಗಳೆನ್ನಬಹುದು. ಈ ಪುರಾಣಗಳ ಸಾಹಿತ್ಯಗುಣಗಳನ್ನೂ ಇವುಗಳ ಆಧಾರದ ಮೇಲೆ ಭಾರತದ

ನಾನಾ ಭಾಷೆಗಳಲ್ಲಿ ಸೃಷ್ಟಿಯಾದ ಸಾಹಿತ್ಯರಾಶಿಯನ್ನೂ ನೆನೆದಾಗ, ಭಾರತೀಯ ಸಾಹಿತ್ಯಕ್ಕೆ ಈ ಜನರ ಕಾಣಿಕೆ ಎಷ್ಟು ದೊಡ್ಡದೆಂಬುದು ವೇದ್ಯವಾಗುತ್ತದೆ.[12]

ಮೆಡಿಟರೇನಿಯನ್ ಜನಾಂಗಕ್ಕೆ ಸೇರಿದ ಕನಿಷ್ಠ ಮೂರು ಶಾಖೆಗಳ ಜನರಾದರೂ ಭಾರತಕ್ಕೆ ಬಂದಿರಬೇಕೆಂದೂ ಇವರೆಲ್ಲ ದ್ರಾವಿಡ ಭಾಷೆಯನ್ನಾಡುತ್ತಿದ್ದಿರಬೇಕೆಂದೂ ಊಹಿಸಲಾಗಿದೆ. ಪ್ರೋಟೋ-ಆಸ್ಟ್ರಲಾಯ್ಡ್ ಅಥವಾ ಆಸ್ಟ್ರಿಕ್ ಜನರದು ಮುಖ್ಯವಾಗಿ ಗ್ರಾಮೀಣ ಸಂಸ್ಕೃತಿಯಾಗಿದ್ದರೆ, ದ್ರಾವಿಡ ಭಾಷೆ ಆಡುವ ಮೆಡಿಟರೇನಿಯನ್ ಜನರು ನಗರ ಸಂಸ್ಕೃತಿಯನ್ನು ಬೆಳಸಿದವರು. ಒಳನಾಡಿನ ವ್ಯಾಪಾರ ಬೆಳೆದದ್ದು ಇವರಿಂದಾಗಿ. ದ್ರಾವಿಡ ಭಾಷೆಗಳದು ಒಂದು ಪ್ರತ್ಯೇಕ ಗುಂಪು ಎಂಬುದು ನಿರ್ವಿವಾದ. ಭಾರತದ ಇತರ ಭಾಷಾ ಪರಿವಾರಗಳಿಗೂ ಅವಕ್ಕೂ (ಆಸ್ಟ್ರಿಕ್, ಚೀನಿ-ಟಿಬೆಟನ್, ಇಂಡೊ-ಯೂರೋಪಿಯನ್ ಅಥವಾ ಆರ್ಯನ್) ಇರುವ ನಾನಾ ವ್ಯತ್ಯಾಸಗಳನ್ನು ವಿದ್ವಾಂಸರು ತೋರಿಸಿದ್ದಾರೆ. ದಖನ್ ಮತ್ತು ದಕ್ಷಿಣ ಭಾರತವಲ್ಲದೆ ಇತರ ಕೆಲವು ಸ್ಥಳಗಳಲ್ಲೂ ದ್ರಾವಿಡ ಭಾಷೆಗಳು ಪ್ರಚಾರದಲ್ಲಿವೆ (ಉದಾ: ಗೋಂಡಿ, ಕುಯಿ, ಒರಾವೊನ್). ಆದರೆ ಒಂದು ಕಾಲದಲ್ಲಿ ದ್ರಾವಿಡ ಭಾಷೆ ಇನ್ನೂ ಹೆಚ್ಚಿನ ವ್ಯಾಪ್ತಿ ಪಡೆದಿತ್ತೆಂಬುದಕ್ಕೆ ವಿದ್ವಾಂಸರು ಅನೇಕ ಆಧಾರಗಳನ್ನು ನೀಡಿದ್ದಾರೆ. ಬೆಲೂಚಿಸ್ಥಾನದಿಂದ ದಕ್ಷಿಣ ಭಾರತದ ವರೆಗೆ, ಪಂಜಾಬಿನಿಂದ ಗಂಗಾನದಿಯ ಬಯಲಿನ ವರೆಗೆ ಈ ಭಾಷೆ ಹಬ್ಬಿತ್ತು. ಬೆಲೂಚಿಸ್ಥಾನದ ಬ್ರಾಹೂಯಿ ದ್ರಾವಿಡ ಭಾಷೆ. ಉತ್ತರ ಭಾರತದ ಹಲವು ಸ್ಥಳಗಳ ಹೆಸರುಗಳು ದ್ರಾವಿಡಮೂಲದವು. ವೈದಿಕ ಹಾಗೂ ಪ್ರಾಚೀನ ಭಾರತೀಯ ಸಾಹಿತ್ಯದಲ್ಲಿ ಬರುವ ಆರ್ಯೇತರರ ಉಲ್ಲೇಖ ಬಹುತೇಕ ದ್ರಾವಿಡರಿಗೆ ಸಂಬಂಧಿಸಿದ್ದು. ಉತ್ತರ ಭಾರತದಲ್ಲಿ ಒಂದು ಕಾಲಕ್ಕೆ ದ್ರಾವಿಡ ಭಾಷೆ ಆಡುವವರೂ ಆಸ್ಟ್ರಿಕ್ ಭಾಷಾ ಜನರೂ ಸಹಜೀವನ ನಡಸಿದ್ದಿರಬೇಕು. ಇವೆರಡು ಭಾಷೆಗಳ ನಡುವೆ ಕೊಡುಕೊಳ್ಳುವ ಸಂಬಂಧ ಬೆಳೆದಿತ್ತೆಂಬುದು ತರ್ಕಬದ್ಧವಾದ ಊಹೆ.

ಹರಪ್ಪ-ಮೊಹೆಂಜೊದಾರೊ ನಾಗರಿಕತೆಯ ಭಾಷೆ : ಈ ಸಂದರ್ಭದಲ್ಲಿ ಇತಿಹಾಸಕಾರರಿಗೆ ಬಿಡಿಸಲಾಗದ ಒಗಟೆಯಾಗಿರುವ ಅಂಶವೆಂದರೆ ಪಂಜಾಬ್ ಮತ್ತು ಸಿಂಧು ಪ್ರದೇಶಗಳಲ್ಲಿ, ಹರಪ್ಪ ಮತ್ತು ಮೊಹೆಂಜೊದಾರೊಗಳಲ್ಲಿ ದೊರಕಿರುವ ಅವಶೇಷಗಳು. ಈ ಸಂಸ್ಕೃತಿಯ ಜನರು ನಗರವಾಸಿಗಳು, ನಗರ ನಿರ್ಮಾಪಕರು. ಇವರು ಬಹುಶಃ ದ್ರಾವಿಡ ಭಾಷೆ ಆಡುತ್ತಿದ್ದರು. ಆದರೆ ಹೀಗೆಯೇ ಸರಿ ಎಂದು ಹೇಳಲು ಸಮರ್ಥವಾದ ಆಧಾರಗಳು ಇನ್ನೂ ಅಲಭ್ಯವಾಗಿವೆ. ಈ ಸ್ಥಳಗಳ ಉತ್ಖನನಗಳಲ್ಲಿ ದೊರಕಿರುವ ನೂರಾರು ಮುದ್ರೆಗಳ ಲಿಪಿಯನ್ನು ಎಲ್ಲರೂ ಒಪ್ಪುವಂತೆ ಓದುವುದು ಇನ್ನೂ ಸಾಧ್ಯವಾಗಿಲ್ಲ. ಇವು ಅಡಗಿಸಿಟ್ಟುಕೊಂಡಿರುವ ರಹಸ್ಯದ ಮುದ್ರೆಯನ್ನೊಡೆಯುವುದು ಸಾಧ್ಯವಾದಾಗ ಭಾರತೀಯ ಭಾಷಾ ಸಾಹಿತ್ಯಗಳ ಇತಿಹಾಸವನ್ನು ಹಲವು ಶತಮಾನಗಳಷ್ಟು ಹಿಂದಕ್ಕೆ, ಕ್ರಿ.ಪೂ. ೩೫೦೦ಕ್ಕೂ ಪೂರ್ವದ ಕಾಲಕ್ಕೆ, ಕೊಂಡೊಯ್ಯುವುದು ಸಾಧ್ಯವಾದೀತು.

ಆರ್ಯದ್ರಾವಿಡ ಭಾಷಾಸಂಸ್ಕೃತಿಗಳು : ಅಂತೂ ಆರ್ಯ ಭಾಷೆ ಆಡುವವರು ಭಾರತಕ್ಕೆ ಬಂದಾಗ ಇಲ್ಲಿ ಆದಿಮ ದ್ರಾವಿಡ ಭಾಷೆಯನ್ನಾಡುತ್ತಿದ್ದ ಜನರಿದ್ದರೆಂಬುದು ನಿರ್ವಿವಾದ. ಆರ್ಯ ಮತ್ತು ದ್ರಾವಿಡ ಭಾಷಾ ಸಂಸ್ಕೃತಿಗಳು ಪರಸ್ಪರ ಪ್ರಭಾವ ಬೀರಿದ್ದೂ ಸ್ವಯಂವೇದ್ಯ. ಆರ್ಯರಿಗೆ ಪೃಥ್ವಿ ಮಾತೆ, ದ್ಯೌ ಪಿತ. ಅವರು ಮೂಲತಃ ಪ್ರಕೃತಿಯ ಆರಾಧಕರು. ಅವರ ಮೊದಮೊದಲ ಸಾಹಿತ್ಯದಲ್ಲಿ ಇದೇ ಪ್ರಧಾನ. ಆಸ್ಟ್ರಿಕ್ ಪರಿವಾರದ ಭಾಷೆಗಳನ್ನಾಡುತ್ತಿದ್ದವರಿಗೆ ಸೂರ್ಯ ದೇವರು, ಚಂದ್ರ ದೇವತೆ. ಆದರೆ ದ್ರಾವಿಡರು ಜೀವ ಮತ್ತು ವಿಶ್ವಗಳ ಪರಿಕಲ್ಪನೆಗಳನ್ನು ತಂದರು. ದ್ರಾವಿಡರಿಗೆ ದೊರೆ (ಮನ್ನನ್)ಗಳಿದ್ದರು. ಅವರು ಭದ್ರವಾದ ಕೋಟೆಗಳಲ್ಲಿ (ಕೋಟ್ಟೈ) ವಾಸಿಸುತ್ತಿದ್ದರು. ಅವರು ಸಣ್ಣ ಪ್ರದೇಶ(ನಾಟು)ಗಳನ್ನು ಆಳುತ್ತಿದ್ದರು. ಹಬ್ಬಗಳಲ್ಲಿ (ಕೊಂಡಾಟ್ಟಂ) ಗೀತೆಗಳ (ಚೆಯ್ಯುಲ್) ಹಾಡುಗಾರರು (ಪುಳವನ್) ಅವರ ಬಳಿ ಇದ್ದರು. ಅವರಿಗೆ ಬಹುಶಃ ವರ್ಣಮಾಲೆಯ ಲಿಪಿಗಳು (ಎಲುತ್ತು) ಗೊತ್ತಿದ್ದುವು. ಬರಹ ಓಲೆಗರಿಯ ಮೇಲೆ ನಡೆಯುತ್ತಿತ್ತು. ಪುಸ್ತಕಗಳಿದ್ದುವು. ದೇವರ ಅಸ್ತಿತ್ವವನ್ನು ಅವರು ಒಪ್ಪಿಕೊಂಡಿದ್ದರು. ಈ ಪರಿಕಲ್ಪನೆ ಹಿಂದುಗಳಿಗೆ ಇರಲಿಲ್ಲ. ದೇವರಿಗಾಗಿ ಅವರು ಮಂದಿರ(ಕೋಯಿಲ್)ಗಳನ್ನು ನಿರ್ಮಿಸುತ್ತಿದ್ದರು—ಎಂದು ಬಿಷಪ್ ಕಾಲ್ಡ್‌ವೆಲ್ ಹೇಳಿದ್ದಾರೆ.[13] ಹಿಂದು ಸಂಪ್ರದಾಯದ ಕವಲುಗಳಾದ ಆಗಮ ಮತ್ತು ನಿಗಮ ವಿಧಾನಗಳಲ್ಲಿ ಆಗಮ ದ್ರಾವಿಡರದೆಂದೂ ನಿಗಮ ಆರ್ಯರದೆಂದೂ ಹೇಳಲಾಗಿದೆ. ಆರ್ಯರು ಕರ್ಮಕಾಂಡವನ್ನನುಸರಿಸುತ್ತಿದ್ದರು. ಹೋಮಕ್ಕೆ ಅವರಲ್ಲಿ ಪ್ರಾಧಾನ್ಯ. ಆದರೆ ಯೋಗ, ತಂತ್ರ ಮುಂತಾದವಕ್ಕೆ ದ್ರಾವಿಡರು ಪ್ರಾಶಸ್ತ್ಯ ನೀಡುತ್ತಿದ್ದರು. ಪತ್ರ ಪುಷ್ಪ ಫಲ ತೋಯಗಳನ್ನು ನೀಡುವ ಪೂಜಾವಿಧಾನ ದ್ರಾವಿಡರದು. ಹಿಂದು ಧಾರ್ಮಿಕ ಆಚರಣೆಗಳಲ್ಲಿ ಇದು ಎಷ್ಟರಮಟ್ಟಿಗೆ ಸೇರಿಕೊಂಡಿತೆಂದರೆ, ಭಗವದ್ಗೀತೆಯಲ್ಲಿ ಇದಕ್ಕೆ ವಿಶೇಷ ಪ್ರಾಮುಖ್ಯ ನೀಡಲಾಯಿತು. ಹೀಗೆ ಆರ್ಯಪೂರ್ವಕಾಲದ ದ್ರಾವಿಡರ ಅನೇಕ ಸಂಪ್ರದಾಯಗಳೂ ಭಾವನೆಗಳೂ ಅವರ ಪೌರಾಣಿಕ ವ್ಯಕ್ತಿಗಳೂ ವೈದಿಕ ಆರ್ಯರ ಭಾವನೆಗಳೊಂದಿಗೆ ಬೆರೆತುಕೊಂಡುವು. ಶಿವ, ಉಮಾ, ವಿಷ್ಣು, ಶ್ರೀ, ಗಣೇಶ, ಹನುಮಂತ ಇವರೆಲ್ಲ ದ್ರಾವಿಡ ಸಂಸ್ಕೃತಿಯ ಕೊಡುಗೆಗಳು. ಇವರ ಮುಂದೆ ವೈದಿಕ ಆರ್ಯರ ಇಂದ್ರ, ಅಗ್ನಿ, ವರುಣ, ಸೋಮ, ಸೂರ್ಯ, ಉಷಸ್, ಪೂಷನ್, ಪರ್ಜನ್ಯ ಮುಂತಾದವರ ಪ್ರಾಮುಖ್ಯ ಕ್ರಮೇಣ ಕ್ಷೀಣಿಸಿಹೋಯಿತು. ಒಟ್ಟಿನಲ್ಲಿ ಹಿಂದು ಧರ್ಮ, ಸಾಹಿತ್ಯ ಸಂಸ್ಕೃತಿಗಳಲ್ಲಿ ಆರ್ಯ ಮತ್ತು ದ್ರಾವಿಡ ಎರಡರ ಭಾವನೆಗಳೂ ಆಚರಣೆಗಳೂ ನಂಬಿಕೆಗಳೂ ಹಾಸುಹೊಕ್ಕಾಗಿ ಬೆರೆತುಹೋದುವು. ಇವೆರಡು ಸಂಸ್ಕೃತಿಗಳ ಸಾಮರಸ್ಯಫಲವನ್ನೇ ನಾವು ಭಾರತೀಯ ಸಾಹಿತ್ಯದಲ್ಲಿ ಉದ್ದಕ್ಕೂ ಕಾಣುತ್ತೇವೆ. ಆದರೆ ಇದು ಹೇಗಾಯಿತು, ಆರ್ಯರ ಆಗಮನಪೂರ್ವದ ಸಾಹಿತ್ಯದ ಬೆಳೆವಣಿಗೆಯ ಸ್ವರೂಪವೇನು, ಆಗಿನ ಭಾಷೆ ಹೇಗಿತ್ತು, ಲಿಪಿಯ ವೈಶಿಷ್ಟ್ಯಗಳೇನು—ಎಂಬುದೆಲ್ಲ ಇದುವರೆಗೂ ರಹಸ್ಯಗಳಾಗಿಯೇ ಉಳಿದಿವೆ. ಹರಪ್ಪ-ಮೊಹೆಂಜೊದಾರೊಗಳ ಲಿಪಿಮುದ್ರೆಯ ಭಂಡಾರವನ್ನೊಡೆಯುವುದು ಸಾಧ್ಯ

ವಾದಾಗ ಈ ಪ್ರಶ್ನೆಗಳಿಗೆ ಉತ್ತರ ದೊರಕೀತು.

ಭಾರತೀಯ ಸಾಹಿತ್ಯದಲ್ಲಿ ಆದಿಕಾಲದಿಂದ ಕ್ರಿ.ಶ. ೯ನೆಯ ಶತಮಾನದ ನಡುಗಾಲದ ವರೆಗೆ ಪ್ರವರ್ತಿಸಿದ ಕೆಲವು ಪ್ರಮುಖ ಪ್ರವೃತ್ತಿಗಳನ್ನೂ ಘಟ್ಟಗಳನ್ನೂ ಸಂಕ್ಷೇಪವಾಗಿ ಮುಂದೆ ಪರಿಚಯಮಾಡಿಕೊಳ್ಳಲು ತೊಡಗಬಹುದು.

ವೈದಿಕಯುಗ : ಒಟ್ಟಿನಲ್ಲಿ ಭಾರತೀಯ ಸಾಹಿತ್ಯದ ಇತಿಹಾಸವನ್ನು ಸದ್ಯಕ್ಕಂತೂ ವೇದಗಳಿಂದಲೇ ಆರಂಭಿಸಬೇಕು. "ಇತಿಹಾಸದಲ್ಲಿ ಮೊತ್ತಮೊದಲಿಗೆ ಭಾರತದಲ್ಲಿ ಮಾತ್ರವೇ ಅಲ್ಲ, ಆರ್ಯಜನರಲ್ಲಿ ಗೀತೆಗಳು ಹೊಮ್ಮಿದುವು", ಎಂಬುದಾಗಿ ಹರ್ಬರ್ಟ್ ಎಚ್. ಗೋವೆನ್ ಉದ್ಗರಿಸಿದ್ದಾರೆ.[14] ಈ ಋಕ್ಕುಗಳು ಎಷ್ಟರಮಟ್ಟಿಗೆ ಪೂರ್ವಾನುಭವದ, ಅಭ್ಯಾಸದ ಪರಿಣಾಮವಾಗಿ ಬಂದ ಸಹಜವಾದ ಕಾವ್ಯಪ್ರತಿಭೆಯ ಫಲ ? ಎಷ್ಟರಮಟ್ಟಿಗೆ ಇವು ಅವರ ಹೊಸ ಪರಿಸರದ ಸ್ಫೂರ್ತಿಯ ಫಲ ? ಅವರ ಹಿಂದಣ ವಾಸಸ್ಥಳದಲ್ಲಿ ಲಭ್ಯವಾಗದಿದ್ದ ಸ್ಫೂರ್ತಿ ಅವರಿಗೆ ಇಲ್ಲಿ ದೊರಕಿತೆ ? ಇವನ್ನು ನಿರ್ಣಯಿಸುವುದು ಅಸಾಧ್ಯ. ಬಾರ್ನೆಟ್ ಹೇಳುವಂತೆ ಇದು ಕ್ರಮಕ್ರಮವಾಗಿ ಬರಲಿಲ್ಲ, "ಅರುಣೋದಯವೇ ಇಲ್ಲದೆ ಒಮ್ಮೆಗೇ ಚಿಮ್ಮಿದ ಸೂರ್ಯಪ್ರಕಾಶವಿದು." ಆರ್ಯನ್ ಭಾಷೆ ಆಡುವ ಜನರು ಹಿಮಾಲಯದ ಮಹೋನ್ನತ ಶಿಖರಗಳ ನಡುವೆ ಸಾಗಿ ಭಾರತಕ್ಕೆ ಬಂದಾಗ ಅವರ ಮೇಲೆ ಆದ ಪ್ರಭಾವ ಅಗಾಧ. ಓದುಬರಹ ತಿಳಿಯದಿದ್ದ, ಪೂರ್ವ ಯೂರೋಪ್ ಮತ್ತು ಪಶ್ಚಿಮಏಶ್ಯದ ಬಯಲುಗಳಲ್ಲಿ ತಿರುಗಾಡುತ್ತಿದ್ದ ಅಲೆಮಾರಿ ಜನರನ್ನು ವೈದಿಕಯುಗದ ಕವಿಗಳನ್ನಾಗಿ ಪರಿವರ್ತಿಸಿದಂಥ ಪ್ರಭಾವ ಅದು ಎಂದು ಗೋವೆನ್ ಬಣ್ಣಿಸಿದ್ದಾರೆ. ಗಂಗಾಯಮುನಾ ನದಿಗಳ ನಡುವಣ ಉಷ್ಣ ಅರಣ್ಯಗಳ ನಡುವಣ ಪ್ರದೇಶಕ್ಕೆ ಅವರು ಆಗಮಿಸಿದಾಗ ಆ ಓಜಸ್ವೀ ಗಾಯಕರು ಚತುರ ರಾಜನೀತಿಜ್ಞರಾಗಿಯೂ ತಾತ್ತ್ವಿಕ ಜಿಜ್ಞಾಸುಗಳಾಗಿಯೂ ಪರಿಣಮಿಸಿದರು; ಉಪನಿಷತ್ತುಗಳನ್ನು ರಚಿಸಿದರು. ಭಾರತೀಯ ಸಾಹಿತ್ಯ ನಿಂತ ನೀರಾಗದೆ, ಸರಸ್ವತೀನದಿಯ ಹಾಗೆ ಇಂಗಿಹೋಗದೆ ರಕ್ಷಿಸಲ್ಪಡಲು ಆಗಾಗ ಸತತವಾಗಿ ಸಾಂಸ್ಕೃತಿಕ ರಕ್ತದಾನ ಅಗತ್ಯವಾಯಿತು. ಹಲವು ಭಾಷೆಗಳನ್ನಾಡುವ ಜನರ ಅನುಭವಗಳು ಬೆರೆತು ಭಾರತೀಯ ಸಾಹಿತ್ಯ ಒಂದು ಮಹಾಪ್ರವಾಹವಾಯಿತು.

ಸಂಹಿತೆಗಳು : ನಮಗೆ ಲಭ್ಯವಿರುವ ಅತ್ಯಂತ ಪ್ರಾಚೀನ ಭಾರತೀಯ ಸಾಹಿತ್ಯವೆಂದರೆ ವೇದಗಳೇ. ವೈದಿಕ ಸಾಹಿತ್ಯವನ್ನು ಋಕ್, ಸಾಮ, ಯಜುರ್, ಅಥರ್ವ ಎಂದು ನಾಲ್ಕು ಭಾಗಗಳಾಗಿ ವಿಂಗಡಿಸಲಾಗಿದೆ. ವೇದಗಳ ಕಾಲದ ಯಾವ ಕೃತಿಯ ಕಾಲವನ್ನೂ ನಿಖರವಾಗಿ ನಿರ್ಧರಿಸಲು ಸಾಧ್ಯವಿಲ್ಲ. ಅತ್ಯಂತ ಪ್ರಾಚೀನವೆನಿಸಿದ ಋಗ್ವೇದದ ಭಾಷೆ ಕ್ರಿ.ಪೂ. ಸು. ೧೦೦೦ ಎಂದು ಹೇಳಲಾಗಿದೆ. ಆದರೆ ಇಡೀ ಋಗ್ವೇದವನ್ನು ಈ ಕಾಲಕ್ಕೆ ನಿರ್ದೇಶಿಸುವುದು ಸರಿಯಾಗದು. ಇದಕ್ಕಿಂತ ಅತ್ಯಂತ ಹಿಂದೆ ರಚಿತವಾದ ಭಾಗಗಳೂ ಅಥರ್ವವೇದದ ಮಂತ್ರಗಳನ್ನು ಹೋಲುವ ಈಚಿನ ಕಾಲದ ಭಾಗಗಳೂ ಇದರಲ್ಲಿ ಉಂಟು. ಋಗ್ವೇದವನ್ನು ಒಂದು ಐತಿಹಾಸಿಕಕಾವ್ಯವೆಂದಾಗಲಿ,

ವೀರಗೀತೆಯೆಂದಾಗಲಿ ಭಾವಿಸುವುದು ತಪ್ಪಾದೀತು. ಹಲವರು ರಚಿಸಿದ ಗೀತಗಳ ಗುಚ್ಛವಿದು (ಸಂಹಿತೆ). ಹಿಂದೆ ಹೇಳಿದ ಹಾಗೆ, ಕರ್ಮಪ್ರಧಾನರಾದ ಆರ್ಯರ ಮುಖ್ಯ ಆಚರಣೆಗಳಾದ ಯಜ್ಞಯಾಗಾದಿಗಳ ಸಮಯದಲ್ಲಿ ಹೇಳುತ್ತಿದ್ದ ಕೃತಿಗಳಿವು. ಆದ್ದರಿಂದ ಇವುಗಳಲ್ಲಿ ಇತಿಹಾಸ ಸಾಮಗ್ರಿ ನಮಗೆ ಒದಗುವುದು ಅತ್ಯಲ್ಪ. ಋಗ್ವೇದವನ್ನು ಜನಪದ ಕಾವ್ಯವೆಂದು ಕೆಲವರು ಭಾವಿಸುವುದುಂಟು. ಆದರೆ ಇದು ತಪ್ಪು ಭಾವನೆ. ಇದು ಸಾಹಿತ್ಯಪರಂಪರೆಯ ಆದಿಯನ್ನು ಸೂಚಿಸುವುದೂ ಇಲ್ಲ. ಅಲ್ಲಲ್ಲಿ ನಾಡ ಹಾಡುಗಳ, ವೀರಗೀತಗಳ, ಭಾವಗೀತೆಗಳ ಸೌಂದರ್ಯ ಮಿಂಚಿ ಮರೆಯಾಗುವುದಾದರೂ, ಇದು ಒಟ್ಟಿನಲ್ಲಿ ಇಂಡೊ-ಇರಾನಿಯನ್ ಕಾಲದಿಂದ ಒಂದೇ ರೀತಿಯಾಗಿ ಹರಿದುಬಂದ ಶುಷ್ಕ ಸ್ತೋತ್ರಪಾಠಗಳ ರಾಶಿ. ಕೆಲವೇ ಪುರೋಹಿತ ಮನೆತನಗಳ ಏಕಸ್ವಾಮ್ಯದ ಬೀಗಮುದ್ರೆಯಲ್ಲಿ ಇದು ಉಳಿಯಿತು. ಅನೇಕ ಸ್ತೋತ್ರಪಾಠಗಳು ಕವಿಕ್ರಿಯೆಯ ಫಲವಲ್ಲ, ಅನಾಮಿಕವಾಗಿ ಇಲ್ಲಲ್ಲಿ ಪ್ರಚಾರವಲ್ಲಿದ್ದ ಸಾಹಿತ್ಯದ ತುಣುಕುಗಳಿಂದ ಯಾಂತ್ರಿಕವಾಗಿ ತಯಾರಿಸಲಾದವು.

ಹೀಗೆಂದ ಮಾತ್ರಕ್ಕೆ ಋಕ್ಸಂಹಿತೆಯ ಕಾವ್ಯಗುಣವನ್ನು ಅಲ್ಲಗಳೆದಂತಲ್ಲ. ಪಶ್ಚಿಮದಲ್ಲಿ ಸಿಂಧುನದೀಪ್ರವಾಹಭೂಮಿಯಿಂದ ಹಿಡಿದು ಪೂರ್ವದಲ್ಲಿ ಯಮುನಾತೀರದ ವರೆಗಿನ, ಉತ್ತರದಲ್ಲಿ ಹಿಮಾಲಯದಿಂದ ತೊಡಗಿ ದಕ್ಷಿಣದಲ್ಲಿ ನರ್ಮದೆಯ ವರೆಗಿನ ಪ್ರದೇಶದಲ್ಲಿ ಕ್ರಿ.ಪೂ. ೧೦೦೦ದ ಆಚೀಚೆಯ ಹಲವು ಶತಮಾನಗಳಲ್ಲಿ ನೆಲಸಿದ್ದ ಜನ ರಚಿಸಿದ ಈ ಗೀತಗಳ ಶೈಲಿ ನೇರ, ಸರಳ; ಅನಂತರಕಾಲದ ಸಾಹಿತ್ಯಕ್ಕಿಂತ ಹೆಚ್ಚು ಸಹಜವಾದ್ದು. ಛಂದಸ್ಸು ವೈವಿಧ್ಯಮಯ, ಚಮತ್ಕಾರಪೂರಿತ. ಇಲ್ಲಿಯ ಭಾಷಾಪ್ರಭುತ್ವ ಅದ್ಭುತವಾದ್ದು. ಆದರೆ ಅಲ್ಲಲ್ಲಿ ಇವು ಕೃತಕ; ರಹಸ್ಯಮಯ ಆಗಿ ಕೂಡ ಪರಿಣಮಿಸಿವೆ.

ಭಾವಗೀತಾತ್ಮಕವಾದ ಸೌಂದರ್ಯದಿಂದ ಕೂಡಿದ, ಷೆಲ್ಲಿ, ವರ್ಡ್ಸ್‌ವರ್ತ್ ಮುಂತಾದ ಇಂಗ್ಲಿಷ್ ಕವಿಗಳ ನಿಸರ್ಗಪ್ರೇಮವನ್ನು ನೆನಪಿಗೆ ತರುವ ಹಲವು ಗೀತಗಳನ್ನು ಋಗ್ವೇದದಲ್ಲಿ ಕಾಣಬಹುದು. ಉಷಸ್ಸನ್ನು ಕುರಿತು ಹಾಡಿರುವ ಗೀತ ಅತ್ಯಂತ ಸುಂದರವಾದ್ದು; ಬಹುಶಃ ಅತ್ಯಂತ ಪ್ರಾಚೀನವಾದ್ದು. ಭಾರತಕ್ಕೆ ಬಂದ, ಆರ್ಯಭಾಷೆಯನ್ನಾಡುತ್ತಿದ್ದ ಜನ, ಮಂಜುತುಂಬಿದ ಹಿಮಾಲಯದ ಉತ್ತುಂಗ ಶಿಖರಗಳ ಹಿಂದಿನ ಸೂರ್ಯೋದಯದ ಸೊಬಗನ್ನು ಕಂಡಾಗ ಕವಿಯ ಬಾಯಿಂದ ಈ ಗೀತೆ ಹೊಮ್ಮಿರಬೇಕು. ನಿಸರ್ಗವ್ಯಾಪಾರಗಳನ್ನು ಮೂರ್ತೀಕರಿಸಿ ರಚಿಸಿರುವ ಇಂಥ ಗೀತಗಳು ವಿಶ್ವಸಾಹಿತ್ಯದಲ್ಲೇ ವಿಶಿಷ್ಟವಾದವೆನ್ನಬಹುದು.

ವೈದಿಕ ಸಾಹಿತ್ಯವನ್ನು ರಚಿಸಿದ ಈ ಜನಕ್ಕೆ ಕದನಗಳ ಪರಿಚಯವೇನೂ ಇಲ್ಲದಿರಲಿಲ್ಲ. ಋಗ್ವೇದದ ಹಿನ್ನೆಲೆಯಲ್ಲಿ ಕದನಗಳ ಕೋಲಾಹಲ ಇದ್ದಿರಲೇಬೇಕು. ಆದರೆ ಋಗ್ವೇದದ ಮಂತ್ರಗಳನ್ನು ರಚಿಸಿದವರು ಬಹುತೇಕ ಋತ್ವಿಜರು. ಇವರಿಗೆ ಯುದ್ಧದ ನೇರ ಅನುಭವ ಇರಲಿಕ್ಕಿಲ್ಲವಾದರೂ ಕೆಲವೊಮ್ಮೆ ರಣರಂಗದ ಪ್ರತ್ಯಕ್ಷದರ್ಶನವನ್ನು ಇವರು ಪಡೆದಿದ್ದುದು ಅಸಂಭವವಲ್ಲ. ಋಗ್ವೇದದಲ್ಲಿ ಯುದ್ಧಕ್ಕೆ ಸಂಬಂಧಿಸಿದ ಭಾಗಗಳು

ನಿಜವಾಗಿ ಯುದ್ಧಗೀತಗಳಲ್ಲ, ಯುದ್ಧದಲ್ಲಿ ಜಯ ದೊರಕಿಸಿಕೊಡಬೇಕೆಂದು ಮಾಡಿದ ಮಾಂತ್ರಿಕ ಅಭಿಚಾರವೆನ್ನಬಹುದು.

ಋಗ್ವೇದದ ಇನ್ನೊಂದು ಸ್ವಾರಸ್ಯಕರ ಅಂಶವೆಂದರೆ ಅದರಲ್ಲಿ ಅಲ್ಲಲ್ಲಿ ಕಂಡು ಬರುವ ಸಂವಾದಗೀತಗಳು. ಉರ್ವಶಿ—ಪುರೂರವರ ವಿಯೋಗಸಂದರ್ಭದ ಗೀತಗಳು ಪ್ರಸಿದ್ಧ ನಿದರ್ಶನ. ಈ ಸಂವಾದಗೀತಗಳು ನಾಟಕಗಳ ಭ್ರೂಣರೂಪವೆಂದು ಹೇಳ ಲಾಗಿದೆ. ಹಿಂದೆ ಈ ಗೀತೆಗಳ ನಡುನಡುವೆ ಗದ್ಯಕಥನಗಳಿದ್ದುವೆಂದೂ ಅವು ಈಗ ಲಭ್ಯ ವಿಲ್ಲವೆಂದೂ ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರಾದರೂ ಈ ಅಭಿಪ್ರಾಯಕ್ಕೆ ಆಧಾರಗಳಿಲ್ಲ. ಈ ಸಂವಾದಗೀತಗಳ ವಸ್ತು ಸಾಮಾನ್ಯವಾಗಿ ಧಾರ್ಮಿಕವಲ್ಲ, ಲೌಕಿಕ. ಆದರೂ ಧಾರ್ಮಿಕ ಆಚರಣೆಯ ಅಂಗವಾದ ನಾಟಕದಲ್ಲಿ ಇದನ್ನು ಬಳಸು ತ್ತಿದ್ದದ್ದು ಅಸಂಭವವಲ್ಲ. ಹಾಗಿಲ್ಲದಿದ್ದರೆ ಇವಕ್ಕೆ ಸಂಹಿತೆಯಲ್ಲಿ ಸ್ಥಾನವಿರುತ್ತಿರಲಿಲ್ಲ.

ಋಗ್ವೇದ ಮೂಲತಃ ಭಾವಗೀತಾತ್ಮಕವಾಗಿದ್ದರೂ ಧಾರ್ಮಿಕ ಮೂಲದವಲ್ಲದ ಅನೇಕ ಗೀತಗಳು ಇದರಲ್ಲಿದ್ದರೂ, ಒಂದೂ ಪ್ರೇಮಗೀತ ಇಲ್ಲಿ ಇಲ್ಲದಿರುವುದು ಗಮ ನಾರ್ಹ. ಋಗ್ವೇದದಲ್ಲಿ ಇತಿಹಾಸದ ಹೆಜ್ಜೆಯನ್ನು ಗುರುತಿಸಲಾಗಿಲ್ಲ. ಆರ್ಯಭಾಷೆ ಆಡುತ್ತಿದ್ದ ಜನರು ಇಲ್ಲಿ ತಮಗಿಂತ ಮೊದಲು ನೆಲಸಿದ ಜನರೊಂದಿಗೆ ನಡಸಿದ ಸೆಣಸಾಟದ ನೆನಪೂ ಋಗ್ವೇದದಲ್ಲಿ ಉಳಿದಿಲ್ಲ. ಐತಿಹಾಸಿಕವೆನ್ನಬಹುದಾದ ಗೀತಗಳು ದಾನಸ್ತುತಿಗಳು ಮಾತ್ರ. ಅವು ಕೂಡ ಸಂಬಂಧಪಟ್ಟ ದಾನಿಯ ಧಾರಾಳಬುದ್ಧಿಯನ್ನು ಹೊಗಳಿ ಹಾಡುವ, ಒಂದೇ ಬಗೆಯ ಜಾಡಿನಲ್ಲಿ ರಚಿತವಾದ ಗೀತಗಳು. ಋಗ್ವೇದದಲ್ಲಿ ಬರುವ ಅನೇಕ ಅಧ್ಯಾತ್ಮಗೀತಗಳು ಪ್ರಸಿದ್ಧವಾಗಿವೆ. ಅನಂತರದ ವೇದಾಂತ ದರ್ಶನಕ್ಕೆ ಆಧಾರವಾದ ಮಾಯಾ ಮತ್ತು ರೂಪ ಎಂಬ ಶಬ್ದಗಳು ಋಗ್ವೇದದಲ್ಲಿ ಬಳಕೆಯಾಗಿರುವುದು ಗಮನಾರ್ಹ. ದೇವತೆಗಳನ್ನು ಋಗ್ವೇದದಲ್ಲಿ ಚಿತ್ರಿಸಿರುವಷ್ಟು ಮೂರ್ತಿಮತ್ತಾಗಿ ಬೇರಾವ ಪ್ರಾಚೀನ ಸಾಹಿತ್ಯದಲ್ಲೂ ಚಿತ್ರಿಸಿರುವುದು ಕಂಡುಬಂದಿಲ್ಲ.

ಋಗ್ವೇದದ್ದು ನಮಗೆ ತಿಳಿದಿರುವ ಅತ್ಯಂತ ಪ್ರಾಚೀನ ಇಂಡೊ–ಆರ್ಯನ್‌ಭಾಷೆ. ವಾಂಶಿಕವಾಗಿ ಹರಿದು ಬಂದದ್ದರಿಂದ ಅದು ಸ್ವಲ್ಪಮಟ್ಟಿಗೆ ಪ್ರತ್ಯೇಕತೆಯ ಲಕ್ಷಣಗಳಿಂದ ಕೂಡಿದ್ದು, ಕೃತಕವೆನಿಸುವಂಥದು. ಈ ಕಾರಣದಿಂದಾಗಿ ಅದು ಅನಂತರ ಬಂದ ಅಭಿ ಜಾತ ಸಂಸ್ಕೃತ ಸಾಹಿತ್ಯದ ಭಾಷೆಯಂತೆ ವಿಶೇಷ ಧ್ವನಿಯುಕ್ತವಲ್ಲ; ಆದರೆ ಅಭಿಜಾತ ಯುಗದ ಲ್ಯಾಟಿನ್ ಭಾಷೆಯನ್ನೂ ಮೀರಿಸುವ ಮಟ್ಟಿಗೆ ಸತ್ತ್ವಯುತವಾದ್ದು. ಅದರ ಶೈಲಿ ನೇರ, ಸರಳ. ಪ್ರತಿಯೊಂದು ಪಾದವೂ ಒಂದು ಸಂಪೂರ್ಣ ವಾಕ್ಯವಾಗಿರ ದಿದ್ದರೂ ಅದರಲ್ಲಿ ಒಂದು ಸಂಪೂರ್ಣ ಭಾವವನ್ನು ವ್ಯಕ್ತಪಡಿಸಲು ಋಗ್ವೇದದ ಕವಿಗಳು ಪ್ರಯತ್ನಿಸಿರುವುದೇ ಇದಕ್ಕೆ ಮುಖ್ಯ ಕಾರಣ. ಪದ್ಯರಚನೆಯಲ್ಲಿ ಪರಿಣತರಾದ ಋಗ್ವೇ ದದ ಕವಿಗಳ ಬಾಯಲ್ಲಿ ಋಗ್ವೇದದ ಕಾವ್ಯಶಿಲ್ಪ ತಂತ್ರದ ಪರಮಾವಧಿ ಮುಟ್ಟಿತು. ಆದರೆ ಇದು ಬಹಳಮಟ್ಟಿಗೆ ದೇವತೆಗಳೊಂದಿಗೆ ಮಾನವರು ನಡಸುತ್ತಿದ್ದ ವ್ಯವಹಾರದ ಮನೋಧರ್ಮದಿಂದ ಕೂಡಿದ್ದರಿಂದ ಈ ವಾತಾವರಣದಲ್ಲಿ ನಿಜವಾದ ಕಾವ್ಯಪ್ರತಿಭೆ

ಹೊಮ್ಮಲಿಲ್ಲ. ಸಂಪೂರ್ಣ ಆತ್ಮಸಮರ್ಪಣೆಯ ಧೋರಣೆ ಅಥವಾ ಕವಿಯ ಆತ್ಮ ಪ್ರತ್ಯಯ ಪ್ರಕಟವಾದಾಗ ಮಾತ್ರ ಉತ್ತಮ ಕಾವ್ಯ ಹೊಮ್ಮಬಲ್ಲುದು. ಈ ಎರಡು ತುದಿಗಳ ನಡುವೆ ಹೊಯ್ದಾಡುವ ಋಗ್ವೇದ ಇವೆರಡರಲ್ಲಿ ಯಾವೊಂದು ಗುರಿಯನ್ನೂ ಅಂತಿಮವಾಗಿ ಮುಟ್ಟಲಾರದೆ ಹೋಯಿತು. ಋಗ್ವೇದದ ಕಾವ್ಯ ಭವ್ಯವಲ್ಲವಾದರೂ ಮಾನವತೆಯ ಗುಣ ಅದರಲ್ಲೂ ತುಂಬಿ ತುಳುಕುತ್ತದೆ.

ಸಾಮವೇದ ಒಂದು ದೃಷ್ಟಿಯಲ್ಲಿ ಪ್ರತ್ಯೇಕ ಕೃತಿಯೇ ಅಲ್ಲ. ಅದು ಬಹುತೇಕ ಋಗ್ವೇದದಿಂದ ರೂಪಿತವಾದ್ದು, ಹಾಡಲು ಅನುವಾದ್ದು. ಆದರ ಹೆಸರೇ ಈ ಗುಣ ವನ್ನು ಸೂಚಿಸುತ್ತದೆ. ಆದ್ದರಿಂದ ಸಾಮವೇದದ ಸಾಹಿತ್ಯಕ ಹಾಗೂ ಐತಿಹಾಸಿಕ ಮೌಲ್ಯ ಇಲ್ಲವೇ ಇಲ್ಲವೆಂಬಷ್ಟು ಅಲ್ಪ. ಯಜುರ್ವೇದದಲ್ಲೂ ಸಾಹಿತ್ಯ ದೃಷ್ಟಿಯಿಂದ ಪರಿಗಣಿಸಬೇಕಾದ ಹೊಸ ಅಂಶಗಳು ಹೆಚ್ಚಾಗಿಲ್ಲ. ಇದು ಆರ್ಯರ ಯಜ್ಞಕರ್ಮದಲ್ಲಿ ಅಧ್ವರ್ಯು ಅನುಸರಿಸಬೇಕಾದ ಕ್ರಮದ ಕೈಪಿಡಿ. ಆದರೆ ಅಥರ್ವವೇದ ಉಳಿದ ಮೂರು ವೇದಗಳಿಗಿಂತ ಭಿನ್ನವಾದ್ದು, ಗಮನಾರ್ಹವಾದ್ದು. ಆ ಕಾಲದ ಜನರಲ್ಲಿ ಬೇರೂರಿದ್ದ ಅನೇಕ ನಂಬಿಕೆಗಳ ಪರಿಚಯವನ್ನು ಇದರಿಂದ ಪಡೆಯಬಹುದು.

ಅಥರ್ವವೇದ ಆದಿಮ ಸಂಸ್ಕೃತಿಯಲ್ಲಿ ಉತ್ಪನ್ನವಾದ ನಂಬಿಕೆಗಳ, ಮಂತ್ರಮಾಟಗಳ ಅಭಿವ್ಯಕ್ತಿ. ಮಾನವ ನಾಗರಿಕತೆಯ ಅರುಣೋದಯ ಕಾಲದಲ್ಲಿ ಮೂಡಿಬಂದ ಭಾವನೆ ಗಳಿಗೆ ಇದು ಬಲು ಹತ್ತಿರವಾಗಿದೆ. ಋಗ್ವೇದದಲ್ಲೂ ಇಂಥ ಮಂತ್ರಗಳು ಇಲ್ಲದಿಲ್ಲ. ಆದರೆ ಅದು ಮುಖ್ಯವಾಗಿ ಸೋಮಯಾಗನಿರತರಾದ ಪುರೋಹಿತರಿಗಾಗಿ ರಚಿತವಾದ್ದ ರಿಂದ, ಅಲ್ಲಿ ಇವಕ್ಕೆ ಹೆಚ್ಚು ಅವಕಾಶವಿರಲಿಲ್ಲ. ಅಥರ್ವವೇದದ ಮಂತ್ರಗಳಾದರೊ ಮುಖ್ಯವಾಗಿ ಸಾಮಾನ್ಯ ಜನತೆಗೆ ಸಂಬಂಧಿಸಿದವು. ಕಾಲಕ್ರಮದಲ್ಲಿ ಋಗ್ವೇದದ ಪುರೋಹಿತವರ್ಗದವರು ಇವುಗಳ ಮೇಲೂ ಸ್ವಾಮ್ಯ ಪಡೆದು ಇವನ್ನೂ ಕ್ರೋಡೀಕರಿ ಸಿದರು; ಇವಕ್ಕೂ ಮಂತ್ರಪಾಠ ರಚಿಸಿದರು. ಭಾರತೀಯ ವೈದ್ಯ ಮೂಲತಃ ಅಥರ್ವ ವೇದದಿಂದ ವಿಕಾಸಗೊಂಡಿತೆನ್ನಬಹುದು.

ಋಗ್ವೇದದ ಭಾಷೆ ವಾಂಶಿಕವಾಗಿ ಬಂದದ್ದಾಗಿ ಸ್ವಲ್ಪಮಟ್ಟಿಗೆ ಕೃತಕವಾದ್ದಾ ಗಿದ್ದರೂ ಅದು ಜೀವಂತಭಾಷೆಯ ರೂಪವೂ ಆಗಿದ್ದರಿಂದ ಕ್ರಮೇಣ ಬದಲಾವಣೆಗಳಿಗೆ ಒಳಗಾಯಿತು. ಈ ಬದಲಾವಣೆಯನ್ನು ಸಾಮವೇದದಲ್ಲಿ ಗುರುತಿಸಬಹುದು. ಭಾಷಿಕ ದೃಷ್ಟಿಯಿಂದ ಮುಂದಿನ ಘಟ್ಟ ಕೃಷ್ಣಯಜುರ್ವೇದದ್ದು. ಅಥರ್ವವೇದದ ಭಾಷಿಕ ಪರಿ ಶೀಲನೆ ಕಷ್ಟಸಾಧ್ಯ. ಅತ್ಯಂತ ಪ್ರಾಚೀನವೆನಿಸಿದ ಅನೇಕ ವಿಚಾರಗಳನ್ನು ಅನಂತರದ ಕಾಲದ ಭಾಷೆಯಲ್ಲಿ ವಿವರಿಸಿರುವುದನ್ನು ಅದರಲ್ಲಿ ಕಾಣಬಹುದು; ಹೀಗೆಯೇ ಋಗ್ವೇದದ ದೃಷ್ಟಿಯಿಂದ ಹಳತೆನ್ನಬಹುದಾದ ಕೆಲವು ಭಾಷಾರೂಪಗಳೂ ಅದರಲ್ಲಿವೆ. ಋಗ್ವೇದ ಕ್ಕಿಂತ ಇದು ಈಚಿನದಲ್ಲವೆನ್ನಲಾಗದಾದರೂ ಋಗ್ವೇದವನ್ನು ಅಭ್ಯಾಸಮಾಡಿದ ಬ್ರಾಹ್ಮಣರೇ ಅನಂತರ ಇದನ್ನು ಕ್ರೋಡೀಕರಿಸಿದ್ದರಿಂದ ಇದನ್ನು ತಮ್ಮ ವಾಂಶಿಕ ಭಾಷೆಯ ಉಡುಪಿನಲ್ಲಿ ಸಿಂಗರಿಸಿದರು. ಇದಕ್ಕೆ ಕೃತಕತೆ ಬಂದಿತು. ಮಂತ್ರಸಾಹಿತ್ಯದ

ಸಂಪ್ರದಾಯಗುಣ ಇದಕ್ಕೂ ಲಭ್ಯವಾಯಿತು. ಅಥರ್ವವೇದದ ಮೂಲಭಾಷೆ ಪತಂಜಲಿಯ ಸಂಸ್ಕೃತಕ್ಕಿಂತ ಭಿನ್ನವೆಂದು ಕಾಣುವುದಿಲ್ಲ. ಇದನ್ನು ಅರ್ಥಮಾಡಿಕೊಳ್ಳುವುದು ಸಾಮಾನ್ಯವಾಗಿ ಕಷ್ಟವಲ್ಲ. ಆದರೂ ಭಾರತದಲ್ಲಿ ಬಹಳ ಹಿಂದಿನಿಂದ ವಿಕಾಸಗೊಂಡಿರುವ ಸಮನ್ವಯದೃಷ್ಟಿಯ ಪ್ರಾಚೀನ ನಿದರ್ಶನವಾಗಿ ಇದನ್ನು ಪರಿಗಣಿಸಬಹುದು. ಆರ್ಯಭಾಷೆ ಆಡುವವರು ಭಾರತದಲ್ಲಿ ಹರಡಿದಾಗ ಇಲ್ಲಿದ್ದ ಇತರ ಜನಾಂಗಗಳೊಂದಿಗೆ ಪಡೆದ ಸಂಪರ್ಕದ ಕುರುಹಾಗಿ ಇದು ಉಳಿದುಬಂದಿದೆ. ಮಂತ್ರ ಮಾಟ ಮುಂತಾದವುಗಳೇ ಪ್ರಧಾನವಾದ ಅಥರ್ವವೇದದ ಪುರೋಹಿತರು ಸಾಮಾನ್ಯವಾಗಿ ಬಡ ಅಜ್ಞ ಜನತೆಯೊಂದಿಗೆ ವ್ಯವಹರಿಸಬೇಕಾಗಿದ್ದುದು ಸ್ಪಷ್ಟ. ಅಲ್ಲದೆ ಅವರು ರಾಜಗುರುಗಳೂ ಆಗಿದ್ದರು. ದೊರೆಯ ಪಟ್ಟಾಭಿಷೇಕವನ್ನು ಕುರಿತ ವಿಸ್ತಾರವಾದ ಗೀತವೂ ಅದರಲ್ಲಿರುವುದು ಗಮನಾರ್ಹ. ಆಗಿನ ಕಾಲದ ರಾಜ್ಯಪದ್ಧತಿಯನ್ನು ಕುರಿತ ಮಾಹಿತಿ ಅದರಲ್ಲಿ ದೊರಕುವುದಾದ್ದರಿಂದಲೂ ಅದು ಗಮನಾರ್ಹ.

ಸಂಹಿತೆಗಳ ಅನಂತರದ ಸಾಹಿತ್ಯ : ಸಂಹಿತೆಗಳ ಅನಂತರ ಬಂದ ಕೃತಿಗಳು ಬ್ರಾಹ್ಮಣಗಳು. ಇವನ್ನು ವೇದಗಳ ಮುಂದುವರಿದ ಭಾಗಗಳೆನ್ನಬಹುದಾದರೂ ಇವನ್ನು ಸಂಹಿತೆಗಳಿಗಿಂತ ಭಿನ್ನವಾದ ಸಾಹಿತ್ಯವೆಂದೇ ಪರಿಗಣಿಸಬೇಕು. ಇವು ಬಹುತೇಕ ಗದ್ಯದಲ್ಲಿವೆ. ಶೈಲಿ ಸುಂದರವೇನೂ ಅಲ್ಲ. ಆದರೆ ಇಲ್ಲಿಯದು ಅತ್ಯಂತ ಪ್ರಾಚೀನ ಇಂಡೊ–ಯೂರೋಪಿಯನ್ ಗದ್ಯ. ವಾಕ್ಯರಚನೆಯ ಇತಿಹಾಸದ ಅಭ್ಯಾಸದಲ್ಲಿ ಇವು ತುಂಬ ಉಪಯುಕ್ತವೆನಿಸಿವೆ. ಇವುಗಳ ವಸ್ತು ಆಧ್ಯಾತ್ಮಿಕ. ಯೆಹೂದ್ಯರ ಧರ್ಮಶಾಸ್ತ್ರವಾಗಿರುವ ಹೀಬ್ರೂ ಭಾಷೆಯ 'ಟಾಲ್ಮುಡ್' ಗ್ರಂಥವನ್ನೂ ಹಳೆಯ ಒಡಂಬಡಿಕೆಯನ್ನೂ ಇವು ಹೋಲುತ್ತವೆ. ಯಜ್ಞ ಯಾಗಾದಿಗಳ ದೀರ್ಘ ವಿವೇಚನೆ ಇಲ್ಲಿದೆ. ಹಿಂದೂ ಸಮಾಜದ ಜಾತಿ ಉಪಜಾತಿಗಳ ಕಲ್ಪನೆಯ ಬೀಜ ಇಲ್ಲಿ ಮೊಳೆತು ಬೆಳೆಯತೊಡಗಿದ್ದನ್ನು ಗುರುತಿಸಬಹುದು. ಬ್ರಾಹ್ಮಣಗಳ ಮುಂದಿನ ಬೆಳೆವಣಿಗೆ ಆರಣ್ಯಕಗಳು. ಅನಂತರ ಬಂದಂಥವು ಉಪನಿಷತ್ತುಗಳು. ಬ್ರಾಹ್ಮಣಗಳು, ಆರಣ್ಯಕಗಳು ಹಾಗೂ ಉಪನಿಷತ್ತುಗಳು ವೈದಿಕಯುಗದ ಕೊನೆಯ ಘಟ್ಟವನ್ನು ಸೂಚಿಸುತ್ತವೆ. ಏಕದೇವೋಪಾಸನೆ, ಆತ್ಮಸ್ವರೂಪ ಮುಂತಾದ ವಿಚಾರಗಳನ್ನು ಕುರಿತ ಜಿಜ್ಞಾಸೆ ಉಪನಿಷತ್ತುಗಳ ವಸ್ತು. ವೇದಗಳು ಯಜ್ಞಕ್ಕೆ ಪ್ರಾಧಾನ್ಯ ನೀಡಿದರೆ, ಉಪನಿಷತ್ತುಗಳು ಚಿಂತನೆಗೆ, ಜ್ಞಾನಕ್ಕೆ ಪ್ರಾಧಾನ್ಯ ನೀಡುತ್ತವೆ. ಒಂದು ದೃಷ್ಟಿಯಲ್ಲಿ ಇವುಗಳದು ವೇದಗಳದಕ್ಕಿಂತ ಭಿನ್ನವಾದ ಧರ್ಮ. ಬಹುದೇವತಾಪೂಜೆಯಿಂದ ಏಕದೇವತ್ವದತ್ತ, ಫಲಾಪೇಕ್ಷೆಯಿಲ್ಲದ ಕರ್ಮದತ್ತ, ಜ್ಞಾನಾನ್ವೇಷಣೆಯತ್ತ ಸಾಗಿದ ಪ್ರಯತ್ನವನ್ನು ಉಪನಿಷತ್ತುಗಳಲ್ಲಿ ಕಾಣಬಹುದು. ಮುಂದಿನ ಎರಡೂವರೆ ಸಾವಿರ ವರ್ಷಗಳ ಕಾಲ ಹಿಂದುಧರ್ಮವೂ ಭಾರತೀಯ ಸಾಹಿತ್ಯವೂ ಉಪನಿಷತ್ತುಗಳಿಂದ ಪ್ರಭಾವಿತವಾದುವು.

ವೇದಗಳ ಯುಗದಲ್ಲಿ ಅನೇಕ ಆರ್ಯೇತರ ಭಾಷೆಗಳೂ ಸಾಹಿತ್ಯಗಳೂ ಇದ್ದುವೆಂಬುದು ನಿರ್ವಿವಾದ. ಆದರೆ ಅವುಗಳ ಸುಳಿವು ನಮಗೆ ಸಿಗುತ್ತಿಲ್ಲ. ಆರ್ಯಭಾಷೆ,

ವೇದಗಳ ಭಾಷೆ, ಸಾಹಿತ್ಯರೂಪದಲ್ಲಿ ಉಳಿದುಕೊಂಡು ಬಂದಿದೆ. ಧ್ವನಿಯ (phonetic) ದೃಷ್ಟಿಯಿಂದ ಇದು ವೇದಯುಗದ ಉದ್ದಕ್ಕೂ ಯಾವ ಬದಲಾವಣೆಗಳಿಗೂ ಒಳಗಾಗಲಿಲ್ಲವಾದರೂ ಇದರ ವ್ಯಾಕರಣದಲ್ಲೂ ಶಬ್ದಸಂಪತ್ತಿನಲ್ಲೂ ಗಮನಾರ್ಹ ಬದಲಾವಣೆಗಳಾದುವು. ನಾಮ ಹಾಗೂ ಕ್ರಿಯಾರೂಪಗಳ ವೈವಿಧ್ಯ ಕಡಿಮೆಯಾಗಿ, ಅಭಿಜಾತ ಸಂಸ್ಕೃತದ ಸಮರೂಪತೆಗೂ ಕ್ರಮಬದ್ಧತೆಗೂ ಎಡೆಕೊಟ್ಟಿತ್ತು. ಆ ಕಾಲದಲ್ಲಿದ್ದ ಅನೇಕ ಸ್ಥಳೀಯ ಭಾಷೆಗಳ ಶಬ್ದಗಳ ಹೆಜ್ಜೆಗುರುತುಗಳು ವೇದಗಳಲ್ಲಿ ಧಾರಾಳವಾಗಿ ಸಿಗುತ್ತವೆ. ವೇದಗಳ ಸಾಹಿತ್ಯಭಾಷೆಯಲ್ಲಿ ಆಡುಭಾಷೆಯಲ್ಲಿ ಬಳಕೆಯಲ್ಲಿದ್ದ ಅನೇಕ ಶಬ್ದಗಳು ದೊರಕಿವೆ. ಜನಸಾಮಾನ್ಯರಿಗೆ ಅರ್ಥವಾಗುವ, ಅವರು ಬಳಸುತ್ತಿದ್ದ ಉಪಭಾಷೆಗಳು ವೇದಯುಗದ ಕೊನೆಯ ಭಾಗದ ವೇಳೆಗೇ, ಕ್ರಿ.ಪೂ. ೫೦೦ಕ್ಕೂ ಹಿಂದಿನಿಂದಲೇ, ರೂಪುಗೊಳ್ಳುತ್ತಿದ್ದುವೆಂಬುದು ನಿರ್ವಿವಾದ. ಉತ್ತರ ಭಾರತದ ಎಲ್ಲ ಆಧುನಿಕ ಭಾಷೆಗಳ ಜನನ ಪ್ರಕ್ರಿಯೆ ಒಂದು ದೃಷ್ಟಿಯಲ್ಲಿ ಸ್ಥೂಲವಾಗಿ ಈ ಘಟ್ಟದಲ್ಲೇ ಆರಂಭವಾಯಿತೆನ್ನಬಹುದು.

ಲಿಪಿಯ ಉಗಮ : ಅತ್ಯಂತ ಪ್ರಾಚೀನರೂಪದ ಸಂಸ್ಕೃತದಲ್ಲಿ ರಚಿತವಾದ ವೇದಗೀತಗಳು ಅನೇಕ ಶತಮಾನಗಳ ಕಾಲ ವಾಂಶಿಕವಾಗಿ ಬಾಯಿಂದ ಬಾಯಿಗೆ ಹರಿದುಬಂದುವು. ಆರ್ಯರ ಆಗಮನಕ್ಕೂ ಹಿಂದೆ ಭಾರತದಲ್ಲಿ ಪ್ರವರ್ಧಮಾನ ಸ್ಥಿತಿಯಲ್ಲಿದ್ದ ಮೊಹೆಂಜೊದಾರೊ ನಾಗರಿಕತೆಯ ಜನಕ್ಕೆ ಭಾಷೆ ಹಾಗೂ ಲಿಪಿ ಇದ್ದುವು. ಭಾರತಕ್ಕೆ ಬಂದ ಆರ್ಯರ ಭಾಷೆಗೆ ಕ್ರಿ.ಪೂ. ೩ನೆಯ ಶತಮಾನದ ವರೆಗೂ ಲಿಪಿ ಇದ್ದದ್ದು ನಮ್ಮ ಗಮನಕ್ಕೆ ಬಂದಿಲ್ಲ. "ವೈದಿಕ ಸಾಹಿತ್ಯದ ಮುಖ್ಯ ಅಂಗಗಳಾದ ಸಂಹಿತೆ, ಬ್ರಾಹ್ಮಣ, ಆರಣ್ಯಕ ಮತ್ತು ಉಪನಿಷತ್ತುಗಳಲ್ಲಿ ಲಿಪಿಗೆ ಸಂಬಂಧಿಸಿದಂತೆ ಅತಿ ಖಚಿತವಾದ ಮಾಹಿತಿ ದೊರೆಯುವುದಿಲ್ಲವಾದರೂ ವೈದಿಕ ಸಾಹಿತ್ಯದ ಕೆಲವು ಭಾಗಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ, ಆರ್ಯರಿಗೆ ಆಗಿನ ಕಾಲದಲ್ಲಿ ಲೇಖನದ ವಿಚಾರ ಗೊತ್ತಿದ್ದಂತೆ ಭಾಸವಾಗುತ್ತದೆ.[15] ಸಿಂಧುನದಿಯ ನಾಗರಿಕತೆಯ ಲಿಪಿಯೇ ಮುಂದೆ ವಿಕಾಸಹೊಂದಿತೇ, ಆರ್ಯರ ಲಿಪಿ ಬೇರೆಯಾಗಿಯೇ ವಿಕಾಸಹೊಂದಿತೇ ಎಂಬ ಬಗ್ಗೆ ವಿದ್ವಾಂಸರಲ್ಲಿ ಏಕಾಭಿಪ್ರಾಯವಿಲ್ಲ. ಅಂತೂ ಇದುವರೆಗೆ ದೊರಕಿರುವ ಶಾಸನಗಳ ಪ್ರಕಾರ ಕ್ರಿ.ಪೂ. ೫ನೆಯ ಶತಮಾನದ ವರೆಗೂ ಭಾರತೀಯ ಲಿಪಿಯ ಇತಿಹಾಸವನ್ನು ಕೊಂಡೊಯ್ಯಬಹುದೆಂದು ಹೇಳಲಾಗಿದೆ.[9]

ಕಾಲ ವಿಂಗಡಣೆ : ಒಟ್ಟಿನಲ್ಲಿ ಭಾರತೀಯ ಸಾಹಿತ್ಯದ ದೀರ್ಘ ಇತಿಹಾಸವನ್ನು ಅವಲೋಕಿಸಿದಾಗ ಅದನ್ನು ಸ್ಥೂಲವಾಗಿ ಮೂರು ಭಾಗಗಳಾಗಿ ವಿಭಾಗಿಸಬಹುದೆಂದು ಎ. ಎಂ. ಮ್ಯಾಕ್ಡೊನೆಲ್ ಅಭಿಪ್ರಾಯಪಡುತ್ತಾರೆ.[17] (೧) ಪ್ರಾಚೀನ—ಈ ಯುಗದಲ್ಲಾಗಿ ಇದುವರೆಗೆ ಲಭ್ಯವಿರುವ ಸಾಹಿತ್ಯವೆಂದರೆ ಸಂಹಿತೆಗಳು, ಬ್ರಾಹ್ಮಣಗಳು, ಆರಣ್ಯಕಗಳು ಮತ್ತು ಉಪನಿಷತ್ತುಗಳು. ಆರ್ಯೇತರ ಭಾಷೆಗಳಲ್ಲೂ ಈ ಕಾಲದಲ್ಲಿ ಸಾಹಿತ್ಯಸೃಷ್ಟಿಯಾಗಿದ್ದಿರಬಹುದಾದರೂ ಅದು ಲಭ್ಯವಿಲ್ಲ. (೨) ಮಧ್ಯ—ಅಭಿಜಾತ ಸಂಸ್ಕೃತದಲ್ಲೂ ಪ್ರಾಕೃತದಲ್ಲೂ ಇಂಡೊ-ಆರ್ಯನ್ ಕುಟುಂಬಕ್ಕೆ ಸೇರದ

ಭಾರತೀಯ ಭಾಷೆಗಳಲ್ಲೂ ಈ ಯುಗದಲ್ಲಿ ಸೃಷ್ಟಿಯಾದ ಸಾಹಿತ್ಯ ವಿಪುಲವಾಗಿ ದೊರಕಿದೆ. (೩) ಆಧುನಿಕ—ಆಧುನಿಕ ಭಾರತೀಯ ಭಾಷೆಗಳಲ್ಲಿ ವಿಶೇಷವಾಗಿ ಸಾಹಿತ್ಯ ಸೃಷ್ಟಿಯಾದ್ದು ಈ ಯುಗದಲ್ಲಿ. ಪ್ರಾಕೃತದಿಂದ ಉಗಮಿಸಿದ ವಿವಿಧ ಅಪಭ್ರಂಶಗಳು ಕ್ರಮೇಣ ಅನೇಕ ಆಧುನಿಕ ಭಾರತೀಯ ಭಾಷೆಗಳಾಗಿ ಈ ಕಾಲದಲ್ಲಿ ರೂಪುಗೊಂಡುವು. ದಕ್ಷಿಣದ ದ್ರಾವಿಡ ಭಾಷಾ ಕುಟುಂಬದ ಭಾಷೆಗಳು ಅವಕ್ಕಿಂತ ಪ್ರಾಚೀನವಾದವೆಂಬುದರಲ್ಲಿ ಸಂಶಯವಿಲ್ಲ. ಇವುಗಳಲ್ಲಿ ಕೆಲವು ಭಾಷೆಗಳ ಸಾಹಿತ್ಯಗಳ ವಿಕಾಸ ಕ್ರಿಸ್ತಪೂರ್ವಕ್ಕೂ ಹಿಂದಿನಿಂದಲೇ ಆಯಿತೆಂಬುದು ನಿಸ್ಸಂದೇಹ.

ವೈದಿಕ ಸಾಹಿತ್ಯದ ಅನಂತರ: ಕ್ರಿ.ಪೂ. ೫೦೦ರ ಸುಮಾರಿಗೆ ವೈದಿಕ ಯುಗ ಮುಗಿಯಿತೆಂದು ಹೇಳಬಹುದು. ಈ ವೇಳೆಗೆ ಪ್ರಾಚೀನ ಇಂಡೊ-ಆರ್ಯನ್ ಭಾಷೆಯ ವಿಕಾಸ ಅಂತಿಮ ಘಟ್ಟವನ್ನು ಮುಟ್ಟಿತ್ತು. ಈ ಕಾಲದಲ್ಲಿ ವೈಯಾಕರಣರಿಂದ ನಿಬಂಧಿತವಾದ ರೂಪದಲ್ಲೇ ಸಂಸ್ಕೃತ ಮುಂದಿನ ಎರಡು ಸಾವಿರ ವರ್ಷಗಳಿಗಿಂತ ದೀರ್ಘಕಾಲದಲ್ಲಿ ಮುಂದುವರಿದಿದೆ. ಈ ಕಾಲದಲ್ಲಿ ರಚಿತವಾದ ಮುಖ್ಯ ಕೃತಿಗಳೆಂದರೆ ಸೂತ್ರಗಳು. ಇವುಗಳಲ್ಲಿ ಸೂತ್ರರೂಪದ ಸಣ್ಣ ವಾಕ್ಯಗಳಲ್ಲಿ ವಿಷಯವನ್ನು ವಿವೇಚಿಸಲಾಗಿರುವುದರಿಂದ ಇವಕ್ಕೆ ಈ ಹೆಸರು ಬಂದಿದೆ. ವಿಷಯವನ್ನು ನೆನಪಿನಲ್ಲಿಟ್ಟುಕೊಳ್ಳಲು ಸಾಧ್ಯವಾಗುವಂತೆ ಮಾಡುವುದೇ ಇವುಗಳ ಉದ್ದೇಶ. ಈ ಸಾಹಿತ್ಯ ವೈದಿಕ ಸಾಹಿತ್ಯದ ಭಾಗವಲ್ಲವಾದರೂ ಅದಕ್ಕೆ ನಿಕಟಸಂಬಂಧ ಹೊಂದಿದ್ದು, ಇದಕ್ಕೆ ವೇದಾಂಗವೆಂದು ಹೆಸರು ಬಂದಿದೆ. ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು, ಜ್ಯೋತಿಷ ಇವೆಲ್ಲ ವೇದಾಂಗದಲ್ಲಿ ಸೇರಿವೆ. ಆದರೆ ಎಲ್ಲವೂ ಸೂತ್ರರೂಪದಲ್ಲಿ ರಚಿತವಾಗಿಲ್ಲ. ಭಾಷೆಯ ದೃಷ್ಟಿಯಿಂದ ನೋಡಿದಾಗ ಸೂತ್ರಸಾಹಿತ್ಯ ವೈದಿಕ ಯುಗದ ಅನಂತರದ ಸಾಹಿತ್ಯವೆಂಬುದು ಸ್ಪಷ್ಟವಾಗುತ್ತದೆ. ಇದರ ರಚನೆ ಪಾಣಿನಿಯ ನಿಯಮಗಳಿಗೆ ಬಹಳಮಟ್ಟಿಗೆ ಅನುಗುಣವಾಗಿದೆ.

ಸೂತ್ರಸಾಹಿತ್ಯದಲ್ಲಿ ಅತ್ಯಂತ ಗಮನಾರ್ಹವಾದ್ದು ಭಾಷಾಶಾಸ್ತ್ರವನ್ನು ಕುರಿತ ವಿವೇಚನೆ. ಪಾಣಿನಿಯ ಅಷ್ಟಾಧ್ಯಾಯಿ ಎಂಬುದು ಅವನ ಹಿಂದೆ ವ್ಯಾಕರಣ ಕ್ಷೇತ್ರದಲ್ಲಿ ಅನೇಕರಿಂದ ನಡೆದ ಕಾರ್ಯದ ತರ್ಕಬದ್ಧ ಉಪಸಂಹಾರ. ಒಂದು ಬಗೆಯ ಶೀಘ್ರಲಿಪಿ ಭಾಷೆಯಲ್ಲಿ ರಚಿಸಲಾದ ಈ ಕೃತಿಯ ಕಾಲ ಕ್ರಿ.ಪೂ. ೬-೫ನೆಯ ಶತಮಾನಗಳ ನಡುವೆ. ಸುಸಂಸ್ಕೃತರೆನಿಸಿಕೊಂಡವರು ಆಡುತ್ತಿದ್ದ ಭಾಷೆಯ ವ್ಯಾಕರಣಸೂತ್ರಗಳನ್ನು ಪಾಣಿನಿ ವಿವೇಚಿಸಿದ್ದಾನೆ. ಈ ಕೃತಿಗೆ ಪುರವಣಿಯಾಗಿ ಬಂದ ಕೃತಿ ಕಾತ್ಯಾಯನನ ವಾರ್ತಿಕೆ. ಆಗ ತಾನೆ ಬರವಣಿಗೆಗೆ ಇಳಿಯುತ್ತಿದ್ದ ಅಭಿಜಾತ ಸಂಸ್ಕೃತಕ್ಕೆ ಅನುವಾಗುವಂತೆ ಇವನು ಅದನ್ನು ಹೊಂದಿಸಿದ. ಇವರಿಬ್ಬರ ಕೃತಿಗಳ ಆಧಾರದ ಮೇಲೆ ಸಮಗ್ರವಾದ ಮಹಾಭಾಷ್ಯವನ್ನು ಬರೆದವನು ಪತಂಜಲಿ. ವೈಯಾಕರಣ ತ್ರಿಮೂರ್ತಿಗಳಲ್ಲಿ ಇವನು ಕೊನೆಯವನು. ಜನಸಾಮಾನ್ಯರ ಆಸಕ್ತಿ ಸಂಸ್ಕೃತದಲ್ಲಿ ಕಡಿಮೆಯಾಗುತ್ತಿದ್ದಾಗ, ಸಂಸ್ಕೃತ ಭಾಷೆಯ ಶುದ್ಧತೆ ಕಡಿಮೆಯಾಗುತ್ತಿದ್ದಾಗ, ಬ್ರಾಹ್ಮಣವಿದ್ವಾಂಸರಿಗಾಗಿ ಬರೆಯಲಾದ್ದು ಈ ಕೃತಿ. ಈ ಕೃತಿಯಲ್ಲಿ ಆಗಿನ ಕಾಲದ ಭಾರತದ ಚಿತ್ರವೂ ಇದೆ.

ಪತಂಜಲಿಯ ಅನಂತರವೂ ಅನೇಕ ವೈಯಾಕರಣರು ಬಂದು ವ್ಯಾಕರಣಶಾಸ್ತ್ರವನ್ನು ಸರ್ವತೋಮುಖವಾಗಿ ಬೆಳಸಿದರು.

ಸಾಹಿತ್ಯ ವೈವಿಧ್ಯ : ವೇದಗಳ ಯುಗದ ಅನಂತರದ ಕಾಲದಲ್ಲಿ ಭಾರತೀಯ ಸಾಹಿತ್ಯ ಚಟುವಟಿಕೆ ನಾನಾಮುಖವಾಗಿ ಹರಿಯಿತು. ಈ ಚಟುವಟಿಕೆ ಉತ್ತರಭಾರತಕ್ಕೆ ಮಾತ್ರ ಸೀಮಿತವಾದ್ದೇನೂ ಅಲ್ಲ. ದಕ್ಷಿಣದಲ್ಲೂ ಇದು ಆ ವೇಳೆಗೆ ಸಮೃದ್ಧವಾಗಿ ಬೆಳೆಯಿತು. ದ್ರಾವಿಡಭಾಷೆಗಳ ಸೊಂಪು ಬೆಳೆ ಆ ವೇಳೆಗೆ ಕಂಗೊಳಿಸುತ್ತಿತ್ತು. ಸಂಸ್ಕೃತ ಭಾಷೆ ಅನೇಕ ಪ್ರಾಕೃತರೂಪಗಳಿಗೆ ಎಡೆಗೊಟ್ಟಿತ್ತು. ಭಾಷಾನುಗುಣವಾದ ಈ ವಿಂಗಡಣೆಯಲ್ಲದೆ ಈ ಕಾಲದ ಸಾಹಿತ್ಯವನ್ನು ಧಾರ್ಮಿಕ, ತಾತ್ತ್ವಿಕ ಹಾಗೂ ಲೌಕಿಕ ಎಂದು ಮೂರು ಗುಂಪುಗಳಾಗಿ ವಿಂಗಡಿಸಬಹುದು. ಈ ಕಾಲದಲ್ಲಿ ಜನಿಸಿದ ಎರಡು ದೊಡ್ಡ ಮತಗಳು ಬೌದ್ಧ ಹಾಗೂ ಜೈನ. ಇವುಗಳ ಸಾಹಿತ್ಯಗಳೂ ಬೆಳೆದುವು. ಬ್ರಾಹ್ಮಣ ಮತಕ್ಕೆ ಸಂಬಂಧಿಸಿದಂತೆ ಅತ್ಯಂತ ಮುಖ್ಯ ಸಾಹಿತ್ಯ ಕೃತಿಗಳು ರಾಮಾಯಣ-ಭಾರತಗಳು ಮತ್ತು ಧರ್ಮಶಾಸ್ತ್ರಗಳು ಅಥವಾ ಸ್ಮೃತಿಗಳು. ಇವನ್ನು ಸಂಪೂರ್ಣ ಧಾರ್ಮಿಕವೆಂದಾಗಲಿ ಲೌಕಿಕವೆಂದಾಗಲಿ ಹೇಳಲಾಗುವುದಿಲ್ಲ. ಇವೆರಡರ ಸೀಮಾರೇಖೆಯ ಮೇಲೆ ರಚಿತವಾದ ಕೃತಿಗಳಿವು. ಇವಲ್ಲದೆ ಅನೇಕ ಪುರಾಣಗಳೂ ತಂತ್ರಗಳೂ ಹುಟ್ಟಿಕೊಂಡುವು. ಧಾರ್ಮಿಕ ಸಾಹಿತ್ಯವೂ ವಿಪುಲವಾಗಿ ಬೆಳೆಯಿತು. ಲೌಕಿಕ ಸಾಹಿತ್ಯದಲ್ಲಿ ಪ್ರಮುಖವಾದ ಪ್ರಕಾರಗಳು ನಾಟಕ ಹಾಗೂ ಕಾವ್ಯ. ಜೊತೆಗೆ ಮೇಲೆ ಹೇಳಿದಂತೆ ಅನೇಕ ವ್ಯಾಕರಣ ಗ್ರಂಥಗಳೂ ನ್ಯಾಯ, ರಾಜ್ಯಶಾಸ್ತ್ರ, ವೈದ್ಯ ಮುಂತಾದವನ್ನು ಕುರಿತ ಕೃತಿಗಳೂ ಸೃಷ್ಟಿಯಾದುವು.

ಇತಿಹಾಸಕಾವ್ಯಗಳು : ಈ ಕಾಲದ ಭಾರತೀಯ ಸಾಹಿತ್ಯವೆಲ್ಲಕ್ಕೂ ವೇದವೇ ಮೂಲವೆಂದು ವಿದ್ವಾಂಸರು ಪರಿಗಣಿಸುತ್ತಾರೆ. ಎರಡು ಮಹಾ ಇತಿಹಾಸ ಕಾವ್ಯಗಳಾದ ರಾಮಾಯಣ-ಮಹಾಭಾರತಗಳಿಗೂ ವೇದಗಳೇ ಮೂಲವೆಂದು ಸ್ಥಾಪಿಸಲು ಕೆಲವರು ಯತ್ನಿಸಿದ್ದಾರೆ. ವೇದಗಳಲ್ಲಿ ಬರುವ ಸಂವಾದಗಳಲ್ಲಿ ಇವುಗಳನ್ನು ಬೀಜರೂಪದಲ್ಲಿ ಕಾಣಬಹುದೆಂಬುದು ಅವರ ವಾದ. ಪುರೂರವ ಮತ್ತು ಉರ್ವಶಿಯರ ಸಂವಾದ ಒಂದು ನಿದರ್ಶನ. ನಾಟಕಸಾಹಿತ್ಯ ಈ ಸಂವಾದಗೀತಗಳಲ್ಲಿ ಉಗಮಿಸಿತೆನ್ನುವವರೂ ಉಂಟು. ಈ ವಾದ ಏನೇ ಇರಲಿ, ವೇದಗಳ ಕವಿಗಳು ಪ್ರಕೃತಿಯ ಹಿಂದಿನ ಶಕ್ತಿಗಳನ್ನು ಹೊಗಳಿ ಹಾಡುವಾಗ ಜನಪ್ರಿಯವಾಗಿದ್ದ ದಂತಕಥೆಗಳನ್ನೂ ಪದ್ಯದಲ್ಲಿ ಬಂಧಿಸಿದರ... ಸಂವಾದಗಳಲ್ಲಿ ರಾಮಾಯಣ ಮಹಾಭಾರತ ಕಥೆಗಳಿಗೆ ಹೋಲಿಕೆ ...ಗಿಸಬಹುದೆಂದು ವಾಸ್ತವವಾಗಿ ಬ್ರಾಹ್ಮಣಗಳಲ್ಲಿ ಇವಕ್ಕೆ ಸಾದೃಶ್ಯವನ್ನು ಕಾಣಬಹ... (೧) ಪ್ರಾಚೀನ—ಈ ಇಲ್ಲಿ ಬರುವ ಶುನಃಶೇಫನ ಕಥೆಯನ್ನು ಕುರಿತ ಗಾಥೆಗಳು ಭಾಷ...ಗಳು, ಬ್ರಾಹ್ಮಣಗಳು, ಇತಿಹಾಸ ಕಾವ್ಯಗಳ ಹತ್ತಿರ ಹತ್ತಿರ ಬರುತ್ತವೆಯೆಂದು ವಿಂಟರ್‌ನಿಟ್ಸ್... ಈ ಕಾಲದಲ್ಲಿ ಇತರ ಸಾಹಿತ್ಯ ಕೃತಿಗಳಂತೆ ರಾಮಾಯಣ-ಮಹಾಭಾರತಗಳೂ ... ಮಧ್ಯ...ಲದ ಸಾಹಿತ್ಯ ಸೃಷ್ಟಿಕಾರ್ಯದ ಪರಾಕಾಷ್ಠೆಗಳೆನ್ನಬಹುದು. ನಳನ ಕಥೆಯೋ ...ಕ್ಕೆ ...ಾದವು

ಮೊದಲು ಸ್ವತಂತ್ರ ಕೃತಿಗಳಾಗಿದ್ದುವೆಂದೂ ಕ್ರಮೇಣ ಇವೂ ಮಹಾಭಾರತದಲ್ಲಿ ಸಮಾವೇಶಗೊಂಡುವೆಂದೂ ಊಹಿಸಬಹುದು. "ನಳೋಪಾಖ್ಯಾನ ಮಹಾಭಾರತಕ್ಕಿಂತ ಪ್ರಾಚೀನವಾದುದೆಂಬುದನ್ನು ಒಪ್ಪಿಕೊಳ್ಳಬಹುದಾಗಿದೆ," ಎಂದು ದೇ. ಜವರೇಗೌಡರು ಹೇಳುತ್ತಾರೆ.[೨೦] ಮಹಾಭಾರತವೇ ನಳೋಪಾಖ್ಯಾನದಲ್ಲಿ ಉಗಮಿಸಿತೆಂಬುದು ಅವರ ಅಭಿಪ್ರಾಯ. "ಪ್ರಾರಂಭದಲ್ಲಿ ಇದು ಕುರುಪಾಂಡವರ ಕಥೆಯಾಗಿ ಉಗಮುಗೊಂಡು, ಬಾಯಿಂದ ಬಾಯಿಗೆ ತೇಲುತ್ತ, ಕುರುಪಾಂಡವರ ಕಥೆ 'ಜಯ' ಎಂಬ ನಾಮಧೇಯದಿಂದ ಅಂಕುರಿಸಿ, ಭಾರತವಾಗಿ, ಮಹಾಭಾರತವಾಗಿ, ಇಡೀ ಭರತಖಂಡದ ಆಸ್ಟ್ರಿಕ್ ಆರ್ಯ ದ್ರಾವಿಡ ಮೊದಲಾದೆಲ್ಲ ಜನಾಂಗಗಳ ಮತಪದ್ಧತಿ ಮತಿಸಂಪ್ರದಾಯ ಜೀವನ ವಿಧಾನಗಳನ್ನೊಳಗೊಂಡು ಬೃಹತ್ತಾಗಿ ಬೆಳೆಯುವ ಹೊತ್ತಿಗೆ, ನಾಡಿನ ಮೂಲೆಯಲ್ಲೆಲ್ಲ ವ್ಯಾಪಿಸಿದ್ದಿರಬೇಕು. ಪ್ರಾಯಶಃ ಕುರುಕ್ಷೇತ್ರ ಯುದ್ಧ 'ಜಯ' ಕಾವ್ಯದ ವಸ್ತುವಾಗಿದ್ದಂತೆ ಕಾಣುತ್ತದೆ. ಕಾಲಾನಂತರದಲ್ಲಿ ಈ ಯುದ್ಧಕ್ಕೆ ಕಾರಣಭೂತವಾದ ಲಾಕ್ಷಾಗೃಹದಹನ, ರಾಜಸೂಯಯಾಗ, ಅಕ್ಷಕ್ರೀಡೆ ಮೊದಲಾದ ಪ್ರಸಂಗಗಳು ಸೇರಿಕೊಂಡಿರಬೇಕು. ದ್ಯೂತಕ್ರೀಡೆ, ವನವಾಸ ಮತ್ತು ಅಜ್ಞಾತವಾಸದ ಪ್ರಸಂಗಗಳು ಆ ಮೊದಲೇ ನಳಚರಿತ್ರೆಯಲ್ಲಿ ಸರ್ವಜನಸಮ್ಮತವಾಗಿ ಸುಂದರವಾಗಿ ಅಚ್ಚುಕಟ್ಟಾಗಿ ಸರಳವಾಗಿ ಚಿತ್ರಿತವಾಗಿದ್ದುವು. ಮೊದಲೇ ಸಿದ್ಧವಾಗಿದ್ದ ಮಾತೃಕೆಯಲ್ಲಿ ಎರಕಹೊಯ್ಯುವುದೊಂದೇ ಭಾರತಶಿಲ್ಪಿಯ ಕೆಲಸವಾಗಿತ್ತು. 'ಜಯ' ಕಾವ್ಯ ವಿಕಾಸಪಥದಲ್ಲಿದ್ದಾಗ ನಳೋಪಾಖ್ಯಾನದ ಬೆಳವಣಿಗೆ ಸಂಪೂರ್ಣವಾಗಿ ನಿಂತುಹೋಗಿ, ಅದರ ಸೀಮಾರೇಖೆಗಳು ಅಚ್ಚಳಿಯದಂತೆ, ಸ್ಥಾನಾಂತರವಾಗದಂತೆ ಅವಿಚಲವಾಗಿ ಖಚಿತಗೊಂಡಿದ್ದುವು. ಆದ್ದರಿಂದ 'ಜಯ' ನಳೋಪಾಖ್ಯಾನದ ತಳಹದಿಯ ಮೇಲೆ ಮುಗಿಲುದ್ದ ಬೆಳೆಯಿತಲ್ಲದೆ, ಅದನ್ನು ತನ್ನ ಗರ್ಭದಲ್ಲಿ ಸೇರಿಸಿಕೊಂಡಿತು".[೨೧]

ಮಹಾಭಾರತಕ್ಕೆ ಈಗಿನ ರೂಪ, ಅತ್ಯಂತ ಇತ್ತೀಚೆಗೆನ್ನುವುದಾದರೆ, ಕ್ರಿ.ಶ. ೪ನೆಯ ಶತಮಾನದಲ್ಲಿ ಬಂದಿರಬೇಕು. ಈ ಕಾಲಕ್ಕಿಂತ ಕನಿಷ್ಠ ಇನ್ನೂರು ವರ್ಷಗಳ ಹಿಂದಿನಿಂದ ರಾಮಾಯಣ ಈಗಿನ ರೂಪದಲ್ಲಿದ್ದಿರಬೇಕು. ಅದರ ಮೂಲಕಥೆ ಕೂಡ ಬಹಳ ಹಿಂದಿನಿಂದ ಬೆಳೆದುಕೊಂಡು ಬಂದಿರಬೇಕು. ರಾಮಾಯಣವನ್ನು ಭಾರತದ ಆದಿಕಾವ್ಯವೆಂದು ಕರೆಯಲಾಗಿದೆಯಾದರೂ, ಮಹಾಭಾರತದಲ್ಲಿ ಪ್ರಾಚೀನ ಹಾಡು ಕಥೆಗಳ ರೂಪದ ಕೆಲವು ಉದಾಹರಣೆಗಳು ಸಿಗುತ್ತವೆ. ಆದರೆ ರಾಮಾಯಣದಲ್ಲಿ ಅನಂತರಕಾಲದ ಆಲಂಕಾರಿಕ ಕಾವ್ಯದ ಲಕ್ಷಣಗಳಿವೆ. ಬೌದ್ಧರ ಜಾತಕಗಳಲ್ಲಿ ರಾಮನ ಕಥೆ ಬರುವುದಾದರೂ ಅದರಲ್ಲಿ ರಾವಣನ ಮಾತು ಬರುವುದಿಲ್ಲ. ಬೌದ್ಧತ್ರಿಪಿಟಕ ರೂಪುಗೊಳ್ಳುತ್ತಿದ್ದಾಗ ರಾಮನನ್ನು ಕುರಿತ ಕಥನಗೀತಗಳು ಪ್ರಚಾರದಲ್ಲಿದ್ದುವಾದರೂ ಸಮಗ್ರ ರಾಮಾಯಣ ಕಾವ್ಯ ಇದ್ದಿರಲಾರದು ಎಂಬುದು ವಿದ್ವಾಂಸರ ತರ್ಕ. ಆದ್ದರಿಂದ ವಾಲ್ಮೀಕಿರಾಮಾಯಣ ಕ್ರಿ.ಪೂ. ೩–೪ನೆಯ ಶತಮಾನದಲ್ಲಿ ರಚಿತವಾಗಿರಬೇಕೆಂದೂ ಕ್ರಿ.ಶ. ೨ನೆಯ ಶತಮಾನದ ವೇಳೆಗೆ ಅದಕ್ಕೆ ಈಗಿನ ರೂಪ ಬಂದಿರಬೇಕೆಂದೂ ಹೇಳಲಾಗಿದೆ.[೨೩]

ಇತಿಹಾಸಕಾವ್ಯಗಳಿಗೂ ಇವಕ್ಕೆ ಪೂರ್ವದ ಸಾಹಿತ್ಯಕ್ಕೂ ಮುಖ್ಯ ವ್ಯತ್ಯಾಸ ಇರುವುದು ಇವುಗಳ ಉಗಮದಲ್ಲಿ. ಇತಿಹಾಸಕಾವ್ಯಗಳು ಉಗಮಹೊಂದಿದ್ದು ಪುರೋಹಿತ ವರ್ಗದಲ್ಲಲ್ಲ. ಸೂತರೆಂಬ ಸಾಂಪ್ರದಾಯಿಕ ಹಾಡುಗಾರರ ಬಾಯಲ್ಲಿ. ಸಾರಥಿಗಳಾಗಿದ್ದ ಇವರು ಯುದ್ಧಗಳನ್ನು ಕಣ್ಣಾರೆ ಕಂಡು ಅವನ್ನು ಹಾಡುಗಳ ರೂಪದಲ್ಲಿ ವರ್ಣಿಸುತ್ತಿದ್ದರು. ಅವು ವೀರಕಾವ್ಯಗಳು. ದೇವತೆಗಳ ಸ್ತುತಿ ಅವುಗಳ ಉದ್ದೇಶವಲ್ಲ. ಅವು ದೊರೆಗಳನ್ನು ಕುರಿತ ಕಥಾವಸ್ತುಗಳನ್ನೊಳಗೊಂಡಿದ್ದುವು. ಯಜ್ಞಯಾಗಾದಿಗಳ ವರ್ಣನೆಯಾಗಲಿ ಮಹಾದರ್ಶನಗಳ ಘನವಿವೇಚನೆಯಾಗಲಿ ಅವುಗಳ ಉದ್ದೇಶಗಳಾಗಿರಲಿಲ್ಲ. ಈ ಹಾಡುಗಳು ಸಾಮಾನ್ಯ ಜನರಿಗಾಗಿ; ಅವರ ಪ್ರೀತಿಯನ್ನೂ ಬಹುಮಾನವನ್ನೂ ಗಳಿಸುವುದಕ್ಕಾಗಿ. ಆಸ್ಥಾನಗಳಿಂದ ಜನಸಾಮಾನ್ಯರಲ್ಲಿಗೆ ಇವನ್ನು ಕೊಂಡೊಯ್ದು ಜನಪ್ರಿಯಗೊಳಿಸುವ ಕಾರ್ಯದಲ್ಲಿ ಬಹುಶಃ ಕುಶೀಲವರೆಂಬ ಸಂಚಾರಿ ಹಾಡುಗಾರರು ಸೂತರಿಗೆ ನೆರವು ನೀಡಿರಬೇಕು. ಮಹಾಭಾರತದ ಕಥೆಯನ್ನು ಧೃತರಾಷ್ಟ್ರನಿಗೆ ಒಕ್ಕಣಿಸುವವನು ಸಂಜಯ. ರಾಮಾಯಣದ ಕಥೆಯನ್ನು ಹಾಡಿದವರು ರಾಮನ ಮಕ್ಕಳಾದ ಕುಶ ಮತ್ತು ಲವ. ಇವರು ವಾಲ್ಮೀಕಿಯಿಂದ ಇದನ್ನು ಕಲಿತರು. ವೇದಗಳು ಬಾಯಿಂದ ಬಾಯಿಗೆ, ತಂದೆಯಿಂದ ಮಗನಿಗೆ, ಅಸ್ಖಲಿತವಾಗಿ, ಬಹುತೇಕ ಅಪ್ರಕ್ಷಿಪ್ತವಾಗಿ ಬಂದದ್ದರಿಂದ ಅವು ಮೂಲರೂಪದಲ್ಲೇ ಉಳಿದುವು. ಆದರೆ ರಾಮಾಯಣ ಮಹಾಭಾರತಗಳ ವಿಚಾರದಲ್ಲಿ ಈ ಮಾತನ್ನು ಹೇಳುವಂತಿಲ್ಲ. ಇವು ಮೂಲರೂಪದಲ್ಲಿ ಉಳಿದಿಲ್ಲ. ಇವನ್ನು, ಮುಖ್ಯವಾಗಿ ಮಹಾಭಾರತವನ್ನು, ಜ್ಞಾನದ ಮಹಾಕೇಂದ್ರವೆನ್ನಬಹುದು. ವಿವಿಧ ಕಾಲಗಳ ಮತ, ದರ್ಶನ, ನೀತಿ ಮುಂತಾದವು ಇವುಗಳಲ್ಲಿ ಸೇರಿಕೊಂಡು ಇವು ಸಾಗರೋಪಮವಾಗಿ ಬೆಳೆದಿವೆ.

ರಾಮಾಯಣ ಮಹಾಭಾರತಗಳ ಸಾಹಿತ್ಯಮೌಲ್ಯ ಏನೆಂದು ನಿರ್ಣಯ ಮಾಡಲು ಈ ಲೇಖನದಲ್ಲಿ ಯತ್ನಿಸುವುದಿಲ್ಲ. ಆದರೆ ಸುಮಾರು ಎರಡು ಸಾವಿರ ವರ್ಷಗಳ ಭಾರತೀಯ ಸಾಹಿತ್ಯೇತಿಹಾಸಕ್ಕೆ ಇವು ಎಷ್ಟರಮಟ್ಟಿಗೆ ಸ್ಫೂರ್ತಿಕೇಂದ್ರಗಳಾಗಿವೆಯೆಂಬುದನ್ನು ನೆನಸಿಕೊಂಡರೆ ಆಶ್ಚರ್ಯವಾಗುತ್ತದೆ. ಜಗತ್ತಿನ ಬೇರಾವ ಭಾಷೆಯ ಸಾಹಿತ್ಯದ ಮೇಲೂ ಯಾವ ಕೃತಿಯೂ ಬಹುಶಃ ಇಷ್ಟೊಂದು ಪರಿಣಾಮ ಬೀರಿಲ್ಲ. ಅನೇಕ ಕವಿಗಳ, ಸಂತರ, ದಾರ್ಶನಿಕರ, ಧರ್ಮಪ್ರಚಾರಕರ ಕೃತಿಗಳಲ್ಲಿ ಮಾತ್ರವಲ್ಲ, ಜನಪದ ಸಾಹಿತ್ಯ ಕ್ಷೇತ್ರದಲ್ಲಿ ಕೂಡ ಇದು ಅನಂತಮುಖವಾಗಿ ವಿಜೃಂಭಿಸಿದೆ. 'ಭಾರತದ ಭಾಷೆಗಳು ಹಲವಾದರೂ ಭಾರತೀಯ ಸಾಹಿತ್ಯ ಒಂದು'—ಎಂಬ ಮಾತಿಗೆ ರಾಮಾಯಣ ಭಾರತಗಳು ಬಹಳಮಟ್ಟಿಗೆ ಕಾರಣ. ಸಂಸ್ಕೃತದಲ್ಲೇ ಇವನ್ನು ಆಧರಿಸಿ ಅನೇಕ ಕೃತಿಗಳ ರಚನೆಯಾಯಿತು. ದ್ರಾವಿಡಭಾಷೆಗಳಲ್ಲೂ ಅನಂತರಕಾಲದಲ್ಲಿ ಹುಟ್ಟಿದ ದ್ರಾವಿಡೇತರ ಭಾಷೆಗಳಲ್ಲೂ ಸೃಷ್ಟಿಯಾದ ರಾಮಾಯಣ ಭಾರತ ಕಾವ್ಯಗಳು ಅನೇಕ.

ರಾಮಾಯಣ ಭಾರತಗಳನ್ನಾಗಲಿ, ವೇದೋತ್ತರಕಾಲದ ಇತರ ಸಾಹಿತ್ಯವನ್ನಾಗಲಿ ಅರ್ಥಮಾಡಿಕೊಳ್ಳಲು ಆಗಿನ ಕಾಲದ ರಾಜಕೀಯ ಹಿನ್ನೆಲೆಯನ್ನಷ್ಟು ಅವಲೋಕಿಸಬೇಕು. ಆರ್ಯರು ಭಾರತದಲ್ಲಿ ವಿಸ್ತರಿಸತೊಡಗಿದಾಗ, ಇಲ್ಲಿದ್ದ ಸ್ಥಳೀಯ ಜನಾಂಗ

ಗಳೊಡನೆ ಅವರು ಪದೇಪದೇ ಯುದ್ಧಮಾಡಬೇಕಾಗಿಬಂತೆಂಬುದು ನಿಜ. ಆರ್ಯರಲ್ಲಿ ಕೆಲವರು ವೇದವೇದಾಂಗಗಳ ರಚನೆಯಲ್ಲಿ ನಿರತರಾಗಿದ್ದಾಗ, ಜೊತೆಜೊತೆಯಲ್ಲಿ ಇನ್ನು ಕೆಲವರು ರಾಜ್ಯ ಕಟ್ಟುವ ಕಾರ್ಯದಲ್ಲಿ ನಿರತರಾಗಿದ್ದರು. ಆರ್ಯರು ಎದುರಿಸಬೇಕಾಗಿ ಬಂದ ಜನಾಂಗಗಳಲ್ಲಿ ಬಲಿಷ್ಠರಾದವರು ಪಶ್ಚಿಮದಲ್ಲಿ ನಾಗರು, ಪೂರ್ವದಲ್ಲಿ ಮಗಧರು. ಬಹುಶಃ ಮಿಶ್ರಜನಾಂಗದವರಾದ ಹೈಹಯರು ಪಶ್ಚಿಮದಲ್ಲಿ ನಾಗರ ಬಲವನ್ನು ಮುರಿದರು. ಪರಶುರಾಮನ ನೇತೃತ್ವದಲ್ಲಿ ಆರ್ಯರು ಹೈಹಯರನ್ನು ಸೋಲಿಸಿದರು. ಜರಾಸಂಧನ ಮರಣದೊಡನೆ ಮಗಧರಾಜ್ಯ ಕ್ಷೀಣದೆಶೆಗೆ ಬಂದಿರಬೇಕು. ಪಾಂಡವರ ಪ್ರಭುತ್ವ ಸ್ಥಾಪಿಸಲು ಶ್ರೀಕೃಷ್ಣ ಕಾರಣನಾದ. ಮಹಾಭಾರತ ಯುದ್ಧಕ್ಕೆ ಸ್ವಲ್ಪ ಮೊದಲು ಭಾರತದ ಪೂರ್ವಪ್ರಾಂತಗಳೆಲ್ಲ ಆರ್ಯಮಯವಾಗಿದ್ದುವೆಂದು ಭಾವಿಸಬಹುದು. ಆ ಯುದ್ಧ ಸಂಭವಿಸಿದ್ದು ಕ್ರಿ. ಪೂ. ೧೫೦೦ರ ಸುಮಾರಿನಲ್ಲಿ ಎಂದು ಹೇಳಲಾಗಿದೆ. ಮಧ್ಯದೇಶದ ರಾಜವಂಶದ ದಾಯಾದಿಗಳ ನಡುವೆ ನಡೆದ ಈ ಯುದ್ಧದಲ್ಲಿ ಉತ್ತರ ಭಾರತದ ದೊರೆಗಳೆಲ್ಲ ಭಾಗವಹಿಸಿದರು. ಯುಧಿಷ್ಠಿರನ ಪಟ್ಟಾಭಿಷೇಕದಲ್ಲಿ ಪರ್ಯವಸಾನವಾದ ಈ ಯುದ್ಧ ಪ್ರಪ್ರಥಮವಾಗಿ ಅಖಿಲ ಭಾರತ ಕಲ್ಪನೆಯನ್ನು ಮೂಡಿಸಿತೆನ್ನಬಹುದು. ಇಡೀ ಉತ್ತರ ಭಾರತಕ್ಕೆ ಯುಧಿಷ್ಠಿರ ಚಕ್ರವರ್ತಿಯಾದ.

ಈ ಯುದ್ಧ ಭಾರತದ ಜನರ ಸಮಷ್ಟಿಪ್ರಜ್ಞೆಯ ಮೇಲೆ ವಿಶೇಷ ಪ್ರಭಾವ ಬೀರಿತು. ಕಥೆ, ಉಪದೇಶ, ಹಾಡು ಮುಂತಾದವು ಬೆಳೆದುವು. ಅನಂತರ ಭಾರತದಲ್ಲಿ ಬೆಳೆದ ಜ್ಞಾನಭಂಡಾರಕ್ಕೂ ಧಾರ್ಮಿಕಪ್ರೇರಣೆಗಳಿಗೂ ಕಾವ್ಯಸೃಷ್ಟಿಗೂ ಸ್ಫೂರ್ತಿ ಕೇಂದ್ರಗಳಾಗಿ ಎರಡು ವ್ಯಕ್ತಿತ್ವಗಳು ವಿಕಾಸಗೊಂಡುವು: ಒಂದು ವ್ಯಾಸನದು, ಇನ್ನೊಂದು ಶ್ರೀಕೃಷ್ಣನದು. ಶ್ರೀಕೃಷ್ಣ ಅತಿಮಾನವನೆನಿಸಿಕೊಂಡ; ಕ್ರಮೇಣ ವಿಷ್ಣುವಿನ ಅವತಾರವೇ ಆದ. ಇವನು ವ್ಯಾಸ ಬೋಧಿಸಿದ ಧರ್ಮವನ್ನು ಎತ್ತಿ ಹಿಡಿದ ಮಹಾಪುರುಷ.

ಮಹಾಭಾರತ ಯುದ್ಧದ ಅನಂತರದ ಸು. ೧,೦೦೦ ವರ್ಷಗಳ ಧಾರ್ಮಿಕ ಸಾಹಿತ್ಯಕ ವಿಕಾಸ ಅದ್ಭುತವಾದ್ದು. ವೈದಿಕ ಪದ್ಧತಿ ಮಸುಕಾಗಿ, ಹೊಸ ಹೊಸ ಧಾರ್ಮಿಕ ಪ್ರವಾಹಗಳು ಕವಲೊಡೆಯುತ್ತಿದ್ದುವು. ವೇದಪೂರ್ವಕಾಲದಲ್ಲಿ ಪ್ರಚಾರದಲ್ಲಿದ್ದ, ಸಿಂಧುಕಣಿವೆ ನಾಗರಿಕತೆಯಲ್ಲೂ ಪ್ರಮುಖವಾಗಿದ್ದ ಪಶುಪತಿಯ ಆರಾಧನೆ ಮತ್ತೆ ಜನಪ್ರಿಯವಾಗತೊಡಗಿತು. ವೇದಗಳ ಆರಾಧಕರು ಇವನನ್ನು ಈಶಾನ ಎಂದು ಗೌರವಿಸಿದರು. ವೈದಿಕ ದೇವರಲ್ಲೊಬ್ಬನಾದ ವಿಷ್ಣು ಇತರ ದೇವರ ಗುಣಗಳನ್ನೂ ಮೈಗೂಡಿಸಿಕೊಂಡು ಬೆಳೆದ. ಪ್ರಾಚೀನ ಋಷಿಗಳಲ್ಲೊಬ್ಬನಾಗಿದ್ದ ನಾರಾಯಣ, ಮಹಾಭಾರತದ ವೀರ ವಾಸುದೇವಕೃಷ್ಣ—ಇವರ ಸುತ್ತ ಬೆಳೆದುಬಂದಿದ್ದ ಅನೇಕ ಭಾವನೆಗಳು ಕೂಡಿ ಭಗವದ್ಗೀತೆಯ ಕೃಷ್ಣ ವಿಕಾಸಗೊಂಡ. ಅವತಾರದ ಪರಿಕಲ್ಪನೆ ರೂಪುಗೊಂಡಿತು. ವೈದಿಕಯುಗದ ಕೊನೆಯ ಹೊತ್ತಿಗೆ, ವಿವಿಧ ಜನಾಂಗಗಳ ಹಾಗೂ ಸಂಸ್ಕೃತಿಗಳ ಪರಸ್ಪರ ಹೊಂದಾವಣೆಯ ಪ್ರಯತ್ನವಾಗಿ ವರ್ಣಾಶ್ರಮಧರ್ಮ ರೂಪದಳೆಯಿತು. ಇದು ದೈವಕೃತವಾದ್ದೆಂಬ ಭಾವನೆ ಬೇರುಬಿಟ್ಟಿತು. ದಾಸ್ಯಭಯವಿಲ್ಲದ ಸ್ಥಿರತೆ,

ಧರ್ಮದ ಚೌಕಟ್ಟಿನೊಳಗೆ ಆಡಳಿತದ ನಿರ್ವಹಣೆ—ಇವು ಆಗಿನ ಮುಖ್ಯ ಸಾಧನೆಗಳು. ರಾಜಧರ್ಮ, ಸ್ಮೃತಿ, ಸಂಪ್ರದಾಯ ಇವನ್ನು ಕಾಲದಿಂದ ಕಾಲಕ್ಕೆ ವಿಮರ್ಶಿಸಿ, ಕ್ರೋಡೀಕರಿಸುವ ಯತ್ನ ನಡೆಯಿತು. ಸಂಪ್ರದಾಯಕ್ಕೆ ಶಾಸ್ತ್ರದ ಒಪ್ಪ ನೀಡಿದ್ದು ಸ್ಮೃತಿ. ಸಾರ್ವಜನಿಕ ವಿಚಾರಗಳ ಯುಕ್ತಾಯುಕ್ತ ವಿಮರ್ಶೆ ನಡಸುತ್ತಿದ್ದ ವಿದ್ವಾಂಸರ ಸಭೆಗಳು (ಪರಿಷತ್ತುಗಳು) ಪ್ರಾಮುಖ್ಯ ಗಳಿಸಿದುವು. ನಾಡು ವಿಸ್ತರಿಸಿದಂತೆ, ಅದರಲ್ಲಿ ಸುವ್ಯವಸ್ಥೆ ಸ್ಥಾಪಿಸಲು ರಾಜಾಧಿರಾಜನ, ಚಕ್ರವರ್ತಿಯ, ಧರ್ಮರಕ್ಷಕನ ಆವಶ್ಯಕತೆ ಉಂಟಾಯಿತು. ಇವೆಲ್ಲ ವೇದೋತ್ತರಕಾಲದಲ್ಲಿ ಆದ ಬೆಳವಣಿಗೆಗಳು.

ಮಗಧ ಸಾಮ್ರಾಜ್ಯದ ಕಾಲ: ಕ್ರಿ. ಪೂ. ೭ನೆಯ ಶತಮಾನದ ವೇಳೆಗೆ ಆರಂಭವಾದ ಮಗಧಸಾಮ್ರಾಜ್ಯದ್ದು ಭಾರತದ ಬಹುಮುಖವಾದ ಉನ್ನತಿಯ ಕಾಲ. ಆ ವೇಳೆಗೆ ಭಾರತದ ಹೊರಗೂ ಅನೇಕ ಗಮನಾರ್ಹ ಬೆಳವಣಿಗೆಗಳಾಗಿದ್ದುವು. ಚೀನದಲ್ಲಿ ಕಾನ್ಫ್ಯೂಷಸ್ ಮತ್ತು ಲಾವೊ-ಟ್ಸೆಗಳ ಬೋಧನೆಗಳು ಪ್ರಚಾರವಾಗಿದ್ದುವು. ಇರಾನಿನಲ್ಲಿ ಜರತುಷ್ಟ್ರ ಮತ ಬೆಳೆದಿತ್ತು. ಬ್ಯಾಬಿಲೋನಿಯದಲ್ಲಿ ಯೆಹೂದ್ಯರ ಧರ್ಮ ಬೆಳೆದಿತ್ತು. ಮುಂದೆ ಐರೋಪ್ಯ ಸಂಸ್ಕೃತಿಗೆ ತಳಹದಿಯಾಗಲಿದ್ದ ಗ್ರೀಸಿನ ನಾಗರಿಕತೆ ಪ್ರವರ್ಧಮಾನವಾಗಿತ್ತು. ಗ್ರೀಕ್ ತತ್ತ್ವಶಾಸ್ತ್ರಜ್ಞರು ಜೀವನದ ಸಮಸ್ಯೆಗಳನ್ನು ಕುರಿತು ಚಿಂತನೆ ನಡಸಿದ್ದರು. ಗ್ರೀಕ್ ಸಾಹಿತ್ಯ ನಾನಾಮುಖವಾಗಿ ಬೆಳೆಯತೊಡಗಿತ್ತು. ರೋಮಿನ ಸ್ಥಾಪನೆಯಾಯಿತು. ಹೀಗೆ ಸುತ್ತಮುತ್ತಣ ಪ್ರದೇಶಗಳಲ್ಲಿ ನಾಗರಿಕತೆ ಕೊನರೊಡೆಯುತ್ತಿದ್ದಾಗ ಭಾರತದಲ್ಲಿ ಮಗಧ ಸಾಮ್ರಾಜ್ಯದ ಉನ್ನತಿಕೆ ಆಯಿತು. ಕ್ರಿ.ಪೂ. ೭೦೦ರಿಂದ ಕ್ರಿ. ಪೂ. ೧೫೦ರ ವರೆಗಿನ ಕಾಲದಲ್ಲಿ ಭಾರತೀಯ ಕಲೆ ಸಂಸ್ಕೃತಿ ಸಾಹಿತ್ಯಗಳು ಹಲವು ಮುಖವಾಗಿ ಬೆಳೆದುವು. ಈ ಕಾಲದ ಇಬ್ಬರು ಮಹಾವ್ಯಕ್ತಿಗಳು ಬುದ್ಧ ಮತ್ತು ಮಹಾವೀರ. ಮೂಲತಃ ಕ್ಷತ್ರಿಯರಾಗಿದ್ದ ಈ ಇಬ್ಬರೂ ವೇದಗಳ ಕರ್ಮಕಾಂಡವನ್ನೂ ವರ್ಣಾಶ್ರಮಧರ್ಮವನ್ನೂ ಪ್ರತಿಭಟಿಸಿದರು. ಇವರ ಸುತ್ತ ವಿಪುಲ ವೈವಿಧ್ಯಮಯ ಧಾರ್ಮಿಕ ಸಾಹಿತ್ಯವೇ ಬೆಳೆಯಿತು. ಇಬ್ಬರೂ ಆರ್ಯಸಂಸ್ಕೃತಿಯ ಉತ್ಪನ್ನಗಳೇ ಎನ್ನಬೇಕು. ಸಾಂಖ್ಯ, ಯೋಗ ಮತ್ತು ಉಪನಿಷತ್ತುಗಳೇ ಬುದ್ಧನಿಗೂ ಸ್ಫೂರ್ತಿ ನೀಡಿದುವು. ಸಮಕಾಲೀನ ಧಾರ್ಮಿಕ ಚಿಂತನೆಗಳಿಗೆ, ವಾತಾವರಣದಲ್ಲಿ ಹಬ್ಬಿದ್ದ ಧಾರ್ಮಿಕ ಅಶಾಂತಿಗೆ, ಅವನು ಒಂದು ವ್ಯವಸ್ಥಿತರೂಪ ನೀಡಿದ; ಧರ್ಮದ ಹಿರಿಮೆಯನ್ನು ಪ್ರತಿಪಾದಿಸಿದ, ಧರ್ಮಚಕ್ರಪ್ರವರ್ತಕನಾದ. ಸಂಕುಚಿತವಾಗುತ್ತಿದ್ದ ಧರ್ಮಕ್ಕೆ ಸಾರ್ವತ್ರಿಕತೆಯನ್ನು ನೀಡಲು ಯತ್ನಿಸಿದ. ಬುದ್ಧನ ತತ್ತ್ವಗಳನ್ನು ಅಂತರರಾಷ್ಟ್ರೀಯಗೊಳಿಸಿದವನು ಅಶೋಕ.

ಬೌದ್ಧ ಜೈನ ಧರ್ಮಗಳ ಸ್ಥಾಪಕರೂ ಪ್ರಚಾರಕರೂ ಜನಸಾಮಾನ್ಯರಲ್ಲಿ ತಮ್ಮ ಧರ್ಮಗಳನ್ನು ಬಿತ್ತರಿಸಲು ಆರಿಸಿಕೊಂಡ ಭಾಷೆ ಸಂಸ್ಕೃತವಲ್ಲ, ಪ್ರಾಕೃತ. ಆರ್ಯರು ಭಾರತದ ಹಲವು ಭಾಗಗಳಲ್ಲಿ ಹರಡಿದಾಗ ಅಭಿವ್ಯಕ್ತಿಯ ಮಾಧ್ಯಮವಾಗಿ ಸಂಸ್ಕೃತದ ಪ್ರಾಮುಖ್ಯ ತಗ್ಗಿತು. ಅದು ವಿದ್ವಾಂಸರ ಭಾಷೆಯಾಗಿ ಮಾತ್ರ ಉಳಿಯಿತು. ಆದರೂ

ಜನಸಾಮಾನ್ಯರಿಗೆ ಸಂಸ್ಕೃತ ಭಾಷೆ ಅರ್ಥವಾಗದೆ ಇರಲಿಲ್ಲ. ಪ್ರಾಕೃತ ಭಾಷೆಗಳ ವಿಕಾಸದ ಘಟ್ಟಗಳನ್ನೂ ಅವುಗಳ ಸಾಹಿತ್ಯದ ಸ್ವರೂಪವನ್ನೂ ಬೇರೆಡೆಯಲ್ಲಿ ವಿವೇಚಿಸ ಲಾಗಿದೆ. ಬೌದ್ಧರ ಮತ್ತು ಜೈನರ ಮತಗ್ರಂಥಗಳೇ ಪ್ರಾಕೃತ ಭಾಷೆಗಳಲ್ಲಿ ರಚಿತ ವಾದ ಪ್ರಾಚೀನ ಗ್ರಂಥಗಳು. ಅಶೋಕನ ಶಾಸನಗಳಿಂದಲೂ ಪ್ರಾಕೃತ ಭಾಷೆಗಳ ಪರಿಚಯವಾಗುತ್ತದೆ. ಅವನ ಅನಂತರ ಬಂದ ದೊರೆಗಳೂ ಇತರರೂ ಅವನ ಮಾರ್ಗ ವನ್ನೇ ಅನುಸರಿಸಿ ಅನೇಕ ಪ್ರಾಕೃತ ಶಾಸನಗಳನ್ನು ಬರೆಯಿಸಿದರು. ೪ನೆಯ ಶತ ಮಾನದ ವರೆಗೂ ಪ್ರಾಕೃತ ಭಾಷೆಗಳ ಪ್ರಭಾವ ಭಾರತದಲ್ಲಿ ವಿಶೇಷವಾಗಿತ್ತು. ಅವು ಗಳಲ್ಲಿ ಅನೇಕ ಉತ್ತಮ ಸಾಹಿತ್ಯಕೃತಿಗಳು ರಚಿತವಾದುವು.

ಕ್ರಿ. ಪೂ. ೧೫೦ರಿಂದ ೩೦೦ರ ವರೆಗಿನ ಕಾಲದಲ್ಲಿ ಎರಡು ಮುಖ್ಯ ರಾಜಕೀಯ ಬೆಳವಣಿಗೆಗಳಾದುವು. ವಾಯುವ್ಯ ಮತ್ತು ಪಶ್ಚಿಮ ಭಾರತಗಳು ಮತ್ತು ಮಧ್ಯ ದೇಶದ ಪಶ್ಚಿಮಭಾಗಗಳಲ್ಲಿ ವಿದೇಶೀಯರ ಸಾಮ್ರಾಜ್ಯ ಸ್ಥಾಪನೆ ಒಂದು ಬೆಳೆವಣಿಗೆ. ಕುಶಾನರ ಸಾಮ್ರಾಜ್ಯ ಉತ್ತರ ಭಾರತವನ್ನೂ ಮಧ್ಯ ಏಷ್ಯದವರೆಗಿನ ಪ್ರದೇಶ ಗಳನ್ನೂ ಆವರಿಸಿಕೊಂಡಿತ್ತು. 'ಬುದ್ಧಚರಿತೆ'ಯನ್ನು ಬರೆದ ಅಶ್ವಘೋಷ ಕವಿ ಈ ಕಾಲದವನು. ಉದಾರವಾದ, ಮಾನವತಾಪ್ರಧಾನವಾದ ಬೌದ್ಧಧರ್ಮದಿಂದ ಅನೇಕ ವಿದೇಶೀಯರು ಆಕರ್ಷಿತರಾಗಿದ್ದರು. ಭಾರತೀಯ ಸಾಹಿತ್ಯ ಅನ್ಯದೇಶಗಳಲ್ಲೂ ಪ್ರಚಾರವಾಗಲು ಇದೊಂದು ಮುಖ್ಯ ಕಾರಣ. ಪ್ರವಾಸಸಾಹಿತ್ಯ ಬೆಳೆಯಲು ಇದು ಪೀಠಿಕೆಯಾಯಿತು. ಇದೇ ಕಾಲಕ್ಕೆ ಹಿಂದುಧರ್ಮದ ನಾನಾ ಪಂಥಗಳೂ ಪ್ರಭಾವ ಗಳೂ ಬೆಳೆದುಕೊಂಡುಬಂದುವು. ಬಹುಶಃ ಅದು ವಿಶೇಷ ಮತೀಯ ಸ್ವಾತಂತ್ರ್ಯ ಇದ್ದ ಕಾಲ. ಉದಾಹರಣೆಗೆ, ಪ್ರಥಮ ಕುಷಾಣ ದೊರೆ ೧ನೆಯ ಕಡ್‌ಫೀಸಿಸ್ ಬೌದ್ಧ, ಅವನ ಮಗ ೩ನೆಯ ಕಡ್‌ಫೀಸಿಸ್ ಶೈವ; ಕನಿಷ್ಕ ಬೌದ್ಧ, ಅವನ ಉತ್ತರಾಧಿಕಾರಿ ಭಾಗವತಧರ್ಮಾನುಯಾಯಿ.

೩ನೆಯ ಶತಮಾನದ ವೇಳೆಗೆ ಕುಷಾಣ ಸಾಮ್ರಾಜ್ಯ ಕ್ಷೀಣಿಸಿತು. ಪಶ್ಚಿಮ ಮತ್ತು ಮಧ್ಯ ಭಾರತದಲ್ಲಿ ವಿದೇಶೀಯರನ್ನು ಹತ್ತಿಕ್ಕಿ ಭಾರತೀಯ ಪ್ರಭುತ್ವಗಳು ಮತ್ತೆ ಪ್ರಬಲವಾದುವು. ವಾಯುವ್ಯದಲ್ಲಿ ವಿದೇಶೀಯ ಪ್ರಭಾವ ವಿಶೇಷವಾಗಿ, ಅನ್ಯಸಂಸ್ಕೃತಿ ಗಳ ಪ್ರಭಾವ ಬೆಳೆಯಿತು. ಆರ್ಯ ಸಂಸ್ಕೃತಿಯ ಕೇಂದ್ರ ದಕ್ಷಿಣಕ್ಕೆ ಸರಿಯಿತು. ಇತಿ ಹಾಸಪೂರ್ವಕಾಲದ ಆರ್ಯೇತರ ಪಂಗಡದವರಾದ ನಾಗರು ಈಗ ಪ್ರಬಲರಾಗಿ ಆರ್ಯ ಸಂಸ್ಕೃತಿಯಿಂದಲೂ ತಕ್ಕಮಟ್ಟಿಗೆ ಪ್ರಭಾವಿತರಾಗಿ ಬೆಳೆದರು. ಉತ್ತರ ಭಾರತದ ಹಲವು ಭಾಗಗಳನ್ನಾಳುತ್ತಿದ್ದ ಭಾರಶಿವರ ದೇವರು ಶಿವ. ದಕ್ಷಿಣದಲ್ಲಿ ಆಳುತ್ತಿದ್ದ ಸಾತವಾಹನ ದೊರೆ ಸೀಮುಕ, ಕಳಿಂಗವನ್ನಾಳುತ್ತಿದ್ದ ಖಾರವೇಲ, ವಿಂಧ್ಯಪ್ರದೇಶವನ್ನಾಳುತ್ತಿದ್ದ ವಿಂಧ್ಯಶಕ್ತಿ, ಕೃಷ್ಣಾನದಿಯ ದಕ್ಷಿಣದಲ್ಲಿ ಪ್ರವರ್ಧಮಾನರಾಗಿದ್ದ ಚೋಳರು, ಪಾಂಡ್ಯರು, ಚೇರರು—ಇವರ ಚಕ್ರಾಧಿಪತ್ಯಗಳಲ್ಲೆಲ್ಲ ಭಾರತೀಯ ಸಂಸ್ಕೃತಿ ಬೇರುಬಿಟ್ಟಿತು. ಭಾರತೀಯರ ಧೈರ್ಯಸಾಹಸಗಳ ಪ್ರತೀಕಗಳಾಗಿದ್ದ ಈ ಚಕ್ರಾಧಿಪತ್ಯಗಳಲ್ಲಿ ಸಹಜ

ವಾಗಿಯೇ ಸಾಹಿತ್ಯ ಪರಂಪರೆ ಮುಂದುವರಿದುಕೊಂಡು ಬಂದಿತು.

ಮಗಧ ಸಾಮ್ರಾಜ್ಯದ ಉನ್ನತಿಯ ಕಾಲದಿಂದ ಆನೆಯ ಶತಮಾನದ ಆರಂಭದ ವರೆಗಿನ ಅವಧಿಯ ಸಾಹಿತ್ಯದಲ್ಲಿ ಮೇಲೆ ವಿವರಿಸಿದ ರಾಜಕೀಯ ಸಾಮಾಜಿಕ ಸಾಂಸ್ಕೃತಿಕ ಏರುತಗ್ಗುಗಳನ್ನೆಲ್ಲ ಗುರುತಿಸಬಹುದು. ಆಧುನಿಕ ಭಾರತೀಯ ಭಾಷಾಸಾಹಿತ್ಯಗಳ ಆಗಮನವಾಗುವುದಕ್ಕೆ ಮುಂಚಿನ ಈ ಕಾಲದಲ್ಲಿ ಅನಂತರದ ವ್ಯಾಪಕ ಸಾಹಿತ್ಯಕ್ಕೆ ವಿಶಾಲವಾದ ಅಸ್ತಿಭಾರ ನಿರ್ಮಾಣವಾಯಿತು. ಈ ಸಾಹಿತ್ಯ ಬಹುಮುಖವಾದ್ದು. ಧರ್ಮಸೂತ್ರಗಳಲ್ಲಿ ವಿಧಿಸಲಾದ ಸಾಮಾಜಿಕ ಶೀಲ ಸಂಹಿತೆಯನ್ನು ಸಮನ್ವಯಗೊಳಿಸಿ, ವಿಸ್ತರಿಸಿ, ವ್ಯಾಖ್ಯಾನಿಸುವ ಕೆಲಸ ನಡೆದದ್ದು ಈ ಕಾಲದ ಆದಿಭಾಗದಲ್ಲಿ. ವ್ಯತ್ಯಸ್ತಗೊಳ್ಳು ತ್ತಿದ್ದ ಪರಿಸ್ಥಿತಿಗೆ ತಕ್ಕಂತೆ ಇದೂ ಸುಧಾರಣೆ ಹೊಂದುತ್ತಿತ್ತು. ಈ ಕ್ಷೇತ್ರದಲ್ಲಿ ರಚಿತ ವಾದ ಪ್ರಥಮ ಪ್ರಧಾನ ಕೃತಿ 'ಮನುಸ್ಮೃತಿ'. ಇದು ಇಡೀ ಭಾರತದಲ್ಲಿ ಮಾನ್ಯತೆ ಗಳಿಸಿತು. ಯಾಜ್ಞವಲ್ಕ್ಯ ಇದನ್ನು ಪರಿಷ್ಕರಿಸಿದ. ಅನಂತರವೂ ಅನೇಕ ಸ್ಮೃತಿಗಳು ಬಂದುವು.

ಮುಂದೆ ಸಾಹಿತ್ಯಪರಂಪರೆ ಬಹುಮುಖವಾಗಿ ಬೆಳೆಯಿತು. ಆಗಿನ ಧಾರ್ಮಿಕ ಹಾಗೂ ತಾತ್ತ್ವಿಕ ಸಾಹಿತ್ಯ ಸಂಪದ್ಭರಿತವಾದ್ದು, ವೈವಿಧ್ಯಮಯವಾದ್ದು. ಬೌದ್ಧರ ಧರ್ಮ ಗ್ರಂಥಗಳಲ್ಲಿ ಸಾಹಿತ್ಯಗುಣ ಇಲ್ಲದೆ ಇಲ್ಲ. ವಿವಿಧ ವರ್ಗಗಳ ಜನರನ್ನು ಆಕರ್ಷಿಸಿದ ಸಾಹಿತ್ಯ ಪ್ರಕಾರವೆಂದರೆ ಜನಪದ ಕಥೆಗಳು, ಹಾಡುಗಳು. ಇನ್ನೆರಡು ಮುಖ್ಯ ಸಾಹಿತ್ಯ ಪ್ರಕಾರಗಳು—ನಾಟಕ ಮತ್ತು ಕಾವ್ಯ. ಋಗ್ವೇದದ ಸಂವಾದಗೀತಗಳಲ್ಲಿ ಬೀಜರೂಪ ವಾಗಿ ಅಡಗಿದ್ದ ನಾಟಕಕಲೆ, ಇತಿಹಾಸಕಾವ್ಯಗಳನ್ನು ವ್ಯಾಪಕವಾಗಿ ಹಾಡುತ್ತಿದ್ದ ಕಾಲದಲ್ಲಿ ವಿಕಾಸಗೊಂಡು ಬೆಳೆಯಿತು. ಆಗಿನ ಪ್ರತಿಭಾನ್ವಿತ ನಾಟಕಕಾರನೆಂದರೆ ಭಾಸ.

ಕ್ರಿಸ್ತಶಕೆಗೆ ಹಿಂದಿನ ಕಾಲಕ್ಕೆ ಸೇರಿದ್ದೆಂದು ಖಚಿತವಾಗಿ ಹೇಳಬಹುದಾದ ಯಾವ ಸಂಸ್ಕೃತ ಕಾವ್ಯವೂ ಸಿಕ್ಕಿಲ್ಲ. ಈ ವೇಳೆಗೆ ಪ್ರಾಕೃತ ಸಾಹಿತ್ಯ ವಿಪುಲವಾಗಿ ಬೆಳೆದಿತ್ತು. ಆದ್ದರಿಂದ ಪ್ರಾಕೃತದಿಂದ ಸಂಸ್ಕೃತಕಾವ್ಯ ಉದಿಸಿತೆಂದು ಒಂದು ವಾದವಿತ್ತಾದರೂ ಅದನ್ನು ಈಗ ತಳ್ಳಿಹಾಕಲಾಗಿದೆ.[23] ಸಂಸ್ಕೃತ ಕಾವ್ಯವನ್ನು ಋಗ್ವೇದದಲ್ಲೇ ಬೀಜರೂಪ ದಲ್ಲಿ ಕಾಣಬಹುದು. ರಾಮಾಯಣದಲ್ಲಿ ಕಾವ್ಯಲಕ್ಷಣಗಳನ್ನು ಕುರಿತ ವಿವೇಚನೆ ಯಿದೆ. ಪತಂಜಲಿಯ ಕೃತಿಯಲ್ಲಿ ವಾರರುಚ ಕಾವ್ಯವನ್ನು ಕುರಿತ ಮಾತು ಬಂದಿದೆ. ಕಾವ್ಯದ ನೇರ ಸರಳ ಶೈಲಿ ಆಲಂಕಾರಿಕಶೈಲಿಯಾಗಿ ಪರಿವರ್ತನೆ ಹೊಂದುತ್ತಿದ್ದುದು ಪ್ರಾಚೀನ ಸಂಸ್ಕೃತ ಶಾಸನಗಳಿಂದ ವೇದ್ಯವಾಗುತ್ತದೆ.

ಸಂಸ್ಕೃತದಲ್ಲಿ ಗದ್ಯಕಾವ್ಯವೂ ತಕ್ಕಮಟ್ಟಿಗೆ ಬೆಳೆದುಬಂತು. ಪ್ರಾಚೀನ ಗದ್ಯ ರಚನೆಯ ಮಾದರಿಗಳು ಕೃಷ್ಣಯಜುರ್ವೇದದ ತೈತ್ತಿರೀಯ ಸಂಹಿತೆಯಲ್ಲೂ ಅಥರ್ವ ವೇದದಲ್ಲೂ ಕಾಣಸಿಗುತ್ತವೆ. ಬ್ರಾಹ್ಮಣಗಳೆಲ್ಲ ಗದ್ಯಕೃತಿಗಳೇ. ಆರಣ್ಯಕಗಳಲ್ಲೂ ಗದ್ಯವೇ ಹೆಚ್ಚು. ಸೂತ್ರಗಳದು ಬೇರೆ ಬಗೆಯ ಗದ್ಯ. ಅದರ ಸಂಗ್ರಹ ಶಕ್ತಿ ಅಸಾಧಾರಣವಾದ್ದು. ಅನಂತರ ಅಲಂಕಾರಯುಕ್ತವಾದ ಗದ್ಯಶೈಲಿಯೊಂದು ವಿಕಾಸಹೊಂದಿತು.

ಆಗ ರಚಿತವಾದ ಶಾಸ್ತ್ರಕೃತಿಗಳ ಪೈಕಿ ವೈದ್ಯಗ್ರಂಥಗಳು ಪ್ರಮುಖವಾದವು. ವೈದ್ಯ ವಿಜ್ಞಾನದ ಅಧ್ಯಯನ ಭಾರತದ ಗಡಿಯನ್ನೂ ದಾಟಿ ಇತರ ದೇಶಗಳಿಗೂ ವ್ಯಾಪಿಸಿತು. ಆದರೆ ಶಾಸ್ತ್ರ ಸಾಹಿತ್ಯ ಕ್ಷೇತ್ರದ ಅತ್ಯುನ್ನತ ಪ್ರಗತಿ ರಾಜನೀತಿಯಲ್ಲಿ ಸಾಧಿಸಿತು. ಕೌಟಿಲ್ಯನ 'ಅರ್ಥಶಾಸ್ತ್ರ' ಎಲ್ಲ ದೃಷ್ಟಿಗಳಿಂದಲೂ ಮಹತ್ತ್ವದ ಕೃತಿ. ಕೌಟಿಲ್ಯ ಬದುಕಿದ್ದುದು ಯಾವಾಗ ಎಂಬುದನ್ನು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಮೌರ್ಯ ಚಕ್ರವರ್ತಿ ಚಂದ್ರಗುಪ್ತನ (ಕ್ರಿ. ಪೂ. ೩೨೪–ಕ್ರಿ. ಪೂ. ೩೦೦) ಮಂತ್ರಿಯಾಗಿದ್ದ ಕೌಟಿಲ್ಯನೇ ಇದನ್ನು ರಚಿಸಿದನೆಂಬುದು ಒಂದು ವಾದವಾದರೆ, ೩ನೆಯ ಶತಮಾನದಲ್ಲಿ ಇದು ರಚಿತವಾಯಿತೆಂಬುದು ಇನ್ನೊಂದು ವಾದ. ಅಂತೆಯೇ ವಿವಿಧ ಧರ್ಮಶಾಸ್ತ್ರಗಳ, ಸ್ಮೃತಿಗಳ ಹಾಗೂ ಮೂಲ ಸೂತ್ರಗ್ರಂಥಗಳ ಕಾಲವೂ ವಾದಗ್ರಸ್ತವಾದ್ದು.

ಕ್ರಿ. ಪೂ. ೭ನೆಯ ಶತಮಾನದಿಂದ ೮ನೆಯ ಶತಮಾನದ ಆದಿಯ ವರೆಗಿನ ಕಾಲದಲ್ಲಿ ದಕ್ಷಿಣದಲ್ಲೂ ಚಕ್ರಾಧಿಪತ್ಯಗಳು ಹುಟ್ಟಿ ಬೆಳೆದದ್ದನ್ನು ಸ್ಥೂಲವಾಗಿ ಮೇಲೆ ಹೇಳಲಾಗಿದೆ. ಆರ್ಯ ಮತ್ತು ಆರ್ಯೇತರ ಸಂಸ್ಕೃತಿ-ಭಾಷೆ-ಸಾಹಿತ್ಯಗಳು ಪರಸ್ಪರ ಪ್ರಭಾವಗಳಿಗೆ ಒಳಗಾದುವು. ಆರ್ಯಸಂಸ್ಕೃತಿಯ ಪ್ರಭಾವಗಳು ಮೇಲಿನಿಂದ ಕೆಳಮುಖವಾಗಿ ಹರಿಯುತ್ತಿದ್ದಂತೆ, ಪ್ರಾಚೀನ ದ್ರಾವಿಡ ಹಾಗೂ ಇತರ ಆರ್ಯೇತರ ಜೀವನಮಾರ್ಗ ಮತ್ತು ಸಂಸ್ಕೃತಿಗಳು ಆರ್ಯಸಂಸ್ಕೃತಿಯ ಸ್ವರೂಪವನ್ನೂ ಅದರ ಚೌಕಟ್ಟನ್ನೂ ಅಲುಗಿಸಿ ಬದಲಿಸುತ್ತಲೇ ಇದ್ದುವು. ಪರಸ್ಪರ ಘರ್ಷಣೆ ಮತ್ತು ಸಾಮರಸ್ಯಪ್ರಕ್ರಿಯೆಗಳು ಸತತ ವಾಗಿ ಸಾಗಿದುವು. ವೇದದ ನಿಗಮಸಂಪ್ರದಾಯವೂ ದ್ರಾವಿಡ ಆಗಮಸಂಪ್ರದಾಯವೂ, ವೇದದ ಹೋಮವಿಧಾನವೂ ದ್ರಾವಿಡ ಪೂಜಾವಿಧಾನವೂ ಸಮಾನವಾಗಿ ಪ್ರಾಮುಖ್ಯ ಗಳಿಸಿದಂತೆ, ಆರ್ಯ ವಿಷ್ಣುವೂ ಆರ್ಯೇತರ ಶಿವನೂ ಎಲ್ಲರಿಂದಲೂ ಪೂಜಾರ್ಹರಾದ ದೇವರುಗಳಾಗಿ ಪರಿಣಮಿಸಿದರು. ಆರ್ಯ ಮತ್ತು ದ್ರಾವಿಡ ಭಾಷೆಗಳನ್ನಾಡುವವರು ಪರಸ್ಪರ ಸಂಪರ್ಕ ಪಡೆದದ್ದು ವೇದಗಳ ಕಾಲದಿಂದಲೇ. ಆದರೆ ಆರ್ಯರ ಬರೆವಣಿಗೆ ಗಳಲ್ಲಿ ದಕ್ಷಿಣ ಭಾರತದ ಉಲ್ಲೇಖ ಬಂದಿರುವುದು ಅನಂತರದಲ್ಲೇ. ಪಾಂಡ್ಯ ಮತ್ತು ಚೋಳರನ್ನು ವರರುಚಿ ಉಲ್ಲೇಖಿಸಿದ್ದಾನೆ. ಕ್ರಿ.ಪೂ. ೨ನೆಯ ಶತಮಾನದ ಪತಂಜಲಿ, ದಕ್ಷಿಣದ ನಗರವಾಗಿದ್ದ ಕಂಚಿಯನ್ನು ಸ್ಮರಿಸಿದ್ದಾನೆ. ಅಶೋಕನ ಶಾಸನಗಳಲ್ಲೂ ದಕ್ಷಿಣದ ಸಾಮ್ರಾಜ್ಯಗಳ ಉಲ್ಲೇಖವಿದೆ. ದ್ರಾವಿಡ ಭಾಷಾಸಾಹಿತ್ಯಗಳ ಉಗಮ ಯಾವಾಗ ಆಯಿತೆಂಬುದನ್ನು ಹೇಳಲು ಸಾಧ್ಯವಿಲ್ಲ. ಆದರೆ ದ್ರಾವಿಡ ಭಾಷೆಗಳಲ್ಲಿ ಅತ್ಯಂತ ಪ್ರಾಚೀನ ವಾದ ತಮಿಳಿನ ಮೊದಮೊದಲಿನ ಕೃತಿಗಳಲ್ಲಿ ಆರ್ಯ ಮತ್ತು ದ್ರಾವಿಡ ಸಂಸ್ಕೃತಿಗಳ ಸಮನ್ವಯವನ್ನು ಕಾಣಬಹುದು. ಸು. ೩೦೦ರ ವರೆಗಿನದೆನ್ನಲಾದ ಸಂಘಂ ಸಾಹಿತ್ಯ ತಮಿಳಿನಲ್ಲಿ ಸದ್ಯಕ್ಕೆ ಅತ್ಯಂತ ಪ್ರಾಚೀನವಾದದ್ದು. ಉಪನಿಷತ್ತು ಪುರಾಣಗಳ ಕಥೆಗಳು ಆಗಿನ ತಮಿಳು ಕವಿಗಳಿಗೆ ಪರಿಚಯವಿದ್ದುವೆಂಬುದು ಅವರ ಕೃತಿಗಳಿಂದ ಗೊತ್ತಾಗು ತ್ತದೆ. ಪ್ರಹ್ಲಾದನ ಕಥೆ, ಅಹಲ್ಯಾಗೌತಮರ ಪ್ರಸಂಗ—ಇವು ಕೆಲವು ನಿದರ್ಶನ ಗಳು.

ಅಭಿಜಾತ ಯುಗ: ೪ನೆಯ ಶತಮಾನದ ಆದಿಯಲ್ಲಿ ದಕ್ಷಿಣಭಾರತದಲ್ಲಿ ಪಲ್ಲವ ಸಾಮ್ರಾಜ್ಯವೂ ಉತ್ತರದಲ್ಲಿ ಗುಪ್ತಸಾಮ್ರಾಜ್ಯವೂ ಪ್ರಬಲವಾದುವು. ೩೦೦ ವರ್ಷಗಳ ರಾಜಕೀಯ ಅಸ್ಥಿರತೆಯ ಅನಂತರ ಉತ್ತರಭಾರತವೆಲ್ಲ ಮತ್ತೆ ಒಬ್ಬ ಚಕ್ರವರ್ತಿಯ ಅಧೀನಕ್ಕೆ ಬಂದಾಗ ಸಾಹಿತ್ಯ ಸಂಸ್ಕೃತಿಗಳ ಬೆಳೆವಣಿಗೆಗೆ ಮತ್ತೆ ಸುವರ್ಣಾವಕಾಶ ಒದಗಿತು. ಸಂಸ್ಕೃತ ಮತ್ತೆ ಅಖಿಲಭಾರತದ ಮುಖ್ಯ ಸಾಹಿತ್ಯಮಾಧ್ಯಮವಾಗಿ ಪರಿಣಮಿಸಿತು. ಆಗ ಸಂಸ್ಕೃತದಲ್ಲಿ ರಚಿತವಾದ ಅನೇಕ ಶಾಸನಗಳು ಇದಕ್ಕೆ ನಿದರ್ಶನ. ೨ನೆಯ ಚಂದ್ರಗುಪ್ತ ವಿಕ್ರಮಾದಿತ್ಯನ ಸಮಕಾಲೀನನಾಗಿದ್ದ ಕಾಳಿದಾಸನ ಕೃತಿಗಳು ತಮ್ಮ ಅದ್ಭುತ ಸೌಂದರ್ಯದಿಂದ ಇಡೀ ಭಾರತದ ಸಾಹಿತ್ಯ ಮಾದರಿಗಳೆನಿಸಿಕೊಂಡುವು. ಮಹಾಭಾರತ ಸಮಗ್ರವಾದ ರೂಪ ತಳೆದದ್ದು ಗುಪ್ತಸಾಮ್ರಾಜ್ಯ ಕಾಲದಲ್ಲೇ. ವರಾಹ ಮಿಹಿರನ ಜ್ಯೋತಿಃಶಾಸ್ತ್ರದ ವಿಕಾಸ, ವಾಯು ಮತ್ತು ಮತ್ಸ್ಯಪುರಾಣಗಳ ರಚನೆ —ಇವು ಗುಪ್ತಸಾಮ್ರಾಜ್ಯ ಕಾಲದ ಸಾಧನೆಗಳು. ಅಖಿಲಭಾರತದಲ್ಲಿ ಅನಂತರದ ಶತಮಾನಗಳ ಭಕ್ತಿ ಚಳವಳಿಗಳಿಗೆ ಪ್ರೇರಕಶಕ್ತಿಗಳಾದ ಶೈವ ಮತ್ತು ವೈಷ್ಣವ ಧರ್ಮಗಳು ಪ್ರಬುದ್ಧ ಸ್ಥಿತಿಗೆ ಬಂದುವು. ೬–೭ನೆಯ ಶತಮಾನಗಳಲ್ಲಿ ಮತ್ತು ಅನಂತರ ತಮಿಳುನಾಡಿನಲ್ಲಿ ಭಕ್ತಿಗೀತಗಳನ್ನು ಕಟ್ಟಿ ಹಾಡಿದ ಶೈವ ನಾಯನಾರರೂ ವೈಷ್ಣವ ಆಳ್ವಾರುಗಳೂ ಹೊಸದೊಂದು ಸಾಹಿತ್ಯಸಂಪ್ರದಾಯದ ಪ್ರವರ್ತಕರಾದರೆನ್ನಬಹುದು. ೪ನೆಯ ಶತಮಾನದ ನಡುಗಾಲದಲ್ಲಿ ವಾಯವ್ಯದಿಂದ ಏರಿಬಂದ ಹೂಣರಿಂದಾಗಿ ಉತ್ತರಭಾರತದ ರಾಜಕೀಯದಲ್ಲಿ ತುಮುಲ ಉಂಟಾದರೂ ೫೫೦–೭೫೦ರಲ್ಲಿ ಭಾರತದ ಶಕ್ತಿಸಾಮರ್ಥ್ಯಗಳು ದಕ್ಷಿಣಭಾರತದಲ್ಲಿ ಪ್ರಕಟವಾದುವು. ಚಾಳುಕ್ಯ, ಪಲ್ಲವ, ಕದಂಬ, ರಾಷ್ಟ್ರಕೂಟ ಮುಂತಾದ ಸಾಮ್ರಾಜ್ಯಗಳಲ್ಲಿ ಸಾಹಿತ್ಯದ ಬೆಳೆವಣಿಗೆಗೆ ಅಗತ್ಯವಾದ ಸ್ಥಿರತೆ, ಪ್ರಗತಿ, ನೆಮ್ಮದಿಗಳು ದೊರಕಿದುವು. ತಮಿಳು ಸಾಹಿತ್ಯದಂತೆ ಕನ್ನಡ ಸಾಹಿತ್ಯವೂ ವಿಕಾಸಹೊಂದಿದ ಕಾಲವಿದು.

ಸಂಸ್ಕೃತದಲ್ಲೂ ವಿಪುಲವಾದ ಕೃತಿರಚನಾಕಾರ್ಯ ದಕ್ಷಿಣದಲ್ಲಿ ಮುಂದುವರಿಯಿತು. ಇದಕ್ಕೂ ಹಿಂದಿನಿಂದಲೂ ಇಲ್ಲಿ ಸಂಸ್ಕೃತ ಸಾಹಿತ್ಯಪರಂಪರೆ ಬೆಳೆದುಕೊಂಡು ಬಂದಿತ್ತೆಂಬುದು ನಿಸ್ಸಂದೇಹ. ಶ್ರೌತ, ಗೃಹ್ಯ ಮತ್ತು ಧರ್ಮಸೂತ್ರಗಳನ್ನು ರಚಿಸಿದ ಆಪಸ್ತಂಬ (ಕ್ರಿ.ಪೂ. ಸು. ೩೦೦) ಗೋದಾವರೀ ತೀರದಲ್ಲಿದ್ದವನು. ಆಪಸ್ತಂಬನಿಂದ ಪ್ರಭಾವಿತರಾದ ಸತ್ಯಾಷಾಢ ಹಿರಣ್ಯಕೇಶಿಗಳ ಧರ್ಮಸೂತ್ರ (ಕ್ರಿ.ಪೂ. ೧೦೦–ಕ್ರಿ.ಶ. ೧೦೦) 'ಸಹ್ಯ' ಪ್ರದೇಶದ್ದೆಂದು ಹೇಳಲಾಗಿದೆ.

ಮಹಾರಾಷ್ಟ್ರೀ ಪ್ರಾಕೃತದ ೭೦೦ ಗಾಥೆಗಳ ಸಂಕಲನವಾದ 'ಸಪ್ತಶತೀ'ಯನ್ನು ಸಂಪಾದಿಸಿದವನು ಸಾತವಾಹನರ ೧೭ನೆಯ ದೊರೆ ಹಾಲ (೨೦–೨೪)ನೆನ್ನಲಾಗಿದೆ. ಸಾತವಾಹನರು ಕ್ರಿ.ಪೂ. ೨೩೦ರಿಂದ ಸುಮಾರು ನಾಲ್ಕೂವರೆ ಶತಮಾನಗಳ ಕಾಲ ದಖನ್ನಿನಲ್ಲಿ ಆಳಿದವರು. ಅವರು ಉಚ್ಛ್ರಾಯದಶೆಯಲ್ಲಿದ್ದಾಗ ಇಡೀ ದಖನ್ ಅಲ್ಲದೆ ಉತ್ತರಭಾರತದ ಕೆಲವು ಭಾಗಗಳ ಮೇಲೂ ತಮ್ಮ ಅಧಿಕಾರ ಸ್ಥಾಪಿಸಿದ್ದರು. ಮೇಲೆ

ಹೇಳಿದ, ಹಾಲ ಸಂಪಾದಿಸಿದ್ದೆನ್ನಲಾದ ಕೃತಿ ಭಾಷೆಯ ದೃಷ್ಟಿಯಿಂದ ೨೦೦–೪೫೦ರ ಅವಧಿಯದೆನ್ನಲಾಗಿದೆ. ಬಹುಶಃ ಇದು ಹಳೆಯ ಕೃತಿಯ ಪರಿಷ್ಕೃತರೂಪವಾಗಿದ್ದಿರ ಬಹುದು. ಸಾತವಾಹನರ ಕಾಲದ ಇನ್ನೊಂದು ಪ್ರಮುಖ ಕೃತಿ ಗುಣಾಢ್ಯನ ಬೃಹತ್ಕಥೆ. ಪೈಶಾಚೀ ಭಾಷೆಯದೆನ್ನಲಾದ ಈ ಕೃತಿ ಅನಂತರದ ಸಾಹಿತ್ಯದ ಮೇಲೆ ವಿಶೇಷ ಪ್ರಭಾವ ಬೀರಿತು. ರಾಮಾಯಣದ ಕೃತಿಯನ್ನಾಧರಿಸಿ 'ಜಾನಕೀಹರಣ' ಎಂಬ ಸಂಸ್ಕೃತಕಾವ್ಯ ರಚಿಸಿದ ಕುಮಾರದಾಸ ೬ನೆಯ ಶತಮಾನದವನೆಂದು ಭಾವಿಸಲಾಗಿದೆ. 'ಕಿರಾತಾರ್ಜುನೀಯ'ದ ರಚಕ ಭಾರವಿ ಪೂರ್ವಚಾಲುಕ್ಯ ಚಕ್ರವರ್ತಿ ವಿಷ್ಣುವರ್ಧನನ ಕಾಲದವನೆಂದು ಒಂದು ನಂಬಿಕೆ. ಈ ಕಾವ್ಯದ ೧೫ನೆಯ ಸರ್ಗಕ್ಕೆ ಗಂಗ ದೊರೆ ದುರ್ವಿನೀತ ವ್ಯಾಖ್ಯಾನ ಬರೆದನೆಂಬುದೂ ಒಂದು ಐತಿಹ್ಯ. ಎರಡನೆಯ ಪುಲಕೇಶಿಯ ಸಾಧನೆಗಳನ್ನು ವರ್ಣಿಸುವ ಐಹೊಳೆಯ ಶಾಸನವೊಂದನ್ನು ರಚಿಸಿದ ರವಿಕೀರ್ತಿ ತಾನು ಭಾರವಿ ಮತ್ತು ಕಾಳಿದಾಸರಿಗೆ ಸಮನೆಂದು ಹೇಳಿಕೊಂಡಿದ್ದಾನೆ. ಆ ಶಾಸನದ ಸಾಹಿತ್ಯ ಗುಣ ಕಡಿಮೆಯ ದರ್ಜೆಯದಲ್ಲ. ಸಂಸ್ಕೃತ ಸಾಹಿತ್ಯ ದಕ್ಷಿಣದಲ್ಲೂ ಬೆಳೆದುಬಂತೆಂಬು ದನ್ನು ದಕ್ಷಿಣದ ಇಂಥ ಹಲವಾರು ಶಾಸನಗಳಲ್ಲಿ ಕಾಣಬಹುದು

ಕಂಚಿಯ ಪಲ್ಲವ ದೊರೆ ೧ನೆಯ ಮಹೇಂದ್ರವರ್ಮ ಎರಡು ಪ್ರಹಸನಗಳನ್ನು ರಚಿಸಿದ್ದಾನೆ. ಕಾಪಾಲಿಕರನ್ನೂ ಬೌದ್ಧಭಿಕ್ಷುಗಳನ್ನೂ ವಿಡಂಬನೆಗೆ ಗುರಿಮಾಡಿರುವ ಈ ಕೃತಿಗಳು ಆ ಕಾಲದ ಧಾರ್ಮಿಕ ವಾತಾವರಣದ ಪರಿಚಯ ನೀಡುತ್ತವೆ. 'ಕಾವ್ಯಾದರ್ಶ'ವನ್ನು ಬರೆದ ದಂಡಿ ಪಲ್ಲವ ಚಕ್ರವರ್ತಿ ೧ನೆಯ ನರಸಿಂಹವರ್ಮನ (೬೩೦–೬೬೮) ಆಸ್ಥಾನದಲ್ಲಿದ್ದನೆಂದು ನಂಬಿಕೆ. ಭವಭೂತಿ ತನ್ನ ಕೃತಿಗಳನ್ನು ಉತ್ತರಭಾರತದಲ್ಲಿ ರಚಿಸಿದನಾದರೂ ಅವನು ಬೀರಾರಿನಲ್ಲಿ ಹುಟ್ಟಿದವನೆಂದೂ ಕುಮಾರಿಲನ ಬಳಿ ವಿದ್ಯೆ ಗಳಿಸಿದನೆಂದೂ ತಿಳಿದುಬರುತ್ತದೆ. ವೈಷ್ಣವ ಆಳ್ವಾರುಗಳಲ್ಲೊಬ್ಬನಾದ ಕುಲಶೇಖರ ದೊರೆ ಕೇರಳದವನು. ಅವನು ಬಹುಶಃ ೯ನೆಯ ಶತಮಾನದವನು. ಕುಲಶೇಖರ ಬರೆದ 'ಮುಕುಂದಮಾಲಾ' ಸ್ತೋತ್ರ ಸಂಸ್ಕೃತದ ಒಂದು ಸುಂದರ ಕೃತಿ.

೮ನೆಯ ಶತಮಾನ ಭಾರತದ ರಾಜಕೀಯ ಇತಿಹಾಸದಲ್ಲಿ ಒಂದು ಸಂಧಿಕಾಲ. ಅರಬ್ಬರು ಭಾರತದಲ್ಲಿ ಅಧಿಕಾರ ಸ್ಥಾಪಿಸಲು ಪ್ರಯತ್ನಿಸಿ ಸ್ವಲ್ಪಮಟ್ಟಿಗೆ ಜಯಶೀಲರಾದರು. ಅನಂತರ ಅವರನ್ನು ಹಿಮ್ಮೆಟ್ಟಿಸಲಾಯಿತು. ಇದೇ ಕಾಲಕ್ಕೆ ದಕ್ಷಿಣದಲ್ಲಿ ರಾಷ್ಟ್ರಕೂಟರೂ ಪೂರ್ವದಲ್ಲಿ ಪಾಲರೂ ಪಶ್ಚಿಮ ಉತ್ತರಗಳಲ್ಲಿ ಪ್ರತೀಹಾರರೂ ಪ್ರಬಲರಾಗಿ ಭಾರತದ ರಾಜಕೀಯಕ್ಕೆ ಸ್ಥಿರತೆ ತಂದರು. ಸಂಸ್ಕೃತ ಕಾವ್ಯ ನಾಟಕಗಳೇ ಮುಂತಾದ ಸಾಹಿತ್ಯ ಪ್ರಕಾರಗಳು ಯಥೇಚ್ಛವಾಗಿ ಮುಂದುವರಿದುವು. ಆದರೆ ಇವು ಕಾಳಿದಾಸ-ಭವಭೂತಿಯರ ಕಾಲದ ಕೃತಿಗಳನ್ನು ಸರಿಗಟ್ಟುವಂಥವಲ್ಲ. ಪ್ರಾಕೃತ ಮತ್ತು ತಮಿಳು ಸಾಹಿತ್ಯಗಳೂ ಬೆಳೆದುವು. ಕನ್ನಡದಲ್ಲೂ ಆ ವೇಳೆಗಾಗಲೇ ಸಾಹಿತ್ಯ ಬೆಳೆದಿತ್ತೆಂಬುದು ನಿರ್ವಿವಾದ. ೯ನೆಯ ಶತಮಾನದ ವೇಳೆಗೆ ಉತ್ತರ ಪೂರ್ವ ಪಶ್ಚಿಮ ಭಾರತಗಳಲ್ಲಿ ಪ್ರಾಕೃತ ಭಾಷೆಗಳು ವಿಶೇಷವಾಗಿ ವಿಕೃತಿಹೊಂದಿ ಅಪಭ್ರಂಶಗಳಾಗಿ

ಪರಿಣಮಿಸಿ, ಆಧುನಿಕ ಭಾರತೀಯ ಭಾಷೆಗಳ ವಿಕಾಸಕ್ಕೆ ಅನುವುಮಾಡಿಕೊಡುವ ಸ್ಥಿತಿಗೆ ಬಂದಿದ್ದಾಗ ದಕ್ಷಿಣದಲ್ಲಿ ತಮಿಳು ಕನ್ನಡ ಭಾಷೆಗಳಲ್ಲಿ ಆಗಲೇ ವಿಪುಲವೂ ವೈವಿಧ್ಯಮಯವೂ ಆದ ಸಾಹಿತ್ಯ ಸೃಷ್ಟಿಯಾಗುತ್ತಿತ್ತು. ಪ್ರಾಕೃತ ಸಂಸ್ಕೃತ ಸಾಹಿತ್ಯಗಳಂತೆ ತಮಿಳು ಕನ್ನಡ ಸಾಹಿತ್ಯಗಳೂ ಭಾರತೀಯ ಸಾಹಿತ್ಯದ ಎರಡು ದೊಡ್ಡ ಕವಲುಗಳಾಗಿ ಬೆಳೆಯುತ್ತಿದ್ದುವು.

## ಜಾಗತಿಕ ಸಾಹಿತ್ಯದ ರೂಪರೇಷೆಗಳು

ಆರಂಭಕಾಲದಿಂದ ಸು. ೯ನೆಯ ಶತಮಾನದ ನಡುಗಾಲದ ವರೆಗೆ ಕನ್ನಡ ಸಾಹಿತ್ಯದ ಸ್ಥಿತಿಗತಿಗಳ ಸ್ವರೂಪ ಏನೆಂಬುದನ್ನು ತಿಳಿಯುವ ಮೊದಲಲ್ಲಿ, ಆ ಅವಧಿಯಲ್ಲಿ ಜಗತ್ತಿನ ನಾನಾ ರಾಷ್ಟ್ರಗಳಲ್ಲಿ, ಅಲ್ಲಿಯ ಭಾಷೆಗಳಲ್ಲಿ ಹುಟ್ಟಿ ಬೆಳೆದ ಸಾಹಿತ್ಯಗಳ ಒಂದು ಸಾಮಾನ್ಯ ಪರಿಚಯವನ್ನು ಮಾಡಿಕೊಳ್ಳಲು ಈ ಭಾಗದಲ್ಲಿ ಪ್ರಯತ್ನಿಸ ಬಹುದು. ಆಯಾ ದೇಶದ ಭಾಷೆ, ಅದರ ಬೆಳವಣಿಗೆ, ಆ ಭಾಷೆಯಲ್ಲಿ ಬರೆದಿರುವ ಕವಿಗಳ ಶಾಸ್ತ್ರಕಾರರ ವಿಚಾರ, ಮತ್ತು ಅವರ ಕೃತಿಗಳ ವಿಮರ್ಶೆ ಪ್ರಭಾವ ಈ ಮೊದಲಾದವು ಇಲ್ಲಿಯ ಉದ್ದೇಶಕ್ಕೆ ಹೊರತು. ಪ್ರಸ್ತುತ, ಜಗತ್ತಿನ ಗಣ್ಯಭಾಷೆಗಳಲ್ಲಿ ಹುಟ್ಟಿರುವ ಸಾಹಿತ್ಯಗಳ ಮುಖ್ಯ ಪ್ರವೃತ್ತಿಗಳನ್ನೂ ಕವಿಗಳನ್ನೂ ಒಂದು ಸರಳ ಇತಿವೃತ್ತಾತ್ಮಕ ವಿಧಾನದಲ್ಲಿ ಸಾಮಾನ್ಯವಾಗಿ ಪರಿಚಯ ಮಾಡಿಕೊಂಡರೆ ಸಾಕಾಗುತ್ತದೆ. ಇದರಿಂದ ಕನ್ನಡನಾಡಿನಲ್ಲಿ ಬೇರೆ ಬೇರೆ ಅವಧಿಗಳಲ್ಲಿ ಕನ್ನಡ ಸಾಹಿತ್ಯ ಬೆಳೆದು ಬಂದ ಪರಿಯನ್ನು ವಿವರವಾಗಿ ನೋಡುವಾಗ, ಆಯಾ ಅವಧಿಯಲ್ಲಿ ಪ್ರಪಂಚದ ಇತರ ಭಾಗಗಳಲ್ಲಿ ನಡೆದಿರುವ ಸಾಹಿತ್ಯ ನಿರ್ಮಾಣದ ಒಂದು ಹಕ್ಕಿನೋಟ ದೊರೆಯುತ್ತದೆ; ವಿವಿಧಮುಖವಾದ ವಿವರವಾದ ತೌಲನಿಕ ಪರಿಶೀಲನೆಗೆ ಪ್ರಚೋದನೆಯೂ ದೊರೆಯುತ್ತದೆ. ಹಲವು ಭಾಷೆಗಳಲ್ಲಿ ಹೊಮ್ಮಿರುವ ಸಾಹಿತ್ಯ ಮೇಲೆ ನೋಟಕ್ಕೆ ಬೇರೆ ಬೇರೆಯಾದವು, ದೂರ ದೂರವಾದವು ಎಂದು ತೋರಿದರೂ ಸಾಹಿತ್ಯ ನಿರ್ಮಾಣದ ಮೂಲ ಪ್ರೇರಣೆ, ವಸ್ತು, ರೀತಿ, ಪ್ರಯೋಜನ ಇವುಗಳಲ್ಲಿ ಹೇರಳವಾದ ಸಾದೃಶ್ಯಗಳು ಕಂಡು ಬರುವುದು ಸಹಜ. ಈ ಸಾದೃಶ್ಯಗಳ ಅರಿವು ಜನಜೀವನದ ವಿಭಿನ್ನ ಸಂಸ್ಕೃತಿಗಳ ಪರಸ್ಪರ ಗುಣಾವಗುಣಗಳನ್ನೂ ಸಾಮರ್ಥ್ಯದೌರ್ಬಲ್ಯಗಳನ್ನೂ ಕಂಡುಕೊಳ್ಳಲು, ಕೆಲಮಟ್ಟಿಗೆ ಸಹಾಯಮಾಡುತ್ತದೆ. ಅಂಥ ವಿಚಾರಕ್ಕೆ ಹಿನ್ನೆಲೆಯಾಗಿ ಜಾಗತಿಕ ಸಾಹಿತ್ಯದ ಸ್ಥಿತಿಗತಿಗಳ ಒಂದು ಅಲ್ಪ ಪರಿಚಯಕ್ಕೆ ಮುಂದೆ ತೊಡಗಬಹುದು. ಈ ಭಾಗದಲ್ಲಿ ಪ್ರಾಚೀನ ಈಜಿಪ್ಟ್, ಸುಮೇರಿಯನ್, ಅಸಿರೊ–ಬ್ಯಾಬಿಲೋನಿಯನ್, ಚೀನಿ, ಹೀಬ್ರು, ಗ್ರೀಕ್, ಲ್ಯಾಟಿನ್, ಆಂಗ್ಲೊ–ಸ್ಯಾಕ್ಸನ್, ಜರ್ಮನ್, ಜಪಾನಿ, ಐಸ್ಲೆಂಡ್, ಫಿನ್ಲೆಂಡ್, ಅರಬ್ಬಿ ಮತ್ತು ಪಾರಸಿ ಸಾಹಿತ್ಯಗಳನ್ನು ಕುರಿತಿದೆ.

## ಪ್ರಾಚೀನ ಈಜಿಪ್ಟಿನ ಸಾಹಿತ್ಯ

ಜಗತ್ತಿನ ಅತಿಪ್ರಾಚೀನವೆನ್ನಬಹುದಾದ ನಾನಾ ಸಾಹಿತ್ಯಗಳ ರಾಶಿಯಲ್ಲಿ ಈಜಿಪ್ಟಿನ ಸಾಹಿತ್ಯವೂ ಸೇರಿದೆ. ಅನಾದಿ ಕಾಲದಿಂದ ಕಲಾಭಿಜ್ಞತೆಗೆ ಹೆಸರುವಾಸಿಯಾಗಿದ್ದ ಈಜಿಪ್ಟಿನಲ್ಲಿ ವಿಪುಲ ಜನಪದ ಸಾಹಿತ್ಯ ಸೃಷ್ಟಿಯಾಗಿದ್ದಿರಬೇಕು. ಪ್ರಾಚೀನ ಈಜಿಪ್ಟಿನವರು ಮರದ ತೊಗಟೆಗಳು, ನುಡಕೆಚೂರುಗಳು ಮೊದಲಾದುವುಗಳ ಮೇಲೆ ಬರೆಯುತ್ತಿದ್ದುದರಿಂದ ಅವರ ಸಾಹಿತ್ಯದ ಬಹುಭಾಗ ನಷ್ಟವಾಗಿ ಹೋಗಿರಬೇಕು. ಈಜಿಪ್ಟಿನ ಸಮಾಧಿಶಿಲೆಗಳ ಮೇಲೆ ಕೆತ್ತಿದ ಬರೆಹಗಳು ಮಾತ್ರ ಈಗಲೂ ಬಹಳಷ್ಟು ಉಳಿದುಕೊಂಡಿವೆ. ಜತೆಗೆ, ಜಾಡಿಗಳಲ್ಲಿಟ್ಟ ಮರದ ತೊಗಟೆಗಳು, ಮಡಕೆ ಚೂರುಗಳು ಮತ್ತು ಮಣ್ಣಿನ ಇಟ್ಟಿಗೆಗಳಲ್ಲಿ ಬರೆದ ಸಾವಿರಾರು ಲೇಖನಗಳು, ಗ್ರಂಥಗಳು ನಮ್ಮ ಪಾಲಿಗೆ ಅಮೂಲ್ಯ ಸಂಪತ್ತಾಗಿ ಉಳಿದುಕೊಂಡಿವೆ. ಈಜಿಪ್ಟಿನ ಸಾಹಿತ್ಯದಲ್ಲಿ ನಷ್ಟವಾಗದೆ ಉಳಿದ ಈ ಭಾಗಗಳು ಬೇರೆ ಬೇರೆ ಕಾಲದಲ್ಲಿ ರಚಿತವಾದವು, ಬೇರೆ ಬೇರೆ ವಸ್ತುವನ್ನು ಕುರಿತವು. ಕ್ರಿ.ಪೂ. ಸು. ೩೦೦೦ದಿಂದ ಹಿಡಿದು ರೋಮನ್ ಯುಗದ ವರೆಗಿನ ಅವಧಿಯಲ್ಲಿ ರಚಿತವಾದ ಈಜಿಪ್ಟಿನ ಸಾಹಿತ್ಯದಲ್ಲಿ ಮುಖ್ಯವಾಗಿ ಸಣ್ಣ ಕಥೆಗಳು, ಐತಿಹಾಸಿಕ ರೊಮಾನ್ಸುಗಳು, ಧಾರ್ಮಿಕ ಲೇಖನಗಳು, ಕಾವ್ಯ, ನೀತಿ ಬರೆಹಗಳು, ವೈಚಾರಿಕಬರೆಹಗಳು ಸೇರಿವೆ. ಇವುಗಳಲ್ಲಿ ಯಾವುವು ಪ್ರಾಚೀನ ಈಜಿಪ್ಟಿನವರ ದೃಷ್ಟಿಯಲ್ಲಿ ಅತ್ಯಮೂಲ್ಯ ಎನಿಸಿಕೊಂಡಿದ್ದವೋ ಅವೆಲ್ಲವೂ ಹಲವು ಪ್ರತಿಗಳಾಗಿ ಹರಡಿದ್ದುವಾದ್ದರಿಂದ ಅವುಗಳಲ್ಲಿ ಬಹುತೇಕ ಭಾಗಗಳು ಇಂದು ಉಳಿದುಕೊಂಡಿವೆ.

ಪ್ರಾಚೀನ ಈಜಿಪ್ಟಿನ ಸಾಹಿತ್ಯದ ಮೌಲ್ಯಮಾಪನ ಮಾಡುವಾಗ ನಾವು ಸಾಮಾನ್ಯವಾಗಿ ಈಗ ಸಾಹಿತ್ಯವನ್ನು ಯಾವ ಕಲೆಯ ಅಳತೆಗೋಲಿನಿಂದ ನಿರ್ಧರಿಸುತ್ತೇವೆಯೋ ಆ ಅಳತೆಗೋಲಿನಿಂದ ನಿರ್ಧರಿಸಲಾಗದು. ಬಹುತೇಕ ಪ್ರಾಚೀನಕೃತಿಗಳು ಈಗ ಅಪ್ಪಟ ಸಾಹಿತ್ಯ ಎನಿಸಿಕೊಳ್ಳದಿರಬಹುದು. ಅವುಗಳಲ್ಲಿ ಹಲವು ನೀತಿಪ್ರಧಾನವಾಗಿದ್ದು, ಮಾಟಮಂತ್ರಗಳಿಗೆ ಸಂಬಂಧಿಸಿದ್ದು, ದಿನನಿತ್ಯದ ಲೌಕಿಕಜೀವನದ ಯಾವುದೋ ಪ್ರಯೋಜನಕ್ಕಾಗಿ ಅವುಗಳನ್ನು ರಚಿಸಿರಬೇಕು. ಈಜಿಪ್ಟಿನ ಪ್ರಾಚೀನ ಲಿಪಿ ಕಾಲಕಾಲಕ್ಕೆ ಬದಲಾವಣೆ ಹೊಂದಿರುವುದರಿಂದ, ಶಬ್ದಾರ್ಥಸಂಬಂಧ ತಪ್ಪಿ ಹೋಗಿರುವುದರಿಂದ, ಆಧುನಿಕರಿಗೆ ಅವುಗಳನ್ನು ಸಂಪೂರ್ಣವಾಗಿ ಗ್ರಹಿಸುವುದು ಕಷ್ಟವಾಗಿದೆ.

ಪ್ರಾಚೀನ ಈಜಿಪ್ಟಿನ ಭಾಷೆಯನ್ನು ನೋಡುವಾಗ ಅವರು ದೀರ್ಘಕಾಲದಿಂದ ಅದನ್ನು ಚೆನ್ನಾಗಿ ದುಡಿಸಿಕೊಂಡಿರಬೇಕೆನಿಸುತ್ತದೆ. ಆಲಂಕಾರಿಕವಾದ ಬರೆಹಗಳಲ್ಲಿ ದೀರ್ಘ ರೂಪಕಗಳ, ಪ್ರಾಸಲಯಗಳ ಬಳಕೆಯನ್ನು ಗಮನಿಸಬಹುದು. ಇವುಗಳಲ್ಲಿನ ಹಲವು ಅಂಶಗಳನ್ನು ಕ್ರಿ.ಪೂ. ಸು. ೧೫೦೦ರಿಂದೀಚೆಯ ಜನರು ಅರ್ಥಮಾಡಿಕೊಂಡಿದ್ದರೇ ಎಂದು ಹೇಳುವುದು ಕಷ್ಟ. ದಿನಂಪ್ರತಿಯ ಆಡುಮಾತಿನ ಲಯಗತಿಗಳು

ಸೇರಿ ದೊರೆ ಅಖೆನಾಟನ್ನಿನ ಕಾಲಕ್ಕೆ, ಎಂದರೆ ಕ್ರಿ.ಪೂ. ಸು. ೧೩೭೫–೧೩೫೮ ರಿಂದೀಚೆಗೆ ಸಾಹಿತ್ಯದ ಭಾಷೆ ನಿಶ್ಚಿತಸ್ವರೂಪ ಪಡೆದಿರಬಹುದು.

ಈಜಿಪ್ಟ್ ಸಾಹಿತ್ಯ ಜಗತ್ತಿಗೆ ಕೊಟ್ಟ ಶ್ರೇಷ್ಠ ಕೊಡುಗೆ ಎಂದರೆ ಅಲ್ಲಿಯ ಸಣ್ಣ ಕಥೆಗಳು. ಇವು ವಾಸ್ತವಿಕ ಅಥವಾ ಅದ್ಭುತ ವಸ್ತುವಿನಿಂದ ಕೂಡಿದ್ದು ಮುಖ್ಯವಾಗಿ ವೀರ ಸಾಹಸಗಳ ಕಥೆಯನ್ನು ನಿರೂಪಿಸುತ್ತವೆ. ಬಹಳಮಟ್ಟಿಗೆ ಪೌರಸ್ತ್ಯ ಕಥೆಗಳನ್ನೇ ಹೋಲುತ್ತವೆ. ಇವುಗಳಲ್ಲಿ ಅತ್ಯಂತ ಪ್ರಾಚೀನ ಹಾಗೂ ಪ್ರಖ್ಯಾತ ಕಥೆ ಕ್ರಿ.ಪೂ. ಸು. ೨೦೦೦–೧೮೦೦ರ ನಡುವೆ ಬರೆದಿರಬಹುದಾದ 'ಸಿನುಹೆ' (Sinuhe). ಇದನ್ನು ಪ್ರಾಚೀನ ಈಜಿಪ್ಟ್ ಸಾಹಿತ್ಯದ ಅಮರಕೃತಿ ಎನ್ನುವುದುಂಟು. ಇದರಲ್ಲಿ ಪ್ರಸಿದ್ಧ ರಾಜನೊಬ್ಬನ ಆಶ್ರಯಪಡೆದ ನಾವಿಕನ ಕಥೆಯಿದೆ. ಇದು ಬಹುಮಟ್ಟಿಗೆ ಸಿಂದಬಾದ್ ನಾವಿಕನ ಕಥೆಯನ್ನು ಹೋಲುತ್ತದೆ. ಇವುಗಳಲ್ಲಿ ಈಜಿಪ್ಟಿನವರ ದೇಶಪ್ರೇಮ ನಿಚ್ಚಳ ವಾಗಿ ಅಭಿವ್ಯಕ್ತವಾಗಿದೆ. ಖಿಯೂಪ್ಸ್‌ಗೆ ಹೇಳಿದ ಅದ್ಭುತಕಥೆಗಳಲ್ಲಿ ಗರ್ಭಕಥೆ (ಕಥೆಯೊಳಗೊಂದು ಕಥೆ)ಯ ತಂತ್ರವನ್ನು ಕಾಣಬಹುದು. ಇವುಗಳಲ್ಲಿ ನೀತಿಕಥೆಗಳು, ಪ್ರಾಣಿಪಕ್ಷಿಗಳ ಕಥೆಗಳು, ಭೂತಪ್ರೇತಗಳ ಹಾಗೂ ಪವಾಡಗಳ ಕಥೆಗಳು—ಇವು ಹಾಸುಹೊಕ್ಕಾಗಿ ಬರುತ್ತವೆ. ಶತಮಾನಗಳ ತರುವಾಯ ಬಂದ ಸಿಂಡರೆಲಾ ಕಥೆಗೆ, ಈಸೋಪ್, ಫೀಡ್ರಸ್ ಮತ್ತು ಲ್ಯಾ ಫಾಂಟೆನ್ (La fontaine) ಮುಂತಾದವರು ಬರೆದ ಕಥೆಗಳಿಗೆ ಈಜಿಪ್ಟಿನ ಹಳೆಯ ಕಥೆಗಳೇ ಮೂಲವೆನ್ನಬಹುದು. ಇನ್ನೊಂದು ಪ್ರಖ್ಯಾತಕಥೆ 'ಇಬ್ಬರು ಸೋದರರು' ಅಥವಾ 'ಅನುಪು ಮತ್ತು ಬಿಟಿವು.' ಅಣ್ಣ ಅನುಪು ವಿನ ಹೆಂಡತಿ ತನ್ನ ಮೈದುನನನ್ನು ಪ್ರೀತಿಸಿದಾಗ ಒದಗುವ ವಿಷಮ ಸನ್ನಿವೇಶಗಳು, ದುರಂತ ಇಲ್ಲಿನ ಕಥಾವಸ್ತು. ಯೂರಿಪಿಡೀಸ್‌ನ 'ಹಿಪ್ಪಾಲಿಟಸ್' ನಾಟಕದಿಂದ ಹಿಡಿದು ಕನ್ನಡದ ಕುಮಾರರಾಮನ ಕಥೆಯವರೆಗೆ ಈ ಕಥಾಶಯ (motif) ಮತ್ತೆ ಮತ್ತೆ ಜಗತ್ತಿನ ಸಾಹಿತ್ಯದಲ್ಲಿ ಕಾಣಿಸಿಕೊಳ್ಳುತ್ತದೆ.

ಇವಲ್ಲದೆ ಪುರಾಣಕಥೆಗಳ, ಐತಿಹಾಸಿಕ ರೊಮಾನ್ಸುಗಳ ಚೂರುಪಾರುಗಳು ಉಪ ಲಬ್ಧವಿವೆ. ರಾಜರ ವಂಶಾವಳಿ ಕಥೆಗಳೂ ಈ ಸುಮಾರಿನವು. ಇವು ಅಂದಿನ ಸಾಂಪ್ರ ದಾಯಿಕ ಶೈಲಿಯಲ್ಲಿವೆ; ಕೇವಲ ಮನರಂಜನೆ ಇವುಗಳ ಮೂಲ ಉದ್ದೇಶವಾಗಿರಲಿಲ್ಲ.

ಪುರಾತನ ಈಜಿಪ್ಟ್ ಸಾಹಿತ್ಯದಲ್ಲಿ ಪಂಡಿತಶೈಲಿಯ ಪ್ರಾರ್ಥನಾಗೀತಗಳು, ಮತ ಧರ್ಮಕ್ಕೆ ಸಂಬಂಧಿಸಿದ ಕವನಗಳು ಸಿಕ್ಕುತ್ತವೆ. ಇವುಗಳಲ್ಲಿ ಪಿರಮಿಡ್ಡುಗಳ ಒಳಗೆ ಕೊರೆಯಲಾದ ನೀತಿವಾಕ್ಯಗಳೂ ತತ್ತ್ವಚಿಂತನೆಗಳೂ ಸೇರಿವೆ. ಈಜಿಪ್ಟಿನ ರಾಜಮಹಾ ರಾಜರುಗಳನ್ನು ಕುರಿತ ಪ್ರಶಸ್ತಿಲೇಖನಗಳೂ ಇವೆ. ದೊರೆ ಅಖೆನಾಟನ್ ರಚಿಸಿದ 'ಸೂರ್ಯಗೀತ'ದಂಥ ಪ್ರಾರ್ಥನಾಗೀತಗಳು ತುಂಬಾ ಪ್ರಸಿದ್ಧವಾದುವು. ಆಗಿನ ಕಾವ್ಯ ಶೈಲಿಯ ಕೆಲವು ಮುಖ್ಯ ಲಕ್ಷಣಗಳನ್ನು ಈ ಪ್ರಾರ್ಥನಾಗೀತಗಳಲ್ಲಿ ಗುರುತಿಸಬಹುದು. ಇಲ್ಲಿ ಸಮಾಂತರತೆ (Parallelism) ಒಂದು ಮುಖ್ಯ ಲಕ್ಷಣ. ಕವನದ ಪ್ರತಿಯೊಂದು ಸಾಲೂ ಒಂದೇ ರೀತಿಯ ಶಬ್ದದಿಂದ ಪ್ರಾರಂಭವಾಗುತ್ತದೆ. ಕೆಲವೊಮ್ಮೆ ಒಂದೇ ಪದ

ಬೇರೆ ಅರ್ಥಪಡೆದು ಗಾಢಪರಿಣಾಮ ಸಾಧಿಸುತ್ತದೆ. ಇದರ ಪ್ರಭಾವದಿಂದಲೋ ಏನೋ ನಾವು ಬೈಬಲ್ ಮುಂತಾದ ಹೀಬ್ರೂ ಗ್ರಂಥಗಳಲ್ಲಿ ಈ ತೆರನಾದ ಶಬ್ದ ಸಮಾಂತರತೆಯನ್ನು ಕಾಣಬಹುದು. ಈಜಿಪ್ಟಿನ ರಾಜರನ್ನು ಕುರಿತ ಪ್ರಶಸ್ತಿಗೀತೆಗಳಲ್ಲಿ ಭಾಷೆಯನ್ನೂ ಕಾವ್ಯಪ್ರಕಾರವನ್ನೂ ಚೆನ್ನಾಗಿ ಬಳಸಿಕೊಂಡಿದ್ದಾರೆ.

ಈಚಿನವರು 'ನಿರಾಶಾವಾದಿ ಸಾಹಿತ್ಯ'ವೆಂದು ಹೆಸರಿಸಿರುವ ಸಾಹಿತ್ಯ ಪ್ರಭೇದವನ್ನು ಪ್ರತಿನಿಧಿಸುವ ನಾಲ್ಕು ಕೃತಿಗಳು ಸಿಕ್ಕಿವೆ. ಇದರಲ್ಲಿ ಆಗಿನ ಕಾಲದ ಅರಾಜಕತ್ವ, ಅನಾಗರಿಕ ಗುಂಪಿನವರ ದಾಳಿ, ಅಧಿಕಾರಿಗಳ ಲಂಚಗುಳಿತನ, ಭೀಕರಕ್ಷಾಮ—ಇವುಗಳ ವರ್ಣನೆಗಳು ಬರುತ್ತವೆ. ವಸ್ತು ಹಾಗೂ ರೂಪಕಗಳ ಬಳಕೆ ಅಸ್ಪಷ್ಟವಾಗಿದ್ದರೂ ಆಗಿನ ಸಾಮಾಜಿಕ ಪರಿಸ್ಥಿತಿಯನ್ನು ಕುರಿತ ಸೂಕ್ಷ್ಮ ಒಳನೋಟಗಳು ಇಲ್ಲಿವೆ.

ಪುರಾತನ ಈಜಿಪ್ಟ್ ಸಾಹಿತ್ಯದಲ್ಲಿ ಆಧುನಿಕರಿಗೆ ಹೆಚ್ಚು ಪ್ರಿಯವಾಗುವ ಅಂಶ ವೆಂದರೆ ಪ್ರಣಯಗೀತಗಳು. ಇವು ಸ್ಪಷ್ಟ ಸರಳ ಶೈಲಿಯಲ್ಲಿದ್ದು, ಪುಟ್ಟ ಪುಟ್ಟ ಪದಗುಚ್ಛಗಳಿಂದ ತುಂಬಿವೆ. ಕಾಮುಕ ಭಾವನೆಗಳಿಂದ ತುಂಬಿದ್ದರೂ ಈ ಕವನಗಳು ನೇರ ಶೈಲಿಯಿಂದಾಗಿ ನಮ್ಮನ್ನು ತಮ್ಮ ಕಡೆಗೆ ಸೆಳೆಯುತ್ತವೆ. ೩೫೦೦ ವರ್ಷಗಳ ಹಿಂದಿನ ಈ ಸಾಲುಗಳ ಹಸಿರು ಮಾಸಿಲ್ಲ. ಉದಾಹರಣೆಗೆ ಈ ಕೆಲವು ಗದ್ಯರೂಪಾಂತ ರದ ವಾಕ್ಯಗಳನ್ನು ನೋಡಬಹುದು :

ನಾನೇನಾದರೂ ಅವಳ ಸೇವಕಿ, ಆ ಕರಿಯಳಾಗಿದ್ದಿದ್ದರೆ
ನೋಡುತಲಿದ್ದೆ ಅವಳಾ ಮೈಯಿನ ಸಿರಿಬಣ್ಣ

* * *

ಆಗಬಾರದಿತ್ತೇ' ನಾನು ಅವಳ ಬೆರಳೊಳಗಿನ ಉಂಗುರ ?

* * *

ಗಾಳಿ ಸುಳಿವಾಗ ಅದಕೆ ಕರಿನೇರಿಳೆ ಮರದಾಸೆ,
ನೀ ಸುಳಿದು ಬರುವಾಗ ನಿನಗಾಯ್ತು ನನ್ನಾಸೆ !

ಪುರಾತನ ಈಜಿಪ್ಟ್ ಸಾಹಿತ್ಯದಲ್ಲಿ, ಗಮನ ಸೆಳೆಯುವ ಇನ್ನೊಂದು ಅಂಶವೆಂದರೆ ನೀತಿಬರೆಹಗಳು. ಕ್ರಿ.ಪೂ. ೧೫೦೦ರ ಸುಮಾರಿನ ಇಂಥ ಬರೆಹಗಳನ್ನುಳ್ಳ ಸಾವಿರಾರು ಹಸ್ತಪ್ರತಿಗಳು ಸಿಕ್ಕಿವೆ. ಇದರಲ್ಲಿಯ ಲೌಕಿಕ ವಿವೇಕಕ್ಕಿಂತ,ತತ್ತ್ವಜ್ಞಾನಕ್ಕಿಂತ ಹೆಚ್ಚಾಗಿ ಅಲೌಕಿಕ ಅದ್ಭುತ ಸಂಗತಿಗಳು ಬಹುಕಾಲ ಜನರ ಗಮನ ಸೆಳೆದವೆನ್ನುವುದು ವಿಚಿತ್ರ ಸಂಗತಿ. ವಿವೇಕಸಾಹಿತ್ಯ (Wisdom books) ಎನ್ನುವ ಈ ತೆರನ ಗ್ರಂಥಗಳಲ್ಲಿ ಅತ್ಯಂತ ಪ್ರಾಚೀನವಾದ್ದು ಕ್ರಿ.ಪೂ. ೨೫೦೦ರಲ್ಲಿ ರಚಿತವಾದ ಟಾ ಹೊಟೆಪ್ (Ptah hotep) ಮತ್ತು ಕಾಗೆಮ್ನಿ (Kagemni) ಎಂಬ ನೀತಿಲೇಖನಗಳು. ಮನುಷ್ಯನ ಲೌಕಿಕ ನಡವಳಿಕೆ ಹೇಗಿರಬೇಕು ಎನ್ನುವುದೇ ಈ ಲೇಖನಗಳ ವಸ್ತು. 'ಅಮೆನಿ ಹೊಪ್‌ನ ಬೋಧನೆಗಳು' (Teachings of Amenehope) ಎಂಬ ಗ್ರಂಥ ಬಹುತೇಕ ಹೀಬ್ರು ನಾಣ್ಣುಡಿಗಳನ್ನು ಹೋಲುವಂತಿದ್ದರೂ ಈಜಿಪ್ಟಿನ ವಿವೇಕಸಾಹಿತ್ಯಕ್ಕೆ ಕಳಶ

ಪ್ರಾಯವಾಗಿದೆ. ಮುಪ್ಪು, ಸಾವು, ಪ್ರೇಮ, ಕಾಮ ಮುಂತಾದ ವಿಷಯಗಳನ್ನು ಕುರಿತ ಸುಂದರ ಸರಳ ವಿಚಾರಗಳು ಇದರಲ್ಲಿವೆ. ಕ್ರಿ.ಪೂ. ಸು. ೨೧೦೦ರಲ್ಲಿ ರಚಿತವಾದ ದೊರೆ ಖೇಟಿ ತನ್ನ ಮಗನಿಗೆ ಇತ್ತ ಉಪದೇಶಗಳಲ್ಲಿ ನೀತಿಬೋಧೆಯ ಜತೆಗೆ ಆಡಳಿತ ನೀತಿ ರಾಜತಂತ್ರಗಳನ್ನು ಕುರಿತ ವಿವೇಚನೆಯಿದೆ. ಮನುಷ್ಯ ಸ್ವಭಾವ ಎಂಥದು, ಹಸನಾದ ಬದುಕೆಂದರೆ ಏನು ಎಂಬ ನೈತಿಕ ಸಾಮಾಜಿಕ ಚಿಂತನೆಗಳ ಜತೆಗೆ ಪ್ರಾಚೀನ ಈಜಿಪ್ಷಿಯನರಿಗೆ ಉಕ್ತಿಯ ಚತುರತೆ, ವ್ಯಾಕರಣಜ್ಞಾನ, ಕಾವ್ಯದ ಲಯಗತಿಗಳ ಅರಿವು—ಇವು ಸಹ ಸಾಕಷ್ಟು ಇದ್ದವೆಂದು ಹೇಳಲು ಇಲ್ಲಿ ಸಾಕ್ಷ್ಯಗಳಿವೆ.

ಈಗ ಉಪಲಬ್ಧವಿರುವ ಹಲವು ಧರ್ಮಚಿಂತನೆಯ ಗ್ರಂಥಗಳಲ್ಲಿ 'The Book of the Dead' ಎಂಬುದು ಪ್ರಮುಖವಾದ್ದು. ಇದರಲ್ಲಿ ಆದಿಮಕಾಲದ ಈಜಿಪ್ಟಿನ ಸಾವಿರಾರು ಪ್ರಾಣಿದೇವತೆಗಳು, ಸಾಮಾಜಿಕ ಧಾರ್ಮಿಕ ನಂಬಿಕೆಗಳು, ಸಂಪ್ರದಾಯಗಳು—ಇವುಗಳನ್ನು ಕುರಿತ ಪ್ರಸ್ತಾಪ ಬರುತ್ತದೆ. ಸಾವು ಬದುಕನ್ನು ಸೂಚಿಸುವ ನೈಲ್ ನದಿಯ ದೇವತೆ ಓಸಿರಿಸ್, ಅವನ ತಂಗಿಯೂ ತಾಯಿಯೂ ಆದ ಮಾತೃದೇವತೆ ಐಸಿಸ್, ಸೂರ್ಯದೇವತೆ ಹೋರಸ್ ಮುಂತಾದವರ ವರ್ಣನೆಗಳು ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತವೆ. ಕ್ರಮೇಣ ಪ್ರಾಚೀನಕಾಲದವರ ಕಲ್ಪನೆಯಲ್ಲಿ ಪ್ರಾಣಿದೇವತೆಗಳು ಹೇಗೆ ಮಾನವಸ್ವರೂಪಿಗಳಾಗಿ ವಿಕಾಸಹೊಂದುತ್ತ ಬಂದರೆಂಬುದನ್ನು ಕೂಡ ಗಮನಿಸಬಹುದು. ಈ ದೇವತೆಗಳನ್ನು ಆರಾಧಿಸುತ್ತಿದ್ದ ಜನರು ಪುರೋಹಿತವರ್ಗವಾಗಿ ಮಾರ್ಪಟ್ಟು ಕಾಲಕ್ರಮೇಣ ಸಾಮಾಜಿಕ ಪ್ರತಿಷ್ಠೆಯನ್ನೂ ಅಧಿಕಾರವನ್ನೂ ಗಳಿಸಿದರು. ಜತೆಗೆ ಅವರು ಕಲೆ ಸಂಸ್ಕೃತಿ ಪಾಂಡಿತ್ಯಗಳ ಪರಂಪರೆಯನ್ನು ಬೆಳಸಲು ನೆರವಾದರು.

ಕ್ರಿ.ಪೂ. ೧೨ನೆಯ ಶತಮಾನದಿಂದ ಕ್ರಿ.ಪೂ. ೪ನೆಯ ಶತಮಾನದವರೆಗೆ ಈಜಿಪ್ಟಿನ ಮೇಲೆ ನಾನಾ ಅನಾಗರಿಕ ಪಂಗಡದ ಜನ ದಾಳಿಮಾಡಿದರು. ಇದರಿಂದ ಪ್ರಾಚೀನ ಈಜಿಪ್ಟಿನ ಸಂಸ್ಕೃತಿಯ ಪ್ರಭಾವ ಹಲವು ದೇಶಗಳತ್ತ ಹರಿಯಿತು.

## ಸುಮೆರಿಯನ್ ಸಾಹಿತ್ಯ

ಕ್ರಿ.ಪೂ. ೪೦೦೦–೩೦೦೦ದ ಸುಮಾರಿನಲ್ಲಿ ಪರ್ಷಿಯನ್ ಕೊಲ್ಲಿಯ ಬಳಿ ವಾಸಿಸುತ್ತಿದ್ದ ಪಂಗಡಗಳೇ ಸುಮೆರಿಯನ್ನರು. ಇವರು ಒಳ್ಳೆಯ ಕಲಾಕುಶಲರಾಗಿದ್ದರೆನ್ನಲಾಗಿದೆ. ಲೇಖನಕಲೆಯನ್ನು ಜಗತ್ತಿಗೆ ಕೊಟ್ಟವರು ಇವರೇ. ಜೇಡಿಮಣ್ಣಿನ ಹಲಗೆಗಳ ಮೇಲೆ ಕೆತ್ತಿದ ಹಲವು ಲೇಖನಗಳನ್ನುಳ್ಳ ಇವರ ಗ್ರಂಥಭಂಡಾರಗಳು ಕಂಡುಬಂದಿವೆ. ಚಿತ್ರಲಿಪಿ (Pictographic script)ಯನ್ನು ಕಂಡುಹಿಡಿದವರೂ ಸುಮೆರಿಯನ್ನರೇ. ದೇವಾಲಯಗಳಲ್ಲಿ, ಸಮಾಧಿಶಿಲೆಗಳ ಮೇಲೆ, ಕೆತ್ತಿದ ಹಲವು ಬರೆಹಗಳಿಂದ ಅವರ ಸಾಮಾಜಿಕ ಜೀವನದ ಹಲವು ವಿವರಗಳು ತಿಳಿದುಬಂದಿವೆ. ಸುಮೆರಿಯನ್ನರ ಸಾಹಿತ್ಯದಲ್ಲಿ ಕಾವ್ಯರಚನೆಗಳು, ಪುರಾಣಕಥೆಗಳು, ಐತಿಹ್ಯಗಳು, ಶೋಕಗೀತೆಗಳು, ಗಾದೆಗಳು, ನೀತಿಕಥೆಗಳು ಕಾಣಸಿಗುತ್ತವೆ. ಆದರೆ ಇವು ನಮಗೆ ಸಿಕ್ಕಿರುವುದು ಹಲವಾರು ಶತ

ಮಾನಗಳ ತರುವಾಯ ರಚಿಸಿದ ಪ್ರತಿಗಳ ಮೂಲಕ ಮಾತ್ರ. ಇವುಗಳಲ್ಲಿ ಭಾಷೆಯ ತೊಡಕಿನಿಂದ ಕೆಲವು ಭಾಗ ಮಾತ್ರ ಬೆಳಕಿಗೆ ಬಂದಿದ್ದು, ಹಲವು ಭಾಗ ನಷ್ಟವಾಗಿರ ಬಹುದು. ಸುಮೇರಿಯನ್ನರ ಪುರಾಣಕಥೆಗಳಲ್ಲಿ ಎನ್‌ಲಿಲ್, ನಿನ್‌ಲಿಲ್, ಎನ್‌ಕಿ ಮತ್ತು ನಿನ್‌ಹರ್ಸಗ್ ಮುಂತಾದ ಪ್ರಾಚೀನ ದೇವತೆಗಳನ್ನು ಕುರಿತ ವಿವರಣೆಗಳಿವೆ. ಅವುಗಳಲ್ಲಿ ಮನುಷ್ಯನ ಹುಟ್ಟುಸಾವುಗಳ ಕಥೆಗಳಿವೆ. ಅವರ ಒಂದು ಪುರಾಣಕಥೆಯಲ್ಲಿ, ಅಮಾನುಷ ಪಿಶಾಚಿಯೊಂದು ನಡಸಿದ ವಿನಾಶದ ವರ್ಣನೆಯಿದೆ. ಸುಮೇರಿಯನ್ನರ ಪೌರಾಣಿಕ ವಸ್ತುಗಳನ್ನು ಬ್ಯಾಬಿಲೋನಿಯದವರು ತಮ್ಮ ಪುರಾಣಕಥೆಗಳ ರಚನೆಗೆ ಬಳಸಿಕೊಂಡರು. ಸುಮೇರಿಯನ್ನರ ಆರು ಪುರಾಣಕಥೆಗಳಲ್ಲಿ ಗಿಲ್‌ಗಮೇಶ್, ಎನ್ ಮರ್ಕರ್ ಮುಂತಾದ ವೀರರ ಸಾಹಸಕಾರ್ಯಗಳ ವರ್ಣನೆ ಮತ್ತೆ ಮತ್ತೆ ಬರುತ್ತದೆ. ಈ ಕಥಾಪರಂಪರೆಯಲ್ಲಿನ ಹಲವಾರು ಘಟನೆಗಳನ್ನು ಬ್ಯಾಬಿಲೋನಿಯನ್ ಸಾಹಿತ್ಯದ 'ಗಿಲ್‌ಗಮೇಶ್' (Gilgamesh) ಎಂಬ ಮಹಾಕಾವ್ಯದಲ್ಲಿ ಕಾಣಬಹುದು. ಮಾತಿನ ಪುನರಾವರ್ತನೆ, ಸಮಾಂತರತೆ ಮೊದಲಾದ ಅಂಶಗಳು ಸುಮೇರಿಯನ್ ಶೈಲಿಯ ಮುಖ್ಯ ಲಕ್ಷಣಗಳು. ಆದರೆ ಈ ಶೈಲಿ ಮಹಾಕಾವ್ಯಕ್ಕಿಂತಲೂ ಶೋಕಗೀತೆ ಹಾಗೂ ಪ್ರಾರ್ಥನಾಗೀತೆಗಳಿಗೆ ಚೆನ್ನಾಗಿ ಹೊಂದಿಕೊಂಡಿತೆಂದು ತೋರುತ್ತದೆ. ಇಂತಹ ಸುಮೇರಿ ಯನ್ ಸಾಹಿತ್ಯದ ಬುನಾದಿಯ ಮೇಲೆ ಹೆಚ್ಚು ನಾಟಕೀಯವೂ ಭಾವನಾತ್ಮಕವೂ ಆದ ಹೊಸ ಕಲ್ಪನೆಗಳನ್ನು ಬೆಳಸಿದವರು ಬ್ಯಾಬಿಲೋನಿಯದವರು.

## ಅಸ್ಸಿರೊ—ಬ್ಯಾಬಿಲೋನಿಯನ್ ಸಾಹಿತ್ಯ

ಕ್ರಿ.ಪೂ. ೩೦೦೦ದ ಹೊತ್ತಿಗೆ ಅಸಿರಿಯನ್ ಅಥವಾ ಅಕಾಡಿಯನ್ನರು ಮೆಸಪೊಟೆ ಮಿಯ ಬಯಲಿನ ಸುಮೇರಿಯನ್ನರನ್ನು ಸೋಲಿಸಿದರು. ಆಮೇಲೆ ಬ್ಯಾಬಿಲೋನಿ ಯನ್ನರು ಆ ಪ್ರದೇಶವನ್ನು ಆಕ್ರಮಿಸಿದಾಗ ಈ ಮೂರು ಜನಾಂಗಗಳೂ ಒಂದರೊಡ ನೊಂದು ಸಂಕೀರ್ಣವಾಗಿ ಬೆರೆತುಹೋದವು. ಇತಿಹಾಸಜ್ಞರು ಈ ಮೂರು ಸಾಹಿತ್ಯ ಗಳನ್ನೂ ಒಟ್ಟಿಗೆ ಸೇರಿಸಿ ಪ್ರಸ್ತಾಪ ಮಾಡುವುದು ರೂಢಿ.

ಬಹುಶಃ ಬ್ಯಾಬಿಲೋನಿಯನ್ ಅರಸರ ಮೊದಲ ತಲೆಮಾರು ಮುಗಿಯುವುದಕ್ಕೆ ಸ್ವಲ್ಪ ಮುಂಚೆ ಬ್ಯಾಬಿಲೋನಿಯನ್ ಸಾಹಿತ್ಯದ ಮುಖ್ಯ ಕೃತಿಗಳು ರಚಿತವಾದವು. ಆಮೇಲೆ ಸ್ವತಂತ್ರ ಕೃತಿಗಳು ರಚಿತವಾಗಲೇ ಇಲ್ಲ. ಹಳೆಯ ಕವನಗಳನ್ನು ಪ್ರತಿ ಮಾಡುವುದೇ ಒಂದು ಕೆಲಸವಾಯಿತು. ಬ್ಯಾಬಿಲೋನಿಯನ್ ಪುರಾಣಕಾವ್ಯಗಳಲ್ಲಿ ರೂಪಗೊಂಡ ಕಥಾವಸ್ತುಗಳು ಸುಮೇರಿಯನ್ ಮೂಲದಿಂದಲೇ ಬಂದಿದ್ದು, ಅವು ಅಸಿರಿಯದ ಅಸುರ್‌ಬನಿಪಾಲನ ಗ್ರಂಥಾಗಾರದ ಜೇಡಿಮಣ್ಣಿನ ಹಲಗೆಪ್ರತಿಗಳ ರೂಪದಲ್ಲಿ ಉಳಿದುಕೊಂಡಿದ್ದವು. ಇವುಗಳಲ್ಲಿ ಮುಖ್ಯ ಕೃತಿಗಳನ್ನು ಮಾತ್ರ ಹೆಸರಿಸ ಬಹುದು.

'ಗಿಲ್‌ಗಮೇಶ್' ಮಹಾಕಾವ್ಯ : ಇದರಲ್ಲಿ ಹನ್ನೆರಡು ಭಾಗಗಳಿದ್ದು, ಅವುಗಳಲ್ಲಿ

ಕಥಾನಾಯಕ ಗಿಲ್‌ಗಮೇಶ್ ಎಂಬ ರಾಜನ ವೀರಸಾಹಸಗಳ ವರ್ಣನೆ ಇದೆ. ಗಿಲ್‌ಗಮೇಶನು ಎಂಕಿಡು ಎಂಬ ರಕ್ಕಸನೊಡನೆ ಹೋರಾಡುವುದು, ಆಮೇಲೆ ಇಬ್ಬರೂ ಸ್ನೇಹಿತರಾಗಿ ಸಾಹಸಕಾರ್ಯಗಳನ್ನು ಮಾಡಲು ಹೊರಡುವುದು, ಎಂಕಿಡುವಿನ ಮರಣ, ಗಿಲ್‌ಗಮೇಶ್‌ನ ಪ್ರಲಾಪ, ಅಮರತ್ವದ ಗೂಢಸಂಕೇತವಾದ ಜೀವ ವೃಕ್ಷವನ್ನು ಹುಡುಕುತ್ತ ಅವನು ದೂರದ ಉತ್ನಪಿಷ್ಟಿಮ್ ಎಂಬವನನ್ನು (ಇವನು ಬೈಬಲಿನಲ್ಲಿ ಬರುವ ನೋಅನ ಪೂರ್ವಜ ಎನ್ನುವುದುಂಟು) ಸಂಧಿಸುವುದು, ಅವನಿಂದ ಪಡೆದ ಜೀವವೃಕ್ಷವನ್ನು ಕಳೆದುಬಿಡುವುದು, ತನ್ನ ನಾಡಿಗೆ ಹಿಂದಿರುಗಿ ರಾಜಧಾನಿ ಎರಕ್ ಪಟ್ಟಣಕ್ಕೆ ದೈತ್ಯಾಕಾರದ ಗೋಡೆಗಳನ್ನು ಕಟ್ಟುವುದು—ಇವು ಈ ಮಹಾಕಾವ್ಯದ ಮುಖ್ಯಘಟನೆಗಳು. ಹನ್ನೆರಡನೆಯ ಭಾಗದಲ್ಲಿ ಬರುವ, ಎಂಕಿಡು ವರ್ಣಿಸುವ, ನರಕದ ದೃಶ್ಯ ಸುಮೇರಿಯನ್ ಕಾವ್ಯಭಾಗದ ಯಥಾವತ್ತಾದ ಅನುವಾದವೆಂದು ತೋರುತ್ತದೆ.

'ಸೃಷ್ಟಿಯ ಮಹಾಕಾವ್ಯ' (The Epic of Creation) : ಇದರಲ್ಲಿ ಏಳು ಭಾಗಗಳಿದ್ದು, ಬ್ಯಾಬಿಲೋನಿಯದ ಮರ್ಡಕ್ ಎಂಬ ತರುಣದೇವತೆಯು ನರಕದ ಪಿಶಾಚಿ ಟಿಯಮಟ್‌ನೊಂದಿಗೆ ಹೋರಾಡುವ ಕಥೆಯೇ ಪ್ರಧಾನವಾಗಿ ಬರುತ್ತದೆ. ಪಿಶಾಚಿಯನ್ನು ಕೊಂದು ದೇವತೆಗಳ ಸೇವೆಗೆಂದು ಮರ್ಡಕ್ ಮಾನವ ಲೋಕವನ್ನು ಸೃಷ್ಟಿಸುತ್ತಾನೆ. ಬೈಬಲಿನ ಸೃಷ್ಟಿಯ ಕಥೆಯ ಆಕರವನ್ನು ಇಲ್ಲಿ ಗುರುತಿಸಲು ಸಾಧ್ಯ.

ಇಷ್ಟರ್ (Ishtar) ಎಂಬ ವೀರದೇವತೆಯ ಕಥೆ ಉರ್ವರತೆಗೆ ಸಂಬಂಧಿಸಿದ್ದು. ಪ್ರಕೃತಿಯ ಹುಟ್ಟುಸಾವುಗಳು ಇದರ ವಸ್ತು. 'ಅತ್ತರ್‌ಹಾಸಿಸ್' (Atarhasis) ಕಾವ್ಯ ಒಂದು ಅಪೂರ್ಣ ಕೃತಿ. ಇದರಲ್ಲಿ ಸೃಷ್ಟಿಯ ಪ್ರಳಯದ ವರ್ಣನೆ, ಕಥಾನಾಯಕ ಅಪ್ರತಿಮಜಾಣನ ಕಥೆ ಬರುತ್ತವೆ. 'ಅಡಪ' (Adapa) ಕಾವ್ಯದ ವಸ್ತು ಗಿಲ್‌ಗಮೇಶನ ಕಥೆಯನ್ನೇ ಹೋಲುವಂತಿದೆ. ಶಾಪಕ್ಕೆ ಗುರಿಯಾದ ಕಥಾನಾಯಕನಿಗೆ ದೇವತೆಗಳು ಅಮೃತರಸವನ್ನು ಕರುಣಿಸುತ್ತಾರೆ. ಪ್ರಮಾದವಶದಿಂದ ಅವನು ಅದನ್ನು ನಿರಾಕರಿಸುತ್ತಾನೆ. ಬದುಕಿನ ಅರ್ಥಹೀನತೆ ಈ ಕಾವ್ಯದ ವಸ್ತು. ಈ ಕಾವ್ಯಗಳಲ್ಲದೆ, ರಾಜರ ಹುಟ್ಟುಸಾವಿನ ಕಥೆಗಳು, ಬೈಬಲಿನ 'ಬುಕ್ ಆಫ್ ಜೋಬ್' (Book of Job) ಅನ್ನು ಹೋಲುವ ಸತ್ಯಾತ್ಮನ ನರಳಿಕೆಯ ಕಥೆ ಮುಂತಾದ ಹಲವು ಕವನಗಳು ಬ್ಯಾಬಿಲೋನಿಯನ್ ಸಾಹಿತ್ಯದಲ್ಲಿ ಕಾಣಸಿಗುತ್ತವೆ. ಕ್ರಿ.ಪೂ. ೨೧೦೦ರ ಸುಮಾರಿನಲ್ಲಿದ್ದ ಹಮುರಾಬಿಯ ಕಾಲದ ಶಾಸನಗಳು ಚರಿತ್ರಕಾರರಿಗೆ ಅತ್ಯಂತ ಪ್ರಾಚೀನ ದಾಖಲೆಗಳ ಆಕರ ವಾಗಿವೆ.

## ಚೀನಿ ಸಾಹಿತ್ಯ

ಜಗತ್ತಿನ ಸಾಹಿತ್ಯದಲ್ಲಿ ಬಹು ಪ್ರಾಚೀನವೂ ಶ್ರೀಮಂತವೂ ಆದುದು ಚೀನಿ ಸಾಹಿತ್ಯ. ಚೀನದಲ್ಲಿ ಸಿಕ್ಕಿರುವಷ್ಟು ಪ್ರಾಚೀನ ಸಾಹಿತ್ಯಕೃತಿಗಳು ಜಗತ್ತಿನ ಬೇರಾವ

ದೇಶಗಳ ಭಾಷೆಗಳಲ್ಲೂ ಸಿಕ್ಕಿಲ್ಲ. ಚೀನದಲ್ಲಿ ಕ್ರಿ.ಶ. ೧೨ನೆಯ ಶತಮಾನದಷ್ಟು ಹಿಂದೆಯೇ ಮುದ್ರಣಕಲೆ ಬಳಕೆಯಲ್ಲಿತ್ತು. ಚೀನೀಯರಿಗೆ ಗ್ರಂಥಾಲಯಗಳನ್ನು ಸಂಗ್ರಹಿಸಿ ಬೆಳಸುವುದೆಂದರೆ ತುಂಬ ಆಸಕ್ತಿ. ಜತೆಗೆ ಅವರದು ಅವಿಚ್ಛಿನ್ನವಾದ ಸಾಂಸ್ಕೃತಿಕ ಪರಂಪರೆ. ಈ ಕಾರಣಗಳಿಂದಾಗಿ ಅತ್ಯಂತ ಪುರಾತನ ಕೃತಿಗಳನ್ನು ಉಳಿಸಿಕೊಳ್ಳುವುದು ಅವರಿಗೆ ಸಾಧ್ಯವಾಯಿತು.

ಕ್ರಿ.ಪೂ. ೬–೩ನೆಯ ಶತಮಾನದವರೆಗಿನ ಕ್ಲಾಸಿಕಲ್ ಯುಗ: ಚೀನಿ ಸಾಹಿತ್ಯದ ಅತ್ಯಂತ ಪ್ರಾಚೀನ ಕೃತಿ, ಕ್ರಿ.ಪೂ. ೧೧೦೦ದ ಹಿಂದೆಯೇ ರಚಿತವಾಗಿರಬಹುದೆನ್ನಲಾದ 'ಷಿ ಚಿಂಗ್' (Shih-ching) ಎಂಬ ಕವನಸಂಗ್ರಹ. ಇದರಲ್ಲಿನ ೩೦೫ ಕವನಗಳು ಕುಂಗ್-ಫು-ಟ್ಸೆ ಅಥವಾ ಕನ್‌ಫ್ಯೂಷಿಯಸ್ (ಕ್ರಿ.ಪೂ. ಸು. ೫೫೦–೪೭೯) ರಚಿಸಿದವು ಎನ್ನುತ್ತಾರೆ. ಕನ್‌ಫ್ಯೂಷಿಯಸ್ಸಿನ ಕಾಲಕ್ಕೆ ಮುಂಚೆ ಕಾವ್ಯರಚನೆಯಾಗಿರುವ ಸಂಭವ ವಿರಳವಾದರೂ ಈ ಕವನಗಳೆಲ್ಲವೂ ಒಬ್ಬನೇ ರಚಿಸಿದವು ಎಂದು ಹೇಳಲು ಬರುವುದಿಲ್ಲ. ಧರ್ಮಶ್ರದ್ಧೆ, ಯುದ್ಧದ ಬೇಗೆಗೆ ಸಿಕ್ಕಿದ ಸೈನಿಕರ ಪ್ರಲಾಪ, ಪ್ರೇಮದ ಉತ್ಕರ್ಷ ಮೊದಲಾದ ವಸ್ತುಗಳಿಂದ ಕೂಡಿ, ಈ ಕವನಗಳು ಸಂಕ್ಷಿಪ್ತವಾಗಿದ್ದೂ ಭಾವಪೂರ್ಣವೂ ವೈವಿಧ್ಯಮಯವೂ ಆಗಿವೆ. ಇಲ್ಲಿ ಬಳಸಿರುವ ಪ್ರತಿಮೆಗಳು ಅರ್ಥವತ್ತಾಗಿವೆ. ಸುಮಾರು ೪ ಶತಮಾನಗಳ ಅವಧಿಯಲ್ಲಿ ಹೆತ್ತಾರು ಕವಿಗಳು ರಚಿಸಿರಬಹುದಾದ ಈ ಕವನಗಳಲ್ಲಿ ಜನಪದ ಹಾಡುಗಳು, ಕಥನಕವನಗಳು, ಪ್ರೇಮಗೀತಗಳು, ರಾಜಕೀಯ ವಿಡಂಬನಗಳು, ಧಾರ್ಮಿಕ ಪ್ರಗಾಥಗಳು ಸೇರಿವೆ. ಚೀನದ ಪ್ರಸಿದ್ಧ ತತ್ತ್ವಶಾಸ್ತ್ರ ಪಂಡಿತರಾದ ಕನ್‌ಫ್ಯೂಷಿಯಸ್ ಮತ್ತು ಲೊ ಪಡ್ಸು (Low-tse)ಗಳ ಈ ಯುಗದಲ್ಲಿ ರಚಿತವಾದ ಗ್ರಂಥಗಳಲ್ಲಿ ದಾರ್ಶನಿಕ ಗ್ರಂಥಗಳೇ ಹೆಚ್ಚು. ಕನ್‌ಫ್ಯೂಷಿಯಸ್ ಐದು ದಾರ್ಶನಿಕ ಗ್ರಂಥಗಳನ್ನು ಸಂಪಾದಿಸಿದನೆಂದು ಊಹಿಸಲಾಗಿದೆ. ಅವನು ಪ್ರತಿಪಾದಿಸಿದ ತತ್ತ್ವವಿಚಾರಗಳಿಗೆ ಈ ಗ್ರಂಥಗಳೇ ಆಧಾರ.

ಕನ್‌ಫ್ಯೂಷಿಯಸ್‌ನ ಕಾಲಾನಂತರದ ಹಾನ್ ಯುಗದ ಕೃತಿಗಳಲ್ಲಿ ತಾತ್ತ್ವಿಕ ಹಾಗೂ ಐತಿಹಾಸಿಕ ಗ್ರಂಥಗಳು ಮಾತ್ರ ಸಿಕ್ಕಿವೆ. ಇವುಗಳಲ್ಲಿ 'ಕ್ವೊ ಯು' (Conversations from the states)ಮತ್ತು 'ಚಾನ್ ಕ್ಯೂ ಟ್ಸು' (Intrigues of warring states) ಮುಂತಾದುವನ್ನು ಮುಖ್ಯವಾಗಿ ಹೆಸರಿಸಬಹುದು. ಕ್ರಿ.ಪೂ. ಸು. ೪ನೆಯ ಶತಮಾನದ 'ಚ್ವಾಂಗ್ ಟ್ಸು' (Musings of a chinese mystic) ಎನ್ನುವ ತಾತ್ತ್ವಿಕ ಗ್ರಂಥದಲ್ಲಿ ವಿಭಾವನಾಯುತವಾದ ರಸಮಯವಾದ ನೀತಿಕಥೆಗಳಿವೆ. ಸಂಪದ್ಭರಿತವಾಗಿ ಬೆಳೆದ ಚೀನಿ ಕಥನಸಾಹಿತ್ಯಕ್ಕೆ ಇದು ನಾಂದಿಯಾಯಿತು ಎನ್ನಬಹುದು. 'ಷಿ ಚಿಂಗ್' ಕವನಸಂಕಲನದ ತರುವಾಯ ನಮ್ಮ ಗಮನ ಸೆಳೆಯುವ ಇನ್ನೊಂದು ಕಾವ್ಯಕೃತಿ 'ಲಿ ಸಾವೊ' ಅಥವಾ ದುಃಖಗೀತೆ (Falling into Trouble). ಇದನ್ನು ಬರೆದವನು ಚ್‌ಉ ಯುಆನ್ (Chu yuan) (ಕ್ರಿ.ಪೂ. ಸು. ೩೦೦) ಎಂಬ ಕವಿ. ಇವನನ್ನು ಚೀನದ ಆದಿಕವಿ ಎನ್ನುವುದು ವಾಡಿಕೆ. 'ಲೀಸಆವೊ' ಒಂದು ಅನ್ಯೋಕ್ತಿ ಕವನ

(Allegorical poem). ಇದರಲ್ಲಿ ೧೮೭ ಸಾಲುಗಳಿವೆ. ಇಲ್ಲಿ ಬರುವ ಕಥಾನಾಯಕ 'ನಾನು' (I) ತನ್ನ ಆಶ್ರಯದಾತನ ಚಂಚಲ ಪ್ರವೃತ್ತಿಯನ್ನು ಟೀಕಿಸುವುದರ ಜತೆಗೆ ಕಲ್ಪನಾಮಯವಾದ ಅನ್ವೇಷಣೆಯೊಂದನ್ನು ವರ್ಣಿಸುತ್ತಾನೆ. ಈ ಕವನವು 'ಸಾವೋ' ಎಂಬ ಒಂದು ಹೊಸ ಕಾವ್ಯಪ್ರಕಾರವನ್ನೇ ಸೃಷ್ಟಿಸಿ ಮುಂದಿನ ಯುಗದ ಕವಿಗಳ ಮೇಲೆ ವ್ಯಾಪಕಪ್ರಭಾವ ಬೀರಿತು.

ಆಮೇಲೆ ಬಂದ ಮತ್ತೊಂದು ಹೊಸ ಕಾವ್ಯಪ್ರಕಾರವೆಂದರೆ 'ಫು'. 'ಸಾವೋ' ಕಾವ್ಯದ ವರ್ಣನೆಯ ಅಂಶವನ್ನು ಇದರಲ್ಲಿ ಹೆಚ್ಚುಹೆಚ್ಚಾಗಿ ದುಡಿಸಿಕೊಳ್ಳಲಾಯಿತು. 'ಫು' ಕಾವ್ಯದ ಛಂದಸ್ಸಿನಲ್ಲಿ ಯಾವೊಂದೂ ನಿಶ್ಚಿತ ನಿಯಮವಿಲ್ಲ. ಇವು ಸುದೀರ್ಘವಾದ ಕವನಗಳು. ವಿಪುಲವಾಗಿ ಪ್ರಾಸವನ್ನು ಬಳಸುವ ಈ ಕವನಗಳಿಗೆ, ರಚನೆಯ ಹಿನ್ನೆಲೆಯನ್ನು ವರ್ಣಿಸುವ ಗದ್ಯಪೀಠಿಕೆಗಳು ಇರುತ್ತವೆ. ಛಂದಸ್ಸಿನ ನಿಯಮವಿಲ್ಲದ ಈ ಸುದೀರ್ಘ ಕವನಗಳನ್ನು ಆಗಿನವರು ಲಯಬದ್ಧವಾದ ಗದ್ಯವೆಂದೇ ಭಾವಿಸಿರಬಹುದು. ಇವು ಅಪ್ರತ್ಯಕ್ಷ ಸೂಚನೆಗಳಿಂದಲೂ ಅನ್ಯೋಕ್ತಿಗಳಿಂದ ತುಂಬಿದ್ದು ವಾಚನಕ್ಕೆಂದು ಉದ್ದೇಶಿತವಾಗಿದ್ದವು. 'ಫು' ಕವಿಗಳಲ್ಲಿ ಸು ಮ ಹ್‌ಸಿಅಂಗ್ಜು (Sue-Ma-Hsiangju) (ಕ್ರಿ.ಪೂ. ಸು. ೧೭೯) ಮತ್ತು ಮೇಷಂಗ್ (Meishing) (ಕ್ರಿ.ಪೂ. ೧೪೦) ಇವರು ಮುಖ್ಯರಾದವರು. ಹ್‌ಸಿಅಂಗ್ಜುವಿನ ಕವನಗಳಲ್ಲಿ ರಾಜನು ಬೇಟೆಯಾಡುವ ಗುಡ್ಡಗಾಡುಗಳ ಸುಂದರ ವರ್ಣನೆ ಇದೆ. ಈ ಕಾವ್ಯಪ್ರಕಾರವನ್ನು ಕ್ರಿ.ಶ. ೬ನೆಯ ಶತಮಾನದವರೆಗೂ ಬಳಸಿಕೊಳ್ಳಲಾಗಿದ್ದು, ಕ್ರಮೇಣ ಅದು ಅವನತಿ ಹೊಂದಿದಂತೆ ತೋರುತ್ತದೆ.

ಟಿಅಂಗ್ ಅಥವಾ ಹಾನ್ ಕ್ಲಾಸಿಕಲ್ ಯುಗ (ಕ್ರಿ.ಶ. ೬೧೮–೯೦೬) : ಉತ್ತರ ಹಾನ್ ವಂಶದ ಕಾಲದಲ್ಲಿ (೨೫–೨೨೦) ಹಲವು ಜನಪದ ಲಾವಣಿಗಳು ಹುಟ್ಟಿದವು. ಆಮೇಲೆ ಇವುಗಳಿಂದ ಪ್ರೇರಿತರಾದ ಟ್ಸಾಓ ವಂಶದ ಕವಿಗಳು ಉತ್ತಮ ಭಾವಗೀತೆಗಳನ್ನು ಬರೆದರು. ಇವರಲ್ಲಿ ಪ್ರಸಿದ್ಧನಾದ ಡ್ಸಾಓ ಚ್ಹಿ (Tsao Chih) (ಕ್ರಿ.ಶ. ೧೯೨–೨೩೨) ಭಾವಗೀತೆಗಳನ್ನೂ ರಾಜಕೀಯ ವಿಡಂಬನ ಕಾವ್ಯಗಳನ್ನೂ ಬರೆದ. ಇವನು ಬಳಸಿದ ಐದು ತಾಳದ (beat) ಲಾವಣಿ ಛಂದಸ್ಸು ತುಂಬ ಜನಪ್ರಿಯವಾಗಿ 'ಷಿ' ಎಂಬ ಸಾಂಪ್ರದಾಯಿಕ ಕಾವ್ಯರಚನೆಗೆ ನೆರವಾಯಿತು. ೨೨೦ರಿಂದ ೫೮೯ರ ವರೆಗಿನ ಆರು ಬೇರೆ ಬೇರೆ ರಾಜವಂಶದವರ ಆಳ್ವಿಕೆಯ ಅವಧಿಯಲ್ಲಿ ಭಾವಗೀತೆ ಅತ್ಯಂತ ಉತ್ಕರ್ಷ ರೂಪವನ್ನು ಪಡೆಯಿತು. ಆ ಕಾಲದ ಕವಿಗಳು ಸಂಕೀರ್ಣವಾದ ಭಾವನೆಗಳನ್ನು ನವಿರಾದ ಮಾತುಗಳಲ್ಲಿ ಧ್ವನಿಸಲು ಪ್ರಯತ್ನಿಸಿದರು. ಅವರಲ್ಲಿ ಡಾವ್ ಚೀಅನ್ (Tao' Ch'ien) (೩೬೫–೪೨೭) ಅತ್ಯಂತ ಶ್ರೇಷ್ಠ ಕವಿ. ಲಿಂಗ್ ಯೂಂಗ್ (Lingyūn) (೩೮೫–೪೩೩)ನ ಕವನಗಳಲ್ಲಿ ಅದ್ಭುತವಾದ ಭೂದೃಶ್ಯಗಳ ವರ್ಣನೆ ಇದೆ. ಈ ಎಲ್ಲ ರಚನೆಗಳೂ ಟಅಂಗ್ ಸ್ವರ್ಣಯುಗಕ್ಕೆ ಸಿದ್ಧತೆ ಒದಗಿಸಿದವೆನ್ನಬಹುದು. ಕ್ರಿ.ಶ. ೮ನೆಯ ಶತಮಾನದ ಟಅಂಗ್ ವಂಶದ (T'ang

dynasty) ಆಳ್ವಿಕೆಯ ಕಾಲವೇ ಭಾವಗೀತೆಯ ಪುನರುಜ್ಜೀವನ ಯುಗ. ಐನೂರು ವರ್ಷಗಳ ಹಿಂದಿನ ಕಾವ್ಯಪರಂಪರೆಗೆ ಹೊಸ ಹುರುಪು ಚೈತನ್ಯ ದೊರೆತ ಕಾಲವದು. ಈ ಯುಗದ ಮಿಂಗ್‌ಹ್ಯಾಂಗ್ ದೊರೆಯ ಕಾಲದ ಕವಿಗಳಲ್ಲಿ ಅತ್ಯಂತ ಪ್ರತಿಭಾವಂತರು ಲೀಪೊ (Lipo) (೭೦೧-೬೨) ಮತ್ತು ಡು ಫು (Tu Fu) (೭೧೨-೭೦). 'ಷಿ' ಕಾವ್ಯ ಯುಗ (ಕ್ಲಾಸಿಕಲ್ ಯುಗ) ಚೀನದ ಅಭಿಜಾತ ಕಾಲವೆಂದು ಪ್ರಸಿದ್ಧವಾಗಿದೆ. ಈ ಕಾಲದ ಕವಿಗಳು ಕನಫ್ಯೂಷಿಯಸ್, ಡಾವೊ ತತ್ತ್ವಗಳಿಂದಲೂ ಬೌದ್ಧಧರ್ಮದಿಂದಲೂ ಪ್ರೇರಣೆ ಪಡೆದರು. ರಚನೆಯ ಸರಳತೆ, ಭಾವನೆಗಳ ಸಾಂದ್ರತೆ, ನವಿರಾದ ಹಾಗೂ ವಿರಳವಾದ ಪದಪ್ರಯೋಗ—ಇವು 'ಷಿ' ಕಾವ್ಯದ ಶ್ರೇಷ್ಠ ಲಕ್ಷಣಗಳು. ಈ ಕಾಲದ ಚೀನಿ ಕಾವ್ಯವು ಕಲಾಪ್ರೌಢಿಮೆಯ ಉತ್ತುಂಗ ಶಿಖರವನ್ನು ಮುಟ್ಟಿತು ಎನ್ನುವುದುಂಟು.

ಚೀನಿ ಸಾಹಿತ್ಯದಲ್ಲಿ ಗದ್ಯವನ್ನು ವೈವಿಧ್ಯಮಯವಾಗಿ ಬಳಸಿಕೊಳ್ಳುತ್ತ ಬಂದಿದ್ದಾರೆ. ಗದ್ಯಪ್ರಕಾರಗಳಲ್ಲಿ ಮುಖ್ಯವಾದುದು ಪ್ರಬಂಧ. ಟಆಂಗ್ ಯುಗದ ಚೀನಿ ಸಾಹಿತಿಗಳು ಮಾತಿನ ಸ್ವಾರಸ್ಯವನ್ನು ಎತ್ತಿ ತೋರಿಸಲು ಗದ್ಯಶೈಲಿಯನ್ನು ಬಳಸಿದರು. ಗದ್ಯವಾಕ್ಯಗಳಲ್ಲಿ ಕಾವ್ಯಸಹಜವಾದ ಗತಿ ಲಯಗಳನ್ನು ಸಾಧಿಸಲು ಅವರು ಒಂದು ರೀತಿಯ ಸಮತೋಲನ ಗದ್ಯವನ್ನು (Parallel prose) ರೂಪಿಸಿದರು. ಸಣ್ಣಕಥೆ, ನೀತಿಪ್ರಧಾನವಾದ ಕಥಾನಕಗಳು ವಿಶಿಷ್ಟವಾದ ರೂಪ ಪಡೆದವು. ಇದಕ್ಕೆ ಮುಖ್ಯ ಪ್ರೇರಣೆ ಒದಗಿಸಿದವರು ಸ್ಸು ಮೋ ಚಿಅನ್ (Szu-Mo Chien) (ಕ್ರಿ.ಪೂ. ೧೪೫-೯೦) ಬರೆದ, ಚೀನದ ಪ್ರಾಚೀನ ಇತಿಹಾಸವನ್ನು ವಿವರಿಸುವ 'ಐತಿಹಾಸಿಕ ದಾಖಲೆಗಳು' ಮತ್ತು ಲ್ಯೂ ಪ್ಸಿಯಾಂಗ್ (Liu Tsung-yuan)ನ (೭೭೩-೮೧೯) ಪ್ರಸಿದ್ಧ ಮಹಿಳೆಯರ ಜೀವನಕಥೆಗಳು (ಲ್ಯೂ ಸು ಚು ಆನ್). ಟಆಂಗ್ ಯುಗದಲ್ಲಿ ರಚಿತವಾದ ಕಟ್ಟುಕಥೆಗಳು, ದೆವ್ವದ ಕಥೆಗಳು, ಪ್ರವಾಸಿಕಥೆಗಳು ಚೀನಿ ಅದ್ಭುತ ಕಥೆಯ (Ch'uan Ch'i) ಪ್ರಕಾರವನ್ನು ಶ್ರೀಮಂತಗೊಳಿಸಿದವು.

## ಹೀಬ್ರೂಸಾಹಿತ್ಯ

ವಿಶೇಷವಾದ ಕಲಾತ್ಮಕ ಅಂಶಗಳನ್ನುಳ್ಳ ಹೀಬ್ರೂ ಸಾಹಿತ್ಯಕ್ಕೆ ೩೦೦೦ ವರ್ಷಗಳ ಪ್ರಾಚೀನ ಇತಿಹಾಸವಿದೆ. ಹೀಬ್ರೂ ಜನಾಂಗದವರು ಈಜಿಪ್ಟ್ ದೊರೆಗಳ ಕಾಲದಿಂದ, ಅಂದರೆ ಕ್ರಿ.ಪೂ. ೧೬೦೦ರಿಂದ ಕ್ರಿ.ಪೂ. ೧೨೯೦ರವರೆಗಿನ ಅವಧಿಯಲ್ಲಿ ಈಜಿಪ್ಟಿನವರೊಂದಿಗೆ ಸಂಪರ್ಕ ಪಡೆದಿದ್ದರು. ಏಕದೇವತಾರಾಧನೆಯ ಕಲ್ಪನೆ ಈಜಿಪ್ಟಿನಲ್ಲಿ ಮೂಡುತ್ತಿದ್ದಾಗ ಅದರ ಪ್ರಭಾವ ಹೀಬ್ರುಗಳ ಮೇಲೆ ಆಗಿರಬಹುದು. ೧೪ನೆಯ ಶತಮಾನದ ೩ನೆಯ ಅಮೆನ್ ಹೆಟೆಪ್ ದೊರೆಯ ಸೂರ್ಯಸ್ತೋತ್ರ ಇದಕ್ಕೊಂದು ಉದಾಹರಣೆ. ಜೊಸೆಫ್ ಎಂಬುವನ ನಾಯಕತ್ವದಲ್ಲಿ ಹೀಬ್ರೂ ತಂಡವೊಂದು ಕ್ರಿ.ಪೂ. ಸು. ೧೦೨೫ರಲ್ಲಿ ನೈಲ್‌ನದಿಯ ಮುಖಾಂತರವಾಗಿ ಈಜಿಪ್ಟಿಗೆ ಬಂದು ನೆಲಸಿತು. ಈಜಿಪ್ಟಿನ

ಅರಸೊತ್ತಿಗೆಯ ಪ್ರಭಾವ ಖಿಲವಾಗುತ್ತಿದ್ದ ಕಾಲ ಅದು. ಆಗ ಅಲ್ಲಿ ಸ್ಥಾಪಿತವಾದ ಹೀಬ್ರೂರಾಜ್ಯದ ಮೊದಲ ದೊರೆ ಸಾಲ್, ಅನಂತರದ ಡೇವಿಡ್, ಆಮೇಲೆ ಸಾಲೊಮನ್—ಈ ದೊರೆಗಳ ಆಳ್ವಿಕೆಯಲ್ಲಿ ಹೀಬ್ರೂಸಾಹಿತ್ಯದ ಬುನಾದಿ ಪ್ರಾರಂಭವಾಯಿತು. ಬೈಬಲ್ ಗ್ರಂಥದ ಮೊದಲ ಆರು ಭಾಗಗಳ ರಚನೆ ಸಾಲೊಮನ್ ರಾಜನ ಆಳ್ವಿಕೆಯಲ್ಲಿ ಪ್ರಾರಂಭವಾಗಿರಬಹುದು. ಕಾಲಕ್ರಮೇಣ ಅದರ ಮೂರು ಭಾಗಗಳು, ಎಂದರೆ ಓಲ್ಡ್ ಟೆಸ್ಟಮೆಂಟ್, ನ್ಯೂ ಟೆಸ್ಟಮೆಂಟ್ ಮತ್ತು ಅಪೊಕ್ರಿಫ ಬೇರೆ ಬೇರೆಯಾಗಿ ಬಂದು ಸೇರಿಕೊಂಡಿರಬೇಕು. ಮೂಲತಃ ಹೀಬ್ರೂ ಸಾಹಿತ್ಯವೆಲ್ಲ ಅವರ ಧರ್ಮಕ್ಕೆ ಸಂಬಂಧಿಸಿದುದು. ಆದರೂ ಅದರಲ್ಲಿ ನಾವು ಸಾಹಿತ್ಯದ ನಾನಾ ಪ್ರಕಾರಗಳನ್ನು ಗುರುತಿಸಲು ಸಾಧ್ಯ. ಬೈಬಲ್ ಮತ್ತು ಟಾಲ್ಮಡ್ ಹೀಬ್ರೂ ಸಾಹಿತ್ಯದ ಎರಡು ಮುಖ್ಯ ಭಾಗಗಳಾಗಿದ್ದು, ಇವೆರಡರಲ್ಲೂ ಹೀಬ್ರೂ ಜನಾಂಗದ ಪ್ರಾಚೀನ ಇತಿಹಾಸ, ಕಾನೂನು ಕಟ್ಟಳೆಗಳು, ಪುರಾಣ ಐತಿಹ್ಯಗಳು, ಸಾಮಾಜಿಕ ಆಶಯಗಳು ಮೊದಲಾದುವನ್ನು ಕುರಿತು ವಿಸ್ತಾರವಾದ ವಿವರಗಳು ಬರುತ್ತವೆ.

ಬೈಬಲಿನ ಬೇರೆ ಬೇರೆ ಭಾಗಗಳು ಬೇರೆ ಬೇರೆ ಕಾಲದಲ್ಲಿ ರಚಿತವಾಗಿದ್ದು, ಅವುಗಳ ಕಾಲನಿರ್ಣಯದ ಬಗೆಗೆ ಒಮ್ಮತವಿಲ್ಲ. ಕ್ರಿ.ಪೂ. ೭೫೦ರಿಂದ ಕ್ರಿ.ಶ. ೧೫೦ರ ಅವಧಿಯಲ್ಲಿ ಅದು ರೂಪುಗೊಂಡಿರಬೇಕು. ಹೀಬ್ರೂ ಸಾಹಿತ್ಯದ ಅತ್ಯಂತ ಕಾವ್ಯಮಯವಾದ ಮುಖ ಬೈಬಲ್. ಇದನ್ನು ಹಳೆಯ ಒಡಂಬಡಿಕೆ, ಹೊಸ ಒಡಂಬಡಿಕೆ ಮತ್ತು ಪ್ರಕ್ಷಿಪ್ತ ಭಾಗ ಎಂದು ಮೂರು ಭಾಗಗಳಾಗಿ ವಿಂಗಡಿಸಬಹುದು. ಹಳೆಯ ಒಡಂಬಡಿಕೆಯಲ್ಲಿ ಸುಮಾರು ೩೦೦೦ ವರ್ಷಗಳ ಹಿಂದಿನ ಕಾಲದಿಂದ ಕ್ರಿ.ಪೂ. ೨ನೆಯ ಶತಮಾನದವರೆಗಿನ ಲೇಖನಗಳು ಸೇರಿವೆ. ಈ ಒಡಂಬಡಿಕೆಯಲ್ಲಿ ಇತಿಹಾಸ, ಕಾವ್ಯ, ನಾಟಕ, ಧರ್ಮಪ್ರವಚನ ಇವುಗಳ ಅಂಶಗಳು ದಟ್ಟವಾಗಿ ಸೇರಿಕೊಂಡಿವೆ. ಇತಿಹಾಸಭಾಗವನ್ನು ಲಯಬದ್ಧ ಗದ್ಯರೂಪದಲ್ಲೂ ಪ್ರವಚನಭಾಗವನ್ನು ಸಮಾಂತರಪದಯುಕ್ತವಾದ ಕಾವ್ಯಶೈಲಿಯಲ್ಲೂ ರಚಿಸಲಾಗಿದೆ. 'Book of Job' ಅತ್ಯಂತ ನಾಟಕೀಯವೂ ಕಾವ್ಯಾತ್ಮಕವೂ ಆದ ಭಾಗ. ನಿಷ್ಕಾರಣವಾಗಿ ನಿರಪರಾಧಿ ಮಾನವ ಏಕೆ ಸಂಕಟಕ್ಕೆ ಗುರಿಯಾಗಬೇಕು ಎನ್ನುವ ಪ್ರಶ್ನೆ ಏಳುತ್ತದೆ. ಈ ಸಮಸ್ಯೆಯನ್ನು ಕುರಿತ ವಿವೇಚನೆ ಇಲ್ಲಿ ಬರುವ ಕೆಲವೇ ಕೆಲವು ಸಾಂಪ್ರದಾಯಿಕ ಪಾತ್ರಗಳ ಮೂಲಕ, ತುಂಬ ನಾಟಕೀಯವಾಗಿ ನಡೆಯುತ್ತದೆ. 'ಎಕ್ಲಿಸಿಯಾಸ್ಟಿಸ್' (Ecclesiastes) ಎಂಬ ಭಾಗವು ಅತ್ಯಂತ ಬೌದ್ಧಿಕವಾದ ವೈಚಾರಿಕತೆಯಿಂದ ತುಂಬಿದೆ. 'ಸಾಮ್ಸ್' (ಪವಿತ್ರಹಾಡುಗಳು) ಎನ್ನುವ ೧೫೦ ಕವನಗಳಲ್ಲಿ, ಪ್ರೇಮಗೀತಗಳು (Song of Songs) ಮುಂತಾದ ಭಾಗಗಳಲ್ಲಿ ಹೀಬ್ರೂಕಾವ್ಯ ಲೋಕೋತ್ತರವಾದ ಕಲಾತ್ಮಕತೆಯನ್ನು ಸಾಧಿಸಿದೆ.

ಹೊಸ ಒಡಂಬಡಿಕೆಯಲ್ಲಿನ ವಿವಿಧ ಭಾಗಗಳು ಕ್ರಿ.ಪೂ. ಸು. ೮೫ರಿಂದ ಹಿಡಿದು ಕ್ರಿ.ಶ. ೨ನೆಯ ಶತಮಾನದವರೆಗಿನ ಅವಧಿಯಲ್ಲಿ ರಚಿತವಾಗಿರಬೇಕು. ಹೊಸ ಒಡಂಬಡಿಕೆಗೆ ಧಾರ್ಮಿಕ ಮನ್ನಣೆ ದೊರೆಯಲು ದೀರ್ಘಕಾಲ ಹಿಡಿಯಿತು. ಇದರಲ್ಲಿ

ಯೇಸುಕ್ರಿಸ್ತನ ಜೀವನಕ್ಕೆ ಸಂಬಂಧಿಸಿದ ಘಟನೆಗಳನ್ನು ವಿವರಿಸುವ ನಾಲ್ಕು ಸುವಾರ್ತೆಗಳು (Gospel), ಕ್ರೈಸ್ತ ಚರ್ಚಿನ ವಿಸ್ತರಣೆಯ ಸಂಗತಿಗಳು, ಪತ್ರಗಳು (Epistles) ಮೊದಲಾದುವು ಸೇರಿವೆ. ಗ್ರೀಕ್ ಸಂಸ್ಕೃತಿ ವ್ಯಾಪಕವಾಗಿ ಹರಡಿದಾಗ ಅದು ಹೀಬ್ರೂ ಧರ್ಮದ ಮೇಲೆ ತನ್ನ ಪ್ರಭಾವ ಬೀರಿರಬೇಕು. ಹಳೆಯ ಒಡಂಬಡಿಕೆಯ ಮೊದಲ ಐದು ಭಾಗಗಳು ಆಗ ಗ್ರೀಕಿಗೆ ಭಾಷಾಂತರಗೊಂಡವು. ಹೊಸ ಒಡಂಬಡಿಕೆಯ ಹಲವು ಭಾಗಗಳು ಸಹ ಮೊದಲು ಗ್ರೀಕಿನಲ್ಲೇ ರಚಿತವಾದವು ಎನ್ನುವುದುಂಟು. ಸಾಹಿತ್ಯದ ದೃಷ್ಟಿಯಿಂದ ಹೊಸ ಒಡಂಬಡಿಕೆಯೂ ಹೆಚ್ಚಿನ ರಸವೈವಿಧ್ಯದಿಂದ ಕೂಡಿದೆ. ಯೇಸುವಿನ ಪ್ರವಚನಗಳಲ್ಲಿಯೂ ದೃಷ್ಟಾಂತ ಕಥೆಗಳಲ್ಲಿಯೂ ಚಿತ್ರಯುಕ್ತವಾದ ಸರಳ ಸುಂದರ ಮಾತುಗಳು ಹೃದಯವನ್ನು ಮುಟ್ಟುವಂತಿವೆ.

ಸಾವಿರಾರು ವರ್ಷಗಳಿಂದಲೂ ಹೀಬ್ರೂಜನರ 'ಟಾಲ್ಮಡ್' (Talmud) ಗ್ರಂಥವನ್ನು ಕುರಿತು ಸತತವಾದ ಅಧ್ಯಯನ, ವಿಶ್ಲೇಷಣೆ, ವ್ಯಾಖ್ಯಾನ ವಿಚಾರವಿನಿಮಯಗಳು ನಡೆಯುತ್ತ ಬಂದಿವೆ. ೭೦ರಲ್ಲಿ ಜೂಡಾ—ರೋಮನ್ ಯುದ್ಧದ ಅನಂತರ ಬ್ಯಾಬಿಲೋನಿಯ ಮುಂತಾದ ಕಡೆ ಬೈಬಲ್ ಅಧ್ಯಯನ ಕೇಂದ್ರಗಳು ಸ್ಥಾಪಿತವಾದವು. ಟಾಲ್ಮಡ್‌ನಲ್ಲಿ ಹೇಳುವ ಕಟ್ಟುಕಟ್ಟಳೆಗಳನ್ನೂ ನ್ಯಾಯಸೂತ್ರಗಳನ್ನೂ ಕುರಿತು ಆ ಕೇಂದ್ರಗಳಲ್ಲಿ ವಿಪುಲವಾದ ಜಿಜ್ಞಾಸೆ ನಡೆಯಿತು. ಈ ವಿಚಾರ ವಿನಿಮಯಗಳ ವರದಿ ೪-೫ನೆಯ ಶತಮಾನಗಳಲ್ಲಿ ರಚಿತವಾದ ಟಾಲ್ಮಡ್ ಆವೃತ್ತಿಯಲ್ಲಿ ಸೇರಿದೆ. ಹೀಬ್ರೂಧರ್ಮಕ್ಕೆ ಸಂಬಂಧಿಸಿದ ಐತಿಹಾಸಿಕ ಹಾಗೂ ಪೌರಾಣಿಕ ಸಂಗತಿಗಳು ಟಾಲ್ಮಡ್‌ನಲ್ಲಿ ಸೇರಿಹೋದವು. ೫೮೯ರ ಅನಂತರ ಬ್ಯಾಬಿಲೋನಿಯಾದ ಹೀಬ್ರೂ ವಿದ್ವಾಂಸರು ಹಲವು ನ್ಯಾಯಶಾಸ್ತ್ರದ ಪ್ರಶ್ನೆಗಳಿಗೆ ಕೊಟ್ಟ ಉತ್ತರಗಳನ್ನು 'ರೆಸ್‌ಪಾನ್ಸ್' (Responsa) ಎಂಬ ವೈದುಷ್ಯಪೂರ್ಣ ಗ್ರಂಥದಲ್ಲಿ ಕ್ರೋಢೀಕರಿಸಲಾಯಿತು. ೫೮೯-೧೦೩೮ರ ನಡುವಣ, ಗಾವೊನಿಕ್ ಯುಗವೆಂದು ಕರೆಯುವ ಕಾಲದಲ್ಲಿ ಸರ್ವಗ್ರಾಹ್ಯವಾದ ಬೈಬಲ್ ಪಾಠಾಂತರವನ್ನು (The Masorah) ಸಿದ್ಧಗೊಳಿಸಲಾಯಿತು.

## ಗ್ರೀಕ್ ಸಾಹಿತ್ಯ

ಪ್ರಪಂಚದ ಇತಿಹಾಸದಲ್ಲಿ ಸ್ವತಂತ್ರವೆನ್ನಬಹುದಾದ ಸಂಸ್ಕೃತಿ ಪರಂಪರೆಗಳಲ್ಲಿ ಗ್ರೀಕ್ ಸಂಸ್ಕೃತಿಯೂ ಒಂದು. ಕ್ರಿ.ಪೂ. ೩೦೦೦ ದಿಂದೀಚೆಗೆ ಈಜಿಯನ್ ಪ್ರದೇಶಕ್ಕೆ ವಲಸೆ ಬಂದವರಲ್ಲಿ ಕೊನೆಯವರು ಡೋರಿಯನ್ನರು. ಇವರು ಮಾತನಾಡುತ್ತಿದ್ದ ಹೆಲೆನಿಕ್ ಭಾಷೆಯಲ್ಲಿ ಗ್ರೀಸಿನ ಆದಿನಿವಾಸಿಗಳ ಶಬ್ದಗಳೂ ಸೇರಿದ್ದವು. ಕ್ರಿ.ಪೂ. ೧೪ನೆಯ ಶತಮಾನದಲ್ಲಿ ಕ್ರೀಟ್ ದ್ವೀಪ ಪ್ರದೇಶದಲ್ಲಿ ಮೈಕಿನಿಯನ್ ಸಂಸ್ಕೃತಿಯ ಬೇರು ನಟ್ಟವರು ಇವರೇ. ಆ ಕಾಲದಲ್ಲಿ ಬೆಳೆದಿರಬಹುದಾದ ಸಾಹಿತ್ಯದ ಬಗ್ಗೆ ಏನೂ ಪುರಾವೆ ದೊರೆತಿಲ್ಲ. ಆದರೆ ಆ ಸುಮಾರಿಗೆ ಆಗಲೇ ಪುರಾಣ ಐತಿಹ್ಯಗಳ ವಿಪುಲ ಪರಂಪರೆ ಸೃಷ್ಟಿಯಾಗಿತ್ತು. ಮುಂದೆ ಗ್ರೀಕ್ ಮಹಾಕಾವ್ಯಗಳಿಗೆ ಮೂಲವನ್ನು ಒದಗಿಸಿದ ಪಾಠಪರಂಪರೆ ಆ ಹೊತ್ತಿಗೆ

ಜೀವಂತವಾಗಿತ್ತು. ಬಹುಶಃ ಲೇಖನಕಲೆ ಕ್ರಿ.ಪೂ. ೮-೯ನೆಯ ಶತಮಾನದವರೆಗೂ ಹೆಚ್ಚು ಬಳಕೆಯಲ್ಲಿರಲಿಲ್ಲ. ಆದಿಕಾಲದ ಗ್ರೀಕರು ವರ್ಣಲಿಪಿಯನ್ನು ಪಡೆದದ್ದು ಫಿನೀಷಿಯನ್ನರಿಂದ.

ಗ್ರೀಕ್ ಕ್ಲಾಸಿಕಲ್ ಯುಗ: ಕ್ರಿ.ಪೂ. ೮ನೆಯ ಶತಮಾನದಿಂದ ೪ನೆಯ ಶತಮಾನದ ಆದಿಯ ವರೆಗಿನ ಕಾಲವನ್ನು ಕ್ಲಾಸಿಕಲ್ ಯುಗವೆನ್ನುವುದು ವಾಡಿಕೆ. ಗ್ರೀಕರ ಸಮಗ್ರ ಸಾಹಿತ್ಯ ಚರಿತ್ರೆಯನ್ನು ಆ ಕಾಲದ ಯಾರೂ ಬರೆಯಲಿಲ್ಲ. ಕಾವ್ಯ, ವಾಗ್ಮಿತೆ ಮೊದಲಾದುವನ್ನು ಕುರಿತು ಬರೆದ ಗ್ರಂಥಗಳಲ್ಲಿ ಪ್ರಾಸಂಗಿಕವಾಗಿ ಹಿಂದಿನ ಸಾಹಿತ್ಯ ಚರಿತ್ರೆಗಳ ಪ್ರಸ್ತಾಪವಿದ್ದರೂ ಆ ಅನೇಕಾನೇಕ ಗ್ರಂಥಗಳು ಕಾಲಗರ್ಭದಲ್ಲಿ ಅಡಗಿಹೋಗಿವೆ. ಮೂಲ ಸಾಹಿತ್ಯ ಕೃತಿಗಳಲ್ಲಿ ಹಲವು ಕಣ್ಮರೆಯಾಗಿವೆ. ವಿಮರ್ಶಕರೂ ಇತಿಹಾಸಕಾರರೂ ಬರೆದ ಗ್ರಂಥಗಳಲ್ಲಿ, ಈಗ ಸಿಕ್ಕಿರುವ ತುಣುಕುಗಳಲ್ಲಿ, ಹಲಕೆಲವು ಭಾವಗೀತೆಗಳು ಉಳಿದುಕೊಂಡು ಬಂದಿವೆ. ನಾಟಕದ ಸ್ವರ್ಣಯುಗವೆಂದು ಹೇಳಲಾದ ಕ್ರಿ.ಪೂ. ೫ನೆಯ ಶತಮಾನದಲ್ಲಿ ಸಾವಿರಾರು ಮಂದಿ ನೋಡಿ ನಲಿದ ರಂಗಕೃತಿಗಳಲ್ಲಿ ಹಲವು ಹೇಳಹೆಸರಿಲ್ಲವಾಗಿವೆ. ಆದರೆ ಈಗ ಉಪಲಬ್ಧವಿರುವ ಗ್ರೀಕರ ೪೩ ನಾಟಕಗಳು ಅತ್ಯುತ್ಕೃಷ್ಟ ಕಲಾಕೃತಿಗಳಾಗಿದ್ದು ವಿಶ್ವಸಾಹಿತ್ಯಕ್ಕೆ ಕಳಶಪ್ರಾಯವಾಗಿವೆ. ಗ್ರೀಕ್ ಸಾಹಿತಿಗಳು ಮತ್ತು ಗ್ರೀಕರಿಂದ ಪ್ರಭಾವಿತರಾದ ರೋಮನ್ ಸಾಹಿತಿಗಳು ತಾತ್ತ್ವಿಕರು. ಮನುಷ್ಯ ಜೀವನವನ್ನು ಕುರಿತು ಗಾಢವಾದ ಕುತೂಹಲ ದೃಷ್ಟಿಯಿಂದ ಅವರು ಚಿಂತಿಸಿದರು. ಅವರ ಸಾಹಿತ್ಯದಲ್ಲಿ ಬರುವ ಮುಖ್ಯ ವಿಚಾರಗಳಲ್ಲಿ ಕೆಲವು ಇವು: (೧) ಕವಿಯ ಮನೋಧರ್ಮವನ್ನು ವಿಶ್ಲೇಷಿಸುವಾಗ ಬರುವ ಸ್ಫೂರ್ತಿ, ಅನುಕರಣೆ ಮುಂತಾದ ಮನೋವೈಜ್ಞಾನಿಕ ಸಮಸ್ಯೆಗಳು. (೨) ಕಾವ್ಯಕ್ಕೂ ವಾಸ್ತವಜೀವನಕ್ಕೂ ಇರುವ ಸಂಬಂಧವನ್ನು ವಿಚಾರಮಾಡುವಾಗ ಉದ್ಭವಿಸುವ ಆಧಿಭೌತಿಕ ಸಮಸ್ಯೆಗಳು. (೩) ಕವಿಯ ಸಾಮಾಜಿಕ ಹೊಣೆಗಾರಿಕೆಯನ್ನು ವಿಚಾರ ಮಾಡುವಾಗ ಏಳುವ ನೈತಿಕ ವಿಚಾರಗಳು, ಕಲೆ ಸಮಾಜಗಳ ನಡುವಣ ಸಂಬಂಧ ಮುಂತಾದ ಸಂಗತಿಗಳು. (೪) ವಿವಿಧ ಸಾಹಿತ್ಯಪ್ರಕಾರಗಳನ್ನು ಗುರುತಿಸಿ, ವಿಶಿಷ್ಟ ವಿವರಣೆಗಳನ್ನು ಕೊಡುವಾಗ ಅವರ ವಿವೇಚನೆಯಲ್ಲಿ ಕಾಣಬರುವ ಕಾವ್ಯಮೀಮಾಂಸೆ ತತ್ತ್ವಶಾಸ್ತ್ರಗಳಿಗೆ ಸಂಬಂಧಿಸಿದ ವಿಚಾರಗಳು (೫) ಕಲಾಭಿವ್ಯಕ್ತಿಗಾಗಿ ಬಳಸುವ ಭಾಷೆಯ ಸ್ವರೂಪವೆಂಥದು ಎಂಬ ವಿಚಾರದಲ್ಲಿ ಬರುವ ಭಾಷಾಶಾಸ್ತ್ರದ ಸಮಸ್ಯೆಗಳು. ಈ ವಿಚಾರಗಳನ್ನು ಕುರಿತು ಗ್ರೀಕ್ ಮತ್ತು ರೋಮನರು ಮೂಡಿಸಿದ ಮೂಲಭೂತ ಚಿಂತನೆಗಳು ಪ್ರಪಂಚ ಸಾಹಿತ್ಯದಲ್ಲಿ, ಸಾಹಿತ್ಯವಿಮರ್ಶೆಯಲ್ಲಿ ಮುಗಿಯಲಾರದ ಜಿಜ್ಞಾಸೆಗಳಾಗಿವೆ. ಆ ಕೆಲವು ಸಾಹಿತಿಗಳ, ಅವರ ಕೃತಿಗಳ ಲಘುಪರಿಚಯ ಮಾತ್ರ ಇಲ್ಲಿ ಸಾಧ್ಯ.

ಗ್ರೀಕ್ ಸಾಹಿತ್ಯ 'ಇಲಿಯಡ್' ಮತ್ತು 'ಒಡಿಸ್ಸಿ' ಮಹಾಕಾವ್ಯಗಳಿಂದಲೇ ಪ್ರಾರಂಭವಾಯಿತೆನ್ನಬಹುದು. ಇವೆರಡೂ ಕ್ರಿ.ಪೂ. ೮ನೆಯ ಶತಮಾನದ ಸುಮಾರಿನಲ್ಲಿ ರಚಿತವಾಗಿರಬಹುದೆಂದು ವಿದ್ವಾಂಸರ ಅಭಿಮತ. 'ಇಲಿಯಡ್' ಟ್ರಾಯ್ ನಗರಕ್ಕೆ ಸಂಬಂಧಿ

ಸಿದ್ದು, ವೀರಯುಗದ ಭವ್ಯಚಿತ್ರಣ ನೀಡುತ್ತದೆ. ಟ್ರಾಯ್ ನಗರಕ್ಕೆ ಮುತ್ತಿಗೆ ಹಾಕಿ ದಾಳಿನಡಸಿದ ಗ್ರೀಕ್ ಹಾಗೂ ಟ್ರೋಜನ್ ವೀರರ ಸಾಹಸಗಳ ದುರಂತ ಕಥೆ ಅದು. ಮನುಷ್ಯ ಮನುಷ್ಯರ ನಡುವೆ ನಡೆಯುವ ಈ ಯುದ್ಧದಲ್ಲಿ ದೇವತೆಗಳು ಎರಡು ಪಕ್ಷ ದಲ್ಲೂ ಸೇರಿಕೊಂಡು ಹೋರಾಡುತ್ತಾರೆ. ಆದರೆ ಆ ಕಾವ್ಯದಲ್ಲಿ, ನಮ್ಮನ್ನು ಸೆಳೆಯು ವುದು ದೇವತೆಗಳ ಕಥೆಯಲ್ಲ, ದುಃಖದ ದಿವ್ಯಾಗ್ನಿಯಲ್ಲಿ ಬಿದ್ದು ಪರಿತಪಿಸುವ ಮನುಷ್ಯ ಪಾತ್ರಗಳ ಕಷ್ಟ ಕ್ಲೇಶಗಳು, ದುಗುಡ ದುಮ್ಮಾನಗಳು. ಅಖಿಲಿಸ್ ಎಂಬ ವೀರನ ಉಗ್ರ ಕೋಪದಿಂದ ಮೊದಲಾಗುವ 'ಇಲಿಯಡ್' ಕಾವ್ಯ ಟ್ರೋಜನ್ ವೀರಾಗ್ರಣಿ ಹೆಕ್ಟರನ ಸಾವು ಮತ್ತು ಟ್ರೋಜನರ ಸೋಲಿನಲ್ಲಿ ಪರ್ಯವಸಾನಗೊಳ್ಳುತ್ತದೆ. ಸೋತವರ ನೋವು ನರಳಿಕೆಯ ಮಾನವೀಯ ಕಥೆಯಲ್ಲಿ, ಗೆದ್ದ ಗ್ರೀಕರ ರಾಗದ್ವೇಷಗಳ, ದುಃಖ ದುಮ್ಮಾನಗಳ ಕಥೆಯೂ ಸೇರಿ 'ಇಲಿಯಡ್' ಒಂದು ಅನುಪಮ ಮಹಾಕಾವ್ಯವಾಗಿದೆ.

'ಒಡಿಸ್ಸಿ' ಗ್ರೀಕರ ಅಡಿಸಿಯಸ್‌ನ ಪ್ರವಾಸ ಸಾಹಸಗಳನ್ನು ವರ್ಣಿಸುತ್ತದೆ. ಖಿಲ ವಾಗುತ್ತಿದ್ದ ಊಳಿಗಮಾನ್ಯ ಶ್ರೀಮಂತ ಸಮಾಜದ ಚಿತ್ರಣವನ್ನು ನೀಡುತ್ತದೆ. ನಾನಾ ವರ್ಗಗಳ ನಡುವಣ ತಾಕಲಾಟಗಳ ಕಥೆ ಇಲ್ಲಿ ಪದರ ಪದರವಾಗಿ ಬರುತ್ತದೆ. ಈ ಎರಡು ಮಹಾಕಾವ್ಯಗಳು ಪುರಾಣಯುಗದ ವಸ್ತುವನ್ನು ಆರಿಸಿಕೊಂಡಿದ್ದರೂ ಕಾಲದ ದೃಷ್ಟಿಯಿಂದ ನೋಡಿದರೆ, ಅವು ಅಷ್ಟು ಪ್ರಾಚೀನ ಕಾಲದವಲ್ಲ. ಆದರೆ ಅವು ಅತ್ಯಂತ ಕಲಾತ್ಮಕವಾಗಿವೆ; ಪುರಾಣ ಪರಂಪರೆಯ ಅತ್ಯುತ್ಕೃಷ್ಟ ಅಭಿವ್ಯಕ್ತಿಗಳಾಗಿವೆ. ಅಲ್ಲಿನ ಭಾಷೆ ಇಯೊಲಿಕ್ ಮತ್ತು ಅಯೊನಿಯನ್ ಭಾಷೆಗಳ ಸಂಯೋಗದಿಂದ ಜನಿಸಿದ್ದು. ಬಳಸಿರುವ ಛಂದಸ್ಸು ಹೆಕ್ಸಾಮೀಟರ್; ಎಂದರೆ ಆರು ಗಣಗಳಿರುವ ಪಾದದ ಬಂಧ.

ಈ ಕಾವ್ಯಗಳನ್ನು ಹೋಮರ್ ಎಂಬ ಒಬ್ಬನೇ ಕವಿ ಬರೆದನೇ ಎನ್ನುವುದು ವಿವಾದಾಸ್ಪದ. ಅವನ ಜೀವನದ ಬಗ್ಗೆ ನಾನಾ ಊಹಾಪೋಹಗಳಿವೆ. ಅವನು ಕುರುಡ ನಾಗಿದ್ದ, ಊರೂರು ಅಲೆಯುತ್ತ ಕಥನಗೀತ ಹಾಡುತ್ತಿದ್ದ ಎನ್ನುವುದು ಸಹ ಕೇವಲ ಊಹೆ ಎನ್ನುವುದುಂಟು. ಅದೇನೆ ಇರಲಿ, ಶತಮಾನಗಳ ಕಾಲ ಹೊಮ್ಮಿ ಹರಿಯುತ್ತಿದ್ದ ಕಥನಪರಂಪರೆಯನ್ನು ಕೂಡಿಸಿ, ಅಣಿಗೊಳಿಸಿ ಅದಕ್ಕೆ ಕಲೆಯ ರೂಪವನ್ನು ಕೊಟ್ಟ ಕೀರ್ತಿ ಹೋಮರನದು ಎಂದು ಹೇಳಬೇಕು. ಆಮೇಲೆಯೂ ಸಹ ಶತಮಾನಗಳವರೆಗೆ ಆ ಕಾವ್ಯಗಳು ಜನಪದ ಕವಿಗಳ ನಾಲಗೆಯ ಮೇಲೆ ನಲಿದಾಡುತ್ತಿದ್ದು ಕ್ರಿ.ಪೂ. ಸು. ೬ನೆಯ ಶತಮಾನದ ವೇಳೆಗೆ ಲಿಖಿತ ರೂಪಕ್ಕಿಳಿದಿರಬೇಕು. ಈಗ ಸಿಕ್ಕಿರುವುದು ಬಹುಶಃ ಆ ಗ್ರಂಥದ ಹಲವಾರು ಪಾಠಗಳಲ್ಲಿ ಒಂದು. ಇವು ಗ್ರೀಕ್ ಸಾಹಿತ್ಯಕ್ಕೆ ಮಾತ್ರವಲ್ಲದೆ, ಇಡೀ ಯೂರೋಪಿನ ಹಾಗೂ ಜಗತ್ತಿನ ಸಾಹಿತ್ಯಕ್ಕೆ ಸ್ಫೂರ್ತಿ ನೀಡಿವೆ ಎನ್ನುವುದು ಗಮನಾರ್ಹ.

ಹಾಡುಕವಿಗಳ ಪಾಠ ಪರಂಪರೆಯಿಂದ ಮೈತಳೆದು ಬಂದ ಕೃತಿಗಳಲ್ಲಿ, ಹೋಮರನ ಕಾವ್ಯಗಳಂತೆ ಇನ್ನೂ ಹಲವು ಕೃತಿಗಳಿದ್ದವು. ಬೊಯೀಷಿಯನ್ 'Epic Cycle' ಎಂದು ಕರೆಯುವ ಪುರಾಣಕಾವ್ಯಚಕ್ರದಲ್ಲಿ ಹಲವು ಖಂಡಕಾವ್ಯಗಳು ಸೇರಿದ್ದವು.

ಇವುಗಳಲ್ಲಿ ಮುಖ್ಯವಾದುದು ಹೆಸಿಯೆಡ್ ಬರೆದ 'ಕೆಲಸಕಾರ್ಯಗಳು ಮತ್ತು ದಿನಗಳು' ('Works and Days'). ಹೋಮರನ ಕಾವ್ಯದಲ್ಲಿ ಶ್ರೀಮಂತರ ಜೀವನ ಪಡಿಮೂಡಿರುವಂತೆ ಹೆಸಿಯಡ್‌ನ ಕಾವ್ಯದಲ್ಲಿ ಶ್ರೀಸಾಮಾನ್ಯನ ನಿತ್ಯಜೀವನದ ಕಡು ವಾಸ್ತವ ಚಿತ್ರಣವಿದೆ. ಸಣ್ಣಪುಟ್ಟ ಕಥೆಗಳು, ನಿಸರ್ಗದ ರಮ್ಯವರ್ಣನೆಗಳು, ಸಾಮಾನ್ಯರ ಕಷ್ಟಕೋಟಲೆಯ ಚಿತ್ರಗಳು ಅದರಲ್ಲಿ ಬರುತ್ತವೆ. ಹೆಸಿಯೆಡ್ಡನದೇ ಎನ್ನಲಾದ ಇನ್ನೊಂದು ಕೃತಿ 'ಥಿಯೊಗನಿ'. ಇದರಲ್ಲಿ ನಿಸರ್ಗದ ಪ್ರತಿರೂಪಗಳಾದ ಗ್ರೀಕ್ ದೇವತೆಗಳ ಹುಟ್ಟು, ಬದುಕು, ವಂಶಾವಳಿ ಮೊದಲಾದುವುಗಳ ವರ್ಣನೆ ಇದೆ. ಊಳಿಗಮಾನ್ಯ ಪದ್ಧತಿ ನಶಿಸಿ ಮಧ್ಯಮವರ್ಗ ಅಸ್ತಿತ್ವಕ್ಕೆ ಬಂದಾಗ ಹೊಸ ಸಂದರ್ಭವುಂಟಾಯಿತು. ಸಮಷ್ಟಿಪ್ರಜ್ಞೆಗಿಂತ ವ್ಯಕ್ತಿನಿಷ್ಠ ಭಾವನೆಗಳ ಮೇಲೆ ಹೆಚ್ಚು ಒತ್ತು ಬಿತ್ತು. ಅದರಿಂದಾಗಿ ಭಾವಗೀತೆ ಆ ಕಾಲದ ಅಭಿವ್ಯಕ್ತಿಯ ಮಾಧ್ಯಮವಾಯಿತು. ಭಾವಗೀತೆಯ ಕವಿಗಳು ಕ್ರಿ.ಪೂ. ೭ ಮತ್ತು ೬ನೆಯ ಶತಮಾನಗಳಲ್ಲಿ ವೈವಿಧ್ಯಮಯ ಕಾವ್ಯರೂಪಗಳನ್ನು ಹೊಸದಾಗಿ ಸೃಷ್ಟಿಸಿದರು; ಹಳೆಯವನ್ನು ಪರಿಪಕ್ವಗೊಳಿಸಿದರು. ಆದರೆ ಈ ಕವಿಗಳು ಒಂದಲ್ಲ ಒಂದು ರೀತಿ ಹೋಮರನ ಋಣವನ್ನು ಹೊತ್ತವರೇ. ಹೋಮರ್ ಮತ್ತು ಹೆಸಿಯೆಡ್ ಆಗಿನ ಸಮುದಾಯದ ಪ್ರವೃತ್ತಿಗಳನ್ನು ಪ್ರತಿಧ್ವನಿಸಿದರೆ, ಹೊಸ ಕವಿಗಳು ಸ್ವಂತಿಕೆಯಿಂದ ಕಾವ್ಯರಚನೆ ಮಾಡಿದರು. ಈ ಹೊಸ ಕಾವ್ಯರೂಪಗಳನ್ನು ಛಂದಸ್ಸಿಗನುಸಾರವಾಗಿ ಹೀಗೆ ವಿಭಜಿಸಬಹುದು :

(೧) ಬಹುತೇಕ ಹೋಮರನ ಡ್ಯಾಕ್ಟೆಲಿಕ್ ಹೆಕ್ಸಾಮೀಟರನ್ನು ಹೋಲುವ ಎಲಿಜಿಯಕ್ ಛಂದಸ್ಸಿನ ದ್ವಿಪದಿಯಲ್ಲಿ ಬರೆದವು. ಇವುಗಳಲ್ಲಿ ಕೊಳಲು ಮುಂತಾದ ಹಿನ್ನೆಲೆ ವಾದಗಳೊಂದಿಗೆ ಹಾಡುವ ಕುಡಿತದ ಹಾಡುಗಳು, ಪ್ರಣಯ ಕವನಗಳು, ಪ್ರಶಸ್ತಿಗೀತೆಗಳು ಮತ್ತು ಚರಮವಾಕ್ಯಗಳು ಸೇರಿವೆ. (೨) ದಿನಂಪ್ರತಿಯ ಆಡುಮಾತಿನ ಗತಿಲಯಗಳಿಗೆ ಸ್ವಲ್ಪ ಹತ್ತಿರವಿರುವ ಅಯಾಂಬಿಕ್ ಮತ್ತು ಟ್ರೋಕೇಯಿಕ್ ಛಂದಸ್ಸಿನವು. ಇದರಲ್ಲಿ ಪ್ರಚಾರ ಗೀತೆಗಳೂ ವೈಯುಕ್ತಿಕ ವಿಡಂಬನೆಗಳೂ ಉಂಟು. (೩) ಲಿರಿಕ್ ಅಥವಾ ಭಾವಪ್ರಧಾನವಾದ, ಲೈರ್ ಮುಂತಾದ ವಾದ್ಯಗಳ ಹಿನ್ನೆಲೆಯಲ್ಲಿ ಒಬ್ಬರೇ ಹಾಡುವ ಕುಡಿತದ ಹಾಡುಗಳು, ಮೇಳಗೀತಗಳು. (೪) ಸುಮಾರು ೫೦ ಜನ ಗಾಯಕರು ಜೊತೆಗೂಡಿ ಹಾಡುವ ಮೇಳಗೀತಗಳು, ಪ್ರಶಸ್ತಿಗೀತಗಳು ಮತ್ತು ಶೋಕಗೀತಗಳು.

ಈ ಎಲ್ಲ ಛಂದಸ್ಸುಗಳನ್ನೂ ಆಮೇಲಿನ ಗ್ರೀಕ್ ನಾಟಕಕಾರರು ಮೇಳಗೀತಗಳ ರಚನೆಯಲ್ಲಿ ಬಳಸಿಕೊಂಡರು. ಸ್ಪಾರ್ಟ ಪಟ್ಟಣದ, ಯುದ್ಧಕವನಗಳನ್ನು ಬರೆದ ಟೈರೆಷಿಯಸ್ (Tyrtaeus) (ಕ್ರಿ.ಪೂ. ೬೫೦), ಎಫೆಸಸ್ ನಗರದ ಕಾಲಿನಸ್ (ಕ್ರಿ.ಪೂ. ೬೬೦), ಮೋಸಗಾರ್ತಿ ಹೆಣ್ಣನ್ನು ಗೇಲಿಮಾಡಿದ ವಿಡಂಬನಕಾರ ಮತ್ತು ಪ್ರಾಣಿಕಥೆಗಳ ಲೇಖಕ ಆರ್ಕಿಲೋಕಸ್ (Archilochus), ಲೆಸ್‌ಬಾಸ್ ದ್ವೀಪದ ಆಲ್‌ಕೇಯಸ್ (Alcaeus), ಅನಕ್ರಿಯನ್ (Anacreon) ಮತ್ತು ಕವಯತ್ರಿ

ಸ್ಯಾಫೊ (Sappho)—ಇವರು ಆ ಕಾಲದ ಪ್ರಮುಖ ಕವಿಗಳಾಗಿದ್ದರು. ಸ್ಯಾಫೊ ಹೋಮರನಂಥ ಮಹಾಕವಿಗಳ ಶೈಲಿಗೆ ಮಾರುಹೋಗದೆ ಸ್ವಂತಿಕೆಯಿಂದ ಆಡು ಮಾತನ್ನು ಕಾವ್ಯಶೈಲಿಗೆ ಅಳವಡಿಸಿಕೊಂಡು ಸ್ತ್ರೀಸಹಜವಾದ ಸ್ನೇಹ, ಪ್ರೇಮ, ಮಾರ್ದವ, ಕೋಪ ವಿಷಾದಗಳನ್ನು ತುಂಬಾ ನವಿರಾಗಿ ಅಭಿವ್ಯಕ್ತಿಸಿದಳು. ಸ್ಯಾಫೊ ತನ್ನ ಸಾಹಿತ್ಯಗೋಷ್ಠಿಯ ಗೆಳತಿಯರಿಗೆ ಬರೆದ, ಈ ಕಾಲಕ್ಕೆ ಸ್ವಲ್ಪ ವಿಕೃತ ಎನ್ನಿಸ ಬಹುದಾದ, ಪ್ರೇಮಕವನಗಳಲ್ಲಿ ಅವಳ ಭಾವಸೂಕ್ಷ್ಮತೆಯನ್ನೂ ಪದೌಚಿತ್ಯವನ್ನೂ ಕಾಣಬಹುದು.

ಮೇಳಗೀತವನ್ನು ಹೆಚ್ಚಾಗಿ ಬಳಸಿಕೊಂಡವರು ಡೋರಿಯ ನಗರದ ಕವಿಗಳು. ಇವು ಗಳಲ್ಲಿ ವೈಯಕ್ತಿಕ ಭಾವನೆಗಿಂತ ಮಿಗಿಲಾಗಿ ಸಮಷ್ಟಿಪ್ರಜ್ಞೆಯ ಅಭಿವ್ಯಕ್ತಿಗೆ ಹೆಚ್ಚು ಪ್ರಾಮುಖ್ಯ. ಮೇಳಗಾನದ ವಸ್ತು ನೃತ್ಯ, ದೇವತಾಪ್ರಾರ್ಥನೆ, ಮದುವೆಹಾಡು ಮುಂತಾದ ಮಂಗಳಕಾರ್ಯಗಳಿಗೆ ಸಂಬಂಧಿಸಿತ್ತು. ಕ್ರಮೇಣ ಇದನ್ನು ಲೌಕಿಕ ಸಂದರ್ಭಗಳಲ್ಲೂ ಬಳಸಿದರು. ಕ್ರೀಡಾಸ್ಪರ್ಧೆಗಳಲ್ಲಿ ಗೆದ್ದ ವೀರರನ್ನು ಹೊಗಳುವ ಸಲು ವಾಗಿ ಇದನ್ನು ಬಳಸಿದರು. ಈ ಶೈಲಿಯಲ್ಲಿ ಕಥನಕವನಗಳನ್ನು ಬರೆದು ಮೇಳಗೀತದ ವ್ಯಾಪ್ತಿಯನ್ನು ಹೆಚ್ಚಿಸಿದ ಪ್ರಯೋಗಶೀಲ ಕವಿ ಸ್ಟೆಸಿಕೋರಸ್ (Stesichorus) (ಕ್ರಿ.ಪೂ. ೬೩೦). ಮೇಳಗೀತದ ಪ್ರಕಾರವನ್ನು ಅತ್ಯಂತ ಪರಿಣಾಮಕಾರಿಯಾಗಿ ಬಳಸಿಕೊಂಡ ಶ್ರೇಷ್ಠ ಕವಿಗಳೆಂದರೆ ಪಿಂಡಾರ್ (ಕ್ರಿ.ಪೂ. ೫೨೨), ಸಿಮೊನೈಡಿಸ್ (Simonides) (ಕ್ರಿ.ಪೂ. ೫೫೬) ಮತ್ತು ಬ್ಯಾಕಿಲೈಡಿಸ್ (Bacchylides) (ಕ್ರಿ.ಪೂ. ೫೦೫). ಪುಣ್ಯವಶಾತ್ ಪಿಂಡಾರ್ ಕವಿಯ ಹಲವು ಪ್ರಗಾಥಗಳು ಸಿಕ್ಕಿರುವುದರಿಂದ ಅವನ ಕಾವ್ಯಸಾಧನೆಯನ್ನು ಸರಿಯಾಗಿ ವಿವೇಚಿಸುವುದು ಸಾಧ್ಯವಾಗಿದೆ. ಬಾಲ್ಯದಿಂದ ಸುಸಂಸ್ಕೃತ ವಾತಾವರಣದಲ್ಲಿ ಬೆಳೆದ ಪಿಂಡಾರ್‌ಗೆ ಈಸ್ಕಿಲಿಸ್‌ನಂಥ ಮಹಾಕವಿಯ ಸತ್ಸಂಗ ದೊರೆತದ್ದು ಪುಣ್ಯವಿಶೇಷ. ಸಾಮಾನ್ಯಕವಿಯ ಕೈಯಲ್ಲಿ ಸಾಂಪ್ರದಾಯಿಕ ರಚನೆಗಳಾಗಿಬಿಡುತ್ತಿದ್ದ ಪ್ರಶಸ್ತಿಪ್ರಗಾಥಗಳು ಪಿಂಡಾರ್‌ನ ಕೈಯಲ್ಲಿ ಭವ್ಯಶೈಲಿಯ ಉತ್ಕೃಷ್ಟಕವನಗಳಾಗಿವೆ. ವೀರನಾದ ವ್ಯಕ್ತಿಯೊಬ್ಬನ ಚಿತ್ರವನ್ನು ಹೆಣೆಯುವಾಗ ಮಧ್ಯೆ ಪುರಾಣೇತಿಹಾಸಗಳಿಂದ ಆಯ್ದ ದೇವದಾನವರ ಹೋಲಿಕೆಯ ಚಿತ್ರಗಳನ್ನು ಪೋಣಿಸಿ, ಧಾರ್ಮಿಕ ಚಿಂತನೆಗಳ ಬಣ್ಣ ಹಚ್ಚಿ ರಚಿಸಿರುವ ಪಿಂಡಾರ್‌ನ ಪ್ರಗಾಥಗಳು ಜಗತ್ಪ್ರಸಿದ್ಧವಾಗಿವೆ. ಸಂಪ್ರದಾಯಶೀಲನಾದ ಕವಿಯು ದೇವತೆಗಳನ್ನು ಕುರಿತು ಬರೆಯುವಾಗ ವಿಶೇಷ ಭಯಭಕ್ತಿ ಸೂಚಿಸುತ್ತಾನೆ. ಅತ್ಯುತ್ಸಾಹದ ಭರದಲ್ಲಿ ಕೆಲವೊಮ್ಮೆ ಸಂಯಮ ತಪ್ಪಿದ ರೂಪಕಗಳನ್ನು ಬಳಸುವುದೂ ಉಂಟು. ಅಲ್ಲಲ್ಲಿ ಇವನ ವಾಕ್ಯವಿನ್ಯಾಸಗಳು ಅಸ್ಪಷ್ಟತೆ ಕ್ಲಿಷ್ಟತೆಗಳಿಂದ ಕೂಡಿ ಓದುಗರನ್ನು ಪ್ರಯಾಸಗೊಳಿಸು ತ್ತವೆ. ಇಷ್ಟಾದರೂ ಅವನದು ಬಹುವ್ಯಾಪಕ ಧ್ವನಿಶಕ್ತಿಯುಳ್ಳ ಪದಸಂಪತ್ತು ಹಾಗೂ ಪ್ರತಿಮಾಪೂರ್ಣ ಕಾವ್ಯಶೈಲಿ. ಅವನು ಕೊಡುವ ಒಂದೊಂದು ಶಬ್ದಚಿತ್ರವೂ (ಪಿಂಡಾರ್ ಕವಿ ಪಂದ್ಯದ ಕುದುರೆಗಳನ್ನು ವರ್ಣಿಸುತ್ತ, 'ಬಿರುಗಾಳಿಯ ನಡಗೆಯುಳ್ಳ'

ಎನ್ನುವುದನ್ನೂ ಭಯಂಕರಯುದ್ಧವನ್ನು ವರ್ಣಿಸುವಲ್ಲಿ, 'ನೆತ್ತರಿನ ಆಲಿಕಲ್ಲು ಮಳೆ' ಎನ್ನುವುದನ್ನೂ ನೋಡಬಹುದು.) ಕಣ್ಣಿಗೆ ಕಟ್ಟುವಂತಿದ್ದು ಅದ್ಭುತ ಪರಿಣಾಮ ಸಾಧಿಸುತ್ತದೆ.

ಐದನೆಯ ಶತಮಾನದ ಹೊತ್ತಿಗೆ ಮಹಾಕಾವ್ಯ ಮತ್ತು ಭಾವಗೀತೆಗಳ ಕಾಲ ಮುಗಿದು ಮೇಳಗೀತವು ರುದ್ರನಾಟಕದ ಅಂಶವಾಗಿ ಬೆರೆತು ಕಣ್ಮರೆಯಾಯಿತು.

ನಾಟಕಯುಗ: ಕ್ರಿ.ಪೂ. ಐದನೆಯ ಶತಮಾನಕ್ಕೆ ಹಿಂದೆ ಗ್ರೀಸಿನ ಅಯೋನಿಯ, ಎಯೋಲಿಯ, ಡೋರಿಯ ಪ್ರದೇಶಗಳಲ್ಲಿ ಮಹಾಕಾವ್ಯ, ಭಾವಗೀತ ಮೇಳಗೀತಗಳು ಹುಟ್ಟಿ ಬೆಳೆದು ನಶಿಸಿದವಷ್ಟೆ. ಆಮೇಲೆ ತನ್ನ ರಾಜಕೀಯ ಭೌಗೋಳಿಕ ಸ್ಥಾನಗಳಿಂದಾಗಿ ಅಥೆನ್ಸ್ ನಗರವು ಸಾಹಿತ್ಯ ಚಟುವಟಿಕೆಯ ಕೇಂದ್ರವಾಗಿ ಜಗತ್ತಿನ ಕಣ್ಣು ಸೆಳೆಯಿತು. ಕ್ರಿ.ಪೂ. ೫ ಮತ್ತು ೪ನೆಯ ಶತಮಾನಗಳಲ್ಲಿ ನಾಟಕವು ಸಾಹಿತ್ಯದ ಪ್ರಮುಖ ಸ್ವರೂಪವಾಯಿತು.

ಗ್ರೀಕ್ ನಾಟಕದ ಉಗಮ ಹಾಗೂ ವಿಕಾಸದ ವಿಷಯವಾಗಿ ಮೂರು ನಾಲ್ಕು ಬೇರೆ ಬೇರೆ ಸಿದ್ಧಾಂತಗಳಿವೆ. ಆದರೆ ಯಾವೊಂದು ಸಿದ್ಧಾಂತದ ಬಗೆಗೂ ಸಂಪೂರ್ಣವಾದ ಒಮ್ಮತವಿಲ್ಲ. ಗ್ರೀಕ್ ನಾಟಕವು ವೀರರ, ಯೋಧರ ಸಮಾಧಿಗಳ ಬಳಿ ನಡೆಯುತ್ತಿದ್ದ ಪೂಜೆಗಳಿಂದ ಅಥವಾ ಡಯೊನಿಸಸ್ ದೇವತೆಯ ಆವಾಹನೆಯ ಕಾಲದಲ್ಲಿ ನಡಸುತ್ತಿದ್ದ ಮೇಳಗಾನ ಮತ್ತು ನೃತ್ಯಗಳಿಂದ ಅಥವಾ ಉತ್ತರಗ್ರೀಸಿನ ಜನಪದ ನೃತ್ಯಾಭಿನಯದಿಂದ ಹುಟ್ಟಿ ಬೆಳೆಯಿತೆಂಬುದು ವಿದ್ವಾಂಸರ ಊಹೆಗಳು. ಮೆಥಿಮ್ನಾ ಎಂಬ ಊರಿನ ಅರಿಯನ್ ಎಂಬ ಕವಿ ನೃತ್ಯಗೀತೆ (ಡಿಥಿರ್ಯಾಂಬ್)ಯನ್ನು ಸೃಷ್ಟಿಸಿದನೆಂದು ಹಿರೊಡೊಟಸ್ ಹೇಳುತ್ತಾನಾದರೂ ಅದು ಸರಿಯಲ್ಲ. ಅರಿಯನ್ ನೃತ್ಯಗೀತೆಗೆ ಸಾಹಿತ್ಯರೂಪವನ್ನು ಕೊಟ್ಟು ರಂಗದ ಮೇಲೆ ನೃತ್ಯಮೇಳವನ್ನು ವೃತ್ತಾಕಾರದಲ್ಲಿ ವಿನ್ಯಾಸಗೊಳಿಸಿದ. ೬ನೆಯ ಶತಮಾನದ ವೇಳೆಗೆ ನೃತ್ಯಮೇಳದ ಜತೆಗೆ ಒಬ್ಬ ನಟನನ್ನು ಅಥವಾ ಸಂವಾದಿಯನ್ನು ತಂದು ನೃತ್ಯಕ್ಕೆ ನಾಟಕದ ಸ್ವರೂಪವನ್ನು ಕೊಟ್ಟವನು ಥೆಸ್ಪಿಸ್ (Thespis). ಇವನನ್ನು ಗ್ರೀಕ್ ರುದ್ರನಾಟಕದ ಕಾರಣಪುರುಷನೆನ್ನಬಹುದು. ಪಿಸಿಸ್ಟ್ರಾಟಸ್‌ನ ಕಾಲದಲ್ಲಿ ನಡೆದ ಮೊತ್ತಮೊದಲ ಡಯೊನಿಸಸ್ ಹಬ್ಬದಲ್ಲಿ ಈತ ನಾಟಕಪ್ರದರ್ಶನ ನಡಸಿ ಪ್ರಶಸ್ತಿ ಗಳಿಸಿದ ಎನ್ನುತ್ತಾರೆ. ಇವನ ಬಗ್ಗೆ ಅರಿಸ್ಟೊಫನೀಸನ ನಾಟಕದಲ್ಲಿ ಪ್ರಸ್ತಾಪವಿದೆಯಾದರೂ ಹೆಚ್ಚಿನ ವಿವರಗಳಾಗಲಿ ಅವನ ಯಾವುದೇ ಕೃತಿಯಾಗಲಿ ಸಿಕ್ಕಿಲ್ಲ. ಈಗ ನಮಗೆ ಲಭ್ಯವಾಗಿರುವ ಗ್ರೀಕ್ ರುದ್ರನಾಟಕಗಳೆಂದರೆ ಈಸ್ಕಿಲಸ್, ಸಾಫೊಕ್ಲಿಸ್ ಮತ್ತು ಯೂರಿಪಿಡಿಸರ ಕೆಲವು ಕೃತಿಗಳು ಮಾತ್ರ.

ಗ್ರೀಕ್ ರುದ್ರನಾಟಕಕಾರರು ಉಪಯೋಗಿಸುತ್ತಿದ್ದ ಆದಿಕಾಲದ ಆಟಿಕ್ ರಂಗಭೂಮಿಯ ಸ್ವರೂಪವನ್ನು ಕುರಿತು ಹೆಚ್ಚು ಮಾಹಿತಿ ದೊರೆತಿಲ್ಲ. ಅಥೆನ್ಸ್ ಮೊದಲಾದ ಕಡೆ ಸಿಕ್ಕಿರುವ ರಂಗಸ್ಥಳದ ಅವಶೇಷಗಳು ಬಹುಕಾಲದ ನಂತರ ಪುನರ್ರಚಿತವಾದ,

ದುರಸ್ತಿಯಾದ ಕಟ್ಟಡಗಳಿಗೆ ಸಂಬಂಧಿಸಿದವು. ಅವುಗಳಿಂದ ಕೆಲವು ಅಂಶಗಳು ಮಾತ್ರ ಸ್ಪಷ್ಟವಾಗುತ್ತವೆ. ಗ್ರೀಕ್ ರಂಗಭೂಮಿಯ ಮುಖ್ಯಭಾಗವೇ ವರ್ತುಲಾಕಾರದ ನೃತ್ಯ ರಂಗ. ಇದರ ಮಧ್ಯಭಾಗದಲ್ಲಿ ಬಲಿಪೀಠ. ಪ್ರೇಕ್ಷಕರು ನೃತ್ಯರಂಗದ ಸುತ್ತ ಹಾಗೂ ಅದರ ಮೇಲೆ ಸಾಲುಸಾಲಾಗಿ ಕುಳಿತುಕೊಳ್ಳುತ್ತಿದ್ದರು. ಪ್ರೇಕ್ಷಕರಿಗಾಗಿ ಮೊದಲು ಮರದ ಅಟ್ಟಣೆಗಳಿದ್ದವೆಂದೂ ಆ ತರುವಾಯ ಅಥೆನ್ಸಿನಲ್ಲಿ ಕುದುರೆಯ ಲಾಳದಾ ಕಾರದ ಕಲ್ಲಿನ ಸೋಪಾನಪೀಠಗಳನ್ನು ಕಟ್ಟಿದರೆಂದೂ ಹೇಳುತ್ತಾರೆ. ನೃತ್ಯರಂಗದ ಮೇಲೆ ಮೇಳದವರು ಆಗಮಿಸಲು ಎರಡು ಕಡೆಯೂ ಉದ್ದನೆಯ ಹಜಾರಗಳು ಇದ್ದವು. ಗ್ರೀಕ್ ರುದ್ರನಾಟಕದ ರತ್ನತ್ರಯರು ತಮ್ಮ ಬಹುತೇಕ ನಾಟಕಕೃತಿಗಳ ಪ್ರದರ್ಶನ ವನ್ನು ನಡಸಿದುದು, ನೋಡಿದುದು ಇಂಥ ರಂಗದ ಮೇಲೆಯೇ.

ಪುರಾತನ ಗ್ರೀಸಿನಲ್ಲಿ ಗಂಭೀರನಾಟಕದ ಪ್ರದರ್ಶನ ಕೇವಲ ಮನೋರಂಜನೆಯಾಗಿ ರದೆ ಇಡೀ ಸಮಾಜಸಮುದಾಯದ ಗಂಭೀರ ಪ್ರವೃತ್ತಿಯ ಚಟುವಟಿಕೆಯಾಗಿತ್ತು. ರಂಗದ ಮೇಲೆ ದೇವತೆಗಳ ವಿಗ್ರಹಗಳನ್ನಿಡುತ್ತಿದ್ದುದರಿಂದ, ನಾಟಕ ಒಂದು ಉಪಾಸನೆ ಎಂಬ ಭಾವನೆ ಇದ್ದುದರಿಂದ, ಕೊಲೆ ರಕ್ತಪಾತ ಮೊದಲಾದುವನ್ನು ರಂಗದ ಮೇಲೆ ಪ್ರದರ್ಶಿಸಬಾರದೆಂಬ ನಿಯಮವನ್ನು ಕಠಿಣವಾಗಿ ಆಚರಿಸಲಾಗುತ್ತಿತ್ತು. ನಟರು ದಪ್ಪ ಅಟ್ಟೆಯ ಪಾದರಕ್ಷೆಗಳನ್ನು ಧರಿಸಿ, ಮೆತ್ತೆತುಂಬಿದ ವೇಷಭೂಷಣಗಳನ್ನು ತೊಟ್ಟು, ಮುಖವಾಡ ಹಾಕಿಕೊಳ್ಳುತ್ತಿದ್ದರು. ಆದ್ದರಿಂದ ಸೂಕ್ಷ್ಮವಾದ ಭಾವನೆ ಗಳನ್ನು ಮುಖಭಾವದಲ್ಲಿ ತೋರಿಸುವುದು ಸಾಧ್ಯವಿರಲಿಲ್ಲ. ನಾಟಕವು ರಸಪ್ರತಿಪಾದನೆ ಗಾಗಿ ಭಾಷೆ ಮತ್ತು ನಾಟ್ಯಾಭಿನಯಗಳನ್ನೇ ಅವಲಂಬಿಸಬೇಕಾಗಿತ್ತು.

**ಈಸ್ಕಿಲಸ್ (ಕ್ರಿ. ಪೂ. ಸು. ೫೨೫-೪೫೬) :** ಈಸ್ಕಿಲಸ್ ಗ್ರೀಕ್ ರುದ್ರನಾಟಕ ರತ್ನತ್ರಯರಲ್ಲಿ ಮೊದಲಿಗ. ಸತ್ಕುಲದಲ್ಲಿ ಹುಟ್ಟಿದ ಈಸ್ಕಿಲಸ್ ಕೇವಲ ಲೇಖನಿ ಹಿಡಿದು ಕುಳಿತ ಬುದ್ಧಿಜೀವಿಯಾಗಿರಲಿಲ್ಲವೆಂದೂ ಅವನು ಮ್ಯಾರಥಾನ್ ಮೊದಲಾದ ಯುದ್ಧ ಗಳಲ್ಲಿ ಹೋರಾಡಿ ಕೀರ್ತಿಪಡೆದನೆಂದೂ ಹೇಳುತ್ತಾರೆ. ೧೭ನೆಯ ಒಲಿಂಪಿಕ್ ಕ್ರೀಡೆಗಳ (ಕ್ರಿ. ಪೂ. ೪೯೯-೪೯೬) ನಾಟಕಸ್ಪರ್ಧೆಯಲ್ಲಿ ಭಾಗವಹಿಸಿದ; ೪೮೪ರಲ್ಲಿ ಪ್ರಥಮ ಬಹುಮಾನ ಗಳಿಸಿದ. ಆಮೇಲೆ ಅತ್ಯಂತ ಜನಪ್ರಿಯ ನಾಟಕಕಾರನಾಗಿ ಸುಮಾರು ೧೭ ಬಾರಿ ಪ್ರಥಮ ಬಹುಮಾನ ಪಡೆದ. ಇವನ ಕೊನೆಯ ದಿನಗಳನ್ನು ಕುರಿತು ನಿಶ್ಚಿತವಾದ ಅಂಶಗಳು ದೊರೆತಿಲ್ಲ. ಇವನು ಬರೆದ ೯೦ ನಾಟಕಗಳಲ್ಲಿ ಈಗ ಉಳಿದಿರು ವುದು ಕೇವಲ ೭. ಆದರೆ ಅವು ಆರಿಸಿ ಪರಿಷ್ಕರಿಸಿ ಇಟ್ಟಂತೆ ತೋರುವ ಅನ್ಯಾದೃಶ ಕಲಾಕೃತಿಗಳು. ಅವುಗಳು: 'ಶರಣಾಗತ ಸ್ತ್ರೀಯರು', 'ಪಾರಸಿಕರು', 'ಬದ್ಧ ಪ್ರಮಿಥಿಯಸ್', 'ಥೀಬ್ಸ್‌ನ ವಿರುದ್ಧ ಏಳು ಜನರು', ಮತ್ತು ಒರೆಸ್ಟಿಯಾ ನಾಟಕ ಚಕ್ರದ ಮೂರು ನಾಟಕಗಳಾದ 'ಅಗಮೆಮ್ನಾನ್', 'ತರ್ಪಣವಾಹಕರು', 'ಉಗ್ರಕನ್ನಿಕೆ ಯರು'. ಈಸ್ಕಿಲಸ್ ರುದ್ರನಾಟಕ ಪ್ರಕಾರಕ್ಕೆ ಗಾಂಭೀರ್ಯವನ್ನೂ ಚೆಲುವನ್ನೂ ತಂದು ಕೊಟ್ಟ. ನಾಟಕದಲ್ಲಿನ ನಟರ ಸಂಖ್ಯೆಯನ್ನು ಎರಡಕ್ಕೇರಿಸಿ ಮೇಳದವರ ಸಂಖ್ಯೆಯನ್ನು

ಮಿತಿಗೊಳಿಸಿದ. ಸಂಭಾಷಣೆಗೆ ಹೆಚ್ಚು ಪ್ರಾಧಾನ್ಯವಿತ್ತು ನಾಟಕೀಯತೆಯನ್ನು ಚುರುಕುಗೊಳಿಸಿದ. ಪುರಾಣ ಐತಿಹ್ಯಗಳಿಂದ ಆರಿಸಿಕೊಂಡ ಮಹಾನ್ ಪಾತ್ರಗಳನ್ನು ಚಿತ್ರಿಸುವಾಗ ಅವುಗಳ ವಿನ್ಯಾಸಕ್ಕೆ ತಕ್ಕ ವ್ಯಾಪಕವಾದ ಕಾರ್ಯರಂಗವನ್ನು ಒದಗಿಸಿದ. ಒರೆಸ್ಟಿಯಾ ನಾಟಕಚಕ್ರದಲ್ಲಿ ಪಾತ್ರಗಳು ಮತ್ತು ಕಥಾವಸ್ತುವಿನ ವಿಭಿನ್ನ ಮುಖಗಳು ಒಂದು ನಾಟಕದಿಂದ ಇನ್ನೊಂದಕ್ಕೆ ಹೇಗೆ ವಿಕಾಸವಾಗುತ್ತ ಹೋಗುತ್ತವೆಂದು ಚಿತ್ರಿಸಿದ. ಕಣ್ಣು ಕೋರೈಸುವಂಥ ದೃಶ್ಯಾವಳಿಗಳನ್ನೂ ಭವ್ಯ ಸಂಗೀತವನ್ನೂ ಉನ್ನತ ಕಾವ್ಯಶೈಲಿಯನ್ನೂ ಬೇಕಾದ ಹಾಗೆ ಬಳಸಿದ. ಆದರೆ ಅವನು ಕ್ಲಿಷ್ಟವಾದ ಶೈಲಿಯನ್ನು ಬಳಸಿದುದರಿಂದ ದೃಶ್ಯಗಳ ನಡುವೆ ಒಮ್ಮುಖವಾದ ಸಂಬಂಧವಿದ್ದಂತೆ ತೋರುವುದಿಲ್ಲ. ಒರೆಸ್ಟಿಯಾ ನಾಟಕಚಕ್ರವನ್ನು ಬಿಟ್ಟರೆ ಉಳಿದವುಗಳಲ್ಲಿ ಭಾವಗೀತೆಯ ಅಂಶವೇ ಪ್ರಾಧಾನ್ಯವಾಗಿ ಹೆಚ್ಚಾಗಿರುವಂತೆ ತೋರುತ್ತದೆ. ಅವನ ತಾತ್ತ್ವಿಕದರ್ಶನವನ್ನು ಕುರಿತು ಹೇಳುವುದಾದರೆ, ಈಸ್ಕಿಲಸ್ ಉದಾತ್ತವೂ ಗಹನಗಭೀರವೂ ಆದ ಮನುಷ್ಯನ ಬಾಳು ಧರ್ಮತತ್ತ್ವಗಳ ನೀತಿನೇತಿಗಳ ನೆಲೆಗಟ್ಟಿನ ಮೇಲೆ ನಿಲ್ಲಬೇಕೆಂಬುದು. ಈ ವಿಚಾರಸರಣಿಯನ್ನು ಅವನು 'ಒರೆಸ್ಟಿಯಾ'ದಲ್ಲಿ ಚಿತ್ರಿಸುತ್ತಾನೆ. ಮನುಷ್ಯನ ಬದುಕು ಸರ್ವಸ್ವತಂತ್ರವಲ್ಲ. ವಿಶ್ವದ ಗಹನ ಶಕ್ತಿಗಳು ನಿಯತಿಯಂತೆ ಸದಾ ಅವನ ಹಿಂಬದಿಯಲ್ಲಿ ನಿಂತು ತಮ್ಮ ಪಾಡಿಗೆ ತಾವು ಕೆಲಸ ಮಾಡುತ್ತಿರುತ್ತವೆ. ಹಾಗೆಂದ ಮಾತ್ರಕ್ಕೆ ಮನುಷ್ಯ ದೇವತೆಗಳ ಕೈಯೊಳಗಿನ ಸೂತ್ರದ ಗೊಂಬೆಯಲ್ಲ. ಅವನ ಅಂತರಂಗದಲ್ಲಿ ರಾಗದ್ವೇಷಗಳ ಜ್ವಾಲೆ ಉರಿಯುತ್ತಿದ್ದು, ಒಲವು ನಲಿವುಗಳ ಕಾರಂಜಿ ಪುಟಿಯುತ್ತಿರುತ್ತದೆ. ಎಂಥ ದುರ್ಭರ ಸನ್ನಿವೇಶಗಳಲ್ಲೂ ಅವನಿಗೆ ಆಯ್ಕೆಯ ಸ್ವಾತಂತ್ರ್ಯವಿರುವುದರಿಂದ ತನ್ನ ಕೃತ್ಯಗಳಿಗೆ ತಾನೇ ಹೊಣೆಯಾಗಬೇಕಾಗುತ್ತದೆ. ದೇವತೆಗಳು ಸಹ ತನ್ನನ್ನು ಮೀರಿದ ವಿಧಿಯ ಕಟ್ಟುಪಾಡಿಗೆ ಒಳಗಾಗಬೇಕು. ಹೀಗೆ ಈ ಬದುಕು ದೇವಮಾನವರ ಹಕ್ಕುಬಾಧ್ಯತೆಗಳ ಸಮನ್ವಯದಿಂದ ಸಾಗಬೇಕು ಎನ್ನುವ ವಿಚಾರ ಪರಂಪರೆಯನ್ನು ಅವನು ತನ್ನ ನಾಟಕಗಳಲ್ಲಿ ಮೂಡಿಸಿದ್ದಾನೆ.

ಸಾಫೊಕ್ಲಿಸ್ (ಕ್ರಿ.ಪೂ. ಸು. ೪೯೫–೪೦೬) : ಈಸ್ಕಿಲಸ್‌ನಂತೆ ಇವನೂ ಸಂಪ್ರದಾಯ ಶರಣ, ಧರ್ಮಶ್ರದ್ಧಾಳು. ಇವನು ನಟರ ಸಂಖ್ಯೆಯನ್ನು ಎರಡರಿಂದ ಮೂರಕ್ಕೆ ಏರಿಸಿ, ದೃಶ್ಯಸಂಯೋಜನೆಯಲ್ಲಿ ಬದಲಾವಣೆಗಳನ್ನು ಮಾಡಿದ. ಮೇಳಗೀತ ಮತ್ತು ಸಂಭಾಷಣೆಗಳ ವಿನ್ಯಾಸದಲ್ಲಿ ಸಮತೂಕ ಸಾಧಿಸಿದ. ಪಾತ್ರಗಳು, ಘಟನೆಗಳು ಹೆಚ್ಚು ವಾಸ್ತವವೂ ಸಂಭವನಿಯವೂ ಆಗಿ ಕಾಣುವಂತೆ ಮಾಡಿದ. ಸಾಫೊಕ್ಲಿಸ್ ದೇವಮಾನವ ಸಂಬಂಧದ ಸಂದರ್ಭದಲ್ಲಿ ದೇವತೆಗಳ ನಿಲವನ್ನೂ ನ್ಯಾಯನಿಷ್ಠೆಯನ್ನೂ ಒಪ್ಪಿಕೊಂಡವನು. ಆದರೆ ಹೋಮರ್‌ನಂತೆ ಅವನದೂ ಮಾನವೀಯ ದೃಷ್ಟಿ. ಕ್ರಿ.ಪೂ. ೫ನೆಯ ಶತಮಾನದ ಅಥೆನ್ಸಿನ ಸಾಂಸ್ಕೃತಿಕ ಜೀವನದ ಸಾರಸಮ್ಮಿಳನವನ್ನು ಇವನ ವ್ಯಕ್ತಿತ್ವದಲ್ಲಿ ನೋಡಬಹುದು. ಬದುಕಿನ ಭೋಗವಿಲಾಸಗಳನ್ನು ತ್ಯಜಿಸಲಿಲ್ಲವಾದರೂ ಅವನು ದುರ್ಬಲನಾಗಿರಲಿಲ್ಲ. ಮನುಷ್ಯಜೀವನದ ದುರಂತಮುಖವನ್ನು ಚೆನ್ನಾಗಿ

ಅರಿತಿದ್ದ ಮಧುರಸ್ವಭಾವದವನು. ಜತೆಯವರೊಂದಿಗೆ ಕೂಡಿ ಬಾಳಬೇಕೆನ್ನುವ ಸ್ನೇಹಪರ. ಹಾಗಾಗಿ ತನ್ನ ಸಮಕಾಲೀನರೆಲ್ಲರ ಗೌರವಾದರಗಳಿಗೆ ಪಾತ್ರನಾಗಿದ್ದ. ಅವನ ೧೨೫ ನಾಟಕಗಳಲ್ಲಿ ಏಳು ಮಾತ್ರ ಸಿಕ್ಕಿವೆ. ಅವು 'ಏಜಾಕ್ಸ್', 'ಅಂತಿಗೊನೆ', 'ಟ್ರೇಕಿಯನ್ ಸ್ತ್ರೀಯರು', 'ದೊರೆ ಈಡಿಪಸ್', 'ಎಲೆಕ್ಟ್ರಾ' 'ಫಿಲೊಕ್ಟೆಟೆಸ್' ಮತ್ತು 'ಕೊಲೊನಸಿನಲ್ಲಿ ಈಡಿಪಸ್.' ಸಾಫೊಕ್ಲಿಸನ ನಾಟಕಗಳು ಕಲಾಪರಿಪೂರ್ಣತೆಗೆ ಹೆಸರಾದವು. ಅವನು ಮೇಳಪ್ರಗಾಥಗಳ ವ್ಯಾಪ್ತಿಯನ್ನು ಮಿತಗೊಳಿಸಿ ಸಂಭಾಷಣೆಯನ್ನು ಹೆಚ್ಚು ಜೀವಂತಗೊಳಿಸುತ್ತಾನೆ. ನಡುವೆ ಬರುವ ಸಣ್ಣ ಸಣ್ಣ ಪ್ರಗಾಥಗಳಲ್ಲಿ ಮನುಷ್ಯನ ಹಾಗೂ ಅವನ ಜೀವನದ ನೀತಿನಿಯಮಗಳ ನಡುವಣ ಸಂಘರ್ಷವನ್ನು ಕುರಿತು ವ್ಯಾಖ್ಯಾನ ಮಾಡುತ್ತಾನೆ. ಈಸ್ಕಿಲಸ್, ಸಾಫೊಕ್ಲಿಸರ ದರ್ಶನ ವಿಚಾರಗಳಲ್ಲಿ ಹೆಚ್ಚು ವ್ಯತ್ಯಾಸವಿಲ್ಲ. ಆದರೆ ಮನುಷ್ಯನ ಬಾಳು ದುರಂತವಾಗಲು ದೈವಿಕ ಶಕ್ತಿಗಳಷ್ಟೇ ಅವನ ಮನೋವೈಕಲ್ಯ ದುರ್ಬಲತೆಗಳೂ ಕಾರಣ ಎನ್ನುವುದು ಸಾಫೊಕ್ಲಿಸನ ದೃಷ್ಟಿ. ಅವನು ಮಾನವೀಯವಾದ ಗುಣದೋಷಗಳುಳ್ಳ ಒಂದೆರಡು ಕೇಂದ್ರ ಪಾತ್ರಗಳನ್ನು ಸೃಷ್ಟಿಸಿ, ಅವುಗಳ ಮೂಲಕ ನಾಟಕಕ್ರಿಯೆ ಹೇಗೆ ಅರಳುತ್ತದೆಂದು ತೋರಿಸುತ್ತಾನೆ.

ಯೂರಿಪಿಡಿಸ್ (ಕ್ರಿ ಪೂ. ೪೮೪-೪೦೭): ಈತನ ೯೨ ನಾಟಕಗಳಲ್ಲಿ ೧೭ ರುದ್ರ ನಾಟಕಗಳು, ಒಂದು ವಿಡಂಬನ ನಾಟಕ (ವಿನೋದಪ್ರಧಾನವಾದ ನಾಟಕ) ಉಪಲಬ್ಧವಿವೆ. ರುದ್ರನಾಟಕಗಳಲ್ಲಿ ಶ್ರೇಷ್ಠ ಕೃತಿಗಳೆಂದರೆ—'ಟ್ರೋಜನ್ ಅಬಲೆಯರು', 'ಮೀಡಿಯ', 'ಹಿಪ್ಪೊಲಿಟಸ್', 'ಹೆಕ್ಯುಬ', 'ಆಂಡ್ರೋಮಖೆ', 'ಟೌರಸಿನಲ್ಲಿ ಇಫಿಜೀನಿಯ' ಮತ್ತು 'ಬ್ಯಾಖೆ'. ಯೂರಿಪಿಡಿಸ್ ವಯಸ್ಸಿನಲ್ಲಿ ಸಾಫೊಕ್ಲಿಸನಿಗಿಂತ ಸ್ವಲ್ಪ ಕಿರಿಯನಾಗಿದ್ದರೂ ತನ್ನ ತೀಕ್ಷ್ಣವಿಚಾರ, ಕ್ರಾಂತಿಕಾರ ಮನೋವೃತ್ತಿಗಳಿಂದಾಗಿ ಹೊಸ ಪೀಳಿಗೆಗೆ ಸೇರಿದಂತೆ ಕಾಣುತ್ತಾನೆ. ಅವನ ಕಾಲಕ್ಕೆ ಸೋಫಿಸ್ಟರ ವಿಚಾರವಾದ ತಾರ್ಕಿಕತೆಗಳ ಪ್ರಭಾವ ಪ್ರಬಲವಾಗಿದ್ದು, ಅವನು ತನ್ನ ಕಾಲದವರ ನಂಬಿಕೆ ಆದರ್ಶಗಳನ್ನು ಕಟುವಾಗಿ ಟೀಕಿಸುತ್ತಾನೆ. ಅವನ ದೃಷ್ಟಿಯಲ್ಲಿ ದೇವತೆಗಳು ಮನುಷ್ಯರಿಗಿಂತ ಬೇರೆಯಲ್ಲ, ಮಾತ್ರವಲ್ಲದೆ ಅವರಿಗಿಂತ ಹೇಯಪ್ರವೃತ್ತಿಯವರು. ಪ್ರಕೃತಿಯ ಚೈತನ್ಯಶಕ್ತಿಯನ್ನು ಪ್ರತೀಕಿಸುತ್ತವೆ ಎನ್ನುವ ಅರ್ಥದಲ್ಲಿ ಮಾತ್ರ ಅವು ವಾಸ್ತವಿಕ ಪಾತ್ರಗಳು. ವಸ್ತುವನ್ನು ಪುರಾಣ ಐತಿಹ್ಯಗಳಿಂದ ಎತ್ತಿಕೊಂಡರೂ ಅದನ್ನು ಸಾಮಾನ್ಯ ಮಾನವರ ನಿತ್ಯಜೀವನದ ಸಂದರ್ಭಕ್ಕೆ ಅಳವಡಿಸುತ್ತಾನೆ. ಪಾತ್ರಸೃಷ್ಟಿಯಲ್ಲಿ ಅವನು ತೋರಿಸುವ ಮನೋವೈಜ್ಞಾನಿಕ ದೃಷ್ಟಿ ಅನನ್ಯವಾದುದು. ಅವನ ಪಾತ್ರಗಳು ಸಮುಸ್ಯಾತ್ಮಕ ವ್ಯಕ್ತಿಗಳು. ಅವನು ಅರಿಸ್ಟೊಫೆನೆಸ್ ಹೇಳುವ ರೀತಿಯಲ್ಲಿ ಸ್ತ್ರೀದ್ವೇಷಿಯೂ ಅಲ್ಲ, ಆಧುನಿಕರು ಹೇಳುವಂತೆ ಸ್ತ್ರೀಸ್ವಾತಂತ್ರ್ಯವಾದಿಯೂ ಅಲ್ಲ. ಅವನ ಗಮನವೆಲ್ಲವೂ ಪಾತ್ರಗಳ ರಾಗದ್ವೇಷಗಳ ವಿಶ್ಲೇಷಣೆಯ ಮೇಲೆ ಕೇಂದ್ರೀಕೃತವಾಗಿರುತ್ತದೆ. ಸ್ತ್ರೀಯ ಹೃದಯದ ಸಹಜ ಅಥವಾ ವಿಕೃತ ಭಾವನೆಗಳ ತಳಮಳವನ್ನೂ

ತಾಕಲಾಟವನ್ನೂ ಅವನಷ್ಟು ಸೂಕ್ಷ್ಮವಾಗಿ ಚಿತ್ರಿಸಿದ ನಾಟಕಕಾರರು ವಿಶ್ವದಲ್ಲೇ ತೀರ ವಿರಳ. ಕರುಣರಸವನ್ನು ಪ್ರತಿಪಾದಿಸುವುದರಲ್ಲಿ ಅವನು ಎತ್ತಿದ ಕೈ. ಆದ್ದರಿಂದಲೇ ಅವನಿಗೆ ನಾಟಕರತ್ನತ್ರಯದಲ್ಲಿ ಸ್ಥಾನ. ಸೊಗಸಾಗಿ ಕ್ರಿಯೆಯನ್ನು ಬೆಳಸಿ, ಅತ್ಯಂತ ಕಾವ್ಯಮಯವಾದ ಶೈಲಿಯಲ್ಲಿ ರಸಮಯ ಘಟನೆಗಳನ್ನು ಅರ್ಥವಿಸುತ್ತಾನೆ. ಪಾತ್ರಗಳು ಒಂದು ಉತ್ಕಟ ಘಟ್ಟವನ್ನು ತಲುಪಿದ ಮೇಲೆ ನಾಟಕವನ್ನು ಹೇಗೋ ಮುಕ್ತಾಯಗೊಳಿಸುತ್ತಾನೆ. ಆದ್ದರಿಂದ ಅವನ ರಚನೆ ಜಾಳುಜಾಳಾಗಿದೆ. ಅವನ ಶೈಲಿ ಈಸ್ಕಿಲಸನ ಗಾಂಭೀರ್ಯ ಔನ್ನತ್ಯಗಳನ್ನಾಗಲಿ, ಸಾಫೊಕ್ಲಿಸನ ಕಲಾಪರಿಪೂರ್ಣವಾದ ಸಂವಿಧಾನಕುಶಲತೆಯನ್ನಾಗಲಿ ಸಾಧಿಸಲಾರದು. ಆದರೆ ಅದರಲ್ಲಿ ಚೆಲುವೂ ಬೆಡಗೂ ತುಂಬಿವೆ.

ಯೂರಿಪಿಡಿಸನ ಕಡೆಯ ನಾಟಕಗಳು ರೋಮಾಂಚಕ ಘಟನೆಗಳಿಂದ ತುಂಬಿದ್ದು ಆಮೇಲಿನ ಗದ್ಯನಾಟಕಗಳ ಮತ್ತು ವಿನೋದನಾಟಕಗಳ ಮೇಲೆ ಪ್ರಭಾವ ಬೀರಿದೆ ಬಹುದು.

**ಅರಿಸ್ಟೊಫೆನಿಸ್ (ಕ್ರಿ.ಪೂ. ೪೫೦–೩೮೫) :** ಕ್ರಿ.ಪೂ. ೫ನೆಯ ಶತಮಾನದ ಹರ್ಷನಾಟಕದಲ್ಲಿ ಒರಟಾದ ಅಶ್ಲೀಲಹಾಸ್ಯ, ಅತ್ಯಂತ ವಿಭಾವನಾತ್ಮಕವಾದ ಕಾವ್ಯಶಕ್ತಿ, ರಾಜಕೀಯ ವಿಡಂಬನೆ, ಪೌರಾಣಿಕ ವ್ಯಕ್ತಿಗಳನ್ನು ಕುರಿತ ಲೇವಡಿ ಎಲ್ಲವೂ ಬೆರೆತಿವೆ. ಅರಿಸ್ಟೊಫೆನಿಸನ ಕೆಲವು ಪೂರ್ಣ ಕೃತಿಗಳು ಮಾತ್ರ ಸಿಕ್ಕಿರುವುದರಿಂದ ಪುರಾತನ ಗ್ರೀಕ್ ವಿನೋದನಾಟಕ ಕಲ್ಪನೆಯನ್ನು ಅವುಗಳಷ್ಟರಿಂದಲೇ ಊಹಿಸಬೇಕಾಗಿದೆ. ಸ್ಯಾಟಿರ್ ನಾಟಕದ ಅಂಶಗಳೂ ಸೇರಿ ಇವು ವೈವಿಧ್ಯವಿಲ್ಲದ ರಚನೆಗಳಾಗಿವೆ. ಒಂದು ಹುಚ್ಚು ಆದರ್ಶವನ್ನು ಸಾಧಿಸಹೊರಟಾಗ ಅದು ವಾಸ್ತವಬದುಕಿಗೆ ವಿರೋಧವಾಗಿ ನಿಂತು ಎಷ್ಟು ಆಭಾಸಕರವಾಗುತ್ತದೆಂದು ಅರಿಸ್ಟೊಫೆನಿಸ್ ತೋರಿಸುತ್ತಾನೆ. ಅವನ ಮೇಳಗೀತಗಳು ತುಂಬಾ ಕಾವ್ಯಮಯವಾಗಿದ್ದು ನಾಟಕಕ್ಕೆ ತಕ್ಕ ಪರಿಸರವನ್ನು ಸೃಷ್ಟಿಸುವುದರಲ್ಲಿ ಯಶಸ್ವಿಯಾಗಿವೆ. ಈಗ ಸಿಕ್ಕಿರುವ ಅವನ ಹನ್ನೊಂದು ನಾಟಕಗಳಲ್ಲಿ ತುಂಬ ಪ್ರಸಿದ್ಧವಾದುವು 'ಕಪ್ಪೆಗಳು', 'ಮೋಡಗಳು', 'ಪಕ್ಷಿಗಳು' ಮತ್ತು 'ಲೈಸಿಟ್ರಾಟ್.'

**ಹೊಸ ವೈನೋದಿಕ :** ಕ್ರಿ.ಪೂ. ೪ನೆಯ ಶತಮಾನದ ಪ್ರಾರಂಭದಲ್ಲಿ ರಚಿತವಾದ ಒಂದು ಹೊಸ ಬಗೆಯ ವಿನೋದನಾಟಕಕ್ಕೆ ಯೂರಿಪಿಡಿಸನ ಕೆಲವು ಕೃತಿಗಳೇ ಪ್ರೇರಣೆಯಾಗಿರಬಹುದು. ಅದನ್ನು ಹೊಸ ವೈನೋದಿಕವೆನ್ನುತ್ತಾರೆ. ಇದರಲ್ಲಿ ಅಂಕಗಳ ನಡುವೆ ಮೇಳಗೀತ ಬರುವುದಿಲ್ಲ. ಸಂಗೀತದ ಬದಲು ಪಾತ್ರವಿನ್ಯಾಸಕ್ಕೆ ಹೆಚ್ಚು ಗಮನವಿರುವಂತೆ ತೋರುತ್ತದೆ. ಸಮಕಾಲೀನ ರಾಜಕೀಯವ್ಯಕ್ತಿಗಳ, ತತ್ತ್ವಗಳ ವಿಡಂಬನೆ ಇದ್ದು, ಒಂದೇ ರೀತಿಯ ಪ್ರಾತಿನಿಧಿಕ ಪಾತ್ರಗಳು ಬರುತ್ತವೆ. ಈ ಬಗೆಯ ನಾಟಕಗಳನ್ನು ಬರೆದವರಲ್ಲಿ ಮಿನಾಂಡರ್ (ಕ್ರಿ.ಪೂ. ೩೪೨–೨೯೧) ಹೆಸರು ಎದ್ದು ಕಾಣಿಸುವಂತಿದ್ದರೂ ಅವನ ನಾಟಕಗಳ ಕೆಲವು ತುಣುಕುಗಳು ಮಾತ್ರ ಸಿಕ್ಕಿವೆ.

ಇವನು ರೋಮನ್ ನಾಟಕಕಾರರಾದ ಪ್ಲಾಟಿಸ್, ಟೆರೆನ್ಸ್ ಮುಂತಾದವರ ನಾಟಕಗಳ ಮೇಲೆ ಪ್ರಭಾವ ಬೀರಿದ್ದರಿಂದ, ಇವನ ವಿಷಯವಾಗಿ ಅಲ್ಪಸ್ವಲ್ಪ ಸಂಗತಿಗಳು ನಮಗೆ ತಿಳಿದಿವೆ, ಅಷ್ಟೆ.

ಗ್ರೀಕ್ ಗದ್ಯಸಾಹಿತ್ಯ : ಗ್ರೀಕ್ ಸಾಹಿತ್ಯಚರಿತ್ರೆಯಲ್ಲಿ ಕ್ರಿ.ಪೂ. ೬ನೆಯ ಶತಮಾನದ ತರುವಾಯ ನಾಟಕಯುಗ ಮುಗಿದು ಗದ್ಯಯುಗ ಪ್ರಾರಂಭವಾಗುತ್ತದೆ. ಅದಕ್ಕೆ ಹಿಂದಿನ ಯಾವ ಗದ್ಯಕೃತಿಯೂ ಸಿಕ್ಕಿಲ್ಲ. ಐದನೆಯ ಶತಮಾನದವರೆಗೆ ಸೃಜನಾತ್ಮಕ ಚಿಂತನೆಗಳನ್ನು ರೂಪಿಸಲು ಗದ್ಯ ಹಾಗೂ ಪದ್ಯ ಮಾಧ್ಯಮಗಳೆರಡನ್ನೂ ಉಪಯೋಗಿಸುತ್ತಿದ್ದರು; ಶಾಸ್ತ್ರೀಯ ವಿಚಾರಗಳನ್ನು ಆಕರ್ಷಕವಾಗಿ ತಿಳಿಸಬೇಕೆಂದು ಹೆಚ್ಚಾಗಿ ಪದ್ಯಶೈಲಿಯನ್ನೇ ಮೊದಲು ಬಳಸಿದರೂ ಕಾಲಕ್ರಮೇಣ ಗದ್ಯ ಅನಿವಾರ್ಯವಾಯಿತು. ಗದ್ಯವನ್ನು ಬಳಸಿ ಬೆಳಸಿದವರಲ್ಲಿ ಗ್ರೀಸಿನ ದಾರ್ಶನಿಕರು, ಇತಿಹಾಸಕಾರರು ಮತ್ತು ವಾಗ್ಮಿಗಳು ಮುಖ್ಯರು.

ದರ್ಶನ : ಗ್ರೀಕ್ ದಾರ್ಶನಿಕರ ಉತ್ತುಂಗ ಗಿರಿಪಂಕ್ತಿಯಲ್ಲಿ ಪ್ಲೇಟೊ (ಕ್ರಿ.ಪೂ. ೪೨೭-೩೪೭) ಮೇರುಗಿರಿಯಂತಿದ್ದಾನೆ. ಎಂಪಿಡಾಕ್ಲಿಸ್, ಪೈಥಾಗೊರಸ್ ಇತರ ಕೆಲವು ಪ್ರಸಿದ್ಧರು. ಪ್ಲೇಟೊ ಕವಿಗಳನ್ನು ತನ್ನ ಆದರ್ಶರಾಜ್ಯದಿಂದಾಚೆಗೆ ಅಟ್ಟಬೇಕೆಂದು ವಾದಿಸಿದರೂ 'ಫೀಡ್ರಸ್', 'ಸಿಂಪೋಸಿಯಮ್' ಮುಂತಾದ ಸಂವಾದಗಳಲ್ಲಿ ತಾನೇ ಒಬ್ಬ ಉತ್ಕೃಷ್ಟ ಕವಿಯಂತೆ ವಿಜೃಂಭಿಸಿದ್ದಾನೆ. ಪ್ಲೇಟೊ ಸಂಭಾಷಣೆಯ ರೂಪದಲ್ಲಿ ರಚಿಸಿರುವ ಈ ತತ್ತ್ವಜಿಜ್ಞಾಸೆಗಳು ಶ್ರೇಷ್ಠ ಸಾಹಿತ್ಯಕೃತಿಗಳೇ ಆಗಿವೆ. ಅವುಗಳಲ್ಲಿ ತೋರಿಬರುವ ಸೂಕ್ಷ್ಮವಾದ ಪಾತ್ರಚಿತ್ರಣ, ಹರಿತವಾದ ವಿಚಾರವಂತಿಕೆ, ಲಘುವಾದ ನವಿರಾದ ಹಾಸ್ಯ, ಕ್ಲಿಷ್ಟವಾದ ಸಮಸ್ಯೆಗಳನ್ನು ವಿವರಿಸಲು ಕೊಡುವ ದೃಷ್ಟಾಂತಗಳು, ರೂಪಕಗಳು, ಕಥೆಗಳು, ಪಾತ್ರೋಚಿತವಾದ ಮಾತುಗಾರಿಕೆ—ಇವು ಆತನ ಅನನ್ಯ ಕಲೆಗಾರಿಕೆಗೆ ಸಾಕ್ಷ್ಯಗಳಾಗಿವೆ. ಕೆಲವು ಸಂವಾದಗಳಂತೂ ನಾಟಕಗಳಷ್ಟೇ ರಸಭರಿತ. ಹೀಗೆ ತತ್ತ್ವಜಿಜ್ಞಾಸೆಗೆಂದು ರಚಿಸಿದ ಸಂಭಾಷಣೆಗಳು ಒಳ್ಳೆಯ ಗದ್ಯಸಾಹಿತ್ಯದ ಮಾದರಿಗಳಾಗಿ ಪರಿಣಮಿಸಿವೆ. ಪ್ಲೇಟೊವಿನ ಗುರು ಸಾಕ್ರೆಟಿಸ್, ಶಿಷ್ಯ ಅರಿಸ್ಟಾಟಲ್ ಇಬ್ಬರೂ ಲೋಕವಿಖ್ಯಾತರು. ಜಗತ್ತಿನ ಸಾಹಿತ್ಯವಿಮರ್ಶೆಗೆ ಬುನಾದಿ ಹಾಕಿದವರು ಪ್ಲೇಟೊ ಮತ್ತು ಅರಿಸ್ಟಾಟಲ್. ಅರಿಸ್ಟಾಟಲ್‌ನ 'ಕಾವ್ಯಮೀಮಾಂಸೆ' (Poetics) ಗ್ರಂಥ ಅಲ್ಲಲ್ಲಿ ಮುಕ್ಕಾಗಿ ಕೆಲವು ಭಾಗಗಳು ಮಾತ್ರ ಉಳಿದುಕೊಂಡಿವೆ. ಬಹುಶಃ ಅದು ಅವನು ಪ್ರವಚನಕ್ಕಾಗಿ ಗುರುತು ಹಾಕಿಟ್ಟುಕೊಂಡಿದ್ದ ಟಿಪ್ಪಣಿಗಳ ಸಂಕಲನ. ಅವನು ಮೂಲತಃ ವಿಜ್ಞಾನಿ. ವಿಶ್ಲೇಷಣೆ, ವಿಚಾರಶೀಲತೆ ಅವನ ಹಿರಿಯ ಲಕ್ಷಣಗಳು. ಪ್ರತಿಶಬ್ದವನ್ನೂ ಖಚಿತವಾಗಿ ವಿವರಿಸಿ, ನಿಷ್ಕೃಷ್ಟವಾದ ಅರ್ಥದಲ್ಲಿ ಸುಂದರವಾಗಿ ಹೇಳುವ ಕಲಾವಂತ. ಜಗತ್ತಿನ ಜ್ಞಾನಭಂಡಾರವನ್ನೇ ತಲೆಯಲ್ಲಿ ಹೊತ್ತಿದ್ದ ಪ್ರಕಾಂಡ ಪಂಡಿತ. ಇವನೇ ಪಾಶ್ಚಾತ್ಯ ವಿಮರ್ಶೆಯ ಕಾರಣಪುರುಷ.

ಚರಿತ್ರೆ : ಗ್ರೀಕ್ ಗದ್ಯಯುಗದ ಮುಖ್ಯ ಸಾಧನೆ ಇತಿಹಾಸ ರಚನೆ. ಹಿರೊಡೊಟಸ್ (Herodotus) (ಕ್ರಿ. ಪೂ. ೪೮೪–೪೨೫) ಬರೆದ ಚರಿತ್ರೆ ಇದಕ್ಕೊಂದು ಉತ್ತಮ ನಿದರ್ಶನ. ಇದು ಸಾಹಿತ್ಯದ ವಿದ್ಯಾರ್ಥಿಗಳಿಗೆ ಒಂದು ಉತ್ಕೃಷ್ಟ ಗ್ರಂಥವಾಗಿರುವುದಲ್ಲದೆ ಇತಿಹಾಸಕಾರರಿಗೆ ಪರ್ಷಿಯನ್ ಯುದ್ಧಗಳ ಕಾಲದ ಪೂರ್ವ ಮೆಡಿಟರೇನಿಯನ್ ಪ್ರದೇಶದ ವಿಚಾರವಾಗಿ ಅಮೂಲ್ಯ ಮಾಹಿತಿಯನ್ನೊದಗಿಸುತ್ತದೆ. ಈತನಲ್ಲಿ ಕಂಡು ಬರುವ ಕಠೋರವಾದ ವಿಚಾರವಂತಿಕೆ, ಸೂಕ್ಷ್ಮವಾದ ಅವಲೋಕನ ಶಕ್ತಿ ಮೊದಲಾದ ಲಕ್ಷಣಗಳನ್ನು ಈತನ ತರುವಾಯ ಬಂದ ಅಥೆನ್ಸಿನ ತುಸಿಡಿಡಿಸ್ (Thucydides) (ಕ್ರಿ.ಪೂ. ೪೬೦–೪೦೦)ನಲ್ಲಿಯೂ ಕಾಣಬಹುದು. ಪ್ರಸಿದ್ಧ ವೈದ್ಯವಿಜ್ಞಾನಿ ಹಿಪ್ಪೊಕ್ರಟೆಸ್‌ನ ವಿಚಾರಶಕ್ತಿ ತುಸಿಡಿಡಿಸ್‌ನ ಗ್ರಂಥದಲ್ಲೂ ಕಾಣಸಿಗುತ್ತದೆ. ಅವನು ಬರೆದ ಫೆಲೊಪೊನೀಸಿಯ ಯುದ್ಧದ ಚರಿತ್ರೆ ಇತಿಹಾಸಜ್ಞರಿಗೊಂದು ಮಾದರಿ ಕೃತಿ. ಗಂಭೀರ ಶೈಲಿ, ನಾಟ್ಯಪ್ರಜ್ಞೆ ಇವು ಇವನ ಬರೆವಣಿಗೆಯ ಮುಖ್ಯ ಲಕ್ಷಣಗಳು. ತುಸಿಡಿಡಿಸ್ ಮುಗಿಸದೆ ಉಳಿಸಿದ ಚರಿತ್ರೆಯನ್ನು ಮುಂದುವರಿಸಿದ ಕ್ಸೆನೊಫಾನ್ (Xenophon) (ಕ್ರಿ.ಪೂ. ೪೩೦–೩೫೪)ನ 'ಹೆಲೆನಿಕ'ದಲ್ಲಿ ಶೈಲಿಯ ಸುಭಗತೆಯಾಗಲಿ ವಸ್ತುನಿಷ್ಠೆಯಾಗಲಿ ಇಲ್ಲ. ಆದರೆ ತನಗೆ ಆಸಕ್ತಿ ಇರುವ ವ್ಯಕ್ತಿಗಳನ್ನೂ ಘಟನೆಗಳನ್ನೂ ವಿವರಿಸುವಾಗ ಅವನ ಲೇಖನಿಯಲ್ಲಿ ಮಿಂಚಿನ ಶಕ್ತಿ ಹರಿಯುತ್ತದೆ.

ವಾಗ್ಮಿತೆ : ಕ್ರಿ.ಪೂ. ೫ನೆಯ ಶತಮಾನದ ಮಧ್ಯದಿಂದ ಹಿಡಿದು ಕ್ರಿ.ಪೂ. ೪ನೆಯ ಶತಮಾನದ ಕೊನೆಯವರೆಗೆ ಗ್ರೀಸಿನಲ್ಲಿ ವಾಗ್ಮಿಕಲೆ ಉನ್ನತಶಿಖರವನ್ನು ಮುಟ್ಟಿತ್ತು. ಅದನ್ನು ಶಿಕ್ಷಣದ ಅಂಗವಾಗಿ ಅಳವಡಿಸಿಕೊಂಡು, ವೈಜ್ಞಾನಿಕವಾಗಿ ಅಧ್ಯಯನವನ್ನಾಗಿ ಮಾಡಿದವರು ಸೋಫಿಸ್ಟ್ ಪಂಥದವರು. ಗ್ರೀಸಿನ ಪ್ರಜಾಪ್ರಭುತ್ವ ಯುಗದಲ್ಲಿ ವಾಗ್ಮಿಕಲೆ, ಇಡೀ ಸಮುದಾಯವನ್ನು ಒಂದುಗೂಡಿಸಿ ರಾಷ್ಟ್ರೀಯ ಭಾವನೆಯನ್ನು ಮೂಡಿಸುವ ಪ್ರಚಂಡ ಸಾಧನವಾಯಿತು. ಗ್ರೀಸಿನ ಶ್ರೇಷ್ಠ ವಾಗ್ಮಿಗಳಲ್ಲಿ ಲೈಸಿಸ್ (Lysis), ಐಸಾಯಿಸ್ (Isaeus), ಐಸೋಕ್ರಾಟೆಸ್ (Isocrates), ಈಸ್ಕಿನಸ್, ಡೆಮೊಸ್ತನೀಸ್ ಮುಂತಾದವರು ಅಗ್ರಗಣ್ಯರು. ಅವರ ಭಾಷಣಗಳು ಇಂದಿಗೂ ಅಚ್ಚಳಿಯದೆ ಉಳಿದು ಅವರ ಉನ್ನತಮಟ್ಟದ ವಾಗ್ಮಿತೆಯ ದ್ಯೋತಕಗಳಾಗಿವೆ.

ಕ್ರಿ.ಪೂ. ೩೨೮ ತರುವಾಯ ಹೆಲೆನಿಸ್ಟ್ ಯುಗದ ಆರಂಭ. ಅಲೆಕ್ಸಾಂಡರ್ ತೀರಿಕೊಂಡ ಮೇಲೆ ಕ್ರಿ.ಪೂ. ೩೦ರಲ್ಲಿ ರೋಮನ್ನರು ಈಜಿಪ್ಟನ್ನು ಸೋಲಿಸುವವರೆಗಿನ ಕಾಲವನ್ನು ಅಲೆಕ್ಸಾಂಡ್ರಿಯನ್ ಯುಗವೆನ್ನುತ್ತಾರೆ. ನಗರ ರಾಜ್ಯಗಳ ಕಾಲ ಮುಗಿದುಹೋಗಿ ಮಹಾಸಾಮ್ರಾಜ್ಯಗಳು ಸ್ಥಾಪಿತವಾದಾಗ ಸಾಹಿತಿ ಜನಜೀವನದಿಂದ ದೂರ ಉಳಿದ. ಜನಸಾಮಾನ್ಯರ ಆಶ್ರಯತಪ್ಪಿದಾಗ ಅವನು ಸಾಹಿತ್ಯರಚನೆಗೆ ಸೀಮಿತ ವ್ಯಾಪ್ತಿಯ ವಸ್ತುಗಳನ್ನೂ ಪ್ರಕಾರಗಳನ್ನೂ ಆರಿಸಿಕೊಂಡಂತೆ ತೋರುತ್ತದೆ. ಸಪುರವಾದ, ಲಘುವಾದ ವಿಷಯಗಳತ್ತ ಚಿತ್ತಹರಿಸಿ ಅವನು ಜನರನ್ನು ರಂಜಿಸಲು ಪ್ರಯತ್ನಿಸಿದ ; ಇಲ್ಲವೆ ರಮ್ಯವಾದ, ಗಹನಗೋಪ್ಯವಾದ ವಿಷಯಗಳಲ್ಲಿ ತನ್ಮಯತೆ ಪಡೆದ. ಈ ಕಾಲದಲ್ಲಿ

ಗ್ರೀಕ್ ಸಾಹಿತ್ಯ ನಶಿಸದೆ ಉಳಿದುಕೊಂಡದ್ದು ಉಕ್ತಿಚತುರತೆ ಹಾಗೂ ಉಜ್ವಲ ಶೈಲಿಯ ದೆಸೆಯಿಂದಲೇ ಹೊರತು ಅದರ ಸಾರ್ವಕಾಲಿಕ ಸಾಹಿತ್ಯಕಮೌಲ್ಯಗಳಿಂದಲ್ಲ.

ಈಜಿಪ್ಟಿನ ಟೊಲೆಮಿ ದೊರೆಗಳ ಆಳ್ವಿಕೆಯಲ್ಲಿ ಅಲೆಕ್ಸಾಂಡ್ರಿಯ ನಗರ ಸಾಹಿತ್ಯ ಹಾಗೂ ವಿಜ್ಞಾನಗಳ ಕೇಂದ್ರವಾಯಿತು. ಅಂತರರಾಷ್ಟ್ರೀಯ ನಗರವಾದ ಅಲೆಕ್ಸಾಂಡ್ರಿಯದ ಅಮೂಲ್ಯ ಗ್ರಂಥಭಂಡಾರಗಳು, ಚಿತ್ರಶಾಲೆಗಳು ಜನರ ಗಮನಸೆಳೆದವು. ಗ್ರಂಥಪಾಲ ಕ್ಯಾಲಿಮಾಕಸ್ (ಕ್ರಿ.ಪೂ. ೩೦೫–೨೦೫) ಕಾವ್ಯಪರಿಣತರ ನೇತಾರನೆನಿಸಿಕೊಂಡ. ಹಳೆಯದನ್ನು ತ್ಯಜಿಸಿ, ಸಾಹಿತ್ಯದಲ್ಲಿ ಹೊಸಮಾರ್ಗ ತುಳಿಯಬೇಕೆಂದು ಹೊರಟ ಈ ಯುಗದ ಲೇಖಕರು ಮುಖ್ಯವಾಗಿ ಎಲಿಜಿಯಕ್ ಛಂದಸ್ಸಿನ ಕಾವ್ಯ ಹಾಗೂ ನಾಟುನುಡಿ (Epigram)ಗಳನ್ನು ಪುನರುಜ್ಜೀವನಗೊಳಿಸಿದರು. ಗ್ರಾಮೀಣ (Pastoral) ಕಾವ್ಯವೆಂಬ ಹೊಸ ಪ್ರಕಾರ ಸೃಷ್ಟಿಯಾಯಿತು. ಥಿಯೋಕ್ರಿಟಸ್ (Theocrites) (ಕ್ರಿ.ಪೂ. ೩೧೦–೨೫೦), ಬಯಾನ್ (Bion) ಮತ್ತು ಮಾಸ್ಕಸ್ (Moschus) (ಕ್ರಿ.ಪೂ. ಸು. ೨೦೦) ಮುಂತಾದವರು ಅದಕ್ಕೆ ಉಜ್ವಲರೂಪ ಕೊಟ್ಟರು. ಅರಿಸ್ಟಾಟಲ್ ಪಂಥದ ಥಿಯೋಫ್ರಾಸ್ಟಸ್ (Theophrastus) (ಕ್ರಿ.ಪೂ. ೩೭೨–೨೮೮ 'ಸ್ವಭಾವ ಚಿತ್ರಗಳು' ಎಂಬ ಪದಚಿತ್ರಗಳನ್ನು ಸರಳ ವಿಡಂಬನ ಶೈಲಿಯಲ್ಲಿ ಬರೆದ.

ಕ್ರಿ.ಪೂ. ೧೪೬ರ ನಂತರ ಗ್ರೀಕರನ್ನು ಗೆದ್ದ ರೋಮನ್ನರಿಗೆ ಗ್ರೀಕರ ಹೊಸ ವೈನೋದಿಕಗಳು, ಅಲೆಕ್ಸಾಂಡ್ರಿಯನ್ ಕಾವ್ಯ, ವಿಜ್ಞಾನ, ಭೂಗೋಳಶಾಸ್ತ್ರ, ಇತಿಹಾಸ, ವಿಮರ್ಶೆ, ಪಾಂಡಿತ್ಯಪದ್ಧತಿ—ಇವೆಲ್ಲದರ ಪ್ರಯೋಜನ ದೊರೆಯಿತು. ರೋಮನ್ ಸಾಹಿತ್ಯದ ನಿರ್ಮಾಣಕ್ಕೆ ಅಗತ್ಯವಾದ ಸ್ಫೂರ್ತಿ ಮಾದರಿಗಳು ಒದಗಿದವು.

ಕ್ರಿ.ಪೂ. ೨ನೆಯ ಶತಮಾನದ ತರುವಾಯ ಗ್ರೀಕ್ ಸಾಹಿತ್ಯದ ಇಳಿಗತಿ ಪ್ರಾರಂಭವಾಯಿತು. ಪ್ಲೂಟಾರ್ಕ್ (Plutarch) (ಕ್ರಿ.ಶ. ೪೬–೧೨೦)ನ ಜೀವನಚಿತ್ರಗಳಲ್ಲಿ (Lives) ಮತ್ತು ಲೂಸಿಯುಸ್‌ನ ಗದ್ಯಸಂವಾದಗಳಲ್ಲಿ ಸಾಕ್ರೆಟಿಸನ ತತ್ತ್ವವಿಚಾರಗಳು ಮತ್ತೆ ಅಭಿವ್ಯಕ್ತವಾಗಿವೆ. ಹೀಗೆ ಪುನಃ ಪುನಃ ಹಳೆಯ ಪರಂಪರೆಯನ್ನು ಅನುಕರಿಸುವ ಈ ಸಾಹಿತಿಗಳು ಮಾರ್ಗಯುಗ (Classical)ದ ಮುಕ್ತಾಯವನ್ನು ಸೂಚಿಸುತ್ತಾರೆ. ಅವರಲ್ಲಿ ಲಾಂಜೈನಸ್ (Longinus) (ಕ್ರಿ.ಶ. ೮೦) ನಂಥ ಪಂಡಿತರು, ವಿಮರ್ಶಕರು ತೀರ ವಿರಳ. ಇವನ 'ಭವ್ಯತೆಯನ್ನು ಕುರಿತು' ('On the Sublime') ಒಂದು ಮಹಾಗ್ರಂಥ. ಅದು ಯೂರೋಪಿನ ವಿಮರ್ಶಕರಿಗೆ, ಸಾಹಿತ್ಯಾಭ್ಯಾಸಿಗಳಿಗೆ ದಾರಿದೀಪವಾಯಿತು.

ಆದಿ ಕ್ರಿಶ್ಚಿಯನ್ ಯುಗದ ಧಾರ್ಮಿಕ ಗ್ರಂಥಗಳಲ್ಲಿ ಸಾಹಿತ್ಯದ ಅಂಶ ತೀರ ವಿರಳ ಅಥವಾ ಇಲ್ಲವೆ ಇಲ್ಲ. ಈ ಧಾರ್ಮಿಕಪ್ರವಚನ ಪ್ರಚಾರಗ್ರಂಥಗಳನ್ನು ರಚಿಸುವಾಗಲೂ ಅವರು ಮಾರ್ಗ ಯುಗದ ಮಹಾಕೃತಿಗಳ ಮಾದರಿಯನ್ನೇ ಅನುಸರಿಸಿದರು.

## ಲ್ಯಾಟಿನ್ (ಅಥವಾ ಪುರಾತನ ರೋಮನ್) ಸಾಹಿತ್ಯ

ಕ್ರಿ.ಪೂ. ೩ನೆಯ ಶತಮಾನದಲ್ಲಿ ಗ್ರೀಕರ ಹಾಗೂ ರೋಮನ್ನರ ನಡುವೆ ರಾಜಕೀಯ ಮತ್ತು ಸೈನ್ಯಕೀಯ ಸಂಪರ್ಕವುಂಟಾಯಿತು. ಅದಕ್ಕೆ ಮುಂಚೆ ಪುರಾತನ ಇಟಲಿಯ ಸಾಹಿತ್ಯ ಹೆಚ್ಚು ಬೆಳೆಯಲು ಅವಕಾಶವಾಗಲಿಲ್ಲ. ಆ ಕಾಲದಲ್ಲಿ ಕೆಲವು ಸಾಂಪ್ರದಾಯಿಕ ಪ್ರಾರ್ಥನಾಗೀತೆಗಳು, ಲಾವಣಿಗಳು, ಅರೆನಾಟಕೀಯ ರಚನೆಗಳು (ಉದಾ: 'ಸ್ಯಾಚುರ' ಪ್ರಕಾರದ ಕೆಲವು), ಐತಿಹಾಸಿಕ ದಾಖಲೆಗಳು, ಸರ್ಕಾರಿ ಪತ್ರಗಳು–ಇವನ್ನು ಬಿಟ್ಟರೆ ಬೇರೇನೂ ಇರಲಿಲ್ಲ. ಮೊತ್ತಮೊದಲು ಲ್ಯಾಟಿನ್ ಭಾಷೆಯಲ್ಲಿ ಬಂದ ಸಾಹಿತ್ಯ ಕೃತಿಗಳೆಂದರೆ ಪುರಾಣಕಾವ್ಯಗಳು, ನಾಟಕಗಳು. ಆದರೆ ಅವುಗಳನ್ನು ಬರೆದವರು ಹುಟ್ಟುರೋಮನರಲ್ಲ. ಕ್ರಿ.ಪೂ. ೨೭೨ರ ಸುಮಾರಿನಲ್ಲಿ ಲಿವಿಯಸ್ ಆಂಡ್ರನಿಕಸ್ ಎಂಬಾತ ಹೋಮರನ 'ಒಡಿಸ್ಸಿ'ಯನ್ನು ದೇಶಭಾಷೆಯಲ್ಲಿ (ಲ್ಯಾಟಿನ್) ಭಾಷಾಂತರ ಮಾಡಿದ. ಇದೇ ಲ್ಯಾಟಿನ್ ಸಾಹಿತ್ಯಕ್ಕೆ ನಾಂದಿಯಾಯಿತು.

ಗಣರಾಜ್ಯ ಯುಗ: ಈ ಅವಧಿಯಲ್ಲಿ ಲ್ಯಾಟಿನ್ ಭಾಷೆ ಆಡುಮಾತಿನಿಂದ ಬೇರ್ಪಟ್ಟು ಶಿಷ್ಟರೂಪ ತಳೆದು ಸಾಹಿತ್ಯದ ಮಾಧ್ಯಮವಾಯಿತು. ನಾಗರಿಕತೆಯ ದೃಷ್ಟಿಯಿಂದ, ರೋಮನರು ಗ್ರೀಕರಿಗಿಂತ ಶತ ಶತಮಾನಗಳಷ್ಟು ಹಿಂದುಳಿದಿದ್ದರು. ಆದ್ದರಿಂದ ಹಲವು ಕಾಲದವರೆಗೆ ಲ್ಯಾಟಿನ್ ಸಾಹಿತ್ಯವೆಂದರೆ ಗ್ರೀಕ್ ಮಾದರಿಗಳ ರೂಪಾಂತರಗಳು ಇಲ್ಲವೆ ಮೂಲ ಕೃತಿಗಳ ಭಾಷಾಂತರಗಳು ಎನ್ನುವಂತಾಗಿತ್ತು. ಆದರೆ ರೋಮನ್ ಸಾಹಿತ್ಯ ಕೇವಲ ಅನುಕರಣೆಯಲ್ಲಿ ಪರ್ಯವಸಾನವಾಗದೆ ಸೃಜನಾತ್ಮಕತೆಯನ್ನು, ಸ್ವಂತಿಕೆಯನ್ನು ಕಾಲಕ್ರಮದಲ್ಲಿ ಸಾಧಿಸಿತು. ನೇವಿಯಸ್ (Naevius) (ಕ್ರಿ.ಪೂ. ೨೭೦) ದೇಶೀಯ ಲ್ಯಾಟಿನ್ನಿನ ರೂಪವಾದ ಸ್ಯಾಟರ್ನಿಯನ್ ಛಂದಸ್ಸಿನಲ್ಲಿ ಮೊದಲನೆಯ ಪ್ಯೂನಿಕ್ ಯುದ್ಧ ಕುರಿತು ಸ್ವತಂತ್ರ ಕಾವ್ಯವೊಂದನ್ನೂ ಕೆಲವು ನಾಟಕಗಳನ್ನೂ ಬರೆದ. ಆಮೇಲೆ ಬಂದ ವರ್ಜಿಲ್ ಕವಿ ಇವನಿಂದ ಬಹಳ ಪ್ರಭಾವಿತನಾದ. ಸ್ವಲ್ಪ ಕಾಲವಾದ ಮೇಲೆ ನೇವಿಯಸ್‌ನ ಕೃತಿಯನ್ನು ಮೀರಿಸುವಂಥ ಇನ್ನೊಂದು ಸ್ವತಂತ್ರ ಕೃತಿ ಹುಟ್ಟಿತು. ಅದೇ ಕ್ವಿಂಟಸ್ ಎನ್ನಿಯಸ್ (Quintus Ennius) (ಕ್ರಿ.ಪೂ. ೨೩೯–೧೬೯) ಎಂಬಾತ ಹೆಕ್ಸಾಮೀಟರಿನಲ್ಲಿ ಬರೆದ ಸಮಗ್ರ ರೋಮನ್ ಚರಿತ್ರೆ ('The Annals'). ಕೇಟೋ (ಕ್ರಿ.ಪೂ. ೨೩೪–೧೪೯)ವಿನ 'ವ್ಯವಸಾಯವನ್ನು ಕುರಿತ ಗ್ರಂಥ' ಮತ್ತು ರೋಮಿನ ಆದಿಕಾಲದ ಚರಿತ್ರೆಗೆ ಸಂಬಂಧಿಸಿದ 'ಮೂಲಗಳು' ಅಚ್ಚಳಿಯದೆ ಉಳಿದಿವೆ. ನಿಜವಾದ ಸಾಹಿತ್ಯಕೃತಿಗಳು ಬಂದದ್ದು ಕ್ರಿ.ಪೂ. ೩ನೆಯ ಶತಮಾನದ ಉತ್ತರಾರ್ಧದಲ್ಲಿ. ಪ್ಲಾಟಸ್ (Plautus) (ಕ್ರಿ.ಪೂ. ೨೫೪ ?—೧೮೪)ನ ವಿನೋದನಾಟಕಗಳೇ ನಿಜವಾದ ಲ್ಯಾಟಿನ್ ಸಾಹಿತ್ಯದ ಆರಂಭಕಾಲೀನ ಕೃತಿಗಳು. ಇವುಗಳನ್ನು ಬರೆದದ್ದು ರೋಮನ್ ಒಲಂಪಿಕ್ ಹಬ್ಬದ ಕ್ರೀಡೆಗಳ ಸಂದರ್ಭದಲ್ಲಿ. ಮೂಲ ಗ್ರೀಕ್ ಕೃತಿಗಳ ಪ್ರೇರಣೆಯಿಂದಲೇ ತನ್ನ ನಾಟಕಗಳನ್ನು ಬರೆದರೂ ಅವು ಹೊಸ ಕೃತಿಗಳೆನ್ನುವಷ್ಟು ಸ್ವತಂತ್ರವಾಗಿದ್ದವು; ವಾಸ್ತವ ಜೀವನದ ಚಿತ್ರಣಗಳಾಗಿದ್ದುವು. ಅವು ವೈವಿಧ್ಯಮಯವಾಗಿದ್ದು, ಕಡುಪಾದ ಹಾಸ್ಯದಿಂದ

ತುಂಬಿವೆ. ಒಂದು ತಲೆಮಾರಿನ ತರುವಾಯ ಬಂದ ಟೆರೆನ್ಸ್ (Terence) (ಕ್ರಿ.ಪೂ. ೧೯೫-೧೫೯) ಉತ್ತರ ಆಫ್ರಿಕದವನು. ದಾಸ್ಯದಿಂದ ಬಿಡುಗಡೆಹೊಂದಿದ ಗುಲಾಮರ ಸಂತತಿಗೆ ಸೇರಿದ ಇವನ ಆರು ವೈನೋದಿಕಗಳೂ ಸಿಕ್ಕಿವೆ. ಅವು ಪ್ಲಾಟಸ್‌ನ ಕೃತಿಗಳಿಗಿಂತ ಹೆಚ್ಚು ಪರಿಷ್ಕಾರವಾಗಿವೆ. ಇಲ್ಲಿಯ ಹಾಸ್ಯ ಹೆಚ್ಚು ಸೂಕ್ಷ್ಮ, ಕಲಾತ್ಮಕ. ಪ್ಲಾಟಸ್ ನಾಟಕದ ವಾಸ್ತವಿಕತೆ ಇಲ್ಲವಾದ್ದರಿಂದ ಇವು ಸಾಮಾನ್ಯ ಪ್ರೇಕ್ಷಕರನ್ನು ಮುಟ್ಟಲಿಲ್ಲ. ಆದರೆ ಲ್ಯಾಟಿನ್ ಸ್ವಭಾಷಾಪ್ರೇಮಿಗಳೂ ಸುಸಂಸ್ಕೃತ ವರ್ಗದವರೂ ಇವನನ್ನು ಮೆಚ್ಚಿಕೊಂಡರು; ಪ್ರಾಚೀನ ಗ್ರೀಕರ ಕೃತಿಗಳಿಗೆ ಸರಿತೂಗಬಲ್ಲ ನಾಟಕಸಾಹಿತ್ಯ ರಚಿತವಾಯಿತೆಂದು ಹೆಮ್ಮೆಪಟ್ಟರು. ಇದೇ ಶಿಷ್ಟವರ್ಗದ ಜನ ವಾಗ್ಮಿಕಲೆ ಮತ್ತು ಸ್ಟೋಯಿಕ್ ತತ್ವಗಳ ಅಧ್ಯಯನದಲ್ಲಿ ತೊಡಗಿದ್ದು, ತನ್ಮೂಲಕ ಗದ್ಯಸಾಹಿತ್ಯದ ಬೆಳವಣಿಗೆಗೆ ಶ್ರಮಿಸಿದರು.

ಲ್ಯಾಟಿನ್ ಪದ್ಯ ಕಾಲಕ್ರಮೇಣ ನಿಧಾನವಾಗಿ ವಿಕಾಸವಾಯಿತು. ಗಮನ ಸೆಳೆಯುವಂಥ ಒಬ್ಬ ಕವಿ ಲೂಸಿಲಿಯಸ್ (Lucilius) (ಕ್ರಿ.ಪೂ. ೧೮೦-೧೦೨). ಇವನ ಪುಟ್ಟ, ಕಾವ್ಯಶೈಲಿಯ ವಿಡಂಬನ ಪ್ರಬಂಧಗಳು ಜನಪ್ರಿಯವಾದವು. ಇವುಗಳಲ್ಲಿ ಕಾವ್ಯದ ಕಾವು ಕಡಿಮೆ, ಆದರೆ ವಸ್ತುವೈವಿಧ್ಯವಿದೆ. ಸಮಕಾಲೀನರ ನಡೆನುಡಿ, ವಾಸ್ತವ ಘಟನೆಗಳು, ಪಾತ್ರಗಳು—ಇವುಗಳನ್ನು ಕುರಿತ ವ್ಯಕ್ತಿನಿಷ್ಠ ವಿವೇಚನೆ ಇದೆ. ಸಾಂಪ್ರದಾಯಿಕವಾದ ಪುರಾಣ ಇತಿಹಾಸಗಳ ವಸ್ತುವನ್ನು ಬಿಟ್ಟು, ನೇರ ಯಥಾರ್ಥ ಜೀವನದರ್ಶನ ಮೂಡಿಸಿರುವುದು ಲೂಸಿಲಿಯಸ್‌ನ ವೈಶಿಷ್ಟ್ಯ. ಮುಂದೆ ವಿಕಾಸಗೊಂಡ ವಾಸ್ತವಿಕ ಸಾಹಿತ್ಯಕ್ಕೆ ಅವನಿಂದ ತುಂಬ ಉಪಕಾರವಾಯಿತು. ಆ ನಂತರ ಲ್ಯಾಟಿನ್ ಕವಿಗಳು ಸಂಪೂರ್ಣವಾಗಿ ಗ್ರೀಕ್ ಪ್ರಭಾವವನ್ನು ಬಿಟ್ಟುಕೊಡಲಿಲ್ಲ. ಅದರ ಬದಲು ಆಗಿನ, ಹೆಲೆನಿಸ್ಟಿಕ್ ಯುಗದ, ಅಲೆಕ್ಸಾಂಡ್ರಿಯದಲ್ಲಿ ಪ್ರಚಲಿತವಾಗಿದ್ದ ವ್ಯಕ್ತಿನಿಷ್ಠ, ವಿದಗ್ಧ ಸಾಹಿತ್ಯದಿಂದ ಪ್ರೇರಣೆಪಡೆದರು. ಅಂಥವರಲ್ಲಿ ಕಟುಲಸ್ (Catullas) (ಕ್ರಿ.ಪೂ. ೮೪-೫೪) ಒಬ್ಬ; ಇವನು ಬರೆದ ಪುಟ್ಟ ಕವನಗಳು ಅತ್ಯಂತ ಭಾವಪ್ರಧಾನವಾಗಿದೆ. ಪ್ರೇಮ, ವೈರ, ನಿರಾಶೆ—ಇವು ಇವನ ಕಾವ್ಯದ ವಸ್ತು. ಇವನ ದೀರ್ಘ ಕಥನಕವನಗಳು ಅಷ್ಟು ಜನಪ್ರಿಯವಾಗಲಿಲ್ಲವಾದರೂ ಅವು ಮುಂದಿನ ಪೀಳಿಗೆಯ ಕಾವ್ಯದ ಮೇಲೆ ತುಂಬ ಪ್ರಭಾವ ಬೀರಿದವು.

ಲೂಕ್ರೆಷಿಯಸ್ (Lucretius) (ಕ್ರಿ.ಪೂ. ೯೪-೫೫) ತನ್ನದೇ ಆದ ಬೇರೊಂದು ಮಾರ್ಗದಲ್ಲಿ ಸ್ವತಂತ್ರ ಕವಿ ಎನಿಸಿಕೊಂಡ. ಸ್ಟೋಯಿಕ್ ತತ್ತ್ವದ ಹಟಮಾರಿತನ, ಕಡುನೀತಿವಂತಿಕೆ ಮತಾಂಧತೆಗಳು ಅವನಿಗೆ ಅಷ್ಟಾಗಿ ಹಿಡಿಸಲಿಲ್ಲ. ಗ್ರೀಕ್ ಎಪಿಕ್ಯೂರಸ್‌ನ ಭೌತಿಕ ವಾದದಿಂದ ಪ್ರಭಾವಿತನಾಗಿ, ಆರು ಭಾಗಗಳಿರುವ 'ಜಡವಸ್ತುಗಳ ಗುಣಗಳು' ('De Rarem Natura') ಎಂಬ ತನ್ನ ಏಕೈಕಗ್ರಂಥವನ್ನು ಬರೆದ. ಹೆಕ್ಸಾಮೀಟರಿನ ಈ ಕಾವ್ಯ ಅಲ್ಲಲ್ಲಿ ಅತ್ಯುನ್ನತ ಕಲಾತ್ಮಕತೆ ಸಾಧಿಸಿದೆ. ಇವನು ಎಪಿಕ್ಯೂರಸಿನ ತತ್ತ್ವವನ್ನು ವಿವರಿಸುತ್ತ, ಜಡವಸ್ತುವಿನ ಪರಮಾಣುಸ್ಥಿತಿಯನ್ನು ವಿಶ್ಲೇಷಿ

ಸಿದ. ದೇವರ ಸೃಷ್ಟಿ, ಸಾವು ಬದುಕುಗಳು ಎಂದು ಮುಂತಾದ ಸಾಂಪ್ರದಾಯಿಕ ಕಲ್ಪನೆಗಳ ಭೀತಿಯಿಂದ ಮನುಷ್ಯನ ಮನಸ್ಸನ್ನು ಮುಕ್ತಗೊಳಿಸಿದ. ಲೂಕ್ರೆಷಿಯಸ್‌ನ ವಿಜ್ಞಾನ ದೃಷ್ಟಿ ಅನುಪಮವಾದುದು. ಹದಿನೇಳನೆಯ ಶತಮಾನದಲ್ಲಿ ಪರಮಾಣು ತತ್ತ್ವವನ್ನು ಪುನರುಜ್ಜೀವನಗೊಳಿಸಿದಾಗಿನಿಂದ ಹಿಡಿದು ಆಧುನಿಕ ಕಾಲದವರೆಗೆ ಎಲ್ಲರೂ ಲೂಕ್ರೆಷಿಯಸ್‌ನ ಮೂಲಭೂತ ವಿಚಾರಗಳನ್ನು ಒಪ್ಪಿಕೊಂಡಿದ್ದಾರೆ. ಅವನ ಹಲವು ಸಿದ್ಧಾಂತಗಳು ಆಧುನಿಕ ಪರಮಾಣುಶಾಸ್ತ್ರಕ್ಕೆ ಪೂರ್ವಸೂಚಿಯಾಗಿವೆ. ಆದರೆ ನಿಜವಾಗಿ ಅವನ ಹಿರಿಮೆ ಇರುವುದು ಅವನ ವೈಜ್ಞಾನಿಕ ಚಿಂತನೆಗಳಲ್ಲಲ್ಲ, ಅವನ ಬದುಕಿನ ದರ್ಶನ ತತ್ತ್ವಗಳಲ್ಲಿ. ಮನುಷ್ಯನನ್ನು ಸಾವಿನ ಚಿಂತೆಯಿಂದ ತಪ್ಪಿಸಿ ನಿಸರ್ಗಚಿಂತನೆಯಲ್ಲಿ ತೊಡಗಿಸಬೇಕೆನ್ನುವುದು ಅವನ ಗುರಿಯಾಗಿತ್ತು. ಆದ್ದರಿಂದ ಅವನು ಮತ್ತೆ ಮತ್ತೆ ಧರ್ಮವನ್ನು ತರ್ಕದ ಬೆಳಕಿಗೆ ಒಡ್ಡಿ, ವಿಚಾರಕ್ಕೆ ಒರೆಹಚ್ಚಿ, ಆತ್ಮ, ಪರಲೋಕ ನರಕ ಮುಂತಾದ ಕಲ್ಪನೆಗಳನ್ನು ನಿಖರವಾಗಿ ವಿಶ್ಲೇಷಿಸಿದ. ಶಾಂತಚಿತ್ತತೆ, ವೈಚಾರಿಕತೆ, ನಿಷ್ಠುರವಿವೇಚನೆಗಳು ಸರಿಯಾದ ಪರಿಹಾರಗಳೆಂದು ಅವನ್ನು ಸಮರ್ಥಿಸಿದ. ತನ್ನ ವೈಚಾರಿಕತೆಯಲ್ಲಿನ ಕಾವ್ಯಶಕ್ತಿಯಿಂದಾಗಿ ಅವನೊಬ್ಬ ಅನುಭಾವ ಕವಿ ಎನಿಸಿಕೊಂಡಿದ್ದಾನೆ.

ಸಿಸಿರೊ ಯುಗದ ಗದ್ಯಸಾಹಿತ್ಯ: ಏತನ್ಮಧ್ಯೆ ಕೇಟೊ ಬಳಸಿದ ವ್ಯಾವಹಾರಿಕವಾದ ಗಡಸುಶೈಲಿಯ ಗದ್ಯ ಅನೇಕರ ಕೈಯಲ್ಲಿ ಪಳಗಿ ಪರಿಷ್ಕಾರಗೊಳ್ಳುತ್ತ ಬಂತು. ಗ್ರೀಕ್ ಅಲಂಕಾರಶಾಸ್ತ್ರಜ್ಞರ ಪ್ರಭಾವದಿಂದ ಏಷ್ಯನ್ ಅಥವಾ ಅತ್ಯಾಲಂಕಾರಿಕ, ಮತ್ತು ಆ್ಯಟಿಕ್ ಅಥವಾ ಅತಿಸರಳ ಎಂಬ ಎರಡು ಬಗೆಯ ಶೈಲಿಗಳು ರೂಪುಗೊಂಡಿದ್ದವು. ಜೂಲಿಯಸ್ ಸೀಸರ್ (ಕ್ರಿ. ಪೂ. ೧೦೨-೪೪) ರಚಿಸಿದ 'ಗ್ಯಾಲಿಕ್ ಯುದ್ಧಗಳ ಸಮೀಕ್ಷೆ', 'ಅಂತರ್ಯುದ್ಧ' ಎಂಬ ಚಾರಿತ್ರಿಕ ಗ್ರಂಥಗಳಲ್ಲಿ ಅನುಕರಣಯೋಗ್ಯವಾದ ಸರಳಶೈಲಿ ಬಳಸಿದೆ. ಒಂದು ಸೀಮಿತ ಅವಧಿಯ ಇತಿಹಾಸವನ್ನು ವೈವಿಧ್ಯಮಯ, ಸಂಕ್ಷಿಪ್ತ, ನಿಶ್ಚಿತ ಆದ ಶೈಲಿಯಲ್ಲಿ ಬರೆದವನು ಸ್ಯಾಲಸ್ಟ್ (ಕ್ರಿ. ಪೂ. ೮೬-೩೪). ಇವನ 'ಕ್ಯಾಟಲಿನ್', 'ಜುಗರ್ತೈನ್ ಯುದ್ಧ' ಇಂದಿಗೂ ಉಳಿದಿವೆ. ಶ್ರೇಷ್ಠ ವಾಗ್ಮಿ ಸಿಸಿರೊ (ಕ್ರಿ. ಪೂ. ೧೦೬-೪೩) ಈ ಯುಗದ ಉನ್ನತ ಮಟ್ಟದ ಗದ್ಯಶಿಲ್ಪಿ. ಅವನ ಶೈಲಿಯಲ್ಲಿ ಸರಳತೆ, ಅಲಂಕಾರಿಕತೆಗಳೆರಡರ ಸಮನ್ವಯವಿದೆ. ಉಪವಾಕ್ಯಗಳಿಂದ ಕಿಕ್ಕಿರಿದ ಅವನ ಉದ್ದಂಡ ಶೈಲಿ ಲ್ಯಾಟಿನ್ ಸಾಹಿತ್ಯದಲ್ಲಿ ಬಹುಕಾಲ ಮಾದರಿಯೆನಿಸಿಕೊಂಡಿತು. ಲ್ಯಾಟಿನ್ ಗದ್ಯವನ್ನು ವಿಶ್ವಸಾಹಿತ್ಯದ ಮಟ್ಟಕ್ಕೆ ಏರಿಸಿದ ಕೀರ್ತಿ ಅವನದು. ಅವನ ಭಾಷಣ ಲೇಖನಗಳಲ್ಲಿ ಹಲವು ಸಿಕ್ಕಿವೆ. ಅವುಗಳಲ್ಲಿ ಕೆಲವು ಖಾಸಗಿ ಹಾಗೂ ಸಾರ್ವಜನಿಕ ಭಾಷಣಗಳು; ಇನ್ನು ಕೆಲವು ವಾಗ್ಮಿಗಳನ್ನೂ ಭಾಷಣ ಕಲೆಯನ್ನೂ ಕುರಿತ ಪ್ರಬಂಧಗಳು. ಇವಲ್ಲದೆ ತತ್ತ್ವಶಾಸ್ತ್ರ ನೀತಿಶಾಸ್ತ್ರಗಳು ಮತ್ತು ರಾಜಕಾರಣವನ್ನು ಕುರಿತವು ಕೂಡ ಇದರಲ್ಲಿ ಸೇರಿವೆ. ಸ್ವಂತ ಪತ್ರಗಳೂ ಇವೆ. ಸಿಸಿರೋ ತಾನೇ ಸ್ವಂತವಾಗಿ ವಿಚಾರಾನ್ವೇಷಣೆ ಮಾಡುವುದಕ್ಕಿಂತ ಹೆಚ್ಚಾಗಿ ಮತ್ತೊ

ಬ್ಬರ ಅಭಿಪ್ರಾಯಗಳನ್ನೂ ವಾದಗಳನ್ನೂ ಅತ್ಯಂತ ಸಮರ್ಪಕವಾಗಿ ಪ್ರಸ್ತುತಪಡಿಸ ಬಲ್ಲವನಾಗಿದ್ದ. 'ಸ್ನೇಹ', 'ಮುಪ್ಪು' ಮುಂತಾದ ಆತನ ಪ್ರಬಂಧಗಳಲ್ಲಿ ಸ್ವಂತಿಕೆ, ಸುಕುಮಾರ ಸ್ವಭಾವ ಮಿಂಚಿ ಹೊಮ್ಮುತ್ತವೆ. ಆದರೆ ಅವನ ಗ್ರಂಥಗಳಿಗೆ ಮನ್ನಣೆ ದೊರೆತಿರುವುದು ಅವುಗಳಲ್ಲಿ ಸಿಕ್ಕುವ ಐತಿಹಾಸಿಕ ಪುರಾವೆಯಿಂದ. ಆ ಕಾಲದ ಉಜ್ವಲ ಇತಿಹಾಸ ಸಿಸಿರೋವಿನ ಗ್ರಂಥಗಳಲ್ಲಿ ಜೀವತುಂಬಿ ನಮ್ಮ ಕಣ್ಣ ಮುಂದೆ ಸುಳಿಯುತ್ತದೆ. ಆ ಯುಗದ ಇನ್ನೊಬ್ಬ ಉದ್ದಾಮ ಪಂಡಿತ ವೆರ್ರೊ (ಕ್ರಿ. ಪೂ. ೧೧೬-೨೭). ಇವನದು ವಿಶ್ವಕೋಶದಂಥ ಮನಸ್ಸು. ಅವನ ಲೇಖನಗಳು ಗುಣದಲ್ಲಲ್ಲದಿದ್ದರೂ ಗಾತ್ರದಲ್ಲಿಯಾದರೂ ಸಿಸಿರೋವಿನ ಗ್ರಂಥಗಳಿಗೆ ಸರಿತೂಗಬಲ್ಲವು. ಲ್ಯಾಟಿನ್ ಭಾಷೆ ಮತ್ತು ಕೃಷಿವಿಜ್ಞಾನವನ್ನು ಕುರಿತು ಬರೆದ ಇವನ ಗ್ರಂಥಗಳು ಪ್ರಸಿದ್ಧವಾಗಿವೆ.

ಅಗಸ್ಟಸ್ ಸ್ವರ್ಣಯುಗ: ಕ್ರಿ.ಪೂ. ೩೧ರ ಆ್ಯಕ್ಟಿಅಮ್ ಯುದ್ಧದ ತರುವಾಯ ಅಗಸ್ಟಸ್ ರೋಮಿನ ಚಕ್ರವರ್ತಿಯಾದ. ಸಾಹಿತ್ಯಾಭಿರುಚಿಯುಳ್ಳ ತನ್ನ ಸಚಿವ ಮೈಸಿನಾಸ್‌ನ ಉತ್ಸಾಹಯುತ ನೆರವಿನಿಂದ ರೋಮನ್ ಸಾಮ್ರಾಜ್ಯದ ಸಾಹಿತ್ಯ ಕಲೆಗಳನ್ನು ಪುರಾತನ ಗ್ರೀಕ್‌ಸಾಹಿತ್ಯದ ಮಟ್ಟಕ್ಕೆ ಏರಿಸಲು ತವಕಿಸಿದ. ಆ ದೃಷ್ಟಿಯಿಂದ ಸಾಹಿತ್ಯಿಕ ಚಟುವಟಿಕೆಗಳಿಗೆ ಬೇಕಾದಷ್ಟು ಪ್ರೋತ್ಸಾಹ ಪುರಸ್ಕಾರಗಳನ್ನು ನೀಡಿದ. ಆ ಯುಗದ ಶ್ರೇಷ್ಠ ಕವಿಗಳೆಲ್ಲರಿಗೂ ರಾಜಾಶ್ರಯ ಸಿಕ್ಕಿತು. ಇದರಿಂದ ಕವಿಗಳ ಅಭಿವ್ಯಕ್ತಿಸ್ವಾತಂತ್ರ್ಯಕ್ಕೆ ಅಡ್ಡಿಯುಂಟಾಯಿತಾದರೂ, ರಾಜನ ಕೃಪೆಯಿಲ್ಲದಿದ್ದರೆ ವರ್ಜಿಲರಂಥ ಕವಿಗಳು ಬೆಳಕಿಗೇ ಬರುತ್ತಿರಲಿಲ್ಲವೇನೊ. ಆಗಿನ ಕವಿಗಳಲ್ಲಿ ವರ್ಜಿಲ್, ವೆರ್ರಿಯಸ್, ಹೊರೆಸ್, ಟಿಬುಲಸ್ (Tibullus), ಪ್ರೊಪರ್ಶಿಯಸ್ (Propertius) ಮತ್ತು ಓವಿಡ್ ಇವರ ಹೆಸರುಗಳನ್ನು ವಿಶೇಷವಾಗಿ ಸ್ಮರಿಸಬೇಕು.

ವರ್ಜಿಲ್ (ಕ್ರಿ. ಪೂ. ೭೦-೧೯) ಲ್ಯಾಟಿನ್ ಸಾಹಿತ್ಯದ ಮಹಾಕವಿಗಳಲ್ಲೊಬ್ಬ. ಯೌವನದಲ್ಲಿ ಉತ್ತಮ ಶಿಕ್ಷಣ ಪಡೆದು ನೇಪಲ್ಸ್ ಬಳಿ ಗ್ರಾಮವಾಸದಲ್ಲಿ ವಿರಮಿಸುತ್ತಿದ್ದ. ನಿರಂತರ ಅಧ್ಯಯನದಲ್ಲಿ, ಕಾವ್ಯಚಿಂತನೆಯಲ್ಲಿ ಮಗ್ನನಾಗಿದ್ದ. ತನ್ನ ಜೀವನಾಧಾರವಾಗಿದ್ದ ಜಮೀನನ್ನು ರೋಮನ್ ಅಧಿಕಾರಿಗಳು ವಶಪಡಿಸಿಕೊಂಡಾಗ ದೊರೆಗೆ ಮೊರೆಯಿಟ್ಟ. ದೊರೆ ಅಗಸ್ಟಸ್‌ನ ಅನುಗ್ರಹಕ್ಕೆ ಪಾತ್ರನಾದ. ಅವನ ನಿಕಟ ಅನುಯಾಯಿಯಾದ. ಹೊರೆಸನಂಥ ಉಳಿದ ಕವಿಗಳಿಗೆ ರಾಜಾಶ್ರಯ ಸಿಕ್ಕಲು ಸಹಾಯ ಮಾಡಿದ. ಅಗಸ್ಟಸ್‌ನು ಕಾವ್ಯರಚನೆಯಲ್ಲೂ ಕವಿಗೆ ಸಲಹೆಗಳನ್ನು ಇತ್ತು ಪ್ರೋತ್ಸಾಹಿಸಿದನೆನ್ನುತ್ತಾರೆ. ವರ್ಜಿಲನ ಆರಂಭದ ಕೃತಿಗಳಾದ 'ಎಕ್ಲೊಗ್ಸ್' (ಸೂಕ್ಷ್ಮಚಿತ್ರ ಸಂಗ್ರಹಗಳು) ಮತ್ತು 'ಜಾರ್ಜಿಕ್ಸ್' (ಬೇಸಾಯ) ಎಂಬ ಎರಡು ಗ್ರಾಮೀಣ ಕಾವ್ಯಗಳು ಬಹುಬೇಗ ಜನಪ್ರಿಯವಾದವು. ಈ ಕಾವ್ಯಗಳಲ್ಲಿ ಕವಿಯ ದೇಶಪ್ರೇಮ ಉಕ್ಕಿ ಹರಿದಿದೆ. ಇಟಲಿಯ ಗ್ರಾಮಜೀವನದ ಸಿರಿಸಂಪತ್ತನ್ನೂ ಶಾಂತಿಸರಳತೆಯನ್ನೂ ಅತ್ಯಂತ ಪರಿಷ್ಕಾರವಾದ ಹೆಕ್ಸಾಮೀಟರ್‌ನಲ್ಲಿ ವರ್ಣಿಸಿದ್ದಾನೆ. ಇದರಲ್ಲಿ ಗ್ರೀಕ್ ಕವಿ ಥಿಯೋಕ್ರಿಟಸ್‌ನ ಪ್ರಭಾವ ಬಹಳಷ್ಟಿದೆ. ವರ್ಜಿಲ್‌ನ ಮೇರುಕೃತಿ ೧೨ ಭಾಗಗಳಿರುವ

'ಏನಿಡ್' ಎಂಬ ಮಹಾಕಾವ್ಯ. ಪುರಾತನ ಗ್ರೀಕ್ ಭವ್ಯಕಾವ್ಯ ಮತ್ತು ತನ್ನ ಹಿಂದಿನ ರೋಮನ್ ರೊಮ್ಯಾಂಟಿಕ್ ಭವ್ಯಕಾವ್ಯ-ಎರಡರ ಬುನಾದಿಯ ಮೇಲೆ ಕವಿ ತನ್ನ ಕಾವ್ಯವನ್ನು ನಿರ್ಮಿಸಿದ್ದಾನೆ. ಇದರಲ್ಲಿ ಟ್ರೋಜನ್ ವೀರ ಅಇನಿಯಾಸ್ ರೋಮ್ ನಗರವನ್ನು ಸ್ಥಾಪಿಸಿದ ಕಥೆಯಿದೆ. ಪುರಾಣೇತಿಹಾಸಗಳ ಸುರಸ ಸಮ್ಮಿಳನ ಈ ಮಹಾಕಾವ್ಯ. ಈ ಕಾವ್ಯಕ್ಕೆ ಮೂಲಸ್ಫೂರ್ತಿ ಹೋಮರನ ಕಾವ್ಯಗಳು; 'ಏನಿಡ್'ನ ಪ್ರವಾಸವನ್ನು ವರ್ಣಿಸುವ ಮೊದಲ ಆರು ಭಾಗಗಳು 'ಒಡಿಸ್ಸಿ'ಯ ಕಲ್ಪನೆಯ ಮೇಲೂ ಅಇನಿಯಾಸ್ ಯುದ್ಧಗಳಲ್ಲಿ ತೊಡಗಿ ಆಮೇಲೆ ಇಟಲಿಯಲ್ಲಿ ನೆಲಸುವ ಕಥೆಯನ್ನುಳ್ಳ ಉಳಿದ ಆರು ಭಾಗಗಳು 'ಇಲಿಯೆಡ್' ರಚನೆಯ ಮೇಲೂ ಆಧಾರಿತವಾಗಿವೆ. ಇದಲ್ಲದೆ ವರ್ಜಿಲ್ ಅಪಲೋನಿಯಸ್ ರ್‍ಹೊಡಿಯಸ್ ಮತ್ತು ಪ್ರಾಚೀನ ಗ್ರೀಕ್ ಮಹಾ ನಾಟಕಕಾರರಿಂದಲೂ ಪ್ರೇರಣೆ ಪಡೆದಿದ್ದಾನೆ. ಲ್ಯಾಟಿನ್ ಭಾಷೆಯ ಗಾಂಭೀರ್ಯ ವನ್ನೂ ಲಾಲಿತ್ಯವನ್ನೂ ಅದ್ಭುತವಾಗಿ ದುಡಿಸಿಕೊಂಡಿದ್ದಾನೆ. ಕಾವ್ಯದಲ್ಲಿ ಬರುವ ಅಧೋಲೋಕದ ವರ್ಣನೆಗಳ ನಡುವೆ ಗಾಢ ತತ್ತ್ವದರ್ಶನಗಳ ವಿಚಾರ ಪರಂಪರೆಯನ್ನು ಸೇರಿಸಿ ಲೋಕೋತ್ತರವಾದ ಕಾವ್ಯವನ್ನು ರೂಪಿಸಿದ್ದಾನೆ.

ಕವಿ ಹೊರೆಸ್ (ಕ್ರಿ. ಪೂ. ೬೫-೮), ಲೂಸಿಯಸ್‌ನ ವಿಡಂಬನ ಕಾವ್ಯಪರಂಪರೆ ಯನ್ನೂ ಸಾಫೊ ಮುಂತಾದವರ ಭಾವಗೀತೆಯ ಸಂಪ್ರದಾಯವನ್ನೂ ಮುಂದುವರಿಸಿ ಪರಿಪೂರ್ಣಗೊಳಿಸಿದ. 'ಸಾರ್ವಜನಿಕ' ಕವನಗಳನ್ನು ಬರೆದು ತನ್ನ ಆಶ್ರಯದಾತ ಅಗಸ್ಟಸ್ ದೊರೆಯ ರಾಜನೀತಿಯನ್ನು ಉತ್ಸಾಹದಿಂದ ಸಮರ್ಥಿಸಿದ. ವೈಯಕ್ತಿಕ ವಾಗಿಯೂ ಉತ್ಕೃಷ್ಟ ಕವನಗಳನ್ನು ಬರೆದು ಸ್ವಂತಕ್ಕೆ ಗೌರವವನ್ನು ತಂದುಕೊಂಡ. ಇವನ ಕಾವ್ಯಕೃತಿಗಳಲ್ಲಿ ಅಂತ್ಯಗೀತೆಗಳು (Ipodes), ವಿಡಂಬನೆಗಳು (Satires), ಪ್ರಗಾಥಗಳು (Odes) ಕಾವ್ಯಪತ್ರಗಳು (Epistels) ಇವು ಸೇರುತ್ತವೆ. ಕಾವ್ಯಕಲೆ (Ars poetica) ಎಂದು ಪ್ರಸಿದ್ಧವಾಗಿರುವ ಹೊರೆಸನ ಸಾಹಿತ್ಯಮೀಮಾಂಸೆಯ ಕೃತಿ ಪುನರುಜ್ಜೀವನ ಕಾಲದ ಪಂಡಿತರ ಮೇಲೂ ನಿಯೊ-ಕ್ಲಾಸಿಕಲ್ ಯುಗದ ಯೂರೋಪಿ ಯನ್ ಸಾಹಿತ್ಯವಿಮರ್ಶೆಯ ಮೇಲೂ ಗಾಢ ಪ್ರಭಾವ ಬೀರಿತು. ಎಲಿಜಬೆತ್ ಯುಗದ, ಹದಿನೆಂಟನೆಯ ಶತಮಾನದ ಡ್ರೈಡನ್, ಜಾನ್ಸನ್, ಪೋಪ್ ಮುಂತಾದ ಇಂಗ್ಲಿಷ್ ಕವಿ ವಿಮರ್ಶಕರೆಲ್ಲರಿಗೂ ಹೊರೆಸ್ ಪರಮಗುರುವಾಗಿದ್ದ. ಅವನ ಸಾಹಿತ್ಯಸೂತ್ರಗಳು ಹಲವು ಹತ್ತು ಭಾಷಾಂತರ ರೂಪಾಂತರಗಳ ಮೂಲಕ ಯೂರೋಪಿನ ಸಾಹಿತ್ಯವನ್ನು ಆವರಿಸಿತು. ವಿವಿಧ ಗ್ರೀಕ್ ಮತ್ತು ಲ್ಯಾಟಿನ್ ಛಂದಸ್ಸುಗಳನ್ನು ಹೊರೆಸ್ ಅತ್ಯಂತ ಜಾಣ್ಮೆಯಿಂದ ದುಡಿಸಿಕೊಂಡು ತನ್ನ ಪ್ರತಿಭೆಯನ್ನು ಮೆರೆಯಿಸಿದ್ದಾನೆ. "ಕೇವಲ ಕಾವ್ಯ ಸೂತ್ರಗಳ ಅಧ್ಯಯನದಿಂದ ಕಾವ್ಯಕಲೆ ಕರಗತವಾಗುವುದಿಲ್ಲ. ಅದಕ್ಕೆ ನಿರಂತರ ದುಡಿಮೆ, ಪ್ರತಿಭೆ ಅಗತ್ಯ"; "ಒಳಗೆ ಆವೇಶವಿದ್ದಾಗ ಮಾತ್ರ ಲೇಖನದ ಕೆಲಸಕ್ಕೆ ಕೈಹಾಕು; ಬರೆದು ಮುಗಿಸಿದ ಮೇಲೆ ಯೋಗ್ಯರ ಅಭಿಮತ ಏನೆಂದು ತಿಳಿದುಕೊ; ಆಮೇಲೆ ಅದನ್ನು ಪ್ರಕಟಿಸದೆ ಸುಮ್ಮನೆ ಒಂಬತ್ತು ವರ್ಷ ನಿನ್ನ ಬಳಿಯಲ್ಲೆ ಇಟ್ಟುಕೊ"—ಇವು ಹೊರೆಸನ

ಕೆಲವು ಪ್ರಸಿದ್ಧ ವಾಕ್ಯಗಳು. ವ್ಯವಹಾರಚತುರನೊಬ್ಬನ ಲೋಕಜ್ಞಾನವು ಹೊರೆಸನ ಗ್ರಂಥಗಳಲ್ಲಿ ಮುಕ್ತಕಗಳಂತೆ ಹೊಮ್ಮಿದೆ. ಯೂರೋಪಿನ ಕವಿಗಳ ಮೇಲೆ ವ್ಯಾಪಕ ಪ್ರಭಾವ ಬೀರಿದ ಕೀರ್ತಿ ಇವನದು.

ವರ್ಜಿಲನ ಸರಿಸಾಟಿಯಾಗಬಲ್ಲ ಇನ್ನೊಬ್ಬ ಶ್ರೇಷ್ಠ ಕವಿ 'ಓವಿಡ್' (Ovid) (ಕ್ರಿ.ಪೂ. ೪೩–ಕ್ರಿ.ಶ. ೧೭). ಶೃಂಗಾರವನ್ನು ಇವನಷ್ಟು ಸುಂದರವಾಗಿ ಚಿತ್ರಿಸಿರುವವರು ಪಾಶ್ಚಾತ್ಯ ಕಾವ್ಯಪ್ರಪಂಚದಲ್ಲಿ ವಿರಳ. 'ಆ್ಯಮೊರಸ್', 'ಹಿರಾಯ್ಡ್' (ಜಗತ್ಪ್ರಸಿದ್ಧ ಪೌರಾಣಿಕ ಸ್ತ್ರೀಯರು ತಮ್ಮ ಪ್ರೇಮಿಗಳಿಗೆ ಬರೆದ ಪ್ರಣಯಪತ್ರಗಳು), 'ಆರ್ಸ್ ಅಮೆಟೋರಿಯ'—ಇವು ನವಿರಾದ ಶಿಷ್ಟತೆಯಿಂದ ತುಂಬಿ ತುಳುಕುವ ಪ್ರೇಮಕವನಗಳು. 'ಫಾಸ್ಟಿ' ರೋಮನ್ ಹಬ್ಬಗಳನ್ನು ವರ್ಣಿಸುವ ಅಪೂರ್ಣ ಕಾವ್ಯ. ಮಾತಿನ ಜಾಣತನ ಪದೌಚಿತ್ಯಗಳಲ್ಲಿ, ನಾಟಕೀಯ ಸನ್ನಿವೇಶಗಳನ್ನು ಚಿತ್ರಿಸುವುದರಲ್ಲಿ ಇವನನ್ನು ಮೀರಿಸಿದವರಿಲ್ಲ. ಇವನ ಉತ್ಕೃಷ್ಟ ಕೃತಿ 'ರೂಪಪರಿವರ್ತನೆಗಳು' (Metamorphasis). ಇದರಲ್ಲಿ ನಿರರ್ಗಳವಾದ ಹೆಕ್ಸಾಮೀಟರಿನಲ್ಲಿ ಬರೆದ ಹದಿನೈದು ಭಾಗಗಳಿವೆ. ಸಮಗ್ರ ಗ್ರೀಕ್ ಪುರಾಣಲೋಕದಿಂದ ಆರಿಸಿದ ಹಲವು ಕಥೆಗಳು ಬರುತ್ತವೆ. ಇದರಲ್ಲಿ ಕವಿ ಮೆಡಿಟರೇನಿಯನ್ ಪ್ರದೇಶದ ಪಂಡಿತಪಾಮರರಿಗೆ ಚಿರಪರಿಚಿತವಾದ, ಹೋಮರ್‌ಗಿಂತ ಹಿಂದಿನ ಕಾಲದ ಪುರಾಣಕಥೆಗಳನ್ನು ಆರಿಸಿಕೊಂಡಿದ್ದಾನೆ. ಕಥೆಗಳನ್ನು ಬೇಕಾದಹಾಗೆ ಮಾರ್ಪಡಿಸಿಕೊಂಡಿದ್ದಾನೆ. ಸ್ತ್ರೀ ಪಾತ್ರಗಳ ಆಂತರಿಕ ತುಮುಲ ತಳಮಳಗಳನ್ನು ಸೊಗಸಾಗಿ ಚಿತ್ರಿಸಿದ್ದಾನೆ. ಗ್ರೀಕ್ ದೇವತೆಗಳ ಬಗೆಗೆ ಭಯಭಕ್ತಿಗಳಾಗಲಿ, ಶ್ರದ್ಧೆವಿಸ್ಮಯಗಳಾಗಲಿ, ಧರ್ಮಜಿಜ್ಞಾಸೆಯಾಗಲಿ ಇಲ್ಲದಿರುವುದರಿಂದ ಕವಿ ಕಥಾನಿರೂಪಣೆಯಲ್ಲಿ ಅತಿಯಾದ ಸ್ವಾತಂತ್ರ್ಯ ವಹಿಸಿದ್ದಾನೆ. ಮನುಷ್ಯನ ಮಾನಸಿಕ ವ್ಯಾಪಾರಗಳನ್ನು ಕುರಿತು ಅತ್ಯಂತ ಗಾಢ ಕುತೂಹಲವನ್ನು ವ್ಯಕ್ತಪಡಿಸುತ್ತಾನೆ. ದೇವತೆಗಳ ಅನೈತಿಕ ಪ್ರೇಮದ ವ್ಯವಹಾರ ವರ್ಣಿಸುವಾಗ ತನ್ನ ಸಿನಿಕತನವನ್ನೂ ಕಿಲಾಡಿತನವನ್ನೂ ಮೆರೆಯಿಸಿದ್ದಾನೆ. ಗ್ರೀಕ್ ನಾಟಕದಿಂದ ಪ್ರೇರಿತನಾಗಿ, ಭಾವಗೀತಾತ್ಮಕ ಶೈಲಿಯಲ್ಲಿ ಪಾತ್ರಗಳ ಸ್ವಾಗತ ಭಾಷಣಗಳನ್ನೂ ಸಂಭಾಷಣೆಗಳನ್ನೂ ಚಿತ್ರಿಸಿದ್ದಾನೆ. ಈ ನಾಟಕೀಯ ಅಂಶವು ಸೆನೆಕ (Seneca)ನ ಅತಿರಂಜಕಶೈಲಿಯ ಓದುನಾಟಕ (Closet play) ಗಳಿಗೆ ಪೂರ್ವಸೂಚಿಯಾಗಿವೆ ಎನ್ನುವುದುಂಟು. 'ರೂಪಪರಿವರ್ತನೆಗಳು' ಕೃತಿಯಲ್ಲಿ ಬರುವ ಪ್ರತಿಯೊಂದು ಕಥೆಯಲ್ಲೂ ಪಾತ್ರಗಳು ಅದ್ಭುತ ರೂಪಪರಿವರ್ತನೆಗೊಳಗಾಗುವ ಅಲೌಕಿಕ ಸನ್ನಿವೇಶಗಳಿವೆ. ಓವಿಡ್‌ನ ಈ ಕೃತಿ ಶತಮಾನಗಳಿಂದಲೂ ಅನೇಕ ಕವಿಗಳಿಗೆ ಸ್ಫೂರ್ತಿಯಾಗಿದ್ದು, ಇಂಗ್ಲಿಷ್ ಸಾಹಿತ್ಯದ ಷೇಕ್ಸ್‌ಪಿಯರ್, ಛಾಸರ್, ಸ್ಪೆನ್ಸರ್, ಚಾಪ್‌ಮನ್, ಪೋಪ್ ಎಲ್ಲರೂ ಒಂದಲ್ಲ ಒಂದು ರೀತಿ ಓವಿಡ್‌ನ ಋಣವನ್ನು ಹೊತ್ತಿದ್ದಾರೆ. ಆದ್ದರಿಂದಲೇ ಇವನನ್ನು 'ಕವಿಗಳ ಕವಿ' ಎನ್ನುವುದುಂಟು. ಪುನರುಜ್ಜೀವನಯುಗದ ಶಿಲ್ಪಿಗಳಿಗೆ. ಚಿತ್ರಗಾರರಿಗಂತೂ ಓವಿಡ್‌ನ ಕಾವ್ಯ ಕೊರೆಬೀಳದ ಚಿನ್ನದ ಗಣಿ.

ಆಗಸ್ಟಸ್ ಯುಗದಲ್ಲಿ ಗಮನಾರ್ಹ ಗದ್ಯ ಬರೆದವನು ಎಂದರೆ ಸ್ವದೇಶಾಭಿಮಾನಿಯಾದ ಇತಿಹಾಸಕಾರ ಲಿವಿ (Livy) (ಕ್ರಿ.ಪೂ. ೫೯–ಕ್ರಿ.ಶ. ೧೭) ಇವನು ರೋಮಿನ ಪುರಾಣಯುಗದ ಪೂರ್ವದಿಂದ ಹಿಡಿದು ಕ್ರಿ.ಪೂ. ೯ರ ವರೆಗಿನ ಇತಿಹಾಸವನ್ನು ಬರೆದ. ಇವರ ಶೈಲಿ ಗಂಭೀರ, ಆಲಂಕಾರಿಕ; ಆದರೆ ದೋಷರಹಿತವಲ್ಲ. ರೋಮ್‌ನಲ್ಲಿ ಇತಿಹಾಸ ರಚನೆಗೆ ಬುನಾದಿ ಕಲ್ಪಿಸಿದವನು ಲಿವಿ.

ಸಾಮ್ರಾಜ್ಯ ಸಾಹಿತ್ಯದ ರಜತಯುಗ: ಆಗಸ್ಟಸ್ ಸ್ವರ್ಣಯುಗ ಕಳೆದ ಮೇಲಿನ ಕಾಲವನ್ನು ರೋಮಿನ ಸಾಮ್ರಾಜ್ಯಯುಗ ಅಥವಾ ರಜತಯುಗ ಎನ್ನುತ್ತಾರೆ. ಆದರೂ ಲ್ಯಾಟಿನ್ ಸಾಹಿತ್ಯದ ಇಳಿಗತಿ ಪ್ರಾರಂಭವಾಯಿತೆಂದೇ ಹೇಳಬೇಕು. ಆ ಹೊತ್ತಿಗೆ ಆಗಲೇ ಕೇವಲ ಕೃತಕವಾದ ಅನುಕರಣೆ, ಶಬ್ದಾಡಂಬರಗಳೇ ಹೆಚ್ಚಾಗಿದ್ದವು. ಸ್ವಂತಿಕೆಯ ಅಭಾವ ತೋರಿಬಂದಿತ್ತು. ಇದಕ್ಕೆ ಮುಖ್ಯ ಕಾರಣ, ಭಾಷಣಕಲೆ. ಅದು ರೋಮನ್ ಶಿಕ್ಷಣದ ಬಹುಭಾಗವನ್ನು ಆವರಿಸಿಕೊಂಡು ಕ್ರಿಯಾತ್ಮಕವಾದ ಸಾಹಿತ್ಯಕ್ಕೆ ಅಡ್ಡಿಯಾಯಿತು. ಆಲಂಕಾರಿಕವಾದ ಶಬ್ದಜಾಲ, ಪಾಂಡಿತ್ಯಪ್ರದರ್ಶನ ಇವೇ ಸಾಹಿತ್ಯದ ಜೀವಾಳವೆನ್ನುವ ತಪ್ಪುಗ್ರಹಿಕೆ ಸರ್ವಸಾಮಾನ್ಯವಾಯಿತು. ಪೇಟರ್‌ಕ್ಯುಲಸ್ (PaterculIus) (ಕ್ರಿ.ಪೂ. ೧೯–ಕ್ರಿ.ಶ. ೩೦) ರಂಥ ಕೆಲವು ಚರಿತ್ರಕಾರರನ್ನು ಮಾತ್ರ ಹೆಸರಿಸಬಹುದು.

ಚಕ್ರವರ್ತಿ ನೀರೋವಿನ ಕಾಲದಲ್ಲಿ ಕೆಲವು ಪ್ರಮುಖ ಲೇಖಕರು ಬೆಳಕಿಗೆ ಬಂದರು. ಲ್ಯೂಕನ್ (Lucan) (ಕ್ರಿ.ಶ. ೩೯–೬೫) ಆಲಂಕಾರಿಕ ಬರೆವಣಿಗೆಯನ್ನು ಉನ್ನತ ಕಾವ್ಯದ ಮಟ್ಟಕ್ಕೆ ಏರಿಸಿದ. ಇವನ 'ಫಾರ್ಸೆಲಿಯ', ಜೂಲಿಯಸ್ ಸೀಸರ್ ಮತ್ತು ಪಾಂಪೆಯ ನಡುವಣ ಅಂತರ್ಯುದ್ಧವನ್ನು ವರ್ಣಿಸುವ ಭವ್ಯ ಕಾವ್ಯ. ಇವನ ಚಿಕ್ಕಪ್ಪ ಸೆನೆಕ (ಕ್ರಿ.ಪೂ. ೪–ಕ್ರಿ.ಶ. ೬೫) ಜನಪ್ರಿಯವಾದ ಸರಳ ಶೈಲಿಯಲ್ಲಿ ಹಲವು ನೀತಿಪ್ರಬಂಧಗಳನ್ನು ಬರೆದ. ಇವನು ಗ್ರೀಕ್ ನಾಟಕಗಳಿಂದ ಅಳವಡಿಸಿ ಅತಿರಂಜಕ ಶೈಲಿಯಲ್ಲಿ ಬರೆದ ೧೦ ದುರಂತ ನಾಟಕಗಳು ಸಿಕ್ಕಿವೆ. 'ಓದುನಾಟಕ' (Closet play) ಮತ್ತು 'ಮೆಲೊಡ್ರಾಮ' ಎಂದು ಕರೆಯಲಾಗುವ ಈ ಕೃತಿಗಳಲ್ಲಿ ಕೊಲೆ, ರಕ್ತಪಾತ, ಭೂತಪ್ರೇತಗಳು, ಅದ್ಭುತ ಘಟನೆಗಳು ಹೇರಳವಾಗಿ ಬರುತ್ತವೆ. ಎಪಿಕ್ಯೂರಸ್‌ನ ಸ್ಟೋಯಿಕ್ ತತ್ತ್ವಗಳಿಂದ ನಾಟಕಗಳು ಕಿಕ್ಕಿರಿದಿವೆ. ಸೆನೆಕನ ಈ ನಾಟಕಗಳು ರಾಸಿನ್, ಮಾರ್ಲೊ, ಷೇಕ್ಸ್‌ಪಿಯರ್ ಮುಂತಾದ ನಾಟಕಕಾರರ ಮೇಲೆ ಅಗಾಧವೂ ವ್ಯಾಪಕವೂ ಆದ ಪ್ರಭಾವ ಬೀರಿದುವು. ಪೆಟ್ರೋನಿಯಸ್ ಆರ್ಬಿಟರ್ ಎಂಬಾತ ಬರೆದ 'ಸ್ಯಾಟಿರಿಕನ್' ಒಂದು ವಿಡಂಬನ ಕಥೆ; ಇದು ಯಥಾರ್ಥ ಜೀವನವನ್ನು ಚಿತ್ರಿಸುವ ಕಾದಂಬರಿ ಎನ್ನಬಹುದಾದ ಒಂದು ವಿಶಿಷ್ಟ ಕೃತಿ. ಫೀಡ್ರಸ್ (ಕ್ರಿ.ಪೂ. ೧೫—ಕ್ರಿ.ಶ. ೫೦) ನು ಅಯಾಂಬಿಕ್ ಛಂದಸ್ಸಿನಲ್ಲಿ ಬರೆದ ನೀತಿಕಥೆ (Animal fabels)ಗಳು ಜಗತ್ತಿನ ಕಥಾಸಾಹಿತ್ಯಕ್ಕೆ ಕೊಟ್ಟ ಶ್ರೇಷ್ಠ ಕೊಡುಗೆಗಳು.

ರೋಮ್‌ನಲ್ಲಿ, ೬೮–೬೯ರಲ್ಲಿ ನಡೆದ ಕ್ರಾಂತಿಯ ಕಾಲದಲ್ಲಿ, ಕ್ವಿಂಟಿಲಿಯನ್

(Quintilian) ಎಂಬ ಸ್ಪೇನ್ ದೇಶದ ವಿದ್ವಾಂಸ ವಾಗ್ಮಿಕಲೆಯ ಪ್ರಾಧ್ಯಾಪಕನಾಗಿ ನೇಮಿತನಾದ. ಸುಮಾರು ೨೦ ವರ್ಷ ಅವನೊಬ್ಬ ಉತ್ತಮ ಶಿಕ್ಷಣಪಟು ಎನಿಸಿಕೊಂಡ. ಸಿಸಿರೊವಿನ ವಾಗ್ಮಿಕಲೆಯನ್ನು ಪುನರುಜ್ಜೀವನಗೊಳಿಸಲು ಪ್ರಯತ್ನಿಸಿದ. ಇವನಿಗಿಂತ ಸ್ವಲ್ಪ ಹಿರಿಯನಾದ ಪ್ಲಿನಿ (Pliny) (೨೩–೭೯) ವಿಜ್ಞಾನಿ, ಚರಿತ್ರಕಾರ. ೩೭ ಸಂಪುಟಗಳ ಇವನ 'ವಿಜ್ಞಾನದ ಚರಿತ್ರೆಯ ವಿಶ್ವಕೋಶ' ಉಪಯುಕ್ತ ಗ್ರಂಥ. ಟ್ಯಾಸಿಟಸ್ (Tacitus) (೫೫–೧೧೭) ಗದ್ಯಸಾಹಿತ್ಯದಲ್ಲಿ ಹೆಸರು ಮಾಡಿದವನು. ಇವನ 'ಹಿಸ್ಟರಿಸ್', 'ಆ್ಯನಲ್ಸ್' ಮುಂತಾದ ಇತಿಹಾಸ ಗ್ರಂಥಗಳಲ್ಲಿನ ಗದ್ಯಶೈಲಿ ವಿಶಿಷ್ಟವಾದುದು. ಸಂಕ್ಷಿಪ್ತತೆ, ವೈವಿಧ್ಯ ಶಬ್ದಪ್ರಯೋಗ, ನಾಟಕೀಯತೆ, ಶ್ಲೇಷೆ, ವಕ್ರೋಕ್ತಿ—ಇವನ ಶೈಲಿಯ ಮುಖ್ಯ ಲಕ್ಷಣಗಳು. ರೋಮನ್ ಗ್ರಂಥಪಾಲ ಸ್ಯುಟೋನಿಯಸ್‌ನ (೬೯–೧೪೦) 'ಸೀಸರ್ ದೊರೆಗಳ ಚರಿತ್ರೆ' ಹಲವು ಘಟನಾವಳಿಗಳಿಂದಲೂ ಅಪಹೇಳನಕರ ಗುಲ್ಲುಗಳಿಂದಲೂ ತುಂಬಿದೆ.

ಚರಿತ್ರಕಾರ ಪ್ಲಿನಿಯ ಸಮಕಾಲೀನರಾದ ಜೂವಿನಲ್ (Juvenal) (೫೦–೧೨೭) ಮತ್ತು ಮಾರ್ಷಲ್ (Martial) (೪೦–೧೦೪) ಪ್ರಸಿದ್ಧ ವಿಡಂಬನಕವಿಗಳು. ಮಾರ್ಷಲ್‌ನ ನಾಟುನುಡಿಗಳು ಪ್ರಸಿದ್ಧವಾಗಿವೆ. ಜೂವಿನಲ್‌ನ ವಿಡಂಬನಗಳು ಹೊರೆಸನಿಂದ ಪ್ರಭಾವಿತವಾಗಿದ್ದರೂ ಕಟುವಾದ ನಂಜಿನ ಹಾಸ್ಯದಿಂದ ತುಂಬಿವೆ. ನಾಗರಿಕ ಜೀವನದ ಹೊಲಸನ್ನೂ ದಿಢೀರ್‌ಶ್ರೀಮಂತರ, ಪ್ರವಾಸಿಗರ ಅನೈತಿಕ ಬದುಕನ್ನೂ ರೋಷದಿಂದ ಗೇಲಿಮಾಡುತ್ತಾನೆ. ಲೇವಡಿ ಮಾತಿನ ಕಿಡಿಹಾರಿಸಿ ಚಿತ್ರಯುಕ್ತವಾದ ಶಬ್ದಪುಂಜಗಳನ್ನು ಬಳಸುವುದರಲ್ಲಿ ಜೂವಿನಲ್ ನಿಸ್ಸೀಮ. ೧೮ನೆಯ ಶತಮಾನದ ಇಂಗ್ಲಿಷ್ ಕವಿಗಳಾದ ಡ್ರೈಡನ್, ಸ್ವಿಫ್ಟ್, ಪೋಪ್ ಮೊದಲಾದವರು ರಚಿಸಿದ ನಾಗರಿಕ ಕಾವ್ಯಕ್ಕೆ ಜೂವಿನಲ್, ಮಾರ್ಷಲ್ ಪ್ರಮುಖವಾಗಿ ಸ್ಫೂರ್ತಿ ಒದಗಿಸಿದರು.

ಟ್ಯಾಸಿಟಸ್, ಮಾರ್ಷಲ್ ಇವರ ಕಾಲಾನಂತರ ಸಾಹಿತ್ಯವೆಂದು ಕರೆಯಲು ಯೋಗ್ಯವಾದ ಕೃತಿಗಳೇ ರಚಿತವಾಗಲಿಲ್ಲ. ಅಪ್ಯುಲಿಯಸ್ (Apuleius) (೧೨೩–೧೭೧) ಹಳೆಯ ಕೃತಕ ಲ್ಯಾಟಿನ್ ಶೈಲಿ ಮತ್ತು ಆಡುನುಡಿಯನ್ನು ಬೆರಸಿ ಬರೆದ 'ಚಿನ್ನದ ಕತ್ತೆ' ಎಂಬ ರಮ್ಯ ವಿನೋದಕಥೆ ರಸಮಯವಾಗಿದೆ. ಹೊಸ ಶೈಲಿಯಿಂದಲೂ ಪ್ರಾಸಲಯಗಳಿಂದಲೂ ತುಂಬಿದ ರಮ್ಯ ಕವನ 'ಪರ್ವಿಜಿಲಿಯಮ್ ವೆನೆರಿಸ್' ಈ ಯುಗದ ಒಂದು ಒಳ್ಳೆಯ ಕೃತಿ.

ಆದಿ ಕ್ರಿಶ್ಚಿಯನ್ ಯುಗದ ಹೊತ್ತಿಗೆ ಲ್ಯಾಟಿನ್ ಭಾಷೆ ತನ್ನ ಸಾಹಿತ್ಯಿಕ ಗುಣಗಳನ್ನು ಕಳೆದುಕೊಂಡಿತ್ತು. ಭಾಷೆ ಕೇವಲ ಧಾರ್ಮಿಕ ಉದ್ದೇಶಗಳ, ನೀತಿಪ್ರಚಾರದ ಮಾಧ್ಯಮವಾದಾಗ ಬೇರೆಯ ಜಾಡನ್ನೇ ಹಿಡಿಯಿತು. ಕ್ರಿಶ್ಚಿಯನ್ ಯುಗದ ಸಂತ ಆಗಸ್ಟೈನ್ (ಕ್ರಿ. ಶ. ೩೫೪–೪೩೦)ನ ೧೩ ಭಾಗಗಳಿರುವ 'ಪಾಪಸ್ವೀಕಾರಗಳು' (Confessions) ಗಾಢವಾದ ಆತ್ಮಾನುಸಂಧಾನದಿಂದ ತುಂಬಿದ, ಪಾಪಿಯ ಹೃದಯದ ತಾಕಲಾಟವನ್ನು ಸೂಕ್ಷ್ಮವಾಗಿ ವಿವರಿಸುವ ಪ್ರಾಮಾಣಿಕ ಗ್ರಂಥ. ಈತನದೇ ಇಪ್ಪ

ತ್ತೆರಡು ಭಾಗಗಳಿರುವ 'ದೇವನಗರ' (City of God) ಕ್ರೈಸ್ತಧರ್ಮವನ್ನೂ ಮತ್ತ ಶ್ರದ್ಧೆಯನ್ನೂ ಮನಮುಟ್ಟುವಂತೆ ಪ್ರತಿಪಾದಿಸುತ್ತದೆ. ಇವನು ಸಿಸಿರೊ, ವರ್ಜಿಲ್, ಹೊರೆಸ್ ಮುಂತಾದ ಪೇಗನ್ ಸಾಹಿತಿಗಳಿಂದ ಪ್ರೇರಣೆಯನ್ನು ಪಡೆದರೂ ಕ್ರೈಸ್ತ ಧರ್ಮವನ್ನು ಅವಲಂಬಿಸಿದ. ಇವನು ನೂರಾರು ವರ್ಷಕಾಲ ಮಧ್ಯಯುಗದ ಧರ್ಮ ಚಿಂತನೆಯ ಮೇಲೆ ವ್ಯಾಪಕವಾಗಿ ಪ್ರಭಾವಬೀರಿ ಮಾರ್ಟಿನ್ ಲೂಥರ್, ಕಾಲ್ವಿನ್ ಮುಂತಾದ ಧರ್ಮಜಿಜ್ಞಾಸುಗಳಿಗೆ ಸ್ಫೂರ್ತಿಪ್ರದನಾದನು.

## ಆಂಗ್ಲೊಸ್ಯಾಕ್ಸನ್ ಸಾಹಿತ್ಯ

ಇಂಗ್ಲೆಂಡಿನ ಮೊದಲ ಎಂಟು ಶತಮಾನಗಳ ಸಾಹಿತ್ಯ ಆಂಗ್ಲೊಸ್ಯಾಕ್ಸನ್ ಭಾಷೆ ಯಲ್ಲಿ ರಚಿತವಾಯಿತು. ಇದರಲ್ಲಿ ಕ್ರಿಶ್ಚಿಯನ್ ಯುಗಕ್ಕಿಂತ ಹಿಂದಿನ ಅವಧಿಯಲ್ಲಿ ಬರೆದ ಮೂರು ಕಾವ್ಯಗಳು ಗಮನಾರ್ಹವಾದುವು. ಅವೇ 'ವಿಡ್‌ಸಿತ್', 'ಡಿಓರ್' 'ಬಿವುಲ್ಫ್'. ಇವು ಪೇಗನ್ ಯುಗದ ಸಂಸ್ಕೃತಿ, ನಡೆನುಡಿಗಳನ್ನು ಚಿತ್ರಿಸುತ್ತವೆ. ಅಲೆ ಮಾರಿ ಜನಪದ ಕವಿಯೊಬ್ಬನ ಆತ್ಮಕಥೆ 'ವಿಡ್‌ಸಿತ್.' ತನ್ನ ಪ್ರವಾಸ ಕಾಲದಲ್ಲಿ ಕವಿ ಭೇಟಿಮಾಡುವ ರಾಜ ಶ್ರೀಮಂತರುಗಳ ನಾದಮಯವಾದ ಹೆಸರುಗಳ ಪಟ್ಟಿ ಇಲ್ಲಿದೆ. 'ಡಿಓರ್' ಒಬ್ಬ ನತದೃಷ್ಟ ಹಾಡುಕವಿಯ ಕಥೆ. ೮ನೆಯ ಶತಮಾನದ ಅಜ್ಞಾತ ಕವಿಯೊಬ್ಬನ 'ಬಿವುಲ್ಫ್' ಒಂದು ದೀರ್ಘ ಐತಿಹಾಸಿಕ ಕಾವ್ಯ. ಇದು ಮಹಾಕಾವ್ಯದ ಶೈಲಿಯಲ್ಲಿದೆ. ತನ್ನ ಜನರನ್ನು ಪಿಶಾಚಿಯೊಂದರಿಂದ ರಕ್ಷಿಸಲು ಹೋರಾಡಿ ಸಾಯುವ ವೀರನ ಕಥೆ ಇಲ್ಲಿ ಚಿತ್ರಯುಕ್ತವಾದ ಮಾತುಗಳಿಂದ ತುಂಬಿದ ಸ್ಪಷ್ಟ, ಭವ್ಯ ವರ್ಣನೆ ಗಳಿಂದ ನಿರೂಪಿತವಾಗಿದೆ.

ಇದೇ ಕಾಲದಲ್ಲಿ ಬಾಳಿ ಬದುಕಿದ ವೆನರಬಲ್ ಬೀಡ್ (Venerable Bede) (೬೭೩-೭೩೫) 'ಆಂಗ್ಲೊಸ್ಯಾಕ್ಸನ್‌ರ ಧರ್ಮಚರಿತ್ರೆ' ಎಂಬ ಲ್ಯಾಟಿನ್ ಗ್ರಂಥ ವನ್ನು ಬರೆದ. ನಿಷ್ಪಕ್ಷಪಾತ ಪ್ರಾಮಾಣಿಕತೆಗಳಿಗೆ ಹೆಸರಾದ ಗ್ರಂಥ ಇದು. ಬೈಬಲಿನ ಕಥೆಯನ್ನು ಅಳವಡಿಸಿಕೊಂಡು 'ಪಾರಾಫ್ರೇಸ್' ಕವನವನ್ನು ಬರೆದ ಕ್ಯಾಡ್ಮನ್ (Cadmon) ಮತ್ತೊಬ್ಬ ಆಂಗ್ಲೊಸ್ಯಾಕ್ಸನ್ ಕವಿ. ೮ನೆಯ ಶತಮಾನದ ಕವಿ ಸಿನೆವುಲ್ಫ್ (Cynewulf). ಇವನ ಕಾವ್ಯದಲ್ಲಿ ಬೈಬಲ್‌ನಲ್ಲಿ ಬರುವ ವಿನಾಶದ ದಿನದ ವರ್ಣನೆ ಇದೆ. ೯ನೆಯ ಶತಮಾನದ ಆಲ್‌ಫ್ರೆಡ್ ದೊರೆಯ 'ಆಂಗ್ಲೊಸ್ಯಾಕ್ಸನ್ ಚರಿತ್ರೆ' ಒಂದು ಮುಖ್ಯ ಆಕರಗ್ರಂಥ, ಇವನು ಲ್ಯಾಟಿನ್‌ನಿಂದ ಮಾಡಿದ ಭಾಷಾಂತರಗಳು ಆಂಗ್ಲೊ ಸ್ಯಾಕ್ಸನ್ ಗದ್ಯಶೈಲಿಯನ್ನು ರೂಪಿಸಲು ನೆರವಾದವು.

## ಆದಿ ಜರ್ಮನ್ ಸಾಹಿತ್ಯ

ಇಂಗ್ಲಿಷ್ ಸಾಹಿತ್ಯದಲ್ಲಿಯಂತೆ ಜರ್ಮನ್ ಭಾಷೆಯಲ್ಲೂ ತೀರ ಪ್ರಾಚೀನ ಕಾಲದ ಸಾಹಿತ್ಯ ಕೃತಿಗಳೆಂದರೆ ಕ್ರಿ.ಶ. ೮ನೆಯ ಶತಮಾನದ ಕ್ರಿಶ್ಚಿಯನ್ ಯುಗದವು. ಆ

ಕಾಲವನ್ನು ಹಳೆಯ ಮೇಲು-ಜರ್ಮನ್ ಯುಗವೆನ್ನುತ್ತಾರೆ. ಹಾಗೂ ಆ ಕಾಲದಲ್ಲಿ ಹಲವು ಗ್ರಂಥಗಳು ನೀತಿ ಹಾಗೂ ಧರ್ಮಪ್ರಚಾರಕ್ಕೆಂದೇ ಬರೆಯಲಾದುವು. ಚಕ್ರವರ್ತಿ ಚಾರ್ಲ್ಸ್‌ನ ಪ್ರಯತ್ನದಿಂದಾಗಿ ಲ್ಯಾಟಿನ್ ಬದಲು ದೇಶಭಾಷೆ ಬಳಕೆಗೆ ಬಂತು. ಜನಪದವಾಹಿನಿಯಲ್ಲಿ ತೇಲಿ ಹೋಗುತ್ತಿದ್ದ ಹಲವು ಹಳೆಯ ನೀತಿಕಾವ್ಯಗಳನ್ನು ಆಗ ಸಂಗ್ರಹಿಸಲಾಯಿತು. ಅವುಗಳಲ್ಲಿ ಲೌಕಿಕ ಗ್ರಂಥಗಳೂ ಸೇರಿವೆ. ಆದಿಕಾಲದ ವೀರಯುಗ ವನ್ನು ಪ್ರತಿನಿಧಿಸುವ ಅಪೂರ್ಣ ಕೃತಿ, 'ಹಿಲ್ಡೆಬ್ರಾಂಡ್‌ನ ಹಾಡು' (Hildebrand-lied) ಬಹುಮಟ್ಟಿಗೆ ಸೊಹ್ರಾಬ್—ರುಸ್ತುಮ್ ಕಥೆಯನ್ನು ಹೋಲುತ್ತದೆ. ಆಂಗ್ಲೋ ಸ್ಯಾಕ್ಸನ್ ಕಾವ್ಯಗಳಲ್ಲಿ ಬಳಸಲಾದ ಛಂದಸ್ಸು, ಪ್ರಾಸ ಮೊದಲಾದವು ಇಲ್ಲಿಯೂ ಉಂಟು. ಈಗ ಉಳಿದಿರುವ, ಆ ಕಾಲದ ಹಳೆಯ ಗ್ರಂಥಗಳಲ್ಲಿ ಧಾರ್ಮಿಕ ವಸ್ತುವೇ ಪ್ರಧಾನ. ಹಳೆಯ ಸ್ಯಾಕ್ಸನ್ ಭಾಷೆಯ 'ಹೀಲಿಯಂಡ್', 'ಗಾಸ್ಪೆಲ್' ಮೊದಲಾದವು ಇದಕ್ಕೆ ಉದಾಹರಣೆಗಳು. ಜರ್ಮನ್ ಭಾಷೆಯು ಸಾಹಿತ್ಯಿಕ ಭಾಷೆಯ ಸ್ಥಾನ ಗಳಿಸಲು ಹೆಣಗುತ್ತಿದ್ದ ಕಾಲ ಅದು.

## ಆರ್ಮೀನಿಯನ್ ಸಾಹಿತ್ಯ

ಹಿಟ್ಟೈಟ್ ಶಾಸನ ಲೇಖಗಳಿಂದ ಆರ್ಮೀನಿಯನ್ ಭಾಷೆ ಸಾಹಿತ್ಯಗಳು ಕ್ರಿ.ಪೂ. ೨೦೦೦ ವರ್ಷದಷ್ಟು ಪ್ರಾಚೀನ ಎಂದು ತಿಳಿಯುತ್ತದೆ. ಆಗ ಆ ಜನರನ್ನು ಖುರಿಯನ್ನ ರೆಂದು ಕರೆಯುತ್ತಿದ್ದರು. ಖುರಿಯನ್ನರ 'ಖೆಮ್ಮೆಡು' (Khemmedu) ಎಂಬ ಭೂತ ವನ್ನು ಕುರಿತ ಪುರಾಣದ ಪ್ರಸ್ತಾಪ ಆರ್ಮೀನಿಯನ್ ಪ್ರಾಚೀನ ಲಿಪಿಗಳಲ್ಲಿ ಕಂಡು ಬರುತ್ತದೆ. ಕ್ರಿ.ಶ. ೫ನೆಯ ಶತಮಾನದಲ್ಲಿ ಎಜ್ನಿಕ್ (Eznik) ಎಂಬವನು ಆರ್ಮೀನಿ ಯನ್ ಲಿಪಿಯಲ್ಲಿ ಅದನ್ನು ಹೋಲುವ ಪುರಾಣಕಥೆಯನ್ನು ಬರೆದ. ಆರ್ಮೀನಿಯದ ಜನಪದ ಪುರಾಣ ಪರಂಪರೆಯ 'ಸಸುಂಕಿಡವಿತ್ ಕಥೆ'ಯಲ್ಲಿ ನಾಲ್ಕು ಬೇರೆ ಬೇರೆ ಕಥೆಗಳಿವೆ. ಇವು ಸಸುನ್ ವಂಶದವರ ವೀರಸಾಹಸಗಳನ್ನು ವರ್ಣಿಸುತ್ತವೆ. ಈ ಕಥೆ ಗಳು ದೆವ್ವ ಭೂತಗಳು, ಯುದ್ಧ, ಮಾಯೆ ಮಂತ್ರಗಳ ವರ್ಣನೆ ಮುಂತಾದ ಅದ್ಭುತ ಸಂಗತಿಗಳಿಂದ ತುಂಬಿ ಸ್ವಾರಸ್ಯಕರವಾಗಿವೆ.

## ಜಪಾನಿನ ಸಾಹಿತ್ಯ

ದೀರ್ಘಕಾಲದ ಪಾಠಕ ಪರಂಪರೆಯನ್ನು ಪಡೆದಿದ್ದ ಪ್ರಾಚೀನ ಜಪಾನಿನಲ್ಲಿ ವಿಪುಲ ಸಾಹಿತ್ಯರಾಶಿ ಸೃಷ್ಟಿಯಾಗಿರಬೇಕು. ಅದರ ಬಹುಪಾಲು ಈಗ ನಷ್ಟವಾಗಿದೆ. ಕ್ರಿ.ಶ. ೧ನೆಯ ಶತಮಾನದ ವೇಳೆಗೆ ಅಲ್ಲಿ ಚೀನಿಯರ ಮತ್ತು ಕೊರಿಯನರ ಪ್ರಭಾವದಿಂದ ಹಲವು ಪುರಾಣ ಗ್ರಂಥಗಳು ರಚಿತವಾಗಿದ್ದವು ಎನ್ನುತ್ತಾರೆ. ಈಗ ನಮಗೆ ಸಿಕ್ಕಿರುವ ತುಂಬ ಹಳೆಯ ಕೃತಿಗಳೆಂದರೆ 'ಕೊಜಿಕಿ' (Kozki) ಪುರಾತನ ದಾಖಲೆಗಳು (೭೧೨), 'ನಿ ಹೊಂಗಿ' (Ni Hongi) (ಜಪಾನಿನ ಚರಿತ್ರೆ) ಎಂಬವು. ಇವೆರಡೂ ಚೀನಿ ಭಾಷೆಯಲ್ಲಿ ಬರೆದ ಇತಿಹಾಸ ಗ್ರಂಥಗಳು. ಪುರಾತನ ಜಪಾನಿಯರಿಗೆ ಸ್ವಂತ

ವಾದ ಭಾಷೆ ಲಿಪಿಗಳಿರಲಿಲ್ಲ. ೫೫೨ರಲ್ಲಿ, ಕೊರಿಯದಿಂದ ಜಪಾನಿಗೆ ಬೌದ್ಧಮತ ಹರಡಿದ ಮೇಲೆ ಜಪಾನಿಯರ ಹೊರದೇಶ ಸಂಪರ್ಕ ಪ್ರಾರಂಭವಾಯಿತು. ಕ್ರಿ.ಶ. ೬ನೆಯ ಶತಮಾನದಲ್ಲಿ ಅವರು ಚೀನಿ ಭಾಷೆ ಕಲಿತು ಪಾರಂಗತರಾದ ಮೇಲೆಯೇ ಅವರಿಗೆ ತಮ್ಮ ಜನಪದ ಸಂಪ್ರದಾಯದ ಕಥೆ ಕವನಗಳನ್ನು ಬರೆದಿಡುವುದು ಸಾಧ್ಯವಾಯಿತು. ೭೧೦-೯೪ರ ನಡುವಣ 'ನಾರಾ' ಯುಗದಲ್ಲಿ 'ಮನ್ಯುಷು' (Manyushu) (ಹತ್ತು ಸಾವಿರ ಎಲೆಗಳ ಸಂಗ್ರಹ) (ಕ್ರಿ.ಶ. ೭೬೫) ಎಂಬ ಸಂಕಲನ ಕವನಗಳನ್ನು ಬರೆಯಲು ಜಪಾನಿಯರು ಚೀನಿ ಚಿತ್ರಲಿಪಿ ಬಳಸಿದರು. ಚೀನಿ ಗ್ರಂಥಗಳ ಅಧ್ಯಯನ ಆ ವೇಳೆಗೆ ಅವರಿಗೆ ಉತ್ತಮ ಶಿಕ್ಷಣ ಒದಗಿಸಿತ್ತು. ಜಪಾನಿಯರು ಚೀನಿ ಲಿಪಿ ಬಳಸಿದುದಕ್ಕೆ ಕಾರಣ, ಆ ಭಾಷೆ ಅರ್ಥಕ್ಕಿಂತ ಹೆಚ್ಚಾಗಿ ಶಬ್ದ ಲಯಗಳನ್ನು ಸಾಧಿಸಲು ನೆರವಾಯಿತು ಎಂಬುದು. 'ಟನಕ' ಎಂಬ (Tanaka) ೩೧ ಉಚ್ಚರಾಂಶಗಳಿರುವ ಐದು ಪಾದಗಳ ಕವನ ಪ್ರಕಾರದಲ್ಲಿ ಬರೆದ 'ಮನ್ಯುಷು' ಕವನಗಳು ಅಸದೃಶವಾದವು. ಇವುಗಳ ಸಂಖ್ಯೆ ೪೫೦೦. ಚಕ್ರವರ್ತಿ, ಸಾಮಾನ್ಯಸೈನಿಕ ಎಂಬ ಭೇದಭಾವನೆಯಿಲ್ಲದೆ, ಎಲ್ಲ ಕವಿಗಳ ಕವನಗಳೂ ಇಲ್ಲಿ ಸೇರಿವೆ.

ಕಾಕಿನೊವೊ ಟೊ ನೊ ಹಿಟೊಮಾರೊ (Kakinovo To No Hitomaro) (೬೫೫-೭೦೫) ಎಂಬುವನು ಪ್ರಾಚೀನ ಜಪಾನಿನ ಅತ್ಯಂತ ಮೇಧಾವಿ ಕವಿ ಎಂದು ಅಭಿಪ್ರಾಯಪಡುತ್ತಾರೆ. ಇವನು ತನ್ನ ಪತ್ನಿಯ ಸಾವನ್ನು ಕುರಿತು ಬರೆದಿರುವ 'ಚೋಕ' (Choka) (ದೀರ್ಘ ಕವನಗಳು), ದೇಶಗೀತೆಗಳು ಮೊದಲಾದ ರಚನೆಗಳಲ್ಲಿ ಗಾಢ ಭಾವಕತೆಯಿದೆ. ಉಳಿದ ಕವಿಗಳು ಸಹ ಪ್ರೇಮ, ವಿರಹ, ಮುಪ್ಪು ಮುಂತಾದ ವಸ್ತುಗಳನ್ನು ಆರಿಸಿಕೊಂಡು ನೇರ, ಸರಳ, ಭಾವಪೂರ್ಣ ಶೈಲಿಯಲ್ಲಿ ಬರೆದಿದ್ದಾರೆ. ಆ ಕಾಲದ ಜಪಾನಿ ಕಾವ್ಯದಲ್ಲಿ ಹೂವುಗಳು, ಹಕ್ಕಿಗಳು, ಬೆಳುದಿಂಗಳು, ಗಿಡಮರಗಳು ಮೊದಲಾದ ನೈಸರ್ಗಿಕ ವಿಷಯಗಳನ್ನು ಕುರಿತು ಸಪುರವಾದ ಚೇತೋಹಾರಿ ನುಡಿಚಿತ್ರಗಳು, ಕಿರುನೋಟಗಳು ಸಿಕ್ಕುತ್ತವೆ.

ಜಪಾನಿಯರು ಸಾಹಿತ್ಯರಚನೆಗೆ ತಮ್ಮದೇ ಆದ ಲಿಪಿಯನ್ನು ಕಂಡುಹಿಡಿದು ಬಳಸಿದ್ದು ೮-೯ನೆಯ ಶತಮಾನಗಳಲ್ಲಿ. ಇದರಿಂದ ಹಿಯಾನ್ ಯುಗದಲ್ಲಿ ಶ್ರೇಷ್ಠ ಸಾಹಿತ್ಯ ಸೃಷ್ಟಿಯಾಗಲು ಸಹಾಯವಾಯಿತು.

ಪ್ರಪಂಚದ ಪುರಾತನ ನಾಗರಿಕತೆಗಳಲ್ಲಿ ಹಲವು ದೇಶಭಾಷೆಗಳಲ್ಲಿ ಸಾಹಿತ್ಯಸೃಷ್ಟಿ ದೊರಗಿದೆ. ಆದರೆ ಅವುಗಳ ಇತಿಹಾಸ ಪರಂಪರೆಗಳನ್ನು ಕುರಿತು ಹೆಚ್ಚು ವಿವರಗಳು ದೊರೆಯುವುದಿಲ್ಲ. ಕೊರಿಯ ಮುಂತಾದ ದೇಶಗಳಲ್ಲಿ ಹಲವು ಕಾಲ ಪರಕೀಯ ಭಾಷೆ ಸಂಸ್ಕೃತಿಗಳು ಮೇಲುಗೈಯಾಗಿ ದೇಶಿ ಸಾಹಿತ್ಯದ ವಿಕಾಸಕ್ಕೆ ಅಡ್ಡಿಯಾದವೆಂದು ತೋರುತ್ತದೆ. ಚೀನಿ ಭಾಷೆ.ಲಿಪಿಗಳೇ ಉತ್ಕೃಷ್ಟ ಸಂಸ್ಕೃತಿಯ ಲಕ್ಷಣಗಳೆಂದು ತಿಳಿದು ಕೊರಿಯನ್ನರು ಕ್ರಿ.ಶ. ೯ನೆಯ ಶತಮಾನದವರೆಗೆ ತಮ್ಮದೇ ಆದ ಭಾಷೆ ಲಿಪಿಗಳನ್ನು ರೂಪಿಸುವ ಗೋಜಿಗೆ ಹೋಗಲಿಲ್ಲ.

## ಇತರ ದೇಶಗಳ ಸಾಹಿತ್ಯಗಳು

ಇನ್ನು ಕೆಲವು ದೇಶಗಳಲ್ಲಿ ಜನಪದ ಸಾಹಿತ್ಯವನ್ನು ಲಿಖಿತರೂಪದಲ್ಲಿ ಸಂಗ್ರಹಿಸಲು ಬಹುಕಾಲ ಹಿಡಿಯಿತು. ಫಿನ್‌ಲೆಂಡಿನ 'ವೀರರ ನಾಡು' (Kalevala) ಜನಪದ ಸಾಹಿತ್ಯದಿಂದ ಸಂಗ್ರಹಿಸಲಾದ ಪುರಾಣಕಾವ್ಯ. ೧೮೪೯ರಲ್ಲಿ ಪ್ರಕಟವಾದ ಇದರ ಹೊಸ ಆವೃತ್ತಿಯಲ್ಲಿ ಐವತ್ತು ಭಾಗಗಳಿವೆ. ಒಟ್ಟು ಕವನಗಳ ಸಂಖ್ಯೆ ೨೨,೮೯೫. ಈ ಪುರಾಣದಲ್ಲಿ ಕಮ್ಮಾರ, ಹಾಡುಕವಿ, ಪ್ರವಾಸಿಗ, ಜೀತದಾಳು, ಬೇಟೆಗಾರ ಮುಂತಾದ ಬೇರೆ ಬೇರೆ ವೃತ್ತಿಯ ಐವರು ವೀರರ ಸಾಹಸಮಯ ಕಥೆಗಳು ಬರುತ್ತವೆ. ಫಿನ್‌ಲೆಂಡ್ ಮತ್ತು ಲ್ಯಾಪಲೆಂಡ್‌ಗಳ ನಡುವಣ ಯುದ್ಧದ ಪ್ರಸ್ತಾಪವೂ ಇದರಲ್ಲಿದೆ. ಷೇಕ್ಸ್‌ಪಿಯರ್ ಕವಿಯ ಹ್ಯಾಮ್ಲೆಟ್‌ನನ್ನು ಹೋಲುವಂಥ, ಸಂಕೀರ್ಣ ವ್ಯಕ್ತಿತ್ವವುಳ್ಳ, ಕಲ್ಲೆರ್ವೊ ಮುಖ್ಯ ಪಾತ್ರಗಳಲ್ಲೊಂದು. ಪ್ರಾಚೀನಕಾಲದ ಮಾಯ ಮಾಟಗಳ ಅಲೌಕಿಕ ವಾತಾವರಣದಲ್ಲಿ ಕಥೆ ಸಾಗುತ್ತದೆ. 'ಒಡಿಸ್ಸಿ' 'ಇಲಿಯಡ್' ಕಾವ್ಯಗಳಲ್ಲಿ ಬರುವಂಥ ಹಲವು ಘಟನಾವಳಿಗಳು ಇಲ್ಲಿವೆ. ಪ್ರತಿ ಕವನದಲ್ಲೂ ಪ್ರಾಸರಹಿತವಾದ ಎಂಟು ಗಣಗಳ ಪಾದಗಳಿದ್ದು ಸಾಕಷ್ಟು ಛಂದೋವೈವಿಧ್ಯವಿದೆ. ಫಿನ್‌ಲೆಂಡಿನ ಸಾಹಿತ್ಯ, ಶಿಲ್ಪಕಲೆ, ಚಿತ್ರಕಲೆ, ಸಂಗೀತ ಮತ್ತು ಪಾಂಡಿತ್ಯಗಳ ಮೇಲೆ ಈ ಕಾವ್ಯ ಗಾಢಪ್ರಭಾವ ಬೀರಿದೆ ಹಲವು ಭಾಷೆಗಳಿಗೆ. ಇದು ಭಾಷಾಂತರವಾಗಿದೆ. ಅಮೆರಿಕದ ಕವಿ ಲಾಂಗ್‌ಫೆಲೊವಿನ 'ದಿ ಸಾಂಗ್ ಆಫ್ ಹಯವತ'. ಈ ಮಹಾಕಾವ್ಯದ ಪ್ರಭಾವ ಹಾಗೂ ಪ್ರೇರಣೆಯಿಂದ ರಚಿತವಾಗಿದೆಯೆಂಬುದನ್ನು ನೋಡಬಹುದು.

ಐಸ್ಲೆಂಡ್‌ನಲ್ಲಿ ಹಲವು ಪುರಾತನ 'ಎಡ್ಡ' ಪುರಾಣಕಥೆಗಳ ಸಂಗ್ರಹವುಂಟು. ಇವು ಯಾವಾಗ ರಚಿತವಾದುವೆಂದು ಹೇಳಲು ಬರುವುದಿಲ್ಲ. 'ಹಳೆಯ ಎಡ್ಡ'ದಲ್ಲಿ (Elder Edda) ಹಲವಾರು ಕವಿಗಳ ಕೈವಾಡವಿದೆ; ಮೊತ್ತಮೊದಲು ಯಾರು ಇವುಗಳನ್ನು ಸಂಗ್ರಹಿಸಿದರೊ ತಿಳಿಯದು. ಈ ಪುರಾಣ ಕವನಗಳು ನಾರ್ವೆ, ಐಸ್ಲೆಂಡ್ ದೇಶಗಳಲ್ಲಿ ಸಿಕ್ಕಿರುವ ಅತಿಪ್ರಾಚೀನ ಸಾಹಿತ್ಯಕೃತಿಗಳು. ಇವು ಕ್ರಿ.ಶ. ೮ನೆಯ ಶತಮಾನದಲ್ಲಿ ಹುಟ್ಟಿ, ಕ್ರಿ.ಶ. ೯ನೆಯ ಶತಮಾನದಲ್ಲಿ ರೂಪುಗೊಂಡಿರಬಹುದು. ಇವು ಆಮೇಲೆ ಪ್ರಾಚೀನ ಜರ್ಮಾನಿಕ್ ದೇಶಗಳಲ್ಲಿ ಹುಟ್ಟಿಕೊಂಡ 'ನಿಬಿಲಂಗ್ ಎನ್‌ಲಿಯಡ್' ಕಾವ್ಯಕ್ಕೆ ಪ್ರೇರಣೆಯಾಗಿರಬೇಕು.

ಈವರೆಗಿನ ಆದಿಕಾಲದ ಸಾಹಿತ್ಯಗಳ ಸಮೀಕ್ಷೆಯಿಂದ ಉದ್ಭವಿಸುವ ಕೆಲವು ಮುಖ್ಯ ವಿಚಾರಗಳನ್ನು ಹೀಗೆ ಸಂಕ್ಷೇಪಿಸಬಹುದು :

(೧) ಪ್ರಾಚೀನಕಾಲದಲ್ಲಿ ರಚಿತವಾದ ಸಾಹಿತ್ಯದಲ್ಲಿ ಈಗ ಸಿಕ್ಕಿರುವ ಅಲ್ಪಸ್ವಲ್ಪ ಭಾಗಗಳು ಬಹುತೇಕ ಶಿಷ್ಟರಚನೆಗಳಾಗಿದ್ದು, ಅವು ಹಲವು ವರ್ಗಗಳಾಗಿ ವಿಭಜಿತವಾದ ಕೆಲವೇ ಸಮುದಾಯಗಳ ಸೀಮಿತ ಆಶಯಗಳನ್ನು ಮಾತ್ರ ಚಿತ್ರಿಸುತ್ತವೆ. ಪ್ರಬಲ ಜನಪದಪ್ರೇರಣೆಗಳು ಕಾರ್ಯಪ್ರವರ್ತವಾಗಿದ್ದಾಗಿನ ಸಮಾಜಗಳ ಕಲ್ಪನೆ ಅವುಗಳಿಂದ ಹೆಚ್ಚಾಗಿ ಸಿಕ್ಕುವುದಿಲ್ಲ.

(೨) ಎಲ್ಲ ಪುರಾತನ ಸಮಾಜಗಳಲ್ಲಿಯೂ ಹಲವಾರು ವ್ಯಕ್ತಿಗಳು ಕಾವ್ಯರಚನಾ ಶಕ್ತಿಯನ್ನು ಹೊಂದಿದ್ದು, ಆ ಸಮಾಜಗಳಲ್ಲಿನ ಸಮಗ್ರ ಸಮುದಾಯ ಭಾವನೆಗಳು ಮತ್ತು ಪ್ರವೃತ್ತಿಗಳು ವ್ಯಕ್ತಿಗಳ ಕ್ರಿಯಾತ್ಮಕ ಶಕ್ತಿಗೆ ಅಡ್ಡಿಯಾಗಲಿಲ್ಲ. ಮುಖ್ಯವಾಗಿ ಪುರಾತನ ಈಜಿಪ್ಟ್, ಬ್ಯಾಬಿಲೋನಿಯ, ಪ್ರಾಚೀನ ಭಾರತಗಳಲ್ಲಿನ ಪಾಠಕ (Oral) ಸಾಹಿತ್ಯವನ್ನು ನಾವು ಗಮನಿಸಿದರೆ, ಬಹುತೇಕ ಸಂಗೀತದ ಚೌಕಟ್ಟಿನಲ್ಲಿ ರಚಿತವಾದ ಆ ಕಾಲದ ಪಾಠಕಕೃತಿಗಳ ಪರಂಪರೆಯನ್ನು ಸಂರಕ್ಷಿಸುವ ಸಲುವಾಗಿ ಆಗಿನ ಜನ ಅದ್ಭುತ ವಾದ ಕಲಾತಂತ್ರಗಳನ್ನು ಬಳಸಿರುವುದು ವ್ಯಕ್ತವಾಗುತ್ತದೆ. ಭಾರತದ ವೈದಿಕ ಸಾಹಿತ್ಯ ಇದಕ್ಕೆ ಶ್ರೇಷ್ಠ ಉದಾಹರಣೆ.

(೩) ಪ್ರತಿಯೊಂದು ದೇಶದ, ಕಾಲದ, ಕಾವ್ಯವು ಸರಳವಾದ ಕೆಲವೇ ಭಾವನೆ ಗಳನ್ನು ಹೆಚ್ಚು ಲಯಗತಿಗಳಿಲ್ಲದೆ ಅಭಿವ್ಯಕ್ತಿಸುವುದರಿಂದ ಪ್ರಾರಂಭವಾಗಿ, ಕಾಲಕ್ರಮೇಣ ಉಳಿದ ಭಾವನೆಗಳನ್ನೂ ಇನ್ನೂ ಹೆಚ್ಚು ಸರಳವಾಗಿ ಹೇಳಲು ಪ್ರಯತ್ನಿಸಿದೆ. ಬರು ಬರುತ್ತ ಅದು ಪಂಡಿತರನ್ನು ರಂಜಿಸಲು ಹೆಚ್ಚು ಆಲಂಕಾರಿಕವಾಗಿದೆ; ಶಿಷ್ಟತಂತ್ರ ಗಳನ್ನು ಬಳಸಿಕೊಂಡಿದೆ. ಸಾಂಪ್ರದಾಯಿಕವಾಗಿದೆ. ಯಾವುದೋ ಘಟ್ಟದಲ್ಲಿ ಈ ಆಲಂಕಾರಿಕತೆಯ ಅತಿಪ್ರಮಾಣವೇ ಒಂದು ಅವಗುಣವಾಗಿ, ಭಾವಾಭಿವ್ಯಕ್ತಿ ಮಸು ಕಾಗಿ, ಕಾವ್ಯಪರಂಪರೆ ಖಿಲವಾಗಿರುವುದುಂಟು; ಕಾವ್ಯ ಮತ್ತೆ ಸರಳ ಭಾವನೆಗಳತ್ತ, ಸರಳ ಅಭಿವ್ಯಕ್ತಿಯತ್ತ ಹೊರಳಿರುವುದುಂಟು. ಈ ರೀತಿಯ ಪರಿವರ್ತನೆಗಳಿಗೆ ಸಾಹಿತಿ ಗಳಲ್ಲಿ ಮತ್ತು ಜನಸಾಮಾನ್ಯರಲ್ಲಿ ಆಗಿರುವ ಅಭಿರುಚಿಯ ಬದಲಾವಣೆ ಕೂಡ ಒಂದು ಮುಖ್ಯ ಕಾರಣ.

## ಅರಬ್ಬಿ ಸಾಹಿತ್ಯ

ಪ್ರಪಂಚದ ಶ್ರೇಷ್ಠ ಸಾಹಿತ್ಯಗಳ ಪೈಕಿ ಅರಬ್ಬಿ ಸಾಹಿತ್ಯ ಕೂಡ ಒಂದು. ಅರೇ ಬಿಯಾದೇಶದ ಭೌಗೋಳಿಕ ಚಾರಿತ್ರಿಕ ಮುಂತಾದ ಅಂಶಗಳು ಈ ದೇಶದ ಸಾಹಿತ್ಯ ವನ್ನು ರೂಪಿಸುವುದರಲ್ಲಿ ಮಹತ್ತ್ವದ ಪಾತ್ರವನ್ನು ವಹಿಸಿವೆ. ಭಾರತದ ಸು. ⅔ ಭಾಗದಷ್ಟು ವಿಸ್ತಾರವಾಗಿರುವ ಈ ದೇಶದ ಪೂರ್ವದಲ್ಲಿ ಪರ್ಷಿಯನ್ ಮತ್ತು ಉಮಾನ್ ಕೊಲ್ಲಿ ಗಳಿದ್ದು, ಪಶ್ಚಿಮದಲ್ಲಿ ಕೆಂಪುಸಮುದ್ರವಿದೆ; ಉತ್ತರದಲ್ಲಿ ಸಿರಿಯ ಮರುಭೂಮಿ ಮತ್ತು ಯೂಫ್ರೆಟಿಸ್‌ಗಳಿದ್ದು, ದಕ್ಷಿಣದಲ್ಲಿ ಅರಬ್ಬಿ ಸಮುದ್ರ ಆವರಿಸಿದೆ. ಈ ದೇಶದುದ್ದಕ್ಕೂ ಮರುಭೂಮಿಗಳು, ಬಂಜರು ಪರ್ವತಗಳು, ಕಣಿವೆಗಳು, ಓಯಸಿಸ್‌ಗಳು ಇದ್ದು ಒಟ್ಟ ನಲ್ಲಿ ಅದು ಬಹುಮಟ್ಟಿಗೆ ಬೇಸಗೆದೇಶವೆನಿಸಿದೆ.

ಅರಬ್ಬರು ಸೀಮೈಟರೆಂಬ ಪುರಾತನ ಜನಾಂಗಕ್ಕೆ ಸೇರಿದವರು. ಇವರು ನೂಹ್ ಎಂಬ ಪ್ರವಾದಿಯ ಹಿರಿಯಮಗ ಷೆಮ್ (ಸಾಮ್) ಎಂಬಾತನ ವಂಶಜರೆಂದು ಹೇಳ ಲಾಗಿದೆ. ಈ ಸೀಮೈಟರ ಜನಾಂಗಕ್ಕೆ ಸೇರಿದವರ ಪೈಕಿ ಅಲ್-ಬಾಬಿಲೀಯೂನ್, ಅಲ್-ಅಷೂರೀಯೂನ್, ಅಲ್-ಕಲ್‌ದಾನೀಯೂನ್, ಅಲ್-ಅಮೂರೀಯೂನ್,

ಅಲ್-ಕನ್‌ಆನೀಯೂನ್, ಅಲ್-ಫಿನಾಖೀಯೂನ್, ಅಲ್-ಆರಾಮೀಯೂನ್ ಮತ್ತು ಅಲ್-ಇಬ್ರಾನೀಯೂನ್ ಎಂಬ ಬುಡಕಟ್ಟಿನವರು ಮುಖ್ಯರು. ಬಾಬಿಲೀಯೂನರು, ಅಷೂರೀಯೂನರು ಮತ್ತು ಕಲ್‌ದಾನೀಯೂನರು ಕ್ರಿ.ಪೂ. ೩೫೦೦ರ ಹೊತ್ತಿಗೆ ಟೈಗ್ರೊ-ಯೂಫ್ರಿಟಿಸ್ ಕಣಿವೆಯಲ್ಲಿ ನೆಲಸಿದ್ದರೆನ್ನಲಾಗಿದೆ. ಕನ್‌ಆನೀಯೂನರು ಮತ್ತು ಫಿನಾಖೀಯೂನರೂ ಸೇರಿದಂತೆ ಅಮೂರೀಯೂನರು ಕ್ರಿ.ಪೂ. ೨೫೦೦ರ ಸುಮಾರಿನಲ್ಲಿ ಸಿರಿಯದಲ್ಲಿ ವಾಸಿಸುತ್ತಿದ್ದರೆನ್ನುತ್ತಾರೆ. ಕ್ರಿ.ಪೂ. ೧೫೦೦ರ ಹೊತ್ತಿಗೆ ಆರಾಮೀಯೂನರು ಮತ್ತು ಇಬ್ರಾನೀಯೂನರು ಕ್ರಮವಾಗಿ ಸಿರಿಯ ಮತ್ತು ಪ್ಯಾಲೆಸ್ಟೈನ್‌ನಲ್ಲಿ ನೆಲಸಿದ್ದರೆನ್ನಲಾಗಿದೆ. ೧೯ನೆಯ ಶತಮಾನದ ಮಧ್ಯಭಾಗದಲ್ಲಿ ಈ ಎಲ್ಲ ಜನಾಂಗಗಳ ಮೂಲ, ಭಾಷಾಸಾಮ್ಯ ಮೊದಲಾದುವುಗಳ ಬಗ್ಗೆ ಅಧ್ಯಯನ ನಡೆದು ಸೀಮೈಟರ ಮೂಲಸ್ಥಾನ ಅಲ್ ಇರಾಕ್, ಅಬಿಸೀನಿಯ ಅಥವಾ ಅರೇಬಿಯ ಆಗಿದ್ದಿರಬೇಕೆಂಬ ಬೇರೆಬೇರೆ ಅಭಿಪ್ರಾಯಗಳು ಬೆಳಕಿಗೆ ಬಂದವು. ಕ್ರಿ.ಪೂ.ದಲ್ಲಿ ಎಂದೋ ಆರ್ಥಿಕ ಹಾಗೂ ವಾಯುಗುಣ ಸಂಬಂಧವಾದ ಕಾರಣಗಳಿಂದ ಸೀಮೈಟರು ತಮ್ಮ ಮೂಲಸ್ಥಾನವನ್ನು ತೊರೆದು ಗುಂಪುಗಳಲ್ಲಿ ಅಲ್-ಇರಾಕ್, ಸಿರಿಯ ಮತ್ತು ಈಜಿಪ್ಟ್‌ಗಳಿಗೆ ವಲಸೆಹೋದರೆನ್ನಲಾಗಿದೆ.

ಇಸ್ಲಾಂ ಪೂರ್ವಕಾಲದ ಅರಬ್ಬರನ್ನು ಆರಿಬಾ ಅಥವಾ ಬಾಯಿದಾ, ಮುತಾಅರ್ರಿಬಾ ಮತ್ತು ಮುಸ್ತಾ ಅರಿಬಾ ಎಂದು ಮೂರು ಪಂಗಡಗಳಾಗಿ ವಿಂಗಡಿಸುವುದುಂಟು. ಸಂಸ್ಕೃತಿ ಜನಜೀವನಗಳ ಆಧಾರದ ಮೇಲೆ ಈ ವಿಭಜನೆಯನ್ನು ಮಾಡಿದೆ. ಪ್ರಾಚೀನ ಕಾಲದ ಅರಬ್ಬರು ಇಹಜೀವನದಲ್ಲಿ ನಂಬಿಕೆಯುಳ್ಳವರೂ ಸ್ವಾತಂತ್ರ್ಯಪ್ರಿಯರೂ ಅಭಿಮಾನಿಗಳೂ ವಾಗ್ಮಿಗಳೂ ಆಗಿದ್ದರು. ಮರಳುಗಾಡಿನ ಜೀವನವೇ ಒಂದು ನಿರಂತರ ಹೋರಾಟವಾಗಿದ್ದುದರಿಂದ ಅರಬ್ಬರಲ್ಲಿ ಐಹಿಕ ಸುಖಾಪೇಕ್ಷೆಯ ಭಾವನೆ ಸಹಜವಾಗಿತ್ತು. ಇಸ್ಲಾಂ ಪೂರ್ವದ ಅರಬ್ ರಾಜವಂಶಗಳ ಪೈಕಿ ಎರಡನ್ನು ನಾವು ಗಮನಿಸಬಹುದು. ಅರೇಬಿಯದ ಈಶಾನ್ಯ ಭಾಗದಲ್ಲಿ ಘಸ್ಸನಿದ್ ವಂಶಜರೂ ಯೂಫ್ರೆಟಿಸ್ ನದಿಯ ಪಶ್ಚಿಮಭಾಗದಲ್ಲಿ ಲಖಮಿದ್ ವಂಶಜರೂ ಆಳುತ್ತಿದ್ದರು. ಘಸ್ಸನಿದರು ರೋಮನ್ನರ, ಲಖಮಿದರು ಪಾರಸಿಕರ ಮತ್ತು ಸಸೇನಿಯನ್ನರ ಸಂಸ್ಕೃತಿಗಳಿಂದ ಪ್ರಭಾವಿತರಾಗಿದ್ದರು. ರೋಮ್ ಮತ್ತು ಪರ್ಷಿಯ ದೇಶಗಳ ನಡುವೆ ನಡೆದ ಯುದ್ಧದಲ್ಲಿ ಈ ಎರಡು ವಂಶಗಳವರೂ ಗಮನಾರ್ಹ ಪಾತ್ರವಹಿಸಿದ್ದರು.

ಅರಬ್ಬರ ನಾಗರಿಕತೆಯ ಚರಿತ್ರೆಯ ಬಗ್ಗೆ ನಡೆದ ಪ್ರಾಚೀನ ಸಂಶೋಧನೆಗಳಿಂದ ಈ ನಾಗರಿಕತೆ ಕ್ರಿ.ಪೂ. ೪೦೦೦ ವರ್ಷಗಳಷ್ಟು ಹಿಂದಿನದೆಂಬ ಅಭಿಪ್ರಾಯವಿದೆ. ಬ್ಯಾಬಿಲೋನಿಯದಲ್ಲಿ ದೊರೆತಿರುವ ಶಾಸನಗಳ ಆಧಾರದ ಮೇಲೆ ಇದು ಕ್ರಿ.ಪೂ. ೩೦೦೦ ವರ್ಷಗಳಷ್ಟು ಹಳೆಯದೆಂದು ತಿಳಿಯುವುದು. ಈ ನಾಗರಿಕತೆಯನ್ನು ಹೀಬ್ರೂ ಶಾಸನಗಳು ಕ್ರಿ.ಪೂ. ೧೫೦೦ರವರೆಗೆ, ದಕ್ಷಿಣ ಅರೇಬಿಯದಲ್ಲಿ ದೊರೆತಿರುವ ಶಾಸನಗಳು ಕ್ರಿ.ಪೂ. ೮೦೦ರವರೆಗೆ ಹಿಂದಕ್ಕೆ ಒಯ್ಯುತ್ತವೆ. ಈ ಕಾಲಕ್ಕಾಗಲೆ ಲೇಖನಕಲೆ ಬೆಳೆದಿದ್ದಿರಬೇಕೆಂದು ಊಹಿಸಬಹುದಾಗಿದೆ.

ಸೀಮೈಟರು ಮೊದಲು ಬಹುಮಟ್ಟಿಗೆ ಒಂದೇ ಭಾಷೆಯನ್ನು ಮಾತನಾಡುತ್ತಿದ್ದಿರಬೇಕು. ಆದರೆ ಹೊಸ ಹೊಸ ಪ್ರದೇಶಗಳಿಗೆ ವಲಸೆ ಹೋದುದರ ಪ್ರಯುಕ್ತ, ನೆಲಸಿದ ಪ್ರದೇಶಗಳ ನೀರು ನೆಲಗಳಿಗೆ ಅನುಗುಣವಾಗಿ ಅವರ ಭಾಷೆ ಸಾಕಷ್ಟು ಮಟ್ಟಿಗೆ ಬದಲಾಗಿರಬೇಕು. ಅವರ ಮೂಲಭಾಷೆ ಯಾವುದೆಂದು ನಿರ್ದಿಷ್ಟವಾಗಿ ಹೇಳಲು ಸಾಧ್ಯವಾಗದಿದ್ದರೂ ಈ ಕುಲದ ಭಾಷೆಗಳಾದ ಅರಬ್ಬಿ, ಎಥಿಯೋಪಿಕ್, ಆರ್ಮೆಯಿಕ್, ಅಸ್ಸೀರಿಯನ್ ಮುಂತಾದ ಭಾಷೆಗಳಲ್ಲಿ ವ್ಯಾಕರಣ ಮತ್ತು ವಾಕ್ಯರಚನೆಯ ದೃಷ್ಟಿಯಿಂದ ಸಾಮ್ಯವಿದ್ದು, ಒಂದು ರೀತಿಯ ಏಕರೂಪತೆಯನ್ನು ಕಾಣಬಹುದು. ಅಸ್ಸಿರೊ-ಬೇಬಿಲೋನಿಯನ್ ಭಾಷೆಯನ್ನು ಬಿಟ್ಟರೆ ಉಳಿದೆಲ್ಲ ಸೆಮಿಟಿಕ್ ಭಾಷೆಗಳನ್ನೂ ಬಲದಿಂದ ಎಡಕ್ಕೆ ಬರೆಯುತ್ತಾರೆ. ಧಾತುಗಳು ಸಾಮಾನ್ಯವಾಗಿ ಮೂರು ವ್ಯಂಜನಗಳಿಂದ ಕೂಡಿದ್ದು (ಉದಾ. ಕ್‌ತ್‌ಬ್-ಬರೆ, ಕ್‌ತ್‌ಲ್-ಕೊಲ್ಲು) ಈ ಧಾತುಗಳನ್ನೇ ಪ್ರಕೃತಿಗಳೆಂದು ಪರಿಗಣಿಸಿ ಶಬ್ದಗಳ ರಚನೆಯನ್ನು ಮಾಡಲಾಗುತ್ತದೆ. ಸ್ವರಗಳಲ್ಲಿ ಬದಲಾವಣೆಯನ್ನುಂಟುಮಾಡಿಯೋ ಇಲ್ಲವೆ ಉಪಸರ್ಗ ಪ್ರತ್ಯಯಗಳನ್ನು ಸೇರಿಸಿಯೋ ಶಬ್ದರಚನೆಯಾಗುತ್ತದೆ. ಮೂರು ಪುರುಷಗಳಿದ್ದು ಮೊದಲಿನೆರಡಕ್ಕೆ ಮಾತ್ರ ಎರಡು ಲಿಂಗಭೇದಗಳುಂಟು. ವಾಕ್ಯದಲ್ಲಿ ಸಾಮಾನ್ಯವಾಗಿ ಮೊದಲು ಧಾತು, ಅನಂತರ ಕರ್ತೃ ಹಾಗೂ ಅದನ್ನನುಸರಿಸಿ ಕರ್ಮಪದ ಅಥವಾ ಕ್ರಿಯಾಪದ ಬರುತ್ತದೆ. ಏಕವಚನ, ದ್ವಿವಚನ ಮತ್ತು ಬಹುವಚನಗಳಿದ್ದು ಕರ್ತೃಕಾರಕ, ಕರ್ಮಕಾರಕ ಹಾಗೂ ಸಂಬಂಧಕಾರಕ ಪ್ರಯೋಗಗಳೇ ವಿಶೇಷವಾಗಿವೆ. ನಾಮಪದ ಮತ್ತು ವಿಶೇಷಣಗಳಿಗೆ ಲಿಂಗಭೇದಗಳುಂಟು. ಪುಲ್ಲಿಂಗ ನಾಮಪದಗಳು ಸಂಖ್ಯಾವಾಚಕದಲ್ಲಿ ಸ್ತ್ರೀಲಿಂಗ ಸಂಖ್ಯಾಪದಗಳೊಡನೆಯೂ ಸ್ತ್ರೀಲಿಂಗ ನಾಮಪದಗಳು ಪುಲ್ಲಿಂಗ ಸಂಖ್ಯಾಪದಗಳೊಡನೆಯೂ ಪ್ರಯೋಗವಾಗುತ್ತವೆ.

ಇಸ್ಲಾಮಿನ ಉದಯವಾಗುವ ಹೊತ್ತಿಗಾಗಲೆ ಅರಬ್ಬಿಭಾಷೆ ಸಾಕಷ್ಟು ಅಭಿವೃದ್ಧಿ ಹೊಂದಿದ ಸ್ಥಿತಿಯಲ್ಲಿತ್ತು. ವ್ಯಾಕರಣ ಮತ್ತು ಪದಕೋಶಗಳು ಬಹಳ ಶ್ರೀಮಂತವಾಗಿದ್ದವು. ಈ ಹೊತ್ತಿಗೆ ಸೆಮಿಟಿಕ್ ಭಾಷೆಗಳ ಪೈಕಿ ಅರಬ್ಬಿಯ ಹೊರತು ಉಳಿದ ಭಾಷೆಗಳು ಅನೇಕ ಆಂತರಿಕ ಮತ್ತು ಬಾಹ್ಯಕಾರಣಗಳಿಂದ ಕಣ್ಮರೆಯಾಗಿದ್ದವು. ಇವೆಲ್ಲವುಗಳ ಸಾರವನ್ನು ಅರಬ್ಬಿಯೆ ಮೈಗೂಡಿಸಿಕೊಂಡಿತ್ತು. ಇಸ್ಲಾಮಿಗೆ ಮುಂಚೆಯೇ ಅರಬ್ಬಿ ಭಾಷೆ ಪಾರಸಿ, ಹೀಬ್ರು, ಎಥಿಯೋಪಿಕ್, ಸಂಸ್ಕೃತ ಮತ್ತು ಗ್ರೀಕ್ ಭಾಷೆಗಳಿಂದ ಅನೇಕ ವಿಷಯಗಳನ್ನು ಎರವಲು ಪಡೆದುಕೊಂಡಿತ್ತು. ಅರಬ್ಬಿಭಾಷೆಗೆ ಸೇರಿದಂತೆ ಅನೇಕ ಉಪಭಾಷೆಗಳಿದ್ದು, ಈ ಪೈಕಿ ನಗರವಾಸಿಗಳಾಗಿದ್ದ ಖುರೇಷಿಗಳು ಪರಿಷ್ಕೃತವಾಗಿದ್ದ ಉಪಭಾಷೆಯೊಂದನ್ನು ಬಳಸುತ್ತಿದ್ದರೆನ್ನಲಾಗಿದೆ. ಪ್ರವಾದಿ ಮಹಮ್ಮದ್ ಸಹ ಖುರೇಷಿ ಜನಾಂಗಕ್ಕೆ ಸೇರಿದವನಾಗಿದ್ದರಿಂದ, ವಾಸ್ತವವಾಗಿ ಕುರಾನಿನ ರಚನೆಯಾಗಿರುವುದು ಈ ಉಪಭಾಷೆಯಲ್ಲಿಯೇ.

ಶಬ್ದಕೋಶದ ದೃಷ್ಟಿಯಿಂದ ಅರಬ್ಬಿ ಶ್ರೀಮಂತವಾದ ಭಾಷೆ. ಪ್ರತಿಯೊಂದು

ಧಾತುವಿನಿಂದಲೂ ಅಲ್ಪ ಮಾರ್ಪಾಡು ಮಾಡುವುದರಿಂದಲೇ ಹತ್ತಾರು ಶಬ್ದಗಳನ್ನು ಸುಲಭವಾಗಿ ರೂಪಿಸಬಹುದು. ಮನಸ್ಸಿನ ಭಾವನೆಗಳನ್ನು ನಿಸ್ಸೃಷ್ಟವಾಗಿಯೂ ಸೂಕ್ಷ್ಮ ವಾಗಿಯೂ ವ್ಯಕ್ತಪಡಿಸಲು ಇಲ್ಲಿಯ ವಿಪುಲವಾದ ಶಬ್ದಭಂಡಾರ ತುಂಬ ಸಹಾಯಕ ವಾಗಿದೆ. ಉದಾಹರಣೆಗೆ, 'ಚಂದ್ರ' ಎಂಬುದಕ್ಕೆ ಸು. ೧೬ ಸಂವಾದಿ ಶಬ್ದಗಳಿವೆ. 'ಮಳೆ' ಎಂಬುದಕ್ಕೆ ಇಳಕ್ಕೂ ಹೆಚ್ಚು ಶಬ್ದಗಳಿವೆ. ಹೀಗೆಯೇ 'ಬೆಳಕು', 'ಕತ್ತಲೆ', 'ಮೋಡ,' ಮೊದಲಾದ ಶಬ್ದಗಳಿಗೆ ಕೂಡ. ರಾತ್ರಿಯ ಪ್ರತಿಯೊಂದು ಗಂಟೆಗೂ ಒಂದೊಂದು ಪದ ಚಾಲ್ತಿಯಲ್ಲುಂಟು.[24] ಈ ವಿಪುಲ ಶಬ್ದಭಂಡಾರ ಮತ್ತು ವ್ಯಾಕರಣ ನಿಯಮಗಳು ಭಾಷೆಯನ್ನು ಕಷ್ಟವೆನಿಸುವಂತೆ ಮಾಡಿದ್ದರೂ ಲೇಖಕ ತನ್ನ ಮನಸ್ಸಿನ ಭಾವನೆಗಳನ್ನು ಅದರ ಸೂಕ್ಷ್ಮತೆಯಲ್ಲಿ ವ್ಯಕ್ತಪಡಿಸುವ ಸೌಲಭ್ಯವುಂಟಾಗಿದೆ.

ಮಧ್ಯಕಾಲದ ಶತಮಾನಗಳಲ್ಲಿ ಅರಬ್ಬಿ ಭಾಷೆಗೆ ಅಂತರಾಷ್ಟ್ರೀಯ ಮಾನ್ಯತೆಯಿತ್ತು. ಅದು ಏಷ್ಯ, ಆಫ್ರಿಕ, ಯೂರೋಪ್ ಮತ್ತು ಮೆಡಿಟರೇನಿಯನ್ ಪ್ರದೇಶಗಳಲ್ಲಿ ಬಳಕೆಯಲ್ಲಿತ್ತು. ಅರಬ್ಬಿ ಭಾಷಾ ಸಾಹಿತ್ಯ ಪಂಡಿತ ರೀನಾಲ್ಡ್ ಎ. ನಿಕಾಲ್ಸನ್‌ನ ಮಾತಿನಲ್ಲಿ ಹೇಳುವುದಾದರೆ, "ಮಧ್ಯಕಾಲದಲ್ಲಿ ರಾಷ್ಟ್ರೀಯತೆಯ ಭೇದವಿಲ್ಲದಂತೆ ಅರಬ್ಬಿ ಇಂಡಸ್‌ನಿಂದ ಹಿಡಿದು ಅಟ್ಲಾಂಟಿಕ್‌ವರೆಗೆ ಎಲ್ಲ ಮುಸಲ್ಮಾನರ ಆಡುಮಾತು ಮತ್ತು ಬರೆವಣಿಗೆಯ ಭಾಷೆಯಾಗಿತ್ತು. ರಾಜಾಸ್ಥಾನ, ಧರ್ಮ, ನ್ಯಾಯ, ವಾಣಿಜ್ಯ, ಸಾಹಿತ್ಯ ಹಾಗೂ ವಿಜ್ಞಾನ ಕ್ಷೇತ್ರಗಳಲ್ಲಿ ಈ ಭಾಷೆಯ ಬಳಕೆಯೇ ಹೆಚ್ಚಾಗಿತ್ತು.[25] ಈಗಲೂ ಏಷ್ಯದ ಮತ್ತು ಆಫ್ರಿಕದ ಪ್ರಧಾನ ಭಾಷೆಗಳ ಪೈಕಿ ಇದೂ ಒಂದು. ಒಂದು ಹಿರಿಯ ನಾಗರಿಕತೆಯುಳ್ಳ ಭಾಷೆಯಾಗಿ ಪ್ರಪಂಚದಲ್ಲೆಲ್ಲ ಇದಕ್ಕೆ ಮನ್ನಣೆ ಯುಂಟು. ಸ್ಪೇನ್‌ನಲ್ಲಿ ೧೫ನೇ ಶತಮಾನದವರೆಗೂ ಬಾಲಿರಿಕ್ ದ್ವೀಪಗಳು, ಮಾಲ್ಟಾ, ಸಿಸಿಲಿ ಮುಂತಾದೆಡೆಗಳಲ್ಲಿ ೧೮ನೆಯ ಶತಮಾನದವರೆಗೂ ಇದು ವ್ಯವಹಾರ ಭಾಷೆ ಯಾಗಿತ್ತು.

ಅರಬ್ಬಿ ಭಾಷೆಯಲ್ಲಿ ಬಹಳ ಮೊದಲಿನಿಂದಲೂ ಸಾಹಿತ್ಯ ಬೆಳೆದುಬಂದಿರಬೇಕೆಂಬ ಸೂಚನೆಗಳಿದ್ದರೂ, ಈ ಬಗ್ಗೆ ಅಧಿಕೃತವಾದ ಸಾಕ್ಷ್ಯಗಳು ದೊರೆಯುತ್ತಿಲ್ಲ. ಈಗ ನಮಗೆ ದೊರೆತಿರುವ ಸಾಹಿತ್ಯದಲ್ಲಿ ತೀರ ಹಳೆಯದೆಂದರೆ ಇಸ್ಲಾಂಗಿಂತ ಸು. ೧೦೦-೧೫೦ ವರ್ಷಗಳಿಗೆ ಹಿಂದಿನ ಕಾಲದ್ದು. ಆದರೆ ಈ ಅವಧಿಯದೆನ್ನಲಾದ ಸಾಹಿತ್ಯದ ಮಟ್ಟ ಎಷ್ಟು ಹಿರಿದಾದುದೆಂದರೆ ಯಾವುದೇ ಅಭ್ಯಂತರವಿಲ್ಲದೆ, ಅರಬ್ಬಿ ಸಾಹಿತ್ಯ ಕ್ರಿ.ಪೂ. ಐದನೆಯ ಶತಮಾನದಿಂದ ಬೆಳೆದುಬರುತ್ತಿದೆಯೆಂದು ಅದರಿಂದ ತರ್ಕಿಸಬಹುದಾಗಿದೆ. ಈ ಸಾಹಿತ್ಯದ ಬೆಳೆವಣಿಗೆಯಲ್ಲಿ ಕಂಡುಬರುವ ಒಂದು ದೊಡ್ಡ ಕೊರತೆಯೆಂದರೆ ಅರಬ್ಬರು ಮೊದಲಿಗೆ ಅನಕ್ಷರಸ್ಥರಾಗಿದ್ದು, ಅಲೆಮಾರಿ ಜನಗಳಾಗಿ ಜೀವಿಸುತ್ತಿದ್ದುದರಿಂದ ತಮ್ಮ ಸಾಹಿತ್ಯ ಬೆಳೆದಂತೆಲ್ಲ ಅದನ್ನು ಲಿಖಿತಗೊಳಿಸುವ ಗೋಜಿಗೆ ಅವರು ಹೋಗದಿದ್ದುದು. ಆದರೆ ಅರಬ್ಬರಿಗೆ ಲಿಪಿಯ ಅರಿವೇ ಇರಲಿಲ್ಲವೆಂದು ಇದರಿಂದ ಊಹಿಸಲಾಗುವುದಿಲ್ಲ. ಸಾಹಿತ್ಯದಲ್ಲಿ ಉತ್ತಮವೆನಿಸಿದ ಅಂಶಗಳನ್ನೆಲ್ಲ ಅವರು ನೆನಪಿನಲ್ಲಿಯೇ ಇಟ್ಟುಕೊಳ್ಳಲು

ಪ್ರಯತ್ನಿಸುತ್ತಿದ್ದರು. ಹೀಗಾಗಿ ಇತಿಹಾಸ, ಸಾಹಿತ್ಯ ಮುಂತಾದುವನ್ನೆಲ್ಲ ಮೌಖಿಕವಾಗಿಯೇ ಪೀಳಿಗೆಯಿಂದ ಪೀಳಿಗೆಗೆ ವರ್ಗಾಯಿಸುತ್ತಿದ್ದರು. ಒಳ್ಳೆಯ ನೆನಪಿನ ಶಕ್ತಿ ಇಸ್ಲಾಂಪೂರ್ವದ ಅರಬ್ಬರ ಒಂದು ರಾಷ್ಟ್ರೀಯ ವೈಶಿಷ್ಟ್ಯವಾಗಿತ್ತು. ಅಲ್ಲದೆ ಕೆಲವು ವರ್ಗದ ಜನರ ವೃತ್ತಿಧರ್ಮವೇ ಆಗಿತ್ತು. ಕಾವ್ಯಕ್ಷೇತ್ರದಲ್ಲಿ ಇಂಥವರನ್ನು 'ರುವಾತ್' ಎಂದು ಕರೆಯುತ್ತಿದ್ದರು. ಇವರ ಶಿಷ್ಯರಾದ ರಾವಿಗಳು ತಮ್ಮ ಗುರುಗಳ ರಚನೆಗಳನ್ನು ಕಂಠಪಾಠಮಾಡಿ ಅಗತ್ಯಬಿದ್ದಾಗಲೆಲ್ಲ ಹೇಳುತ್ತಿದ್ದರು. ಇಸ್ಲಾಂಪೂರ್ವಕಾಲದ ಅರಬ್ಬಿ ಸಾಹಿತ್ಯ ಕೇಂದ್ರಗಳ ಪೈಕಿ ನಜ್ದ್, ಅಲ್‌ಹಿಜಾಜ್, ಅಲ್‌ಬಹರೀನ್ ಮತ್ತು ಅಲ್‌ಹೀರಾ ಎಂಬುವು ಪ್ರಬಲವಾಗಿದ್ದವು.

ಈ ಕೇಂದ್ರಗಳಲ್ಲಿ ಮೈದಳೆದ ಸಾಹಿತ್ಯರಾಶಿ ವಿಪುಲವಾಗಿದ್ದರೂ ಬರೆವಣಿಗೆಯ ಅಭಾವದಿಂದ, ನೆನಪಿನ ಆಸರೆಯಲ್ಲೆ ಮುಂದುವರಿದುದರ ನಿಮಿತ್ತ, ಅನೇಕ ಕೃತಿಗಳು ವಿಸ್ಮೃತಿಯ ಗರ್ಭದಲ್ಲಿ ಹುದುಗಿಹೋಗಿರಬೇಕು. ಈ ಬಗ್ಗೆ ಇಸ್ಲಾಂಪೂರ್ವದ ಸಾಹಿತ್ಯ ಸಂಗ್ರಹಕಾರರಲ್ಲೊಬ್ಬನಾದ ಅಬೂ ಅಮ್ರ್‌ನ (೬೮೯–೭೭೦) ಮಾತಿನಲ್ಲಿ ಹೇಳುವುದಾದರೆ, "ಅರಬ್ಬರ ಗದ್ಯ ಮತ್ತು ಪದ್ಯ ಸಾಹಿತ್ಯಗಳ ಪೈಕಿ ನಮಗೆ ದೊರೆತಿರುವುದು ಕೇವಲ ಸ್ವಲ್ಪ ಭಾಗವಷ್ಟೆ. ಒಂದುವೇಳೆ ಅದು ಪೂರ್ತಿ ದೊರೆತಿದ್ದಲ್ಲಿ ಇನ್ನೆಷ್ಟು ಕಾವ್ಯ ಮತ್ತು ಜ್ಞಾನರಾಶಿ ಲಭ್ಯವಾಗುತ್ತಿತ್ತೊ!" ಇಸ್ಲಾಂನ ಅನಂತರವೂ ಕೆಲಕಾಲ ಈ ಪರಿಸ್ಥಿತಿ ಉತ್ತಮಗೊಳ್ಳಲಿಲ್ಲ. ಹಿಜಿರಾದ ೨ನೆಯ ಶತಮಾನದವರೆಗೂ (ಕ್ರಿ.ಶ. ಸು. ೮ನೆಯ ಶತಮಾನ) ಅರಬ್ಬರಲ್ಲಿ ತಮ್ಮ ಸಾಹಿತ್ಯವನ್ನು ದಾಖಲುಮಾಡುವ ಪ್ರವೃತ್ತಿಯೇ ಬೆಳೆದುಬರಲಿಲ್ಲ. ಇಂಥ ಸಂದರ್ಭದಲ್ಲಿ ಈ ಪರಂಪರಾಗತ ಸಾಹಿತ್ಯವಾಹಿನಿಯಲ್ಲಿ ಅನೇಕ ರೀತಿಯ ಬದಲಾವಣೆಗಳು, ಪುನರಾವರ್ತನೆಗಳು, ಲೋಪದೋಷಗಳು ನುಸುಳಿರಬಹುದೆಂದು ಯಾರೂ ಊಹಿಸಬಹುದು. ಮೌಖಿಕವಾದ ಯಾವುದೇ ಸಾಹಿತ್ಯದ ಪ್ರಾಮಾಣಿಕತೆಯ ಬಗ್ಗೆ ಸಂಶಯ ತಲೆದೋರುವುದು ಸಹಜವೇ. ಈ ಕಾಲದ ಸಾಹಿತ್ಯವನ್ನು ಸಂಗ್ರಹಿಸಿದವರಲ್ಲಿ ಹಮ್ಮಾದ್-ಅರ್-ರವ್ವೆಯ (೭೮೫) ಮತ್ತು ಖಾಲಿಫ್-ಅಲ್-ಅಹಮರ್ (೭೯೬) ಮುಖ್ಯರು. ಇವರು ಜನಪದ ಸಾಹಿತ್ಯವನ್ನೂ ಬದಾಯೂನ್ ಕುಲಗಳಲ್ಲಿ ಚಾಲ್ತಿಯಲ್ಲಿದ್ದ ಗಾದೆಗಳು ಮುಂತಾದುವನ್ನೂ ಸಂಗ್ರಹಿಸಿದರು. ಇವರ ಕೊಡುಗೆ ಗಮನಾರ್ಹವಾದರೂ ಅರಬ್ಬಿ ಸಾಹಿತ್ಯದಲ್ಲಿ ಬಹಳಷ್ಟು ಪ್ರಕ್ಷೇಪಗಳನ್ನು ಸೇರಿಸಿದರೆಂಬ ಆರೋಪ ಇವರ ಮೇಲಿದೆ.

ಅರಬ್ಬಿ ಸಾಹಿತ್ಯವನ್ನು ಕುರಿತು ರೇನಾಲ್ಡ್ ನಿಕಾಲ್ಸನ್, ಕ್ಲೆಮೆಂಟ್ ಹ್ಯೂಆರ್ಟ್, ಎಚ್.ಎ. ಆರ್. ಗಿಬ್ ಮುಂತಾದ ಐರೋಪ್ಯರು ಅಭ್ಯಸಿಸಿದ್ದಾರೆ. ಗಿಬ್ ಈ ಸಾಹಿತ್ಯವನ್ನು ವಿಭಜನೆಮಾಡುತ್ತ ಸು. ೫೦೦–೬೨೨ರ ವರೆಗಿನ ಅವಧಿಯನ್ನು ವೀರಕಾಲ (heroic age) ಎಂದೂ ೬೨೨–೭೫೦ರ ವರೆಗಿನ ಅವಧಿಯನ್ನು ವಿಸ್ತರಣ ಕಾಲ (age of expansion) ಎಂದೂ ೭೫೦–-೧೦೫೫ರ ವರೆಗಿನ ಅವಧಿಯನ್ನು ಸ್ವರ್ಣಕಾಲ (golden age) ಎಂದೂ ವಿಭಾಗಮಾಡಿದ್ದಾನೆ.[26] ಉಮಯ್ಯಾದ್ (೬೬೧–೭೫೦)

ಹಾಗೂ ಅಬ್ಬಾಸಿದ್ (೭೫೦-೧೨೫೮) ಖಲೀಫರ ಕಾಲದಲ್ಲಿ ಸಾಹಿತ್ಯ ಬಹಳ ಪ್ರವರ್ಧಮಾನಕ್ಕೆ ಬಂತು.

ಇಸ್ಲಾಂ ಪೂರ್ವಕಾಲದ ಸಾಹಿತ್ಯದಲ್ಲಿಯೂ ಅನೇಕ ಪ್ರಕಾರಗಳನ್ನು ಕಾಣಬಹುದು. ಈ ಕಾಲದ ಕೆಲವು ಗದ್ಯದ ನಮೂನೆಗಳು ದೊರೆಯುತ್ತವೆ. ಸಾಹಿತ್ಯದಲ್ಲಿ ಮೌಖಿಕ ಪ್ರವೃತ್ತಿ ಅಧಿಕವಾಗಿದ್ದುದರಿಂದಲೋ ಏನೋ ಮೊದಲ ಗದ್ಯರಚನೆಗಳು ನೀಳವಾದ ವರ್ಣನೆಗಳಾಗಿರದೆ ಚಿಕ್ಕ ಚಿಕ್ಕ ವಿಚಾರಗಳ ಕೊಂಡಿಗಳಂತಿದ್ದವು. ಇದನ್ನು 'ರಿವಾಯತ್' ಎನ್ನುತ್ತಿದ್ದರು. ಪ್ರತಿಯೊಂದು ರಿವಾಯತ್ತಲ್ಲೂ ಅದನ್ನು ಮೊದಲು ವಂಶಾನುಕ್ರಮವಾಗಿ ಕಾಪಾಡಿಕೊಂಡು ಬಂದವರ ಹೆಸರುಗಳನ್ನು ಹೇಳಲಾಗುತ್ತಿತ್ತು. ಇಂಥವರನ್ನು 'ಇಸ್ನಾದ್' ಎನ್ನುತ್ತಿದ್ದರು. ಇಸ್ಲಾಂನ ಉದಯಕಾಲದಲ್ಲಂತೂ ಅನೇಕ ಹೋರಾಟಗಳುಂಟಾಗಿ ಯುದ್ಧದಲ್ಲಿ ಮಡಿದವರ ಜೊತೆಯಲ್ಲಿಯೇ ಬಹುಮಟ್ಟಿನ ಸಾಹಿತ್ಯ ಕೂಡ ಭೂಗತವಾಯಿತು. ಆದರೂ ಉಮಯ್ಯಾದ್ ಕಾಲದಲ್ಲಿ ಬೆಳೆದುಬಂದ ಸಾಹಿತ್ಯಕ್ಕೆ ಅಳಿದುಳಿದ ರಿವಾಯತ್ ಅಡಿಗಲ್ಲಾಯಿತು. ಈ ಗದ್ಯ ಸಾಹಿತ್ಯವನ್ನು ಚರಿತ್ರೆ, ವಂಶಾನುಕ್ರಮ, ಲಘುಸಾಹಿತ್ಯ, ಕಥೆ, ಭಾಷಣ, ವರ್ಣನೆ, ಗಾದೆ, ಹಿತೋಕ್ತಿ ಮೊದಲಾದುವೆಂದು ವಿಭಜಿಸಬಹುದು. ಈ ಕಾಲದ ಗಾದೆಗಳ ಒಂದೆರಡು ನಮೂನೆಗಳು: (೧) ಹಾವು ಕಡಿಸಿಕೊಂಡವನು ತಾನೂ ಮಲಗಲಾರ, ಇನ್ನೊಬ್ಬರನ್ನೂ ಮಲಗಗೊಡಲಾರ. (೨) ತಿಳಿವಳಿಕೆ ಇರುವವನನ್ನು ಸಂದೇಶವಾಹಕನನ್ನಾಗಿ ಮಾಡಿ ಕಳುಹಿಸು, ಆದರೆ ಅವನಿಗೆ ಉಪದೇಶಿಸಬೇಡ (೩) ಕಬ್ಬಿಣದ ಮೇಲೆ ಕಬ್ಬಿಣ ಮಾತ್ರ ಗೆರೆ ಮೂಡಿಸುತ್ತದಷ್ಟೆ[27]

ಸುಮಾರು ೬೦೦ರ ಹೊತ್ತಿಗೆ ಅನೇಕ ಒಳ್ಳೆಯ ಭಾಷಣಗಳೂ ಹಿತೋಕ್ತಿಗಳೂ ಅರಬ್ಬಿ ಗದ್ಯಸಾಹಿತ್ಯದಲ್ಲಿ ಮೂಡಿಬಂದುವು. ಖುಸ್‌ಬಿನ್ ಸಯೀದ ಅಲ್ ಇಯಾದಿ ಎಂಬ ಕ್ರೈಸ್ತ ಪಾದ್ರಿಯೊಬ್ಬ ಉಕಾಜ್ ತೀರ್ಥಯಾತ್ರೆಯ ಸಂದರ್ಭದಲ್ಲಿ ನೀಡಿದ ಭಾಷಣವೊಂದು ಯುವಕನಾಗಿದ್ದ ಪ್ರವಾದಿ ಮಹಮ್ಮದನ ಮೇಲೆ ಪ್ರಭಾವಬೀರಿತ್ತೆನ್ನಲಾಗಿದೆ.

ಇಂದು ನಮಗೆ ದೊರೆತಿರುವ ಪ್ರಾಚೀನ ಅರಬ್ಬಿ ಕಾವ್ಯಗಳ ತುಣುಕುಗಳು ಸುಮಾರು ೫ನೆಯ ಶತಮಾನಕ್ಕೆ ಈಚಿನವೆಂದು ಹೇಳಬಹುದು. ಉಕಾಜ್, ಮೆಕ್ಕ ಮುಂತಾದ ಪಟ್ಟಣಗಳಲ್ಲಿ ಜರಗುತ್ತಿದ್ದ ಸಾಹಿತ್ಯ ಸಮ್ಮೇಳನಗಳಲ್ಲಿ ಕವಿಗಳು ಒಂದುಗೂಡಿ ಒಬ್ಬರೊಡನೊಬ್ಬರು ಸ್ಪರ್ಧೆನಡಸುತ್ತಿದ್ದರಿಂದ ಈ ಪದ್ಯಗಳಲ್ಲಿ ಅವರ ಭಾಷಾ ಪ್ರಭುತ್ವ, ವರ್ಣನವೈಖರಿಗಳು ಅಚ್ಚಳಿಯದೆ ಮೂಡಿಬಂದಿವೆ. ಈ ಕವಿಗಳು ದೇಶದ ವಿವಿಧ ಭಾಗಗಳಿಗೆ ಸೇರಿದವರಾಗಿದ್ದರೂ, ಇವರೆಲ್ಲ ತಮ್ಮ ಕವಿತ್ವಕ್ಕೆ ಒಂದೇ ರೀತಿಯ ಭಾಷೆಯನ್ನು ಉಪಯೋಗಿಸಿದ್ದಾರೆಂಬುದು ಗಮನಾರ್ಹ. ಇದು ಹೇಗೆ ಸಾಧ್ಯವಾಯಿತೆಂಬುದು ಇನ್ನೂ ತೊಡಕಿನ ಪ್ರಶ್ನೆಯಾಗಿಯೇ ಉಳಿದಿದೆ. ಪರಂಪರಾಗತವಾಗಿ ಬಂದ 'ಸಜ್' ಎಂಬ ಛಂದೋಬದ್ಧ ಗದ್ಯದ ಚೌಕಟ್ಟಿನ ಮೇಲೆ ಅರಬ್ಬಿ ಕಾವ್ಯ

ನಿರ್ಮಾಣವಾಯಿತೆನ್ನುತ್ತಾರೆ. ಸಜ್‌ನಿಂದ ರಜಾಜ್‌ಗಳೂ ರಜಾಜ್‌ಗಳಿಂದ ಇನ್ನಿತರ ಕಾವ್ಯಪ್ರಭೇದಗಳ ಬೆಳೆವಣಿಗೆಯೂ ಆಯಿತೆನ್ನಲಾಗಿದೆ. ಹಾಗಾಗಿ ರಜಾಜ್ ಅತ್ಯಂತ ಪ್ರಾಚೀನವಾದ ಸರಳ ಕಾವ್ಯಪ್ರಭೇದ.

ಗದ್ಯಕ್ಕಿಂತ ಪದ್ಯ ಪ್ರಭಾವಪೂರ್ಣವಾಗಿರುತ್ತದೆಂದು ಅರಿತ ಅರಬ್ಬರು ಕಾವ್ಯ ಶೈಲಿಯನ್ನು ಅನಂತರ ಚೆನ್ನಾಗಿ ಕೃಷಿಮಾಡಿದರೆಂಬ ಅಭಿಪ್ರಾಯಗಳೂ ಇವೆ. ಇಸ್ಲಾಂಗಿಂತ ಸುಮಾರು ೧೦೦-೧೫೦ ವರ್ಷಗಳಿಗೆ ಮೊದಲು ಕಸೀದ (ಪ್ರಗಾಥ) ಎಂಬ ಕಾವ್ಯಪ್ರಭೇದ ಬೆಳಕಿಗೆ ಬಂತು. ಇವು ಸುಮಾರಾಗಿ ೬೦ರಿಂದ ೧೦೦ ಸಾಲುಗಳಷ್ಟು ಉದ್ದವಾಗಿರುವ ಕವಿತೆಗಳು. ಕಸೀದಗಳಲ್ಲಿ ಕಂಡುಬರುವ ಸಾಮಾನ್ಯ ವಸ್ತುವೆಂದರೆ ದಾರಿಹೋಕನೊಬ್ಬ ಪಾಳುಬಿದ್ದಿರುವ ತನ್ನ ಹಳ್ಳಿಗೆ ಹಿಂದಿರುಗಿ ಅಲ್ಲಿ ನೆಲಸನುವಾಗಿರುವ ತನ್ನ ಪ್ರಿಯತಮೆಯ ವಾಸಸ್ಥಳವನ್ನೂ ತನ್ನ ಮಿತ್ರರೂ ಬಂಧುಗಳೂ ಎಲ್ಲರೂ ದೂರವಾಗಿರುವುದನ್ನು ನೋಡಿ ಪರಿತಪಿಸತೊಡಗುತ್ತಾನೆ. ಕಳೆದುಹೋದ ಸುಖಜೀವನವನ್ನು ಅಂದಿನ ಕಷ್ಟದ ದಿನಗಳಿಗೆ ಹೋಲಿಸಿ ದುಃಖಿಸುತ್ತಾನೆ. ತನ್ನ ಪ್ರೇಯಸಿಯನ್ನು ನೆನೆದು ಪರಿತಪಿಸುತ್ತಾನೆ. 'ನಸೀಬ್' ಎಂದು ಹೆಸರಿಸಿರುವ ಈ ಭಾಗದಲ್ಲಿ ಹೆಣ್ಣಿನ ಸೌಂದರ್ಯದ ಸ್ಪಷ್ಟಚಿತ್ರಗಳು ದೊರೆಯುತ್ತವೆ. ಕಥೆಯ ವಸ್ತುವೇನೇ ಇರಲಿ, ಕಸೀದಗಳಲ್ಲಿ ಮರಳುಗಾಡು, ಒಂಟೆ ಮುಂತಾದ ಪ್ರಾಣಿಗಳು, ಬೇಟೆ, ಚಂಡಮಾರುತ, ಪ್ರಣಯ ಇವೆಲ್ಲವುಗಳ ವರ್ಣನೆಗಳು ಬರುತ್ತವೆ. ಬೆದಾಯೂನ್ ಕುಲದ ವಿವಿಧ ಮುಖಗಳನ್ನು ಇವುಗಳಲ್ಲಿ ಕಾಣಬಹುದು. ಸಾಹಿತ್ಯ ದೃಷ್ಟಿಯಿಂದ ಮೇಲಾಗಿದ್ದ ಈ ರಚನೆಗಳು ಗೋಷ್ಠಿಗಳಲ್ಲಿ ಪುರಸ್ಕೃತವಾಗಿದ್ದಿರಬೇಕೆಂದು ಊಹಿಸಲಾಗಿದೆ. ಈ ಕಸೀದಗಳನ್ನು ರಚಿಸಿದ ಕವಿಗಳ ಪೈಕಿ ಮೊದಲಿಗನಾರೆಂಬ ಬಗ್ಗೆ ಚರ್ಚೆಯಿದೆ. ಪ್ರತಿಯೊಂದು ಬಣದವರೂ ತಮ್ಮ ಬಣದಲ್ಲಿ ಹುಟ್ಟಿದ ಕವಿ ಮೊದಲು ಅದನ್ನು ರಚಿಸಿದನೆಂದು ಹೆಮ್ಮೆಯಿಂದ ಭಾವಿಸುತ್ತಾರೆ. ಯಮನೀ ಬಣದ ಇಮ್ರುಲ್‌ಅಲ್ ಖಯಿಸ್ (೫೪೦) ಮೊದಲ ಕಸೀದಾಕಾರನೆಂದು ಅನೇಕ ವಿಮರ್ಶಕರ ಅಭಿಪ್ರಾಯ.

ನಮಗೆ ದೊರೆತಿರುವ ಇಸ್ಲಾಂಪೂರ್ವಕಾಲದ ಕಾವ್ಯ ಭಾವಗೀತಾತ್ಮಕವಾದುದು. ಈ ಕಾಲದಲ್ಲಿ ಯಾವುದೇ ಮಹಾಕಾವ್ಯ ಅಥವಾ ಅದಕ್ಕೆ ಸದೃಶವಾದ ಸಾಹಿತ್ಯ ಉದ್ಭವಿಸಲಿಲ್ಲ. ಪ್ರಾಚೀನ ಅರಬ್ಬರಲ್ಲಿ ರಾಷ್ಟ್ರೀಯ ಪ್ರಜ್ಞೆ ಇಲ್ಲದಿದ್ದುದರಿಂದಲೋ ಅಥವಾ ಸಾಹಿತ್ಯಕ್ಕೆ ಬರೆವಣಿಗೆ ಬಳಕೆಯಲ್ಲಿಲ್ಲದೆ ಇದ್ದುದರಿಂದಲೋ ಮಹಾಭಾರತ, ಇಲಿಯಡ್, ಷಾನಾಮಾಗಳಂಥ ಮಹಾಕಾವ್ಯಗಳು ಅರಬ್ಬಿಯಲ್ಲಿ ಉದಿಸಲಿಲ್ಲ. ಆದರೆ ಇಲ್ಲಿ ಹಲವು ಸಾಲುಗಳಷ್ಟು ಉದ್ದದ ಕವಿತೆಗಳನ್ನೇನೋ ಕಾಣಬಹುದು. ಅಮ್ರ್‌ಬಿನ್ ಕುಲ್ತುಮ್ ಎಂಬಾತ ಒಂದುಸಾವಿರ ಸಾಲುಗಳ ಪದ್ಯವೊಂದನ್ನು ಬರೆದಿದ್ದನೆಂದು ಹೇಳುತ್ತಾರೆ. ಆದರೆ ಈ ಕಾವ್ಯದ ನೂರು ಪದ್ಯಗಳಷ್ಟೇ ಈಗ ನಮಗೆ ಉಳಿದಿರುವುದು.

ಇಸ್ಲಾಂಪೂರ್ವದ ಕಾವ್ಯದ ಬೆಳೆವಣಿಗೆಯಲ್ಲಿ ಅರಬ್ಬರ ಬೌದ್ಧಿಕ ಬೆಳೆವಣಿಗೆ

ಹಾಗೂ ಸಾಮಾಜಿಕ ಸ್ಥಿತಿಗತಿಗಳನ್ನು ಕಾಣಬಹುದಾಗಿದೆ. ಇದನ್ನು ಒಟ್ಟಾರೆಯಾಗಿ ದಿವಾನ್-ಅಲ್-ಅರಬ್ ಎಂದು ಹೆಸರಿಸಲಾಗಿದೆ. ಪ್ರತಿಯೊಂದು ಬಣದ ಕವಿಯೂ ತನ್ನ ಬಣದ ಹೆಸರನ್ನೂ ಹಿರಿಮೆಯನ್ನೂ ಹಸುರಾಗಿಸಲು ವಿಶೇಷವಾಗಿ ಶ್ರಮಿಸುತ್ತಿದ್ದ. ಈ ಕಾಲದ ಕಾವ್ಯದ ಒಂದು ವೈಶಿಷ್ಟ್ಯವೆಂದರೆ ಅದರ ನೈಜತೆ. ಮರಳುಗಾಡಿನ ಮಕ್ಕಳಾದ ಅರಬ್ಬರು ತಮಗೆ ತಂಗಲು ಯೋಗ್ಯವಾದ ಹುಲ್ಲುಗಾವಲುಗಳನ್ನೂ ಫಲವತ್ತಾದ ಭೂಮಿಗಳನ್ನೂ ಅರಸುತ್ತ ಅಲೆಯುತ್ತಿದ್ದಾಗ, ಎದುರಾದ ಪ್ರಕೃತಿಯ ರಮಣೀಯತೆಯನ್ನು ಮನತಣಿಯೆ ಆಸ್ವಾದಿಸುತ್ತಿದ್ದರು. ಪ್ರಕೃತಿಯನ್ನು ಸೂಕ್ಷ್ಮ ದೃಷ್ಟಿಯಿಂದ ಅವಲೋಕಿಸಿ ಸೌಂದರ್ಯವನ್ನು ಗ್ರಹಿಸುವುದು ಇದರಿಂದ ಅವರ ಸಹಜ ಮನೋಧರ್ಮವಾಯಿತು. ಬೆದಾಯೂನ್ ಕವಿಗಳಂತೂ ಮರಳುಗಾಡಿನ ಏಕಪ್ರಕಾರದ ಜೀವನವನ್ನು ಮುಚ್ಚುಮರೆಯಿಲ್ಲದೆ ಬಣ್ಣಿಸಿದರು. ಅಲ್ಲಿಯ ಜನರ ಮತ್ತು ಪ್ರಾಣಿಗಳ ಜೀವನವನ್ನೂ ಪ್ರವೃತ್ತಿಗಳನ್ನೂ ವರ್ಣಿಸುವುದರಲ್ಲಿ ಆಸಕ್ತಿ ತೋರಿದರು. ಇಸ್ಲಾಂ ಪೂರ್ವಕಾಲದಲ್ಲಿ ಕಾವ್ಯದಲ್ಲಿ ತಾತ್ತ್ವಿಕ ವಿಚಾರಗಳಾಗಲಿ, ದೈವನಿಷ್ಠೆ ಧಾರ್ಮಿಕ ಕಲ್ಪನೆಗಳಾಗಲಿ ಇಲ್ಲದಿದ್ದರೂ ಬೆದಾಯೂನ್ ಅರಬ್ಬರು ತಮ್ಮ ಸಾಮಾಜಿಕ ಜೀವನದಲ್ಲಿ ಕುಲಾಚಾರಗಳಿಗೆ ತುಂಬ ಬೆಲೆಕೊಡುತ್ತಿದ್ದರು. ಶ್ರದ್ಧಾಭಕ್ತಿಗಳಿಂದ ಧಾರ್ಮಿಕ ಕ್ರಿಯಾವಿಧಿಗಳನ್ನು ಆಚರಿಸದಿದ್ದರೂ ಶೌರ್ಯ, ಪ್ರಣಯ, ಪ್ರತಿಷ್ಠೆ ಮುಂತಾದವನ್ನು ಕುಲಾಚಾರಗಳೆಂದು ಆಚರಿಸುತ್ತಿದ್ದರು. ಯಾವ ದೇವರ ಎದುರಿಗಾಗಲಿ ದೈನ್ಯವನ್ನು ತೋರುವುದು ಅವರ ಸ್ವಭಾವಕ್ಕೆ ಅಂಟಬಂದಿರಲಿಲ್ಲ. ಉತ್ತರಭಾಗದ ಅರಬ್ಬರು ಸ್ವೇಚ್ಛಾಪ್ರವೃತ್ತಿಯವರಾಗಿ ಚಪಲಚಿತ್ತದ ವಿಲಾಸಿಗಳಾಗಿದ್ದರೆ, ದಕ್ಷಿಣಭಾಗದ ಅರಬ್ಬರ ಜೀವನಗತಿ ಒಂದಲ್ಲ ಒಂದು ರೀತಿಯಲ್ಲಿ ತಮ್ಮ ಕುಲದೇವತೆಗೆ ಮೊರೆಹೋಗಿತ್ತು. ಚಿಕ್ಕ ಚಿಕ್ಕ ಪ್ರಸಂಗಗಳಲ್ಲಿ ಆಗುವ ಮನಸ್ತಾಪದಿಂದ ಬಣಗಳ ನಡುವೆ ವರ್ಷಗಟ್ಟಲೆ ಕದನಗಳು ನಡೆಯುತ್ತಿದ್ದವು. ಇಂಥ ಹೋರಾಟ ಪ್ರಸಂಗಗಳು ಕಾವ್ಯದ ರೋಚಕ ವಸ್ತುಗಳಾಗುತ್ತಿದ್ದವು. ಈ ಕಾವ್ಯಗಳಲ್ಲಿ ಕೆಲವೆಡೆಗಳಲ್ಲಿ ಅಸ್ಪಷ್ಟತೆ ಇಲ್ಲವೆ ಅಸಹಜ ಪ್ರಯೋಗಗಳು ಕಂಡುಬರುವುದಾದರೂ ಇದಕ್ಕಾಗಿ ನಾವು ಮೂಲಕವಿಯನ್ನು ದೂರುವಂತಿಲ್ಲ. ಅಲ್ಲದೆ ಇಂದು ನಮ್ಮ ಮುಂದಿರುವ ಕಾವ್ಯದಲ್ಲಿ ಮೂಲಕವಿಯ ಕೊಡುಗೆ ಎಷ್ಟಿದೆಯೆಂದು ಅಂದಾಜುಮಾಡುವುದು ಕಷ್ಟಸಾಧ್ಯವೇ ಸರಿ. ಗೇಯತೆ ಮತ್ತು ಶ್ರವ್ಯತೆ ಅರಬ್ಬಿ ಕಾವ್ಯಕ್ಕೆ ಕಳೆಕೊಟ್ಟಿದೆ. ಇಲ್ಲಿ ಬುದ್ಧಿಯ ಮಂಥನವನ್ನೂ ದಾರ್ಶನಿಕ ವಿಚಾರಧಾರೆಗಳನ್ನೂ ನಾವು ಕಾಣಲಾರೆವಾದರೂ ಅರಬ್ಬರ ಸಾಮಾಜಿಕ, ನೈತಿಕ ಮತ್ತು ಬೌದ್ಧಿಕ ಜೀವನದ ಹಲವಾರು ಮುಖಗಳನ್ನು ಕಾಣಬಹುದಾಗಿದೆ. ಅನುಭವ ಜನ್ಯ ಸೂಕ್ತಿಗಳು ಅವರ ಚಿಂತನೆಗೆ ಒಂದು ಒಳ್ಳೆಯ ನಿದರ್ಶನ.

ಇಸ್ಲಾಂಪೂರ್ವದ ಅರಬ್ಬರ ಕಾವ್ಯವಸ್ತುವಿನಲ್ಲಿ ವೈವಿಧ್ಯವಿದೆ. ಆದರೂ ದೊರೆತಿರುವ ಸಾಹಿತ್ಯದಲ್ಲಿ ಸಾಧಾರಣ ಮತ್ತು ಜನಪ್ರಿಯ ವಸ್ತುನಿರೂಪಣೆಯನ್ನು ನೋಡಬಹುದು. ಫಖ್ರ್ (ತನ್ನ ಅಥವಾ ತನ್ನ ಕುಟುಂಬದ ಅಥವಾ ಬಣದ ಪ್ರಶಂಸೆ),

ಹಮಾಸ (ಶೌರ್ಯ ಹಾಗೂ ಕಷ್ಟಸಹಿಷ್ಣುತೆ), ಘಜಲ್ (ಹೆಣ್ಣಿನ ಪ್ರೇಮ), ಮಧ್ (ಹೊಗಳಿಕೆ), ರಿಥಾ (ಶೋಕಗೀತೆ), ಹಿಜಾ (ದೋಷಾರೋಪಣೆ ಅಥವಾ ವ್ಯಂಗ್ಯ) ಮತ್ತು ವಸ್ಫ್ (ವರ್ಣನೆ)—ಇವು ಕೆಲವು ವಸ್ತುವನ್ನಾಧರಿಸಿದ ಕೃತಿಭೇದಗಳು.

ಈ ಕಾಲದ ಕವಿಗಳ ಪೈಕಿ ಸುಮಾರು ೧೨೫ ಜನರ ಕಾವ್ಯದ ತುಣುಕುಗಳು ಇಂದು ಉಳಿದುಕೊಂಡಿದ್ದರೂ, ಇವರಲ್ಲಿ ಸುಮಾರು ಕಾಲುಭಾಗದಷ್ಟು ಜನ ಮಾತ್ರ ಖ್ಯಾತರು. ೧೦-೧೨ ಮಂದಿ ತುಂಬ ಹೆಸರಾದವರು. ಗಮನಾರ್ಹರಾದವರೆಂದರೆ ಮುಅಲ್ಲಾಕಾತ್‌ಗೆ ಸೇರಿದ ಕವಿಗಳು. ಇವರ ರಚನೆಗಳು ಅತ್ಯುತ್ಕೃಷ್ಟ ಮಟ್ಟದ್ದೆನಿಸಿದ್ದರಿಂದ ಅವನ್ನು ಚಿನ್ನದ ಅಕ್ಷರಗಳಲ್ಲಿ ಕೆತ್ತಿಸಿ, ಕಾಬಾದಲ್ಲಿ ತೂಗುಹಾಕಿತ್ತೆಂದು ಹೇಳಲಾಗಿದೆ. ಅದನ್ನು ಅಲ್-ಮುದಾಹಬಾತ್ ಎಂದಿದೆ. ಮುಅಲ್ಲಾಕಾತ್‌ಅನ್ನು ರಚಿಸಿರುವ ಏಳು ಜನ ವಿಖ್ಯಾತ ಕವಿಗಳೆಂದರೆ ಇಮ್ರುಅಲ್ ಖಯಿಸ್, ಜುಹೈರ್, ತರಾಫ, ಲಬೀದ್, ಅಂತಾರ, ಅಮ್ರ್‌ಬಿನ್ ಕುಲ್‌ತೂಮ್ ಮತ್ತು ಅಲ್-ಹಾರಿಫ್ ಬಿನ್ ಹಿಲ್ಲಿಜ ಎಂಬುವರು. ಇಬ್ನ್‌ಅಲ್ ಅನ್ಬಾರಿ (೯೩೯) ಮತ್ತು ಅಲ್-ಜೌಹಾನೀ (೧೦೯೩) ಮುಅಲ್ಲಾಕಾತ್‌ನ ಹೆಸರಾದ ಈಚಿನ ಟೀಕಾಕಾರರು. ಮುಅಲ್ಲಾಕಾತ್ ಕವಿಗಳಲ್ಲಿ ಯಾರು ಅತಿಶ್ರೇಷ್ಠರೆಂಬುದರ ಬಗ್ಗೆ ಭಿನ್ನಾಭಿಪ್ರಾಯಗಳಿದ್ದು ಇಮ್ರುಅಲ್ ಖಯಿಸ್ ಮೊದಲಿಗನೆಂಬುದು ಬಹುಜನಾಭಿಪ್ರಾಯವಾಗಿದೆ.

ಇಮ್ರುಅಲ್ ಖಯಿಸ್ (ಸು. ೫೪೦) ಹುಜ್ರ್‌ಬಿನ್ ಅಲ್ ಹಾರೀಫ್ ಎಂಬ ಅರಸುಮನೆತನದವನ ಮಗ. ಬಾಲಕ ಇಮ್ರುವಿಗೆ ಮೊದಲಿನಿಂದಲೂ ಸಾಹಸಕಾರ್ಯಗಳಲ್ಲಿ ಅಮಿತಾಸಕ್ತಿ. ಕವಿತೆಯಲ್ಲಿ ಅಭಿರುಚಿ. ರಾಜಮನೆತನದವರು ಕಾವ್ಯರಚನೆಯಲ್ಲಿ ಆಸಕ್ತರಾಗಿರುವುದು ಹೀನಾಯವೆಂದು ಪರಿಗಣಿಸುತ್ತಿದ್ದುದರಿಂದ ಇಮ್ರುವಿಗೆ ಕಾವ್ಯವನ್ನು ಕೈಬಿಡಬೇಕೆಂದು ಆಜ್ಞೆಮಾಡಲಾಯಿತು. ಇದು ಆತನ ಮನಸ್ಸಿಗೆ ಒಪ್ಪಲಿಲ್ಲ. ಅಲ್ಲದೆ ಫಾತಿಮಾ ಎಂಬ ಸಾಧಾರಣ ಯುವತಿಯೊಬ್ಬಳ ಒಡನಾಟದಲ್ಲಿದ್ದನೆಂಬ ಆರೋಪವೂ ಇದ್ದುದರಿಂದ ಅವನನ್ನು ಮನೆಯಿಂದ ಹೊರಗಟ್ಟಿದರು. ಆತನ ಗೈರುಹಾಜರಿಯಲ್ಲಿ ತಂದೆಯ ಕೊಲೆಯಾಗಿ ಅನೇಕ ವರ್ಷಗಳ ಪರ್ಯಂತ ಆತ ಅಸಾದ್ ಬಣದವರ ವಿರುದ್ಧ ಸೇಡುತೀರಿಸಿಕೊಳ್ಳುವುದರಲ್ಲೆ ಕಳೆಯಬೇಕಾಯಿತು. ಈತನ ಮುಅಲ್ಲಕಾತ್ ಅಲ್ಲದೆ ಇನ್ನೂ ಹಲವಾರು ಪದ್ಯರಚನೆಗಳು ದೊರಕಿದ್ದು, ಅವನ್ನು ಕೈರೊವಿನ ಹಸನ್ ಅಲ್ ಸಂದೂಬಿ ಎಂಬಾತ ಸಂಗ್ರಹಿಸಿದ್ದಾನೆ. ಆಶಾವಾದ ಹಾಗೂ ಸಾಹಸಜೀವನಕ್ಕಾಗಿ ಕಾತರ ಇಮ್ರುವಿನ ರಚನೆಯ ವೈಶಿಷ್ಟ್ಯಗಳು.

ಅಬೀದ್ ಬಿನ್ ಅಲ್ ಅಬ್ರಾಶ್ (ಸು. ೫೫೫) ಅಸಾದ್ ಬಣಕ್ಕೆ ಸೇರಿದವನಾಗಿದ್ದು, ಮುಅಲ್ಲಾಕಾತ್‌ನ ಎಲ್ಲ ಕವಿಗಳಿಗೂ ಸಮಕಾಲೀನನಾಗಿದ್ದನೆನ್ನಬಹುದು. ಕಾವ್ಯಕ್ಷೇತ್ರದಲ್ಲಿ ಈತ ಇಮ್ರುವಿಗೆ ಪ್ರತಿಸ್ಪರ್ಧಿ. ತರಾಫ (೫೬೪) ಈ ಗುಂಪಿನ ಕವಿಗಳಲ್ಲಿ ಕಿರಿಯ. ಈತನ ಮುಅಲ್ಲಕಾ ಅತ್ಯಂತ ಕಲಾತ್ಮಕ ಎಂಬ ಅಭಿಪ್ರಾಯವಿದೆ. ಅಮ್ರ್‌ಬಿನ್ ಕುಲ್‌ತೂಮ್ (೬೦೦) ಮೆಸಪೊಟೋಮಿಯದ ತಘ್‌ಲೀಬ್ ಬಣಕ್ಕೆ

ಸೇರಿದವನಾಗಿದ್ದ. ಈತನೂ ೧೫೦ ವರ್ಷಗಳ ಕಾಲ ಬದುಕಿದ್ದು, ಎಲ್ಲ ಮುಅಲ್ಲಕಾ ಕವಿಗಳಿಗೂ ಸಮಕಾಲೀನನಾಗಿದ್ದನೆಂದು ಹೇಳಲಾಗಿದೆ. ಈತನ ಸಹಸ್ರ ಪಂಕ್ತಿಯ ಮುಅಲ್ಲಕಾದಲ್ಲಿ ನಮಗೆ ದೊರೆತಿರುವುದು ಸು. ೧೦೦ ಸಾಲುಗಳಷ್ಟು. ಅಲ್ ನಾಬಿಘ (೬೦೪) ಅತ್ಯಂತ ಶ್ರೀಮಂತ ಪ್ರತಿಷ್ಠಿತ ಕವಿ. ಆತನ ರಚನೆಯಲ್ಲಿ ಶ್ರೀಮಂತ ಕುಲಗಳಿಗೆ ಸಂಬಂಧಿಸಿದ ವರ್ಣನೆಗಳೇ ಹೆಚ್ಚು. ಜುಹೈರ್ (೬೦೭) ಇಮ್ರು ಮತ್ತು ಅಲ್‌ನಾಬಿಘರಷ್ಟೇ ಹೆಸರುವಾಸಿಯಾದವನು. ಅಂತಾರ (೫೨೫-೬೧೫) ಎಂಬ ಮುಅಲ್ಲಕಾ ಕವಿಗೆ ತನ್ನ ತಂದೆಯಿಂದ ಮೊದಲು ಮನ್ನಣೆ ದೊರೆಯದಿದ್ದರೂ, ಅನಂತರ ಆತ ಖ್ಯಾತನಾದ. ಅಲ್-ಅಷಾದ (೬೨೯) ಎಂಬಾತನ ಮುಅಲ್ಲಕಾದಲ್ಲಿ ೭೫ ಸಾಲುಗಳ ಉದ್ದದ ಪದ್ಯವೊಂದಿದೆ. ಆತನ ಘಜಲ್ ಆಕರ್ಷಕವಾದದ್ದು. ವಿಡಂಬನೆಯಲ್ಲಿ ಕೂಡ ಈತನದು ಎತ್ತಿದಕೈ. ಲಬೀದನ (೬೬೧) ರಚನೆಯಲ್ಲಿ ನಸೀಬ್ ವರ್ಣನೆ ಚೆನ್ನಾಗಿದೆ. ಈತನ ರಚನಾವಿಧಾನ ಕ್ರಮಬದ್ಧವಾದ್ದು, ಸಂಗೀತಮಯವಾದ್ದು. ಹಾತೀಮ್ ಅಲ್ ತಾಯಿ (೬೦೫) ಅರಬ್ಬಿ ಸಾಹಿತ್ಯದಲ್ಲೆಲ್ಲ ಹೆಸರಾದ ವ್ಯಕ್ತಿ. ಆತನ ವೈಯಕ್ತಿಕ ಸದ್ಗುಣಗಳೆಲ್ಲ ಕಾವ್ಯದಲ್ಲಿಯೂ ಪ್ರತಿಫಲಿಸಿವೆ. ಕಾವ್ಯದ ಉದ್ದಕ್ಕೂ ಉತ್ಸಾಹ ಶ್ರದ್ಧೆಗಳು ತುಂಬಿವೆ. ಉಮೈಯನ (೬೨೪) ರಚನೆಯಲ್ಲಿ ಉತ್ತಮ ಅಭಿವ್ಯಕ್ತಿಯ ಸಾಮರ್ಥ್ಯವನ್ನು ಕಾಣಬಹುದು. ಆಧ್ಯಾತ್ಮಿಕ ಭಾವನೆ, ನೈತಿಕಶ್ರದ್ಧೆ ಹಾಗೂ ಒಳ್ಳೆಯ ಭಾಷೆ ಶೈಲಿಗಳು ಇವನ ಕಾವ್ಯದ ವೈಶಿಷ್ಟ್ಯ.

ಇಸ್ಲಾಂನ ಉದಯ ಮತ್ತು ಪ್ರಸಾರದೊಡನೆ ಅರಬ್ಬಿ ಸಾಹಿತ್ಯದ ಸುವರ್ಣಯುಗ ಮೊದಲಾಯಿತೆನ್ನಬಹುದು. ಉಮಯ್ಯಾದ್ ಕಲೀಫರು ೬೬೧-೭೫೦ರವರೆಗೆ ಅರೇಬಿಯದಲ್ಲಿ ರಾಜ್ಯವಾಳಿದರು. ೭೫೬ರಿಂದ ೧೦೩೧ರವರೆಗೆ ಸ್ಪೇನಿನಲ್ಲೂ ಇವರ ರಾಜ್ಯಭಾರವಿತ್ತು. ಅನಂತರ ಆಡಳಿತ ಸೂತ್ರವನ್ನು ವಹಿಸಿದ ಅಬ್ಬಾಸಿಡ್ ಕಲೀಫರ (೭೫೦-೧೨೫೮) ಕಾಲವಂತೂ ಸಾಹಿತ್ಯದ ಪರಮೋನ್ನತಿಯ ಕಾಲವಾಗಿತ್ತು.

೭ನೆಯ ಶತಮಾನದ ಆರಂಭಕಾಲದಲ್ಲಿ ಅರೇಬಿಯದಲ್ಲಿ ಇಸ್ಲಾಂಧರ್ಮದ ಉದಯವಾಯಿತು. ಇದರಿಂದಾಗಿ ಅರಬ್ಬರ ಸಾಮಾಜಿಕ, ರಾಜಕೀಯ, ಬೌದ್ಧಿಕ ಮತ್ತು ಆರ್ಥಿಕ ಜನಜೀವನದಲ್ಲಿ ಒಂದು ವಿಧದ ವಿಚಾರಕ್ರಾಂತಿಯುಂಟಾಯಿತು. ಪವಿತ್ರ ಕುರಾನ್ ಹುಟ್ಟಿ ಅರಬ್ಬರ ಮೂಢನಂಬಿಕೆಗಳು, ಅನಕ್ಷರತೆ, ದುರ್ಗುಣಗಳು ತೊಲಗಿದುವು. ಸಾಹಿತ್ಯದ ದೃಷ್ಟಿಯಿಂದಲೂ ಕುರಾನ್ ಗಮನಾರ್ಹವಾದ್ದು. ಇದು ಇಸ್ಲಾಂ ಧರ್ಮದ ಆಧಾರಗ್ರಂಥ. ಕುರ್ ಆನ್ ಎಂಬ ಎರಡು ಪದಗಳಿಂದ ಈ ಶಬ್ದ ನಿಷ್ಪನ್ನವಾಗಿದೆ. ಅರಬ್ಬಿ ಭಾಷೆಯಲ್ಲಿ ಇದನ್ನು ಅಲ್-ಫರ್ಖ್ಯಾನ್ (ಖ್ಯಾತಗ್ರಂಥ), ಕಲಮುಲ್ಲಾ (ಭಗವಂತನ ನುಡಿ), ಕಿತಾಬ್ (ಪವಿತ್ರಗ್ರಂಥ), ನೂರ್ (ದಿವ್ಯಪ್ರಕಾಶ), ಅಲ್‌ಹುದಾ (ಮಾರ್ಗದರ್ಶಿ) ಮುಂತಾದ ಹೆಸರುಗಳಿಂದಲೂ ಕರೆಯುತ್ತಾರೆ. ಇದು ಇಸ್ಲಾಂಧರ್ಮದ ನಿತ್ಯ ಪವಾಡ ಗ್ರಂಥವೆಂದೂ ಉದಾತ್ತ ಸತ್ಯವನ್ನು ವ್ಯಾಖ್ಯಾನಿಸುವ ಭಂಡಾರವೆಂದೂ ಮುಸ್ಲಿಮರ ಭಾವನೆ. ಮೊದಲಿಗೆ ಇದನ್ನು ಸ್ವರ್ಗದಲ್ಲಿ ಕಾಪಾಡಿ

ಇಡಲಾಗಿದ್ದು, ಅಗತ್ಯಬಿದ್ದಾಗಲೆಲ್ಲ ೨೨ ವರ್ಷಗಳ ಅವಧಿಯಲ್ಲಿ (೬೧೦-೬೩೨) ಗೇಬ್ರಿಯಲ್ ಎಂಬ ದೇವದೂತನ ಮೂಲಕ ಪರಮಾತ್ಮನು ದಯಪಾಲಿಸಿದನೆಂದು ಅವರ ನಂಬಿಕೆ.

ಕುರಾನಿನಲ್ಲಿ ೩೦ ಭಾಗಗಳೂ ದೊಡ್ಡವೂ ಚಿಕ್ಕವೂ ಆದ ೧೧೪ ಸುರಾ ಇಲ್ಲವೆ ಅಧ್ಯಾಯಗಳೂ ಇವೆ. ಪ್ರತಿಯೊಂದು ಭಾಗವನ್ನೂ ಪುನಃ ನಾಲ್ಕು ಉಪಭಾಗಗಳನ್ನಾಗಿ ಮಾಡಿದೆ. ಪೈಗಂಬರ್ ತನಗೆ ಸಾಕ್ಷಾತ್ಕಾರವಾದ ವಚನಗಳನ್ನು ಇಂಥದೇ ಅಧ್ಯಾಯದಲ್ಲಿ ಸೇರಿಸಬೇಕೆಂದು ಲಿಪಿಕಾರರಿಗೆ ಸೂಚನೆಗಳನ್ನು ಕೊಡುತ್ತಿದ್ದುದರಿಂದ ಕುರಾನಿನ ವಿಷಯಗಳ ಜೋಡಣೆ ಕಾಲಾನುಕ್ರಮದಿಂದಾಗಿರದೆ ಪೈಗಂಬರನ ಅಂತರ್ವಾಣಿಯ ಆದೇಶದಿಂದಾಗಿವೆ. ಮೂರನೆಯ ಕಲೀಫನಾಗಿದ್ದ ಉಸ್ಮಾನನ ಆಜ್ಞೆಯ ಮೇರೆಗೆ ಮೊದಲ ಸಂಗ್ರಹಕಾರ ಸಾಬಿತ್‌ನ ಮಗ ಜೈಯದ್, ಜಿಬೇರನ ಮಗ ಅಬ್ದುಲ್ಲಾ, ಅಸ್ ಎಂಬಾತನ ಮಗ ಸೈಯದ್ ಹಾಗೂ ಹ್ಯಾರಿಸ್‌ನ ಮಗ ಅಬ್ದುಲ್ ರಹಮಾನ್ ಈ ನಾಲ್ವರೂ ಕುರಾನನ್ನು ಪರಿಷ್ಕರಿಸಿ ಕಲೀಫನ ನೇತೃತ್ವದಲ್ಲಿ ಪ್ರಚುರಪಡಿಸಿದರು. ಕಳೆದ ೧೪೦೦ ವರ್ಷಗಳಿಂದಲೂ ಈ ಗ್ರಂಥ ಯಾವ ಬದಲಾವಣೆಯೂ ಇಲ್ಲದೆ ತನ್ನ ಪಾವಿತ್ರ್ಯವನ್ನು ಉಳಿಸಿಕೊಂಡು ಬಂದಿದೆ. ಮಕ್ಕಾಭಾಷೆಯಾದ ಖುರೈಷ್ ಉಪಭಾಷೆಯನ್ನೇ ಕುರಾನಿನಲ್ಲಿ ಬಳಸಲಾಗಿದೆ. ಮುಸ್ಲಿಮರೇ ಅಲ್ಲದೆ ಮುಸ್ಲಿಮೇತರರೂ ಐರೋಪ್ಯರೂ ಇದರ ಸಾಹಿತ್ಯಗುಣವನ್ನು ಕೊಂಡಾಡಿದ್ದಾರೆ.

ಕುರಾನಿನ ಅಧ್ಯಾಯಗಳನ್ನು ಮಕ್ಕಾ ಅಧ್ಯಾಯಗಳು ಮತ್ತು ಮದೀನಾ ಅಧ್ಯಾಯಗಳು ಎಂಬುದಾಗಿ ವಿಂಗಡಿಸಿದ್ದಾರೆ. ಮಕ್ಕಾ ಅಧ್ಯಾಯಗಳ ಕಾವ್ಯಶೈಲಿ ಉತ್ತಮವಾದುದು, ವಾಗ್ವೈಖರಿ ಶ್ರೀಮಂತವಾದುದು. ಇಲ್ಲಿ ವಿಗ್ರಹಾರಾಧನೆಯ ಖಂಡನೆ, ಸ್ವರ್ಗ ನರಕಗಳ ಕಲ್ಪನೆ, ಪರಮಾತ್ಮನ ಏಕಸ್ವರೂಪತೆ ಮತ್ತು ಪವಿತ್ರಗುಣಗಳ ವರ್ಣನೆ, ಪ್ರವಾದಿಗಳ ಬಗ್ಗೆ ಉಲ್ಲೇಖ, ಕಡೆಯ ವಿಚಾರಣೆಯ ದಿನ ಮುಂತಾದುವುಗಳ ಬಣ್ಣನೆಯಿದೆ. ಮದೀನಾ ಅಧ್ಯಾಯಗಳು ದೀರ್ಘವಾಗಿದ್ದು ಗದ್ಯರೂಪದಲ್ಲಿವೆ. ಇಲ್ಲಿ ವ್ಯಾವಹಾರಿಕ ಹಾಗೂ ಅಪರಾಧ ಸಂಬಂಧವಾದ ನೀತಿನಿಯಮಗಳು, ಪ್ರಾರ್ಥನೆ ಉಪವಾಸ ದಾನ ಯಾತ್ರೆ ಮೊದಲಾದ ಸಂಸ್ಕಾರಗಳು, ಸಮಾಜ ಸುಧಾರಣೆ, ನೈತಿಕ ವಿಚಾರ, ಖುರೈಷ್ ಮತ್ತು ಯಹೂದ್ಯರ ನಡುವಣ ಯುದ್ಧಗಳ ಸಂಕ್ಷಿಪ್ತ ವರ್ಣನೆ, ಇಸ್ಲಾಂ ವಿರೋಧಿಗಳ ಬಗ್ಗೆ ಖಂಡನೆ, ಮತಸಂರಕ್ಷಣೆ ಮುಂತಾದ ವಿವರಗಳಿವೆ.

ಕುರಾನ್‌ಗೆ ಪೂರಕವಾಗಿ ಹಾದಿತ್ ಎಂಬ ಗ್ರಂಥವೊಂದುಂಟು. ಪ್ರವಾದಿ ಮಹಮ್ಮದ್ ಹೇಳಿದ, ಮಾಡಿದ ಅಥವಾ ಒಪ್ಪಿದ ಎಲ್ಲ ವಿಚಾರಗಳ ಸಂಗ್ರಹ ಹಾದಿತ್. ಪೈಗಂಬರನ ವೈಯಕ್ತಿಕ ಹಾಗೂ ಸಾರ್ವಜನಿಕ ಜೀವನದಲ್ಲಿನ ಅನೇಕ ವಿಚಾರಗಳನ್ನು ಹಾದಿತ್‌ನಲ್ಲಿ ಕಾಣಬಹುದು. ಕುರಾನಿನ ಕಷ್ಟಕರ ಉಕ್ತಿಗಳಿಗೆ ವ್ಯಾಖ್ಯಾನವನ್ನೂ ಇಲ್ಲಿ ಕೊಡಲಾಗಿದೆ. ಅಬೂ ಬಕರ್ (೬೩೨-೩೪) ಉಮರ್ (೬೩೨-೪೩) ಮೊದಲಾದ ಕಲೀಫರು ಹಾದಿತ್ತಿನ ಪ್ರಚಾರದಲ್ಲಿ ಆಸಕ್ತಿವಹಿಸಿದರು.

ಇಸ್ಲಾಂ ಉದಯವಾಗುವುದಕ್ಕೆ ಸ್ವಲ್ಪ ಮೊದಲು ಸಾಹಿತ್ಯದ ಬೆಳೆವಣಿಗೆಗೆ ಬಹಳ ಪ್ರೋತ್ಸಾಹ ದೊರೆಯಿತು. ಸ್ವತಃ ಕಲೀಫರಲ್ಲಿ ಅನೇಕರು ಒಳ್ಳೆಯ ಕವಿಗಳಾಗಿದ್ದರೆಂಬ ಊಹೆಯಿದೆ. ಈ ಕಾಲದಲ್ಲಿ ಕಂಡುಬರುವ ಬಹಳ ಖ್ಯಾತರಾದ ಸಾಹಿತಿಗಳೆಂದರೆ ಹಸನ್‌ಬಿನ್ ಥಾಬಿತ್, ಅಲ್ ಹುತೈಯ ಹಾಗೂ ಕವಯಿತ್ರಿ ಅಲ್-ಖಾನ್ಸಾ ಎಂಬವರು. ಮುಖಾದ್ರಿಮ್ ಕವಿಗಳ ಪೈಕಿ ಇವರು ಬಹಳ ಹೆಸರುವಾಸಿಯಾದವರು. ಹಸನ್‌ನ (೬೭೩) ಸುಮಾರು ೨೫೦೦ ಪದ್ಯಗಳನ್ನು ದೀವಾನ್ ಒಂದರಲ್ಲಿ ಸಂಗ್ರಹಿಸಿದೆ. ವ್ಯಂಗ್ಯ, ಶೋಕ, ಪ್ರಶಂಸೆ, ಪ್ರೇಮ ಈ ಎಲ್ಲ ಭಾವನೆಗಳೂ ಆತನ ಕಾವ್ಯದಲ್ಲಿ ಮೂಡಿಬಂದಿವೆ. ಆತನಲ್ಲಿ ಪರಂಪರಾಗತವಾದ ಭಾವನೆಗಳಿದ್ದರೂ ನಿರೂಪಣೆಯಲ್ಲಿ ಹೊಸತನವಿದೆ. ಅಲ್ ಹುತೈಯನ ರಚನೆಗಳಲ್ಲಿ ಪ್ರಶಂಸೆ ಮತ್ತು ವ್ಯಂಗ್ಯ ಪ್ರಧಾನವಾಗಿವೆ. ಸುಮಾರು ೯೦೦ ಪದ್ಯಗಳುಳ್ಳ ಒಂದು ದಿವಾನ್ ಈತನ ಹೆಸರಿನಲ್ಲಿದೆ. ಈತನ ಶೈಲಿ ನಿರಾಡಂಬರವಾಗಿದ್ದು ಚುರುಕಾಗಿ ಓಡುತ್ತದೆ. ಅಲ್ ಖಾನ್ಸಾಳ (೬೪೪) ನಿಜವಾದ ಹೆಸರು ತುಮಾದಿರ್. ಈಕೆಯ ಕಾವ್ಯದ ನಾಯಕ ಸಖ್ರ್. ಕವಯತ್ರಿ ಆತನನ್ನು ಹೊಗಳುವಳು, ಆತನ ಅಳಿವಿಗಾಗಿ ಕಣ್ಣೀರು ಸುರಿಸುವಳು. ಆಕೆಯ ದೀವಾನ್‌ನಲ್ಲಿರುವ ಸುಮಾರು ೧೦೦೦ ಪದ್ಯಗಳಲ್ಲಿ ಸುಮಾರು ೯೦೦ಕ್ಕೂ ಹೆಚ್ಚು ನಾಯಕನ ಸಾಹಸಕಾರ್ಯಗಳು, ಗುಣಗಳು ಹಾಗೂ ಕವಯಿತ್ರಿಯ ಸಂತಾಪಕ್ಕೆ ಸಂಬಂಧಪಟ್ಟಿವೆ.

ಪ್ರಾರಂಭದ ಅರಬ್ಬಿ ಸಾಹಿತ್ಯದಲ್ಲಿ ಸಾಹಿತ್ಯಿಕ ಬೆಳೆವಣಿಗೆಯನ್ನೇ ಅಲ್ಲದೆ ಹಲವು ಶಾಸ್ತ್ರಗಳ ಬೆಳೆವಣಿಗೆಯನ್ನೂ ಗಮನಿಸಬಹುದು. ಪರ್ಷಿಯನ್, ಗ್ರೀಕ್ ಮತ್ತು ಸಿರಿಯನ್ ಭಾಷೆಗಳಿಂದ ಸಾಕಷ್ಟು ಪ್ರಮಾಣದಲ್ಲಿ ಭಾಷಾಂತರಗೊಂಡ ಶಾಸ್ತ್ರ ಸಾಹಿತ್ಯ ಅರಬ್ಬಿಯಲ್ಲಿ ದೊರೆಯುತ್ತದೆ. ಈ ದಿಶೆಯಲ್ಲಿ ಅಬ್ಬಾಸಿದ್ ಕಲೀಫರಿಂದ ದೊರೆತ ಪ್ರೋತ್ಸಾಹ ಅರಬ್ಬಿ ಗದ್ಯಸಾಹಿತ್ಯದ ಮಾರ್ಗದಲ್ಲಿ ಒಂದು ಮೈಲಿಗಲಾಯಿತು. ಪಾರಸಿ ದಾರ್ಶನಿಕ ಸಾಹಿತ್ಯದ ಜನಪ್ರಿಯ ಭಾಗಗಳನ್ನು ಅರಬ್ಬರು ಭಾಷಾಂತರಿಸಿಕೊಂಡರು.[೨೪] ಗ್ರೀಕ್ ಸಾಹಿತ್ಯದಿಂದ ಪ್ರಕೃತಿ ವಿಜ್ಞಾನಗಳೂ ಭಾರತದಿಂದ ಗಣಿತ ಶಾಸ್ತ್ರವೂ ಅರಬ್ಬಿಗೆ ಬಂದವು. ಇಬ್ನ್ ಅಲ್ ಮುಕಫಾ (೭೫೭) ಎಂಬಾತ ಭಾರತೀಯ ಸಾಹಿತ್ಯದ 'ಪಂಚತಂತ್ರ'ವನ್ನು 'ಕಲೀಲವಾದಿಮ್ನ' ಎಂಬ ಹೆಸರಿನಲ್ಲಿ ಭಾಷಾಂತರಿಸಿದ. ಪಾರಸಿಯ 'ಖುದೈನಾಮ' ಎಂಬ ಹೆಸರಿನ ಇತಿಹಾಸ ಗ್ರಂಥವನ್ನು ಈತನೇ ಅರಬ್ಬಿಗೆ ಅನುವಾದಿಸಿದ್ದಾನೆ. ಇಸ್ಲಾಂಧರ್ಮದ ಪ್ರಚಾರ ಹೊರದೇಶಗಳಲ್ಲಿ ನಡೆದಾಗ ಅರಬ್ಬರಲ್ಲದ ಮುಸ್ಲಿಮರು ಕುರಾನನ್ನು ತಪ್ಪಿಲ್ಲದಂತೆ ಪಠಿಸಲು ಅವರಿಗೆ ಸೂಕ್ತ ಮಾರ್ಗದರ್ಶನವನ್ನು ನೀಡಬೇಕಾಗಿದ್ದು, ಸ್ಪೇನಿನಂಥ ದೂರ ಪ್ರದೇಶದಲ್ಲೂ ಅಲ್‌ದಾನಿ ಅಲ್‌ಷಾತಿಬಿ ಎಂಬುವರು ಕುರಾನ್ ಪಠನ ವಿಧಾನ ಮುಂತಾದವುಗಳ ಮೇಲೆ ಅಧ್ಯಯನ ನಡಸಿ ಗ್ರಂಥಗಳನ್ನು ರಚಿಸಿದರು. ವ್ಯಾಕರಣದ ಮೂಲತತ್ತ್ವಗಳನ್ನು ಮೊದಲಿಗೆ ಅಭ್ಯಸಿಸಿದವರ ಪೈಕಿ ಅಬುಲ್ ಅಸ್ವಾದ್ ಅದ್‌ದು ಅಲಿ (೬೮೮)

ಎಂಬುವನ ಹೆಸರು ಗಮನಾರ್ಹ. ಕಲೀಫ ಅಲಿಯ ನಿರ್ದೇಶನದಂತೆ ಆತ ಈ ಅಧ್ಯಯನ ನಡೆಸಿದ. ಅರಬ್ಬಿ ವೈಯಾಕರಣರಲ್ಲಿ ಖ್ಯಾತರಾದವರೆಂದರೆ ಖಲೀಲ್ ಅಲ್ ಅಹ ಮದ್ (೭೮೬) ಹಾಗೂ 'ಅಲ್-ಕಿತಾಬ್' ಗ್ರಂಥದ ಲೇಖಕ ಅಬು ಬಿಷ್ರ್ ಅಮ್ರ್ ಉಸ್ಮಾನ್ ಸಿಬ್ವೈಯ (೭೯೬). ಬಸ್ರ ಪಟ್ಟಣದ ನಿವಾಸಿ ಅಬುಬಕರ್ ಇಬ್ನ ದುರೈದ ಎಂಬಾತ 'ಜಂಹರ' ಎಂಬ ಬೃಹತ್ ಪ್ರಮಾಣದ ಶಬ್ದಕೋಶವೊಂದನ್ನೂ ಶಬ್ದಗಳ ರೂಪ ವ್ಯುತ್ಪತ್ತಿಗಳನ್ನು ಒಳಗೊಂಡಿರುವ 'ಕಿತಾಬ್ ಅಲ್ ಇಷ್ತಿಕಾಕ್' ಎಂಬ ಗ್ರಂಥವನ್ನೂ ರಚಿಸಿದನು.

ಕಲೀಫ ಹಾರೂನ್ ಅಲ್ ರಷೀದ್ 'ಬೈತ್ ಅಲ್ ಹಿಕ್ಮಹ್' ಎಂಬ ಭಾಷಾಂತರ ಸಂಘವನ್ನು ಸ್ಥಾಪಿಸಿ ಗ್ರೀಕ್ ವೈಜ್ಞಾನಿಕ ಸಾಹಿತ್ಯವನ್ನು ಅರಬ್ಬಿಗೆ ಭಾಷಾಂತರಿಸಲು ಪ್ರೋತ್ಸಾಹಕೊಟ್ಟನು. ಆತನ ಮಗ ಅಲ್-ಮಾಮುನ್ ಈ ಕೆಲಸವನ್ನು ಮುಂದು ವರಿಸಿದನು. ಅರಿಸ್ಟಾಟಲನ ಕೃತಿಗಳನ್ನೂ ಗಣಿತ ಹಾಗೂ ಖಗೋಳವಿಜ್ಞಾನಕ್ಕೆ ಸಂಬಂಧಪಟ್ಟ ಕೆಲವು ಕೃತಿಗಳನ್ನೂ ಭಾಷಾಂತರಿಸಿದ ಶ್ರೇಯಸ್ಸು ಖುಸ್ತ್-ಬ್-ಲೂಕ (೮೩೫) ಎಂಬಾತನಿಗೆ ಸಲ್ಲುತ್ತದೆ. ಈ ಕಾಲದಲ್ಲಿ ಹೊರಬಂದ ಶಾಸ್ತ್ರಗಂಥಗಳ ಪಟ್ಟಿ ಯೊಂದನ್ನು ಇಬ್ನ್ ನಾದಿಮ್ ತಯಾರಿಸಿದ್ದಾನೆ. ಪ್ಲೇಟೋವಿನ ಕೃತಿಗಳೂ ಭಾಷಾಂತರ ಗೊಂಡು ಇಸ್ಲಾಮಿಗಳ ಮೇಲೆ ಪ್ರಭಾವಬೀರಿದವು. ಇಸ್ಲಾಂಧರ್ಮದ ತತ್ವಗಳನ್ನು ಪ್ಲೇಟೋವಿನ ಸಿದ್ಧಾಂತದ ಮೇಲೆ ನಿಲ್ಲಿಸುವ ಪ್ರಯತ್ನಗಳೂ ಇದರ ಫಲವಾಗಿ ನಡೆದವು.

ಮುಹಮ್ಮದ್ ಇಬ್ನ್ ಇಷಾಕ್ ಇಸ್ಲಾಂಧರ್ಮದ ಪ್ರವಾದಿಗಳ ಜೀವನ ಸಂಗತಿ ಗಳನ್ನು ಮೊದಲಿಗೆ ಬರೆದನು. ಇಬ್ನ್ ಹಿಷಾಂ ಪರಿಷ್ಕರಿಸಿ ಹೊರತಂದ ಪಾಠದಲ್ಲಿ ಇಷಾಕನ ಗ್ರಂಥಸಾರ ದೊರೆಯುತ್ತದೆ. ಈತನೇ ಅಲ್ಲದೆ ಇಬ್ನ್ಸಾದ್ (೮೪೪) ತನ್ನ ಗುರು ಅಲ್ ವಕೀದಿ (೮೨೨) ರಚಿಸಿದ ಪ್ರವಾದಿಗಳಿಗೆ ಸಂಬಂಧಿಸಿದ ಸಾಹಿತ್ಯವನ್ನು ಸಂಗ್ರಹರೂಪದಲ್ಲಿ 'ತಬಿಕತ್-ಇಬ್ನ್-ಸಾದ್' ಎಂಬ ಹೆಸರಿನಲ್ಲಿ ಹೊರತಂದಿದ್ದಾನೆ. ಇದರಿಂದ ಅರಬ್ಬರ ಐತಿಹಾಸಿಕ ಪ್ರಜ್ಞೆ ಅಸಾಧಾರಣವಾಗಿತ್ತೆಂದು ಹೇಳಲಡ್ಡಿಯಿಲ್ಲ.

ಒಟ್ಟಿನಲ್ಲಿ ಅರಬ್ಬಿಸಾಹಿತ್ಯದ ಮೊದಲ ಶತಮಾನಗಳನ್ನು ಪರಿಗಣಿಸಿದರೆ, ಇಸ್ಲಾಂ ಪೂರ್ವದ ಸಾಹಿತ್ಯದ ರಚನೆಗೂ ಇಸ್ಲಾಂನ ಉದಯದ ಅನಂತರದ ಸಾಹಿತ್ಯರಚನೆಗೂ ಅನೇಕ ದೃಷ್ಟಿಗಳಲ್ಲಿ ವ್ಯತ್ಯಾಸವನ್ನು ಕಾಣಬಹುದಾಗಿದೆ. ಇಸ್ಲಾಂನ ಪ್ರಚಾರದಿಂದಾಗಿ ಅರಬ್ ಜನಜೀವನದಲ್ಲಿಯೇ ಮಹತ್ತರ ಬದಲಾವಣೆಗಳುಂಟಾಗಿ, ಅವುಗಳ ಪ್ರತಿ ಫಲನ ಸಾಹಿತ್ಯ ಸಂಸ್ಕೃತಿಗಳಲ್ಲಿಯೂ ಆಯಿತು. ಅರಬ್ಬರ ಸರ್ವತೋಮುಖ ಏಳಿಗೆಗೆ ಇಸ್ಲಾಂ ಒಂದು ರೀತಿಯ ವರಪ್ರಧಾನವೇ ಆಯಿತೆನ್ನಬಹುದು. ಪ್ರಪಂಚದ ಅನೇಕ ಸಾಹಿತ್ಯಗಳಿಗೆ ಹೋಲಿಸಿದರೆ ಈ ಮುಂಚಿನ ಶತಮಾನಗಳಲ್ಲಿ ಹೊರಬಂದ ಸಾಹಿತ್ಯದ ಗುಣ, ಪ್ರಮಾಣ ಮತ್ತು ಪ್ರೌಢಿಮೆಗಳು ಉತ್ತಮ ಮಟ್ಟದವಾಗಿವೆ. ಅರಬ್ಬರು ಪಾಶ್ಚಾತ್ಯ ಸಾಹಿತ್ಯ, ರಾಜನೀತಿ, ವಿಜ್ಞಾನ, ಕಲೆ ಮುಂತಾದುವುಗಳೆಲ್ಲದರ ಸೊಬಗನ್ನೂ ಕಾಣುವ, ತಮ್ಮದಾಗಿಸಿಕೊಳ್ಳುವ ಪ್ರವೃತ್ತಿಯನ್ನು ಬೆಳಸಿಕೊಳ್ಳಲಾರಂಭಿಸಿದುದು ಈ

ಕಾಲದಲ್ಲಿಯೇ. ಸಾಹಿತ್ಯದ ಪ್ರಕಾರಗಳನ್ನು ಗಮನಿಸಿದರೆ ವಸ್ತುಪ್ರಕಾರವನ್ನಾಧರಿಸಿದ ಕೃತಿಭೇದಗಳು ದೊರೆಯುವುವು. ಅರೇಬಿಯಾ ದೇಶದ ಕಲೀಫರು ಸಾಹಿತ್ಯದ ಬೆಳವಣಿಗೆಯಲ್ಲಿ ವಹಿಸಿದ ಆಸಕ್ತಿ ಆಸ್ಥೆಗಳೂ ಗಮನಾರ್ಹವಾದುವು. ಅರಬ್ಬಿ ಸಾಹಿತ್ಯದ ಸ್ವರ್ಣಯುಗವೂ ಇದೇ ಅವಧಿಯಲ್ಲಿ ಬಂದಿತೆಂಬುದನ್ನೂ ಮರೆಯುವಂತಿಲ್ಲ.

## ಪಾರಸಿ ಸಾಹಿತ್ಯ

ಭಾಷಾಶಾಸ್ತ್ರದ ದೃಷ್ಟಿಯಿಂದ ಪಾರಸಿ ಸಹ ಇಂಡೊ-ಯೂರೋಪಿಯನ್ ವರ್ಗಕ್ಕೆ ಸೇರಿದ ಭಾಷೆ. ಇಂಡೊ ಯುರೋಪಿಯನ್ ಭಾಷಾವರ್ಗದ ಉಪವರ್ಗವಾದ ಆರ್ಯನ್ ಅಥವಾ ಇಂಡೊ-ಇರಾನಿಯನ್ ಉಪವರ್ಗದಲ್ಲಿ ಇಂಡಿಕ್ ಮತ್ತು ಇರಾನಿಯನ್ ಎಂಬ ವಿಭಜನೆಗಳಿದ್ದು, ಇರಾನಿಯನ್ ವಿಭಾಗದಲ್ಲಿ ಅವೆಸ್ತಾ ಮತ್ತು ಸ್ಕಿಥಿಯನ್ ಎಂದು ಎರಡು ಭೇದಗಳಿವೆ. ಅವೆಸ್ತಾದಿಂದ ಪಶ್ತೊ ಎಂಬ ಭಾಷೆಯು ಬೆಳೆವಣಿಗೆ ಉಂಟಾಯಿತು. ಪ್ರಾಚೀನ ಪರ್ಷಿಯನ್‌ನಿಂದ ಪಾರಸಿ, ಕುರ್ಲಿಶ್, ಓಸ್ಸೆಟಿನ್, ಬಲೂಚಿ ಮುಂತಾದ ಭಾಷೆಗಳ ಉಗಮವಾಗಿದೆ. ಪದಕೋಶದ ದೃಷ್ಟಿಯಿಂದ ಸಂಸ್ಕೃತಕ್ಕೂ ಪಾರಸಿಗೂ ಸಾಕಷ್ಟು ಸಂಬಂಧವಿದೆ. ಬೆಳೆವಣಿಗೆಯ ದೃಷ್ಟಿಯಿಂದ ಸು. ಎರಡೂವರೆ ಸಾವಿರ ವರ್ಷಗಳಷ್ಟು ಹಳೆಯದೆನಿಸಿರುವ ಈ ಭಾಷೆ ವಿಶ್ವದ ಮುಖ್ಯ ಭಾಷೆಗಳಲ್ಲಿ ಒಂದು. ಪಾರಸಿ ಸಾಹಿತ್ಯದ ಇತಿಹಾಸವನ್ನು ಗಮನಿಸಿದರೆ ಪರ್ಷಿಯನ್ನರಲ್ಲದವರೂ ಆ ಸಾಹಿತ್ಯದ ಕೃಷಿಯಲ್ಲಿ ಬಹಳ ಶ್ರಮಿಸಿದ್ದಾರೆಂದು ತಿಳಿದುಬರುತ್ತದೆ. ಉದಾಹರಣೆಗೆ, ಭಾರತ ಮತ್ತು ತುರ್ಕಿಸ್ಥಾನಗಳಲ್ಲಿ ಬೆಳೆದುಬಂದ ಪಾರಸಿ ಸಾಹಿತ್ಯದ ಗುಣ ಮತ್ತು ಪ್ರಮಾಣಗಳನ್ನು ನೋಡಬಹುದು. ಹೀಗೆಯೇ ಪಾರಸಿ ಸಂಜಾತರಲ್ಲಿ ಅನೇಕರು ತಮ್ಮ ಮಾತೃಭಾಷೆಯಲ್ಲದ ಬೇರೆ ಭಾಷೆಗಳಲ್ಲಿ ಕೂಡ ಸಾಹಿತ್ಯವನ್ನು ರಚಿಸಿದ್ದಾರೆಂಬುದು ನೆನೆಯತಕ್ಕದ್ದಾಗಿದೆ.

ಪಾರಸಿಯ ಮೇಲೆ ವಿಶೇಷ ಪ್ರಭಾವ ಬೀರಿದ ಒಂದು ಭಾಷೆಯೆಂದರೆ ಅರಬ್ಬಿ ಭಾಷೆ. ಮಹಮ್ಮದೀಯರ ದಾಳಿಯ ಅನಂತರ, ಎಂದರೆ ಸು. ೧೨೦೦ ವರ್ಷಗಳಿಗೂ ಹೆಚ್ಚು ಕಾಲ ಪಾರಸಿಕರು ದರ್ಶನ ಮುಂತಾದವುಗಳ ಬಗ್ಗೆ ಅರಬ್ಬಿಯಲ್ಲೇ ಬರೆಯುತ್ತಿದ್ದರೆಂದ ಮೇಲೆ ಪಾರಸಿಯ ಮೇಲೆ ಅರಬ್ಬಿಯ ಪ್ರಭಾವ ಎಷ್ಟರಮಟ್ಟಿಗೆ ಇತ್ತೆಂದು ವಿದಿತವಾಗುತ್ತದೆ. ಅರಬ್ಬರು ಪರ್ಷಿಯಾದೇಶದ ಮೇಲೆ ದಾಳಿಮಾಡಿದ ಸುಮಾರು ಎರಡು ಶತಮಾನಗಳ ಕಾಲ ಜರತುಷ್ಟ್ರನ ಧರ್ಮಕ್ಕಂಟಿದ್ದ ಕೆಲವರನ್ನು ಬಿಟ್ಟರೆ ಉಳಿದ ಎಲ್ಲರೂ ಸಾಹಿತ್ಯ ಮಾಧ್ಯಮವನ್ನಾಗಿ ಅರಬ್ಬಿಯನ್ನೇ ಬಳಸುತ್ತಿದ್ದರೆಂದು ಹೇಳಬಹುದು.

ಪಾರಸಿ (ಪರ್ಷಿಯನ್) ಎಂಬ ಪದದಿಂದ ಪರ್ಷಿಯ ದೇಶದ (ಈಗಿನ ಇರಾನಿನ) ಜನರು ತಮ್ಮ ಮಾತೃಭಾಷೆಯನ್ನು ಹೆಸರಿಸಿದ್ದಾರೆ. ಅರಬ್ಬಿ ಭಾಷೆಯಲ್ಲಿ 'ಪ' ಇಲ್ಲದೆ ಅದನ್ನು 'ಫ' ಎಂದು ಕರೆಯಲಾಗಿದ್ದು, ಅರಬ್ಬಿಯಲ್ಲಿ 'ಫಾರಸಿ'ಯಾಗಿದೆ. ಇರಾನಿನಲ್ಲಿ ಪಾರ್ಥಿಯ, ಮೀಡಿಯ, ಪರ್ಸಿಸ್ ಮೊದಲಾದ ಜನಾಂಗಕ್ಕೆ ಸೇರಿದವರಿದ್ದು, ಇವರೆಲ್ಲರ

ಭಾಷೆಯನ್ನೂ ಒಟ್ಟಾರೆ ಪಾರಸಿ ಎಂದು ಕರೆದಿದೆ. ಬರೆವಣಿಗೆಗೆ ಪಾರಸಿ ಮತ್ತು ಅರಬ್ಬಿಗಳು ಹೆಚ್ಚುಕಡಮೆ ಒಂದೇ ಲಿಪಿಯನ್ನು ಬಳಸುತ್ತವೆ. ವಾಸ್ತವವಾಗಿ ಪಾರಸಿಯೇ ಅರಬ್ಬಿ ವರ್ಣಮಾಲೆಯನ್ನು ಅನುಸರಿಸಿತು. ಅರಬ್ಬಿಯಲ್ಲಿಲ್ಲದ ೪ ವರ್ಣಗಳು ಪಾರಸಿಯಲ್ಲಿವೆ. ಈ ಅಕ್ಷರಗಳ ಉಚ್ಚಾರವನ್ನು ಅರಬ್ಬಿಗಳು ಮಾಡಲಾರರು. ಇಲ್ಲಿ ಈ ಅಕ್ಷರಗಳಿಂದ ಕೂಡಿರುವ ಪದಗಳನ್ನು ನಾವು ಕಾಣಲಾರೆವು.

ಪಾರಸಿಯಲ್ಲಿ ಅನೇಕ ಶಾಖೆಗಳಿದ್ದು, ಈ ಪೈಕಿ ಪೂಸ್ತ, ಜಿನ್ಡ್, ಪಹಲ್ವಿ, ದರಿ ಮುಂತಾದವು ಮುಖ್ಯವಾದುವು. ಪ್ರಾಚೀನ ಪರ್ಷಿಯದಲ್ಲಿ ಪೂಸ್ತಾ ಮತ್ತು ಪಾಸ್ತಾನ್ ಎಂಬ ಎರಡು ವಿಭಾಗಗಳು. ಪೂಸ್ತಾದ ಶಬ್ದಗಳು ಸರಳ, ಅರ್ಥಗರ್ಭಿತ. ಪುನರುಕ್ತಿಗಳು ಅಧಿಕವಾಗಿದ್ದ, ಪಾಸ್ತಾನಿಯಲ್ಲಿ ವ್ಯಾಕರಣ ಪ್ರಕ್ರಿಯೆ ಮತ್ತು ಶಬ್ದಸಂಪತ್ತು ಸರಳವಾಗಿತ್ತು.

ಈ ಭಾಷೆಯಲ್ಲಿ ಸಾಹಿತ್ಯದ ಬೆಳೆವಣಿಗೆ ವಿಶೇಷವಾಗಿ ೮–೯ನೆಯ ಶತಮಾನದಿಂದ ಪ್ರಾರಂಭವಾಯಿತೆನ್ನಬಹುದು. ಭಾಷೆಯ ಬೆಳವಣಿಗೆಯನ್ನೇ ಕ್ರಿ.ಪೂ. ಸು. ೫೫೦ರಿಂದಲೇ ಕಾಣಬಹುದು. ಸೈರಸ್ ಮತ್ತು ಡೇರಿಯಸ್ ಅಂಥವರ ಆಜ್ಞೆಗಳನ್ನು ಬೆಹಿಸ್ತನ್ ಮತ್ತು ನಕ್–ಇ–ರುಸ್ತುಮ್‌ನ ಶಿಲಾಶಾಸನದಲ್ಲಿ ಮತ್ತು ಪರ್ಸೆಪೊಲಿಸ್‌ನ ಗೋಡೆ ಕಂಬಗಳ ಮೇಲೆ ಗುರುತಿಸಲಾಗಿದೆ. ಕ್ರಿ.ಪೂ. ೫೫೦ರಿಂದ ಪರ್ಷಿಯದಲ್ಲಿ ಆಳಿದ ಅಖಿಮೀನಿಯನ್ ದೊರೆಗಳ ಶಿಲಾಶಾಸನಗಳಿಂದ ಸು. ೨೪೦೦ ವರ್ಷಗಳ ಹಿಂದೆ ಪಾರಸಿಭಾಷೆಗಳ ಸ್ವರೂಪ ಹೇಗಿತ್ತೆಂದು ಅಧ್ಯಯನ ಮಾಡಲಾಗಿದೆ. ಕಡೆಯ ಅಖಿಮೀನಿಯನ್ ದೊರೆಯಾದ ಡೇರಿಯಸ್ಸನ್ನು ಅಲೆಕ್ಸಾಂಡರ್ ಕ್ರಿ.ಪೂ. ೩೩೦ರಲ್ಲಿ ಸೋಲಿಸಿದನು.

ಪ್ರಾಚೀನ ಪಾರಸಿ ಸಾಹಿತ್ಯವನ್ನು ಅಭ್ಯಾಸ ಮಾಡತೊಡಗಿದಲ್ಲಿ, ಮಧ್ಯೆ ಮಧ್ಯೆ ತೆರವು ಇಲ್ಲದಿದ್ದರೂ, ಅಖಿಮೀನಿಯನ್ ಕಾಲಕ್ಕೂ ಇಂದಿಗೂ ನಡುವೆ ಪರ್ಷಿಯನ್ ಸಾಮ್ರಾಜ್ಯ ಶಕ್ತಿಯನ್ನು ಅಡಗಿಸಿದ ಎರಡು ತೆರವುಗಳು ಕಂಡುಬರುತ್ತವೆ. ಈ ಪೈಕಿ ಮೊದಲನೆಯದು ಅಲೆಕ್ಸಾಂಡರನ ನಾಯಕತ್ವದಲ್ಲಿ ನಡೆದ ಗ್ರೀಕ್ ಆಕ್ರಮಣದಿಂದ ಪ್ರಾರಂಭವಾಗಿ ಸಸಾನಿಯನ್ ವಂಶ ಪಾರ್ಥಿಯನ್ನರನ್ನು ಪದಚ್ಯುತಗೊಳಿಸಿದವರೆಗಿನ ಕಾಲ (ಕ್ರಿ.ಪೂ. ೩೩೦ರಿಂದ ಕ್ರಿ.ಶ. ೨೨೬). ಎರಡನೆಯದೆಂದರೆ ಅರಬ್ಬರ ದಾಳಿಯಿಂದ ಪ್ರಾರಂಭವಾಗಿ ಸಸಾನಿಯನ್ ಸಾಮ್ರಾಜ್ಯ ನಾಶವಾಗಿ ಜರತುಷ್ಟ್ರಧರ್ಮ ವಿನಾಶಗೊಂಡು ಪರ್ಷಿಯದ ಜನತೆಯ ಮೇಲೆ ಅರಬ್ಬರ ಪ್ರಭಾವ ಬಿದ್ದಕಾಲ (೨೨೬–೬೫೨). ಅರಬ್ಬರ ದಾಳಿ ಖುವಾಯ್ಬ್ ಮತ್ತು ಖದೀಸಿಯಾ'ಕದನಗಳಿಂದ ಆರಂಭಗೊಂಡು ಕಡೆಯ ಸಸಾನೀಯನ್ ದೊರೆಯಾಗಿದ್ದ ಯಜ್ದಗಿರ್ದ್ ಎಂಬಾತನೊಡನೆ ಕೊನೆಗೊಂಡಿತು. ಅರೇಬಿಯದ ಅಬ್ಬಾಸಿದ್ ರಾಜವಂಶಕ್ಕೆ ಸಾಮಂತರ ರೂಪದಲ್ಲಿದ್ದ ತಹಿರಿದ್ (೮೨೦), ಷಫಾರಿದ್ (೮೬೨), ಸಮಾನಿದ್ (೮೭೪), ಖುವಾಝ್ಮಿದ್ ಮೊದಲಾದ ರಾಜರ ಆಸ್ಥಾನಗಳಲ್ಲಿಯೂ ಈ ಸಾಹಿತ್ಯದ ಕ್ರಮಿಕ ಬೆಳವಣಿಗೆಯನ್ನು ಕಾಣಬಹುದು.

ಈ ರೀತಿಯಾಗಿ ಪಾರಸಿ ಸಾಹಿತ್ಯದ, ಅದರಲ್ಲೂ ವಿಶೇಷವಾಗಿ ಪಾರಸಿ ಭಾಷೆಯ ಬೆಳೆವಣಿಗೆಯನ್ನು ಮೂರು ನಿರ್ದಿಷ್ಟ ಘಟ್ಟಗಳಲ್ಲಿ ಕಾಣಬಹುದಾಗಿದೆ : ಅಖಿಮೀನಿಯನ್ ಕಾಲ (ಕ್ರಿ.ಪೂ. ೫೫೦–೩೩೦); ಸಸಾನಿಯನ್ ಕಾಲ (೨೨೬ರಿಂದ ೬೫೨) ಮತ್ತು ಮಹಮ್ಮದೀಯ ಕಾಲ (೯೦೦ರಿಂದ ಮುಂದೆ).

ಅಖಿಮೀನಿಯನ್ ಕಾಲದುದ್ದಕ್ಕೂ ಕ್ಯೂನಿಫಾರ್ಮ್ ಅಕ್ಷರಗಳಲ್ಲಿರುವ ಶಾಸನಗಳನ್ನೂ ಘೋಷಣೆಗಳನ್ನೂ ಹೊಂದಿರುವ ಶಿಲೆಗಳನ್ನು ಕಾಣಬಹುದು. ಡಾರ್ಮೆಸ್ಟೆಟರ್ ಎಂಬಾತನ ಅಧ್ಯಯನದ ಪ್ರಕಾರ ಈ ಅಕ್ಷರಗಳ ಸ್ವರೂಪ ಮತ್ತು ಶೈಲಿಗಳಲ್ಲಿ ಸಾದೃಶ್ಯವಿದ್ದು ಇವುಗಳಲ್ಲಿರುವ ಒಟ್ಟು ಶಬ್ದಗಳ ಸಂಖ್ಯೆ ೪೦೦ಕ್ಕೆ ಹೆಚ್ಚಿಲ್ಲ. ಈ ಶಾಸನಗಳ ಭಾಷೆ ಪ್ರಾಚೀನ ಪಾರಸಿ ಎಂದಿದೆ.

ಸಸಾನಿಯನ್ ಕಾಲದ್ದೆಂದು ನಿರ್ದಿಷ್ಟಗೊಳಿಸಲ್ಪಟ್ಟಿರುವ ಸಾಹಿತ್ಯದ ಒಟ್ಟು ಪ್ರಮಾಣ ಸುಮಾರು ಹಳೆಯ ಒಡಂಬಡಿಕೆಯ ಪ್ರಮಾಣದಷ್ಟೆಂದು ಅಂದಾಜು ಮಾಡಿದೆ. ಈ ವಿನ್ಯಾಸಗಳನ್ನು ಶಿಲೆ, ಪ್ರಶಸ್ತಿ, ಆಭರಣಗಳು, ರಾಜಮುದ್ರೆಗಳು, ನಾಣ್ಯಗಳು ಮೊದಲಾದವುಗಳ ಮೇಲೆ ಕೆತ್ತಲಾಗಿದೆ. ಇವುಗಳಲ್ಲಿ ಬಹುಪಾಲು ಜರತುಷ್ಟ್ರ ಧರ್ಮದ ದಾರ್ಶನಿಕ ತತ್ತ್ವಗಳಿಗೆ ಸಂಬಂಧಿಸಿವೆ. ಇದನ್ನು ಪಹಲ್ವಿ ಅಥವಾ ಮಧ್ಯ ಕಾಲದ ಪಾರಸಿ ಎಂದೆನ್ನುತ್ತಾರೆ. ಪಹಲ್ವಿ ಎಂಬ ಶಬ್ದವನ್ನು ಭಾಷೆಗಿಂತಲೂ ಹೆಚ್ಚಾಗಿ ಅಂದು ಬಳಕೆಯಲ್ಲಿದ್ದ ಲಿಪಿವೈಶಿಷ್ಟ್ಯಕ್ಕೆ ಹೇಳಲಾಗುತ್ತಿತ್ತೆಂದು ಇ.ಜಿ. ಬ್ರೌನ್ ಅಭಿಪ್ರಾಯಪಟ್ಟಿದ್ದಾರೆ.[1] ಇದರಲ್ಲಿ ಅರಬ್ಬಿಯ ಅಂಶ ಬಹಳ ಕಡಮೆ. ಜರತುಷ್ಟ್ರನ ಅನುಯಾಯಿಗಳು ಸು. ೯ನೆಯ ಶತಮಾನದವರೆಗೆ ಪಹಲ್ವಿ ಸಾಹಿತ್ಯಕ್ಕೆ ತಮ್ಮ ಕೊಡುಗೆಯನ್ನು ನೀಡಿದ್ದಾರೆ.

ಅರಬ್ಬರು ಪರ್ಷಿಯದ ಮೇಲೆ ದಂಡೆತ್ತಿಹೋದ ಅನಂತರ ಅವರ ಭಾಷಾ ಸಾಹಿತ್ಯಗಳ ಪ್ರಭಾವ ಪಾರಸಿ ಭಾಷೆಯ ಮೇಲೆ ಬಿದ್ದು ಅದರಿಂದ ಸಾಕಷ್ಟು ಬೆಳೆವಣಿಗೆಗೆ ಅವಕಾಶವಾಯಿತು.[2] ಇದು ೯೦೦ರ ಅನಂತರದ ಕಾಲ, ಮಹಮ್ಮದೀಯರ ಕಾಲ. ಪಾರಸಿ ಭಾಷಾಸಾಹಿತ್ಯದ ಮೇಲೆ ಅರಬ್ಬಿ ಭಾಷಾಸಾಹಿತ್ಯದ ಪ್ರಭಾವವನ್ನು ಈ ಕಾಲದಲ್ಲಿ ವಿಶೇಷವಾಗಿ ಗಮನಿಸಬಹುದಾಗಿದೆ.

ಪ್ರಾಚೀನ ಪಾರಸಿ ಶಾಸನಗಳನ್ನು ಕುರಿತು ೧೯ನೆಯ ಶತಮಾನದಿಂದೀಚೆಗೆ ಕೆಲವರು ಪಾಶ್ಚಾತ್ಯ ವಿದ್ವಾಂಸರು ಅಧ್ಯಯನ ನಡಸಿ ಆ ಕಾಲದ ಭಾಷೆ, ಸಾಹಿತ್ಯ, ಜನಜೀವನ, ಅರಸೊತ್ತಿಗೆಗಳು ಮೊದಲಾದ ಹಲವಾರು ಅಂಶಗಳ ಮೇಲೆ ಬೆಳಕು ಚೆಲ್ಲಿದ್ದಾರೆ. ಈ ಸಂದರ್ಭದಲ್ಲಿ ಹೆಸರಿಸಬೇಕಾದ ಥಾಮಸ್‌ಹೈಡ್, ಆನ್‌ಕ್ವಿಟಿಲ್ ಡ್ಯೂಪೆರಾನ್, ಸರ್ ವಿಲಿಯಂ ಜೋನ್ಸ್, ಮ್ಯೂಲರ್ ಮುಂತಾದವರ ಯತ್ನಗಳಿಂದ ಪಹ್ಲವಿ ಶಾಸನಗಳು, ಹುಜ್ವಾರಿಷ್‌ನಿಂದೊಡಗೂಡಿದ (ಅರ್ಮೆಯಿಕ್ ಶಬ್ದಗಳ ಜವಾರಿಷ್ನ ಮೂಲಗಳಿಗೆ ಪಾರಸಿ ಪ್ರತ್ಯಯಾದಿಗಳನ್ನು ಸೇರಿಸಿ ಮಾಡುತ್ತಿದ್ದ ರಚನೆಗಳಿಗೆ ಹುಜ್ವಾರಿಷ್ ಎನ್ನುತ್ತಿದ್ದರು) ಪಹ್ಲವಿ ಮೊದಲಾದುವುಗಳ ಬಗ್ಗೆ ಹಲವಾರು

ಅಂಶಗಳನ್ನು ಅರಿಯಬಹುದಾಗಿದೆ. ಈ ಶಾಸನಗಳಲ್ಲಿ ಕಂಡುಬರುವ ಅವೆಸ್ತಾ ಭಾಷೆಯನ್ನು ಜೆಂದ್ ಎಂದೂ ಕರೆಯಲಾಗುತ್ತಿತ್ತು. ಪ್ರಾಚೀನ ಬ್ಯಾಕ್ಟ್ರಿಯನ್ ಭಾಷೆಯೆಂದರೂ ಇದೇ. ಆದರೆ ಇ.ಜಿ. ಬ್ರೌನ್ ಅವೆಸ್ತಾ ಭಾಷೆಗೆ ಈ ಹೆಸರುಗಳು ಸರಿಯೆಂದು ಒಪ್ಪುವುದಿಲ್ಲ. ಪಹ್ಲವಿಯಾದರೋ ಸಸಾನಿಯನರ ಕಾಲದಲ್ಲಿ ಪರ್ಷಿಯದ ಅಧಿಕೃತ ಭಾಷೆಯಾಗಿತ್ತೆನ್ನಲಾಗಿದೆ.

ಪ್ರಾಚೀನ ಪಾರಸಿ ಶಾಸನಗಳಲ್ಲಿ ಉತ್ತಮವಾದ ಸಾಹಿತ್ಯದ ಅಂಶಗಳನ್ನು ಕಾಣಬಹುದಾಗಿದೆ. ಬೆಹಿಸ್ತುನ್‌ನಲ್ಲಿ ಡೇರಿಯಸ್ ಕೆತ್ತಿಸಿದ ಶಾಸನ ಹಾಗೂ ಆತನೇ ಪರ್ಸೆಪೊಲಿಸ್‌ನಲ್ಲಿ ಪ್ರಚುರಪಡಿಸಿದ ಶಾಸನಗಳು ಸಾಹಿತ್ಯಕ ದೃಷ್ಟಿಯಿಂದ ಉತ್ಕೃಷ್ಟವಾದವಾಗಿವೆ. ಪರ್ಸೆಪೊಲಿಸ್‌ನ ಶಾಸನ ಮಹಾದೇವತೆಯಾದ ಅಹುರಮಜ್ದನ ಪ್ರಶಂಸೆಯಿಂದ ಪ್ರಾರಂಭಗೊಂಡು ರಾಜನ ಬಿರುದು ಬಾವಲಿಗಳನ್ನೂ ಆಶಯ ಸಂದೇಶಗಳನ್ನೂ ತೋರ್ಪಡಿಸುತ್ತವೆ. ಅಖಿಮೀನಿಯನ್ ಕಾಲದ ಶಾಸನಗಳ ಪೈಕಿ ಆರ್ಟಾಕ್ಸೆರ್‌ಕಸ್ ಓಖಸ್ (ಕ್ರಿ.ಪೂ. ೩೬೧-೩೩೬) ಎಂಬಾತನ ಶಾಸನವೂ ಬಹು ಮುಖ್ಯವಾದ್ದು.

ಕ್ರಿ.ಪೂ. ೩೦೦ರಿಂದ ಕ್ರಿ.ಶ. ೬೫೫ರ ಅವಧಿಯಲ್ಲಿ ಪಹ್ಲವಿ ಸಾಹಿತ್ಯಕ್ಕೆ ಸಂಬಂಧಪಟ್ಟ ಅನೇಕ ಸಣ್ಣಪುಟ್ಟ ಮಾದರಿಗಳನ್ನು ಆ ಕಾಲದಲ್ಲಿ ಪ್ರಚಲಿತವಾಗಿದ್ದ ನಾಣ್ಯಗಳ ಮೇಲೆ ಕಾಣಬಹುದಾಗಿದೆ. ೬೫೫ರ ಅನಂತರ ಉಮಯ್ಯಾದ್‌ವಂಶದ ಕಲೀಫನಾಗಿದ್ದ ಅಬ್ದುಲ್‌ಮಾಲಿಕ್ ಪಾರಸಿ ನಾಣ್ಯಪದ್ಧತಿಯನ್ನು ರದ್ದುಪಡಿಸಿ, ಅದರ ಮೇಲೆ ಅರಬ್ಬಿ ಉಕ್ತಿಗಳನ್ನು ಟಂಕಿಸಲಾರಂಭಿಸಿದಂದಿನಿಂದ ಪಹ್ಲವಿ ಉಕ್ತಿಗಳು ಕಣ್ಮರೆಯಾದುವು. ಅವೆಸ್ತಾ ಭಾಷೆಯಿಂದ ಭಾಷಾಂತರಗೊಂಡ ರೂಪದಲ್ಲಿ ಪಹ್ಲವಿ ಉಕ್ತಿಗಳು ದೊರೆತಿದ್ದು, ಇವುಗಳಲ್ಲಿ ಒಟ್ಟು ಒಂದು ಲಕ್ಷ ನಲವತ್ತುಸಾವಿರ ಪದಗಳಿವೆಯೆಂದು ಎಣಿಕೆ ಮಾಡಲಾಗಿದೆ. ಧಾರ್ಮಿಕ ಉಕ್ತಿಗಳನ್ನೊಳಗೊಂಡ ಸುಮಾರು ೫೫ ಪಹ್ಲವಿ ಕೃತಿನಮೂನೆಗಳು ದೊರೆತಿವೆ. ಇವುಗಳಲ್ಲಿ ಪ್ರಾರ್ಥನೆ, ವಂಶಪರಂಪರಾವರ್ಣನೆ, ಸೂಕ್ತಿಗಳು ಅಡಕವಾಗಿವೆ.

ಸಾಹಿತ್ಯದ ಇತರ ಪ್ರಕಾರಗಳು ಪಾರಸಿ ಸಾಹಿತ್ಯದಲ್ಲಿ ಎಂದಿನಿಂದ ಪ್ರಾರಂಭವಾಯಿತೆಂದು ನಿರ್ದಿಷ್ಟವಾಗಿ ಹೇಳುವುದು ಕಷ್ಟಸಾಧ್ಯ. ಅರಬ್ಬರ ದಾಳಿಯ ಅನಂತರ ಇಸ್ಲಾಂಗೆ ಪರಿವರ್ತನೆಗೊಂಡ ಪಾರಸಿಕರು ಅರಬ್ಬಿಲಿಪಿಯಲ್ಲಿ ತಮ್ಮ ಭಾಷೆಯ ಗದ್ಯವನ್ನು ಬರೆಯಲಾರಂಭಿಸಿದರೆಂದು ಒಂದು ಅಭಿಪ್ರಾಯ. ೮ನೆಯ ಶತಮಾನದ ಸುಮಾರಿನಲ್ಲಿ ಪಾರಸಿ ಗದ್ಯಸಾಹಿತ್ಯ ಆರಂಭವಾಯಿತೆಂದು ಒಂದು ಅಂದಾಜು. ಮೊದಲಿಗೆ ಚಿಕ್ಕಚಿಕ್ಕ ವಾಕ್ಯವೃಂದಗಳು, ಟಿಪ್ಪಣಿಗಳು, ತಿಳಿವಳಿಕೆ ಪತ್ರಗಳಿಂದ ಇದು ಆರಂಭಗೊಂಡು ಇಸ್ಲಾಂ ಧರ್ಮ ತತ್ತ್ವಗಳ ಬಗ್ಗೆ ಕಿರುಹೊತ್ತಿಗೆಗಳನ್ನು ಹೊರಗೆ ತರುವವರೆಗೆ ನಡೆಯಿತೆನ್ನಬಹುದು. ಪ್ರಾರಂಭಿಕ ಅರಬ್ಬಿ ಲೇಖಕರ ಕೃತಿಗಳಲ್ಲಿ ಈ ಪಾರಸಿ ಲೇಖಕರ ಮತ್ತು ಅವರ ಚೊಚ್ಚಲ ಪ್ರಯತ್ನಗಳ ಬಗ್ಗೆ ಪುರಾವೆ ದೊರೆಯುತ್ತದೆ. ಸು. ೧೦ನೆಯ ಶತಮಾನದವರೆಗೂ ಗ್ರಂಥವೆಂದು ಹೆಸರಿಸಬಹುದಾದ ರೂಪದಲ್ಲಿ ಯಾವ ಗದ್ಯಕೃತಿಯೂ ಹೊರಬರಲಿಲ್ಲ. ಅನಂತರದಲ್ಲಿ ಹೊರಬಂದ ಸಮಾನಿದ್ ರಾಜಕುಮಾರ ಮೊದಲನೆಯ

ಮನ್ಸೂರ್‌ನಿಗಾಗಿ ತಬಾರಿ ಬರೆದ ಚರಿತ್ರೆಯ ಪಾರಸಿ ಅನುವಾದ, ಅಬೂ ಮನ್ಸೂರ್‌ನ ವೈದ್ಯಶಾಸ್ತ್ರದ ಬಗೆಗಿನ ಗ್ರಂಥ ಮುಂತಾದುವು ಪ್ರಾರಂಭಿಕ ಗದ್ಯರಚನೆಗಳಾಗಿವೆ.

ಅರಬ್ಬಿ ಭಾಷೆಯಲ್ಲಾದಂತೆಯೇ ಪಾರಸಿಯಲ್ಲಿಯೂ ಗದ್ಯ ಸಾಹಿತ್ಯಕ್ಕಿಂತ ಮೊದಲು ಪದ್ಯ ಅಸ್ತಿತ್ವಕ್ಕೆ ಬಂತು. ದೌಲತ್‌ಷಾಹ್ ಎಂಬ ಚರಿತ್ರಕಾರ ಸಸಾನಿಯನ್ ವಂಶಜನಾಗಿದ್ದ ಬಹ್ರಮ್‌ಗೂರ್ (೪೨೦-೪೩೮) ಮತ್ತು ಆತನ ರಾಣಿ ದಿಲಾರಾಮ್ ಇಬ್ಬರೂ ಸೇರಿ ಮೊದಲ ಪಾರಸಿ ದ್ವಿಪದಿಯೊಂದನ್ನು ರಚಿಸಿದರೆಂದು ಅಭಿಪ್ರಾಯಪಟ್ಟಿದ್ದಾನೆ. ತನ್ನ ಪ್ರಿಯತಮೆ ಶಿರೀನ್ ಎಂಬಾಕೆಯ ಅರಮನೆಯ ಗೋಡೆಯಮೇಲೆ ಖುಸ್ರೊ ಪರ್ವಿಜ್ (೫೯೦-೬೨೮) ಕೆತ್ತಿಸಿದ ದ್ವಿಪದಿಯೊಂದು ಮೊದಲ ಪಾರಸಿ ಪದ್ಯರಚನೆ ಎಂದು ಕೆಲವರ ಅನಿಸಿಕೆ. ಮಹಮ್ಮದ್ ಆಫಿ (೧೨೧೦-೧೨೩೬) ತಾನು ರಚಿಸಿದ ಪ್ರಾಚೀನ ಪಾರಸಿ ಲೇಖಕರ ಚರಿತ್ರೆಗೆ ಸಂಬಂಧಪಟ್ಟ ಸಂಗ್ರಹವೊಂದರಲ್ಲಿ ಮೊದಲ ಪಾರಸಿ ಪದ್ಯವೊಂದನ್ನು ಮರ್ವ್ ಎಂಬೆಡೆಯ ಅಬ್ಬಾಸ್ ಎಂಬಾತ ಹಾರೂನ್ ಅಲ್‌ರಷೀದ್ ಕಲೀಫನ ಮಗ ಅಲ್-ಮಾಮೂನ್‌ನ ಪ್ರಶಂಸೆಯಲ್ಲಿ ರಚಿಸಿದನೆಂದು ಹೇಳಿದ್ದಾನೆ. ಈ ಅಭಿಪ್ರಾಯದ ಪ್ರಕಾರ ೮೦೯ರಲ್ಲಿ ಮೊದಲ ಕವಿತೆಯ ರಚನೆಯಾಯಿತೆನ್ನಬಹುದು. ಒಟ್ಟಿನಲ್ಲಿ ಸಮಾನಿದ್ ವಂಶದ ಅರಸ ನಸ್ರ್ II (೯೧೩-೯೪೨) ಎಂಬಾತನ ಆಳ್ವಿಕೆಯ ಕಾಲದಿಂದೀಚೆಗೆ, ಅಂದರೆ ಸುಮಾರು ಹತ್ತನೆಯ ಶತಮಾನದ ಪೂರ್ವಭಾಗದಲ್ಲಿ, ಕವಿತೆ ಪಾರಸಿ ಸಾಹಿತ್ಯದಲ್ಲಿ ಕಾಲಿಟ್ಟಿತೆಂದು ಯಾವುದೇ ಆತಂಕವಿಲ್ಲದೆ ಹೇಳಬಹುದು. ಆಶ್ಚರ್ಯವೇನೆಂದರೆ, ಸುಮಾರು ಒಂದು ಸಾವಿರ ವರ್ಷಗಳಷ್ಟು ಸಾಹಿತ್ಯರಾಶಿ ನಮ್ಮ ಮುಂದೆ ಲಭ್ಯವಿದ್ದರೂ ರೂದಗಿಯಂಥ ಮೊದಲ ಕಾಲದ ಕವಿಯೊಬ್ಬನ ಭಾಷೆಗೂ ಇತ್ತೀಚಿನ ಪಾರಸಿ ಭಾಷೆಗೂ ಅಂಥ ವ್ಯತ್ಯಾಸವೇನೂ ಕಂಡುಬರುವುದಿಲ್ಲ.

ಈ ರೀತಿಯಾಗಿ ಚೊಚ್ಚಲ ಪದ್ಯ ಯಾವುದೆಂಬುದರ ಬಗ್ಗೆ ಊಹಾಪೋಹಗಳಿದ್ದರೂ ತಬಾರಿ (೯೨೩) ಹಾಗೂ ಮಸೂದಿ (೯೫೭) ಎಂಬ ನಂಬಲರ್ಹರಾದ ಅರಬ್ಬಿ ಲೇಖಕರ ಪ್ರಕಾರ ಮೊದಲ ಪಾರಸಿ ಪದ್ಯವನ್ನು ಆದಂ ಎಂಬಾತ ಸಿರಿಯಕ್‌ನಲ್ಲಿ ರಚಿಸಿದನು. ಆಬೆಲ್ ಎಂಬಾತನ ಮರಣದ ನೆನಪಿನಲ್ಲಿ ರಚಿಸಿದ ಈ ಶೋಕಪದ್ಯವನ್ನು ಅರಬ್ಬಿಗೂ ಭಾಷಾಂತರಿಸಲಾಗಿತ್ತು. ಸಸಾನಿಯನ್ ದೊರೆ ಖುಸ್ರೊ ಪರ್ವಿಜ್‌ನ (೫೯೦-೬೨೮) ಆಸ್ಥಾನಿಕರಲ್ಲೊಬ್ಬನಾಗಿದ್ದ ಬರ್ಬಾದ್ ಅಥವಾ ಬಹಲ್ಬಾದ್ ಎಂಬುವನು ಒಳ್ಳೆಯ ಗಾಯಕನಾಗಿದ್ದು, ಪಹ್ಲವಿ ಭಾಷೆಗೆ ಸಮೀಪವಾಗಿದ್ದ ಉಪಭಾಷೆಯೊಂದರಲ್ಲಿ ಹಾಡುತ್ತಿದ್ದನೆಂದೂ ಈತನ ಭಾಷೆ ಸಮಾನಿದ್ ಕವಿಯಾದ ರೂದಗಿಯ ಭಾಷೆಯೊಂದಿಗೆ ಬಹಳ ಅಚ್ಚರಿಯೆನಿಸುವಷ್ಟು ಸಾಮ್ಯವನ್ನು ಹೊಂದಿತ್ತೆಂದೂ ಐತಿಹ್ಯವಿದೆ. ಇದು ನಿಜವಾದಲ್ಲಿ ಆತನೇ ಮೊದಲ ಕವಿಯ ಪಟ್ಟವನ್ನೇರಿ ಕಾವ್ಯದ ಉಗಮ ೬ನೆಯ ಶತಮಾನದಷ್ಟು ಹಿಂದಕ್ಕೆ ಹೋಗುತ್ತದೆ.

ಒಟ್ಟಿನಲ್ಲಿ ಪಾರಸಿ ಸಾಹಿತ್ಯವನ್ನು ಈ ಮುಂದೆ ಕಾಣಿಸಿರುವಂತೆ ಅಂತಿಮವಾಗಿ ವಿಭಜನೆ ಮಾಡಬಹುದಾಗಿದೆ.

ಇಂಡೊ-ಇರಾನಿಯನ್ ಕಾಲ, ಮೊದಲ ಇರಾನಿಯನ್ ಕಾಲ, ಪಾರಸಿಯ ಮೇಲೆ ಅಸ್ಸೀರಿಯನ್ನರ ಪ್ರಭಾವ ಬಿದ್ದಕಾಲ (ಕ್ರಿ.ಪೂ. ೧೦೦೦), ಮೀಡಿಕ್ ಕಾಲ (ಕ್ರಿ.ಪೂ. ೭೦೦), ಪ್ರಾಚೀನ ಪಾರಸಿ ಅಥವಾ ಅಖಿಮೀನಿಯನ್ ಕಾಲ (ಕ್ರಿ.ಪೂ. ೫೫೦), ಅಲೆಕ್ಸಾಂಡರನ ದಂಡಯಾತ್ರೆಯ ಕಾಲದಿಂದ ಸಸಾನಿಯನ್ ಸಾಮ್ರಾಜ್ಯ ಪುನಃಸ್ಥಾಪನೆಯಾದವರೆಗಿನ ಕಾಲ (ಕ್ರಿ.ಪೂ. ೩೩೦-ಕ್ರಿ.ಶ. ೨೨೬), ಸಸಾನಿಯನ್ ಕಾಲ (೨೨೬-೬೫೨) ಮತ್ತು ಮುಹಮ್ಮದೀಯ ಕಾಲದಿಂದ ಈಚಿನವರೆಗಿನ ಕಾಲ (೬೫೨-ಇಂದಿನವರೆಗೆ).

ಹೀಗೆ ಪಾರಸಿ ಸಾಹಿತ್ಯದ ಮೊದಲ ಕೆಲವು ಶತಮಾನಗಳಲ್ಲಿ, ಇತರ ಅನೇಕ ಭಾಷೆಗಳಲ್ಲಿರುವಂತೆ ಶಾಸನ ಸಾಹಿತ್ಯವೆ ತುಂಬಿಹೋಗಿರುವುದರಿಂದ, ಸಾಹಿತ್ಯದ ಉಗಮ ಎಂದಿನಿಂದಾಯಿತೆಂಬುದರ ಬಗ್ಗೆ ಸಾಕಷ್ಟು ಜಿಜ್ಞಾಸೆಗಳು ಹುಟ್ಟಿವೆ. ಆದರೆ ಇದರಿಂದ ಪಾರಸಿ ಭಾಷೆಯ ಬೆಳೆವಣಿಗೆ ಕ್ರಮಿಕವಾಗಿ ಹೇಗಾಯಿತೆಂಬುದರ ಬಗ್ಗೆ ಹಾಗೂ ಪರ್ಷಿಯ ದೇಶದ ರಾಜಕೀಯ ಚರಿತ್ರೆಯ ಬಗ್ಗೆ ಸಾಕಷ್ಟು ವಿದ್ಯಮಾನಗಳ ಅರಿವು ಉಂಟಾಗಬಹುದಾದರೂ ಸಾಹಿತ್ಯದ ಅಮೂಲ್ಯ ಕೃತಿಗಳು ಹತ್ತನೆಯ ಶತಮಾನದ ಮೊದಲಿಗೆ ಹೊರಬರಲಿಲ್ಲವೆನ್ನಬಹುದು.

## ೧. ಭಾರತೀಯ ಭಾಷಾಸಾಹಿತ್ಯ ಸ್ಥಿತಿಗತಿಗಳು : ಸಂಸ್ಕೃತ ಪ್ರಾಕೃತಗಳು

### ಸಂಸ್ಕೃತ

ಕ್ರಿ.ಶ. ೧೬ನೆಯ ಶತಮಾನದಲ್ಲಿ ಗೋವೆಯಲ್ಲಿದ್ದ ಫ್ಲಾರೆಂಟೈನ್ ವ್ಯಾಪಾರಿ ಫಿಲಿಪ್ಪೊ ಸಸ್ಸೆಟಿ ಎಂಬವನು ಸಂಸ್ಕೃತಭಾಷೆಗೂ ಯೂರೋಪಿನ ಕೆಲವು ಪ್ರಧಾನ ಭಾಷೆಗಳಿಗೂ ಸಂಬಂಧವಿರುವ ವಿಚಾರವನ್ನು ಮೊತ್ತಮೊದಲು ಬೆಳಕಿಗೆ ತಂದನು. ಆ ಭಾಷೆಗಳೆಲ್ಲವೂ ಒಂದು ಸಾಮಾನ್ಯ ಮೂಲಭಾಷೆಯಿಂದ ಬಂದವಾದ್ದರಿಂದ ಅವುಗಳಲ್ಲಿ ಸಂಬಂಧವುಂಟಾಗಿದೆಯೆಂದು ಯೋಚಿಸಿದ ಸರ್ ವಿಲಿಯಂ ಜೋನ್ಸ್ ಎಂಬ ಆಂಗ್ಲವಿದ್ವಾಂಸನು ೧೭೮೬ರಲ್ಲಿ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದನು. ಅದರ ಪ್ರಕಾರ, ಹಾಗೆ ಪರಸ್ಪರ ಸಂಬಂಧವುಳ್ಳ ಗ್ರೀಕ್, ಲ್ಯಾಟಿನ್, ಗೋಥಿಕ್, ಕೆಲ್ಟಿಕ್, ಸಂಸ್ಕೃತ, ಪರ್ಷಿಯನ್ ಮುಂತಾದ ಭಾಷೆಗಳು ಇಂಡೊ-ಯೂರೋಪಿಯನ್ ಅಥವಾ ಇಂಡೊ-ಜರ್ಮ್ಯಾನಿಕ್ ಎಂಬ ಮೂಲಭಾಷೆಯ ಆಧಾರವುಳ್ಳವೆಂಬುದನ್ನು ಸ್ಥಾಪಿಸಲು ಯತ್ನಿಸಿ, ಅವನು ತೌಲನಿಕ ಭಾಷಾಶಾಸ್ತ್ರದ ಅಧ್ಯಯನಕ್ಕೆ ತಳಹದಿ ಹಾಕಿಕೊಟ್ಟನು.

### ಇಂಡೊ-ಯೂರೋಪಿಯನ್ ಭಾಷೆ ಮತ್ತು ಋಗ್ವೇದ

ಇಂಡೊ-ಯೂರೋಪಿಯನ್ ಭಾಷೆಯನ್ನಾಡುತ್ತಿದ್ದ ಜನಾಂಗದ ಮೂಲನಿವಾಸ ಮತ್ತು ಅವರು ಪ್ರಪಂಚದ ನಾನಾಭಾಗಗಳಿಗೆ ವಲಸೆಹೋದ ವಿಚಾರ-ಇವನ್ನು ಕುರಿತು

ವಿಪುಲ ಚರ್ಚೆ ನಡೆದು, ತೀವ್ರ ಭಿನ್ನಾಭಿಪ್ರಾಯಗಳು ತಲೆದೋರಿವೆ. ಅವರ ಮೂಲ ನಿವಾಸ ಮಧ್ಯಏಷ್ಯವಾಗಿದ್ದಿರಬೇಕೆಂಬ ಅಭಿಪ್ರಾಯ ವ್ಯಕ್ತಪಟ್ಟು ಅದು ವಿಶೇಷ ವಾಗಿ ವಿದ್ವಾಂಸರ ಗಮನವನ್ನು ಸೆಳೆದಿದೆ. ಮೇಲ್ಕಂಡ ಗ್ರೀಕ್, ಲ್ಯಾಟಿನ್, ಸಂಸ್ಕೃತ ಮುಂತಾದ ಇಂಡೊ-ಯೂರೋಪಿಯನ್ ಗುಂಪಿನ ಭಾಷೆಗಳಲ್ಲಿ ಸಂಸ್ಕೃತದ ಋಗ್ವೇದ ಪ್ರಾಚೀನತಮ ಗ್ರಂಥವೆಂದೂ ಅದರ ಕಾಲ ಕ್ರಿ.ಪೂ. ಸು. ೧೫೦೦ ಆಗಿದ್ದಿರಬಹು ದೆಂದೂ ಅನೇಕ ವಿದ್ವಾಂಸರ ಮತ. ಆರ್ಯರು ವಾಯವ್ಯ ದಿಕ್ಕಿನ ಮಾರ್ಗವಾಗಿ ಭಾರ ತಕ್ಕೆ ಬಂದು ಪಂಜಾಬಿನ ಸುತ್ತಮುತ್ತಣ ಪ್ರದೇಶಗಳಲ್ಲಿ ನೆಲಸಿದ ಕಾಲ ಅದೇ ಆಗಿರ ಬೇಕೆಂದು ಸೂಚಿಸಿ, ಅಲ್ಲಿಂದ ಭಾರತದೇಶದ—ವಿಶೇಷವಾಗಿ ಸಾಹಿತ್ಯದ—ಚರಿತ್ರೆ ಪ್ರಾರಂಭವಾಗುವುದೆಂದು ಅವರು ಅಭಿಪ್ರಾಯಪಟ್ಟಿದ್ದಾರೆ. ಅದಕ್ಕೆ ಮುಖ್ಯ ಆಧಾರ ವೆಂದರೆ ಇಂಡೊ-ಯೂರೋಪಿಯನ್ ಸಮೂಹದಿಂದ ಕವಲೊಡೆದುಕೊಂಡು ಯೂರೋಪ್, ಇರಾನ್, ಭಾರತ ಮುಂತಾದ ಪ್ರದೇಶಗಳ ಕಡೆ ಹೊರಟ ಆರ್ಯರಲ್ಲಿ ಇರಾನಿಗೆ ಬಂದ ಗುಂಪಿಗೆ ಸಂಬಂಧಪಟ್ಟಂತೆ ಏಷ್ಯಾಮೈನರಿನ ಬೋಘಾಸ್-ಕೊಯ್‌ನಲ್ಲಿ ದೊರೆತ ಕೆಲವು ಕುರುಹುಗಳು. ಇವು ಕ್ರಿ.ಪೂ. ೧೪೦೦ರಲ್ಲಿ ಹಿಟ್ಟೈಟಿನ ದೊರೆಗೂ ಮಿತನ್ನಿಯ ದೊರೆಗೂ ನಡೆದ ಒಪ್ಪಂದದಲ್ಲಿ ಕಾಣಿಸಲಾಗಿರುವ ಮತ್ತು ಮುಂದೆ ವೈದಿಕ ದೇವತೆಗಳಾಗಿ ಗೋಚರಿಸುವ ಮಿತ್ರ, ವರುಣ, ಇಂದ್ರ, ನಾಸತ್ಯಾ ಎಂಬ ದೇವತೆ ಗಳ ಕಿಂಚಿದ್ರೂಪಾಂತರಿತ ಹೆಸರುಗಳು. ಅಲ್ಲಿ ಕಂಡುಬಂದಿರುವ ಕ್ರಿ.ಪೂ. ೧೪೦೦ರ ಭಾಷೆ ನಿಸ್ಸಂಶಯವಾಗಿ ತರುವಾಯ ಭಾರತಕ್ಕೆ ಬಂದ ಇಂಡೊ-ಆರ್ಯನರೂ ಇರಾನಿ ನಲ್ಲಿ ನೆಲಸಿದವರೂ ಇನ್ನೂ ಒಟ್ಟಾಗಿದ್ದ ಇಂಡೊ-ಇರಾನಿಯನ್ ಕಾಲಕ್ಕೆ ಸೇರುತ್ತ ದೆಂಬುದನ್ನು ಸೂಚಿಸಿ, ಈ ಕ್ರಿ.ಪೂ. ೧೪೦೦ಕ್ಕೆ ಅನುಗುಣವಾಗಿ ಆರ್ಯರು (ಇಂಡೊ-ಆರ್ಯನ್ನರು) ಭಾರತಕ್ಕೆ ಬಂದ ಕಾಲ ಹಾಗೂ ಋಗ್ವೇದದ ಕಾಲ ಕ್ರಿ. ಪೂ. ಸು. ೧೫೦೦ ಎಂಬುದಾಗಿ ಆ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[29] ಈ ಕಾಲವನ್ನು ಒಟ್ಟಾಗಿ ವೇದದ ಪ್ರಾರಂಭಕಾಲವೆನ್ನಬಹುದು. ಆದರೆ ಅದರ ವಿಚಾರದಲ್ಲಿ ತೀವ್ರ ಭಿನ್ನಾಭಿ ಪ್ರಾಯಗಳಿವೆ.[30]

(i) ಮೇಲ್ಕಂಡ ಆಧಾರ ಮತ್ತು ಇರಾನಿಯನ್ನರ ಪವಿತ್ರಗ್ರಂಥ 'ಅವೆಸ್ತ'ದ (ಕ್ರಿ. ಪೂ. ಸು. ೮೦೦) ಭಾಷೆಗೂ ಋಗ್ವೇದದ ಭಾಷೆಗೂ ಇರುವ ಸಾಮ್ಯ—ಇವುಗಳ ದೃಷ್ಟಿಯಿಂದ ಸೂಚಿತವಾಗಿರುವ ಕಾಲ ಕ್ರಿ.ಪೂ. ೧೫೦೦.

(ii) ಬೌದ್ಧಧರ್ಮ ಉದಯಿಸಿದ ಕ್ರಿ.ಪೂ. ೬ನೆಯ ಶತಮಾನದ ಆಧಾರದ ಮೇಲೆ ಎಲ್ಲ ಪ್ರಮುಖ ವೈದಿಕ ಗ್ರಂಥಗಳೂ ಆ ಕಾಲಕ್ಕೆ ಮುಂಚಿತವೆಂದು ಸೂಚಿಸಿ, ಅವನ್ನು ಛಂದಸ್ಸಿನ ಯುಗ, ಬ್ರಾಹ್ಮಣಾದಿಗಳ ಯುಗ, ಸೂತ್ರಯುಗ ಇವುಗಳಲ್ಲಿ ಸೇರಿಸಿ, ಸೂತ್ರಯುಗ ಕ್ರಿ.ಪೂ. ೬೦೦-೨೦೦, ಬ್ರಾಹ್ಮಣ ಯುಗ ಕ್ರಿ.ಪೂ. ೮೦೦-೬೦೦, ಮಂತ್ರಯುಗ ಕ್ರಿ.ಪೂ. ೧೦೦೦-೮೦೦, ಛಂದಸ್ಸಿನ ಯುಗ ಕ್ರಿ.ಪೂ. ೧೨೦೦–೧೦೦೦ ಎಂಬ ಕಾಲಮಿತಿಗಳನ್ನು ಸೂಚಿಸುವುದರ ಮೂಲಕ ಋಗ್ವೇದದ ಕಾಲ ಕ್ರಿ.ಪೂ.

ಸು. ೧೨೦೦ಕ್ಕಿಂತ ಈಚಿನದಲ್ಲ ಎಂದು ಮ್ಯಾಕ್ಸ್‌ಮುಲ್ಲರ್ ಹೇಳಿದ್ದಾರೆ.

(iii) ಯಜ್ಞಕಾಲವನ್ನು ನಿರ್ಧರಿಸುವುದಕ್ಕೋಸ್ಕರ ಬ್ರಾಹ್ಮಣ ಹಾಗೂ ಸೂತ್ರ ಗ್ರಂಥಗಳಲ್ಲಿ ಪ್ರತಿಪಾದಿತವಾಗಿರುವ ಜ್ಯೋತಿಷ ವಿಚಾರಗಳ ಆಧಾರದ ಮೇಲೆ ೧೮೯೩ರಲ್ಲಿ ಜರ್ಮನಿಯ ಯಾಕೊಬಿ ಮತ್ತು ಭಾರತದೇಶದಲ್ಲಿ ಬಾಲಗಂಗಾಧರ ತಿಲಕ್ ಎಂಬ ವಿದ್ವಾಂಸರು ಪ್ರಾಚೀನತಮ ವೈದಿಕಗ್ರಂಥಗಳ ಕಾಲ ಅನುಕ್ರಮವಾಗಿ ಕ್ರಿ.ಪೂ. ೪೫೦೦ ಮತ್ತು ಕ್ರಿ.ಪೂ. ೬೦೦೦ ಎಂದು ಅಭಿಪ್ರಾಯಪಟ್ಟಿದ್ದಾರೆ.

(iv) ಮೇಲ್ಕಂಡ ಭಿನ್ನಾಭಿಪ್ರಾಯಗಳನ್ನು ಗಮನಿಸಿ ವಿಂಟರ್‌ನಿಟ್ಸ್ ವೈದಿಕ ಸಾಹಿತ್ಯದ ವೈಪುಲ್ಯ, ಅಲ್ಲಿ ಕಾಣುವಂತೆ ಅನೇಕ ಶತಮಾನಗಳ ಪರ್ಯಂತ ವ್ಯಾಪಿಸುವ ಗ್ರಂಥಕರ್ತೃ ಇತ್ಯಾದಿ ಪರಂಪರೆ—ಮುಂತಾದ ಆಂತರಿಕ ಆಧಾರಗಳ ಮೇಲೆ ವೇದದ ಪ್ರಾರಂಭಕಾಲ ಕ್ರಿ.ಪೂ. ಸು. ೨೦೦೦ ಅಥವಾ ೨೫೦೦ ಎಂದೂ ಸಮಾಪ್ತಿ ಕಾಲ ಕ್ರಿ.ಪೂ. ಸು. ೭೫೦ರಿಂದ ಕ್ರಿ.ಪೂ. ೫೦೦ರ ಮಧ್ಯೆ ಎಂದೂ ಹೇಳಿದ್ದಾರೆ.

ಪ್ರಾರಂಭ ಕಾಲ ಕ್ರಿ.ಪೂ. ಸು. ೨೦೦೦ವೆಂಬ ಮತ ಗಮನಾರ್ಹವಾಗಿದ್ದು, ಇಲ್ಲಿ ಅದನ್ನು ಸಂದರ್ಭೋಚಿತವಾಗಿ ಅನುಸರಿಸಲಾಗಿದೆ.

## ವೈದಿಕವಾಙ್ಮಯ ಯುಗ (ಕ್ರಿ.ಪೂ. ಸು. ೨೦೦೦–ಕ್ರಿ.ಪೂ. ೪೦೦)

ಕ್ರಿ.ಪೂ. ಸು. ೨೦೦೦ದಲ್ಲಿ ಋಗ್ವೇದದಿಂದ ಪ್ರಾರಂಭವಾಗುವ ಸಂಸ್ಕೃತ ಭಾಷಾ ಸಾಹಿತ್ಯಗಳ ಚರಿತ್ರೆಯನ್ನು ವೈದಿಕವಾಙ್ಮಯ ಯುಗ, ಇತಿಹಾಸ ಪುರಾಣಗಳ ಯುಗ, ಕಾವ್ಯಸ್ಥ ಸಂಸ್ಕೃತಯುಗ ಎಂಬುದಾಗಿ ಕಾಲದೃಷ್ಟಿಯಿಂದ ವಿಂಗಡಿಸಲಾಗಿದೆ. ಸಂಸ್ಕೃತ ಭಾಷೆಯ ಸ್ವರೂಪ, ಸ್ಥಿತಿಗತಿಗಳು—ಇವಕ್ಕನುಗುಣವಾಗಿ ಅದನ್ನು ವೇದಗಳ ಸಂಸ್ಕೃತ, ಇತಿಹಾಸ ಪುರಾಣಗಳ ಸಂಸ್ಕೃತ, ಕಾವ್ಯಸಂಸ್ಕೃತ—ಎಂದು ಅನುಕ್ರಮವಾಗಿ ಸೂಚಿಸಲು ಅವಕಾಶವಾಗಿದೆ.

ಈ ಯುಗದಲ್ಲಿ ಪ್ರಧಾನವಾಗಿ ಕಂಡುಬರುವ ಹಲವು ಗ್ರಂಥಗಳಿಗೆ ಒಟ್ಟಾಗಿ 'ವೇದ' ಎಂಬ ಹೆಸರು ಬಂದಿದೆ; ಈ ಶಬ್ದ ವಿದ್=ತಿಳಿ ಎಂಬ ಧಾತುವಿನಿಂದ ನಿಷ್ಪನ್ನವಾಗಿ, ಆ ಯುಗದ ಹಲವು ಜ್ಞಾನಪ್ರದ ಗ್ರಂಥಗಳು 'ವೇದ' ಎನಿಸಿಕೊಂಡಿವೆ. ವೇದಭಾಷ್ಯಕಾರರಾದ ಸಾಯಣಾಚಾರ್ಯರ ಮತದಲ್ಲಿ, ಮಂತ್ರಬ್ರಾಹ್ಮಣಗಳ ಸಮುದಾಯವೇ 'ವೇದ'.[31] ಅಂತಹ 'ವೇದ' ಗ್ರಂಥಗಳನ್ನು ಅವುಗಳ ಸ್ವರೂಪದ ಆಧಾರದ ಮೇಲೆ ಸಂಹಿತೆಗಳು, ಬ್ರಾಹ್ಮಣಗಳು, ಆರಣ್ಯಕಗಳು ಮತ್ತು ಉಪನಿಷತ್ತುಗಳು ಎಂದು ವಿಭಾಗಿಸಿದೆ. ಅಲ್ಲದೆ, ಕ್ರಿ.ಪೂ. ಸು. ೬೦೦ರ ಅನಂತರ ಬಂದ, ಸಾಮಾನ್ಯವಾಗಿ ಸೂತ್ರರೂಪದಲ್ಲಿರುವ, ವೇದಾಂಗಗಳನ್ನೂ ವೈದಿಕವಾಙ್ಮಯ ಯುಗಕ್ಕೇ ಸೇರಿಸುವ ಪರಿಪಾಠಿಯಿದೆ. ಸಂಪ್ರದಾಯದಲ್ಲಿ ಸಂಹಿತೆಗಳು, ಬ್ರಾಹ್ಮಣಗಳು, ಆರಣ್ಯಕ, ಉಪನಿಷತ್ತುಗಳು—ಇವನ್ನು 'ಶ್ರುತಿ'ಗಳೆಂದೂ ವೇದಾಂಗಗಳನ್ನು ಸಾಮಾನ್ಯವಾಗಿ 'ಸ್ಮೃತಿ'ಗಳೆಂದೂ ಕರೆದಿದೆ. 'ಶ್ರುತಿ'ಗಳಲ್ಲಿಯ ಮಂತ್ರಗಳು ಮತ್ತು ಬ್ರಾಹ್ಮಣಗಳು ಋಷಿ

ಗಳಿಂದ ಶ್ರುತವಾದ ಪ್ರಮಾಣೀಕೃತವಾದ ಅಪೌರುಷೇಯ ಹಾಗೂ ನಿತ್ಯರಚನೆಗಳೆಂಬುದು ಸಂಪ್ರದಾಯಸಿದ್ಧವಾದ ವಿಚಾರ. ಹೀಗೆಯೇ ವೇದಾಂಗಾದಿ ಸೂತ್ರಗ್ರಂಥಗಳಾದರೋ ವೇದವಿಷಯಗಳ ಸ್ಮರಣರೂಪದಲ್ಲಿದ್ದು, ಋಷಿಪ್ರಣೀತ, ಪೌರುಷೇಯ ಎನ್ನಿಸಿವೆ.[33] ಆಶ್ವಲಾಯನ ಮುಂತಾದವರಿಂದ ವಿರಚಿತ ಸೂತ್ರಗ್ರಂಥಗಳೂ ಮನು ಯಾಜ್ಞವಲ್ಕ್ಯಾದಿಗಳ ಶ್ಲೋಕರೂಪದ ಧರ್ಮಶಾಸ್ತ್ರಗ್ರಂಥಗಳೂ 'ಸ್ಮೃತಿ'ಗಳಲ್ಲಿ ಸೇರಿಸಲ್ಪಟ್ಟಿವೆ. ಈಗ ಇವುಗಳಲ್ಲಿ ಒಂದೊಂದನ್ನೂ ಸ್ವಲ್ಪಮಟ್ಟಿಗೆ ಪರಿಶೀಲಿಸೋಣ :

ಸಂಹಿತೆಗಳು (ಕ್ರಿ.ಪೂ. ಸು. ೧೨೦೦-ಕ್ರಿ.ಪೂ. ೮೦೦) : ಕ್ರಿ.ಪೂ. ಸು. ೨೦೦೦ದಿಂದ ಪ್ರಚಲಿತವಾಗಿದ್ದ ದೇವತಾಸ್ತೋತ್ರಗಳು, ಆಭಿಚಾರಿಕ ಮಂತ್ರಗಳು ಮತ್ತು ಯಜ್ಞಕ್ಕೆ ಸಂಬಂಧಪಟ್ಟ ಯಜುಸ್ಸುಗಳು—ಇವುಗಳ ಸಂಕಲನಗಳೇ ವೇದಸಂಹಿತೆಗಳೆನಿಸಿಕೊಂಡಿವೆ; ಋಗ್ವೇದಸಂಹಿತೆ, ಅಥರ್ವವೇದಸಂಹಿತೆ, ಸಾಮವೇದಸಂಹಿತೆ, ಯಜುರ್ವೇದಸಂಹಿತೆ ಎಂದು ಅವು ನಾಲ್ಕು. ಅವುಗಳ ಮೂಲಭೂತ ಅಂಶಗಳಾಗಿರುವ ಋಕ್ಕುಗಳು, ಆಭಿಚಾರಿಕರಚನೆಗಳು, ಗಾನರೂಪದ ಸಾಮಗಳು, ಗದ್ಯರೂಪದ ಯಜುಸ್ಸುಗಳು, ಸಾಮಾನ್ಯವಾಗಿ 'ಮಂತ್ರ'ಗಳೆಂದು ಕರೆಯಲ್ಪಟ್ಟಿವೆ. ವೇದದ ಯಾವ ಮಂತ್ರವಾಗಲಿ, ಅದಕ್ಕೆ ಋಷಿ, ದೇವತೆ, ಛಂದಸ್ಸುಗಳಿದ್ದು, ಆ ಮೂರನ್ನೂ ಮೊದಲು ಹೇಳಿ, ಅನಂತರ ಮಂತ್ರವನ್ನು ಪಠಿಸಬೇಕೆಂಬ ನಿಯಮವಿದೆ. ವೇದದ ಸಂರಕ್ಷಣೆ ಮತ್ತು ವೇದವಿಹಿತ ಕರ್ಮಾಚರಣೆ—ಇವುಗಳ ದೃಷ್ಟಿಯಿಂದ ಮೇಲ್ಕಂಡ ಸಂಹಿತೆಗಳ ರಚನೆಯಾಗಿದೆಯೆಂದು ಹೇಳಬಹುದು. ಆ ನಾಲ್ಕು ಸಂಹಿತೆಗಳಲ್ಲಿ, ವಿಶೇಷವಾಗಿ, ಋಗ್ವೇದ ಅಥರ್ವವೇದಗಳ ಸಂಕಲನವು ಸಾಹಿತ್ಯದೃಷ್ಟಿಯಿಂದ ಆಗಿರತಕ್ಕದ್ದೆಂದೂ ಸಾಮವೇದ ಯಜುರ್ವೇದಗಳ ಸಂಕಲನ ಕೇವಲ ವೇದವಿಹಿತ ಕರ್ಮಾಚರಣೆಯ ದೃಷ್ಟಿಯಿಂದ ಅನುಕ್ರಮವಾಗಿ ಉದ್ಗಾತೃ, ಅಧ್ವರ್ಯು ಎಂಬ ಋತ್ವಿಜರ ಉಪಯೋಗಕ್ಕೋಸ್ಕರ ಆಗಿದೆಯೆಂದೂ ವಿದ್ವಾಂಸರ ಮತ.

ನಾಲ್ಕು ಸಂಹಿತೆಗಳನ್ನೂ ಗಮನಿಸಿ, ವೇದಗಳು ನಾಲ್ಕೆಂಬ ವಿಚಾರ ರೂಢವಾಗಿದೆ. ಒಂದೊಂದು ವೇದಕ್ಕೂ ಬೇರೆ ಬೇರೆ ಬ್ರಾಹ್ಮಣಗಳು, ಆರಣ್ಯಕಗಳು ಮತ್ತು ಉಪನಿಷತ್ತುಗಳು ಸೇರಿವೆ. ಒಟ್ಟಾಗಿ ಇವೆಲ್ಲವೂ ಸಂಪ್ರದಾಯದಲ್ಲಿ 'ಶ್ರುತಿ' ಎನಿಸಿಕೊಂಡಿವೆ. ಈ ನಾಲ್ಕು ವೇದಗಳಲ್ಲಿ ಒಂದಾದ ಋಗ್ವೇದ ಪ್ರಾಚೀನತಮವೆಂದು ಹಿಂದೆ ಸೂಚಿಸಿದೆ. ಉಳಿದ ಮೂರು ವೇದಗಳಲ್ಲಿ ಅನೇಕ ಋಗ್ವೇದ ಮಂತ್ರಗಳು ಕಂಡುಬರುತ್ತವೆ. ಯಜುರ್ವೇದವು ಕೃಷ್ಣಯಜುರ್ವೇದ, ಶುಕ್ಲಯಜುರ್ವೇದ ಎಂದು ಕ್ರಮವಾಗಿ ಎರಡು ಸಂಹಿತಾರೂಪಗಳಲ್ಲಿ ಉಪಲಬ್ಧವಾಗಿದೆ ; ಮೂಲತಃ ಒಂದೇ ಆಗಿರುವ ಯಜುರ್ವೇದವು ಮಂತ್ರಗಳು ಮತ್ತು ಋತ್ವಿಜವ್ಯಾಖ್ಯಾನಾತ್ಮಕ, ಬ್ರಾಹ್ಮಣ ಭಾಗಗಳಿಂದ ಕೃಷ್ಣಯಜುರ್ವೇದ ಹಾಗೂ ಕೇವಲ ಮಂತ್ರಗಳುಳ್ಳದ್ದಾಗಿ ಶುಕ್ಲಯಜುರ್ವೇದ ಎಂದು ಸೀಳುಗೊಂಡಿದೆಯಲ್ಲದೆ, 'ವಾಜಸನೇಯಿ ಸಂಹಿತೆ' ಎಂಬ ಮತ್ತೊಂದು ಹೆಸರಿನಿಂದಲೂ ವಿದಿತವಾಗಿದೆ. ನಾಲ್ಕು ವೇದಸಂಹಿತೆಗಳಲ್ಲಿ ಒಂದೊಂದಕ್ಕೂ ಹಲವಾರು ಶಾಖೆಗಳಿವೆ.

ಪ್ರಾಯಃ ಗುರುಪರಂಪರೆಯಲ್ಲಿ ವ್ಯತ್ಯಾಸಗಳು ಸಂಭವಿಸಿದ್ದರಿಂದ ಉಂಟಾದ ಆಯಾ ಪಾಠಾಂತರಗಳು ಶಾಖಾಭೇದಕ್ಕೆ ಕಾರಣಗಳಾಗಿರಬೇಕು. ಹೀಗೆ ಋಗ್ವೇದದಲ್ಲಿ ೨೧, ಅಥರ್ವವೇದದಲ್ಲಿ ೯, ಸಾಮವೇದದಲ್ಲಿ ೧೦೦೦, ಕೃಷ್ಣಯಜುರ್ವೇದದಲ್ಲಿ ೮೬, ಶುಕ್ಲಯಜುರ್ವೇದದಲ್ಲಿ ೧೫ ಶಾಖೆಗಳಿವೆಯೆಂದು ಸಂಪ್ರದಾಯದ ಪ್ರಕಾರ ತಿಳಿದು ಬಂದಿದೆ. ಅವುಗಳಲ್ಲಿ ಕೆಲವು ಮಾತ್ರ ರೂಢಿಯಲ್ಲಿವೆ; ಕೆಲವುಗಳ ಹೆಸರುಗಳು ಮಾತ್ರ ತಿಳಿದು ಬಂದಿವೆ; ಮತ್ತೆ ಕೆಲವುಗಳ ಹೆಸರುಗಳೂ ತಿಳಿದು ಬಂದಿಲ್ಲ.

ವೇದಗಳ ಪಾವಿತ್ರ್ಯ ಮತ್ತು ಸರ್ವತೋಮುಖರಕ್ಷಣೆ—ಇವುಗಳ ದೃಷ್ಟಿಯಿಂದ ಮೇಲ್ಕಂಡ ಸಂಹಿತೆಗಳಿಗೆ ವಿವಿಧ ಪದವಿಭಾಗಗಳು ಪ್ರಾಚೀನಕಾಲದಲ್ಲೇ ರಚಿತವಾಗಿವೆ. ಸಂಹಿತಾಪಾಠದಲ್ಲಿರುವ ಪದಗಳನ್ನು ಪರಸ್ಪರ ಬೇರ್ಪಡಿಸಿ ಹೇಳುವ 'ಪದಪಾಠ' ಅಂತಹ ಪದವಿಭಾಗಗಳಲ್ಲಿ ಮೊದಲನೆಯ ಕ್ರಮವಾಗಿದೆ. ಆ ಪಾಠ ಸಂಹಿತೆಗಳಲ್ಲಿನ ಪ್ರಕೃತಿ ಪ್ರತ್ಯಯಗಳನ್ನೂ ಸಮಾಸಗಳನ್ನೂ ತನ್ಮೂಲಕ ಅರ್ಥವನ್ನೂ ಯಥಾವತ್ತಾಗಿ ತಿಳಿಯಲು ಸಹಾಯಮಾಡಿದೆ. ಆಯಾ ವೇದದ ಪದಪಾಠಕಾರರ ಹೆಸರುಗಳನ್ನೂ ಸಂಪ್ರದಾಯ ತಿಳಿಸುತ್ತದೆ. ವೇದಗಳಲ್ಲಿನ ಎಲ್ಲ ಶಬ್ದಗಳ ರಕ್ಷಣೆ, ಉಚ್ಚಾರಣೆ ಇತ್ಯಾದಿ ಪ್ರಯೋಜನ ಪದಪಾಠದಿಂದ ಲಭಿಸಿರುವುದೇನೋ ನಿಜ; ಪದವಿಭಾಗಕ್ರಮಗಳನ್ನು ಇನ್ನೂ ಅತಿಶಯಗೊಳಿಸಿ, ವೇದಸಂರಕ್ಷಣ ಪ್ರಯತ್ನದಲ್ಲಿ ಸಂಪೂರ್ಣಫಲಕ್ಕೋಸ್ಕರ ಸಂಹಿತಾಪಾಠ ಪದಪಾಠಗಳ ಜೊತೆಗೆ 'ಕ್ರಮಪಾಠ'ವೆಂಬುದೂ ಸೇರಿಬಂದಿದೆ. ಅಷ್ಟೇ ಅಲ್ಲದೆ ಜಟಾ, ಮಾಲಾ, ಶಿಖಾ, ರೇಖಾ, ಧ್ವಜ, ದಂಡ, ರಥ, ಘನ—ಎಂಬ ಎಂಟು ಪಾಠಗಳೂ ಸಂಪ್ರದಾಯದಲ್ಲಿ ವಿದಿತವಾಗಿವೆ. ಆದರೆ ಸಂಹಿತಾ, ಪದ, ಕ್ರಮ, ಜಟಾ, ಘನ—ಇವು ಮಾತ್ರ ಹೆಚ್ಚಾಗಿ ರೂಢಿಯಲ್ಲಿರತಕ್ಕವು.

ವೇದಗಳಲ್ಲಿನ ಶಬ್ದಾದಿಗಳ ರಕ್ಷಣೆ, ವೇದಾರ್ಥಜ್ಞಾನ ಇವಕ್ಕೋಸ್ಕರ ಮೇಲ್ಕಂಡ ಪಾಠಗಳು ರಚಿತವಾದವೆಂದು ಹೇಳಬಹುದು. ವೇದಾರ್ಥವಿವರಣೆಯ ಆವಶ್ಯಕತೆ ಕಂಡುಬಂದಂತೆಲ್ಲ ಪುರಾತನ ಕಾಲದಿಂದಲೂ ಪದಾದಿಪಾಠಗಳನ್ನು ಮಾತ್ರವಲ್ಲದೆ ವೇದ ಭಾಷ್ಯಗಳನ್ನು ರಚಿಸಿರುವ ಪರಂಪರೆಯೂ ಸಾಂಪ್ರದಾಯಿಕ ವೇದಾಧ್ಯಯನದಲ್ಲಿ ಕಂಡುಬಂದಿದೆ. ಅರ್ಥವಿವರಣೆಯ ಪ್ರಯತ್ನಗಳು ಆಧುನಿಕ ಕಾಲದಲ್ಲೂ ಸಾಕಷ್ಟು ಪರಿಣಾಮಕಾರಿಯಾಗಿ ನಡೆದಿದೆ. ಸಾಂಪ್ರದಾಯಿಕ ವಿವರಣೆಗಳಿಗೆ ಸಂಬಂಧಪಟ್ಟಂತೆ ಕ್ರಮೇಣ ಬಂದ ವೇದಾಂಗಗಳೂ ಅನಂತರ ಸ್ಕಂದಸ್ವಾಮಿ, ವೆಂಕಟಮಾಧವ, ಸಾಯಣ, ಮಹೀಧರ ಮುಂತಾದವರ ಭಾಷ್ಯಗಳೂ ಪ್ರಮುಖವಾಗಿವೆ. ಈ ಭಾಷ್ಯಕಾರ ರಲ್ಲಿ ಸಾಯಣರಿಗೆ ವಿಶಿಷ್ಟ ಸ್ಥಾನವಿದೆ. ಕ್ರಿ.ಶ. ೧೪ನೆಯ ಶತಮಾನದವರೆಂದು ಹೇಳ ಲಾಗಿರುವ ಅವರು ಚತುರ್ವೇದಗಳಿಗೂ ಅನೇಕ ಬ್ರಾಹ್ಮಣಗಳಿಗೂ ಭಾಷ್ಯಗಳನ್ನು ಬರೆದು ತಮ್ಮ ಅಸಾಧಾರಣ ಪಾಂಡಿತ್ಯ ಪ್ರತಿಭೆಗಳನ್ನು ತೋರಿಸಿದ್ದಾರೆ.

ವೇದದಲ್ಲಿ ಯಜ್ಞಯಾಗದಿ ಕರ್ಮಾಚರಣೆಯೂ ತತ್ತ್ವಜ್ಞಾನದ ವಿಚಾರವೂ ಪ್ರತಿಪಾದಿತವಾಗಿವೆ. ಕರ್ಮಾಚರಣೆಗೆ ಸಂಬಂಧಪಟ್ಟ ವಿಷಯಗಳು ಪ್ರಧಾನವಾಗಿರುವ

ಸಂಹಿತೆ ಬ್ರಾಹ್ಮಣ ಆರಣ್ಯಕಗಳನ್ನು ಕರ್ಮಕಾಂಡವೆಂದೂ ವಿಶೇಷವಾಗಿ ತತ್ತ್ವ ಜ್ಞಾನವನ್ನು ಬೋಧಿಸುವ ಉಪನಿಷತ್ತುಗಳನ್ನು ಜ್ಞಾನಕಾಂಡವೆಂದೂ ಸ್ಥೂಲವಾಗಿ ವಿಂಗಡಿಸಿರುವುದುಂಟು. ವೇದದ ಕೆಲವು ಭಾಗಗಳು ಸಂದರ್ಭೋಚಿತವಾಗಿ ವಿಹಿತ ಕರ್ಮಾಚರಣೆಗಳ ಪ್ರಸ್ತಾಪವನ್ನೂ ಮತ್ತೆ ಕೆಲವು ಭಾಗಗಳು ಮೋಕ್ಷ ಮತ್ತು ಅದಕ್ಕೆ ಸಾಧಕವಾದ ಜ್ಞಾನಮಾರ್ಗದ ನಿರೂಪಣೆಯನ್ನೂ ಮಾಡಿರುವುದರಿಂದ ಮೇಲ್ಕಂಡ ವಿಂಗಡಣೆ ರೂಢಿಗೆ ಬಂದಿತೆಂದು ಹೇಳಬಹುದು. ಚತುರ್ವೇದಗಳೂ ಕ್ರಮೇಣ ವಿಹಿತ ಕರ್ಮಗಳಿಗೆ ಮತ್ತು ಅವುಗಳ ಆಚರಣೆಗೆ ಸಹಾಯಕರಾದ ಋತ್ವಿಜರಿಗೆ ವಿಶೇಷತಃ ಅನ್ವಯಿಸುವಂತಾಗಿ, ಋಗ್ವೇದವು ಹೋತೃ ಎಂಬ ಋತ್ವಿಜನ ಉಪಯೋಗಕ್ಕೂ ಸಾಮವೇದ, ಯಜುರ್ವೇದ, ಅಥರ್ವವೇದಗಳು ಅನುಕ್ರಮವಾಗಿ ಉದ್ಗಾತೃ, ಅಧ್ವರ್ಯು, ಬ್ರಹ್ಮ ಎಂಬ ಋತ್ವಿಜರ ಉಪಯೋಗಕ್ಕೂ ಇರುವ ಗ್ರಂಥಗಳೆಂಬ ವ್ಯವಸ್ಥೆಯನ್ನು ಸಂಪ್ರದಾಯದಲ್ಲಿ ಕಾಣಬಹುದು. 'ಬ್ರಹ್ಮ'ನಿಗೆ ಎಲ್ಲ ವೇದಗಳ ಪರಿಚಯವಿದ್ದು, ಅವನು ಯಜ್ಞಕರ್ಮಗಳ ಮೇಲ್ವಿಚಾರಕನೆಂದು ಕೆಲವರ ಅಭಿಪ್ರಾಯವಾದರೆ, ಮತ್ತೆ ಕೆಲವರು ಅವನು ಅಥರ್ವವೇದಕ್ಕೆ ಸಂಬಂಧಪಟ್ಟ ಋತ್ವಿಜನೆಂದು ಹೇಳುತ್ತಾರೆ. ಒಟ್ಟಿನಲ್ಲಿ ನಾಲ್ಕು ವೇದಸಂಹಿತೆಗಳೂ ಚಾರಿತ್ರಿಕ, ಧಾರ್ಮಿಕ, ಆಧ್ಯಾತ್ಮಿಕ ಇತ್ಯಾದಿ ದೃಷ್ಟಿಗಳಲ್ಲಿ ನಾನಾ ಕಾರಣಗಳಿಂದ ಮಹತ್ತ್ವ ಪಡೆದಿವೆ. ಅವುಗಳಲ್ಲಿ ಒಂದೊಂದು ಸಂಹಿತೆಯ ವೈಶಿಷ್ಟ್ಯವನ್ನೂ ಇಲ್ಲಿ ಸ್ಥೂಲವಾಗಿ ಗಮನಿಸಬಹುದು.

ಋಗ್ವೇದ ಸಂಹಿತೆ: ಇದು ಸಂಸ್ಕೃತ ಹಾಗೂ ಉಳಿದ ಇಂಡೊ-ಯೂರೋಪಿಯನ್ ಸಾಹಿತ್ಯದಲ್ಲಿ ಪ್ರಾಚೀನತಮ ಗ್ರಂಥವೆನಿಸಿಕೊಂಡಿದೆ. ಸಾಮಾನ್ಯವಾಗಿ ಪ್ರಕೃತಿಯ ನಾನಾ ಸ್ವರೂಪಗಳ ಆಧಾರದ ಮೇಲೆ ಆಕಾರಗೊಂಡ ವಿವಿಧ ದೇವತೆಗಳನ್ನು ಕುರಿತ ಸ್ತೋತ್ರ ಇಲ್ಲಿ ಛಂದೋಬದ್ಧ ಋಕ್ಕುಗಳ ರೂಪದಲ್ಲಿ ಕಂಡುಬಂದಿದೆ. ಋಕ್ಕುಗಳನ್ನೊಳಗೊಂಡಿರುವುದರಿಂದ 'ಋಗ್ವೇದ'ವಾಗಿದೆ. ಹಲವಾರು ಋಕ್ಕುಗಳಿಂದ ಕೂಡಿರುವ ಅನೇಕ ಗುಂಪುಗಳಲ್ಲಿ ಒಂದೊಂದೂ 'ಸೂಕ್ತ'ವೆಂದು ಕರೆಯಲ್ಪಟ್ಟು, ಅಂತಹ ಸೂಕ್ತಗಳು ಋಗ್ವೇದದ ರಚನೆಯಲ್ಲಿ ಮುಖ್ಯವಾದ ಅಂಶಗಳಾಗಿವೆ. ಋಗ್ವೇದದಲ್ಲಿರುವ ಅಂತಹ ಸೂಕ್ತಗಳ ಒಟ್ಟು ಸಂಖ್ಯೆ ೧೦೨೮; ಅವುಗಳಲ್ಲಿ ೧೧ ಸ್ವಲ್ಪ ಕಾಲಾನಂತರ ಆ ಸಂಹಿತೆಗೆ ಸೇರಿಸಲ್ಪಟ್ಟವೆಂಬ ಕಾರಣದಿಂದ 'ಖಿಲಸೂಕ್ತ'ಗಳೆನ್ನಿಸಿಕೊಂಡಿವೆ. ಈ ಎಲ್ಲ ಸೂಕ್ತಗಳಲ್ಲಿ ಬರುವ ಋಕ್ಕುಗಳ ಸಂಖ್ಯೆ ಸು. ೧೦,೫೫೨ ಎಂದು ಹೇಳಲಾಗಿದೆ. ಒಟ್ಟು ಋಗ್ವೇದವನ್ನು ೧೦ ಮಂಡಲಗಳಾಗಿಯೂ ಒಂದೊಂದು ಮಂಡಲವನ್ನೂ ಗೊತ್ತಾದ ಸಂಖ್ಯೆಯಲ್ಲಿರುವ ಸೂಕ್ತಗಳಿಂದ ಕೂಡಿದ 'ಅನುವಾಕ'ಗಳನ್ನಾಗಿಯೂ ವಿಭಾಗಿಸಿದ್ದಾರೆ. ಸಾಮಾನ್ಯವಾಗಿ ಒಂದೊಂದು ಸೂಕ್ತದಲ್ಲೂ ಒಂದೊಂದು ದೇವತೆಗೆ ಉದ್ದಿಷ್ಟವಾದ ಋಕ್ಕುಗಳಿರುವುದುಂಟು; ಪ್ರಾಸಂಗಿಕವಾಗಿ ಬೇರೆ ದೇವತೆಗಳ ಉಲ್ಲೇಖವೂ ಇರಬಹುದು. ಋಗ್ವೇದದಲ್ಲಿ ವಿಶೇಷವಾಗಿ ಕಂಡುಬರುವ ದೇವತೆಗಳೆಂದರೆ ಅಗ್ನಿ, ಇಂದ್ರ, ಮರುತ್ತುಗಳು, ವಿಶ್ವೇದೇವತೆಗಳು, ಅಶ್ವಿನಿದೇವತೆಗಳು, ಪವಮಾನ ಇತ್ಯಾದಿಗಳು. ಆ

ಸಂಹಿತೆಯಲ್ಲಿ ಇಂದ್ರ, ಅಗ್ನಿ–ಇವರಿಗನ್ವಯಿಸುವ ಮಂತ್ರಗಳು ಅಧಿಕ ಸಂಖ್ಯೆಯಲ್ಲಿರುವುದನ್ನು ಕಾಣಬಹುದು.

ದೇವತೆಗಳ ಸ್ತೋತ್ರವಾಗಿರುವ ಋಗ್ವೇದ ಮಂತ್ರಗಳು ಯಜ್ಞಯಾಗಾದಿಗಳಲ್ಲಿ ವಿನಿಯೋಗದ ದೃಷ್ಟಿಯಿಂದ ಪ್ರಾಮುಖ್ಯವನ್ನು ಪಡೆದಿವೆ. ಅವಲ್ಲದೆ ಅಲ್ಲಿಯ ಲೌಕಿಕ ಆಧ್ಯಾತ್ಮಿಕವಿಚಾರಗಳನ್ನೊಳಗೊಂಡಿರುವ ಮಂತ್ರಗಳೂ ಅಮೂಲ್ಯವಾಗಿವೆ. ತ್ರಿಷ್ಟುಪ್ಪು, ಗಾಯತ್ರಿ, ಜಗತಿ ಛಂದಸ್ಸುಗಳು ಅವುಗಳ ರಚನೆಯಲ್ಲಿ ಪ್ರಧಾನವಾಗಿವೆ. ಆ ಮಂತ್ರಗಳೆಲ್ಲವೂ ಒಂದು ಕಾಲಮಾನಕ್ಕೆ ಸೇರಿದವಲ್ಲವೆಂಬುದನ್ನು ವಿದ್ವಾಂಸರು ಭಾಷೆ, ಛಂದಸ್ಸು ಮುಂತಾದವುಗಳ ಆಧಾರದ ಮೇಲೆ ತೋರಿಸಲು ಯತ್ನಿಸಿದ್ದಾರೆ. ಅದನ್ನನುಸರಿಸಿ ಆ ಮಂತ್ರಗಳಲ್ಲಿ ಕೆಲವು ಮುಂಚಿನ ರಚನೆಗಳೆಂದೂ ಮತ್ತೆ ಕೆಲವು ಅನಂತರ ಬಂದವೆಂದೂ ಅವುಗಳಲ್ಲಿ ಪರಸ್ಪರ ಕಾಲದ ಅಂತರವು ನೂರಾರು ವರ್ಷಗಳಿಗಿಂತ ಹೆಚ್ಚು ದೀರ್ಘವೆಂದೂ ಅವರು ಸೂಚಿಸಿದ್ದಾರೆ.

ಒಟ್ಟಿನಲ್ಲಿ ಪ್ರಾಚೀನತಮವಾದ ಋಗ್ವೇದಕ್ಕೂ ಮುಂದೆ ಬಂದ ಸಂಸ್ಕೃತ ಸಾಹಿತ್ಯಕ್ಕೂ ಭಾಷಾದಿ ವಿಚಾರಗಳಲ್ಲಿ ಸಾಕಷ್ಟು ಅಂತರವಿದೆ. ಆದರೂ ಭಾರತದೇಶದ ಚರಿತ್ರೆ, ಮತಧರ್ಮ, ಸಾಹಿತ್ಯ, ತತ್ತ್ವಜ್ಞಾನ, ಸಾಮಾಜಿಕ ವಿಚಾರ ಮುಂತಾದವುಗಳಲ್ಲಿನ ಪರಂಪರೆಗೆ ಋಗ್ವೇದ ಮೂಲಭೂತವೂ ಅವುಗಳ ಅಧ್ಯಯನಾದಿಗಳಿಗೆ ಆಧಾರಪ್ರಾಯವೂ ಆಗಿ ಮಹತ್ತ್ವಪಡೆದಿದೆ. ಅಲ್ಲದೆ ಅದರ ಕೆಲವು ರಚನೆಗಳಂತೂ ಕಾವ್ಯ ದೃಷ್ಟಿಯಿಂದ ಸ್ವಾರಸ್ಯಪೂರ್ಣವಾಗಿದ್ದು ಹೃದಯಂಗಮವಾಗಿವೆ. ಸೂರ್ಯ, ಪರ್ಜನ್ಯ, ಮರುತ್ತುಗಳು, ಉಷಸ್ಸು ಮುಂತಾದವನ್ನು ಕುರಿತ ಸೂಕ್ತಗಳು ಅಂತಹ ಕಾವ್ಯಗುಣವುಳ್ಳ ರಚನೆಗೆ ನಿದರ್ಶನಗಳಾಗಿವೆ.[33]

ಮುಂಚಿನ ಋಗ್ವೇದ–ಭಾಗಗಳ ಭಾಷೆ (ಕ್ರಿ.ಪೂ. ಸು. ೧೨೦೦–ಕ್ರಿ.ಪೂ. ೧೦೦೦):

ಕ್ರಿ.ಪೂ.ಸು. ೧೪೦೦ಕ್ಕಿಂತ ಮುಂಚೆ ಭಾರತದೇಶಕ್ಕೆ ಬಂದ, ಹಾಗೂ ಇರಾನಿನಲ್ಲಿ ನೆಲಸಿದ ಆರ್ಯರು ಇರಾನ್‌ ಮತ್ತು ಮೆಸೊಪೊಟೋಮಿಯದ ಕೆಲವು ಭಾಗಗಳಲ್ಲಿ ಒಟ್ಟಾಗಿದ್ದ ಕಾಲ ಕ್ರಿ.ಪೂ. ೧೪೦೦ಕ್ಕಿಂತ ಮೊದಲು; ಸುಮಾರು ಇದೇ ಕಾಲದಲ್ಲಿ ಅವರು ಪರಸ್ಪರ ಬೇರ್ಪಟ್ಟು, ಭಾರತ ದೇಶಕ್ಕೆ ಆ ಆರ್ಯರ ಒಂದು ಗುಂಪು ಬಂದಿತೆಂದು ಹೇಳಲಾಗಿದೆ. ಅಂದಿನಿಂದ (ಕ್ರಿ.ಪೂ. ಸು. ೧೪೦೦) ಸಂಸ್ಕೃತ (ಇಂಡೊ–ಆರ್ಯನ್) ಭಾಷೆಯ ಚರಿತ್ರೆ ಪ್ರಾರಂಭವಾಗುತ್ತದೆಂದು ಕೆಲವು ವಿದ್ವಾಂಸರ ಮತ.[34] ಋಗ್ವೇದ ಮತ್ತು ಇರಾನಿಯನ್ನರ ಪವಿತ್ರಗ್ರಂಥವಾದ 'ಅವೆಸ್ತ' (ಕ್ರಿ.ಪೂ. ಸು. ೮೦೦) ಇವುಗಳ ಭಾಷೆಗಳಿಗಿರುವ ಸಾಮ್ಯಗಳು ಮೇಲ್ಕಂಡ ಅಭಿಪ್ರಾಯಕ್ಕೆ ಆಧಾರವಾಗಿವೆ. ಮೊದಲ ೨೦೦ ವರ್ಷಗಳ ನಿಗೂಢಸ್ಥಿತಿಯನ್ನು ಬಿಟ್ಟು ಕ್ರಿ.ಪೂ. ಸು. ೧೨೦೦ರಿಂದ ಪ್ರಾರಂಭವಾಗುವ ಹಂತದಲ್ಲಿ ಭಾಷೆ ಪ್ರಾಚೀನತಮವಾದ ಅನೇಕ ಪ್ರಯೋಗಗಳಿಂದ ಕೂಡಿರುವ ವಿಷಯ ಗಮನಕ್ಕೆ ಬರುತ್ತದೆ. ಸ್ವರವಿನ್ಯಾಸ ಅಲ್ಲಿ ಮುಖ್ಯವಾಗಿದ್ದು, ಅದು ಅರ್ಥದ ಮತ್ತು ವ್ಯಾಕರಣ ಪ್ರಕ್ರಿಯೆಯ ಮೇಲೆ ಪ್ರಭಾವವುಳ್ಳದ್ದಾಗಿದೆ.

ಸಂಧಿಕಾರ್ಯಗಳಲ್ಲಿ ಹೆಚ್ಚಿನ ಸ್ವಾತಂತ್ರ್ಯ, ಸಮಾಸಗಳಲ್ಲಿ ಸಾಮಾನ್ಯವಾಗಿ ಎರಡೇ ಪದಗಳ ಪ್ರಯೋಗ, ವಿಭಕ್ತಿ ಹಾಗೂ ಕ್ರಿಯಾರೂಪಗಳಲ್ಲಿ ವೈವಿಧ್ಯ, ಲೇಟ್ ಲಕಾರದ ಮತ್ತು ಹೆಚ್ಚು ಸಂಖ್ಯೆಯ ಕೃದಂತ ರೂಪಗಳ ಬಳಕೆ ಮುಂತಾದುವು ಆ ಭಾಷೆಯ ಮುಖ್ಯ ಲಕ್ಷಣಗಳಾಗಿವೆ.

ಅಥರ್ವವೇದಸಂಹಿತೆ: ಇದು ಬಹುಮಟ್ಟಿಗೆ ಆಭಿಚಾರಿಕ ಮಂತ್ರಗಳ ಸಂಕಲನ. 'ಅಥರ್ವನ್' ಎಂಬ ಶಬ್ದದ ಅರ್ಥ 'ಅಗ್ನಿಪೂಜಕ' ಎಂದೂ ಅದು ಇಂಡೊ-ಯೂರೋಪಿಯನ್ ಕಾಲಕ್ಕೆ ಸೇರುವಷ್ಟು ಪ್ರಾಚೀನವೆಂದೂ ವಿದ್ವಾಂಸರ ಮತ. ಆ ಸಂಹಿತೆಗೆ 'ಅಥರ್ವಾಂಗಿರಸ', 'ಭೃಗ್ವಂಗಿರಸ', 'ಬ್ರಹ್ಮವೇದ' ಎಂಬ ಹೆಸರುಗಳೂ ಉಂಟು. ಆ ವೇದಕ್ಕೆ ಒಂಬತ್ತು ಶಾಖೆಗಳಿವೆಯೆಂದು ತಿಳಿದುಬಂದಿದೆ. ಅವುಗಳಲ್ಲಿ ಪೈಪ್ಪಲಾದ, ಶೌನಕ ಇವು ರೂಢಿಯಲ್ಲಿರತಕ್ಕವು. ಶೌನಕೀಯ ಶಾಖೆಯ ಪ್ರಕಾರ ಈ ಸಂಹಿತೆಯಲ್ಲಿ ೭೩೧ ಸೂಕ್ತಗಳನ್ನೊಳಗೊಂಡಿರುವ ೨೦ ಕಾಂಡಗಳಿವೆ; ಒಟ್ಟು ಮಂತ್ರಸಂಖ್ಯೆ ಸುಮಾರು ೬೦೦೦. ಋಗ್ವೇದದ ಅನಂತರ ಸಂಕಲಿತವಾದುದೆಂದು ಹೇಳಲಾದ ಈ ಸಂಹಿತೆ, ಭಾಷೆ ಛಂದಸ್ಸುಗಳಲ್ಲಿ ಬಹುಮಟ್ಟಿಗೆ ಋಗ್ವೇದವನ್ನೇ ಹೋಲುತ್ತದೆ. ಸಂಪ್ರದಾಯದಲ್ಲಿ ಮೊದಮೊದಲು ಋಗ್ವೇದ, ಸಾಮವೇದ, ಯಜುರ್ವೇದ— ಈ ಮೂರು ಮಾತ್ರ ವೇದದ ಗುಂಪಿಗೆ ಸೇರಿಸಲ್ಪಟ್ಟು, ಅಥರ್ವಸಂಹಿತೆ ಕಾಲಕ್ರಮೇಣ ಸೇರಿದ ವಿಚಾರ ಗಮನಾರ್ಹವಾಗಿದೆ; ಅದು ಅಭಿಚಾರಾದಿ ವಿಷಯಗಳನ್ನೊಳಗೊಂಡಿರುವುದೇ ಅಂತಹ ಸಂದರ್ಭಕ್ಕೆ ಕಾರಣವೆಂದು ಹೇಳಲಾಗಿದೆ.

ಯಕ್ಷ ರಕ್ಷರಲ್ಲಿ ನಂಬಿಕೆಗಳು, ಯಂತ್ರ ಮಂತ್ರಗಳ ಮೂಲಕ ಅಭಿಚಾರ ಇತ್ಯಾದಿ ಜನಸಾಮಾನ್ಯ ನಡವಳಿಕೆಗಳ ಬಗ್ಗೆ ಅಥರ್ವವೇದ ಅತ್ಯಮೂಲ್ಯ ಆಧಾರವಾಗಿದೆ. ರೋಗಚಿಕಿತ್ಸೆ, ದೀರ್ಘಾಯುಸ್ಸು, ಗೃಹನಿರ್ಮಾಣ, ವ್ಯವಸಾಯ, ವ್ಯಾಪಾರ, ಮಾರಣ, ಪ್ರಾಯಶ್ಚಿತ್ತಗಳು, ಸ್ತ್ರೀವಶೀಕರಣ, ಸಂಗ್ರಾಮ, ಸಭೆಯಲ್ಲಿ ಪ್ರಭಾವ, ಪಾಪಪರಿಹಾರ, ಪರಮಾತ್ಮವಿವೇಚನೆ ಮುಂತಾದವು ಅಲ್ಲಿ ಪ್ರತಿಪಾದಿತವಾಗಿರುವ ಕೆಲವು ವಿಷಯಗಳು. ಆ ವೇದದಲ್ಲಿ ದೇವತಾವಿಷಯಕ ಹಾಗೂ ಆಧ್ಯಾತ್ಮವಿಷಯಕ ಮಂತ್ರಗಳೂ ಇವೆ. ಅಂತಹ ಮಂತ್ರಗಳೂ ರೋಗ ನಿವಾರಣೆ, ಶತ್ರುನಾಶ ಮುಂತಾದ ಐಹಿಕ ಫಲದೃಷ್ಟಿಯುಳ್ಳವುಗಳಾಗಿದ್ದು, ಅವುಗಳಲ್ಲಿಯ ಗಹನ ಅಭಿಪ್ರಾಯಗಳೂ ಇಂದ್ರಜಾಲದ ಒಂದು ರಹಸ್ಯ ಪರಿಸರದಲ್ಲಿ ಸೇರಿ ಕೇವಲ ಉಪಯೋಗಕಾರಕಗಳಂತಿವೆ.[೨೮]

ಉತ್ತರಕಾಲೀನ ಋಗ್ವೇದ ಭಾಗಗಳ ಮತ್ತು ಅಥರ್ವವೇದದ ಭಾಷೆ (ಕ್ರಿ.ಪೂ. ಸು. ೧೦೦೦-ಕ್ರಿ.ಪೂ. ೭೦೦): ಭಾಷೆಯ ದೃಷ್ಟಿಯಿಂದ ಹೇಳುವುದಾದರೆ ಪ್ರಾಚೀನವಾದ ಕೆಲವು ಋತ್ವಿಜ ಸಂಬಂಧಿ ಪ್ರಯೋಗಗಳು ಈ ಕಾಲದಲ್ಲಿ ಕಡಿಮೆಯಾಗುತ್ತ ಬರುತ್ತವೆ. ಸಂಧಿಕಾರ್ಯ ಹೆಚ್ಚು ನಿಯಮಬದ್ಧವಾಗುತ್ತದೆ. ವಿಭಕ್ತಿ ಹಾಗು ಕ್ರಿಯಾರೂಪಗಳ ವೈವಿಧ್ಯ ಇಲ್ಲಿ ಅಷ್ಟಾಗಿ ತೋರಿಬರುವುದಿಲ್ಲ. ಕೆಲವು ಪ್ರಾಚೀನ ಕೃದಂತ ರೂಪಗಳು ಪ್ರಯೋಗದಲ್ಲಿ ಕಂಡುಬರುವುದಿಲ್ಲ. ಭಾಷೆಯ ಈ ಸ್ಥಿತಿಗೂ ಹಿಂದೆ ಹೇಳಿದ

ಮುಂಚಿನ ವೈದಿಕ ಭಾಷಾಸ್ಥಿತಿಗೂ ಇರತಕ್ಕ ವ್ಯತ್ಯಾಸಗಳು ಕಾಲಾಯತ್ತವೂ ಭಾಷಾ ವಿಭಾಷಾ ಸ್ವರೂಪವನ್ನವಲಂಬಿಸಿರತಕ್ಕವೂ ಆಗಿವೆಯೆಂದು ವಿದ್ವಾಂಸರ ಅಭಿಪ್ರಾಯ.

**ಸಾಮವೇದ ಸಂಹಿತೆ:** ಇದು 'ಉದಾತೃ'ವಿನ ಉಪಯೋಗಕ್ಕೆ ಸಂಕಲಿತವಾದ ಸಂಹಿತೆ. ಅದರ ಬಹುಭಾಗ ಋಗ್ವೇದದಲ್ಲಿ ಬರುವ ಮಂತ್ರಗಳಿಂದ ಕೂಡಿದೆ; ಸೋಮ ಯಾಗ ಇದರ ಪ್ರಧಾನ ವಿಷಯ. ಇದು ೧೦೦೦ ಶಾಖೆಗಳುಳ್ಳದ್ದೆಂಬ ವೈಶಿಷ್ಟ್ಯ ಪಡೆದಿದೆ. ಆದರೂ ಕೌಥುಮ ರಾಣಾಯನೀಯ ಜೈಮಿನೀಯ ಶಾಖೆಗಳು ಮಾತ್ರ ರೂಢಿ ಯಲ್ಲಿವೆ. ಕೌಥುಮ ಶಾಖೆಯ ಪ್ರಕಾರ ಇದರಲ್ಲಿ ಆರ್ಚಿಕಾ, ಉತ್ತರಾರ್ಚಿಕಾ ಎಂಬ ಎರಡು ಭಾಗಗಳಿವೆ. ಅವುಗಳಲ್ಲಿ ಕಂಡುಬರುವ ಮಂತ್ರಸಂಖ್ಯೆ ಸು. ೧೮೧೦; ಇವು ಬಹುಮಟ್ಟಿಗೆ ಗಾಯತ್ರೀ ಛಂದಸ್ಸಿನಲ್ಲಿವೆ. ಎರಡು ಭಾಗಗಳಲ್ಲೂ ಗಾನ ಮುಖ್ಯಾಂಶ. ಆ ಗಾನದ ಅಭ್ಯಾಸ ವಿಶೇಷವಾಗಿ ಮೊದಲ ಭಾಗದಿಂದ ದೊರಕುತ್ತದೆ. ಅದು ಅಲ್ಲಿರುವ ವಿವಿಧ 'ಸಾಮ' (ರಾಗ)ಯುಕ್ತ ಋಕ್ಕುಗಳ ಮೂಲಕ ಉಂಟಾಗುತ್ತದೆ. ಈ 'ಸಾಮ'ಕ್ಕೆ ಮೂಲಭೂತವಾಗಿರತಕ್ಕವು ಋಕ್ಕುಗಳು. ಅವಕ್ಕೆ 'ಯೋನಿ'ಗಳೆಂದು ಹೆಸರು. ಆ ಮೊದಲ ಭಾಗವಾದ ಆರ್ಚಿಕೆಯಲ್ಲಿರುವ ಎಲ್ಲ ಋಕ್ಕುಗಳೂ ವಿವಿಧ 'ಸಾಮ'ಗಳಿಂದ ಕೂಡಿವೆ. ಅದರಲ್ಲಿ ೬ ಪ್ರಪಾಠಕಗಳಿದ್ದು, ಒಟ್ಟು ೫೮೫ ಮಂತ್ರಗಳಿವೆ. ಉತ್ತರಾ ರ್ಚಿಕೆಯಲ್ಲಿ ೯ ಪ್ರಪಾಠಕಗಳೂ, ಸುಮಾರು ೧೨೨೫ ಮಂತ್ರಗಳೂ ಇವೆ. ಆಯಾ ಶಾಖೆಗನುಸಾರವಾಗಿ ಮಂತ್ರಸಂಖ್ಯೆಯಲ್ಲಿ ವ್ಯತ್ಯಾಸ ಕಂಡುಬಂದಿದೆ. ಸಾಮಮಂತ್ರಗಳ ಗಾನಗಳನ್ನು ಗ್ರಾಮಗೇಯ, ಆರಣ್ಯಕ, ಊಹ, ಊಹ್ಯ ಎಂದು ನಾಲ್ಕು ಬಗೆಯಾಗಿ ವಿಂಗಡಿಸಿ, ಒಂದೊಂದರಲ್ಲೂ ಅನೇಕ ಗಾನಗಳನ್ನು ಸೇರಿಸಿದ್ದಾರೆ. ಈ ಗಾನಗಳು ೧ರಿಂದ ೭ರವರೆಗೆ ಸ್ವರಚಿಹ್ನೆಗಳಿಂದ ಕೂಡಿದ್ದು ಅಧಿಕ ಸಂಖ್ಯೆಯಲ್ಲಿವೆ. ಗಾನವಿಶೇಷಗಳೆಂದರೆ ಬೃಹತ್, ರಥಂತರ ಮುಂತಾದವು.

ಪ್ರಾಚೀನ ಭಾರತದಲ್ಲಿ ವೇದವಿಹಿತ ಕರ್ಮಾಚರಣೆ ಮತ್ತು ಅದನ್ನು ಕುರಿತ ಅಧ್ಯಯನದ ದೃಷ್ಟಿಯಿಂದ ಸಾಮವೇದ ಮಹತ್ತ್ವ ಪಡೆದಿದೆ. ಅಷ್ಟೇ ಅಲ್ಲದೆ, ಅದರಲ್ಲಿ ಗಾನದ ಅಂಶವೂ ಬಹು ಮುಖ್ಯವಾಗಿರುವುದರಿಂದ, ಅದು ಭಾರತೀಯ ಸಂಗೀತಕ್ಕೆ ಆಧಾರವೆನ್ನಲಾಗಿದೆ; ಆದರೆ ಸಾಹಿತ್ಯ ದೃಷ್ಟಿಯಿಂದ ಅದರ ಉಪಯುಕ್ತತೆ ಅಲ್ಪವೆಂದು ಹೇಳಲಾಗಿದೆ.[36]

**ಯಜುರ್ವೇದ ಸಂಹಿತೆ:** ಇದು ಯಜ್ಞಗಳಲ್ಲಿ 'ಅಧ್ವರ್ಯು' ಎಂಬ ಋತ್ವಿಜನ ಉಪಯೋಗಕ್ಕೆ ಸಂಕಲಿತವಾಗಿದೆ. ಇದರಲ್ಲಿ ಮಂತ್ರ ಹಾಗು ಬ್ರಾಹ್ಮಣಗಳಿಂದ ಕೂಡಿದ 'ಕೃಷ್ಣಯಜುರ್ವೇದ' ಮತ್ತು ಕೇವಲ ಮಂತ್ರಯುಕ್ತವಾದ 'ಶುಕ್ಲಯಜುರ್ವೇದ' ಎಂಬ ಎರಡು ಸಂಹಿತೆಗಳಿವೆ; ಕಡೆಯದಕ್ಕೆ 'ವಾಜಸನೇಯಿ ಸಂಹಿತೆ' ಎಂಬ ಹೆಸರೂ ಇದೆ. ಕೃಷ್ಣಯಜುರ್ವೇದ, ಶುಕ್ಲಯಜುರ್ವೇದಕ್ಕಿಂತಲೂ ಮುಂಚಿನದೆಂದು ಹೇಳಲಾಗಿದೆ. ಕಾಠಕ, ಕಪಿಷ್ಠಲ, ಮೈತ್ರಾಯಣೀಯ, ತೈತ್ತಿರೀಯ—ಇವು ಆ ಮೊದಲನೆಯದರ ಪ್ರಮುಖ ಶಾಖೆಗಳು; ಇನ್ನೊಂದರಲ್ಲಿ ಕಾಣ್ವ, ಮಾಧ್ಯಂದಿನ ಎಂಬ ಎರಡು ಮುಖ್ಯ

ಶಾಖೆಗಳಿವೆ. ಕೃಷ್ಣಯಜುರ್ವೇದದಲ್ಲಿ ಛಂದೋಬದ್ಧವಾದ ರಚನೆಗಳಲ್ಲದೆ, ಸ್ವರಯುಕ್ತವಾದ ಯಜುಸ್ಸೆಂಬ ಗದ್ಯಭಾಗಗಳೂ ಸೇರಿವೆ; ತೈತ್ತಿರೀಯ ಶಾಖೆಯ ಪ್ರಕಾರ ಇದರಲ್ಲಿ ೭ ಕಾಂಡಗಳೂ ೪೪ ಪ್ರಪಾಠಕಗಳೂ ೬೫೧ ಅನುವಾಕಗಳೂ ಇವೆ. ಶುಕ್ಲಯಜುರ್ವೇದದಲ್ಲಿ ೪೦ ಅಧ್ಯಾಯಗಳಿವೆ; ಕಡೆಯ ಅಧ್ಯಾಯ ಪ್ರಸಿದ್ಧವಾದ 'ಈಶಾವಾಸ್ಯೋಪನಿಷತ್.'

ಯಾಗಗಳು ಮತ್ತು ಅವುಗಳ ಅನುಷ್ಠಾನ—ಇವು ಯಜುರ್ವೇದ ಸಂಹಿತೆಯ ಮುಖ್ಯ ವಿಷಯಗಳು. ದರ್ಶಪೂರ್ಣಮಾಸ, ರಾಜಸೂಯ, ಅಶ್ವಮೇಧ, ಸೋಮಯಾಗ ಮುಂತಾದವು ಇಲ್ಲಿ ವಿಶದವಾಗಿ ಪ್ರತಿಪಾದಿತವಾಗಿವೆ. ಆದ್ದರಿಂದ ಮತಧರ್ಮವಿಹಿತಕರ್ಮಾಚರಣೆಗಳ ವಿಶಿಷ್ಟ ಹಾಗೂ ಶಾಸ್ತ್ರೀಯ ಅಧ್ಯಯನದಲ್ಲಿ ಈ ಸಂಹಿತೆಯ ಪಾತ್ರ ಮಹತ್ತ್ವದ್ದಾಗಿದೆ. ಅಷ್ಟೇ ಅಲ್ಲದೆ ಅನಂತರ ಬಂದ ಭಾರತೀಯ ಮತಧರ್ಮದ ಮತ್ತು ತತ್ತ್ವಜ್ಞಾನದ ಆರಂಭ ಬೆಳೆವಣಿಗೆಗಳನ್ನು ಯಥಾಕ್ರಮವಾಗಿ ತಿಳಿಯಬೇಕಾದರೆ ಇದರ ಪರಿಚಯ ಅತ್ಯಾವಶ್ಯಕವೆಂದು ಹೇಳಬಹುದು.

## ಬ್ರಾಹ್ಮಣಗಳು, ಆರಣ್ಯಕಗಳು, ಉಪನಿಷತ್ತುಗಳು
## (ಕ್ರಿ.ಪೂ. ಸು. ೮೦೦–ಕ್ರಿ.ಪೂ. ೬೦೦)

ಬ್ರಾಹ್ಮಣಗಳು: ಯಜ್ಞಯಾಗಾದಿ ಕರ್ಮಗಳ ಮತ್ತು ಅವುಗಳಲ್ಲಿ ಋತ್ವಿಜರು ಉಚ್ಚರಿಸಬೇಕಾದ 'ವಿಧಿ' ರೂಪದ ಮಂತ್ರಗಳನ್ನೂ ಅವುಗಳ ವಿವರಣರೂಪದ 'ಅರ್ಥವಾದ'ಗಳನ್ನೂ ಒಳಗೊಂಡಿರುವ ಗ್ರಂಥಗಳು. ಬಹುಮಟ್ಟಿಗೆ ಗದ್ಯಮಯವಾಗಿವೆ. ಇವುಗಳಲ್ಲಿ ಸೃಷ್ಟಿಯ ವಿಚಾರವೂ ಇತಿಹಾಸ ಆಖ್ಯಾನ ಪುರಾಣರೂಪದ ಕಥಾದಿಗಳೂ ಕಂಡುಬಂದರೂ ಈ ಗ್ರಂಥಗಳ ಏಕೈಕವಿಷಯ ವೇದವಿಹಿತಕರ್ಮಗಳು, ಮತ್ತು ಅವುಗಳಲ್ಲಿನ ಪ್ರತಿಯೊಂದು ಆಚರಣೆಗೂ ಸಂಬಂಧಪಟ್ಟ ವಿವರಣೆಗಳು. ಆದ್ದರಿಂದ ಇವು ಆರ್ತ್ವಿಜ್ಯದ ವಿಚಾರದಲ್ಲೂ ಯಜ್ಞಕರ್ಮಗಳಿಗೆ ಸಂಬಂಧಪಟ್ಟಂತೆಯೂ ಪ್ರಮಾಣೀಕೃತ ಗ್ರಂಥಗಳೆನಿಸಿಕೊಂಡಿವೆ. ಬ್ರಾಹ್ಮಣಗಳಲ್ಲಿ ಮುಖ್ಯವಾದ ಕೆಲವನ್ನು ಆಯಾ ವೇದಕ್ಕೆ ಸೇರಿದಂತೆ ಇಲ್ಲಿ ಉಲ್ಲೇಖಿಸಲಾಗಿದೆ: (೧) ಋಗ್ವೇದದ ಬ್ರಾಹ್ಮಣಗಳು: (i) 'ಐತರೇಯ': ಕರ್ತೃ ಮಹಿದಾಸ ಐತರೇಯ; ೪೦ ಅಧ್ಯಾಯಗಳಿವೆ; ಅಗ್ನಿಹೋತ್ರ, ರಾಜಸೂಯ, ಸೋಮಯಾಗ, ಇವು ಮುಖ್ಯ ವಿಷಯಗಳು; (ii) 'ಕೌಷೀತಕಿ' ಅಥವಾ 'ಶಾಂಖಾಯನ': ೩೦ ಅಧ್ಯಾಯಗಳಿವೆ; ವಿಷಯದಲ್ಲಿ ಇದು ಸಾಮಾನ್ಯವಾಗಿ 'ಐತರೇಯ'ವನ್ನೇ ಹೋಲುತ್ತದೆ. (೨) ಅಥರ್ವವೇದದ ಬ್ರಾಹ್ಮಣ: 'ಗೋಪಥ ಬ್ರಾಹ್ಮಣ': ಕೆಲವು ವಿಹಿತ ಕರ್ಮಗಳು ಇದರ ವಿಷಯ; ಅಥರ್ವವೇದದ ಮತ್ತು 'ಬ್ರಹ್ಮ' ಎಂಬ ಋತ್ವಿಜನ ಪ್ರಶಂಸೆ ಇದರಲ್ಲಿ ಕಂಡುಬರುತ್ತದೆ; ಇದು ಸ್ವಲ್ಪ ಈಚಿನ ಕಾಲದ್ದೆಂದು ವಿದ್ವಾಂಸರ ಮತ. (೩) ಸಾಮವೇದದ ಬ್ರಾಹ್ಮಣಗಳು: (i) 'ತಾಂಡ್ಯ ಮಹಾಬ್ರಾಹ್ಮಣ' (ಪಂಚವಿಂಶ ಬ್ರಾಹ್ಮಣ): ಸಾಕಷ್ಟು ಪ್ರಾಚೀನ ಗ್ರಂಥ;

(ii) 'ಜೈಮಿನೀಯ ಬ್ರಾಹ್ಮಣ'—'ತಾಂಡ್ಯ'ಕ್ಕಿಂತಲೂ ಪ್ರಾಚೀನ ಮತ್ತು ವಿಹಿತ ಕರ್ಮಗಳ ದೃಷ್ಟಿಯಿಂದ ಅತಿ ಮುಖ್ಯ. (ಆ) ಯಜುರ್ವೇದದ ಬ್ರಾಹ್ಮಣಗಳು: (i) 'ತೈತ್ತಿರೀಯ': ಕೃಷ್ಣಯಜುರ್ವೇದದ ತೈತ್ತಿರೀಯ ಶಾಖೆಗೆ ಸೇರಿರುವುದಲ್ಲದೆ, ಆ ವೇದದ ಒಂದು ಅನುಬಂಧದಂತಿದೆ; (ii) 'ಶತಪಥ': ನೂರು ಅಧ್ಯಾಯಗಳುಳ್ಳ ಈ 'ಬ್ರಾಹ್ಮಣ' ಶುಕ್ಲಯಜುರ್ವೇದಕ್ಕೆ ಸೇರಿರುವ ಅತಿ ವಿಸ್ತಾರ ಗ್ರಂಥವಾಗಿರುವುದಲ್ಲದೆ ಕಡೆಯ ಭಾಗದಲ್ಲಿ ಪ್ರಸಿದ್ಧವಾದ 'ಬೃಹದಾರಣ್ಯಕೋಪನಿಷತ್' ಸಮೇತವಾಗಿದೆ.

ಯಜ್ಞಯಾಗಾದಿ ಕರ್ಮಗಳೇ ಜೀವಿತ ಸರ್ವಸ್ವವೆಂದು ಹೇಳುವ ಈ ಬ್ರಾಹ್ಮಣಗಳು ವೇದವಿಹಿತಕರ್ಮದೃಷ್ಟಿಯಿಂದ ಮಹತ್ತ್ವವನ್ನು ಪಡೆದಿವೆ. ಕರ್ಮವಿವರಣೆಯ ಸಂದರ್ಭಗಳಲ್ಲಿ ಪ್ರಾಸಂಗಿಕವಾಗಿ ಇವುಗಳಲ್ಲಿ ವಂಶಾವಳಿ ಶಬ್ದನಿಷ್ಪತ್ತಿಗಳನ್ನು ಕುರಿತ ನಿರ್ವಚನಗಳು, ಆಧ್ಯಾತ್ಮಿಕ ವಿಚಾರಗಳು, ಆಖ್ಯಾನ ಇತಿಹಾಸ ಪುರಾಣ ಮುಂತಾದವೂ ಅಲ್ಲಲ್ಲಿ ಕಂಡುಬರುತ್ತವೆ. 'ಶತಪಥ ಬ್ರಾಹ್ಮಣ'ದ ಪುರೂರವಸ್-ಉರ್ವಶೀ ಆಖ್ಯಾನವೂ 'ಐತರೇಯ ಬ್ರಾಹ್ಮಣ'ದ ಶುನಃಶೇಪಾಖ್ಯಾನವೂ ಸ್ವಾರಸ್ಯಮಯ ಉದಾಹರಣೆಗಳಾಗಿವೆ.

ಒಟ್ಟಿನಲ್ಲಿ 'ಬ್ರಾಹ್ಮಣ'ಗಳ ಗುರಿ ವಿಹಿತಕರ್ಮ ಪ್ರತಿಪಾದನೆಯಾಗಿ, ಅವು ನೀರಸವೆನಿಸಿಕೊಂಡಿದ್ದರೂ ಅಲ್ಲಲ್ಲಿ ಬರುವ ಆಖ್ಯಾನಾದಿಗಳು ಅವಕ್ಕೆ ಸ್ವಾರಸ್ಯವನ್ನು ತಂದುಕೊಟ್ಟಿವೆ. ಅಷ್ಟೇ ಅಲ್ಲದೆ ವ್ಯಾಕರಣ, ಶಿಕ್ಷ, ಜ್ಯೋತಿಷ, ತತ್ತ್ವಜ್ಞಾನ ಮುಂತಾದ ವಿಚಾರಗಳೂ ಅಲ್ಲಿ ಸೇರಿಬಂದಿರುವುದರಿಂದ ಅವುಗಳ ಪ್ರಾಮುಖ್ಯ ಹೆಚ್ಚಿದೆ. ಅಲ್ಲಿಯ ಒಂದು ವಿಶಿಷ್ಟರೂಪದ ಗದ್ಯವೂ ಆಖ್ಯಾನಾದಿಗಳೂ ಸಂಸ್ಕೃತ ಭಾಷಾ ಸಾಹಿತ್ಯಗಳ ಬೆಳೆವಣಿಗೆಯಲ್ಲಿ ಪ್ರಾಮುಖ್ಯ ಪಡೆದಿವೆ.[37]

ಆರಣ್ಯಕಗಳು: ಅರಣ್ಯದಲ್ಲಿ ಉಪದೇಶಿಸಲ್ಪಡುತ್ತಿದ್ದರಿಂದ 'ಆರಣ್ಯಕ' ಎಂಬ ಹೆಸರು ಈ ಗ್ರಂಥಗಳಿಗೆ ಬಂದಿತೆಂದು ಸಾಯಣರು ಹೇಳಿದ್ದಾರೆ.[38] ಯಜ್ಞಗಳಲ್ಲಿ ಅಂತರ್ಗತವಾಗಿರುವ ತತ್ತ್ವವಿಚಾರ ಆರಣ್ಯಕಗಳ ಮುಖ್ಯ ವಿಷಯ. ಯಜ್ಞಾನುಷ್ಠಾನಕ್ಕೆ ಬದಲಾಗಿ ಅಲ್ಲಿರುವ ತಾತ್ತ್ವಿಕ ವಿಚಾರಗಳನ್ನು ಅವು ಪ್ರತಿಪಾದಿಸುತ್ತವೆ. ಕೇವಲ ಕರ್ಮಬೋಧಕ 'ಬ್ರಾಹ್ಮಣ'ಗಳಿಗೂ ಶುದ್ಧತತ್ತ್ವಜ್ಞಾನದ್ಯೋತಕ 'ಉಪನಿಷತ್ತು'ಗಳಿಗೂ ಇವು ಮಧ್ಯಸ್ಥ ಗ್ರಂಥಗಳಾಗಿವೆಯೆಂದು ಹೇಳಬಹುದು.

'ಐತರೇಯ ಆರಣ್ಯಕ', 'ಶಾಂಖಾಯನ ಆರಣ್ಯಕ' ಇವು ಋಗ್ವೇದಕ್ಕೆ ಸೇರಿವೆ. ಅಥರ್ವವೇದಕ್ಕೆ ಸಂಬಂಧಪಟ್ಟಂತೆ ಯಾವ ಆರಣ್ಯಕವೂ ಉಪಲಬ್ಧವಿಲ್ಲ. 'ತಲವಕಾರ ಆರಣ್ಯಕ' ಸಾಮವೇದಕ್ಕೆ ಸೇರಿದೆ. 'ಕೃಷ್ಣಯಜುರ್ವೇದ'ದ ತೈತ್ತಿರೀಯ ಶಾಖೆಯಲ್ಲಿ 'ತೈತ್ತಿರೀಯ ಆರಣ್ಯಕ'ವೂ ಮೈತ್ರಾಯಣೀಯ ಶಾಖೆಯಲ್ಲಿ 'ಮೈತ್ರಾಯಣೀಯ ಆರಣ್ಯಕ'ವೂ ಪ್ರಸಿದ್ಧವಾಗಿವೆ. ಶುಕ್ಲಯಜುರ್ವೇದದ 'ಶತಪಥ ಬ್ರಾಹ್ಮಣ'ದಲ್ಲಿನ ೧೪ನೆಯ ಕಾಂಡದ ಪೂರ್ವಭಾಗ ಒಂದು ಆರಣ್ಯಕ. ಈ ಎಲ್ಲ ಗ್ರಂಥಗಳಲ್ಲಿ ಕಂಡುಬರುವ ಕರ್ಮಾಧಾರವುಳ್ಳ ತತ್ತ್ವವಿವೇಚನೆ ಮುಂದೆ ಉಪನಿಷತ್ತುಗಳ ತತ್ತ್ವಜ್ಞಾನ ನಿರೂಪಣೆಗೆ ಸಹಾಯಕವಾಗಿದ್ದು ಮುಖ್ಯವೆನಿಸಿಕೊಂಡಿದೆ.

ಉಪನಿಷತ್ತುಗಳು : ವೇದದ ಅಂತಿಮ ಭಾಗಗಳಾಗಿ 'ವೇದಾಂತ' ಎಂದು ಕರೆಯಲ್ಪಟ್ಟಿರುವ ಗ್ರಂಥಗಳು. ವೇದದ ಸಾರಭೂತವಾಗಿರುವ ತತ್ತ್ವಜ್ಞಾನಬೋಧನೆ ಸಾಕ್ಷಾತ್ಕಾರಗಳ ಸಾಧನಗಳಾಗಿ ವೇದದ ಗುರಿಯೆಂಬ ವೈಶಿಷ್ಟ್ಯವನ್ನೂ ಪಡೆದಿವೆ.[39] ಸಾಮಾನ್ಯವಾಗಿ ಎಲ್ಲ ಸಂಹಿತೆಗಳಿಗೂ ಬ್ರಾಹ್ಮಣಗಳೂ ಆರಣ್ಯಕಗಳೂ ಸೇರಿರುವಂತೆ ಉಪನಿಷತ್ತುಗಳೂ ಸೇರಿವೆ.

ಉಪನಿಷತ್ತುಗಳ ಸಂಖ್ಯೆಯ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿವೆ. ಮುಕ್ತಿಕೋಪನಿಷತ್ತಿನಲ್ಲಿ ಋಗ್ವೇದದ ೧೦, ಅಥರ್ವವೇದದ ೩೧, ಸಾಮವೇದದ ೧೬, ಕೃಷ್ಣ ಯಜುರ್ವೇದದ ೩೨, ಶುಕ್ಲಯಜುರ್ವೇದದ ೧೯—ಹೀಗೆ ಒಟ್ಟು ೧೦೮ ಉಪನಿಷತ್ತುಗಳ ಹೆಸರಿದೆ. ಉಪಲಬ್ಧವಾಗಿರುವ ಉಪನಿಷತ್ತುಗಳಲ್ಲಿ ಕೆಲವು ಮಾತ್ರ ಅತಿ ಪ್ರಾಚೀನವೂ ಮಹತ್ತ್ವಪೂರ್ಣವೂ ಆಗಿವೆಯೆಂದು ಅಂಗೀಕರಿಸಲಾಗಿದೆ. ಈಶ, ಕೇನ, ಕಠ, ಮುಂಡಕ, ಮಾಂಡೂಕ್ಯ, ತೈತ್ತಿರೀಯ, ಐತರೇಯ, ಛಾಂದೋಗ್ಯ, ಬೃಹದಾರಣ್ಯಕ—ಇವು ಪ್ರಾಚೀನವಾದ ದಶೋಪನಿಷತ್ತುಗಳೆಂದು ಪ್ರಸಿದ್ಧವಾಗಿವೆ. ಕೌಷೀತಕಿ, ಶ್ವೇತಾಶ್ವತರ, ಮೈತ್ರಾಯಣೀಯ, ಮಹಾನಾರಾಯಣ—ಇವೂ ರೂಢಿಯಲ್ಲಿ ಪ್ರಸಿದ್ಧವಾದ ಉಪನಿಷತ್ತುಗಳ ಗುಂಪಿಗೇ ಸೇರಿವೆ.

ಐತರೇಯ, ಕೌಷೀತಕಿ ಇವು ಋಗ್ವೇದದ ಉಪನಿಷತ್ತುಗಳು. ಮುಂಡಕ, ಮಾಂಡೂಕ್ಯ ಪ್ರಶ್ನಗಳು ಅಥರ್ವವೇದಕ್ಕೆ ಸೇರಿವೆ. ಕೇನ ಛಾಂದೋಗ್ಯೋಪನಿಷತ್ತುಗಳು ಸಾಮವೇದಕ್ಕೆ ಸಂಬಂಧಪಟ್ಟಿವೆ. ತೈತ್ತಿರೀಯ, ಕಠ ಮತ್ತು ಶ್ವೇತಾಶ್ವತರ ಇವು ಕೃಷ್ಣ ಯಜುರ್ವೇದಕ್ಕೂ ಈಶ, ಬೃಹದಾರಣ್ಯಕ ಇವು ಶುಕ್ಲಯಜುರ್ವೇದಕ್ಕೂ ಸೇರಿರತಕ್ಕವು.

ವೇದಾಂತ ವಿಚಾರವನ್ನು ಪ್ರತಿಪಾದನೆ ಮಾಡತಕ್ಕವು, ಯೋಗವಿವರಣೆಯುಳ್ಳವು, ವಿಷ್ಣುವನ್ನು ಕುರಿತವು, ಶಿವನಿಗೆ ಸಂಬಂಧಪಟ್ಟವು, ಶಕ್ತಿತತ್ತ್ವಬೋಧಕಗಳು, ವೈರಾಗ್ಯ ಸಂನ್ಯಾಸ ಹಾಗೂ ಗಣಪತಿ ಮುಂತಾದ ದೇವತೆಗಳಿಗನ್ವಯಿಸತಕ್ಕವು—ಎಂದು ವಿಷಯದ ದೃಷ್ಟಿಯಿಂದ ಉಪನಿಷತ್ತುಗಳನ್ನು ಆರು ಗುಂಪುಗಳಾಗಿ ಮಾಡಿದ್ದಾರೆ[40].

ನಾಶ, ನಡೆ, ಮುಕ್ತಾಯ ಎಂಬ ಅರ್ಥವುಳ್ಳ, 'ಉಪ' ಮತ್ತು 'ನಿ' ಎಂಬ ಉಪಸರ್ಗಗಳಿಂದ ಕೂಡಿದ ಸದ್ ಧಾತು ಕ್ವಿಪ್ ಪ್ರತ್ಯಯಾಂತವಾಗಿ 'ಉಪನಿಷದ್' ಎಂಬ ರೂಪ ಬಂದಿದೆಯೆಂಬುದಾಗಿ ಶಂಕರಾಚಾರ್ಯರು ಆ ಶಬ್ದಕ್ಕೆ ಅರ್ಥ ನಿಷ್ಪತ್ತಿಗಳನ್ನು ಹೇಳಿದ್ದಾರೆ[41]; ಆ ಅರ್ಥಗಳಿಗೆ ಅನುಕ್ರಮವಾಗಿ ಸಂಸಾರಬೀಜನಾಶ, ಪರಬ್ರಹ್ಮನಲ್ಲಿಗೆ ನಡೆ, ಜನ್ಮಜರಾದಿ ಬಂಧನ ಮತ್ತು ಪುನರಾವೃತ್ತಿಗಳ ಶಿಥಿಲೀಕರಣ ಅಥವಾ ಮುಕ್ತಾಯ ಎಂಬ ವಿವರಣೆಯನ್ನು ಕೊಟ್ಟು, ಅಂತಹ ಪ್ರಯೋಜನವನ್ನು ದೊರಕಿಸಿಕೊಡುವ ವಿದ್ಯೆಯೇ 'ಉಪನಿಷದ್' ಎಂದು ಅವರು ತಿಳಿಸಿದ್ದಾರೆ. ಅಲ್ಲದೆ ಗುರುಶಿಷ್ಯರ ಏಕಾಂತದಲ್ಲಿ ಅಭ್ಯಾಸಮಾಡತಕ್ಕ ವಿದ್ಯೆಯಾಗಿ ರಹಸ್ಯವಿದ್ಯೆಯೆನಿಸಿಕೊಂಡು, ಅಂತಹ ವಿದ್ಯೆಗೂ ಅದನ್ನು ಬೋಧಿಸುವ ಗ್ರಂಥಕ್ಕೂ 'ಉಪನಿಷದ್' ಎಂಬ ಹೆಸರು ಬಂದಿದೆಯೆಂದು ಹೇಳಲಾಗಿದೆ.

ಉಪನಿಷತ್ತುಗಳು ವಿಶ್ವತತ್ತ್ವಾನ್ವೇಷಣೆಯಲ್ಲಿ ತೊಡಗಿ, ಆ ಅನ್ವೇಷಣೆಯಲ್ಲಿ ಜ್ಞಾನ ಮಾರ್ಗವನ್ನನುಸರಿಸಿ ಆ ತತ್ತ್ವ, ಜ್ಞಾನಸ್ವರೂಪವೆಂಬ ಸಿದ್ಧಾಂತಕ್ಕೆ ಬಂದಿರುವುದಲ್ಲದೆ, ಅಂತಹ ತತ್ತ್ವಸಾಕ್ಷಾತ್ಕಾರಕ್ಕೆ ಸಹಾಯಕವೂ ಆಗಿರುವ ಆಧ್ಯಾತ್ಮಿಕ ಗ್ರಂಥಗಳಾಗಿವೆ. ವಿಶ್ವಕ್ಕೆಲ್ಲ ಒಂದೇ ಮೂಲತತ್ತ್ವ ಆಧಾರಭೂತವಾಗಿದೆ ಎಂಬುದು ಇವುಗಳ ಮುಖ್ಯ ಸಿದ್ಧಾಂತ. ಬಾಹ್ಯ ಪ್ರಪಂಚದ ತತ್ತ್ವವನ್ನೂ ಮನುಷ್ಯನ ಆಂತರಿಕತತ್ತ್ವವನ್ನೂ ಪರಿಶೀಲಿಸಿ ಅವನ್ನು ಅನುಕ್ರಮವಾಗಿ ಬ್ರಹ್ಮ, ಆತ್ಮ ಎಂದು ಕರೆದು ಇವೆರಡರ ಐಕ್ಯವೇ ವಿಶ್ವದ ಒಂದೇ ಒಂದು ಮೂಲತತ್ತ್ವವೆಂದು ಇವು ತಿಳಿಸುತ್ತವೆ.[42] ಆ ಶಬ್ದಗಳು ಮೇಲ್ಕಂಡಂತೆ ಬೇರೆ ಬೇರೆ ಅರ್ಥವುಳ್ಳವುಗಳಾಗಿ ಉಪನಿಷತ್ತುಗಳಲ್ಲಿ ಅಲ್ಲಲ್ಲೇ ಪ್ರಯೋಗಿಸಲ್ಪಟ್ಟಿದ್ದರೂ, ವಿಶ್ವತತ್ತ್ವವೆಂಬ ಒಂದೇ ಅರ್ಥವನ್ನು ಕೊಡುವಂತೆ ಅವುಗಳ ಪ್ರಯೋಗ ಇಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಆದ್ದರಿಂದ 'ಬ್ರಹ್ಮ', 'ಆತ್ಮ' ಎಂದರೆ ವಿಶ್ವತತ್ತ್ವವೆಂದೂ ಅದರ ವಿಚಾರ ಉಪನಿಷತ್ತುಗಳಲ್ಲಿ ಪ್ರಧಾನವಾಗಿದೆಯೆಂದೂ ಹೇಳಬಹುದು.

ಅಂತಹ ತತ್ತ್ವದ ಪ್ರತಿಪಾದನೆಯ ಮತ್ತು ಅದರ ಸಾಕ್ಷಾತ್ಕಾರದ ವಿಚಾರವನ್ನೊಳಗೊಂಡ ಆ ಗ್ರಂಥಗಳಲ್ಲಿ ಪ್ರತಿಪಾದಿತ ವಿಷಯಕ್ಕನುಗುಣವಾಗಿ ಬಾಹ್ಯಪ್ರಪಂಚದ ಹಾಗೂ ಮನುಷ್ಯನ ಸ್ವರೂಪವನ್ನು ಕುರಿತ ವಿಶ್ಲೇಷಣೆಗಳು ಕಂಡುಬರುತ್ತವೆ. ಬಾಹ್ಯ ಪ್ರಪಂಚ, ಅದರ ತತ್ತ್ವ ಮತ್ತು ಮನುಷ್ಯನ ಶರೀರ, ಅದರಲ್ಲಿ ಅಂತರ್ಗತವಾಗಿರುವ ತತ್ತ್ವ–ಇವಕ್ಕೂ ವಿಶ್ವತತ್ತ್ವವಾಗಿರುವ 'ಬ್ರಹ್ಮ'ಕ್ಕೂ ಇರುವ ಪರಸ್ಪರ ಸಂಬಂಧವನ್ನು ಕುರಿತ ನಿಷ್ಪ್ರಪಂಚ, ಸಪ್ರಪಂಚ ಎಂಬ ಎರಡು ವಿಚಾರಗಳು ಅಲ್ಲಿ ಮುಖ್ಯವಾಗಿವೆ. ಬ್ರಹ್ಮ-ಆತ್ಮರ ಐಕ್ಯದಲ್ಲಿರುವ ಏಕತತ್ತ್ವದ ಹಿನ್ನೆಲೆಯಲ್ಲಿ ಒಟ್ಟು ಜಗತ್ತು ತೋರಿಕೆಮಾತ್ರವೆಂದೂ ಆ ಏಕತತ್ತ್ವವು ಜಗತ್ತಿಗೆ ಅತೀತವೆಂದೂ ನಿಷ್ಪ್ರಪಂಚ ವಿಚಾರದ ವಿವರಣೆ; ಅದೇ ಹಿನ್ನೆಲೆಯಲ್ಲಿ ಒಟ್ಟು ಜಗತ್ತು ಆ ಏಕತತ್ತ್ವದ ಪರಿಣಾಮವಾಗಿ ಅದನ್ನೊಳಗೊಂಡಿದೆಯೆಂದು ಸಪ್ರಪಂಚದ ವಿವರಣೆ. ಎರಡು ವಿಚಾರಗಳೂ ಉಪನಿಷತ್ತುಗಳಲ್ಲಿ ಕಂಡುಬಂದು ಕ್ರಮೇಣ ಭಿನ್ನಮತಗಳ ಉದಯಕ್ಕೆ ಅವಕಾಶವಾಗಿದೆ.

ಜಗತ್ತು ತೋರಿಕೆಯದೆಂಬ ವಿಚಾರಪ್ರತಿಪಾದನೆಯ ಸಂದರ್ಭದಲ್ಲಿ 'ಅವಿದ್ಯಾ' ಎಂಬ ಶಬ್ದದ ಪ್ರಯೋಗ ಸಾಮಾನ್ಯವಾಗಿ ಉಪನಿಷತ್ತುಗಳಲ್ಲಿ ಕಂಡುಬರುತ್ತದೆ. ಮುಂದೆ ಅದ್ವೈತದರ್ಶನದಲ್ಲಿ ಆ ವಿಚಾರ 'ಮಾಯಾ' ಎಂದು ನಿರೂಪಿತವಾಗಿದೆ. ಪ್ರಾಚೀನತಮ ಉಪನಿಷತ್ತುಗಳಲ್ಲಿ 'ಮಾಯಾ' ಎಂಬುದರ ಪ್ರಯೋಗವಿಲ್ಲದಿರುವಿಕೆ ಮುಂತಾದ ಕಾರಣಗಳಿಂದ ಅದು ಉಪನಿಷತ್ತುಗಳಲ್ಲಿ ಬರುವುದಿಲ್ಲವೆಂದು ಕೆಲವರ ಮತ. ಆದರೆ ಅದ್ವೈತದರ್ಶನದಲ್ಲಿರುವಂತೆ ಪುಷ್ಟೀಕೃತ 'ಮಾಯಾವಾದ'ವನ್ನೊಳಗೊಳ್ಳದಿದ್ದರೂ ಅವುಗಳಲ್ಲಿಯ 'ಅವಿದ್ಯಾ' ಎಂಬುದು ಮಾಯೆಗೆ ಸಮನೆಂದು ಕೆಲವರ ಅಭಿಪ್ರಾಯ.

ಬ್ರಹ್ಮನಿಂದ ಉಂಟಾಗಿರುವ ಜಗತ್ತಿನ ನಾನಾ ವಸ್ತುಗಳ ಸ್ವಭಾವವು 'ರೂಪ' ಎಂದೂ ಅವಕ್ಕೆ ಸಂಕೇತವಾಗಿರುವ ಶಬ್ದವು 'ನಾಮ' ಎಂದೂ ಉಪನಿಷತ್ತುಗಳಲ್ಲಿ ಸೂಚಿತವಾಗಿದೆ. ಆ ನಾಮ-ರೂಪ ವಿಶ್ಲೇಷಣೆಯ ಮೂಲಕ ಇಲ್ಲಿ ಜಗತ್ತಿನ ಸ್ವರೂಪ

ವಿವೇಚನೆ ಮಾಡಲ್ಪಟ್ಟಿದೆ. ಅಲ್ಲದೆ ಸಂದರ್ಭೋಚಿತವಾಗಿ ಜೀವ–ಬ್ರಹ್ಮರು ಪರಸ್ಪರ ಬೇರೆ ಎಂದು ತೋರಿದರೂ, 'ಜೀವ'ನ ವ್ಯಕ್ತ್ಯತೀತ ಸ್ಥಿತಿಯನ್ನು ಗಮನಿಸಿ ಅಂತಹ ಸ್ಥಿತಿಯಲ್ಲಿ ಜೀವ-ಬ್ರಹ್ಮರ ಐಕ್ಯದ ಸಾಧ್ಯತೆಯನ್ನು ಉಪನಿಷತ್ತುಗಳು ಪ್ರತಿಪಾದಿಸುತ್ತವೆ. ಆ ವ್ಯಕ್ತ್ಯತೀತಾನುಭವಾದಿ ವಿಚಾರಗಳು ತೈತ್ತಿರೀಯೋಪನಿಷತ್ತಿನಲ್ಲಿ[೬] ಆನಂದಮಯ, ವಿಜ್ಞಾನಮಯ, ಮನೋಮಯ, ಪ್ರಾಣಮಯ, ಅನ್ನಮಯ ಎಂಬುದಾಗಿ 'ಪಂಚಕೋಶ'ಗಳೆಂದು ನಿರೂಪಿತವಾಗಿವೆ. ಅಲ್ಲದೆ 'ಜೀವ'ನನ್ನು ಉಪನಿಷತ್ತುಗಳು ಜಾಗ್ರದವಸ್ಥೆಯಲ್ಲಿ ಮಾತ್ರವಲ್ಲದೆ ಸ್ವಪ್ನ, ಸುಷುಪ್ತಿ, ತುರೀಯ ಎಂಬ ಅವಸ್ಥೆಗಳಲ್ಲೂ ಪರಿಶೀಲಿಸಿ ತನ್ಮೂಲಕ ಗೋಚರಿಸುವ ವ್ಯಕ್ತ್ಯತೀತ ಸ್ಥಿತಿಯನ್ನು ವರ್ಣಿಸುತ್ತವೆ. ಹೀಗೆ ನಿಶ್ಚಿತವಾದ 'ಆತ್ಮ' ಮತ್ತು 'ಬ್ರಹ್ಮ' ಇವರ ಐಕ್ಯದ ವಿಚಾರವನ್ನು ಪ್ರತಿಪಾದಿಸುವುದಲ್ಲದೆ, ಆನಂದ ಸ್ವರೂಪದ ಆ ಐಕ್ಯವನ್ನು ಆತ್ಮಸಾಕ್ಷಾತ್ಕಾರ ಅಥವಾ ಬ್ರಹ್ಮಸಾಕ್ಷಾತ್ಕಾರವೆಂಬ ಅನುಭವವನ್ನಾಗಿಸುವ ಗುರಿಯುಳ್ಳವಾಗಿವೆ; ಆ ಅಸಾಧಾರಣ ಅನುಭವವೇ ಮುಕ್ತಿ. ಅದನ್ನು ಪಡೆಯಲು ಉಪನಿಷತ್ತು ಬೋಧಿಸುವ ಮುಖ್ಯ ಸಾಧನಗಳೆಂದರೆ—ವೈರಾಗ್ಯ ಹಾಗೂ ಶ್ರವಣ ಮನನ ನಿದಿಧ್ಯಾಸನಗಳೆಂಬ ಮೂರು ಹಂತಗಳುಳ್ಳ ಜ್ಞಾನ. ಹೀಗೆ ಉದಾತ್ತವೂ ಪರಿಪೂರ್ಣವೂ ಆಗಿರುವ, ಮುಕ್ತಿರೂಪದ ಆಧ್ಯಾತ್ಮಿಕ ಅನುಭವವನ್ನು ತಂದುಕೊಡುವ ಗ್ರಂಥಗಳಾದ ಉಪನಿಷತ್ತುಗಳಿಗೆ ವಿಶ್ವವಾಙ್ಮಯದಲ್ಲಿ ಒಂದು ವಿಶಿಷ್ಟಸ್ಥಾನವಿದೆ. ಆಧ್ಯಾತ್ಮಿಕ ವಿಷಯಗಳನ್ನೊಳಗೊಂಡು ಅವು ಪಡೆದಿರುವ ಮಹತ್ತ್ವ ಅವುಗಳ ಮನೋಜ್ಞ ಕಾವ್ಯಮಯ ಭಾಷೆ ಶೈಲಿಗಳಿಂದ ಇಮ್ಮಡಿಸಿದೆ.

ವೇದಾಂಗಗಳು (ಕ್ರಿ.ಪೂ. ಸು. ೬೦೦–ಕ್ರಿ.ಪೂ. ೪೦೦): ಒಟ್ಟಾಗಿ 'ಶ್ರುತಿ' ಎನಿಸಿಕೊಂಡಿರುವ ವೇದಸಂಹಿತೆಗಳು, ಬ್ರಾಹ್ಮಣಗಳು,ಆರಣ್ಯಕಗಳು ಮತ್ತು ಉಪನಿಷತ್ತುಗಳು ಇವುಗಳ ತರುವಾಯ ಸಂಹಿತೆ ಬ್ರಾಹ್ಮಣಗಳಲ್ಲಿನ ವಿಹಿತಕರ್ಮಗಳನ್ನು ಕುರಿತ ಸಂಕ್ಷಿಪ್ತ ಪ್ರತಿಪಾದನೆ, ಅಲ್ಲಿಯ ಮಂತ್ರಗಳ ಪಾಠಕ್ರಮ, ಶಬ್ದನಿಷ್ಪತ್ತಿ, ವ್ಯಾಕರಣ ಮುಂತಾದವುಗಳ ಆಧಾರದ ಮೇಲೆ ಅರ್ಥ ಇತ್ಯಾದಿ ರೂಪದಲ್ಲಿರುವ ವೇದವಿವರಣಾತ್ಮಕ ವಿಚಾರಗಳು 'ವೇದಾಂಗ'ಗಳೆನಿಸಿಕೊಂಡು ವೈದಿಕವಾಙ್ಮಯ ಯುಗದಲ್ಲಿ ಸಾಕಷ್ಟು ಮುಂಚೆ ರೂಢಿಗೆ ಬಂದುವು. ಸಂಪ್ರದಾಯದ ಪ್ರಕಾರ 'ಸ್ಮೃತಿ'ಗಳೆನಿಸಿಕೊಂಡಿರುವ ಅವು ಸಾಮಾನ್ಯವಾಗಿ ಎಲ್ಲ ವೇದಗಳಿಗೂ ಸಂಬಂಧಪಟ್ಟಂತೆ ಬೇರೆ ಬೇರೆ ಶಾಖೆಗಳಲ್ಲಿ ಉಪಲಬ್ಧವಾಗಿವೆ. ಕೆಲವು 'ವೇದಾಂಗ'ಗಳು ಸೂತ್ರರೂಪದ ಗ್ರಂಥಗಳಾಗಿ ದೊರೆತಿವೆ; ಕೆಲವು ಶ್ಲೋಕರೂಪದಲ್ಲಿವೆ.

ಮುಂಡಕೋಪನಿಷತ್ತಿನಲ್ಲಿ ನಾಲ್ಕು ವೇದಗಳ ಹೆಸರುಗಳ ಜೊತೆ ಶಿಕ್ಷ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು, ಜ್ಯೋತಿಷ—ಇವನ್ನೂ ಹೇಳಲಾಗಿದೆ; ಇದು ಸಂಪ್ರದಾಯದಲ್ಲಿ ತಿಳಿದುಬಂದಿರುವ ಆರು ವೇದಾಂಗಗಳ ಪ್ರಾಚೀನತಮ ಉಲ್ಲೇಖ. 'ಶಿಕ್ಷಾ' ಎಂಬ ವೇದಾಂಗವು ವೇದವನ್ನು ಪಠಿಸುವ ಕ್ರಮವನ್ನು ಬೋಧಿಸುತ್ತದೆ. ಹಾಗೆ ಬೋಧಿಸುವ ಗ್ರಂಥಗಳನ್ನೂ 'ಶಿಕ್ಷಾ' ಎಂದೂ 'ಪ್ರಾತಿಶಾಖ್ಯ'ಗಳೆಂದೂ ಕರೆದಿದ್ದಾರೆ.

ಉದಾಹರಣೆಗೆ, ಋಗ್ವೇದಪ್ರಾತಿಶಾಖ್ಯ, ತೈತ್ತಿರೀಯಪ್ರಾತಿಶಾಖ್ಯ, ಭಾರದ್ವಾಜ ಶಿಕ್ಷಾ, ವ್ಯಾಸಶಿಕ್ಷಾ ಇತ್ಯಾದಿ. 'ಕಲ್ಪ'ವು ವೈದಿಕ ಯಜ್ಞಕರ್ಮಗಳು, ಗೃಹ್ಯಕರ್ಮ ಸಂಸ್ಕಾರಗಳು, ವರ್ಣಾಶ್ರಮಾದಿಗಳು, ಯಜ್ಞವೇದಿನಿರ್ಮಾಣ ಮುಂತಾದವು—ಈ ನಾಲ್ಕು ವಿಷಯಗಳಿಗೆ ಸಂಬಂಧಪಟ್ಟಂತೆ ಅನುಕ್ರಮವಾಗಿ ಶ್ರೌತಸೂತ್ರ, ಗೃಹ್ಯಸೂತ್ರ, ಧರ್ಮಸೂತ್ರ, ಶುಲ್ಬಸೂತ್ರ ಎಂದು ನಾಲ್ಕು ಬಗೆ. ಕೃಷ್ಣಯಜುರ್ವೇದದ ಬೌಧಾಯನ ಆಪಸ್ತಂಬ ಶಾಖೆಗಳಲ್ಲಿ ಆ ನಾಲ್ಕು ಬಗೆಯವೂ ಉಪಲಬ್ಧವಾಗಿವೆ. ಹೀಗೆ ಎಲ್ಲ ವೇದ ಶಾಖೆಗಳಿಗೂ ನಾಲ್ಕೂ ಇದ್ದವೆಂಬುದನ್ನು ನಿರ್ಧರಿಸುವುದು ಕಷ್ಟವೆಂದು ವಿದ್ವಾಂಸರ ಮತ.[೨೬] ವೇದಾಂಗನಿರುಕ್ತಕ್ಕೆ ಸಂಬಂಧಪಟ್ಟಂತೆ ಯಾಸ್ಕನ 'ನಿರುಕ್ತ' ಪ್ರಸಿದ್ಧವಾಗಿದೆ. ಅದು ಯಾಸ್ಕನ ಕಾಲಕ್ಕೆ (ಕ್ರಿ.ಪೂ. ಸು. ೬೦೦) ಸಿದ್ಧವಾಗಿದ್ದ 'ನಿಘಂಟು'ಗಳೆಂಬ ವೈದಿಕ ಶಬ್ದಕೋಶಗಳಿಗೆ ವ್ಯಾಖ್ಯಾನರೂಪದಲ್ಲಿದೆ. ವೇದಾಂಗ ವ್ಯಾಕರಣವನ್ನು ಕುರಿತ ಅತಿಪ್ರಾಚೀನ ಗ್ರಂಥ ಯಾವುದೂ ಉಪಲಬ್ಧವಾಗಿಲ್ಲ. ಆದರೆ ಪಾಣಿನಿಯ 'ಅಷ್ಟಾಧ್ಯಾಯಿ' ಎಂಬುದು ಈಗ ಬಳಕೆಯಲ್ಲಿರುವ ಪ್ರಾಚೀನತಮ ವ್ಯಾಕರಣ ಗ್ರಂಥವಾಗಿದ್ದು, ವೇದಾಂಗ ವ್ಯಾಕರಣದ ಪ್ರತಿನಿಧಿಯೆನಿಸಿಕೊಂಡಿದೆ. ಹಾಗೆಯೇ ಛಂದಸ್ಸು ಜ್ಯೋತಿಷಗಳಿಗೆ ಸಂಬಂಧಪಟ್ಟಂತೆ ಕ್ರಮವಾಗಿ ಸ್ವಲ್ಪ ಈಚಿನ ಗ್ರಂಥಗಳಾದ ಪಿಂಗಲ ವಿರಚಿತ 'ಛಂದಶ್ಶಾಸ್ತ್ರ' ಮತ್ತು 'ವೇದಾಂಗಜ್ಯೋತಿಷ'—ಇವು ರೂಢಿಯಲ್ಲಿವೆ.

ಮೇಲ್ಕಂಡ ವೇದಾಂಗಗಳಿಗೆ ಸಂಬಂಧಪಟ್ಟಂತೆ 'ಅನುಕ್ರಮಣಿ'ಗಳೆಂಬ ಕೆಲವು ಗ್ರಂಥಗಳಿವೆ. ಅವು ವೇದಾಂಗಗಳೆನಿಸಿಕೊಳ್ಳದಿದ್ದರೂ ವಿಶೇಷವಾಗಿ ವೇದಸಂಹಿತೆಗಳನ್ನು ಕುರಿತವು. ಅಂಥವುಗಳಲ್ಲಿ ಶೌನಕವಿರಚಿತವೆಂದು ಹೇಳಲಾದ ಮತ್ತು ಋಗ್ವೇದದ ಋಷಿಗಳನ್ನು ತಿಳಿಸುವ 'ಅನುಕ್ರಮಣಿ'ಯೂ ದೇವತೆಗಳನ್ನು ಕುರಿತ 'ಬೃಹದ್ದೇವತಾ' ಎಂಬುದೂ ಮುಖ್ಯವಾಗಿವೆ. ಹಾಗೆಯೇ ಋಗ್ವೇದದ ಎಲ್ಲ ವಿಷಯಗಳನ್ನೂ ಪಟ್ಟಿ ಮಾಡಿಕೊಡುವ ಕಾತ್ಯಾಯನ ವಿರಚಿತ 'ಸರ್ವಾನುಕ್ರಮಣಿ'ಯೂ ಪ್ರಸಿದ್ಧವಾಗಿದೆ. ಮೇಲ್ಕಂಡ ವೇದಾಂಗಗಳೂ ಅವುಗಳೊಡನೆ ಸೇರಿಬಂದಿರುವ ಅನುಕ್ರಮಣಿ ಮುಂತಾದ ಗ್ರಂಥಗಳೂ ವೇದಾಧ್ಯಯನಕ್ಕೆ ಅತ್ಯಂತ ಸಹಾಯಕಗಳಾಗಿದ್ದು, ವೇದದ ಅಂಗಗಳೆಂಬ ಹೆಸರಿಗೆ ತಕ್ಕಂತೆ ತಮ್ಮ ಉಪಯುಕ್ತತೆಯನ್ನು ಉಳಿಸಿಕೊಂಡು ಬಂದಿವೆ.

ಮುಂಚಿನ ಸಂಸ್ಕೃತಭಾಷೆ-ಬ್ರಾಹ್ಮಣಗಳು, ಉಪನಿಷತ್ತುಗಳು ಮತ್ತು ಸೂತ್ರಗಳು (ಕ್ರಿ.ಪೂ. ೭೦೦–ಕ್ರಿ.ಪೂ. ೪೦೦):

ಈ ಸ್ಥಿತಿಯಲ್ಲಿ ಭಾಷೆಯ ವಿಭಕ್ತಿರೂಪಗಳಲ್ಲಿ ಮಿತಿಯುಂಟಾಗಿ ಸಾಮಾನ್ಯವಾಗಿ ಒಂದೊಂದೇ ರೂಪ ನಿಲ್ಲುತ್ತದೆ. ಕ್ರಿಯಾಪದ ರೂಪಗಳು ಸುಲಭವಾಗುವುದಲ್ಲದೆ, ಅವುಗಳ ಸಂಖ್ಯೆಯೂ ಕಡಿಮೆಯಾಗಿ ಲೇಟ್‌ಲಕಾರ ಬಹುಮಟ್ಟಿಗೆ ಪ್ರಯೋಗದಿಂದ ತಪ್ಪಿಹೋಗುತ್ತದೆ. ವಾಕ್ಯದಲ್ಲಿ ಕ್ರಿಯಾಪದಕ್ಕೆ ಪ್ರಾಮುಖ್ಯವಿಲ್ಲದಂತಾಗಿ, ಅದರ ಸ್ಥಾನದಲ್ಲಿ ನಾಮರೂಪಗಳೂ ಅವುಗಳ ಸಮಾನ ಶಬ್ದಗಳೂ ಬಳಕೆಗೆ ಬರುತ್ತವೆ. ಈ ಹಂತವು ಪಾಣಿನಿಯ ವ್ಯಾಕರಣದ ಪ್ರಭಾವದ ಪ್ರಾರಂಭದಶೆಯಲ್ಲಿ ಮುಕ್ತಾಯ

ಗೊಳ್ಳುವುದೆಂಬ ವಿಚಾರ ಗಮನಾರ್ಹವಾಗಿದೆ ; ಭಾಷೆಯ ಈ ಸ್ಥಿತಿಗೂ ಹಿಂದೆ ತಿಳಿಸಿರುವ ಉತ್ತರಕಾಲೀನ ವೈದಿಕ ಭಾಷೆಯ ಸ್ಥಿತಿಗೂ ಇರುವ ವ್ಯತ್ಯಾಸಗಳು ಬಹುಮಟ್ಟಿಗೆ ಕಾಲಾಯತ್ತವೆಂದು ವಿದ್ವಾಂಸರ ಮತ.

## ಇತಿಹಾಸ ಪುರಾಣಗಳ ಯುಗ (ಕ್ರಿ.ಪೂ. ಸು. ೪೦೦-ಕ್ರಿ.ಶ. ೧೦೦)

ಮನುಷ್ಯರಿಗೂ ದೇವತೆಗಳಿಗೂ ಸಂಬಂಧಪಟ್ಟ ಕಥಾದಿಗಳು ವೇದದ ಕಾಲದಲ್ಲೇ ಪ್ರಾರಂಭವಾಗಿ ಆಖ್ಯಾನ, ಇತಿಹಾಸ ಪುರಾಣಗಳೆನಿಸಿಕೊಂಡಿದ್ದವೆಂಬುದನ್ನು ಇಲ್ಲಿ ಗಮನಿಸಬಹುದು. ವೇದದಲ್ಲಿ ಅಂತಹ ರಚನೆಗಳು ಕಂಡುಬಂದರೂ, ಅವು ಬಹುಮಟ್ಟಿಗೆ ವಿಹಿತಕರ್ಮ ವಿಚಾರಗಳ ಜೊತೆಯಲ್ಲಿ ಪ್ರಾಸಂಗಿಕವಾಗಿ ಬರುತ್ತವೆ. ಆಖ್ಯಾನ ಇತಿಹಾಸ ಪುರಾಣಗಳು ಕಥನವಾಗಿ, ದೇವತಾಕಥೆಯಾಗಿ, ಪ್ರಸಿದ್ಧವ್ಯಕ್ತಿ ಕಥೆಯಾಗಿ 'ಬ್ರಾಹ್ಮಣ'ಗಳ 'ಅರ್ಥವಾದ'ಗಳಲ್ಲಿ ನಿರೂಪಿತವಾಗಿವೆ. ಕ್ರಮೇಣ ಅವುಗಳಲ್ಲಿ ಯಾವುದಾದರೂ ವಸ್ತು ಇತ್ಯಾದಿಗಳ ಸೃಷ್ಟಿ ಮುಂತಾದವನ್ನು ಕುರಿತ ಕಥನ ಮೊದಮೊದಲು 'ಪುರಾಣ'ವೆಂದು ಕರೆಯಲ್ಪಟ್ಟು, 'ಬ್ರಾಹ್ಮಣ'ಗಳಲ್ಲಿನ ಸೃಷ್ಟಿಕಥನಗಳಿಗೂ ಆ ಹೆಸರು ಬಂದಿರುವುದನ್ನು ಕಾಣಬಹುದು. ಇತಿಹಾಸ ಆಖ್ಯಾನಗಳಾದರೋ ಸಾಮಾನ್ಯವಾಗಿ ದೇವತೆಗಳ ಅಥವಾ ಪ್ರಸಿದ್ಧ ವ್ಯಕ್ತಿಗಳ ಕಥೆಯಾಗಿ ಅಲ್ಲಿ ಗೋಚರವಾಗುತ್ತವೆ. ಅಲ್ಲದೆ ವೀರರ ಪ್ರಶಂಸೆಯ ರೂಪದ 'ಗಾಥಾ-ನಾರಾಶಂಸಿ'ಗಳೆಂಬ ರಚನೆಗಳೂ ಆ ಇತಿಹಾಸ ಪುರಾಣಗಳ ಜೊತೆಯಲ್ಲೇ 'ಬ್ರಾಹ್ಮಣ'ಗಳಲ್ಲಿ ಕಂಡುಬಂದಿವೆ. ಋಗ್ವೇದದ 'ದಾನ ಸ್ತುತಿ'ಗಳೂ ಅಥರ್ವವೇದದ 'ಕುಂತಾಪಸೂಕ್ತ'ಗಳೂ ಅಂತಹ ಪ್ರಶಂಸೆಗಳನ್ನೊಳಗೊಂಡಿರುವುದನ್ನು ಗಮನಿಸಿ, ಮೇಲೆ ಹೇಳಿರುವ ಗಾಥಗಳು ಅವುಗಳೊಡನೆ ಸಂಬಂಧ ಹೊಂದಿವೆಯೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ; ಅಂಥ ಗಾಥಗಳು ವೀರಪುರುಷಕಥಾತ್ಮಕರಚನೆಗಳಾಗಿ, ರಚನಾಚಕ್ರಗಳಾಗಿ ಅಸ್ತಿತ್ವಕ್ಕೆ ಬಂದು, ಮುಂದೆ ಇತಿಹಾಸ ಪುರಾಣಗಳೆಂದು ಕರೆಯಲ್ಪಟ್ಟಿರುವ ಮಹಾಭಾರತಾದಿಗಳ ಪೂರ್ವಗಾಮಿಗಳಾಗಿದ್ದುವೆಂದು ಅವರ ಮತ.[೪೮] ಅಲ್ಲದೆ, ಮೊದಮೊದಲು ಸಾಮಾನ್ಯವಾಗಿ ಸೃಷ್ಟಿ ಕಥನಗಳಿಗನ್ವಯಿಸುತ್ತಿದ್ದ 'ಪುರಾಣ' ಎಂಬ ಹೆಸರು ಕ್ರಮೇಣ ವಿಶಿಷ್ಟರೂಪದ ಗ್ರಂಥಗಳನ್ನು ಕುರಿತದ್ದಾಗಿ ಬಳಕೆಗೆ ಬಂದಿತೆಂಬ ಅಭಿಪ್ರಾಯವನ್ನೂ ಇಲ್ಲಿ ಸಂದರ್ಭೋಚಿತವಾಗಿ ಗಮನಿಸಬಹುದು. ಹೀಗೆ 'ಇತಿಹಾಸ'ವು ವೀರಪುರುಷರ ಜೀವನಚರಿತೆಯನ್ನು ಒಂದು ಮೂಲಭೂತವಾದ ಸ್ವಾರಸ್ಯಮಯ ಕಥಾರೂಪದಲ್ಲಿ ಹೇಳುವ ರಚನೆಯಾಗಿಯೂ 'ಪುರಾಣ'ವು ಅಂತಹ ಮೂಲಕಥೆಯನ್ನೊಳಗೊಳ್ಳದೆ ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ, ವಂಶಾನುಚರಿತ ಎಂಬ ಪಂಚಲಕ್ಷಣಗಳಿಂದ ಹಾಗೂ ವಿಭಿನ್ನ ಕಥನಗಳಿಂದ ಕೂಡಿದ ರಚನೆಯಾಗಿಯೂ ಈ ಯುಗದಲ್ಲಿ ಕಂಡುಬರುತ್ತವೆ.

ಮಹಾಭಾರತ: ಇದರ ಮೂಲವಸ್ತು ಕೌರವಪಾಂಡವರನ್ನೂ ಅವರ ನಡುವೆ ಉಂಟಾದ ಕುರುಕ್ಷೇತ್ರ ಯುದ್ಧವನ್ನೂ ಕುರಿತ ಕಥಾರೂಪದ ನಿರೂಪಣೆ. ವೀರಪುರುಷರ ಆ

ಪ್ರಧಾನಕಥೆಯೊಡನೆ ಕಾಲಕ್ರಮೇಣ ಇನ್ನೂ ಅನೇಕ ಕಥೆಗಳೂ ಉಪಕಥೆಗಳೂ ಪುರಾಣ ಕಥೆಗಳೂ ಸಾಮಾನ್ಯ ನೀತಿ, ರಾಜನೀತಿ, ಧರ್ಮ, ಆಧ್ಯಾತ್ಮಿಕ ವಿಚಾರ ಮುಂತಾದವೂ ಸೇರಿ, ಗ್ರಂಥ ಬೆಳೆಯುತ್ತ ಬಂದು ಸು. ೧೫೦೦ ವರ್ಷಗಳ ಹಿಂದೆಯೇ ಅದು ೧೮ ಪರ್ವಗಳು ಮತ್ತು ಅನುಬಂಧರೂಪದ 'ಹರಿವಂಶ'ವೆಂಬ ಭಾಗ ಇವುಗಳಿಂದ ಕೂಡಿ ಒಂದು ಲಕ್ಷ ಶ್ಲೋಕವುಳ್ಳ ಮಹಾಗ್ರಂಥವಾಗಿ ಪರಿಣಮಿಸಿತೆಂದು ಹೇಳಲಾಗಿದೆ. ಅದರ ಕರ್ತೃ ವ್ಯಾಸಮುನಿ. ಅದು ಜಯ, ಸಂಹಿತೆ, ಪುರಾಣ, ಆಖ್ಯಾನ, ಉಪಾಖ್ಯಾನ, ಕಥೆ, ಕಾವ್ಯ ಎಂಬ ಹೆಸರುಗಳನ್ನೂ ಪಡೆದಿದೆಯೆಂಬ ವಿಚಾರ ಅದರ ಸ್ವರೂಪವೈಶಿಷ್ಟ್ಯವನ್ನು ಸೂಚಿಸುತ್ತದೆ.

ಪ್ರಮಾಣದಲ್ಲಿ ಬೃಹತ್ತಾಗಿಯೂ ಜೀವನದ ಮೇಲೆ ಸರ್ವತೋಮುಖವಾದ ಸತ್ಪ್ರಭಾವವುಳ್ಳದ್ದಾಗಿಯೂ ಇರುವ ಅತ್ಯಮೂಲ್ಯ ಗ್ರಂಥ ಮಹಾಭಾರತ.[46] ಕಾವ್ಯ, ಧರ್ಮ, ನೀತಿ, ತತ್ತ್ವಜ್ಞಾನ ಮುಂತಾದ ವಿಚಾರಗಳನ್ನೊಳಗೊಂಡಿರುವ ಅದು ಒಂದು ವಿಶ್ವಕೋಶವೆನಿಸಿಕೊಂಡಿದೆ. ಸಹಸ್ರಾರು ವರ್ಷಗಳಲ್ಲಿನ ಮಾನವ ಜೀವಿತದ ಆಗುಹೋಗುಗಳನ್ನು ಸಮಗ್ರವಾಗಿ, ವ್ಯಾಪಕವಾಗಿ ಮೈಗೂಡಿಸಿಕೊಂಡಿರುವ ಆ ಗ್ರಂಥ ಜೀವನದ ನಾನಾಕ್ಷೇತ್ರಗಳ ಮೇಲೆ ಬೆಳಕು ಚೆಲ್ಲುವ ಶಕ್ತಿಯುಳ್ಳದ್ದಾಗಿದೆ; ಅವೆಲ್ಲವನ್ನೂ ಯಥಾವತ್ತಾಗಿ ಅರ್ಥಮಾಡಿಕೊಂಡು ಉತ್ತಮ ಜೀವನವನ್ನು ನಡಸಲು ಸಹಾಯಕಗಳಾಗುವ ಉದಾತ್ತ ಧ್ಯೇಯ ಆದರ್ಶಗಳಿಗೆ ಅದೊಂದು ಆಕರ. ಸುದೀರ್ಘ ಕಾಲದ ಮಾನವಪ್ರಜ್ಞಾಪರಂಪರೆಯ ಒಂದು ಅಕ್ಷಯನಿಧಿ. ಆದ್ದರಿಂದ ಮಹಾಭಾರತವನ್ನು ಕುರಿತ

ಧರ್ಮೇ ಅರ್ಥೇ ಚ ಕಾಮೇ ಚ ಮೋಕ್ಷೇ ಚ ಪುರುಷರ್ಷಭ ।
ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕುತ್ರಚಿತ್

—ಆದಿಪರ್ವ, ೬೨-೨೬

"ಧರ್ಮಾರ್ಥಕಾಮಮೋಕ್ಷಗಳ ಬಗೆಗೆ ಇಲ್ಲಿ ಏನಿದೆಯೋ, ಅದು ಅನ್ಯತ್ರ ಇದೆ; ಇಲ್ಲಿ ಯಾವುದಿಲ್ಲವೋ, ಅದು ಅನ್ಯತ್ರವೂ ಇಲ್ಲ"—ಎಂಬ ಉಕ್ತಿ ಸಾರ್ಥಕವಾಗಿದೆಯೆಂದು ಹೇಳಬಹುದು.

**ರಾಮಾಯಣ:** ವೇದದ ಭಾಷೆ ಸು. ಕ್ರಿ.ಪೂ. ೪೦೦ರ ಸಮಯಕ್ಕೆ ಬಹುಮಟ್ಟಿಗೆ ಮತಧರ್ಮವಿಷಯಕವೂ ಗ್ರಂಥಸ್ಥವೂ ಆಗಿದ್ದು, ಅಂದಿನ ಜನಬಳಕೆಯ ಆಡುಭಾಷೆಗಳ ವೈವಿಧ್ಯವು ವಿಭಾಷೆಗಳ ಉತ್ಪತ್ತಿಗೆ ಕಾರಣವಾಗಿದ್ದಿರಬೇಕೆಂಬುದು ವಿದ್ವಾಂಸರ ಮತ; ಅಂತಹ ವಿಭಾಷೆಗಳಲ್ಲಿ ಹೆಚ್ಚು ವ್ಯಾಪ್ತಿಯುಳ್ಳ ಒಂದು ಪಾಣಿನಿಯ ವ್ಯಾಕರಣಕ್ಕೆ ವಿಷಯವಾಯಿತೆಂದು ಅವರ ಅಭಿಪ್ರಾಯ. ಬಹುಮಟ್ಟಿಗೆ ಲೌಕಿಕ ವಸ್ತು ಹಾಗೂ ಭಾವವಿಷಯಕವಾದ ಐತಿಹಾಸಿಕ ರಚನಾಸೃಷ್ಟಿಗೂ ಆ ವಿಭಾಷೆ ಆಧಾರವಾಗಿದ್ದು, ವಾಲ್ಮೀಕಿ ವಿರಚಿತ 'ರಾಮಾಯಣ' ವಿಶೇಷವಾಗಿ ಆಗಿನ ಅಂತಹ ರಚನೆಗೆ ಸೂಕ್ತ ನಿದರ್ಶನವೆಂದು ಹೇಳಲಾಗಿದೆ.[47] ಸಂಸ್ಕೃತ ಭಾಷಾಸಾಹಿತ್ಯಗಳ

ಬೆಳವಣಿಗೆ ಪರಿವರ್ತನೆಗಳ ದೃಷ್ಟಿಯಿಂದ 'ರಾಮಾಯಣ'ಕ್ಕೆ ಚಾರಿತ್ರಿಕವಾಗಿ ಪ್ರಾಮುಖ್ಯ ವಿದೆಯೆಂಬುದನ್ನು ಇಲ್ಲಿ ಗಮನಿಸಬಹುದು.

ಕ್ರಮಬದ್ಧ ವರ್ಣನೆ, ಅಲಂಕಾರಾದಿಗಳ ಪ್ರಯೋಗ, ಭಾವವಿಷಯಕತ್ವ ಮುಂತಾದ ಲಕ್ಷಣಗಳನ್ನೊಳಗೊಂಡು ಆಕಾರ ತಳೆದ ಮೊತ್ತಮೊದಲ ರಚನೆಯಾದ್ದರಿಂದ ರಾಮಾಯಣಕ್ಕೆ ಲಭಿಸಿರುವ ಆದಿಕಾವ್ಯವೆಂಬ ಹೆಸರು ಸಾರ್ಥಕವಾಗಿದೆ. ಅದರ ಕರ್ತೃ ವಾಲ್ಮೀಕಿ ಆದಿಕವಿಯೆಂದು ವಿಖ್ಯಾತನಾಗಿದ್ದಾನೆ. ಅದಕ್ಕಿಂತ ಹಿಂದೆ ವೈದಿಕಗ್ರಂಥಗಳು ಪ್ರಧಾನವಾಗಿ ಮತಧರ್ಮ, ತತ್ತ್ವಜ್ಞಾನ ಇತ್ಯಾದಿ ವಿಚಾರಗಳಿಂದಲೂ ಅಲ್ಲಲ್ಲೇ ಪ್ರಕೃತಿ ಸೌಂದರ್ಯದ ಮನೋಜ್ಞವರ್ಣನೆ ಮುಂತಾದವುಗಳಿಂದಲೂ ಕೂಡಿದ್ದುವು. ಆ ಗ್ರಂಥಗಳ ತರುವಾಯ ಸಂಸ್ಕೃತ ಸಾಹಿತ್ಯದಲ್ಲಿ ಲೌಕಿಕಾಸಕ್ತಿ ಭಾವವಿಷಯಕತ್ವಗಳ ಕಾರಣದಿಂದ ಭಾಷೆ ಮತ್ತು ವಿಷಯ ನಿಯಮಿತಗೊಂಡಿದ್ದರ ಫಲವಾಗಿ ಬಂದ ಪ್ರಪ್ರಥಮ ಆಕಾರ ಯುತ ರಚನೆ ಎಂದರೆ 'ರಾಮಾಯಣ'ವೇ. ಅನಂತರದ ಕಾಳಿದಾಸಾದಿ ಕವಿಗಳ ರಚನೆ ಗಳು ಬಹುಮಟ್ಟಿಗೆ ಅದರ ಸ್ಫೂರ್ತಿ ಆಧಾರಗಳ ಮೇಲೆಯೇ ನಿಂತು ಕ್ರಮೇಣ ಹೆಚ್ಚು ಹೆಚ್ಚಾಗಿ ಕ್ರಮಬದ್ಧ ಕಾವ್ಯಸ್ವರೂಪವನ್ನು ಪಡೆದಿವೆ.

ರಾಮ ಸೀತೆಯರ ಚರಿತ್ರೆಗನ್ವಯಿಸುವ 'ರಾಮಾಯಣ' ೭ ಕಾಂಡಗಳಲ್ಲಿ ೨೪,೦೦೦ ಶ್ಲೋಕಗಳಿಂದ ಕೂಡಿದ ಒಂದು 'ಇತಿಹಾಸಕಾವ್ಯ.' ಅದು 'ಮಹಾಭಾರತ'ಕ್ಕಿಂತಲೂ ಚಿಕ್ಕದಾದ ಗ್ರಂಥವಾಗಿರುವುದಲ್ಲದೆ ವಿಷಯದಲ್ಲಿ ಅಲ್ಲಿಯಷ್ಟು ವೈವಿಧ್ಯ ಹೊಂದಿರದೆ ಐಕ್ಯಗುಣವುಳ್ಳದ್ದಾಗಿ ವೈಶಿಷ್ಟ್ಯವನ್ನು ಪಡೆದಿದೆ. ಅಲ್ಲಿನ ಏಳನೆಯ ಕಾಂಡವಾದ 'ಉತ್ತರಕಾಂಡ' ಸಂಪೂರ್ಣವಾಗಿ ಪ್ರಕ್ಷಿಪ್ತವಾಗಿರುವುದಲ್ಲದೆ, ರಾಮಾಯಣದಲ್ಲಿ ಇನ್ನೂ ಹಲವಾರು ಅಂತಹ ಭಾಗಗಳಿವೆಯೆಂದು ವಿದ್ವಾಂಸರ ಮತ.[48] ಮೇಲ್ಕಂಡ 'ರಾಮಾ ಯಣ'ವಲ್ಲದೆ, ಮುಖ್ಯವಾಗಿ 'ವಾಸಿಷ್ಠರಾಮಾಯಣ', 'ಅದ್ಭುತರಾಮಾಯಣ' ಇವೂ ವಾಲ್ಮೀಕಿ ವಿರಚಿತವೆಂದು ರೂಢಿಯಲ್ಲಿವೆ ; ಬ್ರಹ್ಮಾಂಡ ಪುರಾಣದ ಒಂದು ಭಾಗವಾದ 'ಅಧ್ಯಾತ್ಮರಾಮಾಯಣ' ಪ್ರಚಲಿತವಾಗಿರುವ ಮತ್ತೊಂದು ರಾಮಾಯಣಗ್ರಂಥ. ಆಧ್ಯಾತ್ಮಿಕ ವಿಚಾರ ವಿಮರ್ಶೆಗಳು ಮತ್ತು ಪಾತ್ರಗಳ ತಾತ್ತ್ವಿಕಪರಿಶೀಲನೆ—ಇವು ಬಹು ಮಟ್ಟಿಗೆ ಅವುಗಳ ವಿಷಯವಾಗಿವೆ.

ಕಾವ್ಯ, ಧರ್ಮ, ಉಚ್ಚಸಂಸ್ಕೃತಿ ಇವುಗಳ ಬಗೆಗೆ ವಾಲ್ಮೀಕಿ ರಾಮಾಯಣ ಒಂದು ಮಹತ್ತ್ವಪೂರ್ಣ ಗ್ರಂಥವಾಗಿದ್ದು, ಅದು ತನ್ನ ಪ್ರಭಾವದಿಂದ ಭಾರತೀಯ ಜನ ಜೀವನವನ್ನು ಅನೇಕ ಶತಮಾನಗಳಿಂದ ಪುಷ್ಕರಿಸುತ್ತ ಬಂದಿದೆಯೆಂದು ಹೇಳಬಹುದು. ಭಾಷಾಶೈಲಿಗಳ ಸರಳತೆ ಸೌಂದರ್ಯಗಳು, ರಸಪುಷ್ಟಿ, ಆದರ್ಶ ನಿರೂಪಣೆ, ವ್ಯಕ್ತಿ ಮತ್ತು ಕುಟುಂಬಗಳಿಗನ್ವಯಿಸುವ ನಿರಂತರ ಸಮಸ್ಯೆಗಳ ಪ್ರತಿಪಾದನೆ ಪರಿಹಾರಗಳು, ಧಾರ್ಮಿಕ ಮತ್ತು ದೇವತಾತ್ಮಕ ವಿಚಾರಗಳು—ಇವೆಲ್ಲವನ್ನೂ ಕಾವ್ಯಮಯವಾಗಿ ಒದಗಿಸಿಕೊಡುತ್ತಿರುವ ಆ ಮಹಾಕೃತಿ ಜನಪ್ರಿಯ ಇತಿಹಾಸವಾಗಿದೆ ; ಮಹಾಕಾವ್ಯ ಗಳಲ್ಲಿ ಮಹಾಕಾವ್ಯವಾಗಿದೆ. ಮುಂದಿನ ಅನೇಕ ಮಹಾಕವಿಗಳಿಗೆ ಸ್ಫೂರ್ತಿದಾಯಕ

ವಾಗಿ, ಧರ್ಮಗ್ರಂಥವಾಗಿ ಶೋಭಿಸುತ್ತ, ಚಿರಕಾಲ ನಿಲ್ಲತಕ್ಕ ಗ್ರಂಥವೆನಿಸಿಕೊಂಡಿದೆ.[೪೯]

ಮಹಾಭಾರತ ರಾಮಾಯಣಗಳ ಕಾಲ ವಿವಾದಾಸ್ಪದ. ಸಂಪ್ರದಾಯದ ಒಂದು
ಎಣಿಕೆಯಂತೆ ಮಹಾಭಾರತದ ಕಾಲ ಕ್ರಿ.ಪೂ. ಸು. ೩೨೦೦. ಆದರೆ ಅದು ಅಷ್ಟೊಂದು
ಪ್ರಾಚೀನವಲ್ಲವೆಂದು ಅನೇಕ ಆಧುನಿಕ ವಿದ್ವಾಂಸರ ಮತ. ಅದರಲ್ಲಿ ಮೂಲಭೂತವಾಗಿ
ರುವ ಕಥೆಯ ಸುತ್ತಲೂ ಕಾಲಕ್ರಮೇಣ ನಾನಾ ವಿಷಯಗಳು ಸೇರಿ ಗ್ರಂಥ ಬೆಳೆದು
ನಿಂತಿದೆ. ಸಾಮಾನ್ಯವಾಗಿ ಅದನ್ನು ಕುರಿತ ಕಾಲವಿವೇಚನೆ, ೮೮೦೦ ಶ್ಲೋಕಯುತ
ವಾಗಿದ್ದಿತೆಂದು ಹೇಳಲಾಗಿರುವ ಮೂಲಕಥೆಯ ದೃಷ್ಟಿಯಿಂದಲೂ ಒಂದು ಲಕ್ಷ ಶ್ಲೋಕ
ವುಳ್ಳದ್ದಾಗಿ ಬೆಳೆದು ನಿಂತಿರುವ ಬೃಹದ್ರೂಪವುಳ್ಳ ಗ್ರಂಥದ ದೃಷ್ಟಿಯಿಂದಲೂ ನಡೆದಿದೆ.
ಮೂಲಕಥೆಯಲ್ಲೇ ಮುಂಚಿನ ಮತ್ತು ಅನಂತರ ಕಾಲದವು ಸೇರಿ ಬಂದಿರುವುದೆಂಬ
ವಿಚಾರವೂ ಆ ಗ್ರಂಥ ವಿಭಿನ್ನಕಾಲಗಳಲ್ಲಿ ರಚಿತವಾದ ಭಾಗಗಳ ಸಮ್ಮಿಶ್ರಣವಾಗಿರುವ
ಸ್ಥಿತಿಯೂ ಅದರ ಮುಂಚಿನ ಕೆಲವು ಭಾಗಗಳು ವೇದದಷ್ಟು ಪ್ರಾಚೀನವಾಗಿದ್ದಿರಬೇಕೆಂಬ
ಅಭಿಪ್ರಾಯಕ್ಕೆ ಅವಕಾಶಮಾಡಿಕೊಟ್ಟಿವೆ. ಮೀಮಾಂಸಕ ಕುಮಾರಿಲ (ಸು. ೭೦೦)
ಕವಿಗಳಾದ ಬಾಣ ಸುಬಂಧು (೬೦೦-೬೫೦) ಇವರಿಗೆ ಮಹಾಭಾರತ ಈಗಿರುವ
ಪ್ರಮಾಣದಲ್ಲಿ ತಿಳಿದಿತ್ತೆಂಬ ಕಾರಣದಿಂದಲೂ ಕೆಲವು ಶಾಸನಗಳ ಆಧಾರದಿಂದಲೂ
ವಿದ್ವಾಂಸರು ಆ ಸಮಗ್ರ ಸ್ಥಿತಿಯಲ್ಲೇ ಅದನ್ನು ಸು. ೫೦೦ಕ್ಕೆ ಸೇರಿಸಬಹುದೆಂದು
ಅಭಿಪ್ರಾಯಪಟ್ಟಿದ್ದಾರೆ. ವೈದಿಕ ಸಾಹಿತ್ಯದಲ್ಲೆಲ್ಲೂ ಅದರ ಉಲ್ಲೇಖ ಕಂಡುಬರುವುದಿಲ್ಲ
ವಾದ್ದರಿಂದ, ಮೂಲಕಥೆಗನ್ವಯಿಸುವಂತೆ ಅದರ ಉತ್ಪತ್ತಿ ವೇದೋತ್ತರಕಾಲಕ್ಕೆ
(ಕ್ರಿ.ಪೂ. ಸು. ೪೦೦ರ ತರುವಾಯ) ಸೇರುತ್ತದೆಂದು ಅವರ ಮತ. ಒಟ್ಟಿನಲ್ಲಿ ಇತಿ
ಹಾಸರೂಪದ ಮಹಾಭಾರತವೆಂಬ ಗ್ರಂಥ ಕ್ರಿ.ಪೂ. ೪೦೦ಕ್ಕಿಂತ ಮುಂಚಿತವಾಗಿ ಇದ್ದಿ
ತೆಂದು ಹೇಳಲು ಆಧಾರಗಳಿಲ್ಲವಾದ್ದರಿಂದ, ಆ ಕಾಲದಲ್ಲಿ ರಚಿತವಾಗಿದ್ದ ಮೂಲಕಥೆ
ಯಿಂದ ಪ್ರಾರಂಭವಾದ ಆ ಗ್ರಂಥ ಕ್ರಿ.ಶ. ಸು. ೪೦೦ರವರೆಗೂ ಬೆಳೆದು ಆಗ್ಗೆ ಬೃಹದಾ
ಕಾರದ ಗ್ರಂಥವಾಗಿ ಉಪಲಬ್ಧವಾಯಿತೆಂದು ಹೇಳಲಾಗಿದೆ.[೫೦]

ಮಹಾಭಾರತದ ಕಾಲದಂತೆ ರಾಮಾಯಣದ ಕಾಲವಿವೇಚನೆಯೂ ಮೂಲಕಥೆ,
ಉಪಲಬ್ಧ ಗ್ರಂಥಸ್ಥಿತಿ—ಈ ದೃಷ್ಟಿಗಳಿಂದ ಕೂಡಿದೆ. ರಾಮಕೃಷ್ಣರ ಅವತಾರವನ್ನನು
ಸರಿಸಿ, ರಾಮಾಯಣವು ಮಹಾಭಾರತಕ್ಕಿಂತಲೂ ಪ್ರಾಚೀನವೆಂಬ ವಿಚಾರ ಸಂಪ್ರ
ದಾಯದಲ್ಲಿ ಕಂಡುಬರುತ್ತದೆ. ಆಧುನಿಕ ವಿದ್ವಾಂಸರಲ್ಲಿಯೂ ಕೆಲವರು, ಯಾಕೊಬಿ
ಮುಂತಾದವರು, ಭಾಷಾದಿಗಳ ಆಧಾರದಮೇಲೆ ರಾಮಾಯಣವೇ ಮುಂಚಿನದೆಂದು
ವಾದಿಸಿರುವುದೂ ಉಂಟು. ಕ್ರಿ.ಶ. ೨ನೆಯ ಶತಮಾನದಲ್ಲಿದ್ದ ಅಶ್ವಘೋಷನ 'ಬುದ್ಧ
ಚರಿತ'ಕ್ಕೆ ವಾಲ್ಮೀಕಿ ರಾಮಾಯಣ ಮೇಲ್ಪಂಕ್ತಿಯಾಗಿದ್ದಿರಬೇಕೆಂಬ ವಿಚಾರ, ಆ ಸಮ
ಯಕ್ಕೆ ರಾಮಾಯಣ ಸಾರ್ವಜನಿಕವಾಗಿ ಪಠಿತವಾಗುತ್ತಿತ್ತೆಂಬುದರ ಬಗೆಗಿನ ಬೇರೆ
ಕೆಲವು ಉಲ್ಲೇಖಗಳು—ಇವನ್ನು ಆಧಾರವಾಗಿಟ್ಟುಕೊಂಡು ಉಪಲಬ್ಧ ಸ್ಥಿತಿಯಲ್ಲಿ ಆದರ
ಕಾಲ ಕ್ರಿ.ಶ. ಸು. ೨ನೆಯ ಶತಮಾನದ ಅಂತ್ಯಭಾಗವೆಂದು ಕೆಲವು ವಿದ್ವಾಂಸರು

ಅಭಿಪ್ರಾಯಪಟ್ಟಿದ್ದಾರೆ ; ಪ್ರಾಚೀನ ಬೌದ್ಧಗ್ರಂಥಗಳಾದ ತ್ರಿಪಿಟಕಗಳಲ್ಲಿ ಕಂಡುಬರುವ 'ದಶರಥಜಾತಕ' ಮುಂತಾದವುಗಳಲ್ಲಿ ರಾಮಾಯಣ ಕಥೆಯನ್ನು ಹೋಲುವ ಆಖ್ಯಾನಗಳಿರುವುದನ್ನು ಗಮನಿಸಿ, ಆ ಗ್ರಂಥಗಳ ಕಾಲಕ್ಕೆ (ಕ್ರಿ.ಶ. ಸು. ನಾಲ್ಕನೆಯ ಶತಮಾನ) ರಾಮನನ್ನು ಕುರಿತ ಆಖ್ಯಾನಗಳು ಪ್ರಚಾರದಲ್ಲಿದ್ದು ಕ್ರಮೇಣ ಇತಿಹಾಸರೂಪದ ಮೂಲಕಥಾತ್ಮಕ 'ರಾಮಾಯಣ' ಕ್ರಿ.ಪೂ. ಸು. ೩೦೦ರಲ್ಲಿ ರಚಿತವಾಗಿದ್ದಿರಬಹುದೆಂದು ಅವರ ಮತ. ಹೀಗೆ ಮಹಾಭಾರತ ರಾಮಾಯಣಗಳ ಕಾಲನಿರ್ಣಯವು ಕಷ್ಟಸಾಧ್ಯವಾದ ವಿಚಾರ. ಒಟ್ಟಿನಲ್ಲಿ ಮೂಲಕಥೆಯ ದೃಷ್ಟಿಯಿಂದ ಮಹಾಭಾರತ ಮುಂಚಿನದೆಂದೂ ಗ್ರಂಥಗಳ ಉಪಲಬ್ಧಸ್ಥಿತಿಯ ದೃಷ್ಟಿಯಿಂದ ರಾಮಾಯಣ ಮುಂಚಿನದೆಂದೂ ಸಾಮಾನ್ಯವಾಗಿ ತಿಳಿಯಲಾಗಿದೆ.

ಪುರಾಣಗಳು : ಇವು ಪಂಚಲಕ್ಷಣಗಳಿಂದ ಕೂಡಿದ ರಚನೆಗಳೆಂದು ಪ್ರಸಿದ್ಧವಾಗಿವೆ.[51] ಬ್ರಹ್ಮ, ಪದ್ಮ, ವಿಷ್ಣು, ವಾಯು, ಭಾಗವತ, ಬೃಹನ್ನಾರದೀಯ, ಮಾರ್ಕಂಡೇಯ, ಅಗ್ನಿ, ಭವಿಷ್ಯ, ಬ್ರಹ್ಮವೈವರ್ತ, ಲಿಂಗ, ವರಾಹ, ಸ್ಕಂದ, ವಾಮನ, ಕೂರ್ಮ, ಮತ್ಸ್ಯ, ಗರುಡ, ಬ್ರಹ್ಮಾಂಡ—ಎಂಬ ೧೮ ಪುರಾಣಗಳೂ ವಿಷಯದಲ್ಲಿ ಅವನ್ನು ಹೋಲುವ ೧೮ ಉಪಪುರಾಣಗಳೂ ಇವೆ. ಸಾಮಾನ್ಯವಾಗಿ ಅವು ಶಿವ ಅಥವಾ ವಿಷ್ಣುವಿನ ಆರಾಧನೆಗೆ ಸಂಬಂಧಪಟ್ಟ ಗ್ರಂಥಗಳು.

ಪುರಾಣಗಳಲ್ಲಿನ ವಂಶಾನುಚರಿತೆಗಳಲ್ಲಿ ಕಲಿಯುಗಕ್ಕೆ ಸೇರಿದ ಶಿಶುನಾಗ, ನಂದ, ಮೌರ್ಯ, ಶುಂಗ, ಆಂಧ್ರ, ಗುಪ್ತ ಮುಂತಾದ ವಂಶಗಳ ಉಲ್ಲೇಖವಿದೆ. ಮೌರ್ಯ ವಂಶಕ್ಕೆ (ಕ್ರಿ.ಪೂ. ೩೨೬-ಕ್ರಿ.ಪೂ. ೧೮೫) 'ವಿಷ್ಣುಪುರಾಣ', ಆಂಧ್ರವಂಶಕ್ಕೆ (ಕ್ರಿ.ಶ. ೨೫ರಲ್ಲಿ ಮುಕ್ತಾಯ) 'ಮತ್ಸ್ಯಪುರಾಣ', ಗುಪ್ತರ ೧ನೆಯ ಚಂದ್ರಗುಪ್ತ (೩೨೦–೩೩೦) ನನ್ನು ಕುರಿತು 'ವಾಯುಪುರಾಣ' ಇವು ಮುಖ್ಯ ಆಧಾರಗ್ರಂಥಗಳಾಗಬಲ್ಲವೆಂದು ವಿ. ಎ. ಸ್ಮಿತ್ ಅವರು ಅಭಿಪ್ರಾಯಪಟ್ಟಿದ್ದಾರೆ. ಎಲ್ಲ ಪುರಾಣಗಳ ಉತ್ಪತ್ತಿಕಾಲದ ನಿರ್ಣಯ ಕಷ್ಟಸಾಧ್ಯವೆಂದೂ ಒಟ್ಟಿನಲ್ಲಿ ಮುಂಚಿನ ಪುರಾಣಗಳು ಕ್ರಿ.ಶ. ೭ನೆಯ ಶತಮಾನಕ್ಕೆ ಮೊದಲು ರಚಿತವಾಗಿದ್ದಿರಬೇಕೆಂದೂ ವಿದ್ವಾಂಸರ ಅಭಿಪ್ರಾಯವಾಗಿದೆ. ಮತಧರ್ಮ, ಭಾರತದೇಶದ ರಾಜಕೀಯ ಚರಿತ್ರೆ ಮುಂತಾದ ವಿಚಾರಗಳ ದೃಷ್ಟಿಯಿಂದ ಪುರಾಣಗಳು ಮಹತ್ತ್ವವನ್ನು ಪಡೆದಿರುವುವಲ್ಲದೆ, ಸಂಸ್ಕೃತ ಸಾಹಿತ್ಯದಲ್ಲಿ ಅವು ಒಂದು ವಿಶಿಷ್ಟಸ್ಥಾನವನ್ನು ಗಳಿಸಿಕೊಂಡಿವೆ.

ಇತಿಹಾಸ ಪುರಾಣಗಳ ಅವಧಿಯಲ್ಲಿ ಬಂದ ವ್ಯಾಕರಣಗ್ರಂಥಗಳ ಸ್ಥೂಲಪರಿಶೀಲನೆ ಭಾಷಾಸಾಹಿತ್ಯಗಳ ದೃಷ್ಟಿಯಿಂದ ಆವಶ್ಯಕ. ಪಾಣಿನಿಯ 'ಅಷ್ಟಾಧ್ಯಾಯೀ' ಎಂಬುದು ಶಿಷ್ಟರು ಆಡುತ್ತಿದ್ದ ಭಾಷೆಯನ್ನು ಮುಖ್ಯವಾಗಿ ಆಧಾರವಾಗಿಟ್ಟುಕೊಂಡು ರಚಿತವಾದ್ದು. ಒಟ್ಟು ಭಾಷೆಯ ಮೇಲೆ ಅಸಾಧಾರಣ ಪ್ರಭಾವವುಳ್ಳದ್ದಾಗಿ, ಮುಂಚಿನ ಸಂಸ್ಕೃತಾದಿ ಸ್ಥಿತಿಯಲ್ಲಿದ್ದ ಭಾಷೆಯು ಕ್ರಮೇಣ ನಿಯಮಬದ್ಧವಾದ ಕಾವ್ಯಸ್ಥ ಸಂಸ್ಕೃತಭಾಷೆಯಾಗಿ ಪರಿಣಮಿಸಲು ಕಾರಣವಾಯಿತೆಂದು ಹೇಳಲಾಗಿದೆ. ಪ್ರಾಯಃ ಪಾಣಿನಿಯ

ವ್ಯಾಕರಣ ವಿಷಯವಾದ ಭಾಷೆಗೂ ಇತಿಹಾಸಗಳ ಭಾಷೆಗೂ ಸಾಮ್ಯವಿದ್ದು, ಅಂತಹ ಒಂದು ಶಿಷ್ಟಭಾಷೆ ಮುಂದೆ ಕಾವ್ಯಸ್ಥಭಾಷೆಯಾಗಿ ರೂಪಗೊಂಡಿರಬೇಕೆಂಬುದು ವಿದ್ವಾಂಸರ ಮತ. ಪಾಣಿನಿಯ ಅನಂತರ ಕ್ರಿ.ಪೂ.ಸು. ೩೫೦ರಲ್ಲಿ ಬಂದ ಕಾತ್ಯಾಯನನು ಪಾಣಿನಿಸೂತ್ರಗಳಿಗೆ ಪೂರಕಗಳಂತಿರುವ 'ವಾರ್ತಿಕ'ಗಳನ್ನು ಬರೆದಿದ್ದಾನೆ. ಅವು ಅಂದು ಭಾಷೆಯಲ್ಲಿ ಉಂಟಾಗುತ್ತಿದ್ದ ವ್ಯತ್ಯಾಸಗಳನ್ನು ಪ್ರತಿಬಿಂಬಿಸುತ್ತವೆ. ತರುವಾಯ ಕ್ರಿ.ಪೂ. ೧೫೦ರಲ್ಲಿ ಪತಂಜಲಿ ವಿರಚಿತ 'ಮಹಾಭಾಷ್ಯ'ದಲ್ಲಿ ಕಾತ್ಯಾಯನನ ವಾರ್ತಿಕಗಳ ರೀತಿಯ ವಿಮರ್ಶೆ ಮುಂದುವರಿದಿರುವುದಲ್ಲದೆ, ಕಾಲೋಚಿತವಾದ ಅನೇಕ ಭಾಷಾವಿಚಾರಗಳೂ ವಿವರಣೆಗಳೂ ಸೇರಿಬಂದಿವೆ. 'ಮಹಾಭಾಷ್ಯ'ದ ಭಾಷೆಯಾದರೋ ಸಂಸ್ಕೃತದಲ್ಲಿ ಉತ್ತಮಗದ್ಯವೆನಿಸಿಕೊಂಡು ಕಾವ್ಯಸ್ಥಭಾಷೆಯ ಅಂದಿನ ಒಂದು ಸ್ವರೂಪಕ್ಕೆ ಸಾಕ್ಷಿಯಾಗಿದೆ. ಅಲ್ಲದೆ ಅಂತಹ ಭಾಷೆಯಲ್ಲಿ ಲೌಕಿಕಸಾಹಿತ್ಯ ಸೃಷ್ಟಿ ಪತಂಜಲಿಯ ಕಾಲಕ್ಕೆ ಪ್ರಾರಂಭವಾಗಿತ್ತೆಂಬುದೂ ಅವನ 'ಮಹಾಭಾಷ್ಯ'ದಲ್ಲಿ ಉಲ್ಲೇಖಿಸಲ್ಪಟ್ಟಿರುವ 'ವಾರರುಚಕಾವ್ಯ' ಮತ್ತು ಆಖ್ಯಾಯಿಕೆಗಳಾದ 'ವಾಸವದತ್ತಾ', 'ಸುಮನೋತ್ತರ', 'ಭೈಮರಥೀ' ಮತ್ತು ಬಹುಶಃ ನಾಟಕರೀತಿಯ ರಚನೆಗಳಾದ 'ಕಂಸವಧ', 'ಬಲಿಬಂಧ' ಎಂಬ ಹೆಸರುಗಳಿಂದಲೂ ಸೂಚಿತವಾಗುತ್ತದೆ.

ಕಾವ್ಯಸ್ಥ ಸಂಸ್ಕೃತಭಾಷೆ (ಕ್ರಿ.ಪೂ. ಸು. ೪೦೦ರಿಂದ ಮುಂದೆ) : ಹಿಂದೆ ಹೇಳಿದ ಮುಂಚಿನ ಸಂಸ್ಕೃತ ಭಾಷಾಸ್ಥಿತಿಗೂ ಇದಕ್ಕೂ ವ್ಯತ್ಯಾಸ ಕೇವಲ ಕಾಲಾಯತ್ತವಲ್ಲ; ಈ ಭಾಷೆ ವಿದ್ಯಾವಂತರಾದ ಶಿಷ್ಟರೂ ಮಧ್ಯದೇಶದವರೂ ಆಡುತ್ತಿದ್ದ ಭಾಷೆಯನ್ನವಲಂಬಿಸಿಕೊಂಡಿದ್ದುದಲ್ಲದೆ, ಪಾಣಿನಿಯ ಮಾತೃಭಾಷೆಯಾಗಿದ್ದಿರಬಹುದಾದ ಉದೀಚ್ಯ ಭಾಷೆಯ ಅನೇಕ ಲಕ್ಷಣಗಳಿಂದ ಕೂಡಿದೆಯೆಂಬುದು ವಿದ್ವಾಂಸರ ಮತ.[52]

ಹೊಸ ಶಬ್ದಗಳು ಸೇರಿ ಶಬ್ದಸಂಪತ್ತು ಬೆಳೆದಿದೆ. ಸಂಧಿನಿಯಮಗಳು ಅನುಲ್ಲಂಘನೀಯವೆನಿಸಿವೆ. ಬಹುಸಂಖ್ಯೆಯ ಶಬ್ದಗಳನ್ನು ಸೇರಿಸಿ ಸಮಾಸಗಳನ್ನು ಮಾಡುವ ಸೌಲಭ್ಯ ವಹಿಸಿದೆ. ವಿಭಕ್ತಿರೂಪಗಳೂ ಕ್ರಿಯಾರೂಪಗಳೂ ಪರ್ಯಾಯರಹಿತವಾಗಿ, ಬಹುಶಃ ಒಂದೊಂದೇ ರೂಪದಲ್ಲಿ ನಿಲ್ಲುವುದಾಗಿವೆ. ಲೇಟ್‌ಲಕಾರ ಬಳಕೆಯಲ್ಲಿ ಉಳಿಯದೆ ಹೋಗಿದೆ. ಮೇಲ್ಕಂಡ ಲಕ್ಷಣಗಳು ಇತಿಹಾಸಪುರಾಣಗಳ ಯುಗದಲ್ಲಿ ಸ್ವಲ್ಪ ಸ್ವಲ್ಪವಾಗಿ ತೋರಿ, ಮುಂದೆ ಕ್ರಿಸ್ತಶಕದ ತರುವಾಯದ ರಚನೆಗಳಲ್ಲಿ ನೆಲೆಗೊಂಡಿರುವುದನ್ನು ಕಾಣಬಹುದು. ಹೀಗೆ ಕ್ರಿ.ಪೂ. ಸು. ೧೨೦೦ರಲ್ಲಿ ಪ್ರಾರಂಭವಾಗುವ ವೇದ ಭಾಷೆಯು ಕಾಲಗತಿಯನ್ನೂ ಭಾಷಾವಿಭಾಷಾಸ್ಥಿತಿಗಳನ್ನೂ ಅನುಸರಿಸಿ ಕೆಲವು ಮಾರ್ಪಾಡುಗಳನ್ನು ಪಡೆಯಿತಲ್ಲದೆ, ಕ್ರಮೇಣ ಶಿಷ್ಟರು ಆಡುತ್ತಿದ್ದ ಭಾಷೆಯನ್ನೂ ಪಾಣಿನಿಯ ವ್ಯಾಕರಣವನ್ನೂ ಅವಲಂಬಿಸಿಕೊಂಡು, ಕ್ರಿ.ಪೂ. ಸು. ೪೦೦–ಕ್ರಿ.ಶ. ೧೦೦ರ ಅವಧಿಯಲ್ಲಿ ಕಾವ್ಯಸ್ಥ ಸಂಸ್ಕೃತಭಾಷೆಯಾಗಲುಪಕ್ರಮಿಸಿ, ಕ್ರಿ.ಶ. ೧೦೦ರ ಸಮಯಕ್ಕೆ ಪರಿಪುಷ್ಟವಾಗಿರುವುದನ್ನು ಕಾಣಬಹುದು.

## ಕಾವ್ಯಸ್ಥ ಸಂಸ್ಕೃತ ಸಾಹಿತ್ಯಯುಗ (ಸು. ೧೦೦-೮೫೦)

ಕ್ರಿ.ಪೂ.ಸು. ೨೦೦೦ದಿಂದ ಬೆಳೆದು ಬಂದ ವೈದಿಕ ಭಾಷಾ ಸಾಹಿತ್ಯಗಳು, ಕ್ರಮೇಣ ಅವುಗಳ ತರುವಾಯ ಬಂದ ಮಹಾಭಾರತ ರಾಮಾಯಣ ಎಂಬ ಇತಿಹಾಸಗಳಲ್ಲಿ, ವಿಶೇಷವಾಗಿ ರಾಮಾಯಣದಲ್ಲಿ, ಪರಿವರ್ತನೆಗೊಂಡು ಮುಂದೆ ಕಾವ್ಯಸ್ಥ ಭಾಷಾ ಸಾಹಿತ್ಯಗಳಾಗಿ ಪರಿಣಮಿಸಿದ ವಿಚಾರವನ್ನು ಹಿಂದೆ ಗಮನಿಸಲಾಗಿದೆ. ಆದಿಕಾವ್ಯವೆನಿಸಿಕೊಂಡು 'ರಾಮಾಯಣ' ಮುಂದಿನ ಕಾವ್ಯಗಳಿಗೆ ಮೇಲ್ಪಂಕ್ತಿಯಾಯಿತು. ಹಾಗೆಯೇ ಮಹಾಭಾರತವೂ ಅನಂತರ ಬಂದ ಕಾವ್ಯಗಳಿಗೆ ವಿಷಯವನ್ನೂ ಸ್ಫೂರ್ತಿಯನ್ನೂ ಒದಗಿಸಿಕೊಟ್ಟಿದೆಯೆಂಬುದು ಅದರ ಮಹತ್ತ್ವದ ನಿದರ್ಶನವಾಗಿದೆ. ಹೀಗೆ ಪ್ರಾರಂಭವಾದ ಕಾವ್ಯಸ್ಥ ಸಂಸ್ಕೃತಸಾಹಿತ್ಯ ಕ್ರಿಸ್ತ ಶಕದ ಪ್ರಾರಂಭಕಾಲಕ್ಕೆ ಗದ್ಯ, ಪದ್ಯ ಮತ್ತು ನಾಟಕಗಳಾಗಿ ಗೋಚರವಾಗುತ್ತದೆ.

ಶಾಸನ ರಚನೆಗಳು: ಕ್ರಿಸ್ತಶಕದ ಆರಂಭಕಾಲದಲ್ಲೂ ಅದಕ್ಕೆ ಮೊದಲು ಒಂದೆರಡು ಶತಮಾನಗಳಲ್ಲೂ ಸಾಮಾನ್ಯವಾಗಿ ಕಾವ್ಯಗ್ರಂಥ ಯಾವುದೂ ಉಪಲಬ್ಧವಾಗಿಲ್ಲವೆಂಬುದು ಗಮನಾರ್ಹವಾಗಿದೆ. ಗ್ರೀಕರು, ಪಾರ್ಥಿಯನ್ನರು, ಶಕರು ಮುಂತಾದವರ ಮುತ್ತಿಗೆಗಳ ಫಲವಾಗಿ ಕ್ರಿ.ಶ. ೬ನೆಯ ಶತಮಾನದವರೆಗೆ ಸಂಸ್ಕೃತಸಾಹಿತ್ಯ ಸೃಷ್ಟಿಗೆ ವಿರಾಮಕಾಲವಾಗಿದ್ದು, ಕಾಳಿದಾಸಾದಿಗಳ ಮಹಾಕೃತಿಗಳ ಮೂಲಕ ಸಾಹಿತ್ಯ ಸೃಷ್ಟಿಯ ಪುನರುತ್ಥಾನವಾಯಿತೆಂಬುದು ಮ್ಯಾಕ್ಸ್‌ಮುಲ್ಲರ್ ಅವರ ಅಭಿಪ್ರಾಯ.[53] ಕ್ರಿ.ಶ. ೪ನೆಯ ಶತಮಾನದಲ್ಲಿ ಗುಪ್ತರಯುಗ ಪ್ರಾರಂಭವಾದಂದಿನಿಂದ ಸಾಹಿತ್ಯ ಮುಂತಾದವುಗಳ ಸೃಷ್ಟಿಯಾಯಿತೆಂಬ ವಿಚಾರವೂ ಕ್ರಿ.ಶ.ದ ಮೊದಲನೆಯ ಶತಮಾನಗಳಿಗೆ ಸೇರಿದ ಕೆಲವು ಉಪಲಬ್ಧ ಶಾಸನಗಳಲ್ಲಿಯ ಕಾವ್ಯಸ್ಥ ಸಾಹಿತ್ಯವೂ ಮೇಲ್ಕಂಡ ೬ನೆಯ ಶತಮಾನದಲ್ಲಿಯ ಪುನರುತ್ಥಾನವಾದಕ್ಕೆ ಪ್ರತಿಯಾಗಿವೆಯೆಂದು ಹೇಳಿ ಕೆಲವರು ಆ ವಾದವನ್ನು ನಿರಾಕರಿಸಿದ್ದಾರೆ.[54] ಗಿರ್ನಾರಿನ ರುದ್ರದಾಮನ್ ಶಾಸನ (೧೫೦), ಹರಿಷೇಣವಿರಚಿತ ಸಮುದ್ರಗುಪ್ತ ಪ್ರಶಸ್ತಿಯನ್ನೊಳಗೊಂಡಿರುವ ಅಲಹಾಬಾದ್ ಶಾಸನ (೩೪೫), ವತ್ಸಭಟ್ಟಿಯ ಮಂಡೇಶ್ವರ ಶಿಲಾಪ್ರಶಸ್ತಿ (೪೭೩) ಇವುಗಳಲ್ಲಿನ ರಚನೆಗಳು ವಿರಾಮದ ಲಕ್ಷಣವುಳ್ಳದೆಂದು ಹೇಳಲಾಗಿರುವ ಆ ಕಾಲದ ಸಾಹಿತ್ಯ ಸೃಷ್ಟಿಗೆ ಸಾಕ್ಷಿಗಳಾಗಿವೆಯೆಂದು ಅವರ ಮತ. ಹೀಗೆ ಕ್ರಿಸ್ತಶಕದ ಆರಂಭ ಹಾಗೂ ಸ್ವಲ್ಪ ಪೂರ್ವದ ಕಾಲದಲ್ಲೇ ಕಾವ್ಯರಚನೆ ಆಗಿತ್ತೆಂಬುದು ಶಾಸನಗಳಿಂದ ತಿಳಿದು ಬರುವುದಲ್ಲದೆ, ಆ ಅವಧಿಯಲ್ಲಿ ಕ್ರಮೇಣ ಬಂದ ಅಶ್ವಘೋಷ, ಭಾಸ ಮುಂತಾದ ಕವಿಗಳ ಕೃತಿಗಳೂ ಅದನ್ನೇ ಸಮರ್ಥಿಸುತ್ತವೆಯೆಂದು ಹೇಳಬಹುದು.

ಆ ಶಾಸನಗಳಲ್ಲಿ ಗದ್ಯಗದ್ಯಗಳೆರಡೂ ಇವೆ. ಅವು ವ್ಯಾಕರಣನಿಯಮಗಳಿಗನುಗುಣವಾಗಿ ಕಾವ್ಯಸ್ಥ ಭಾಷಾಶೈಲಿಗಳಲ್ಲಿವೆ. ಅಲಂಕಾರಗಳ ಪ್ರಯೋಗವಿದ್ದು ಕರ್ತೃಗಳಿಗೆ ಕಾವ್ಯಮೀಮಾಂಸೆಯ ಪರಿಚಯವೂ ಇತ್ತೆಂಬುದು ಅವುಗಳಿಂದ ಗೋಚರವಾಗುತ್ತದೆ. ಅವುಗಳ ಗದ್ಯಗಳು ದೀರ್ಘಸಮಾಸಯುಕ್ತವಾದವು; ಪದ್ಯರಚನೆಗಳು ಛಂದಸ್ಸಿನ

ವೈವಿಧ್ಯದಿಂದ ಕೂಡಿ ಉತ್ತಮ ಕಾವ್ಯಶ್ರೇಣಿಯಲ್ಲಿ ಸೇರಲು ಅರ್ಹವಾದವು. ಹೀಗೆ ಪಾಣಿನಿಯ ವ್ಯಾಕರಣ ಪ್ರಭಾವದಿಂದ ನಿರೂಪಿತವಾದ ಭಾಷೆಯ ಸ್ಪಷ್ಟರೂಪವುಳ್ಳ, ಮತ್ತು ಪ್ರಚಲಿತ ಕಾವ್ಯವಿಮರ್ಶನನಿಯಮಗಳಿಗನುಗುಣವಾದ ಶೈಲಿ ಮೊದಲಾದ ಲಕ್ಷಣಗಳುಳ್ಳ ಆ ಶಾಸನರಚನೆಗಳು ನೇರವಾಗಿ ಕಾವ್ಯಗಳಾಗಿರುವುವಲ್ಲದೆ, ಆ ಅವಧಿಯಲ್ಲಿ ಬಂದ ಅಶ್ವಘೋಷಾದಿಗಳ ಕೃತಿಗಳಿಗೆ ತಕ್ಕ ಪೂರ್ವಗಾಮಿ ರಚನೆಗಳೋ ಸಮಕಾಲೀನ ರಚನೆಗಳೋ ಆಗಿವೆ.

ಕಾಳಿದಾಸನಿಗಿಂತ ಮುಂಚಿನ ಕೃತಿಗಳು (ಸು.೧೦೦-೪೦೦)—ಅಶ್ವಘೋಷನ ಕೃತಿಗಳು: ಸಂಸ್ಕೃತಸಾಹಿತ್ಯವನ್ನು ಸಾಮಾನ್ಯವಾಗಿ ಶ್ರವ್ಯ, ದೃಶ್ಯ ಎಂದು ಎರಡು ಭಾಗಗಳಾಗಿ ಮಾಡಿ ಗದ್ಯಪದ್ಯಗಳನ್ನು ಶ್ರವ್ಯದಲ್ಲೂ ನಾಟಕ (ರೂಪಕ)ವನ್ನು ದೃಶ್ಯದಲ್ಲೂ ಲಾಕ್ಷಣಿಕರು ಸೇರಿಸಿದ್ದಾರೆ. ಮೇಲ್ಕಂಡ ಅವಧಿಯಲ್ಲಿ ರಚಿತವಾದ ಅಂತಹ ಕೃತಿಗಳಲ್ಲಿ ಅಶ್ವಘೋಷನ 'ಬುದ್ಧಚರಿತ', 'ಸೌಂದರನಂದ' ಎಂಬ ಮಹಾಕಾವ್ಯಗಳೂ 'ಶಾರಿಪುತ್ರ ಪ್ರಕರಣ'ವೆಂಬ ನಾಟಕವೂ ಕೆಲವಾಗಿವೆ. 'ಬುದ್ಧಚರಿತ'ವು ಹೆಸರೇ ಸೂಚಿಸುವಂತೆ ಬುದ್ಧನ ಜೀವನಚರಿತೆಯನ್ನು ಕುರಿತದ್ದು. ಉಪಲಬ್ಧ ಗ್ರಂಥದಲ್ಲಿ ೧೭ ಸರ್ಗಗಳಿವೆ; ೨೮ ಸರ್ಗಗಳಿದ್ದುವೆಂದು ಚೀನೀಪ್ರವಾಸಿ ಇತ್ಸಿಂಗನ ಒಂದು ವರದಿಯ ಪ್ರಕಾರವೂ ಟಿಬೆಟನ್ ಭಾಷಾಂತರದಿಂದಲೂ ತಿಳಿದುಬಂದಿದೆ. ಕಾವ್ಯಸ್ಥ ಸಂಸ್ಕೃತಭಾಷೆ ಸಾಹಿತ್ಯಗಳ ಲಕ್ಷಣಗಳಾದ ವ್ಯಾಕರಣನಿಬದ್ಧರೂಪಗಳೂ ಅಲಂಕಾರಾದಿಗಳ ಪ್ರಯೋಗಗಳೂ ಇದ್ದು, ಅದೊಂದು ಸ್ವಾರಸ್ಯ ಕೃತಿಯಾಗಿದೆ. 'ಸೌಂದರನಂದ'ವೂ ಬುದ್ಧನ ಜೀವನಚರಿತೆಗೇ ಸಂಬಂಧಪಟ್ಟಿದ್ದಾದರೂ ಅದರ ಮೂಲಭೂತ ವಿಷಯ ನಂದ-ಸುಂದರಿಯರ ಪ್ರಣಯ. ಇದೂ 'ಬುದ್ಧಚರಿತ'ದಂತೆಯೇ ಉತ್ತಮ ಕಾವ್ಯ. 'ಶಾರಿಪುತ್ರ ಪ್ರಕರಣ'ವು ೯ ಅಂಕಗಳ ನಾಟಕ; ಶಾರಿಪುತ್ರ ಮೌದ್ಗಲ್ಯಾಯನರು ಬುದ್ಧನ ಪ್ರಭಾವದಲ್ಲಿ ಬೌದ್ಧಮತಕ್ಕೆ ಪರಿವರ್ತನೆಗೊಳ್ಳುವುದು ಅದರ ವಸ್ತು. ಭರತನ 'ನಾಟ್ಯಶಾಸ್ತ್ರ'ದಲ್ಲಿ ನಾಟಕಕ್ಕೆ ಅನ್ವಯಿಸುವಂತೆ ಪ್ರತಿಪಾದಿತವಾಗಿರುವ ಅನೇಕ ಲಕ್ಷಣಗಳು ಈ ನಾಟಕದಲ್ಲಿ ಅನುಸರಿಸಲ್ಪಟ್ಟಿವೆ. 'ಮಹಾಯಾನ ಶ್ರದ್ಧೋತ್ಪಾದಸೂತ್ರ' 'ಗಂಡೀಸ್ತೋತ್ರಗಾಥಾ' ಮುಂತಾದ ಕೆಲವು ಕೃತಿಗಳೂ ಅಶ್ವಘೋಷನವೆಂದು ಹೇಳಲಾಗಿದೆ. ಆ ಎಲ್ಲ ಕೃತಿಗಳಲ್ಲಿಯೂ ಸಾಮಾನ್ಯವಾಗಿ ಬೌದ್ಧಧರ್ಮ ಪ್ರಚಾರದ ಉದ್ದೇಶವಿದ್ದರೂ ಭಾಷಾಶೈಲಿಗಳ ಸರಳತೆ ಮಿತಿಗಳೂ ವಿಷಯಪ್ರತಿಪಾದನೆಯ ಚಮತ್ಕಾರವೂ ಅವಕ್ಕೆ ಸಾಕಷ್ಟು ಕಾವ್ಯಗುಣವನ್ನು ಒದಗಿಸಿಕೊಟ್ಟಿವೆ. ಅಶ್ವಘೋಷನ ವೈಯಕ್ತಿಕ ವಿಚಾರವಾಗಿ ತಿಳಿದುಬಂದಿರುವುದು ಅತ್ಯಲ್ಪ. ಸಂಪ್ರದಾಯದ ಪ್ರಕಾರ ಅವನು ಕನಿಷ್ಕನ ಆಶ್ರಯದಲ್ಲಿದ್ದವನು. ಉಪಲಬ್ಧವಾಗಿರುವ ಇನ್ನೂ ಕೆಲವು ಆಧಾರಗಳ ದೃಷ್ಟಿಯಿಂದ ಅವನನ್ನು ಕನಿಷ್ಕನ ಕಾಲಕ್ಕೆ (ಸು. ೧೦೦) ಸೇರಿಸಬಹುದೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೬೬]

ಅಶ್ವಘೋಷನ ಕೃತಿಗಳಿಗಿಂತ ಹೆಚ್ಚು ದೂರವಿಲ್ಲದ ಕುಮಾರಲಾತನ 'ಕಲ್ಪನಾ

ಮಂಡಿತಿಕಾ', ಮಾತೃಚೇಟನ 'ಶತಪಂಚಾಶತಿಕಸ್ತೋತ್ರ', ಆರ್ಯಶೂರನ 'ಜಾತಕ ಮಾಲಾ' ಮತ್ತು ತತ್ಸಂಬಂಧವಾಗಿದ್ದು ಬೋಧಿಸತ್ತ್ವನ ಮಾಹಾತ್ಮ್ಯಕಥೆಗಳನ್ನೊಳ ಗೊಂಡ ಕೆಲವು 'ಅವದಾನ'ಗಳು—ಇವು ಕಾವ್ಯಗುಣಯುಕ್ತವಾಗಿ ಪ್ರಕೃತ ಅವಧಿಯಲ್ಲಿ ಸಂಸ್ಕೃತಸಾಹಿತ್ಯ ಸೃಷ್ಟಿಯ ಗಮನಿಸತಕ್ಕ ಕುರುಹುಗಳಾಗಿವೆ.

ಕಾವ್ಯಸ್ಥ ಸಂಸ್ಕೃತ ಸಾಹಿತ್ಯದಲ್ಲಿ ಪದ್ಯಕಾವ್ಯದ ಉತ್ಪತ್ತಿಯ ಬಗೆಗೆ ರಾಮಾಯ ಣದ ಪಾತ್ರವೇನೆಂಬುದನ್ನು ಹಿಂದೆ ಗಮನಿಸಲಾಗಿದೆ. ಗದ್ಯರೂಪದ ರಚನೆಯೂ ವೇದದಷ್ಟು ಪ್ರಾಚೀನವೆಂಬುದು ಅಥರ್ವವೇದದಲ್ಲಿಯ ಕೆಲವು ಗದ್ಯಪಂಕ್ತಿಗಳಿಂದ ಗೋಚರವಾಗುತ್ತದೆ. ಹಾಗೆಯೇ ನಾಟಕದ ಉತ್ಪತ್ತಿಯ ಪರಿಶೀಲನೆಯಲ್ಲಿ ಋಗ್ವೇದದ ಕೆಲವು ಸಂವಾದರೂಪದ ಸೂಕ್ತಗಳು (ಉದಾ: ಉರ್ವಶೀ-ಪುರೂರವಸ್) ಅಭಿನೇಯ ವಾಗಿದ್ದು, ತನ್ಮೂಲಕ ಅಂದಿನ ಮತಾವರಣದಲ್ಲಿ ನಾಟಕೋತ್ಪತ್ತಿಯಾಗಿದ್ದಿರಬಹು ದೆಂಬ ಅಭಿಪ್ರಾಯ ಕಂಡುಬಂದಿದೆ. ಅಲ್ಲದೆ ಸಂಸ್ಕೃತನಾಟಕದ 'ಸೂತ್ರಧಾರ' ಎಂಬ ಪದ ಲೌಕಿಕವಾಗಿದ್ದು, ಅದಕ್ಕೆ ಒಂದು ಅನುಕರಣಾತ್ಮಕ ನಿಷ್ಪತ್ತಿಯಿರಬೇಕೆಂದು ಊಹಿಸಿ, ಆ ಕಾರಣದಿಂದ ಲೌಕಿಕ ವಾತಾವರಣದಲ್ಲಿ ನಾಟಕದ ಉತ್ಪತ್ತಿಯಾಗಿದ್ದಿರ ಬೇಕೆಂಬ ವಾದವೂ ಇದೆ. ಅಂತೂ ಅದು ಮತಾವರಣದಿಂದ ದೂರವಲ್ಲವೆಂಬುದು ಸಾಮಾನ್ಯವಾದ ಅಭಿಪ್ರಾಯ. ರಾಮಾಯಣ ಮಹಾಭಾರತಗಳಲ್ಲಿ ಅಲ್ಲಲ್ಲಿ 'ನಟ' ಶಬ್ದಪ್ರಯೋಗ ಮುಂತಾದವು ಅಂದಿನ ಪ್ರಚಲಿತ ಅಭಿನೇಯ ಪ್ರದರ್ಶನಗಳ ಸೂಚಕ ಗಳಾಗಿದ್ದು, ಅದು ಬೆಳವಣಿಗೆಯ ಒಂದು ಹಂತವಾಗಿದ್ದಿರಬೇಕೆಂದು ಕೆಲವರ ಮತ. ಪತಂಜಲಿಯ 'ಮಹಾಭಾಷ್ಯ' (ಕ್ರಿ.ಪೂ. ಸು. ೧೫೦)ದಲ್ಲಿ ಉಲ್ಲೇಖಿಸಲ್ಪಟ್ಟಿರುವ 'ಕಂಸ ವಧ' 'ಬಲಿಬಂಧ' ಇವು ನಾಟಕಯೋಗ್ಯರಚನೆಗಳಾಗಿರಬಹುದೆಂಬ ಅಭಿಪ್ರಾಯವನ್ನುಂಟು ಮಾಡತಕ್ಕವಾಗಿವೆಯೆಂಬುದು ವಿದ್ವಾಂಸರ ಮತ.[೬೬] ಅಲ್ಲಿಂದ ಮುಂದೆ, ಉಪಲಬ್ಧವಾಗಿ ರುವ ಪ್ರಪ್ರಥಮ ಸಂಸ್ಕೃತನಾಟಕವೆಂದರೆ, ಅಶ್ವಘೋಷನ 'ಶಾರಿಪುತ್ರಪ್ರಕರಣ.' ಆಗಲೇ ಅದು ಕೆಲವು ನಿರ್ದಿಷ್ಟ ನಾಟಕಲಕ್ಷಣಗಳಿಂದ ಕೂಡಿದ್ದು, ನಾಟಕರಚನೆಯಲ್ಲಿ ಪ್ರಗತಿಸೂಚಕವೆಂದು ಹೇಳಲಾಗಿದೆ. ಮುಂದೆ ಕೊಟ್ಟಿರುವ ಭಾಸನ ನಾಟಕಗಳು ಈ ಪ್ರಗತಿಯ ಇನ್ನೊಂದು ಮುಖ್ಯ ಹಂತವಾಗಿದೆಯೆಂದು ಹೇಳಬಹುದು.

ಭಾಸನ ಕೃತಿಗಳು: 'ಮಾಲವಿಕಾಗ್ನಿಮಿತ್ರ'ದ ಪ್ರಾರಂಭದಲ್ಲಿ ಕಾಳಿದಾಸನ "ಪ್ರಥಿತಯಶಸಾಂ ಭಾಸ ಕವಿಪುತ್ರ ಸೌಮಿಲ್ಲಕಾದೀನಾಂ ಪ್ರಬಂಧಾನತಿಕ್ರಮ್ಯ ವರ್ತ ಮಾನಕವೇಃ ಕಾಳಿದಾಸಸ್ಯ ಕ್ರಿಯಾಯಾಂ ಕಥಂ ಪರಿಷದೋ ಬಹುಮಾನಂ" ಎಂಬುದ ರಿಂದ ಮತ್ತು ಬಾಣಾದಿಗಳ ಗ್ರಂಥಗಳ ಕೆಲವು ಉಲ್ಲೇಖಗಳಿಂದ ಮಾತ್ರ ಭಾಸ ಮತ್ತು ಅವನ ಕೃತಿಗಳು ಮೊದಲು ಸೂಚಿತವಾಗಿದ್ದುವು. ಈಚೆಗೆ ೧೯೧೨ರಲ್ಲಿ ಗಣಪತಿಶಾಸ್ತ್ರಿಗಳಿಗೆ ತಿರುವಾಂಕೂರಿನಲ್ಲಿ ದೊರೆತು ಪ್ರಕಟವಾದ 'ಪ್ರತಿಜ್ಞಾನಾಟಕ', 'ಸ್ವಪ್ನವಾಸವದತ್ತ', 'ಪಂಚರಾತ್ರ', 'ಚಾರುದತ್ತ', 'ದೂತಘಟೋತ್ಕಚ', 'ಅವಿಮಾರಕ', 'ಬಾಲಚರಿತ', 'ಮಧ್ಯಮವ್ಯಾಯೋಗ', 'ಕರ್ಣಭಾರ', 'ಊರು

ಭಂಗ', 'ಅಭಿಷೇಕನಾಟಕ', 'ಪ್ರತಿಮಾನಾಟಕ'—ಎಂಬ ೧೩ ನಾಟಕಗಳೂ ಪರಸ್ಪರ ಹೊಂದಿಸಲ್ಪಟ್ಟು, ಅಂದಿನಿಂದ ಕೇವಲ ಹೆಸರಿನಲ್ಲಿ ಮಾತ್ರವಲ್ಲದೆ ಗ್ರಂಥರೂಪ ದಲ್ಲೂ ಅವು ಒಂದು ರೀತಿಯಲ್ಲಿ ಭಾಸನವು ಎಂದಾಯಿತು. ಕರ್ತೃವಿನ ಹೆಸರನ್ನೊಳ ಗೊಳ್ಳದ ಆ ನಾಟಕಗಳು ಏಕಕರ್ತೃಕವೆಂದು ಗಣಪತಿಶಾಸ್ತ್ರಿಗಳು ನಾನಾ ಆಧಾರಗಳ ಮೂಲಕ ಮೊದಲು ನಿರ್ಣಯಿಸಿದರು. ಜೊತೆಗೆ, ಅವರಿಗೆ ಪ್ರಚಾರದಲ್ಲಿದ್ದ ಕೆಲವು ಭಾಸವಿಷಯಕ ಉಲ್ಲೇಖಗಳಲ್ಲಿನ ಒಂದೆರಡು ಕೃತಿನಾಮಗಳೂ ಆ ಉಪಲಬ್ಧ ಕೃತಿ ಗಳಲ್ಲಿ ಒಂದೆರಡರ ಹೆಸರುಗಳೂ ಒಂದೇ ಆಗಿರುವುದು ಅವರ ಗಮನಕ್ಕೆ ಬಂದಿತು. ಅಂತಹ ಒಂದು ಉಲ್ಲೇಖ ಹೀಗಿದೆ (ರಾಜಶೇಖರ—ಜಲ್ಹಣನ 'ಸೂಕ್ತಿಮುಕ್ತಾ ವಳಿ'):

ಭಾಸನಾಟಕಚಕ್ರೇಽಪಿ ಛೇಕೈಃ ಕ್ಷಿಪ್ತೇ ಪರೀಕ್ಷಿತುಂ
ಸ್ವಪ್ನವಾಸವದತ್ತಸ್ಯ ದಾಹಕೋಽಭೂನ್ನಪಾವಕಃ ॥

("ಭಾಸನಾಟಕಚಕ್ರವನ್ನು ಪರೀಕ್ಷಿಸಲು ವಿದ್ವಾಂಸರು ಬೆಂಕಿಯಲ್ಲಿ ಹಾಕಿದಾಗ 'ಸ್ವಪ್ನವಾಸವದತ್ತ' ಮಾತ್ರ ಸುಟ್ಟುಹೋಗದೆ ಇದ್ದಿತು.") ಆ ಉಲ್ಲೇಖದಿಂದ ಸ್ಪಷ್ಟ ವಾದ ವಿಚಾರದ ಹಿನ್ನೆಲೆಯಲ್ಲಿ ಶಾಸ್ತ್ರಿಗಳವರು ತಮಗೆ ದೊರೆತ ೧೩ ನಾಟಕಗಳಲ್ಲಿ ಒಂದಾದ 'ಸ್ವಪ್ನವಾಸವದತ್ತ'ವೂ ಉಲ್ಲೇಖದಲ್ಲಿಯ ಅದೇ ಹೆಸರಿನ ಕೃತಿಯೂ ಒಂದೇ ಎಂದು ಹೇಳಿ, ತಾವು ಆಗಲೇ ನಿರ್ಧರಿಸಿದ ಏಕಕರ್ತೃಕತೆಯ ಆಧಾರದ ಮೇಲೆ ೧೩ ನಾಟಕಗಳೂ ಭಾಸಕೃತವೆಂಬ ಸಿದ್ಧಾಂತಕ್ಕೆ ಬಂದರು. ಬಳಿಕ ಏಕಕರ್ತೃಕತೆ, ಭಾಸಕರ್ತೃಕತೆ—ಈ ಎರಡು ನಿರ್ಣಯಗಳೂ ವಿಪುಲ ಚರ್ಚೆಗೆ ವಿಷಯಗಳಾದುವು; ಕೆಲವರಿಂದ ಶಾಸ್ತ್ರಿಗಳ ನಿರ್ಣಯಗಳ ಅಂಗೀಕಾರವೂ ಕೆಲವರಿಂದ ಅವಕ್ಕೆ ವಿರೋಧವೂ ಮತ್ತೆ ಕೆಲವರಿಂದ ಒಂದೆರಡು ನಾಟಕಗಳು ಮಾತ್ರ ಭಾಸಕೃತವೆಂಬ ಮಧ್ಯಮಾರ್ಗಾ ವಲಂಬನೆಯೂ ಆ ಚರ್ಚೆಯ ಫಲಿತಾಂಶವಾಯಿತು. ಆದರೆ ಈಗ ಸಾಮಾನ್ಯವಾಗಿ ೧೩ ನಾಟಕಗಳೂ ಭಾಸನವೆಂದು ರೂಢಿಯಲ್ಲಿವೆ.

ಕರ್ತೃತ್ವಕ್ಕಿಂತ ಮಿಗಿಲಾಗಿ ಭಾಸಕವಿಯ ಕಾಲ ವಿವಾದಾಸ್ಪದವಾಯಿತು. ಕಾಳಿ ದಾಸನೇ ಮಾಡಿರುವ ಉಲ್ಲೇಖದಿಂದ ಅವನಿಗಿಂತಲೂ ಭಾಸ ಮುಂಚಿನವನೆಂದು ಗೋಚರವಾಗಿದ್ದು, ಅದರ ಆಧಾರದ ಮೇಲೆ 'ಪ್ರತಿಜ್ಞಾ ಯೌಗಂಧರಾಯಣ'ದಲ್ಲಿನ ಒಂದು ಶ್ಲೋಕದ ಮೂಲ ಬಹುಶಃ ಅಶ್ವಘೋಷನ 'ಬುದ್ಧಚರಿತ'ವೆಂಬ ಊಹೆಯ ದೃಷ್ಟಿಯಿಂದ, ಮತ್ತು ಬಳಸಿರುವ ಪ್ರಾಕೃತದಲ್ಲಿ ಅಶ್ವಘೋಷನದು ಭಾಸನದಕ್ಕಿಂತ ಪ್ರಾಚೀನವೆಂಬ ಅಭಿಪ್ರಾಯದ ಹಿನ್ನೆಲೆಯಲ್ಲಿ, ಭಾಸನ ಕಾಲ ಕ್ರಿ.ಶ. ಸು. ೩ ಶತಮಾನ ವೆಂದು ಕೆಲವರು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[57]

ಭಾಷೆ ಶೈಲಿಗಳಲ್ಲಿ ಭಾಸನ ನಾಟಕಗಳು ಸರಳತೆ ಸತ್ತ್ವ ಮಾಧುರ್ಯಗಳಿಂದ ಕೂಡಿ ಆಹ್ಲಾದಕಾರಕಗಳಾಗಿವೆ. ಅವು ತಾಂತ್ರಿಕ ನೈಪುಣ್ಯ, ವಸ್ತುವೈವಿಧ್ಯ, ವಸ್ತುವಿನ್ಯಾಸ

ಕೌಶಲ, ವ್ಯಾಪಕವೂ ಶಕ್ತಿಯುತವೂ ಆದ ಪಾತ್ರರಚನೆ, ಸಂಭಾಷಣೆಯ ಸೊಗಸು, ನಾಟಕೀಯ ಸ್ವಾರಸ್ಯ ಮುಂತಾದ ತಮ್ಮ ಗುಣಗಳಿಂದ ಜನಪ್ರಿಯವಾಗಿರುವುವಲ್ಲದೆ ಕಾಳಿದಾಸಾದಿ ಕವಿಗಳ, ರಾಜಶೇಖರ ಮುಂತಾದ ವಿಮರ್ಶಕರ, ವಿದ್ವಾಂಸರ ಅಮೋಘ ಪ್ರಶಂಸೆಗೆ ಪಾತ್ರವಾಗಿವೆ. ಈ ಎಲ್ಲ ಕಾರಣಗಳಿಂದ "ಭಾಸೋ ಹಾಸಃ" ("ಭಾಸನು ಸರಸ್ವತಿಯ ಮಂದಹಾಸ") ಎಂಬ ಹೇಳಿಕೆ ಅವನಿಗೆ ಅನ್ವರ್ಥವಾಗಿದೆ.

ಮೃಚ್ಛಕಟಿಕ : ಇದು ಸಂಸ್ಕೃತ ಸಾಹಿತ್ಯದಲ್ಲಿ ಸಾಮಾಜಿಕ ವಸ್ತುವನ್ನುಳ್ಳ ಒಂದು ಅಪೂರ್ವ ನಾಟಕವಾಗಿದ್ದು, ೧೦ ಅಂಕಗಳಿಂದ ಕೂಡಿದೆ. ಇದರ ಕರ್ತೃ ಶೂದ್ರಕ. ಇಲ್ಲಿ ಚಾರುದತ್ತ-ವಸಂತಸೇನೆಯರ ಪ್ರಣಯವೃತ್ತಾಂತವೇ ನಾಟಕದ ಮುಖ್ಯ ಕಥೆ. ಪಾತ್ರರಚನೆಯಲ್ಲಿ ಕವಿ ಅಸದೃಶ ನೈಪುಣ್ಯವನ್ನು ತೋರಿಸಿದ್ದಾನೆ. ಭಾಷೆ ಸುಲಭವಾಗಿದ್ದು, ಶೈಲಿ ಗಂಭೀರವಾಗಿದೆ. ಕೆಲವು ಪ್ರಾಚೀನ ಪದಗಳ ಪ್ರಯೋಗ, ಅಲ್ಲಲ್ಲಿ ಭರತನ 'ನಾಟ್ಯಶಾಸ್ತ್ರ' ನಿಯಮಗಳ ಉಲ್ಲಂಘನೆ, ಬೌದ್ಧಧರ್ಮದ ಅಭ್ಯುದಯ ಸ್ಥಿತಿಯ ಪ್ರತಿಪಾದನೆ—ಮುಂತಾದ ಅಂಶಗಳು ಈ ನಾಟಕದ ಪ್ರಾಚೀನತೆಗೆ ಸಾಕ್ಷ್ಯಗಳಾಗಿವೆಯೆಂದು ಕೆಲವರ ಮತ. ಕರ್ತೃ ಕಾಲಗಳ ವಿಚಾರ ವಿವಾದಾತ್ಮಕ. ಶೂದ್ರಕನೆಂಬ ದೊರೆ ಅದರ ಕರ್ತೃವೆಂದು ಸಾಮಾನ್ಯವಾಗಿ ರೂಢಿಯಲ್ಲಿದೆ. ಅವನು ೩ನೆಯ ಶತಮಾನದಲ್ಲಿದ್ದ ಆಭೀರ ರಾಜಕುಮಾರ ಶಿವದತ್ತನಾಗಿರಬಹುದೆಂದು ಸ್ಟೆನ್‌ಕೊನೊ ಎಂಬ ವಿದ್ವಾಂಸರ ಅಭಿಪ್ರಾಯ. ಆದರೆ ಭಾಸನ 'ಚಾರುದತ್ತ'ಕ್ಕೂ 'ಮೃಚ್ಛಕಟಿಕ'ಕ್ಕೂ ಸಂಬಂಧವಿರಬಹುದೆಂಬ ಕಾರಣದಿಂದ ಕೆಲವರು ಅವನನ್ನು ೬ನೆಯ ಶತಮಾನದ ಮಧ್ಯಭಾಗಕ್ಕೆ ಸೇರಿಸುತ್ತಾರೆ.

ಪಂಚತಂತ್ರ : ಇದು ವಿಷ್ಣುಶರ್ಮವಿರಚಿತವೆಂದು ಹೇಳಲಾದ ಒಂದು ಗದ್ಯಕೃತಿ. ಕಥನರೂಪದ ವಿಷಯ ಬಹುಮಟ್ಟಿಗೆ ಗದ್ಯದಲ್ಲಿದ್ದು, ಇದಕ್ಕೆ ಪ್ರಾಸಂಗಿಕವಾಗಿ ಹಲವಾರು ಶ್ಲೋಕರೂಪದ ಸೂಕ್ತಿಗಳೂ ಸೇರಿವೆ. ಸಂಸ್ಕೃತಸಾಹಿತ್ಯದಲ್ಲಿ ಗದ್ಯಕ್ಕೆ ವಿಶಿಷ್ಟವಾದ ಸ್ಥಾನವಿದೆ. ಅಥರ್ವವೇದ, ಕೃಷ್ಣಯಜುರ್ವೇದದಲ್ಲಿ ಕಂಡುಬರುವ ಗದ್ಯಭಾಗಗಳು ಪ್ರಾಚೀನತಮ ಗದ್ಯದ ಉದಾಹರಣೆಗಳಾಗಿವೆ. ಅನಂತರ ಕಾಲದ ಬ್ರಾಹ್ಮಣಗಳು, ಆರಣ್ಯಕಗಳು, ಉಪನಿಷತ್ತುಗಳು—ಇವುಗಳ ಗದ್ಯ ಸರಳವಾಗಿಯೂ ಸಾರವತ್ತಾಗಿಯೂ ಇದೆ. ವೇದಾಂಗಗಳಿಗೆ ಸಂಬಂಧಪಟ್ಟ ಸೂತ್ರಗಳ ಗದ್ಯದಲ್ಲಿ ಪ್ರಧಾನ ಗುಣ ಅವುಗಳ ಸಂಕ್ಷಿಪ್ತತೆ, ಅರ್ಥಪೂರ್ಣತೆ. ಪತಂಜಲಿಯ (ಕ್ರಿ.ಪೂ. .ಸು. ೧೫೦) 'ಮಹಾಭಾಷ್ಯ'ದ ಗದ್ಯದಲ್ಲಿ ಲಾಲಿತ್ಯ, ಸತ್ತ್ವ ಇವು ವಿಶೇಷವಾಗಿದ್ದು, ಸಂಸ್ಕೃತ ಗದ್ಯರಚನೆಯಲ್ಲಿ ಅದು ಒಂದು ಮುಖ್ಯ ಹಂತ. ಬೌದ್ಧಜಾತಕಗಳಲ್ಲಿ ಕಂಡುಬರುವ ಗದ್ಯರೂಪ, ಕ್ರಿ.ಶಕದ ಆದಿಭಾಗದ ಶಾಸನಗಳ ಕಾವ್ಯಸ್ಥಗದ್ಯ—ಇವು ಗದ್ಯದ ಬೆಳವಣಿಗೆಯ ಸ್ಪಷ್ಟ ಸಾಕ್ಷ್ಯಗಳಾಗಿವೆ. ಹೀಗೆ ಗದ್ಯ ಕ್ರಿ.ಶಕದ ಮೊದಲೂ ಅದರ ಆದಿಭಾಗದಲ್ಲೂ ಬಳಕೆಯಲ್ಲಿ ಕಂಡರೂ, ಅದರಲ್ಲಿಯೇ ರಚಿತವಾದ ಸ್ವತಂತ್ರ ಗದ್ಯಗ್ರಂಥಗಳು ಉಪಲಬ್ಧವಾಗುವ ಕಾಲ ಕ್ರಿ.ಶ. ಸು. ೩ನೆಯ ಶತಮಾನದ ತರುವಾಯವೆಂದು ಹೇಳ

ಬಹುದು. ಹಾಗೆ ಉಪಲಬ್ಧವಾಗಿರತಕ್ಕವು ಸಾಮಾನ್ಯವಾಗಿ ಜನಪ್ರಿಯವೋ ನೀತಿ ಬೋಧಕವೋ ಅದ್ಭುತ ರೀತಿಯಲ್ಲಿ ಕಾಲ್ಪನಿಕವೋ ಆಗಿರುವ ಕಥೆಗಳಾಗಿವೆ.

ಸು. ೧೦೦-೪೦೦ರ ಅವಧಿಗೆ ಸೇರಿದ ಮತ್ತು ನೀತಿ ಬೋಧಕ ಕಥೆಗಳನ್ನೊಳಗೊಂಡ 'ಪಂಚತಂತ್ರ' ಕಾವ್ಯಸ್ಥಗದ್ಯರೂಪವನ್ನೂ ಒಂದು ಆಕಾರಯುತ ಕಥಾನಿರೂಪಣೆಯನ್ನೂ ಕೂಡಿಸಿಕೊಂಡಿರುವ ಮೊದಲ ಉಪಲಬ್ಧ ಗದ್ಯಗ್ರಂಥ. ಪ್ರಾಣಿಗಳೇ ಹೆಚ್ಚಾಗಿ ಪಾತ್ರವಹಿಸುವ ಕಥೆಗಳನ್ನುಳ್ಳ ಈ ಗ್ರಂಥ ಐದು ಭಾಗಗಳಿಂದ ಕೂಡಿ 'ಪಂಚತಂತ್ರ'ವೆನಿಸಿಕೊಂಡಿದೆ. ಅದು ಕಥೆಗಳ ಮೂಲಕ ಪ್ರಧಾನವಾಗಿ ನೀತಿರೂಪದ ವ್ಯವಹಾರಜ್ಞಾನವನ್ನು ಬೋಧಿಸುತ್ತದೆ; ಅಲ್ಲದೆ ಕಥೆಗಳಲ್ಲಿ ವೈವಿಧ್ಯ, ಅವುಗಳ ಜೋಡಣೆಯಲ್ಲಿ ಕೌಶಲ, ನಾನಾ ಆಕರಗಳಿಂದ ಆರಿಸಿಕೊಂಡಿರುವ ಶ್ಲೋಕರೂಪದ ಸೂಕ್ತಿಗಳ ಸಂದರ್ಭೋಚಿತ ಉದ್ಧೃತಿಗಳು ಗ್ರಂಥಕ್ಕೆ ಮಹತ್ತ್ವ ತಂದುಕೊಟ್ಟಿವೆ. ಸುಲಭ ಭಾಷೆ ಸರಳ ಶೈಲಿಗಳು ಕಥೆಗಳ ಉದ್ದೇಶಕ್ಕೂ ನಿರೂಪಣೆಗೂ ಅನುಗುಣವಾಗಿವೆ. ಈ ಎಲ್ಲ ಕಾರಣಗಳಿಂದ 'ಪಂಚತಂತ್ರ' ಪ್ರಸಿದ್ಧವೂ ಜನಪ್ರಿಯವೂ ಆಗಿದೆ. ಪ್ರಪಂಚದ ಅನೇಕ ಭಾಷೆಗಳಲ್ಲಿ ಇದರ ಅನುವಾದಗಳಿವೆ. ಒಂದು ಉಪಲಬ್ಧ ಪಹ್ಲವಿರೂಪ ೫೭೦ಕ್ಕೆ ಸೇರಿದೆ. ಆ ಕಾರಣದಿಂದ ಮತ್ತು ಇನ್ನೂ ಕೆಲವು ಆಧಾರಗಳ ಮೇಲೆ ಕ್ರಿ.ಶ. ಸು. ೩ನೆಯ ಶತಮಾನದ ಆದಿಭಾಗ 'ಪಂಚತಂತ್ರ'ದ ಕಾಲವಾಗಿರಬೇಕೆಂದು ಹೇಳಬಹುದು.[೬೬]

ಸು. ೧೦೦-೪೦೦ರ ಅವಧಿಗೇ ಸೇರಿಸಲ್ಪಟ್ಟಿರುವ ಗುಣಾಢ್ಯನ 'ಬೃಹತ್ಕಥಾ' ಕೂಡ ಜನಪ್ರಿಯ ಕಥಾಗ್ರಂಥಗಳಲ್ಲಿ ಸೇರುವುದಾಗಿದೆ. ಪೈಶಾಚಿರೂಪದ ಪ್ರಾಕೃತದಲ್ಲಿ ರಚಿತವಾಗಿತ್ತೆಂದು ಹೇಳಲಾಗಿರುವ ಈ ಗ್ರಂಥ ಉಪಲಬ್ಧವಾಗಿಲ್ಲ. ಆದರೆ ಸಂಸ್ಕೃತದಲ್ಲಿ ತದನಂತರದ ಕಥಾಸಾಹಿತ್ಯಕ್ಕೆ ಅದು ಸ್ಫೂರ್ತಿದಾಯಕವಾಯಿತು; ಅದರ ಆಧಾರದ ಮೇಲೆ ಕ್ರಮೇಣ 'ಕಥಾಸರಿತ್ಸಾಗರ' ಮುಂತಾದ ಗ್ರಂಥಗಳು ರಚಿತವಾದುವು.

ಸಂಸ್ಕೃತಸಾಹಿತ್ಯದ, ವಿಶೇಷವಾಗಿ ಕಾವ್ಯಸ್ಥ ಸಾಹಿತ್ಯದ, ಹಿನ್ನೆಲೆಯಲ್ಲಿ ಸಂದರ್ಭೋಚಿತವಾಗಿ ಕನ್ನಡ ಭಾಷಾ ಸಾಹಿತ್ಯಗಳ ಬಗೆಗೆ ಒಂದೆರಡು ಮಾತುಗಳನ್ನು ಹೇಳಬಹುದು. ಕನ್ನಡದಲ್ಲಿ ಪ್ರಾಚೀನತಮ ರಚನೆಯೆಂದರೆ ಕ್ರಿ.ಶ. ಸು. ೪೫೦ರ ಹಲ್ಮಿಡಿ ಶಾಸನ ಎಂದು ವಿದ್ವಾಂಸರ ಮತ. ಕನ್ನಡ ದೇಶದಲ್ಲಿ ಉಪಲಬ್ಧವಾಗಿರುವ ೪೫೦ರ ಪೂರ್ವದ ಶಾಸನಗಳು ಸಂಸ್ಕೃತದಲ್ಲೋ ಪ್ರಾಕೃತದಲ್ಲೋ ಇದ್ದು, ಅವುಗಳಿಂದ ಆಗಿನ ಕನ್ನಡ ಭಾಷಾ ಸ್ಥಿತಿಗತಿಗಳು ತಿಳಿದುಬರುವುದಿಲ್ಲ. ಆದರೆ, ಹಲ್ಮಿಡಿಶಾಸನದಲ್ಲಿಯ ರಚನೆಯಲ್ಲಿ ಸಂಸ್ಕೃತದ ಪ್ರಭಾವ ಸ್ಪಷ್ಟವಾಗಿದ್ದು, ಸಂಸ್ಕೃತ ಭಾಷಾ ಸಾಹಿತ್ಯಗಳು ಕನ್ನಡಕ್ಕೆ ಹಿನ್ನೆಲೆಯಾಗಿತ್ತೆಂದೂ ಅದರ ಮೇಲೆ ಪ್ರಾಕೃತದ ಪ್ರಭಾವವೂ ಇದ್ದಿತೆಂದೂ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೬೭] ಹೀಗೆ ಸಂಸ್ಕೃತ ಪ್ರಾಕೃತ ಸಾಹಿತ್ಯಗಳೂ ಜೈನ ಧರ್ಮಕ್ಕೆ ಸಂಬಂಧಪಟ್ಟ ಸಂಸ್ಕೃತ ಪ್ರಾಕೃತ ಗ್ರಂಥಗಳೂ ಒಟ್ಟಾಗಿ ಕನ್ನಡಕ್ಕೆ ಹಿನ್ನೆಲೆಯಾಗಿದ್ದು, ಅವುಗಳಿಂದ ಕನ್ನಡಕ್ಕೂ ಕನ್ನಡದಿಂದ ಅವಕ್ಕೂ ಪರಸ್ಪರ ವಿನಿಮಯವಾಗಿದ್ದಿರಬೇಕೆಂಬುದು ಅವರು ತಿಳಿಯುತ್ತಾರೆ.

ಕಾಳಿದಾಸನ ಕೃತಿಗಳು (ಸು. ೪೦೦): ವಾಲ್ಮೀಕಿ ರಾಮಾಯಣದಲ್ಲಿ ಪ್ರಾರಂಭವಾಗುವ ಕಾವ್ಯಸ್ಥಸಾಹಿತ್ಯ ಅಶ್ವಘೋಷನ ಕೃತಿಗಳಲ್ಲಿ ಒಂದು ಸ್ಥೂಲರೂಪ ಪಡೆದ ವಿಚಾರ ಗಮನಾರ್ಹವಾಗಿದೆ. ಆ ಸ್ವರೂಪ ಕ್ರಮೇಣ ಕಾಳಿದಾಸನ ಕೃತಿಗಳಲ್ಲಿ ಇನ್ನೂ ಸ್ಪಷ್ಟವೂ ಸಂಪೂರ್ಣವೂ ಆಗಿ ಗೋಚರವಾಗುತ್ತದೆ. ಕಾವ್ಯಸ್ಥ ಸಂಸ್ಕೃತಸಾಹಿತ್ಯ ಕೃತಿಗಳನ್ನು ರಚಿಸಿರುವ ಕವಿಗಳಲ್ಲಿ ಕಾಳಿದಾಸ ಅಗ್ರಗಣ್ಯನೆಂಬ ಕೀರ್ತಿ ಗಳಿಸಿದ್ದಾನೆ. ಆದರೆ ಅವನ ಜೀವನ ಕಾಲ ವಿಚಾರಗಳು ವಿವಾದಾಸ್ಪದವಾಗಿವೆ. ಕಾಲದ ವಿಚಾರದಲ್ಲಿ ಮುಖ್ಯವಾಗಿರುವ ವಾದಗಳೆಂದರೆ: (i) ಅವನ 'ರಘುವಂಶ'ದಲ್ಲಿ ಕಂಡುಬರುವ ಅಗ್ನಿವರ್ಣನೆಂಬವನ ಹೆಸರಿನ ಆಧಾರದ ಮೇಲೆ ಅವನು ಕ್ರಿ.ಪೂ. ಸು. ೮೦೦ರ ಅಗ್ನಿವರ್ಣನೆಂಬ ರಾಜನ ಸಮಕಾಲೀನನಾಗಿದ್ದನು. (ii) ಅವನ 'ಮಾಲವಿಕಾಗ್ನಿಮಿತ್ರ'ದ ನಾಯಕ ಅಗ್ನಿಮಿತ್ರ; ಇವನು ಶುಂಗ ವಂಶದ ಅಗ್ನಿಮಿತ್ರ (ಕ್ರಿ.ಪೂ. ೩ನೆಯ ಶತಮಾನ)ನಾಗಿದ್ದು, ಕಾಳಿದಾಸ ಅವನ ಸಮಕಾಲೀನನಾಗಿದ್ದನು. (iii) ಕಾಳಿದಾಸನು ವಿಕ್ರಮಾದಿತ್ಯನ ಆಸ್ಥಾನದಲ್ಲಿನ ನವಮಣಿಗಳಲ್ಲೊಬ್ಬನಾಗಿದ್ದನೆಂದು ಪ್ರತೀತಿ. ಈ ವಿಚಾರದ ಹಿನ್ನೆಲೆಯಲ್ಲಿ ಶಕರನ್ನು ಸೋಲಿಸಿ ಕ್ರಿ.ಪೂ. ೫೭ರಲ್ಲಿ ವಿಕ್ರಮಶಕೆಯನ್ನು ಆರಂಭಿಸಿದ ವಿಕ್ರಮಾದಿತ್ಯನೇ ಆ ಸಂಪ್ರದಾಯೋಕ್ತ ವಿಕ್ರಮಾದಿತ್ಯನಾಗಿರಬಹುದು. ಆದ್ದರಿಂದ ಕಾಳಿದಾಸ ಕ್ರಿ.ಪೂ. ೫೭ರ ಸುಮಾರಿನಲ್ಲಿದ್ದನು. (iv) ಅದೇ ಹಿನ್ನೆಲೆಯಲ್ಲಿ ಕ್ರಿ.ಶ. ೩೯೫ರಲ್ಲಿ ಶಕರನ್ನು ಸೋಲಿಸಿ 'ವಿಕ್ರಮ' ಎಂಬ ಬಿರುದು ಪಡೆದ ಇಮ್ಮಡಿ ಚಂದ್ರಗುಪ್ತ (೩೭೫–೪೧೩) ಕಾಳಿದಾಸನಿಗೆ ಆಶ್ರಯಕೊಟ್ಟ ರಾಜನಾಗಿದ್ದನು. ಅಲ್ಲದೆ ಕಾಳಿದಾಸನ 'ಕುಮಾರಸಂಭವ' ಎಂಬ ಕಾವ್ಯವು ಆ ದೊರೆಗೆ 'ಕುಮಾರಗುಪ್ತ'ನೆಂಬ ಪುತ್ರನು ಜನಿಸಿದ ವಿಚಾರವನ್ನು ಪ್ರಶಂಸಿಸುವ ಉದ್ದೇಶವುಳ್ಳದೆಂದೂ ಒಟ್ಟಿನಲ್ಲಿ ಆ ಕವಿಯ ಕೃತಿಗಳಲ್ಲಿ ವರ್ಣಿತವಾಗಿರುವ ವೈಭವದ ಸ್ಥಿತಿಗತಿಗಳು ಚಂದ್ರಗುಪ್ತಾದಿಗಳ ಗುಪ್ತರ ಸುವರ್ಣಯುಗದ ಅಭ್ಯುದಯದ ಪ್ರತಿಬಿಂಬವೆಂದೂ ಹೇಳಬಹುದು. (v) ಕ್ರಿ.ಶ. ೫೪೪ರಲ್ಲಿ ಕೊರೂರು ಯುದ್ಧದಲ್ಲಿ ಮ್ಲೇಚ್ಛರನ್ನು ಸೋಲಿಸಿ ಉಜ್ಜಯಿನಿಯ ವಿಕ್ರಮಾದಿತ್ಯ ಆಗ ಶಕೆಯೊಂದನ್ನು ಪ್ರಾರಂಭಿಸಲು ಉದ್ದೇಶಿಸಿ, ಅದಕ್ಕೆ ಪ್ರಾಚೀನತೆಯ ಸ್ವರೂಪಕೊಡಲು ಅದನ್ನು ಸುಮಾರು ೬೦೦ ವರ್ಷಗಳಷ್ಟು ಹಿಂದೆ ತಳ್ಳಿ, ಅದು ಕ್ರಿ.ಪೂ. ೫೭ರಲ್ಲಿ ಪ್ರಾರಂಭವಾದುದೆಂಬ ಕಲ್ಪನೆಗೆ ಅವಕಾಶ ಮಾಡಿದನೆಂಬ ಅಭಿಪ್ರಾಯದ ದೃಷ್ಟಿಯಿಂದ ಆ ಕವಿಯ ಕಾಲ ಸು ೫೪೪. (ಇದರೊಡನೆ ಸಂಸ್ಕೃತಸಾಹಿತ್ಯದ ಪುನರುತ್ಥಾನವಾದವನ್ನು ಹೊಂದಿಸಲಾಗಿದೆ).[೬೦] (vi) 'ಭೋಜಚರಿತ'ದ ಪ್ರಕಾರ ಕಾಳಿದಾಸ ಭೋಜರಾಜನ ಆಸ್ಥಾನ ಕವಿ; ಅವನು ೧೧ನೆಯ ಶತಮಾನದ ಆ ದೊರೆಯ ಆಸ್ಥಾನದಲ್ಲಿದ್ದನು.

ಈ ಕೆಲವು ವಾದಗಳಲ್ಲಿ ಕ್ರಿ.ಪೂ. ೮೦೦ ಎಂಬುದೂ ಕ್ರಿ.ಶ. ೧೧ನೆಯ ಶತಮಾನವೆಂಬುದೂ ಕಾಳಿದಾಸನ ಕಾಲದ ಬಗೆಗೆ ಪುರಾವೆಗಳನ್ನೊದಗಿಸುವಂತಹ ವಿಷಯಗಳನ್ನೊಳಗೊಂಡ ೪೭೩ರ ಮುಂಡೇಶ್ವರ ಶಿಲಾಶಾಸನ, ೬೩೪ರ ಐಹೊಳೆ ಶಾಸನ

ಮುಂತಾದವುಗಳಿಗೆ ವಿರುದ್ಧವಾಗಿದ್ದು ಅಂಗೀಕಾರಾರ್ಹವಾಗಲಾರವು. 'ಮಾಲವಿಕಾಗ್ನಿಮಿತ್ರ'ದ 'ಅಗ್ನಿಮಿತ್ರ' ಶುಂಗವಂಶದ ಅಗ್ನಿಮಿತ್ರನಾಗಿರಬೇಕೆಂಬ ನಿರ್ಣಯ ಸಾಧಾರವಲ್ಲದ್ದರಿಂದ ಕ್ರಿ.ಪೂ. ೨ನೆಯ ಶತಮಾನ ಎಂಬ ಸೂಚನೆಯೂ ಸಮ್ಮತವಾಗದೆ ಇದೆ. ಅವನು ಸು. ೪೦೦ಕ್ಕೆ ಸೇರಿದವನೆಂಬ ಅಭಿಪ್ರಾಯ ಈಗ ಹೆಚ್ಚು ರೂಢಿಯಲ್ಲಿದೆಯೆಂದು ಹೇಳಬಹುದು.[11] ಇಮ್ಮಡಿ ಚಂದ್ರಗುಪ್ತ 'ವಿಕ್ರಮಾದಿತ್ಯ' ಎನಿಸಿಕೊಂಡಿರುವುದೂ ಕಾಳಿದಾಸನ ಕೃತಿಗಳಲ್ಲಿ ಕಂಡುಬರುವ ಸಂಪತ್ಸಮೃದ್ಧಿಯ ವರ್ಣನೆಗಳು ಗುಪ್ತರ ಕಾಲದ ಅಂತಹ ಸ್ಥಿತಿಯನ್ನೇ ಪ್ರತಿಬಿಂಬಿಸುತ್ತವೆಂಬ ವಾದವೂ ಆ ಅಭಿಪ್ರಾಯಕ್ಕೆ ಪುಷ್ಟಿದಾಯಕಗಳಾಗಿವೆ.

ಕಾಳಿದಾಸನ ಜೀವಿತದ ಬಗೆಗೆ ಅನೇಕ ದಂತಕಥೆಗಳಿವೆ. ಸಾಮಾನ್ಯವಾಗಿ ಅವನ ಕೃತಿಗಳಿಂದಲೇ ಗೋಚರವಾಗುವ ಜೀವಿತ ವಿಷಯಗಳೆಂದರೆ: ಉಜ್ಜಯಿನಿ ಅವನ ಪ್ರೀತಿಪಾತ್ರ ನಗರ; ರಾಜನ ಆಸ್ಥಾನದಲ್ಲಿದ್ದವನು; ದೈವಭಕ್ತ, ತತ್ತ್ವಜ್ಞಾನನಿರತ; ಶೈವಧರ್ಮದಲ್ಲಿ ಒಲವುಳ್ಳವನು; ಪ್ರಕೃತಿಯಲ್ಲಿ ಮತ್ತು ಶೃಂಗಾರರಸ ಪ್ರತಿಪಾದನೆಯಲ್ಲಿ ತೀವ್ರ ಆಸಕ್ತಿಯುಳ್ಳವನು; ಮಾನವೀಯತೆ ಮುಂತಾದ ಸದ್ಗುಣಗಳಿಂದ ಕೂಡಿದ ಪ್ರತಿಭಾನ್ವಿತ ಮಹಾಕವಿ—ಮುಂತಾದವು.

'ರಘುವಂಶ', 'ಕುಮಾರ ಸಂಭವ' ಎಂಬ ಎರಡು ಮಹಾಕಾವ್ಯಗಳೂ 'ಅಭಿಜ್ಞಾನ ಶಾಕುಂತಲ', 'ಮಾಲವಿಕಾಗ್ನಿಮಿತ್ರ', 'ವಿಕ್ರಮೋರ್ವಶೀಯ' ಎಂಬ ಮೂರು ನಾಟಕಗಳೂ 'ಋತುಸಂಹಾರ', 'ಮೇಘದೂತ' ಎಂಬ ಖಂಡಕಾವ್ಯಗಳೂ ಕಾಳಿದಾಸನ ಕೃತಿಗಳೆಂದು ಪ್ರಸಿದ್ಧವಾಗಿವೆ. ಗುಣಮಟ್ಟದಲ್ಲಿ ಕಿಂಚಿದೂನವಾಗಿರುವ ಮತ್ತು ಮಲ್ಲಿನಾಥನು ವ್ಯಾಖ್ಯಾನಮಾಡದೆ ಬಿಟ್ಟಿರುವ 'ಋತುಸಂಹಾರ' (ಉಳಿದ ಎಲ್ಲ ಕಾವ್ಯಗಳಿಗೂ ಮಲ್ಲಿನಾಥನ ವ್ಯಾಖ್ಯಾನವಿದೆ) ಕಾಳಿದಾಸನದಲ್ಲವೆಂದು ಕೆಲವರ ವಾದ. ಆದರೆ ಅದು ಅವನ ಯೌವನದ ಕೃತಿಯಾಗಿದ್ದಿರಬಹುದೆಂಬ ಸಮಾಧಾನಾದಿಗಳಿಂದ ಅವನದೇ ಎಂದು ಸಾಮಾನ್ಯವಾಗಿ ತಿಳಿಯಲಾಗಿದೆ. 'ರಘುವಂಶ'ವು ಸೂರ್ಯವಂಶದ ದೊರೆಗಳ ಜೀವಿತವಿಷಯವನ್ನು ೧೯ ಸರ್ಗಗಳಲ್ಲಿ ಚಿತ್ರಿಸುವ ಮಹಾಕಾವ್ಯ. ವರ್ಣನಕೌಶಲ, ರಸಪುಷ್ಟಿ ಮುಂತಾದ ಕಾವ್ಯಗುಣಗಳಿಂದ ಕೂಡಿದ ಆ ಕೃತಿ ಕಾಳಿದಾಸನಿಗೆ 'ರಘುಕಾರ' ಎಂಬ ಬಿರುದನ್ನು ತಂದುಕೊಟ್ಟಿದೆ. 'ಕುಮಾರಸಂಭವ' ೧೭ ಸರ್ಗಗಳ ಮಹಾಕಾವ್ಯ; ಶಿವಪಾರ್ವತಿಯರ ವಿವಾಹ, ಕುಮಾರ ಜನನ ಮತ್ತು ಅವನಿಂದ ತಾರಕಾಸುರ ಸಂಹಾರ—ಇವು ಇಲ್ಲಿಯ ಕಥಾವಿಷಯ. ಮೊದಲನೆಯ ೮ ಸರ್ಗಗಳು ಮಾತ್ರ ಕಾಳಿದಾಸವಿರಚಿತವೆಂದು ವಿದ್ವಾಂಸರ ಅಭಿಪ್ರಾಯ. ಅವನ ಖಂಡಕಾವ್ಯಗಳಲ್ಲಿ ಮೊದಲನೆಯದಾದ 'ಋತುಸಂಹಾರ'ವು ಸು. ೧೬೦ ಶ್ಲೋಕಗಳಲ್ಲಿ ಋತುಗಳ ಕಾವ್ಯಮಯವರ್ಣನೆಯನ್ನು ಕೊಡುತ್ತದೆ. ಇದರ ಹಿನ್ನೆಲೆಯಲ್ಲಿ ಕವಿ ಸ್ತ್ರೀಪುರುಷರ ಪ್ರಣಯವನ್ನು ನಿರೂಪಿಸಿದ್ದಾನೆ. 'ಮೇಘಸಂದೇಶ' ಪೂರ್ವಮೇಘ, ಉತ್ತರಮೇಘ ಎಂಬ ಎರಡು ಭಾಗಗಳಲ್ಲಿ ಸು. ೧೬೩ ಶ್ಲೋಕಗಳಿವೆ; ಅದು ತನ್ನ ಪ್ರೇಯಸಿಯಿಂದ ಅಗಲಿಕೆಯನ್ನನು

ಭವಿಸುತ್ತ, ದೂರದೇಶದಲ್ಲಿ ವಿರಹದಿಂದ ತಪಿಸುತ್ತಿರುವ ಒಬ್ಬ ಯಕ್ಷ, ಮೇಘದ ಮೂಲಕ ಅವಳಿಗೆ ಕಳಿಸಬೇಕೆಂದಿರುವ ಸಂದೇಶವನ್ನೊಳಗೊಂಡ ಭಾವಪೂರ್ಣ ಮನೋಜ್ಞ ಕಾವ್ಯ.

ಕಾಳಿದಾಸನ ನಾಟಕಗಳಲ್ಲಿ 'ಮಾಲವಿಕಾಗ್ನಿಮಿತ್ರ'ವು ಐದು ಅಂಕಗಳಿಂದ ಕೂಡಿ, ಅಗ್ನಿಮಿತ್ರರಾಜ, ಮಾಲವಿಕೆ ಎಂಬ ರಾಜಕುಮಾರಿ ಇವರ ಪ್ರಣಯವನ್ನು ಕುರಿತ ವಸ್ತುವನ್ನುಳ್ಳದ್ದಾಗಿದೆ. ವಸ್ತುವಿನ್ಯಾಸದಲ್ಲಿ, ಪಾತ್ರನಿರೂಪಣೆಯಲ್ಲಿ ಕವಿ ಅನುಪಮ ಕೌಶಲ ತೋರಿಸಿದ್ದಾನೆ. ಅವನ 'ವಿಕ್ರಮೋರ್ವಶೀಯ'ದ ಕಥಾವಸ್ತು ಉರ್ವಶೀ ಪುರೂರವರ ಪ್ರಣಯವನ್ನು ಕುರಿತದ್ದು ; ಇದರಲ್ಲಿ ಐದು ಅಂಕಗಳಿವೆ; ಮೋಹಕವಾದ ಕಲ್ಪನೆಗಳೂ ಮನೋಜ್ಞ ವರ್ಣನೆಗಳೂ ಈ ನಾಟಕದ ವೈಶಿಷ್ಟ್ಯಗಳು. 'ಅಭಿಜ್ಞಾನ ಶಾಕುಂತಲ' ಕಾಳಿದಾಸನ ಮೇರುಕೃತಿ ಎನಿಸಿಕೊಂಡಿದೆ; ದಿವ್ಯಪ್ರೇಮ ನಿರೂಪಣೆ, ಶೃಂಗಾರರಸದ ಸಂಪೂರ್ಣಾಭಿವ್ಯಕ್ತಿ, ಸುಂದರವರ್ಣನೆ, ತಾಂತ್ರಿಕಕೌಶಲ, ಸುಮಧುರಭಾಷಾಶೈಲಿಗಳು —ಇವುಗಳಿಂದ ತುಂಬಿರುವ 'ಶಾಕುಂತಲ'ವು ಕಾಳಿದಾಸನ ಕಲಾಪರಿಪೂರ್ಣತೆಗೆ ಉತ್ಕೃಷ್ಟ ಸಾಕ್ಷ್ಯವಾಗಿದೆ.[೬೨] ಅಲ್ಲದೆ 'ನಲೋದಯ,' 'ಶೃಂಗಾರತಿಲಕ', 'ಶ್ಯಾಮಲಾ ದಂಡಕ' ಮುಂತಾಗಿ ಕಾಳಿದಾಸವಿರಚಿತವೆಂದು ಹೇಳಲಾದ ಹಲವಾರು ಗ್ರಂಥಗಳಿವೆ.

ಹೀಗೆ ಕಾಳಿದಾಸನ ಕೃತಿಗಳಲ್ಲಿ ಹೃದ್ಯವಾದ ಭಾಷೆ ಶೈಲಿಗಳು, ಹಿತಮಿತ ಮೃದು ವಚನದ ವೈದರ್ಭೀರೀತಿ, ಉಪಮಾದ್ಯಲಂಕಾರಗಳ ಸಮುಚಿತ ಪ್ರಯೋಗ ಇವು ವಿಶೇಷವಾಗಿದ್ದು, ತನ್ಮೂಲಕ ಅವನು ಪ್ರಶಂಸೆಗೆ ಪಾತ್ರನಾಗಿದ್ದಾನೆ.[೬೩] ಕಲಾಭಿಜ್ಞತೆ, ಆದರ್ಶಪರತಂತ್ರತೆ, ಪುರುಷಾರ್ಥಪರತ್ವ ಮುಂತಾದವು ಅವನ ಕೃತಿಗಳಲ್ಲಿ ಕಂಡು ಬರುವ ಇನ್ನೂ ಕೆಲವು ಮುಖ್ಯ ಗುಣಗಳಾಗಿವೆ. ಒಟ್ಟಿನಲ್ಲಿ ಅವನು ಶೃಂಗಾರದ, ಪ್ರಕೃತಿಯ, ಶ್ರದ್ಧಾ ಭಕ್ತಿಗಳ ಕವಿ. ಕಾಳಿದಾಸನ ಕೃತಿಗಳು

> "ಧರ್ಮಾರ್ಥಕಾಮಮೋಕ್ಷೇಷು ವೈಚಕ್ಷಣ್ಯಂ ಕಲಾಸು ಚ
> ಪ್ರೀತಿಂ ಕರೋತಿ ಕೀರ್ತಿಂ ಚ ಸಾಧುಕಾವ್ಯನಿಬಂಧನಂ ॥
>
> —ಭಾಮಹ, 'ಕಾವ್ಯಾಲಂಕಾರ' ೧-೨

(ಸತ್ಕಾವ್ಯವು ಪುರುಷಾರ್ಥಸಾಧನೆಯಲ್ಲಿ, ನೃತ್ಯಗೀತಾದಿಗಳಲ್ಲಿ ನೈಪುಣ್ಯವನ್ನೂ ಪ್ರೀತಿ ಕೀರ್ತಿಗಳನ್ನೂ ಉಂಟುಮಾಡುತ್ತದೆ) ಎಂಬ ಮಾತುಗಳಲ್ಲಡಗಿರುವ ಕಾವ್ಯಪ್ರಯೋಜನವನ್ನೂ ಒದಗಿಸಿಕೊಡುತ್ತ, ಅವನ ಕೀರ್ತಿ[೬೪] ಆಚಂದ್ರಾರ್ಕವಾಗಿರುವಂತೆ ಮಾಡಿವೆ.

ಕಾಳಿದಾಸನ ತರುವಾಯದ ಕೃತಿಗಳು: (ಸು. ೪೦೦-೮೫೦) 'ಕಿರಾತಾರ್ಜುನೀಯ': ೧೮ ಸರ್ಗಗಳ ಈ ಮಹಾಕಾವ್ಯದ ಕರ್ತೃ ಭಾರವಿ. ೬೩೪ರ ಐಹೊಳೆ ಶಾಸನದಲ್ಲಿ ಅವನ ಬಗೆಗೆ ಉಲ್ಲೇಖವಿದೆ; ಅವನ ಕಾಲ ಸು. ೫೫೦ ಎಂದು ಹೇಳಲಾಗಿದೆ. ಶಿವನಿಗೂ ಕಿರಾತರೂಪದ ಅರ್ಜುನನಿಗೂ ನಡೆದ ಯುದ್ಧ ಈತನ ಕಾವ್ಯದ ವಸ್ತು ; ಮೂಲಕಥೆ ಮಹಾಭಾರತದ ವನಪರ್ವದಲ್ಲಿದೆ. 'ಭಾರವೇರರ್ಥಗೌರವಂ' ಎಂದು ಪ್ರಶಂಸೆ ಪಡೆದಿರುವ ಭಾರವಿ ಅರ್ಥಸಂಪತ್ತಿಗೂ ಸ್ವಾಭಾವಿಕಮಾಧುರ್ಯಕ್ಕೂ ಪ್ರಸಿದ್ಧನಾಗಿದ್ದಾನೆ.

'ರಾವಣವಧ' : ಭಟ್ಟಿಯಿಂದ ವಿರಚಿತವಾದ ಈ ಕಾವ್ಯ (ಸು. ೬೦೦) 'ಭಟ್ಟಿಕಾವ್ಯ'ವೆಂದೇ ರೂಢಿಯಲ್ಲಿದೆ. ಇದರಲ್ಲಿ ೨೨ ಸರ್ಗಗಳಿವೆ. ಅಪೂರ್ವ ವ್ಯಾಕರಣಬದ್ಧ ಪ್ರಯೋಗ ಪ್ರದರ್ಶನವೇ ಈ ಕಾವ್ಯದ ಉದ್ದೇಶವಾಗಿರುವಂತೆ ತೋರುತ್ತದೆ. ಪಂಡಿತರ ಮೆಚ್ಚುಗೆಗೆ ಇದನ್ನು ಭಟ್ಟಿ ಬರೆದನೆಂದು ಹೇಳುತ್ತಾರೆ.

'ದಶಕುಮಾರ ಚರಿತ' : ಇದು ಹತ್ತು ಜನ ರಾಜಕುಮಾರರ ಕಥೆಯನ್ನೊಳಗೊಂಡ ಗದ್ಯರೂಪದ ಕಾಲ್ಪನಿಕ ಕಥೆ. ಕರ್ತೃ ದಂಡಿ (ಸು. ೭ ಶತಮಾನ). 'ಕಾವ್ಯಾದರ್ಶ'ವೆಂಬ ಅಲಂಕಾರಗ್ರಂಥದ ಕರ್ತೃ ಇವನೇ ಎನ್ನಲಾಗಿದೆ. ಈತನ ಗದ್ಯಶೈಲಿ "ದಂಡಿನಃ ಪದಲಾಲಿತ್ಯಂ" ಎಂದು ಪ್ರಶಂಸೆಯನ್ನು ಈತನಿಗೆ ಗಳಿಸಿಕೊಟ್ಟಿದೆ. 'ಅವಂತಿಸುಂದರೀ ಕಥಾ' ಎಂಬ ಮತ್ತೊಂದು ಕಥಾಗ್ರಂಥವೂ ಇವನದೆಂದು ಕೆಲವು ವಿದ್ವಾಂಸರ ಮತ.

'ವಾಸವದತ್ತ' : ಸುಬಂಧುವಿರಚಿತ ಕಾಲ್ಪನಿಕ ಕಥೆ; ಕಾಲ ಸುಮಾರು ಕ್ರಿ.ಶಕದ ಆದಿಭಾಗ. ಕಂದರ್ಪಕೇತು–ವಾಸವದತ್ತೆಯರ ಪ್ರಣಯವೇ ಅದರ ಕಥಾವಸ್ತು. ಭಾಷೆ ಶೈಲಿಗಳು ಕ್ಲಿಷ್ಟ. ಬಾಣನ 'ಹರ್ಷಚರಿತೆ'ಯ ಪೀಠಿಕಾಶ್ಲೋಕವೊಂದರಲ್ಲಿ ಸುಬಂಧುವನ್ನು ಕುರಿತ ಉಲ್ಲೇಖವಿದೆ.

ಬಾಣನ ಗದ್ಯಕಾವ್ಯಗಳು : ಬಾಣನಿಂದ ವಿರಚಿತವಾದ ಗದ್ಯಕೃತಿಗಳು 'ಹರ್ಷಚರಿತ', 'ಕಾದಂಬರಿ'ಗಳು. ಕಾಲ ಕ್ರಿ.ಶ. ೭ನೆಯ ಶತಮಾನದ ಮಧ್ಯಭಾಗ. 'ಹರ್ಷಚರಿತ' ಆಖ್ಯಾಯಿಕೆಯೆಂದೂ 'ಕಾದಂಬರೀ' ಕಥೆಯೆಂದೂ ಪರಿಗಣಿಸಲ್ಪಟ್ಟಿವೆ. 'ಹರ್ಷಚರಿತ'ದಲ್ಲಿ ಬಾಣ ತನ್ನ ಆಶ್ರಯದಾತ ದೊರೆಯಾದ ಹರ್ಷವರ್ಧನನ (೬೦೬–೬೪೭) ಕೀರ್ತಿಯನ್ನು ಪ್ರಶಂಸಿಸಿದ್ದಾನೆ. ಆ ಗ್ರಂಥದ ಪೀಠಿಕಾ ಶ್ಲೋಕಗಳು ಭಾಸ ಮುಂತಾದ ಸುಪ್ರಸಿದ್ಧ ಕವಿಗಳ ಬಗೆಗೆ ಉಲ್ಲೇಖಗಳಿಂದ ಕೂಡಿದ್ದು, ಚಾರಿತ್ರಿಕ ದೃಷ್ಟಿಯಿಂದ ಗಮನಾರ್ಹವಾಗಿವೆ. ಗ್ರಂಥದ ಪ್ರಾರಂಭದಲ್ಲಿ ಬಾಣ ಆತ್ಮಚರಿತೆಯ ಕೆಲವು ವಿಷಯಗಳನ್ನು ತಿಳಿಯಪಡಿಸಿದ್ದಾನೆ. ಕಾಲ್ಪನಿಕ ಕಥೆಗಳಲ್ಲಿ ಈ ಕವಿಯ 'ಕಾದಂಬರೀ' ಉಚ್ಚಸ್ಥಾನ ಪಡೆದಿದೆ; ಚಂದ್ರಾಪೀಡ ಕಾದಂಬರಿಯರ ಪ್ರಣಯ ಕಥೆಯೇ ಮುಖ್ಯವಸ್ತು; ಪುಂಡರೀಕ ಮಹಾಶ್ವೇತೆಯರ ಪ್ರಣಯಕಥೆಯನ್ನೂ ಅದರೊಡನೆ ಚಮತ್ಕಾರಯುತವಾಗಿ ಸೇರಿಸಿ ಕಥಾಸಂವಿಧಾನದಲ್ಲಿ ಕವಿನೈಪುಣ್ಯವನ್ನು ತೋರಿಸಿದ್ದಾನೆ.

ಭಾಷೆ ಭಾವಗಳ ವೈಶಿಷ್ಟ್ಯದಿಂದ ಬಾಣನ ಕೃತಿಗಳು ಶೋಭಿಸುತ್ತಿವೆ. ಶಬ್ದಸಂಪತ್ತು, ವಿಭಿನ್ನಪ್ರಯೋಗಗಳ ಪ್ರಾಚುರ್ಯ, ಶಬ್ದಾಲಂಕಾರ ಅರ್ಥಾಲಂಕಾರಗಳು, ಸತ್ತ್ವಯುತ ಸಂಕ್ಷಿಪ್ತ ವಾಕ್ಯಗಳ ಹಾಗೆಯೇ ದೀರ್ಘ ಸಮಾಸಗಳಿಂದ ಹೆಣೆದ ವಿಸ್ತರ ವಿಲಂಬ ವಾಕ್ಯಗಳ ವಿರಚನೆಯ ವೈಶಿಷ್ಟ್ಯ, ನಾನಾ ಅಭಿಪ್ರಾಯಗಳ ಮತ್ತು ಭಾವಗಳ ಹೃದಯಂಗಮನಿರೂಪಣೆ—ಈ ಕೆಲವು ಗುಣವಿಶೇಷಗಳಿಂದ "ಬಾಣೋಚ್ಛಿಷ್ಟಂ ಜಗತ್ಸರ್ವಂ" (ಜಗತ್ತಿನಲ್ಲಿರುವುದೆಲ್ಲ ಬಾಣ ಹೇಳಿ ಬಿಟ್ಟದ್ದು) "ಕಾದಂಬರೀ ರಸಜ್ಞಾನಾಂ ಆಹಾರೋಽಪಿ ನ ರೋಚತೇ" ("'ಕಾದಂಬರಿ'ಯ ರಸಬಲ್ಲವರಿಗೆ ಆಹಾರವೇ ರುಚಿಸದು")—ಎಂಬಂತಹ ಪ್ರಶಂಸೆಯ ಮಾತುಗಳು ಅವನ ವಿಚಾರದಲ್ಲಿ ಯಥಾರ್ಥ

ವಾಗಿವೆ. ಅಲ್ಲದೆ ಕಾವ್ಯಸ್ಥ ಗದ್ಯವನ್ನು ಬರೆಯುವುದು ಕಷ್ಟವೆಂಬ ಪ್ರತೀತಿಯಿಂದ ಪ್ರಾಯಃ ಅದು ವಿರಳವಾಗಿದ್ದು, 'ಗದ್ಯಂ ಕವೀನಾಂ ನಿಕಷಂ ವದಂತಿ' (ಗದ್ಯ ಕವಿಗಳಿಗೆ ಒರೆಗಲ್ಲಿದ್ದಂತೆ) ಎಂಬ ಮಾತುಗಳಲ್ಲಿ ಅಡಕವಾಗಿರುವ ಒರೆಗಲ್ಲುಪರೀಕ್ಷೆಯಲ್ಲಿ ಬಾಣ ಉತ್ತೀರ್ಣನಾಗಿದ್ದಾನೆಂದು ಧಾರಾಳವಾಗಿ ಹೇಳಬಹುದು.

ಹರ್ಷನ ನಾಟಕಗಳು: 'ರತ್ನಾವಳೀ', 'ಪ್ರಿಯದರ್ಶಿಕಾ', 'ನಾಗಾನಂದ' ಇವು ಕನ್ಯಾಕುಬ್ಜದ ದೊರೆಯಾಗಿದ್ದ ಹರ್ಷವರ್ಧನನಿಂದ(೬೦೬-೬೪೭) ವಿರಚಿತವಾದ ನಾಟಕಗಳು; ಆ ದೊರೆ ಸುಪ್ರಸಿದ್ಧ ಕವಿಯಾದ ಬಾಣಭಟ್ಟನಿಗೆ ಆಶ್ರಯದಾತನಾಗಿದ್ದನು. ಅರಮನೆಯಲ್ಲಿ ನಡೆಯುವ ಗುಪ್ತ ಪ್ರಣಯ ವೃತ್ತಾಂತವನ್ನಧಿಕರಿಸಿ ರಚಿತವಾದ ವಿನೋದಾತ್ಮಕ ಕೃತಿಗಳು. ನಾಲ್ಕು ಅಂಕಗಳ 'ರತ್ನಾವಳೀ' ಉದಯನ ರತ್ನಾವಳಿಯರ ಪ್ರಣಯವನ್ನು ಕುರಿತದ್ದು. ನಾಲ್ಕು ಅಂಕಗಳ 'ಪ್ರಿಯದರ್ಶಿಕಾ' ಉದಯನ–ಪ್ರಿಯದರ್ಶಿಕೆಯರ ಪ್ರಣಯವೃತ್ತಾಂತವನ್ನು ನಿರೂಪಿಸುತ್ತದೆ. ನಾಟಕದಲ್ಲೇ ಮತ್ತೊಂದು ನಾಟಕ (ಗರ್ಭಾಂಕ)ವಿರುವುದು ಇದರ ವೈಶಿಷ್ಟ್ಯ. 'ನಾಗಾನಂದ' ಐದು ಅಂಕಗಳ ನಾಟಕ. ವಿದ್ಯಾಧರ ರಾಜಕುಮಾರ ಜೀಮೂತವಾಹನನ ಆತ್ಮತ್ಯಾಗದ ವಿಷಯ ಅದರ ಮೂಲ ಕಥಾವಸ್ತು; ಇದರೊಡನೆ ಜೀಮೂತವಾಹನ–ಮಲಯವತಿಯರ ಪ್ರಣಯರೂಪದ ಉಪವಸ್ತುವನ್ನೂ ಕವಿ ಜೋಡಿಸಿದ್ದಾನೆ. ಆ ನಾಟಕದಲ್ಲಿ ಹಿಂದು ಹಾಗೂ ಬೌದ್ಧ ಸಂಸ್ಕೃತಿಗಳಲ್ಲಿನ ಕೆಲವಂಶಗಳ ಸಮ್ಮಿಳನ ಸೇರಿಬಂದಿರುವುದು ಗಮನಾರ್ಹವಾಗಿದೆ. ಒಟ್ಟಿನಲ್ಲಿ ಆ ನಾಟಕಗಳು ಭಾಷಾಶೈಲಿಗಳಲ್ಲಿ ಸೌಲಭ್ಯ ಸರಳತೆಗಳಿಂದ ಕೂಡಿ ಆ ಕಾರಣದಿಂದಲೂ ತಾಂತ್ರಿಕಕೌಶಲ ಇತ್ಯಾದಿಗಳ ದೃಷ್ಟಿಯಿಂದಲೂ ಸಂಸ್ಕೃತನಾಟಕ ಸಾಹಿತ್ಯದಲ್ಲಿ ವಿಶಿಷ್ಟಸ್ಥಾನವನ್ನು ಪಡೆದಿವೆ.

ಭರ್ತೃಹರಿ ಶತಕಗಳು: 'ಶೃಂಗಾರಶತಕ', 'ನೀತಿಶತಕ', 'ವೈರಾಗ್ಯಶತಕ'ಗಳು ಭರ್ತೃಹರಿ ವಿರಚಿತವೆಂದು ಹೇಳಲಾಗಿದೆ; ಕಾಲ ಸು. ೬೫೦. ಆ ಶತಕಗಳಲ್ಲಿರುವ ಶ್ಲೋಕಗಳು ಜೀವನದ ಭೋಗ, ನೀತಿ, ವಿರಕ್ತಿ ಇವುಗಳನ್ನು ಕುರಿತ ಸ್ವಾರಸ್ಯಮಯ ರಚನೆಗಳಾಗಿವೆ. ಮೂರು ಶತಕಗಳನ್ನೂ ಒಟ್ಟಾಗಿ 'ಸುಭಾಷಿತತ್ರಿಶತೀ' ಎಂದು ಕರೆಯುವುದು ವಾಡಿಕೆ.

ಅಮರು ಶತಕ: ಕರ್ತೃ ಅಮರು ಅಥವಾ ಅಮರುಕ; ಕಾಲ ಸು. ಕ್ರಿ.ಶ. ೭ನೆಯ ಶತಮಾನದ ಮಧ್ಯಭಾಗ. ಅದು ವಾಸ್ತವವಾಗಿ ಶೃಂಗಾರಶತಕವೇ ಸರಿ. ಅದರ ಒಂದೊಂದು ಶ್ಲೋಕವೂ ಶೃಂಗಾರದ ನಾನಾಮುಖಗಳ ಅಭಿವ್ಯಕ್ತಿಯನ್ನೊಳಗೊಂಡು ಬಹು ಪ್ರಸಿದ್ಧವಾಗಿದೆ. ಈ ಕೃತಿಯ ಅನೇಕ ಶ್ಲೋಕಗಳು ಅಲಂಕಾರಶಾಸ್ತ್ರಗ್ರಂಥಗಳಲ್ಲಿ ಉದ್ಧೃತವಾಗಿವೆ.

ಜಾನಕೀಹರಣ: ಕ್ರಿ.ಶ. ಸು. ೭ನೆಯ ಶತಮಾನದ ಅಂತ್ಯಭಾಗದಲ್ಲಿ ಕುಮಾರದಾಸನಿಂದ ವಿರಚಿತವಾದ ಒಂದು ಮಹಾಕಾವ್ಯ. ರಾಮಾಯಣ ಕಥೆ ಅದಕ್ಕೆ ಆಧಾರವಾಗಿದೆ. ಸಿಂಹಳೀ ಭಾಷೆಯಲ್ಲಿ ಮೊದಲು ಉಪಲಬ್ಧವಾಗಿದ್ದು, ಭಾರತದೇಶದಲ್ಲಿ ಅನಂತರ ಸಿಕ್ಕಿರುವ ಸಂಸ್ಕೃತರೂಪದ ಗ್ರಂಥಕ್ಕೆ ಅದು ಆಧಾರವಾಗಿತ್ತೆಂದು ವಿದ್ವಾಂಸರ

ಮತ. ಅದರ ಕರ್ತೃವಿನ ಮೇಲೆ ಕಾಳಿದಾಸನ ಪ್ರಭಾವ ಸ್ಪಷ್ಟವಾಗಿದೆ.

**ಶಿಶುಪಾಲವಧ :** ಕರ್ತೃ ಮಾಘ; ಕಾಲ ಸು. ೬೫೦. ೨೦ ಸರ್ಗಗಳುಳ್ಳ ಮಹಾ ಕಾವ್ಯ. ಮಹಾಭಾರತ ಪ್ರಸಂಗವೊಂದರ ಆಧಾರವುಳ್ಳದ್ದು. ಭಾಷೆಯಲ್ಲಿ ಹೆಚ್ಚು ಚಮತ್ಕಾರವಿದೆ. ಸಂಪ್ರದಾಯ ಹೇಳುವ

> ಉಪಮಾ ಕಾಳಿದಾಸಸ್ಯ ಭಾರವೇರರ್ಥಗೌರವಂ
> ದಂಡಿನಃ ಪದಲಾಲಿತ್ಯಂ ಮಾಘೇ ಸಂತಿ ತ್ರಯೋ ಗುಣಾಃ ॥

ಎಂಬ ಗುಣಮಾಪನ ಕ್ರಮದಲ್ಲಿ ಮಾಘನಿಗೆ ಉಪಮಾಲಂಕಾರ ಪ್ರಯೋಗ, ಅರ್ಥ ಗೌರವ, ಪದಲಾಲಿತ್ಯ ಈ ಮೂರರಲ್ಲಿಯೂ ನೈಪುಣ್ಯಪ್ರಶಂಸೆ ಯಥಾರ್ಥವಾಗಿ ದೊರಕಿದೆ.

**ಭವಭೂತಿಯ ನಾಟಕಗಳು :** ಭವಭೂತಿ ಕನ್ಯಾಕುಬ್ಜದ ಯಶೋವರ್ಮನ (೭೩೬) ಆಸ್ಥಾನದಲ್ಲಿದ್ದನೆಂದು ಕಲ್ಹಣ 'ರಾಜತರಂಗಿಣಿ'ಯಲ್ಲಿ ಹೇಳಿದ್ದಾನೆ. ಆದ್ದರಿಂದ ಅವನ ಕಾಲ ಸು. ೭೦೦ ಎಂದು ಹೇಳಲಾಗಿದೆ. ಈತನ 'ಮಾಲತೀಮಾಧವ' ಹತ್ತು ಅಂಕಗಳ ಪ್ರಕರಣ. ಮಾಲತೀಮಾಧವರ ಪ್ರಣಯವನ್ನು ಕುರಿತದ್ದು. ವರ್ಣನೆ ಹೃದ್ಯ ಭಾವಗಳಿಂದ ತುಂಬಿರುವ ಶ್ಲೋಕಗಳೂ ಗದ್ಯಭಾಗವೂ ಇಲ್ಲಿ ವಿಶೇಷವಾಗಿವೆ. ಸಮಾಜದಲ್ಲಿನ ಮಧ್ಯವರ್ಗದ ಜನಜೀವನದ ಹಲವಾರು ಅಂಶಗಳನ್ನೊಳಗೊಂಡ ಅದು ಸಾಕಷ್ಟು ನಾಟಕೀಯ ಸ್ವಾರಸ್ಯವುಳ್ಳದ್ದಾಗಿದೆ. ಇನ್ನೊಂದು ಕೃತಿ 'ಮಹಾವೀರಚರಿತ'ವು ೭ ಅಂಕಗಳಲ್ಲಿ ರಾಮನ ಚರಿತೆಯ ಮುಂಚಿನ ಸಾಹಸಕಾರ್ಯಗಳನ್ನು ಚಿತ್ರಿಸುತ್ತದೆ. ವಾಲ್ಮೀಕಿರಾಮಾಯಣ ಇದಕ್ಕೆ ಆಧಾರ. ನಾಟಕದಲ್ಲಿ ಅಲ್ಲಲ್ಲೇ ಸೂಕ್ತ ಬದಲಾವಣೆಗಳನ್ನು ಮಾಡಿಕೊಂಡಿದೆ. ರಚನೆಯಲ್ಲಿ ಕೌಶಲವಿದೆ. ೭ ಅಂಕಗಳುಳ್ಳ 'ಉತ್ತರರಾಮಚರಿತ' ಭವಭೂತಿಯ ಮೇರುಕೃತಿ. ರಾಮನ ಚರಿತೆಯ ಅಂತಿಮಭಾಗದ ವಿಷಯಗಳು ಅದರ ವಸ್ತು. ದುಃಖದ ಮೂಲಕ ವೈವಾಹಿಕಪ್ರೇಮ ಪರಿಶುದ್ಧವಾಗಿ ಆದರ್ಶಪ್ರೇಮವಾಗಿ ಪರಿಣಮಿಸುವಂತೆ ಮಾಡಬಲ್ಲ ಕಾವ್ಯಾತ್ಮಕ ಸನ್ನಿವೇಶಗಳ ಒಂದು ನಾಟಕೀಯ ವಿನ್ಯಾಸವನ್ನು ಅಲ್ಲಿ ಕಾಣಬಹುದು. ಕರುಣವೇ ನಾಟಕದ ಪ್ರಧಾನ ರಸ; ರಸವೆಂದರೆ ಅದೊಂದೇ ಎಂದು ಭವಭೂತಿಯ ಮತ. 'ಪ್ರಿಯದರ್ಶಿಕಾ'ದಲ್ಲಿರುವಂತೆ ಇದರಲ್ಲೂ ನಾಟಕದಲ್ಲಿ ನಾಟಕ (ಗರ್ಭಾಂಕ)ವಿದೆ. ಅಂತಹ ಅನೇಕ ಕಾರಣಗಳಿಂದ ಭವಭೂತಿಗೆ 'ಉತ್ತರೇ ರಾಮಚರಿತೇ ಭವಭೂತಿರ್ವಿಶಿಷ್ಯತೇ' ಎಂಬ ಪ್ರಶಂಸೆ ಯಥಾವತ್ತಾಗಿ ಸಂದಿದೆ.

ದೊಡ್ಡ ವಿದ್ವತ್ಕವಿಯೆಂದು ಭವಭೂತಿ ಖ್ಯಾತಿಗಳಿಸಿದ್ದಾನೆ. ಅವನ ಕೃತಿಗಳಲ್ಲಿ ಪಾಂಡಿತ್ಯ ಪ್ರತಿಭೆಗಳು ಅಸಾಧಾರಣವಾಗಿ ಒಡಗೂಡಿದ್ದರೂ "ಅವನ ಪಾಂಡಿತ್ಯವು ಕೆಲವು ವೇಳೆ ನಾಟಕಕ್ಕೆ ಅತಿಯಾಗುತ್ತದೆ"[೬೯]—ಎಂಬ ಅಭಿಪ್ರಾಯವೂ ಇದೆ.

**ಹರವಿಜಯ :** ಕಾಶ್ಮೀರದ ರತ್ನಾಕರನಿಂದ ರಚಿತವಾದ, ೫೦ ಸರ್ಗಗಳುಳ್ಳ ಮಹಾಕಾವ್ಯ. ಕಾಲ ಸು. ೮೫೦. ಶಿವನಿಂದ ಅಂಧಕಾಸುರಸಂಹಾರ ಅದರ ಕಥಾವಸ್ತು. ಕಾವ್ಯದಲ್ಲಿ ಶಬ್ದಾಡಂಬರ ಹೆಚ್ಚು. ಬಾಣನ ಶೈಲಿಯನ್ನು ಅನುಸರಿಸುವುದಾಗಿ ಕವಿ

ಹೇಳಿಕೊಂಡಿದ್ದಾನೆ; ಆದರೆ ಮಾಘನ ಪ್ರಭಾವವೂ ಕಾಣುತ್ತದೆ.

ಹೀಗೆ ೧೦೦೦ರಿಂದ-೮೫೦ರ ವರೆಗಿನ ಅವಧಿಯಲ್ಲಿ ಸಂಸ್ಕೃತಸಾಹಿತ್ಯವು ಗದ್ಯ ಪದ್ಯ ನಾಟಕ ರೂಪಗಳಲ್ಲಿ ಹೊಸ ಸೃಷ್ಟಿಯ ಲಕ್ಷಣಗಳಿಂದ ಕೂಡಿ ಬೆಳೆದಿದೆ. ಕಾಳಿದಾಸಾದಿ ಮಹಾಕವಿಗಳು ತಮ್ಮ ಮಹಾಕೃತಿಗಳ ಮೂಲಕ ಅದರ ಸಂಪತ್ತನ್ನು ಹೆಚ್ಚಿಸಿದ್ದಾರೆ. ರಾಜಮಹಾರಾಜರುಗಳ ಆಶ್ರಯ ಪ್ರೋತ್ಸಾಹಗಳು ದೊರಕಿಸಿದೆ; ಕಾವ್ಯಸೃಷ್ಟಿಯ ಜೊತೆಯಲ್ಲಿ ವಿಮರ್ಶೆಯೂ ನಡೆದು ಬಂದಿರುವುದರಿಂದ ಪ್ರಾಸಂಗಿಕವಾಗಿ ಇಲ್ಲಿ ಅದನ್ನು ಕುರಿತು ಕೆಲವು ಮಾತುಗಳನ್ನು ಹೇಳಬಹುದು.

ಶಾಸ್ತ್ರಗ್ರಂಥಗಳು: ಕ್ರಿ.ಶಕದ ಪ್ರಾರಂಭಕ್ಕಿಂತ ಮೊದಲು, ಪ್ರಾಚೀನವಾದ ಋಗ್ವೇದ ಕಾಲದಿಂದಲೂ ಅಲ್ಲಲ್ಲೆ ಕ್ರಮ ಕ್ರಮವಾಗಿ ಕಾವ್ಯವಿಮರ್ಶೆಯ ಅಭಿಪ್ರಾಯಗಳೂ ಪಾರಿಭಾಷಿಕ ಶಬ್ದಗಳೂ ಕಂಡುಬಂದಿವೆ. ಅಷ್ಟೇ ಹೊರತು ಆಗ ವಿಮರ್ಶನ ಶಾಸ್ತ್ರವಿದ್ದಿತೆಂಬುದಕ್ಕೆ ಆಧಾರಗಳು ದೊರಕಿಲ್ಲ; ಅದಕ್ಕೆ ಸಂಬಂಧಪಟ್ಟ ಗ್ರಂಥವೂ ಉಪಲಬ್ಧವಾಗಿಲ್ಲ. ಕ್ರಿ.ಶಕದ ಮೊದಲಿನ ಈ ೮-೯ ಶತಮಾನಗಳ ಅವಧಿಯಲ್ಲಿ ಶಾಸ್ತ್ರ ರೂಪುಗೊಂಡಿರುವುದಲ್ಲದೆ, ಅದಕ್ಕೆ ಸಾಕ್ಷಿಗಳಾಗಿ ಕೆಲವು ಗ್ರಂಥಗಳು ಉಪಲಬ್ಧವಾಗಿವೆ. ಕಾವ್ಯತತ್ತ್ವವಿಚಾರದ ಅಂತಹ ಗ್ರಂಥಗಳಲ್ಲಿ ಭರತನ 'ನಾಟ್ಯಶಾಸ್ತ್ರ' ಮೊದಲನೆಯದು (೩೦೦). ಇದು ಲಲಿತಕಲೆಗಳ ಒಂದು ವಿಶ್ವಕೋಶ. ಇದರಲ್ಲಿ ನಾಟಕಕ್ಕೆ ಅನ್ವಯಿಸುವಂತೆ 'ರಸ' ವಿಚಾರವೂ ಕೆಲವು ಅಲಂಕಾರಗಳೂ ಪ್ರತಿಪಾದಿತವಾಗಿವೆ; ಅಲಂಕಾರ ಶಾಸ್ತ್ರ ಚರಿತ್ರೆಯ ದೃಷ್ಟಿಯಿಂದ ಆ ವಿಷಯಗಳು ಈಚೆಗೆ ಸಾಕಷ್ಟು ಪ್ರಾಮುಖ್ಯ ಪಡೆದಿವೆ. ಕಾವ್ಯದ ಸ್ವರೂಪಾದಿಗಳನ್ನು ಕುರಿತು ಕ್ರಮಬದ್ಧ ನಿರೂಪಣೆಯುಳ್ಳ ಉಪಲಬ್ಧ ಗ್ರಂಥಗಳಲ್ಲಿ ಮೊದಲನೆಯದು ಭಾಮಹನ (ಕ್ರಿ.ಶ. ಸು. ೬೦೦ರ ತರುವಾಯ) 'ಕಾವ್ಯಾಲಂಕಾರ'ವೆಂದು ಕೆಲವು ವಿದ್ವಾಂಸರ ಮತ. ವಕ್ರೋಕ್ತಿಯು ಕಾವ್ಯಕ್ಕೆ ಮೂಲಭೂತವಾದ ತತ್ತ್ವವೆಂಬ ಅಭಿಪ್ರಾಯದಿಂದ ಹಿಡಿದು, ದೋಷಗಳ, ನಾನಾ ಅಲಂಕಾರಾದಿಗಳ ನಿರೂಪಣೆಯವರೆಗೆ ಹಲವಾರು ವಿಚಾರಗಳು ಅಲ್ಲಿ ಕಂಡುಬರುತ್ತವೆ. ಅನಂತರ ದಂಡಿಯ (ಕ್ರಿ.ಶ. ಸು. ೭ ಶತಮಾನದ ಪ್ರಾರಂಭದಲ್ಲಿ) 'ಕಾವ್ಯಾದರ್ಶ'ದಲ್ಲೂ ಅಲಂಕಾರಾದಿಗಳ ನಿರೂಪಣೆ ವಿಶೇಷವಾಗಿದ್ದರೂ, ಅದರ ಕರ್ತೃ 'ಗುಣ'ಗಳ ವಿಮರ್ಶೆಗೆ ಹೆಚ್ಚು ಗಮನಕೊಟ್ಟಿದ್ದಾನೆ. ಆ 'ಗುಣ'ಗಳಿಗೆ ಆಧಾರವಾದ 'ಮಾರ್ಗ'ಗಳ ಕ್ರಮಬದ್ಧ ಪರಿಶೀಲನೆಯನ್ನೂ ಮಾಡಿದ್ದಾನೆ. ಅವರಿಬ್ಬರ ಗ್ರಂಥಗಳೂ ಶ್ಲೋಕರೂಪದಲ್ಲಿವೆ. ತರುವಾಯದ ಉದ್ಭಟನ (ಸು. ೭೫೦) 'ಕಾವ್ಯಾಲಂಕಾರ ಸಾರಸಂಗ್ರಹ'ವೂ ವಿಶೇಷವಾಗಿ ಅಲಂಕಾರಗಳ ನಿರೂಪಣೆಯನೊಳಗೊಂಡಿದೆ; ಆ ಗ್ರಂಥಕ್ಕೆ 'ಉದ್ಭಟಾಲಂಕಾರ'ವೆಂಬ ಹೆಸರೂ ಇದೆ. ಶಾಂತರಸದ ಪ್ರತಿಪಾದಕರಲ್ಲಿ ಉದ್ಭಟ ಮೊದಲನೆಯವನು. ಅವನ ಕೆಲವು ಅಭಿಪ್ರಾಯಗಳು ಮುಂದೆ ಆಲಂಕಾರಿಕರ ಮೇಲೆ ಪ್ರಭಾವ ಬೀರಿದ್ದು, ಅವನು ಸಾಮಾನ್ಯವಾಗಿ ಎಲ್ಲ ಪ್ರಸ್ಥಾನಗಳ ಆಲಂಕಾರಿಕರ ಮನ್ನಣೆಗೂ ಪಾತ್ರನಾಗಿದ್ದಾನೆ.

ಅನಂತರ ಬಂದ ವಾಮನನ (ಸು. ೮೦೦) 'ಕಾವ್ಯಾಲಂಕಾರ ಸೂತ್ರವೃತ್ತಿ' ಸೂತ್ರರೂಪದಲ್ಲಿದ್ದು, ಕರ್ತೃವೇ ಬರೆದಿರುವ ವೃತ್ತಿಯಿಂದ ಕೂಡಿದೆ. ಕಾವ್ಯಕ್ಕೆ ಆತ್ಮದ ಕಲ್ಪನೆಯನ್ನು ಗ್ರಹಿಸಿದವರಲ್ಲಿ ವಾಮನ ಮೊತ್ತಮೊದಲನೆಯವನು. ಮಾಧುರ್ಯಾದಿ ಗುಣಾತ್ಮಕವಾಗಿರುವ ವಿಶಿಷ್ಟ ಪದರಚನೆಯೇ 'ರೀತಿ'ಯೆಂದು ಅವನ ಮತ. 'ರೀತಿ' ಆತ್ಮವೆಂದು ಮುಂದೆ ಸಾಮಾನ್ಯವಾಗಿ ಅಂಗೀಕೃತವಾಗಿಲ್ಲವೆಂಬುದೇನೋ ನಿಜ. ಆದರೆ ಕಾವ್ಯಕ್ಕೆ ಆತ್ಮದ ಕಲ್ಪನೆ, ಅದರ ಅನ್ವೇಷಣೆಗಳ ದೃಷ್ಟಿಯಿಂದ ವಾಮನನಿಗೆ ಅಲಂಕಾರ ಶಾಸ್ತ್ರದಲ್ಲಿ ವಿಶಿಷ್ಟ ಸ್ಥಾನವಿದೆ. ತರುವಾಯ ಲೊಲ್ಲಟ (ಸು. ೮೨೦), ಶಂಕುಕ (ಸು. ೮೪೦) ಇವರು ಭರತನ 'ರಸ' ಸೂತ್ರದ ವಿವರಣಕಾರರೆಂದು 'ನಾಟ್ಯಶಾಸ್ತ್ರ'ದ ಮೇಲಣ, ಅಭಿನವಗುಪ್ತಕೃತ 'ಅಭಿನವಭಾರತೀ' ಎಂಬ ವ್ಯಾಖ್ಯಾನದಿಂದ ತಿಳಿದು ಬರುತ್ತದೆ. ಅವರ ಸ್ವತಂತ್ರ ಗ್ರಂಥ ಯಾವುದೂ ಉಪಲಬ್ಧವಾಗಿಲ್ಲ. ಮುಂದೆ ರುದ್ರಟನ (ಸು. ೮೫೦) 'ಕಾವ್ಯಾಲಂಕಾರ' ಶ್ಲೋಕರೂಪದಲ್ಲಿದೆ. ಆ ಗ್ರಂಥದಲ್ಲಿ ಬಹುಮಟ್ಟಿಗೆ ಅಲಂಕಾರಗಳನ್ನು ಶಾಸ್ತ್ರೀಯ ಕ್ರಮವನ್ನನುಸರಿಸಿ ವಿಂಗಡಿಸಲಾಗಿದೆ. ರುದ್ರಟನಿಗೆ 'ರಸ'ದ ಪರಿಚಯವಿದ್ದಿತೆಂದು ಅವನ ಗ್ರಂಥದಿಂದ ತಿಳಿದುಬರುತ್ತದೆ; ಆದರೆ ಅಲಂಕಾರಗಳಿಗೇ ಪ್ರಾಮುಖ್ಯ ಕೊಟ್ಟಿದ್ದಾನೆ.

೧೦೦ರಿಂದ-೮೫೦ರ ವರೆಗಿನ ಅವಧಿಯಲ್ಲಿ ಇನ್ನೂ ಕೆಲವು ಶಾಸ್ತ್ರಗಳು ಪ್ರವರ್ಧಮಾನಕ್ಕೆ ಬಂದು, ಅವಕ್ಕೆ ಸಂಬಂಧಪಟ್ಟಂತೆ ಅನೇಕ ಗ್ರಂಥಗಳು ಬೆಳಕಿಗೆ ಬಂದಿವೆ. ಸ್ಥೂಲವಾಗಿ ಹೇಳುವುದಾದರೆ ದಾರ್ಶನಿಕ ಪದ್ಧತಿಗಳಿಗೆ ಆಧಾರವಾಗಿರುವ 'ವೇದಾಂತ ಸೂತ್ರ' ಮುಂತಾದವು ಮುಖ್ಯವಾದವು. ಅಮರಸಿಂಹನ 'ಅಮರಕೋಶ' (ಸು. ಕ್ರಿ.ಶ. ೭ನೆಯ ಶತಮಾನ) ಜನಪ್ರಿಯ ಕೋಶಗ್ರಂಥವಾಗಿ ರೂಢಿಯಲ್ಲಿದೆ. ಕೌಟಿಲ್ಯನ 'ಅರ್ಥ ಶಾಸ್ತ್ರ', ವಾತ್ಸ್ಯಾಯನನ ವಿರಚಿತ 'ಕಾಮಸೂತ್ರ', 'ಚರಕಸಂಹಿತಾ' 'ಸುಶ್ರುತ ಸಂಹಿತಾ' ಎಂಬ ಆಯುರ್ವೇದ ಗ್ರಂಥಗಳು, ವರಾಹಮಿಹಿರನ 'ಪಂಚಸಿದ್ಧಾಂತಿಕಾ' 'ಬೃಹತ್ಸಂಹಿತಾ' ಮುಂತಾದ ಜ್ಯೋತಿಷ ಗ್ರಂಥಗಳು, ಆರ್ಯಭಟನ 'ಆರ್ಯಭಟೀಯ' ಮತ್ತು ಬ್ರಹ್ಮಗುಪ್ತನ 'ಬ್ರಾಹ್ಮಸ್ಫುಟಸಿದ್ಧಾಂತ' ಎಂಬ ಗಣಿತ ಗ್ರಂಥಗಳು—ಇವೇ ಮುಂತಾದುವು ಪ್ರಸಿದ್ಧಿ ಪಡೆದಿವೆ.[೬]

## ಜೈನ ಸಂಸ್ಕೃತ ಗ್ರಂಥಗಳು

ಕಾವ್ಯಸ್ಥ ಸಂಸ್ಕೃತಯುಗದ (೧೦೦-೮೫೦) ಸಂಸ್ಕೃತ ಭಾಷಾಸಾಹಿತ್ಯಗಳಿಗೆ ಜೈನರ ಕೊಡುಗೆ ಅಮೂಲ್ಯವಾಗಿರುವುದಲ್ಲದೆ, ವ್ಯಾಪಕವೂ ಆಗಿದೆ. ಅಲ್ಲದೆ ಸಂಸ್ಕೃತ ಪ್ರಾಕೃತಗಳಲ್ಲಿರುವ ಜೈನಗ್ರಂಥಗಳ ಹಿನ್ನೆಲೆ ಕನ್ನಡ ಭಾಷಾಸಾಹಿತ್ಯಗಳಿಗೆ ಅತ್ಯುಪಯುಕ್ತವಾಗಿದ್ದುವೆಂಬ ವಿಚಾರ ಗಮನಾರ್ಹವಾಗಿದ್ದು, ಆ ದೃಷ್ಟಿಯಿಂದ ಈ ಯುಗದಲ್ಲಿನ ಮುಖ್ಯ ಜೈನ ಸಂಸ್ಕೃತಗ್ರಂಥಗಳ ಬಗೆಗೆ ಸಂದರ್ಭೋಚಿತವಾಗಿ ಇಲ್ಲಿ ಕೆಲವು ಮಾತುಗಳನ್ನು ಹೇಳಬಹುದು.

ಕ್ರಿ.ಪೂ. ಸು. ೬–೭ನೆಯ ಶತಮಾನದಿಂದ ಪ್ರಾರಂಭವಾದ ಜೈನ ಧಾರ್ಮಿಕ ರಚನೆಗಳು ಕ್ರಿ.ಶ. ೫ನೆಯ ಶತಮಾನದಲ್ಲಿ ದೇವರ್ಧಿಯಿಂದ ಸಂಕಲಿತವಾಗಿ, ಅಲ್ಲಿ ಬೆಳವಣಿಗೆಯ ಒಂದು ಮುಖ್ಯ ಹಂತವನ್ನು ಸೇರಿದೆ. 'ಸಿದ್ಧಾಂತ' ಅಥವಾ 'ಆಗಮ' ಎನಿಸಿಕೊಂಡಿರುವ ಅಂತಹ ಪವಿತ್ರ ಗ್ರಂಥಗಳು ಅರ್ಧಮಾಗಧೀ ಭಾಷೆಯಲ್ಲಿವೆ. ಆ 'ಸಿದ್ಧಾಂತ'ಗಳಲ್ಲದೆ ಪ್ರತ್ಯೇಕ ಜೈನ ರಚನೆಗಳೂ ಹೇರಳವಾಗಿವೆ. ಅವು ಸಂಸ್ಕೃತ ದಲ್ಲೋ ಜೈನಮಹಾರಾಷ್ಟ್ರಿಯಲ್ಲೋ ರಚಿತವಾಗಿದ್ದು, ಕೆಲವು 'ಸಿದ್ಧಾಂತ' ಪೂರ್ವದ ಕಾಲಕ್ಕೂ ಸೇರಿವೆ. ಸಂಸ್ಕೃತರಚನೆಗಳಾದರೋ ವಿಶೇಷವಾಗಿ ಕ್ರಿ.ಶ. ೫–೬ನೆಯ ಶತಮಾನಗಳಿಗಿಂತ ಈಚಿನವೆಂದು ವಿದ್ವಾಂಸರ ಮತ. ಅಂತಹ ಗ್ರಂಥ ಗಳಲ್ಲಿ ಕಥೆಗಳು, ಇತಿಹಾಸ ಪುರಾಣಗಳು, ವ್ಯಾಕರಣಾದಿಶಾಸ್ತ್ರಗಳು, ತತ್ತ್ವಜ್ಞಾನ, ಧರ್ಮ, ಕೃಷ್ಣನ ಕಥೆಗಳು, ರಾಮಾಯಣ ಮಹಾಭಾರತಗಳ ಅಳವಡಿಕೆಗಳು—ಇವೇ ಮುಂತಾದ ವಿಷಯಗಳು ಸೇರಿವೆ. ಹಾಗೆ ಸಂಸ್ಕೃತ ಗ್ರಂಥಾದಿಗಳನ್ನು ರಚಿಸಿದ ಜೈನ ಕವಿಗಳು ಮೊದಲಾದವರಲ್ಲಿ ಕೆಲವರ ಭಾಷೆ ಸರಳವೂ ಸ್ಪಷ್ಟವೂ ಆಗಿದೆ; ಕೆಲವ ರದ್ದು ಕ್ಲಿಷ್ಟವಾದ ಕಾವ್ಯಭಾಷೆ; ಮತ್ತೆ ಕೆಲವರ ಭಾಷೆ ಸಂಸ್ಕೃತ ಪ್ರಾಕೃತಗಳ ಮಿಶ್ರಣ.[67] ಪಾಂಡಿತ್ಯ ಪ್ರತಿಭೆಗಳಿಂದ ಕೂಡಿರುವ ಆ ಗ್ರಂಥಗಳಿಗೆ ಜೈನಧರ್ಮದಲ್ಲೂ ಸಂಸ್ಕೃತ ಸಾಹಿತ್ಯದಲ್ಲೂ ವಿಶಿಷ್ಟಸ್ಥಾನವಿದೆ. ಈ ಅವಧಿಯಲ್ಲಿನ ವಿವಿಧ ಜೈನಗ್ರಂಥಗಳ ಕಾಲವನ್ನು ನಿರ್ಣಯಿಸುವುದು ಕಷ್ಟವೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಉಪಲಬ್ಧವಾಗಿರುವ ವಂಶಾನುಚರಿತರೂಪದ ಪಟ್ಟಾವಳಿ ಥೇರಾವಳಿಗಳು ಇವೇ ಮುಂತಾದವುಗಳ ಸಹಾಯದಿಂದ ಕಾಲನಿರ್ಣಯ ಪ್ರಯತ್ನ ಸಾಕಷ್ಟು ನಡೆದಿದೆ.

ಕ್ರಿ.ಶಕದ ಮೊದಲ ಶತಮಾನಗಳಲ್ಲಿ ಭದ್ರಬಾಹು, ಕುಂದಕುಂದ, ವಟ್ಟಕೇರ, ಕುಮಾರಸ್ವಾಮಿ ಮುಂತಾದ ಆಚಾರ್ಯರಿಂದ ಪ್ರಾಕೃತಭಾಷೆಯಲ್ಲಿ ಗ್ರಂಥಗಳು ರಚಿತವಾಗಿವೆ.. ವಿಮಲಸೂರಿಯ 'ಪಉಮಚರಿಯ'ವು ರಾಮಕಥೆಯನ್ನಳವಡಿಸಿಕೊಂಡು ಪ್ರಾಕೃತಭಾಷೆಯಲ್ಲಿ ರಚಿತವಾಗಿರುವ ಒಂದು ಪ್ರಸಿದ್ಧ ಕೃತಿ. ಮುಂದೆ ರಾಮಕಥೆಯ ಅಳವಡಿಕೆಯ ರೂಪದ ಕೆಲವು ಪ್ರಮುಖ ಜೈನ ಕೃತಿಗಳಿಗೆ ಅದು ಮಾದರಿಯಾಗಿ ಮಹತ್ತ್ವ ಪಡೆದಿದೆ.

ಮೇಲ್ಕಂಡ ಅವಧಿಯಲ್ಲಿ (೧೩೫–೨೧೯) ಉಮಾಸ್ವಾಮಿ (=ಉಮಾಸ್ವಾತಿ)ಯಿಂದ ರಚಿತವಾದ 'ತತ್ತ್ವಾರ್ಥಾಧಿಗಮಸೂತ್ರ' ಎಂಬುದು ತರ್ಕ, ವಸ್ತುವಿವೇಚನೆ, ಜೈನ ಧರ್ಮ ಇವುಗಳ ಬಗೆಗೆ ಪ್ರಮಾಣ ಗ್ರಂಥವಾಗಿದ್ದು, ಜೈನರ ಶ್ವೇತಾಂಬರ ದಿಗಂಬರ ಪಕ್ಷಗಳೆರಡರಿಂದಲೂ ಮನ್ನಣೆ ಪಡೆದಿದೆ. ಅನಂತರ ಆದಿತೀರ್ಥಂಕರ ಋಷಭದೇವನ ಸ್ತುತಿಯನ್ನೊಳಗೊಂಡಿರುವ 'ಭಕ್ತಾಮರ ಸ್ತೋತ್ರ'ವಿದೆ. ಇದರ ಕರ್ತೃ ಮಾನತುಂಗ (ಕ್ರಿ.ಶ. ೩ನೆಯ ಶತಮಾನ). 'ತತ್ತ್ವಾರ್ಥಾಧಿಗಮಸೂತ್ರ' ವ್ಯಾಖ್ಯಾನವಾದ 'ಸರ್ವಾರ್ಥ ಸಿದ್ಧಿ' ಎಂಬುದು ಪ್ರಸಿದ್ಧ ವೈಯಾಕರಣ ಜಿನೇಂದ್ರಬುದ್ಧಿ (=ಪೂಜ್ಯಪಾದ, ದೇವನಂದಿ) ಯಿಂದ ಸು. ಕ್ರಿ.ಶ. ೬ನೆಯ ಶತಮಾನದಲ್ಲಿ ವಿರಚಿತವಾದುದು. 'ನ್ಯಾಯಾವತಾರ'

ಎಂಬ ತರ್ಕಶಾಸ್ತ್ರಗ್ರಂಥವೂ ಪಾರ್ಶ್ವನಾಥನನ್ನು ಕುರಿತ 'ಕಲ್ಯಾಣ ಮಂದಿರ' ಸ್ತೋತ್ರವೂ ವಿಖ್ಯಾತ ತಾರ್ಕಿಕ ಹಾಗೂ ಕವಿ ಸಿದ್ಧಸೇನ ದಿವಾಕರನ (ಕ್ರಿ.ಶ. ಸು. ೭ನೆಯ ಶತಮಾನ) ಕೃತಿಗಳು. ರವಿಷೇಣನ 'ಪದ್ಮಪುರಾಣ' (೬೭೮) ವಿಮಲಸೂರಿಯ 'ಪಉಮಚರಿಯ'ವನ್ನನುಸರಿಸಿ ರಚಿತವಾದ ಕೃತಿ. 'ಯುಕ್ತ್ಯನುಶಾಸನ' ಎಂಬ ತತ್ತ್ವಗ್ರಂಥ, 'ರತ್ನಕರಂಡಶ್ರಾವಕಾಚಾರ' (='ಉಪಾಸಕಾಧ್ಯಯನ')ವೆಂಬ ಧರ್ಮ ಗ್ರಂಥ, 'ಬೃಹತ್‌ಸ್ವಯಂಭೂಸ್ತೋತ್ರ' (='ಚತುರ್ವಿಂಶತಿಜಿನಸ್ತವನ') ಮತ್ತು 'ತತ್ತ್ವಾರ್ಥಾಧಿಗಮಸೂತ್ರ'ದ ಮೇಲಣ ವ್ಯಾಖ್ಯಾನ-ಇವು ಪ್ರಸಿದ್ಧ ತಾರ್ಕಿಕ ಹಾಗೂ ಕವಿ ಸಮಂತಭದ್ರನಿಂದ (ಕ್ರಿ.ಶ. ೮ನೆಯ ಶತಮಾನದ ಆದಿಭಾಗ) ರಚಿತವಾದವು. ಪೂರ್ವೋಕ್ತ ವ್ಯಾಖ್ಯಾನದ ಪೀಠಿಕೆಗೆ 'ದೇವಾಗಮಸ್ತೋತ್ರ' (='ಆಪ್ತಮೀಮಾಂಸಾ') ಎಂಬ ಹೆಸರಿದ್ದು, ಅದರಲ್ಲಿ ಜೈನದರ್ಶನದ ಒಂದು ಪ್ರಧಾನಾಂಶವಾದ 'ಸ್ಯಾದ್ವಾದ'ದ ವಿಚಾರವಿದೆ. 'ನ್ಯಾಯವಿನಿಶ್ಚಯ'ವೆಂಬ ತರ್ಕಗ್ರಂಥ, 'ತತ್ತ್ವಾರ್ಥರಾಜವಾರ್ತ್ತಿಕ' ಎಂದು ಕರೆಯಲ್ಪಟ್ಟಿರುವ ವ್ಯಾಖ್ಯಾನ ('ತತ್ತ್ವಾರ್ಥಾಧಿಗಮಸೂತ್ರ'ವನ್ನು ಕುರಿತದ್ದು) ಮತ್ತು ಮೇಲ್ಕಂಡ 'ಆಪ್ತಮೀಮಾಂಸೆ'ಗೆ 'ಅಷ್ಟಶತೀ' ಎಂಬ ವಾಖ್ಯಾನ ಇವು ಸುಮಾರು ಅದೇ ಕಾಲಕ್ಕೆ ಸೇರಿದ ಅಕಲಂಕದೇವನ ಕೃತಿಗಳು. ಜಿನಮಹಾವೀರನ ಸ್ತುತಿರೂಪದ 'ಪಾತ್ರಕೇಸರಿ ಸ್ತೋತ್ರ' ಮತ್ತು 'ತತ್ತ್ವಾರ್ಥಾಧಿಗಮ ಸೂತ್ರ'ಕ್ಕೆ 'ತತ್ತ್ವಾರ್ಥ ಶ್ಲೋಕ ವಾರ್ತಿಕ'ವೆಂಬ ವ್ಯಾಖ್ಯಾನ—ಇವು ವಿದ್ಯಾನಂದ ಪಾತ್ರಕೇಸರಿ (ಕ್ರಿ.ಶ. ಸು. ೮ನೆಯ ಶತಮಾನದ ಆದಿಭಾಗ) ವಿರಚಿತ ಗ್ರಂಥಗಳು. ಮುಂದೆ ಹರಿಭದ್ರನ 'ಷಡ್‌ದರ್ಶನ ಸಮುಚ್ಚಯ' (೭೦೫-೭೭೫) ಮುಂತಾದ ದಾರ್ಶನಿಕ ಗ್ರಂಥಗಳೂ ಜೈನಸಿದ್ಧಾಂತದ ಮೇಲಣ ಅವನ ಸಂಸ್ಕೃತ ವ್ಯಾಖ್ಯಾನಗಳೂ ಬಂದಿವೆ. ಅವನು 'ಸಿದ್ಧಾಂತ'ಗಳ ಮೇಲೆ ಸಂಸ್ಕೃತ ವಾಖ್ಯಾನವನ್ನು ಮೊತ್ತಮೊದಲು ರಚಿಸಿದವನೆಂದು ಹೇಳಲಾಗಿದೆ. ಅನಂತರ ಬರುವ ಕೃತಿಗಳೆಂದರೆ, ಬಪ್ಪಭಟ್ಟಿಯ (೭೪೩-೮೩೮) 'ಸರಸ್ವತೀಸ್ತೋತ್ರ', 'ಚತುರ್ವಿಂ ಶತಿಜಿನಸ್ತುತಿ'ಗಳು; ಹರಿವಂಶ ಕುರುವಂಶದವರ ಕಥೆಯೊಡನೆ ನೇಮಿನಾಥ ತೀರ್ಥಂಕ ರನ ಕಥೆಯನ್ನು ವಸ್ತುವಾಗಿ ಉಳ್ಳ ಪುನ್ನಾಟಸಂಘದ ಜಿನಸೇನ (ಆದಿಪುರಾಣದ ಕರ್ತೃ ಸೇನಸಂಘದ ಜಿನಸೇನನಿಗಿಂತ ಬೇರೆ) ರಚಿಸಿರುವ 'ಹರಿವಂಶಪುರಾಣ' (೭೮೩)-ಇವು. 'ಜ್ಞಾನಾರ್ಣವ' (=ಯೋಗಪ್ರದೀಪಾಧಿಕಾರ) ಎಂಬುದು ಶುಭಚಂದ್ರನ (ಸು. ೮೦೦) ಒಂದು ದಾರ್ಶನಿಕ ಗ್ರಂಥ.

ಮುಂದೆ, ೬೩ ಮಹಾಪುರುಷರ ಚರಿತೆಯನ್ನೊಳಗೊಂಡಿರುವಂತೆ ರಚಿತವಾದ ಮತ್ತು ಅತಿಶಯ ಕಾವ್ಯಗುಣವುಳ್ಳ 'ತ್ರಿಷಷ್ಟಿಲಕ್ಷಣ ಮಹಾಪುರಾಣ'ವು ಜನಪ್ರಿಯವಾದ ಪ್ರಸಿದ್ಧ ಕೃತಿಯೆನಿಸಿಕೊಂಡಿದೆ; ಅದನ್ನು ಸಂಕ್ಷಿಪ್ತವಾಗಿ 'ಮಹಾಪುರಾಣ'ವೆಂದು ಕರೆಯುವುದುಂಟು. 'ಆದಿಪುರಾಣ', 'ಉತ್ತರಪುರಾಣ' ಇವೆರಡೂ ಸೇರಿ 'ಮಹಾ ಪುರಾಣ'ವಾಗಿದೆ. ೪೭ ಅಧ್ಯಾಯಗಳುಳ್ಳ 'ಆದಿಪುರಾಣ'ದ ಮೊದಲ ೪೨ ಜಿನಸೇನ ನಿಂದಲೂ (೮೧೫-೮೭೭), ಉಳಿದ ೫ ಅವನ ಶಿಷ್ಯ ಗುಣಭದ್ರನಿಂದಲೂ ವಿರಚಿತ

ವಾಗಿದೆ; 'ಉತ್ತರ ಪುರಾಣ'ವಾದರೋ, ಪೂರ್ತಿಯಾಗಿ ಗುಣಭದ್ರಕರ್ತೃಕವೇ ಆಗಿದೆ. 'ಪಾರ್ಶ್ವಾಭ್ಯುದಯ' ಎಂಬುದು ಜಿನಸೇನನ ಮತ್ತೊಂದು ಕೃತಿ. ಅದರ ಪ್ರತಿ ಶ್ಲೋಕದಲ್ಲೂ ಕಾಳಿದಾಸನ 'ಮೇಘದೂತ'ದಿಂದ ಆರಿಸಿಕೊಂಡ ಒಂದು ಅಥವಾ ಎರಡು ಪಂಕ್ತಿಗಳು ಸೇರಿಸಲ್ಪಟ್ಟಿವೆ; ಉಳಿದವು ಅದರ ಕರ್ತೃವಿನಿಂದಲೇ ರಚಿತವಾಗಿರುವ ಭಾಗ ಗಳಾಗಿವೆ. 'ಆತ್ಮಾನುಶಾಸನ'ವೆಂಬ ಕಾವ್ಯರೂಪದ ಧಾರ್ಮಿಕಗ್ರಂಥ ಗುಣಭದ್ರನ ಮತ್ತೊಂದು ಕೃತಿ. 'ಆದಿಪುರಾಣ'ದ ವಿಷಯ, ಆದಿತೀರ್ಥಂಕರ ಋಷಭದೇವನ ಮತ್ತು ಪ್ರಥಮ ಚಕ್ರವರ್ತಿ ಭರತನ ಚರಿತ್ರೆ; ಉಳಿದ ಮಹಾಪುರುಷರ ಚರಿತ್ರೆ 'ಉತ್ತರ ಪುರಾಣ'ದಲ್ಲಿ ಬಂದಿದೆ.

'ಆದಿಪುರಾಣ' ಒಂದು ಇತಿಹಾಸ ಕಾವ್ಯವಾಗಿದ್ದು, ಜಗತ್ತಿನ ಚರಿತ್ರೆಯ ರೂಪದ ಅನೇಕ ವಿಷಯಗಳಿಂದ ಕೂಡಿದೆ; ಮತ್ತು ಅದು ಜೈನಧರ್ಮನಿಷ್ಠೆಯುಳ್ಳವರಿಗೆ ಜ್ಞಾನಬೋಧೆಯನ್ನು ಮಾಡುವ ವಿಶ್ವಕೋಶದಂತಿದೆ. ಜಿನಸೇನನ ಕಾವ್ಯಶೈಲಿ ಉತ್ತಮವೂ ಉತ್ಕೃಷ್ಟವೂ ಆಗಿದ್ದು, ಹಲವು ಸಂದರ್ಭಗಳಲ್ಲಿ ಕಾಳಿದಾಸನ ಕಾವ್ಯ ಸೌಂದರ್ಯಕ್ಕೆ ಸಮನಾಗಿರುವುದಲ್ಲದೆ, ಅದನ್ನು ಮೀರಲೂಬಹುದಾದ ಗುಣವುಳ್ಳದ್ದಾ ಗಿದೆಯೆಂದು ಕೆಲವರು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೬೬] ಅವನ 'ಆದಿ ಪುರಾಣ'ವು ಮುಂದೆ ಕನ್ನಡದ ಸುಪ್ರಸಿದ್ಧ ಪಂಪಮಹಾಕವಿಗೆ ಆತನ 'ಆದಿಪುರಾಣ' ವೆಂಬ ಗ್ರಂಥದ ರಚನೆಗೆ ಮುಂದೆ ಮಾದರಿಯಾಯಿತೆಂಬುದನ್ನು ಇಲ್ಲಿ ಸ್ಮರಿಸಿಕೊಳ್ಳ ಬಹುದು.

ಹೀಗೆ ಧಾರ್ಮಿಕ ಹಾಗೂ ಲೌಕಿಕ ವಿಚಾರಗಳಲ್ಲಿ ನಿಷ್ಠೆಯುಳ್ಳ ಜೈನಕವಿಗಳು, ದಾರ್ಶನಿಕರು ಮುಂತಾದವರು ತತ್ತ್ವಜ್ಞಾನ, ಧರ್ಮ, ಕಾವ್ಯ, ವ್ಯಾಕರಣಾದಿ ಶಾಸ್ತ್ರಗಳು ಮುಂತಾದವನ್ನು ಕುರಿತು ಸಂಸ್ಕೃತದಲ್ಲಿ ರಚಿಸಿರುವ ಗ್ರಂಥಗಳು ಅಮೂಲ್ಯ ವಾಗಿವೆ. ಲೌಕಿಕ ಗ್ರಂಥಗಳೂ ಬಹುಮಟ್ಟಿಗೆ ಒಂದಲ್ಲ ಒಂದು ಬಗೆಯಲ್ಲಿ ಜೈನ ಧರ್ಮಕ್ಕೆ ಅನ್ವಯಿಸುವಂತಿವೆ. ದಕ್ಷಿಣ ಭಾರತದಲ್ಲಿ ತಮಿಳು, ತೆಲುಗು, ಕನ್ನಡ ಭಾಷಾಸಾಹಿತ್ಯಗಳ ಬೆಳೆವಣಿಗೆಗೂ ಆ ಗ್ರಂಥಗಳು ವಿಶೇಷವಾಗಿ ಸಹಾಯಕಗಳಾಗಿವೆ. ಅಲ್ಲದೆ ಗುಜರಾತಿ, ಹಿಂದಿ ಮೊದಲಾದ ಸಮಕಾಲೀನ ಭಾಷೆಗಳ ಮೂಲಕವೂ ಜೈನ ರಿಂದ ಸಾರಸ್ವತ ಸೇವೆ ವಿಪುಲವಾಗಿ ನಡೆದಿದೆ.

ಮೇಲ್ಕಂಡಂತೆ ಬೆಳವಣಿಗೆಯುಳ್ಳ ಸಂಸ್ಕೃತ ಭಾಷಾಸಾಹಿತ್ಯಗಳು ಕಾಲಕ್ರಮೇಣ ಕ್ರಿ.ಶ. ಸು. ೪೫೦ರ ಹಲ್ಮಿಡಿಶಾಸನದ ಹೊತ್ತಿಗೆ ಕನ್ನಡಕ್ಕೆ ಹಿನ್ನೆಲೆಯಾಗಿದ್ದ ವಿಚಾರವನ್ನು ಹಿಂದೆ ಪ್ರಸ್ತಾಪಿಸಲಾಗಿದೆ. ೪೫೦ರ ತರುವಾಯ ೮೫೦ರ ವರೆಗಿನ ಅವಧಿಗೆ ಸೇರಿದಂತೆ ಉಪಲಬ್ಧವಾಗಿರುವ ಶಾಸನಾದಿಗಳ ಕನ್ನಡದ ಮೇಲೆ ಸಂಸ್ಕೃತದ ಪ್ರಭಾವವು ವಿಷಯ ಸ್ವರೂಪಗಳೆರಡರ ಮೇಲೂ ಕಂಡುಬಂದಿವೆಯೆಂದು ವಿದ್ವಾಂಸರ ಮತ.[೬೭] ವ್ಯಾಸ ವಾಲ್ಮೀಕಿಗಳ ಮತ್ತು ೧೦೦ರಿಂದ ೮೫೦ರ ವರೆಗಿನ ಕಾಲಕ್ಕೆ ಸೇರಿದ ಕಾಳಿದಾಸ, ಭಾಸ, ಭಾರವಿ, ಭವಭೂತಿ, ಬಾಣ, ಮಾಘ, ರವಿಷೇಣ, ಜಿನಸೇನ, ಗುಣಭದ್ರರು

ಮುಂತಾದ ಸಂಸ್ಕೃತ ಮಹಾಕವಿಗಳ, ದಂಡಿಭಾಮಹ ಮುಖ್ಯರಾದ ಶಾಸ್ತ್ರಕಾರರ ಪ್ರಭಾವ ಈಚಿನ ಹಳಗನ್ನಡದ ಅನೇಕ ಕವಿಗಳ ಮೇಲೆ ಶಾಸ್ತ್ರಕಾರರ ಮೇಲೆ ಉಂಟಾಗಿದ್ದು, ಅಂತಹ ಸಂದರ್ಭಗಳಲ್ಲಿ ಸಂಸ್ಕೃತದ ಅನುಕರಣಕ್ಕೆ ಬದಲಾಗಿ ಅದನ್ನು ಕನ್ನಡಕ್ಕೆ ಅಳವಡಿಸಿಕೊಳ್ಳುವ ಒಂದು ಮನೋಧರ್ಮ ಕನ್ನಡದ ಕವಿಗಳಲ್ಲಿ ಕಂಡು ಬಂದಿದೆ ಎಂಬುದು ಗಮನಾರ್ಹ.[70] ಈ ವಿಷಯವಾದ ವಿವರವಾದ ಪರಿಶೀಲನೆ ಮುಂದೆ ಆಗಬೇಕಾಗಿದೆ.

## ಪಾಲಿ

'ಪಾಲಿ' ಎಂಬ ಶಬ್ದದ ಅರ್ಥದ ವಿಷಯದಲ್ಲಿ ಮತಭೇದವಿದೆ. 'ಅಟ್ಠಕಥೆ'ಯಿಂದ ಬೇರ್ಪಡಿಸಿದ ಮೂಲ ತ್ರಿಪಿಟಕಕ್ಕೆ ಈ ಶಬ್ದ ಬಳಕೆಯಾಗಿರುವುದು ಕಂಡುಬರುತ್ತದೆ. ಆದರೆ ಮೂಲ ತ್ರಿಪಿಟಕದಲ್ಲಿ ಈ ಶಬ್ದವಿಲ್ಲ. ಕೆಲವೆಡೆಯಲ್ಲಿ ಪಾಠ ಅಥವಾ ಪಂಕ್ತಿ ಎಂಬರ್ಥದಲ್ಲಿ ಅದು ಬರುತ್ತದೆ. ಕೆಲವರು ಪಾಟಲಿ, ಪಲ್ಲಿ, ಪ್ರಾಕೃತ, ಪ್ರಾಲೇಯ ಮುಂತಾದ ಶಬ್ದಗಳಲ್ಲಿ ಯಾವುದಾದರೂ ಒಂದರಿಂದ 'ಪಾಲಿ' ಶಬ್ದ ನಿಷ್ಪನ್ನಗೊಂಡಿರ ಬೇಕೆಂದು ಸೂಚಿಸಿದ್ದಾರೆ. ಇದು ಹೇಗಿದ್ದರೂ ಬೌದ್ಧಾಗಮಗಳ ಮತ್ತು ಅವುಗಳ ಮೇಲೆ ಹುಟ್ಟಿದ ಎಷ್ಟೋ ಟೀಕೆಗಳ ಭಾಷೆ ಪಾಲಿ ಎಂಬುದು ನಿಜ. ಮೂಲದಲ್ಲಿ ಇದು ಜನಸಾಮಾನ್ಯರ ಪ್ರಾಕೃತ ಭಾಷೆ; ಮುಂದಿನ ಅವಧಿಯಲ್ಲಿ ಒಂದು ಸುಸಂಘಟಿತ ಹಾಗೂ ಸುಸಂಬದ್ಧ ಗ್ರಾಂಥಿಕಭಾಷೆಯಾಗಿರುವುದು ಅದರ ಇತಿಹಾಸದಿಂದ ತಿಳಿಯುತ್ತದೆ.

ಪಾಲಿಭಾಷೆಯ ಬೆಳೆವಣಿಗೆಯ ದೃಷ್ಟಿಯಿಂದ ಅದರಲ್ಲಿ ಕಡಿಮೆಯೆಂದರೆ ೪ ಘಟ್ಟಗಳು ಕಂಡುಬರುತ್ತವೆ. ಅವು ಹೀಗೆ: (i) ಪಾಲಿಗ್ರಂಥಗಳಲ್ಲಿ ದೊರೆಯುವ ಗಾಥೆಗಳಲ್ಲಿ ಕಂಡುಬರುವುದು, (ii) ಆಗಮ ಗ್ರಂಥಗಳಲ್ಲಿಯ ಗದ್ಯದಲ್ಲಿ ಕಾಣುವುದು, (iii) ಆಗಮೋತ್ತರ ಗ್ರಂಥಗಳಾದ ಮಿಲಿನ್ದಪಞ್ಹ ಮತ್ತು ಗದ್ಯರೂಪದ ಟೀಕೆಗಳಲ್ಲಿಯದು, (iv) ಮತ್ತು ಸಂಸ್ಕೃತ ಗ್ರಂಥಗಳನ್ನು ಅನುಸರಿಸಿ ಬರೆದ ಪಾಲಿ ಕಾವ್ಯಗಳಲ್ಲಿ ಕಂಡು ಬರುವಂತಹುದು. ಬೇರೆ ಪ್ರಾಕೃತಭಾಷೆಗಳಂತೆ ಪಾಲಿ ಸಹ ಮಧ್ಯಯುಗದ ಆರ್ಯ ಭಾಷೆಗಳ ಗುಂಪಿಗೆ ಸೇರಿದ್ದರೂ ಅದರ ರಕ್ಷಣೆ ಪೋಷಣೆಗಳು ಸಿಂಹಲದ್ವೀಪದಲ್ಲಿ ಆದ ಕಾರಣ, ಅದು ಉತ್ತರಭಾರತದಲ್ಲಿ ವಿಕಾಸಹೊಂದಿದ ಆರ್ಯಭಾಷೆಗಳೊಡನೆ ಅಷ್ಟು ಸಂಬಂಧವನ್ನು ಪಡೆಯುವುದಾಗಲಿಲ್ಲ, ಪ್ರತ್ಯೇಕವಾಗಿಯೇ ಉಳಿಯಿತು.

ಸಂಪ್ರದಾಯದ ಪ್ರಕಾರ, ಅಶೋಕನ ಮಗ ಮಹೇಂದ್ರ ಬೌದ್ಧಾಗಮವನ್ನು ಸಿಂಹಲದ್ವೀಪಕ್ಕೆ ತಂದನು. ಅಲ್ಲಿ ಅದರ ಅಭ್ಯಾಸ ಬೆಳೆವಣಿಗೆಗಳು ನಡೆದುವು. ಭರತ ಖಂಡದಲ್ಲಿ ಈ ಆಗಮಗಳ ಭಾಷೆಯಾದ ಪಾಲಿಯ ಅವಶೇಷ ವಿಶೇಷವಾಗಿ ಉಳಿಯಲಿಲ್ಲ. ಆದರೆ ಈ ಭಾಷೆಯಲ್ಲಿ ರಚಿತವಾದ ಬೌದ್ಧಾಗಮ ಗ್ರಂಥಗಳು ಸಿಂಹಲದಿಂದ

ಬ್ರಹ್ಮದೇಶ ಮತ್ತು ಸಯಾಮ್ ದೇಶಗಳಿಗೆ ಒಯ್ಯಲ್ಪಟ್ಟವು. ಹೀಗಾಗಿ ಧಾರ್ಮಿಕ ಕಲಾಪಗಳಲ್ಲಿ ಈ ಭಾಷೆ ಆ ದೇಶಗಳಲ್ಲಿ ಈಗಲೂ ಬಳಕೆಯಲ್ಲಿದೆ.

ಗೌತಮಬುದ್ಧನು ಮಾಗಧೀಭಾಷೆಯಲ್ಲಿ ಉಪದೇಶಮಾಡಿದ ಹಾಗೆ ಪರಂಪರೆಯಲ್ಲಿದ್ದರೂ ಈಗ ದೊರೆಯುತ್ತಿರುವ ಪ್ರಾಚೀನ ಬೌದ್ಧಸಾಹಿತ್ಯ ಪಾಲಿಯಲ್ಲಿವೆ. ಈ ಸಾಹಿತ್ಯ ಥೇರವಾದಕ್ಕೆ ಮಾನ್ಯವಾದ ಆಗಮ. ಬುದ್ಧನು ಗತಿಸಿದ ಸ್ವಲ್ಪ ಕಾಲದಲ್ಲಿಯೇ ಅದರ ಸಂಕಲನ ಆರಂಭವಾಯಿತು. ಈ ಮೊದಲು ಬೌದ್ಧಭಿಕ್ಷುಗಳೂ ಭಿಕ್ಷುಣಿಯರೂ ಜ್ಞಾನದ ಬೇರೆ ಬೇರೆ ಶಾಖೆಗಳಿಗೆ ಸಂಬಂಧಿಸಿದ ವಿಷಯಗಳನ್ನು ತಮ್ಮ ಸ್ಮೃತಿಯಲ್ಲಿ ಉಳಿಸಿಕೊಂಡು ಬರುತ್ತಿದ್ದರು. ನಡುವೆ ಏನಾದರೂ ತಪ್ಪುಗಳಾದರೆ ಬುದ್ಧನು ಅವರನ್ನು ಆಗಾಗ್ಗೆ ತಿದ್ದುತ್ತಿದ್ದನು. ಆದರೆ ಬುದ್ಧನ ಪರಿನಿರ್ವಾಣದ ಅನಂತರ, ಕೆಲವು ಭಿಕ್ಷುಗಳಲ್ಲಿ ಅಸಂಯಮ ತಲೆದೋರಿತು. ಆರ್ಯ ಮಹಾಕಾಶ್ಯಪನಂಥನಿಗೆ ಇದು ದುಃಖವನ್ನುಂಟುಮಾಡಿತು. ಧರ್ಮ ಮತ್ತು ವಿನಯಗಳ 'ಸಂಗಾಯನ'ವನ್ನು ಮಾಡಲು ಆತನು ಆದೇಶಕೊಟ್ಟನು. ಬುದ್ಧನ ಮರಣದ ನಂತರ ೪ನೆಯ ತಿಂಗಳಲ್ಲಿ, ರಾಜಗೃಹದಲ್ಲಿ ಸೇರಿದ ಮೊದಲನೆಯ 'ಸಂಗೀತಿ'ಯೆಂಬ ಸಮಾವೇಶದಲ್ಲಿ ೫೦೦ ಭಿಕ್ಷುಗಳು ಸೇರಿದ್ದರು. ಮಹಾಕಾಶ್ಯಪನ ಅಧ್ಯಕ್ಷತೆಯಲ್ಲಿ ಸೇರಿದ್ದ 'ಪಂಚಶತಿಕಾ' ಎಂಬ ಹೆಸರಿನ ಈ ಸಭೆಯಲ್ಲಿ ಆತನು ವಿನಯಸಂಬಂಧವಾಗಿ ಉಪಾಲಿಗೆ ಮತ್ತು ಧರ್ಮಸಂಬಂಧವಾಗಿ ಆನಂದನಿಗೆ ಪ್ರಶ್ನೆಗಳನ್ನು ಕೇಳಿ ಅವರು ಕೊಟ್ಟ ಉತ್ತರಗಳನ್ನು ಇತರ ಭಿಕ್ಷುಗಳ ಕಡೆಯಿಂದಲೂ ಹೇಳಿಸಿದನು. ಮುಂದೆ ೧೦೦ ವರ್ಷಗಳಿಗೆ ಎರಡನೆಯ ಸಂಗೀತಿ ವೈಶಾಲಿಯಲ್ಲಿ ಸಮಾವೇಶಗೊಂಡಿತು. ಸುಮಾರು ೭೦೦ ಜನ ಭಿಕ್ಷುಗಳು ಸೇರಿದ್ದ ಈ ಸಭೆಯಲ್ಲಿ ಆಕ್ಷೇಪಣೀಯವಾದ ವಿಚಾರಗಳನ್ನು ವಿಮರ್ಶೆಯಿಂದ ಪರಿಹರಿಸಲಾಯಿತು, ಬುದ್ಧವಚನಗಳ ಸಂಗ್ರಹಕಾರ್ಯವೂ ನಡೆಯಿತು. ಮುಂದೆ ಮೂರನೆಯ ಸಂಗೀತಿ ನಡೆದದ್ದು ಪಾಟಲಿಪುತ್ರದಲ್ಲಿ, ಮೌರ್ಯಚಕ್ರವರ್ತಿ ಅಶೋಕನ ಕಾಲದಲ್ಲಿ (ಕ್ರಿ.ಪೂ. ೨೬೪-೨೭). ಈ ಸಂಗೀತಿಯ ವಿವರ ಸಿಂಹಲದ್ವೀಪದ 'ದೀಪವಂಸ', 'ಮಹಾವಂಸ'ಗಳೆಂಬ ಗ್ರಂಥಗಳಲ್ಲಿ ದೊರೆಯುತ್ತದೆ. ಈ ಸಭೆಯಲ್ಲಿ ಸಂಗ್ರಹಿತವಾದ ಗ್ರಂಥಗಳನ್ನು ಭಿನ್ನ ಭಿನ್ನ ವಿಹಾರಗಳಲ್ಲಿ ಅಭ್ಯಾಸಮಾಡಲು ತೊಡಗಿದ್ದು ಕಾಣುತ್ತದೆ. ಬೌದ್ಧ ಭಿಕ್ಷುಗಳು ಧರ್ಮಪ್ರಸಾರ ಉದ್ದೇಶವಾಗಿ ದೇಶದೇಶಾಂತರಗಳಿಗೆ ಕಳುಹಲ್ಪಟ್ಟರು. ಮಹೇಂದ್ರನು ಸಿಂಹಲದ್ವೀಪಕ್ಕೆ ಬೌದ್ಧಾಗಮವನ್ನು ಒಯ್ದನು. ಪಾಟಲಿಪುತ್ರದ ಮೂರನೆಯ ಸಂಗೀತಿಯಲ್ಲಿ, ವಟ್ಟಗಾಮಿನಿಯ ಕಾಲದಲ್ಲಿ ತ್ರಿಪಿಟಕವು ಗ್ರಂಥಸ್ಥವಾಯಿತೆಂದು ಸಂಪ್ರದಾಯದ ಹೇಳಿಕೆ.

ಬುದ್ಧನ ಪರಿನಿರ್ವಾಣಕಾಲದಿಂದ ಕ್ರಿ.ಪೂ. ಮೊದಲನೆಯ ಶತಮಾನದವರೆಗೆ ಪಾಲಿ ಸಾಹಿತ್ಯ ಬೆಳೆದದ್ದು ಹೀಗೆ. ಮುಂದೆ ಈ ಸಾಹಿತ್ಯದಲ್ಲಿ ನಡೆದ ಬೆಳೆವಣಿಗೆಗೆ ತ್ರಿಪಿಟಕಗಳೇ ಆಧಾರಭೂಮಿ. ಈಗ ದೊರೆಯುತ್ತಿರುವ ಪಾಲಿ ಸಾಹಿತ್ಯ ಬುದ್ಧನ ವಚನಗಳನ್ನೇ ಪೂರ್ತಿಯಾಗಿ ಒಳಕೊಂಡಿವೆಯೆಂದು ಹೇಳುವುದಕ್ಕಾಗದು. ಕೆಲವಂಶ

ಗಳು ಪ್ರಾಚೀನ, ಇನ್ನು ಕೆಲವು ಅರ್ವಾಚೀನ ಆಗಿರುವಂತೆ ತೋರುತ್ತದೆ. ಮೌಖಿಕ ಪರಂಪರೆಯಿಂದ ಬಂದದ್ದರಿಂದ ಭಾಷೆಯಲ್ಲಿ ಆಗಾಗ್ಗೆ ಬದಲಾವಣೆಗಳಾದದ್ದು ಸ್ವಾಭಾವಿಕವೇ.

ಪಾಲಿಸಾಹಿತ್ಯದ ಸಾರಭಾಗ ತ್ರಿಪಿಟಕಗಳು. ಇವುಗಳಲ್ಲಿ ಮೊದಲನೆಯ ವಿನಯ ಪಿಟಕದಲ್ಲಿ ಬೌದ್ಧಭಿಕ್ಷುಗಳ ಆಚಾರಗಳಿಗೆ ಸಂಬಂಧಪಟ್ಟ ನಿಯಮಗಳಿವೆ. ಧಾರ್ಮಿಕ ದೃಷ್ಟಿಯಿಂದ ಇದಕ್ಕೆ ಮಹತ್ತ್ವವಿದೆ. ಸುತ್ತವಿಭಂಗ, ಖಂಧಕ ಮತ್ತು ಪರಿವಾರ ಎಂಬವು ಇಲ್ಲಿಯ ಮುಖ್ಯ ವಿಭಾಗಗಳು. ಭಿಕ್ಷು ಭಿಕ್ಷುಣಿಯರ ಸಂಘದ ವ್ಯವಸ್ಥೆ, ನಿತ್ಯ ನೈಮಿತ್ತಿಕ ಕರ್ತವ್ಯ, ಉಪಸಂಪದಾನಿಯಮ, ಉಪದೇಶ, ವರ್ಷಾವಾಸ, ಭೋಜನ, ವಸ್ತ್ರ, ಪಥ್ಯ, ಔಷಧ ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದ ಹಲವು ನಿಯಮಗಳು ವಿಸ್ತಾರವಾಗಿ ನಿರೂಪಿತವಾಗಿವೆ.

ಎರಡನೆಯದು ಸುತ್ತಪಿಟಕ. ಬುದ್ಧನ ವಚನಗಳು ಮತ್ತು ಆತ ತನ್ನ ಶಿಷ್ಯರ ಕೂಡ ನಡಸಿದ ಸಂವಾದಗಳು—ಇವುಗಳಿಂದ ಇದು ಕೂಡಿದ್ದು ಬೌದ್ಧಧರ್ಮದ ಸರಿಯಾದ ತಿಳಿವಳಿಕೆಗೆ ಸಹಾಯಮಾಡತಕ್ಕದ್ದಾಗಿದೆ. ಸಾಹಿತ್ಯ ಮತ್ತು ಇತಿಹಾಸದ ದೃಷ್ಟಿಯಿಂದ ಇದಕ್ಕೆ ಮಹತ್ತ್ವವಿದೆ. ದೀಘನಿಕಾಯ, ಮಜ್ಝಿಮನಿಕಾಯ, ಸಂಯುತ್ತನಿಕಾಯ, ಅಂಗುತ್ತರನಿಕಾಯ, ಮತ್ತು ಖುದ್ದಕನಿಕಾಯ ಎಂಬುವು ಇಲ್ಲಿಯ ಮುಖ್ಯ ವಿಭಾಗಗಳು. ಮೊದಲ ೪ ನಿಕಾಯಗಳು ಸಂಗ್ರಹಶೈಲಿಯಲ್ಲಿದ್ದು, ಕಿನೆಯದು ಸಣ್ಣ ದೊಡ್ಡ ಸಂಪುಟಗಳ ಸಂಗ್ರಹವಾಗಿರುವುದು ಕಾಣುತ್ತದೆ. ಧಮ್ಮಪದ, ಥೇರಗಾಥ, ಥೇರೀಗಾಥ, ಜಾತಕ, ಸುತ್ತನಿಪಾತ ಮೊದಲಾದ ಗ್ರಂಥಗಳು ಈ ಕಿನೆಯ ಸಂಗ್ರಹದೊಳಗಿನವು. ಈ ಪಿಟಕದ ಲೇಖನಶೈಲಿಯ ಹಲವು ವೈಶಿಷ್ಟ್ಯಗಳಲ್ಲಿ ಕೆಲವೆಡೆ ಸಂವಾದಗಳು ಬರುವುದೂ ನಡುನಡುವೆ ಇತಿಹಾಸ ಮತ್ತು ಆಖ್ಯಾನಗಳ ಪ್ರವೇಶವಿರುವುದೂ ಗಮನಿಸತಕ್ಕದ್ದಾಗಿವೆ. ಜಾತಕಕಥೆಗಳ ಸಾಹಿತ್ಯಮೌಲ್ಯವಂತೂ ವಿಶೇಷ ಉಲ್ಲೇಖನೆಗೆ ಅರ್ಹವಾದದ್ದು.

ಮೂರನೆಯದು ಅಭಿಧಮ್ಮಪಿಟಕ. ಬೌದ್ಧಧರ್ಮದ ತತ್ತ್ವಜ್ಞಾನದ ತಳಹದಿಯನ್ನು ತಿಳಿಯಲು ಇದು ಬಹು ಉಪಯುಕ್ತವಾಗಿದೆ. ಸುತ್ತಪಿಟಕದ ಕೆಲವಂಶಗಳ ವಿಸ್ತೃತ ನಿರೂಪಣೆಯಿರುವ, ವಿಶಿಷ್ಟ ಧರ್ಮದ ಗಂಭೀರವಾದ ಚರ್ಚೆಯಿರುವ ಪಿಟಕದಲ್ಲಿ ೭ ಮುಖ್ಯವಾದ ಗ್ರಂಥಗಳಿವೆ.

ತ್ರಿಪಿಟಕಗಳ ಭಾಷೆ ಮೂಲತಃ ಮಾಗಧಿಯ ಒಂದು ಉಪಭಾಷೆಯಾಗಿರಬೇಕು. ಸಿಂಹಲದ್ವೀಪ, ಬ್ರಹ್ಮದೇಶ ಮತ್ತು ಸಯಾಮದ ಬೌದ್ಧರ ಗ್ರಾಂಥಿಕಭಾಷೆ ಪಾಲಿಯಾದರೂ ಮಾಗಧಿಯೆಂದೇ ಅವರು ಕರೆಯುತ್ತಾರೆ. ವ್ಯಾಕರಣದ ಮಾಗಧಿಯಿಂದ ಇದು ಬೇರೆ. ಪಾಲಿಯು ಪ್ರಾಚೀನ ಮಾಗಧಿಯೊಡನೆ ಸಂಬಂಧವುಳ್ಳದ್ದಾಗಿರಬಹುದು.

ತ್ರಿಪಿಟಕಗಳ ತರುವಾಯದಲ್ಲಿ, 'ಮಿಲಿಂದಪಞ್ಹ'ದಂಥ ಮಹತ್ತ್ವಪೂರ್ಣಗ್ರಂಥಗಳು ಅನಂತರದಲ್ಲಿ ರಚಿತವಾದವು. ಭಾರತದ ವಾಯವ್ಯ ಪ್ರದೇಶದಲ್ಲಿ 'ಮಿಲಿಂದಪಞ್ಹ'ವೂ

ಮಧ್ಯದೇಶದಲ್ಲಿ ನೇತ್ತಿಪಕರಣ ಪೇಟಕೋಪದೇಶಗಳೂ ಬರೆಯಲ್ಪಟ್ಟವು. ಇವುಗಳ ಕಾಲ ಕ್ರಿ.ಶ. ೧–೨ನೆಯ ಶತಮಾನಗಳೆಂದು ಸಾಮಾನ್ಯವಾಗಿ ತಿಳಿಯಲಾಗಿದೆ. ಮೆನೆಂದ್ರೋಸನೆಂಬ ಗ್ರೀಸ್‌ದೇಶದ ಅರಸ ಕೇಳಿದ ಪ್ರಶ್ನೆಗಳಿಗೆ ಕೊಟ್ಟ ಉತ್ತರ 'ಮಿಲಿಂದ ಪಞ್ಹ'ದೊಳಗಿನ ವಸ್ತು. ಇನ್ನು ತ್ರಿಪಿಟಕಗಳಿಗೆ ಸಂಬಂಧಿಸಿ ಟೀಕೆಗಳ ರಚನೆಯೂ ಈಚಿನ ಶತಮಾನಗಳಲ್ಲಿ ನಡೆಯಿತು. ೫ನೆಯ ಶತಮಾನದಲ್ಲಿ ಧರ್ಮಪಾಲನು ದಕ್ಷಿಣ ದೇಶದ ಕಾಂಚೀಪುರದಲ್ಲಿ ಕೆಲವು ಪಾಲಿ ಟೀಕೆಗಳನ್ನು ಬರೆದನು. ಆ ಕಾಲದಲ್ಲಿ ಸಿಂಹಲದ್ವೀಪದಲ್ಲಿ ಈ ವಿಧದ ಗ್ರಂಥಗಳ ಅಭ್ಯಾಸವೂ ಹೊಸ ಗ್ರಂಥಗಳ ರಚನೆಯೂ ಸಾಗುತ್ತಿದ್ದವು. ಅನುರಾಧಪುರದ ಮಹಾವಿಹಾರ ಒಂದು ಖ್ಯಾತ ವಿದ್ಯಾಸ್ಥಾನ ವಾಗಿತ್ತು. ಇದೇ ಕಾಲದಲ್ಲಿ ಬುದ್ಧಘೋಷನು ಬಿಹಾರದಿಂದ ದಕ್ಷಿಣಕ್ಕೆ ಬಂದು ಹಲವು ಗ್ರಂಥಗಳನ್ನು ರಚಿಸಿದನು. 'ಜಾತಕಟ್ಠಕಥಾ', 'ಧಮ್ಮಪದಟ್ಠಕಥಾ' ಇವು ಅವುಗಳಲ್ಲಿ ಪ್ರಸಿದ್ಧವಾದವು. ಇವನ ಹಾಗೆಯೇ ಬುದ್ಧದತ್ತ, ಆನಂದ, ಧರ್ಮಪಾಲ ಮೊದಲಾದ ವರೂ ತಮ್ಮ ಟೀಕೆಗಳನ್ನು ರಚಿಸಿದ್ದಾರೆ.

## ಪ್ರಾಕೃತ

"ಪ್ರಾಕೃತ ವ್ಯಾಕರಣಕಾರರ ದೃಷ್ಟಿಯಿಂದ ಮುಖ್ಯವಾದ ಪ್ರಾಕೃತಭಾಷೆಗಳೆಂದರೆ ಮಹಾರಾಷ್ಟ್ರೀ, ಶೌರಸೇನೀ, ಮಾಗಧೀ, ಪೈಶಾಚೀ ಮತ್ತು ಅಪಭ್ರಂಶ. ಬೌದ್ಧಪಿಟಕ ಗಳ ಭಾಷೆಯ ಹೆಸರು ಪಾಲೀ ಇದ್ದಂತೆ ಜೈನಾಗಮಗಳ ಭಾಷೆಯ ಹೆಸರು ಅರ್ಧ ಮಾಗಧೀ. ಇವೆರಡೂ ಪ್ರಾಕೃತಭಾಷೆಗಳೇ. ಸಾಧಾರಣ ಭಾಷಾಸಾಮ್ಯವನ್ನು ಮತ್ತು ವಿಶೇಷವನ್ನು ಲಕ್ಷ್ಯದಲ್ಲಿಟ್ಟು ಆಧುನಿಕ ಭಾಷಾಪಂಡಿತರು ಜೈನಮಹಾರಾಷ್ಟ್ರೀ ಮತ್ತು ಜೈನಶೌರಸೇನೀ ಎಂಬ ಎರಡು ಹೆಸರುಗಳನ್ನು ಹೊಸದಾಗಿ ಬಳಕೆಯಲ್ಲಿ ತಂದಿರುತ್ತಾರೆ. ಶಿಲಾಲೇಖಗಳಲ್ಲಿ ದೊರೆಯುವ ಪ್ರಾಕೃತ, ಪಾಲೀ ಮತ್ತು ಪೈಶಾಚೀ ಇವು ಪರಸ್ಪರ ಸಮೀಪದ ಭಾಷೆಗಳು. ಶೌರಸೇನಿಯು ಮೂಲತಃ ಮಧ್ಯದೇಶದ ಭಾಷೆ. ಮಾಗಧಿಯು ಪೂರ್ವನಾಡಿನ ಭಾಷೆ. ಮಹಾರಾಷ್ಟ್ರಿಯು ಮಹಾರಾಷ್ಟ್ರದ ಉತ್ತಮವಾದ ಪ್ರಾಕೃತ ವೆಂದು ಖ್ಯಾತಿ ಪಡೆದ ಮಾತನ್ನು ದಂಡಿಯು ತನ್ನ 'ಕಾವ್ಯಾದರ್ಶ'ದಲ್ಲಿ ಹೇಳಿದ್ದಾನೆ. ಮಗಧ ದೇಶದ ಅರ್ಧಭಾಗದಲ್ಲಿ ಮೂಲತಃ ಪ್ರಚಲಿತವಾದ್ದರಿಂದ ಇದರ ಹೆಸರು ಅರ್ಧಮಾಗಧಿ. ಮಾಗಧೀ ಭಾಷೆಗೆ ಇದರ ಸಂಬಂಧ ಸಮೀಪದ್ದು. ಪೈಶಾಚೀ ಭಾಷೆಯ ಸ್ಥಾನನಿರ್ದೇಶನದ ಬಗ್ಗೆ ವಿದ್ವಾಂಸರಲ್ಲಿ ಮತಭೇದಗಳು ಇರುತ್ತವೆ. ಇದರ ಉಪಭಾಷೆ ಚೂಲಿಕಾ ಪೈಶಾಚೀ. ಇವುಗಳಲ್ಲಿಯ ವ್ಯಂಜನ ವ್ಯತ್ಯಾಸಗಳನ್ನು ನೋಡ ಹೋದರೆ ಏನೋ ದ್ರಾವಿಡಭಾಷೆಯ ಪ್ರಭಾವದ ಸಂಶಯ ಬರುವಂತಿದೆ. ಕೆಲವರ ಮತದಂತೆ ಪೈಶಾಚಿಯು ಪಿಶಾಚದೇಶದ ಮೂಲಭಾಷೆ. ಅಪಭ್ರಂಶವು ಪ್ರಾಕೃತದಿಂದ ಸ್ವಲ್ಪ ಅನಂತರದಲ್ಲಿ ವಿಕಸಿತವಾದ ಭಾಷೆ; ಇದರ ವಿಕಾಸದಲ್ಲಿ ಗುರ್ಜರ ಜನಾಂಗದ

ಭಾಷೆಯ ಪ್ರಭಾವವು ಕಾಣುತ್ತದೆ. ಪ್ರಾಕೃತ ಮತ್ತು ಅಪಭ್ರಂಶ ಇವೆರಡೂ ಭಾಷೆಗಳು ಒಂದು ಕಾಲಕ್ಕೆ ಸಾಮಾನ್ಯ ಜನರ ಭಾಷೆಗಳಾಗಿದ್ದರೂ ಮುಂದೆ ಅವಾದರೂ ಸಂಸ್ಕೃತದಂತೆ ಗ್ರಾಂಥಿಕ ಭಾಷೆಗಳಾದುವು. ಗ್ರಾಂಥಿಕ ಭಾಷೆಗಳಾದ ಮೇಲೆ ಸಂಸ್ಕೃತ ಭಾಷೆಯ ಮತ್ತು ಸಾಹಿತ್ಯದ ಪ್ರಭಾವವು ಅವುಗಳ ಮೇಲೂ ಕಂಡುಬರುತ್ತದೆ. ಜನರ ಭಾಷೆಗಳು ಬೇರೆ ಬೇರೆ ಪ್ರದೇಶಗಳಲ್ಲಿ ಕ್ರಮೇಣ ಬದಲಾಗುತ್ತ ಹೋಗಿ ಮುಂದೆ ಪ್ರಾದೇಶಿಕ ಪ್ರಾಕೃತಭಾಷೆಗಳಿಂದ ರಾಜಸ್ಥಾನೀ, ಗುಜರಾತೀ, ಹಿಂದೀ, ಬಂಗಾಲೀ, ಮರಾಠೀ ಮೊದಲಾದ ಭಾಷೆಗಳು ಸಾಧಾರಣ ಒಂಬತ್ತನೆಯ ಶತಮಾನದ ಅನಂತರ ರೂಪಗೊಂಡದ್ದು ಕಂಡುಬರುತ್ತದೆ. ಪ್ರಾದೇಶಿಕ ಜನಭಾಷೆಗಳು ಈ ರೀತಿ ಬದಲಿಸುತ್ತ ಹೋದರೂ ಸಹ ಸಂಸ್ಕೃತದಂತೆ ಪ್ರಾಕೃತ ಮತ್ತು ಅಪಭ್ರಂಶ ಭಾಷೆಗಳಲ್ಲಿ ದೊಡ್ಡ ದೊಡ್ಡ ಗ್ರಂಥಗಳನ್ನು ಬರೆಯುವ ಪ್ರವೃತ್ತಿಯು ಮೊಗಲರ ಕಾಲದವರೆಗೂ ಕಂಡು ಬರುತ್ತದೆ."[71]

## ಉತ್ತರಭಾರತದ ಜೈನಾಗಮಾದಿ ಸಾಹಿತ್ಯ

ವರ್ಧಮಾನ ಮಹಾವೀರನು ಜೈನಪರಂಪರೆಯಂತೆ ೨೪ನೆಯ ತೀರ್ಥಂಕರ. ಈತ ಆಗಿಹೋದ ಕಾಲ ಕ್ರಿ.ಪೂ. ೬ನೆಯ ಶತಮಾನ. ಈತನಿಗೆ ಹಿಂದೆ ಸಂದ ಪಾರ್ಶ್ವನಾಥ ಸಹ ಐತಿಹಾಸಿಕ ಪುರುಷನೆಂದು ಈಚೆಗೆ ತಿಳಿಯಲಾಗಿದೆ. ಈಗ ಉಪಲಬ್ಧವಿರುವ ಜೈನ ಪರಂಪರೆಗೆ ಮಹಾವೀರನೇ ಪ್ರವರ್ತಕನೆಂದು ತಿಳಿದು ನಾವು ಮುನ್ನಡೆಯ ಬಹುದು.

ಮಹಾವೀರನು ಗೌತಮಬುದ್ಧನ ಸಮಕಾಲೀನನಾಗಿದ್ದರೂ ಆತನಿಗೆ ಸ್ವಲ್ಪ ಹಿರಿಯ; ಮೊದಲು ಕಾಲವಶನಾದವನು. ನಿರ್ವಾಣಕಾಲ ಕ್ರಿ.ಪೂ. ೫೨೭. ಈತನ ವಿಶೇಷತೆ ಯೆಂದರೆ ದೀರ್ಘತಪಸ್ಸು ಮತ್ತು ಜನರನ್ನುದ್ದೇಶಿಸಿ ಸದಾಚಾರಬೋಧೆ. ರಾಜವೈಭವ ವನ್ನು ಬಿಟ್ಟುಕೊಟ್ಟು, ಸಾಮಾನ್ಯ ಜನರ ಹಿತವನ್ನು ಕೈಹಿಡಿದಿದ್ದರಿಂದ ಆತ ಉಪ ಯೋಗಿಸಿದ ಭಾಷೆಯೆಂದರೆ ಜನಬಳಕೆಯ ಸಾಧಾರಣ ಭಾಷೆ. ಈ ಭಾಷೆ ಸಂಸ್ಕೃತವಲ್ಲ, ಪ್ರಾಕೃತ. ಅಗ್ಗೆ ಮಗಧದೇಶದಲ್ಲಿ ಪ್ರಚಲಿತವಿದ್ದ ಜನಭಾಷೆ ಮಾಗಧಿ. ಮಗಧದೇಶದ ಅರ್ಧಭಾಗದಲ್ಲಿ ಅದು ಪ್ರಚಲಿತವಿದ್ದುದರಿಂದ ಅರ್ಧಮಾಗಧಿಯೆನಿಸಿತು. ಈ ಉಪಭಾಷೆ ಎಲ್ಲ ಕಡೆಯೂ ಸುಲಭವಾಗಿ ತಿಳಿಯುತ್ತಿದ್ದುದರಿಂದ ಮಹಾವೀರ ಇದನ್ನೇ ಬೋಧನೆಗೆ ಬಳಸಿದನು.

ಶ್ರಮಣಪರಂಪರೆಯ ಆರಂಭಸಾಹಿತ್ಯ ಬಹುಮಟ್ಟಿಗೆ 'ಪೂರ್ವಸಾಹಿತ್ಯ' ಎಂದು ವ್ಯವಹಾರಗೊಳ್ಳುತ್ತದೆ. ಇದು ದ್ವಾದಶಾಂಗ ಆಗಮದ ೧೨ನೆಯ ದೃಷ್ಟಿವಾದಾಂಗದಲ್ಲಿ ಅಡಕವಾಗಿತ್ತು. ಈ ಅಂಗವು ಇಂದು ಲುಪ್ತವಾಗಿದ್ದು, ೧೪ ಪೂರ್ವಗಳ ಹೆಸರುಗಳು ಮಾತ್ರ ದೊರೆಯುತ್ತವೆ. ಆ ಹೆಸರುಗಳನ್ನು ಹಿಡಿದು ಅವುಗಳ ವಿಷಯವನ್ನು ನಾವಿಂದು ಊಹಿಸಬೇಕಾಗಿದೆ. ಕೆಲವಂಶಗಳು ಈಗ ದೊರೆಯುವ ಶ್ವೇತಾಂಬರ ಮತ್ತು ದಿಗಂಬರ

ಸಾಹಿತ್ಯಗ್ರಂಥಗಳಲ್ಲಿ ಉಳಿದುಕೊಂಡು ಬಂದಿರುವಂತೆ ತೋರುತ್ತದೆ.

ಪ್ರಾಚೀನ ಜೈನಸಾಹಿತ್ಯವನ್ನು ವಿವಿಧ ವಿಭಾಗಗಳಿಂದ ನಿರ್ದೇಶಿಸಬಹುದು. ಅಂಥ ವಿಭಾಗಗಳಲ್ಲಿ ಅಂಗಪ್ರವಿಷ್ಟ, ಅಂಗಬಾಹ್ಯ ಎಂಬ ವಿಭಾಗಗಳು ಮುಖ್ಯವಾದವು. ಇವೆರಡು ಗುಂಪುಗಳ ಎಷ್ಟೋ ಗ್ರಂಥಗಳ ಹೆಸರುಗಳು ಶ್ವೇತಾಂಬರ ಮತ್ತು ದಿಗಂಬರ ಎರಡೂ ಪರಂಪರೆಗಳಲ್ಲಿ ದೊರೆಯುತ್ತಿದ್ದರೂ ಈಗ ಲಭ್ಯವಿರುವ ಆಗಮ ಗ್ರಂಥಗಳ ಮಾನ್ಯತೆಯ ವಿಷಯದಲ್ಲಿ ಮತಭೇದವಿದೆ. ಈಗ ದೊರೆಯುತ್ತಿರುವ ಆಗಮಗ್ರಂಥಗಳನ್ನು ದಿಗಂಬರರು ಪ್ರಾಮಾಣಿಕವೆಂದು ಒಪ್ಪುವುದಿಲ್ಲ.

ಕಾಲದೋಷ, ದುರ್ಭಿಕ್ಷ ಮತ್ತು ಸಂಘದ ಸ್ಥಳಪರಿವರ್ತನಗಳ ಮೂಲಕ ಉಂಟಾದ ಕಷ್ಟನಷ್ಟಗಳನ್ನು ನೆನಪಿನಲ್ಲಿಟ್ಟುಕೊಂಡು, ಉಪಲಬ್ಧವಿರುವ ಅರ್ಧಮಾಗಧೀ ಜೈನಾಗಮದ ಪ್ರಾಗಿತಿಹಾಸವನ್ನು ಸಂಕ್ಷೇಪವಾಗಿ ಪರಿಚಯಮಾಡಿಕೊಳ್ಳಲು ಈಗ ನಾವು ಪ್ರಯತ್ನಿಸಬಹುದು. ಪರಂಪರೆಯಂತೆ ಈ ಆಗಮ ಆಗಾಗ್ಗೆ ನಡೆದ ಸಂಘ ಸಮ್ಮೇಳನಗಳ ಮೂಲಕವಾಗಿ ಸಂಕಲಿತವಾಗುತ್ತ ಬಂದಿತೆಂದು ತಿಳಿಯುವುದು. ಶ್ವೇತಾಂಬರ ಪರಂಪರೆಯಂತೆ ಪ್ರಥಮ ಸಮ್ಮೇಲನವು ಕ್ರಿ.ಪೂ. ೪ನೆಯ ಶತಮಾನದಲ್ಲಿ ಪಾಟಲಿಪುತ್ರದಲ್ಲಿ ಸೇರಿತು. ಆಗ ಸ್ಥೂಲಭದ್ರಾಚಾರ್ಯರು ೧೧ ಅಂಗಗಳನ್ನು ಸಂಕಲಿಸಿದರು. ೧೨ನೆಯ ಅಂಗವಾದ ದೃಷ್ಟಿವಾದವು ಆವೇಳೆಗೆ ಲುಪ್ತವಾಗಿ ಹೋಗಿತ್ತು. ಪುನಃ ಶ್ರುತಜ್ಞಾನವು ಛಿನ್ನಭಿನ್ನವಾಗುತ್ತಿರಲು, ಆರ್ಯ ಸ್ಕಂದಿಲನು ಕ್ರಿ.ಶ. ೪ನೆಯ ಶತಮಾನದಲ್ಲಿ ಮಥುರಾನಗರದಲ್ಲಿ ಸಂಘಸಮ್ಮೇಲನವನ್ನು ನಡಸಿ ಆಗಮಸಾಹಿತ್ಯವನ್ನು ಒಂದು ವ್ಯವಸ್ಥಿತ ರೂಪಕ್ಕೆ ತರಲು ಪ್ರಯತ್ನಿಸಿದನು. ಇದೇ ಸುಮಾರಿನಲ್ಲಿ ನಾಗಾರ್ಜುನ ಸೂರಿಯು ವಲಭಿನಗರದಲ್ಲಿ ಮತ್ತೊಂದು ಪ್ರಯತ್ನ ನಡಸಿದನು. ಆದರೆ ಈ ಮೂರೂ ಸಂಘಗಳಿಂದ ನಿಶ್ಚಿತವಾದ ಪಾಠಸಂಪ್ರದಾಯ ಸ್ವತಂತ್ರರೂಪದಲ್ಲಿ ದೊರೆಯುವುದಿಲ್ಲ. ಪುನಃ ೪೫೩ರಲ್ಲಿ ದೇವರ್ಧಿಗಣಿ ಕ್ಷಮಾಶ್ರವಣನ ನೇತೃತ್ವದಲ್ಲಿ ಮುನಿ ಸಮ್ಮೇಲನವಾಗಿ, ಆಗಮಗಳಿಗೆ ಗ್ರಾಂಥಿಕಸ್ವರೂಪ ಬಂದಿತು. ಈಗ ದೊರೆಯುತ್ತಿರುವ ೪೫ (ಅಥವಾ ೪೬) ಗ್ರಂಥಗಳು ಈ ಕಾಲದಲ್ಲಿ ಸಂಕಲಿತವಾದವೆಂದು ತೋರುತ್ತದೆ. ಇವೇ ಆಚಾರಾಂಗಾದಿ ೧೧ ಅಂಗಗಳು, ಔಪಪಾತಿಕ ಮೊದಲಾದ ೧೨ ಉಪಾಂಗಗಳು, ನಿಶೀಥ ಮುಂತಾದ ೬ ಛೇದ ಸೂತ್ರಗಳು, ಉತ್ತರಾಧ್ಯಯನಾದಿ ೪ ಮೂಲ ಸೂತ್ರಗಳು ಚತುಶ್ಶರಣ ಇತ್ಯಾದಿ ೧೦ ಪ್ರಕೀರ್ಣಕಗಳು ಮತ್ತು ಅನುಯೋಗದ್ವಾರ, ನಂದಿ ಎಂಬೆರಡು ಚೂಲಿಕೆಗಳು. ಈ ಸಾಹಿತ್ಯ ವಿಸ್ತಾರವಾದ್ದು. ಇದರಲ್ಲಿ ಆಚಾರಾಂಗ, ಸೂತ್ರಕೃತಾಂಗ ಇವುಗಳಲ್ಲಿಯ ಕೆಲವಂಶಗಳು ವಿಷಯ ಮತ್ತು ಭಾಷೆಗಳ ದೃಷ್ಟಿಯಿಂದ ನಿಶ್ಚಿತವಾಗಿ ಪ್ರಾಚೀನವಾದವು. ಪ್ರಾಯಃ ಪಾಟಲಿಪುತ್ರ ಸಂಘಸಮ್ಮೇಲನದ ಕಾಲಕ್ಕಿಂತ ಮುಂಚಿನವಾಗಿರಬಹುದು. ಈ ಆಗಮಸಾಹಿತ್ಯದಲ್ಲಿ ಪ್ರಾಚೀನ ಮತ್ತು ನೂತನ ಸ್ತರಗಳು ವಿಂಗಡಗೊಳ್ಳಬೇಕು. ಮೊದಲು ಉಪಾಂಗವೆಂಬ ವಿಭಾಗ ಇರಲಿಲ್ಲವೆಂದು ತೋರುತ್ತದೆ. ವಲಭಿಯಲ್ಲಿ ಸಮಾವೇಶವಾದ ಸಮ್ಮೇಲನದ ಕಾಲದಲ್ಲಿ ಅತ್ತಿತ್ತ

ಉಳಿದುಬಂದ ವಿಷಯಗಳನ್ನು ಈ ಉಪಾಂಗಗಳಲ್ಲಿ ಕೂಡಿಸಿರಬಹುದು. ಆಚಾರಾಂಗಾದಿ ಗ್ರಂಥಗಳಲ್ಲಿ ಮುನಿಗಳ ಜೀವನಚರ್ಯೆಯ ವಿವರಗಳಿವೆ. 'ಭಗವತಿ' ಎಂಬ ೫ನೆಯ ಅಂಗವು ಹಲವು ವಿಷಯಗಳನ್ನು ಒಳಕೊಂಡ ಒಂದು ವಿಶ್ವಕೋಶವೆಂಬಂತಿದೆ. ಉಪಾಂಗ ಗಳಲ್ಲಿ 'ಸೂರ್ಯಪ್ರಜ್ಞಪ್ತಿ' ಮತ್ತು 'ಜಂಬೂದ್ವೀಪಪ್ರಜ್ಞಪ್ತಿ'ಗಳು ಕ್ರಮವಾಗಿ ಖಗೋಲ ಮತ್ತು ಭೂಗೋಲ ವಿಷಯಗಳನ್ನು ಒಳಕೊಂಡಿವೆ. ಉತ್ತರಾಧ್ಯಯನ ಮತ್ತು ದಶ ವೈಕಾಲಿಕ ಸೂತ್ರ ಇವು ಜನಪ್ರಿಯ ಗ್ರಂಥಗಳಾಗಿದ್ದು, ತಾತ್ತ್ವಿಕಚರ್ಚೆಗಳೂ ಮುನಿಜೀವನದ ಚಿತ್ರಗಳೂ ದೊರೆಯುತ್ತವೆ. 'ಮರಣಸಮಾಧಿ'ಯೆಂಬ ಪ್ರಕೀರ್ಣಕ ಸಲ್ಲೇಖನ ಮರಣವನ್ನು ನಿರೂಪಿಸುತ್ತದೆ.

ಈವರೆಗೆ ನೋಡಿದ ಆಗಮ ಸಾಹಿತ್ಯದ ಮೇಲೆ ಆರಂಭದಲ್ಲಿ ನಿರ್ಯುಕ್ತಿ, ಭಾಷ್ಯ ಮತ್ತು ಚೂರ್ಣಿಗಳೆಂಬ ಪ್ರಾಕೃತಟೀಕೆಗಳು ಹಲವು ಬರೆಯಲ್ಪಟ್ಟವು. ನಿರ್ಯುಕ್ತಿ ಮತ್ತು ಭಾಷ್ಯಗಳು ಪದ್ಯಬದ್ಧವಾಗಿವೆ, ಚೂರ್ಣಿ ಗದ್ಯದಲ್ಲಿವೆ. ವಿಷಯ ನಿರೂಪಣೆ, ಕಥೆಗಳ ಉದಾಹರಣೆ ಮತ್ತು ತಾತ್ತ್ವಿಕ ಚರ್ಚೆಗಳ ದೃಷ್ಟಿಯಿಂದ ಇವು ಮಹತ್ತ್ವ ಪೂರ್ಣವಾದ ರಚನೆಗಳು. 'ನಿಶೀಥಭಾಷ್ಯ' ಮತ್ತು 'ವಿಶೇಷಾವಶ್ಯಕಭಾಷ್ಯ'ಗಳು ಗಣನೀಯವಾದವು. ಇವುಗಳಲ್ಲಿ ಎರಡನೆಯದರ ಕರ್ತೃ ಜಿನಭದ್ರ (೬೦೯). ಚೂರ್ಣಿ ಗಳಲ್ಲಿ ಅಲ್ಲಲ್ಲಿ ಪ್ರಾಕೃತ ಸಂಸ್ಕೃತಗಳ ಮಿಶ್ರಣ ಕಂಡುಬರುತ್ತದೆ. ಸಾಮಾಜಿಕ ಮತ್ತು ಐತಿಹಾಸಿಕ ದೃಷ್ಟಿಯಿಂದ ಈ ಚೂರ್ಣಿಗಳು ಉಪಯುಕ್ತವಾಗಿವೆ. ಇವುಗಳ ಕಾಲ ೬–೭ನೆಯ ಶತಮಾನ. ಮುಂದೆ ಕೆಲವು ಸಂಸ್ಕೃತ ಟೀಕೆಗಳೂ ಬಂದುವು. ಮೊದಲನೆಯ ಟೀಕಾಕಾರನಾಗಿ ಖ್ಯಾತನಾದವನು ಹರಿಭದ್ರಸೂರಿ (ಸು. ೭೫೦).

ದಕ್ಷಿಣದಲ್ಲಿ ದಿಗಂಬರ ಪರಂಪರೆಯಲ್ಲಿ ಪ್ರಾಕೃತವು ಧಾರ್ಮಿಕ ಭಾಷೆಯಾಗಿ ಉಳಿದಿದ್ದರೂ, ಕುಂದಕುಂದ ಮುಂತಾದವರು ಪ್ರಾಕೃತದಲ್ಲಿಯೇ ತಂತಮ್ಮ ಪ್ರಕರಣ ಗಳನ್ನು ಬರೆದಿದ್ದರೂ, ಬಹುಬೇಗ ಅವರು ಸಂಸ್ಕೃತಭಾಷೆಯನ್ನು ಬಳಸತೊಡಗಿದರು. ಆಗಮಗ್ರಂಥಗಳ ಕಟ್ಟು ಅವರ ಮೇಲೆ ಅಷ್ಟು ಉಳಿಯದೇ ಹೋದದ್ದರಿಂದ ಕಾಲ ಪರಿಸ್ಥಿತಿಯನ್ನು ಅನುಸರಿಸಿ ಅವರು ಸುಲಭವಾಗಿ ಸಂಸ್ಕೃತವನ್ನು ಸ್ವೀಕರಿಸಿದರು; ಸ್ವತಂತ್ರ ವಿವೇಚನೆಗೆ ತೊಡಗಿದರು. ಪುರಾಣ, ಕಾವ್ಯ, ಸ್ತೋತ್ರ ಎಲ್ಲವನ್ನೂ ಸಂಸ್ಕೃತ ದಲ್ಲಿಯೇ ರಚಿಸಲು ಆರಂಭಿಸಿದರು. ಲೌಕಿಕ ಸಾಹಿತ್ಯಕ್ಕೆ ಪ್ರಾಕೃತವನ್ನು ಬಳಸಲಿಲ್ಲ. ಮುಂದಿನ ಕಾಲದಲ್ಲಿ ಸಂಸ್ಕೃತದ ಜತೆಗೆ ಸ್ಥಾನೀಯ ಭಾಷೆಗಳಾದ ಕನ್ನಡ ತಮಿಳುಗಳ ಮಾಧ್ಯಮವೂ ಪ್ರಚುರವಾಯಿತು.

ಶ್ವೇತಾಂಬರರು ವಿಶೇಷವಾಗಿ ಗುಜರಾತ್, ರಾಜಸ್ಥಾನ ಪ್ರದೇಶಗಳಲ್ಲಿ ಆಗಮದ ಪ್ರಾಕೃತ ಭಾಷೆಗೆ ಅನುಗುಣವಾಗಿ ಭಾಷ್ಯಗಳನ್ನು ಮಾತ್ರವಲ್ಲದೆ, ಮಹತ್ತ್ವದ ಧಾರ್ಮಿಕ ಮತ್ತು ಸಾಹಿತ್ಯಿಕ ಗ್ರಂಥಗಳನ್ನು ಕೂಡ ಪ್ರಾಕೃತಭಾಷೆಯಲ್ಲಿಯೇ ರಚಿಸಿದರು. ಹರಿಭದ್ರನು 'ಸಾವಯಪಣ್ಣತ್ತಿ'ಯಲ್ಲಿ ಶ್ರಾವಕರ ಚರ್ಯೆಯನ್ನು ಹೇಳಿ ದ್ದಾನೆ, ಪೌರಾಣಿಕ ಕಥೆಗಳನ್ನು ವಿಡಂಬಿಸುವ 'ಧೂರ್ತಾಖ್ಯಾನ'ವೆಂಬ ಇನ್ನೊಂದು

ಪ್ರಾಕೃತ ಗ್ರಂಥವೂ ಈತನದೇ. 'ಸಮರಾಇಚ್ಚಕಹಾ' ಎಂಬ ಇನ್ನೊಂದು ದೀರ್ಘ ಕಥಾಗ್ರಂಥವನ್ನು ಈತನೇ ಬರೆದಿದ್ದು, ಧರ್ಮಕಥೆಯ ಸಾಹಿತ್ಯದಲ್ಲಿ ಇದೊಂದು ಒಳ್ಳೆಯ ಉದಾಹರಣೆ. ಹರಿಭದ್ರನಿಗೆ ಸ್ವಲ್ಪ ಹಿಂದೆ ಆಗಿಹೋದ ಸಂಘದಾಸಗಣಿ (೬೦೦ರ ಪೂರ್ವ) 'ವಸುದೇವಹಿಂಡಿ' ಎಂಬ ಕಥಾಗ್ರಂಥವನ್ನು ಪ್ರಾಕೃತದಲ್ಲಿ ರಚಿಸಿದ್ದಾನೆ. ಹರಿವಂಶದವನಾದ ವಸುದೇವನ ಸಂಚಾರ ಸಂದರ್ಭಗಳು ಇಲ್ಲಿಯ ವಸ್ತು. ಇದು ಗುಣಾಢ್ಯನ ಬೃಹತ್ಕಥೆಯ ಅನುಕರಣ.

ಹರಿಭದ್ರಸೂರಿಯ ಶಿಷ್ಯ ಉದ್ಯೋತನ ಸೂರಿ 'ಕುವಲಯಮಾಲಾ' ಎಂಬ ವಿಸ್ತಾರವಾದ ಧರ್ಮಕಥಾಗ್ರಂಥವನ್ನು (೭೭೮) ರಚಿಸಿದ್ದಾನೆ. ಹರಿಭದ್ರನು 'ಸಮರಾಇಚ್ಚಕಹಾ'ದಲ್ಲಿ ಜೀವಜೀವಗಳ ನಡುವಣ ದ್ವೇಷ ನಿಮಿತ್ತವಾಗಿ ಉತ್ಪನ್ನವಾಗುವ ಚಾರಿತ್ರಿಕ ಘಟನೆಗಳನ್ನು ೯ ಭವಾವಳಿಗಳಲ್ಲಿ ನಿರೂಪಿಸಿದ್ದರೆ, ಉದ್ಯೋತನನು ಕ್ರೋಧಾದಿ ಕಷಾಯಗಳ ಮೂಲಕ ಐದು ಜೀವಾತ್ಮಗಳ ದುಃಖಗಳನ್ನು ಹಲವು ಭವಗಳ ಕಥೆಗಳಲ್ಲಿ ನಿರೂಪಿಸಿದ್ದಾನೆ. ಭಾಷೆ ಬಂಧಗಳ ದೃಷ್ಟಿಯಿಂದಲೂ ಈ ಗ್ರಂಥಕ್ಕೆ ಮಹತ್ತ್ವವಿದೆ. ಸಂಧಿಸರ್ಗಗಳ ವಿಭಜನೆಯಿಲ್ಲದೆ ಈ ಗ್ರಂಥ ಅಖಂಡವಾದೊಂದು ಪ್ರಬಂಧವಾಗಿದೆ. ಗದ್ಯಪದ್ಯಗಳ ಮಿಶ್ರಣವಿದ್ದು, ಅನುಸ್ಯೂತವಾಗಿ ಕಥೆ ಇವುಗಳಲ್ಲಿ ನಿರೂಪಣಗೊಂಡಿರುವುದರಿಂದ ಚಂಪೂಗ್ರಂಥವೆಂದು ಕರೆಯಲು ಯೋಗ್ಯವಾಗಿದೆ.

ಪಾದಲಿಪ್ತನಿಂದ ರಚಿತವಾದ 'ತರಂಗವಈ ಕಹಾ' ಈಗ ಲಭ್ಯವಿಲ್ಲ. ಉದ್ಯೋತನ ಮೊದಲಾದ ಕವಿಗಳು ಇದನ್ನು ಉಲ್ಲೇಖಿಸಿದ್ದಾರೆ. ಈಗ ನಮಗೆ ಕಾಣಲು ದೊರೆಯುವುದು, 'ತರಂಗಲೋಲ' ಎಂಬ ಹೆಸರಿನ, ಪ್ರಾಕೃತಭಾಷೆಯ ಒಂದು ಪ್ರತಿರೂಪಗ್ರಂಥ. ಇಲ್ಲಿಯ ಕಥೆ ಸ್ವಾರಸ್ಯಕರವಾದ್ದು, ಧಾರ್ಮಿಕ ಕಾದಂಬರಿಯೆಂದು ಹೇಳಬಹುದಾದ್ದು.

## ದಕ್ಷಿಣಭಾರತದ ಜೈನ ಪ್ರಾಕೃತ ಸಾಹಿತ್ಯ

ದಕ್ಷಿಣಭಾರತದಲ್ಲಿ ಜೈನರ ಇತಿಹಾಸ ಮೊದಲಾಗುವುದು ಭದ್ರಬಾಹುಮುನಿಯು ದಕ್ಷಿಣಕ್ಕೆ ಬಂದ ಕಾಲದಿಂದ. ಈ ಕಾಲವನ್ನು ಸಾಮಾನ್ಯವಾಗಿ ಕ್ರಿ.ಪೂ. ಸು. ೪ನೆಯ ಶತಮಾನ ಎಂದು ತಿಳಿಯಲಾಗಿದೆ. ಇಲ್ಲಿಯ ಪ್ರಾಚೀನ ಪರಂಪರೆಯ ಜೈನ ಪ್ರಾಕೃತ ಸಾಹಿತ್ಯವೆಂದರೆ 'ಷಟ್ಖಂಡಾಗಮ' ಹಾಗೂ 'ಕಷಾಯಪ್ರಾಭೃತ'ದ ಮೂಲಸೂತ್ರಗಳು. ಇವುಗಳ ಮೇಲೆ ಈಚೆಗೆ ಎಷ್ಟೋ ಪ್ರಾಕೃತ ಸಂಸ್ಕೃತ ಟೀಕೆಗಳು ಹುಟ್ಟಿವೆ. ಶ್ಯಾಮಕುಂದ, ತುಂಬುಲೂರಾಚಾರ್ಯ, ಸಮಂತಭದ್ರ, ಬಪ್ಪದೇವ ಈ ಮೊದಲಾದವರು ಆ ಟೀಕೆಗಳನ್ನು ಬರೆದವರಲ್ಲಿ ಪ್ರಾಚೀನರಾದ ಕೆಲವರು. ಆದರೆ ಇವರು ಬರೆದ ಟೀಕೆಗಳಾವುವೂ ಈಗ ದೊರೆಯುವುದಿಲ್ಲ. ಇವುಗಳಲ್ಲಿ ಕೆಲವಾದರೂ ಪ್ರಾಕೃತಭಾಷೆಯಲ್ಲಿ ಬರೆಯಲ್ಪಟ್ಟಿದ್ದವೆಂದು ನಂಬಬಹುದು. ಬಹುಮಟ್ಟಿಗೆ ಇವೆಲ್ಲವುಗಳ ಸಂಗ್ರಹವೆಂದಲೇ ವೀರಸೇನಾಚಾರ್ಯನು ತನ್ನ ಬೃಹತ್ಕಾಯ 'ಧವಲಾ' ಟೀಕೆಯನ್ನು (೮೧೬) ಸಂಸ್ಕೃತ ಪ್ರಾಕೃತ ಮಿಶ್ರಣದ ಮಣಿಪ್ರವಾಳ ಶೈಲಿಯಲ್ಲಿ ಬರೆದು ಮುಗಿಸಿದನೆಂದು ಹೇಳಬಹುದು.

ತಮಿಳುನಾಡಿನಲ್ಲಿ ಶ್ರವಣರ ಎಂದರೆ ಜೈನಮುನಿಗಳ ದೆಸೆಯಿಂದ ಕೆತ್ತಿಸಿದ ಎಷ್ಟೋ ಪ್ರಾಚೀನ ಗುಹೆಗಳು ಕಂಡುಬಂದಿವೆ. ಕೆಲವಲ್ಲಿ ಬ್ರಾಹ್ಮೀಲಿಪಿಯಲ್ಲಿ ಬರೆದ ಲೇಖಗಳಿವೆ. ತಜ್ಞರ ಮತದಂತೆ ಇವು ಕ್ರಿ.ಪೂ. ೨–೩ನೆಯ ಶತಮಾನಗಳಿಗೆ ಸಂಬಂಧಿಸಿದುವು. ಭಾಷೆಯಲ್ಲಿ ಪ್ರಾಕೃತದ ಪ್ರಭಾವ ಕಾಣುತ್ತದೆ. ತಮಿಳುನಾಡಿನಲ್ಲಿ ಜೈನಧರ್ಮಕ್ಕೆ ಈ ಕಾಲದಿಂದ ಆಶ್ರಯ ದೊರೆತಿತ್ತೆಂದು ಈ ಶಾಸನಸಾಕ್ಷ್ಯಗಳಿಂದ ನಾವು ಊಹಿಸ ಬಹುದು.

ಅರ್ಧಮಾಗಧೀ ಪ್ರಾಕೃತವೇ ಜೈನರ ಪರಂಪರಾಗತ ಭಾಷೆಯಾದ್ದರಿಂದ, ಅವರ ಮೂಲ ಪಂಚನಮಸ್ಕಾರ ಮಂತ್ರ ಸಹ ಇಂದಿಗೂ ಪ್ರಾಕೃತದಲ್ಲಿಯೇ ಉಳಿದು ಕೊಂಡಿರುವುದರಿಂದ, ದಕ್ಷಿಣದಲ್ಲಿಯೂ ಅವರ ಒಲವು ಪ್ರಾಕೃತದ ಕಡೆಗಿದ್ದುದರಲ್ಲಿ ಆಶ್ಚರ್ಯವೇನಿಲ್ಲ. ಇಲ್ಲಿ ಪ್ರಚಲಿತವಿದ್ದ ಜೈನಪರಂಪರೆ ನಿರ್ಗ್ರಂಥ ಅಥವಾ ದಿಗಂಬರ ಮುನಿಗಳದು. ಪರಿಸ್ಥಿತಿವಶದಿಂದ ಸಮಗ್ರವಾಗಿ ಪೂರ್ವಗಳ ಹಾಗೂ ಆಗಮಗಳ ಗ್ರಾಂಥಿಕ ಪರಂಪರೆ ಉಳಿದುಕೊಂಡು ಬರಲಿಲ್ಲ. ಇಲ್ಲಿಯವರು ತಮ್ಮ ಸ್ಮೃತಿಶಕ್ತಿ ಉಳಿಸಿಕೊಟ್ಟಮಟ್ಟಿಗೆ ಸಣ್ಣಪುಟ್ಟ ಗ್ರಂಥಗಳನ್ನು ರಚಿಸಿದರು, ಅವನ್ನು ಸುರಕ್ಷಿತವಾಗಿ ಉಳಿಸಿಕೊಂಡು ಬಂದರು. ಇವುಗಳಲ್ಲಿ ಮುಖ್ಯವಾದುವು ಎಂದರೆ ನಿರ್ಗ್ರಂಥ ಮುನಿಗಳ ಆಚಾರವಿಚಾರಗಳಿಗೆ ಅನುಕೂಲವಾದ ಪಾಹುಡ (ಪ್ರಾಭೃತ) ಮೊದಲಾದ ಗ್ರಂಥಗಳು. ತಮಿಳು ಮತ್ತು ಕನ್ನಡಭಾಷೆಗಳ ಬೆಳೆವಣಿಗೆಯಲ್ಲಿ, ಈ ಬಗೆಯ ಗ್ರಂಥಗಳನ್ನು ರಚಿಸಿದ ಜೈನಾಚಾರ್ಯರೂ ಇತರ ಗ್ರಂಥಕಾರರೂ ವಿಶೇಷವಾಗಿ ಸ್ಫೂರ್ತಿ ಪ್ರಚೋದನೆಗಳನ್ನು ನೀಡಿದರೆಂದು ಹೇಳಬಹುದು. ಸಾಮಾನ್ಯಜನರ ಭಾಷೆಯೆಂದು ಪ್ರಾಕೃತದ ಕಡೆಗೆ ಒಲೆದದ್ದು, ಮುನ್ನಡೆಯ ಘಟ್ಟದಲ್ಲಿ ತಮಿಳು ಕನ್ನಡ ಭಾಷೆಗಳು ಗ್ರಾಂಥಿಕರೂಪ ಕ್ಕಿಳಿದು ಸಮೃದ್ಧಗೊಳ್ಳುವುದಕ್ಕೆ ಸಹಾಯಕವಾಯಿತು. ಈ ದೇಶಭಾಷೆಗಳಿಗೆ ಸಂಸ್ಕೃತದ ಉಚ್ಚಾರಣೆಗಿಂತ ಪ್ರಾಕೃತದ ಉಚ್ಚಾರಣೆಯೇ ಹತ್ತಿರದ್ದು. ಹೀಗಾಗಿ ಸಂಸ್ಕೃತ ಶಬ್ದ ಗಳನ್ನು ಸ್ವೀಕರಿಸುವಾಗ, ಅವುಗಳಿಗೆ ಪ್ರಾಕೃತರೂಪವನ್ನು ಕೊಟ್ಟು ಪಡೆದದ್ದು ಕಂಡು ಬರುತ್ತದೆ. ಇದು ಕೂಡ ಜೈನವಾಙ್ಮಯದ ಪ್ರಾಕೃತಭಾಷೆಯ ಪ್ರಭಾವದ ಒಂದು ಸಾಕ್ಷ್ಯವೇ ಆಗಿದೆ.

ದಕ್ಷಿಣದೇಶದಲ್ಲಿ, ಆರಂಭಕಾಲೀನ ಮತ್ತು ಮೂಲಾಧಾರವಾದ ಉಪಲಬ್ಧ ಜೈನ ಪ್ರಾಕೃತಸಾಹಿತ್ಯವೆಂದರೆ ಗುಣಧರನ 'ಕಸಾಯಪಾಹುಡ'ದ ಸೂತ್ರಗಳು, ಧರಸೇನನಿಂದ ನಿರೂಪಿತವಾದ 'ಛಕ್ಖಂಡಾಗಮ' ಸೂತ್ರಗಳು. ಯತಿವೃಷಭನ 'ತಿಲೋಯ ಪಣ್ಣತ್ತಿ', ಕುಂದಕುಂದನ 'ಪಂಚಾಸ್ತಿಕಾಯ' 'ಸಮಯಸಾರ' ಮುಂತಾದ ಗ್ರಂಥಗಳು, ವಟ್ಟ ಕೇರನ 'ಮೂಲಾಚಾರ', ಶಿವಾರ್ಯನ 'ಆರಾಧನ', ಸಿದ್ಧಸೇನನ 'ಸಮ್ಮಇಸುತ್ತ', ಮತ್ತು ಸ್ವಾಮಿಕುಮಾರನ 'ಬಾರಹ ಅಣುವೇಕ್ಖಾ'—ಈ ಕೆಲವು ಗ್ರಂಥಗಳು. ಈ ಗ್ರಂಥಗಳ ಕರ್ತೃಗಳೆಲ್ಲ ದಕ್ಷಿಣದೇಶದವರು ; ಖ್ಯಾತರಾದ ಜೈನಾಚಾರ್ಯರು. ಇವರ ಮೂಲ ಸಾಹಿತ್ಯದ ಮೇಲೆ ಪ್ರಾಕೃತ ಸಂಸ್ಕೃತ ಭಾಷೆಗಳಲ್ಲಿ ಟೀಕೆಗಳು ಕೆಲವು

ದೊರೆಯುತ್ತವೆ. ಸರ್ವನಂದಿಯ 'ಲೋಕವಿಭಾಗ' ಮೊದಲು ಪ್ರಾಕೃತದಲ್ಲಿದ್ದು, ಈಗ ಸಿಂಹಸೂರಿ ರಚಿತವಾದ ಅದರ ಸಂಸ್ಕೃತ ಅನುವಾದವಷ್ಟೇ ಕಾಣಲು ದೊರೆಯುತ್ತದೆ. ಪೂರ್ವೋಕ್ತರಾದ ಗ್ರಂಥಕರ್ತೃಗಳ ಕಾಲದೇಶ ಇತ್ಯಾದಿಯಾದ ಇತಿವೃತ್ತ ವಿವರಗಳನ್ನು ನಿಶ್ಚಿತವಾಗಿ ನಿರ್ಣಯಿಸುವುದು ಕಷ್ಟ. ಬಹುಮಟ್ಟಿಗೆ ಇವರೆಲ್ಲ ಕ್ರಿಸ್ತಶಕಾರಂಭದ ಹಿಂಚು ಮುಂಚಿನಲ್ಲಿ ಇದ್ದವರೆಂದು ಊಹಿಸಬಹುದು. ಪರಂಪರಾಗತವಾದ ಎಷ್ಟೋ ಗಾಥೆಗಳು ಇವರಲ್ಲಿ ಹಲವರ—ಉದಾಹರಣೆಗೆ ಕುಂದಕುಂದ, ವಟ್ಟಕೇರ, ಶಿವಾರ್ಯ ಮೊದಲಾದವರ—ಗ್ರಂಥಗಳಲ್ಲಿ ಸಮಾನರೂಪದಿಂದ ಕಂಡುಬರುತ್ತವೆ. ಆದರೆ ಇಷ್ಟರಿಂದ, ಒಬ್ಬರು ಇನ್ನೊಬ್ಬರಿಂದ ಅವನ್ನು ಸ್ವೀಕರಿಸಿದ್ದಾರೆ ಎಂದು ಸಾಧಿಸುವುದಾಗದು; ಪೈತೃಕ ಸಂಪತ್ತಿಯಾಗಿ ಎಲ್ಲ ಗ್ರಂಥಗಳಲ್ಲಿಯೂ ಇವು ಸೇರಿ ಬಂದಿವೆಯೆಂದು ತಿಳಿಯುವುದೇ ಸ್ವಾಭಾವಿಕವಾದ್ದು. ಇನ್ನು ಮುಂದೆ ಒಂದೊಂದಾಗಿ ಈ ಗ್ರಂಥಗಳ ಸಂಕ್ಷೇಪ ಪರಿಚಯವನ್ನು ಮಾಡಿಕೊಳ್ಳಲು ತೊಡಗಬಹುದು.

'ಛಕ್ಖಂಡಾಗಮು' ('ಷಟ್ಖಂಡಾಗಮು') : ಬಹುಪ್ರಾಚೀನವಾದ ಈ ಗ್ರಂಥದಲ್ಲಿ ಜೀವಟ್ಠಾಣ, ಖುದ್ದಾಬಂಧ, ಬಂಧಸ್ವಾಮಿತ್ವವಿಚಯ, ವೇದನಾ, ವರ್ಗಣಾ, ಮಹಾಬಂಧ ಎಂಬ ಆರು ಖಂಡಗಳಿದ್ದು, ಪರಂಪರೆಯ ಪ್ರಕಾರ ಇವುಗಳ ವಿಷಯಗಳು ಆಗ್ರಾಯಣೀಯವೆಂಬ ಹೆಸರಿನ ೨ನೆಯ ಪೂರ್ವದಿಂದ ತೆಗೆದವಾಗಿವೆ. ಗಿರಿನಗರದ ಚಂದ್ರಗುಹೆಯ ವಾಸಿಯಾಗಿದ್ದ ಧರಸೇನಾಚಾರ್ಯನು ಆ ವಿಷಯಗಳನ್ನೆಲ್ಲ ತಿಳಿದವನಾಗಿದ್ದು, ತನ್ನ ಮರಣಕಾಲ ಸನ್ನಿಹಿತವಾದಾಗ ಶ್ರುತಜ್ಞಾನ ವಿಚ್ಛೇದಗೊಳ್ಳಬಾರದೆಂದು ಚಿಂತಿಸಿ, ಪುಷ್ಪದಂತ ಮತ್ತು ಭೂತಬಲಿಗಳೆಂಬ ಇಬ್ಬರು ಶಿಷ್ಯರನ್ನು ದಕ್ಷಿಣಾಪಥದಿಂದ ತನ್ನಲ್ಲಿಗೆ ಕರೆಸಿಕೊಂಡು ಅವರಿಗೆ ಅದನ್ನು ಬೋಧಿಸಿದನೆಂದು ಹೇಳಲಾಗಿದೆ. ಹೀಗಾಗಿ ಈ ಗ್ರಂಥದ ಕರ್ತೃತ್ವ ಪುಷ್ಪದಂತ ಮತ್ತು ಭೂತಬಲಿಗಳೆಂಬ ಆಚಾರ್ಯರದಾಗಿದೆ. ಕಾಲ ಕ್ರಿ.ಶ. ಸು. ೨ನೆಯ ಶತಮಾನ. ಈಗ ಲಭ್ಯವಿರುವ ಈ ಗ್ರಂಥದ 'ಧವಲಾ' ಎಂಬ ಬೃಹತ್ಕಾಯ ಟೀಕೆಯನ್ನು ಬರೆದವನು ವೀರಸೇನಾಚಾರ್ಯ. ಭಾಷೆ ಸಂಸ್ಕೃತ ಪ್ರಾಕೃತ ಮಿಶ್ರಣದಿಂದ ಕೂಡಿದೆ. ಕರ್ತೃವೇ ಮಣಿಪ್ರವಾಳ ಶೈಲಿ ಎಂದು ಕರೆದಿದ್ದಾನೆ. ಮೊದಲು ಬರೆದ ಕೆಲವು ಪ್ರಾಕೃತ ಸಂಸ್ಕೃತ ಲಘುಟೀಕೆಗಳು ಈ ದೊಡ್ಡ ಟೀಕೆಯಲ್ಲಿ ಅಡಗಿಹೋಗಿರುವುದು ಸಾಧ್ಯ. ಯತಿವೃಷಭನ ಚೂರ್ಣಿ, ಶ್ಯಾಮಕುಂದನ ಪದ್ಧತಿ ಮೊದಲಾದವು ಹಾಗೆಯೇ ಆಗಿರಬಹುದು. ವೀರಸೇನಾಚಾರ್ಯನ ಧವಲಾ ಟೀಕೆ ಆತನ ಪಾಂಡಿತ್ಯದ, ಪ್ರಾಮಾಣಿಕವಾದ ಕಥನಶೈಲಿಯ ಕೈಗನ್ನಡಿಯಾಗಿದ್ದು, ಯಾವುದೇ ಸಂಸ್ಕೃತಿಗೆ ಅಭಿಮಾನಾಸ್ಪದವಾದ್ದೆಂದು ಹೇಳಲು ಯೋಗ್ಯವಾಗಿದೆ.

'ಕಸಾಯಪಾಹುಡ' ('ಕಷಾಯಪ್ರಾಭೃತ') : ಈ ಗ್ರಂಥವೂ ಪ್ರಾಚೀನವೇ ಆಗಿದ್ದು, ಷಟ್ಖಂಡಾಗಮದಂತೆಯೇ ಕರ್ಮತತ್ತ್ವಕ್ಕೆ ಸಂಬಂಧಿಸಿದೆ; ಪೂರ್ವಗಳ ಪರಂಪರೆಗೆ ಸೇರಿದ್ದಾಗಿದೆ. ಇಲ್ಲಿ ಬಂಧ, ಸಂಕ್ರಮಣ, ಉದಯ, ಉದೀರ್ಣ ಮುಂತಾದ ವಿಷಯಗಳ ನಿರೂಪಣೆಯಿದೆ. ಕರ್ತೃ ಗುಣಧರ ಭಟ್ಟಾರಕನು ಗಾಥೆಗಳಲ್ಲಿ ಆ ನಿರೂಪಣೆ

ಯನ್ನು ಕೊಟ್ಟಿದ್ದಾನೆ. ಧರಸೇನ ಮತ್ತು ಗುಣಧರರ ಪೌರ್ವಾಪರ್ಯದ ವಿಷಯವಾಗಿ ನಮಗೆ ಹೆಚ್ಚು ತಿಳಿದಿಲ್ಲ. 'ಕಸಾಯಪಾಹುಡ'ದ ಮೇಲೆ ಕೂಡ ವೀರಸೇನಾಚಾರ್ಯನೇ ವಿಶಾಲಕಾಯ ಟೀಕೆಯನ್ನು ಆರಂಭಿಸಿದನು. ಆದರೆ ಅದು ಮುಗಿಯುವುದಕ್ಕೆ ಮೊದಲೇ ದಿವಂಗತನಾದಂತೆ ತೋರುತ್ತದೆ. ಮುಂದೆ ವೀರಸೇನನ ಶಿಷ್ಯ ಜಿನಸೇನನು ಶಾಸ್ತ್ರ ಕೂಟರ ದೊರೆ ಅಮೋಘವರ್ಷ ನೃಪತುಂಗನ ಕಾಲದಲ್ಲಿ ಆ ಕೆಲಸವನ್ನು ಪೂರೈಸಿದನು. ಇಲ್ಲಿಯೂ ಆ ಮೊದಲಿನ ಟೀಕೆಗಳು ಅಡಕವಾಗಿರುವುದು ಸಾಧ್ಯ.

ಕುಂದಕುಂದ, ಆತನ ಗ್ರಂಥಗಳು: ದಕ್ಷಿಣದೇಶದ ಜೈನ ಪರಂಪರೆಯಲ್ಲಿ ಕುಂದ ಕುಂದಾಚಾರ್ಯನ ಸ್ಥಾನ ಮಹತ್ತ್ವಯುತವಾದ್ದು. ಮಹಾವೀರ ಮತ್ತು ಗೌತಮ ಗಣಧರರ ಅನಂತರದಲ್ಲಿ ಈತನ ಹೆಸರು ಕಾಣಿಸಿಕೊಳ್ಳುತ್ತದೆ. ಶಿಲಾಲೇಖಗಳಲ್ಲಿ ಈತನ ಹೆಸರನ್ನು ಕೊಂಡಕುಂದ ಎಂದಿದೆ. ಈ ಹೆಸರನ್ನು ಹೋಲುವ ಒಂದು ಸ್ಥಳವೇನೋ ಆಂಧ್ರಪ್ರದೇಶದಲ್ಲಿ ಉಂಟು. ಆತನು ಇಲ್ಲಿಯವನಾಗಿರುವುದು ಸಂಭವನೀಯ. ಈತನ ಹಲವು ಹೆಸರುಗಳಲ್ಲಿ ಪದ್ಮನಂದಿ ಎಂಬುದು ಮುಖ್ಯವಾದ್ದು. ಇನ್ನು ಈತನ ಸಂಬಂಧ ವಾದ ಕೆಲವು ಕಥೆಗಳು, ಐತಿಹ್ಯಗಳು ದೊರೆಯುತ್ತವೆಯಾದರೂ ಇವುಗಳಿಗೆ ಆತನ ಗ್ರಂಥಗಳಲ್ಲಿ ಆಧಾರಗಳಿಲ್ಲ. 'ಬಾರಸ ಅಣುವೇಕ್ಖೆ'ಯಲ್ಲಿ ಕೊನೆಗೆ ತನ್ನ ಹೆಸರನ್ನೂ 'ಬೋಧಪಾಹುಡ'ದಲ್ಲಿ ತಾನು ಭದ್ರಬಾಹುವಿನ ಶಿಷ್ಯನೆಂಬುದನ್ನೂ ಸೂಚಿಸಿದ್ದಾನೆ. ಶಾಸನಗಳಲ್ಲಿ ಈತನು ಮೂಲಸಂಘದವನೆಂದೂ ಆಗಾಗ್ಗೆ ದ್ರವಿಡಸಂಘದೊಡನೆ ಸಂಬಂಧ ವಿಟ್ಟುಕೊಂಡಿದ್ದವನೆಂದೂ ಹೇಳಿರುವುದು ಕಾಣುತ್ತದೆ. ಈತನ ಕಾಲ ನಿಶ್ಚಿತವಾಗಿ ತಿಳಿದಿಲ್ಲವಾದರೂ ಕ್ರಿ.ಶ.ದ ಆರಂಭದಲ್ಲಿ ಆಗಿಹೋದವನಿರಬೇಕೆಂದು ಕೆಲವರು ತಿಳಿಯು ತ್ತಾರೆ.

ಕುಂದಕುಂದಾಚಾರ್ಯನ ಎಲ್ಲ ಗ್ರಂಥಗಳೂ ಪ್ರಾಕೃತದಲ್ಲಿಯೇ ಬರೆಯಲ್ಪಟ್ಟಿವೆ. 'ಷಟ್ಖಂಡಾಗಮ'ದ ಮೇಲೆ ಬರೆದ 'ಪರಿಕರ್ಮ' ಎಂಬ ಈತನ ಟೀಕೆ ಇಂದು ದೊರೆಯುವುದಿಲ್ಲ. 'ಮೂಲಾಚಾರ'ದ ಕರ್ತೃ ಕೂಡ ಈತನೇ ಎಂದು ಅದರ ಕೆಲವು ಹಸ್ತಪ್ರತಿಗಳಲ್ಲಿ ಹೇಳಿದೆ. 'ಕ್ರಿಯಾಕಲಾಪಟೀಕೆ'ಯ ಕರ್ತೃ ಪ್ರಭಾಚಂದ್ರನ ಹೇಳಿಕೆ ಯಂತೆ ಪ್ರಾಕೃತದಲ್ಲಿ 'ಭಕ್ತಿ'ಗಳನ್ನು ಬರೆದವನು ಕುಂದಕುಂದ, ಸಂಸ್ಕೃತದಲ್ಲಿ 'ಭಕ್ತಿ' ಗಳನ್ನು ಬರೆದವನು ಪೂಜ್ಯಪಾದ. ಇವುಗಳ ಸ್ವರೂಪವನ್ನು ನೋಡಿದರೆ ಇವೆಲ್ಲ ನಿಶ್ಚಿತ ವಾಗಿ ಪ್ರಾಚೀನ ಪರಂಪರೆಯ ಪ್ರಕರಣ ಗ್ರಂಥಗಳು. ೧೦ ಭಕ್ತಿಗಳಲ್ಲಿ 'ತೀರ್ಥಕರಭಕ್ತಿ' ದಿಗಂಬರ ಶ್ವೇತಾಂಬರ ಸಂಪ್ರದಾಯಗಳಲ್ಲಿ ಕಾಣುತ್ತದೆ. ಕುಂದಕುಂದ ರಚಿತವಾದ ಎಂಟು ಪಾಹುಡಗಳು ಆಯಾ ವಿಷಯಗಳ ಮೇಲಿನ ಸಣ್ಣಸಣ್ಣ ಪ್ರಕರಣಗ್ರಂಥಗಳು. ಇಲ್ಲಿಯ ನಿರೂಪಣಪದ್ಧತಿ ಅವುಗಳ ಪ್ರಾಚೀನತೆಗೆ ಸಾಕ್ಷ್ಯವಾಗಿದೆ. ತಾತ್ತ್ವಿಕ ಮತ್ತು ಆಚಾರ ಸಂಬಂಧವಾದ ವಿಷಯಗಳ ನಿರೂಪಣೆಯಲ್ಲಿ ಆಗಾಗ್ಗೆ ಕೆಲವು ವಿಶಿಷ್ಟವ್ಯಕ್ತಿಗಳ ಕಥೆಯ ಸೂಚನೆ ದೊರೆಯುತ್ತದೆ. 'ರಯಣಸಾರ' ಎಂಬುದು ಅನೇಕ ವಿಷಯಗಳು ಸಮಾವೇಶಗೊಂಡಿರುವ ಒಂದು ಸಂಕೀರ್ಣಗ್ರಂಥ. 'ಬಾರಸ ಅಣುವೇಕ್ಖೆ'ಯಲ್ಲಿ ದ್ವಾದಶ

ಭಾವನೆಗಳ ಸಂಕ್ಷಿಪ್ತ ವಿವರಣೆಯಿದೆ. ಈ ಗ್ರಂಥದಿಂದ ಆ ಗಾಥೆಗಳನ್ನು ಅದೇ ಕ್ರಮದಲ್ಲಿ ಪೂಜ್ಯಪಾದನು ತನ್ನ 'ಸರ್ವಾರ್ಥಸಿದ್ಧಿಟೀಕೆ'ಯಲ್ಲಿ ಉದ್ಧರಿಸಿರುವುದು ಕಂಡುಬಂದಿದೆ. 'ನಿಯಮಸಾರ'ದಲ್ಲಿ ದರ್ಶನ ಜ್ಞಾನ ಚಾರಿತ್ರಗಳ ತಾತ್ತ್ವಿಕಚರ್ಚೆಯಿದೆ. ಐದು ಅಸ್ತಿಕಾಯಗಳು, ಆರು ದ್ರವ್ಯಗಳು ಇವುಗಳ ತಾತ್ತ್ವಿಕ ನಿರೂಪಣೆಯನ್ನು ಒಳಕೊಂಡಿದ್ದು 'ಪಂಚಾಸ್ತಿಕಾಯಸಾರ.' 'ಪ್ರವಚನಸಾರ'ದಲ್ಲಿ ಜ್ಞಾನಜ್ಞೇಯಗಳ ಮತ್ತು ಸ್ಯಾದ್ವಾದದ ವಿಶ್ಲೇಷಣಾತ್ಮಕ ನಿರೂಪಣೆಯಿದೆ; ಇದರ ಕೊನೆಯ ಅಂಶದಲ್ಲಿ ಮುನಿಗಳ ಆಚರಣೆಯನ್ನು ವಿವರಿಸಿದೆ. ಪದಾರ್ಥಚರ್ಚೆಯಲ್ಲಿ ದ್ರವ್ಯ ಮತ್ತು ಪರ್ಯಾಯಾರ್ಥಿಕಗಳೆಂಬ ಭಿನ್ನನಯಗಳಿಂದ ನಿರೂಪಣೆ ಮಾಡಿರುವುದು ಕಾಣುತ್ತದೆ. 'ಸಮಯಸಾರ' ಶ್ರೇಷ್ಠವಾದೊಂದು ಆಧ್ಯಾತ್ಮಿಕಗ್ರಂಥ. ಆತ್ಮತತ್ತ್ವದ ವಿವೇಚನೆಯಲ್ಲಿ ವ್ಯವಹಾರನಯಕ್ಕೆ ಗೌಣತೆಕೊಟ್ಟು ನಿಶ್ಚಯನಯವನ್ನೇ ಅವಲಂಬಿಸಿದೆ. ಕುಂದಕುಂದನ ಹಲವು ಗ್ರಂಥಗಳಲ್ಲಿ ತತ್ತ್ವ ಮತ್ತು ಆಚಾರಗಳ ನಿರೂಪಣೆ, ನಿಶ್ಚಯನಯದಿಂದ ಆಧ್ಯಾತ್ಮಿಕ ಚಿಂತನೆ—ಈ ಎರಡು ದೃಷ್ಟಿಗಳನ್ನು ನಿಚ್ಚಟವಾಗಿ ಕಾಣಬಹುದಾಗಿದೆ.

'ಮೂಲಾಚಾರ' : ವಟ್ಟಕೇರಿ, ವಟ್ಟಕೇರ ಅಥವಾ ವಟ್ಟೇರಕಾಚಾರ್ಯ ಈ ಗ್ರಂಥದ ಕರ್ತೃವೆಂದು ಹೇಳುವುದು ರೂಢಿ. ಈ ಹೆಸರು ಬೇರೆಲ್ಲಿಯೂ ನಮಗೆ ದೊರಕುವುದಿಲ್ಲ. ಕೆಲವೆಡೆ ಕುಂದಕುಂದಾಚಾರ್ಯನೇ ಗ್ರಂಥಕಾರನೆಂದು ಹೇಳಿರುವುದೂ ಉಂಟು. ಕುಂದಕುಂದನ ಗ್ರಂಥಗಳಿಗೂ ಈ ಗ್ರಂಥಕ್ಕೂ ಸಾದೃಶ್ಯಗಳಿರುವುದೇ ಹೀಗೆ ಊಹಿಸಿರುವುದಕ್ಕೆ ಕಾರಣ. ಸಾದೃಶ್ಯವಿರುವುದು ಗಾಥೆಗಳಲ್ಲಿ. ಆದರೆ ಈ ಗಾಥೆಗಳು ಪರಂಪರಾಗತವಾಗಿ ಬಂದಿದ್ದು, ಪ್ರಾಚೀನಸ್ತರದ ಗ್ರಂಥಗಳಲ್ಲೆಲ್ಲ ಸಮಾನವಾಗಿ ಉದ್ಧೃತವಾಗಿರುತ್ತವೆ ಎಂಬುದನ್ನು ಮರೆಯಬಾರದು. ಗ್ರಂಥದ ಕಾಲನಿರ್ಣಯವನ್ನು ಮಾಡಲೂ ತಕ್ಕ ಪ್ರಮಾಣಗಳಿಲ್ಲ. ಆದರೆ ಕುಂದಕುಂದನ ಗ್ರಂಥಗಳಷ್ಟೇ ಪ್ರಾಚೀನವೆಂಬುದರಲ್ಲಿ ಸಂದೇಹವಿಲ್ಲ. ವಿಷಯ ನಿರೂಪಣೆಯ ಮೇಲಿಂದ ಹೀಗೆ ಭಾವಿಸಲು ಅವಕಾಶವಿದೆ.

'ಮೂಲಾಚಾರ' ದಿಗಂಬರ ಸಂಪ್ರದಾಯದ ಮುನಿಗಳಿಗೆ ವಿಶೇಷ ಪ್ರಮಾಣಭೂತವಾದ್ದು. ಕೆಲವೆಡೆ 'ಆಚಾರಾಂಗ'ವೆಂದೇ ಇದನ್ನು ಕರೆದಿದೆ. ಇದರಲ್ಲಿ ೧೨ ಅಧಿಕಾರಗಳಿದ್ದು, ೧೨೫೨ ಗಾಥೆಗಳಿವೆ. ಕೆಲವು ಪಾಠಸಂಪ್ರದಾಯಗಳಲ್ಲಿ ಇನ್ನೂ ಹೆಚ್ಚಿನ ಗಾಥೆಗಳುಂಟು. ಮೊದಲನೆಯ ಅಧಿಕಾರದಲ್ಲಿ ಮುನಿಗಳ ೨೮ ಮೂಲಗುಣಗಳ ನಿರೂಪಣೆಯಿದೆ. ಬಹುಶಃ ಇದೇ ಕಾರಣವಾಗಿ ಗ್ರಂಥಕ್ಕೆ 'ಮೂಲಾಚಾರ' ಎಂದು ಹೆಸರಾಗಿರಬಹುದು. ಪಿಂಡಶುದ್ಧಿ, ಆವಶ್ಯಕ, ಅನುಪ್ರೇಕ್ಷೆ, ಶೀಲಗುಣ ಇತ್ಯಾದಿಯಾದವು ಇತರ ಮಹತ್ತ್ವದ ಅಧಿಕಾರಗಳು. ಇಲ್ಲಿಯ ಎಷ್ಟೋ ಗಾಥೆಗಳು ಶ್ವೇತಾಂಬರ ಗ್ರಂಥಗಳಲ್ಲಿಯೂ ದೊರಕುತ್ತವೆ. ಭಾಷಾಸ್ವರೂಪವನ್ನು ಲಕ್ಷಿಸಿದರೆ, ಇಂಥ ಗಾಥೆಗಳು ಬಹು ಪ್ರಾಚೀನವಿದ್ದು, ಎರಡು ಸಂಪ್ರದಾಯಗಳಲ್ಲಿಯೂ ಸಮಾನರೂಪದಿಂದ ಇಳಿದು ಬಂದಿವೆ. ತೌಲನಿಕವಾಗಿ ಅಭ್ಯಾಸಮಾಡಿದರೆ ಆವಶ್ಯಕಗಳನ್ನು ಕುರಿತ ಅಧಿಕಾರ ಆ ಮುಂದಿನ ಆವಶ್ಯಕ ವಾಙ್ಮಯದ ತಳಹದಿಯೆಂದು ಹೇಳುವಂತಿದೆ. ಅಧಿಕಾರಗಳ ವಿಷಯ

ಗಳು ಬೇರೆಬೇರೆಯಾಗಿದ್ದು, ಆರಂಭದಲ್ಲಿ ಅವುಗಳಿಗೆ ಮಂಗಲಾಚರಣೆಯೂ ಇರುವುದನ್ನು ಗಮನಿಸಿದರೆ 'ಮೂಲಾಚಾರ'ದ ಸಣ್ಣಪುಟ್ಟ ಪ್ರಕರಣಗಳು ಸ್ವತಂತ್ರ ಗ್ರಂಥರೂಪದ ವಾಗಿವೆ ಎನ್ನಬಹುದು. ಆದರೆ ಎಲ್ಲ ಅಧಿಕಾರಗಳೂ ಮುನಿಧರ್ಮವನ್ನೇ ಕುರಿತಿರುವುದ ರಿಂದ, ಎಲ್ಲವನ್ನೂ ಒಗ್ಗೂಡಿಸಿ, ಪ್ರಥಮಾಧಿಕಾರದ ವಿಷಯವನ್ನಧಿಕರಿಸಿ 'ಮೂಲಾ ಚಾರ'ವೆಂಬ ಹೆಸರನ್ನು ಗ್ರಂಥಕ್ಕೆ ಕೊಟ್ಟಿರುವಂತೆ ತೋರುತ್ತದೆ. ಈ ಗ್ರಂಥದ ಮೇಲೆ ವಸುನಂದಿಯ ಸಂಸ್ಕೃತಟೀಕೆಯೂ ಕನ್ನಡ ಭಾಷೆಯ ಒಂದು ಪ್ರಾಚೀನ ಟೀಕೆಯೂ ಉಪಲಬ್ಧವಿವೆ. ಈ ಎರಡರಲ್ಲಿ ಪಾಠಸಂಪ್ರದಾಯದ ವ್ಯತ್ಯಾಸಗಳುಂಟು. ಮೂಲಾ ಚಾರದ ಗ್ರಂಥಕರ್ತೃವಿನ ಹೆಸರನ್ನು ಸೂಚಿಸಿರುವಾತನು ವಸುನಂದಿಯೇ.

'ಆರಾಧನಾ': 'ಮೂಲಾಚಾರ'ದಂತೆಯೇ 'ಆರಾಧನಾ' ಎಂಬುದೂ ಮುನಿಜೀವನ ವನ್ನು ಕುರಿತ ಒಂದು ಮಹತ್ತ್ವದ ಪ್ರಾಕೃತಗ್ರಂಥವಾಗಿದೆ. 'ಭಗವತೀ ಆರಾಧನಾ' ಅಥವಾ 'ಮೂಲಾರಾಧನಾ' ಎಂದೂ ಇದು ಕರೆಯಲ್ಪಡುತ್ತದೆ. 'ಬೃಹತ್ ಆರಾಧನಾ' ಎಂದೂ ಕೆಲವರು ಕರೆದಿರುವುದುಂಟು. ಈ ಗ್ರಂಥವನ್ನು ರಚಿಸಿದವನು ಶಿವಾರ್ಯ. ಇವನ ಗುರುಗಳು ಜಿನನಂದಿ, ಸರ್ವಗುಪ್ತ ಮತ್ತು ಮಿತ್ರನಂದಿ ಎಂಬವರು. ಗ್ರಂಥ ಕರ್ತೃ ತನ್ನನ್ನು 'ಪಾಣಿತಲಭೋಜಿ' ಎಂದು ಕರೆದುಕೊಂಡಿದ್ದಾನೆ. ಈತ ಯಾಪ ನೀಯ ಸಂಘದವನಿರಬಹುದೆಂದು ಕೆಲವರು ಊಹಿಸಿದ್ದಾರೆ. 'ಆದಿಪುರಾಣ'ಕರ್ತೃ ಜಿನಸೇನಾಚಾರ್ಯನು ಶಿವಕೋಟಿಯೆಂದು ಕರೆದಿರುವುದು ಈತನನ್ನೇ. 'ಆರಾಧನೆ'ಯ ಗಾಥೆಗಳಿಗೆ ಸಂಬಂಧಿಸಿ ಅಪಭ್ರಂಶದಲ್ಲಿ 'ಕಥಾಕೋಶ'ವನ್ನು ಬರೆದಿರುವ ಶ್ರೀಚಂದ್ರನು ಕೂಡ ಇದೇ ಹೆಸರನ್ನು ಹೇಳಿದ್ದಾನೆ. ಶಿವಾರ್ಯ ಮತ್ತು ಶಿವಕೋಟಿ ಎಂಬ ಹೆಸರು ಗಳು ಒಬ್ಬನೇ ವ್ಯಕ್ತಿಗೆ ಅನ್ವಯಿಸುವುವೆಂದು ಇದರಿಂದ ತಿಳಿಯಬಹುದಾಗಿದೆ.

ದರ್ಶನ, ಜ್ಞಾನ, ಚಾರಿತ್ರ ಮತ್ತು ತಪ ಎಂಬ ೪ ಆರಾಧನೆಗಳ ವಿಸ್ತೃತ ವಿವೇಚನೆಯೇ ಶಿವಕೋಟಿಯ 'ಆರಾಧನಾ' ಗ್ರಂಥದ ವಿಷಯ. ಬಾಲಮರಣ ಪಂಡಿತ ಮರಣಗಳ ಚರ್ಚೆ, ಮರಣಕಾಲದಲ್ಲಿ ಮುನಿ ಯಾವ ತೆರನಾದ ಪರಿಣಾಮವನ್ನು ಇಟ್ಟುಕೊಳ್ಳಬೇಕು—ಎಂಬುದರ ವಿಚಾರ ಇವೂ ಇಲ್ಲಿ ಬಂದಿವೆ. ಮುನಿಗಳ ಅಂತ್ಯ ಕ್ರಿಯೆಯ ಸಂಬಂಧವಾಗಿ ಇದರಲ್ಲಿ ಬಂದಿರುವ ವರ್ಣನೆ ಯಾವ ಜೈನಸಂಪ್ರದಾಯ ದಲ್ಲೂ ಈಗ ಪ್ರಚಲಿತವಿಲ್ಲ. ಇದು ಈ ಗ್ರಂಥದ ಪ್ರಾಚೀನತೆಯ ಕುರುಹು. ಎಷ್ಟೋ ವಿಷಯಗಳು ಶ್ವೇತಾಂಬರ ಸಂಪ್ರದಾಯದಲ್ಲೂ ಸಮಾನವಾಗಿ ದೊರೆಯುತ್ತವೆ. ಈ ಗ್ರಂಥದಲ್ಲಿ ಒಟ್ಟು ೪೦ ಅಧಿಕಾರಗಳಿದ್ದು, ೨೦೦೦ಕ್ಕೆ ಮೇಲ್ಪಟ್ಟು ಗಾಥೆಗಳಿವೆ.

ಪರೀಷಹಗಳನ್ನು ಸಹಿಸಿ ಮುಕ್ತಿಯನ್ನು ಪಡೆದ ಹಲವರು ಮಹಾಪುರುಷರ ಉಲ್ಲೇಖ ಗಳು 'ಆರಾಧನೆ'ಯಲ್ಲಿವೆ. ಇವುಗಳಲ್ಲಿ ಕೆಲವು ಶ್ವೇತಾಂಬರ ಸಂಪ್ರದಾಯಕ್ಕೂ ಸಮಾನ ವಾದವು. ಆರಂಭದಲ್ಲಿ ಮಹಾಪುರುಷರ ಕಥೆಗಳು 'ಆರಾಧನೆ'ಯ ಮೇಲಿನ ಪ್ರಾಕೃತ ಸಂಸ್ಕೃತಟೀಕೆಗಳಲ್ಲಿ ಅಡಕವಾಗಿದ್ದವು. ಇವೇ ಮುಂದೆ ಸ್ವತಂತ್ರರೂಪವಾಗಿ ಬೇರೆಬೇರೆ ಕವಿಗಳಿಂದ ವಿಸ್ತಾರವಾಗಿ ನಿರೂಪಿಸಲ್ಪಟ್ಟವು. ಇಂಥ ಕಥಾಸಂಗ್ರಹಗಳನ್ನೇ 'ಆರಾಧನಾ

ಕಥಾಕೋಶ'ಗಳೆಂದು ಕರೆಯಲಾಗಿದೆ. ಈ ಬಗೆಯ ಕಥಾಕೋಶಗಳನ್ನು ಸಂಸ್ಕೃತದಲ್ಲಿ ಹರಿಷೇಣ, ಪ್ರಭಾಚಂದ್ರ ಮತ್ತು ನೇಮಿದತ್ತ ಇವರೂ ಅಪಭ್ರಂಶದಲ್ಲಿ ಶ್ರೀಚಂದ್ರನೂ ಬರೆದಿರುತ್ತಾರೆ. ಕನ್ನಡದಲ್ಲಿ ೧೯ ಕಥೆಗಳ ಇಂತಹ ಸಂಗ್ರಹವೊಂದಿದ್ದು, ಆರಂಭದಲ್ಲಿ 'ಆರಾಧನೆ'ಯೊಳಗಿನ ಗಾಥೆಗಳು ಉಲ್ಲೇಖಗೊಂಡಿವೆ. ಈಗ ಈ ಸಂಗ್ರಹವು 'ವಡ್ಡಾರಾಧನೆ'ಯೆಂಬ ಹೆಸರಿನಿಂದ ಕರೆಯಲ್ಪಡುತ್ತಿದೆ.

ಶಿವಾರ್ಯನ ಈ 'ಆರಾಧನಾ'ಗ್ರಂಥದ ಮೇಲೆ ಒಂದು ಕಾಲಕ್ಕೆ ವಿಪುಲವಾದ ಟೀಕಾಸಾಹಿತ್ಯವಿದ್ದಿರಬೇಕು. ಈಗ ನಮಗೆ ಪ್ರಾಕೃತಟೀಕೆ ಯಾವುದೂ ದೊರೆಯುವುದಿಲ್ಲ. ಅಪರಾಜಿತ ಸೂರಿಯ 'ವಿಜಯೋದಯ', ಆಶಾಧರನ 'ಮೂಲಾರಾಧನಾದರ್ಪಣ' ಇತ್ಯಾದಿಯಾದವು ಸಂಸ್ಕೃತ ಟೀಕೆಗಳು. ಟೀಕೆಗಳು ಮಾತ್ರವಲ್ಲದೆ, ಮೂಲಗ್ರಂಥದ ಆಧಾರದಿಂದ ಸಣ್ಣಪುಟ್ಟ ಆರಾಧನಾಗ್ರಂಥಗಳು ಕೂಡ ಪ್ರಾಕೃತ ಮತ್ತು ಸಂಸ್ಕೃತಗಳಲ್ಲಿ ದೇವಸೇನ ಅಮಿತಗತಿ ಮುಂತಾದವರಿಂದ ರಚಿತವಾಗಿವೆ. ಇವುಗಳಿಂದ ಶಿವಾರ್ಯ ಅಥವಾ ಶಿವಕೋಟಿಕೃತವಾದುದು ಬೇರೆಯೆಂಬುದನ್ನು ಸೂಚಿಸಲೆಂದು 'ಮೂಲಾರಾಧನೆ' ಎಂಬ ಹೆಸರು ಅದಕ್ಕೆ ರೂಢಿಯಾಗಿದೆ; 'ಭಗವತೀ' ಎಂಬ ವಿಶೇಷಣವು ಗೌರವಸೂಚಕವಾದ್ದು.

'ಸಮ್ಮಇಸುತ್ತ' ('ಸನ್ಮತಿಸೂತ್ರ') : ಸಿದ್ಧಸೇನನು (೫ನೆಯ ಶ.) ರಚಿಸಿರುವ ಪ್ರೌಢವಾದ ನ್ಯಾಯಗ್ರಂಥವಿದು. ದಕ್ಷಿಣದೇಶದಲ್ಲಿ ವಾದವಿವಾದ ಶೈಲಿಯ ನ್ಯಾಯಗ್ರಂಥಗಳು ಬಹುಮಟ್ಟಿಗೆ ಸಂಸ್ಕೃತದಲ್ಲಿಯೇ ಬರೆಯಲ್ಪಟ್ಟಿದ್ದರೂ ಸಿದ್ಧಸೇನನೇ ಸ್ತೋತ್ರಗಳನ್ನು ಸಂಸ್ಕೃತದಲ್ಲಿ ರಚಿಸಿದ್ದರೂ 'ಸಮ್ಮಇಸುತ್ತ'ವನ್ನು ಮಾತ್ರ ಆತ ಪ್ರಾಕೃತದಲ್ಲಿ ರಚಿಸಿರುವುದು ಗಮನಾರ್ಹವಾಗಿದೆ. ಇಲ್ಲಿಯ ನಯವಿವರಣೆ ಪ್ರೌಢವಾದ್ದು. ವಿದ್ವಾಂಸರು ಈ ಗ್ರಂಥವನ್ನು ಕುಂದಕುಂದನ 'ಪ್ರವಚನಸಾರ'ಕ್ಕೆ ಹೋಲಿಸಿದ್ದಾರೆ.

'ತಿಲೋಯ ಪಣ್ಣತ್ತಿ' ('ತ್ರಿಲೋಕ ಪ್ರಜ್ಞಪ್ತಿ') : ಗ್ರಂಥಕರ್ತೃ ಯತಿವೃಷಭ. ಈತ ಪ್ರಾಚೀನ ಜೈನಾಚಾರ್ಯರಲ್ಲಿ ಗಣ್ಯನಾದವನು. 'ಕಸಾಯಪಾಹುಡ'ದ ಮೇಲೆ ಈತ 'ಚೂರ್ಣೀ ಸೂತ್ರ'ವನ್ನು ಬರೆದಿದ್ದುದರ ಉಲ್ಲೇಖ 'ಜಯಧವಲಾ' ಟೀಕೆಯಲ್ಲಿ ಬಂದಿದೆ. ಈಗ ಅದು ಲಭ್ಯವಿಲ್ಲ. ಪ್ರಾಯಃ 'ಜಯಧವಲಾ'ಟೀಕೆಯಲ್ಲಿ ಸೇರಿಹೋಗಿರಬಹುದು. ನಾಗಹಸ್ತಿ ಮತ್ತು ಆರ್ಯಮಂಕ್ಷುಗಳಿಂದ 'ಕಸಾಯಪಾಹುಡ'ದ ಅಭ್ಯಾಸವನ್ನೀತ ಮಾಡಿದ್ದನೆಂದು ತಿಳಿಯುವುದು. ಯತಿವೃಷಭನ ಕಾಲವನ್ನು ಖಚಿತವಾಗಿ ನಿರ್ಣಯಿಸುವುದು ಶಕ್ಯವಿಲ್ಲದಿದ್ದರೂ ಶಿವಾರ್ಯ ವಟ್ಟಕೇರ ಕುಂದಕುಂದರಂತೆ ಈತ ಕೂಡ ಪ್ರಾಚೀನರ ಶ್ರೇಣಿಯಲ್ಲಿಯೇ ಸೇರತಕ್ಕವನೆಂದು ಹೇಳಬಹುದು. 'ತಿಲೋಯಪಣ್ಣತ್ತಿ'ಯ ಕೆಲವು ಗಾಥೆಗಳು ಬಹುಮಟ್ಟಿಗೆ ಅವೇ ರೂಪಗಳಲ್ಲಿ ವೀರಸೇನನ 'ಧವಲಾ' ಟೀಕೆಯಲ್ಲಿ ಕೂಡ ಕಂಡುಬರುವುದರಿಂದ, ಅಲ್ಲಿಯ ಇನ್ನೂ ಎಷ್ಟೋ ವಿಷಯಗಳನ್ನು ವೀರಸೇನನು ಬಳಸಿಕೊಂಡಿರುವಂತೆ ತೋರುವುದರಿಂದ, ಯತಿವೃಷಭನು ಕ್ರಿ.ಶ. ೮೧೬ಕ್ಕಿಂತ ಮೊದಲಲ್ಲಿ ಇದ್ದವನೆಂದು ಹೇಳಲು ಅಡ್ಡಿಯಿಲ್ಲ. ಜಿನಭದ್ರಕ್ಷಮಾಶ್ರವಣನು

ಯತಿವೃಷಭನ 'ಚೂರ್ಣಿಸೂತ್ರ'ವನ್ನು ನಿರ್ದೇಶಿಸಿರಬಹುದೆಂದು ಕೆಲವರ ಅಭಿಪ್ರಾಯ. ಈ ಜಿನಭದ್ರನ ಕಾಲ ೬೦೯. ಕೆಲವರ ಮತದಂತೆ ಈಗ ದೊರೆಯುವ 'ತಿಲೋಯ ಪಣ್ಣತ್ತಿ' ಪ್ರಾಚೀನವಾದ ಆ ಹೆಸರಿನ ಇನ್ನೊಂದು ಗ್ರಂಥದ ವಿಸ್ತೃತ ಆವೃತ್ತಿ. ಆದ್ದರಿಂದ ಅಲ್ಲಲ್ಲಿ ಬರುವ ಉಲ್ಲೇಖಗಳಿಂದ ಕಾಲನಿರ್ಣಯ ಕಷ್ಟವಾಗುತ್ತದೆ. ವಿಷಯ ನಿರೂಪಣೆಯ ಮೇಲಿಂದ ಸರ್ವನಂದಿಯ ಪ್ರಾಕೃತ 'ಲೋಕವಿಭಾಗ'ವು(೪೫೮) 'ತಿಲೋಯ ಪಣ್ಣತ್ತಿ'ಗಿಂತ ಹಿಂದಿನದೆಂದು ತೋರುತ್ತದೆ. 'ತಿಲೋಯ ಪಣ್ಣತ್ತಿ'ಯಲ್ಲಿ ಮಹಾವೀರ ನಿರ್ವಾಣದ ನಂತರ ೧೦೦೦ ವರ್ಷಗಳ ಆಚಾರ್ಯಪರಂಪರೆಯನ್ನು ಹೇಳಿದೆ. ಆದ್ದರಿಂದ ಈಗ ಉಪಲಬ್ಧವಿರುವ ರೂಪದಲ್ಲಿ ಈ ಗ್ರಂಥ ೪೭೩ಕ್ಕಿಂತ ಮೊದಲಿನದಾಗದು. ಈ ಅಂಶಗಳನ್ನೆಲ್ಲ ಮನದಂದರೆ, ಯತಿವೃಷಭನು ೫-೬ನೆಯ ಶತಮಾನಗಳಲ್ಲಿದ್ದನೆಂದು ಹೇಳಬಹುದು.

'ತಿಲೋಯ ಪಣ್ಣತ್ತಿ' ಮೂರು ಲೋಕಗಳ ವಿಷಯವಾಗಿ ಜೈನಪರಂಪರೆಯ ಸಂಗತಿಗಳನ್ನು ವಿಸ್ತಾರವಾಗಿ ನಿರೂಪಿಸುವ ಗ್ರಂಥ. ಇದರಲ್ಲಿ ೯ ಅಧ್ಯಾಯಗಳಿವೆ. ಮೊದಲು ಸಾಮಾನ್ಯವಾದ ಲೋಕಸ್ವರೂಪವನ್ನು ನಿರೂಪಿಸಿ, ಅನಂತರದಲ್ಲಿ ನರಕ, ತಿರ್ಯಕ್, ವ್ಯಂತರ, ಜ್ಯೋತಿಷ್ಕ ಮತ್ತು ದೇವಲೋಕಗಳನ್ನು ವರ್ಣಿಸಿ, ಕೊನೆಗೆ ಮೋಕ್ಷಲೋಕದ ವಿವರಣೆಯನ್ನು ನೀಡಿದೆ. 'ಮೂಲಾಚಾರ', 'ಪಂಚಾಸ್ತಿಕಾಯ', 'ಭಗವತೀ ಆರಾಧನಾ'—ಇವುಗಳ ವಿಷಯಗಳು ಅವೇ ಗಾಥೆಗಳನ್ನು ಉದ್ಧರಿಸುವುದರ ಮೂಲಕವಾಗಿ ಇಲ್ಲಿ ನಿರೂಪಿತವಾಗಿವೆ. ಈಚೆಯ 'ಗೊಮ್ಮಟಸಾರ'ದಲ್ಲಿಯೂ 'ತಿಲೋಯ ಪಣ್ಣತ್ತಿ' ಯೊಳಗಿನ ಕೆಲವು ಗಾಥೆಗಳು ಕಂಡುಬಂದಿವೆ. ಇವನ್ನು ನೋಡಿದರೆ ಪರಂಪರಾಗತ ಗಾಥೆಗಳನ್ನು ಆಧರಿಸಿ ವಿಷಯಗಳನ್ನು ಯತಿವೃಷಭನು ವಿವರಿಸಿದ್ದನೆಂದು ಹೇಳಬೇಕಾಗುತ್ತದೆ. ಈ ಗ್ರಂಥದಲ್ಲಿ ಅಧಿಕಾರವಿಭಜನೆ ವಿಷಯವಿವೇಚನೆ ವ್ಯವಸ್ಥಿತ ರೂಪದಲ್ಲಿವೆ. 'ಅಗ್ರಾಯಣಿ', 'ಪರಿಕರ್ಮ', 'ಲೋಕವಿನಿಶ್ಚಯ' ಮೊದಲಾದ ಕೆಲವು ಗ್ರಂಥಗಳ ಆಧಾರಗಳು ಕೊಡಲ್ಪಟ್ಟಿವೆ. ಅಲ್ಲಲ್ಲಿ ಪಾಠಾಂತರಗಳೂ ವೈಕಲ್ಪಿಕ ಮತಗಳೂ ನಿರ್ದೇಶಿತವಾಗಿವೆ. ಗ್ರಂಥದ ವ್ಯವಸ್ಥಿತರೂಪವನ್ನು ನೋಡಿದರೆ, ಒಬ್ಬನೇ ಗ್ರಂಥಕಾರನ ಕೈವಾಡ ಸ್ಪಷ್ಟವಾಗಿ ಕಂಡುಬರುತ್ತದೆ. ಆದರೆ ಅಲ್ಲಲ್ಲಿ ಗಾಥೆಗಳೂ ವೃತ್ತಗಳೂ ಅನಂತರಕಾಲದಲ್ಲಿ ಸೇರಿರುವುದು ಕೂಡ ಅಸಂಭವವಲ್ಲ. ಗಾಥೆಗಳಲ್ಲಿ ಗ್ರಂಥ ರಚಿತವಾಗಿದ್ದರೂ ನಡುನಡುವೆ ಉಪಜಾತಿ ವಸಂತತಿಲಕ ಮೊದಲಾದ, ಪ್ರಾಕೃತದಲ್ಲಿ ವಿರಳವಾದ ಪದ್ಯಜಾತಿಗಳೂ ಬಳಕೆಯಾಗಿವೆ.

'ಕತ್ತಿಗೇಯಾಣುಪ್ಪೇಕ್ಖಾ' ('ಕಾರ್ತಿಕೇಯಾನುಪ್ರೇಕ್ಷಾ') : ಈ ಗ್ರಂಥದ ನ್ಯಾಯವಾದ ಹೆಸರು 'ಬಾರಹ ಅಣುವೇಕ್ಖಾ' ('ದ್ವಾದಶಾನುಪ್ರೇಕ್ಷಾ'). ಗ್ರಂಥದ ಕೊನೆಯ ಭಾಗದಿಂದ ಗ್ರಂಥಕರ್ತೃ ಸ್ವಾಮಿಕುಮಾರ ಎಂದು ತಿಳಿಯಬಹುದಾಗಿದೆ. ಕುಮಾರ ತೀರ್ಥಕರರಿಗೆ ನಮಸ್ಕಾರಮಾಡಿದ್ದರಿಂದ ಈತ ಬಾಲಬ್ರಹ್ಮಚಾರಿಯಾಗಿ ಇದ್ದನೆಂದು ಸಹಜವಾಗಿ ಅನುಮಾನಿಸಬಹುದು. ಇಲ್ಲಿಯ ಒಂದು ಗಾಥೆಯ ಮೇಲಿನ

ಶುಭಚಂದ್ರಕೃತ ಟೀಕೆಯಲ್ಲಿ ಕಾರ್ತಿಕೇಯನ ನಿರ್ದೇಶವಿದೆ. ಕಥಾಕೋಶಗಳಲ್ಲಿ ಕುಮಾರಾವಸ್ಥೆಯಲ್ಲಿ ದೀಕ್ಷೆಪಡೆದ ಹಾಗೂ ಉಪಸರ್ಗ ಸಹಿಸಿದ ಕಾರ್ತಿಕೇಯನ ಕಥೆ ಯೇನೋ ಬರುತ್ತದೆ. ಆದರೆ ಇಲ್ಲಿಯ ಕಥೆಗೂ ಪ್ರಸ್ತುತ ಗ್ರಂಥದ ಕರ್ತೃ ಸ್ವಾಮಿ ಕುಮಾರನಿಗೂ ಸಂಬಂಧವೇನೂ ಇದ್ದಂತೆ ತೋರುವುದಿಲ್ಲ. ಕುಮಾರ ಎಂಬುದು ಕಾರ್ತಿ ಕೇಯನಿಗೆ ಬಳಸುವ ಒಂದು ಪರ್ಯಾಯನಾಮವೆಂಬುದು ಪ್ರಸಿದ್ಧವಾದ್ದರಿಂದ ಗ್ರಂಥದ ಹೆಸರು 'ಕಾರ್ತಿಕೇಯಾನುಪ್ರೇಕ್ಷೆ' ಎಂದು ರೂಢಿಯಲ್ಲಿ ಪ್ರಚಲಿತವಾದಂತೆ ತೋರುತ್ತದೆ. ಆದರೆ ಈ ರೂಢಿ ಅಷ್ಟೇನೂ ಪ್ರಾಚೀನವಾದ್ದಲ್ಲ. ಈ ಗ್ರಂಥಕಾರನ ಕಾಲದ ವಿಷಯ ದಲ್ಲಿ ಕೂಡ ಮತಭೇದಗಳಿವೆ. ಅನುಪ್ರೇಕ್ಷೆಗಳ ಕ್ರಮವನ್ನು ಆತ ಕೊಟ್ಟಿರುವ ಹಾಗೆ ನೋಡಿದರೆ, 'ತತ್ತ್ವಾರ್ಥಸೂತ್ರ' ರಚಿತವಾದ ಕಾಲಕ್ಕೆ ಈಚೆಯವನೆಂದು ತೋರುವುದು. ಕೆಲವರು ಇವನನ್ನು ೨-೩ನೆಯ ಶತಮಾನಗಳಿಗೆ ಸೇರಿದವನೆನ್ನುತ್ತಾರೆ; ಆದರೆ ಇನ್ನೊಂದು ಮತದಂತೆ ಈತ 'ಪರಮಾತ್ಮ ಪ್ರಕಾಶ'ದ ಕರ್ತೃವಾದ ಯೋಗೀಂದುವಿಗೆ ಅನಂತರಕಾಲದವನು; ಎಂದರೆ ಸು. ೭–೮ನೆಯ ಶತಮಾನದವನು.

'ಕಾರ್ತಿಕೇಯಾನುಪ್ರೇಕ್ಷೆ'ಯಲ್ಲಿ ೧೨ ಅನುಪ್ರೇಕ್ಷೆಗಳ ವಿಸ್ತೃತ ವಿವೇಚನೆಯನ್ನು ಬೇರೆ ಬೇರೆ ಅಧ್ಯಾಯಗಳಲ್ಲಿ, ಒಟ್ಟು ೪೮೯ ಗಾಥೆಗಳಲ್ಲಿ ಮಾಡಿರುವುದು ಕಂಡುಬರುತ್ತದೆ. ವಿಸ್ತೃತವೂ ಪ್ರಾಮಾಣಿಕವೂ ಆದ ಅನುಪ್ರೇಕ್ಷೆಗಳ ನಿರೂಪಣೆ ದೊರೆಯುವುದು ಇಲ್ಲಿಯೇ.

## ಪ್ರಾಕೃತ ಶಾಸನಗಳು, ನಾಟಕಗಳು ಮತ್ತು ಕಾವ್ಯಗಳು

ಪ್ರಾಕೃತ ಜನಸಾಮಾನ್ಯದ ಭಾಷೆಯಾದ್ದರಿಂದ, ಅದರ ಬಗೆಗೆ ವಿದ್ವಜ್ಜನರಲ್ಲಿ ಸಂಸ್ಕೃತದ ಬಗೆಗೆ ಇದ್ದಂತೆ ಪ್ರೀತಿಯಿಲ್ಲದೆ ಹೋಯಿತು. ವೇದಕಾಲದಿಂದಲೂ ಜನರಾಡುವ ಮಾತು ಗ್ರಾಂಥಿಕ ಭಾಷೆಗಳಿಂದ ಸ್ವಲ್ಪ ಬೇರೆಯಾಗಿದ್ದಿತ್ತೆಂದು ತಿಳಿಯಲು ಆಧಾರಗಳಿವೆ. ಆದರೆ ಗ್ರಾಂಥಿಕಭಾಷೆಯ ಅಭ್ಯಾಸಕ್ಕೆ ಸಾಧನಗಳು ದೊರೆಯುವಂತೆ ಅದರ ವಿಷಯದಲ್ಲಿ ಅಭ್ಯಾಸಕ್ಕೆ ತಕ್ಕ ಸಾಧನಗಳು ದೊರೆಯುವುದಿಲ್ಲ. ಆಯಾ ಕಾಲ ದೇಶಗಳಿಗೆ ಅನುಸಾರವಾಗಿ ಅದರಲ್ಲಿ ಭಿನ್ನತೆಯಿದ್ದಿರಬಹುದು. ಸಾಮಾನ್ಯಜನರಿಗೆ ಬೋಧಿಸಲು ಹೊರಟ ಭಾರತದ ಇಬ್ಬರು ಧರ್ಮಪ್ರವರ್ತಕರು ಜನಭಾಷೆಯನ್ನೇ ಬಳಕೆಗೆ ತಂದರು. ಇದು ಕ್ರಿ.ಪೂ. ೬ನೆಯ ಶತಮಾನದಲ್ಲಿ ಪೂರ್ವಭಾರತದಲ್ಲಿ ನಡೆದ ಸಂಗತಿ. ಪರಂಪರೆಯಂತೆ ಮಹಾವೀರನು ಅರ್ಧಮಾಗಧಿಯಲ್ಲಿಯೂ ಬುದ್ಧನು ಮಾಗಧಿಯಲ್ಲಿಯೂ ತನ್ನ ಉಪದೇಶಗಳನ್ನು ನೀಡಿದರು. ಈಗ ಅವರ ಉಪದೇಶಗಳನ್ನು ಒಳಕೊಂಡಿರುವ ಗ್ರಂಥಗಳ ಭಾಷೆಗಳಿಗೆ ನಾವು ಅರ್ಧಮಾಗಧಿ ಮತ್ತು ಪಾಲಿ ಎನ್ನುವುದು ರೂಢಿ ಯಾದರೂ ಅವರು ನುಡಿದಿರಬಹುದಾದ ಭಾಷೆಯೇ ಈ ಗ್ರಂಥಗಳಲ್ಲಿದೆಯೆಂದು ಹೇಳು ವುದಕ್ಕಾಗದು. ಕಾಲಕ್ರಮದಲ್ಲಿ ಅವರ ಮೌಖಿಕ ಉಪದೇಶವು ಲಿಪಿಬದ್ಧವಾದ್ದರಿಂದ ಅವುಗಳ ಭಾಷೆಯಲ್ಲಿ ಭಿನ್ನತೆಗೆ ಅವಕಾಶವಾಗಿದೆ.

ಅಶೋಕ, ಖಾರವೇಲ ಮತ್ತು ಸಾತವಾಹನರ ಶಿಲಾಶಾಸನಗಳೆಲ್ಲ ಪ್ರಾಕೃತಭಾಷೆಯಲ್ಲಿವೆ. ಪ್ರಾಕೃತ ವ್ಯಾಕರಣದಲ್ಲಿ ಹೇಳಲಾದ ಭಾಷೆಯ ಕಟ್ಟುಪಾಡುಗಳಿಗೆ ಇವು ಸರಿಬರುತ್ತವೆಯೆಂದು ಹೇಳಲಾಗದು. ಕಾಲದೇಶಗಳ ಭೇದದಿಂದಾಗಿ ಶಿಲಾಶಾಸನಗಳ ಭಾಷೆಯಲ್ಲಿ ಸಹಜವಾಗಿ ವ್ಯತ್ಯಾಸಗಳಾಗುತ್ತವೆ. ನಮ್ಮ ನಾಡಿನಲ್ಲಿ ಕ್ರಿ.ಶ. ೪ನೆಯ ಶತಮಾನದವರೆಗೆ ಶಿಲಾಶಾಸನಗಳ ಭಾಷೆಯೆಂದರೆ ಮುಖ್ಯವಾಗಿ ಪ್ರಾಕೃತ; ಆ ಬಳಿಕ ಸಂಸ್ಕೃತ.

ಪ್ರಾಕೃತ ಜನಸಾಮಾನ್ಯದ ಭಾಷೆಯಾದ್ದರಿಂದ ಅದಕ್ಕೆ ಸಾಮಾಜಿಕ ಪ್ರತಿಷ್ಠೆಯ ದೃಷ್ಟಿಯಿಂದ ಮಹತ್ತ್ವವಿರಲಿಲ್ಲ. ಸಾಮಾನ್ಯವಾಗಿ ಅಂದಿನ ನಾಟಕಗಳು ಆ ಕಾಲದ ಸಮಾಜದ ಸೂಕ್ತ ಪ್ರಮಾಣದ ಪ್ರತಿಬಿಂಬಗಳು. ಆದ್ದರಿಂದ ಪ್ರಾಕೃತಭಾಷೆಯ ಉಪಯೋಗವೂ ಒಂದು ಸಾಮಾಜಿಕಸ್ತರದ ಮಾನದಂಡ. ರಾಜರೂ ಉನ್ನತವರ್ಗದವರೂ ಸಂಸ್ಕೃತದಲ್ಲಿ ಮಾತನಾಡುತ್ತಿದ್ದರು; ಇದಕ್ಕೆ ಒಂದು ಅಪವಾದ ಎಂದರೆ ಬ್ರಾಹ್ಮಣನಾದ ವಿದೂಷಕ ಪ್ರಾಕೃತದಲ್ಲಿ ಮಾತನಾಡುವುದು. ರಾಣಿಯೂ ಸೇರಿದಂತೆ ಎಲ್ಲ ಸ್ತ್ರೀಪಾತ್ರಗಳೂ ಸೇವಕರೂ ಅನ್ಯರೂ ಪ್ರಾಕೃತದಲ್ಲಿ ಮಾತನಾಡುತ್ತಿದ್ದರು. ಭರತನ 'ನಾಟ್ಯಶಾಸ್ತ್ರ'ದಲ್ಲಿ ಈ ಬಗೆಗೆ ಕೆಲವು ನಿಯಮಗಳನ್ನು ಕೊಟ್ಟಿದೆ. ಪೂರ್ವೋಕ್ತ ಪಾತ್ರಗಳು ಮಾತನಾಡುವ ಪ್ರಾಕೃತದಲ್ಲಿ ಮುಂದಿನ ಕಾಲದಲ್ಲಿ ಕಾಣುವ ಪ್ರಾದೇಶಿಕಭೇದಗಳ ಹೆಸರುಗಳೂ ಬರುತ್ತವೆ. ಉದಾಹರಣೆಗೆ, ವಿದೂಷಕನು ಮಾತನಾಡುವುದು 'ಪ್ರಾಚ್ಯಾ' ಎಂಬ ಶೌರಸೇನಿಯಲ್ಲಿ, ಧೀವರನು ಮಾಗಧಿಯಲ್ಲಿ ಇತ್ಯಾದಿ. ಅಶ್ವಘೋಷನ ತ್ರುಟಿತ ನಾಟಕಗಳು ನಮಗೆ ದೊರೆತಿದ್ದು, ಅವುಗಳಲ್ಲಿಯೂ ಪ್ರಾಕೃತದ ಬಳಕೆಯಿದೆ. ಅನಂತರ ಭಾಸ, ಶೂದ್ರಕ, ಕಾಲಿದಾಸ, ಭವಭೂತಿ ಮುಂತಾದ ಎಲ್ಲ ಸಂಸ್ಕೃತ ನಾಟಕಕಾರರೂ ತಂತಮ್ಮ ನಾಟಕಗಳಲ್ಲಿ ಗದ್ಯಪದ್ಯರೂಪಗಳಲ್ಲಿ ಪ್ರಾಕೃತವನ್ನು ಬಳಸಿದ್ದಾರೆ. ಈ ನಾಟಕಪ್ರಾಕೃತದಲ್ಲಿ ಒಂದು ಬಗೆಯ ಅಸಹಜತೆ ಕಂಡುಬರುತ್ತದೆ. ಅಲ್ಲದೆ ಭಾಷಾ ದೃಷ್ಟಿಯಿಂದ ಸಂಸ್ಕೃತದ ಆಕ್ರಮಣ ಕೂಡ ಅಲ್ಲಲ್ಲಿ ಗೋಚರಿಸುತ್ತದೆ.

ಪ್ರಾಕೃತ ಅಷ್ಟೇನೂ ಶಿಷ್ಟಭಾಷೆಯಲ್ಲ ಎಂಬ ಎಣಿಕೆಯಿಂದ ನಾವು ಆ ಭಾಷೆಯ ಎಷ್ಟೋ ಉದ್ಗ್ರಂಥಗಳನ್ನು ಕಳೆದುಕೊಂಡಿರಬೇಕೆಂದು ತೋರುತ್ತದೆ. ಗುಣಾಢ್ಯನು (ಕ್ರಿ.ಶ.ದ ಆರಂಭ ಅಥವಾ ಸ್ವಲ್ಪ ಮುಂಚೆ) ತನ್ನ 'ಬೃಹತ್ಕಥೆ'ಯನ್ನು ಪೈಶಾಚೀ ಭಾಷೆಯಲ್ಲಿ ಬರೆದಿದ್ದನು. ರಾಮಾಯಣಭಾರತಗಳಷ್ಟೇ ಮಹತ್ತ್ವದ್ದಾಗಿದ್ದ ಈ ಗ್ರಂಥ ಅನೇಕ ಕಥೆಗಳ ಒಂದು ದೊಡ್ಡ ಗಣಿಯೇ ಆಗಿದ್ದಿರಬೇಕು. ಮೂಲ ಇಂದು ನಮಗೆ ಉಪಲಬ್ಧವಿಲ್ಲ. ಅದರ ೩-೪ ಸಂಸ್ಕೃತ ಸಾರಾನುವಾದಗಳಷ್ಟೇ ಈಗ ದೊರೆಯುತ್ತವೆ. ಇವನ್ನು ಪರಿಶೀಲಿಸಿದರೆ, ಮೂಲಗ್ರಂಥದ ನಷ್ಟ ಅಗಾಧವಾದ್ದು ಎನಿಸುತ್ತದೆ. ಭಾಸ, ಶೂದ್ರಕ ಮುಂತಾದವರು ತಮ್ಮ ಕೃತಿಗಳಿಗೆ ಕಥಾವಸ್ತುಗಳನ್ನು ಇಲ್ಲಿಂದಲೇ ಎತ್ತಿಕೊಂಡಿದ್ದಾರೆ. ಪಂಚತಂತ್ರದ ಕಥೆಗಳಿಗೆ ಇದೇ ಉಗಮಸ್ಥಾನ.

ಬಳಿಕ ಗಮನಿಸಬೇಕಾದ್ದು ಸಾತವಾಹನ ದೊರೆ ಹಾಲನು (೨೦-೨೪) ಸಂಕಲಿಸಿದ

'ಗಾಹಾಸತ್ತಸಈ.' ಸಾಮಾನ್ಯ ಜನರ ಬಾಯಲ್ಲಿ ಎಷ್ಟೋ ನೀತಿಪರ, ಶೃಂಗಾರಪರ ಗಾಥೆಗಳು ಗ್ರಾಮಾಂತರಗಳಲ್ಲಿ ಪ್ರಚಲಿತವಿದ್ದುವು; ಆ ಗಾಥೆಗಳಲ್ಲಿ ಒಂದೊಂದೂ ಕಲ್ಪನಾವೈಚಿತ್ರ್ಯದ ಒಂದೊಂದು ಶಬ್ದಚಿತ್ರ ಎನ್ನುವಂತಿದ್ದು, ಅವುಗಳಲ್ಲಿ ಶಿಷ್ಟ ಮಾನ್ಯವಾಗಬಹುದಾದ ಕೆಲವನ್ನು ಹಾಲನು ಒಂದು ಕಡೆ ಕೂಡಿಸಿಕೊಟ್ಟಿದ್ದಾನೆ. ಭಾರತೀಯ ಸಾಹಿತ್ಯದಲ್ಲಿ ಹಾಲನ ಕೃತಿ ಅಮೂಲ್ಯ ವಚನ ರತ್ನಗಳ ಒಂದು ಭಂಡಾರ. ಇಲ್ಲಿಯ ಧ್ವನಿಸಂಪನ್ನ, ಅಲಂಕಾರಯುಕ್ತ ಗಾಥೆಗಳನ್ನು ಉತ್ತರಕಾಲೀನ ಅಲಂಕಾರಶಾಸ್ತ್ರಕಾರರು ಉದಾಹರಣೆಗಳಿಗಾಗಿ ಆಗಾಗ ವಿಪುಲವಾಗಿ ಬಳಸಿರುವುದನ್ನಿಲ್ಲಿ ನೆನೆಯಬಹುದು.

ಪ್ರಾಕೃತಭಾಷೆಯಲ್ಲಿಯೂ ಕಾವ್ಯಶಕ್ತಿಯನ್ನು ತೋರಿಸುವುದು ಅಶಕ್ಯವೇನಲ್ಲ, ಸಂಸ್ಕೃತಭಾಷೆಯಷ್ಟೇ ಈ ಭಾಷೆಯೂ ಮಹತ್ತ್ವದ್ದು ಎಂಬ ಹೆಮ್ಮೆಯೂ ಒಮ್ಮೊಮ್ಮೆ ವ್ಯಕ್ತವಾಗಿರುವುದುಂಟು. ವಾಕಾಟಕವಂಶದ ಪ್ರವರಸೇನನೆಂಬ ಅರಸನು ತನ್ನ 'ರಾವಣವಹೋ' ಅಥವಾ 'ಸೇತುಬಂಧ'ವೆಂಬ ಕಾವ್ಯವನ್ನು ಪ್ರಾಕೃತದಲ್ಲಿಯೇ ಬರೆದಿದ್ದಾನೆ. ಆ ಭಾಷೆಯ ಅಮೋಘಶಕ್ತಿಯನ್ನು ಚೆನ್ನಾಗಿ ಪ್ರಕಟಿಸಿದ್ದಾನೆ. ಪ್ರವರಸೇನನ ಸಮಕಾಲೀನನಾದ ಕಾಲಿದಾಸನೇ ಈ ಕಾವ್ಯವನ್ನು ಬರೆದಿರಬಹುದೆಂದು ಕೆಲವರು ಊಹಿಸುತ್ತಾರೆ. ಇದು ಹೇಗಿದ್ದರೂ, ಇದೊಂದು ಅದ್ವಿತೀಯ ಕಾವ್ಯಗ್ರಂಥ.

ಹೀಗೆಯೇ ಯಶೋವರ್ಮನ ಆಶ್ರಿತನಾದ ವಾಕ್ಪತಿ (೮ನೆಯ ಶತಮಾನ) 'ಗಉಡವಹೋ' ಎಂಬ ಪ್ರಾಕೃತಕಾವ್ಯವನ್ನು ಬರೆದಿದ್ದಾನೆ. ಗೌಡದೇಶದ ದೊರೆಯ ವಧೆ ಕಾವ್ಯದ ವಿಷಯ. ಅದು ಯಶೋವರ್ಮನ ಒಂದು ಶೌರ್ಯಕಾರ್ಯ. ದೊರೆಯ ಯಶೋಗಾನವನ್ನು ಕೀರ್ತಿಸಲೆಂದೇ ಕೃತಿರಚನೆಯಾಗಿದೆ. ಇಲ್ಲಿ ಕಥೆಗಿಂತ ವರ್ಣನೆಗಳೇ ಹೆಚ್ಚು. ವಾಕ್ಪತಿಗೆ ಪೌರಾಣಿಕ ಪ್ರಸಂಗಗಳಲ್ಲಿ ಒಳ್ಳೆಯ ಪರಿಶ್ರಮವಿದ್ದಿತು. ಇಂದ್ರನು ಪರ್ವತಗಳ ರೆಕ್ಕೆಗಡಿದ ವಿಷಯವನ್ನು ಸ್ವಾರಸ್ಯವಾಗಿ ವರ್ಣಿಸಿರುವುದನ್ನಿಲ್ಲಿ ನೆನೆಯಬಹುದು. ದೇವತಾಸ್ತುತಿಗಳಲ್ಲಿ ಆರ್ದ್ರತೆಯ ಭಾವವಿದೆ. ಕಾಲಿದಾಸನು ಉಪಮೆಯಲ್ಲಿ ಶ್ರೇಷ್ಠನೆನಿಸಿದ್ದರೆ ವಾಕ್ಪತಿ ಉತ್ಪ್ರೇಕ್ಷೆಯಲ್ಲಿ ಅಸದೃಶನೆನಿಸಿದ್ದಾನೆ. ಭಾರತೀಯ ಸಾಹಿತ್ಯದಲ್ಲಿ ಈ ಕವಿಗೆ ದೊರೆಯಬೇಕಾದ ಸ್ಥಾನ ದೊರೆತಿಲ್ಲವೆಂದೇ ಹೇಳಬೇಕು. ಇದಕ್ಕೆ ಕಾರಣವೆಂದರೆ, ಯಾಕೊಬಿ ಅವರು ಹೇಳುವಂತೆ, ವಾಕ್ಪತಿ ತನ್ನ ಕಾವ್ಯವನ್ನು ಪ್ರಾಕೃತದಲ್ಲಿ ಬರೆದಿರುವುದು. ಉಕ್ತರಾಗಿರುವ ಪೂರ್ವಕವಿಗಳಲ್ಲಿ ಈತನಿಗೆ ಭವಭೂತಿಯ ಬಗೆಗೆ ವಿಶೇಷ ಗೌರವ.

ಈ ಕಾವ್ಯಪರಂಪರೆಗೇ ಸೇರಿದ್ದು ಕುತೂಹಲ ಕವಿಯ (ಸು. ೮೦೦) 'ಲೀಲಾವಈ.' ಬೃಹತ್ಕಥೆಯ ಪರಂಪರೆಗೆ ಸೇರಿದ ಈ ಕೃತಿಯ ವಸ್ತು ಪ್ರತಿಷ್ಠಾನದ ಒಡೆಯನಾದ ಸಾತವಾಹನನು ಸಿಂಹಲದೇಶದ ಲೀಲಾವತಿಯೆಂಬ ಕನ್ಯೆಯನ್ನು ಮದುವೆಯಾದುದು. ಮಹಾರಾಷ್ಟ್ರಿಯಲ್ಲಿ ಗ್ರಂಥವನ್ನು ರಚಿಸಿರುವುದಾಗಿ ಕವಿಯ ಹೇಳಿಕೆ. ಶೈಲಿ ಸ್ವಾರಸ್ಯಕರವಾಗಿದ್ದು, ಪಾತ್ರರಚನೆ ಸನ್ನಿವೇಶ ಕಲ್ಪನೆ ಮೊದಲಾದಂಶಗಳು ಖ್ಯಾತ ಸಂಸ್ಕೃತ ಕವಿಗಳಾದ ಕಾಲಿದಾಸ ಬಾಣ ಮುಂತಾದವರ ಕೃತಿಗಳನ್ನು ನೆನಪಿಗೆ ತರುತ್ತವೆ.

# ಅಪಭ್ರಂಶ

ಕ್ರಿ.ಶ.ದ ಆರಂಭದಿಂದಲೇ ಜನಭಾಷೆಯಲ್ಲಿ ಪ್ರಚಲಿತವಿದ್ದ ಅಪಭ್ರಂಶರೂಪಗಳು ಪ್ರಾಕೃತಗ್ರಂಥಗಳಲ್ಲಿ ದೊರೆಯುತ್ತವೆ. ಉದಾಹರಣೆಗೆ, ವಿಮಲಸೂರಿಯ (೩ನೇ ಶತಮಾನದಿಂದೊಳಗೆ) 'ಪಉಮಚರಿಯ'ದಲ್ಲೇ ಅವನ್ನು ಕಾಣಬಹುದು. ಅಪಭ್ರಂಶಗೊಂಡ ಸಂಸ್ಕೃತದ ಶಬ್ದಗಳಿಗೆ 'ಅಪಭ್ರಂಶ'ವೆಂಬ ಮಾತು ಮೊದಲು ಬಳಕೆಯಾಗುತ್ತಿತ್ತು. ಅನಂತರ ಇದು ಭಾಷಾವಾಚಕವಾಯಿತು. ಪ್ರಾಯಶಃ ದೇಶದ ಪಶ್ಚಿಮಭಾಗದಲ್ಲಿ ಪ್ರಚಲಿತವಾಗಿದ್ದ ಜನಭಾಷೆಯಿದು. ಇದರ ಮೇಲೆ ಆಭೀರಾದಿ ಪರಕೀಯ ಜನಾಂಗಗಳ ಭಾಷೆಯ ಪರಿಣಾಮವಾದಂತೆ ತೋರುವುದು. ಕಾಲಿದಾಸನು ತನ್ನ 'ವಿಕ್ರಮೋರ್ವಶೀಯ'ನಾಟಕದಲ್ಲಿ ಈ ಭಾಷೆಯ ಕೆಲವು ಪದ್ಯಗಳನ್ನು ಸೇರಿಸಿದ್ದಾನೆ. ಇವನ್ನು ಬರೆದವನು ಆತನೇ ಎಂಬುದು ಈಗ ಹಲವರಿಗೆ ಒಪ್ಪಿಗೆಯಾಗಿರುವಂತೆ ತೋರುವುದು. ಸಂಸ್ಕೃತದಲ್ಲಿ ಶ್ಲೋಕ, ಪ್ರಾಕೃತದಲ್ಲಿ ಗಾಥೆಯಿದ್ದಂತೆ ಅಪಭ್ರಂಶದಲ್ಲಿ ದೋಹಾ ಛಂದಸ್ಸು. ಹಾಲನು ಜನಬಳಕೆಯ ಪ್ರಾಕೃತಗಾಥೆಗಳನ್ನು 'ಸತ್ತಸಈ' ಕೋಶದಲ್ಲಿ ಸಂಗ್ರಹಿಸಿದಂತೆ, ಸರಹಪಾ ಕಣ್ಣಪಾ ಮುಂತಾದವರ ದೋಹಾಕೋಶಗಳು ಅಪಭ್ರಂಶದಲ್ಲಿ ದೊರೆಯುತ್ತವೆ. ಈಗ ದೊರೆತಿರುವ ದೋಹಾಕೋಶಗಳಲ್ಲಿ ಹಲವು ಜೈನ ಮತ್ತು ಬೌದ್ಧಯತಿಗಳ ಸಂಗ್ರಹಗಳೇ ಆಗಿವೆ. ಇವು ನೈತಿಕ ಮತ್ತು ಆಧ್ಯಾತ್ಮಿಕ ಉಪದೇಶದ ಸ್ವರೂಪದವು. ಇವೆಲ್ಲ ಬಹುಮಟ್ಟಿಗೆ ೭ ಅಥವಾ ೮ನೆಯ ಶತಮಾನಗಳ ಕಾಲಕ್ಕೆ ಸೇರಿವೆಯೆನ್ನಬಹುದು. ಜೋಇಂದುವಿನ 'ಪರಮಾತ್ಮ ಪ್ರಕಾಶ' (ಸು. ೭೦೦) ಈವರೆಗೆ ತಿಳಿದಂತೆ ಅಪಭ್ರಂಶಭಾಷೆಯ ಪ್ರಾಚೀನತಮ ಸಮಗ್ರಗ್ರಂಥ. ಹೇಮಚಂದ್ರನ ವ್ಯಾಕರಣದಲ್ಲಿ ಅಪಭ್ರಂಶಭಾಷೆಯ ವಿಸ್ತೃತ ವಿವೇಚನೆಯಿದ್ದು, ಇಲ್ಲಿ 'ಪರಮಾತ್ಮ ಪ್ರಕಾಶ'ದ ಉದ್ಧೃತಭಾಗಗಳಿವೆ. ಹೇಮಚಂದ್ರ–ಪೂರ್ವಕಾಲೀನ ಸಾಹಿತ್ಯದ ಮಾದರಿ 'ಪರಮಾತ್ಮ ಪ್ರಕಾಶ'ದಲ್ಲಿ ಕಾಣಬಹುದಾಗಿದೆ. ಜೈನ ಆಧ್ಯಾತ್ಮವಿದ್ಯೆಯ ಹಿನ್ನೆಲೆಯಲ್ಲಿ ಜೈನಧರ್ಮದ ಅನುಭಾವಿಕತೆಯ ಪಾತ್ರವೇನೆಂದು ಈ ಗ್ರಂಥ ತೋರಿಸುತ್ತದೆ ; ಅಂತರ್ಬಹಿರಾತ್ಮಗಳ ಹಾಗೂ ಪರಮಾತ್ಮದ ವಿವೇಚನೆಯನ್ನು ವಿವರಿಸಿದೆ. ಕನ್ನಡಿಗರಿಗೆ ತಕ್ಕಮಟ್ಟಿಗೆ ಈ ಗ್ರಂಥದ ಪರಿಚಯವಿತ್ತೆಂಬುದು ಇದರ ಮೇಲೆ ದೊರೆಯುವ ಕೆಲವು ಟೀಕೆಗಳಿಂದ ಶ್ರುತಪಡುತ್ತದೆ. ಅವು ಅಜ್ಞಾತಕರ್ತೃಕವಾದ ಒಂದು ಪ್ರಾಚೀನಟೀಕೆ (ಸು. ೧೩ನೆಯ ಶ ದ ಪೂರ್ವ) ಮಲಧಾರಿ ಬಾಲಚಂದ್ರನ (ಸು. ೧೪ನೆಯ ಶ.) ಟೀಕೆ ಮತ್ತು ಆರ್. ನರಸಿಂಹಾಚಾರ್ಯರು ಹೇಳುವ ಆಧ್ಯಾತ್ಮಿ ಬಾಲಚಂದ್ರ (ಸು. ೧೩ನೆಯ ಶ.) ಕೃತ ಟೀಕೆ. ಕೊನೆಯ ಎರಡೂ ಅಭಿನ್ನಗಳೇ ಇದ್ದರೂ ಇರಬಹುದು.

ಉಪಲಬ್ಧವಾಗಿರುವ ಅಪಭ್ರಂಶ ಸಾಹಿತ್ಯವೆಲ್ಲ ಬಹುಮಟ್ಟಿಗೆ ಪದ್ಯಬದ್ಧವಾಗಿಯೇ ಇದೆ. ಗದ್ಯರೂಪದಲ್ಲಿರುವುದು ಬಹು ಸ್ವಲ್ಪವೇ. ಈ ಪದ್ಯಸಾಹಿತ್ಯವಾದರೋ ಬೆಳೆವಣಿಗೆಯಲ್ಲಿ ದೊಡ್ಡ ಆಲದ ಮರದ ಹಾಗೆ. ವಲಭಿಯ ಅರಸನಾದ ಗುಹಸೇನನು

(೫೫೫-೬೯) ಅಪಭ್ರಂಶದಲ್ಲಿ ಕಾವ್ಯರಚನೆ ಮಾಡಿದ್ದನೆಂದು ಶಾಸನವೊಂದರಿಂದ ತಿಳಿಯುತ್ತದೆ. ಪ್ರಾಚೀನ ಅಪಭ್ರಂಶಕವಿ ಚತುರ್ಮುಖನ 'ಪಉಮಚರಿಯ' ಕಾವ್ಯ ನಮಗೆ ದೊರೆತಿಲ್ಲ. ಸ್ವಯಂಭುವಿನ (ಸು. ೭೦೦) 'ಪಉಮಚರಿಯ' ಮತ್ತು 'ರಿಟ್ಠಣೇಮಿ ಚರಿಯು'ಗಳಲ್ಲಿ ಮೊದಲನೆಯದು ಮಾತ್ರ ಪ್ರಕಟಗೊಂಡಿದೆ. ಮೊದಲನೆಯದು ರಾಮಾಯಣದ ಕಥೆಯನ್ನೂ ಎರಡನೆಯದು ೨೨ನೆಯ ತೀರ್ಥಂಕರ ನೇಮಿನಾಥನ ಕಥೆಯನ್ನೂ ಹೇಳುತ್ತವೆ. ಸ್ವಯಂಭು ಸ್ವವಿಷಯವಾಗಿ ಕೆಲವು ಸಂಗತಿಗಳನ್ನು ತಿಳಿಸಿದ್ದಾನೆ. ಆತನ ತಾಯಿತಂದೆಗಳ ಹೆಸರುಗಳನ್ನು ಗಮನಿಸಿದರೆ, ಆಂಧ್ರ ಕರ್ಣಾಟಕಗಳಿಗೆ ಸಮೀಪದಲ್ಲಿಯೇ ಆತನಿದ್ದಿರಬಹುದೆಂದು ತೋರುತ್ತದೆ. ಯಾಪನೀಯ ಸಂಘದ ಅನುಯಾಯಿಯಾಗಿದ್ದಿರಬಹುದು. ಅಪೂರ್ಣವಾಗಿ ಉಳಿದ ಈ ಎರಡು ಗ್ರಂಥಗಳನ್ನೂ ಅವನ ಮಗ ತ್ರಿಭುವನನು ಪೂರ್ಣಗೊಳಿಸಿದನು. ವಿವಿಧ ಅಪಭ್ರಂಶ ಛಂದಸ್ಸುಗಳಲ್ಲಿ ಬರೆಯಲ್ಪಟ್ಟಿರುವ ಈತನ ಕೃತಿಗಳು ಕಾವ್ಯದೃಷ್ಟಿಯಿಂದಲೂ ಮೇಲುಮಟ್ಟದ್ದಾಗಿವೆ. ಛಂದೋವಿಷಯಕವಾದ 'ಸ್ವಯಂಭು ಛಂದಸ್' ಕೂಡ ಈತನದೇ ಇರಬಹುದು.

## ೨. ಭಾರತೀಯ ಭಾಷಾಸಾಹಿತ್ಯ ಸ್ಥಿತಿಗತಿಗಳು : ತಮಿಳು, ತೆಲುಗು

### ತಮಿಳು

#### ಸಂಘಕಾಲ

ತಮಿಳು ಭಾಷೆಯ ಸಾಹಿತ್ಯ ಇತರ ದ್ರಾವಿಡ ಭಾಷಾಸಾಹಿತ್ಯಗಳಿಗಿಂತ ಪ್ರಾಚೀನವಾದುದು. ಆದರೆ ಎಷ್ಟು ಪ್ರಾಚೀನ ಎಂಬ ವಿಷಯದಲ್ಲಿ ಮಾತ್ರ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಸಾಂಪ್ರದಾಯಿಕ ಕಥೆಗಳ ಉಸುಬಿನಲ್ಲಿ ಈ ಸಾಹಿತ್ಯೇತಿಹಾಸದ ಸಂಗತಿಗಳು ಸಿಲುಕಿಕೊಂಡಿವೆ. ಕೆಲವರು 'ತಮಿಳಹಂ' ಎಂದರೆ ತಮಿಳುನಾಡು ಹದಿನೈದು ಸಾವಿರ ವರ್ಷಗಳಷ್ಟು ಪ್ರಾಚೀನವೆಂದೂ ಅದರ ಪೂರ್ವ ಪಶ್ಚಿಮ ಭಾಗಗಳು ಕ್ಷುಬ್ಧ ಸಾಗರದಲ್ಲಿ ಮರೆಯಾದವೆಂದೂ ದಕ್ಷಿಣಭಾಗ ಬೇರ್ಪಟ್ಟು ಲಂಕೆಯಾಯಿತೆಂದೂ ಭಾವಿಸುತ್ತಾರೆ. ಇವರ ಮಾತಿನಂತೆ ತಮಿಳು ಸಾಹಿತ್ಯವಾದರೋ ಕೊನೆಯ ಪಕ್ಷ ಎಂಟು ಸಾವಿರ ವರುಷಗಳ ಪ್ರಾಚೀನತೆಯನ್ನು ಹೊಂದಿದೆ. ಇಂತಹ ವಿಚಾರಕ್ಕೆ 'ನಕ್ಕಿರಾರ್' ಎಂಬಾತನು 'ಅಹಪ್ಪೊರುಳ್' ಗ್ರಂಥಕ್ಕೆ ವ್ಯಾಖ್ಯಾನ ಮಾಡುತ್ತ ಹೇಳಿದ ಮೂರು ಸಂಘಗಳ ವಿಷಯವೇ ಆಧಾರ.[72]

ಮೊದಲನೆಯ ಸಂಘವು ಈಗ ಹಿಂದುಮಹಾಸಾಗರದಲ್ಲಿ ಮುಳುಗಿಹೋಗಿರುವ ಮಧುರಾ ಪಟ್ಟಣದಲ್ಲಿ ಸ್ಥಾಪಿತವಾಗಿತ್ತು. ಅಧ್ಯಕ್ಷ ಅಗಸ್ತ್ಯ. ಈಶ್ವರನೂ ಮುರುಗನೂ ಆದಿಶೇಷನೂ ಆದರಲ್ಲಿ ಭಾಗವಹಿಸಿದ್ದರು ಎಂದು ಐತಿಹ್ಯ. ೫೪೯ ಜನ ಸದಸ್ಯರ ಆ ಸಂಘಕ್ಕೆ ೪೪೪೯ ಮಂದಿ ಗ್ರಂಥಕರ್ತರು ತಮ್ಮ ಗ್ರಂಥಗಳನ್ನು ಅವಗಾಹನೆಗಾಗಿ

ಕಳಿಸಿದ್ದರಂತೆ. ಅವರ ಗ್ರಂಥಗಳು ಅಂಗೀಕೃತವಾದವಂತೆ. ೮೯ ಜನ ಪಾಂಡ್ಯ ಅರಸರು ಈ ಸಂಘಕ್ಕೆ ಆಶ್ರಯದಾತರು. ಇವರಲ್ಲಿ ಏಳು ಜನ ಸ್ವಯಂ ಕವಿಗಳು. ಸಂಘವು ೪,೪೦೦ ವರ್ಷಗಳು ಕೆಲಸ ಮಾಡಿತು. ಮೊದಲನೆಯ ಸಂಘ ಅನುಮೋದಿಸಿದ ಪ್ರಸಿದ್ಧ ಕೃತಿಗಳು 'ಅಹತ್ತಿಯಂ', 'ಪರಿಪಾಡಲ್', 'ಮುದನಾರೈ', 'ಮುದುಕುರುಹು', 'ಕಲರಿಯಾವರೈ' ಎಂಬವು. ಈ ಗ್ರಂಥಗಳು ದೊರೆತಿಲ್ಲ.

ಎರಡನೆಯ ಸಂಘವು ಸಮುದ್ರದಲ್ಲಿ ಮುಳುಗಿಹೋಗಿರುವ ಕವಾಟಪುರ ಅಥವಾ ಅಳೈವಾಯ್ ಎಂಬ ಪಟ್ಟಣದಲ್ಲಿ ಸ್ಥಾಪಿತವಾಗಿತ್ತು. ಈ ಊರಿಗೆ ವಾಯಿಲೂರು, ಮುತ್ತೂರು ಎಂಬ ಹೆಸರುಗಳೂ ಇವೆ. ಇದರಲ್ಲಿ ೫೯ ಜನ ಸದಸ್ಯರು ೩,೭೦೦ ಕವಿಗಳ ಕೃತಿಗಳನ್ನು ಪರಾಮರ್ಶೆ ಮಾಡಿದರು. ಸಂಘವು ೩,೭೦೦ ವರ್ಷಗಳ ಕಾಲ ನಡೆಯಿತು. ಈ ಸಂಘವು ಅಸ್ತಿತ್ವದಲ್ಲಿದ್ದ ಕಾಲಕ್ಕೆ ೫೯ ಜನ ಅರಸರು ಆಳಿ ಕಣ್ಮರೆಯಾದರು. ಈಗ ಸಂಘವು 'ಅಹತ್ತಿಯಮ್', 'ತೊಲ್‌ಕಾಪ್ಪಿಯಂ', 'ಮಾಪುರಾಣಮ್', 'ಇಶೈನಾನುಕ್ಕುಮ್', 'ಭೂತಪುರಾಣಂ', 'ಕಲಿ', 'ಕುರುಹು', 'ವೆಂಡಾಳಿ', 'ವ್ಯಾಲಮಾಲೈ' ಮೊದಲಾದ ಕೃತಿಗಳನ್ನು ಮಾರ್ಗಕೃತಿಗಳೆಂದು ಕೊಂಡಾಡಿತು.

ಎರಡನೆಯ ಸಂಘದ ಗ್ರಂಥಭಂಡಾರದಲ್ಲಿ ೩೧೪೯ ಕೋಶಗಳು ಸಂಗ್ರಹವಾಗಿದ್ದವೆಂದೂ ಎಲ್ಲವೂ ಸಮುದ್ರದಲ್ಲಿ ಕೊಚ್ಚಿಹೋದುವೆಂದೂ ಹೇಳುತ್ತಾರೆ. ಅಗಸ್ತ್ಯರೇ ಮೊದಲ ಎರಡು ಸಂಘಗಳಿಗೂ ಸದಸ್ಯರಾಗಿದ್ದುದರಿಂದ ಇದೂ ಪ್ರಥಮ ಸಂಘಕ್ಕೇ ಸೇರಿದುದೆಂದು ಕೆಲವರು ಭಾವಿಸುತ್ತಾರೆ. ಮಧುರೆಯು ಸಮುದ್ರದಲ್ಲಿ ಮುಳುಗಿ ಹೋದುದರಿಂದ ಬೇರೆ ಕಾರ್ಯಕ್ಷೇತ್ರವನ್ನು ಅವರು ಆರಿಸಿಕೊಂಡು ಕವಾಟಪುರದಲ್ಲಿ ತಮ್ಮ ಕೆಲಸವನ್ನು ಮುಂದುವರಿಸಿರಬಹುದು ಎಂದು ಊಹಿಸುತ್ತಾರೆ. ಅಗಸ್ತ್ಯರ ಶಿಷ್ಯರಲ್ಲಿ ಒಬ್ಬರಾದ ತೊಲ್‌ಕಾಪ್ಪಿಯರ್ ರಚಿಸಿದ 'ತೊಲ್‌ಕಾಪ್ಪಿಯಂ' ಎಂಬ ವ್ಯಾಕರಣ ಗ್ರಂಥ ಹೊರತು ಇನ್ನಾವ ಕೃತಿಯೂ ಈಗ ನಮಗೆ ಸಿಕ್ಕುವುದಿಲ್ಲ.

ಮೂರನೆಯ ಸಂಘವು ಈಗಿನ ಉತ್ತರ ಮಧುರೆಯಲ್ಲಿ ಸ್ಥಾಪಿತವಾಗಿತ್ತು. ಅದಕ್ಕೆ ನಕ್ಕಿರಾರ್ ಅಧ್ಯಕ್ಷ. ೪೯ ಜನ ಸದಸ್ಯರು. ೪೪೯ ಜನ ಸದಸ್ಯರು ತಮ್ಮ ಗ್ರಂಥಗಳನ್ನು ಪರಾಮರ್ಶೆಗೆ ಕಳಿಸಿದ್ದರು. ೧,೮೫೦ ವರ್ಷಗಳ ಕಾಲ ಈ ಸಂಘವು ನಡೆಯಿತು. ೪೯ ಜನ ಅರಸರು ಕ್ರಮವಾಗಿ ಇದಕ್ಕೆ ಆಶ್ರಯವನ್ನು ಕೊಟ್ಟರು. ಈ ಸಂಘವು 'ನೆಡುಂತೊಹೈ', 'ಕುರುಂತೊಹೈ', 'ನಟ್ರಿನಯ್', 'ಐಙ್ಗುರುನೂರು', 'ಪದಿಟ್ರುಪತ್', 'ನೂಟ್ರೈಂಬದ್', 'ಪರಿಪಾಡಲ್', 'ಕೂತ್ತು', 'ವರಿ', 'ಪೇರಿಶೈ' ಮತ್ತು 'ಶಿಟ್ರಿಶೈ' ಗಳನ್ನು ಉದ್ಗ್ರಂಥಗಳೆಂದು ತೀರ್ಮಾನಿಸಿತು. ಇವುಗಳಲ್ಲಿ ಬಹುಪಾಲು ನಷ್ಟವಾದರೂ ಕೆಲವು ಗ್ರಂಥಗಳು ಉಳಿದುಕೊಂಡಿವೆ. ಮೂರನೆಯ ಸಂಘದ ೪೯ ಜನ ಸದಸ್ಯರ ನಾಮಾವಳಿಯು ತಿರುವಳ್ಳುವರ್ ಅವರ 'ಕುರಳ್' ಗ್ರಂಥದ ಅನುಬಂಧವಾಗಿ ದೊರೆಯುತ್ತದೆ.

ಆಧುನಿಕ ವಿದ್ವಾಂಸರು ಐತಿಹಾಸಿಕ ದೃಷ್ಟಿಯಿಂದ ಈ ಐತಿಹ್ಯಗಳನ್ನು ಪರಾಮರ್ಶೆ

ಸಿದ್ಧಾರೆ. ದೇವಮಾನವರ ಒಕ್ಕೂಟವೂ ಸಂಘಗಳ ದೀರ್ಘ ಕಾಲಾವಧಿಯೂ ಅಗಸ್ತ್ಯರು ಸಾವಿರಾರು ವರ್ಷಗಳು ಸದಸ್ಯರಾಗಿರುವುದೂ ಎಲ್ಲ ಗ್ರಂಥಗಳೂ ನಾಶವಾಗಿರುವುದೂ—ಈಯೆಲ್ಲವೂ ಸಾಂಪ್ರದಾಯಿಕ ಹೇಳಿಕೆಗಳೆನ್ನಲು ಸಹಾಯಕಗಳಾಗಿವೆ. ದೊರೆತ ಆಧಾರಗ್ಳಳಿಂದ, ಸಂಘ ಸಾಹಿತ್ಯದ ಕಾಲವು ಕ್ರಿ.ಪೂ. ೫ನೆಯ ಶತಮಾನದಿಂದ ಕ್ರಿ.ಶ. ೫ನೆಯ ಶತಮಾನದವರೆಗಿನ ಸಾವಿರ ವರ್ಷವಾಗಬಹುದೆಂದು ಕೆಲವರು ವಿದ್ವಾಂಸರು ಭಾವಿಸುತ್ತಾರೆ.

ತಮಿಳು ಸಾಹಿತ್ಯದ ಆದಿಕಾಲದೊಂದಿಗೆ ಅಗಸ್ತ್ಯರ ನಿಕಟಸಂಬಂಧವಿದೆ. ಸಂಸ್ಕೃತಕ್ಕೆ ಪಾಣಿನಿ, ತೆಲುಗಿಗೆ ಕಣ್ವರು ಹೇಗೋ ಹಾಗೆ ಈ ಬಗೆಗೆ ಹಲವು ದಂತಕಥೆಗಳಿವೆ. ಅಗಸ್ತ್ಯರು ಪರಮೇಶ್ವರನಿಂದ ತಮಿಳು ಭಾಷೆಯ ರಹಸ್ಯವನ್ನು ತಿಳಿದು, ದಕ್ಷಿಣಕ್ಕೆ ಬಂದು ಅದನ್ನು ಕಲಿಸಿದರೆಂದು ಹೇಳುತ್ತಾರೆ.[73]

ಹೀಗೆ ತೆಂಕಣದಲ್ಲಿ ಬಂದು ನೆಲಸಿದಮೇಲೆ ಅಗಸ್ತ್ಯರು 'ಪೇರಗತ್ತಿಯಮ್' ಎಂಬ ಲಕ್ಷಣಗ್ರಂಥವನ್ನು ಬರೆದರು. ಲಕ್ಷ್ಯವನ್ನು ಹಿಡಿದು ಲಕ್ಷಣ ಹುಟ್ಟಬೇಕು. ಆದರಿಂದ ಇಲ್ಲಿಗೆ ಅಗಸ್ತ್ಯರ ಆಗಮನಕ್ಕೆ ಮುಂಚೆಯೇ ತಮಿಳು ಸಾಹಿತ್ಯದ ಸೃಷ್ಟಿ ನಡೆದಿರಬೇಕೆಂಬುದು ಸ್ವಯಂವೇದ್ಯ. ಅಗಸ್ತ್ಯರಿಗೆ ೧೨ ಜನ ಶಿಷ್ಯರು. ಅವರು ಒಬ್ಬೊಬ್ಬರೂ ಒಂದೊಂದು ಪಟಲ (=ದಳ)ವನ್ನು ಬರೆದು 'ಪನ್ನೀರು ಪಡಲಮ್' ಎಂಬ ಗ್ರಂಥವನ್ನು ರಚಿಸಿದರು. ಆ ಗ್ರಂಥದಲ್ಲಿ 'ತೊಲ್‌ಕಾಪ್ಪಿಯಮ್' ಎಂಬ ಅಧ್ಯಾಯವನ್ನುಳಿದು ಉಳಿದುವೆಲ್ಲ ನಷ್ಟವಾಯಿತೆಂದು ಪ್ರತೀತಿ ಇದೆ. ತಮಿಳು ಸಾಹಿತ್ಯ ಚರಿತ್ರೆಯಲ್ಲಿ ಕ್ರಿ.ಪೂ.ಕ್ಕೆ ಸಲ್ಲುವ ಮೊದಲನೆಯ ಗ್ರಂಥವೆಂದರೆ ಇದೇ. ಇದಕ್ಕಿಂತ ಪ್ರಾಚೀನವಾದ ಯಾವ ಗ್ರಂಥವೂ ದೊರಕಿಲ್ಲ. ಆದರೆ ಹಿಂದಿನ ಸಾಹಿತ್ಯದ ನಾನಾ ರೂಪಗಳನ್ನೂ ವೈಶಿಷ್ಟ್ಯವನ್ನೂ ತಿಳಿಸುವ ಪದ್ಯಗಳೂ ಉದಾಹರಣೆಗಳೂ 'ತೊಲ್‌ಕಾಪ್ಪಿಯಂ'ನಲ್ಲೇ ಬರುತ್ತವೆ.

'ತೊಲ್‌ಕಾಪ್ಪಿಯಂ' ಒಂದು ವ್ಯಾಕರಣ ಗ್ರಂಥ. ಕರ್ತೃ ತೊಲ್‌ಕಾಪ್ಪಿಯರ್. ಇದರಲ್ಲಿ ಮೂರು ಭಾಗಗಳೂ ಒಟ್ಟು ೧೬೧೨ ಸೂತ್ರಗಳೂ ಕಂಡುಬರುತ್ತವೆ. ಇತರ ತಮಿಳು ವ್ಯಾಕರಣಗಳಿಗಿಂತ ಪ್ರಾಚೀನವಷ್ಟೇ ಅಲ್ಲ, ಉದಾಹರಣೆಗಳ ನೆಪದಲ್ಲಿ ಈಗಾಗಲೇ ಕಣ್ಮರೆಯಾಗಿರುವ ಕವಿಕೃತಿಗಳ ತುಣುಕುಗಳನ್ನು ಸೆರೆಹಿಡಿದಿಟ್ಟ ಅಮೂಲ್ಯ ನಿಧಿ ಇದು.'ಎಬುತ್ತು' (ಅಕ್ಷರ),'ಶೊಲ್' (ಮಾತು),'ಪೊರುಳ್'(ಅರ್ಥ) ಎಂಬ ಮೂರು ಅಧಿಕಾರಗಳಲ್ಲಿ ಕಾವ್ಯಲಕ್ಷಣ (ಇಯಲ್ ತಮಿಬಿಲಕ್ಕಣಮ್) ಉಕ್ತವಾಗಿದೆ. ಈ ಅಧಿಕಾರಗಳಲ್ಲಿ ಒಂದೊಂದಕ್ಕೂ ೯ ಅಧ್ಯಾಯಗಳಿವೆ. ಅರ್ಥಾಧಿಕಾರ (ಪೊರುಳಧಿಕಾರ) ದಲ್ಲಿ ಯಾಪ್ಪು (ಛಂದಸ್ಸು), ಅಣಿ (ಅಲಂಕಾರಗಳು) ಅಡಕವಾಗಿವೆ.

ಅಗಸ್ತ್ಯರು ರಚಿಸಿದ 'ಪೇರಗತ್ತಿಯ'ದಲ್ಲಿ ತಮಿಳು ಸಾಹಿತ್ಯವನ್ನು ಇಯಲ್ (ಕಾವ್ಯ), ಇಶೈ (ಸಂಗೀತ), ನಾಡಕಮ್ (ನಾಟಕ) ಎಂದು ಮೂರು ಭಾಗಗಳಾಗಿ ವಿಂಗಡಿಸಿತ್ತೆಂದು ಪ್ರತೀತಿ ಇದೆ. ತೊಲ್‌ಕಾಪ್ಪಿಯರು ಅಗಸ್ತ್ಯರ ಪ್ರತ್ಯಕ್ಷಶಿಷ್ಯರಾದುದ

ರಿಂದ 'ಪೇರಗತ್ತಿಯ'ವನ್ನು ಬಹುಪಾಲು ಅನುಸರಿಸಿರಬಹುದು. ತೊಲ್‌ಕಾಪ್ಪಿಯರ ಇಯಲ್ ತಮಿೞಿಲಕ್ಕಣಮ್ (ಕಾವ್ಯಲಕ್ಷಣ)ವು ವಿಸ್ತಾರವೂ ವಿಚಾರಪೂರ್ಣವೂ ಆದ ವಿಶ್ವಕೋಶವೆಂದು ಪ್ರಸಿದ್ಧವಾಗಿದೆ. ಮೊದಲಿನ ಎರಡು ಅಧ್ಯಾಯಗಳು ತಮಿಳು ಭಾಷೆಯ ಸ್ವರೂಪವನ್ನೂ ಆದರಲ್ಲಿಯ ಅಂದಿನ ಭಾಷಾಸ್ವರೂಪವನ್ನೂ ಸಮರ್ಥವಾಗಿ ಪ್ರತಿಬಿಂಬಿಸುತ್ತದೆ. ವರ್ಣಮಾಲೆ, ಶಬ್ದಗಳು, ಅವುಗಳ ರಚನೆ, ರೂಪಾಂತರ ಮೊದಲಾದುವುಗಳನ್ನು ಅಲ್ಲಿ ಕುರಿತಿದೆ. ಮೂರನೆಯ 'ಪೊರುಳಧಿಕಾರ'ವು ಅಗಮ್ ಎಂಬ, ಪುಱಮ್ ಎಂಬ ವಿಭಾಗಗಳಲ್ಲಿ ಛಂದಸ್ಸು, ಅಲಂಕಾರ ಮುಂತಾದ ವಿಚಾರಗಳನ್ನು ಹೇಳುವುದು. 'ಅಗಮ್' ಶೃಂಗಾರಕ್ಕೆ ಅನ್ವಯಿಸುತ್ತದೆ. 'ಪುಱಮ್' ವಿದ್ಯೆ, ದಾತೃತ್ವ, ಪರಾಕ್ರಮ ಮೊದಲಾದ ವಿಷಯಗಳನ್ನು ಸೂಚಿಸುತ್ತದೆ.

ಶೃಂಗಾರರಸಪ್ರಧಾನವಾದ ಗ್ರಂಥಗಳು (ಅಗಪ್ಪೊರುಳ್ ನೂಲ್) ಸಾಮಾನ್ಯವಾಗಿ ಆ ಕಾಲದ ಜನತೆಯ ಆದರ್ಶಪ್ರೇಮವನ್ನು ವಿವರಿಸುತ್ತವೆ. ಈ ಪ್ರೇಮ ಐದು ಬಗೆಯಾಗಿ ಚಿತ್ರಿತವಾಗಿದೆ: ಸಂಭೋಗ ಶೃಂಗಾರ (ಪುಣರ್ದಲ್)ವೇ ಮೊದಲನೆಯದು. ಇದಕ್ಕೂ ಬೆಟ್ಟಗುಡ್ಡಗಳ ಪ್ರದೇಶ (ಕುಱಿಞ್ಜಿ)ಕ್ಕೂ ಸಂಬಂಧ ಕಲ್ಪಿಸುವುದೊಂದು ಕವಿಸಮಯ. ಎರಡನೆಯ ಬಗೆಯೇ ವಿಪ್ರಲಂಭ ಶೃಂಗಾರ (ಪಿರಿದಲ್) ಅಥವಾ ಆಗಲಿಕೆ. ಇದಕ್ಕೂ ಮರುಭೂಮಿ (ಪಾಲೈ)ಗೂ ಸಂಬಂಧ ಕಲ್ಪಿಸುವುದು ವಾಡಿಕೆ. ಆಗಲಿಕೆಯ ನೋವನ್ನು ತಾಳಿಕೊಂಡು ಕೊರಗುವುದು (ಇರುತ್ತಲ್) ಮೂರನೆಯ ಹಂತ. ಇದರ ಅನುಭವ ಆರಣ್ಯ (ಮುಲ್ಲೈ) ಪ್ರದೇಶದಲ್ಲಿ. ನಾಯಿಕೆಯ ಹೆತ್ತತಾಯಿ ಅಥವಾ ಸಾಕುತಾಯಿ ಮಗಳ ಅಗಲಿಕೆಗಾಗಿ ತನ್ನ ಅಳಲನ್ನು ಸಮುದ್ರತೀರದಲ್ಲಿ (ನೆಯ್ದಲ್) ತೋಡಿಕೊಳ್ಳುವುದು. ಇದಕ್ಕೆ 'ಇರಙ್ಗಲ್' ಎಂದು ಹೆಸರು. ಇದು ನಾಲ್ಕನೆಯ ಸ್ಥಿತಿ. ಐದನೆಯದಾಗಿ 'ಊಡಲ್' ಅಥವಾ ಪ್ರಣಯ ಕಲಹ. ಇದು ಹೊಲ ಗದ್ದೆಗಳು ವಿಶೇಷವಾಗಿರುವ ಪ್ರದೇಶದಲ್ಲಿ (ಮರುದಮ್) ಅನುಭವಿಸುವುದು.

ಪುಱಮ್‌ನ ಯುದ್ಧವಿಭಾಗದಲ್ಲಿ ಏಳು ಬಗೆ: ಗೋಗ್ರಹಣ, ದಂಡಯಾತ್ರೆ, ಮುತ್ತಿಗೆ, ಯುದ್ಧ, ವಿಜಯ, ಮಂತ್ರಾಲೋಚನೆ, ಜಯಗೀತೆಗಳು. ತೊಲ್‌ಕಾಪ್ಪಿಯರ್ ಗ್ರಂಥವು ಈ ಎಲ್ಲ ವಿಚಾರಗಳನ್ನು ಪ್ರಧಾನವಾಗಿ ತಿಳಿಸುತ್ತ, ಅಂದಿನ ಕಾಲದ ರಾಜಕೀಯ ಸಾಮಾಜಿಕ ಧಾರ್ಮಿಕ ಪರಿಸ್ಥಿತಿಗಳಮೇಲೆ ಬೆಳಕು ಬೀರುತ್ತದೆ. ತೊಲ್‌ಕಾಪ್ಪಿಯರ ಸಹಪಾಠಿಗಳಾದ ಪನಮ್ಬಾರನಾರ್ ಈ ಗ್ರಂಥವನ್ನು ಕುರಿತು ವಿಮರ್ಶಾತ್ಮಕ ಪದ್ಯ (ಪಾಯಿರಮ್)ವೊಂದನ್ನು ಹೇಳಿದ್ದಾನೆ. ಇನ್ನೊಬ್ಬ ಸಹಪಾಠಿ ಅದಙಕ್ಕೋಟ್ಟಾಶಿರಿಯರ್ 'ತೊಲ್‌ಕಾಪ್ಪಿಯ'ವನ್ನು ವಿದ್ವದ್ಗೋಷ್ಠಿಯ ಅಂಗೀಕಾರ (ಅರಙ್ಗೇದಲ್)ಕ್ಕೆ ಒಪ್ಪಿಸಿದ ಕಾಲದಲ್ಲಿ ಬಹಳವಾಗಿ ಕೊಂಡಾಡಿದ್ದಾನೆ. ತೊಲ್‌ಕಾಪ್ಪಿಯಮ್ ಕುರಿತು ನಾಚ್ಚಿನಾರ್‌ಕಿನಿಯಾರ್ ಎಂಬವನ ವ್ಯಾಖ್ಯಾನ ಪೂರ್ಣವಾದುದು; ಮೂಲ ವ್ಯಾಕರಣವನ್ನು ಪೂರ್ಣವಾಗಿ ಉದ್ಧರಿಸಿ, ವ್ಯಾಖ್ಯಾನವನ್ನು ರಚಿಸಿದವನು ಈತನೊಬ್ಬನೇ.

ನಮಗೆ ಉಪಲಬ್ಧವಾಗಿರುವ ಕಾವ್ಯಗಳು ಎಟ್ಟುತ್ತೊಗೈ, ಪತ್ತುಪ್ಪಾಟ್ಟು, ಪದಿನೆಣ್

ಕೀೞ್‌ಕಣಕ್ಕು ಎಂದು ಮೂರು ಬಗೆಯಾಗಿವೆ. ಇಶೈ ಎಂದರೆ ಸಂಗೀತ ಭಾಗದಲ್ಲಿ ಪ್ರಾಚೀನ ಕೃತಿಗಳು ಈಗ ಸಿಕ್ಕುವಂತಿಲ್ಲ. 'ಇಶೈ ನುಣುಕ್ಕಮ್', 'ಪೆರುನಾರೈ', 'ಇಂದ್ರಕಾಳಿಯಮ್', 'ಪಞ್ಚ ಮರಬು', 'ವೆರಜ್ಞು ರುಗು' ಇವೇ ಮೊದಲಾದ ಸಂಗೀತಶಾಸ್ತ್ರ ಗ್ರಂಥಗಳ ಹೆಸರುಗಳು ಮಾತ್ರ ನಮ್ಮ ಪಾಲಿಗೆ ಉಳಿದಿವೆ. ಹೀಗೆಯೇ 'ಮುಱುವಲ್', 'ಶಯನ್ತದಮ್', 'ಶೆಯಿಱ್ಱಿಯಮ್', 'ಕುಣನೂಲ್', 'ಮದಿವಾಣಮ್' ಮುಂತಾದ ನಾಟಕ ಲಕ್ಷಣ ಗ್ರಂಥಗಳೂ ಈಗ ನಾಮಾವಶೇಷವಾಗಿವೆ.

ತಮಿಳಿನ ಪ್ರಾಚೀನ ಗ್ರಂಥಗಳಲ್ಲಿ ಸಿಕ್ಕಿರುವುವೆಲ್ಲ ಸಾಮಾನ್ಯವಾಗಿ ಮೂರನೆಯ ಸಂಘಕ್ಕೆ ಸೇರಿದುವೆನ್ನಬಹುದು. ಇವು ಲಘುಗೀತೆಗಳ ಮತ್ತು ನಿಡುಗವನಗಳ ಸಂಕಲಿತ ರೂಪಗಳು. ಆಧುನಿಕ ವಿಮರ್ಶಕರ ಅಭಿಪ್ರಾಯದಂತೆ ಇವು ಕ್ರಿ.ಶ. ಎರಡನೆಯ ಅಥವಾ ಮೂರನೆಯ ಶತಮಾನಕ್ಕೆ ಸೇರುತ್ತವೆ. ಲಘುಗೀತೆಗಳನ್ನು ೮ ಭಾಗಗಳಲ್ಲಿ ಹೊಂದಿರುವ ಕಾವ್ಯವೇ 'ಎಟ್ಟುತ್ತೊಹೈ', ಸ್ವಲ್ಪ ದೀರ್ಘವಾದ ದಶಗೀತೆಗಳ ಸಂಕಲನ 'ಪತ್ತುಪ್ಪಾಟ್ಟು', 'ನನ್ನೂಲ್'ನ ಪ್ರಾಚೀನ ವ್ಯಾಖ್ಯಾನಗಳಲ್ಲಿಯೂ, 'ತೊಲ್‌ಕಾಪ್ಪಿಯ'ದ ಪೇರಾಶರೀಯರ್ ವ್ಯಾಖ್ಯಾನದಲ್ಲಿಯೂ ಈ ಹೆಸರುಗಳನ್ನು ಕಾಣಬಹುದು. ಹಿಂದಿನ ಕೃತಿಗಳ ಬೇರೆ ಬೇರೆ ಸಂಕಲನಗಳು 'ನಱ್ಱಿಣೈ', 'ಕಲಿತ್ತೊಹೈ', 'ಅಗನಾನೂಱು', 'ಪುಱನಾನೂರು' ಎಂಬ ಕೃತಿಗಳಾಗಿ ದೊರೆಯುತ್ತವೆ. ಇವುಗಳ ಸಾಮಾನ್ಯ ಪರಿಚಯವನ್ನು ಈಗ ಗಮನಿಸಬಹುದು :

'ನಱ್ಱಿಣೈ' : ಪ್ರೇಮವನ್ನು ಕುರಿತ ೪೦೦ ಲಘು ಕವನಗಳು ಈ ಗ್ರಂಥದಲ್ಲಿವೆ. ೧೭೫ ಕವಿಗಳಿಂದ ಆಯ್ದುಕೊಂಡ ಈ ಗೀತೆಗಳಿಗೆ ಪೆರುಂದೇವನಾರ್ ಪರಿಚಯಾತ್ಮಕ ನಾಂದಿಯನ್ನು ರಚಿಸಿದ್ದಾನೆ. ಇಲ್ಲಿನ ಗೀತೆಗಳು ಅಗವಲ್‌ಪಾ ಛಂದಸ್ಸಿನಲ್ಲಿವೆ. ಒಂದೊಂದು ಪದ್ಯದಲ್ಲಿಯೂ ೯ರಿಂದ ೧೨ರವರೆಗೆ ಸಾಲುಗಳಿವೆ. ಈ ಸಂಕಲನವು ಪಾಂಡ್ಯರ ಅರಸ ಮಾರನ್ ಒೞುದಿಯಿಂದ ರಚಿತವಾಯಿತು.

'ಕುರುಂದೊಹೈ' : ಈ ಕೃತಿಯು ಅದರ ಹೆಸರೇ ಸೂಚಿಸುವಂತೆ ಚಿಕ್ಕ ಚಿಕ್ಕ ಗೀತೆಗಳ ಸಂಗ್ರಹ. ಪ್ರೇಮವನ್ನು ಕುರಿತ ೪೦೨ ಪದ್ಯಗಳು ಇಲ್ಲಿವೆ. ೨೦೪ ಜನ ಕವಿಗಳ ಈ ಸಂಕಲನವನ್ನು ಪುರಿಕ್ಕೋ ಎಂಬಾತನು ಸಂಕಲಿಸಿದ್ದಾನೆ. ಪೆರುಂದೇವನಾರ್‌ನ ಮಂಗಳ ಶಾಸನವನ್ನು ಪಡೆದ ಈ ಗ್ರಂಥದ ಪದ್ಯಗಳು ೪ರಿಂದ ೮ ಸಾಲುಗಳವರೆಗೆ ಇವೆ. ಕುರುಂದೊಹೈ ಮತ್ತು ನಱ್ಱಿಣೈ ಸಮಕಾಲೀನವೆಂದು ಕಂಡುಬರುತ್ತವೆ.

'ಐಙ್ಗುರುನೂರು' : ಐದು ಜನ ಬೇರೆಬೇರೆ ಕವಿಗಳ ೫೦೦ ಪದ್ಯಗಳ ಪ್ರಾಚೀನ ಸಂಕಲನ ಇದು. ಪೆರುಂದೇವನಾರ್‌ನ ಮುನ್ನುಡಿ ಪ್ರಾಚೀನ ಮಂಗಳಗೀತೆಗಳನ್ನು ಹೊಂದಿ ಶೃಂಗಾರದ ೫ ಹಂತಗಳನ್ನು ಪ್ರಕೃತಿಯ ಹಿನ್ನೆಲೆಯಲ್ಲಿ ಮನೋಹರವಾಗಿ ಬಣ್ಣಿಸುತ್ತದೆ. ಇರುಂಪೊರೈ ಎಂಬವನ ಆಣತಿಯ ಮೇರೆಗೆ ಕೂಡಲೂರ್ ಕೇಳಾರ್ ಈ ಸಂಕಲನವನ್ನು ಮಾಡಿದನು. ಈ ಗ್ರಂಥಕ್ಕೆ ಅಜ್ಞಾತಕರ್ತೃಕವಾದ ಒಂದು ವ್ಯಾಖ್ಯಾನವೂ ಇದೆ.

'ಪದಿಱ್ಱುಪ್ಪತ್ತು': ಚೇರವಂಶದ ರಾಜರ ಗುಣ ಶೌರ್ಯ ಮೊದಲಾದುವನ್ನು ಪ್ರಶಂಸಿಸುವ ೧೦ ಭಾಗಗಳನ್ನುಳ್ಳ ೧೦–೧೦ ಪದ್ಯಗಳ ಸಂಕಲನವೇ 'ಪದಿಱ್ಱುಪ್ಪತ್ತು'. ಈಗ ಇದರ ಆದಿ ಅಂತ್ಯ ಭಾಗಗಳು ಲುಪ್ತವಾಗಿವೆ. ಎಂಟು ಜನ ಕವಿಗಳಲ್ಲಿ ಒಬ್ಬ ಕವಯಿತ್ರಿಯೂ ಇರುವಳು. ಈ ಗ್ರಂಥವು ತನ್ನ ದೇಶೀಯತೆಗೆ ಹೆಸರಾಗಿದೆ. ಪ್ರಾಚೀನ, ಪರಿಶುದ್ಧ ತಮಿಳು ಭಾಷಾಶೈಲಿಗೆ ಹೇಳಿದಂತಹ ೧೮೦೦ ಸಾಲಿನ ಈ ಕಾವ್ಯದಲ್ಲಿ ಹನ್ನೆರಡಾದರೂ ಸಂಸ್ಕೃತ ಶಬ್ದಗಳು ದೊರೆಯುವುದು ಕಷ್ಟ.

'ಪರಿಪಾಡಲ್': ಇದು ಅದೇ ಹೆಸರಿನ ಛಂದಸ್ಸಿನಲ್ಲಿ ರಚಿತವಾದ ೭೦ ಪದ್ಯಗಳ ಸಂಕಲನ. ಕಾಲನ ಹಾವಳಿಗೆ ಪಕ್ಕಾಗಿ ೧೩ ಕವಿಗಳ ೨೪ ಪದ್ಯಗಳು ಮಾತ್ರ ದೊರೆಯುತ್ತವೆ. ಗ್ರಂಥದ ೭೦ ಕವನಗಳಲ್ಲಿ ೮ ವಿಷ್ಣುವಿನ ಪರವಾಗಿಯೂ ೩೧ ಮುರುಗನನ್ನು ಕುರಿತೂ ೨೬ ಪದ್ಯಗಳು ವೈಗೈ ನದಿಯ ವರ್ಣನೆಯಾಗಿಯೂ ೪ ಮಧುರಾ ಪಟ್ಟಣವನ್ನೂ ಸಾಗರವನ್ನೂ ಕುರಿತೂ ಇವೆ. ಒಂದೊಂದು ಪದ್ಯದ ಕೊನೆಯಲ್ಲೂ ಅದಕ್ಕೆ ಸ್ವರ ಪ್ರಸ್ತಾರವನ್ನು ಹಾಕಿಕೊಟ್ಟ ಗಾಯಕನ ಮತ್ತು ರಾಗದ ಸೂಚನೆ ಇರುವುದು ಗ್ರಂಥದ ವೈಶಿಷ್ಟ್ಯ. ಇದನ್ನು ಸಂಕಲಿಸಿದ ಕವಿ ಯಾರೋ, ಆಶ್ರಯಕೊಟ್ಟ ಅರಸನಾರೋ ತಿಳಿಯದು. ಪರಿಮೇಲಳಹನ ಪ್ರೌಢವಾದ ವ್ಯಾಖ್ಯಾನವಿದೆ.

'ಕಲಿತ್ತೊಹೈ': ೧೫೦ ಕವಿತೆಗಳನ್ನುಳ್ಳ ಇದು ಕಲಿಪ್ಪಾ ಛಂದದಲ್ಲಿದೆ. ಮೂರನೆಯ ಸಂಘಕ್ಕೆ ಸೇರಿದ ನಲ್ಲಂದವನಾರ್ ಸಂಕಲನಕರ್ತೃ. ಶೃಂಗಾರದ ೫ ಹಂತಗಳನ್ನು ವರ್ಣಿಸಲು ಈ ಛಂದವೂ ಅದರ ಬೇರೆ ಬೇರೆ ಪ್ರಾಚೀನ ರೂಪಗಳೂ ಸಮರ್ಥವಾಗಿವೆ. ವೈವಾಹಿಕ ಸಂಪ್ರದಾಯಗಳನ್ನೂ ಉತ್ತಮವಾದ ನೀತಿಯನ್ನೂ ಕೆಲವು ವಿಚಿತ್ರ ವಿಚಾರಗಳನ್ನೂ ಈ ಗ್ರಂಥವು ತಿಳಿಸುತ್ತದೆ. ನಯವೂ ಮಧುರವೂ ಆದ ಶೈಲಿಯಲ್ಲಿದ್ದೂ ಅರ್ಥಗರ್ಭಿತವಾಗಿ, ರೂಪಕಸಮೃದ್ಧವಾಗಿ ಪ್ರೌಢವಾಗಿರುವ ಈ ಗ್ರಂಥವು ನಾಚ್ಚಿನಾರ್ ಕಿನಿಯಾರನ ವ್ಯಾಖ್ಯಾನದಿಂದ ಅರ್ಥವಾಗುವಂತಿದೆ.

'ಅಗನಾನೂಱು': ಇದನ್ನು 'ಅಗಪ್ಪಾಟ್ಟು' 'ಅಗಮ್' ಎಂದೂ ಕರೆಯುತ್ತಾರೆ. ಈ ಗ್ರಂಥಕ್ಕೂ ಪೆರುಂದೇವನಾರ್‌ನ ನಾಂದಿ ಇರುವುದು. ೪೦೦ ಗೀತೆಗಳಿಂದ ಕೂಡಿದೆ. ಒಂದೊಂದು ಗೀತೆಯಲ್ಲಿಯೂ ೧೩ರಿಂದ ೩೧ರವರೆಗೆ ಪದ್ಯಗಳಿವೆ. ೧೪೫ ಕವಿಗಳು ಈ ಗೀತೆಗಳನ್ನು ರಚಿಸಿದ್ದಾರೆ. ಮಧುರೆಯ ರುದ್ರಸನ್ಮಾನಾರ್, ಉಗ್ರಪೆರುವಳುದಿಯ ಇಷ್ಟಕ್ಕೆ ಅನುಸಾರವಾಗಿ ಈ ಕೃತಿಯನ್ನು ಸಂಕಲಿಸಿದನು. ಮೊದಲ ೧೨೦ ಗೀತೆಗಳನ್ನು ಮದ್ದಾನೆಗಳ ಸಾಲಿಗೂ ಅನಂತರದ ೧೮೦ ಗೀತೆಗಳನ್ನು ರತ್ನಖಚಿತವಾದ ಹವಳದ ಹಾರಕ್ಕೂ ಕೊನೆಯ ೧೦೦ ಗೀತೆಗಳನ್ನು ಮುತ್ತಿನಹಾರಕ್ಕೂ ಹೋಲಿಸಿದೆ. ಈ ಗ್ರಂಥದಲ್ಲಿ ಇತರ ಸಂಕಲನಗಳಲ್ಲಿ ಇಲ್ಲದ ಒಂದು ಕ್ರಮಬದ್ಧತೆ ಕಂಡುಬರುತ್ತದೆ.

'ಪುಱನಾನೂಱು': ಸಂಘ ಸಂಕಲನಗಳಲ್ಲಿ ಕೊನೆಯದು; ಪ್ರಸಿದ್ಧವಾದ್ದು. ೪೦೦ ಕವಿತೆಗಳಿಂದ ಕೂಡಿದೆ. ಅಗವಲ್ ಛಂದಸ್ಸಿನಲ್ಲಿದೆ. ಇದಕ್ಕೆ 'ಪುಱಮ್' ಎಂದೂ 'ಪುಱಪ್ಪಾಟ್ಟು' ಎಂದೂ ಪರ್ಯಾಯ ನಾಮಗಳಿವೆ. ಚೇರ, ಚೋಳ, ಪಾಂಡ್ಯರೆಂಬ

ಮೂರು ಪ್ರಸಿದ್ಧ ರಾಜವಂಶಗಳಲ್ಲದೆ ಇತರ ಅರಸರ, ರಾಜಕುಮಾರರ, ಮಂತ್ರಿಗಳ, ಕವಿಗಳ ಅದ್ಭುತ ಸಾಹಸ ಕಥೆಗಳನ್ನೂ ಹೇಳುವ ಈ ಗ್ರಂಥ ಐತಿಹಾಸಿಕ ಮಹತ್ತ್ವ ಪಡೆದಿದೆ. ೨ ಸಾವಿರ ವರ್ಷಗಳ ಹಿಂದಿನ ತಮಿಳರ ರಾಜಕೀಯ ಸಾಮಾಜಿಕ ಇತಿಹಾಸವೇ ಇಲ್ಲಿದೆ. ಈ ಗ್ರಂಥ ೧೫೦ ಜನ ಕವಿಗಳ ರಚನೆ. ಅಂದಿನ ಕಾಲದ ಕವಿಗಳ ಆದರ್ಶಪ್ರಿಯತೆಯನ್ನೂ ಸ್ವಾಭಿಮಾನವನ್ನೂ ರಾಜಾಸ್ಥಾನಗಳಲ್ಲಿ ಅವರಿಗಿದ್ದ ಪ್ರಭಾವವನ್ನೂ ಈ ಪದ್ಯಗಳು ಬಹುವಾಗಿ ಕೊಂಡಾಡುತ್ತವೆ. ಅಸಮಗ್ರ ವ್ಯಾಖ್ಯಾನವಿದೆ. ಇಲ್ಲಿ ೧೧೮ ಜನ ಕೃತಿಕಾರರ ಹೆಸರು ಸೂಚಿತವಾಗಿದೆ; ಕೊನೆಕೊನೆಯ ಭಾಗಗಳಲ್ಲಿ ಗ್ರಂಥಪಾತಗಳೂ ಅಸಂಬದ್ಧಗಳೂ ಕಂಡುಬರುತ್ತವೆ.

'ಪತ್ತುಪ್ಪಾಟ್ಟು' : ನಿಡುಗವನಗಳ ಸಂಕಲನವಾದ ಇದು 'ಎಟ್ಟುತ್ತೊಹೈ'ಗಿಂತ ಈಚಿನದೆಂದು ಹೇಳಬೇಕು. 'ಪತ್ತುಪ್ಪಾಟ್ಟು' ದೀರ್ಘಕವನಗಳ ಸಂಕಲನ. ಈ ೧೦ ಹಾಡುಗಳಲ್ಲಿ ನಕ್ಕಿರಾರ್ ಎರಡನ್ನೂ ರುದ್ರನ್ ಕಣ್ಣನಾರ್ ಎರಡನ್ನೂ. ಇನ್ನುಳಿದ ೬ ಹಾಡುಗಳನ್ನು ಇತರ ೬ ಜನ ಕವಿಗಳೂ ರಚಿಸಿದ್ದಾರೆ. ಇದರ ಮೊದಲ ಗೀತೆಯಾದ, ನಕ್ಕಿರಾರ್ ರಚಿಸಿದ 'ತಿರುಮುರುಗಾಱ್ಱುಪ್ಪಡೈ'ಯಲ್ಲಿ ೩೧೭ ಸಾಲುಗಳಿವೆ. ಇದು ಈ ಸಂಕಲನಕ್ಕೆ ನಾಂದಿಯಂತೆ. ಇರುವುದು. ಕಾರ್ತಿಕೇಯನ ನಾನಾ ಅವತಾರಗಳ ಮತ್ತು ಅವನ ಹಲವು ಕ್ಷೇತ್ರಗಳ ವರ್ಣನೆ ಇದೆ. ನಾಚ್ಚಿನಾರ್ ಕಿನಿಯಾರ್‌ನ ಉತ್ತಮವಾದ ವ್ಯಾಖ್ಯಾನವಿದೆ. ಮುದುತ್ತಮ ಕಣ್ಣಿಯಾರ್ ರಚಿಸಿದ 'ಪೊರುನಾರಾಱ್ಱುಪ್ಪಡೈ' ಎರಡನೆಯ ಹಾಡು. ೨೪೮ ಸಾಲುಗಳ ಈ ಗೀತೆಯನ್ನು ಕರಿಕಾಲ ಚೋಳನಿಗೆ ಸಮರ್ಪಿಸಿದೆ. ಮೂರನೆಯ ಹಾಡು ನವತ್ತನಾರ್ ರಚಿಸಿದ 'ಶಿರುಪಾಣಾಱ್ಱುಪ್ಪಡೈ' ೨೬೯ ಸಾಲುಗಳದು. ನೆಲ್ಲಿಯ್ಯೈಕೋಡನ್‌ನನ್ನು ಕುರಿತದ್ದು. ೪ನೆಯದಾದ ಪೆರುಮಬಾಣಾಱ್ಱುಪ್ಪಡೈ' ಐನೂರು ಪಂಕ್ತಿಗಳಿಂದ ಕೂಡಿದ ಹಾಡು. ರುದ್ರನ್ ಕಣ್ಣನಾರ್‌ನಿಂದ ವಿರಚಿತವಾದುದು. ಇದು ಕಾಂಚೀಪಟ್ಟಣದ ವೈಭವವನ್ನೂ ಅಲ್ಲಿಯ ಜನರ ಆಚಾರವ್ಯವಹಾರವನ್ನೂ ರಾಜನಾದ ತೊಂಡೈಮಾನ್ ಇಳಂದಿರಿಯಾನ್‌ನ ಕೀರ್ತಿಯನ್ನೂ ವಿವರಿಸುತ್ತದೆ. ೧೦೩ ಸಾಲುಗಳ 'ಮುಲ್ಲೈಪ್ಪಾಟ್ಟು' ಐದನೆಯ ಹಾಡು. ಈ ಸಂಕಲನದಲ್ಲಿ ಇದೇ ಬಹು ಚಿಕ್ಕದು. ಕರ್ತೃ 'ನಪ್ಪುತ್ತನಾರ್'. ಯುದ್ಧಕ್ಕೆ ಹೋದ ಅರಸನ ಆಗಮನವನ್ನು ಸಹನೆಯಿಂದ ಏಕಾಂಗಿಯಾಗಿ ಕಾಯುತ್ತಿದ್ದ ಮರುಗನ ಅರಸಿಯ ಚಿತ್ರ ಈ ಹಾಡಿನಲ್ಲಿ ಚಿತ್ರಿತವಾಗಿದೆ. 'ಮದುರೈಕುಱಿಞ್ಜಿ' ಎಂಬುದು ಆರನೆಯ ಹಾಡು. ೭೧೨ ಕವಿತೆಗಳಷ್ಟು ದೊಡ್ಡದು. ಕವಿ ಮಾಂಗುಡಿ ಮುರುದನಾರ್. ನಾಯಕ ಪಾಂಡ್ಯರ ನೆಡುಂಚೆಳಿಯನ್. ೧೧೮ ಕವಿತೆಗಳಿಂದ ಕೂಡಿದ ೭ನೆಯ ಹಾಡು 'ನೆಡುನಲ್ವಾಡೈ' ಎಂಬುದು. ನಕ್ಕಿರಾರ್ ಕವಿ. ನೆಡುಂಚೆಳಿಯನೇ ನಾಯಕ. ಕಪಿಲನಿಂದ ರಚಿತವಾದ 'ಕುಱಿಞ್ಜಿಪ್ಪಾಟು' ೮ನೆಯದು. ೨೬೧ ಪದ್ಯಗಳ ಈ ಪ್ರಣಯ ಗೀತೆಗೆ 'ಪಿರಹತ್ತನ್' (ಆರ್ಯರಾಜನಾದ ಬೃಹಸ್ತ) ನಾಯಕ. ತಮಿಳನ ಹಿರಿಮೆಯನ್ನು ಇದು ಬಣ್ಣಿಸುತ್ತದೆ. ೯ನೆಯ 'ಪಟ್ಟಿನಪ್ಪಾಲೈ' ಕರಿಕಾಲ ಚೋಳನ ಶೌರ್ಯ ಸಾಹಸಗಳನ್ನೂ ಚೋಳ

ದೇಶದ ವೈಭವವನ್ನೂ ವರ್ಣಿಸುತ್ತದೆ. 'ಮಲೈಪಡುಕಡಾಮ್' ಅಥವಾ 'ಕೂತ್ತ ರಾಟ್ಟುಪಡೈ' ಎಂಬ ೧೦ನೆಯ ಹಾಡು ಕೌಶಿಕನಾರ್‌ನಿಂದ ರಚಿತವಾದ್ದು. ಇದರಲ್ಲಿ ನನ್ನನ್ ಎಂಬ ರಾಜನ ವರ್ಣನೆಯೂ ತಮಿಳುನಾಡಿನ ವಿವಿಧ ಭಾಗಗಳ ನಾಗರಿಕ ಜೀವನದ ವರ್ಣನೆಯೂ ಇದೆ.

ಈ ೧೦ ಹಾಡುಗಳಲ್ಲಿಳ ಶೃಂಗಾರವನ್ನು ಕುರಿತರೆ, ಇನ್ನುಳಿದ ೬ ಆಶ್ರಯದಾತರನ್ನು ಸ್ತುತಿಸುವ ಹಾಡುಗಳು. ಆದ್ದರಿಂದಲೇ ಇವುಗಳಲ್ಲಿ ದೇಶದ ವರ್ಣನೆ, ರಾಜರ ವೈಭವ, ಕವಿಗಳ ಆತ್ಮವಿಷಯ ಹೇರಳವಾಗಿ ಬಂದಿದೆ. ಈ ಹಾಡುಗಳ ಶೈಲಿ ವರ್ಣನಾತ್ಮಕ ವಾದುದು. ಪ್ರಕೃತಿಯ ಮನೋಹರ ಚಿತ್ರಗಳನ್ನು ಇಲ್ಲಿ ನಾವು ಕಾಣಬಹುದು. ಗಂಭೀರವೂ ನಿರ್ದಿಷ್ಟವೂ ಆದ ಆಲೋಚನಾಲಹರಿ ಇಲ್ಲಿ ಕಂಡುಬರುತ್ತದೆ. ಪ್ರಾಚೀನ ಭಾಷಾಶೈಲಿಯ ಚಿತ್ರ ವಿಚಿತ್ರವಾದ ವ್ಯಾಕರಣಾಂಶಗಳ ತೊಂದರೆಯನ್ನು ದಾಟಿದರೆ, ಕಾವ್ಯವು ತುಂಬ ಆಸ್ವಾದ್ಯವಾಗುತ್ತದೆ.

'ಪದಿನೆಣ್ ಕೀಟ್ಟಿಕ್ಕಣಕ್ಕು' : ಇದು ೧೮ ಸಣ್ಣ ಸಣ್ಣ ಕಾವ್ಯಗಳ ಒಂದು ಸಮೂಹ. ನೀತಿಧರ್ಮಗಳನ್ನು ಉಪದೇಶಿಸುವುದೇ ಪ್ರಧಾನ ಉದ್ದೇಶವಾಗಿ ಉಳ್ಳ ಈ ಸಂಕಲನ ದಲ್ಲಿ ಭಿನ್ನ ಧರ್ಮಗಳಿಗೆ ಸೇರಿದ ಕವಿಗಳಿದ್ದಾರೆ. ಸಂಘ ಸಾಹಿತ್ಯದ ಸಂಕಲನಗಳಲ್ಲಿ ಇದು ಮೂರನೆಯದು. ಈ ಹದಿನೆಂಟು ಉಪಕಾವ್ಯಗಳು : (೧) ನಾಲಡಿಯಾರ್ (ಚೌಪದಿ) ಮೊದಲನೆಯದು ; ಭಿನ್ನ ಕರ್ತೃಕವಾದುದು. ಒಂದು ಬಾರಿ ತಮಿಳುನಾಡಿ ನಲ್ಲಿ ಬೀರಕ್ಷಾಮ ತಲೆದೋರಿದಾಗ ೮ ಸಾವಿರ ಜಿನಮುನಿಗಳು ಪಾಂಡ್ಯರಾಜನ ಆಸ್ಥಾ ನಕ್ಕೆ ಹೋಗಿ ಅವನ ರಕ್ಷಣೆಯಲ್ಲಿದ್ದರು. ಕೆಲವು ಕಾಲಾನಂತರ ತಮ್ಮ ನಾಡಿನಲ್ಲಿ ಸುಭಿಕ್ಷ ಉಂಟಾಗಲು, ಅವರಿಗೆ ತಮ್ಮ ತಮ್ಮ ಊರುಕೇರಿಗಳಿಗೆ ಮರಳುವ ಮನಸ್ಸಾ ಯಿತು. ಆದರೆ ಪಾಂಡ್ಯರಾಜನಿಗೆ ಅವರನ್ನು ಕಳಿಸಿಕೊಡಲು ಇಷ್ಟವಾಗಲಿಲ್ಲ. ಅದಕ್ಕಾಗಿ ಅವರೆಲ್ಲರೂ ಒಟ್ಟುಗೂಡಿ ಮಾತನಾಡಿಕೊಂಡು ಒಂದು ದಿನ ರಾತ್ರಿ ಪಾಂಡ್ಯನಾಡನ್ನು ಬಿಟ್ಟು ಹೊರಟುಹೋದರು. ಹೋಗುವಾಗ ತಾವು ತಂಗಿದ್ದ ಬಿಡದಿಗಳಲ್ಲಿ ಒಂದೊಂದು ಬಿಡಿ ಪದ್ಯ ಬರೆದ ಓಲೆಯನ್ನು ಬಿಟ್ಟುಹೋಗಿದ್ದರು. ಅವುಗಳಲ್ಲಿ ಅತ್ಯುತ್ತಮವಾದವು, ಕಾಲನ ದಾಳಿಯಲ್ಲಿ ಸಿಲುಕಿ ಉಳಿದವು ಈ ೪೦೦ ಎಂದು ತಿಳಿಯಲಾಗಿದೆ. ಪದ್ಮನಾರ್ ಈ ೪೦೦ ಪದ್ಯಗಳನ್ನು ೪೦ ಅಧಿಕಾರಗಳಲ್ಲಿ 'ತಿರುಕ್ಕುಱಳ್'ನ ಮಾದರಿಯಲ್ಲಿ ಸಂಕಲಿ ಸಿದ್ದಾನೆ; ೧೩ ಧರ್ಮವನ್ನು, ೨೬ ಅರ್ಥವನ್ನು, ೧ ಕಾಮವನ್ನು ಕುರಿತ ಅಧಿಕಾರ ಗಳಾಗಿವೆ. ಜನಜೀವನದ ದೃಶ್ಯಗಳೂ ಪ್ರೌಢಶೈಲಿ ಭಾವಗಾಂಭೀರ್ಯಗಳೂ ಕೃತಿಯ ಶ್ರೇಷ್ಠತೆಗೆ ಕಾರಣವಾಗಿವೆ. (೨) ನಾನ್ಮಣಿಕ್ಕಡಿಗೈ : ಇದು ನಾಲ್ಕು ಸಾಲಿನ ೧೦೧ ವೆಣ್ಬಾ ಪದ್ಯಗಳಿಂದ ಕೂಡಿದ ಕೃತಿ. ವಿಳಂಬಿ ನಾಗನಾರ್ ಎಂಬ ವೈಷ್ಣವ ಕವಿ ಇದರ ಕರ್ತೃ. ನಾಣ್ಣುಡಿಯಂತಹ ಪ್ರತಿ ಪದ್ಯದಲ್ಲಿಯೂ ರತ್ನಗಳಂತಹ ನಾಲ್ಕು ಸಾಲುಗಳು ಅಮೂಲ್ಯ ವಾದ ನೀತಿಯನ್ನು ಸಾರುತ್ತವೆ. ಅದರಿಂದಲೇ ಇದು 'ನಾಲ್ಕು ರತ್ನಗಳಡಗಿದ ಆಭರಣ' ಎನಿಸಿದೆ. (೩) ಕಾರ್‌ನಾಱ್ಪದು : ಇದನ್ನು ಮದುರೈಕ್ಕಣ್ಣನ್ ಕೂತ್ತನಾರ್ ರಚಿಸಿದ. ೪೦

ವೆಣ್ಬಾ ಪದ್ಯಗಳಿವೆ. ಕಾರ್ಗಾಲದ ದಿನಗಳನ್ನು ವರ್ಣಿಸುವ ಕೃತಿ ಇದು. (೪) ಕಳವೞಿ ನಾಱ್ಪದು : ಕೞುಮುಲದ ಕೊಚ್ಚಂಗಣ್ಣಾನ್ ಎಂಬ ಚೋಳ ರಾಜನಿಗೂ ಕಣ್ಕೈಕಾಲಿದುಂ ಪೊಱೈ ಎಂಬ ಚೇರರಾಜನಿಗೂ ನಡೆದ ಯುದ್ಧವನ್ನು ಈ ಕಾವ್ಯ ೫೦ ಪದ್ಯಗಳಲ್ಲಿ ವರ್ಣಿಸುತ್ತದೆ. ಮೈನವಿರೇಳಿಸುವಂತಹ ಈ ಯುದ್ಧ ವರ್ಣನೆ ಚೋಳರಾಜನ ವಿಜಯ ವನ್ನೂ ಚೇರರಾಜನ ಕೈಸೆರೆಯನ್ನೂ ಬಣ್ಣಿಸುತ್ತದೆ. ಚೇರರಾಜನ ಆಸ್ಥಾನಕವಿಯೇ ಈ ಕಾವ್ಯವನ್ನು ರಚಿಸಿ, ಚೋಳರಾಜನನ್ನು ಮೆಚ್ಚಿಸಿ, ಪ್ರತಿಫಲವಾಗಿ ಚೇರರಾಜನ ಬಿಡುಗಡೆಯ ಅಪ್ಪಣೆಯನ್ನು ಪಡೆದನೆಂದೂ, ಆದರೆ ಆ ವೇಳೆಗಾಗಲೇ ಚೇರರಾಜನು ಬಾಯಾರಿಕೆಯಿಂದ ಸೆರೆಮನೆಯಲ್ಲಿ ಮೃತನಾಗಿದ್ದರಿಂದ ಕವಿಯ ಪ್ರಯತ್ನ ನಿಷ್ಫಲ ನಾಯಿತೆಂದೂ ಹೇಳುತ್ತಾರೆ. ಕವಿ ಪೊಯ್‌ಗೈಯಾರ್. ಈ ಕವಿಯೇ ಆ ಹೆಸರಿನ ಆಳ್ವಾರ್ ಎಂದು ಕೆಲವರು ಅಭಿಪ್ರಾಯಪಡುತ್ತಾರೆ. (೫) ಇನಿಯದು ನಾಱ್ಪದು : ಕವಿ ಮದುರೈ ಪೂದನ್ ಶೇನ್ದನಾರ್. ೪೦ ವೆಣ್ಬಾ ಪದ್ಯಗಳಿವೆ. ಪ್ರತಿಯೊಂದರಲ್ಲೂ ಸ್ವಾರಸ್ಯವಾದ ನಾಲ್ಕು ಲೋಕನೀತಿವಾಕ್ಯಗಳಿರುತ್ತವೆ. (೬) ಇನ್ನಾನಾಱ್ಪದು : ೪೦ ವೆಣ್ಬಾ ಪದ್ಯಗಳ ಈ ಕೃತಿಯ ಕರ್ತೃ ಕಪಿಲ. ಮಾನವನ ಹಿತಾಹಿತ ವಿಚಾರವೇ ಇಲ್ಲಿಯ ವಿಷಯ. (೭) ಐನ್ದಿಣೈ : ಈ ಸಾಹಿತ್ಯರೂಪದಲ್ಲಿ ಐನ್ದಿಣೈ ಐಮ್ಬದು (೫೦); ತಿಣೈಮಾಲೈ ನೂಱ್ಱೈಮ್ಬದು (೧೫೦), ಐನ್ದಿಣೈ ಎೞುಪದು (೭೦), ತಿಣೈಮೊೞಿ ಐಮ್ಬದು (೫೦) ಎಂಬ ಉಪಕಾವ್ಯಮಾಲೆಗಳಿವೆ. ಇವು ಅಗಪ್ಪೊರುಳನ್ನು ವಿವರಿಸುತ್ತವೆ.

(೮) ತಿರುಕ್ಕುಱಳ್ : ತಮಿಳುವೇದ, ಉತ್ತರವೇದ, ದೈವಗ್ರಂಥ ಎಂದು ಮೆಚ್ಚಿಕೆಯ ಹೆಸರುಗಳಿಂದ ತಮಿಳರು ಕೊಂಡಾಡುವ ಗ್ರಂಥವಿದು. ಕರ್ತೃ ತಿರುವಳ್ಳುವರ್. ಈತ ಮದರಾಸಿನ ಮೈಲಾಪುರದಲ್ಲಿ ಹುಟ್ಟಿ, ಮಧುರೆಯಲ್ಲಿ ಬಾಳಿದನೆಂದು ಪ್ರತೀತಿ. ಮಡದಿ ಸಾಧ್ವಿಯಾದ ವಾಸುಕಿಯಮ್ಮಾಳ್. ಕವಿಯ ಕಾಲ ಕ್ರಿ.ಶ. ೧ನೆಯ ಶತಮಾನ ಎಂದು ಕೆಲವರ ಗ್ರಹಿಕೆ.

'ತಿರುಕ್ಕುಱಳ್' ಕಡೆಯ ಸಂಘಕಾಲದ ಗ್ರಂಥಗಳಲ್ಲಿ ಒಂದು. ಇದರ ಪದ್ಯಗಳೆಲ್ಲ ಕುಱಳ್‌ವೆಣ್ಬಾ ಛಂದಸ್ಸಿನಲ್ಲಿರುವುದರಿಂದ ಇಡಿಯ ಗ್ರಂಥಕ್ಕೇ 'ಕುಱಳ್' ಎಂಬ ಹೆಸರು ಬಂದಿದೆ. ಇದರಲ್ಲಿ ಅಱತ್ತುಪ್ಪಾಲ್ (ಧರ್ಮ ವಿಭಾಗ); ಪೊರುಟ್ಪಾಲ್ (ಅರ್ಥ ವಿಭಾಗ) ಕಾಮತ್ತುಪ್ಪಾಲ್ (ಕಾಮ ವಿಭಾಗ) ಎಂಬ ಮೂರು ವಿಭಾಗಗಳಿವೆ. ಇದರಿಂದ ಮುಪ್ಪಾಲ್ ಎಂದರೆ ತ್ರಿವರ್ಗ ಪ್ರತಿಪಾದನೆಯ ಗ್ರಂಥವೆನಿಸಿದೆ. ಕೊನೆಯ ವೀಡು (ಮೋಕ್ಷ) ಕಟ್ಟುಪಾಡಿಗೆ ಒಳಪಡದ ಕಾರಣ ಸೂಚನೆಯಷ್ಟೇ ಕೊನೆಯ ಅಧ್ಯಾಯ ಗಳಲ್ಲಿದೆ. ಅಧ್ಯಾಯವೊಂದಕ್ಕೆ ಹತ್ತು ಪದ್ಯಗಳಂತೆ ಒಟ್ಟು ೧೩೩ ಅಧ್ಯಾಯಗಳಿವೆ. ಆಲವೂ ಜಾಲಿಯೂ ಹಲ್ಲಿಗೆ ಬಿಗಿ, ನಾಲಡಿಯೂ ಈರಡಿಯೂ (ಕುಱಳ್) ಮಾತಿಗೆ ಬಿಗಿ ಎಂಬ ಗಾದೆಯಿಂದ 'ಕುಱಳ್'ನ ಹಿರಿಮೆ ಗೊತ್ತಾಗುತ್ತದೆ. 'ಕುಱಳ್'ನಿಂದ ಭಾವ ಗಳನ್ನೂ ಉಕ್ತಿಗಳನ್ನೂ ಎತ್ತಿ ಬಳಸಿಕೊಂಡಿಲ್ಲದ ತರುವಾಯದ ತಮಿಳು ಗ್ರಂಥಗಳೇ ಇಲ್ಲವೆನ್ನಬಹುದು. ತಮಿಳು ಸಾಹಿತ್ಯದಲ್ಲಿ ಇದೊಂದು ಶ್ರೇಷ್ಠ ರತ್ನ.

ಈ ಕವಿಯ ಧರ್ಮ ಯಾವುದು ಎಂಬ ಬಗ್ಗೆ ಭಿನ್ನಾಭಿಪ್ರಾಯಗಳಿದ್ದು, ಜೈನನೆಂದು ಕೆಲವರೂ ಶೈವನೆಂದೂ ಕೆಲವರೂ ಸಂಕರಜಾತಿಯವನೆಂದು ಕೆಲವರೂ ಹೇಳುತ್ತಾರೆ. ಹೀಗೆಯೇ ವೃತ್ತಿಯ ವಿಷಯದಲ್ಲಿ ನೆಯ್ಗೆಯವನೆಂದೂ ರೈತನೆಂದೂ ಅಧಿಕಾರಿಯೆಂದೂ ಊಹಾಪೋಹಗಳಿವೆ. ಜನ್ಮಸ್ಥಳ ಜೈನಕೇಂದ್ರವಾಗಿದ್ದ ಮೈಲಾಪುರವೋ ಮಧುರೆಯೋ ಇರಬೇಕು ಎನ್ನುತ್ತಾರೆ. ಆದರೆ ಕಾವ್ಯದಲ್ಲಿ ಆತನು ತನ್ನ ಅಧಿದೈವವನ್ನು ಕುರಿತು 'ಮಲರ್ ಮಿಶೈವಕಿನಾನ್', 'ಅರವಾಳಿ ಅಂಡವನ್', 'ಎಣ್‌ಗುಣತ್ತಾನ್' ಎಂಬುದಾಗಿ ಅರ್ಹಂತನಿಗೆ ಸಲ್ಲುವ ವಿಶೇಷಣಗಳಿಂದ ಹೇಳಿರುವುದರಿಂದ ಆವನು ಜೈನನಿರಬಹುದು. ಇದರ ಪ್ರಾಚೀನ ವ್ಯಾಖ್ಯಾನಕಾರರೆಲ್ಲ ಜೈನರೆಂಬುದೂ 'ನೀಲಕೇಶಿ'ಯ ವ್ಯಾಖ್ಯಾಕಾರ ನಾದ ಸಮಯದಿವಾಕರನು 'ಕುಱಳ್' ಗ್ರಂಥವನ್ನು ಆಧಾರವೆಂದು ಒಪ್ಪಿಕೊಂಡಿರು ವುದೂ ಈ ಭಾವನೆಗೆ ಪೂರಕವಾಗಿದೆ. ಕೆಲವರ ಮತದಂತೆ ಇದಕ್ಕೆ ಒಟ್ಟು ೧೨ ವ್ಯಾಖ್ಯಾನ ಗಳಿವೆ ಎನ್ನುತ್ತಾರೆ. ಪ್ರಪಂಚದ ಮುಖ್ಯವಾದ ಭಾಷೆಗಳಿಗೆಲ್ಲ ಈ ಗ್ರಂಥ ಅನುವಾದ ವಾಗಿದೆ. ಸಾಸಿವೆಯಲ್ಲಿ ಸಪ್ತಸಾಗರಗಳ ಸಾರವನ್ನು ಈ ಕವಿ ತುಂಬಿದ್ದಾನೆಂದು ಪ್ರಶಂಸೆ. ವಾಮನ ಮೂರು ಹೆಜ್ಜೆಗಳಲ್ಲಿ ಲೋಕವನ್ನು ಅಳೆದಂತೆ 'ಕುಱಳ್' ತನ್ನ ನಾಲ್ಕು ಪಾದ ಗಳಲ್ಲಿ ಲೋಕವನ್ನು ಅಳೆದಿದೆ ಎನ್ನುತ್ತಾರೆ. ಸರಳತೆ ಸ್ಪಷ್ಟತೆ ಸಂಗ್ರಾಹಕತೆಗಳು ಕಾರಣ ವಾಗಿ, ನಾಣ್ಣುಡಿಗಳಂತೆ ತಿರುವಳ್ಳುವರ್ ನೀತಿವಾಕ್ಯಗಳು ಜನರಲ್ಲಿ ಪ್ರಚಾರದಲ್ಲಿವೆ. ತಿರುವಳ್ಳುವರ್ ಸಂಸ್ಕೃತದ ಮನು, ಕೌಟಿಲ್ಯ, ಕಾಮಂದಕ, ವಾತ್ಸ್ಯಾಯನ ಮುಂತಾ ದವರ ಗ್ರಂಥಗಳನ್ನು ವ್ಯಾಸಂಗ ಮಾಡಿದಂತೆ ಕಂಡುಬರುವುದು. ಆ ಕೆಲವು ಮೂಲಗಳಿಂದ ವಿಷಯ ಶೇಖರಣೆ ಮಾಡಿದ್ದರೂ ಅವನ್ನು ಪ್ರಭಾವಶಾಲಿಯಾಗುವಂತೆ ಸ್ಫುಟವಾಗಿ ಸಿದ್ದಾನೆ. ಆತ ನಿರೂಪಿಸುವ ಮಾನವೀಯ ಪ್ರೇಮ, ಹೃದಯವೈಶಾಲ್ಯ, ಸೀಮಿತ ಕಾಮ ಎಂದೆಂದಿಗೂ ಆದರ್ಶಪ್ರಾಯವಾದವು. ನಾದಮಾಧುರ್ಯ, ವಿವೇಚನಾಪರತೆ, ಉತ್ತಮ ಸಂಸ್ಕಾರ, ಲಘುಹಾಸ್ಯ ಎಲ್ಲ ಸೇರಿರುವುದರಿಂದ ಆತ ನಿರೂಪಿಸುವ ನೀತಿ ಜ್ಞಾನ ವೈರಾಗ್ಯಗಳು ತಮಿಳುದೇಶದಲ್ಲೆಲ್ಲ ಆತನಿಗೆ ಪೂಜ್ಯತೆಯನ್ನು ತಂದುಕೊಟ್ಟಿವೆ. ಈ ಗ್ರಂಥವನ್ನು ತಿರುವಳ್ಳುವರ್ ತನ್ನ ಸ್ನೇಹಿತನೂ ಸಿಂಹಳದ ದೊರೆಯೂ ಆದ ಏಳಾಳನಿಗಾಗಿ ರಚಿಸಿದನೆಂದೂ ಕವಿಯ ಕಾಲದಲ್ಲಿಯೇ ಸಂಘಕವಿಗಳು 'ತಿರುವಳ್ಳುವ ಮಾಲೆ' ಎಂಬ ಸ್ತೋತ್ರಗೀತೆಗಳನ್ನು ರಚಿಸಿದರೆಂದು ತಿಳಿಯುತ್ತದೆ.

(೯) ತಿರಿಕಡುಗಂ : ೧೦೦ ಪದ್ಯಗಳ ಕೃತಿ. ನಲ್ಲಾದನಾರ್ ಕರ್ತೃ. ಶುಂಠಿ, ಮೆಣಸು, ಹಿಪ್ಪಲಿಗಳು ಹೇಗೆ ಜೀವಶಕ್ತಿಯನ್ನು ಉಳಿಸಿ ಉತ್ತೇಜಿಸಿ ಬೆಳಸಲು ಶಕ್ತವಾದ ಸಂಬಾರ ಗಳೋ ಹಾಗೆಯೇ ಮೂರು ಬಗೆಯಾದ ಸದ್ಗುಣಗಳು ಭವರೋಗಕ್ಕೆ ಭೇಷಜಗಳಾಗಿವೆ ಎಂಬುದು ಈತನ ಪ್ರತಿಪಾದನೆಯ ರೀತಿ. (೧೦) ಆಚಾರಕ್ಕೋವೈ : ಇದು ಒಂದು ನೀತಿಗ್ರಂಥ. ಪೆರುವಾಯಿನ್ ಮುಳ್ಳಿ ೧೦೦ ಪದ್ಯಗಳಲ್ಲಿ ಲೌಕಿಕ ಆಚಾರ ನೀತಿಗಳನ್ನು ಇಲ್ಲಿ ತಿಳಿಸಿದ್ದಾನೆ. ಸಂಸ್ಕೃತದ ನಾನಾ ಲೇಖಕರಿಂದ ರಚಿತವಾದ ನಿಬಂಧಗಳನ್ನು ಆಧಾರವಾಗಿಟ್ಟುಕೊಂಡು ಮಾನವನ ವೈಯಕ್ತಿಕ ಮತ್ತು ಸಾರ್ವತ್ರಿಕ ಜೀವನ, ಆತನ

ಊಟ ಉಡುಗೆಗಳ, ಆಹಾರವಿಹಾರಗಳ ಪರಿಶುದ್ಧತೆಯನ್ನು ಇಲ್ಲಿ ವಿವರಿಸಿದೆ. (೧೧) ಪಟಿನೊಟಿ ನಾನೂಱು : ಪಟಿನೊಟಿ ಎಂದರೆ ಪ್ರಾಚೀನವಾದ ಜ್ಞಾನ. ಮುನ್ ತುಱೈ ಅಱೈಯರ್ ಎಂಬ ಜೈನಕವಿ ಇದರಕರ್ತೃ. ೪೦೦ ವೆಣ್ಬಾಪದ್ಯಗಳಲ್ಲಿ ನೀತಿಯನ್ನೂ ಲೌಕಿಕಜ್ಞಾನವನ್ನೂ ಹೇಳಿದೆ. ಪ್ರತಿ ಪದ್ಯದಲ್ಲಿಯೂ ಒಂದೊಂದು ಗಾದೆ ಪ್ರಾತಿದೆ. "ನಾಯಿ ಕಂಡಾಗ ಕಲ್ಲೇ ಸಿಕ್ಕದು", "ತುಂಬಿದ ಕೊಡ ತುಳುಕುವುದಿಲ್ಲ", "ಕೋತಿಯ ಕೈಗೆ ಕೊಳ್ಳಿ ಸಿಕ್ಕಿದಂತೆ", "ಸಾವಿರ ಕಾಗೆಯಾದರೂ ಒಂದೇ ಕಲ್ಲು ಸಾಕು" ಮೊದಲಾದ ನಾಣ್ಣುಡಿಗಳು ಇಲ್ಲಿ ತುಂಬಿವೆ. (೧೨) ಸಿಱುಪಞ್ಚಮೂಲಮ್ : ಸಂಘಕಾಲದ ಕವಿ ಮಾಮೂಲನಾರ್ ರಚಿಸಿದ ಒಂದು ಸಣ್ಣ ಗ್ರಂಥ. ಪ್ರತಿಯೊಂದು ಪದ್ಯದಲ್ಲಿಯೂ ಸುಜ್ಞಾನಕ್ಕೆ ಬೇಕಾದ ಐದು ಬೇರುಗಳನ್ನು ಪರಿಚಯಿಸಿದೆ. (೧೩) ಮುದುಮೊಱಿಕ್ಕಾಞ್ಚಿ : ಪುರಿಣೈಕ್ಕಿಟಿವನಾರ್ ಬರೆದ ಸರಳ ಶೈಲಿಯ ನೀತಿಗ್ರಂಥ. ಇದರಲ್ಲಿ ೧೦ ಪದ್ಯಗಳ ೧೦ ಭಾಗಗಳಿವೆ. 'ಕುಱಳ್' ಗ್ರಂಥದ ಪ್ರಭಾವವಿದೆ. (೧೪) ಏಲಾದಿ : ೮೧ ಪದ್ಯಗಳಿವೆ. ಪ್ರತಿ ಚೌಪದಿಯಲ್ಲಿಯೂ ಐದಾರು ನೀತಿವಾಕ್ಯಗಳು ಅಡಕವಾಗಿವೆ. ಗ್ರಂಥದ ಹೆಸರು 'ಏಲಾದಿ' (ಏಲಕ್ಕಿ) ಎಂದಿರುವುದರಿಂದ, ಈ ಕೃತಿಯು ಏಲಕ್ಕಿ, ಕರ್ಪೂರ, ಅಗಿಲು, ಶ್ರೀಗಂಧ, ಜೇನು ಇವೈದನ್ನೂ ಸೇರಿಸಿ ಮಾಡಿದ ಸುವಾಸಿತ ತೈಲದ ಹಾಗೆ ಉಪಯುಕ್ತವೆಂದು ಇದರ ಕರ್ತೃ ಕಣಿಮೇದಾವಿಯಾರ್- ತಿಳಿದಂತೆ ತೋರುತ್ತದೆ. (೧೫) ಇನ್ನಿಲೈ ಅಥವಾ ಕೈನ್ನಿಲೈ : ಸಂಕಲನ ಗ್ರಂಥ. ಇದನ್ನು ಪೊಯ್‌ಗೈಯಾರ್ ರಚಿಸಿದನೆಂದು ಕೆಲವರು ಹೇಳುತ್ತಾರೆ. ೪೫ ಪದ್ಯಗಳಿವೆ. ಚತುರ್ವಿಧ ಪುರುಷಾರ್ಥವೇ ಇದರ ಹುರುಳು. ಮಧುರೈಪ್ಪೂದನಾರ್ ಸಂಕಲನ ಕರ್ತೃ. (೧೬) ಮುತ್ತೊಳ್ಳಾಯಿರಮ್ : ಪ್ರಾಚೀನ ತಮಿಳು ಗ್ರಂಥಗಳಲ್ಲಿ ಇದು ಒಂದು ಶ್ರೇಷ್ಠವಾದ ವೆಣ್ಬಾ ಸಂಕಲನ. ಚೇರ ಚೋಳ ಪಾಂಡ್ಯರಾಜನ ಕೀರ್ತಿಯನ್ನು ಕುರಿತು ಪ್ರತಿ ಪೀಳಿಗೆಗೂ ೯೦೦ರಂತೆ ಒಟ್ಟು ೨,೭೦೦ ಪದ್ಯಗಳಿರುವ ಕಾವ್ಯ. ಆದರೆ ಈಗ ಕೆಲವು ಪದ್ಯಗಳು ಮಾತ್ರ ಸಿಕ್ಕುತ್ತವೆ.

ತಮಿಳು ಸಂಘಕಾಲದಲ್ಲಿ ಹಲವರು ಕವಿಗಳೂ ಕವಯಿತ್ರಿಯರೂ ಇದ್ದರು. ಇವರಿಗೆ ಸಾಮಾನ್ಯವಾಗಿ ಚೇರ ಚೋಳ ಪಾಂಡ್ಯರಾಜರು ಪೋಷಕರಾಗಿರುತ್ತಿದ್ದರು. ಈ ಅರಸರಲ್ಲಿಯೂ ಅನೇಕರು ಸ್ವಯಂ ಕವಿಗಳಾಗಿ ಆಶ್ರಯದಾತರಾಗಿ ಮೆರೆದಿರುವುದು ತಮಿಳು ಸಾಹಿತ್ಯ ಚರಿತ್ರೆಯಲ್ಲಿ ಕಾಣಬರುತ್ತದೆ.

## ಬೌದ್ಧಶ್ರಮಣರ ಕಾಲ (೧೦೧-೬೦೦)

ಉತ್ತರ ದೇಶದಿಂದ ಬೌದ್ಧರೂ ಶ್ರಮಣರೂ ತೆಂಕಣ ಕಂಚಿ, ಮಧುರೆ, ಆನೆಮಲೆ ಮುಂತಾದ ಸ್ಥಳಗಳಲ್ಲಿ ಬಂದು ತಂಗಿದರು. ಕಾಲಕ್ರಮದಲ್ಲಿ ಮಠಗಳನ್ನೂ ಸ್ಥಾಪಿಸಿದರು. ಆಗ ಪಂಚಮಹಾಕಾವ್ಯಗಳು (ಐಮ್ಪೆರುಙ್ ಕಾಪ್ಪಿಯಙ್ಗಳ್) ರಚನೆಯಾದುವು. ಸಂಸ್ಕೃತದಲ್ಲಿರುವಂತೆಯೇ ಅಷ್ಟಾದಶವರ್ಣನೆಗಳುಳ್ಳ, ಧರ್ಮಾರ್ಥಕಾಮುಗಳನ್ನು ವಿವರಿ

ಸುವ ಕಾವ್ಯಗಳೇ ತಮಿಳಿನಲ್ಲಿಯೂ ಮಹಾಕಾವ್ಯಗಳೆನಿಸಿಕೊಳ್ಳುತ್ತವೆ. 'ಶಿಲಪ್ಪದಿ ಕಾರಮ್' 'ಮಣಿಮೇಗಲೈ' 'ಚಿನ್ತಾಮಣಿ' 'ಕುಣ್ಡಲಕೇಶಿ' 'ವಳಯಾಪತಿ'—ಇವೇ ತಮಿಳು ಸಾಹಿತ್ಯದಲ್ಲಿ ಸುಪ್ರಸಿದ್ಧವಾದ ಪಂಚ ಮಹಾಕಾವ್ಯಗಳು; ಹೀಗೆಯೇ ಕಿರು ಕಾವ್ಯಗಳೂ ಕೆಲವಿವೆ.

'ಶಿಲಪ್ಪದಿಕಾರಂ' : ಇದನ್ನು ರಚಿಸಿದವನು. ಇಳಙ್ಗೋವಡಿಗಳ್ ಎಂಬ ಮಹಾಕವಿ. ಈತ ಈಗಿನ ತಿರುವಾಂಕೂರಿನ ರಾಜವಂಶವಾದ ಚೇರಕುಲದ ಶೆಙ್ಗುಟ್ಟುವನ್ ದೊರೆಯ ತಮ್ಮ. ಈತನ ಕಾಲ ಕ್ರಿ.ಶ. ೨ನೆಯ ಶತಮಾನವೆಂದು ಹೇಳುತ್ತಾರೆ. ಸಿಂಹಳ ದ್ವೀಪದ ಅರಸನಾಗಿದ್ದ ಇಮ್ಮಡಿ ಗಜಬಾಹು ಈತನ ಸಮಕಾಲೀನನೆಂದು, ಈಚಿನ ಸಂಶೋಧನೆಗಳಿಂದ ಇದು ೮ನೆಯ ಶತಮಾನದ ಗ್ರಂಥವೆಂದು ತಿಳಿದಿದೆ. (ಮುತ್ತವಿಳು) ಕಾವ್ಯ, ಸಂಗೀತ, ರೂಪಕ ಹೀಗೆ ತ್ರಿಕಾಂಡವುಳ್ಳದ್ದು ಈ ಕೃತಿ. ಒಂದೊಂದು ಕಾಂಡ ದಲ್ಲಿಯೂ ಮುಚ್ಚುವೈ ಎಂದರೆ ಶೃಂಗಾರ, ವೀರ, ಕರುಣರಸ ಪ್ರಧಾನವಾಗಿವೆ. ಚೇರ ಚೋಳ ಪಾಂಡ್ಯರಾಜರ ಹಿರಿಮೆ ಕ್ರಮವಾಗಿ ವರ್ಣಿತವಾಗಿದೆ. ಈ ಗ್ರಂಥಕರ್ತೃವನ್ನು ಕೆಲವರು ಜೈನನೆನ್ನುತ್ತಾರೆ, ಕೆಲವರು ಶೈವನೆನ್ನುತ್ತಾರೆ. ಆತ ಜೈನನಾಗಿರಬೇಕು ಎಂಬು ದಕ್ಕೆ ಹೆಚ್ಚಿನ ಆಧಾರಗಳು ಇವೆ.

ಈ ಮಹಾಕಾವ್ಯದ ಕಥೆ ಒಂದು ಕಾಲಂದುಗೆಯ ಸುತ್ತ ನೇಯಲ್ಪಟ್ಟದ್ದು. ವಿಧಿ ವಿಲಾಸ, ಪತಿವ್ರತಾಮಹಾತ್ಮ್ಯ, ಕರ್ಮಫಲಗಳನ್ನು ಕೋವಲನ್ ಮತ್ತು ಕನ್ನೆಯರ ದುರಂತ ಕಥೆಯ ಮೂಲಕ ಪ್ರತಿಪಾದಿಸುತ್ತದೆ. ಕೋವಲನ್ ಒಬ್ಬ ಶ್ರೀಮಂತ ವಣಿಕ. ಅವನು ವೇಶ್ಯೆಯಾದ ಮಾಧವಿಯಲ್ಲಿ ಅನುರಕ್ತನಾಗಿ ತನ್ನ ಸರ್ವಸ್ವವನ್ನೂ ತೆತ್ತು ರಿಕ್ತನಾಗುವನು. ಆದರೂ ಧರ್ಮಪತ್ನಿ ಕನ್ನಗಿಯು ಪತಿಯಲ್ಲಿ ವಿಶೇಷ ಭಕ್ತಿಯುಳ್ಳವ ಳಾದ್ದರಿಂದ, ಅವನನ್ನು ಮನ್ನಿಸಿ, ಜೀವನನಿರ್ವಹಣೆಗಾಗಿ ತನ್ನ ಕಾಲಂದುಗೆಯನ್ನು ತೆಗೆದು ಕೊಡುವಳು. ಅವರಿಬ್ಬರೂ ಕಾವೇರಿ ಪಟ್ಟಣದಿಂದ ಹೊರಟು ಮಧುರೆಗೆ ಅದನ್ನು ಮಾರಲು ಬರುವರು. ಕೋವಲನ ಕೈಯಲ್ಲಿ ಅಂದುಗೆಯನ್ನು ಕಂಡು ಅಕ್ಕಸಾಲೆಯು ಇದು ಮಹಾರಾಣಿಯ ಕಳುವಾದ ಕಾಲಂದುಗೆ ಎಂದು ರಾಜನಿಗೆ ದೂರಿಡುವನು. ಅರಸನಾದರೋ ಈ ನಿರಪರಾಧಿಯನ್ನು ಕೊಲ್ಲಿಸುವನು. ಪತಿವ್ರತಾ ಶಿರೋಮಣಿಯಾದ ಕನ್ನಗಿ ಪತಿವಧೆಯನ್ನು ಕೇಳಿ ನಡೆದ ಅನ್ಯಾಯಕ್ಕೆ ನೊಂದು ಶಪಿಸುವಳು. ಅವಳ ಶಾಪ ದಿಂದ ಮಧುರಾ ಪಟ್ಟಣವು ಭಸ್ಮವಾಗಿ ಪಾಂಡ್ಯ ರಾಜ–ರಾಣಿಯರು ನಾಶವಾಗುವರು. ಕನ್ನಗಿಯು ಪತಿಯ ಶರೀರದೊಡನೆ ಸಹಗಮನಮಾಡಿ ಸ್ವರ್ಗದಲ್ಲಿ ಅವನನ್ನು ಸೇರುವಳು. ಈ ಕಥೆಯನ್ನು ಕೇಳಿ ಪಾಂಡ್ಯದೊರೆಯಾದ ಶೇರನ್ ಶೆಂಗೊಟ್ಟುವನ್ ಪ್ರಾಯಶ್ಚಿತ ರೂಪವಾಗಿ ಮಧುರೆಯಲ್ಲಿ ಕನ್ನಗಿಗೊಂದು ದೇವಾಲಯವನ್ನು ನಿರ್ಮಿಸಿ ಅವಳನ್ನು ದೇವತೆಯಂತೆ ಆರಾಧಿಸುವನು. ಈ ಕೃತಿಯಲ್ಲಿ ಪಾತ್ರರಚನೆ ರಸದೃಷ್ಟಿಗಳಿಂದ ಮಹಾ ಕಾವ್ಯದ ಲಕ್ಷಣಗಳು ಕಾಣುತ್ತವೆ.

'ಮಣಿಮೇಗಲೈ' : ಕಾಲದ ದೃಷ್ಟಿಯಿಂದ 'ಮಣಿಮೇಗಲೈ' ಪ್ರಾಚೀನವಾದರೂ

'ಶಿಲಪ್ಪದಿಕಾರ'ದ ಮುಂದಿನ ಕಥೆ ಅದರ ವಸ್ತು. ಇದರ ಕವಿ ಶೀತ್ತಲೈಚ್ಚಾತ್ತನಾರ್ ಮಧುರೆ ಸಾಹಿತ್ಯಸಂಘಕ್ಕೆ ಸೇರಿದವನು. ಚೇರ ರಾಜವಂಶಕ್ಕೆ ಸಂಬಂಧಿಸಿದವನು, ತಿರುವಳ್ಳುವರ್‌ಗೆ ಸಮಕಾಲೀನ. ತಿರುಕ್ಕುಱಳೆಂದರೆ ಇವನಿಗೆ ಬಹಳ ಅಭಿಮಾನ. ಈ ಕವಿ ಬೌದ್ಧನೆಂದು ಕಾಣುತ್ತದೆ. ಇಲ್ಲಿ ಕೋವಲನ್ ಪ್ರೇಯಸಿಯಾದ ಮಾಧವಿ ಮತ್ತು ಅವಳ ಮಗಳಾದ ಮಣಿಮೇಖಲೆಯ ಕಥೆ ಬಂದಿದೆ. ಮಣಿಮೇಖಲೆಯೇ ಈ ಕಾವ್ಯಕ್ಕೆ ನಾಯಿಕೆ. ಮಾಧವಿಯು ಬೌದ್ಧ ಸನ್ಯಾಸಿನಿಯಾದ ತನ್ನ ಮಗಳು ಮಣಿಮೇಖಲೆಯೊಡನೆ ಮಠವನ್ನು ಪ್ರವೇಶಿಸುವುದು ಇದರ ಪ್ರಧಾನ ಕಥೆ. ಮಣಿಮೇಖಲೆಯು ಸ್ಫುರದ್ರೂಪಿಣಿಯಾದುದರಿಂದ, ಯೌವನಾತಿಶಯದಿಂದ ಅನೇಕರ ಮೋಹಕ್ಕೆ ಒಳಗಾಗುವಳು. ಅವರೆಲ್ಲರಿಂದ ತಪ್ಪಿಸಿಕೊಳ್ಳಲು ಊರೂರು ಸುತ್ತಿ ಕೊನೆಗೆ ಸಂನ್ಯಾಸಿನಿಯಾಗುವಳು. ವಿವಿಧ ಸಮಯಾಚಾರ್ಯರಿಂದ ಎಲ್ಲ ಧರ್ಮಗಳ ತತ್ತ್ವಗಳನ್ನು ತಿಳಿಯುವಳು. ಅವಳ ಜ್ಞಾನವೈರಾಗ್ಯಗಳು ಎಲ್ಲರ ಪ್ರಶಂಸೆಗೆ ಅರ್ಹವಾಗುವುವು.

'ಮಣಿಮೇಗಲೈ' ಕಾವ್ಯದಲ್ಲಿ ಉತ್ತಮವಾದ ಸನ್ನಿವೇಶಗಳು, ಮಾನವೀಯ ಭಾವನೆಗಳು ಇದ್ದರೂ 'ಶಿಲಪ್ಪದಿಕಾರ'ದಂತೆ ಹೃದಯ ಕರಗಿಸುವ, ಆಳವಾದ ಭಾವನೆಗಳಿಲ್ಲ. ಕಾವ್ಯದಲ್ಲಿ ಕಥೆ ಬರಿಯ ನೆಪ, ಬೌದ್ಧತತ್ತ್ವಗಳ ಪ್ರಚಾರವೇ ಪ್ರಧಾನ. ಅಲ್ಲಲ್ಲಿ ವರ್ಣನೆಗಳು ಹೃದಯಂಗಮವೆನ್ನಬಹುದು.

'ಜೀವಕ ಚಿನ್ತಾಮಣಿ': ತಿರುತ್ತಕ್ಕದೇವರ್ ರಚಿಸಿದ 'ಜೀವಕ ಚಿನ್ತಾಮಣಿ'ಗೆ ಸಂಸ್ಕೃತ ಮೂಲವಿದೆ. ಜೈನಯತಿಯಾದ ತಿರುತ್ತಕ್ಕದೇವರ್ 'ನರಿವಿರುದಂ' ಎಂಬ ಆಗಮಿಕ ಕೃತಿಯಿಂದ ಪ್ರಸಿದ್ಧನಾಗದೆ ಲೌಕಿಕ ಕಾವ್ಯವಾದ 'ಜೀವಕ ಚಿನ್ತಾಮಣಿ'ಯಿಂದ ವಿಖ್ಯಾತನಾಗಿದ್ದಾನೆ. ಕಾವ್ಯವು ಜೈನ ಸಂಪ್ರದಾಯದ ನಂಬಿಕೆಗಳನ್ನು ಬಿತ್ತರಿಸುತ್ತದೆ. ಜೀವಕ ಅಥವಾ ಜೀವಂಧರನ ಜನನದಿಂದ ಮೊದಲುಗೊಂಡು ಅವನು ಮುಕ್ತನಾಗುವವರೆಗೆ ಕಾವ್ಯದ ಹರವು ಇದೆ. ೧೩ ಅಧ್ಯಾಯಗಳಲ್ಲಿ ೩೧೪೫ ವೃತ್ತಗಳು ಇವೆ. ಸಂಸ್ಕೃತ ವೃತ್ತಗಳನ್ನು ಬಳಸಿಕೊಂಡಿರುವ ತಮಿಳು ಕಾವ್ಯಗಳಲ್ಲಿ ಇದೇ ಮೊದಲನೆಯದು. ಇದಕ್ಕೆ ಮುಂಚಿನ ಕಾವ್ಯಗಳೆಲ್ಲವೂ ತಮಿಳು ಛಂದಸ್ಸಿನಲ್ಲಿಯೇ ಇವೆ. ಕವಿ ಚಕ್ರವರ್ತಿ ಕಂಬ ಈ 'ಜೀವಕ ಚಿನ್ತಾಮಣಿ'ಯನ್ನು ಆದರ್ಶವಾಗಿಟ್ಟುಕೊಂಡು ತನ್ನ ರಾಮಾಯಣದಲ್ಲಿ ಸಂಸ್ಕೃತ ವೃತ್ತಗಳನ್ನುಪಯೋಗಿಸಿದ್ದಾನೆ. ಈ ಮಹಾಕಾವ್ಯ 'ಪೆರಿಯ ಪುರಾಣ'ದ ರಚನೆಗೆ ಕಾರಣವಾಯಿತು ಎಂದು ಹೇಳಲಾಗಿದೆ. ಒಟ್ಟಿನಲ್ಲಿ ಈ ಕಾವ್ಯ ತನ್ನ ಒಳ್ಳೆಯ ಕಾವ್ಯಶಕ್ತಿ, ಧರ್ಮಾನುರಾಗ, ಮಾನವರ ಅಂತರಂಗದ ಸೂಕ್ಷ್ಮ ಪರಿಚಯ ಇವುಗಳಿಂದ ಪ್ರಸಿದ್ಧವಾಗಿದೆ. ಸಮಕಾಲೀನ ಸಮಾಜದ, ಕಲೆಯ, ಸಂಪ್ರದಾಯದ ಸ್ಥಿತಿಗತಿಗಳನ್ನು ಕುರಿತು ಟೀಕಿಸುವ ಈ ಗ್ರಂಥ ಇತಿಹಾಸದ ಅಭ್ಯಾಸಿಗಳಿಗೆ ಬಹು ಉಪಯುಕ್ತವಾದುದು. ಕನ್ನಡ ಸಾಹಿತ್ಯದ 'ಜೀವಂಧರನ ಕಥೆ'ಯೇ 'ಜೀವಕ ಚಿಂತಾಮಣಿ'ಯ ಕಥೆ. ಎಂಟು ಮದುವೆಗಳ ವರ್ಣನೆ ಇಲ್ಲಿರುವುದರಿಂದ ಈ ಕಾವ್ಯ 'ಮಣನೂಲ್' ಅಥವಾ 'ಮದುವೆಯ ಕಾವ್ಯ' ಎನಿಸಿದೆ.

'ಕುಣ್ಡಲಕೇಶಿ' ಮತ್ತು 'ವಳಯಾಪತಿ' : ಇವೆರಡು ಮಹಾಕಾವ್ಯಗಳ ಹೆಸರು ಮಾತ್ರ ನಮಗೆ ಗೊತ್ತು. ಗ್ರಂಥಗಳು ಉಪಲಬ್ಧವಿಲ್ಲ. ದೊರೆಯುವ ಇತರ ಆಧಾರಗಳಿಂದ ಇವು ಜೈನಕಾವ್ಯಗಳೆಂದು ಹೇಳಲಾಗಿದೆ.

ಐಞ್ಞಿರು ಕಾಪ್ಪಿಯಂಗಳ್ (ಐದು ಕಿರುಕಾವ್ಯಗಳು) : ತಮಿಳು ಸಾಹಿತ್ಯದಲ್ಲಿ ಪಂಚ ಮಹಾಕಾವ್ಯಗಳಲ್ಲದೆ ಐದು ಕಿರುಕಾವ್ಯಗಳೂ ಪ್ರಸಿದ್ಧವಾಗಿವೆ: (೧) ನೀಲಕೇಶಿ (೨) ಶೂಳಾಮಣಿ(=ಚೂಡಾಮಣಿ) (೩) ಯಶೋಧರ ಕಾವ್ಯಂ (೪) ಉದಯಣನ್ ಕತೈ (=ಉದಯನನ ಕಥೆ) (೫) ನಾಗಕುಮಾರ ಕಾವ್ಯಂ.

(೧) 'ನೀಲಕೇಶಿ' : ಕವಿಯ ಹೆಸರು ಗೊತ್ತಿಲ್ಲ. ಈ ಕಾವ್ಯದಲ್ಲಿ ಹತ್ತು ಸರ್ಗಗಳಿವೆ. ನೀಲಕೇಶಿಯೇ ಕಥಾನಾಯಿಕೆ. ನಾನಾ ಧಾರ್ಮಿಕ ಚರ್ಚೆಗಳಿಂದ ಕೂಡಿ ಜೈನ ಧರ್ಮದ ಪ್ರಾರಮ್ಯವನ್ನು ಸ್ಥಾಪಿಸುವ ಉದ್ದೇಶವುಳ್ಳ ಕಾವ್ಯ. (೨) ಶೂಳಾಮಣಿ: ತೋಲಾಮೋಟ್ಟಿತ್ತೇವರೆಂಬ ಜೈನ ಕವಿ ಬರೆದದ್ದು ಸಮಗ್ರ ಗ್ರಂಥ ಸಿಕ್ಕಿದೆ. ೨೧೩೧ ವೆಣ್ಬಾ ಪದ್ಯಗಳುಳ್ಳ ೧೨ ಸರ್ಗಗಳಿವೆ. ಇದರ ಮೂಲಗ್ರಂಥ ಮಹಾಪುರಾಣ. ಜೈನ ಸಂಪ್ರದಾಯದ ಕಥೆಯಾದ್ದರಿಂದ ಕಿನ್ನರರ ಆಗಮನ, ಲೋಕಾಂತರಗಳ ಸಂಬಂಧ, ಯಾಂತ್ರಿಕವಾದ ವಿಮಾನಗಳು ಮುಂತಾದ ಲೌಕಿಕ ವಿಭವದ ನಂತರ ಭ್ರಮನಿರಸನವಾಗಿ ಅರ್ಹತ್ಸಾನ್ನಿಧ್ಯವನ್ನು ಸೇರುವ ಕಥಾನಾಯಕನಿದ್ದಾನೆ. (೩) ಯಶೋಧರ ಕಾವ್ಯಂ : ಸಂಸ್ಕೃತದ ಯಶೋಧರ ಕಾವ್ಯದ ಆಧಾರದಿಂದ ರಚಿತವಾದುದು. ಐದು ಸರ್ಗಗಳಲ್ಲಿ ೩೨೦ ಪದ್ಯಗಳು ಈ ಕಾವ್ಯವನ್ನು ಚಿತ್ತರಿಸುತ್ತವೆ. ಸಂಸ್ಕೃತ ಕಾವ್ಯವನ್ನು ತುಂಬ ನಿಷ್ಠೆಯಿಂದ ಅನುಸರಿಸುವುದು. ಜೈನಕವಿಯಿಂದ ರಚಿತವೆಂದು ಖಚಿತವಾದರೂ ಗ್ರಂಥಕರ್ತನ ವಿಷಯವಾಗಿ ಏನೂ ತಿಳಿದುಬಂದಿಲ್ಲ; (೪) ಉದಯಣನ್ ಕತೈ : ವತ್ಸರಾಜನಾದ ಉದಯನನ ಚರಿತ್ರೆ ಇದರ ವಸ್ತು. ಆರು ಪ್ರಕರಣಗಳ ೩೬೭ ಪದ್ಯಗಳ ಹರಹು ಪಡೆದಿರುವ ಕಿರುಕಾವ್ಯ. (೫) ನಾಗಕುಮಾರ ಕಾವ್ಯಂ :ಈ ಕಾವ್ಯ ಲಭ್ಯವಾಗಿಲ್ಲ. (೬) ಕೊಙ್ಗುವೇಳಿರ್ ಮಾಕ್ಕದೈ : ಪೆರುಙ್ಗತೈ ಎಂದೂ ಬಳಕೆಯಿದೆ. ಕೊಙ್ಗುವೇಳಿರ್ ಎಂಬ ಕವಿಯಿಂದ ಅಗವಲ್ ಛಂದಸ್ಸಿನಲ್ಲಿ ರಚಿತವಾದ ಕಾವ್ಯ. ಉದಯನನ ಕಥೆಯೇ ಇದರ ವಸ್ತು. ಸಮಗ್ರ ಗ್ರಂಥ ಸಿಕ್ಕಿಲ್ಲ. ಇದು ಪಂಚಮಹಾಕಾವ್ಯಗಳ ಮತ್ತು ಕಿರುಕಾವ್ಯಗಳ ಗುಂಪಿಗೆ ಸೇರದ ಪ್ರತ್ಯೇಕ ಗ್ರಂಥ.

## ಸಮಯಾಚಾರ್ಯರ ಕಾಲ (೬೦೦-೯೦೦)

ಈ ಕಾಲದಲ್ಲಿ ಶೈವ ಮತ್ತು ವೈಷ್ಣವ ಧರ್ಮಗಳು ಬೌದ್ಧ ಮತ್ತು ಜೈನ ಧರ್ಮಗಳ ದಾಳಿಯಿಂದ ಚೇತರಿಸಿಕೊಂಡು ಹೊಸ ಭಕ್ತಿಯ ಉತ್ಸಾಹದಿಂದ ಅವುಗಳನ್ನು ಹಿಮ್ಮೆಟ್ಟಿಸಿರುವುದು ಕಂಡುಬರುತ್ತದೆ. ೫-೬ನೆಯ ಶತಮಾನಗಳಲ್ಲಿ ಇಂತಹ ಒಂದು ಧಾರ್ಮಿಕ ಚಟುವಟಿಕೆ ಪ್ರಾರಂಭವಾಯಿತು. ೬ನೆಯ ಶತಮಾನದ ವೇಳೆಗೆ ಶೈವ ಮತ್ತು ವೈಷ್ಣವ ಸಮಯಾಚಾರ್ಯರು ಉದಿಸಿ ತಮ್ಮ ಜೀವನ ಕೃತಿಗಳಿಂದ ಭಕ್ತಿ

ಸಂಪ್ರದಾಯವನ್ನು ಹಾಕಿಕೊಟ್ಟರೆಂದು ಇತಿಹಾಸಜ್ಞರು ತೀರ್ಮಾನಿಸಿದ್ದಾರೆ. ಇವೆರಡು ಮತಗಳೂ ಪರಸ್ಪರ ಸಹಕಾರದಿಂದಲೇ ಬೆಳೆದು ಬಾಳಿದವು. ಶೈವ ಸಮಯಾಚಾರ್ಯರಲ್ಲಿ ಮಾಣಿಕ್ಕವಾಚಕರ್, ತಿರುಜ್ಞಾನ ಸಮ್ಬನ್ದರ್, ತಿರುನಾವುಕ್ಕರಶರ್, ಸುನ್ದರ ಮೂರ್ತಿಸ್ವಾಮಿ ಎಂಬ ಈ ನಾಲ್ವರು ಪ್ರಾಚೀನರು ಮತ್ತು ಪ್ರಸಿದ್ಧರು.

ಮಾಣಿಕ್ಕವಾಚಕರ್ : ಶೈವ ಮತಾಚಾರ್ಯರಲ್ಲಿ ಬಹು ಪ್ರಸಿದ್ಧರೆಂದರೆ ಮಾಣಿಕ್ಕ ವಾಚಕರು. ಇವರು ಪಾಂಡ್ಯನಾಡಿನಲ್ಲಿ ಮಧುರೆಗೆ ಸಮೀಪದಲ್ಲಿರುವ ತಿರುವಾದವೂರೆಂಬ ಕ್ಷೇತ್ರದಲ್ಲಿ ಹುಟ್ಟಿದರು. ಮಧುರೆಯಲ್ಲಿ ಆಗ ಅರಿಮರ್ದನ ಪಾಂಡ್ಯನು ಆಳುತ್ತಿದ್ದನು. ಮಾಣಿಕ್ಕವಾಚಕರಿಗೆ ಈ ಹೆಸರು ಕೇವಲ ಅನ್ವರ್ಥನಾಮ. ಇವರಿಗೆ ತಾಯಿತಂದೆ ಇಟ್ಟ ಹೆಸರು ಗೊತ್ತಿಲ್ಲ. ತಿದವೂದರ್ ಎಂಬ ಊರಿನ ಹೆಸರೂ ಇವರಿಗುಂಟು. ಬಾಲ್ಯದಲ್ಲಿಯೇ ಬಹಳ ಜ್ಞಾನಿಗಳು. ಇವರ ಪಾಂಡಿತ್ಯಕ್ಕೂ ಜ್ಞಾನಕ್ಕೂ ಮನಸೋತು ಅರಿಮರ್ದನ ಪಾಂಡ್ಯರಾಜ ಇವರನ್ನು ತನ್ನ ಮಂತ್ರಿಯಾಗಿಟ್ಟುಕೊಂಡನು. ರಾಜನಿಗಾಗಿ ಕುದುರೆಗಳನ್ನು ಕೊಳ್ಳಲು ಹೋದಾಗ ಪರಶಿವನನ್ನು ಕಂಡು ಅವನಿಂದ ಶಿವಜ್ಞಾನ ಬೋಧದ ರಹಸ್ಯವನ್ನರಿತು ಜ್ಞಾನಿಯಾದರಂತೆ. ತಕ್ಷಣವೇ ಮಂತ್ರಿ ಪದವಿಯನ್ನು ತ್ಯಜಿಸಿ ಶಿವನ ಆಜ್ಞಾನುಸಾರವಾಗಿ ತಿರುಪ್ಪೆರುನ್ದುರೆಯಲ್ಲಿ ಆವುಡೈಯಾರ್ (ಪಶುಪತಿ) ದೇಗುಲವನ್ನು ಕಟ್ಟಿದನು. ಆಮೇಲೆ ಅರಿಮರ್ದನ ಪಾಂಡ್ಯನ ಆಗ್ರಹಕ್ಕೆ ಪಾತ್ರನಾಗಿ ಹಲವಾರು ಪವಾಡಗಳನ್ನು ಮೆರೆದು ರಾಜನಿಗೆ ತಿಳಿವು ಮೂಡುವಂತೆ ಮಾಡಿದರು. ಕಡೆಗೆ ಭಕ್ತಿಪ್ರಧಾನವಾದ 'ತಿರುವಾಚಕ' ಗ್ರಂಥವನ್ನು ರಚಿಸಿ, ಚಿದಂಬರದ ನಟರಾಜನ ಸನ್ನಿಧಿಯಲ್ಲಿ ಅರ್ಪಿಸಿ, ಗ್ರಂಥದ ಅರ್ಥವೇನೆಂದು ಕೇಳಿದ ಶಿಷ್ಯರಿಗೆ ನಟರಾಜನನ್ನೇ ತೋರಿಸಿ ಅಂತರ್ಧಾನನಾದನಂತೆ. 'ತಿರುಕ್ಕೋವೈಯಾರ್' ಎಂಬ ಮತ್ತೊಂದು ಗ್ರಂಥವನ್ನೂ ಈತ ರಚಿಸಿದ್ದಾನೆ. ಇದರಲ್ಲಿ ನಟರಾಜನೇ ನಾಯಕ. ಜೀವಾತ್ಮನೇ ನಾಯಿಕೆ. ಇವರ ಪ್ರಣಯವನ್ನು ಭಕ್ತಿಪ್ರಧಾನವಾಗಿ ಚಿತ್ರಿಸಿದೆ. ಹೊರ ನೋಟಕ್ಕೆ 'ಕೋವೈ' ಕಾವ್ಯಜಾತಿಯ ಶೃಂಗಾರ ರಂಜನೆ ಕಂಡರೂ ಕಣ್ಣಿಟ್ಟು ನೋಡಿದರೆ ಕವಿಯ ಭಕ್ತಿಯ ಆವೇಶ ಕಂಡುಬರುತ್ತದೆ. ಕೋವೈ ಕಾವ್ಯ ಜಾತಿಯಲ್ಲಿ ತಿರುಕ್ಕೋವೈಯಾರ್ ಗ್ರಂಥವೇ ಅತಿಶ್ರೇಷ್ಠವಾದುದು. ಆದ್ದರಿಂದಲೇ ಇದಕ್ಕೆ ಆದಿಯಲ್ಲಿ 'ತಿರು' ಮತ್ತು ಅಂತ್ಯದಲ್ಲಿ 'ಆರ್' ಎಂಬ ಗೌರವಾರ್ಥ ಸೂಚಕ ಶಬ್ದಗಳು ಸೇರಿವೆ.

ತಿರುಜ್ಞಾನ ಸಮ್ಬನ್ದರ್ : ಪಲ್ಲವ ರಾಜನಾದ ಇಮ್ಮಡಿ ಮಹೇಂದ್ರವರ್ಮನ ಕಾಲದಲ್ಲಿದ್ದನು. ಇವನ ಕಾಲ ಕ್ರಿ.ಶ. ೭ನೆಯ ಶತಮಾನ. ತಿರುಮಂಗೈ ಆಳ್ವಾರ್‌ಗೆ ಸಮಕಾಲೀನ, ಶೀರ್ಕಾಳಿಯಲ್ಲಿ ಶಿವಪಾದಹೃದಯ ಭಗವತಿ ಅಮ್ಮೈಯ್ಯಾರ್ ಈ ಬ್ರಾಹ್ಮಣ ದಂಪತಿಗಳಿಗೆ ಪರಮಾತ್ಮನ ವರಪ್ರಸಾದದಿಂದ ಹುಟ್ಟಿದರಂತೆ. ಇವರಿಗೆ ಮೂರನೆಯ ವರ್ಷ ತುಂಬುತ್ತ ಬಂದಾಗ ಒಂದು ದಿನ ಶಿವಪಾದ ಹೃದಯರು ತಟಾಕಕ್ಕೆ ಹೋಗಿ ಸ್ನಾನಮಾಡಲು ನೀರಿನಲ್ಲಿ ಮುಳುಗಿದರು. ದಡದಲ್ಲಿ ನಿಂತಿದ್ದ ಮಗು ತಂದೆಯನ್ನು

ಕಾಣದೆ ಅಳಲಾರಂಭಿಸಿತು. ದನಿಗರಗಿ ಅಳುತ್ತಿದ್ದ ಮಗುವಿಗೆ ಹಾಲೂಡಿಸಲು ಪಾರ್ವತಿ ಬೇಗನೆ ಬಂದು ಚಿನ್ನದ ಬಟ್ಟಲಿನಲ್ಲಿ ಜ್ಞಾನಕ್ಷೀರ ಕುಡಿಸಿ ಮಾಯವಾದಳಂತೆ. ತಂದೆ ಆಹ್ನಿಕ ಮುಗಿಸಿಕೊಂಡು ಬಂದು ತಮ್ಮ ಮಗುವಿನ ತುಟಿಗೆ ಹಾಲಿನ ಹನಿಗಳು ಅಂಟಿಕೊಂಡಿರುವುದನ್ನು ಕಂಡು ಪ್ರಶ್ನೆ ಮಾಡಿದರು. ತಿರುಜ್ಞಾನ ಸಮ್ಬನ್ದರು 'ತೋಡುಡೈಯ ಶೆವಿಯನ್ ವಿಡೈಯೇಱಿ' ಎಂಬ ತೇವಾರವನ್ನು ಹಾಡಿ ಪರಶಿವನನ್ನು ನಿರ್ದೇಶಿಸಿದರು. ಅಲ್ಲಿಂದ ಮುಂದೆ ಹೆಸರಿಗೆ ತಕ್ಕಂತೆ ಜ್ಞಾನನಿಧಿಯಾಗಿ ತಂದೆಯ ಕಂಕುಳಲ್ಲಿ ಕುಳಿತು ಶೈವಕ್ಷೇತ್ರಗಳನ್ನು ಸಂದರ್ಶಿಸಿ ಅಲ್ಲಲ್ಲಿ ಶಿವನಿಗೆ ಮಂಗಳಾಶಾಸನ ಮಾಡಿದರು. ಇವರ ತೇವಾರ ಗ್ರಂಥ ಅಚ್ಚ ತಮಿಳು ಶೈಲಿಯ ಸಾವಿರಾರು ಪದ್ಯಗಳನ್ನೊಳಗೊಂಡಿದೆ. ಶೈವ ಸಿದ್ಧಾಂತ ಸ್ಥಾಪನೆ ಮಾಡುವುದಕ್ಕಾಗಿ ಜೈನಮತವನ್ನು ಪರಾಜಯಗೊಳಿಸಿದರು. ತಮಿಳು ಪಾಂಡಿತ್ಯದಿಂದಾಗಿ ಈತನಿಗೆ ತಮಿೞ್ ಜ್ಞಾನಸಂಬಂದರ್ ಎಂಬ ಅನ್ವರ್ಥ ನಾಮವೂ ವಾಡಿಕೆಯಾಗಿದೆ. ವೈಷ್ಣವರಲ್ಲಿ ನಮ್ಮಾೞ್ವಾರ್ ಹೇಗೋ ಹಾಗೆಯೇ ಶೈವರಲ್ಲಿ ಈತ ಪರಮಾಚಾರ್ಯ. ಉಪಾಸನೆಯ ರೀತಿ ಸತ್ಪುತ್ರಮಾರ್ಗ. ಎಂದರೆ ಪರಮಾತ್ಮನಿಗೂ ಜೀವಾತ್ಮನಿಗೂ ಇರುವ ಸಂಬಂಧ ತಂದೆ ಮಕ್ಕಳ ಸಂಬಂಧಕ್ಕೆ ಸಮಾನವೆಂಬುದು. ಪರಶಿವನ ಮಗನಾದ ಕುಮಾರಸ್ವಾಮಿಯ ಅವತಾರವೆಂದು ಅರುಣಗಿರಿನಾಥನ ಅಭಿಪ್ರಾಯ. ತಮಿಳುನಾಡಿನ ಶೈವದೇವಾಲಯಗಳಲ್ಲಿ ಇವನ ಮೂರ್ತಿಯಿದ್ದು, ಅದಕ್ಕೆ ಪೂಜೆ ಸಲ್ಲುತ್ತದೆ. ಭಕ್ತಿಗೀತೆಗಳ ಪ್ರಪಂಚದಲ್ಲಿ ಇವನಿಗೆ ಶಾಶ್ವತ ಸ್ಥಾನವಿದೆ.

ತಿರುನಾವುಕ್ಕರಶರ್ : ತಿರುಮುನೈಪ್ಪಾಡಿನ ತಿರುವಾಮೂರ್ ಎಂಬ ಸ್ಥಳದಲ್ಲಿ ಹುಟ್ಟಿದ. ಬಾಲ್ಯದಲ್ಲಿ ಮರುಣೀಕ್ಕಿಯಾರ್ (ಮರುಳನ್ನು ನೀಗಿದವರು) ಎಂಬ ಹೆಸರಿತ್ತು. ಚಿಕ್ಕಂದಿನಲ್ಲಿಯೇ ಮಾತಾಪಿತೃವಿಯೋಗವುಂಟಾಯಿತು. ಅಕ್ಕ ತಿಲಕವತಿ. ಬಾಲ್ಯದಲ್ಲಿ ಜೈನನಾಗಿ ಆ ಮತಾನುಯಾಯಿಗಳ ಗೌರವಕ್ಕೆ ಪಾತ್ರರಾಗಿದ್ದ. ಇದು ಶಿವಭಕ್ತೆಯಾಗಿದ್ದ ತಿಲಕವತಿಗೆ ಸಹಿಸಲಿಲ್ಲ. ಹೇಗಾದರೂ ಮಾಡಿ ತನ್ನ ತಮ್ಮನನ್ನು ಮತ್ತೆ ಶೈವನನ್ನಾಗಿ ಮಾರ್ಪಡಿಸಬೇಕೆಂದು ಆಕೆ ಪರಶಿವನನ್ನು ಪ್ರಾರ್ಥಿಸಿದಳಂತೆ. ಅವಳ ಮೊರೆಯನ್ನು ಕೇಳಿ ಶಿವನು ತಿರುನಾವುಕ್ಕರಸರಿಗೆ ತಾಳಲಶಕ್ಯವಾದ ಹೊಟ್ಟೆನೋವುಂಟು ಮಾಡಿ ತಿರುಪ್ಪಾದಿರಿಪುಲಿಯೂರಿಗೆ ಬರಮಾಡಿಕೊಂಡು ಅದನ್ನು ಹೋಗಲಾಡಿಸಿದನಂತೆ. ಆಗ ಆತನಿಗೆ ಶ್ರಮಣರ ಚಿಕಿತ್ಸೆಗಳಲ್ಲಿ, ದರ್ಶನಗಳಲ್ಲಿ ನಂಬಿಕೆ ತಪ್ಪಿತಂತೆ. ಇದರಿಂದ ಶ್ರಮಣರಿಗೆಲ್ಲ ಅತಿ ಕೋಪ ಬಂದು ಅವರು ಪಲ್ಲವ ರಾಜನಾಗಿದ್ದ ಇಮ್ಮಡಿ ಮಹೇಂದ್ರವರ್ಮನಾದ ಜೈನದೊರೆಗೆ ದೂರು ಹೇಳಿದರು. ರಾಜನ ಕಣ್ಣು ಕೆರಳಿತು. ಒಡನೆಯೇ ತಿರುನಾವುಕ್ಕರಸನನ್ನು ಭಟರನ್ನಟ್ಟಿ ಬರಮಾಡಿದ. ಬೇಯುವ ಸುಣ್ಣದ ಗೂಡಿನಲ್ಲಿ ಹಾಕಿಸಿದರೂ ಭಕ್ತಶಿರೋಮಣಿಗೆ ಅದರ ಕಾವು ತಟ್ಟಲೇ ಇಲ್ಲ.

"ಮಾಶಿಲ್ ವೀಣೈಯುಮ್ ಮಾಲೈ ಮದಿಯಮುಮ್
ವೀಶು ತೆನ್ಱಲುಮ್ ವೀಙ್ಗಿಳ ವೇನಿಲುಮ್,

ಮಾಶು ವಣ್ಣ ಮ್ಕೃ ಪೊರ್ಯ್ಗೈಯುಮ್ ಪೋನ್ರದೇ
ಈಶನೆನ್ದೈ ಯಿಣೈಯಡಿ ನೀಳಲೇ"

"ಈಶನ ಪದದ್ವಯದ ನೆಳಲಿನಲ್ಲಿರುವಾಗ ವೀಣೆಯ ಇಂಚರಕ್ಕೆ, ಸಂಜೆಯ ತಿಂಗಳಿಗೆ, ಬೀಸುವ ತೆಂಗಾಳಿಗೆ, ಹಬ್ಬಿದ ವಸಂತ ಸಮಯಕ್ಕೆ, ಮರಿದುಂಬಿಯ ಝೇಂಕಾರವುಳ್ಳ ತಾವರೆಯ ತಟಾಕಕ್ಕೆ ಸಮಾನವಾಗಿತ್ತು, ಸುಣ್ಣದ ಗೂಡಿನಲ್ಲಿದ್ದಾಗಿನ ನನ್ನ ಅನುಭವ" ಎಂದು ಹಾಡಿದನಂತೆ. ರಾಜನಿಗೆ ಮತ್ತಷ್ಟು ಕೋಪವುಕ್ಕಿ ತಿರುನಾವುಕ್ಕರಸನನ್ನು ಕಲ್ಲು ಕಟ್ಟಿ ಸಮುದ್ರದಲ್ಲಿ ಬಿಸಾಡಿದನು. ಅಲ್ಲಿಯೂ ಅವರು ಶಿವನನ್ನು ಮರೆಯದೆ—"ಶೊಲ್ಟುಣೈ ವೇದಿಯನ್ ಶೋದಿ ವಾನವನ್" ಎಂದು ಮೊದಲಾಗಿ ಹತ್ತು ತೇವಾರ ಪದ್ಯಗಳನ್ನು ಹಾಡಿ ತಮ್ಮ ಕೊರಳಿಗೆ ಕಟ್ಟಿದ ಬಂಡೆಯನ್ನೇ ತೆಪ್ಪವನ್ನಾಗಿ ಮಾಡಿಕೊಂಡು ನೀರಿನ ಮೇಲೆ ತೇಲಾಡಿಕೊಂಡು ಕರೆಯೇರಿದ. ಮಹೇಂದ್ರವರ್ಮನಿಗೆ ತಿರುನಾವುಕ್ಕರಸನ ಮಹಿಮೆ ಗೊತ್ತಾಯಿತು. ಅವನೂ ಜೈನಮತವನ್ನು ತ್ಯಜಿಸಿ ಶೈವನಾಗಿ ತಿರುನಾಗೇಶ್ವನದಲ್ಲಿ ದೊಡ್ಡ ಶಿವಾಲಯವೊಂದನ್ನು ಕಟ್ಟಿಸಿದನು. ತಿರುನಾವುಕ್ಕರಶರ್ ತಿರುಜ್ಞಾನ ಸಮ್ಬನ್ದರೊಡನೆ ಮತ್ತು ಒಂಟಿಯಾಗಿ ಹಲವು ಶೈವ ಕ್ಷೇತ್ರಗಳಲ್ಲಿ ತೀರ್ಥಯಾತ್ರೆಮಾಡಿ ಬಗೆಬಗೆಯಾಗಿ ತೇವಾರಗಳನ್ನು ಹಾಡಿ ಕಡೆಗೆ ತಿರುಪ್ಪುಗಲೂರಿನಲ್ಲಿ ಶಿವೈಕ್ಯನಾದ.

ಈತನಿಗೆ ಅಪ್ಪರ್, ತಾಣ್ಡಕವೇನ್ದರ್, ವಾಗೀಶರ್ ಎಂಬವೂ ಹೆಸರುಗಳು. ಅಪ್ಪರ್ ಎಂಬುದು ತಿರುಜ್ಞಾನ ಸಮ್ಬನ್ದರ್ ಇಟ್ಟದ್ದು: ತಾಣ್ಡಕವೆಂಬ ಪದ್ಯಜಾತಿಯನ್ನು ಹಾಡಿದ ಶೈವ ಸಮಯಾಚಾರ್ಯ ಈತ ಒಬ್ಬನೇ. ಅದಕ್ಕಾಗಿ ಈತನನ್ನು 'ತಾಣ್ಡಕ ರಾಜ' ಎಂದಿದೆ. ವಾಗೀಶರ್ ಎಂಬುದು ತಿರುನಾವುಕ್ಕರಶರ್ ಎಂಬುದರ ಸಂಸ್ಕೃತಾನುವಾದ.

ತಿರುನಾವುಕ್ಕರಶರ್ ತೇವಾರಗಳು ಭಕ್ತಿಸಂಪನ್ನತೆ ನಾದಮಾಧುರ್ಯಗಳಿಂದ ಮನೋಹರವಾಗಿವೆ. ಜೀವನಾನುಭವದ ಫಲವಾದ ಜ್ಞಾನ ಭಕ್ತಿಗಳಿಂದ ಪರಿಪುಷ್ಟವಾಗಿವೆ. ಪ್ರಕೃತಿಯ ರಮ್ಯವರ್ಣನೆಗಳಿಂದ ಕೂಡಿವೆ. ಆದರೆ ಸಾಕಷ್ಟು ವ್ಯಾಖ್ಯಾನಗಳೂ ವಿವರಣೆಗಳೂ ಇಲ್ಲದೆ ಕೆಲವು ವೇಳೆ ಅದನ್ನು ಅರ್ಥಮಾಡಿಕೊಳ್ಳುವುದು ಕಷ್ಟವಾಗುತ್ತದೆ.

ಸುಂದರಮೂರ್ತಿಸ್ವಾಮಿ: ಇವನನ್ನು 'ಸುಂದರರ್' ಎಂದು ಕರೆಯುವುದು ವಾಡಿಕೆ. ೯ನೆಯ ಶತಮಾನದ ಅಂತ್ಯದಲ್ಲಿ ಬಾಳಿದನು. ಕೈಲಾಸದಲ್ಲಿ ಪರಮೇಶ್ವರನಿಗೆ ಪುಷ್ಪ ಕೈಂಕರ್ಯ ನಡಸುತ್ತಿದ್ದ ಒಮ್ಮೆ ಪಾರ್ವತಿಯ ಪೂಜೆಗಾಗಿ ಹೂಕೊಯ್ದು ತರುತ್ತಿದ್ದ ಅನಿಂದಿತೆ ಕಮಲಿನಿಯರನ್ನು ದಾರಿಯಲ್ಲಿ ಕಂಡು ಮೋಹಕ್ಕೆ ಒಳಗಾದ. ಅದನ್ನು ಅರಿತ ಪರಶಿವ ಇವನನ್ನೂ ಆ ಚೇಟಿಯರನ್ನೂ ಮಾನವಲೋಕದಲ್ಲಿ ಹುಟ್ಟುವಂತೆ ಮಾಡಿದನೆಂದು ಕಥೆ. ಸುಂದರಮೂರ್ತಿ ಕೈಲಾಸಬಿಟ್ಟು ಹೊರಡುವಾಗ ಶಿವನ ಪಾದದ ಮೇಲೆ ಬಿದ್ದು ತನ್ನನ್ನು ಮರೆಯದೆ ಕರುಣಿಸಿ ಕಾಪಾಡೆಂದು ಬೇಡಿಕೊಂಡನಂತೆ. ಅದಕ್ಕೆ ಪರಶಿವನು ಒಪ್ಪಿದನಂತೆ. ಸುಂದರನು ತಿರುನಾವಲೂರಿನಲ್ಲಿ ಆದಿಶೈವ ಕುಲದಲ್ಲಿ ಜನಿಸಿದ. ಶೈಶವದಲ್ಲಿ ಬೀದಿಯಲ್ಲಿ ಆಟವಾಡುತ್ತಿರುವಾಗ ಈತನ ರೂಪ ಲಾವಣ್ಯಗಳಿಗೆ ಮನಸೋತ

ನರಸಿಂಗ ಮುನಿಯಾರ್ ಎಂಬ ರಾಜನು ಶಿಶುವನ್ನು ಎತ್ತಿಕೊಂಡು ಸಾಕಿದನು. ಬ್ರಾಹ್ಮಣ ಸಂಪ್ರದಾಯದ ಪ್ರಕಾರ ಗರ್ಭಾಷ್ಟಮದಲ್ಲಿ ಉಪನಯನವಾಯಿತು. ಮದುವೆಯ ವಯಸ್ಸು ಬಂದಾಗ ಪುತ್ತೂರಿನ ಶಡಙ್ಗವಿ ಶಿವಾಚಾರ್ಯನೆಂಬ ಆದಿಶೈವನು ತನ್ನ ಮಗಳನ್ನು ಕೊಟ್ಟು ಮದುವೆ ಮಾಡಲು ಏರ್ಪಾಡು ಮಾಡಿದನು. ಇನ್ನೇನು ಕನ್ಯಾದಾನವಾಗಬೇಕು ಎನ್ನುವಷ್ಟರಲ್ಲಿಯೇ ಶಿವನು ವಿಪ್ರವೇಷ ತಾಳಿಬಂದು ವಿವಾಹ ಕಂಟಕನಾದನು. ತನ್ನಿಂದ ಸುಂದರನ ಹಿರಿಯರು ಸಾಲ ತೆಗೆದುಕೊಂಡು ವಂಶಪರಂಪರೆ ಯಾಗಿ ಅಡಿಯಾಳಾಗಿರಲು ಒಪ್ಪಿ ಓಲೆ ಬರೆದುಕೊಟ್ಟದ್ದಾರೆಂದೂ ಆ ಸಾಲವನ್ನು ಮೊದಲು ತೀರಿಸಿ ಆಮೇಲೆ ಮದುವೆಯಾಗಬಹುದೆಂದೂ ಕುಂಟು ನೆಪಹೂಡಿ ಮದುವೆ ಯನ್ನು ತಪ್ಪಿಸಿ ತಿರುವಣ್ಣೈ ನಲ್ಲೂರಿನ ಶಿವಾಲಯದಲ್ಲಿ ಹೊಕ್ಕು ಮರೆಯಾಗಿ, "ನಿನ್ನ ಬೇಡಿಕೆಯ ಪ್ರಕಾರ ತಡೆದು ಕಾಪಾಡಿದ್ದೇವೆ. ಕೈಲಾಸದಲ್ಲಿ ನನ್ನನ್ನು ಪೂಮಾಲೆಗಳಿಂದ ಪೂಜಿಸಿದೆ. ಈಗ 'ಪಾಮಾಲೈ' (ಪದ್ಯಮಾಲೆ)ಗಳಿಂದ ಅರ್ಚನೆ ಮಾಡು ; ಅಡಿಮೆಯನ್ನು ನಿರ್ಧರಿಸುವಾಗ 'ಪಿತ್ತಾ' (ಹುಚ್ಚ) ಎಂದು ನನ್ನನ್ನು ಕರದೆ. ಹೋಗು ! ಆ ಮಾತಿನಿಂದ ಲೇ ತೇವಾರ ಎಂಬ ಸ್ತೋತ್ರಮಾಲಿಕೆಯನ್ನು ಆರಂಭಿಸು"—ಎಂದು ಅಪ್ಪಣೆ ಮಾಡಿ ಅಂತರ್ಧಾನನಾದನಂತೆ. ಇತ್ತ ಸುಂದರನು ಅದೇ ಪ್ರಕಾರ

"ಪಿತ್ತಾ ಪಿಜೈಚ್ಚೂಡಿ ಪೆರುಮಾನೇ ಅರುಳಾಳಾ
ಎತ್ತಾನ್ ಮಱವಾದೇ ನಿನೈಕ್ಕಿನ್ರೇನ್ ಮನುತ್ತುನ್ನೈ
ವೆತ್ತಾಯ್ ಪೆಣ್ಣೈ ತೆನ್ಪಾಲ್ ವೆಣ್ಣೈಯ್ ನಲ್ಲೂರರುಳ್ ತುಱೈಯುಳ್
ಅತ್ತಾ ಉನಕ್ಕಾಳಾಯ್ ಇನಿಯಲ್ಲೇನ್ ಎನಲಾಮೇ"

ಎಂದು ಗೀತಾರಂಭ ಮಾಡಿದನು. ಆಮೇಲೆ ಸುಂದರನಿಗೆ ತಿರುವಾರೂರಿನಲ್ಲಿ ಪರವೈ ನಾಚ್ಚಿಯಾರಾಗಿ ಹುಟ್ಟಿದ್ದ ಕಮಲಿನಿಯೊಡನೆ ಮದುವೆಯಾಯಿತು. ಹಲವಾರು ಕ್ಷೇತ್ರ ಗಳಲ್ಲಿ ತೀರ್ಥಯಾತ್ರೆ ಮುಗಿಸಿಕೊಂಡು ತಿರುವಜ್ಜಿಯೂರಿಗೆ ಬಂದು ಅಲ್ಲಿ ಶಙ್ಗಿಲಿಯೆಂಬ ಹೆಸರಿನಿಂದ ಹುಟ್ಟಿದ್ದ ಅನಿಂದಿತೆಯನ್ನು ಮೋಹಿಸಿದನು. ಪಾರಿಜಾತ ವೃಕ್ಷದ ಅಡಿಯಲ್ಲಿ ಒಡಂಬಡಿಕೆಯಾಗಿ, ಶಙ್ಗಿಲಿಯನ್ನು ಮದುವೆಯಾದ. ಕೆಲವು ಕಾಲಾನಂತರ ಪರವೈ ನಾಚ್ಚಿಯಾರ್ ಗೀಳು ಹತ್ತಲು ತಿರುವಾರೂರಿನ ಕಡೆ ಹೊರಟನು. ತಿರುವಜ್ಜಿಯೂರಿನ ಎಲ್ಲೆ ಬಿಟ್ಟೊಡನೆ ಅವನ ಕಣ್ಣೆರಡೂ ಇಂಗಿ ಹೋದವು. ಹಾಗೆಯೇ ದಾರಿ ನಡೆದು ಹಲವು ಕ್ಷೇತ್ರಗಳಲ್ಲಿ ಪರಶಿವನನ್ನು ಕುರಿತು ಬೇಡಿ ಹಾಡಿ ಕಂಚಿಗೆ ಬಂದ. ಎಡಗಣ್ಣು ಮತ್ತೆ ಬಂತು. ತಿರುವಾರೂರನ್ನು ತಲುಪಿ ಭಗವಂತನಿಗೆ ಮೊರೆಯಿಡುತ್ತಿರುವಾಗ ಬಲಗಣ್ಣೂ ಕಾಣಿಸಿತು. ಕೋಪಿಸಿಕೊಂಡಿದ್ದ ಪರವೈಯಾರೊಡನೆ ಶಿವನ ಮಧ್ಯಸ್ಥಿಕೆಯಿಂದ ಮತ್ತೆ ಸೇರಿ ಬಾಳಲಾರಂಭಿಸಿದ. ಶೇರಮಾನ್ ಪೆರುಮಾಳ್ ನಾಯನಾರ್‌ಗೆ ಸ್ನೇಹಿತನಾಗಿ ಪುಣ್ಯ ಕ್ಷೇತ್ರಗಳನ್ನು ಸಂದರ್ಶಿಸಿ ಮಂಗಳಾಶಾಸನ ಮಾಡಿ ಕಡೆಗೆ ಇಬ್ಬರೂ ಸಶರೀರರಾಗಿ ಕೈಲಾಸಕ್ಕೆ ತೆರಳಿದರಂತೆ.

ಈತನ 'ತಿರುತ್ತೊಂಡರ್‌ತ್ತೊನ್ನೈ' ಎಂಬ ಶಿವಭಕ್ತರ ನಾಮಸಂಕೀರ್ತನಾವಳಿಯೇ ಶೇಕ್ಕಿಲಾರಿಗೆ 'ಪೆರಿಯ ಪುರಾಣ' ರಚಿಸಲು ಮೂಲಪ್ರೇರಣೆಯಾಯಿತು ಎಂದು ಹೇಳುತ್ತಾರೆ.

ಈ ಶೈವಸಮಯಾಚಾರ್ಯರಿಗೆ ನಾಯನಾರ್ ಅಥವಾ ಅಡಿಯಾರ್ ಎಂಬ ಹೆಸರಿದೆ. ತಿರುಜ್ಞಾನಸಮ್ಬನ್ದರ್, ಅಪ್ಪರ್, ಸುಂದರರ್—ಈ ಮೂವರ ರಚನೆಗಳಿಗೆ ತೇವಾರಮ್' ಎಂಬ ಹೆಸರಿದೆ. ತೇ= ದೇವರ, ಆರಂ= ಹಾರ ಎಂಬ ಸ್ತೋತ್ರಮಾಲಿಕೆಯೇ ತೇವಾರ. ಈ ತೇವಾರದೊಡನೆ ಮಾಣಿಕ್ಕವಾಚಕರ 'ತಿರುವಾಚಕ'ವನ್ನು ಸೇರಿಸಿ 'ತೇವಾರ ತಿರುವಾಚಕ'ವೆಂದು ಒಟ್ಟಾಗಿ ಹೇಳುವುದೂ ಶೈವರ ಪದ್ಧತಿ. ಇವನ್ನು ಶೈವರು ತಮಿಳು ವೇದವೆಂದು ಗೌರವಿಸುತ್ತಾರೆ.

## ವೈಷ್ಣವ ಆಳ್ವಾರುಗಳು (೬೩೦-೮೦೦)

ಶೈವ ನಾಯನಾರ್‌ಗಳಂತೆ ವೈಷ್ಣವ ಆಳ್ವಾರುಗಳೂ ಪರಮ ಭಕ್ತರು. ನಾಯನಾರರು ಶಿವಭಕ್ತರಾದರೆ ಆಳ್ವಾರರು ವಿಷ್ಣುಭಕ್ತರು. ಆಳ್ವಾರ್ ಎಂದರೆ ಭಗವದ್ಭಕ್ತಿಯಲ್ಲಿ ಮುಳುಗಿದವರು ಎಂದರ್ಥ. ಇವರು ೧೨ ಮಂದಿ. ಸಾಂಪ್ರದಾಯಿಕವಾಗಿ ಇವರ ಕಾಲವನ್ನು ಕ್ರಿ.ಪೂ. ೩ನೆಯ ಶತಮಾನದಿಂದ ೧ನೆಯ ಶತಮಾನದವರೆಗೆ ಎನ್ನುತ್ತಾರೆ. ಆದರೆ ಆಧುನಿಕರು ೫೦೦ರಿಂದ ೮೦೦ ಎಂದು ನಿರ್ಧರಿಸಿದ್ದಾರೆ.

ಆಳ್ವಾರರು ತಮ್ಮ ಇಷ್ಟದೈವವಾದ ವಿಷ್ಣುವನ್ನು ಅಗಲಲಾರದೆ ಚಡಪಡಿಸುತ್ತ, ಸಾಮಾನ್ಯ ಜನರಲ್ಲಿ ದೈವಭಕ್ತಿಯ ಸ್ಫೂರ್ತಿಯನ್ನುಂಟುಮಾಡುತ್ತ, ತಮ್ಮ ಗೀತೆಗಳ ಭಕ್ತಿಪ್ರವಾಹದಲ್ಲಿ ತಾವೂ ಮಿಂದು ನಾಡನ್ನೂ ಮೀಯಿಸಿದವರು. ಜ್ಞಾನವಾಗಲಿ ತಪವಾಗಲಿ ಪರಿಶುದ್ಧವಾದ ತೀವ್ರವಾದ ಭಗವದಭಿಲಾಷೆ. ದೇವರ ಕರುಣೆಗೆ ಎಲ್ಲರನ್ನೂ ಪಾತ್ರವಾಗಿಸುತ್ತದೆ ಎಂದು ಸ್ಥಾಪಿಸಿದವರು.

ತಮಿಳುನಾಡಿನ ನಾನಾ ಮೂಲೆಗಳಿಂದ, ಜಾತಿಗಳಿಂದ, ವೃತ್ತಿಗಳಿಂದ ಬಂದವರು ಈ ಆಳ್ವಾರರು. ತಿರುಪ್ಪಾಣಾಳ್ವಾರು ಅಂತ್ಯಜ, ನಮ್ಮಾಳ್ವಾರು ವೆಳ್ಳಾಳ, ತಿರುಮಂಗೈಯಾಳ್ವಾರು ಕಳ್ಳ; ಆಂಡಾಳ್ ಹೆಂಗಸು. ಆದರೂ ಇವರ ಹಿರಿಮೆಯನ್ನು ಕಂಡುಕೊಂಡು ವೈಷ್ಣವಾಲಯಗಳಲ್ಲಿ ಇವರ ವಿಗ್ರಹಗಳನ್ನು ಪ್ರತಿಷ್ಠಿಸಿ ಪಾಶುರಗಳನ್ನು ಹೇಳುವುದು ಇಂದಿಗೂ ವಾಡಿಕೆ. ಪೊಯ್‌ಗೈಯಾರ್, ಪೂದತ್ತಾರ್, ಪೇಯಾರ್ (ಸರೋಯೋಗಿ, ಭೂತಯೋಗಿ, ಮಹಾಯೋಗಿ)—ಈ ಮೂವರೂ ಸು. ೭ನೆಯ ಶತಮಾನದಲ್ಲಿದ್ದ ಮೊದಲಾಳ್ವಾರುಗಳು. ಪೊಯ್‌ಗೈ ಮತ್ತು ಪೇಯಾಳ್ವಾರುಗಳು ವಿಷ್ಣುಕಂಚಿಯಲ್ಲಿ ವರದರಾಜನಿಗೆ ಮಂಗಳಾಶಾಸನ ಮಾಡಿದರು. ಆಗ ಅಲ್ಲಿ ಇಮ್ಮಡಿ ಪರಮೇಶ್ವರವರ್ಮ ಪಲ್ಲವನು ರಾಜನಾಗಿದ್ದನು. ಇವನ ಕಾಲ ಸು. ೭೯೦. ಇವನೇ ವಿಷ್ಣುಕಂಚಿಯನ್ನು ಕಟ್ಟಿದವನು. ಈ ಮೊದಲಾಳ್ವಾರುಗಳು ಹಾಡಿರುವ ಪದ್ಯಮಾಲೆ 'ನಾಲಾಯಿರ ದಿವ್ಯ ಪ್ರಬಂಧ'ದಲ್ಲಿ ಸೇರಿದೆ. ವಾಮನ, ನಾರಸಿಂಹ, ರಾಮ ಕೃಷ್ಣಾದ್ಯವತಾರಗಳನ್ನು

ತಮ್ಮ ಪಾಶುರಗಳಲ್ಲಿ ವರ್ಣಿಸಿದ್ದಾರೆ. ಇವರು ಶ್ರೀರಂಗ, ಕುಂಭಕೋಣ, ತಿರುಮಾಲಿರು ಇಷ್ಟೋಲೈ, ತಿರುಕ್ಕೊಟ್ಟಿಯೂರು ಮುಂತಾದ ಕ್ಷೇತ್ರಗಳಲ್ಲಿ ಮಂಗಳಶಾಸನ ಮಾಡಿದರು. ಇವರ ಗ್ರಂಥವೆಲ್ಲ 'ಅಂದಾದಿ' (ಅಂತ್ಯಾಕ್ಷರಿ : ಒಂದು ಪದ್ಯದ ಕಡೆಯ ಪದ ಮುಂದಿನ ಪದ್ಯದ ಆದಿಯಾಗಿರುವುದು ಎಂದರ್ಥ.).

ತಿರುಮೆಟಿಶೈಯಾಟ್ವಾರ್ : ತಿರುಮೆಟಿಶೈ ಎಂಬ ಊರಿನಲ್ಲಿ ಕ್ರಿ.ಶ. ೭ನೆಯ ಶತಮಾನದಲ್ಲಿ ಹುಟ್ಟಿದ ಈತ. ಮೊದಲಿಗೆ ಶೈವ, ಅನಂತರ ವೈಷ್ಣವನಾಗಿ ಮಾರ್ಪಟ್ಟು ವಿಷ್ಣು ಪಾರಮ್ಯವನ್ನೇ ವಿಶೇಷವಾಗಿ ಕೊಂಡಾಡಿ ಗ್ರಂಥ ಬರೆದನು. ಶೈವ, ಜೈನ, ಬೌದ್ಧ ಮತಗಳನ್ನು ಬಹು ತೀವ್ರವಾಗಿ ಖಂಡನೆ ಮಾಡಿದ. 'ನಾನ್ಮುಗನ್ ತಿರುವನ್ದಾದಿ' ಎಂಬ ಗ್ರಂಥ ಈತನದು. ಪರಮತಖಂಡನೆಯೇ ಇದರ ಮುಖ್ಯಾಶಯ. 'ತಿರುಚ್ಚನ್ದವಿರುತ್ತಮ್' ಎಂಬ ೧೨೦ ಪಾಶುರಗಳುಳ್ಳ ವೇದಾಂತ ಗ್ರಂಥವನ್ನೂ ಬರೆದಿದ್ದಾರೆ. ಈ ಪದ್ಯಮಾಲಿಕೆ 'ನಾಲಾಯಿರ ದಿವ್ಯಪ್ರಬಂಧ'ದಲ್ಲಿ ಒಂದು ಭಾಗವಾಗಿದೆ.

ಒಂದು ಬಾರಿ ಇವನು ತನ್ನ ಶಿಷ್ಯನಾದ ಕಣಿಕಣ್ಣನೊಡನೆ ವಿಷ್ಣುಕಂಚಿಗೆ ತೆರಳಿದಾಗ ಒಂದನೆಯ ಮಹೇಂದ್ರವರ್ಮ ಪಲ್ಲವನನ್ನು ಹೊಗಳಿ ಹಾಡುವುದಿಲ್ಲವೆಂದು ಹೇಳಿ ಅವನ ಆಗ್ರಹಕ್ಕೆ ಪಾತ್ರನಾದನು. ಅರಸನು ಆಟ್ವಾರನ್ನು ಕಣಿಕಣ್ಣನೊಡನೆ ತನ್ನ ರಾಜ್ಯದಿಂದ ತೊಲಗಬೇಕೆಂದು ಕಟ್ಟಪ್ಪಣೆ ಮಾಡಿದನು. ಆಗ ಆಟ್ವಾರನು ಕಂಚಿಯ ದೇವಾಲಯಕ್ಕೆ ಹೋಗಿ, ದೇವನ ಮುಂದೆ ನಿಂತು

ಕಣಿಕಣ್ಣನ್ ಪೋಗಿನ್ರಾನ್ ಕಾಮರು ಪೂಙ್ಗಚ್ಚಿ
ಮಣಿವಣ್ಣಾ ನೀ ಕಿಡಕ್ಕವೇಣ್ಡಾಮ್—ತುಣಿವುಡೈಯ
ಶೆನ್ನಾಪ್ಪುಲವನುಮ್ ಪೋಗಿನ್ರೇನ್ ನೀಯುಮುನ್ರನ್
ಪೈನ್ನಾಗಪ್ಪಾಯ್ ಶುರುಟ್ಟಿಕ್ಕೊಳ್

ಎಂದು ಹಾಡಿದೊಡನೆ ವರದರಾಜನು ತನ್ನ ಹಾಸಿಗೆಯನ್ನು ಮುದುರಿಕೊಂಡು ಗುರುಶಿಷ್ಯರ ಹಿಂದೆ ಹೊರಟನು. ಈ ಸಂಗತಿ ರಾಜನ ಕಿವಿ ಮುಟ್ಟಲು ಅವನು ಓಡಿಬಂದು ಆಟ್ವಾರಿಗೆ ಎರಗಿ ಕ್ಷಮೆ ಬೇಡಿದನು. ಆಗ ಈತ ಒಡನೆ ಮೇಲಿನ ಪಾಶುರವನ್ನು ತಿರುಗಿಸಿ—

ಕಣಿಕಣ್ಣನ್ ಪೋಕ್ಕೊಟಿನ್ದಾನ್ ಕಾಮರು ಪೂಙ್ಗಚ್ಚಿ
ಮಣಿವಣ್ಣಾ ನೀ ಕಿಡಕ್ಕವೇಣ್ಡುಮ್—ತುಣಿವುಡೈಯ
ಶೆನ್ನಾಪ್ಪುಲವನುಮ್ ಪೋಕ್ಕೊಟಿನ್ದೇನ್ ನೀಯುಮುನ್ರನ್
ಪೈನ್ನಾಗಪ್ಪಾಯ್ ವಿರಿತ್ತುಕ್ಕೊಳ್

ಎಂದು ಹಾಡಿದರು. ವರದರಾಜನು ಭಕ್ತನ ಅಪ್ಪಣೆಯನ್ನು ಶಿರಸಾವಹಿಸಿ ಮತ್ತೆ ಹಾವಿನ ಹಾಸಿಗೆಯನ್ನು ಹರಹಿ ಪವಡಿಸಿದನಂತೆ.

ನಮ್ಮಾಟ್ವಾರ್ : ಶಠಕೋಪರ್ (ಜನನ ಕಾಲದಲ್ಲಿ ಶಠವಾಯುವನ್ನು ಧಿಕ್ಕರಿಸಿದವರು), ಪರಾಂಕುಶರ್ ಎಂಬ ಹೆಸರುಗಳೂ ಉಂಟು. ತಾಮ್ರಪರ್ಣಿನದಿಯ ದಡದಲ್ಲಿರುವ ಆಟ್ವಾರ್ ತಿರುನಗರಿ (ತಿರುಗ್ಗೈ)ಯಲ್ಲಿ ವೇಳಾಳ ಕುಲದಲ್ಲಿ ಹುಟ್ಟಿದ. ೭ನೆಯ

ಅಥವಾ ೯ನೆಯ ಶತಮಾನದಲ್ಲಿ ಈತ ಇದ್ದಿರಬಹುದೆಂದು ಮತಭೇದಗಳಿವೆ. ತಂದೆ ಕಾರಿ, ತಾಯಿ ಉಡಯನಙ್ಗೈ. ನಮ್ಮಾಳ್ವಾರನು ಹುಟ್ಟಿದೊಡನೆಯೇ ಜ್ಞಾನನಿಧಿಯಾಗಿದ್ದ ನಂತೆ. ಶೈಶವದಲ್ಲಿ ತಾಯಿಯ ಸ್ತನ್ಯಪಾನಮಾಡಲೂ ಇಲ್ಲ,ಅದಕ್ಕಾಗಿ ಅಳಲೂ ಇಲ್ಲವಂತೆ. ಆದರೂ ಪುಷ್ಟಿಯಾಗಿ ಬೆಳೆದನಂತೆ. ಅವರ ತಾಯಿತಂದೆ ಊರಿನ ದೇವಸ್ಥಾನದ ಹುಣಿಸೆ ಮರಕ್ಕೆ ತೊಟ್ಟಿಲು ಕಟ್ಟಿ ಮಗುವನ್ನು ಮಲಗಿಸಿದರು. ಮಗು ಮರದ ಕೆಳಗೆ ಯೋಗಿ ಯಂತೆ ಕುಳಿತು ಹಲವಾರು ಪಾಶುರಗಳನ್ನು ಹಾಡಲಾರಂಭಿಸಿತು. ಆ ಮಾರ್ಗವಾಗಿ ಬಂದ ಮಧುರಕವಿಯಾಳ್ವಾರ್ ಇದನ್ನು ಕಂಡು ಆಶ್ಚರ್ಯಪಟ್ಟು ಮಗುವಿನ ಬಾಯಿಂದ ಬಂದ ಪಾಶುರಗಳೆಲ್ಲವನ್ನೂ ಬರೆದಿಟ್ಟ. ಮಗುವಿನ ಅಸ್ವಾದೃಶ ಸಾಮರ್ಥ್ಯವನ್ನು ಕಂಡು ತಾಯಿತಂದೆಗಳು ಬಹಳ ಎಚ್ಚರಿಕೆಯಿಂದ ಸಾಕಿದರು. ಸ್ವಲ್ಪ ವಯಸ್ಸಾದ ಮೇಲೆ ನಮ್ಮಾಳ್ವಾರ್ ಕವಿತಾಸಕ್ತಿ, ಪ್ರತಿಭೆ ಎಲ್ಲರನ್ನೂ ಆಕರ್ಷಿಸಿದುವು. ಜನ ಆಗ ಮಹಾಕವಿ ಯೆಂದು ಆತನನ್ನು ಸನ್ಮಾನಿಸಿದರು. ೪ ಸಾವಿರ ದಿವ್ಯ ಪ್ರಬಂಧದಲ್ಲಿ ಹೆಚ್ಚುಭಾಗ ನಮ್ಮಾ ಳ್ವಾರ ಬಾಯಿಂದ ಹೊರಟದ್ದು. 'ತಿರುವಿರುತ್ತಮ್', 'ತಿರುವಾಶಿರಿಯಮ್', 'ಪೆರಿಯ ತಿರು ವನ್ದಾದಿ,' 'ತಿರುವಾಯ್ಮೊೞಿ'—ಇವೆಲ್ಲವೂ ಈತನ ಗ್ರಂಥಗಳೇ. ಇವು ಚತುರ್ವೇದಗಳ ಸಾರಸಂಗ್ರಹಗಳೆನ್ನಬಹುದು. ಮೊದಲಿನ ಮೂರು ಗ್ರಂಥಗಳು ಚಿಕ್ಕವು. ತಿರುವಾಯ್ಮೊ ೞಿಯಲ್ಲಿ ೧ ಸಾವಿರ ಪಾಶುರಗಳಿವೆ. ಸಂಸಾರಬಂಧನದಿಂದ ಬಿಡುಗಡೆಗೆ ಮೋಕ್ಷೋಪಾಯ ವನ್ನು ಬೋಧಿಸುವುದೇ ಇಲ್ಲಿಯ ಗುರಿ. ನಮ್ಮಾಳ್ವಾರ ಗ್ರಂಥಗಳಲ್ಲಿ ಮಾನವ ಸ್ತುತಿ, ಐತಿಹಾಸಿಕ ಸಾಮಾಜಿಕ ವಿಷಯಗಳಿಲ್ಲ; ಅರ್ಥಪಂಚಕಗಳು, ಭಗವಂತನ ಲೀಲಾ ವಿನೋದಗಳ ಚಿತ್ರ ಉಂಟು.

ನಮ್ಮಾಳ್ವಾರ್‌ಗೆ ಪಾಂಡಿತ್ಯದೊಂದಿಗೆ 'ಕುೞಳ್' ಪರಿಚಯವೂ ಚೆನ್ನಾಗಿತ್ತು. ಅದನ್ನು 'ತಿರುವಾಯ್ಮೊೞಿ'ಯಲ್ಲಿ ಧಾರಾಳವಾಗಿ ಉಪಯೋಗಿಸಿರುವುದಕ್ಕೆ ಗ್ರಂಥಸ್ಥ ಆಧಾರಗಳಿವೆ.

ಮಧುರಕವಿಯಾಳ್ವಾರ್ : ತಿರುಕ್ಕೋಳೂರಿನಲ್ಲಿ ಹುಟ್ಟಿದ ಶ್ರೀಮಂತನೊಬ್ಬನ ರಕ್ಷಣೆ ಯಲ್ಲಿದ್ದ. ಮೊದಲಿನಿಂದಲೂ ದೈವಭಕ್ತನಾಗಿದ್ದುದರಿಂದ ಉತ್ತರ ದೇಶಯಾತ್ರೆ ಮಾಡುತ್ತ ಅಯೋಧ್ಯೆಗೆ ಬರುತ್ತಿರುವಾಗ ಒಂದು ರಾತ್ರಿ ತೆಂಕಣ ದಿಕ್ಕಿನಲ್ಲಿ ಬೆಳಗುತ್ತಿದ್ದ ತೇಜಸ್ಸೊಂದನ್ನು ಕಂಡು ಅದೇನಿರಬಹುದೆಂದು ತಿಳಿಯಲು ಆ ದಿಕ್ಕಿನಲ್ಲಿಯೇ ನಡೆದುಬಂದು ಕುರುಗೂರನ್ನು ತಲಪಿದ. ಕಡೆಗೆ ಊರಿನ ದೇವಾಲಯದ ಹುಣಿಸೆಮರದ ಪೊಟರೆಯಲ್ಲಿ ಬಿಜಯಮಾಡಿಸಿದ್ದ ನಮ್ಮಾಳ್ವಾರನ್ನು ಕಂಡು—

ಶೆತ್ತದಿನ್ ವಯಿಱ್ಱಿಲ್ ಶಿಱಿಯದು ಪಿಱನ್ದಾಲ್
ಎತ್ತೈತ್ತಿನ್ರು ಎಙ್ಗೇ ಕಿಡುಕ್ಕುಮ್

ಎಂದು ಪ್ರಶ್ನೆ ಮಾಡಿದನು. ನಮ್ಮಾಳ್ವಾರು ಅದಕ್ಕೆ ಉತ್ತರವಾಗಿ "ಅತ್ತೈತ್ತಿನ್ರು ಅಙ್ಗೇ ಕಿಡಕ್ಕುಮ್" ಎಂದು ಹೇಳಿಬಿಟ್ಟನು. ಇದನ್ನು ಕೇಳಿದೊಡನೆ ಮಧುರಕವಿಗೆ ಪರಮಾನಂದ ವಾಗಿ ನಮ್ಮಾಳ್ವಾರ್ ಪಾದಗಳಿಗೆರಗಿ ಶಿಷ್ಯನಾದ. ತನ್ನ ಆಚಾರ್ಯನನ್ನು ಕುರಿತು

೧೧ ಪಾಶುರಗಳುಳ್ಳ 'ಕಣ್ಣಿನುಣ್ ಶಿಱುತ್ತಾಮ್ಬು' (ಗ್ರಂಥಿಮತ್ಸೂಕ್ಷ್ಮಹ್ರಸ್ವರಜ್ಜು) ಎಂಬ ಆಚಾರ್ಯ ಸ್ತವವನ್ನು ಬರೆದ. ಇದು ದಿವ್ಯಪ್ರಬಂಧದಲ್ಲಿ ಒಂದು ಭಾಗವಾದ ಸಂಪ್ರದಾಯಗ್ರಂಥ.

ಕುಲಶೇಖರಾೞ್ವಾರ್: ತಿರುವಾಂಕೂರಿನ ರಾಜನಾಗಿದ್ದನು. ೯ನೆಯ ಶತಮಾನದ ಆದಿಭಾಗದಲ್ಲಿದ್ದಿರಬಹುದೆಂದು ತೋರುತ್ತದೆ. ಭಗವದ್ಭಕ್ತ. ಒಂದು ಬಾರಿ ರಾಮಾಯಣ ಕಾಲಕ್ಷೇಪಕಾಲದಲ್ಲಿ ಶ್ರೀರಾಮನು ಏಕಾಂಗ ಸಾಹಸದಿಂದ ಖರದೂಷಣರೇ ಮುಂತಾದ ೧೪ ಸಹಸ್ರ ರಾಕ್ಷಸರನ್ನು ಧ್ವಂಸಮಾಡಿದನು ಎಂಬ ಕಥಾಸಂದರ್ಭವನ್ನು ಕೇಳಿದೊಡನೆ ಕುಲಶೇಖರಾೞ್ವಾರಿಗೆ ತಾನು ಶ್ರೀರಾಮನಿಗೆ ಸಹಾಯವೆಸಗದಿದ್ದುದು ತನ್ನ ಅರಸುತನಕ್ಕೆ ಕಳಂಕವೆಂದುಕೊಂಡನಂತೆ. ಕೂಡಲೇ ಚತುರಂಗಬಲ ಸಮೇತನಾಗಿ ಶ್ರೀರಾಮನಿಗೆ ನೆರವಾಗಲು ಹೊರಟನು. ಮಿಕ್ಕ ಭಕ್ತರು ಶ್ರೀರಾಮನು ಜಯಶಾಲಿಯಾಗಿ ಸೀತೆಯೊಡನೆ ಹಿಂತಿರುಗಿದನೆಂದು ಸಮಾಧಾನ ಹೇಳಿದರಂತೆ.

ಕುಲಶೇಖರನಿಗೆ ಎಂದಿಗೆ ಶ್ರೀರಂಗಕ್ಕೆ ಹೋಗಿ ರಂಗನಾಥನ ಸೇವೆ ಮಾಡಿಯೇನು ಎಂಬ ಕಾತರ ಬಹಳವಾಗಿತ್ತು. ಆದ್ದರಿಂದ ದಿನದಿನವೂ ರಂಗಯಾತ್ರೆಗೆ ಸಿದ್ಧನಾಗುತ್ತಿದ್ದ. ಅಂಥ ಅರಸನನ್ನು ಕಳೆದುಕೊಳ್ಳಲು ಪ್ರಜೆಗಳಿಗೆ ಇಷ್ಟವಿರಲಿಲ್ಲ. ಅದಕ್ಕಾಗಿ ಅವರು ಅಡಚಣೆಗಳನ್ನು ತಂದೊಡ್ಡಿ ಕುಲಶೇಖರನನ್ನು ತಡೆಯುತ್ತಿದ್ದರು. ಕಡೆಗೆ ಆೞ್ವಾರರ ಆಸೆ ಈಡೇರಿತು. ಅವನು ಶ್ರೀರಂಗಕ್ಕೆ ಬಂದು ಅಲ್ಲಿ ರಂಗನಾಥನನ್ನು ಸೇವಿಸಿದನು. 'ಮುಕುನ್ದಮಾಲೆ'ಯೆಂಬ ಸಂಸ್ಕೃತ ಸ್ತೋತ್ರಗ್ರಂಥ ಈತನ ರಚನೆ. ವಿಷಯ ವೇದಾಂತಪರವಾಗಿದ್ದರೂ ಶೈಲಿ ಬಹಳ ಸರಳ, ಹೃದ್ಯ. ತಮಿಳಿನಲ್ಲಿ 'ಪೆರುಮಾಳ್ ತಿರುಮೊೞಿ' ಎಂಬ ೧೦೫ ಪಾಶುರಗಳುಳ್ಳ ಗ್ರಂಥ ಬರೆದಿದ್ದಾನೆ. ಇದು ನಾಲ್ಕು ಸಾವಿರ ದಿವ್ಯಪ್ರಬಂಧದಲ್ಲಿ ಒಂದು ಭಾಗವಾಗಿದೆ.

ಪೆರಿಯಾೞ್ವಾರ್: ಇವನಿಗೆ ವಿಷ್ಣುಚಿತ್ತ ಎಂಬ ಹೆಸರೂ ಉಂಟು. ಶ್ರೀವಿಲ್ಲಿಪುತ್ತೂರಿನ ಬ್ರಾಹ್ಮಣ. ಆದ್ದರಿಂದ ವಿಲ್ಲಿ ಪುತ್ತೂರ್ ಕೋನ್ ಎಂಬ ಅನ್ವರ್ಥನಾಮಧೇಯವಿದೆ. ಕಾಲ ೮ನೆಯ ಶತಮಾನ. ಶ್ರೀವಿಲ್ಲಿಪುತ್ತೂರಿನ ವಟಪತ್ರಶಾಯಿಗೆ ಪುಷ್ಪಕೈಂಕರ್ಯ ಮಾಡುತ್ತಿದ್ದ. ವಲ್ಲಭಪಾಂಡ್ಯನ ಆಸ್ಥಾನದಲ್ಲಿ ವಿಷ್ಣುಪಾರಮ್ಯವನ್ನು ಸ್ಥಾಪನೆ ಮಾಡಲು ವಾದ ಹೂಡಿ ಸಂದರ್ಭಕ್ಕೆ ತಕ್ಕ ಶ್ರುತಿ ಸ್ಮೃತಿಗಳಿಂದ ಆಧಾರವಾಕ್ಯಗಳನ್ನು ಎತ್ತಿಹೇಳಿ ಪ್ರತಿಪಕ್ಷದವರನ್ನು ಸೋಲಿಸಿ ವಿದ್ಯಾಶುಲ್ಕವನ್ನು ಗೆದ್ದ. ಪಾಂಡ್ಯರಾಜನಿಗೆ ಪೆರಿಯಾೞ್ವಾರಲ್ಲಿ ಬಹಳ ಗೌರವ ಹುಟ್ಟಿತು. ಅವರನ್ನು ಆನೆಯಮೇಲೆ ಕೂರಿಸಿ ಸಕಲ ವೈಭವಗಳೊಡನೆ ತನ್ನ ರಾಜಧಾನಿಯಲ್ಲಿ ಮೆರೆವಣಿಗೆ ಮಾಡಿಸಿದನು. ಆ ಕಾಲದಲ್ಲಿ ಶ್ರೀಮನ್ನಾರಾಯಣನು ಗರುಡಾರೂಢನಾಗಿ ವಾಯುಮಾರ್ಗದಲ್ಲಿ ಪೆರಿಯಾೞ್ವಾರಿಗೆ ಕಾಣಿಸಿಕೊಳ್ಳಲು, ಅವನಿಗೆ ಮಂಗಳಾಶಾಸನ ಮಾಡಲಾರಂಭಿಸಿದನು. ಈ ಮಂಗಳಾಶಾಸನದ ಪದ್ಯಮಾಲಿಕೆಯೇ 'ತಿರುಪ್ಪಲ್ಲಾಣ್ಡು'. ಇದು ೧೨ ಪಾಶುರಗಳುಳ್ಳದ್ದು. ಇದರಲ್ಲಿ ಶ್ರೀಮನ್ನಾರಾಯಣನಿಗೆ, ಪಂಚಾಯುಧಗಳಿಗೆ, ಲಕ್ಷ್ಮಿಗೆ, ವಿಷ್ಣುಭಕ್ತರಿಗೆ

ವಾಗಿ ನಮ್ಮಾಳ್ವಾರ್ ಪಾದಗಳಿಗೆರಗಿ ಶಿಷ್ಯನಾದ. ತನ್ನ ಆಚಾರ್ಯನನ್ನು ಕುರಿತು ಮಂಗಳಾಶಾಸನವಿದೆ. ಇದೊಂದು ಸಂಪ್ರದಾಯ ಗ್ರಂಥ. ಇದನ್ನು ಶ್ರೀವೈಷ್ಣವ ದೇವಾಲಯಗಳಲ್ಲಿ, ಮನೆಗಳಲ್ಲಿ ತಿರುವಾರಾಧನ ಕಾಲಗಳಲ್ಲಿ, ಪ್ರಬಂಧ ಕಾಲಕ್ಷೇಪ ಕಾಲದಲ್ಲಿ ಅನುಸಂಧಾನ ಮಾಡುವುದು ವಾಡಿಕೆ. 'ಪೆರಿಯಾಳ್ವಾರ್ ತಿರುಮೊಳಿ'ಯಲ್ಲಿ ೪೬೧ ಪಾಶುರಗಳಿವೆ. ಇವುಗಳಲ್ಲಿ ಶ್ರೀಕೃಷ್ಣನ ಬಾಲಲೀಲೆಗಳು ವರ್ಣಿತವಾಗಿವೆ.

ಆಣ್ಡಾಳ್ : ಪೆರಿಯಾಳ್ವಾರ ಮಗಳು. ಈಕೆಗೆ ಗೋದಾದೇವಿಯೆಂಬ ಮತ್ತೊಂದು ಹೆಸರಿದೆ. ಈಕೆಯನ್ನು ಆಳ್ವಾರ ಗೋಷ್ಠಿಯಲ್ಲಿ ಸೇರಿಸಿ ಶ್ರೀ ವೈಷ್ಣವರು ಗೌರವಿಸು ತ್ತಿದ್ದಾರೆ. ಈಕೆಯೊಬ್ಬ ದೊಡ್ಡ ಕವಯಿತ್ರಿ. 'ನಾಚ್ಚಿಯಾರ್ ತಿರುಮೊಳಿ' ಎಂಬುದು ಈಕೆಯ ಗ್ರಂಥ. ೧೪೩ ಪಾಶುರಗಳಿವೆ. ನಾಲಕ್ಕಿಸಾವಿರ ದಿವ್ಯಪ್ರಬಂಧದಲ್ಲಿ ಇದೂ ಒಂದು ಭಾಗ. ಈಕೆಯ 'ತಿರುಪ್ಪಾವೈ' ಎಂಬ ೩೦ ಪದ್ಯಗಳುಳ್ಳ ಗೀತೆ ಬಹು ಶ್ರೇಷ್ಠ ವಾದುದು. ಉಯ್ಯಕ್ಕೊಣ್ಡಾರ್ ಇದನ್ನು ಕುರಿತು "ಇನ್ನಿಶೈಯಾಲ್ ಪಾಡಿಕ್ಕೊಡು ತ್ತಾಳ್ ನಲ್ಪಾವಮಾಲೈ" ಎಂದು ಹೇಳಿದ್ದಾರೆ.

ಹಿಂದೆ ಗೊಲ್ಲಕನ್ನೆಯರು ಶ್ರೀಕೃಷ್ಣನನ್ನು ತಮ್ಮ ಇನಿಯನನ್ನಾಗಿ ಮಾಡಿಕೊಳ್ಳಲು, ನಾಡು ಸುಭಿಕ್ಷವಾಗಿರಲು, 'ಪಾವೈ ನೋನ್ಬು' ಎಂಬ (ಕನ್ಯಾವ್ರತ) ನೋಂಪಿಯನ್ನು ಆಚರಿಸುತ್ತಿದ್ದರಂತೆ. ಆ ವ್ರತವನ್ನೇ ಆಂಡಾಳ್ ತಮ್ಮ 'ತಿರುಪ್ಪಾವೈ' ಗ್ರಂಥದಲ್ಲಿ ಹೇಳಿ ದ್ದಾಳೆ. ಇದು ಕನ್ನೆಯರು ಮಾರ್ಗಶಿರ ಮಾಸದ ಆದಿಯಿಂದ ಹಿಡಿದು ಹುಣ್ಣಿಮೆಗೆ ಸರಿ ಯಾಗಿ ಮುಗಿಸುವ ಒಂದು ವ್ರತ.

ಆಂಡಾಳಿಗೆ 'ಶೂಡಿಕ್ಕೊಡುತ್ತ ನಾಚ್ಚಿಯಾರ್' (ಸೂಡಿಕೊಟ್ಟ ನಾಯಿಕೆ) ಎಂಬ ಹೆಸರು ಪ್ರಸಿದ್ಧವಾಗಿದೆ. ಇದರ ಸಂದರ್ಭ ಹೀಗೆ: ತಂದೆ ದೇವರಿಗೆಂದು ಕಟ್ಟಿಟ್ಟಿದ್ದ ಸಿರಿಮಾಲೆಯನ್ನು ತಾನು ಮುಡಿದು ಕನ್ನಡಿಯಲ್ಲಿ ನೋಡಿಕೊಂಡು, ತಂದೆಯ ನೆನ ಪಾಗುತ್ತಲೇ ಭಯದಿಂದ ಆ ಮಾಲೆಯನ್ನು ಹಾಗೆಯೇ ಕಟ್ಟಿಟ್ಟಳು. ಪೆರಿಯಾಳ್ವಾರ್ ಅದನ್ನು ದೇವರಿಗೆ ಸಮರ್ಪಿಸಲು ಹೋದಾಗ ಅದರಲ್ಲಿ ಒಂದು ಕೂದಲಿತ್ತು. ಮಗಳಾದ ಆಂಡಾಳ್ ಅದನ್ನು ಮುಡಿದಿರಬಹುದೆಂದು ತೋರಿ ದೇವರಿಗೆ ಅದನ್ನು ಸಮರ್ಪಿಸದೆ ಚಿಂತಿಸುತ್ತ ಮಲಗಿದನು. ದೇವರು ಆತನ ಕನಸಿನಲ್ಲಿ ಕಾಣಿಸಿಕೊಂಡು ಆ ಸಿರಿಮಾಲೆ ತನಗೆ ಬಹು ಪ್ರಿಯವಾದುದೆಂದೂ ಆಂಡಾಳನ್ನು ತಾನೇ ಮದುವೆಯಾಗುವುದಾಗಿಯೂ ತಿಳಿಸಿದನಂತೆ. ಪೆರಿಯಾಳ್ವಾರ್‌ಗೆ ಬಹಳ ಸಂತೋಷವಾಯಿತು. ತನ್ನ ಪ್ರಾಪ್ತವಯಸ್ಕ ಳಾದ ಮುದ್ದುಕುವರಿಯನ್ನು ವಡಪೆರುಙ್ಕೋಯಿಲುಡೈಯಾನಿಗೆ (ಉತ್ತರದ ದೊಡ್ಡ ದೇವಾಲಯದ ಒಡೆಯನಿಗೆ) ಮದುವೆಮಾಡಿಕೊಟ್ಟು ತಾನು ಶ್ರೀರಂಗನಾಥನಿಗೆ ಮಾವ ನಾದನು. "ವಾರಣ ವಾಯಿರಮ್" ಎಂಬ ಪದ್ಯದಲ್ಲಿ ಹೇಳಿಕೊಂಡಿರುವ ಕನ್ನೆಯ ಬಯಕೆಯೆಲ್ಲಾ ಆಂಡಾಳಿಗೆ ಅನುಭವಸಿದ್ಧವಾಯಿತು. ಈಕೆಯ ವಿಷಯವಾಗಿ ವೇದಾಂತದೇಶಿಕರು ಶ್ರೀ ಗೋದಾಸ್ತುತಿಯೆಂಬ ಸ್ತೋತ್ರಮಾಲಿಕೆಯನ್ನು ಬಹು ಸರಳವಾದ ಸಂಸ್ಕೃತ ಶ್ಲೋಕಗಳಲ್ಲಿ ರಚಿಸಿದ್ದಾರೆ. ವಿಜಯನಗರದ ಶ್ರೀಕೃಷ್ಣದೇವ

ರಾಯನು ತೆಲುಗಿನಲ್ಲಿ 'ಆಮುಕ್ತಮಾಲ್ಯದ' ಎಂಬ ಗ್ರಂಥವನ್ನು ಬರೆದು, ಅದರಲ್ಲಿ ಆಂಡಾಳ್ ದಿವ್ಯಚರಿತ್ರೆಯನ್ನೇ ಹೇಳಿದ್ದಾನೆ.

ತೊಣ್ಡರಡಿಪ್ಪೊಡಿಯಾಟ್ವಾರ್ : ಸಂಸ್ಕೃತದ ಹೆಸರು ಭಕ್ತಾಂಘ್ರಿರೇಣು ; ಭಕ್ತರ ಪಾದಧೂಳಿಯೆಂದರ್ಥ. ವಿಪ್ರನಾರಾಯಣ ಎಂಬ ಹೆಸರೂ ಈತನಿಗೆ ಉಂಟು. ತಂಜಾವೂರು ಜಿಲ್ಲೆಯ ಮಣ್ಡಙ್ಗುಡಿಯೆಂಬೆಡೆಯಲ್ಲಿ ಕ್ರಿ.ಶ. ೮ನೆಯ ಶತಮಾನದಲ್ಲಿ ವಿಪ್ರಕುಲದಲ್ಲಿ ಹುಟ್ಟಿದ. ತಿರುಮಙ್ಗೈಯಾಟ್ವಾರ ಸಮಕಾಲೀನ. ಶ್ರೀರಂಗದ ಸಮೀಪದಲ್ಲಿ ತಿರುಕ್ಕರಮ್ಬನೂರಿನಲ್ಲಿ ಹೂತೋಟಮಾಡಿ ದೇವರಿಗೆ ಪುಷ್ಪಕೈಂಕರ್ಯ ನಡಸುತ್ತಿದ್ದ. ಈ ತೋಟಕ್ಕೆ ಹೂಕೊಯ್ಯಲು ಬಂದ ದೇವದೇವಿಯೆಂಬ ವೇಶ್ಯೆಯ ಮೋಹಪಾಶಕ್ಕೊಳಗಾಗಿ, ಕಡೆಗೆ ಜ್ಞಾನೋದಯವಾಯಿತು. ಆಗ ತಾನು ಮಾಡಿದ ತಪ್ಪನ್ನೊಪ್ಪಿಕೊಂಡು ರಂಗನಾಥನ ಭಕ್ತರ ಪಾದಧೂಳಿಯಾದನು. ಜಾತಿಯ ಹಿರಿಮೆಗಿಂತ ಅರಿವಿನ ಹಿರಿಮೆ ಶ್ರೇಷ್ಠವಾದುದೆಂದು ಇವನಷ್ಟು ನಿಖರವಾಗಿ, ನಿರ್ದಾಕ್ಷಿಣ್ಯವಾಗಿ ಹೇಳಿರುವವರು ಮತ್ತಾರೂ ಇಲ್ಲ. ಭಗವಂತನನ್ನು ವಿವಿಧ ರೀತಿಗಳಲ್ಲಿ ಕಂಡುಕೊಂಡು ಅದರಿಂದುಂಟಾದ ಭಕ್ತ್ಯತಿಶಯವನ್ನು 'ತಿರುಮಾಲೈ', 'ತಿರುಪ್ಪಳ್ಳಿಯಟುಚ್ಚಿ' ಎಂಬ ಪದ್ಯಗಳಲ್ಲಿ ಹಾಡಿದ್ದಾನೆ.

'ತಿರುಮಾಲೈ' ೪೫ ಪಾಶುರಗಳುಳ್ಳ ಸಿರಿಮಾಲೆ.

ಪಚ್ಚೈಮಾಮಲೈ ಪೋಲ್‌ಮೇನಿ ಪವಳವಾಯ್ ಕಮಲಚ್ಚೆಙ್ಗಣ್
ಅಚ್ಚುದಾ ಅಮರರೇಱೇ ಆಯರ್ ತಙಕೊೞುನ್ದೇಯೆನ್ನುಮ್
ಇಚ್ಚುವೈ ತವಿರಯಾನ್‌ಪೋಯ್ ಇನ್ದಿರಲೋಕ ಮಾಳುಮ್
ಅಚ್ಚುವೈ ಪೆಱಿನುಮ್ ಯಾನ್‌ವೇಣ್ಡೇನ್ ಅರಙ್ಗಮಾನಗರುಳಾನೇ

ಎಂಬ ಪಾಶುರದಲ್ಲಿ ಆಟ್ವಾರು ಹೊನ್ನಾಸೆಯಲ್ಲಿ ತನಗಿದ್ದ ವಿರಕ್ತಿ ಮನಮುಟ್ಟುವಂತೆ ಹೇಳಿಕೊಂಡಿದ್ದಾನೆ. ಇವನ 'ತಿರುಪುಳ್ಳಿಯೆಟುಚ್ಚಿ'ಯಲ್ಲಿ ೧೧ ಪಾಶುರಗಳಿವೆ. ಇದಕ್ಕೆ ಸಂಸ್ಕೃತದಲ್ಲಿ 'ಪ್ರಾಬೋಧಕೀ ಸೂಕ್ತಿ'ಯೆನ್ನುತ್ತಾರೆ. 'ತಿರುಪುಳ್ಳಿಯೆಟುಚ್ಚಿ' ಎಂದರೆ ಉದಯರಾಗದ ಗೀತೆ.

ತಿರುಪ್ಪಾಣಾಟ್ವಾರ್ : ಚೋಳ ರಾಜಧಾನಿಯಾಗಿದ್ದ ಉಱೈಯೂರಿನಲ್ಲಿ ಅಂತ್ಯಕುಲದಲ್ಲಿ ಹುಟ್ಟಿದ. ಮನೆ ಮನೆಗೆ ಪದ ಹೋಗಿ ಹಾಡಿ ಭಿಕ್ಷೆಯೆತ್ತಿ ಜೀವನ ಜರುಗಿಸುವ ಪಾಣರ್ ವಂಶಜ. ಕಾಲ ಸುಮಾರು ಕ್ರಿ.ಶ. ೮ನೆಯ ಶತಮಾನ. ಇವರಿಗೆ ವೀಣಾಗಾನದಲ್ಲಿ ಪಾಂಡಿತ್ಯವಿತ್ತು. ಇದಕ್ಕೆ ಸಮವಾಗಿ ಭಗವದ್ಭಕ್ತಿಯಿತ್ತು. ಇದರಿಂದ ಶ್ರೀರಂಗಕ್ಷೇತ್ರದಲ್ಲಿ ಕಾವೇರಿಯ ತೆಂಕಣ ಕರೆಯಲ್ಲಿ ಗುಡಿಸಲು ಕಟ್ಟಿಕೊಂಡು ಭಗವಂತನ ಮಹಾಮಹಿಮೆಯನ್ನು ಹೊಗಳಿ ಹಾಡುತ್ತ ಕಾಲಕಳೆಯುತ್ತಿದ್ದ. ನಿರಪರಾಧಿಯಾಗಿದ್ದರೂ ಅಂತ್ಯಕುಲದಲ್ಲಿ ಜನಿಸಿದ್ದೇ ಒಂದು ಕಾರಣವಾಗಿ ಜನರ ಉಪಟಳಕ್ಕೆ ತುತ್ತಾದ. ಕಡೆಗೆ ಶ್ರೀರಂಗನಾಥನ ಅಪ್ಪಣೆ ಪ್ರಕಾರ ಉತ್ತಮ ಕುಲಜರಾದ ಲೋಕಸಾರಂಗ ಮುನಿಗಳ ಹೆಗಲಮೇಲೆ ಕುಳಿತು ಶ್ರೀರಂಗದೇವಾಲಯವನ್ನು ಹೊಕ್ಕು ರಂಗನಾಥನನ್ನು ಆಪಾದ

ಮಸ್ತಕವಾಗಿ ಕಣ್ಣಾರ ಕಂಡು ಆನಂದಿಸಿ ಭಕ್ತಿಯ ಆವೇಶದಲ್ಲಿ 'ಅಮಲನಾದಿಪಿರಾನ್' ಎಂಬ ಹತ್ತು ಪಾಶುರಗಳುಳ್ಳ ಮಂಗಳಾಶಾಸನ ಹಾಡಿದ.

ತಿರುಮಙ್ಗೈಯಾೞ್ವಾರ್: ಇವನ ಮೊದಲಿನ ಹೆಸರು ನೀಲ. ಕಳ್ಳರ ಕುಲಕ್ಕೆ ಸೇರಿದ ಬೇಡರ ಗುಂಪಿನವನು. ತಂದೆಯಂತೆಯೇ ಚೋಳರಾಜನಿಗೆ ಸೈನ್ಯಾಧಿಪತಿಯಾಗಿದ್ದ. ಚೋಳನ ವಿಜಯಯಾತ್ರೆಗಳಲ್ಲಿ ನೆರವಾಗಿ ಧೈರ್ಯಸಾಹಸಗಳನ್ನು ಮೆರೆದು ರಾಜನ ಮೆಚ್ಚುಗೆಯನ್ನು ಸಂಪಾದಿಸಿ ತಿರುವಾಲಿನಾಡಿಗೆ ಪಾಳೆಯಗಾರನಾಗಿದ್ದ. ಸಂಗೀತ, ನೃತ್ಯ, ನಾಟಕ ಕವಿತೆಗಳಲ್ಲಿ ಆಸಕ್ತ. ತಿರುವಾಳಿಯ ತಿರುವೆಳ್ಳಕ್ಕುಳದ ಸಮೀಪದಲ್ಲಿ ದೊರೆತ ಕುಮುದವಲ್ಲಿಯನ್ನು ಮದುವೆಯಾಗುವುದಕ್ಕಾಗಿ ತನ್ನ ಮತವನ್ನು ಬದಲಾಯಿಸಿ ಕೊಳ್ಳಲೂ ಹಿಂಜರಿಯಲಿಲ್ಲ. ವೈಷ್ಣವನಾದರೂ ಆಕೆ ಹೇಳಿದ ಮಾತಿಗೆಲ್ಲ ಒಪ್ಪಿ ಅವ ಳನ್ನು ಮದುವೆಯಾದ. ಕಾಲಕ್ರಮದಲ್ಲಿ ತನ್ನ ಅಧಿಕಾರ, ಸಂಪತ್ತು ಎಲ್ಲವೂ ಹೋಗಿ ಬಂಗೈಯಾಗಲು ಕಳ್ಳನಾದ. ದಾರಿಹೋಕರನ್ನು ದೋಚುವುದು ಕಸುಬಾಯಿತು. ಒಂದು ದಿನ ಲಕ್ಷ್ಮೀನಾರಾಯಣನು ಮದುವಣಿಗರ ವೇಷ ತಾಳಿ ಆ ಮಾರ್ಗವಾಗಿ ಬಂದು ತಿರುಮಂಗೈಗೆ ಬುದ್ಧಿ ಕಲಿಸಿದ. ನಾರಾಯಣಮಂತ್ರದ ಮಹಿಮೆಯನ್ನು ತಿಳಿಸಿ ದನು. ಆತನಿಗೆ ಜ್ಞಾನೋದಯವಾಯಿತು. ತಮ್ಮ ಅಕಾರ್ಯಗಳಿಗಾಗಿ ಪಶ್ಚಾತ್ತಾಪ ಪಟ್ಟುಕೊಂಡು ನಾರಾಯಣ ಮಂತ್ರವು ತಮಗೆ ಸಂಸಾರತಾರಕವಾದುದನ್ನು ತನ್ನ 'ಪೆರಿಯ ತಿರುಮೊೞಿ'ಯಲ್ಲಿ ಹೇಳಿದ್ದಾರೆ. ಅನಂತರ ತಾನು ಸಂಪಾದಿಸಿದ ಹಣವನ್ನೆಲ್ಲ ಶ್ರೀರಂಗದ ದೇವಾಲಯದ ನಿರ್ಮಾಣ ಕಾರ್ಯದಲ್ಲಿ ವಿನಿಯೋಗಿಸಿದನೆಂಬ ಪ್ರತೀತಿ ಇದೆ.

ನಮ್ಮಾೞ್ವಾರನ್ನು ಬಿಟ್ಟರೆ ವಿಪುಲವಾಗಿ ಪ್ರಬಂಧರಚನೆ ಮಾಡಿದನೆಂದರೆ ತಿರುಮಂಗೈ ಯಾೞ್ವಾರ್. ಒಟ್ಟು ೧೩೬೧ ಪಾಶುರಗಳುಳ್ಳ ದಿವ್ಯಪ್ರಬಂಧವನ್ನು ರಚಿಸಿದ್ದಾರೆ. ಶೈವಸಮಯಾಚಾರ್ಯ ತಿರುನಾವುಕ್ಕರಸನಂತೆ ಆೞ್ವಾರುಗಳಲ್ಲಿ ತಿರುಮಂಗೈಯಾ ೞ್ವಾರು ಕೂಡ ಎರಡು 'ತಾಣ್ಡಕ'ಗಳನ್ನು ಹಾಡಿದ್ದಾನೆ. ಇವನು ಆಶು, ಮಧುರಮ್, ಚಿತ್ರಮ್, ವಿಸ್ತಾರಮ್ ಎಂಬ ನಾಲ್ಕು ವಿಧವಾದ ಪದ್ಯರಚನೆಯಲ್ಲಿ ಹೆಸರು ಪಡೆದು 'ನಾಲ್ಕವಿಪೆರುಮಾಳ್' ಎಂಬ ಪ್ರಶಸ್ತಿಗೆ ಪಾತ್ರನಾಗಿದ್ದಾನೆ.

ಹೀಗೆ ೧೨ ಜನ ಆೞ್ವಾರರು ತಮ್ಮ ಭಕ್ತಿಪೂರ್ವಕವಾದ ಭಾವಗೀತೆಗಳಿಂದ ತಮಿಳು ಸಾಹಿತ್ಯವನ್ನು ಸಮೃದ್ಧವನ್ನಾಗಿಸಿದ್ದಾರೆ. ತಮಿಳು ಸಾಹಿತ್ಯದ ಈ ಪ್ರಾಚೀನ ಸಂಪು ಟವು ಪ್ರಪಂಚದ ಇತರ ಸಾಹಿತ್ಯಗಳ ಇತಿಹಾಸದಂತೆಯೇ ಜನತೆಯ ಸಂಸ್ಕೃತಿಯ ವಿಕಾಸ ವನ್ನು ಪ್ರಕಟಿಸುತ್ತವೆ. ಪ್ರಾರಂಭದಲ್ಲಿ ಶೃಂಗಾರ ವೀರಕಾವ್ಯಗಳು, ಅನಂತರ ಧರ್ಮ ನೀತಿಗಳನ್ನು ಬೋಧಿಸುವ ಕೃತಿಗಳು, ವಿಜ್ಞಾನವನ್ನೂ ಮಾನವಿಯತೆಯನ್ನೂ ಎತ್ತಿ ಹಿಡಿಯುವ ಕೃತಿಗಳು.

# ತೆಲುಗು

ಈಗ ತಿಳಿದಿರುವಂತೆ ಕ್ರಿ.ಶ. ೧೧ನೆಯ ಶತಮಾನದಲ್ಲಿ ನನ್ನಯನಿಂದ ರಚಿತವಾದ 'ಆಂಧ್ರ ಮಹಾಭಾರತ'ವೇ ತೆಲುಗಿನ ಮೊತ್ತಮೊದಲನೆಯ ಮಹಾಕಾವ್ಯ. ಇದರಿಂದ ನನ್ನಯನನ್ನು 'ಆದಿಕವಿ' ಎಂದು ಹೇಳುವುದು ವಾಡಿಕೆ. ಆಶ್ವಾಸಾಂತ ಗದ್ಯಗಳಲ್ಲಿ "ಸಕಲ ಸುಕವಿಜನ ವಿನುತ ನನ್ನಯಭಟ್ಟ ಪ್ರಣೀತ"ವೆಂದು ಮಾತ್ರ ಹೇಳಿರುವುದು ಕಾಣುತ್ತದೆ. ಪೀಠಿಕೆಯ ಪದ್ಯಗಳಲ್ಲಿ ಯಾವ ತೆಲುಗು ಕವಿಯನ್ನೂ ಆತ ಹೆಸರಿಸಿಲ್ಲ. ಇಂಥ ಕಾರಣಗಳಿಂದಾಗಿ ಆತನ ಕಾಲದವರೆಗಿನ ತೆಲುಗು ಸಾಹಿತ್ಯದ ಸ್ಥಿತಿಗತಿಗಳನ್ನು ನಿರ್ದಿಷ್ಟವಾಗಿ ನಿರೂಪಿಸುವ ಸಾಧನಗಳು ಅಷ್ಟಾಗಿ ಇಲ್ಲ. ಆದುದರಿಂದಲೇ ಆ ಅವಧಿಯನ್ನು ಅಂಧಕಾರ ಯುಗವೆಂದು ಕೆಲವರು ಕರೆಯುವರು. ನನ್ನಯಪೂರ್ವಕಾಲದಲ್ಲಿ ಹುಟ್ಟಿದ ಯಾವ ಕಾವ್ಯವೂ ಈವರೆಗೆ ಲಭಿಸದಿರಬಹುದು. ಆದರೆ ಆ ಕಾಲದಲ್ಲಿ ತೆಲುಗು ಸಾಹಿತ್ಯವೇ ಇರಲಿಲ್ಲವೆಂದು ಹೇಳುವುದು ತಪ್ಪಾಗುತ್ತದೆ. ಏಕೆಂದರೆ ಇದ್ದಕ್ಕಿದ್ದಂತೆ ಆಂಧ್ರಮಹಾಭಾರತದಂತಹ ಒಂದು ಉದ್ಗ್ರಂಥ ತೆಲುಗುಭಾಷೆ ಸಾಹಿತ್ಯಗಳ ಪಕ್ವವಾದ ಬೆಳವಣಿಗೆಯ ಹಿನ್ನೆಲೆಯೊಂದು ಇದ್ದಲ್ಲದೆ ಹುಟ್ಟುವುದು ಅಸಂಭವ.

ತಮಿಳು, ಕನ್ನಡ ಭಾಷೆಗಳಂತೆಯೇ ತೆಲುಗು ಕೂಡ ಭಾರತದ ಪ್ರಾಚೀನ ಭಾಷೆಗಳಲ್ಲಿ ಒಂದು. 'ತೆಲುಗು', 'ಆಂಧ್ರ' ಎಂಬ ಪದಗಳು ಸಮಾನಾರ್ಥಕಗಳು. ಆಂಧ್ರವೆಂಬ ಜನಾಂಗದ ಪ್ರಸಕ್ತಿ ವೇದ ಕಾಲದಷ್ಟು ಪ್ರಾಚೀನವಾದ್ದು. ಋಗ್ವೇದಕ್ಕೆ ಸಂಬಂಧಿಸಿದ 'ಐತರೇಯ ಬ್ರಾಹ್ಮಣ'ದಲ್ಲಿ ವಿಶ್ವಾಮಿತ್ರ ತನ್ನ ಮಕ್ಕಳನ್ನು ಶಪಿಸಿದನೆಂದೂ ಅವರೇ ಆಂಧ್ರ, ಪುಂಡ್ರ, ಶಬರ, ಪುಳಿಂದ ನಾಮಗಳನ್ನು ಧರಿಸಿ ಬಾಳಿದರೆಂದೂ ಹೇಳಲಾಗಿದೆ.[74] ಇದರಿಂದ 'ಐತರೇಯ ಬ್ರಾಹ್ಮಣ'ದ ಕಾಲಕ್ಕೆ ಆಂಧ್ರರೆಂಬವರು ಇದ್ದರೆಂದೂ ಅವರು ನಾಗರಿಕರಾಗಿರಲಿಲ್ಲವೆಂದೂ ತಿಳಿಯುತ್ತದೆ. ಆ ಕಾಲಕ್ಕೆ ಅವರಿಗೆ ಒಂದು ಭಾಷೆ ಇದ್ದಿತೆಂದಾಗಲಿ, ಆ ಭಾಷೆಗೆ ಆಂಧ್ರಭಾಷೆ ಎಂಬ ಹೆಸರಿದ್ದಿತೆಂದಾಗಲಿ ದಾಖಲೆಗಳಿಲ್ಲ.

ಸಂಸ್ಕೃತ ಲೌಕಿಕ ಸಾಹಿತ್ಯದಲ್ಲಿ ಆದಿಕಾವ್ಯವೆಂದು ಹೆಸರು ಪಡೆದಿರುವ ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಸೀತಾನ್ವೇಷಣೆ ಮಾಡಬೇಕಾದ ಸ್ಥಳಗಳನ್ನು ವಾನರರಿಗೆ ತಿಳಿಸುವಾಗ ಸುಗ್ರೀವ ಆಂಧ್ರದೇಶವನ್ನೂ ಸೇರಿಸಿದನೆಂದು ತಿಳಿಯುತ್ತದೆ.[75] ಎಂದರೆ ಈ ಕಾಲಕ್ಕೆ ವೇದಕಾಲದಲ್ಲಿ ಒಂದು ಜನಾಂಗವಾಗಿ ಮಾತ್ರ ಇದ್ದ ಆಂಧ್ರರ ಹೆಸರಿನಲ್ಲಿ ಒಂದು ಪ್ರದೇಶವೂ ಇತ್ತೆಂದಾಯಿತು. 'ಮನುಸ್ಮೃತಿ'ಯ ಕಾಲಕ್ಕೆ ಆಂಧ್ರರು ಇನ್ನೂ ಅನಾಗರಿಕರೇ ಆಗಿದ್ದು, ಪಶುಹಿಂಸೆಯಿಂದ ಜೀವಿಸುತ್ತಿದ್ದರು. ಅವರು ವೈದೇಹನಿಗೆ ಕಾರಾವರ ಸ್ತ್ರೀಯಲ್ಲಿ ಹುಟ್ಟಿದವರೆಂದು ಅಲ್ಲಿ ಹೇಳಿದೆ.[76] ಮಹಾಭಾರತ ಕಾಲಕ್ಕೆ ಆಂಧ್ರರು ಅರಸರೇ ಆಗಿದ್ದರು. ಮಯಸಭೆಯಲ್ಲಿ ಧರ್ಮರಾಜನನ್ನು ಸುತ್ತುವರಿದಿದ್ದ ರಾಜರಲ್ಲಿ ಆಂಧ್ರರೂ ಸೇರಿದ್ದಾರೆ.[77] ಹೀಗೆ 'ಐತರೇಯ ಬ್ರಾಹ್ಮಣ', 'ಮನುಸ್ಮೃತಿ', ರಾಮಾಯಣ, ಮಹಾಭಾರತ, ನಾಟ್ಯಶಾಸ್ತ್ರಾದಿ ಗ್ರಂಥಗಳಲ್ಲಿ ಪ್ರಸಕ್ತರಾಗಿದ್ದರೂ

ಆಂಧ್ರರ ವಿಚಾರದಲ್ಲಿ ಖಚಿತವಾದ ಆಧಾರಗಳು ಇನ್ನೂ ಸಾಕಷ್ಟಿಲ್ಲ.

ಮೌರ್ಯಚಂದ್ರಗುಪ್ತನ ಕಾಲಕ್ಕೆ ಆಂಧ್ರರು ಪ್ರಭಾವಶಾಲಿಗಳಾಗಿದ್ದರು. ಆತನ ಆಸ್ಥಾನಕ್ಕೆ ರಾಯಭಾರಿಯಾಗಿ ಬಂದಿದ್ದ ಮೆಗಾಸ್ತನೀಸ್, ಮೌರ್ಯರನ್ನು ಬಿಟ್ಟರೆ ಆಂಧ್ರರೇ ಶೂರರಾಗಿದ್ದಾರೆಂದು ತಿಳಿಸಿದ್ದಾನೆ.[78] ಇಷ್ಟು ಬಲವತ್ತರವಾದ ರಾಜ್ಯವಿರ ಬೇಕಾದರೆ, ಅದಕ್ಕೆ ಒಂದು ಶತಮಾನವಾದರೂ ಪೂರ್ವದಲ್ಲೇ ಅದು ಸ್ಥಾಪಿತವಾಗಿರ ಬೇಕೆಂದು ಊಹಿಸಲಾಗಿದೆ. ಸುಚಂದ್ರನ ಕುಮಾರನಾದ ಆಂಧ್ರವಿಷ್ಣು ಎಂಬುವನು ನಿಶುಂಭನೆಂಬ ರಾಕ್ಷಸನೊಂದಿಗೆ ಯುದ್ಧ ಮಾಡಿ, ಅವನನ್ನು ಕೊಂದು ಒಂದು ರಾಜ್ಯವನ್ನು ಸ್ಥಾಪಿಸಿದನೆಂದೂ ಆ ರಾಜ್ಯದ ಭೀಮೇಶ್ವರ, ಕಾಳೇಶ್ವರ ಶ್ರೀಶೈಲ ಲಿಂಗಗಳಿಂದಾಗಿ ಆ ದೇಶಕ್ಕೆ ತ್ರಿಲಿಂಗದೇಶವೆಂಬ ಹೆಸರು ಬಂದಿತೆಂದೂ 'ಬ್ರಹ್ಮಾಂಡ ಪುರಾಣ'ದಲ್ಲಿ ಒಂದು ಕಥೆಯಿದೆ. ಈ ಕಥೆಯಲ್ಲಿರುವ ರಾಜ ಈ ರಾಜ್ಯವನ್ನು ಕ್ರಿ.ಪೂ. ೫-೬ನೆಯ ಶತಮಾನ ಗಳಲ್ಲಿ ಸ್ಥಾಪಿಸಿರಬಹುದೆಂಬುದು ಒಂದು ಊಹೆ.[79]

ಸಾತವಾಹನರ ಬಗೆಗೆ ಇರುವ ಅನೇಕ ಸಂದೇಹಗಳು ಹಾಗೆಯೇ ಉಳಿದಿವೆ. ಪುರಾಣ ಗಳಲ್ಲಿ 'ಆಂಧ್ರಭೃತ್ಯ' ಎಂದಿರುವ ಹೆಸರು ಸಾತವಾಹನರು ಆಂಧ್ರರೆಂಬುದಕ್ಕೆ ಸಂಕೇತ ವೆಂದು ಕೆಲವರ ಅಭಿಪ್ರಾಯ. ಸಾತವಾಹನರು ತಮ್ಮ ದೇಶವನ್ನು ಎಲ್ಲೂ 'ಆಂಧ್ರದೇಶ' ವೆಂದು ಕರೆದುಕೊಂಡಿಲ್ಲ. ೧ನೆಯ ರುದ್ರದಾಮನ ಜುನಾಗಡ್ ಶಿಲಾಶಾಸನದಲ್ಲಿ 'ದಕ್ಷಿಣಾಪಥಪತೇಃ ಶಾತಕರ್ಣೇಃ' ಎಂದಿದೆ. ಏನಿದ್ದರೂ ಸಾತವಾಹನರು ಆಂಧ್ರ ಪ್ರದೇಶವನ್ನು ಆಳಿದರೆಂಬುದನ್ನು ಒಪ್ಪಬಹುದು. ಅವರು ಆಂಧ್ರರೆಂದು ಹೇಳುವ ಪ್ರಶ್ನೆ ವಿಚಾರಣೀಯವಾಗಿದ್ದರೂ ಅವರ ಕಾಲದ ಪ್ರಾಕೃತ ಶಾಸನಗಳಲ್ಲಿ ಕೆಲವು ತೆಲುಗು ಪದಗಳು ಕಂಡುಬರುತ್ತಿದ್ದು, ಆ ಕಾಲದಲ್ಲಿ ತೆಲುಗು ಭಾಷೆ ಬಳಕೆಯಲ್ಲಿದ್ದಿತೆಂದು ಹೇಳು ವುದಕ್ಕೆ ಅದರಿಂದ ಆಸ್ಪದವಿದೆ.

ಪೂರ್ವೋಕ್ತವಾದ ಕೆಲವು ಉಲ್ಲೇಖಗಳ ಆಧಾರದ ಮೇಲೆ ಆಂಧ್ರ ಜನಾಂಗ, ಆಂಧ್ರದೇಶ, ಆಂಧ್ರ ಭಾಷೆಗಳನ್ನು ಕುರಿತು ಕೆಲವು ಊಹೆಗಳನ್ನು ಮಾಡಲು ಅವಕಾಶ ದೊರೆಯುತ್ತದೆ. ಸಾತವಾಹನರೇ ಮುಂತಾದವರು ಆಳ್ವಿಕೆ ನಡಸಿದ ಕಾಲಕ್ಕೆ ಬಹಳ ಹಿಂದೆಯೇ ದ್ರಾವಿಡರು ಉತ್ತರಾಪಥದಲ್ಲಿ ವಿಶೇಷವಾಗಿ ನೆಲಸಿದ್ದರು. ಈಗಲೂ ಕೆಲವು ಉತ್ತರ ಭಾರತದ ಪ್ರದೇಶಗಳಲ್ಲಿ ದ್ರಾವಿಡ ಭಾಷೆಗಳು ಬಳಕೆಯಲ್ಲಿವೆ. 'ಐತರೇಯ ಬ್ರಾಹ್ಮಣ'ದ ಆಂಧ್ರ, ಪುಂಡ್ರ, ಶಬರರೇ ಮುಂತಾದವರು ದ್ರಾವಿಡ ವರ್ಗದವರೇ ಆಗಿರಬಹುದು. ಇಲ್ಲವೆ ಬಹಿಷ್ಕೃತರಾದ ಆರ್ಯರ ಮತ್ತು ದ್ರಾವಿಡರ ಸಂಗಮದಿಂದ ಆಂಧ್ರ ಜನಾಂಗದವರು ಹುಟ್ಟಿರಬಹುದು. 'ಮನುಸ್ಮೃತಿ'ಯಲ್ಲಿ ಆಂಧ್ರರು ಸಂಕರ ಜಾತಿಯವರು ಎಂದಿರುವುದು ಇದಕ್ಕೆ ಪೋಷಕವಾಗಿದೆ. ಕಾಲಕ್ರಮೇಣ ಆಂಧ್ರರು ಬಲಿಷ್ಠರೂ ನಾಗರಿಕರೂ ಆಗಿ ರಾಮಾಯಣ ಭಾರತಗಳ ಕಾಲಕ್ಕೆ ಕೆಲವು ರಾಜ್ಯ ಗಳನ್ನೇ ಸ್ಥಾಪಿಸಿದರು. ಆಂಧ್ರದೇಶ, ಅಂಧಾಪಥೀಯ, ತ್ರಿಲಿಂಗದೇಶ, ತಿಲಿಂಗಂ ಮುಂತಾದ ಹೆಸರುಗಳು ಅತಿ ಪ್ರಾಚೀನಕಾಲದಿಂದಲೇ ಬಳಕೆಯಲ್ಲಿವೆ. ಆದರೆ ತೆಲುಗು

ಭಾಷೆ ಸಾಹಿತ್ಯರೂಪವನ್ನು ಪಡೆದ ಕಾಲವನ್ನು ನಿಶ್ಚಿತವಾಗಿ ಗುರುತಿಸುವುದು ಕಷ್ಟದ ಕೆಲಸ.

ತೆಲುಗು ಭಾಷೆ ಕ್ರಿ.ಪೂ. ೧-೨ ಶತಮಾನಗಳಿಂದ ಬಳಕೆಯಲ್ಲಿದೆ ಎಂಬುದಕ್ಕೆ ಶಾಸನಸ್ಥ ಆಧಾರಗಳಿವೆ. ಕ್ರಿ.ಪೂ. ೨ನೆಯ ಶತಮಾನದ ಅಮರಾವತಿ ಸ್ತೂಪದಲ್ಲೇ 'ಕೆವುರೂರೇ' ಮತ್ತು 'ಕುದೂರ' ಎಂಬ ಎರಡು ತೆಲುಗು ಪದಗಳು ಕಾಣಿಸುತ್ತವೆ. ಕ್ರಿ.ಶ. ೩ನೆಯ ಶತಮಾನದ ಅಮರಾವತಿ ಶಾಸನದಲ್ಲಿ 'ನಾಗಬು' ಎಂಬ ಮಾತು ಇದೆ. 'ನಾಗ' ಸಂಸ್ಕೃತವಾಗಿದ್ದು, 'ಬು' ತೆಲುಗು ಪ್ರತ್ಯಯವಾಗಿದೆ. ಇದೇ ಆಮೇಲೆ 'ನಾಗಮ್ಬು'>'ನಾಗಮ್ಮು' ಆಗಿ ಇಂದಿನ 'ನಾಗಮು' ಆಗಿದೆ. ಇದರಿಂದ ಕ್ರಿ.ಶ.ದ ಆದಿ ಕಾಲದಲ್ಲೇ ತೆಲುಗು ಭಾಷೆ ಇತ್ತೆಂದು ಭಾವಿಸಬಹುದಾಗಿದೆ.

'ಗಾಥಾಸಪ್ತಶತಿ'ಯಲ್ಲಿ (೧ನೆಯ ಶ.) ಹಾಲನಿಂದಲೇ ರಚಿತವಾದ ಪದ್ಯಗಳ ಜೊತೆಗೆ ಇನ್ನೂ ಅನೇಕ ಕವಿಗಳ ಪದ್ಯಗಳಿವೆ. ಆ ಕವಿಗಳಲ್ಲಿ ಕೆಲವರು ತೆಲುಗಿನವರೂ ಇರಬಹುದೆಂದು ಊಹಿಸಲಾಗಿದೆ. 'ಗಾಥಾಸಪ್ತಶತಿ'ಯಲ್ಲಿ ಕೆಲವು ತೆಲುಗು ಪದಗಳಿವೆ ಎಂದು ಹೇಮಚಂದ್ರನ 'ದೇಶೀನಾಮಮಾಲಾ' ಎಂಬ ಗ್ರಂಥದಿಂದ ತಿಳಿಯುವುದುಂಟು. ಆದರೆ ಅವು ತೆಲುಗು ಪದಗಳೋ ಕನ್ನಡ ಪದಗಳೋ ಇಲ್ಲವೆ ಮೂಲದ್ರಾವಿಡ ಪದಗಳೋ ನಿರ್ಣಯಿಸುವುದು ಕಷ್ಟದ ಕೆಲಸ. ಆದರೂ ಇತರ ಭಾಷೆಗಳಲ್ಲಿ ಇಲ್ಲದ ಕೆಲವನ್ನು ತೆಲುಗು ಪದಗಳೆಂದು ಹೇಳುವ ಸಾಧ್ಯತೆಯಿದೆ. ಗಾಥೆಗಳಲ್ಲಿ ಬಳಕೆಯಾಗಿರುವ ಅಂಥವನ್ನು ಇಲ್ಲಿ ಸೂಚಿಸಬಹುದು :[೩೦]

(i) ಅತ್ತ (=ಅತ್ತೆ), ಕುಮಾರಿಲಕ (೧-೮); (ii) ಅವ್ವೋ (=ಅಯ್ಯೋ), ಶಾಲಿವಾಹನ (೫-೭೫), (iii) ಅವ್ವೋ (=ಆಹಾ), ಸರಳ (೩-೭೩); (iv) ಕೈ (=ಚತುರ್ಥೀ ವಿಭಕ್ತಿ ಪ್ರತ್ಯಯ), ಹರಿಯಾಲ (೧-೩೦). (v) ಪಿಲುಆ (=ಹುಡುಗಿ), ಮಾಣ (೨-೨).

ಈ ಪದಗಳ ಆಧಾರದಿಂದ ಆ ಕಾಲದಲ್ಲಿ ತೆಲುಗು ಭಾಷೆ ಬಳಕೆಯಲ್ಲಿತ್ತೆಂದು ಊಹಿಸಿದೆ. ಕ್ರಿ.ಪೂ. ೨ನೆಯ ಶತಮಾನದಿಂದ ಕ್ರಿ.ಶ. ೬ನೆಯ ಶತಮಾನದವರೆಗಿನ ಅನೇಕ ಪ್ರಾಕೃತ ಸಂಸ್ಕೃತ ಶಾಸನಗಳಲ್ಲಿ ಅಸಂಖ್ಯಾತವಾದ ತೆಲುಗು ಗ್ರಾಮನಾಮಗಳು, ವ್ಯಕ್ತಿನಾಮಗಳು ಕಂಡುಬರುತ್ತವೆ. ಸಾತವಾಹನರು, ಇಕ್ಷ್ವಾಕರು, ಬೃಹತ್ಫಲಾಯನರು, ಶಾಲಂಕಾಯನರು, ಪಲ್ಲವರು ಆಂಧ್ರಪ್ರದೇಶವನ್ನು ಆಳಿದರೂ ಅವರ ಕಾಲದ ಶಾಸನಗಳು ಪ್ರಾಕೃತ ಮತ್ತು ಸಂಸ್ಕೃತ ಭಾಷೆಗಳಲ್ಲಿವೆ. ಅಷ್ಟಕ್ಕೇ ನಾವು ಆ ಕಾಲದಲ್ಲಿ ತೆಲುಗು ಭಾಷೆ ಇರಲಿಲ್ಲ ಎಂದು ಹೇಳಲಾಗದು. ಏಕೆಂದರೆ ಆ ಕಾಲದ ಆಡಳಿತ ಭಾಷೆ ಪ್ರಾಕೃತ ಅಥವಾ ಸಂಸ್ಕೃತ. ತೆಲುಗು ಜನವ್ಯವಹಾರದಲ್ಲಿದ್ದಿರಬೇಕು ಎಂಬುದಕ್ಕೆ ಶಾಸನಗಳಲ್ಲಿ ಸಿಕ್ಕುವ ಪದಗಳೇ ಸಾಕ್ಷಿ. ಒಂದು ಭಾಷೆ ಬಳಕೆಯಲ್ಲಿದ್ದರೂ ಶಾಸನಗಳಲ್ಲಿ ಅಥವಾ ಗ್ರಂಥಗಳಲ್ಲಿ ಸ್ಥಾನ ಪಡೆಯದಿರುವುದಕ್ಕೆ ಅನೇಕ ಕಾರಣಗಳಿರುತ್ತವೆ. ಭರತನು ತನ್ನ 'ನಾಟ್ಯಶಾಸ್ತ್ರ'ದಲ್ಲಿ ಸ್ತ್ರೀಯರು ಬರ್ಬರ, ಕಿರಾತ, ಆಂಧ್ರ,

ದ್ರವಿಡ ಜಾತಿಗಳಿಗೆ ಸೇರಿದವರಾಗಿದ್ದರೂ ಶೌರಸೇನಿಯನ್ನೇ ಉಪಯೋಗಿಸಬೇಕೆಂದೂ ಅವರವರ ಭಾಷೆಗಳನ್ನು ಬಳಸಬಾರದೆಂದೂ ಕಟ್ಟುಮಾಡಿದ್ದಾನೆ.[31] ಇಂಥ ನಿಷಿದ್ಧಗಳೇ ಆಂಧ್ರಭಾಷೆಯ ಬಳಕೆಯನ್ನು ಗ್ರಾಂಥಿಕವಾಗದಂತೆ ತಡೆಗಟ್ಟಿವೆ ಎಂದು ಊಹಿಸಬಹುದು. ಆದರೆ ಜನರ ವ್ಯವಹಾರದಲ್ಲಿರುವ ಈ ಭಾಷೆಯ ಅನೇಕ ಪದಗಳು ಸಂಸ್ಕೃತ ಪ್ರಾಕೃತ ಶಾಸನಗಳಲ್ಲಿ ನುಸುಳಿಕೊಂಡವು. ಅಂತಹ ಕೆಲವು ಪದಗಳನ್ನು ಇಲ್ಲಿ ಪರಿಶೀಲಿಸಬಹುದು.[32]

| ಪದ | ಶಾಸನ | ಕಾಲ |
|---|---|---|
| ೧. ವೇಪುರಕೇ | ಪುಳುಮಾವಿ; ಮ್ಯಾಕದೋನಿ ಶಾಸನ | ೨೦೦ |
| ೨. ಮಹಾತಗವರ | ಕೊಂಡಮುಡಿ ಜಯವರ್ಮನ ಶಾಸನ | ೨೭೦–೨೮೫ |
| ೩. ಣಡತೂರೇ | ಇಕ್ಷ್ವಾಕರ ಶಾಸನ | ೩ನೆಯ ಶ. |
| ೪. ಮುಯೂರ್ ಕೊಟುವ | ಪಲ್ಲವ ವಿಷ್ಣುಗೋಪವರ್ಮ; ಚೂರ ದಾನ ಶಾಸನ | ೩೪೦ |
| ೫. ಅನ್ತುಕ್ಕೂರ | ಅತ್ತಿವರ್ಮ; ಗೋರಂಟ್ಲ ಶಾಸನ | |
| ೬. ಕೊಟ್ಟಶರ್ಮ | ಅತ್ತಿವರ್ಮ; ಗೋರಂಟ್ಲ ಶಾಸನ | ೪ನೆಯ ಶ. |
| ೭. ಗೋಲಶರ್ಮ | ವಿಜಯಸ್ಕಂದಶರ್ಮ; ಓಂಗೋಡು ಶಾಸನ | ೪ನೆಯ ಶ. |
| ೮. ಕವುಬ್ಬುರಾಣಿಚ್ಚಿರುವೇ | ಶಾಲಂಕಾಯನ ನಂದಿವರ್ಮ; ಪೆದ ವೇಗಿ ಶಾಸನ | ೪೭೫ |
| ೯. ಮಂಚಣ್ಣ | ಮಾಧವವರ್ಮ; ಈಪೂರು ತಾಮ್ರ ಶಾಸನ | ೪೯೫ |
| ೧೦. ಏಳೂರ | ವಿಜಯದೇವವರ್ಮ; ತಾಮ್ರ ಶಾಸನ | ೫ನೆಯ ಶ. |

ಈ ಪದಗಳ ಸ್ವರೂಪದಿಂದ ತೆಲುಗು ಭಾಷೆಯ ಪ್ರಾಚೀನತೆಯನ್ನು ಸ್ವಲ್ಪಮಟ್ಟಿಗೆ ಊಹಿಸಬಹುದು. ಏಳೂರ (ಆ < ಏ), ಚೆರುವು (ಕ > ಚ), ಮುಯೂರ್‌ಕೊಟುವ (ಮೂರು ಪದಗಳ ಸಮಾಸ) ಇಂಥವು ಆ ಕಾಲಕ್ಕೆ ತೆಲುಗು ಸಾಕಷ್ಟು ಬೆಳೆದಿತ್ತು ಎಂಬುದನ್ನು ಸೂಚಿಸಲು ಸಾಕು. ಇಷ್ಟಿದ್ದರೂ ೭ನೆಯ ಶತಮಾನದವರೆಗೂ ತೆಲುಗು ಶಾಸನಗಳೇನೂ ದೊರೆಯದೆ ಇರುವುದರಿಂದ ತೆಲುಗು ಭಾಷೆಯ ಸ್ವರೂಪವನ್ನು ಸರಿಯಾಗಿ ನಿರ್ಣಯಿಸಲು ಸಾಧ್ಯವಾಗುವುದಿಲ್ಲ.

ಕ್ರಿ.ಶ. ೬ನೆಯ ಶತಮಾನದಿಂದೀಚೆಗೆ ರೇನಾಟಿ ಚೋಳರೂ ಚಾಲುಕ್ಯರೂ ಹಾಕಿಸಿದ ಅನೇಕ ತೆಲುಗು ಶಾಸನಗಳು ದೊರಕಿವೆ. ನನ್ನಯ ಪೂರ್ವಯುಗದಲ್ಲಿ ಸು. ೧೦೦ ಇಂಥ ತೆಲುಗು ಶಾಸನಗಳಿವೆ. ರೇನಾಟಿ ಚೋಳರದಾಗಿ ದೊರೆತಿರುವ ೩೩ ಶಾಸನಗಳಲ್ಲಿ ಧನಂಜ ಯನ ಕಲಮಳ್ಲ ಶಾಸನ ತೀರ ಹಳೆಯದು. (೬ನೆಯ ಶತಮಾನದ ಉತ್ತರ ಭಾಗ). ಅದೇ ಈಗಿನವರೆಗೆ ತೆಲುಗು ಭಾಷೆಯ ಅತ್ಯಂತ ಪ್ರಾಚೀನ ಶಾಸನವೂ ಆಗಿದೆ. ಇದರ ಪಾಠ :[೮೩]

೧. ........
೨. ಕಲ್‌ಮು (ತು) ರಾ
೩. ಜು ಧನಂಜ
೪. ಯುಲು ರೇನಾ
೫. ಣ್ಡು ಏಳನ್
೬. ಚಿಱುಮ್ರೂರಿ
೭. ರೇವಣಕಾಲು (ಪವ್)
೮. ಪು ಚೆನೂರು ಕಾಜು
೯. ಅಳಿಕಲಾ (ಊ)ರಿ
೧೦. ಣ್ಡವಾರು (ಊರಿ)
೧೧-೧೪. ........
೧೫. ........ಪಣ್ಗು (ಮ)
೧೬. ಹಾಪಾತಕ ಸ
೧೭. (ಕು)

ತೆಲುಗು ಪದಗಳೇ ಇಲ್ಲಿ ಹೆಚ್ಚಾಗಿವೆ. ೬ನೆಯ ಶತಮಾನದ ಕಾಲಕ್ಕೆ ತೆಲುಗು ಸಾಕಷ್ಟು ಬೆಳೆದಿತ್ತೆಂಬುದನ್ನು ಇದು ಸೂಚಿಸುತ್ತದೆ. ೬-೭ನೆಯ ಶತಮಾನಗಳಿಗೆ ಸೇರಿದ ಅನೇಕ ಗದ್ಯಶಾಸನಗಳು ಇಂದು ದೊರಕಿವೆ. ೭ನೆಯ ಶತಮಾನದ ಪುಣ್ಯಕುಮಾರ ಚೋಳಮಹಾರಾಜನ ರಾಮೇಶ್ವರ ಸ್ತಂಭಶಾಸನ ರೇನಾಟಿ ಚೋಳರ ಶಾಸನಗಳಲ್ಲಿ ಸಮಗ್ರವಾದ್ದು. ಇದೂ ಹೆಚ್ಚು ತೆಲುಗು ಪದಗಳಿಂದ ಕೂಡಿದ್ದು, ಆ ಕಾಲಕ್ಕೆ ತೆಲುಗು ಭಾಷೆ ಚೆನ್ನಾಗಿ ಬೆಳೆದಿತ್ತೆಂಬುದನ್ನು ತೋರಿಸುತ್ತದೆ. ಇದರ ಪಾಠ :[೮೪]

೧. ಸ್ವಸ್ತಿ ಶ್ರೀ ಪೋ
೨. ಮ್ಮುರ್ಗಿಖ ರಾಮಪುಣ್ಯಕು
೩. ಮಾರ ಪ್ರಿಥಿವೀ ವಲ್ಲಭ
೪. ಚೋಳಮಹಾರಾಜುಲಕು

೫. ಪ್ರವರ್ದ್ಧಮಾನವಿ
೬. ಜಯರಾಜ್ಯ ಸಂವತ್ಸರಮ್ಬುಳ್ ಯೇ
೭. ನಗು ನಾಣ್ಡು ವಸಂತಿ ಪೋಱ
೮. ಚೋಳ ಮಹಾದೇವುಲು ತಾರು
೯. ಮುನ್ಟಿ ವಸಂತೀಶ್ವರಮ್ಬುನ ಪೂಳ್ಲ
೧೦. ವಟ್ಟಂಬುನ ವಾರಿಕಿ ವಿರಿಪಱ
೧೧. ತಿ ಪುಲೊಮ್ಬುನ ರೆಣ್ಡು ತೋಟಲು
೧೨. (ರಿ) ಹಿತಮ್ಬು ರಾಚಮಾನಮ್ಬುನ
೧೩. ಮುನ್ನೂಱು ನೇಲ ಮಾ
೧೪. ಱ್ಪಿಡುಗು ರಟ್ಟಗುಳ್ಲ
೧೫. ಆನತಿಗಾನು ವಸನ್ತೀಶ್ವ
೧೬. ರಮ್ಬುನ ಕಿಚ್ಚಿನದಿ [।] ದೀ
೧೭. [ನಿ] ಕಿ ವಕ್ರಮ್ಬು ವಚ್ಚುವಾ
೧೮. ನ್ಟಾ [ಗಳ] ರೇನಿ ಬಾರ
೧೯. ನಾಸಿ ವೇವುರು ಪಾಱ
೨೦. ಜಮ್ಪಿನ ವಾನ್ಟು ಗಟ್ಟು
೨೧. ವಿರಿಪಱತಿ ಕಮ್ಮ(ರಿ) ವಿನಿ
೨೨. ಯನ ವ್ರಾಸೆ

ಇದೊಂದು ದಾನಶಾಸನ. ಆದರೆ ಇಂಥ ದಾನಶಾಸನಗಳಿಂದ ನಮಗೆ ಅಂದಿನ ಸಾಹಿತ್ಯದ ಸ್ಥಿತಿ ತಿಳಿಯುವುದಿಲ್ಲ. ಎರಿಕಲ್ ಮುತ್ತುರಾಜನ ಎರ್ರಗುಡಿ ಪಾಡುಶಾಸನ, ಭೈರವಕೊಂಡ ಶಾಸನ, ಇಂದುಕೂರು ಶಾಸನ, ಪೊಟ್ಲದುರ್ತಿ ಶಾಸನ, ವಿಪ್ಪರ್ಲ ಶಾಸನ, ತಿಪ್ಪಲೂರು ಶಾಸನ—ಮುಂತಾದವು ಇಂಥವು. ಇವುಗಳಲ್ಲಿ ಸಾಹಿತ್ಯಿಕ ಗುಣ ಇಲ್ಲ.

೬ರಿಂದ ೯ನೆಯ ಶತಮಾನದವರೆಗೆ ಕಂಡುಬರುವ ತೆಲುಗು ಗದ್ಯಮಯ ಶಾಸನಗಳಲ್ಲಿರುವ ಭಾಷೆ ಅರ್ಥವಾಗುವುದು ಕಷ್ಟ. ಈ ಭಾಷೆಯ ಕೆಲವು ಪದಗಳು ಮೂಲ ದ್ರಾವಿಡಕ್ಕೆ ಹತ್ತಿರವಿರಬಹುದು. ವೈದುಂಬರ ಶಾಸನಗಳು ಮದನಪಲ್ಲಿ, ಪುಂಗನೂರು, ರಾಯಚೋಟಿ ಮುಂತಾದ ಪ್ರಾಂತ್ಯಗಳಲ್ಲಿ ದೊರಕುತ್ತವೆ. ಇವುಗಳ ಮೇಲೆ ಪ್ರಾಕೃತದ ಪ್ರಭಾವ ಹೆಚ್ಚಾಗಿದೆ. ಅನಂತರ ಕಾಲದಲ್ಲಿ ಸಂಸ್ಕೃತ ಪ್ರಭಾವ ಹೆಚ್ಚಾಯಿತು. ಅರಸರ ಬಿರುದಾವಳಿಯನ್ನು ಬರೆಯುವ ಸಮಯದಲ್ಲಿ ದೀರ್ಘ ಸಂಸ್ಕೃತ ಸಮಾಸಗಳನ್ನು ಉಪಯೋಗಿಸುತ್ತಿದ್ದರು. ಈಗ ಮರೆಯಾಗಿರುವ ಅನೇಕ ವಿಭಿನ್ನ ಧ್ವನಿಗಳು ಪ್ರಾಚೀನ ತೆಲುಗು ಶಾಸನಗಳಲ್ಲಿದ್ದುವು. ತಾನ್ಟಿಕೊನ್ಟ, ಱಿಱಗೊನ್ಟಮ್, ಬಿಗುಬಮ್ಬು, ಮುಗನ್, ಅರಸನ್, ಮಗನ್ಡು, ವಿಜಯರಾಜ್ಯ ಸಂವಸ್ಸರಂಬುಳ್ ಮುಂತಾದ ಪದಗಳ ಸ್ವರೂಪ

ವನ್ನು ವಿಚಾರಮಾಡಿದರೆ ೧೧ನೆಯ ಶತಮಾನದ ನನ್ನಯನ ಭಾಷೆಗೂ ೭ನೆಯ ಶತಮಾನದಿಂದ ೯ನೆಯ ಶತಮಾನದವರೆಗಿನ ತೆಲುಗು ಗದ್ಯ ಶಾಸನಗಳ ಭಾಷೆಗೂ ಇರುವ ವ್ಯತ್ಯಾಸವನ್ನು ತಿಳಿಯಬಹುದು. ಎಂದರೆ ೭ರಿಂದ ೯ನೆಯ ಶತಮಾನದವರೆಗೂ ತೆಲುಗು ಭಾಷೆ ಬೆಳೆಯುವ ಸ್ಥಿತಿಯಲ್ಲಿತ್ತು, ಸಾಹಿತ್ಯ ಕೃತಿಯ ರಚನೆಗೆ ತಕ್ಕ ಪರಿಣತಿ ಅದಕ್ಕೆ ಲಭಿಸಿರಲಿಲ್ಲವೆಂದು ಹೇಳಬೇಕು.

೧೧ನೆಯ ಶತಮಾನದ ವೇಳೆಗೆ ನನ್ನಯಕವಿ ಆಂಧ್ರ ಮಹಾಭಾರತ ಬರೆಯುವ ಹೊತ್ತಿಗೆ ತೆಲುಗು ಸುಪುಷ್ಟವಾಗಿ ಬೆಳೆದಿತ್ತು ಎಂದಮೇಲೆ, ಸುಮಾರು ೧–೨ ಶತಮಾನಗಳ ಹಿಂದೆಯಾದರೂ ತೆಲುಗು ಸಾಹಿತ್ಯದಲ್ಲಿ ಕೃಷಿಯಾಗತೊಡಗಿದ್ದಿರಬೇಕೆಂದು ಸಹಜವಾಗಿ ಊಹಿಸಬಹುದು. ನನ್ನಯಭಟ್ಟನಿಗೆ 'ವಾಗನುಶಾಸನ' (ವಾಕ್ಕನ್ನು ಅನುಶಾಸಿಸಿದವನು) ಎಂಬ ಬಿರುದಿದೆ. ಎಂದರೆ, ಉಪಭಾಷೆಗಳಿಂದ ಅಸ್ತವ್ಯಸ್ತವಾಗಿದ್ದ ತೆಲುಗನ್ನು, ವ್ಯಾಕರಣದ ಕಟ್ಟುಪಾಡಿಗೆ ಒಳಗು ಮಾಡಿ ಒಂದು ಸಾಹಿತ್ಯ ಗ್ರಂಥವನ್ನು ರಚಿಸುವುದಕ್ಕೆ ತಕ್ಕಂತೆ ಸಂಸ್ಕರಿಸಿದವನೆಂದು ಊಹಿಸಬಹುದು. ಅವನಿಗೆ ಅಂದಿನ ಶಿಲಾಶಾಸನಗಳು, ತಾಮ್ರಶಾಸನಗಳು, ಅದಕ್ಕೂ ಮುಂಚೆ ಬರೆಯಲ್ಪಟ್ಟಿದ್ದ ಕೆಲವು ಸಣ್ಣ ಪುಟ್ಟ ತೆಲುಗು ಗ್ರಂಥಗಳು ನೆರವಾಗಿರಬೇಕು. ಅಷ್ಟೇ ಅಲ್ಲದೆ ಹತ್ತಿರದ ಕರ್ಣಾಟಕದಲ್ಲಿ ಹೊರಬಂದ 'ಕವಿರಾಜಮಾರ್ಗ'ವನ್ನೊಳಗೊಂಡ ಪ್ರಾಚೀನ ಜೈನ ಕನ್ನಡ ಗ್ರಂಥಗಳೂ ಅವನಿಗೆ ಕೆಲವು ವಿಷಯಗಳಲ್ಲಿ ಮಾರ್ಗದರ್ಶಕವಾಗಿರಬೇಕು. ಸಂಸ್ಕೃತ ಭಾಷಾಸಾಹಿತ್ಯಗಳು ಇದ್ದೇ ಇವೆ. ೮೫೦ರ ಮುಂಚಿನ ಶಾಸನಗಳಾಗಲಿ, ಗ್ರಂಥಗಳಾಗಲಿ ನನ್ನಯನ ಮಹಾಭಾರತದ ರಚನೆಗೆ ಎಷ್ಟುಮಟ್ಟಿಗೆ ನೆರವಾದುವೆಂಬುದು ಈಗ ನಮ್ಮ ಮುಂದಿನ ಪ್ರಶ್ನೆ.

ತೆಲುಗಿನಲ್ಲಿ ೯ನೆಯ ಶತಮಾನದಿಂದ ಪದ್ಯ ಶಾಸನಗಳು ಕಂಡುಬರುತ್ತವೆ. ಆದರೆ ಅದಕ್ಕೆ ಪೂರ್ವಕಾಲದಲ್ಲೇ ಕೆಲವು ವೃತ್ತಗಂಧಿಯಾದ ಗದ್ಯಶಾಸನಗಳಿವೆ. ವಾಮನನು ವೃತ್ತಗಂಧಿಯನ್ನು ಪದ್ಯದ ಭಾಗವೆಂದೇ ಹೇಳಿರುತ್ತಾನೆ. ೭ರಿಂದ ೯ನೆಯ ಶತಮಾನದವರೆಗಿನ ಇಂಥ ಅನೇಕ ಶಾಸನಗಳು ತೆಲುಗು ಭಾಷೆ ಕವಿತ್ವದ ಸ್ಥಿತಿಯನ್ನು ಮುಟ್ಟಲು ಮಾಡುತ್ತಿದ್ದ ಪ್ರಯತ್ನವನ್ನು ಪ್ರತಿನಿಧಿಸುವಂತೆ ಕಾಣುತ್ತವೆ.

(1) ಪುಣ್ಯಕುಮಾರುಂಡು ಗಣ್ಯಮಾನುಂಡು (ಎರಿಕಲ್ ಮುತ್ತುರಾಜನ ತಿಪ್ಪಲೂರಿ ಶಾಸನ). ಇದು ದ್ವಿಪದಿಪಾದವೆನ್ನಲಾಗಿದೆ.

(2) ದೇವಸ್ವಂಬು ಲಂಚಮು ಗೊನ್ನವಾಡು ವಾರ। ಣಾಸಿ ವ್ರಚ್ಚಿನ ಪಾಪಂಬು ಗೊನ್ನವಾಡು (ಪೆದ್ದಮುಡಿಯಂ ಶಿವಾಲಯ ಶಾಸನ)

ಇವು ವಡಿಯಿಲ್ಲದ ತೇಟಗೀತಿ ಪದ್ಯದ ಪಾದಗಳು

(3) ಹತಕಪುತ್ರಕಮುನಿ ಯೌ ಶ್ರೀ ಶಿಲಾವಿಶಾ। ಲ ವಿಪುಲ....(ಜಯಸಿಂಹೆ ವಲ್ಲಭನ ವಿಪ್ಪರ್ತಿ ಶಾಸನ

ಪೂರ್ತಿ ಪದ್ಯವೇ ಇರಬಹುದು; ಯಾವ ಪದ್ಯ ಎಂದು ತಿಳಿಯುತ್ತಿಲ್ಲ; ಸೀಸವನ್ನು ಹೋಲುತ್ತದೆ.

ಹೀಗೆ ಅನೇಕ ಗದ್ಯಶಾಸನಗಳಲ್ಲಿರುವ ವೃತ್ತಗಂಧಿಗದ್ಯಗಳು ತೆಲುಗು ಭಾಷೆಯ ಪರಿಣಾಮಕ್ರಮವನ್ನು ಸೂಚಿಸುತ್ತವೆ.

೯ನೆಯ ಶತಮಾನದಿಂದೀಚೆಗೆ ತೆಲುಗಿನಲ್ಲಿ ಪದ್ಯಶಾಸನಗಳು ಸಿಕ್ಕುತ್ತವೆ. ಆ ಕಾಲಕ್ಕೆ ತೆಲುಗು ಪರಿಣತಾವಸ್ಥೆಯನ್ನು ಹೊಂದುತ್ತಿತ್ತು. ಪ್ರಾಕೃತ ಪ್ರಭಾವದಿಂದ ಬಿಡಿಸಿಕೊಂಡು ಹೊರಬಂದ ಅಚ್ಚ ತೆಲುಗು ಪದಗಳು ಸಾಹಿತ್ಯಸ್ಥಿತಿಯನ್ನು ಹೊಂದಲು ತಕ್ಕ ಹದವನ್ನು ತೋರಿಸುತ್ತಿದ್ದವು. ಕ್ರಿ.ಶ. ೯ನೆಯ ಶತಮಾನದ ಮಧ್ಯಕಾಲದವರೆಗಿನ ತೆಲುಗು ಭಾಷಾಸಾಹಿತ್ಯದಲ್ಲಿ ಮಹತ್ತ್ವಪೂರ್ಣ ಸ್ಥಾನವನ್ನು ಪಡೆದಿರುವ ಶಾಸನಗಳು ಮೂರು :

ವಿಜಯಾದಿತ್ಯನ ಪ್ರಥಮರಾಜ್ಯ ಸಂವತ್ಸರಕ್ಕೆ ಸೇರಿದ ಪಂಡರಂಗನ ಅದ್ದಂಕಿ ಶಾಸನ (೮೪೮), ಕಂದುಕೂರು ಶಾಸನ (೯ನೆಯ ಶತಮಾನ), ಮತ್ತು ಧರ್ಮವರಂ ಶಾಸನ (೮೯೨).

ಪಂಡರಂಗನ ಅದ್ದಂಕಿ ಶಾಸನ ಪದ್ಯ ಶಾಸನಗಳಲ್ಲಿ ಮೊತ್ತಮೊದಲನೆಯ ದಾಖಲೆ. ತರುವೋಜ ಎಂಬ ತೆಲುಗು ಛಂದಸ್ಸಿನ ಪದ್ಯವನ್ನೊಳಗೊಂಡ ಈ ಶಾಸನದಲ್ಲಿ ಗದ್ಯವೂ ಇದ್ದು ತೆಲುಗು ಚಂಪೂಕಾವ್ಯಗಳಿಗೆ ಸ್ಫೂರ್ತಿಯನ್ನು ಕೊಟ್ಟಿರುವ ಸಂಗತಿಗಳಲ್ಲಿ ಇದೂ ಒಂದೆಂಬ ಅಭಿಪ್ರಾಯಕ್ಕೆ ಅವಕಾಶವಾಗಿದೆ. ಅದ್ದಂಕಿ ಶಾಸನದ ಪಾಠ ಹೀಗಿದೆ :

ಪಟ್ಟಂಬು ಗಟ್ಟಿನ ಪ್ರಥಮಂಬು ನೇಡು—
  ಬಲಗರ್ವ ಮೊಪ್ಪಗ ಬೈಲೇಚಿ ಸೇನ
ಪಟ್ಟಂಬು ಗಟ್ಟಿಂಚಿ ಪ್ರಭು ಬಡರಂಗು—
  ಬಂಚಿನ ಸಾಮಂತ ಪದುವತೋ ಬೋಯ
ಕೊಟ್ಟಮುಲ್ಪಂಡ್ರೆಂಡು ಗೊನಿ ವೇಂಗಿನಾಟಿ—
  ಗೊಱಲ್ಚಿಯ ದ್ರಿಭುವನಾಂಕುಶ ಬಾಣ ನಿಲ್ಪಿ
ಕಟ್ಟೆಪು ದುರ್ಗಂಬು ಕಡುಬಯಲ್ಸೇಸಿ—
  ಕಂದುಕೂರ್ಬೆಜವಾಡ ಗಾವಿಂಚೆ ಮೆಚ್ಚಿ

ಪಂಡರಂಗು ಪರಮಮಹೇಶ್ವರುಂಡು ಆದಿತ್ಯಭಟ್ಟಾರನಿಕಿ ಇಚ್ಚಿನ ಭೂಮಿ ಎನುಬೊದಿ ಪುಟ್ಲ ಆಳ್ಲು ಪಟ್ಟು ನೇಲ ಧರ್ಮಪುರಂಬುನ ಧರ್ಮವುಲು ವೀನಿ ರಕ್ಷಿಂಚಿನ ವಾರಿಕಿ ಅಶ್ವ ಮೇಧಂ ಬುನ ಫಲಂಬು ಅಗು.

ಇದೊಂದು ದಾನಶಾಸನ. ಇದರಲ್ಲಿರುವ ಪದ್ಯ ತರುವೋಜ. ಪ್ರತಿ ಪಾದದಲ್ಲಿ ೩ ಇಂದ್ರ, ೧ ಸೂರ್ಯ, ೩ ಇಂದ್ರ, ೧ ಸೂರ್ಯ ಹೀಗೆ ಗಣವಿನ್ಯಾಸ ಇರುತ್ತದೆ. (ಇಂದ್ರ ಸೂರ್ಯ ಗಣಗಳು ಕನ್ನಡ ಛಂದಸ್ಸಿನ ವಿಷ್ಣು ಬ್ರಹ್ಮ ಗಣಗಳನ್ನು ಹೋಲುತ್ತವೆ).

ಹೆಂಗಸರ ಹಾಡುಗಳನೇಕವು ಈ ಛಂದಸ್ಸಿನವು. ವಿನ್ನಕೋಟ ಪೆದ್ದನನ 'ಅಲಂಕಾರ ಚೂಡಾಮಣಿ'ಯಲ್ಲಿ

ತಲಕೊನಿ ತಲಬ್ರಾಲು ದಂಪೆಡು ಚೋಟ
ದರುಣುಲ ಜೇ ಸೊಂಪು ದನರು ತರ್ವೋಜ

ಎಂದು ಹೇಳಿರುವುದರಿಂದ ಒನಕೆವಾಡುಗಳು ತರುವೋಜ ಛಂದಸ್ಸಿನಲ್ಲಿ ಇರುತ್ತವೆಂದು ತಿಳಿಯುವುದು. ೯ನೆಯ ಶತಮಾನದಲ್ಲಿಯೇ ಆ ಛಂದಸ್ಸಿಗಿದ್ದ ಪ್ರಾಚುರ್ಯ ಹೀಗೆ ಸೂಚಿತವಾಗಿದೆ. ಅಲ್ಲದೆ ಆ ಕಾಲದಲ್ಲಿ ಒನಕೆಯ ಹಾಡುಗಳಂಥ ಜನಪದ ಸಾಹಿತ್ಯದ ಮೇಲೆ ಬೆಳಕು ಬೀಳುತ್ತದೆ.

ಅದ್ದಂಕಿ ಶಾಸನದಿಂದ ನಾವು ತೆಲುಗು ಸಾಹಿತ್ಯದ ಸ್ಥಿತಿಯನ್ನು ಸ್ಫುಟವಾಗಿ ತಿಳಿಯಲಾಗದಿದ್ದರೂ ಆ ಕಾಲದಲ್ಲಿ ತೆಲುಗಿನಲ್ಲಿ ಪದ್ಯರಚನೆ ಸಾಗುತ್ತಿತ್ತು ಎಂದೂಹಿಸಬಹುದು. ದೊರೆತ ಪದ್ಯಶಾಸನಗಳಲ್ಲಿ ಅದ್ದಂಕಿ ಶಾಸನ ಮೊದಲನೆಯದಾಗಿರಬಹುದು. ಆದರೆ ಇದು ತೆಲುಗಿನ ಮೊದಲ ಪದ್ಯರಚನೆ ಮಾತ್ರವಲ್ಲವೆಂದು ಖಚಿತವಾಗಿ ಹೇಳಬಹುದು. ಏಕೆಂದರೆ ಅದ್ದಂಕಿ ಶಾಸನದ ತರುವೋಜ ಪದ್ಯ ಎಲ್ಲ ಲಕ್ಷಣಗಳಿಂದ ಕೂಡಿದೆ. ಇದರಿಂದ ೭, ೮ನೆಯ ಶತಮಾನಗಳಿಂದಲೇ ಪ್ರಾಯೋಗಿಕ ಸ್ಥಿತಿಯಲ್ಲಿ ತೆಲುಗು ಪದ್ಯ ರಚನೆ ಸಾಗುತ್ತಿತ್ತು ಎಂಬುದು ಖಚಿತ. ಅದ್ದಂಕಿ ಶಾಸನದಲ್ಲಿ ಪರಮಮಹೇಶ್ವರನಾದ ಪಂಡರಂಗನ ಪ್ರಶಂಸೆಯಿದೆ. ಇವನು ತನ್ನ ರಾಜ ಗುಣಗ ವಿಜಯಾದಿತ್ಯನು ಪಟ್ಟಕ್ಕೆ ಏರಿದ ಮೊದಲ ವರ್ಷದಲ್ಲಿಯೇ ತಾನೂ ಸರ್ವಾಧಿಕಾರಿಯಾಗಿ ವೆಂಗಿರಾಜ್ಯವನ್ನು ಪ್ರಬಲಗೊಳಿಸಿದ. ತ್ರಿಭುವನಾಂಕುಶರೆಂಬ ಬಿರುದುಳ್ಳ ವೆಂಗಿಯ ಚಾಲುಕ್ಯರ ಪತಾಕೆಯನ್ನು ಈತ ನಿಲ್ಲಿಸಿದನಂತೆ. ಗುಣಗ ವಿಜಯಾದಿತ್ಯನ ಪರವಾಗಿ ಅನೇಕ ಶಾಸನಗಳನ್ನು ಈತ ಹಾಕಿಸಿದ್ದಾನೆ.

ತೆಲುಗು ಸಾಹಿತ್ಯದ ಬಗೆಗೆ ನೇರವಾಗಿ ಈ ಶಾಸನದಿಂದ ನಮಗೇನೂ ತಿಳಿಯದಿದ್ದರೂ, ಆ ಕಾಲದಲ್ಲಿ ಕವಿಗಳಿದ್ದರೆಂದೂ ಪಂಡರಂಗನೂ ಗುಣಗ ವಿಜಯಾದಿತ್ಯನೂ ಕವಿಗಳೂ ಪಂಡಿತ ಪೋಷಕರೂ ಆಗಿದ್ದರೆಂದೂ ತಿಳಿಸುವ ಬೇರೆ ಶಾಸನಗಳು ಸಿಕ್ಕಿರುವುದನ್ನು ಇಲ್ಲಿ ನೆನೆಯಬಹುದು. ಗುಣಗ ವಿಜಯಾದಿತ್ಯನ ಪರವಾಗಿ ಪಂಡರಂಗನು ಹಾಕಿಸಿದ ಸಾತಲೂರು ಶಾಸನದಲ್ಲಿ ಪ್ರಾಸವಿರುವ ಸಂಸ್ಕೃತ ಚಂಪಕಮಾಲೆಯಿದೆ. ಚಂಪಕಮಾಲೆ ತೆಲುಗು, ಕನ್ನಡಗಳಲ್ಲಿ ಮಾತ್ರ ಪ್ರಚುರವಾಗಿರುವ ವರ್ಣವೃತ್ತವೆಂಬುದನ್ನು ನಾವಿಲ್ಲಿ ಸ್ಮರಿಸಬಹುದು.[85]

ಹೀಗೆಯೇ ಕಂದುಕೂರು ಶಿಲಾಶಾಸನ[86] ತೆಲುಗಿನ ವಿಶಿಷ್ಟ ಪದ್ಯವಾದ ಸೀಸದಲ್ಲಿದೆ. ಇದು ಪಂಡರಂಗನ ಗುಣಗಣಗಳನ್ನು ಕೀರ್ತಿಸುವುದಾಗಿದ್ದು, ಸಾಹಿತ್ಯಲಕ್ಷಣಗಳು ಕಂಡುಬರುತ್ತವೆ.

"ಶ್ರೀನಿರವದ್ಯುಂಡು ಚಿತ್ತಜಾತಸಮುಂಡು
ಶಿವಪದ ವರರಾಜ್ಯ ಸೇವಿತುಂಡ
ಖಿಲುಡು ನನ್ಯತರಿಪುಬಲುಡು ನಾಹವರಾವ
ದಂಡವೋದ್ಯ ಸಿಘಾಸನುಂ ಡಗಣಿತ
ದಾನವಾನ್ಯುಂಡು ದಯಾನಿಲಯುಂಡುನು
ಭರಿಡನ ಸಂಡನ ಪಂಡರಂಗು
...............ಕೋಲಡಿಲೇನಿ
ಕೊಟ್ಟಮು ಲ್ಪ್ರೋಡಿಚಿ ಗುಣಕ ನಲ್ಲ
ತಾನಿ ಪಕ್ಷಪಾತಿ.....................
..........................
............ವಿಭವ ಗೌರವೇಂದ್ರ"

ಪಂಡರಂಗನನ್ನೇ ಸ್ತುತಿಸುವ ಇನ್ನೊಂದು ಶಾಸನವೂ ಸೀಸಪದ್ಯದಲ್ಲೇ ಇದೆ. ಅದು ಧರ್ಮವರಂ ಶಾಸನ. ಮೊದಲು ಸ್ವಲ್ಪ ಭಾಗವನ್ನು ಬಿಟ್ಟು ಉಳಿದ ಪದ್ಯವೆಲ್ಲ ಪೂರ್ತಿಯಾಗಿದೆ.

"..........ನರರಾಮ ವಿಭುತೋಡ
ನೆಡಱೀನ ಬೋಯಲ ನಡವಿಜೊಸ್ಪಿ
ಲೋಪಾಸನಂ ಬೆಕ್ಕಿ ರಾಹನು ನೊಡಿಚಿನ
ವಲ್ಲಭು ಕೊಲ್ವುನ ನೆಲ್ಲನೆಱುಗ
ಕನ್ನರಾಭೂಪತಿ ವೆನ್ನಾಜಿಲೋ ಜೂಚಿ
ಸಂಕಿಲಾಂಡನು ಱೀನಿ ಬಿಂಕಮುಡಿಚಿ
ದಂಡು ಬೈವಚ್ಚಿನ ಬೆಂಡ್ಯನ ಚೋಡನಿ
ಚೇಕೊನಿ ಕಾಚಿ ಭೂಲೋಕ ಮೆಱುಗ
ಕಿರಣಪುರಮು ಡಹಲ ನಿರುತಂಬು ದಱೀನಾಡು
ನಚಲಪುರಮು ಸೊಚ್ಚಿ ನಚಲಿತುಂಡು
ವಲ್ಲಭುಂಡು ಗುಣಕನಲ್ಲುಂಡು ಪಂಚಿನ
ಪಂಡರಂಗು ಜೂರೆ ಪಂಡರಂಗು"[37]

ಈ ಶಾಸನ ಲ್ಲಿ೬ರದು; ಎಂದರೆ ಕಂದುಕೂರು ಶಾಸನದ ಅನಂತರ ಕಾಲದ್ದು. ಈ ಎರಡು ಶಾಸನಗಳ ಸೀಸ ಪದ್ಯಗಳ ಸ್ವರೂಪದಲ್ಲಿಯೂ ವ್ಯತ್ಯಾಸ ಕಾಣುತ್ತದೆ. ಕಂದುಕೂರು ಶಾಸನದ್ದು 'ಗುನುಗುಸೀಸ', ಎಂದರೆ ಪಾದಗಳು ಅವಿಚ್ಛಿನ್ನವಾಗಿ ಸಾಗುವಂಥದು. ಧರ್ಮವರಂ ಶಾಸನದ್ದು 'ಸರ್ವತ್ರ ಪ್ರಾಸಯತಿ'ಯುಳ್ಳದ್ದು. ನನ್ನಯನೂ 'ಪ್ರಾಸಯತಿ' ಎಂಬುದನ್ನು ಸೀಸಪದ್ಯದ ಉದ್ದಕ್ಕೂ ಬಳಸಿದ್ದಾನೆ. ಈ ಎರಡು ಶಾಸನಗಳ ಸೀಸಪದ್ಯಗಳನ್ನೂ ಪರಿಶೀಲಿಸಿದಾಗ ಪದ್ಯಗಳ ರಚನೆಯಲ್ಲಿ ಒಂದು ಬೆಳೆವಣಿಗೆಯನ್ನು ನಾವು ಕಾಣಬಹುದು.

ಮೇಲೆ ಉದಾಹರಿಸಿದ ಮೂರೂ ಶಾಸನಗಳನ್ನು ಹಾಕಿಸಿದವನು ಗುಣಗ ವಿಜಯಾ

ದಿತ್ಯನ ಸೇನಾಧಿಪತಿಯಾಗಿದ್ದ ಪಂಡರಂಗ. ಗುಣಗ ವಿಜಯಾದಿತ್ಯನ ಚರಿತ್ರೆಯೊಂದಿಗೆ ತೆಲುಗು ಕನ್ನಡ ಸಾಹಿತ್ಯಗಳಿಗೆ ಸಂಬಂಧಿಸಿದ ಕೆಲವು ವಿಷಯಗಳೂ ಬೆರೆತಿವೆ. 'ಯಾಪ್ಪರುಂಗುಲಕ್ಕಾರಿಕೈ' ಎಂಬ ತಮಿಳು ಛಂದೋಗ್ರಂಥದ ವ್ಯಾಖ್ಯಾನದಲ್ಲಿ 'ಗುಣ ಗಾಂಕಿಯಂ' ಎಂಬ ಕನ್ನಡ ಛಂದೋಗ್ರಂಥದ ಉಲ್ಲೇಖವಿದೆ. ಈ ಕನ್ನಡ ಛಂದೋಗ್ರಂಥ ಗುಣಗ ವಿಜಯಾದಿತ್ಯನಿಗೆ ಅಂಕಿತವಾದುದೆಂಬುದು ಒಂದಭಿಪ್ರಾಯ 'ಯಾಪ್ಪರುಂಗಲ ಕ್ಕಾರಿಕೈ'ಯಲ್ಲೇ "ವಾಂಚಿಯಾರ್ ಸೆಯ್‌ದ ವಡಗುಚ್ಛಂದವುಮ್" ಎಂದಿದ್ದು, ವಾಂಛಯ್ಯ ಎಂಬವನ ತೆಲುಗು ಛಂದೋಗ್ರಂಥವೊಂದಿತ್ತು ಎಂಬುದು ಅದರಿಂದ ಖಚಿತ ವಾಗಿದೆ. ನನ್ನಯ ಪೂರ್ವಯುಗದಲ್ಲಿ ತೆಲುಗು ಛಂದೋಗ್ರಂಥವಿದ್ದುದು ನಿಜವಾದರೆ ಸಾಕಷ್ಟು ಸಾಹಿತ್ಯವೂ ಇದ್ದಿರಬೇಕು. ನನ್ನೆಚೋಡನೆಂಬ ತೆಲುಗು ಕವಿ ತನ್ನ 'ಕುಮಾರ ಸಂಭವ'ದಲ್ಲಿ "ಹಿಂದೆ ಮಾರ್ಗಕವಿತ್ವ ಲೋಕದಲ್ಲಿರಲು ದೇಸಿಕವಿತೆಯನ್ನು ನಿರ್ಮಿಸಿ ತೆಲುಗನ್ನು ಆಂಧ್ರದೇಶದಲ್ಲಿ ಚಾಲುಕ್ಯ ರಾಜರೇ ಮುಂತಾದವರು ನಿಲ್ಲಿಸಿದರು" ಎಂದು ಬರೆದಿದ್ದಾನೆ. ನನ್ನೆಚೋಡ ಹೆಸರಿಸಿದ ಚಾಲುಕ್ಯರಾಜನು ಗುಣಗ ವಿಜಯಾದಿತ್ಯನೇ ಎಂದು ಕೆಲವರ ಊಹೆ. ಅವನ ಕಾಲದಿಂದಲೇ ತೆಲುಗು ಪದ್ಯಗಳು ಕಂಡುಬರುತ್ತಿರುವುದು ಇದಕ್ಕೆ ಪುಷ್ಟಿಯನ್ನು ಕೊಡುತ್ತದೆ. ಇವೆಲ್ಲಾ ನೋಡಿದರೆ ಗುಣಗ ವಿಜಯಾದಿತ್ಯನ ಕಾಲದಲ್ಲಿ ಒಂದೆರಡು ಕಾವ್ಯಗಳು ಹೊರಬಂದಿದ್ದರೂ ಆಶ್ಚರ್ಯಪಡಬೇಕಾಗಿಲ್ಲ.

ಈಗ ೮೫೦ರ ವರೆಗೆ ನಡೆದುಬಂದ ತೆಲುಗು ಭಾಷೆಯ ಬೆಳೆವಣಿಗೆಯ ಅವಧಿಯಲ್ಲಿ ಇದ್ದವರೆಂದು ಊಹಿಸಲಾಗಿರುವ ಕೆಲವರು ಕವಿಗಳ ಬಗ್ಗೆ ವಿವೇಚಿಸಬಹುದು. 'ಯಾಪ್ಪ ರುಂಗಲಕ್ಕಾರಿಕೈ'ಯಲ್ಲಿರುವ ವಾಂಚಿಯಾರನ್ನು ಕೆಲವರು ರೇಚಿಯಾರ್ ಎಂದೂ ಅನುಮಾನಿಸಿದ್ದಾರೆ. ರೇಚಿಯಾರ್ ಎಂಬವನೇ 'ಕವಿಜನಾಶ್ರಯಮು' ಎಂಬ ಪ್ರಾಚೀನ ತೆಲುಗು ಛಂದೋಗ್ರಂಥವನ್ನು (ಸು. ೧೦-೧೧ನೆಯ ಶ.) ರಚಿಸಿದ ರೇಚನನೆಂದು ಕೆಲವರ ಗ್ರಹಿಕೆ (ಭೀಮನನೆಂದು ಕೆಲವರ ಮತ). ರೇಚನನು ಜಯದೇವನೆಂಬ ಛಂದಶ್ಶಾಸ್ತ್ರ ಕಾರನನ್ನು ಹೆಸರಿಸಿದ್ದಾನೆ.

ಜಯದೇವಾದಿಚ್ಛಂದೋ
ನಯಮುನ ಸಂಕ್ಷೇಪರೂಪುನಂ ಚೆಲುವುಗ ಮ
ಲ್ಲಿಯ ರೇಚನ ಸುಕವಿಜನಾ
ಶ್ರಯಮುಡೀ ಛಂದಂಬು ಚೆಪ್ಪೆ ಜನುಲಕು ತೆಲಿಯನ್ ॥

ಕನ್ನಡ ನಾಗವರ್ಮನೂ 'ಛಂದೋಂಬುಧಿ'ಯಲ್ಲಿ ಒಬ್ಬ ಜಯದೇವನನ್ನು ಸ್ತುತಿಸಿದ್ದಾನೆ. ಆದರೆ 'ಕವಿಜನಾಶ್ರಯ'ದಲ್ಲಿ ಉಲ್ಲೇಖವಾಗಿರುವ ಜಯದೇವ ತೆಲುಗಿನವನೇ ಹೊರತು ಸಂಸ್ಕೃತ ಅಥವಾ ಕನ್ನಡದವನಲ್ಲ. ಏಕೆಂದರೆ ಕಸ್ತೂರಿ ರಂಗಕವಿ ತನ್ನ 'ಆನಂದರಂಗ ರಾಟ್ಛಂದ'ದಲ್ಲಿ 'ಜಯದೇವಚ್ಛಂದ'ದಿಂದ ಒಂದು ತೆಲುಗು ಪದ್ಯವನ್ನೂ ಉದಾಹರಿಸಿ ದ್ದಾನೆ. ಆದುದರಿಂದ ಈತ ಸಂಸ್ಕೃತ ಜಯದೇವಚ್ಛಂದಸ್ಸಿನ ಜಯದೇವನಿಂದ ಭಿನ್ನನು. ತೆಲುಗು ಜಯದೇವನ ಕಾಲವನ್ನು ತಿಳಿಯಲು ಇನ್ನೂ ಯಾವ ಆಧಾರವೂ ಇಲ್ಲ.[೪೪]

ಟೇಕುಮಳ್ಳ ಕಾಮೇಶ್ವರರಾವು ಅವರು ವೇಮನ ಸು. ೮೦೦ರ ಕಾಲದವನು, ಆದಿಶಂಕರರ (೭೮೮-೮೨೦) ಸಮಕಾಲದವನು[೩] ಎಂದಿದ್ದಾರೆ. ರೇಚನ ೮೪೫ರ ಕಾಲ ದವನೆಂಬುದೂ ಅವನು ನಾಲ್ಕು ವಡಿಗಳನ್ನು ಹೇಳಿದ್ದಾನೆಂಬುದೂ ತನ್ನ ಪದ್ಯಗಳಲ್ಲಿ ಎರಡು ಮೂರು ವಡಿಗಳನ್ನು ಮಾತ್ರ ಬಳಸಿರುವ ವೇಮನ ಅವನಿಗಿಂತ ಪೂರ್ವ ಕಾಲದವನೆಂಬುದೂ ಅವರ ಗ್ರಹಿಕೆಗೆ ಮೂಲ. ಆದರೆ ಇದು ಸರಿಯಾದ ಆಧಾರವಲ್ಲ ವಾದ್ದರಿಂದ ಒಪ್ಪತಕ್ಕದಲ್ಲ.

ಕಾಲನಿರ್ಣಯ ಅನಿಶ್ಚಿತವಾಗಿರುವ ಇನ್ನೊಬ್ಬ ತೆಲುಗು ಕವಿ ನನ್ನೆಚೋಡದೇವ. ನನ್ನೆಚೋಡ ಬರೆದಿರುವ 'ಕುಮಾರಸಂಭವ'ವೆಂಬ ಶೈವಕಾವ್ಯ ಬಹಳ ಕಾಲದವರೆಗೂ ಲಭಿಸಿರಲಿಲ್ಲ. ಮಾನವಲ್ಲಿ ರಾಮಕೃಷ್ಣ ಕವಿ ಎಂಬವರು ಈಚೆಗೆ(೧೯೦೯) ಅದರ ಒಂದು ಪ್ರತಿಯನ್ನು ಕಂಡುಹಿಡಿದು ಪ್ರಕಟಿಸಿದರು. ಅದರಲ್ಲಿ ಅವರು ನನ್ನೆಚೋಡ ೯೪೦ರ ಕಾಲದವನೆಂದು ಬರೆದರು. ಈ ಕಾಲನಿರ್ಣಯವನ್ನು ನಡಕುದುಟಿ ವೀರರಾಜು ನೇಲಟೂರಿ ವೆಂಕಟರಮಣಯ್ಯ ಮುಂತಾದವರು ಒಪ್ಪಿಕೊಂಡಿದ್ದಾರೆ. ಆದರೆ ತೆಲುಗು ವಿಮರ್ಶಕರಲ್ಲಿ ಹಲವರು ಈ ಕವಿ ೧೧೬೦-೭೦ರ ಕಾಲದವನೆಂದು ಭಾವಿಸಿದ್ದಾರೆ. ಅವನ ಕಾಲವನ್ನು ಕುರಿತ ಚರ್ಚೆ ಇನ್ನೂ ನಡೆಯುತ್ತಿದೆ. 'ಪೂರ್ವಾಂಧ್ರಕವುಲು' ಎಂಬ ತಮ್ಮ ಗ್ರಂಥದಲ್ಲಿ ಕಾಮೇಶ್ವರರಾವು ಅವರು ನನ್ನೆಚೋಡ ೮೩೮-೮೩೪ರ ಕಾಲ ದವನೆಂದು ಹೇಳಿದ್ದಾರೆ. ಅವರು ಸಾಮಂತನಾದ ನನ್ನೆಚೋಡ ತನ್ನ ರಾಜಾಧಿರಾಜ ನಾದ ಗುಣಗನ ಚರಿತ್ರೆಯನ್ನು ಇದರಲ್ಲಿ ಸೇರಿಸಿದ್ದಾನೆಂದು ಅಭಿಪ್ರಾಯಪಟ್ಟಿದ್ದಾರೆ. 'ಕುಮಾರಸಂಭವ'ದಲ್ಲಿರುವ ಕುಮಾರ ಗುಣಗಾಂಕನಂತೆ; ತಾರಕಾಸುರ ರಾಷ್ಟ್ರಕೂಟ ರಾಜನಾದ ನೃಪತುಂಗನಂತೆ. ಗುಣಗ ವಿಜಯಾದಿತ್ಯನಿಗೂ ನೃಪತುಂಗನಿಗೂ ವಿರೋಧವಿದ್ದುದು ನಿಜವಿರಬಹುದು. ಆದರೆ ಈ ವಿರೋಧವನ್ನೇ ನನ್ನೆಚೋಡ ತನ್ನ ಕಾವ್ಯದಲ್ಲಿ ಹೀಗೆ ಪ್ರತಿಪಾದಿಸಿದ್ದಾನೆಂಬುದು ಮಾತ್ರ ವಿಚಾರಣೀಯ.

ಒಟ್ಟಿನಲ್ಲಿ ೮೫೦ರ ವರೆಗೂ ತೆಲುಗು ಸಾಹಿತ್ಯ ಬೆಳೆವಣಿಗೆಯ ಸ್ಥಿತಿಯಲ್ಲಿತ್ತು. ಶಾಸನಸ್ಥ ಪದ್ಯಗಳು ಇದಕ್ಕೆ ಸಾಕ್ಷಿ. ಶಿಷ್ಟಸಾಹಿತ್ಯದ ಮಾತು ಹೇಗಿದ್ದರೂ, ೮೫೦ರ ವೇಳೆಗಾಗಲೇ ತೆಲುಗಿನಲ್ಲಿ ಜನಪದ ಸಾಹಿತ್ಯ ಸಾಕಷ್ಟು ಇದ್ದಿರಬೇಕು. ಪಾಲ್ಕುರಿಕಿ ಸೋಮನಾಥ ಹೆಸರಿಸಿರುವ 'ತುಮ್ಮೆದ ಪದಮುಲು', 'ನಿವಾಳಿ ಪದಮುಲು', 'ವೆನ್ನೆಲ ಪದಮುಲು' ಇತ್ಯಾದಿ ಹಾಡುಗಳು ಆ ಕಾಲದಲ್ಲಿ ಇದ್ದಿರಬಹುದು. ವಿನ್ನಕೋಟ ಪೆದ್ದನ ಹೇಳಿದಂತೆ ಒನಕೆವಾಡುಗಳು ತರುವೋಜ ಛಂದಸ್ಸಿನಲ್ಲಿ ಇರುವುದನ್ನು ಕಂಡರೆ ೮೪೫ರ ವೇಳೆಗೆ ಶಾಸನಸ್ಥವಾದ ತರುವೋಜ ಆ ಕಾಲದ ಜನಪದ ಗೀತೆಗಳ ಅಸ್ತಿತ್ವ ವನ್ನು ಸೂಚಿಸುತ್ತದೆ. ಹೀಗೆ ಒಂದೆರಡು ಪದ್ಯಗಳ ರೂಪದಲ್ಲಿಯೂ ಹಾಡುಗಳ ರೂಪ ದಲ್ಲಿಯೂ ಶಾಸನಸ್ಥವಾಗಿರುವ ತೆಲುಗು ಭಾಷೆ ೯-೨ ಶತಮಾನಗಳಲ್ಲಿ ಸಾಹಿತ್ಯದೃಷ್ಟಿ ಯಿಂದ ಸತ್ತ್ವಸಂಪನ್ನವಾಗುತ್ತ ಬಂದು, ೧೦-೧೧ನೆಯ ಶತಮಾನಗಳ ಕಾಲಕ್ಕೆ ಪರಿ ಪೂರ್ಣಸ್ಥಿತಿಯನ್ನು ಪಡೆಯಿತೆಂದು ಹೇಳಬಹುದು.

## ಅಡಿಟಿಪ್ಪಣಿಗಳು


1 'ಭಾರತೀಯ ಸಂಸ್ಕೃತಿ', ಮೈಸೂರು, ೧೯೬೯, ಪು. ೫೦.

2 ಮಾಧೋ ಸರೂಪ ವತ್ಸ, ಸಿಂಧು ಕಣಿವೆಯ ಸಂಸ್ಕೃತಿ (ಅನು), 'ಯುಗಯಾತ್ರೀ ಭಾರತೀಯ ಸಂಸ್ಕೃತಿ', ೧, ಮೈಸೂರು, ೧೯೭೦, ಪು. ೮೬.

3 The Indus people begin to speak, *JAHRS.*, XXXIII, pt. i, 1972–73, pp. 21–23.

4 ಸತ್ಕಾರಿ ಮುಖರ್ಜಿ, ಭಾರತೀಯ ಜೀವನ ಮತ್ತು ಚಿಂತನಗಳಲ್ಲಿ ಬೌದ್ಧಧರ್ಮ (ಅನು), 'ಯುಗಯಾತ್ರೀ ಭಾರತೀಯ ಸಂಸ್ಕೃತಿ', ೧, ೧೯೭೦, ಪು. ೪೩೨.

5 Romila Thapar, *A History of India*, I, 1974, p. 53.

6 Radhakumud Mukherji, *Hindu Civilization*, pt. ii, Bharatiya Vidya Bhavan, 1964, pp. 183–85.

7 *Asoka and the Decline of the Mauryas*, OUP., 1973, pp. 152–53.

8 Nagendra, The Basic Unity of Indian Literatures, *Indian Literature*, Agra, 1959, p. 1.

9 ಚೀನೀ ಮಾನವ, ಜಾವಾ ಮಾನವರಂತೆ ಭಾರತದಲ್ಲಿ ಆದಿಮಾನವನ ಪಳೆಯುಳಿಕೆಗಳು ಸಿಕ್ಕಿಲ್ಲವಾದ್ದರಿಂದ ಇಲ್ಲಿ ಮಾನವನ ಉಗಮವಾಗಿರಲಿಲ್ಲವೆಂಬ, ಮಾನವ ಇಲ್ಲಿಗೆ ಹೊರಗಿನಿಂದ ಬಂದವನೆಂಬ ವಾದವನ್ನು ಈಚೆಗೆ ಪ್ರಶ್ನಿಸಿದೆ. ನೋಡಿ: ದೇ. ಜವರೇಗೌಡ, ಅಖಿಲ ಭಾರತ ಪ್ರಾಚ್ಯವಿದ್ಯಾ ಸಮ್ಮೇಲನದ ದ್ರಾವಿಡ ಅಧ್ಯಯನ ವಿಭಾಗದ ಅಧ್ಯಕ್ಷ ಭಾಷಣ, ಡಿಸೆಂಬರ್ ೧೯೭೪.

10 S. K. Chatterji, Race-movements and Pre-historic Culture, *The History and Culture of the Indian People*, I, Bharatiya Vidya Bhavan, Bombay, 1957, pp. 141–42.

11 ಅದೇ, ಪು. ೧೪೩-೪೪.

12 ಕೋಲ ಮತ್ತು ಮುಂಡಾ ಜನರ ಭಾಷೆಗಳು ಆಸ್ಟ್ರಿಕ್ ಪರಿವಾರದವಲ್ಲವೆಂದೂ ಅವು ಫಿನ್ನೊ-ಅಗ್ರಿಯನ್ ಸಂಬಂಧಿಗಳೆಂದೂ ಒಂದು ವಾದವುಂಟು. ಆದರೆ ಇದಕ್ಕೆ ಹೆಚ್ಚಿನ ಮನ್ನಣೆ ಇದುವರೆಗೆ ದೊರೆತಿಲ್ಲ.

13 S. K. Chatterji, op. cit., p. 159.

14 *A History of Indian Literature*, New York, 1968, p. 47.

15-16 ಎ. ವಿ. ನರಸಿಂಹಮೂರ್ತಿ, 'ಕನ್ನಡ ಲಿಪಿಯ ಉಗಮ ಮತ್ತು ವಿಕಾಸ', ಮೈಸೂರು, ೧೯೬೮, ಪು. ೫; ೯.

17 *India's Past, A Survey of her Literatures, Religions, Languages and Antiquities*, 1956, p. 56.

18-19 M. A. Mahendale, Sanskrit Language and Literature, *The History and Culture of the Indian People*, II, Bharatiya Vidya Bhavan, 1960, p. 244.

20-21 'ನಳಚರಿತ್ರೆ', ಬೆಂಗಳೂರು, ೧೯೬೫, ಪು. ೬; ೧೩-೧೪.

22–23 M. A. Mahendale, op. cit., p. 254; 265.

24 K. A. Fariq, *A History of Arabic Literature*, Delhi, 1972, p. 26.

25 R. A. Nicholson, *A History of Arabic Literature*, London, 1962, Preface, p. xxiv.

26 H. A. R. Gibb, *Studies in Persian Literature*, London, 1926, p. 4.

27 K. A. Fariq, op. cit., 34.

28 Encyclopaedia Britannica II, 1968, p. 187.

29 B. K. Ghosh, The Aryan Problem, *The Vedic Age*, pp. 204–05.

30 M. Winternitz, *A History of Indian Literature*, Calcutta, 1927, pp. 290–310.

31 ಅತ್ರೋಚ್ಯತೇ। ಮಂತ್ರಬ್ರಾಹ್ಮಣಾತ್ಮಕಂ ತಾವದದುಷ್ಟಂ ಲಕ್ಷಣಂ।
ಅತ ಏವಾಪಸ್ತಂಬೋ ಯಜ್ಞ ಪರಿಭಾಷಾಯಾಮೇವಮಾಹ।
ಮಂತ್ರಬ್ರಾಹ್ಮಣಯೋರ್ವೇದನಾಮಧೇಯಮಿತಿ (ಆ.ಪ. 31)' — 'ಋಗ್ವೇದ ಸಂಹಿತಾ', ೧, ಮೈಸೂರು, ೧೯೪೮, ಪು. ೩೬೭.

32 "In the dogmatic language of orthodox Hindus, the works which contain the Śruthi have not been composed but have only been seen or perceived by men. . . . ." "That the Smrti has no claim to independent authority but derives its sanction from its intimate connection with the Śruthi is implied, by its very name which means recollection"—Maxmuller, *A History of Ancient Sanskrit Literature*, Varanasi, 1968, pp. 68, 77.

33 "Some pearls of Lyric poetry, which appeal to us as much through their fine comprehension of the beauties of Nature, as through their flowery language are to be found among the songs to Surya (the Sun), to Parjanya (the Rain-god) to the Maruts (the Storm-gods) and above all to Uśas (the Dawn)—M. Winternitz, *A History of Indian Literature* III, Calcutta, 1927, p. 91.

34 Sukumar Sen, *History and Pre-History of Sanskrit*, Mysore, 1958, p. 1.

35 "Still more significant are the hymns in which the practical purpose seems clearly predominant. In these cases we find no longer philosophizing tinged with self-interest, but self-interest decked out more or less in the garb of Philosophy, or employing philosophic concepts"—Franklin Edgerton, Philosophy in Atharvaveda *Studies in Honour of Bloomfield*, London, 1920, pp. 121, 117–35.

36 ನೋಡಿ : M. Winternitz, op. cit., I, Calcutta, 1927, pp. 168–169.

37 ನೋಡಿ : M. Winternitz, op. cit., I, pp. 225–27.

38 ಅರಣ್ಯಾಧ್ಯಯನಾದೇತದಾರಣ್ಯಕಮಿತೀರ್ಯತೇ
ಅರಣ್ಯೇ ತದಧೀಯೀತೇತ್ಯೇವಂ ವಾಕ್ಯಂ ಪ್ರವಕ್ಷ್ಯತೇ ॥ (ತೈತ್ತಿರೀಯ ಆರಣ್ಯಕ ಭಾಷ್ಯ-೬)

39 "These texts formed in more senses than one, the Vedanta, ie., 'the end of the Veda. . . .' The later philosophers lastly saw in these doctrines of the Upaniśads not the end but the final aim of the Veda"—M. Winternitz, op. cit., I, p. 234.

40 ನೋಡಿ : 'ಋಗ್ವೇದ ಸಂಹಿತಾ' I, ಮೈಸೂರು, ೧೯೪೮, ಪು. ೨೭.

41 "ಸದೇಃ ಧಾತೋಃ ವಿಶರಣಗತ್ಯವಸಾದನಾರ್ಥಸ್ಯೋಪನಿಪೂರ್ವಸ್ಯ ಕ್ವಿಪ್ರತ್ಯಯಾಂತಸ್ಯ ರೂಪಮಿದಮುಪನಿಷದಿತಿ"—ಕಠೋಪದಿಷದ್; (ಭಾಷ್ಯ) 'ಈಶಾದಿ ದಶೋಪನಿಷದಃ', ವಾರಣಾಸೀ, ೧೯೬೪, ಪು. ೩೬.

42 "That is the Upanisadic Absolute—neither Brahman nor Atman in one sense, but both in another. . . . The true conception of unity was reached in India only at this stage"—M. Hiriyanna, *Outlines of Indian Philosophy*, London, 1967, pp. 57–58.

43 ನೋಡಿ : ii, 1–5.

44 "Whether a Kalpasūtra embracing all four kinds of Sutras has always existed in every other Vedic school, as in the cases of Baudhayana anp Āpastamba, cannot be determined"—M. Winternitz, op. cit., I, p. 278.

45 ನೋಡಿ : M. Winternitz, op. cit., I, p. 314.

46 ಮಹತ್ತ್ವಾದ್ಭಾರವತ್ತ್ವಾಚ್ಚ
ಮಹಾಭಾರತಮುಚ್ಯತೇ। (ಆದಿಪರ್ವ ೧-೩೦೦)

47 ನೋಡಿ : M. Hiriyanna, *Sanskrit Studies*, Mysore, 1954, pp. 1–7.

48 ನೋಡಿ : M. Winternitz, op. cit., I, pp. 495–500.

49 ಯಾವತ್ ಸ್ಥಾಸ್ಯಂತಿ ಗಿರಯಃ ಸರಿತಶ್ಚ ಮಹೀತಲೇ
ತಾವದ್ರಾಮಾಯಣಕಥಾ ಲೋಕೇಷು ಪ್ರಚರಿಷ್ಯತಿ ॥ ('ವಾಲ್ಮೀಕಿ ರಾಮಾಯಣ', I, ೨-೩೬-೩೭).

50 ನೋಡಿ : M. Winternitz, op. cit., I, pp. 500-17.

51 ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ
ಸರ್ವೇಷ್ವೇತೇಷು ಕಥ್ಯಂತೇ ವಂಶಾನುಚರಿತಂ ಚ ಯತ್ ॥ ('ವಿಷ್ಣು ಪುರಾಣ', ೩-೬-೨೪).

52 ನೋಡಿ : Sukumar Sen, *History and Pre-History of Sanskrit*, Mysore, 1958, p. 15.

53 A. B. Keith, *A History of Sanskrit Literature*, London, 1961, p. 39.

54 ನೋಡಿ : S. N. Dasgupta and S. K. De, *A History of Sanskrit Literature*, Calcutta, 1962, pp. 5–6.

55 "Assuming the validity of tradition despite these difficulties, the date of Asvaghoṣa would fall to be determined by that of Kaniska for whom c. A.D. 100 still seems a just estimate"—A. B. Keith, op. cit., London, 1961, p. 55.

56 ನೋಡಿ : ಎ. ಆರ್. ಕೃಷ್ಣಶಾಸ್ತ್ರೀ, 'ಸಂಸ್ಕೃತ ನಾಟಕ', ಮೈಸೂರು, ೧೯೩೭, ಪು. ೩೬-೪೨.

57 ನೋಡಿ : A. B. Keith, *Sanskrit Drama*, London, 1964, pp. 93–95.

58 ನೋಡಿ : A. B. Keith, *A History of Classical Sanskrit Literature*, p. 248.

59 ನೋಡಿ : D. L. Narasimhachar, Old Kannada Literature—A Brief Survey, *Karnataka Darshana*, Bombay, 1955, p. 85.

60 M. Krishnamachariar, *History of Classical Sanskrit Literature*, Varanasi, 1970, p. 107.

61 ನೋಡಿ : A. B. Keith, *A History of Sanskrit Literature*, London, 1961, p. 82.

62 "The Śākuntala certainly represents the perfection of Kalidasa's art and may justly be assumed to his latest period of work"—A. B. Keith, *The Sanskrit Drama*, London, 1964, p. 152.

63 ಅನಘಾ ಗುಣಸಂಪೂರ್ಣಾ ಸಮುಚಿತ ವಿಚ್ಛಿತ್ತಿವೃತ್ತಿರೀತಿರಸಾ
ಪ್ರಸ್ನುತರಸಸಂದೋಹಾ ಸರಸ್ವತೀ ಜಯತಿ ಕಾಲಿದಾಸಸ್ಯ ॥ (ಅಭಿರಾಮ)
—'ಕಾಳಿದಾಸ', ಮೈಸೂರು ವಿಶ್ವವಿದ್ಯಾನಿಲಯ, ೧೯೫೫, ಮೈಸೂರು, ಪು. ೬.

64 'ಕಾಳಿದಾಸಾದೀನಾಮಿವ ಯಶಃ'—'ಕಾವ್ಯಪ್ರಕಾಶ', ಪೂನಾ, ೧೯೬೫, ಪು. ೭.

65 ಎ. ಆರ್. ಕೃಷ್ಣಶಾಸ್ತ್ರೀ, ಪೂರ್ವೋಕ್ತ, ಮೈಸೂರು, ೧೯೩೭, ಪು. ೨೦೯.

66 ನೋಡಿ : M. Winternitz, op. cit., III, pt. ii, Varanasi, 1967, pp. 593–655.

67 "It was not until a later period than the Jainas—the Śvetambaras from the 8th century aad the Digambaras some what earlier—used Sanskrit for commentaries and learned works, as well as for poetry. Some of these authors write a simple lucid Sanskrit, others compete with the classical Sanskrit poets in their use of an elaborate Sanskrit in the Kāvya style, whilst others affect a Sanskrit shot with Prakritisms, approaching the vernacular"—M. Winternitz, op. cit., II, Calcutta, 1933, p. 427.

68 M. Krishnamachariar, op. cit., p. 159.

69 ನೋಡಿ : D. L. Narasimhachar, op. cit., p. 88.

70 K. Krishnamoorthy, Kannada and Sanskrit, *Karnataka Darshana*, Bombay, 1955, pp. 206–07.

71 ಆ. ನೇ. ಉಪಾಧ್ಯೆ, 'ಪಾಲೀ ಮತ್ತು ಪ್ರಾಕೃತ', ಮೈಸೂರು, ೧೯೬೫, ಪು. ೧೯-೨೦.

72 'ಶಙ್ಗಮ್' (= ಸಂಘ) ಎಂದರೆ ವಿದ್ವದ್ಗೋಷ್ಠಿ ಅಥವಾ ವಿದ್ವಾಂಸರ ಕೂಟವೆಂದರ್ಥ. ತಮಿಳುನಾಡಿನ ಹಲವು ರಾಜಧಾನಿಗಳಲ್ಲಿಯೂ ಅಲ್ಲಲ್ಲಿಯ ಸಣ್ಣಪುಟ್ಟ ಹಳ್ಳಿಗಳಲ್ಲಿಯೂ ಬಾಳಿದ ತಮಿಳು ವಿದ್ವಾಂಸರ ಕೂಟಗಳಿಗೆ ಈ ಹೆಸರು ಮುಂಚಿನಿಂದಲೂ ವಾಡಿಕೆಯಾಗಿದ್ದರೂ ದಕ್ಷಿಣ ಮಧುರೆಯಲ್ಲಿದ್ದ ಸಂಘಕ್ಕೆ ಇದೊಂದು ವಿಶಿಷ್ಟನಾಮವಾಗಿ ಅನ್ವಯಿಸುತ್ತದೆ. ಶಿವ, ವಿಷ್ಣು, ಷಣ್ಮುಖ ಮುಂತಾದ ದೇವತೆಗಳೂ ಹಿರಿಯರೂ ದೇವಾಂಶಸಂಭೂತರಾದ ಪಾಂಡ್ಯರಾಜರೂ ಈ ಸುಡಿಯನ್ನು ಬಹಳ ಪ್ರೀತಿಯಿಂದ ಪರಿಪಾಲಿಸಿಕೊಂಡು ಬಂದಿದ್ದರಿಂದಲೇ ಈ ಸಂಘಕ್ಕೆ ಇಷ್ಟು ಪ್ರಾಶಸ್ತ್ಯ, ಗೌರವ ಏರ್ಪಟ್ಟವು ಎಂದು ನಂಬಿಕೆ. ತಮಿಳು 'ಸಂಘ'ಕ್ಕೆ ಚೇರ, ಚೋಳ, ಪಾಂಡ್ಯ ವಂಶಗಳ ಅರಸರು ಮಹಾಪೋಷಕರಾಗಿದ್ದರೂ ಪಾಂಡ್ಯರಾಜರೇ ವಿಶೇಷವಾಗಿ ಇದಕ್ಕೆ ನೆಲೆ ಮಾಡಿಕೊಟ್ಟು ಪೋಷಿಸಿದ್ದರಿಂದ ಅವರು ಜನರ ಮೆಚ್ಚಿಗೆಗೆ ಪಾತ್ರರಾದರು.

73 ತಮಿಳಿಗೆ ಪರಶಿವನೇ ಪರಮಾಚಾರ್ಯನೆಂದು ಕೆಲವರು ಹೇಳಿದರೆ, ಪರಶಿವನ ಮಗನಾದ ಷಣ್ಮುಖನೇ ತಮಿಳಿಗೆ ಅಧಿದೇವತೆಯೆಂದೂ ಅವನೇ ಮೊದಲು ಅಗಸ್ತ್ಯ ಮಹರ್ಷಿಗೆ ಈ ಭಾಷೆಯನ್ನು ಉಪದೇಶಿಸಿದನೆಂದೂ ಇನ್ನು ಕೆಲವರು ಅಭಿಪ್ರಾಯಪಡುತ್ತಾರೆ.

74 ತಾನನುವ್ಯಾಜ ಹಾರಾಂ ತಾನ್ವಃ ಪ್ರಜಾಭಕ್ಷಿಷ್ಟೇತಿ. ತ ಏತೇಂಧ್ರಾಃ ಪುಂಡ್ರಾಃ ಶಬರಾಃ ಪುಳಿಂದಾಃ ಮೂತಿಬಾ ಇತ್ಯುದಂತ್ಯಾ ಬಹವೋ ಭವನ್ತಿ (Bk. vii, Ch. iii, Pt. iv, ಶ್ಲೋಕ ೩೬) ಈ ವಾಕ್ಯಗಳಿಗೆ ಅರ್ಥ ಹೇಳುವಲ್ಲಿ ಹಲವು ಅಭಿಪ್ರಾಯಗಳಿವೆ. ಡಿ. ವೆಂಕಟಾವಧಾನಿ, ಆಂಧ್ರ ವಾಙ್ಮಯಾರಂಭ ದಶ, ಸಂ. ೧, ೧೯೬೦, ಪು. ೧.

75 ಅನ್ವೀಕ್ಷ್ಯ ದಂಡಕಾರಣ್ಯಂ ಸಪರ್ವತ ನದೀಗುಹಂ
ನದೀಂ ಗೋದಾವರೀಂ ಚೈವ ಸರ್ವಮೇವಾನುಪಶ್ಯತ
ತಥೈವಾಂಧ್ರಾಂಶ್ಚ ಪುಂಡ್ರಾಂಶ್ಚ ಚೋಳಾನ್ ಪಾಂಡ್ಯಾಂಶ್ಚ ಕೇರಳಾನ್
ಆಯೋಮುಖಶ್ಚ ಗನ್ತವ್ಯಃ ಪರ್ವತೋ ಧಾತುಮಂಡಿತಃ ॥ ಕಿಷ್ಕಿಂಧಾ ಕಾಂಡ, ಅಧ್ಯಾಯ ೪೧.

76 'ಮನುಸ್ಮೃತಿ', ಅಧ್ಯಾಯ X, ಶ್ಲೋಕ ೩೬.

77 ತಥಾಂಗ ವಂಗೌ ಸಹ ಪುಂಡ್ರಕೇಣ
ಪಾಂಡ್ಯೋಢ್ರರಾಜೌ ಸಹ ಚಾಂಧ್ರಕೇಣ ॥ ಸಭಾಪರ್ವ, ೪-೨೧.

78 "Next come the Andhras, a still more powerful race which possesses numerous villages and thirty towns defended by walls and towers pań which supplies its king with an army of 100000 infantry, 2000 cavalry and 1000 elephants." Mecrindle's Magasthenes p. 138, Indica in IA., VI 337–39.

79 This acquired the name Andnra after they came and settled in this country at least some 5 or 6 centuries before the Christian era. SVOI., Journal XIII, p. 19.

80 ಆರುದ್ರ, ಸಮಗ್ರಾಂಧ್ರಸಾಹಿತ್ಯಂ, ೧, ಪು. ೧೪-೧೫.

81 ನ ಬರ್ಬರ ಕಿರಾತಾಂಧ್ರ ದ್ರವಿಡಾದ್ಯಾಸು ಜಾತಿಷು
ನಾಟ್ಯಪ್ರಯೋಗೇ ಕರ್ತವ್ಯಂ ಕಾವ್ಯಂ (ಪಾಠ್ಯಂ) ಭಾಷಾಸಮಾಶ್ರಯಮ್
ಜಾತಿಷ್ವೇತಾಸು ಸರ್ವಾಸು ಶುದ್ಧಾಸು ಚ ದ್ವಿಜೋತ್ತಮಾಃ
ಶೌರಸೇನೀಂ ಸಮಾಶ್ರಿತ್ಯ ಭಾಷಾ ಕಾರ್ಯಾ ತು ನಾಟಕೇ ॥ ನಾಟ್ಯಶಾಸ್ತ್ರ, ೧೭-೪೬-೪೭

82 ಆರುದ್ರ, ಪೂರ್ವೋಕ್ತ, ಸಂ. ೧, ಪು. ೭.

83 ಕೆ. ಮಹದೇವಶಾಸ್ತ್ರಿ, *A Historical Grammar of Telugu Language*

84 ಆರುದ್ರ, ಪೂರ್ವೋಕ್ತ, ಪು. ೬೪.

85 ಎನ್. ವೆಂಕಟರಾವು, 'ತೆನುಗು ಕವುಲ ಚರಿತ್ರ', ಪು. ೨೫-೨೬.

86-7 ಆರುದ್ರ, ಪೂರ್ವೋಕ್ತ, ಪು. ೭೯ ; ೮೦.

88-9 'ಪೂರ್ವಾಂಧ್ರ ಕವುಲು', ಮೊದಲ ಭಾಗ, ಪು. ೨೧-೨೫ ; ೩೪.

ಅಧ್ಯಾಯ ಎರಡು

# ಕರ್ಣಾಟಕದ ರಾಜಕೀಯ ಚರಿತ್ರೆ

## ಸಾತವಾಹನ ಪೂರ್ವಾವಧಿ

ಕ್ರಿ.ಪೂ. ೩–೪ನೆಯ ಶತಮಾನಗಳ ವೇಳೆಗೆ ಕರ್ಣಾಟಕ ಒಂದು ರಾಜಕೀಯ ಘಟಕವಾಗಿ ರೂಪುಗೊಂಡಿತ್ತು. ಮಗಧರಾಜ್ಯದ ನಂದರು ಕರ್ಣಾಟಕದ ಮೇಲೂ ತಮ್ಮ ಆಧಿಪತ್ಯವನ್ನು ಸ್ಥಾಪಿಸಿದ್ದರು ಎಂಬುದು ಈಚೆಯ ಸು. ೧೨ನೆಯ ಶತಮಾನದ ಕರ್ಣಾಟಕದ ಕೆಲವು ಶಾಸನಗಳಲ್ಲಿ ಉಕ್ತವಾದ ವಿಷಯ. ಮೌರ್ಯರ ಚಂದ್ರಗುಪ್ತ ಗುರುವಾದ ಭದ್ರಬಾಹುವಿನೊಂದಿಗೆ ಶ್ರವಣಬೆಳಗೊಳಕ್ಕೆ ಬಂದು ನೆಲಸಿದನೆಂಬುದು ಸಾಂಪ್ರದಾಯಿಕ ನಂಬಿಕೆ ಕ್ರಿ. ಶ. ೬–೭ನೆಯ ಶತಮಾನಗಳ ವೇಳೆಗಾಗಲೇ ಪ್ರಚಾರದಲ್ಲಿತ್ತು. ಅಶೋಕನು ಕರ್ಣಾಟಕವನ್ನು ತನ್ನ ರಾಜ್ಯದ ಒಂದು ಪ್ರಾಂತವನ್ನಾಗಿ ಮಾಡಿಕೊಂಡು, ಅಲ್ಲಿ ತನ್ನ ಅಧಿಕಾರಿಗಳನ್ನು ನಿಯಮಿಸಿದ್ದನೆಂಬುದು ಸರ್ವವಿದಿತ. ಆದ್ದರಿಂದ ಕರ್ಣಾಟಕದ ರಾಜಕೀಯ ಇತಿಹಾಸ ಅಂದಿನಿಂದಲೇ ಆರಂಭವಾಯಿತೆನ್ನಬಹುದು. ಆದರೆ ಕ್ರಿ.ಶ. ೨ನೆಯ ಶತಮಾನದವರೆಗೆ ಇದರ ಚಿತ್ರಣ ದೊರೆತಿಲ್ಲ.

ನಂದರು ಕರ್ಣಾಟಕದಲ್ಲಿಯೂ ತಮ್ಮ ಆಧಿಪತ್ಯವನ್ನು ಸ್ಥಾಪಿಸಿದ್ದರೆಂಬುದು ಮೈಸೂರು ದೇಶದ ಕೆಲವು ಶಾಸನಗಳಿಂದ ತಿಳಿದುಬರುತ್ತದೆ.[1] ಕ್ರಿ.ಶ. ೧೩ನೆಯ ಶತಮಾನದ ಶಾಸನವೊಂದು ದಖನ್ನಿನ ಪಶ್ಚಿಮಭಾಗವನ್ನೂ ಮೈಸೂರಿನ ಉತ್ತರಭಾಗವನ್ನೂ ಒಳಗೊಂಡ ಕುಂತಲ ದೇಶವನ್ನು ಮೊದಲು ನಂದರೂ ಅನಂತರ ಮೌರ್ಯರೂ ಆಳಿದರೆಂದು ಸೂಚಿಸುತ್ತದೆ.[2] ಗೋದಾವರಿ ದಂಡೆಯಲ್ಲಿನ ನಾಂದೇಡ್ ಎಂಬ ಸ್ಥಳ ನಂದರ ಸಂಬಂಧವನ್ನು ಸೂಚಿಸುತ್ತದೆನ್ನಲಾಗಿದೆ.[3] ಕ್ರಿ.ಪೂ. ೩೨೨ರಲ್ಲಿ ಕೌಟಿಲ್ಯನ ಸಹಾಯದಿಂದ ಚಂದ್ರಗುಪ್ತಮೌರ್ಯ ನಂದರನ್ನು ಪದಚ್ಯುತರನ್ನಾಗಿ ಮಾಡಿ ತನ್ನ ಆಧಿಪತ್ಯವನ್ನು ಸ್ಥಾಪಿಸಿದನು. ಈ ನಂದರ ಮತ್ತು ಮೌರ್ಯರ ಮನಸ್ತಾಪ ಹಿಂದು ಪುರಾಣಗಳಲ್ಲಿ, 'ಮುದ್ರಾರಾಕ್ಷಸ', 'ಮಹಾವಂಶಟೀಕಾ' ಮತ್ತು ಜೈನ ಪರಿಶಿಷ್ಟಪರ್ವಗಳಲ್ಲಿ ಉಕ್ತವಾಗಿದೆ.[4]

ಕರ್ನಾಟಕದ ಕೆಲವು ಭಾಗಗಳು ಮೌರ್ಯರ ವಶದಲ್ಲಿತ್ತೆಂಬುದು ತಿಳಿದಿದೆ. ಮೌರ್ಯರಾಜ್ಯ ಸ್ಥಾಪಕನಾದ ಚಂದ್ರಗುಪ್ತನು ಭದ್ರಬಾಹು ಮುನಿಯ ಶಿಷ್ಯನಾಗಿ ಆತನೊಡನೆ ಶ್ರವಣಬೆಳಗೊಳಕ್ಕೆ ಬಂದು ಸೇವೆಮಾಡುತ್ತ ಅಲ್ಲಿ ಮೃತನಾದನು ಎಂಬ ಕೆಲ ಪಂಡಿತರ ಅಭಿಪ್ರಾಯದಿಂದ ಕರ್ಣಾಟಕಕ್ಕೂ ಮೌರ್ಯರಿಗೂ ಇದ್ದ ಸಂಬಂಧ ಸೂಚಿತವಾಗು

ತ್ತದೆ. ಶ್ರವಣಬೆಳಗೊಳದಲ್ಲಿರುವ ಚಿಕ್ಕಬೆಟ್ಟಕ್ಕೆ ಚಂದ್ರಗಿರಿ ಎಂಬ ಹೆಸರಿದೆ. ಇದು ಚಂದ್ರಗುಪ್ತಮೌರ್ಯ ಮತ್ತು ಭದ್ರಬಾಹುಮುನಿ ಇಲ್ಲಿ ತಂಗಿದ್ದರೆಂಬುದಕ್ಕೆ ಸಾಕ್ಷಿಯಾಗಿದೆ. ಅಷ್ಟೇ ಅಲ್ಲದೆ ಅವನ ಹೆಸರಿನದೇ ಆದ ಹಳೆಯ ಬಸದಿಯೊಂದು ಕೂಡ ಶ್ರವಣಬೆಳಗೊಳದಲ್ಲಿದೆ.[5] ೯೦೦ರ ಶ್ರೀರಂಗಪಟ್ಟಣದ ಎರಡು ಶಾಸನಗಳು ಚಂದ್ರಗುಪ್ತ ಹಾಗೂ ಭದ್ರಬಾಹುಮುನಿಗಳ ಹೆಜ್ಜೆಗುರುತಿನಿಂದ ಪುನೀತವಾಗಿವೆ ಎಂದು ತಿಳಿಸುತ್ತವೆ.[6] ೯೩೧ರ ಹರಿಷೇಣನ 'ಬೃಹತ್ಕಥಾಕೋಶ' ಮತ್ತು ೧೪೫೦ರ ರತ್ನನಂದಿಯ 'ಭದ್ರಬಾಹು ಚರಿತ' ಗ್ರಂಥಗಳು ಶಾಸನಗಳಲ್ಲಿ ಹೇಳಿರುವ ವಿಷಯವನ್ನು ವರ್ಣಿಸುತ್ತವೆ.[7] ಶ್ರವಣಬೆಳಗೊಳಕ್ಕೆ ಚಂದ್ರಗುಪ್ತನ ಆಗಮನ ವಿಷಯದ ಬಗ್ಗೆ ಫ್ಲೀಟ್ ಮತ್ತು ಆರ್. ಶಾಮಶಾಸ್ತ್ರಿಗಳು ಶಂಕೆ ವ್ಯಕ್ತಪಡಿಸಿದ್ದಾರೆ; ಆದರೆ ರೈಸ್ ಮತ್ತು ಆರ್. ನರಸಿಂಹಾಚಾರ್ಯರು ಒಪ್ಪಿಕೊಂಡಿದ್ದಾರೆ.

ರಾಯಚೂರಿಗೆ ೪೫ ಮೈಲಿಗಳ ಅಂತರದಲ್ಲಿರುವ ಮಸ್ಕಿ ಎಂಬ ಗ್ರಾಮದಲ್ಲಿಯೂ ಮೈಸೂರು ಸಂಸ್ಥಾನದ ಚಿತ್ರದುರ್ಗ ಜಿಲ್ಲೆಯ ಸಿದ್ಧಾಪುರದಲ್ಲಿಯೂ ಅನಂತಪುರ ಜಿಲ್ಲೆಯ ಗುತ್ತಿಯ ಹತ್ತಿರವಿರುವ ಎರ್ರಗುಡಿಯಲ್ಲಿಯೂ ಅಶೋಕನ ಶಾಸನಗಳು ಸಿಕ್ಕಿವೆ. ಸಿದ್ಧಾಪುರದ ಲಿಪಿಗಳಿಂದ ಈ ಗ್ರಾಮವು ಅಶೋಕನ ರಾಜ್ಯದ ಅತ್ಯಂತ ದಕ್ಷಿಣಕ್ಕಿದ್ದ ಸುವರ್ಣಗಿರಿ ಎಂಬ ಪ್ರಾಂತ್ಯಕ್ಕೆ ಸೇರಿತ್ತೆಂದೂ ಆಗ್ಗೆ ಇದಕ್ಕೆ 'ಇಸಿಲ' ಎಂಬ ಹೆಸರಿದ್ದಿರಬಹುದೆಂದೂ ಒಂದು ಅಭಿಪ್ರಾಯ ವ್ಯಕ್ತವಾಗಿದೆ.[8] ಮಸ್ಕಿಯ ದಕ್ಷಿಣಕ್ಕೂ ಹಂಪೆಯ ಉತ್ತರಕ್ಕೂ ಇರುವ ಕನಕಗಿರಿಯೇ ಶಾಸನಗಳಲ್ಲಿ ಉಕ್ತವಾದ ಸುವರ್ಣಗಿರಿ ಎಂಬುದು ಹುಲ್ಷರ ಅಭಿಪ್ರಾಯ.[9] ಅಶೋಕನು ಧರ್ಮೋಪದೇಶಕರನ್ನು ಬನವಾಸಿಗೆ ಕಳಿಸಿದ್ದನೆಂಬುದು 'ಮಹಾವಂಸ'ದ ವಚನಗಳಿಂದ ತಿಳಿದಿದೆ. ಇದೇ ರೀತಿ ಪಿ. ಬಿ. ದೇಸಾಯಿ ಅವರು ಕೊಪ್ಪಳ (ಕೊಪಣ)ದಲ್ಲಿ ಈಗಲೂ ಚಾಲ್ತಿಯಲ್ಲಿರುವ 'ಮೋರೇರ ಅಗಸಿ', 'ಮೋರೇರ ಅಂಗಡಿ' ಎಂಬ ಹೆಸರುಗಳು ಈ ಪ್ರದೇಶ ಮೌರ್ಯರ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದನ್ನು ಸೂಚಿಸುವಂತಿವೆ, 'ಮೋರೇರ' ಎಂಬುದು ಮೌರ್ಯರ ಎಂಬುದರಿಂದ ಬಂದಿರಬೇಕು—ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.[10] ಆದರೆ ಮುಂದೆ ಅವರೇ ಶಂಕೆ ವ್ಯಕ್ತಪಡಿಸಿದಂತೆ ಈ ಅಭಿಪ್ರಾಯಕ್ಕೆ ಭದ್ರವಾದ ಬೆನ್ನೆಲುಬಿಲ್ಲ. ಏಕೆಂದರೆ 'ಮೌರ್ಯರ' ಎಂಬುದರಿಂದ 'ಮೋರೇರ' ಆಗಿದೆ ಎಂಬಂತೆಯೇ 'ಮರವರ' (ಕುರುಬರ ಒಂದು ಪಂಗಡ) ಎಂಬ ಪದದಿಂದಲೂ ಆ ಪದ ನಿಷ್ಪನ್ನವಾಗಿರಬಹುದು.

## ಸಾತವಾಹನರು (ಕ್ರಿ.ಪೂ. ೧ನೆಯ ಶ.—ಕ್ರಿ.ಶ. ೩ನೆಯ ಶ.)

ಸಾತವಾಹನರನ್ನು ಕುರಿತು ಈಗಾಗಲೇ ಹೇಳಿದೆ. ಇವರು ಕರ್ಣಾಟಕದ ಪ್ರದೇಶಗಳಲ್ಲಿ ಮೌರ್ಯರ ಉತ್ತರಾಧಿಕಾರಿಗಳಾಗಿ ಆಳಿದರು ಎಂಬುದೊಂದು ಸೂಚನೆ. ಪುರಾಣಗಳಲ್ಲಿ ಉಕ್ತರಾದ ಆಂಧ್ರರು ಪಶ್ಚಿಮದಿಂದ ಪೂರ್ವತೀರಕ್ಕೆ ಸರಿದ ಸಾತವಾಹನರೇ ಎಂಬ ಸಲಹೆ ಸರ್ವಸಮ್ಮತವಾಗಿಲ್ಲ. ಈ ಸಂದರ್ಭದಲ್ಲಿ ಒಂದು ಅಂಶವನ್ನು ಗಮನಿಸ

ಬಹುದು : ಆಂಧ್ರಪದವು ದೇಶವಾಚಕವಲ್ಲ. ಅದು ವಂಶ ಅಥವಾ ಪಂಗಡ ವಾಚಕ. ಪುರಾಣಗಳಲ್ಲಿ ಅವರನ್ನು ಆಂಧ್ರ ಜಾತಿಯರೆಂದು ವರ್ಣಿಸಲಾಗಿದೆ. 'ಸಾತವಾಹನ' ಶಬ್ದವಾದರೂ ಜಾತಿವಾಚಕವೆಂದೇ ತೋರುತ್ತದೆ. ನಾಸಿಕದ ಒಂದು ಶಾಸನದಲ್ಲಿ "ಸಾತವಾಹನ ಕುಲೇ ಕನ್ಹೇರಾಜನಿ" (ಸಾತವಾಹನ ಕುಲದಲ್ಲಿ ಕೃಷ್ಣನು ರಾಜನಾಗಿದ್ದಾಗ) ಎಂಬುದಿರುವುದರಿಂದ, 'ಸಾತವಾಹನ' ಎಂಬುದು ಕುಲದ ಹೆಸರೆಂದು ತಿಳಿದು ಬರುತ್ತದೆ.

ಇದಕ್ಕೆ ಪೋಷಕವಾಗಿ ಶಂ. ಬಾ. ಜೋಶಿಯವರ ಮಾತು: "ಕುರುಬರಲ್ಲಿ ಅಂಡೆ(ಹಂಡೆ) ಯವರೆಂಬ ಒಂದು ಬಣವಿದೆ. ಅಂಡೆಯವರು ತಾವು ರಾವುತರು, ಸರದಾರರು, ಅರಸುಕುಲದವರೆಂಬುದನ್ನು ಇಂದಿಗೂ ಮರೆತಿಲ್ಲ. ತಮಿಳು ಪ್ರಾಚೀನ ಕಾವ್ಯಗಳಲ್ಲಿ ಅಂಡರ್ ಎಂದು ನಿರ್ದೇಶಿಸಿದ್ದು ಇವರನ್ನೇ. ಕ್ರಿ.ಶ. ಎರಡನೆಯ ಶ. ದ ಟಾಲೆಮಿಯು ಅಂಡರ ಹೆಸರನ್ನು ಹೇಳುತ್ತಾನೆ. ಪಾಲಿ ಗ್ರಂಥಗಳಲ್ಲಿರುವ ಅಂಧ, ಅಂಧಕರೂ ನಮ್ಮ ಹಟ್ಟಿಕಾರ ಅಂಡರರೂ (ಕುರುಬರು) ಒಂದೇ ಎಂಬುದನ್ನು ಎಸ್. ಕೃಷ್ಣಸ್ವಾಮಿ ಐಯಂಗಾರ್ ಅವರು ಸಿದ್ಧ ಮಾಡಿದ್ದಾರೆ. ಮತ್ತು ಇವರೇ ಆಂಧ್ರರೆಂದು ಪ್ರತಿಪಾದಿಸಿದ್ದಾರೆ. ಆದ್ದರಿಂದ ಕರ್ನಾಟಕದ ಹಂಡೆ ಕುರುಬರೇ ಆಂಧ್ರರು ಅಥವಾ ಸಾತವಾಹನರು ಎಂಬ ನಿಲವಿಗೆ ಬರಬಹುದು" ಎಂದಿದ್ದಾರೆ.[11] "ಇಷ್ಟೇ ಅಲ್ಲದೆ ಶಾತವಾಹನರ ನಾಣ್ಯಗಳ ಮೇಲೆ ಎತ್ತು, ಮರಗಳ ಚಿನ್ಹೆ ಇರುವುದು ವಿಚಾರಣೀಯವಾಗಿದೆ. ಸಾತವಾಹನ ಎಂದರೆ ಶಾತ = ಸಾದೋಂ (ಮುಂಡ ಭಾಷೆ)=ಕುದುರೆ ರಾವುತರು.... ಶಾತ (ಕ) ವಾಹನ ಎಂದರೆ ಕುದುರೆಯನ್ನು ವಾಹನವಾಗಿ ಉಳ್ಳವರೆಂದು ಅಥವಾ ಶಾಕ (ಖ) ವು ಧ್ವಜವಾಗಿ ಉಳ್ಳವರೆಂದು. ಆ ಕಾರಣದಿಂದಲೇ ಶಾತವಾಹನರೆಂಬ ಹೆಸರು ಬಂದಿರಬೇಕು. ಮರವೇ ಆರಾಧ್ಯ ದೇವತೆಯಾದ ಮರವರು (ಕುರುಬರ ಒಂದು ಪಂಗಡ) ಇರುವುದರಿಂದ ಶಾತವಾಹನರು ಈ ಕುರುಬ ಜನಾಂಗದವರು" ಎಂಬ ನಿಲವಿಗೆ ಬಂದಿದ್ದಾರೆ.[12]

ಕರ್ನಾಟಕದಲ್ಲಿ ಸಾತವಾಹನ ಕುಲಕ್ಕೆ ಸೇರಿದ ಹಲವರು ಆಳುತ್ತಿದ್ದರೆನ್ನಲು ಆಧಾರಗಳಿವೆ. ಕುಂತಲ ಶಾತಕರ್ಣಿ ಎಂಬಾತ ಈ ಕುಲಕ್ಕೆ ಸೇರಿದ ಅರಸ. ಇದು ಈತನ ಹೆಸರು ಎನ್ನುವುದಕ್ಕಿಂತ ಈತನು ಕುಂತಲಾಧಿಪತಿಯಾದ ಕಾರಣ ಕುಂತಲ ಶಾತಕರ್ಣಿ ಎನಿಸಿಕೊಂಡನೆಂಬುದು ಹೆಚ್ಚು ತರ್ಕಬದ್ಧವಾದೀತು. ಈತನನ್ನು ವಾತ್ಸ್ಯಾಯನನ 'ಕಾಮಸೂತ್ರ'ದಲ್ಲಿ ಉಲ್ಲೇಖಿಸಲಾಗಿದೆ. ಪುರಾಣಗಳಲ್ಲೂ ಈತನು ಕಾಣಿಸಿಕೊಂಡಿದ್ದಾನೆ. ರಾಜಶೇಖರ ತನ್ನ 'ಕಾವ್ಯಮೀಮಾಂಸೆ'ಯಲ್ಲಿ ಸಾತವಾಹನನೆಂಬ ಅರಸ ಕುಂತಲದಲ್ಲಿ ರಾಜನಾಗಿದ್ದ ಎಂದಿದ್ದಾನೆ. ಈ ಅರಸ ತನ್ನ ಅಂತಃಪುರದಲ್ಲಿ 'ಪ್ರಾಕೃತಭಾಷಾತ್ಮಕ'ವನ್ನು ಪ್ರಯೋಗಿಸಬೇಕೆಂಬ ನಿಯಮ ಜಾರಿಗೆ ತಂದನೆಂದಿದ್ದಾನೆ. 'ಗಾಥಾಸಪ್ತಶತಿ'ಯ ಕರ್ತೃ ಹಾಲನು ಸಹ ಕುಂತಲಾಧಿಪತಿಯಾಗಿದ್ದನೆಂದು ತಿಳಿದಿದೆ. ತಾಳಗುಂದದ ಶಾಸನದಲ್ಲಿ, ಅಲ್ಲಿನ ಪ್ರಣವೇಶ್ವರನನ್ನು ಹಿಂದೆ ಸಾತಕರ್ಣಿ ಮುಂತಾದ ಅರಸರು ಪೂಜಿಸುತ್ತಿದ್ದರೆಂದಿದೆ. ನಾಸಿಕದ ಶಾಸನದಲ್ಲಿ ಗೌತಮೀಪುತ್ರ ಸಾತಕರ್ಣಿಯು

ವೈಜಯಂತೀ ನೆಲೆವೀಡಿನಲ್ಲಿದ್ದಾಗ ಶಾಸನೋಕ್ತ ಆಜ್ಞೆಯನ್ನಿತ್ತನೆಂದಿದೆ. ಈ ವೈಜಯಂತಿ ಕಾರವಾರ ಜಿಲ್ಲೆಯ ಸುಪ್ರಸಿದ್ಧವಾದ ಬನವಾಸಿ. ಇವುಗಳಿಂದ ಸಾತವಾಹನರ ಮೂಲ ವಂಶಕ್ಕೆ ಸೇರಿದ ಗೌತಮೀಪುತ್ರನ ರಾಜ್ಯ ಕರ್ಣಾಟಕದ ಈ ಭಾಗಗಳನ್ನೊಳಗೊಂಡಿತ್ತೆಂಬುದು ಖಚಿತವಾಗುತ್ತದೆ. ಇತ್ತೀಚೆಗೆ ಬನವಾಸಿಯಲ್ಲಿ ವಾಸಿಷ್ಠೀ ಪುತ್ರ ಶಿವಶ್ರೀ ಪುಳುಮಾವಿಯ ಶಾಸನವೊಂದು ದೊರೆತಿದೆ. ಮ್ಯಾಕಡೋನಿಯಲ್ಲಿ ಇದೇ ಮನೆತನದ ಪುಳುಮಾವಿಯ ಶಾಸನವಿದೆ. ಇದರಲ್ಲಿ ಸಾತಾಹನಿಹಾರ ಎಂಬ ಭೌಗೋಳಿಕ ಪ್ರದೇಶದ ಉಲ್ಲೇಖವಿದೆ. ಪಲ್ಲವ ಶಿವಸ್ಕಂದವರ್ಮನ ಹಿರೇಹಡಗಲಿ ತಾಮ್ರಶಾಸನದಲ್ಲಿ 'ಸಾತಾಹನಿರಟ್ಟ'ವನ್ನೂ ಹೆಸರಿಸಿದೆ. ಇವೆಲ್ಲ ಸಾತವಾಹನರ ಅಧೀನಕ್ಕೊಳಪಟ್ಟ ಪ್ರದೇಶಗಳೇ.

ಸಾತವಾಹನರ ಈ ಆಳಿಕೆಯ ಕಾಲ ಕ್ರಿ.ಶ. ಸು. ೨ನೆಯ ಶತಮಾನ. ಕನ್ನಡ ಭಾಷೆ ಈ ವೇಳೆಗೆ ಸ್ವತಂತ್ರವಾಗಿ ಬೆಳೆದಿದ್ದ ಭಾಷೆಯಾಗಿತ್ತೆನ್ನಲು ಆಧಾರಗಳಿವೆ. ರಾಜಶೇಖರನ ಮೇಲೆ ಉಕ್ತವಾದ ಹೇಳಿಕೆಯಿಂದ ಅಂದು ಅಂತಃಪುರದಲ್ಲಿ ಬಳಸುತ್ತಿದ್ದ ಭಾಷೆ 'ಪ್ರಾಕೃತಭಾಷಾತ್ಮಕ' ಎಂದರೆ ಪ್ರಾಕೃತ ಭೂಯಿಷ್ಠ, ಸ್ಥಳೀಯ ಭಾಷೆ ಎಂಬ ಅರ್ಥ ಬರುತ್ತದೆ. ಆದ್ದರಿಂದ ಅದು ಕನ್ನಡವಾಗಿರಬೇಕು. ಹಾಲನ 'ಗಾಥಾಸಪ್ತಶತಿ'ಯಲ್ಲಿ ಕೆಲವು ಕನ್ನಡ ಪದಗಳು ಕಂಡುಬರುತ್ತವೆ. 'ಹೇರಾನಿಕ' ಎಂಬ ಕೋಶಾಧಿಕಾರಿಯ ಹೆಸರಿನ ಕನ್ನಡ ರೂಪ ಎರಣಿಗ; 'ಇಸಿಲ' ಎಂಬುದು ಅತಿಪ್ರಾಚೀನ ಕನ್ನಡಪದ. ಇವುಗಳಿಂದ ಕನ್ನಡ ಭಾಷೆ ರೂಪುಗೊಳ್ಳುತ್ತಿತ್ತು ಎಂಬುದು ಸ್ಪಷ್ಟ. ಇದಕ್ಕೆ ರಾಜಾಶ್ರಯವಿತ್ತು. 'ಶ್ರವಣಪ್ರಿಯ ಬಹುಜನ'ದ ಬೆಂಬಲವಿತ್ತು. ಆದರೂ ಪ್ರಾಕೃತ ಇನ್ನೂ ಪ್ರಭಾವಶಾಲಿಯಾಗಿದ್ದ ಕಾಲವಿದು. ಹಾಲನ 'ಗಾಥಾಸಪ್ತಶತಿ' ಗುಣಾಢ್ಯನ 'ಬೃಹತ್ಕಥಾ' ಇವು ಪ್ರಾಕೃತಗ್ರಂಥಗಳು. ಸಾತವಾಹನ ಅರಸನ ಆಶ್ರಯ ಪಡೆದಿದ್ದ ಶರ್ವವರ್ಮ 'ಕಾತಂತ್ರ' ವ್ಯಾಕರಣದ ಕರ್ತೃವಾಗಿದ್ದ. ಇದು ದ್ರಾವಿಡ ಭಾಷೆಗಳ ವ್ಯಾಕರಣಕ್ಕೆ ಮಾದರಿಯಾಗಿತ್ತು ಎನ್ನಲಾಗಿದೆ.

## ಗಂಗರು

ಗಂಗರು ಆಳುತ್ತಿದ್ದ ಪ್ರದೇಶವೇ ಗಂಗವಾಡಿ. ಈಗ ಒಕ್ಕಲಿಗ ಗೌಡರಲ್ಲಿರುವ ಒಂದು ಒಳಪಂಗಡ 'ಗಂಗಡಿಕಾರ' ಎಂಬುದು 'ಗಂಗವಾಡಿಕಾರ' ಎಂಬ ಹೆಸರಿನ ಸಂಕ್ಷಿಪ್ತ ರೂಪವಿರಬಹುದು. ಮೊದಲು ಕುವಳಾಲಪುರ (ಕೋಲಾರ) ಇವರ ರಾಜಧಾನಿಯಾಗಿದ್ದು, ಕೆಲಕಾಲಾನಂತರ ರಾಜಧಾನಿಯನ್ನು ತಲಕಾಡಿಗೆ ವರ್ಗಾಯಿಸಿಕೊಂಡಂತೆ ತಿಳಿಯುತ್ತದೆ. ಇವರನ್ನು ತಲಕಾಡಿನ ಗಂಗರೆಂದೇ ಸಾಮಾನ್ಯವಾಗಿ ಕರೆಯಲಾಗಿದೆ. ತಲಕಾಡಿಗೆ ಬರುವ ಮುನ್ನ ಸ್ವಲ್ಪ ಕಾಲ ಮಾನ್ಯಪುರ (ಈಗಿನ ಬೆಂಗಳೂರು ಜಿಲ್ಲೆಯ ಮಣ್ಣೆ)ದಲ್ಲಿ ಇವರು ನೆಲಸಿದ್ದರು.

೧೧ನೆಯ ಶತಮಾನ ಮತ್ತು ನಂತರದ ಕೆಲವು ಶಾಸನಗಳಲ್ಲಿ ಈ ವಂಶದ ಮೂಲ ಪುರುಷರು ಮೊದಲು ಉತ್ತರ ಭಾರತದ ಅಯೋಧ್ಯಾಪುರ, ನಂತರ ಅಹಿಚ್ಛತ್ರಪುರ

ಗಳಿಂದ ಆಳುತ್ತಿದ್ದು, ಇವರಲ್ಲಿ ದಡಿಗ ಮತ್ತು ಮಾಧವರೆಂಬಿಬ್ಬರು ಸೋದರರು ದಕ್ಷಿಣಕ್ಕೆ ವಲಸೆಬಂದಂತೆಯೂ ಆಂಧ್ರಪ್ರದೇಶದ ಕಡಪ ಜಿಲ್ಲೆಯ ಗಂಗಪೇರೂರಿನಲ್ಲಿ ನೆಲಸಿದ್ದು ತೊಂಬತ್ತಾರು ಸಾವಿರದ ವಿಶಾಲರಾಜ್ಯವನ್ನು ವಶಪಡಿಸಿಕೊಂಡಂತೆಯೂ ಹೇಳಿದೆ. ಆದರೆ ಇವರ ಮೊದಲ ಶಾಸನಗಳಲ್ಲಿ ಈ ವಿವರಗಳು ಇಲ್ಲ.

ಗಂಗರನ್ನು ಜಾಹ್ನವೀಯ ಕುಲ ಸಂಭೂತರೆಂದು ಹೇಳಿದೆ. ಇದರಿಂದ ಗಂಗಾನದಿಯ ಸಂಪರ್ಕದಿಂದ ಇವರಿಗೆ ಆ ಹೆಸರು ಬಂದಿತೆಂದು ಊಹಿಸಲಾಗಿದೆ. ನಂತರದ ಶಾಸನ ಗಳಲ್ಲಿ, ದಡಿಗ ಮಾಧವರನ್ನು ಕುರಿತ ಹೇಳಿಕೆಗಳಲ್ಲೂ ವ್ಯತ್ಯಾಸವಿದೆ. ಎರಡು ಶಾಸನ ಗಳು ಇವರನ್ನು ಹರಿಶ್ಚಂದ್ರನ ಮಕ್ಕಳೆಂದು ತಿಳಿಸಿದರೆ, ಇನ್ನೆರಡು ಶಾಸನಗಳು ಇವರನ್ನು ಪದ್ಮನಾಭನ ಮಕ್ಕಳೆಂದು ಹೇಳಿವೆ. ಹರಿಶ್ಚಂದ್ರನ ಸೊಸೆ ವಿಜಯ ಮಹಾದೇವಿ ಗರ್ಭಿಣಿಯಾಗಿದ್ದಾಗ, ಗಂಗಾನದಿಯಲ್ಲಿ ಸ್ನಾನಮಾಡಿದಳೆಂದೂ ಹುಟ್ಟಿದ ಮಗುವಿಗೆ ಗಂಗಾದತ್ತ ಎಂಬ ಹೆಸರಿಡಲಾಯಿತೆಂದೂ ಆ ಕಾರಣ ಈ ವಂಶಜರಿಗೆ ಗಂಗರೆಂಬ ಹೆಸರು ಬಂತೆಂದೂ ತಿಳಿಯುತ್ತದೆ. ಇದೇ ಪೀಳಿಗೆಯಲ್ಲಿ ಹುಟ್ಟಿದ ಪದ್ಮನಾಭ ತಪಸ್ಸುಮಾಡಿ ಇಬ್ಬರು ಗಂಡು ಮಕ್ಕಳನ್ನು ಪಡೆದನು. ಉಜ್ಜಯಿನಿಯ ರಾಜನಾದ ಮಹೀಪಾಲ ಪದ್ಮನಾಭನ ಮೇಲೆ ದಂಡೆತ್ತಿ ಬಂದು ಇಂದ್ರದತ್ತವಾದ ಐದು ಚಿಹ್ನೆಗಳನ್ನು ತನಗೆ ಒಪ್ಪಿಸಬೇಕೆಂದು ಆಗ್ರಹಮಾಡಿದನೆಂದೂ ಅದಕ್ಕೆ ಒಪ್ಪದ ಪದ್ಮನಾಭ ತನ್ನಿಬ್ಬರು ಮಕ್ಕಳನ್ನು ಹಾಗೂ ಅಲಬ್ಬೆ ಎಂಬ ಮಗಳನ್ನು ಅನೇಕ ಬ್ರಾಹ್ಮಣರೊಡನೆ ದಕ್ಷಿಣ ದೇಶಕ್ಕೆ ಕಳುಹಿಸಿ, ತಾನು ಯುದ್ಧಕ್ಕೆ ಸಿದ್ಧನಾದನೆಂದೂ ತಿಳಿದುಬರುತ್ತದೆ. ಹಾಗೆ ಕಳುಹಿಸಲ್ಪಟ್ಟ ಅವರಿಬ್ಬರೂ ಪೇರೂರಿಗೆ (ಗಂಗ ಪೇರೂರು) ಬಂದು, ಸಿಂಹನಂದಿ ಎಂಬ ಜೈನ ಆಚಾರ್ಯನನ್ನು ಕಂಡು ಅವನ ಮಾರ್ಗದರ್ಶನದಲ್ಲಿ ಗಂಗರಾಜ್ಯವನ್ನು ಸ್ಥಾಪಿಸಿದರು.

ಈ ಮೇಲಿನ ಶಾಸನೋಕ್ತ ಕಥೆಯಲ್ಲಿರುವ ಅಂಶಗಳು ನಿಜವೆಂದು ನಂಬಲು ಆಧಾರ ಗಳಿಲ್ಲ. ಗಂಗಮಂಡಲ ಸ್ಥಾಪನೆಗೆ ಸಿಂಹನಂದಿ ಸಹಾಯ ಮಾಡಿದನೆಂಬ ಅಂಶ ಸಾಹಿತ್ಯ ಮತ್ತು ಶಾಸನಗಳಿಂದ ತಿಳಿದುಬರುತ್ತದೆ. ಇಂದ್ರಭೂತಿ ತನ್ನ 'ಸಮಯ ಭೂಷಣ'ದಲ್ಲಿ ಸಿಂಹನಂದಿಯನ್ನು ಏಲಾಚಾರ್ಯ ಮತ್ತು ಪೂಜ್ಯಪಾದರೊಡನೆ ಹೆಸರಿಸಿದ್ದಾನೆ. ಶ್ರವಣ ಬೆಳಗೊಳದ ೫೪ನೆಯ ಶಾಸನದಲ್ಲಿ ಇವನು ಸಮಂತಭದ್ರನಿಗೆ ಎರಡನೆಯವನಾಗಿ ಹೆಸರಿ ಸಲ್ಪಟ್ಟಿದ್ದಾನೆ.

ಉತ್ತರಕ್ಕೆ ಮರಂದಲೆ, ಪೂರ್ವಕ್ಕೆ ತೊಂಡೆನಾಡು, ಪಶ್ಚಿಮಕ್ಕೆ ಸಮುದ್ರ, ದಕ್ಷಿಣಕ್ಕೆ ಕೊಂಗುದೇಶ ಗಡಿಯಾಗುಳ್ಳ ರಾಜ್ಯವೇ ಗಂಗವಾಡಿ. ೯೬೦೦೦ ಎಂದು ಇತಿಹಾಸದಲ್ಲಿ ಪ್ರಸಿದ್ಧವಾಗಿರುವಂಥದು. ಅವರ ರಾಜ್ಯದ ಉತ್ತರ ಗಡಿಯ ಊರಾದ ಮರಂದಲೆ ಎಲ್ಲಿದೆಯೆಂಬುದು ನಿರ್ಧಾರವಾಗಿಲ್ಲ. ಕೋಲಾರ ಜಿಲ್ಲೆಯ ಉತ್ತರಕ್ಕಿರುವ ಕೆಲವು ಊರು ಗಳು ಆ ಹೆಸರಿನ ಸಾದೃಶ್ಯವನ್ನು ಹೊಂದಿರುವುದರಿಂದ ಆ ಭಾಗವೇ ಇರಬೇಕೆಂದು ಊಹಿಸಬಹುದು. ಉಳಿದ ಗಡಿಗಳ ಬಗ್ಗೆ ಸಂಶಯಕ್ಕೆಡೆಯಿಲ್ಲ.

ಮಾಧವ ಮತ್ತು ದಡಿಗರಿಂದ ಈ ಅರಸು ಮನೆತನದ ಚರಿತ್ರೆಯನ್ನು ಪ್ರಾರಂಭಿಸ

ಬಹುದು. ಕೆಲವು ಶಾಸನಗಳಲ್ಲಿ ಕೊಂಗಣಿವರ್ಮನನ್ನು ದಡಿಗ ಮಾಧವರ ತಂದೆಯೆಂದು ಹೇಳಿದೆ. ೧ನೆಯ ಮಾಧವನಿಗೆ ಕೊಂಗಣಿವರ್ಮ (ತ. ಕೊಂಕಣಿವರ್ಮ) ಎಂಬ ಹೆಸರು ಗಳಿವೆ. ಪೂರ್ವದಿಂದ ಕೊಂಕಣ ಅಥವಾ ಪಶ್ಚಿಮ ತೀರದ ಕಡೆಗೆ ರಾಜ್ಯವನ್ನು ವಿಸ್ತರಿ ಸಿದ್ದರಿಂದ ಅವನಿಗೆ ಕೊಂಕಣಿವರ್ಮ ಎಂಬ ಹೆಸರು ಬಂದಿರಬಹುದು ಎಂಬುದೊಂದು ಊಹೆ.

ಮಾಧವನ ಮಗ ಹರಿವರ್ಮ. ಈತನಿಗೆ ಆರ್ಯವರ್ಮ ಮತ್ತು ಕೃಷ್ಣವರ್ಮ ಎಂಬ ಇನ್ನೆರಡು ಹೆಸರುಗಳೂ ಅನ್ವಯವಾಗುವುದೆಂದು ಕೆಲವರು ಅಭಿಪ್ರಾಯಪಟ್ಟರೆ, ಇವರು ಮೂವರೂ ಭಿನ್ನರೆಂದೂ ಪ್ರತ್ಯೇಕವಾಗಿ ಇವರು ಪರುವಿ, ಕೈವಾರ ಹಾಗೂ ತಲಕಾಡು ಗಳಲ್ಲಿ ಸ್ವತಂತ್ರವಾಗಿ ಆಳಿದರೆಂದೂ ಇನ್ನೊಂದು ಅಭಿಪ್ರಾಯವಿದೆ. ಹರಿವರ್ಮನಿಗೆ ಗಂಗ ರಾಜ್ಯವನ್ನು ದಕ್ಕಿಸಿಕೊಡುವುದರಲ್ಲಿ ಪಲ್ಲವರ ಸಿಂಹವರ್ಮನು ವಿಶಿಷ್ಟವಾದ ಪಾತ್ರ ವಹಿಸಿದನೆಂದೂ ಎಂತಲೇ ಮಗನಾದ ಇಮ್ಮಡಿ ಮಾಧವನಿಗೆ ಪಲ್ಲವ ಅರಸನ ಗೌರವಾರ್ಥವಾಗಿ ಸಿಂಹವರ್ಮನೆಂಬ ಹೆಸರನ್ನಿಡಲಾಯಿತೆಂದೂ ಹೇಳಿದೆ. ಮಾಧವನಿಗೆ ಪಲ್ಲವ ಸ್ಕಂದವರ್ಮನು ಬೆಂಬಲನಾಗಿ ನಿಂತನೆಂದೂ ಹೇಳಿದೆ. ಮಾಧವನ ಅನುಜ ವಿಷ್ಣುಗೋಪ. ಕೆಲವರು ಇವರಿಬ್ಬರನ್ನೂ ಸಮೀಕರಿಸಿ ಇವರು ಭಿನ್ನರಲ್ಲವೆಂದಿದ್ದಾರೆ. ಈ ವಿವರಗಳಿಗೆ ಸಂಬಂಧಿಸಿದ ಭಿನ್ನಾಭಿಪ್ರಾಯಗಳನ್ನು ಸಮಂಜಸವಾಗಿ ನಿವಾರಿಸಲು ಆಗಿಲ್ಲ. ವಿಷ್ಣುಗೋಪನ ಮಗ ಮುಮ್ಮಡಿ ಮಾಧವ. ಈತನೇ ತಡಂಗಾಲ ಮಾಧವ. ಈತನ ಪತ್ನಿ ಕದಂಬ ಕಾಕುತ್ಸ್ಥವರ್ಮನ ಮಗಳು ಕೃಷ್ಣವರ್ಮ (I)ನ ಸೋದರಿ. ಪಲ್ಲವರ ಕೃಪಾಪೋಷಣೆಯಲ್ಲಿದ್ದ ಗಂಗರು ಪಲ್ಲವರ ಶತ್ರುಗಳಾದ ಕದಂಬರೊಡನೆ ವಿರಸ ಸಂಬಂಧವನ್ನು ಹೊಂದಿದ್ದು, ಬಹುಶಃ ಇದನ್ನು ಕೊನೆಗಾಣಿಸಿ ಅವರ ಸ್ನೇಹ ಸಂಪಾದಿಸಲೆಂದೇ ಗಂಗರು ಕದಂಬರ ಬಾಂಧವ್ಯವನ್ನು ಮಾಡಿರಬಹುದು. ಇಮ್ಮಡಿ ಮಾಧವನು 'ದತ್ತಕ ಸೂತ್ರ' ವೃತ್ತಿಯ ಗ್ರಂಥಕರ್ತನೆಂದೂ ತಿಳಿದುಬರುತ್ತದೆ. ರೈಸ್ ಅವರು ಈ 'ದತ್ತಕ ಸೂತ್ರ'ದ ವಿಷಯ ಬಹುಶಃ ದತ್ತು ತೆಗೆದುಕೊಳ್ಳುವ ಶಾಸನದ ಮೇಲಿನ ಟೀಕೆಯಾಗಿರಬಹುದೆಂದು ಅಭಿಪ್ರಾಯಪಡುತ್ತಾರೆ. ಆದರೆ ಕಾಮಸೂತ್ರದಲ್ಲಿ ಬರುವ ವೈಶಿಕವೆಂಬ ವಿಷಯದ ಬಗ್ಗೆ 'ದತ್ತಕ' ಎಂಬ (ಕ. ಜತ್ತಕ) ಪ್ರತ್ಯೇಕ ಗ್ರಂಥ ವನ್ನು ಬರೆದಿರುವುದಾಗಿ ವಾತ್ಸ್ಯಾಯನ ಹೇಳಿಕೊಂಡಿದ್ದಾನೆ. ಆದ್ದರಿಂದ ಎರಡನೆಯ ಮಾಧವನು ವಾತ್ಸ್ಯಾಯನನ 'ಕಾಮಸೂತ್ರ'ದ ವೈಶಿಕ ವಿಭಾಗದ ಮೇಲೆ ಟೀಕೆಯನ್ನು ಬರೆದಿರಬೇಕೆಂಬುದೇ ಹೆಚ್ಚು ಸಾಧುವಾದುದು.

ಅವಿನೀತ ಮುಮ್ಮಡಿ ಮಾಧವನ ಮಗ. ಚಿಕ್ಕಂದಿನಲ್ಲೇ ಸಿಂಹಾಸನವನ್ನೇರಿದ ಇವನ ಶೌರ್ಯ ಪರಾಕ್ರಮಗಳನ್ನು ತಾಮ್ರ ಶಾಸನಗಳು ವರ್ಣಿಸುತ್ತವೆ. ಇವನ ಮಗನಾದ ದುರ್ವಿನೀತ ಗಂಗರಾಜರಲ್ಲಿ ತುಂಬ ಹೆಸರುವಾಸಿಯಾದವನು. ಇವನ ಕಾಲ ಕ್ರಿ.ಶ. ಸು. ೫೫೫-೬೫ರವರೆಗೆ ಎನ್ನಬಹುದು. ಈ ವಿಷಯಗಳಲ್ಲಿ ಭಿನ್ನಾಭಿಪ್ರಾಯಗಳಿವೆ. ಕೆಲವು ಶಾಸನಗಳಿಂದ ಇವನು ಸಿಂಹಾಸನಕ್ಕೇರುವುದನ್ನು ತಂದೆ ತಡೆದನೆಂದೂ ಅದಕ್ಕೆ

ಕಾರಣ ಮತ್ತೊಬ್ಬ ಹೆಂಡತಿಯ ಮಗನನ್ನು ಪಟ್ಟಕ್ಕೇರಿಸುವ ಆಸೆಯೆಂದೂ ತಿಳಿದು ಬರುತ್ತದೆ. ಇದಕ್ಕೆ ಪೂರಕವಾಗಿ ಕಾಡುವೆಟ್ಟಿ (ಪಲ್ಲವ) ಮತ್ತು ವಲ್ಲಭ (ರಾಷ್ಟ್ರಕೂಟ) ದೊರೆಗಳು ಚಿಕ್ಕ ಮಗನನ್ನು ಪಟ್ಟಕ್ಕೇರಿಸಲು ಒತ್ತಾಸೆ ನೀಡಿದರೆಂದು ಚಿಕ್ಕಮಗಳೂರು ಶಾಸನದಿಂದ ತಿಳಿದುಬರುತ್ತದೆ.[13] ಈ ಒಳಸಂಚನ್ನು ಅರಿತ ದುರ್ವಿನೀತ ಸಕಾಲದಲ್ಲಿ ಸೂಕ್ತ ಕ್ರಮಗಳನ್ನು ಕೈಗೊಂಡು ಜಯಭೇರಿ ಹೊಡೆದನು. ಇಷ್ಟೇ ಅಲ್ಲದೆ ಕೊಯ ಮತ್ತೂರು ಜಿಲ್ಲೆಯ ಆಲತ್ತೂರು, ಸೇಲಂ ಜಿಲ್ಲೆಯ ಪೆನ್ನಾಗರ ಹಾಗೂ ಇಡೀ ಪುನ್ನಾಡನ್ನು ತನ್ನ ವಶಮಾಡಿಕೊಂಡು ಗಂಗ ರಾಜ್ಯವನ್ನು ವಿಸ್ತರಿಸಿದನು. 'ಕಿರಾತಾರ್ಜು ನೀಯ'ಕ್ಕೆ ಈತನು ಬರೆದ ಟೀಕೆ ಕನ್ನಡದಲ್ಲಿದ್ದಿರಬಹುದೆಂಬುದು ಊಹೆ. ಭಾರವಿ ಮತ್ತು ದುರ್ವಿನೀತರು ಸಮಕಾಲೀನರು. ಭಾರವಿ ದುರ್ವಿನೀತನ ಆಸ್ಥಾನಕ್ಕೆ ಬಂದಿದ್ದನೆಂದು 'ಅವಂತಿ ಸುಂದರಿ ಕಥಾ'ದಿಂದ ತಿಳಿದುಬರುತ್ತದೆ. ಈ ಟೀಕೆ ಸಂಸ್ಕೃತದಲ್ಲಿದ್ದಿರಬಹುದು.[14] 'ಕವಿರಾಜಮಾರ್ಗ'ದಲ್ಲಿ ದುರ್ವಿನೀತ ನಾಮಧೇಯದ ಒಬ್ಬ ಗದ್ಯಕಾರನನ್ನು ಹೆಸರಿಸಿದೆ. ಇವನು ಗಂಗರ ದುರ್ವಿನೀತನೇ ಆಗಿರಬಹುದೆಂಬುದನ್ನು ಕೆಲವರು ಒಪ್ಪಿಲ್ಲ. ಈ ವಿಷಯ ದಲ್ಲಿ ಹೆಚ್ಚಿನ ಚರ್ಚೆ ಇಲ್ಲಿಗೆ ಪ್ರಸ್ತುತವಲ್ಲ.

ಇವನಾದ ಬಳಿಕ ಇವನ ಮಗ ಮುಷ್ಕರ ಅಥವಾ ಮೊಕ್ಕರ ಪಟ್ಟಕ್ಕೆ ಬಂದನು. ಇವನ ಬಗ್ಗೆ ಹೆಚ್ಚೇನೂ ತಿಳಿದುಬರುವುದಿಲ್ಲ. ಇವನ ಹೆಸರಿನಲ್ಲಿ ಒಂದು ಜೈನ ಬಸದಿ (ಮೊಕ್ಕರ ವಸತಿ) ಧಾರವಾಡ ಜಿಲ್ಲೆಯ ಲಕ್ಷ್ಮೇಶ್ವರದಲ್ಲಿ ನಿರ್ಮಾಣಗೊಂಡಿತು. ಗಂಗ ರಾಜ್ಯದ ವಿಸ್ತರಣೆ ಆ ದಿಕ್ಕಿನಲ್ಲಿ ನಡೆದದ್ದನ್ನು ಅದು ಸೂಚಿಸುತ್ತದೆ. ಇಲ್ಲಿಂದ ಗಂಗ ರಾಜರು ಜೈನಧರ್ಮಕ್ಕೆ ಆಸ್ಥೆ ವಹಿಸಿದಂತೆ ಕಂಡುಬರುತ್ತದೆ.

ಮೊಕ್ಕರನ ಮೊಮ್ಮಗ ಅಥವಾ ಶ್ರೀವಿಕ್ರಮನ ಮಗನಾದ ಭೂವಿಕ್ರಮನು ತನ್ನ ಶೌರ್ಯದಿಂದ ಪಲ್ಲವರಾಜ ನರಸಿಂಹಪೋತವರ್ಮನನ್ನು ಸೋಲಿಸಿ, ಇಡೀ ಪಲ್ಲವ ರಾಜ್ಯ ವನ್ನು ವಶಪಡಿಸಿಕೊಂಡನೆಂದು ಅವನ ಸೋದರ ೧ನೆಯ ಶಿವಮಾರನ ದತ್ತಿಯೊಂದರಿಂದ ತಿಳಿದುಬರುತ್ತದೆ. ಭೂವಿಕ್ರಮನ ತಮ್ಮನಾದ ೧ನೆಯ ಶಿವಮಾರ ೬೭೯ರಲ್ಲಿ ಪಟ್ಟಕ್ಕೆ ಬಂದನು. ಇವನ ಕಾಲದಲ್ಲಿ ನಡೆದ ಮಹತ್ತ್ವದ ಘಟನೆಗಳಾವುವೂ ಶಾಸನಗಳ ಮುಖೇನ ತಿಳಿದುಬರುವುದಿಲ್ಲ.

ಇವನ ತರುವಾಯ ಇವನ ಮೊಮ್ಮಗನಾದ ಶ್ರೀಪುರುಷ ರಾಜನಾದನು. ಇವನು ತುಂಬ ಪರಾಕ್ರಮಿ. ಪಲ್ಲವ ಪಾಂಡ್ಯರೊಡನೆ ಹೋರಾಡಿ ಅವರ ಸೊಕ್ಕನ್ನಡಗಿಸಿದ್ದಲ್ಲದೆ, ಚಾಲುಕ್ಯ ರಾಜ್ಯವನ್ನಾಕ್ರಮಿಸಿದ. ಬಳಿಕ ಗಂಗಮಂಡಲವನ್ನು ಆಕ್ರಮಿಸಬೇಕೆಂದು ಪ್ರಯತ್ನಿಸಿದ ರಾಷ್ಟ್ರಕೂಟರೊಡನೆ ಹೋರಾಡಿ ಗಂಗರಾಜ್ಯದ ಸ್ವಾತಂತ್ರ್ಯವನ್ನು ಕಾಪಾಡಿದ. ಅಷ್ಟೇ ಅಲ್ಲದೆ ಪಲ್ಲವರೊಡನೆಯೂ ಇವನು ಕಾದಾಡಿದ. ೧೦೭೭ರ ನಗರ ತಾಮ್ರಶಾಸನದ ಪ್ರಕಾರ ಇವನು ಪಲ್ಲವರನ್ನು ವಿಳರ್ದೆ ಎಂಬಲ್ಲಿ ಸೋಲಿಸಿ ಪೆರ್ಮಾನಡಿ ಎಂಬ ಅವನ ಬಿರುದನ್ನು ಕಿತ್ತುಕೊಂಡಂತೆ ತಿಳಿಯುತ್ತದೆ. ಇವನು ಗಜಶಾಸ್ತ್ರವೆಂಬ ಗ್ರಂಥವನ್ನು ಬರೆದಿದ್ದಾನೆಂದು ತಿಳಿದುಬರುತ್ತದೆ.[15]

ಶ್ರೀಪುರುಷನ ತರುವಾಯ ಅವನ ಮಗನಾದ ೨ನೆಯ ಶಿವಮಾರ ಅಥವಾ ಸೈಗೊಟ್ಟ ಶಿವಮಾರ ಪಟ್ಟಕ್ಕೆ ಬಂದನು. ಈತ ರಾಷ್ಟ್ರಕೂಟ ಧ್ರುವನಿಂದ ಬಂಧಿತನಾದುದರಿಂದ, ಧ್ರುವನ ಆಳ್ವಿಕೆ ಮುಗಿಯುವ ಮೊದಲೇ ಎಂದರೆ ಕ್ರಿ.ಶ. ೭೯೩ಕ್ಕೆ ಮೊದಲಲ್ಲಿ ರಾಜನಾಗಿರಬೇಕು. ರಾಷ್ಟ್ರಕೂಟ ೧ನೆಯ ಕೃಷ್ಣನು ವಶಪಡಿಸಿಕೊಂಡಿದ್ದ ಗಂಗರಾಜ್ಯದ ಭಾಗಗಳನ್ನು ಶ್ರೀಪುರುಷನು ಮತ್ತೆ ಕಿತ್ತುಕೊಂಡದ್ದರಿಂದಲೂ ಪಟ್ಟಕ್ಕಾಗಿ ಧ್ರುವನಿಗೂ ಗೋವಿಂದನಿಗೂ ನಡೆದ ಕಲಹದಲ್ಲಿ ಗಂಗರಾಜನು ಗೋವಿಂದನ ಕಡೆ ಸಹಾಯಕನಾಗಿ ನಿಂತ ಎಂಬ ದ್ವೇಷದಿಂದಲೂ ಧ್ರುವನು ಶ್ರೀಪುರುಷ ಸತ್ತ ತತ್ಕ್ಷಣ ಶಿವಮಾರನ ಮೇಲೆ ರಾಷ್ಟ್ರಕೂಟ ಹೈಹಯ ಚಾಳುಕ್ಯ ಸೈನಿಕರಿಂದ ಕೂಡಿದ ಸೈನ್ಯದೊಡನೆ ಬಂದು ಮುದುಗುಂದೂರು ಬಳಿ ಯುದ್ಧಮಾಡಿದನು. ಆದರೆ ಇದರಲ್ಲಿ ಶಿವಮಾರ ಜಯಗಳಿಸಿದಂತೆ ಖಚಿತವಾಗಿ ತಿಳಿದುಬರುವುದಿಲ್ಲ. ಆಗ ಶಿವಮಾರನನ್ನು ಬಂಧಿಸಿ, ಧ್ರುವ ತನ್ನ ಮಗ ಕಂಬಯ್ಯನನ್ನು ಗಂಗಮಂಡಲಕ್ಕೆ ಅಧಿಪತಿಯನ್ನಾಗಿ ನೇಮಿಸಿದನು. ಶಿವಮಾರ ಧ್ರುವನ ಕಾಲದಲ್ಲಾಗಲಿ ಗೋವಿಂದನ ಆಳ್ವಿಕೆಯಲ್ಲಾಗಲಿ ಸ್ವತಂತ್ರನಾಗಲು ಸಾಧ್ಯವಾಗದೆ, ೧ನೆಯ ಅಮೋಘವರ್ಷನ ಆಳ್ವಿಕೆಯ ಅವಧಿಯಲ್ಲಿ ಸ್ವತಂತ್ರನಾಗಲು ಪ್ರಯತ್ನಿಸಿದ; ಆದರೆ ಕಾಗಿಮೊಗೆಯೂರು ಯುದ್ಧದಲ್ಲಿ ಮಡಿದನು.

ಇಮ್ಮಡಿ ಶಿವಮಾರನು 'ಶಿವಮಾರಮತ' ಅಥವಾ 'ಗಜಾಷ್ಟಕ' ಎಂಬ ಗ್ರಂಥವನ್ನು ಬರೆದಂತೆ ತಿಳಿಯುತ್ತದೆ. ಈ ಗಜಾಷ್ಟಕ ಓವನಿಗೆಯೂ ಒನಕೆವಾಡೂ ಆಗಿ ಬಹಳ ಜನಪ್ರಿಯವಾದುದಾಗಿತ್ತು ಎಂಬ ನಗರಶಾಸನದ[16] ಮಾತನ್ನು ಗಮನಿಸಿದರೆ ಇದು ಕನ್ನಡದಲ್ಲಿ ಬರೆದ ಗ್ರಂಥವೆಂದೇ ಹೇಳಬಹುದು. ಕ್ರಿ.ಶ. ೮ನೆಯ ಶತಮಾನದಲ್ಲಿ ಕನ್ನಡದ ಜನಪದಸಾಹಿತ್ಯ ಒನಕೆವಾಡಿನ ಮೂಲಕ ರೂಢಿಯಲ್ಲಿತ್ತೆಂಬುದು ಇದರಿಂದ ವಿದಿತ. ಈ ಗಜಾಷ್ಟಕ ಈಗ ತಿಳಿದಿರುವಮಟ್ಟಿಗೆ ಕನ್ನಡದ ಮೊದಲ ಅಷ್ಟಕ.

ಶಿವಮಾರನಿಗೆ ಮಾರಸಿಂಹ ಮತ್ತು ೧ನೆಯ ಪೃಥ್ವೀಪತಿ ಎಂಬಿಬ್ಬರು ಮಕ್ಕಳಿದ್ದರು. ಮಾರಸಿಂಹ ಯುವರಾಜನಾದ ಕೆಲಕಾಲದಲ್ಲೇ ಸತ್ತದ್ದರಿಂದ, ಶಿವಮಾರ ಯುದ್ಧದಲ್ಲಿ ಮಡಿಯುವಾಗ ತನ್ನ ತಮ್ಮನಾದ ವಿಜಯಾದಿತ್ಯನಿಗೆ ರಾಜ್ಯಭಾರವನ್ನು ವಹಿಸಿದನೆಂದು ತೋರುತ್ತದೆ. ಈತನಿಗೆ ರಾಜ್ಯದ ಮೇಲೆ ಅಷ್ಟು ವ್ಯಾಮೋಹವಿಲ್ಲದ್ದರಿಂದ ಅವನು ರಾಜ್ಯದ ಹೊಣೆಯನ್ನು ತನ್ನ ಮಗನಾದ ರಾಜಮಲ್ಲನಿಗೆ ವಹಿಸಿದನು.

ಕೆರೆಗೋಡು ರಂಗಾಪುರ ಶಾಸನಗಳಿಂದ ಶಿವಮಾರನ ಕೈತಪ್ಪಿ ರಾಷ್ಟ್ರಕೂಟರ ವಶವಾಗಿದ್ದ ಗಂಗರಾಜ್ಯವನ್ನು ರಾಜಮಲ್ಲ ವಶಪಡಿಸಿಕೊಂಡನೆಂದೂ ಆದರೂ ಅಮೋಘವರ್ಷನ ಸೇನಾಧಿಪತಿಯಾದ ಬಂಕೇಶನ ಅಧೀನದಲ್ಲಿ ಕೆಲವು ಭಾಗಗಳು ಉಳಿದುವೆಂದೂ ತಿಳಿದುಬರುತ್ತದೆ. ಆದ್ದರಿಂದ ತನ್ನ ದೊಡ್ಡಪ್ಪನಾದ ಸೈಗೊಟ್ಟ ಶಿವಮಾರನ ಇಚ್ಛೆಯನ್ನು ಇವನು ನೆರವೇರಿಸಿದನೆಂದು ಹೇಳಬಹುದು. ಹೀಗೆ ತನ್ನ ಪರಾಕ್ರಮದಿಂದ ರಾಜ್ಯವನ್ನು ಭದ್ರಪಡಿಸಿಕೊಂಡಮೇಲೆ ದಿನೇ ದಿನೇ ಈಶಾನ್ಯ ದಿಕ್ಕಿನಲ್ಲಿ ಪ್ರಬಲರಾಗುತ್ತಿದ್ದ ನೊಳಂಬರೊಡನೆ ಸಂಬಂಧ ಬೆಳಸಿದನು. ತನ್ನ ಮಗಳಾದ ಜಾಯಬ್ಬೆಯನ್ನು ಚಾರುಪೊನ್ನೇರನ

ಮಗ ಪೊಟಿಲ್ಲೋರ ನೊಳಂಬ ರಾಜನಿಗೆ ಕೊಟ್ಟು ಮದುವೆ ಮಾಡಿದನು. ಇವನ ತರುವಾಯ ಕ್ರಮವಾಗಿ ಇವನ ಮಗನಾದ ನೀತಿಮಾರ್ಗ ಎಱೆಗಂಗನು ಸು. ೮೪೩ರಲ್ಲಿ, ಮೊಮ್ಮಗ ಎರಡನೆಯ ರಾಜಮಲ್ಲನು ೮೭೦ರಲ್ಲಿ ಪಟ್ಟಕ್ಕೆ ಬಂದರು. ನೀತಿಮಾರ್ಗ ಎಱೆಗಂಗನು ಪಲ್ಲವ ರಾಷ್ಟ್ರಕೂಟ, ಕುರು, ಮಾಗಧ, ಮಾಳವ, ಚೋಳ, ಲಾಳ, ಚಲುಕ್ಯ ರಾಜರಿಂದ ಕೂಡಿದ ವಲ್ಲಭ ಸೈನ್ಯವನ್ನು ರಾಜಾರಾಮಡು ಯುದ್ಧದಲ್ಲಿ ಸೋಲಿಸಿದನೆಂದು ಎರಡನೆಯ ರಾಜಮಲ್ಲನ ಕೆರೆಗೋಡು ರಂಗಾಪುರ ಶಾಸನಗಳಲ್ಲಿ ಹೇಳಿರುವುದರಿಂದಲೂ ಅಮೋಘವರ್ಷನ ಸೇನಾಧಿಪತಿ ಬಂಕೇಶನು ಕಾವೇರಿ ನದಿಯನ್ನು ದಾಟಿ ತಲವನಪುರದವರಗಿದ್ದ ಗಂಗರಾಜ್ಯವನ್ನು ಆಕ್ರಮಿಸಿಕೊಂಡು ನೀತಿಮಾರ್ಗನನ್ನು ರಾಜಧಾನಿಯಿಂದ ಓಡಿಸಿದನೆಂಬುದಾಗಿ ಅಮೋಘವರ್ಷನ ಕೊನ್ನೂರು ಶಾಸನದಲ್ಲಿ ಹೇಳಿರುವುದರಿಂದಲೂ ಎರಡು ಪಕ್ಷಗಳಿಗೂ ಜಯಾಪಜಯಗಳಾಗುತ್ತಿದ್ದವೆಂದು ಹೇಳಬಹುದು. ಕೊನೆಗೆ ಗಂಗರಾಜರನ್ನು ಅಡಗಿಸಲು ಸಾಧ್ಯವಾಗದೆಂದೋ ಏನೋ ಅಮೋಘವರ್ಷ ತನ್ನ ಮಗಳಾದ ಚಂದ್ರೊಬ್ಬಲಬ್ಬೆಯನ್ನು ಎಱೆಗಂಗನ ಕಿರಿಯ ಮಗ ೧ನೆಯ ಬೂತುಗನಿಗೆ ಕೊಟ್ಟು ಗಂಗಸಖ್ಯವನ್ನು ಬೆಳಸಿದನೆಂದು ತೋರುತ್ತದೆ.

## ಕದಂಬರು

ಕದಂಬರು ಆಳತೊಡಗಿದಂದಿನಿಂದ ಕರ್ಣಾಟಕದ ಇತಿಹಾಸ ಹೆಚ್ಚು ಸ್ಪಷ್ಟವಾಗುವುದು. ಕದಂಬರ ಮೂಲವನ್ನು ಕುರಿತು ೧೧–೧೨ನೆಯ ಶತಮಾನಗಳ ಶಾಸನಗಳಲ್ಲಿ ಕೆಲವು ಕತೆಗಳು ಹೆಣೆಯಲ್ಪಟ್ಟಿವೆ. ಮುಕ್ಕಣ್ಣ ಕದಂಬ ಇವರ ಮೂಲಪುರುಷನೆಂದಿದೆ ಇಲ್ಲಿ. ಆದರೆ ಇವುಗಳಿಗೆ ಆಧಾರವಿಲ್ಲ. ವಾಸ್ತವಿಕವಾಗಿ ಇವರು ಕರ್ಣಾಟಕ ದೇಶದವರೇ ಎಂಬುದು ಇವರ ಹಳೆಯ ಶಾಸನಗಳನ್ನು ಪರಿಶೀಲಿಸಿದರೆ ತಿಳಿಯುವುದು. ಮನೆಯ ಹತ್ತಿರ ಬೆಳಸಿದ್ದ ಕದಂಬವೃಕ್ಷ, ಮನೆತನಕ್ಕೆ ತನ್ನ ಹೆಸರನ್ನು ಕೊಟ್ಟಿತೆಂದು ತೋರುತ್ತದೆ. ಮಾನವ್ಯ ಗೋತ್ರರು, ಸಹಾರೀತಿಪುತ್ರರು ಆದ ಈ ಬ್ರಾಹ್ಮಣರು ತಾಳಗುಂದದಲ್ಲಿ ವಾಸಿಸುತ್ತಿದ್ದರು. ಇತ್ತೀಚೆಗೆ ಈ ಮನೆತನದ ಮಯೂರಶರ್ಮನ ಇಬ್ಬರು ಪೂರ್ವಜರ ಹೆಸರುಗಳು ತಿಳಿದಿವೆ. ಆತನ ತಂದೆ ಬಂಧುಷೇಣ, ಕ್ಷಾತ್ರವೃತ್ತಿಯನ್ನು ಅವಲಂಬಿಸಿದ್ದ. ತಾತ ವೀರಶರ್ಮನು ದ್ವಿಜೋತ್ತಮನೂ ವೇದಕುಲಪತಿಯೂ ಆಗಿದ್ದ. ಒಮ್ಮೆ ತಾತನೊಡನೆ ಉನ್ನತಶಿಕ್ಷಣಕ್ಕೆಂದು ಕಂಚಿಯ ಘಟಿಕಾಸ್ಥಾನಕ್ಕೆ ಹೋದ ಮಯೂರಶರ್ಮ ಪಲ್ಲವರ ದೆಸೆಯಿಂದ ಅವಮಾನಿತನಾದ. ಬ್ರಹ್ಮಸಿದ್ಧಿ ನೃಪಾಧೀನವಾಗುವುದಾದರೆ ಅದಕ್ಕಿಂತ ಮಿಗಿಲಾದ ಅಪಹೇಳನವಿಲ್ಲವೆಂದು ಭಾವಿಸಿದ. ಸೇಡಿನ ಕಿಡಿ ಮೂಡಿ ಕುಶಸಮಿತ್ತುಗಳನ್ನು ಹಿಡಿದ ಕೈಯಲ್ಲಿ ಖಡ್ಗವನ್ನು ಹಿಡಿದ. ಮೊದಲು ಪಲ್ಲವರ ಗಡಿಕಾವಲಿನ ಅಧಿಕಾರಿಗಳನ್ನು ಸದೆಬಡಿದು, ಶ್ರೀಶೈಲದವರೆಗಿದ್ದ ಪ್ರದೇಶವನ್ನೂ ಬಾಣರನ್ನೂ ಸ್ವಾಧೀನಪಡಿಸಿಕೊಂಡ. ಪಲ್ಲವರು ಕೊನೆಗೆ ಆತನ ಪೌರುಷಕ್ಕೆ ಮಣಿದು ಮನ್ನಣೆ ನೀಡಿದ್ದೇ ಅಲ್ಲದೆ, ಸಾಗರದಂಚಿನ ಮಲಪ್ರಭೆಯವರೆಗೆ ಇದ್ದ ಅವನ

ಸ್ವಾಮಿತ್ವವನ್ನು ಒಪ್ಪಿಕೊಳ್ಳಬೇಕಾಯಿತು. ಹೀಗೆ ಕದಂಬವಂಶದ ಸ್ಥಾಪನೆಯಾಯಿತು.

ಮಯೂರಶರ್ಮನ ಚಂದ್ರವಳ್ಳಿಯ ಶಾಸನದಲ್ಲಿ ಈತನು ತ್ರೈಕೂಟ ಅಭೀರ ಪಲ್ಲವ ಪಾರಿಯಾತ್ರಕ ಸಕಸ್ಥಾನ ಸಯಿಂದಕ ಪುನ್ನಾಟ ಮೊಕರಿಗಳನ್ನು ಸೋಲಿಸಿದನೆಂದು ಹೇಳಿದೆ. ಇದರಲ್ಲಿ ಸ್ವಲ್ಪಮಟ್ಟಿನ ಉತ್ಪ್ರೇಕ್ಷೆ ಇದ್ದರೂ ಈತನ ರಾಜ್ಯ ಕರ್ಣಾಟಕದ ಬಿಜಾಪುರ, ಹಾಸನ, ಶಿವಮೊಗ್ಗೆಗಳನ್ನು ಮೇರೆಯಾಗಿ ಪಡೆದಿದ್ದು ಶ್ರೀಶೈಲದಿಂದ ಪಶ್ಚಿಮದ ಅರಬ್ಬಿ ಸಮುದ್ರದವರೆಗೂ ಹಬ್ಬಿತ್ತೆನ್ನಬಹುದು.

ಇವನ ಬಳಿಕ ಕಂಗವರ್ಮ, ಭಗೀರಥ, ರಘು ರಾಜ್ಯವಾಳಿದರು. ರಘುರಾಜನ ಅನಂತರ ರಾಜ್ಯಸೂತ್ರ ಅವನ ತಮ್ಮನಾದ ಕಾಕುತ್ಸ್ಥವರ್ಮನ ಕೈಗೆ ಬಂತು. ಇವನು ಮಯೂರ ಶರ್ಮನಂತೆಯೇ ತುಂಬ ಪರಾಕ್ರಮಿ. ಇವನ ಕಾಲದಲ್ಲಿ ಈ ವಂಶದ ಕೀರ್ತಿಗೆ ಕೋಡು ಮೂಡಿತು. ಉತ್ತರದ ಗುಪ್ತರೂ ಮಧ್ಯಭಾರತದ ವಾಕಾಟಕರೂ ಇವನ ಸಾರ್ವ ಭೌಮತ್ವಕ್ಕೆ ತಲೆಬಾಗಿದರು. ಅಲ್ಲದೆ, ವೈವಾಹಿಕ ಸಂಬಂಧದಿಂದ ಸಖ್ಯವನ್ನು ಬೆಳಸಿ ಕೊಂಡರು. ಕುಮಾರಗುಪ್ತನ ಮಗ ಸ್ಕಂದಗುಪ್ತನಿಗೆ ಒಬ್ಬ ಮಗಳನ್ನೂ ವಾಕಾಟಕ ವಂಶದ ನರೇಂದ್ರಸೇನನಿಗೆ ಇನ್ನೊಬ್ಬ ಮಗಳು ಅಜ್ಝಿತಭಟ್ಟಾರಿಕೆಯನ್ನೂ ಕಾಕುತ್ಸ್ಥ ವರ್ಮನು ಮದುವೆ ಮಾಡಿಕೊಟ್ಟಿದ್ದನು. ಹೀಗೆಯೇ ಗಂಗ ವಂಶದ ಇನೆಯ ಮಾಧವನೂ ಆತನ ಒಬ್ಬ ಮಗಳನ್ನು ಮದುವೆಯಾಗಿದ್ದನು. ಈ ವೈವಾಹಿಕ ಸಂಬಂಧಗಳು ಕಾಕುತ್ಸ್ಥವರ್ಮನ ಅಜೇಯ ಪ್ರತಾಪ ಪ್ರಭಾವಗಳಿಗೆ ಸಾಕ್ಷಿಗಳೆನ್ನಬಹುದು.

ಕಾಕುತ್ಸ್ಥವರ್ಮನ ಬಳಿಕ ಕದಂಬರಾಜ್ಯ ಅವನ ಇಬ್ಬರು ಮಕ್ಕಳಾದ ಶಾಂತಿವರ್ಮ ಮತ್ತು ಗನೆಯ ಕೃಷ್ಣವರ್ಮರಲ್ಲಿ ಹಂಚಿಹೋಯಿತು. ಶಾಂತಿವರ್ಮನ ರಾಜಧಾನಿ ಬನವಾಸಿ, ಕೃಷ್ಣವರ್ಮನ ರಾಜಧಾನಿ ತ್ರಿಪರ್ವತ. ಕದಂಬರ ರಾಜ್ಯ ವಿಸ್ತಾರಣಾ ಕಾಂಕ್ಷೆ ಗಂಗ-ಪಲ್ಲವರ ವಿರೋಧಕ್ಕೆ ಕಾರಣವಾಯಿತು. ತಾಳಗುಂದದ ಪ್ರಣವೇಶ್ವರ ದೇವಾಲಯದ ಮುಂದಿನ ಪ್ರಖ್ಯಾತ ಸ್ತಂಭಶಾಸನದಲ್ಲಿ ಕಾಕುತ್ಸ್ಥವರ್ಮನ ಗುಣಗಳನ್ನು ಸತ್ಕಾರ್ಯಗಳನ್ನೂ ನಿರೂಪಿಸಿದೆ. ಈ ಶಾಸನವನ್ನು ಕಾಕುತ್ಸ್ಥವರ್ಮನ ಮಗ ಶಾಂತಿ ವರ್ಮನು ತಂದೆಗಾಗಿ ಹಾಕಿಸಿದನೆಂದೂ ಶಾಸನವನ್ನು ಕುಬ್ಜನೆಂಬ ಕವಿ ಬರೆದನೆಂದೂ ತಿಳಿಯುವುದು. ಕುಬ್ಜ ಕವಿ ಪ್ರಾಯಃ ರಾಜಪೋಷಣೆಯನ್ನು ಪಡೆದಿದ್ದ ಖ್ಯಾತ ಸಂಸ್ಕೃತ ಕವಿಯಾಗಿದ್ದನೆಂದೂ ಕನ್ನಡಿಗನಾಗಿದ್ದ ಈತ ಅಂದು ಸಂಸ್ಕೃತ ಭಾಷೆ ಸಾಹಿತ್ಯಗಳಿಗೆ ಇದ್ದ ಪ್ರೋತ್ಸಾಹದಿಂದಾಗಿ ಸಂಸ್ಕೃತದಲ್ಲಿಯೇ ಪೂರ್ವೋಕ್ತ ಶಾಸನವನ್ನು ರಚಿಸಿರ ಬೇಕೆಂದೂ ಊಹಿಸಬಹುದು. ತಾಳಗುಂದ ಶಾಸನದ ಭಾಷೆ ಛಂದಸ್ಸುಗಳ ಪ್ರೌಢಿಮೆ ವೈವಿಧ್ಯಗಳು ಈ ಕವಿಯು ಒಳ್ಳೆಯ ವಿದ್ವತ್ಕವಿಯಾಗಿದ್ದನೆಂಬುದನ್ನು ಹೇಳುತ್ತವೆ.

ಶಾಂತಿವರ್ಮನ ಮಗ ಮೃಗೇಶವರ್ಮನ ಕಾಲದಲ್ಲಿ ಕದಂಬರಾಜ್ಯ ಇನ್ನೂ ವಿಸ್ತಾರ ಗೊಂಡಿತು. ಆದ್ದರಿಂದ ಬನವಾಸಿಯ ಜೊತೆಗೆ ಪಲಾಸಿಕಾವನ್ನು (ಇಂದಿನ ಬೆಳಗಾವಿ ಜಿಲ್ಲೆಯ ಹಲಸಿ) ಉಪರಾಜಧಾನಿಯನ್ನಾಗಿ ಮಾಡಿಕೊಳ್ಳಬೇಕಾಯಿತು. ಹುಣಸೂರು, ಹಲಸಿ ಶಾಸನಗಳಲ್ಲಿ ಮೃಗೇಶವರ್ಮನನ್ನು 'ತುಂಗ ಗಂಗ ಕುಲೋತ್ಸಾದಿ', 'ಪಲ್ಲವ

ಪ್ರಲಯಾನಲ'ನೆಂದೂ ವರ್ಣಿಸಿರುವುದರಿಂದ ಗಂಗ ಪಲ್ಲವರೊಡನೆ ನಡೆದ ಹೋರಾಟವನ್ನು ಅದು ಸೂಚಿಸುತ್ತವೆ. ಮೃಗೇಶವರ್ಮನ ಮಗನಾದ ರವಿವರ್ಮನು ಸಹ ಯುದ್ಧಗಳಲ್ಲಿ ನಿರತನಾಗಿದ್ದನು. ವಿಷ್ಣುಶರ್ಮನನ್ನು ಕೊಂದು ಕಂಚಿಯೊಡೆಯನಾದ ಚಂಡದಂಡನನ್ನು ನಿರ್ಮೂಲಗೊಳಿಸಿದ ಎಂದೆಲ್ಲ ಈತನನ್ನು ಕುರಿತು ಹೇಳಿದೆ. ಈ ಶತ್ರುಗಳನ್ನು ಗುರುತಿಸಲಾಗಿಲ್ಲ. ರವಿವರ್ಮನ ಮಗ ಹರಿವರ್ಮ. ಈತ ಸೋದರ ಸಂಬಂಧಿಯಾದ, ತ್ರಿಪರ್ವತದಿಂದ ಆಳುತ್ತಿದ್ದ, ಇಮ್ಮಡಿ ಕೃಷ್ಣವರ್ಮನಿಂದ ಸೋಲಿಸಲ್ಪಟ್ಟ. ಇಬ್ಭಾಗವಾಗಿದ್ದ ರಾಜ್ಯ ಈಗ ಪುನಃ ಒಂದಾಯಿತು. ಈತನ ಬಳಿಕ ಅಜವರ್ಮ ಭೋಗಿವರ್ಮರು ಕ್ರಮವಾಗಿ ಆಳಿದರಾದರೂ ಕದಂಬ ರಾಜ್ಯ ಆ ಬಳಿಕ ಅಳಿಯಿತು. ಅದರ ಸ್ಥಾನದಲ್ಲಿ ಬಾದಾಮಿಯ ಚಾಲುಕ್ಯರ ರಾಜ್ಯ ಅಸ್ತಿತ್ವಕ್ಕೆ ಬಂದಿತು.

ಕದಂಬರ ಕನ್ನಡ ಶಾಸನಗಳು ಬಹಳ ಮಟ್ಟಿಗೆ ಇಲ್ಲವೆಂದೇ ಹೇಳಬೇಕು. ಹೇರಳವಾಗಿ ದೊರೆತಿರುವ, ಪ್ರಾಚೀನತಮ ಕನ್ನಡಶಾಸನವೆನಿಸಿದ ಹಲ್ಮಿಡಿ ಶಾಸನ (ಸು. ೪೫೦) ಆ ವೇಳೆಗೆ ಕನ್ನಡ ಕಾಲೂರಿ ಬೆಳೆದಿತ್ತು ಎಂಬುದನ್ನು ಸೂಚಿಸುತ್ತದೆ. ಕುಬ್ಜನಂತಹ ಶಾಸನ ಕವಿಗೆ ಆಶ್ರಯವಿತ್ತ ಅರಸ ಪ್ರಾದೇಶಿಕ ಭಾಷೆ ಸಾಹಿತ್ಯಗಳಿಗೂ ಸೂಕ್ತವಾದ ಪ್ರೋತ್ಸಾಹ ಕೊಟ್ಟಿರಬಹುದು ಎಂದು ಸಹಜವಾಗಿ ಊಹಿಸಬಹುದು. ಸಾಹಿತ್ಯಕೃತಿಗಳು ದೊರಕದಿರುವುದೂ ಅವುಗಳ ಉಲ್ಲೇಖವಿಲ್ಲದಿರುವುದೂ ದುರದೃಷ್ಟಕರ.

## ಬಾದಾಮಿಯ ಚಾಲುಕ್ಯರು

೧೧-೧೨ನೆಯ ಶತಮಾನಗಳ ಶಾಸನಗಳಲ್ಲಿ ಈ ಚಾಲುಕ್ಯರು ಉತ್ತರದ ಅಯೋಧ್ಯೆಯಿಂದ ಬಂದವರೆಂದು ಹೇಳಿದ್ದರೂ ಸಮಕಾಲೀನ ಶಾಸನಗಳು ಇಂತಹ ಊಹೆಗಳಿಗೆ ಆಸ್ಪದವೀಯುವುದಿಲ್ಲ. ಇವರು ಕನ್ನಡನಾಡಿನವರೇ, ಹೊರಗಿನಿಂದ ಬಂದವರೆಂಬ ಹೇಳಿಕೆ ಹುರುಳಿಲ್ಲದ್ದು—ಎಂಬುದು ಈಚೆಗೆ ಸ್ಪಷ್ಟಪಟ್ಟಿದೆ. ಕದಂಬರ ಹಾಗೆ ಇವರೂ ಮಾನವ್ಯಸಗೋತ್ರರು; ಹಾರೀತಿಪುತ್ರರು. ಪೃಥ್ವೀವಲ್ಲಭನೆನಿಸಿದ ಸತ್ಯಾಶ್ರಯ ಇವರ ಮೂಲಪುರುಷನೆಂದು ಹೇಳಿದ್ದರೂ ಚಾರಿತ್ರಿಕವಾಗಿ ಜಯಸಿಂಹ ಚಾಲುಕ್ಯ ಮನೆತನದ ಮೊದಲನೆಯ ರಾಜ. ಇವನು ರಾಷ್ಟ್ರಕೂಟ ಕೃಷ್ಣನ ಮಗನಾದ ಇಂದ್ರನನ್ನು ಸೋಲಿಸಿ ರಾಜ್ಯವನ್ನು ಪಡೆದನೆಂದು ಒಂದು ಅಭಿಪ್ರಾಯವಿದೆ: ಆದರೆ ಇದು ಸಂದೇಹಾಸ್ಪದ. ಇವನ ಮಗ ರಣರಾಗ ಮತ್ತು ಮೊಮ್ಮಗ ೧ನೆಯ ಪುಲಕೇಶಿ. 'ಸತ್ಯಾಶ್ರಯ' ಮತ್ತು 'ಪೃಥ್ವೀವಲ್ಲಭ' ಎಂಬುವು ಈ ಅರಸರು ಸಾಮಾನ್ಯವಾಗಿ ಧರಿಸಿದ ಬಿರುದುಗಳು.

೧ನೆಯ ಪುಲಕೇಶಿ ವಾತಾಪಿಯಲ್ಲಿ ಅಜೇಯವಾದ ದುರ್ಗವೊಂದನ್ನು ಕಟ್ಟಿಸಿದ; ಅಶ್ವಮೇಧಾದಿ ಯಜ್ಞಗಳನ್ನು ಮಾಡಿದ. ಅಗ್ನಿಷ್ಟೋಮ, ಅಗ್ನಿಚಯನ, ವಾಜಪೇಯ, ಬಹುಸುವರ್ಣ, ಹಿರಣ್ಯಗರ್ಭ ಮುಂತಾದ ಕ್ರತುಗಳನ್ನು ಆಚರಿಸಿದನೆಂದು ಮಂಗಲೇಶನ ಒಂದು ಶಾಸನದಿಂದ ತಿಳಿದಿದೆ. ಇವುಗಳಿಂದ ಈತ ಚಾಲುಕ್ಯ ರಾಜ್ಯದ ಸ್ಥಾಪಕನೆನ್ನಬಹುದು. ಈತನ ಬಾದಾಮಿಯ ಶಾಸನದ ಕಾಲ ೫೪೩. ಸು. ೫೪೦ರ ವರೆಗೂ

ಕದಂಬರ ಇಮ್ಮಡಿ ಕೃಷ್ಣವರ್ಮ ಆಳುತ್ತಿದ್ದನೆಂದು ತಿಳಿದಿದೆ. ಬಹುಶಃ ಆ ತರುವಾಯ ಕದಂಬರನ್ನು ಸೋಲಿಸಿ ಈತ ಸ್ವತಂತ್ರವಾದ ರಾಜ್ಯವನ್ನು ಸ್ಥಾಪಿಸಿರಬೇಕು. ಈತನ ಮಕ್ಕಳೂ ಮೊಮ್ಮಗನೂ ಸಹ ಕದಂಬರೊಡನೆ ಕಾದಿದರೆಂಬುದು ತಿಳಿದಿದೆ.

೧ನೆಯ ಪುಲಕೇಶಿಗೆ ಕೀರ್ತಿವರ್ಮ ಮತ್ತು ಮಂಗಳೇಶ ಎಂಬವರು ಮಕ್ಕಳು. ೧ನೆಯ ಪುಲಕೇಶಿಯ ಬಳಿಕ ಕೀರ್ತಿವರ್ಮ ೫೬೬–೬೭ರಲ್ಲಿ ಪಟ್ಟಕ್ಕೆ ಬಂದನು. ಇವನು ಬಳ್ಳಾರಿ ಮತ್ತು ಕರ್ನೂಲು ಪ್ರದೇಶದಲ್ಲಿ ಆಳುತ್ತಿದ್ದ ನಳರನ್ನೂ ಕೊಂಕಣದಲ್ಲಿ ಆಳುತ್ತಿದ್ದ ಮೌರ್ಯರನ್ನೂ ಕದಂಬರನ್ನೂ ಸೋಲಿಸಿ ಚಾಲುಕ್ಯ ಸಾಮ್ರಾಜ್ಯವನ್ನು ವಿಸ್ತರಿಸಿದನು. ಇಮ್ಮಡಿ ಪುಲಿಕೇಶಿಯ ಶಾಸನವೊಂದರಿಂದ ಕೀರ್ತಿವರ್ಮ ಸೇಂದ್ರಕ ಮನೆತನದ ಸೇನಾನಂದನ ಸೋದರಿಯನ್ನು ಮದುವೆಯಾಗಿದ್ದನೆಂದು ತಿಳಿದುಬರುತ್ತದೆ. ಈ ಸಂಬಂಧ ಕೀರ್ತಿವರ್ಮನು ದಕ್ಷಿಣ ದಿಕ್ಕಿನಲ್ಲಿ ಚಾಲುಕ್ಯ ರಾಜ್ಯವನ್ನು ವಿಸ್ತರಿಸುವುದ ರಲ್ಲಿ ಯಶಸ್ವಿಯಾದನೆಂಬುದನ್ನು ಸೂಚಿಸುತ್ತದೆ. ಬಪ್ಪುರವಂಶದ ಧ್ರುವರಾಜ ಇಂದ್ರ ವರ್ಮನೆಂಬುವನು ೫೯೦ರಲ್ಲಿ ಚಾಲುಕ್ಯರ ಅಧೀನದಲ್ಲಿ ಕೊಂಕಣಕ್ಕೆ ಒಡೆಯನಾಗಿದ್ದನು. ಆದ್ದರಿಂದ ಈ ಪ್ರದೇಶ ಸಹ ಚಾಲುಕ್ಯ ಸಾಮ್ರಾಜ್ಯದ ಹೊಸ ವಿಸ್ತರಣೆ ಎನ್ನ ಬಹುದು.

ಕೀರ್ತಿವರ್ಮನ ಮರಣದ ಸಮಯದಲ್ಲಿ ಮಗನಾದ ಇಮ್ಮಡಿ ಪುಲಕೇಶಿ ಇನ್ನೂ ಅಲ್ಪ ವಯಸ್ಕ. ಎಂತಲೇ ಅವನ ಮಲತಮ್ಮನಾದ ಮಂಗಲೇಶನಿಗೆ ರಾಜ್ಯದ ಹೊಣೆಯನ್ನು ಕೀರ್ತಿವರ್ಮನು ವಹಿಸಿದನು. ಇವನು ಕಲಚುರ್ಯ ದೊರೆ ಬುದ್ಧನನ್ನೂ ತುಳುವನಾಡನ್ನು ಆಳುತ್ತಿದ್ದ ಆಳುಪರನ್ನೂ ಸೋಲಿಸಿದನು. ರೇವತೀದ್ವೀಪ (ಗೋವ) ವನ್ನು ವಶಮಾಡಿ ಕೊಂಡನು. ಆದರೆ ಇವನು ತನ್ನ ಮಗನಿಗೇ ರಾಜ್ಯವನ್ನು ದಕ್ಕಿಸಿಕೊಳ್ಳಲು ಯತ್ನಿ ಸಿದ್ದರಿಂದ ಇವನ ಅಣ್ಣ ಕೀರ್ತಿವರ್ಮನ ಮಗನಾದ ಎರಡನೆಯ ಪುಲಕೇಶಿ ಮಂಗಲೇಶ ನನ್ನು ಕೊಂದು ೬೧೦ರಲ್ಲಿ ತಾನು ಪಟ್ಟಕ್ಕೆ ಬಂದನು.

ಮಂಗಲೇಶನ ಕಾಲದಲ್ಲಿ ಸುತ್ತಮುತ್ತಲೂ ಶತ್ರುಗಳ ಹಾವಳಿ ಇತ್ತೆಂದು ಐಹೊಳೆಯ ಶಾಸನದಿಂದ ತಿಳಿದುಬರುತ್ತದೆ. ಆದರೆ ಪುಲಕೇಶಿ ತನ್ನ ಶಕ್ತಿಸಾಮರ್ಥ್ಯದಿಂದ ಚಾಲುಕ್ಯ ರಾಜ್ಯವನ್ನು ವಿಸ್ತರಿಸಿ ಇಡೀ ಭಾರತದಲ್ಲೇ ಪ್ರಖ್ಯಾತಿಯನ್ನು ಪಡೆದುದಲ್ಲದೆ ಪರ್ಷಿ ಯದ ಎರಡನೆಯ ಖುಸ್ರುವಿನ ಆಸ್ಥಾನದಲ್ಲೂ ಗೌರವವನ್ನು ಗಳಿಸಿಕೊಂಡ. ಮೊದಲು ದಂಗೆಯೆದ್ದ ಅಪ್ಪಾಯಿಕ ಮತ್ತು ಗೋವಿಂದರನ್ನು ಸದೆಬಡಿದು ತನ್ನ ವಶಮಾಡಿಕೊಂಡ ಮೇಲೆ, ಬನವಾಸಿಯ ಕದಂಬರನ್ನೂ ದಕ್ಷಿಣಕನ್ನಡ ಜಿಲ್ಲೆಯ ಆಳುಪರನ್ನೂ ತಲಕಾಡಿನ ಗಂಗರನ್ನೂ ತನ್ನ ಅಧೀನರನ್ನಾಗಿ ಮಾಡಿಕೊಂಡ. ಕೊಂಕಣದ ಮೌರ್ಯರ ರಾಜಧಾನಿ ಯಾದ ಪುರಿ (ಎಲಿಫೆಂಟಾ ದ್ವೀಪ) ಮೇಲೆ ದಾಳಿನಡಸಿ ಅವರನ್ನು ಶರಣಾಗಿಸಿದ. ಪುಲಕೇಶಿಯ ಶಕ್ತಿ ಸಾಹಸಗಳು ಉತ್ತರ ಭಾರತದ ಲಾಟರು, ಮಾಳವರು ಮತ್ತು ಗುರ್ಜರರು ಒಬ್ಬರಾದ ಮೇಲೊಬ್ಬರು ಶರಣಾಗತರಾಗುವಂತೆ ಮಾಡಿದುವು. ಹೀಗೆ ಚಾಲುಕ್ಯರಾಜ್ಯ ಮಾಹೀ ನದಿಯವರೆಗೂ ವ್ಯಾಪಿಸಿತು. ಹರ್ಷವರ್ಧನ ದಕ್ಷಿಣಾಪಥದ

ಮೇಲೆ ದಂಡೆತ್ತಿ ಬಂದಾಗ ಪುಲಕೇಶಿ ನರ್ಮದಾನದಿಯ ಬಳಿ ಅವನನ್ನು ಸೋಲಿಸಿ 'ಪರಮೇಶ್ವರ' ಎಂಬ ಹೆಮ್ಮೆಯ ಬಿರುದನ್ನು ಪಡೆದ. ಪೂರ್ವತೀರದಲ್ಲಿ ವಿಜಯಯಾತ್ರೆಯನ್ನು ಕೈಗೊಂಡು ದಕ್ಷಿಣಕೋಸಲ ಮತ್ತು ಕಲಿಂಗವನ್ನು ಅಧೀನಪಡಿಸಿಕೊಂಡಿದ್ದಲ್ಲದೆ ಪಿಷ್ಟಪುರವನ್ನೂ ವಶಪಡಿಸಿಕೊಂಡ. ಇವನು ವೆಂಗಿಮಂಡಲವೆನಿಸಿದ ಈ ಪ್ರದೇಶಕ್ಕೆ ತಮ್ಮನಾದ ಕುಬ್ಜ ವಿಷ್ಣುವರ್ಧನನನ್ನು ಪ್ರಾಂತಾಧಿಕಾರಿಯಾಗಿ ನಿಯಮಿಸಿದ. ಕ್ರಮೇಣ ಈ ವಿಷ್ಣುವರ್ಧನ ಸ್ವತಂತ್ರನಾದ; ಪೂರ್ವ ಚಾಲುಕ್ಯವಂಶದ ಮೂಲಪುರುಷನಾದ.

ಇದಾದಮೇಲೆ ಪುಲಕೇಶಿಯು ಪಲ್ಲವರಾಜ ೧ನೆಯ ಮಹೇಂದ್ರವರ್ಮನ ಮೇಲೆ ಪುಲ್ಲಲೂರು ಬಳಿ ಯುದ್ಧಮಾಡಿ, ಅವನ ರಾಜ್ಯದ ಉತ್ತರ ಪ್ರಾಂತ್ಯಗಳನ್ನು ದಕ್ಕಿಸಿಕೊಂಡ. ಇಷ್ಟೆಲ್ಲ ವಿಜಯಗಳನ್ನು ಸಾಧಿಸಿದ ಪುಲಕೇಶಿ ಬಾಳಿನ ಅಂತಿಮ ಕಾಲದಲ್ಲಿ ಪಲ್ಲವ ಮಹೇಂದ್ರವರ್ಮನ ಮಗ ನರಸಿಂಹವರ್ಮನ ದಾಳಿಯನ್ನು ಎದುರಿಸಬೇಕಾಯಿತು. ಈ ಘಟನೆಗಳ ವಿವರಗಳು ಸರಿಯಾಗಿ ತಿಳಿಯದಿದ್ದರೂ, ಪುಲಕೇಶಿ ಸೋತು ಬಹುಶಃ ರಣರಂಗದಲ್ಲಿ ಅಸುವನ್ನು ನೀಗಿರಬೇಕು. ನರಸಿಂಹವರ್ಮ ಸು. ೬೪೨ರಲ್ಲಿ ಚಾಲುಕ್ಯ ರಾಜಧಾನಿ ಬಾದಾಮಿಯನ್ನು ವಶಪಡಿಸಿಕೊಂಡ. ಅನಂತರದ ೧೩ ವರ್ಷಗಳು ರಾಜ್ಯದ ಗ್ರಹಣಕಾಲ. ಆಗ ನಡೆದಿರಬಹುದಾದ ಘಟನೆಗಳ ಬಗೆಗೆ ನಮಗೆ ಏನೂ ತಿಳಿಯದು.

ಪುಲಕೇಶಿಯ ಮಕ್ಕಳಲ್ಲಿ ಒಬ್ಬನಾದ ಒಂದನೆಯ ವಿಕ್ರಮಾದಿತ್ಯ (೬೫೫-೮೧) ತನ್ನ ಶಕ್ತಿಸಾಮರ್ಥ್ಯದಿಂದ ಚಾಲುಕ್ಯ ರಾಜ್ಯದ ಉಳಿವಿಗೆ ಕಾರಣನಾದ. ಅಷ್ಟೇ ಅಲ್ಲದೆ ಪಲ್ಲವರ ರಾಜ್ಯವನ್ನು ಮುತ್ತಿ, ಅವರ ರಾಜಧಾನಿಯಾದ ಕಂಚಿಯವರೆಗೂ ತನ್ನ ಸೈನ್ಯವನ್ನು ಒಯ್ದ. ೬೭೪ರಲ್ಲಿ ಕಾವೇರಿಯ ದಕ್ಷಿಣದಂಡೆಯ ಮೇಲಿದ್ದ ಉರಗಪುರ (ಒರೈಯೂರ್) ನಲ್ಲಿ ಈತ ನೆಲೆಯೂರಿದನೆಂಬುದು ಈತನ ಯಶಸ್ಸಿಗೆ ಸಾಕ್ಷಿ. ಇವನ ಈ ಹೋರಾಟಗಳಲ್ಲಿ ಇವನ ಮಗ ವಿನಯಾದಿತ್ಯ ಹಾಗೂ ಮೊಮ್ಮಗ ವಿಜಯಾದಿತ್ಯರು ಬಹಳ ನೆರವನ್ನು ನೀಡಿದರು. ವಿನಯಾದಿತ್ಯನು ಸ್ವತಂತ್ರವಾಗಿ ಆಳತೊಡಗಿದಾಗ ಉತ್ತರ ಭಾರತದಮೇಲೆ ದಂಡೆತ್ತಿ ಅಲ್ಲಿನ ಅರಸನನ್ನು ಸೋಲಿಸಿ ಗಂಗಾ ಯಮುನಾ ಚಿಹ್ನೆಗಳನ್ನೂ ಪಾಲಿಧ್ವಜವನ್ನೂ ವಶಪಡಿಸಿಕೊಂಡನೆಂದು ಹೇಳಿದೆ. ಉತ್ತರದ ಈ ಅರಸರು ಯಾರೆಂಬುದು ಇನ್ನೂ ಖಚಿತವಾಗಿ ತಿಳಿದಿಲ್ಲ. ವಿನಯಾದಿತ್ಯನ ಪತ್ನಿ ವಿನಯವತಿ ಬಾದಾಮಿಯಲ್ಲಿ ಬ್ರಹ್ಮ ವಿಷ್ಣು ಮಹೇಶ್ವರರ ಮೂರ್ತಿಗಳನ್ನು ಪ್ರತಿಷ್ಠಾಪಿಸಿದಳು. ಕುಂಕುಮ ಮಹಾದೇವಿ ಈತನ ಮಗಳು; ಆಳುಪರ ಚಿತ್ರವಾಹನ ಅಳಿಯ.

ವಿನಯಾದಿತ್ಯನ ಬಳಿಕ ೬೯೬ರಲ್ಲಿ ಪಟ್ಟಕ್ಕೆ ಬಂದ ವಿಜಯಾದಿತ್ಯ ತಂದೆ ತಾತಂದಿರ ಹಾಗೆಯೇ ಪಲ್ಲವರ ವಿರುದ್ಧ ಹೋರಾಡಿದ. ಇದರಲ್ಲಿ ಈತನ ಮಗ ೨ನೆಯ ವಿಕ್ರಮಾದಿತ್ಯ ವಿಶಿಷ್ಟ ಪಾತ್ರವನ್ನು ವಹಿಸಿದ. ಈತನ ಆಳ್ವಿಕೆಯ ಕಾಲ ಸಹ ಶಾಂತಿ ಸುಭಿಕ್ಷಗಳ ಕಾಲ. ಪಟ್ಟದಕಲ್ಲಿನ ಶಿವನ ದೇವಸ್ಥಾನ ಇವನಿಂದ ನಿರ್ಮಿತವಾದ್ದು. ೭೩೩-೪೪ ರಲ್ಲಿ ಪಟ್ಟಕ್ಕೆ ಬಂದ ಇಮ್ಮಡಿ ವಿಕ್ರಮಾದಿತ್ಯನ ಕಾಲದಲ್ಲಿ ಅರಬ್ಬರು ಸಿಂಧ್ ಪ್ರಾಂತ್ಯವನ್ನು ಆಕ್ರಮಿಸಿ ಚಾಲುಕ್ಯ ರಾಜ್ಯದ ಕಡೆ ನುಗ್ಗತೊಡಗಿದಾಗ ಲಾಟದೇಶದ ಚಾಲುಕ್ಯ

ಮನೆತನದ ಧರಾಶ್ರಯ ಜಯಸಿಂಹವರ್ಮನ ಮಗ ಅವನಿಜನಾಶ್ರಯ ಪುಲಕೇಶಿಯು ಅವರನ್ನು ಯಶಸ್ವಿಯಾಗಿ ಹಿಮ್ಮೆಟ್ಟಿಸಿದ.

ವಿಕ್ರಮಾದಿತ್ಯ ಕಂಚಿಯ ಪಲ್ಲವರಾಜನ ಮೇಲೆ ಯುದ್ಧಮಾಡಿ ಅಪಾರ ಐಶ್ವರ್ಯವನ್ನು ಸೂರೆಮಾಡಿ, ಬ್ರಾಹ್ಮಣರಿಗೆ ಹಾಗೂ ದೇವಸ್ಥಾನಗಳಿಗೆ ಹಂಚಿ, ತನ್ನ ಒಳ್ಳೆಯತನವನ್ನು ಮೆರೆದನೆಂದು ಕಂಚಿಯ ರಾಜಸಿಂಹೇಶ್ವರ ದೇವಸ್ಥಾನದ ಕಂಬದ ಮೇಲೆ ಕೊರೆದ ಆತನ ಕನ್ನಡ ಶಾಸನದಿಂದ ತಿಳಿದುಬರುತ್ತದೆ. ಪಲ್ಲವರಾಜ ನರಸಿಂಹವರ್ಮ ಬಾದಾಮಿಯನ್ನು ಆಕ್ರಮಿಸಿ ತನ್ನ ಶಾಸನವೊಂದನ್ನು ಕೆತ್ತಿಸಿಹೋಗಿದ್ದರಿಂದ, ಅದೇ ಸೇಡಿನಿಂದ ವಿಕ್ರಮಾದಿತ್ಯ ಕಂಚಿಯನ್ನು ಆಕ್ರಮಿಸಿ ಆ ದೇವಸ್ಥಾನದಲ್ಲಿ ತನ್ನ ವಿಜಯ ಪ್ರಶಸ್ತಿ ಸೂಚಕ ಶಾಸನಸ್ತಂಭವೊಂದನ್ನು ನೆಡಿಸಿರುವುದು ಸಾಧ್ಯ !

ವಿಕ್ರಮಾದಿತ್ಯನ ಅನಂತರ ಅವನ ಮಗನಾದ ೨ನೆಯ ಕೀರ್ತಿವರ್ಮ ಪಟ್ಟಕ್ಕೆ ಬಂದನು. ತಂದೆಯ ಕಾಲದಲ್ಲಿಯೇ ಪರಾಕ್ರಮದಿಂದ ಪಲ್ಲವರನ್ನು ಎದುರಿಸಿ, ಬಾಲುಕ್ಯ ಮನೆತನದ ಕೀರ್ತಿಯನ್ನು ಎತ್ತಿಹಿಡಿದ ವಿಷಯ ಕೆಂದೂರು ಮತ್ತು ವಕ್ಕಲೇರಿ ಶಾಸನಗಳಿಂದ ತಿಳಿದುಬರುತ್ತದೆ. ಇವನೇ ಚಾಲುಕ್ಯ ಮನೆತನದ ಕೊನೆಯ ರಾಜ. ಬಾದಾಮಿಯ ಚಾಲುಕ್ಯರ ಕಾಲದ ಶಾಸನಗಳಲ್ಲಿ ಕನ್ನಡವನ್ನು ವಿಶೇಷವಾಗಿ ಬಳಸಲಾಗಿದೆ. ಇದರಿಂದ ಕನ್ನಡ ಕ್ರಮೇಣ ಆಡಳಿತ ಭಾಷೆಯ ಸ್ಥಾನಮಾನಗಳನ್ನು ಪಡೆಯುವ ಹವಣಿಕೆಯಲ್ಲಿತ್ತು ಎನ್ನಬಹುದು. ಆದರೂ ಈ ಕಾಲದ ಕನ್ನಡಸಾಹಿತ್ಯ ಕೃತಿಗಳಾವುವೂ ದೊರೆತಿಲ್ಲ. ಇಮ್ಮಡಿ ಪುಲಕೇಶಿಯ ಸೊಸೆ ವಿಜಯಭಟ್ಟಾರಿಕೆ. ಈಕೆಯನ್ನು 'ಸರಸ್ವತಿ' ಎಂದೂ 'ಕರ್ಣಾಟಿ' ಎಂದೂ ಕರೆದಿದೆ. ಸಂಸ್ಕೃತ ಕವಿ ರವಿಕೀರ್ತಿ ಇಮ್ಮಡಿ ಪುಲಕೇಶಿಯ ವಿಜಯವೃತ್ತಾಂತಗಳನ್ನು ವರ್ಣಿಸುವ, ಉತ್ಕೃಷ್ಟ ಕಾವ್ಯರಚನೆಯಿರುವ ಪ್ರಖ್ಯಾತ ಐಹೊಳೆ ಶಾಸನದ ಕರ್ತೃ. ಪುಲಕೇಶಿಯ ಆಸ್ಥಾನಿಕನಾಗಿ ಇದ್ದಿರಬಹುದಾದ ಈತ ಕನ್ನಡಿಗನೇ ಇರಬಹುದು. ಈತ ಕಾಳಿದಾಸ ಭಾರವಿಯರಿಂದ ಬಹಳಮಟ್ಟಿಗೆ ಪ್ರಭಾವಿತನಾದವನು; ಕವಿತ್ವ ರಚನೆಯ ಭಾಷೆಶೈಲಿಗಳಿಂದಲೂ ಸಾದೃಶ್ಯಗಳಿಂದಲೂ ಹೀಗೆ ಹೇಳಬಹುದಾಗಿದೆ. ಕನ್ನಡ ಕವಿತ್ವಪದ್ಧತಿಯನ್ನು ಈತ ತಿಳಿದವನಾಗಿರಬೇಕು ಎಂಬುದಕ್ಕೆ ಶಾಸನಛಂದಸ್ಸಿನ ಕೆಲವು ವೈಲಕ್ಷಣ್ಯಗಳು ಅವಕಾಶ ಕೊಡುತ್ತದೆ. ಮತ್ತೇಭವಿಕ್ರೀಡಿತ, ಕಂದದ ನೆನಪು ಮಾಡುವ ಆರ್ಯಾಗೀತ ಇವುಗಳೇ ಆ ಮುಖ್ಯ ವೈಲಕ್ಷಣ್ಯಗಳು. ಆ ಕಾಲದ ಪ್ರಶಸ್ತಿಲೇಖಕರಲ್ಲಿ, ಕವಿಗಳಲ್ಲಿ ರವಿಕೀರ್ತಿ ಬಹಳ ಗಣ್ಯನಾಗಿದ್ದನೆಂದು ಹೇಳಬಹುದು.

## ರಾಷ್ಟ್ರಕೂಟರು

ಚಾಲುಕ್ಯರ ಬಳಿಕ ಕರ್ಣಾಟಕವನ್ನಾಳಿದ ಅರಸು ಮನೆತನವೆಂದರೆ ರಾಷ್ಟ್ರಕೂಟರದು. ಇವರು ಕರ್ಣಾಟಕದ ಮೂಲನಿವಾಸಿಗಳೋ ಹೊರಗಿನಿಂದ ಬಂದವರೋ ಎಂಬ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಆಳ್ತೇಕರ್ ಅವರು ರಾಷ್ಟ್ರಕೂಟರು

ಕರ್ನಾಟಕದವರೆಂದೂ ಅವರ ಭಾಷೆ ಕನ್ನಡವೆಂದೂ ದಂತಿದುರ್ಗನು ಕಾಣಿಸಿಕೊಳ್ಳು ವುದಕ್ಕೆ ಮುನ್ನ ಅವರು ಮಹಾರಾಷ್ಟ್ರದಲ್ಲಿ ನೆಲೆಗೊಂಡಿದ್ದರೆಂದೂ ಚಾಲುಕ್ಯದೊರೆ ಇಮ್ಮಡಿ ಕೀತಿವರ್ಮನ ಕರ್ನಾಟಕಬಲ ನಷ್ಟವಾಗಿ, ಕರ್ನಾಟಕಪ್ರಭುತ್ವ ತಮ್ಮ ಕೈವಶ ವಾದ ಮೇಲೆ ತಾವು ಕನ್ನಡಿಗರಾದರೆಂದೂ ಹೇಳುತ್ತಾರೆ. ಪಾಠಕ್ ಮತ್ತು ಭಂಡಾರ್ಕರ್ ಅವರು ಮಾತ್ರ ರಾಷ್ಟ್ರಕೂಟರು ಮಹಾರಾಷ್ಟ್ರರೆಂಬ ಅಭಿಪ್ರಾಯವನ್ನು ಹೊಂದಿದ್ದಾರೆ. ಆದರೆ ಅವರು ಕನ್ನಡಿಗರೆಂದು ತಿಳಿಯಲು ತಕ್ಕ ಆಧಾರಗಳಿವೆ. 'ರಾಷ್ಟ್ರಕೂಟ' ಎಂಬುದು ಅಧಿಕಾರ ಸೂಚಕ ಪದ. ಸು. ೬ನೆಯ ಶತಮಾನದ ಆಂಧ್ರದ ಕಡಪ ಜಿಲ್ಲೆಯ ಕೆಲವು ಶಾಸನಗಳಲ್ಲಿ ನಮೂದಿಸಲಾದ ರಟ್ಟಗುಡಿ ಎಂಬ ಪದ ಸಹ ಇಂತಹುದೇ. ರಾಷ್ಟ್ರ ಕೂಟರು ತಾವು ರಟ್ಟವಂಶದವರೆಂದು ಹೇಳಿಕೊಂಡಿದ್ದಾರೆ. 'ಲತ್ತಲೂರ್ಪುರವರಾಧೀಶ್ವರ' ಎಂಬುದು ಅವರ ಬಿರುದುಗಳಲ್ಲಿ ಒಂದು. ಈ ಲತ್ತಲೂರ್ಪುರ ಈಗಿನ ಆಂಧ್ರದ ಉಸ್ಮಾನಾಬಾದ್ ಜಿಲ್ಲೆಯ ಲಾತೂರು. ಈ ಪ್ರದೇಶದಲ್ಲಿ ಹಲವಾರು ಕನ್ನಡ ಶಾಸನ ಗಳಿವೆ. ಇಲ್ಲಿನ ಗ್ರಾಮಗಳ ಹೆಸರುಗಳು ಕನ್ನಡರೂಪ ತಾಳಿವೆ. ಈ ಅರಸರ ಶಾಸನಗಳ ಕೊನೆಯಲ್ಲಿರುವ ಅಂಕಿತಗಳು ಕನ್ನಡ ಲಿಪಿಯಲ್ಲಿವೆ. ಇವುಗಳೆಲ್ಲ ಮೂಲತಃ ಇವರು ಕನ್ನಡಿಗರಾಗಿದ್ದರೆಂಬುದನ್ನು ತೋರಿಸುತ್ತವೆ.

ತೀವರ್ಖೇಡ, ಮುಲ್ತಾಯಿ, ಮಾನ್ಯಪುರ ಮತ್ತಿತರ ಕಡೆಗಳಲ್ಲಿ ಈ ವಂಶಕ್ಕೆ ಸೇರಿದ ಹಲವರು ಸಣ್ಣಸಣ್ಣ ಅಧಿಕಾರಗಳಲ್ಲಿದ್ದರು. ಆದರೆ ಚಾಲುಕ್ಯ ಇಮ್ಮಡಿ ಕೀರ್ತಿವರ್ಮನನ್ನು ಸೋಲಿಸಿ ರಾಷ್ಟ್ರಕೂಟರ ಆಳಿಕೆಗೆ ಅಸ್ತಿಭಾರ ಹಾಕಿದ ದಂತಿದುರ್ಗನ ಹಿರಿಯರ ಹೆಸರು ಗಳು ನಮಗೆ ಎಲ್ಲೋರ ಶಾಸನದಿಂದ ತಿಳಿದುಬಂದಿದೆ. ಇದರಿಂದ ದಂತಿವರ್ಮ ಈ ಮನೆ ತನದ ಮೂಲಪುರುಷನೆಂದು ತಿಳಿದುಬಂದಿದೆ. ಅಲ್ಲದೆ ಇವನಿಗೂ ಹಿಂದೆ ನಾಲ್ಕು ತಲೆ ಮಾರಿನ ಅರಸರು—ದುರ್ಗ, ಗೋವಿಂದ, ಸ್ವಾಮಿಕ ಮತ್ತು ನನ್ನ ರಾಜರು–ಅಚಲಪುರ (ಎಲಿಚ್‌ಪುರ್) ಪ್ರದೇಶದಲ್ಲಿ ಚಾಲುಕ್ಯರ ಸಾಮಂತರಾಗಿದ್ದರೆಂಬ ಒಂದು ಊಹೆಯೂ ಇದೆ. ಆದರೆ ಇದು ಇನ್ನೂ ಖಚಿತಪಟ್ಟಿಲ್ಲ.

ದಂತಿದುರ್ಗನ ತಂದೆ ಇಂದ್ರ. ಇವನು ಚಾಲುಕ್ಯ ಮನೆತನದ ಭವನಾಗಾ ಎಂಬ ಕನ್ನೆಯನ್ನು ಅಪಹರಿಸಿಕೊಂಡು ಹೋಗಿ ಮದುವೆಯಾದನು. ಅವಳ ಮಗ ದಂತಿದುರ್ಗ. ಈತನು ಪಟ್ಟಕ್ಕೆ ಬಂದ ಸಂದರ್ಭದಲ್ಲಿ ಮೈತ್ರಕ ಮತ್ತು ಗುರ್ಜರರ ಮೇಲೆ ಅರಬ್ಬರ ಆಕ್ರಮಣ ಅವ್ಯಾಹತವಾಗಿ ಸಾಗಿತ್ತು. ಇದರಿಂದ ವಲ್ಲಭಿ, ನಾಂದಿಪುರಿ ಮತ್ತು ನೌಸರಿಯ ರಾಜರು ತತ್ತರಿಸಿದರು. ೭೩೮ರಲ್ಲಿ ಅರಬ್ಬರು, ಗುರ್ಜರರು ಮತ್ತು ಮೈತ್ರಕ ರನ್ನು ಸೋಲಿಸಿ ನೌಸರಿಯನ್ನು ವಶಪಡಿಸಿಕೊಂಡರು. ಆದರೆ ಗುಜರಾತಿನ ಚಾಲುಕ್ಯ ಮಂಡಲಿಕ ಅವನಿಜನಾಶ್ರಯ ಪುಲಕೇಶಿ ಅರಬ್ಬರನ್ನು ಸೋಲಿಸಿದ. ಚಾಲುಕ್ಯ ಚಕ್ರವರ್ತಿ ಎರಡನೆಯ ವಿಕ್ರಮಾದಿತ್ಯ ತನ್ನ ಈ ಸಾಮಂತನ ಬಗ್ಗೆ ಸಂತಸಗೊಂಡು ಅವನಿಗೆ 'ಚಾಲುಕ್ಯ ಕುಲಾಲಂಕಾರ', 'ಪೃಥ್ವೀವಲ್ಲಭ' ಮತ್ತು 'ಅವನಿಜನಾಶ್ರಯ' ಎಂಬ ಬಿರುದುಗಳನ್ನು ದಯಪಾಲಿಸಿದ. ಅವನಿಜನಾಶ್ರಯ ಪುಲಕೇಶಿ ಅರಬ್ಬರನ್ನು ಹಿಮ್ಮೆಟ್ಟಿ

ಸಿದ್ದು ೭೩೬-೩೭ರಲ್ಲಿ. ದಂತಿದುರ್ಗನು ಅರಬ್ಬರನ್ನು ಸೋಲಿಸುವುದರಲ್ಲಿ ಚಾಲುಕ್ಯರಿಗೆ ಬಹಳ ಸಹಾಯ ಮಾಡಿದನು. ಎಂತಲೇ ಚಕ್ರವರ್ತಿ ವಿಕ್ರಮಾದಿತ್ಯ ಈತನಿಗೂ 'ಪೃಥ್ವೀವಲ್ಲಭ' ಎಂಬ ಬಿರುದನ್ನು ಕೊಟ್ಟ. 'ಖಡ್ಗಾವಲೋಕ' ಎಂಬ ಬಿರುದನ್ನು ಏಕೆ ಕೊಟ್ಟಿರಬಾರದು ಎಂಬ ಪ್ರಶ್ನೆ ಏಳುವುದು ಸಹಜ[17].

ದಂತಿದುರ್ಗನು ತನ್ನ ಅಧಿಕಾರಾವಧಿಯಲ್ಲಿ ಕಂಚಿ, ಕಳಿಂಗ, ಶ್ರೀಶೈಲ, ಕೋಸಲ, ಮಾಳವ, ಲಾಟ ದೇಶದ ದೊರೆಗಳನ್ನು ಸೋಲಿಸಿದನೆಂದು ಶಾಸನಗಳ ಹೇಳಿಕೆ. ಇವುಗಳಲ್ಲಿ ಐತಿಹಾಸಿಕ ಸತ್ಯ ಎಷ್ಟರಮಟ್ಟಿಗೆ ಇದೆಯೋ ತಿಳಿಯದು. ಅಂತಿಮವಾಗಿ ಇವನು ತನ್ನ ಸಾರ್ವಭೌಮನನ್ನು ಎದುರಿಸಿದನೆಂಬುದು ಸ್ಪಷ್ಟ.

ಎರಡನೆಯ ವಿಕ್ರಮಾದಿತ್ಯನ ಸಾವಿನವರೆಗೆ (೭೪೭) ದಂತಿದುರ್ಗ ಚಾಲುಕ್ಯರ ವಿಧೇಯ ಸಾಮಂತನಾಗಿಯೇ ನಡೆದುಕೊಂಡನೆಂದು ಕಾಣುತ್ತದೆ. ಚಾಲುಕ್ಯದೊರೆ ಕೀರ್ತಿವರ್ಮ ಕಂಚಿಯ ಮೇಲೆ ದಾಳಿನಡಸಿ ಪಲ್ಲವರನ್ನು ಮತ್ತೊಮ್ಮೆ ಸೋಲಿಸಿದಾಗ, ದಂತಿದುರ್ಗ ಚಾಲುಕ್ಯದೊರೆಯೊಡನೆ ತನ್ನ ಸೈನ್ಯಸಮೇತ ಹೋಗಿ ಸಹಕರಿಸಿದ. ಹಿಂದಿರುಗುವಾಗ ಕರ್ನೂಲು ಜಿಲ್ಲೆಯ ಶ್ರೀಶೈಲದ ದೊರೆಯ ಮೇಲಿನ ಆಕ್ರಮಣದಲ್ಲಿ ದಂತಿದುರ್ಗನೂ ಭಾಗವಹಿಸಿರಬೇಕು. ಈ ಯುದ್ಧಗಳಿಂದ ಅವನು ಸಾಕಷ್ಟು ಅನುಭವ ಗಳಿಸಿದ್ದೇ ಅಲ್ಲದೆ, ಅವನಲ್ಲಿ ಸಾರ್ವಭೌಮತ್ವದ ಬಯಕೆಯೂ ಮೂಡಿರಬೇಕು. ಕಂಚಿಯಿಂದ ಹಿಂದಿರುಗಿದ ಮೇಲೆ ಹಾಗೂ ೭೪೭ರಲ್ಲಿ ವಿಕ್ರಮಾದಿತ್ಯ ತೀರಿಕೊಂಡ ಮೇಲೆ, ದಂತಿದುರ್ಗ ತನ್ನ ರಾಜ್ಯವಿಸ್ತರಣೆ ಹಾಗೂ ಸಾರ್ವಭೌಮ ಪದವಿಗಾಗಿ ಸ್ವತಃ ಆಕ್ರಮಣ ನಡಸಲು ಮನಸ್ಸುಮಾಡಿದ.

ಕರ್ಣಾಟಕ ಚಾಲುಕ್ಯರ ಭದ್ರ ಕೋಟೆಯಾಗಿತ್ತು. ದಂತಿದುರ್ಗನ ವಾಂಶಿಕ ರಾಜ್ಯ ಬೀರಾರ್ ಮತ್ತು ಮಧ್ಯಪ್ರದೇಶವಾಗಿತ್ತು. ಆದ್ದರಿಂದ ಚಾಲುಕ್ಯ ದೊರೆಯಿಂದ ಯಾವ ವಿರೋಧವೂ ಬಾರದ ಹಾಗೆ ಆತ ಪೂರ್ವ ಮತ್ತು ಪಶ್ಚಿಮ ದಿಕ್ಕಿನತ್ತ ದಾಳಿ ನಡಸಿದ. ನೌಸರಿಯ ಚಾಲುಕ್ಯರೂ ನಂದಿಪುರಿಯ ಗುರ್ಜರರೂ ಅರಬರ ಆಕ್ರಮಣದಿಂದ ನಿಶ್ಶಕ್ತರಾಗಿದ್ದರು. ಮೊದಲು ಇವರ ಮೇಲೆ ದಂಡೆತ್ತಿ ಹೋಗಿ ಸೋಲಿಸಿ, ರಾಜ್ಯಗಳನ್ನು ವಶಪಡಿಸಿಕೊಂಡ. ಈ ಜಯದಲ್ಲಿ ಧ್ರುವನ ಮಗನಾದ ಗೋವಿಂದನಿಂದ ಸಾಕಷ್ಟು ಸಹಾಯವನ್ನು ಪಡೆದಿದ್ದ ದಂತಿದುರ್ಗ ಪ್ರತಿಯಾಗಿ ಗೋವಿಂದನಿಗೆ ದಕ್ಷಿಣ ಗುಜರಾತನ್ನು ಕೊಟ್ಟನು. ಗುಜರಾತನ್ನು ವಶಪಡಿಸಿಕೊಂಡಮೇಲೆ ಪೂರ್ವದತ್ತ ತಿರುಗಿ ಮಾಳವವನ್ನು ಮುತ್ತಿ ವಶಮಾಡಿಕೊಂಡ. ಅಲ್ಲಿಂದ ಮಧ್ಯಪ್ರದೇಶದ ಮಹಾಕೋಸಲ ಅಥವಾ ಚತ್ತೀಸಘರ್ ಕಡೆಗೆ ಸಾಗಿದ. ಇವನ ಸಾಮನಘಡದ ಶಾಸನ ಈ ದಾಳಿಯನ್ನು ವರ್ಣಿಸುತ್ತದೆ. ಅಲ್ಲಿಂದ ಹಿಂದಿರುಗುವಾಗ ಕಳಿಂಗದ ಸ್ಥಳೀಯ ರಾಜರನ್ನು ಸೋಲಿಸಿರಬೇಕು. ತನ್ನ ಚಾಣಾಕ್ಷತನ ಮತ್ತು ಸೈನಿಕ ಬಲದಿಂದ ಇವನು ಇಡೀ ಮಧ್ಯಪ್ರದೇಶ ಹಾಗೂ ಮಧ್ಯ ಮತ್ತು ದಕ್ಷಿಣ ಗುಜರಾತನ್ನು ಸ್ವಾಧೀನಪಡಿಸಿಕೊಂಡ.

ಪ್ರಬಲನಾಗುತ್ತಿದ್ದ ದಂತಿದುರ್ಗನನ್ನು ಅಲಕ್ಷಿಸಲು ಕೀರ್ತಿವರ್ಮನಿಗೆ ಸಾಧ್ಯವಾಗಲಿಲ್ಲ

ಆದ್ದರಿಂದ ಇಬ್ಬರಿಗೂ ಮನಸ್ತಾಪ ಆರಂಭವಾಯಿತು. ಇದಕ್ಕೆ ಮುಖ್ಯ ಕಾರಣ ನೌಸರಿಯಲ್ಲಿ ಮತ್ತೆ ಚಾಲುಕ್ಯ ಮನೆತನದ ಆಳ್ವಿಕೆಯನ್ನು ಸ್ಥಾಪಿಸಬೇಕೆಂಬ ಕೀರ್ತಿ ವರ್ಮನ ಪ್ರಯತ್ನ. ಇದುವರೆಗಿನ ಆಕ್ರಮಣಗಳಿಂದ ಆತ್ಮವಿಶ್ವಾಸ ಪಡೆದುಕೊಂಡಿದ್ದ ದಂತಿದುರ್ಗ, ಕೀರ್ತಿವರ್ಮನ ಮಾತಿನಂತೆ ದಕ್ಷಿಣ ಗುಜರಾತನ್ನು ಬಿಟ್ಟುಕೊಡಲು ಇಚ್ಛಿಸಲಿಲ್ಲವೆಂದು ತೋರುತ್ತದೆ. ಆದಕ್ಕಾಗಿಯೇ ಅವನ ಮೇಲೆ ಯುದ್ಧವನ್ನು ಘೋಷಿಸಿದ. ಇವರಿಬ್ಬರೂ ಎಲ್ಲಿ ಯುದ್ಧ ಮಾಡಿದರೆಂಬುದು ಖಚಿತವಾಗಿ ತಿಳಿದುಬರದಿದ್ದರೂ ಮಧ್ಯಮಹಾರಾಷ್ಟ್ರದಲ್ಲೆಲ್ಲೋ ಇರಬಹುದೆಂದು ಊಹಿಸಬಹುದು. ಈ ಯುದ್ಧದಲ್ಲಿ ದಂತಿದುರ್ಗ ಗೆದ್ದ.

ದಂತಿದುರ್ಗನ ವಿಜಯ ಚಾಲುಕ್ಯಪ್ರಭುತ್ವವನ್ನು ಸಂಪೂರ್ಣವಾಗಿ ನಾಶಮಾಡಿತು ಎಂದು ಹೇಳುವ ಹಾಗಿಲ್ಲ; ಆದರೆ ಆತನನ್ನು ಮಹಾರಾಷ್ಟ್ರದ ಅಧಿಪತಿಯನ್ನಾಗಿಸಿತು ಎನ್ನಬಹುದು. ಚಾಲುಕ್ಯದೊರೆ ಕೀರ್ತಿವರ್ಮ ಇಡೀ ಕರ್ನಾಟಕವನ್ನಾಳುತ್ತ ೭೫೭ರಲ್ಲಿ ಭೀಮಾನದಿಯ ದಂಡೆಯಮೇಲೆ ಸೈನ್ಯಸಮೇತ ಬೀಡುಬಿಟ್ಟದ್ದನೆಂದು ತಿಳಿದುಬರುತ್ತದೆ. ಮೊದಲಿನ ಜಯದಿಂದ ಹುರುಪುಗೊಂಡ ದಂತಿದುರ್ಗ ಚಾಲುಕ್ಯಪ್ರಭುತ್ವವನ್ನು ಸಂಪೂರ್ಣವಾಗಿ ನಾಶಪಡಿಸಬೇಕೆಂದು ಮನಸ್ಸುಮಾಡಿದರೂ, ಅವನ ಸಾವು ಅವನ ಯೋಜನೆಯನ್ನು ಕೈಗೂಡಿಸಲಿಲ್ಲ. ಸು. ೭೫೬ರಲ್ಲಿ ಅವನು ಮಡಿದ.

ದಂತಿದುರ್ಗ ರಾಷ್ಟ್ರಕೂಟ ರಾಜ್ಯ ಸಂಸ್ಥಾಪಕ; ಸಮರ್ಥ, ಯುಕ್ತಿಶಾಲಿ ಹಾಗೂ ದಕ್ಷ ಆಡಳಿತಗಾರ, ಬಳಿಕ ಬಂದ ೧ನೆಯ ಕೃಷ್ಣನಿಗೆ ಚಾಲುಕ್ಯರನ್ನು ಕಿತ್ತೊಗೆದ ಕೀರ್ತಿ ಬಂದರೂ ಅದಕ್ಕೆ ನಾಂದಿ ಹಾಡಿದ್ದವನು ದಂತಿದುರ್ಗ ಎಂಬುದನ್ನು ಮರೆಯುವ ಹಾಗಿಲ್ಲ. ಕೃಷ್ಣನ ಕಾಲದ ಶಾಸನಗಳು ದಂತಿದುರ್ಗನು ಹೇಗೆ ಚಾಲುಕ್ಯಪ್ರಭುತ್ವವನ್ನು ಕಿತ್ತೊಗೆಯಲು ಕಾರಣಕರ್ತನಾದನೆಂಬುದನ್ನು ಶ್ರುತಪಡಿಸುತ್ತವೆ.

೭೫೬ರಲ್ಲಿ ಪಟ್ಟಕ್ಕೆ ಬಂದ ಕೃಷ್ಣ ಗುಜರಾತಿನಲ್ಲಿ ಆಳುತ್ತಿದ್ದ ೨ನೆಯ ಕರ್ಕರಾಜನನ್ನು ಮಟ್ಟಹಾಕಿ, ಗುಜರಾತಿನ ಆಡಳಿತ ನೋಡಿಕೊಳ್ಳಲು ತನ್ನ ಅಧಿಕಾರಿಗಳನ್ನು ನೇಮಿಸಿದ. ಆಮೇಲೆ ಚಾಲುಕ್ಯ ದೊರೆ ಕೀರ್ತಿವರ್ಮನ ಹುಟ್ಟಡಗಿಸಲು ಹೊರಟ. ದಂತಿದುರ್ಗನ ಸಾವು ಹಾಗೂ ಕರ್ಕರಾಜನ ದಂಗೆಯ ಸಂದರ್ಭವನ್ನು ಸದುಪಯೋಗಪಡಿಸಿಕೊಳ್ಳಲು ಕೀರ್ತಿವರ್ಮ ತನ್ನ ಸೇನೆಯೊಡನೆ ಹೊರಟು ಭೀಮಾನದಿಯ ಬಳಿ ಬೀಡುಬಿಟ್ಟ. ಆದರೆ ಕೃಷ್ಣನೊಡನೆ ಹೋರಾಡುವಾಗ ಕೀರ್ತಿವರ್ಮನೇ ತನ್ನ ಮಕ್ಕಳೊಡನೆ ಸತ್ತ. ಈಗ ಚಾಲುಕ್ಯ ಪ್ರಭುತ್ವ ಸಂಪೂರ್ಣವಾಗಿ ನಾಶವಾಯಿತು. ಇಡೀ ಉತ್ತರ ಕರ್ನಾಟಕ ಕೃಷ್ಣನ ಕೈವಶವಾಯಿತು; ತನ್ಮೂಲಕ ಈತ ಸಾರ್ವಭೌಮತ್ವ ಪದವಿಯನ್ನು ಪಡೆಯುವಂತಾಯಿತು. ಇದಾದನಂತರ ಕೊಂಕಣವನ್ನು ಗೆದ್ದು ಶಿಲಾಹಾರ ವಂಶದ ಸಾಮಂತ ದೊರೆಗೆ ಅದನ್ನು ವಹಿಸಿಕೊಟ್ಟ. ಆ ಮನೆತನ ಕೊನೆಯವರೆಗೂ ರಾಷ್ಟ್ರಕೂಟರನ್ನು ಓಲೈಸಿಕೊಂಡಿತ್ತು.

ಅನಂತರ ಕೃಷ್ಣ ದಕ್ಷಿಣಕ್ಕೆ ದಂಡೆಯಾತ್ರೆ ಕೈಗೊಂಡು ಗಂಗ ಶ್ರೀಪುರುಷನನ್ನು

ಸೋಲಿಸಲು ಯತ್ನಿಸಿದನಾದರೂ ಇದರಲ್ಲಿ ಈತನಿಗೆ ಹೆಚ್ಚಿನ ಯಶಸ್ಸು ಸಿಕ್ಕಲಿಲ್ಲ. ಮಣ್ಣೆಯ ಸುತ್ತಲಿನ ಕೆಲಭಾಗಗಳು ಮಾತ್ರ ಇವನ ವಶವಾದಂತೆ ತೋರುತ್ತದೆ. ಈ ಕಾಲದಲ್ಲೇ ಅವನು ತನ್ನ ಹಿರಿಯ ಮಗನಾದ ಗೋವಿಂದನನ್ನು ತನ್ನ ಉತ್ತರಾಧಿಕಾರಿಯನ್ನಾಗಿ ಮಾಡಿದ್ದು. ಆಗ ರಾಜಧಾನಿಯಾಗಿದ್ದ ಎಲ್ಲೋರದಲ್ಲಿ ಕೈಲಾಸನಾಥ ದೇವಾಲಯವನ್ನು ಕೊರೆಯಿಸಿದ ಕೀರ್ತಿ ಇವನಿಗೆ ಸಲ್ಲುತ್ತದೆ.

೭೭೩ರಲ್ಲಿ ಪಟ್ಟಕ್ಕೆ ಬಂದ ಕೃಷ್ಣನ ಹಿರಿಯ ಮಗ ಎರಡನೆಯ ಗೋವಿಂದ ವೆಂಗಿಯ ಮೇಲೆ ಯುದ್ಧ ಕೈಗೊಂಡಿದ್ದೇ ಅಲ್ಲದೆ ಪಾರಿಜಾತ ಎಂಬ ದೊರೆಯನ್ನು ಸೋಲಿಸಿದನೆಂದು ತಿಳಿದುಬರುತ್ತದೆ. ಆದರೆ ಈ ಪಾರಿಜಾತ ದೊರೆ ಯಾರು ಎಲ್ಲಿಯವನು ಎಂಬುದು ಮಾತ್ರ ತಿಳಿಯುವುದಿಲ್ಲ. ಗೋವಿಂದನ ಅಲ್ಪಾವಧಿಯ ಆಳ್ವಿಕೆಯ ಬಹುಭಾಗ ಅವನಿಗೂ ಮತ್ತು ಅವನ ಕಿರಿಯ ತಮ್ಮನಾದ ಧ್ರುವನಿಗೂ ಮಧ್ಯೆ ಮೂಡಿದ ಅಧಿಕಾರದ ಸೆಣೆಸಾಟದಲ್ಲಿ ಕಳೆದುಹೋಯಿತು. ತನ್ನ ಅಣ್ಣನ ಆಳ್ವಿಕೆಯ ಕಾಲದಲ್ಲಿ ಧ್ರುವನು ನಾಸಿಕ್ ಮತ್ತು ಖಾನ್‌ದೇಶದ ಪ್ರಾಂತಾಧಿಕಾರಿ ಆಗಿದ್ದನು. ಆದರೆ ಗೋವಿಂದ ಭೋಗ ಜೀವನದಲ್ಲಿ ಮಗ್ನನಾಗಿ ಆಡಳಿತ ಭಾರವನ್ನೆಲ್ಲ ತಮ್ಮನ ಮೇಲೆ ಹೊರಿಸಿದ್ದ. ಶಕ್ತನೂ ಮಹದಾಕಾಂಕ್ಷಿಯೂ ಆದ ಧ್ರುವನು ಅಣ್ಣನ ಕೈಕೆಳಗಿರಲು ಇಚ್ಛಿಸದೆ ಸ್ವತಂತ್ರ ಸಾರ್ವಭೌಮನಾಗಲು ಮಾಂಡಲಿಕ ರಾಜರಿಗೆ ತನ್ನ ಹೆಸರಿನಲ್ಲೇ ರಾಜಾಜ್ಞೆಗಳನ್ನು ಕಳಿಸತೊಡಗಿದ. ಇದು ಗೋವಿಂದನಲ್ಲಿ ಸಂಶಯ ಮೂಡಿಸಿತು. ಕೂಡಲೇ ತನ್ನ ಆಲಸ್ಯವನ್ನು ಒಗೆದು, ಧ್ರುವನನ್ನು ಅಧಿಕಾರದಿಂದ ಕಿತ್ತುಹಾಕಿ, ಸ್ವತಃ ಆಡಳಿತ ಸೂತ್ರಗಳನ್ನು ತೆಗೆದುಕೊಂಡ. ಮೊದಲು ಧ್ರುವ ಅಣ್ಣನಿಗೆ ಅನತನಾದರೂ ಕ್ಷಿಪ್ರದಲ್ಲಿಯೇ ಅಣ್ಣನ ಮೇಲೆ ಕತ್ತಿ ಮಸೆದನೆಂದೂ ಆಗ ಗೋವಿಂದ ಗಂಗವಾಡಿ, ಕಂಚಿ, ವೆಂಗಿ ಮತ್ತು ಮಾಳವದ ರಾಜರ ನೆರವನ್ನು ಬಯಸಿದನೆಂದೂ ಹಲವರು ಸೂಚಿಸಿದ್ದಾರೆ. ಆದರೆ ತನ್ನ ದೌರ್ಬಲ್ಯಗಳನ್ನರಿತಿದ್ದ ಗೋವಿಂದ ಸ್ವಇಚ್ಛೆಯಿಂದ ರಾಜ್ಯವನ್ನು ತಮ್ಮನಿಗೆ ಬಿಟ್ಟುಕೊಟ್ಟನೆಂಬ ವಾದವೂ ಇದ್ದು, ಇದು ಹೆಚ್ಚು ಸಮಂಜಸವಾಗಿರುವಂತೆ ತೋರುತ್ತದೆ.

ಧ್ರುವ ೭೮೦ರಲ್ಲಿ ರಾಷ್ಟ್ರಕೂಟ ಸಿಂಹಾಸನವನ್ನೇರಿದ. ಕೂಡಲೇ ತನ್ನ ವಿರುದ್ಧ ಕತ್ತಿ ಮಸೆದಿದ್ದ ಗಂಗ ಮತ್ತು ಪಲ್ಲವ ಅರಸರಿಗೆ ಬುದ್ಧಿ ಕಲಿಸಲು ಮೊದಲು ದಕ್ಷಿಣಕ್ಕೆ ದಂಡೆತ್ತಿಹೋದ. ಶ್ರೀಪುರುಷನಿರುವವರೆಗೂ ರಾಷ್ಟ್ರಕೂಟರಿಗೆ ಅವನನ್ನು ಬಗ್ಗಿಸಲಾಗಿರಲಿಲ್ಲ. ಆದರೆ ಆ ಬಳಿಕ ಪಟ್ಟಕ್ಕೆ ಬಂದ ಶಿವಮಾರ ಅಶಕ್ತ; ಆದರೂ ಸ್ವಾತಂತ್ರ್ಯಾಪೇಕ್ಷಿ; ಸೋತು ಸೆರೆಮನೆ ಸೇರಿದರೂ ಸಾಮಂತಿಕೆಯನ್ನು ಒಪ್ಪಲಿಲ್ಲ. ಧ್ರುವ ಇಡೀ ಗಂಗವಾಡಿಯನ್ನು ವಶಪಡಿಸಿಕೊಂಡು ತನ್ನ ಮಗನಾದ ಸ್ತಂಭರಣಾವಲೋಕನನ್ನು ಅದರ ಅಧಿಕಾರಿಯಾಗಿ ನೇಮಿಸಿದ. ಅಲ್ಲಿಂದ ಪಲ್ಲವ ದೊರೆ ದಂತಿವರ್ಮನಮೇಲೆ ದಂಡೆತ್ತಿಹೋದಾಗ, ಅವನು ಹೆದರಿ ಕಪ್ಪಕಾಣಿಕೆಗಳನ್ನೂ ಆನೆಗಳನ್ನೂ ಒಪ್ಪಿಸಿದ. ಕ್ರಿ.ಶ. ೭೮೬ರಲ್ಲಿ ದಕ್ಷಿಣದ ಈ ವಿಜಯದಿಂದ ಧ್ರುವನ ಸೈನ್ಯ ಹಿಂದಿರುಗಿತು. ಈ ಎಲ್ಲ ವಿಜಯಗಳು ಧ್ರುವನನ್ನು ದಕ್ಷಿಣಾಪಥದ ಅಜೇಯ ಸಾರ್ವಭೌಮನನ್ನಾಗಿ ಮಾಡಿದುವು.

ಆಗಿನ ಉತ್ತರಭಾರತದ ರಾಜಕೀಯ ಸ್ಥಿತಿ ಇವನಿಗೆ ಅನುಕೂಲವಾಗಿಯೇ ಇತ್ತು. ಗುರ್ಜರ ಪ್ರತೀಹಾರ ದೊರೆ ವತ್ಸರಾಜ ರಜಪುತಾನ ಮತ್ತು ಮಾಳವವನ್ನು ಆಳುತ್ತಿದ್ದ. ಧರ್ಮಪಾಲ ಬಂಗಾಳದಲ್ಲಿ ಆಳುತ್ತಿದ್ದ. ಇವರಿಬ್ಬರಿಗೂ ವೈರವಿತ್ತು. ಕನೋಜನ್ನು ಅಶಕ್ತನಾದ ಇಂದ್ರಾಯುಧ ಆಳುತ್ತಿದ್ದ. ೭೮೬ರಲ್ಲಿ ವತ್ಸರಾಜ ಕನೋಜಿನ ಮೇಲೆ ದಂಡೆತ್ತಿ ಹೋಗಿ ಇಂದ್ರಾಯುಧನನ್ನು ಸೋಲಿಸಿ ತನ್ನ ಅಧೀನ ರಾಜನನ್ನಾಗಿ ಮಾಡಿದನು. ಇದು ಧರ್ಮಪಾಲನಿಗೆ ಸಹಜವಾಗಿಯೇ ಈರ್ಷ್ಯೆಯನ್ನುಂಟುಮಾಡಿತು. ಉತ್ತರ ಭಾರತ ದಲ್ಲಿ ತನ್ನ ಪ್ರಭಾವವನ್ನು ಹೆಚ್ಚಿಸಿಕೊಳ್ಳಲು ವತ್ಸರಾಜನ ಮೇಲೆ ಯುದ್ಧಕ್ಕೆ ನಿಂತ. ಆದರೆ ಸೋತ. ಎರಡನೆಯ ಸಾರಿ ಧರ್ಮಪಾಲ ವತ್ಸರಾಜನ ಮೇಲೆ ಯುದ್ಧ ಮಾಡಲು ಸಿದ್ಧನಾಗಿದ್ದ. ಇಂತಹ ಸಂದರ್ಭದಲ್ಲಿ ಧ್ರುವ ಉತ್ತರ ಭಾರತದ ದಿಗ್ವಿಜಯವನ್ನು ಕೈಗೊಂಡಿದ್ದ. ನರ್ಮದಾ ನದಿಯ ದಂಡೆಯ ಮೇಲೆ ಬೀಡುಬಿಟ್ಟು, ತನ್ನ ಮಕ್ಕಳಾದ ಗೋವಿಂದ ಮತ್ತು ಇಂದ್ರರಿಗೆ ಸೈನ್ಯದ ಜವಾಬ್ದಾರಿಯ್ನು ವಹಿಸಿ ಮಾಳವವನ್ನು ವಶ ಪಡಿಸಿಕೊಂಡ. ಅಲ್ಲಿಂದ ವತ್ಸರಾಜನ ಮುಖ್ಯ ಸೇನೆಯನ್ನು ಎದುರಿಸಲು ಕನೋಜಿನತ್ತ ಹೊರಟ. ಯುದ್ಧದಲ್ಲಿ ರಜಪುತಾನ ಸೈನ್ಯ ಅಪಾರ ಸೋಲನ್ನನುಭವಿಸಿದ್ದೇ ಅಲ್ಲದೆ, ವತ್ಸರಾಜ ಪ್ರಾಣಭಯದಿಂದ ರಜಪುತಾನದ ಕಾಡಿಗೆ ಓಡಿಹೋಗುನಂತಾಯಿತು. ಇದ ರಿಂದ ಧ್ರುವನಿಗೆ ಹೆಚ್ಚು ಕೊಳ್ಳೆ ದೊರಕಿತು. ಈಗ ಇವನ ಮುಂದಿನ ಗುರಿ ಧರ್ಮಪಾಲ ನನ್ನು ಸೋಲಿಸುವುದು. ಇವನನ್ನು ಬಾಯ್ಮುಚ್ಚಿಸದಿದ್ದರೆ ವತ್ಸರಾಜನನ್ನು ಸೋಲಿಸಿಯೂ ಪ್ರಯೋಜನವಿಲ್ಲ. ಆದ್ದರಿಂದ ಧ್ರುವನ ಸೈನ್ಯ ಧರ್ಮಪಾಲನ ಮೇಲೆ ಯುದ್ಧಮಾಡಿ ಅವನಿಗೆ ಅಪಾರ ಸೋಲನ್ನುಂಟುಮಾಡಿತು. ಆದರೆ ಧ್ರುವ ಕನೋಜನ್ನು ಆಕ್ರಮಿಸದೆ ದಿಗ್ವಿಜಯದಿಂದ ತೃಪ್ತಿಹೊಂದಿ ಶೌರ್ಯವನ್ನು ಮೆರೆಸಿ ಹಿಂದಿರುಗಿದ. ಇದರಿಂದ ರಾಷ್ಟ್ರ ಕೂಟ ಸೈನ್ಯವನ್ನು ಎದುರಿಸುವ ಮತ್ತೊಂದು ಸೈನ್ಯ ದೇಶದಲ್ಲಿ ಇಲ್ಲದಂತಾಯಿತು.

ಹೀಗೆ ಉತ್ತರದಲ್ಲಿ ವತ್ಸರಾಜ ಮತ್ತು ಧರ್ಮಪಾಲರನ್ನು, ದಕ್ಷಿಣದಲ್ಲಿ ಗಂಗರು ಮತ್ತು ಪಲ್ಲವರನ್ನು ಸೋಲಿಸಿ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡ. ವೆಂಗಿಯ ದೊರೆ ತನ್ನ ಮಾವನಾದುದರಿಂದ ಅವನ ಕಡೆಯಿಂದ ಅಪಾಯವಿರಲಿಲ್ಲ. ಇನ್ನು ಅರಬ್ಬರು ಅಧಃಪತನದ ಹಾದಿಯಲ್ಲಿದ್ದರು. ಇಡೀ ಭಾರತದಲ್ಲಿ ಇವನಿಗೆ ಎದುರು ತಾಕುವ ದೊರೆ ಗಳಾರೂ ಇಲ್ಲದಂತಾಗಿ, ಇವನ ಆಳ್ವಿಕೆಯ ಕೊನೆಯ ನಾಲ್ಕೈದು ವರ್ಷಗಳು ನೆಮ್ಮದಿಯಿಂದ ಇರುವಂತಾಯಿತು. ತಾನು ಸತ್ತಮೇಲೆ ಅಧಿಕಾರಕ್ಕಾಗಿ ಕಿತ್ತಾಟ ಬರ ಬಹುದೆಂದು ತನ್ನ ನಾಲ್ವರು ಮಕ್ಕಳಲ್ಲಿ (ಕರ್ಕ, ಸ್ತಂಭ, ಗೋವಿಂದ ಮತ್ತು ಇಂದ್ರ) ಗೋವಿಂದನಿಗೆ ಪಟ್ಟ ಕಟ್ಟಿದ್ದು, ೭೯೩ರಲ್ಲಿ ಮಡಿದನು. ಧ್ರುವ ಭಾರತದ ಸಮರ್ಥ ದೊರೆ ಗಳಲ್ಲೊಬ್ಬ. ದಕ್ಷಿಣದ ಸೈನ್ಯ ಉತ್ತರ ಭಾರತದ ಮೇಲೆ ದಂಡೆತ್ತಿ ಹೋಗಿ ಜಯ ಸಂಪಾದಿಸಿದ್ದು ಇವನ ಮುಖಂಡತ್ವದಲ್ಲೇ. ಇವನ ಆಳ್ವಿಕೆಯ ಕೊನೆಯಲ್ಲಿ ರಾಷ್ಟ್ರಕೂಟ ಬಲವನ್ನು ಪ್ರಶ್ನಿಸುವ ಯಾವ ರಾಜ್ಯವೂ ಭಾರತದಲ್ಲಿರಲಿಲ್ಲ ಎಂದರೆ ಧ್ರುವನ ಶಕ್ತಿ, ಸಾಮರ್ಥ್ಯ ಯುದ್ಧನೈಪುಣ್ಯವನ್ನು ವಿವರಿಸಬೇಕಾಗಿಲ್ಲ.

೭೯೩ರಲ್ಲಿ ಮೂರನೆಯ ಗೋವಿಂದ ಸಿಂಹಾಸನವನ್ನೇರಿದ. ಎರಡು ಮೂರು ವರ್ಷ ನಿರಾತಂಕವಾಗಿದ್ದ. ಆದರೆ ಇವನ ಅಣ್ಣನಾದ ಸ್ತಂಭ ತಮ್ಮನನ್ನು ಕೆಳಗಿಳಿಸಿ ತಾನೇ ಸಿಂಹಾಸನವನ್ನೇರಲು ಅಕ್ಕಪಕ್ಕದ ರಾಜರು ಮತ್ತು ಮಾಂಡಲಿಕರೊಡನೆ ಒಳಸಂಚು ನಡಸಿ ಸಿದ್ಧತೆ ಮಾಡಿಕೊಳ್ಳುತ್ತಿದ್ದ. ಧ್ರುವನಿಂದ ಸೋಲನ್ನನುಭವಿಸಿದ್ದ ಕಂಚಿಯ ದಂತಿಗ, ನೊಳಂಬವಾಡಿಯ ಚಾರುಪೊನ್ನೇರ ಮೊದಲಾದವರು ಈ ಒಳಸಂಚಿನಲ್ಲಿ ಭಾಗಿಗಳಾಗಿದ್ದರು. ದೇಶದ ಉನ್ನತ ಅಧಿಕಾರಿಗಳು ಸಹ ಹಿರಿಯ ಮಗನಾದ ಸ್ತಂಭನೇ ನಿಜವಾದ ಉತ್ತರಾಧಿಕಾರಿಯೆಂಬ ಭಾವನೆಯಿಂದಿದ್ದರು.

ಅಣ್ಣನ ಒಳಸಂಚಿನ ಯೋಜನೆ ಮಾಗುವ ಮೊದಲೇ ಗೋವಿಂದ ಮುನ್ನೆಚ್ಚರಿಕೆ ಕ್ರಮಗಳನ್ನು ಕೈಗೊಂಡ. ತನ್ನ ಅಣ್ಣನಾದ ಸ್ತಂಭನಿಗೆ ಎದುರಾಳಿಯೊಬ್ಬನನ್ನು ಸೃಷ್ಟಿಸಿ ಕಾಲ್ತೊಡಕನ್ನುಂಟುಮಾಡಲು ಸೆರೆಯಲ್ಲಿದ್ದ ಗಂಗದೊರೆ ಶಿವಮಾರನನ್ನು ಬಿಡುಗಡೆ ಮಾಡಿ ಗಂಗವಾಡಿಗೆ ಕಳಿಸಿದ. ಆದರೆ ಗೋವಿಂದನ ಈ ರಾಜಕೀಯ ಉಪಾಯ ಸಫಲವಾಗಲಿಲ್ಲ. ಬಿಡುಗಡೆ ಹೊಂದಿ ಗಂಗವಾಡಿ ಸೇರಿದ ಶಿವಮಾರ ಸ್ತಂಭನ ಚಾಣಾಕ್ಷತನದಿಂದ ಗೋವಿಂದನಿಗೆ ವಿರುದ್ಧವಾಗಿ ನಿಂತ. ಆದರೆ ಗೋವಿಂದ ಎದೆಗೆಡದೆ ಆಡಳಿತದ ಹೊಣೆಯನ್ನು ತನ್ನ ಕಿರಿಯ ತಮ್ಮ ಇಂದ್ರನಿಗೆ ವಹಿಸಿ, ಸ್ತಂಭನಿಗೆ ಮಾಂಡಲಿಕ ಹಾಗೂ ಅಕ್ಕಪಕ್ಕದ ರಾಜರ ನೆರವು ಸಿಕ್ಕುವ ಮೊದಲೇ ದಂಡೆತ್ತಿ ಹೋಗಿ ಅವನನ್ನು ಕೈಸೆರೆ ಹಿಡಿದ. ತನ್ನ ಹೋರಾಟ ನಿರರ್ಥಕವೆಂದು ತಿಳಿದ ಸ್ತಂಭ ಗೋವಿಂದನೊಡನೆ ರಾಜಿಯಾದ: ವಿಶಾಲಹೃದಯಿಯಾದ ಗೋವಿಂದ ಮತ್ತೆ ಸ್ತಂಭನಿಗೆ ಗಂಗವಾಡಿಯ ಆಡಳಿತದ ಹೊಣೆಯನ್ನು ವಹಿಸಿದ, ಶಿವಮಾರನನ್ನು ಸೆರೆಯಲ್ಲಿಡಿಸಿದ. ಅನಂತರ ನೊಳಂಬವಾಡಿಯ ಚಾರುಪೊನ್ನೇರನ ಮೇಲೆ ದಂಡೆತ್ತಿ ಹೋಗಿ ಅವನನ್ನು ಶರಣಾಗಿಸಿ, ಕಂಚಿಯ ದಂತಿಗನನ್ನು ಸೋಲಿಸಿ, ೭೯೬ರಲ್ಲಿ ಉತ್ತರದತ್ತ ದಿಗ್ವಿಜಯಯಾತ್ರೆಯನ್ನು ಕೈಗೊಂಡ.

ಆ ಸಂದರ್ಭದಲ್ಲಿ ಉತ್ತರ ಭಾರತದ ರಾಜಕೀಯ ಸ್ಥಿತಿ ಹಿಂದಿನದಕ್ಕಿಂತ ಭಿನ್ನವಾಗಿತ್ತು. ೭೮೬ರಲ್ಲಿ ಧ್ರುವ ಗುರ್ಜರ ಪ್ರತಿಹಾರ ದೊರೆ ವತ್ಸರಾಜನನ್ನು ಮತ್ತು ಬಂಗಾಳದ ದೊರೆ ಧರ್ಮಪಾಲನನ್ನು ಸೋಲಿಸಿ, ಉತ್ತರ ಭಾರತದ ಸಾರ್ವಭೌಮರಾಗಬೇಕೆಂದು ತಮ್ಮತಮ್ಮಲ್ಲೇ ಮಸೆದಾಡುತ್ತಿದ್ದ ಅವರ ಸೊಕ್ಕನ್ನು ಅಡಗಿಸಿದ್ದನು. ಆದರೆ ಧ್ರುವನ ಹೊಡೆತದಿಂದ ವತ್ಸರಾಜ ಇನ್ನೂ ಸಾವರಿಸಿಕೊಂಡಿಲ್ಲವೆಂದು ಅರಿತ ಧರ್ಮಪಾಲ, ಕನೋಜಿನ ಮೇಲೆ ದಂಡೆತ್ತಿ ಹೋಗಿ ಅದನ್ನು ವಶಪಡಿಸಿಕೊಂಡು, ಇಂದ್ರಾಯುಧವನ್ನು ಕೆಳಗಿಳಿಸಿ ಅವನ ಸಂಬಂಧಿಕನಾದ ಚಕ್ರಾಯುಧನನ್ನು ಸಿಂಹಾಸನಕ್ಕೇರಿಸಿದನು. ಸೋತ ವತ್ಸರಾಜ ೭೯೦ರಲ್ಲಿ ಮಡಿದಾಗ ಅವನ ಮಗನಾದ ಎರಡನೆಯ ನಾಗಭಟ ಅಧಿಕಾರಕ್ಕೆ ಬಂದನು. ಸಾಮರ್ಥ್ಯಶಾಲಿಯೂ, ಮಹಾತ್ವಾಕಾಂಕ್ಷಿಯೂ ಆದ ಈತ ತನ್ನ ಕಡೆಗೆ ಅಕ್ಕಪಕ್ಕದ ರಾಜರನ್ನು ಒಲಿಸಿಕೊಂಡು ಕನೋಜನ್ನು ಮುತ್ತಿ, ಧರ್ಮಪಾಲನು ಸಿಂಹಾಸನಕ್ಕೆ ನಾಮಕರಣ ಮಾಡಿದ್ದ ಚಕ್ರಾಯುಧನನ್ನು ಸೋಲಿಸಿದನು. ಇದನ್ನರಿತ ಧರ್ಮಪಾಲ ಮತ್ತೊಮ್ಮೆ ಯುದ್ಧಕ್ಕೆ ಬಂದರೂ ನಾಗಭಟನಿಂದ

ಸೋಲನ್ನು ಅನುಭವಿಸಬೇಕಾಯಿತು.

ಗೋವಿಂದ ಉತ್ತರ ಭಾರತದ ದಿಗ್ವಿಜಯವನ್ನು ಕೈಗೊಂಡಾಗ, ನಾಗಭಟ ತನ್ನ ವೈಭವದ ತುತ್ತತುದಿಯಲ್ಲಿದ್ದನು. ಸೋಲನುಭವಿಸಿದ ಧರ್ಮಪಾಲ ರಾಷ್ಟ್ರಕೂಟ ದೊರೆ ಗೋವಿಂದನಿಗೆ ನಾಗಭಟನ ಸೊಕ್ಕನ್ನಡಗಿಸಲು ಕರೆ ನೀಡಿರಬೇಕು. ಗೋವಿಂದನ ಶಾಸನಗಳಾವುವೂ ಅವನ ಈ ದಂಡಯಾತ್ರೆಯ ಕೂಲಂಕಷ ವಿವರವನ್ನು ನೀಡುವುದಿಲ್ಲ. ಆದರೆ ಅವನ ಮಗನಾದ ಅಮೋಘ ವರ್ಷನ ಶಾಸನಗಳು ಸಾಕಷ್ಟು ಸಾಮಗ್ರಿಗಳನ್ನು ಒದಗಿಸುತ್ತವೆ.

ಆ ಸಮಯದಲ್ಲಿ ಗುಜರಾತ್ ಮತ್ತು ಮಾಳವದಲ್ಲಿ ಆಡಳಿತದ ಸೂತ್ರಗಳನ್ನು ವಹಿಸಿದ್ದ ಯುವರಾಜ ತಮ್ಮನಾದ ಇಂದ್ರನಿಗೆ ನಾಗಭಟನ ಸೈನ್ಯ ವಿಂಧ್ಯದ ಕಣಿವೆಯ ಮೂಲಕ ದಕ್ಷಿಣಕ್ಕೆ ಹೋಗದಂತೆ ಕಣ್ಣಿಟ್ಟಿರಬೇಕೆಂದು ಹೇಳಿ, ತಾನು ಕನೋಜಿನತ್ತ ಹೋದ. ನಾಗಭಟ ಗೋವಿಂದನ ಆಕ್ರಮಣವನ್ನು ಎದುರಿಸಲು ಮುಂದಾದನು. ಬಹುಶಃ ಝಾನ್ಸಿ ಗ್ವಾಲಿಯರ್‌ಗಳ ನಡುವೆ ಎಲ್ಲೋ ಇವರಿಬ್ಬರಿಗೂ ಯುದ್ಧವಾಗಿರಬೇಕು. ಯುದ್ಧದಲ್ಲಿ ನಾಗಭಟ ಸೋತು ರಜಪುತಾನಕ್ಕೆ ಓಡಿದ ಚಕ್ರಾಯುಧ ತಾನಾಗಿಯೇ ಬಂದು ಗೋವಿಂದನಿಗೆ ಶರಣಾಗತನಾದ; ಹಾಗೆಯೇ ಧರ್ಮಪಾಲ ಸಹ. ಆದ್ದರಿಂದ ಗೋವಿಂದನಿಗೆ ಕನೋಜನ್ನು ಆಕ್ರಮಿಸುವ ಪ್ರಮೇಯವೇ ಬೀಳಲಿಲ್ಲ.

ಉತ್ತರದ ದಿಗ್ವಿಜಯವನ್ನು ಮುಗಿಸಿಕೊಂಡು ಹಿಂದಿರುಗುವ ವೇಳೆಗೆ ದಕ್ಷಿಣದ ದ್ರಾವಿಡ ರಾಜರು ಪಲ್ಲವ, ಪಾಂಡ್ಯ, ಕೇರಳ, ಮತ್ತು ಗಂಗ—ಎಲ್ಲ ಒಟ್ಟಾಗಿ ಗೋವಿಂದನ ಸಾರ್ವಭೌಮತ್ವವನ್ನು ನಾಶಪಡಿಸಲು ಯತ್ನ ನಡಸಿದ್ದರು. ಈ ಸುದ್ದಿ ತಿಳಿದ ಕೂಡಲೇ ಗೋವಿಂದ ಸೈನ್ಯಸಮೇತನಾಗಿ ಬಂದು ೮೦೨-೦೩ರಲ್ಲಿ ಅವರನ್ನು ಸೋಲಿಸಿದನು. ಕಂಚಿಯೂ ಪಾಂಡ್ಯ ಕೇರಳ ದೇಶಗಳೂ ಅಧೀನಕ್ಕೊಳಪಟ್ಟವು. ಇದನ್ನರಿತ ಸಿಲೋನಿನ ದೊರೆ ಹೆದರಿ ಕಾಣಿಕೆಗಳನ್ನು ತಲುಪಿಸಿದ. ಅಲ್ಲಿಂದ ಹಿಂದಿರುಗಿದ ಮೇಲೆ ಗೋವಿಂದನು ವೆಂಗಿಯ ಚಾಲುಕ್ಯರ ಮೇಲೆ ಯುದ್ಧ ಕೈಗೊಂಡ. ಇಲ್ಲಿಯವರೆಗೂ ನಂಟಸ್ತಿಕೆ ಕಾರಣವಾಗಿ ವೆಂಗಿಯ ಚಾಲುಕ್ಯರ ತಂಟೆಗೆ ಹೋಗಿರಲಿಲ್ಲ. ವಿಷ್ಣುವರ್ಧನ ತನ್ನ ತಾತನಾಗಿದ್ದ. ಆದರೆ ವಿಷ್ಣುವರ್ಧನನ ಕಾಲವಾಗಿ ಎರಡನೆಯ ವಿಕ್ರಮಾದಿತ್ಯ ೭೯೯ರಲ್ಲಿ ಪಟ್ಟಕ್ಕೆ ಬಂದ ಮೇಲೆ ಮೊದಲಿನ ಸಾಮರಸ್ಯ ಮಾಯವಾಯಿತು. ವಿಜಯಾದಿತ್ಯ ಗೋವಿಂದನ ದೀನ ಮಾಂಡಲಿಕನಾಗಿರಲು ಇಚ್ಛಿಸದೆ ದಂಗೆಯೆದ್ದ ಅವನ ತಮ್ಮನಾದ ಭೀಮ ತಾನು ರಾಜನಾಗಬೇಕೆಂದು ಗೋವಿಂದನ ಸಹಾಯ ಯಾಚಿಸಿದ. ಗೋವಿಂದ ಈ ಸಂದರ್ಭವನ್ನು ಉಪಯೋಗಿಸಿಕೊಂಡು ವಿಜಯಾದಿತ್ಯನನ್ನು ಸೋಲಿಸಿ ಭೀಮನನ್ನು ಸಿಂಹಾಸನಕ್ಕೇರಿಸಿದ. ಭೀಮ ಗೋವಿಂದನ ನಮ್ರ ಮಾಂಡಲಿಕನಾಗಿದ್ದನು.

ಗೋವಿಂದನ ಆಡಳಿತದ ಮುಗಿತಾಯದ ೫-೬ ವರ್ಷಗಳಲ್ಲಿ ಯಾವ ಯುದ್ಧಗಳನ್ನೂ ಮಾಡಬೇಕಾಗಿ ಬರಲಿಲ್ಲ. ಏಕೆಂದರೆ ಇವನ ಸಾರ್ವಭೌಮತ್ವವನ್ನು ಪ್ರಶ್ನಿಸುವ ಯಾವುದೇ ರಾಜಮನೆತನ ದೇಶದಲ್ಲಿ ಇರಲಿಲ್ಲ. ಸು. ೮೧೪ರಲ್ಲಿ ಮಡಿದ ಗೋವಿಂದ ರಾಷ್ಟ್ರಕೂಟ

ರಲ್ಲಿ ಬಹು ಸಮರ್ಥ ದೊರೆ. ಕನೋಜಿನಿಂದ ಕನ್ಯಾಕುಮಾರಿಯವರೆಗೂ ದಿಗ್ವಿಜಯವನ್ನು ನಡಸಿದ. ಉತ್ತರದ ನಾಗಭಟ, ಧರ್ಮಪಾಲ, ಚಕ್ರಾಯುಧ, ದಕ್ಷಿಣದ ದ್ರಾವಿಡ ರಾಜರು, ವೆಂಗಿಯ ವಿಜಯಾದಿತ್ಯ—ಎಲ್ಲರನ್ನೂ ಸೋಲಿಸಿ ಶರಣಾಗತರನ್ನಾಗಿಸಿದ. ತನ್ನ ರಾಜ್ಯದ ಎಲ್ಲೆ ಗಂಗವಾಡಿಯಿಂದ ಮಾಳವದವರೆಗೆ ವಿಸ್ತರಿಸುವಂತೆ ಮಾಡಿದ. ಧೈರ್ಯಸ್ಥೈರ್ಯಗಳು, ಮುಂದಾಳುತನ, ಸಂಘಟನೆಯ ಶಕ್ತಿ ಇವೇ ಆತನ ಸಾರ್ಥಕ ರಾಜಕೀಯ ಬದುಕಿನ ವಿಜಯಕ್ಕೆ ಕಾರಣಗಳಾದುವು.

ಗೋವಿಂದನ ಬಳಿಕ ಅವನ ಮಗನಾದ ಅಮೋಘವರ್ಷ ಪಟ್ಟಕ್ಕೆ ಬಂದನು. ಇವನಿಗೆ 'ನೃಪತುಂಗ', 'ರಟ್ಟಮಾರ್ತಾಂಡ', 'ಅತಿಶಯಧವಳ', 'ಪೃಥ್ವೀವಲ್ಲಭ' ಮೊದಲಾದ ಬಿರುದುಗಳಿದ್ದುವು. ಇವನಿನ್ನೂ ಚಿಕ್ಕವಯಸ್ಸಿನವನಾದ್ದರಿಂದ ಮೊದಲೇ ತಂದೆ ಮಾಡಿದ್ದ ಏರ್ಪಾಡಿನಂತೆ ಗುಜರಾತಿನಲ್ಲಿ ಪ್ರಾಂತಾಧಿಕಾರಿಯಾಗಿದ್ದ ಇದೇ ಮನೆತನದ ಸೋದರಸಂಬಂಧಿ ಕರ್ಕ ಆಡಳಿತವಿಷಯದಲ್ಲಿ ಸಹಾಯಕನಾದ. ಕೆಲವು ವರ್ಷಗಳು ನಿರ್ವಿಘ್ನವಾಗಿ ಸಾಗಿದರೂ ೮೧೭ರಲ್ಲಿ ದಂಗೆಯುಂಟಾಯಿತು. ಈ ದಂಗೆಗೆ ಕಾರಣ ಕರ್ತರು ಯಾರು ಎಂಬುದು ನಿಖರವಾಗಿ ತಿಳಿದು ಬರುವುದಿಲ್ಲ. ಆದರೂ ಮಾಂಡಲಿಕರು, ಮಂತ್ರಿಗಳು, ಸಂಬಂಧಿಕರು ಮೊದಲಾದವರು ದಂಗೆಯಲ್ಲಿ ಭಾಗವಹಿಸಿದ್ದರೆಂದು ತತ್ಕಾಲೀನ ದಾಖಲೆಗಳಿಂದ ತಿಳಿದು ಬರುತ್ತದೆ.[18]

ಏನೇ ಆಗಲಿ, ಈ ದಂಗೆಯನ್ನು ಸು. ೮೨೧ರಲ್ಲಿ ಅಡಗಿಸಿದ ಕರ್ಕ ಮತ್ತೆ ಅಮೋಘವರ್ಷನನ್ನು ಸಿಂಹಾಸನಕ್ಕೆ ತಂದನು. ಒಂದೆರಡು ವರ್ಷಗಳಲ್ಲಿ ತಮ್ಮ ಕೈಬಿಟ್ಟಿದ್ದ ರಾಜ್ಯದ ಪೂರ್ವ ಮತ್ತು ದಕ್ಷಿಣ ಜಿಲ್ಲೆಗಳನ್ನು ವಶಪಡಿಸಿಕೊಂಡರು. ಬಳಿಕ ರಾಷ್ಟ್ರಕೂಟರ ಕೈಮೇಲಾಗಿ ವಿಂಗವಳ್ಳಿಯ ಹತ್ತಿರ ಚಾಲುಕ್ಯರು ಸಂಪೂರ್ಣವಾಗಿ ಸೋತು ಹೋದರೆಂದು ಈಚಿನ ರಾಷ್ಟ್ರಕೂಟ ದಾಖಲೆಗಳು ಸಾರುತ್ತವೆ. ಮತ್ತೆ ವಿಜಯಾದಿತ್ಯನ ಮೊಮ್ಮಗನಾದ ಗುಣಗ ವಿಜಯಾದಿತ್ಯ ೮೪೪ರಲ್ಲಿ ರಾಷ್ಟ್ರಕೂಟವಶದಲ್ಲಿದ್ದ ವೆಂಗಿಯನ್ನು ಪಡೆದುಕೊಂಡ. ಇದು ನಡೆದಾಗ ಅಮೋಘವರ್ಷ ಗುಜರಾತಿನ ದಾಯಾದಿಗಳೊಡನೆ ಹೋರಾಡುತ್ತಿದ್ದುದರಿಂದ ವೆಂಗಿಯತ್ತ ಗಮನ ಕೊಡಲಾಗಲಿಲ್ಲವೆಂದು ತೋರುತ್ತದೆ. ಚಾಲುಕ್ಯರು ತಮ್ಮ ರಾಜಧಾನಿಯನ್ನು ಪಡೆದುಕೊಂಡ ಮೇಲೆ ರಾಷ್ಟ್ರಕೂಟರ ತಂಟೆಗೆ ಬರದೆ ಸುಮ್ಮನಿದ್ದರು. ಇತ್ತ ರಾಷ್ಟ್ರಕೂಟ ಗಂಗರ ಮಧ್ಯೆಯೂ ತಿಕ್ಕಾಟಗಳಾಗುತ್ತಿದ್ದುವು. ಅಮೋಘವರ್ಷ ತನ್ನ ಮಗಳಾದ ಚಂದ್ರೊಬ್ಬಲಬ್ಬೆಯನ್ನು ರಾಜಮಲ್ಲನ ಮೊಮ್ಮಗನಾದ ಬೂತುಗನಿಗೆ ಕೊಟ್ಟು ವಿವಾಹ ಮಾಡಿ ಹೋರಾಟವನ್ನು ಕೊನೆಗಾಣಿಸಿದನು.

ಅಮೋಘವರ್ಷನ ಕಾಲದಲ್ಲಿ ಕೆಲವು ಯುದ್ಧಗಳು ಜರುಗಿದರೂ, ಆತನ ಸು. ೬೨ ವರ್ಷಗಳ ಸುದೀರ್ಘ ಆಳ್ವಿಕೆಯ ಕಾಲದಲ್ಲಿ ಶಾಂತಿ, ಧರ್ಮ ಮತ್ತು ಸಾಹಿತ್ಯಗಳ ಬೆಳವಣಿಗೆಗೆ ತಕ್ಕ ವಾತಾವರಣ ಏರ್ಪಟ್ಟಿತ್ತು. ಆತ ಸ್ವತಃ ಒಳ್ಳೆಯ ಸಾಹಿತ್ಯಜ್ಞನೂ ಕವಿ ವಿದ್ವಜ್ಜನ ಪೋಷಕನೂ ಆಗಿದ್ದನೆಂಬುದಕ್ಕೆ ಬೇಕಾದಷ್ಟು ದಾಖಲೆಗಳಿವೆ. 'ಕವಿರಾಜ

ಮಾರ್ಗ'ವೆಂಬ ಕನ್ನಡದ ಉಪಲಬ್ಧ ಪ್ರಾಚೀನತಮ ಗ್ರಂಥ ಆತನೇ ರಚಿಸಿದ್ದನ್ನೆಲಾಗಿದೆ. ಇದನ್ನೊಪ್ಪದ ಕೆಲವರು ಆತನ ಆಸ್ಥಾನಿಕನಾದ ಶ್ರೀವಿಜಯನೆಂಬ ಜೈನಕವಿಯೊಬ್ಬನು ರಚಿಸಿದ್ದೆನ್ನುತ್ತಾರೆ. 'ಪಾರ್ಶ್ವಾಭ್ಯುದಯ' 'ಪೂರ್ವಪುರಾಣ'ಗಳನ್ನು ರಚಿಸಿದ ಜಿನಸೇನಾಚಾರ್ಯನು ನೃಪತುಂಗನ ಗುರು; ಜಿನಸೇನನ ಶಿಷ್ಯ ಗುಣಭದ್ರಾಚಾರ್ಯ ಇದೇ ಕಾಲದಲ್ಲಿದ್ದು 'ಉತ್ತರಪುರಾಣ'ವನ್ನು ರಚಿಸಿದ. ಜಿನಸೇನ—ಗುಣಭದ್ರರ ಸಂಯುಕ್ತ ಗ್ರಂಥ ಮಹಾಪುರಾಣವೆನಿಸಿ ಸಂಸ್ಕೃತ ಜೈನಸಾಹಿತ್ಯದಲ್ಲಿ ಉದ್ದಾಮಗ್ರಂಥವೆಂದು ಖ್ಯಾತವಾಗಿದೆ; ಇದನ್ನು ಆಧಾರವಾಗಿಟ್ಟುಕೊಂಡು ಈಚೆಗೆ ಹಲವು ಕನ್ನಡ ಜೈನ ಕವಿಗಳು ಬೇರೆಬೇರೆ ತೀರ್ಥಂಕರ ಪುರಾಣಗಳನ್ನು ಕನ್ನಡದಲ್ಲಿ ಬರೆದಿರುವುದು ಕಂಡುಬರುತ್ತದೆ. ಈ ಕಾರಣದಿಂದ ಕನ್ನಡ ಸಾಹಿತ್ಯದ ಬೆಳೆವಣಿಗೆಯಲ್ಲಿ ಅಮೋಘವರ್ಷನ ಕಾಲ, ಆತನ ಗುರುವೃಂದದ ಸೇವೆ ಚಿರಸ್ಮರಣೀಯವಾಗಿದೆ. ಶಾಕಟಾಯನನೆಂಬ ಜೈನವೈಯಾಕರಣನು 'ಶಬ್ದಾನುಶಾಸನ'ವನ್ನೂ ಅದಕ್ಕೆ 'ಅಮೋಘವೃತ್ತಿ'ಯೆಂಬ ಟೀಕೆಯನ್ನೂ ಈ ಕಾಲದಲ್ಲಿ ರಚಿಸಿದ. 'ಗಣಿತಸಾರಸಂಗ್ರಹ'ವೆಂಬ ಗಣಿತಶಾಸ್ತ್ರಗ್ರಂಥವನ್ನು ಬರೆದ ಮಹಾವೀರಾಚಾರ್ಯ ಈ ಕಾಲದಲ್ಲಿಯೇ ಇದ್ದನು. ರಾಷ್ಟ್ರಕೂಟರಲ್ಲಿ ೩ನೆಯ ಗೋವಿಂದನು ದಿಗ್ವಿಜಯಗಳಿಂದ ಪ್ರಸಿದ್ಧನಾಗಿದ್ದರೆ, ಅವನ ಮಗನಾದ ಅಮೋಘವರ್ಷ ನೃಪತುಂಗನು ತನ್ನ ರಾಜ್ಯದಲ್ಲಿ ಶಾಂತಿಯನ್ನು ನೆಲೆಗೊಳಿಸಿ ಲಲಿತಕಲೆಗಳಿಗೆ ಪ್ರೋತ್ಸಾಹವನ್ನು ಕೊಟ್ಟು ಕನ್ನಡನಾಡಿನ ಕೀರ್ತಿಯನ್ನು ಎತ್ತಿಹಿಡಿದನೆನ್ನಬಹುದು.

ಇದುವರೆಗೆ ಆಳಿದ ರಾಷ್ಟ್ರಕೂಟರ ನೂರಾರು ಕನ್ನಡ ಶಾಸನಗಳು ನಮಗೆ ಲಭ್ಯವಾಗಿವೆ. ಹೆಚ್ಚಿನಮಟ್ಟಿಗೆ ಅವೆಲ್ಲ ಗದ್ಯಶಾಸನಗಳೇ. ಆದರೆ ಇವರ ತಾಮ್ರಶಾಸನಗಳಿಂದ ಇವರು ಸಂಸ್ಕೃತವನ್ನು ಇನ್ನೂ ಆಡಳಿತ ಭಾಷೆಗಳಲ್ಲೊಂದಾಗಿ ಉಪಯೋಗಿಸುತ್ತಿದ್ದರೆಂದು ತಿಳಿದುಬರುತ್ತದೆ. ಜನಪ್ರಿಯವೂ ಸಮ್ಮತವೂ ಆದ ಕನ್ನಡ ಭಾಷೆಯನ್ನು ಹೆಚ್ಚು ಹೆಚ್ಚಾಗಿ ಆಡಳಿತದಲ್ಲಿ ಉಪಯೋಗಿಸುತ್ತಿದ್ದ ಕೀರ್ತಿ ಇವರಿಗೆ ಸಲ್ಲಬೇಕು. ಇಮ್ಮಡಿ ಶಿವಮಾರನ 'ಗಜಾಷ್ಟಕ' ಈ ಕಾಲದ ಅಂತ್ಯಭಾಗಕ್ಕೆ ಸೇರಿದ್ದೆಂಬುದನ್ನು ಇಲ್ಲಿ ನೆನೆಯಬೇಕು. ಇದರಿಂದ ಕನ್ನಡಸಾಹಿತ್ಯ ಸಹ ಕ್ರಮೇಣ ಮುನ್ನಡೆಹೊಂದಿತ್ತೆಂಬುದು ತಿಳಿದುಬರುತ್ತದೆ. ಆದರೆ ಸಾಹಿತ್ಯ ಗ್ರಂಥಗಳು ದೊರೆತಿಲ್ಲವೆಂಬುದು ವಿಚಾರಣೀಯವಾದ ಅಂಶ.

## ಅಡಿಟಿಪ್ಪಣಿಗಳು

1 B. L, Rice, *Mysore and Coorg from the Inscriptions*, London, 1909, p. 3.

2–4 G. Yazdani (ed), *Early History of the Deccan*, pt. I-VI, p. 68 ; 69.

5–7 *KTA*., p. 99.

8 ಎನ್. ಲಕ್ಷ್ಮೀನಾರಾಯಣರಾವ್, ಆರ್. ಎಸ್. ಪಂಚಮುಖಿ, 'ಕರ್ನಾಟಕದ ಅರಸು ಮನೆತನಗಳು', ಪು. ೧.

9 Hultzch, *Inscriptions of Asoka*, p. xxxviii.
10 P. B. Desai, *Jainism in South India and Some Jaina Epigraphs*, p. 20.
11-12 ಶಂ. ಬಾ. ಜೋಶಿ, 'ಕರ್ನಾಟಕ ಸಂಸ್ಕೃತಿಯ ಪೂರ್ವಪೀಠಿಕೆ', ಪು. ೩೮ ; ೧೩೧.
13 *Mysore Gazetteer*, II, p. 625.
14 'ಕವಿರಾಜಮಾರ್ಗ', ಐ. ಬಿ. ಎಚ್. ಪ್ರಕಾಶನ, ೧೯೭೩, ಪು. ೧೨.
15 *Mysore Gazetteer*, II, p. 625.
16 *EC.*, VIII, Nr. 35.
17–18 G. Yazdani (ed), op. cit., p. 254 ; 273.

ಅಧ್ಯಾಯ ಮೂರು

# ಕರ್ಣಾಟಕದ ಧಾರ್ಮಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಜನಜೀವನ

## ಧರ್ಮ

ಸಾಹಿತ್ಯಸೃಷ್ಟಿ ಮಾನವನ ಮನೋರಂಗದ ಚಟುವಟಿಕೆಗೆ ಸಂಬಂಧಿಸಿದ್ದು. ಆದ್ದರಿಂದ ಸಹಜವಾಗಿ ಆ ರಂಗದ ಇತರ ಚಟುವಟಿಕೆಗಳ ಪ್ರಭಾವ ಇದರ ಮೇಲೆ ಗಾಢವಾಗಿರುತ್ತದೆ. ಮಾನವನ ಇತಿಹಾಸದಲ್ಲಿ ಬಹು ಪರಿಣಾಮಕಾರಿಯಾದ ಪಾತ್ರವನ್ನು ವಹಿಸಿದ ಮನೋರಂಗದ ಮತ್ತೊಂದು ವ್ಯಾಪಾರವೆಂದರೆ ಧರ್ಮ. ಹಲವು ಸಮಾಜ ಶಾಸ್ತ್ರಜ್ಞರ ಮತ್ತು ಇತಿಹಾಸಕಾರರ ಅಭಿಪ್ರಾಯದಲ್ಲಿ ಪ್ರಜ್ಞಾಶೀಲ ಮಾನವನ ಎಲ್ಲ ಸೃಷ್ಟ್ಯಾತ್ಮಕ ಕಾರ್ಯಗಳೂ—ಅದರಲ್ಲೂ ಕಲೆ ಸಾಹಿತ್ಯ ಮುಂತಾದುವು—ಮೂಲತಃ ಉಗಮವಾದ್ದು ಧಾರ್ಮಿಕ ಭೂಮಿಕೆಯಿಂದಲೇ. ಯಾವುದೇ ದೇಶದ ಕಲೆ ಸಾಹಿತ್ಯಗಳ ಪ್ರಾಚೀನ ಇತಿಹಾಸವನ್ನು ಗಮನಿಸಿದರೆ ಹೆಚ್ಚಿನ ಕೃತಿಗಳು ಧರ್ಮಸಂಬಂಧವಾದುವೇ ಆಗಿರುತ್ತಿದ್ದುವೆಂಬುದು ಎದ್ದು ಕಾಣುತ್ತದೆ. ಈ ಪರಿಸ್ಥಿತಿಯಲ್ಲಿ ಒಂದು ದೇಶದ ಸಾಹಿತ್ಯದ ಉಗಮವನ್ನು ತಿಳಿಯಲು, ಪ್ರಾಚೀನ ಸಾಹಿತ್ಯದಲ್ಲಿ ವ್ಯಕ್ತವಾಗುವ ವಸ್ತುವಿನ ರೀತಿನೀತಿ ಮತ್ತು ಕಾವ್ಯದ ಸೂಕ್ಷ್ಮತೆಗಳನ್ನು ಅರ್ಥಮಾಡಿಕೊಳ್ಳಲು ಹಾಗೂ ಮೂಲ ವಸ್ತುವನ್ನು ಅಭಿವ್ಯಕ್ತಗೊಳಿಸಲು ಕವಿ ಬಳಸಿರುವ ಮಾರ್ಗ, ತಿರುವು ಇವುಗಳನ್ನು ಗುರುತಿಸಿ ಕೃತಿಗಳ ನೈಜಮೌಲ್ಯವನ್ನು ಆ ಹಿನ್ನೆಲೆಯಲ್ಲಿ ಅರಿಯಲು, ಸಮಕಾಲೀನ ಧಾರ್ಮಿಕ ಸ್ಥಿತಿಯ ಅರಿವು ಅವಶ್ಯವಾಗಿರುತ್ತದೆ.

ಆದಿಕಾಲದಿಂದ ಕ್ರಿ.ಶ. ೮೫೦ರ ವರೆಗಿನ ಕರ್ಣಾಟಕದ ಇತಿಹಾಸದಲ್ಲಿ ಜನಪದ, ಹಿಂದು (ವೈದಿಕ, ಪೌರಾಣಿಕ), ಬೌದ್ಧ ಮತ್ತು ಜೈನಧರ್ಮಗಳು ಪ್ರಚಲಿತವಾಗಿದ್ದುವು. ಇವುಗಳಲ್ಲಿ ಕೊನೆಯ ಮೂರು ಉತ್ತರಭಾರತದಲ್ಲಿ ಉಗಮಹೊಂದಿ ಕೆಲವು ಚಾರಿತ್ರಿಕ ಕಾರಣಗಳಿಂದ ಕರ್ಣಾಟಕದಲ್ಲೂ ಹರಡಿದುವು. ಈ ನಾಡಿನಲ್ಲಿ ಇವುಗಳ ಇತಿಹಾಸವನ್ನು ರೂಪಿಸಲು ಗ್ರಾಂಥಿಕ ಮತ್ತು ಪುರಾತಾತ್ತ್ವಿಕ ಮಾಹಿತಿಗಳು ದೊರಕುತ್ತವೆ. ಮೊದಲನೆಯದಾದರೋ ಇದೇ ನಾಡಿನಲ್ಲಿ ಬಹು ಹಿಂದೆ, ಬಹುಶಃ ಪ್ರಾಗೈತಿಹಾಸಿಕ ಕಾಲದಲ್ಲಿಯೇ, ಅಂದಿನ ಸರಳಸಮಾಜದ ಸುಲಭ ಮನೋಭೂಮಿಕೆಗೆ

ಒಗ್ಗುವ ರೀತಿಯಲ್ಲಿ ರೂಪಿತವಾಗಿ ಬಹುಸಂಖ್ಯಾತ ಜನಪದದಲ್ಲಿ ಇಂದಿಗೂ ಮುಂದು ವರೆದುಕೊಂಡು ಬಂದಿದೆ. ಸಾಹಿತ್ಯಕೃತಿಗಳು, ಶಿಲಾ ಮತ್ತು ತಾಮ್ರಶಾಸನಗಳು ಇತ್ಯಾದಿಗಳೆಲ್ಲ ಬಹುಮಟ್ಟಿಗೆ ನಾಗರಿಕ ಸಮಾಜಗಳ ಕೃತಿಗಳೇ ಆದ್ದರಿಂದ, ಇವುಗಳಲ್ಲಿ ಈ ಧರ್ಮದ ಬಗ್ಗೆ ಆಧಾರಗಳು ದೊರಕುವುದು ಸ್ವಲ್ಪ. ಆದರೂ ವೈಚಾರಿಕ ಜಿಜ್ಞಾಸೆ ಯಿಂದ ರೂಪಿತವಾಗಿ ಭದ್ರವಾದ ತಾತ್ತ್ವಿಕ ನೆಲೆಗಟ್ಟಿನ ಮೇಲೆ ನಿಂತಿರುವ ಔತ್ತರೇಯ ಧರ್ಮಗಳು ಪ್ರಚಾರಕ್ಕೆ ಬಂದ ಸುಮಾರು ಎರಡು ಅಥವ ಎರಡೂವರೆ ಸಹಸ್ರ ವರ್ಷ ಗಳ ಅನಂತರದಲ್ಲಿ, ಇಂದೂ ಈ ಜನಪದ ಧರ್ಮದ ಪ್ರಭಾವ ನಮ್ಮ ಗ್ರಾಮೀಣ ಸಮಾಜದಲ್ಲಿ ಸಾಕಷ್ಟು ಮಟ್ಟಿಗೆ ಉಳಿದುಕೊಂಡಿರುವುದನ್ನು ನೋಡಿದರೆ, ಪ್ರಸಕ್ತ ಅಧ್ಯಯನದ ಕಾಲದಲ್ಲಿ ಅದರ ಪ್ರಭಾವ ಇನ್ನೂ ಗಾಢವಾಗಿರಬೇಕು ಎನ್ನುವುದರಲ್ಲಿ ಸಂದೇಹವಿರಲಾರದು. ಆದರೆ ತತ್ಕಾಲೀನ ಜನಪದ ಧರ್ಮದ ನಿರೂಪಣೆ ಆಧಾರಗಳ ಕೊರತೆಯಿಂದಾಗಿ ಕ್ಲಿಷ್ಟವಾಗುತ್ತದೆ. ಬಹುಹಿಂದಿದ್ದ ಈ ಧರ್ಮದ ಬಗ್ಗೆ ಪ್ರಾಗೈತಿಹಾಸಿಕ ವಸ್ತುಗಳಿಂದ ದೊರಕುವ ಅಲ್ಪಸ್ವಲ್ಪ ಮಾಹಿತಿಗಳು ಮತ್ತು ಇಂದಿನ ಜನಪದದಲ್ಲಿ ರೂಢಿ ಯಲ್ಲಿರುವ ಧರ್ಮಸ್ವರೂಪ ಇವನ್ನು ಆಶ್ರಯಿಸಬೇಕಾಗುತ್ತದೆ.

## ಪ್ರಾಗೈತಿಹಾಸಿಕ ಕಾಲ

**ಹಳೆಯ ಶಿಲಾಯುಗಗಳು :** ಸುಮಾರು ನಾಲ್ಕು ಲಕ್ಷ ವರ್ಷಗಳ ಹಿಂದಿನಿಂದಲಾದರೂ ಕರ್ಣಾಟಕದಲ್ಲಿ ಮಾನವ ಇದ್ದ ಬಗ್ಗೆ ಪುರಾತತ್ತ್ವ ಮಾಹಿತಿಗಳು ದೊರಕುತ್ತವೆ.[1] ಬಹು ಪ್ರಾಚೀನ ಪ್ರಾಗೈತಿಹಾಸಿಕ ಘಟ್ಟಗಳಾದ ಆದಿ, ಮಧ್ಯ ಮತ್ತು ಅಂತ್ಯ ಶಿಲಾಯುಗ ಕಾಲಗಳಲ್ಲಿ ಮಾನವ ತನ್ನ ಬದುಕಿಗಾಗಿ ಬಹುಮಟ್ಟಿಗೆ ನಿಸರ್ಗಾವಲಂಬಿಯಾಗಿದ್ದ. ದುಷ್ಟಪ್ರಾಣಿಗಳು, ಹವೆಯಲ್ಲಿನ ವ್ಯತ್ಯಾಸಗಳು, ನೀರು ಆಹಾರಗಳ ದೊರೆಯುವಿಕೆ ಅಥವಾ ಇಲ್ಲದಿರುವಿಕೆ ಇಂಥ ನೈಸರ್ಗಿಕ ಕಾರಣಗಳಿಂದ ಅವನ ಉಳಿವು ನಿರ್ಧರಿತವಾಗು ತ್ತಿತ್ತು. ಮಾನವ ತಳಿಯ ವಿಕಸನದಲ್ಲಿ ಈ ಘಟ್ಟ ಅವನ ಪ್ರಜ್ಞಾಶಕ್ತಿ ಬೆಳೆಯುತ್ತಿದ್ದ ಕಾಲ. ಆದ್ದರಿಂದ ಈ ಸಂದರ್ಭದಲ್ಲಿ ಮಾನವನ ಆಗುಹೋಗುಗಳನ್ನು ತೀರ್ಮಾನಿಸು ತ್ತಿದ್ದ ಅತೀತ ಶಕ್ತಿಗಳ ಕಲ್ಪನೆ ಅವನಲ್ಲಿ ಮೂಡಿರುವುದು ಸಹಜ. ಧಾರ್ಮಿಕ ನಂಬಿಕೆಗಳ, ಅದರಲ್ಲೂ ದೇವರ, ಕಲ್ಪನೆಯ ಮೂಲವಿರುವುದು ಇಲ್ಲಿ. ಆದರೆ ಅಂದು ಈ ನಾಡಿನಲ್ಲಿದ್ದ ಜನರ ಕಲ್ಪನೆಗಳು, ನಂಬಿಕೆಗಳು, ಆಚರಣೆಗಳು ಹೇಗಿದ್ದುವು ಎಂಬ ಬಗ್ಗೆ ನಮಗೆ ಈತನಕ ಯಾವ ಮಾಹಿತಿಯೂ ದೊರಕಿಲ್ಲ. ಯೂರೋಪ್ ಖಂಡದ ಶಿಲಾಯುಗದ ಕಾಲದಲ್ಲಿ ಅಲ್ಲಿನ ಗುಹಾಚಿತ್ರಗಳು ಮತ್ತು ಸಮಾಧಿಗಳ ಆಧಾರಗಳಿಂದ ಅಂದಿನ ಜನ ಗಳಲ್ಲಿ ಮಾನವ ಜೀವನವನ್ನು ನಿರ್ಧರಿಸುವ ಮಾನವಾತೀತ ಶಕ್ತಿಯ ಕಲ್ಪನೆ, ಅವು ಗಳನ್ನು ಒಲೈಸುವ ಅಥವಾ ಅವುಗಳಿಂದುಂಟಾಗಬಹುದಾದ ಕೆಟ್ಟಪರಿಣಾಮಗಳನ್ನು ತಡೆ ಯುವ ಪೂಜೆ, ಮಾಟ, ಮಂತ್ರ ಇತ್ಯಾದಿಗಳು, ಮೃತರ ಬಗ್ಗೆ ಭಯ ಅಥವಾ ಗೌರವ ಮುಂತಾದ ನಂಬಿಕೆ ಮತ್ತು ಅದಕ್ಕೆ ಸಂಬಂಧಿಸಿದ ಆಚರಣೆಗಳು ರೂಢವಾಗಿದ್ದುವೆಂದು

ತಿಳಿಯುತ್ತದೆ. ಆರ್ಥಿಕ ಸಾಮಾಜಿಕವಾಗಿ ಕರ್ನಾಟಕದ ಶಿಲಾಯುಗದಲ್ಲೂ ಆ ಸ್ಥಿತಿಯೇ ಇದ್ದಿತಾಗಿ ಧಾರ್ಮಿಕರಂಗದಲ್ಲೂ ಅಂಥ ಭಾವನೆಗಳು ಪ್ರಚಲಿತವಾಗಿರಬಹುದೆಂದು ಊಹಿಸಬಹುದಾಗಿದೆ. ಆ ಕಾಲದಲ್ಲಿ ಉದ್ಭವವಾದ ಹಲವು ನಂಬಿಕೆಗಳು ಮತ್ತು ನಡವಳಿಕೆಗಳು ಮುಂದೆ ಜನಪದ ಧರ್ಮದ ಅಂಗವಾಗಿ ಉಳಿದುಕೊಂಡು ಬಂದಿರಬೇಕು.[2]

ನವಶಿಲಾಯುಗ: ಪೂರ್ಣವಾಗಿ ನಿಸರ್ಗಾವಲಂಬಿಯಾಗಿದ್ದ ಮಾನವ ನವಶಿಲಾಯುಗದ ಕಾಲದಲ್ಲಿ ಸ್ವಂತ ಶ್ರಮದಿಂದ ಆಹಾರೋತ್ಪಾದನೆಯನ್ನು ಮಾಡಿಕೊಳ್ಳುವ ಘಟ್ಟವನ್ನು ತಲುಪಿದ್ದ[3] ಇತರ ದೇಶಗಳಲ್ಲಿ ನಡೆದಿರುವ ಅಧ್ಯಯನಗಳಿಂದ ಜನರ ಜೀವನ ವಿಧಾನಗಳು ಬಹುವಾಗಿ ಬದಲಾದ ಈ ಘಟ್ಟದಲ್ಲಿ, ಹೊಸ ಹೊಸ ಧಾರ್ಮಿಕ ನಂಬಿಕೆಗಳೂ ಆಚರಣೆಗಳೂ ಹರಡಿದುವೆಂದು ತಿಳಿಯುತ್ತದೆ. ಅವುಗಳಲ್ಲಿ ಬಹು ವ್ಯಾಪಕ ಪ್ರಭಾವವುಳ್ಳದ್ದು ಫಲವತ್‌ತತ್ತ್ವದ (Fertility) ಕಲ್ಪನೆ (ಮಾತೃತ್ವಶಕ್ತಿ). ಪುನರುತ್ಪಾದನೆಗೆ ಕಾರಣಭೂತವಾದ ಈ ಮಹತ್‌ಶಕ್ತಿಯನ್ನು ನವಶಿಲಾಯುಗದವರು ಗೌರವಿಸುತ್ತಿದ್ದುದು, ಹಲವು ರೀತಿಗಳಲ್ಲಿ ಮೂರ್ತೀಕರಿಸುತ್ತಿದ್ದುದು ಸಹಜವಾಗಿಯೇ ಇದೆ. ಆ ಕಾಲದಲ್ಲಿ ಜೀವನದ ಆರ್ಥಿಕ ಭದ್ರತೆಗೆ ಪುನರುತ್ಪಾದನೆ ಅತ್ಯವಶ್ಯವಾಗಿತ್ತು. ಈ ಮಾತೃತ್ವಶಕ್ತಿಯ ಪರಿಣಾಮ ಮಾನವ ಸಂಖ್ಯಾಭಿವೃದ್ಧಿಗಷ್ಟೇ ಸೀಮಿತವಾಗಿರಲಿಲ್ಲ. ಅವನು ಸಾಕುತ್ತಿದ್ದ ಪ್ರಾಣಿಗಳ ಹಾಗೂ ಬೆಳೆಯುತ್ತಿದ್ದ ಸಸ್ಯಗಳ ಹೆಚ್ಚಳಕ್ಕೆ ಕೂಡ ಮೂಲ ಕಾರಣವಾಗಿತ್ತು. ಕರ್ನಾಟಕದಲ್ಲಿ ಇಂಥ ನಂಬಿಕೆಗಳು ಪಸರಿಸಿದ್ದ ಬಗ್ಗೆ ಸಾಕಷ್ಟು ಮಾಹಿತಿಗಳು ದೊರಕಿಲ್ಲ. ಆದರೆ ಉತ್ತರಕರ್ನಾಟಕದ ಬಳ್ಳಾರಿಜಿಲ್ಲೆಯ ತೆಕ್ಕಲಕೋಟ, ರಾಯಚೂರು ಜಿಲ್ಲೆಯ ಪಿಕ್ಲಿಹಾಳು, ಬಿಜಾಪುರಜಿಲ್ಲೆಯ ಗೊಂಬಿಗುಡ್ಡ; ಸಿಡ್ಲಫಡಿಗುಹೆ ಇತ್ಯಾದೆಡೆಗಳಲ್ಲಿ ಬಂಡೆಗಳ ಮೇಲೆ ಕೊರೆದ ಅಥವಾ ಬಣ್ಣದಲ್ಲಿ ರೂಪಿಸಿದ ದನದ ಚಿತ್ರಗಳಿವೆ. ಮಣ್ಣಿನಲ್ಲಿ ಮಾಡಿದ ದನದ ಬೊಂಬೆಗಳೂ ಪಿಕ್ಲಿಹಾಳಿನಲ್ಲಿ ದೊರಕಿವೆ. ಈ ದನದ ಚಿತ್ರಗಳು ಕೆಲವೊಂದು ಧಾರ್ಮಿಕ ನಂಬಿಕೆಗಳೊಡನೆ ಬೆರತಿರಬೇಕು. ಇಂದಿಗೂ ದೇವತಾಸ್ತರದಲ್ಲಿ ಗೂಳಿಯನ್ನು (ಬಸವ) ಪೂಜಿಸುವ ಸಂಪ್ರದಾಯವನ್ನು ನೋಡಿದರೆ ಇಂಥ ಕಲ್ಪನೆ ನವಶಿಲಾಯುಗ ಕಾಲದಿಂದಲೂ ಪ್ರಚಲಿತವಾಗಿದ್ದಿತ ಬೇಕೆನಿಸುತ್ತದೆ. ಮೇಲೆ ಹೇಳಿದ ರೀತಿಯ ಚಿತ್ರಿತ ಬಂಡೆಗಳು ಆಕಾಲದ ವಾಸದ ನೆಲೆಗಳಿಂದ ದೂರವಿದ್ದು, ಹಲವೆಡೆಗಳಲ್ಲಿ ಬಹು ಕಷ್ಟದಿಂದ ಚಿತ್ರಕರು ಅಂಥ ಸ್ಥಾನಗಳನ್ನು ತಲುಪಿ ಚಿತ್ರಿಸಿರುವುದು ಕಾಣುತ್ತದೆ. ಇಷ್ಟು ಶ್ರಮದ ವ್ಯಯವನ್ನು ನೋಡಿದರೆ ಅವು ಕೇವಲ ಆಟಕ್ಕಾಗಿ ಮಾಡಿದುವಲ್ಲ, ಪ್ರಾಯಶಃ ಅಂಥ ಸ್ಥಳಗಳು ಬಹು ಪವಿತ್ರವೆಂಬ ಭಾವನೆ ಅಂದಿನ ಜನಗಳಲ್ಲಿದ್ದು, ಆ ಚಿತ್ರಗಳು ಯಾವುದೋ ಧಾರ್ಮಿಕ ಆಚರಣೆಯ ಭಾಗವಾಗಿರಬಹುದು ಎಂದು ಊಹಿಸಲು ಅವಕಾಶವಾಗುತ್ತದೆ.[4]

ನವಶಿಲಾಯುಗದ ಜನರ ಧಾರ್ಮಿಕ ನಂಬಿಕೆಗಳ ಬಗ್ಗೆ ಆ ಕಾಲದ ಸಮಾಧಿಗಳೂ ಸಾಕ್ಷ್ಯನೀಡುತ್ತವೆ. ಸತ್ತವರನ್ನು ಹೂಳುವ ಪದ್ಧತಿ ಅಂದು ರೂಢಿಯಲ್ಲಿತ್ತು. ದೊಡ್ಡವರನ್ನು ಗುಂಡಿಯಲ್ಲಿ, ಮಕ್ಕಳ ದೇಹಗಳನ್ನು ದೊಡ್ಡಮಡಕೆಗಳಲ್ಲಿ ಹೂಳುವ ಪದ್ಧತಿ

ಇತ್ತು. ಈ ಸಮಾಧಿಗಳು ವಾಸದ ಮನೆಗಳ ಕೋಣೆಗಳಲ್ಲಿ ಇರುತ್ತಿದ್ದುವು. ಸತ್ತವಂಗಾಗಿ ಹೆಣದ ಜೊತೆಯಲ್ಲಿ ಒಂದೋ ಎರಡೋ ಮಣ್ಣಿನ ಮಡಕೆಗಳನ್ನು ಕೂಡ ಇಟ್ಟಿರುತ್ತಿದ್ದಿತು. ಅವುಗಳಲ್ಲಿ ಒಂದು ಗಿಂಡಿ ಅಥವಾ ತಪ್ಪಲೆ ಹಾಗೂ ಒಂದು ಬೋಗುಣಿ ಸಾಮಾನ್ಯವಾಗಿರುತ್ತಿದ್ದುವು. ಇಂಥ ಸಮಾಧಿಗಳು ಚಿತ್ರದುರ್ಗಜಿಲ್ಲೆಯ ಬ್ರಹ್ಮಗಿರಿ, ರಾಯಚೂರು ಜಿಲ್ಲೆಯ ಪಿಕ್ಲಿಹಾಳುಗಳಲ್ಲಿ ಕಂಡುಬಂದಿವೆ. ಮೈಸೂರು ಜಿಲ್ಲೆಯ ಟಿ. ನರಸೀಪುರದಲ್ಲೂ ಇದೇ ರೀತಿಯ ಒಂದು ಸಮಾಧಿ ಬೆಳಕಿಗೆ ಬಂದಿದೆ. ಇಲ್ಲಿ ಮಡಕೆಗಳ ಜೊತೆಗೆ ಮಣ್ಣಿನಲ್ಲಿ ಮಾಡಿದ ಚಪ್ಪಟೆ ತಲೆಯುಳ್ಳ ಗಂಟೆಯಾಕಾರದ ಒಂದು ವಸ್ತುವನ್ನು ತಲೆಗೆ ಆಧಾರವಾಗಿ ಇಟ್ಟಿದೆ.[5]

ಈ ವಿವರಗಳನ್ನು ಗಮನಿಸಿದಲ್ಲಿ ಮರಣಾನಂತರವೂ ಮಾನವನ ಆತ್ಮ ಅಸ್ತಿತ್ವದಲ್ಲಿರುತ್ತದೆ ಮತ್ತು ಅವುಗಳಿಗೂ ಕೆಲವು ಆವಶ್ಯಕತೆಗಳಿವೆ ಎಂಬ ಕಲ್ಪನೆಗಳು ನವಶಿಲಾಯುಗದ ಜನರಲ್ಲಿದ್ದಿರಬೇಕು ಎಂದು ತೋರುತ್ತದೆ. ಶವಗಳನ್ನು ಮನೆಗಳಲ್ಲೇ ಹೂಳುತ್ತಿದ್ದುದನ್ನು ನೋಡಿದರೆ, ವ್ಯಕ್ತಿಗಳು ಸತ್ತಮೇಲೂ ಅದೇ ಮನೆಯಲ್ಲೇ ಅಥವಾ ವಂಶದಲ್ಲೇ ಪುನರ್ಜನಿಸುವರೆಂಬ ಭಾವನೆಗಳೂ ಇದ್ದಿರಬೇಕೆಂದು ಎನ್ನಿಸುತ್ತದೆ.[6]

ಉತ್ತರ ಕರ್ಣಾಟಕದ ಬಳ್ಳಾರಿಜಿಲ್ಲೆಯ ಕುಡತಿನಿ, ಕುಪ್ಪಗಲ್ಲು, ಗುಲ್ಬರ್ಗಜಿಲ್ಲೆಯ ಕೊಡೆಕಲ್ಲು ಮುಂತಾದೆಡೆಗಳಲ್ಲಿ ನವಶಿಲಾಯುಗ ಕಾಲದ ದೊಡ್ಡ ಭಸ್ಮರಾಶಿಗಳು ಬೆಳಕಿಗೆ ಬಂದಿವೆ. ಈ ಭಸ್ಮರಾಶಿಗಳು ದನದ ಸಗಣಿಯನ್ನು ರಾಶಿಹಾಕಿ ಸುಟ್ಟಿದ್ದರಿಂದ ಆಗಿರುವುದೆಂದು ವೈಜ್ಞಾನಿಕ ಪರೀಕ್ಷೆಯಿಂದ ತಿಳಿದಿದೆ. ಇವು ನವಶಿಲಾಯುಗದ ಕಾಲದಲ್ಲಿದ್ದ ಕೆಲವು ಆಚರಣೆಗಳಿಗೆ ಸಂಬಂಧಿಸಿದ್ದೆಂದು ಒಬ್ಬ ಪುರಾತತ್ತ್ವಜ್ಞರು ಊಹಿಸಿದ್ದಾರೆ. ಪಶುಪಾಲನೆಯಲ್ಲಿ ನಿರತರಾಗಿರುವ ಆ ಪ್ರದೇಶದ ಇಂದಿನ ಗ್ರಾಮೀಣ ಸಮಾಜಗಳಲ್ಲಿ ಋತು ಬದಲಾವಣೆಯಾದಂತೆ ದನಗಳನ್ನು ಮೇವಿಗಾಗಿ ಬೇರೆ ಕಡೆಗೆ ಹೊಡೆದುಕೊಂಡು ಹೋಗುವ ಮುನ್ನ ಹಳೆಯ ಕೊಟ್ಟಿಗೆಗಳನ್ನು ಸುಟ್ಟು, ಮತ್ತೆ ಮೊದಲ ನೆಲೆಗೆ ವಾಪಸು ಬಂದಾಗ ಅಲ್ಲಿಯೇ ಕೊಟ್ಟಿಗೆಗಳನ್ನು ನಿರ್ಮಿಸುವ ಸಂಪ್ರದಾಯ ಇದೆಯೆಂದೂ ಇದೇ ಸಂಪ್ರದಾಯವೇ ಹಿಂದೂ ಇದ್ದು, ನವಶಿಲಾಯುಗದ ಭಸ್ಮದ ಗುಡ್ಡಗಳಿಗೆ ಕಾರಣವಾಗಿರಬೇಕೆಂದೂ ಆ ವಿದ್ವಾಂಸರ ಊಹೆ. ಅಲ್ಲದೆ ಋತುಬದಲಾವಣೆ ಆಗುವ ಕಾಲವನ್ನು ನಿರ್ಧರಿಸುವ ಸಂಕ್ರಾಂತಿ, ಶಿವರಾತ್ರಿ, ದೀಪಾವಳಿ ಇಂಥ ಹಬ್ಬಗಳಲ್ಲಿ ಸಗಣಿಯನ್ನು ಒಟ್ಟುಗೂಡಿಸಿ ಸುಡುವುದು, ದನಗಳನ್ನು ಕಿಚ್ಚುಹಾಯಿಸುವುದು ಈ ಪದ್ಧತಿಗಳೂ ಆ ಕಾಲದಿಂದಲೇ ಉಳಿದುಬಂದಿರಬೇಕೆಂದು ಅವರ ಊಹೆ.[7] ಎಂದರೆ ನವಶಿಲಾಯುಗ ಕಾಲದಲ್ಲೇ ಇಂದಿನ ಜನಪದದಲ್ಲಿ ರೂಢಿತವಾಗಿರುವ ಕೆಲವಾದರೂ ಧಾರ್ಮಿಕ ನಂಬಿಕೆಗಳು ಮತ್ತು ನಡೆವಳಿಕೆಗಳು ಪ್ರಚಲಿತವಾಗಿದ್ದಿರಬೇಕು.[8]

ಶಿಲಾತಾಮ್ರಯುಗ : ಮುಂದಿನ ಶಿಲಾತಾಮ್ರಯುಗದ ಘಟ್ಟದಲ್ಲೂ ಸುಮಾರು ಇದೇ ರೀತಿಯ ಸಂಪ್ರದಾಯಗಳು ಮುಂದುವರಿದಿರಬೇಕು. ಆ ಕಾಲದ ಧಾರ್ಮಿಕ ನಂಬಿಕೆಗಳ ಬಗ್ಗೆ ಅಂದಿನ ಸಮಾಧಿಗಳು ಮಾತ್ರ ಮಾಹಿತಿಯನ್ನು ಒದಗಿಸುತ್ತವೆ.

ಬಳ್ಳಾರಿ ಜಿಲ್ಲೆಯ ತೆಕ್ಕಲಕೋಟೆಯ ಒಂದು ನೆಲೆಯಲ್ಲಿ ಬೆಳಕಿಗೆ ಬಂದ ಕೆಲವು ಸಮಾಧಿಗಳ ಮೂಲಕ ವಿಚಿತ್ರ ರೀತಿಯ ಶವಸಂಸ್ಕಾರ ವಿಧಾನಗಳು ಕಂಡುಬಂದಿವೆ. ಇಲ್ಲಿ ಹಿಂದಿನ ರೀತಿಯ ಮಕ್ಕಳ ಗುಡಾಣ ಸಮಾಧಿಗಳಿರುವುದಲ್ಲದೆ, ದೊಡ್ಡವರನ್ನು ಹೂಳಲು ಅನೇಕ ತಳ ಒಡೆದ ದೊಡ್ಡ ಮಡಕೆಗಳನ್ನು ಸಾಲಾಗಿ ಒಂದರ ಮುಂದೊಂದು ಜೋಡಿಸಿ ಅದರಲ್ಲಿ ಮೃತನ ಶರೀರವನ್ನು ಉದ್ದುದ್ದವಾಗಿ ತುರುಕಿ ಹೂಳಿರುವುದು ಕಂಡುಬಂದಿದೆ. ಇನ್ನೊಂದು ಸಮಾಧಿಯಲ್ಲಿ, ಮೃತನನ್ನು ನೇರವಾಗಿ ಹೂಳದೆ ಶವವನ್ನು ಹೊರಗೆ ಎಲ್ಲೋ ಕೆಲಕಾಲ ಇಟ್ಟಿದ್ದು, ಅದರ ಮೃದುಭಾಗಗಳು ನಶಿಸಿದ ಮೇಲೆ ದೊಡ್ಡ ಮೂಳೆಗಳು ಮತ್ತು ಬುರುಡೆಯನ್ನಷ್ಟೇ ಸಂಗ್ರಹಿಸಿ ಅವನ್ನು ಮಾನವದೇಹದಲ್ಲಿರುವಂತೆಯೇ ವ್ಯವಸ್ಥಿತವಾಗಿ ಜೋಡಿಸಿ ಹೂತಿರುವುದು ಬೆಳಕಿಗೆ ಬಂದಿದೆ. ಇಂಥ ಸಮಾಧಿಗಳ ಹಿಂದಿದ್ದ ನಂಬಿಕೆಗಳೇನೆಂಬುದು ಸ್ಪಷ್ಟವಾಗಿಲ್ಲ.

ಕಬ್ಬಿಣದ ಯುಗ : ಕಬ್ಬಿಣದ ಯುಗ ಅಥವಾ ಬೃಹತ್‌ಶಿಲಾಸಮಾಧಿಯುಗದಲ್ಲಿ ಸಮಾಧಿಗಳನ್ನು ಬಹುಶ್ರದ್ಧೆಯಿಂದ ಅಪಾರ ಧನ ಮತ್ತು ಮಾನವ ಬಲದ ವೆಚ್ಚದಿಂದ ರಚಿಸಲಾಗುತ್ತಿತ್ತು. ಇಡೀ ದೇಹವನ್ನು ಗುಣಿಯಲ್ಲಿ ಹೂಳುವ ಪದ್ಧತಿ ಈ ಕಾಲದಲ್ಲೂ ಇದ್ದ ಬಗ್ಗೆ ಮಸ್ಕಿಯ ಉತ್ಖನನದಲ್ಲಿ ಮಾಹಿತಿ ದೊರಕಿದೆ. ಆದರೆ ಹೆಚ್ಚಿನ ಸಮಾಧಿಗಳಲ್ಲಿ ದೇಹವನ್ನು ಬೇರೆಡೆ ಇಟ್ಟಿದ್ದು, ಸ್ವಲ್ಪ ಕಾಲಾನಂತರ ದೊಡ್ಡ ಮೂಳೆಗಳನ್ನಷ್ಟೇ ಸಂಗ್ರಹಿಸಿ ಅವಕ್ಕೆ ವಿಧಿವತ್ತಾದ ಸಂಸ್ಕಾರ ನಡಸುವ ಪದ್ಧತಿ ಇದ್ದುದು ಕಂಡುಬಂದಿದೆ. ಈ ರೀತಿಯ ಎರಡನೆಯ ಘಟ್ಟದಲ್ಲಿ ಸಂಸ್ಕಾರ ನಡಸಿರುವೆಡೆಗಳಲ್ಲಿ ಮೂಳೆಗಳನ್ನು ದೊಡ್ಡ ಗುಣಿಗಳಲ್ಲಿ ಇಡುವುದು, ಚೌಕಾಕಾರದ ಕಲ್ಲುಪೆಟ್ಟಿಗೆಗಳಲ್ಲಿಟ್ಟು ದೊಡ್ಡ ಚಪ್ಪಡಿಯಿಂದ ಮುಚ್ಚುವುದು, ಮೂರು ನಾಲ್ಕು ಒರಟು ಬಂಡೆಗಳನ್ನು ಇವುಗಳ ಮೇಲಿಟ್ಟು ಅದರ ಮೇಲೆ ದೊಡ್ಡ ಚಪ್ಪಡಿಯನ್ನು ಹಾಸುವುದು, ಚಪ್ಪಡಿಯ ತೊಟ್ಟಿಗಳ ಸುತ್ತ ಕಿರು ಎತ್ತರದ ಕಲ್ಲುಗೋಡೆಯನ್ನು ನಿರ್ಮಿಸುವುದು, ಕೆಲವಕ್ಕೆ ಕಲ್ಲುಗಳನ್ನು ಇಕ್ಕೆಲದಲ್ಲಿ ಸಾಲಾಗಿ ನಿಲ್ಲಿಸಿ ಹಾದಿ ಮಾಡುವುದು ಇತ್ಯಾದಿ ವೈವಿಧ್ಯಮಯ ರೀತಿಗಳು ಕಂಡು ಬಂದಿವೆ. ಈ ರೀತಿಯ ರಚನೆಗಳನ್ನು ಪೂರ್ಣವಾಗಿ ಅಥವಾ ಅರ್ಧಮಟ್ಟದವರೆಗೆ ಕಲ್ಲುಗಳನ್ನು ತುಂಬಿ ಮುಚ್ಚುವುದೂ, ಸುತ್ತಲೂ ದೊಡ್ಡ ಕಲ್ಲುಗುಂಡುಗಳನ್ನು ವೃತ್ತಾಕಾರವಾಗಿ ಜೋಡಿಸುವುದೂ ರೂಢಿಯಲ್ಲಿತ್ತು. ಈ ಸಮಾಧಿಗಳ ಒಳಗೆ ಅನೇಕ ಮಣ್ಣಿನ ಮಡಕೆಗಳನ್ನು ಇಟ್ಟಿರಲಾಗಿರುತ್ತಿತ್ತು. ಕೆಲವೆಡೆ ಪ್ರಾಣಿಗಳ ಮೂಳೆಗಳೂ ಇವುಗಳ ಜೊತೆಯಲ್ಲೇ ಸಿಕ್ಕಿವೆ. ಅಲ್ಲದೆ ಕತ್ತಿ, ಈಟಿ, ಗುದ್ದಲಿ ಮುಂತಾದ ಬಗೆ ಬಗೆಯ ಕಬ್ಬಿಣದ ಆಯುಧೋಪಕರಣಗಳನ್ನು ಈ ಸಮಾಧಿಗಳಲ್ಲಿ ಹುದುಗಿಸಲಾಗುತ್ತಿತ್ತು. ಮಣ್ಣಿನ ಪಾತ್ರೆ ಮತ್ತು ಪ್ರಾಣಿಯ ಮೂಳೆಗಳು ಮೃತನಿಗಾಗಿ ಮಾಂಸ ಮತ್ತು ಇತರ ಆಹಾರ ಪಾನೀಯಗಳನ್ನು ಒದಗಿಸಿರಬೇಕೆಂದು ಸೂಚಿಸುತ್ತವೆ. ಅಲ್ಲದೆ ಮರಣೋತ್ತರ ಸ್ಥಿತಿಯಲ್ಲೂ ಮೃತನಿಗೆ ಅನೇಕ ಆವಶ್ಯಕತೆಗಳಿದ್ದು ಪ್ರಾಯಶಃ ಜೀವಿತ ಸ್ಥಿತಿಯಲ್ಲಿದ್ದ ಜೀವನ ವಿಧಾನವನ್ನೇ ಅವನು ಪರಲೋಕದಲ್ಲೂ ಮುಂದುವರಿಸುವನು ಎಂಬ ಭಾವನೆಯೋ

ಆಯುಧ ಉಪಕರಣಗಳನ್ನು ಜೊತೆಯಲ್ಲಿ ಹೂಳುವ ಪದ್ಧತಿಯ ಹಿನ್ನೆಲೆಯಲ್ಲಿದ್ದಂತೆ ತೋರುತ್ತದೆ. ಇದರಿಂದ ಆತ್ಮದ ಅಸ್ತಿತ್ವ, ಪರಲೋಕದ ಮತ್ತು ಪುನರ್ಜನ್ಮದ ಕಲ್ಪನೆಗಳು ಆಳವಾಗಿ ಬೇರೂರಿದ್ದಿರಬಹುದು ಎನಿಸುತ್ತದೆ.

ಈ ಕಾಲದ ಸಮಾಧಿಗಳು ಸಾಮಾನ್ಯವಾಗಿ ಊರ ಹೊರಗೆ ದೂರದಲ್ಲಿ ಇರುತ್ತಿದ್ದುವು. ಭಾರವಾದ ಕಲ್ಲುಗಳನ್ನು ಸಮಾಧಿಗಳ ಮೇಲೆ ಹೇರುವ ಮತ್ತು ಸುತ್ತಲೂ ಶಿಲಾವರ್ತುಲಗಳನ್ನು ರಚಿಸುವ ಸಂಪ್ರದಾಯಗಳು ಮೃತರ ಬಗ್ಗೆ ಜನರಲ್ಲಿದ್ದ ಭಯ ಭಾವನೆಯಿಂದ ಹುಟ್ಟಿಕೊಂಡಿರಬಹುದು. ಮರಣಹೊಂದಿದ ಮೇಲೂ ಶಕ್ತವಾಗಿರುವ ಮೃತನ ಆತ್ಮ ಇಷ್ಟಬಂದಾಗ ಸಂಚರಿಸಿ ಪುನಃ ತನ್ನ ಸಮಾಧಿಗೆ ಹಿಂತಿರುಗುವಂತೆ ಅನುಕೂಲ ಮಾಡಿಕೊಡಲೋ ಏನೋ ಕಲ್ಲಿನ ಶವಪೆಟ್ಟಿಗೆಯ ಪೂರ್ವದ ಭಾಗದ ಚಪ್ಪಡಿಯಲ್ಲಿ ಒಂದು ದುಂಡುತೂತನ್ನು ಕೊರೆದಿರುವುದು ಕಂಡುಬರುತ್ತದೆ. ಇಂಥ ರಂಧ್ರಗಳಿಂದ ಒಳಗೆ ಮೃತನ ಮೂಳೆಗಳಿದ್ದೆಡೆಗೆ ಆಗಾಗ್ಗೆ ಕೆಲವು ಸಾಮಗ್ರಿಗಳನ್ನು ಇಡುತ್ತಿದ್ದರು ಎಂಬುದಕ್ಕೆ ಬ್ರಹ್ಮಗಿರಿಯ ಉತ್ಖನನಗಳಿಂದ ಸೂಚನೆಗಳು ದೊರಕಿವೆ. ಪ್ರಾಯಶಃ ಇದು ನಿಯಮಿತ ಕಾಲದಲ್ಲಿ ಮೃತರ ತೃಪ್ತ್ಯರ್ಥವಾಗಿ ನಡಸುತ್ತಿದ್ದ ಶ್ರಾದ್ಧ ಕರ್ಮದ ಭಾಗವಾಗಿರಬಹುದು.

ಒಟ್ಟಿನಲ್ಲಿ ಈ ಕಾಲದಲ್ಲಿ ಕಂಡುಬರುವ ಒಂದು ವೈಶಿಷ್ಟ್ಯವೆಂದರೆ ಮೃತರ ಬಗ್ಗೆ ಇದ್ದ ಭಾವನೆಗಳು. ಪಿತೃಪೂಜೆ ಈ ಕಾಲದ ಧರ್ಮದ ಮುಖ್ಯ ಅಂಶವಾಗಿದ್ದಂತೆ ತೋರುತ್ತದೆ. ಈ ಕಾಲದ ಸಂಸ್ಕೃತಿ, ಅದರಲ್ಲೂ ಧಾರ್ಮಿಕ ಆಚರಣೆಗಳು, ಕ್ರಿ.ಪೂ. ೧೦೦೦ದ ಸುಮಾರಿನಲ್ಲಿ ಎಲ್ಲಿಂದಲೋ ಬಂದು ಇದ್ದಕ್ಕಿದ್ದಂತೆ ಕರ್ಣಾಟಕದಲ್ಲಿ ಕಾಣಿಸಿಕೊಂಡು ಕ್ರಿಸ್ತಶಕಾರಂಭದ ಕಾಲದವರೆಗೆ ನಡೆದುಬಂದಿತು. ಅನೇಕ ಸಮಾಧಿಗಳಲ್ಲಿ ಕತ್ತಿ, ಈಟಿ ಮೊದಲಾದ ಯುದ್ಧಾಯುಧಗಳು ದೊರಕುವುದು ಹಾಗೂ ಇವುಗಳ ರಚನೆಯಲ್ಲಿ ಕಂಡುಬರುವ ಆಸ್ಥೆ ಮತ್ತು ಜನ ಧನ ಬಲದ ವ್ಯಯವನ್ನು ಗಮನಿಸಿದರೆ, ಹೆಚ್ಚಿನವು ವೀರರ ಅಥವಾ ಸಮಾಜದ ಉನ್ನತ ವ್ಯಕ್ತಿಗಳ ಸಮಾಧಿಗಳಿದ್ದಂತೆ ತೋರುತ್ತವೆ. ಇದು ಕೇವಲ ಪಿತೃಪೂಜೆಯಾಗಿರದೆ ವೀರಪೂಜೆಯ ಕುರುಹೂ ಇರಬೇಕೆಂದು ಊಹಿಸಬೇಕಾಗುತ್ತದೆ. ಮುಂದೆ ಐತಿಹಾಸಿಕ ಕಾಲದಲ್ಲಿ ಕಂಡುಬರುವ ಅಸಂಖ್ಯಾತ ವೀರಗಲ್ಲುಗಳ ಸ್ಥಾಪನೆ ಪ್ರಾಯಶಃ ಇದೇ ಭಾವನೆಯ ಮುಂದುವರಿಕೆಯೇ ಇರಬೇಕು. ಜಡಿಗೇನಹಳ್ಳಿಯಲ್ಲಿ ನಡೆದ ಬೃಹತ್‌ಶಿಲಾ ಸಮಾಧಿಗಳ ಉತ್ಖನನದಲ್ಲಿ ಮೇಲಿನ ಪದಾರ್ಥಗಳ ಜೊತೆಯಲ್ಲಿ ಗಂಟೆ ಮತ್ತು ತ್ರಿಶೂಲಗಳೂ ದೊರಕಿದ್ದು ಪ್ರಾಯಶಃ ಶೈವಧರ್ಮದ ಪ್ರಭಾವವೂ ಯಾವುದೋ ಘಟ್ಟದಲ್ಲಿ ಇದರೊಂದಿಗೆ ಸ್ವಲ್ಪಮಟ್ಟಿಗೆ ಮಿಳಿತವಾಗಿದ್ದತೆ ಕಾಣುತ್ತದೆ.[10]

ಗುಲ್ಬರ್ಗಜಿಲ್ಲೆಯ ಜೇವರ್ಗಿ ಬಳಿಯ ಕೆಲವೆಡೆಗಳಲ್ಲಿ ಬೃಹತ್‌ಶಿಲಾಸಮಾಧಿ ಸಂಸ್ಕೃತಿಯ ಕಾಲಕ್ಕೆ ಸಂಬಂಧಿಸಿದ ಅನೇಕ ದೊಡ್ಡ ಕಲ್ಲುಗಳನ್ನು ಚೌಕಾಕಾರವಾಗಿ ನೆಟ್ಟಿರುವುದೂ ಇಕ್ಕೆಲಗಳಲ್ಲಿ ಸಾಲಾಗಿ ನಿಲ್ಲಿಸಿ ಹಾದಿಯಂತೆ ರೂಪಿಸಿರುವುದೂ ಕಂಡುಬಂದಿದೆ. ಇವಕ್ಕೂ ಸಮಾಧಿಗಳಿಗೂ ಇರುವ ಸಂಬಂಧ ಸ್ಪಷ್ಟವಾಗಿಲ್ಲ. ಈ ರೀತಿಯ

ಕಲ್ಲುಸಾಲುಗಳು ಧಾರ್ಮಿಕ ಆಲಯಗಳಾಗಿರಬಹುದೆಂದು ಊಹಿಸಲು ಅವಕಾಶವಿದೆ.[11]

## ಜನಪದಧರ್ಮ

ಬೃಹತ್ ಶಿಲಾಸಮಾಧಿಗಳ ಕಾಲದ ಉತ್ತರಭಾಗದಲ್ಲಿ ಔತ್ತರೇಯ ರಾಜವಂಶಗಳ ಆಳ್ವಿಕೆ ಕರ್ಣಾಟಕಕ್ಕೂ ಪಸರಿಸಿದುದಲ್ಲದೆ ಆಗಲೇ ಔತ್ತರೇಯ ಧರ್ಮಗಳೂ ಹರಡಲಾರಂಭಿಸಿದುವು. ಇವುಗಳ ಆಗಮನಾನಂತರವೂ ಜನಪದಸಮಾಜಗಳಲ್ಲಿ ಬಹುಮಟ್ಟಿಗೆ ಹಳೆಯ ನಂಬಿಕೆ ಆಚರಣೆಗಳು ವ್ಯಾಪಕವಾಗಿದ್ದಿರಬೇಕು. ಆ ಕಾಲದ ಜನಪದಧರ್ಮದ ಬಗ್ಗೆ ನೇರ ಆಧಾರಗಳು ದೊರಕುವುದಿಲ್ಲವಾದ್ದರಿಂದ, ಇಂದು ಪ್ರಚಲಿತವಾಗಿರುವ ಜನಪದಧರ್ಮದ ಸ್ವರೂಪವನ್ನೇ ಅಂದಿನ ಜನಪದಧರ್ಮದ ಅರಿವಿಗೆ ಆಧಾರವಾಗಿಟ್ಟುಕೊಳ್ಳಬೇಕಾಗುತ್ತದೆ. ಪರಂಪರಾಗತವಾಗಿ ನಡೆದು ಬಂದಿರುವ ಜನಪದಧರ್ಮದ ಒಂದು ವೈಶಿಷ್ಟ್ಯವೆಂದರೆ ಅದು ಕಾಲಕಾಲಕ್ಕೆ ಇತರ ಧರ್ಮಗಳ ಪ್ರಭಾವಕ್ಕೂ ಒಳಗಾಗುತ್ತಿದ್ದುದು. ಈಗ ದೊರಕುವ ಜನಪದಧರ್ಮದ ಸ್ವರೂಪದಲ್ಲಿ ಪೌರಾಣಿಕ ಹಿಂದುಧರ್ಮದ ಹಲವು ಕಲ್ಪನೆಗಳು ಮತ್ತು ತತ್ತ್ವಗಳು ಅಲ್ಲಲ್ಲಿ ಮಿಳಿತವಾಗಿರುವುದನ್ನು ಸುಲಭವಾಗಿ ಗುರುತಿಸಬಹುದಾಗಿದೆ. ಈ ಪರಧರ್ಮಪ್ರಭಾವ ಜನಪದಧರ್ಮದ ಮೇಲೆ ಯಾವ ಯಾವ ಕಾಲದಲ್ಲಿ ಎಷ್ಟೆಷ್ಟು ಇತ್ತು ಎಂಬ ಅಂಶವನ್ನು ಸದ್ಯದ ಸಂಶೋಧನೆಯ ಸ್ಥಿತಿಯಲ್ಲಿ ನಾವು ಗುರುತಿಸಲಾರೆವು. ಜೊತೆಗೆ ಔತ್ತರೇಯ ಧರ್ಮಗಳಲ್ಲಿ ಸಹ ಹಲವು ಕಾರಣಗಳಿಂದ ಜನಪದ ಧರ್ಮಿಯ ಅಂಶಗಳು ಕಾಲಕಾಲದಲ್ಲಿ ಬೆರೆಯುತ್ತ ಬಂದಿವೆಯಾದ್ದರಿಂದ ಕೆಲವೊಂದು ಅಂಶಗಳನ್ನು ಇದು ಜಾನಪದೀಯ ಅಥವಾ ಶಿಷ್ಟ ಎಂದು ವರ್ಗೀಕರಿಸುವುದೂ ಸುಲಭಸಾಧ್ಯವಲ್ಲ. ಇಂದಿನ ಜನಪದಧರ್ಮವನ್ನು ಹಿಂದಿನ ಕಾಲದ ಜನಪದ ಸಮಾಜಗಳಲ್ಲಿದ್ದ ಧರ್ಮದ ಸ್ಥಿತಿಗೆ ಆಧಾರವಾಗಿಟ್ಟುಕೊಳ್ಳುವಲ್ಲಿ ಈ ಅಂಶಗಳನ್ನು ಮರೆಯಲಾಗದು.

ಜನಪದಧರ್ಮದ ಮೂಲಭೂತ ಅಂಶಗಳಲ್ಲಿ ಸರ್ವಚೇತನತ್ವ ಮುಖ್ಯವಾದುದು. ಮಾನವನಿಗಿಂತ ಶಕ್ತಿಶಾಲಿಯಾದ ಮಾನವನ ಜೀವನದ ಮೇಲೆ ಪ್ರಭಾವ ಬೀರಬಲ್ಲ ಉಚ್ಚಶಕ್ತಿಗಳು ನಿಸರ್ಗದಲ್ಲಿವೆ ಎಂಬ ನಂಬಿಕೆ ಈ ಕಲ್ಪನೆಗೆ ಮೂಲ. ನಿಸರ್ಗದಲ್ಲಿ ಕಂಡುಬರುವ ಎಲ್ಲ ರೀತಿಯ ವಸ್ತು ಜೀವಗಳಲ್ಲೂ ಅಂತರ್ಗತಶಕ್ತಿ ಅಥವಾ ಅಧಿದೇವತೆ ಇರುತ್ತದೆ ಎಂದು ನಂಬಿಕೆ. ಈ ನಂಬಿಕೆ ಮುಖ್ಯವಾಗಿ ಪ್ರಕಟವಾಗುವುದು ಪ್ರಾಣಿ ಮತ್ತು ಸಸ್ಯಪೂಜೆಗಳಲ್ಲಿ. ಹಲವು ದೊಡ್ಡ ಮರ, ಬಂಡೆ, ನದಿ ಇತ್ಯಾದಿಗಳನ್ನು ಪವಿತ್ರವೆಂದು ತಿಳಿದು ಪೂಜಿಸುವ ಪದ್ಧತಿಯನ್ನು ಎಲ್ಲೆಡೆಯೂ ಈಗಲೂ ಕಾಣಬಹುದು. ಪ್ರಾಣಿಗಳಿಗೆ ದೇವತ್ವವನ್ನು ಆರೋಪಿಸಿ ಪೂಜಿಸುವ ಪದ್ಧತಿ ಕರ್ಣಾಟಕದ ಹಲವೆಡೆಗಳಲ್ಲಿ ಕಂಡುಬರುತ್ತದೆ. ಇವುಗಳಲ್ಲಿ ಸರ್ಪಪೂಜೆ ಬಹುವ್ಯಾಪಕವಾಗಿದೆ. ದಕ್ಷಿಣಕನ್ನಡ ಜಿಲ್ಲೆಯಲ್ಲಿ ಇದರ ಪ್ರಭಾವ ಅಧಿಕವಾಗಿದ್ದರೆ, ಇತರೆಡೆಗಳಲ್ಲಿ ನಾಗರ ಪಂಚಮಿ, ಷಷ್ಠಿ ಇತ್ಯಾದಿ ಹಬ್ಬಗಳಲ್ಲಿ ನಾಗದೇವತೆಯನ್ನು ಆರಾಧಿಸುವ ರೂಢಿ ಇದೆ. ದಕ್ಷಿಣಕನ್ನಡ ಜಿಲ್ಲೆಯ

ಸುಬ್ರಹ್ಮಣ್ಯ, ಬೆಂಗಳೂರು ಜಿಲ್ಲೆಯ ಘಾಟಿ ಸುಬ್ರಹ್ಮಣ್ಯ ಮುಂತಾದುವು ಇಂದಿಗೂ ಈ ಸಂಬಂಧದ ಬಹು ಪವಿತ್ರ ಕ್ಷೇತ್ರಗಳಾಗಿವೆ. ಬಹು ಜನರಲ್ಲಿ ನಾಗದೇವತೆಗೂ ಸೃಷ್ಟಿ ಶಕ್ತಿಗೂ ಸಂಬಂಧವಿದೆಯೆಂಬ ನಂಬಿಕೆ ಇದೆ. ಮಕ್ಕಳಿಲ್ಲದವರು ನಾಗಪೂಜೆ ಮಾಡುವುದು, ನಾಗಪ್ರತಿಷ್ಠೆ ಮಾಡುವುದು ಮುಂತಾದುವು ಬಹುಸಾಮಾನ್ಯ. ಆದರೆ ಇಂದು ರೂಢಿತವಾಗಿರುವ ಈ ಪದ್ಧತಿಗಳಲ್ಲಿ ಪೌರಾಣಿಕ ಹಿಂದುಧರ್ಮದ ನಡೆವಳಿಕೆಗಳು ಬಹಳ ಮಟ್ಟಿಗೆ ಹರಡಿರುವುದರಿಂದ, ಈ ನಾಗಪೂಜಾಪದ್ಧತಿ ಎಷ್ಟು ಪ್ರಾಚೀನ ಎಂದು ಹೇಳುವುದು ಕಷ್ಟ. ಈ ಪದ್ಧತಿಯ ವ್ಯಾಪ್ತಿ ಕರ್ಣಾಟಕಕ್ಕಷ್ಟೇ ಸೀಮಿತವಾಗಿರದೆ ಭಾರತದ ಹಲವೆಡೆಗಳಲ್ಲಿ ಹಿಂದುವಲ್ಲದೆ, ಜೈನ ಬೌದ್ಧ ಧರ್ಮಿಯರಲ್ಲೂ ಕಂಡುಬರುವುದು ಸಮಸ್ಯೆಯನ್ನು ಬಹು ಕ್ಲಿಷ್ಟವಾಗಿಸಿದೆ.

ಕರ್ಣಾಟಕದಲ್ಲಿ ರೂಢಿಯಾಗಿರುವ ಪ್ರಾಣಿಪೂಜೆಗಳಲ್ಲಿ ಬಸವನ ಪೂಜೆ ವಿಶೇಷವಾಗಿ ಕಂಡುಬರುತ್ತದೆ. ಬಸವವಿಗ್ರಹಗಳನ್ನು ಪೂಜಿಸುವುದು, ಹೋರಿಕರುಗಳನ್ನು ಸ್ವೇಚ್ಛೆಯಾಗಿ ಬಿಟ್ಟುಬಿಡುವುದು ಮುಂತಾದ ಸಂಪ್ರದಾಯಗಳು ಇದಕ್ಕೆ ಸಂಬಂಧಿಸಿದುದು. ಇದರಲ್ಲೂ ಬಸವ ಶಿವನ ವಾಹನ, ಭಕ್ತ ಎಂಬ ನಂಬಿಕೆಗಳಿರುವುದರಿಂದ ಪೌರಾಣಿಕ ಹಿಂದು ಧರ್ಮದ ಪ್ರಭಾವವನ್ನು ಕಾಣಬಹುದಾಗಿದೆ. ಆದರೆ ಗೂಳಿ ಫಲವತ್‌ಶಕ್ತಿಯ ಪ್ರತೀಕವಾಗಿರುವುದು ಮತ್ತು ನವಶಿಲಾಯುಗದ ಕಾಲದಲ್ಲಿಯೇ ಈ ಪದ್ಧತಿ ಇದ್ದಿರಬೇಕೆಂಬುದು ಗಮನಿಸಬೇಕಾದ ಅಂಶಗಳು. ಮಲೆನಾಡಿನ ಹಲವೆಡೆಗಳಲ್ಲಿ ಹುಲಿದೇವರನ್ನು ಪೂಜಿಸುವ ಪದ್ಧತಿ ಇದೆ. ಇದೇರೀತಿಯಲ್ಲಿ ವೃಕ್ಷಪೂಜೆ ಹರಡಿರುವುದನ್ನೂ ಕಾಣಬಹುದು. ಅರಳಿ, ಬೇವು, ಬನ್ನಿ ಈ ಮರಗಳನ್ನು ಪೂಜಿಸುವುದು ತಿಳಿದದ್ದೇ. ಕೆಲವು ಕಡೆ ಎಕ್ಕದ ಗಿಡವನ್ನು ಪೂಜಿಸುವ ಸಂಪ್ರದಾಯವೂ ಇದೆ ಎನ್ನಲಾಗಿದೆ. ಅಲ್ಲದೆ ಅನೇಕ ಮನೆತನಗಳವರು ಹೊಂಗೆ, ಮಾವು, ಬನ್ನಿ, ಮುತ್ತುಗ, ಎಕ್ಕ ಇತ್ಯಾದಿಗಳನ್ನು ಕುಲದೇವತೆಗಳೆಂದು ಗೌರವಿಸುವುದು, ಮದುವೆ ಮುಂಜಿ ಇತ್ಯಾದಿ ಪವಿತ್ರ ಕಾರ್ಯಗಳು ನಡೆಯುವಾಗ ಆ ಮರದ ಕೊಂಬೆಗಳನ್ನು ತಂದು ಮನೆದೇವರೆಂದು ಪೂಜಿಸುವುದು ಈ ಪದ್ಧತಿಗಳು ಕರ್ಣಾಟಕದ ಹಲವೆಡೆಗಳಲ್ಲಿ ಇಂದಿಗೂ ಉಳಿದುಕೊಂಡಿವೆ.

ಹೀಗೆ ಸಸ್ಯಗಳನ್ನೂ ಪ್ರಾಣಿಗಳನ್ನೂ ಪೂಜಿಸುವ ಸಂಪ್ರದಾಯ ಪ್ರಾಗೈತಿಹಾಸಿಕ ಮೂಲದ್ದಿರಬಹುದಾದರೂ ಇಂದು ಕರ್ಣಾಟಕದಲ್ಲಿ ಇವುಗಳ ವ್ಯಾಪಕತೆಯನ್ನು ನೋಡಿದರೆ ಇವು ಬಹುತೇಕ ಹಿಂದುಧರ್ಮೀಯ ಸಂಪ್ರದಾಯಗಳೊಡನೆ ನಿಕಟವಾಗಿ ಬೆಸೆದುಕೊಂಡಿರುವುದು ಕಾಣುತ್ತದೆ. ಆದ್ದರಿಂದ ಇವು ಪೂರ್ಣವಾಗಿ ಸ್ಥಳೀಯ ಮೂಲನಂಬಿಕೆಗಳಿಗೆ ಸಂಬಂಧಿಸಿದವೋ ಅಥವಾ ಔತ್ತರೇಯ ಧರ್ಮಗಳು ಪಸರಿಸಿದ ಸಂದರ್ಭದಲ್ಲಿಯೇ ಜೊತೆಯಾಗಿ ಬಂದವೋ ಹೇಳುವುದು ಕಷ್ಟ.

ಮೂಲದ ಬಗ್ಗೆ ಹೆಚ್ಚು ಸಮಸ್ಯೆಯಿಲ್ಲದ ಜನಪದ ಧರ್ಮದ ಅಂಶಗಳನ್ನು ಗ್ರಾಮದೇವತೆಗಳಲ್ಲಿ ಕಾಣಬಹುದು. ಸಾಮಾನ್ಯವಾಗಿ ಕರ್ಣಾಟಕದ ಪ್ರತಿ ಗ್ರಾಮದಲ್ಲೂ ಆಯಾ ಗ್ರಾಮದ ಜನರ ಆಗುಹೋಗುಗಳ ಮೇಲೆ ಶಕ್ತಿ ಬೀರುವ ಗ್ರಾಮದೇವತೆಗಳು

ಇದ್ದೇ ಇರುತ್ತವೆ. ಇವೆಲ್ಲ ಔತ್ತರೇಯ ಧರ್ಮಗಳಲ್ಲಿ ಪ್ರಚಲಿತವಾಗಿರುವ ದೇವ ಸಮೂಹಗಳಿಂದ ಹೊರಗಿರುವುವು. ನವಶಿಲಾಯುಗದ ಕಾಲದ ಹೊತ್ತಿಗೆ ಗ್ರಾಮ ವ್ಯವಸ್ಥೆ ರೂಪುಗೊಂಡು ಪ್ರತಿ ಗ್ರಾಮವೂ ಆರ್ಥಿಕವಾಗಿ ಹೆಚ್ಚುಕಡಿಮೆ ಸ್ವಾವಲಂಬಿ ಗಳಾಗಿದ್ದ ಸಂದರ್ಭದಲ್ಲಿ ಇಂಥ ದೇವತೆಗಳ ಕಲ್ಪನೆ ಮೂಡಿರಬಹುದು. ಗ್ರಾಮದೇವತೆ ಗಳು ಹೆಚ್ಚು ಮಟ್ಟಿಗೆ ಹೆಣ್ಣು ದೇವತೆಗಳೇ ಆಗಿದ್ದು ಮೂಲತಃ ಇವು ಸೃಷ್ಟಿಶಕ್ತಿಯ ಪ್ರತೀಕಗಳಾಗಿದ್ದ ಮಾತೃದೇವತೆಗಳಾಗಿದ್ದಂತೆ ತೋರುತ್ತದೆ. ಇದೂ ಫಲವತ್‌ತತ್ತ್ವಕ್ಕೆ ಹೆಚ್ಚಿನ ಮಹತ್ವವನ್ನು ಕೊಟ್ಟಿದ್ದ ನವಶಿಲಾಯುಗ ಕಾಲದಲ್ಲಿ ಮೂಡಿರಬೇಕೆಂಬ ಅನು ಮಾನಕ್ಕೆ ಅವಕಾಶವನ್ನುಂಟುಮಾಡುತ್ತದೆ.

ಜನಪದದೇವತೆಗಳಲ್ಲಿ ಕೆಲವೊಂದು ವೈಶಿಷ್ಟ್ಯಗಳನ್ನು ಗುರುತಿಸಬಹುದು. ಪ್ರತಿ ಯೊಂದು ಗ್ರಾಮಕ್ಕೂ ಬೇರೆ ಬೇರೆ ದೇವತೆಗಳು ಅಧಿಷ್ಠಾತ್ರಿಗಳಾಗಿರುವುದರಿಂದ ಇವು ಅಸಂಖ್ಯಾತವಾಗಿವೆ. ಒಂದೊಂದೇ ದೇವತೆಯ ಪ್ರಭಾವ ಆಯಾ ಗ್ರಾಮಗಳಿಗಷ್ಟೇ ಸೀಮಿತವಾಗಿರುತ್ತದೆ. ಒಂದು ಗ್ರಾಮದ ಜನ ಅಲ್ಲಿಯ ಗ್ರಾಮದೇವತೆಗಳಿಗೆ ಮಾತ್ರ ನಿಷ್ಠೆ ತೋರಬೇಕು ಎಂಬ ಕಟ್ಟಳೆಯನ್ನು ಗ್ರಾಮೀಣರು ಬಹು ಕಟ್ಟುನಿಟ್ಟಾಗಿ ಆಚರಿಸು ತ್ತಾರೆ. ತಮ್ಮ ಗ್ರಾಮದವರು ಬೇರೆ ಗ್ರಾಮದೇವತೆಗೆ ಹರಕೆ ಕಟ್ಟಿಕೊಳ್ಳುವುದು, ಅಥವಾ ಬೇರೆ ಗ್ರಾಮದ ಜನರು ತಮ್ಮ ಗ್ರಾಮದೇವತೆಗೆ ನಡೆದುಕೊಳ್ಳುವುದು ಇವನ್ನು ಸಾಧುವೆಂದು ಪರಿಗಣಿಸುವುದಿಲ್ಲ.

ಗ್ರಾಮದೇವತೆಗಳು ಆಯಾ ಗ್ರಾಮದ ರಕ್ಷಕಶಕ್ತಿಗಳು. ಎಷ್ಟೋ ವೇಳೆ ಒಂದೋ ಎರಡೋ ಕಲ್ಲುಗುಂಡುಗಳೂ ಈ ಗ್ರಾಮದೇವತೆಗಳ ಪ್ರತೀಕಗಳಾಗಿರುವುದು ಸಾಮಾನ್ಯ. ಈ ದೇವರಿಗೆ ಗುಡಿಗಳೂ ಇರುವುದಿಲ್ಲ. ಅಪರೂಪವಾಗಿ ಮೂರು ಚಪ್ಪಡಿಗಳನ್ನು ಆಯಾಕಾರದಲ್ಲಿ ನೆಟ್ಟು ಮೇಲೊಂದು ಚಪ್ಪಡಿಯನ್ನು ಹಾಸಿರುವುದುಂಟು. ಈ ದೇವತೆಗಳ ಸ್ಥಾನ ಅಥವಾ ಗುಡಿಗಳು ವಿಶೇಷತಃ ಊರಿನ ಹೊರಗೆ, ಸಾಮಾನ್ಯವಾಗಿ ಗ್ರಾಮದ ಅಂಕದ ಬಳಿ ಇರುತ್ತವೆ. ಪ್ರಾಯಶಃ ಹೊರಗಿನ ಯಾವ ಶಕ್ತಿಗಳೂ ಗ್ರಾಮಕ್ಕೆ ಪ್ರವೇಶಿಸದಂತೆ ಈ ದೇವತೆಗಳು ಕಾಯುತ್ತವೆ ಎಂಬ ಕಲ್ಪನೆಯೂ ಇದರಲ್ಲಿ ಇರಬಹುದು. ಈ ದೇವತೆಗಳಿಗೆ ನಿತ್ಯಪೂಜೆ ಇರುವುದಿಲ್ಲ. ಗೊತ್ತಾದ ಪೂಜಾರಿ ಇರುವುದು ಸಹ ಕೆಲವೆಡೆ ಮಾತ್ರ. ಸಾಧಾರಣವಾಗಿ ಪೂಜೆ ಕೊಡಬೇಕಾದ ವ್ಯಕ್ತಿಯೇ ಪೂಜಿಸಿ ಬರುತ್ತಾನೆ. ಎಂದರೆ ಪ್ರಾಚೀನ ಜನಪದಧರ್ಮದಲ್ಲಿ ಪೂಜಾರಿ ಎಂಬ ವಿಶಿಷ್ಟ ವ್ಯಕ್ತಿಗೆ ಅಂಥ ಮಹತ್ತ್ವದ ಸ್ಥಾನವೇನೂ ಇರಲಿಲ್ಲ. ನಿತ್ಯಪೂಜೆ ಇಲ್ಲದಿದ್ದರೂ ಗ್ರಾಮೀಣರೆಲ್ಲ ವರ್ಷಕ್ಕೊಮ್ಮೆ ಒಟ್ಟಾಗಿ ಸೇರಿ ಈ ದೇವತೆಗಳಿಗೆ ಜಾತ್ರೆ ನಡಸುತ್ತಾರೆ. ಗ್ರಾಮಸಮಾಜ ದಲ್ಲಿ ಇದೊಂದು ಸಂಭ್ರಮದ ದಿನ. ಕೆಲವೆಡೆ ಈ ಜಾತ್ರೆ ಕೆಲವು ದಿನಗಳವರೆಗೂ ನಡೆಯು ವುದುಂಟು. ಗ್ರಾಮದ ಪ್ರತಿ ಮನೆಯವರೂ ಗ್ರಾಮದೇವತೆಗೆ ಪೂಜೆ ಒಪ್ಪಿಸುತ್ತಾರೆ. ದೇವತೆಯ ಪ್ರತಿಕೃತಿಯನ್ನು ಮಾಡಿ, ಉತ್ಸವ ನಡಸಿ ವಿಸರ್ಜಿಸುತ್ತಾರೆ. ಕೆಲವು ಕಡೆ ಗಳಲ್ಲಿ ದೇವರ ಪ್ರೀತ್ಯರ್ಥವಾಗಿ ಕೊಂಡ ಹಾಯುವ ಸಂಪ್ರದಾಯ ಇದೆ. ಕೆಲವು ಕಡೆ

ಗಳಲ್ಲಿ ಸಿಡಿ ಆಡುವ ಸಂಪ್ರದಾಯವೂ ಇದೆ.

ಗ್ರಾಮದೇವತೆಗಳಿಗೆ ಸಲ್ಲಿಸುವ ಪೂಜೆಯೂ ವಿಶೇಷ ರೀತಿಯದು. ಬೇವಿನ ಸೊಪ್ಪು, ತಾಳೆ, ಹೊಂಬಾಳೆ ಇವುಗಳಿಂದ ಅಲಂಕರಿಸುವುದು, ಅರಿಶಿನ ಕುಂಕುಮಗಳನ್ನು ದಪ್ಪವಾಗಿ ಮೆತ್ತುವುದು ಅಥವಾ ಅರ್ಪಿಸುವುದು ಸಾಮಾನ್ಯ. ಎಣ್ಣೆಮಜ್ಜನವಂತೂ ಆಗಾಗ್ಗೆ ನಡೆಯುತ್ತಿರುತ್ತದೆ. ಸಣ್ಣ ಪುಟ್ಟ ಬಾಧೆಗಳ ಪರಿಹಾರಕ್ಕಾಗಿ ತಂಬಿಟ್ಟು ಮತ್ತು ಬಗೆಬಗೆಯ ಅನ್ನಗಳನ್ನು ಒಪ್ಪಿಸುವುದುಂಟು. ಈ ದೇವತೆಗಳಿಗೆ ರಕ್ತಮಾಂಸ ನೈವೇದ್ಯವೂ ನಿಷಿದ್ಧವಲ್ಲ. ರಕ್ತಮಿಶ್ರಿತ ಅನ್ನ ಅರ್ಪಿಸುವುದು ಒಂದು ರೂಢಿ. ಹರಕೆ ಕಟ್ಟಿಕೊಂಡಾಗ ಅಥವಾ ಹಬ್ಬಗಳಲ್ಲಿ ದೇವತೆಯ ಪ್ರೀತ್ಯರ್ಥವಾಗಿ ಕುರಿ, ಕೋಳಿ, ಮೇಕೆ, ಕೋಣ ಇವುಗಳನ್ನು ಬಲಿ ಕೊಡುವುದು ಸಾಮಾನ್ಯ.

ಕೆಲವು ಊರುಗಳಲ್ಲಿ ಒಂದಕ್ಕಿಂತ ಹೆಚ್ಚು ದೇವತೆಗಳೂ ಇರುವುದುಂಟು. ಒಂದು ಪ್ರಧಾನವಾದ ಗ್ರಾಮದೇವತೆಯಾದರೆ ಉಳಿದವು ಸಂದರ್ಭದೇವತೆಗಳು. ವಿಶಿಷ್ಟ ಸಂದರ್ಭಗಳಲ್ಲಿ ಮಾತ್ರ ಇವಕ್ಕೆ ಪೂಜೆ. ಉದಾಹರಣೆಗೆ, ಜ್ವರ ಬಂದಾಗ ಒಂದು ದೇವತೆಗೆ ಪೂಜೆ, ದನಗಳಿಗೆ ಜಡ್ಡಾದಾಗ ಇನ್ನೊಂದಕ್ಕೆ, ಕಾಯಿಲೆಯಾದಾಗ ಮತ್ತೊಂದಕ್ಕೆ, ಮಕ್ಕಳಾಗಲು ಮಗದೊಂದಕ್ಕೆ—ಹೀಗೆ ಬಗೆ ಬಗೆಯವು. ಇವುಗಳ ಸ್ವರೂಪ, ಸಂಬಂಧಿತ ಆಚರಣೆ ಇವೂ ಸುಮಾರು ಗ್ರಾಮದೇವತೆಗೆ ಹೇಳಿದ ಹಾಗೆಯೇ. ಬಹುದೇವತಾರಾಧನೆ ಜನಪದಧರ್ಮದ ಒಂದು ಮುಖ್ಯ ಅಂಶ.

ಗ್ರಾಮದೇವತೆಗಳಲ್ಲಿ ಹೆಚ್ಚು ಕಡೆ ಕಂಡುಬರುವುದು ಮಾರಮ್ಮ. ಈ ದೇವತೆಯ ಕಲ್ಪನೆಯೇ ಬೇರೆ ಬೇರೆ ಹೆಸರುಗಳಲ್ಲಿ ಬೇರೆ ಬೇರೆ ಕಡೆ ಕಾಣುವುದೆನ್ನಬಹುದು. ಸ್ಥಳ ಅಥವಾ ಸಂಬಂಧಿಸಿದ ವಿಶೇಷ ನಂಬಿಕೆಗಳು ಇವಕ್ಕೆ ಹೊಂದಿಕೊಂಡು ಹೆಸರುಗಳಿರುತ್ತವೆ. ಕುಂಡ್ಮಾರಿ, ಕುಂಟುಮಾರಿ, ಕಿವುಡ್ಮಾರಿ, ಬೆಂಕಿಮಾರಿ, ಉರಿಮಾರಿ, ಸೀಗುಮಾರಿ, ದಂಡಿನ ಮಾರಿ ಇತ್ಯಾದಿಗಳು ಆ ದೇವತೆಗಳ ಜೊತೆಗಿರುವ ವಿಶೇಷ ಕಲ್ಪನೆಗಳಿಂದ ರೂಢಿತವಾಗಿದ್ದರೆ, ಬೆಟ್ಟಳ್ಳಿ ಮಾರಮ್ಮ, ಅಗರದಿಂಡಿನ ಮಾರಿ, ಉತ್ತನಳ್ಳಿ ಮಾರಿ, ಮೂಕಳ್ಳಿ ಮಾಮಾರಿ, ಹಾಸನಮ್ಮ, ಮೊಗೆಯಮ್ಮ ಮುಂತಾದುವು ಆಯಾ ದೇವತೆಗಳ ಸ್ಥಳದಿಂದ ಬಂದುವಾಗಿವೆ. ದುರುಗಮ್ಮ, ಲಕ್ಷ್ಮಮ್ಮ, ಚಿಕ್ಕಮ್ಮ, ದ್ಯೇವಮ್ಮ, ಮಲ್ಲುಗ ದೇವಿ, ಮುಳ್ಳಾಚಿ, ಹ್ಯಾಮಾದ್ರಿ, ಮಸಣಮ್ಮ, ಬರಿಮಸಣಿ, ಎಕನಾಚಿ, ದುಬ್ಬಮ್ಮ, ಮಮ್ಮಾಯಿ ಇವೂ ಮಾರಮ್ಮನ ಪ್ರತಿರೂಪಗಳೇ. ಈ ಗ್ರಾಮದೇವತೆಗಳು ರೋಗ ರುಜಿನಗಳಿಂದ ಜನರನ್ನು ರಕ್ಷಿಸುವುವು ಎಂಬ ನಂಬಿಕೆ ಹೆಚ್ಚಿನ ಮಟ್ಟಿಗೆ ಇದೆ. ಒಂದೊಂದೇ ರೋಗಕ್ಕೆ ಸಂಬಂಧಿಸಿದಂತೆ ಸೀತಾಳಮ್ಮ, ಪ್ಲೇಗಮ್ಮ ಎಂಬ ದೇವತೆಗಳೂ ಇರುವುದುಂಟು.

ಈ ಜನಪದ ದೇವತೆಗಳು ವಿಶೇಷವಾಗಿ ರೌದ್ರ ದೇವತೆಗಳು. ಇವುಗಳ ಆರಾಧನೆಯಿಂದ ಕೆಡಕಾಗುವುದು ತಪ್ಪುವುದು, ಪೂಜಿಸದೆ ಬಿಟ್ಟರೆ ಇವು ಕೆಡಕು ಮಾಡುತ್ತವೆ —ಎಂಬ ನಂಬಿಕೆ ಬಹು ಪ್ರಭಾವಿಯಾಗಿರುತ್ತದೆ. ಇದರಿಂದಾಗಿಯೇ ಶಿವ, ವಿಷ್ಣು ಇತ್ಯಾದಿ ವರಪ್ರದಾನ ಮಾಡುವ ದೇವತೆಗಳಿಗಿಂತಲೂ ಹೆಚ್ಚಾಗಿ ಈ ಮೇಲಿನ ದೇವತೆ

ಗಳಿಗೇ ಬಹು ಭಯಭಕ್ತಿಯಿಂದ ಗ್ರಾಮೀಣರು ನಡೆದುಕೊಳ್ಳುವರು. ಬೇರೆಬೇರೆ ಕಡೆ ಇರುವ ಈ ಜಪಪದ ದೇವತೆಗಳು ಪರಸ್ಪರ ಸಂಬಂಧಿಗಳು ಅಥವಾ ವೈರಿಗಳು ಎಂಬ ಕಲ್ಪನೆಗಳೂ ಅವುಗಳ ರೀತಿ ನೀತಿಗಳ ಬಗ್ಗೆ ಅನೇಕ ರೀತಿಯ ಕಥೆ ಕಲ್ಪನೆಗಳೂ ಇದ್ದು, ಇವು ಜನಪದ ಸಾಹಿತ್ಯಕ್ಕೆ ವಸ್ತುವನ್ನು ಒದಗಿಸಿರುವುದನ್ನು ಕಾಣಬಹುದಾಗಿದೆ. ಈ ಸಾಹಿತ್ಯ ಗೀತರೂಪವಾಗಿಯೇ ಕಥಾರೂಪವಾಗಿಯೋ ಇರಬಹುದು. ಈ ರೀತಿಯಲ್ಲಿ ಪ್ರಸಿದ್ಧವಾಗಿರುವ ಒಂದು ದೇವತೆ ಎಲ್ಲಮ್ಮ.

ಜನಪದ ಧಾರ್ಮಿಕ ಆಚರಣೆಗಳು ಬಹು ಸರಳ. ಈ ಬಹುದೇವತಾಪೂಜೆಯಲ್ಲದೆ, ವೀರರ ಪೂಜೆ, ಪಿತೃಪೂಜೆ ಸಹ ಸ್ವಲ್ಪಮಟ್ಟಿಗೆ ಇದೆ. ಹಲವು ಕಡೆಗಳಲ್ಲಿ ಮೃತರಿಗೆ ಸಮಾಧಿ ಕಟ್ಟಿ ಪೂಜಿಸುವುದು, ವೀರಗಲ್ಲುಗಳ ರೀತಿಯಲ್ಲಿ ಸ್ಮಾರಕಗಳನ್ನು ಸ್ಥಾಪಿಸಿ ಪೂಜೆ ಅರ್ಪಿಸುವುದು ಅಲ್ಲಲ್ಲಿ ಕಾಣಸಿಗುತ್ತದೆ. ವೀರತ್ವದ ಪ್ರದರ್ಶನಕ್ಕೆ ಅಷ್ಟಾಗಿ ಅವಕಾಶವಿಲ್ಲದ ಈ ಕಾಲದ ಗ್ರಾಮೀಣ ಸಮಾಜಗಳಲ್ಲಿ ಈ ವೀರಪೂಜೆಯ ವ್ಯಾಪಕತೆ ಹೆಚ್ಚಿಲ್ಲದಿದ್ದರೂ, ಹಿಂದಿನ ಕಾಲದ ಸಹಸ್ರಾರು ಸಂಖ್ಯೆಯ ವೀರಗಲ್ಲುಗಳು, ಹಿಂದೆ ಈ ಸಂಪ್ರದಾಯ ವಿಶೇಷವಾಗಿತ್ತು ಎಂಬುದನ್ನು ಸೂಚಿಸುತ್ತವೆ. ಇಂದಿನ ಜನಪದದಲ್ಲಿ ಹಲವೆಡೆ ಕಂಡುಬರುವ ಬೀರೇದೇವರ ಕಲ್ಪನೆ ಈ ವೀರಪೂಜೆಗೇ ಸಂಬಂಧಿಸಿದ್ದಿರಬೇಕು.[12]

ದಕ್ಷಿಣ ಕನ್ನಡಜಿಲ್ಲೆ ಮತ್ತು ಸುತ್ತಲ ಪ್ರದೇಶದಲ್ಲಿ ಪ್ರಚಲಿತವಾಗಿರುವ ಭೂತಾರಾಧನೆ ಜನಪದಧರ್ಮದ ಒಂದು ವಿಶಿಷ್ಟ ಪ್ರಭೇದ. ಭೂತಾರಾಧನೆಯ ಹಿನ್ನೆಲೆಯಲ್ಲಿರುವುದು ಪಿತೃಗಳು, ವೀರರು ಮತ್ತು ಮಹಾನ್‌ವ್ಯಕ್ತಿಗಳ ಬಗೆಗಿನ ಗೌರವ. ಕೋಟಿ ಚೆನ್ನಯ, ಕಾಂತಾಬಾರೆ–ಬೂದಾಬಾರೆ, ಕುಜುಂಬ–ಕಂಜ, ಕಲ್ಕುಡ–ಕಲ್ಲುರ್ಟಿ ಕೋಟಿದ ಬಬ್ಬು, ಅಬ್ಬಗ–ಪಾರಗ, ಕೋಟಿಪುಂಜ–ದೇವುಪುಂಜ ಇವೆಲ್ಲ ಭೂತತ್ವವನ್ನು ಪಡೆದ ಮಾನವರೆಂದೇ ತೋರುತ್ತದೆ. ಈಗ ಜನರ ಕಲ್ಪನೆಯಲ್ಲಿರುವ ಭೂತಗಳ ಸಂಖ್ಯೆ ನೂರಕ್ಕೂ ಹೆಚ್ಚಿರಬಹುದು. ಆದರೆ ಕೆಲವು ಭೂತಗಳು ವಿಶೇಷ ಶಕ್ತಿಶಾಲಿಯಾದವು ಎಂಬ ಭಾವನೆ ಇದೆ. ಇವಕ್ಕೆ ಪೂಜಾದಿಗಳು ವಿಶಿಷ್ಟ ರೀತಿಯಲ್ಲಿ ಹೆಚ್ಚು ವೈಭವದಿಂದ ನಡೆಯುತ್ತವೆ. ಕೆಲವು ಭೂತಗಳಾದರೋ ಸನಾತನ ಧರ್ಮದ ದೇವತೆಗಳೇ. ಮತ್ತೆ ಕೆಲವು ಅವುಗಳಿಂದ ಹುಟ್ಟಿದವು ಅಥವಾ ಸಂಬಂಧಿತವಾದವು. ಉದಾಹರಣೆಗೆ ಪಂಜುರ್ಲಿ, ಚಾವುಂಡಿ, ಭಗವತಿ ಇತ್ಯಾದಿ. ಇಂಥವು ಜನಪದಧರ್ಮ-ಸನಾತನಧರ್ಮದ ಪ್ರಭಾವಕ್ಕೆ ಒಳಗಾದ ನಂತರ ಹುಟ್ಟಿಕೊಂಡವು ಎನ್ನಬಹುದು.

ದಕ್ಷಿಣಕನ್ನಡ ಜಿಲ್ಲೆಯ ಸುಮಾರು ಪ್ರತಿಯೊಂದು ಹಳ್ಳಿಯಲ್ಲಿಯೂ ಒಂದಾದರೂ ಭೂತದ ನೆಲೆ (ಸಾನ) ಇರುತ್ತದೆ. ಒಂದು ಕೋಣೆ ಮತ್ತು ಮುಂದೆ ೨ ಕಂಬಗಳ ಮೇಲೆ ನಿಂತಿರುವ ಚಪ್ಪಾರ ಇಲ್ಲಿರುತ್ತದೆ. ಕೆಲವೆಡೆ ಮರದ ಕೆಳಗೆ ಅಥವಾ ಬಯಲಿನ ಕೆಲವೊಂದು ಜಾಗಗಳು ಭೂತದ ಸಾನವೆನ್ನುವುದುಂಟು. ಜನಪ್ರಿಯವಾದ ಭೂತಗಳಿಗೆ ದೊಡ್ಡದಾದ ಕಟ್ಟಡಗಳು ಇರುವುದುಂಟು. ಭೂತದ ಪ್ರತೀಕವಾಗಿ ಕೆಲವು ಹಿತ್ತಾಳೆಯ ಬೊಂಬೆಗಳಿರುತ್ತವೆ. ಅಲ್ಲದೆ 'ಭೂತದ ಮಂಚ'ವಿದ್ದು, ಅದರ ಮೇಲೆ ಖಡ್ಗ, ಗಂಟೆ

ಗಳನ್ನು ಇಟ್ಟಿರುತ್ತಾರೆ; ಹುಲಿ, ಹಂದಿ, ಕೋಣ, ಎತ್ತು ಮುಂತಾದವುಗಳ ಬೊಂಬೆಗಳೂ ಇರುತ್ತವೆ. ಈ ಭೂತಗಳಿಗೆ ಸಂಬಂಧಿಸಿದಂತೆ ಅನೇಕ ಕಥೆಗಳಿರುತ್ತವೆ. ಇಂಥ ಕಥೆಗಳನ್ನು ಒಳಗೊಂಡ ಹಾಡುಗಳು (ಪಾಡ್ದನ) ಜನಪದರಲ್ಲಿ ಪ್ರಚಾರದಲ್ಲಿದ್ದು, ಅವನ್ನು ಆ ಭೂತಗಳ ಪೂಜಾದಿನಗಳಲ್ಲಿ ವಾದ್ಯಗಳ ಸಮೇತ ಹಾಡುವುದು, ಜೊತೆಗೆ ನೃತ್ಯಮಾಡುವುದು ವಿಶೇಷವಾಗಿ ಕಾಣಸಿಗುತ್ತವೆ. ಈ ಭೂತಗಳಿಗೆ ಜನಪದದ ಸುಮಾರು ಎಲ್ಲ ವರ್ಗಗಳವರೂ ನಡೆದುಕೊಂಡರೂ, ಭೂತಾರಾಧನೆಗೆ ಸಂಬಂಧಿಸಿದ ವೇಷ ಹಾಕುವುದು ಮುಂತಾದ ಧಾರ್ಮಿಕ ಆಚರಣೆಗಳಲ್ಲಿ ಕೆಲವೇ ಜಾತಿಯವರು ಮಾತ್ರ—ಬೈದ್ಯ, ನಲಿಕೆ, ಪರವ, ಪಂಬದ, ಪಾಣಾರ—ಭಾಗವಹಿಸುತ್ತಾರೆ.

ಭೂತಗಳು ಒಂದು ರೀತಿಯಲ್ಲಿ ರೌದ್ರದೇವತೆಗಳು. ಅವುಗಳಿಗೆ ನಡೆದುಕೊಳ್ಳದಿದ್ದರೆ ತೊಂದರೆಕೊಡುತ್ತವೆ ಎಂಬ ಭಾವನೆ ವಿಶೇಷವಾಗಿದೆ. ಜನಗಳು ಭೂತಗಳಿಗೆ ಹರಕೆ ಕಟ್ಟಿಕೊಳ್ಳುತ್ತಾರೆ, ಭೂತಗಳನ್ನು ತಣಿಸಲು ಕಾಲಕಾಲಕ್ಕೆ, ಕೋಲ, ಬಲಿ; ನೇಮು, ಕಂಬಲ, ಬಂಡಿ ಮುಂತಾದ ವಿವಿಧರೀತಿಯ ಉತ್ಸವಗಳನ್ನು ಆಚರಿಸುತ್ತಾರೆ. ಕೋಲ ದೊಡ್ಡ ಉತ್ಸವ. ವ್ಯಕ್ತಿಯೊಬ್ಬ ದೈವದ ವೇಷವನ್ನು ಹಾಕಿ ಕುಣಿಯುತ್ತಾನೆ. ಭೂತವೇ ಅವನ ಮೇಲೆ ಬಂದು ಹರಕೆ ಒಪ್ಪಿಸಿಕೊಳ್ಳುತ್ತದೆ ಎಂದು ನಂಬಿಕೆ. ಈ ಸಂದರ್ಭದಲ್ಲಿ ಧರಿಸುವ ಭೂತದ ವೇಷಗಳು ಆಯಾ ಭೂತದ ಬಗ್ಗೆ ಇರುವ ಕಲ್ಪನೆಯನ್ನು ಅನುಸರಿಸಿ ಇರುತ್ತವೆ. ಉದಾಹರಣೆಗೆ ಪಂಜುರ್ಳಿಗೆ ವರಾಹದ ಮುಖ, ಮೈಸಂದಾಯನಿಗೆ ಕೊಂಬು. ಭೂತವನ್ನು ಅಲಂಕರಿಸಲು ಎಳೆಯ ತೆಂಗಿನಗರಿ, ಕೇಪಳದ ಹೂ, ಅರದಾಳ, ಮಸಿ ಮುಂತಾದುವನ್ನು ಬಳಸುತ್ತಾರೆ. ಕೋಲದಲ್ಲಿ ಆಯಾ ಭೂತದ ಹುಟ್ಟು, ಬೆಳವಣಿಗೆ, ಕಾರ್ಣಿಕ ಮುಂತಾದುವನ್ನು ಪಾಡ್ದನವಾಗಿ ಹಾಡುತ್ತಾರೆ. ನೇಮ ನಿಯಮಪ್ರಕಾರ ಭೂತಗಳಿಗೆ ಸಲ್ಲುವ ಸೇವೆ; ಹೆಚ್ಚುಕಡಿಮೆ ಕೋಲದಂತೆಯೇ. ಅಗಲು, ಪರ್ವಗಳಲ್ಲಿ ಭೂತಗಳಿಗೆ ಎಡೆಬಡಿಸುತ್ತಾರೆ.

ಈ ಭೂತಗಳ ಕಲ್ಪನೆ ಸಹ ಜನಸಮೂಹದಲ್ಲಿ ಬಹು ಹಿಂದಿನಿಂದ ಇದ್ದಿರಬೇಕು. ಆದರೆ ಇಂದಿನ ಆಚರಣೆಗಳಲ್ಲಿ ಅನೇಕ ಸನಾತನಧರ್ಮೀಯ ಅಂಶಗಳು ಬೆರೆತು ಹೋಗಿವೆ.

ಒಟ್ಟಿನಲ್ಲಿ ಈ ಜನಪದ ಧರ್ಮಗಳು ಪರಂಪರಾಗತವಾಗಿ ಉಳಿದುಕೊಂಡುಬಂದಿರುವ ನಂಬಿಕೆಗಳ ಮೇಲೆ ಅವಲಂಬಿತವಾಗಿದೆ. ನೈಸರ್ಗಿಕ ಶಕ್ತಿಗಳು, ವೀರರು, ಪಿತೃಗಳು ಇವುಗಳ ಬಗ್ಗೆ ಗೌರವ ಮತ್ತು ಭಯ ಈ ಧರ್ಮದ ಹಿನ್ನೆಲೆಯಲ್ಲಿರುವ ಅಂಶ ಎಂದು ಹೇಳಬಹುದು. ವೈಜ್ಞಾನಿಕ ವಿಚಾರಗಳು ಅಷ್ಟಾಗಿ ಪ್ರಚಾರದಲ್ಲಿಲ್ಲದ, ಭಾವನಾತ್ಮಕ ಅಂಶಗಳೇ ವಿಶೇಷವಾಗಿದ್ದ ಪ್ರಾಚೀನ ಕಾಲದ ಸಮಾಜಗಳಲ್ಲಿ ಈ ಧರ್ಮದ ಪ್ರಭಾವ ಅತ್ಯಧಿಕವಾಗಿರುವುದು ಸಹಜ. ಆದಿಕಾಲದಿಂದ ೯ನೆಯ ಶತಮಾನದವರೆಗಿನ ಕರ್ಣಾಟಕದಲ್ಲಿ ಈ ಜನಪದ ಧರ್ಮವನ್ನು ನಂಬಿದವರು ಬಹುಸಂಖ್ಯೆಯಲ್ಲಿದ್ದಿರಬೇಕು.

## ಔತ್ತರೇಯ ಧರ್ಮಗಳು

ಸು. ಕ್ರಿ.ಪೂ. ೫ನೆಯ ಶತಮಾನದಾರಭ್ಯ ಔತ್ತರೇಯ ರಾಜಕೀಯ ಆರ್ಥಿಕ ಸಂಪರ್ಕಗಳು ಕರ್ನಾಟಕದಲ್ಲಿ ಬೆಳೆಯುತ್ತಾ ಬಂದಂಥ ಸಂದರ್ಭದಲ್ಲಿ ಉತ್ತರದೇಶದಲ್ಲಿ ವ್ಯವಸ್ಥಿತವಾಗಿದ್ದ ಧರ್ಮಗಳೂ ಈ ನಾಡಿನಲ್ಲಿ ಪಸರಿಸಲಾರಂಭಿಸಿದುವು. ಉತ್ತರ ದೇಶ ದಿಂದ ಬಂದು ರಾಜಕೀಯ ವ್ಯವಸ್ಥೆಯಲ್ಲಿ ಅಧಿಕಾರಗಳನ್ನು ಹೊಂದಿ ಇಲ್ಲಿ ನೆಲಸಿದವರು, ವ್ಯಾಪಾರಾದಿ ಉದ್ದೇಶಗಳಿಗಾಗಿ ಬಂದ ವ್ಯಕ್ತಿಗಳು, ತಾವು ಮೂಲತಃ ಅನುಸರಿಸಿದ್ದ ಧರ್ಮಗಳು ಇಲ್ಲಿಯೂ ಹರಡಲು ಕಾರಣವಾಗಿರಬೇಕು. ತಮ್ಮ ಧರ್ಮಗಳ ಬಗ್ಗೆ ಅವರಿ ಗಿದ್ದ ಅಭಿಮಾನದಿಂದ ಅವರ ಧರ್ಮದ ಆಚರಣೆಗೆ ಹಾಗೂ ಪ್ರಸಾರಕ್ಕೆ ಅನುವಾಗು ವಂತೆ ತಮ್ಮ ನಾಡಿನಿಂದ ಆಚಾರ್ಯ-ಪುರೋಹಿತರನ್ನು ಕರಸಿಕೊಂಡಿರುವುದು ಸ್ವಾಭಾವಿಕ. ಮೊದಲಲ್ಲಿ ಔತ್ತರೇಯ ಧರ್ಮಾನುಯಾಯಿಗಳಾಗಿದ್ದ ವ್ಯಕ್ತಿಗಳು ರಾಜ್ಯಾಧಿಕಾರದಿಂದ, ಆರ್ಥಿಕ ಬಲದಿಂದ ಸಾಮಾಜಿಕವಾಗಿ ಸ್ಥಳೀಯರಿಗಿಂತ ಉನ್ನತ ಮಟ್ಟದ್ದವರಾಗಿದ್ದುದು ಮತ್ತು ಆ ಧರ್ಮಗಳ ವೈಚಾರಿಕ ಹಿನ್ನೆಲೆಯ ಔನ್ನತ್ಯ ಈ ಕಾರಣಗಳಿಂದ, ಸ್ಥಳೀಯ ಜನರು ಅದರಲ್ಲೂ ಆರ್ಥಿಕ ಸಾಮಾಜಿಕವಾಗಿ ಹೊಸವ್ಯವಸ್ಥೆ ಯಲ್ಲಿ ಏಳ್ಗೆ ಪಡೆಯುತ್ತಿದ್ದವರು ಈ ಧರ್ಮಗಳತ್ತ ಒಲವು ತೋರಿಸಿ ಇವು ಈ ನಾಡಿನಲ್ಲಿ ಹಬ್ಬಲು ಕಾರಣವಾಗಿರಬೇಕು. ಧರ್ಮ ಪ್ರಸಾರಣೆ ಈ ರೀತಿ ನಡೆಯುವುದು ಇತಿಹಾಸದಲ್ಲಿ ಕಂಡುಬರುವ ಸಾಮಾನ್ಯ ವಿಷಯ. ಈ ಸ್ಥಿತಿಯಿಂದ ಸ್ಪಷ್ಟವಾಗುವ ಒಂದು ವಿಷಯ ವೆಂದರೆ ಔತ್ತರೇಯ ಧರ್ಮಗಳು ಕಾಲಿಡುತ್ತಿದ್ದ ಕಾಲದಲ್ಲಿ ಅವು ಹೆಚ್ಚು ನಾಗರಿಕ ಸಮಾಜಗಳಲ್ಲಿ, ಅದರಲ್ಲೂ ಪಟ್ಟಣ ಪ್ರದೇಶಗಳಲ್ಲಿ, ಪ್ರಭಾವಿಯಾಗಿ ಇದ್ದಿರಬೇಕು ಎನ್ನುವುದು. ಮೌರ್ಯ-ಸಾತವಾಹನ ಕಾಲದ ಕರ್ನಾಟಕದ ಹಲವು ಪುರಾತತ್ತ್ವ ಆಧಾರಗಳು ಈ ವಿಷಯಕ್ಕೆ ಮಾಹಿತಿಯೊದಗಿಸುತ್ತವೆ.

## ಬೌದ್ಧ ಧರ್ಮ

ಮೌರ್ಯಸಾಮ್ರಾಜ್ಯದ ಕಕ್ಷೆಯಲ್ಲಿ ಕರ್ನಾಟಕ ಸೇರುವ ಹೊತ್ತಿಗೆ ಉತ್ತರ ಭಾರತದಲ್ಲಿ, ಅದರಲ್ಲೂ ಮೌರ್ಯಸಾಮ್ರಾಜ್ಯದ ಕೇಂದ್ರವಾದ ಮಗಧ ದೇಶದಲ್ಲಿ, ಬೌದ್ಧಧರ್ಮ ಪ್ರಭಾವಶಾಲಿಯಾಗಿ ಬೆಳೆದಿತ್ತು. ಆ ಧರ್ಮದ ಪ್ರಸಾರಣೆಗೆ ಶ್ರಮಿಸಿ ದವರಲ್ಲಿ ಅಶೋಕ ಮುಖ್ಯನಾದವನು. ಈತನ ಕಾಲದಲ್ಲಿ ಬೌದ್ಧಧರ್ಮ ಕರ್ನಾಟಕಕ್ಕೆ ಹರಡಿತೆಂದು ಶ್ರೀಲಂಕಾದ ಬೌದ್ಧಧರ್ಮೀಯ ಗ್ರಂಥಗಳಾದ 'ದೀಪವಂಸ' ಮತ್ತು 'ಮಹಾವಂಸ' ತಿಳಿಸುತ್ತವೆ. ಅವುಗಳ ಪ್ರಕಾರ ಅಶೋಕನು ಏರ್ಪಡಿಸಿದ್ದ ಬೌದ್ಧ ಮಹಾಸಭೆಯ ಅನಂತರ ಆ ಸಭೆಯ ಅಧ್ಯಕ್ಷತೆ ವಹಿಸಿದ್ದ ಹಿರಿಯನಾದ ಮೊಗ್ಗಲಿಪುತ್ತ ತಿಸ್ಸ ಧರ್ಮಪ್ರಸಾರಣೆಗಾಗಿ ಮಹಿಷಮಂಡಲಕ್ಕೆ ಮಹಾದೇವ ಮತ್ತು ವನವಾಸಿಗೆ ರಕ್ಖಿತ ಎಂಬ ಭಿಕ್ಷುಗಳನ್ನು ಕಳುಹಿಸಿದ. ಮಹಾದೇವ ಮಹಿಷಮಂಡಲದಲ್ಲಿ ಬುದ್ಧನು ಹೇಳಿದ 'ದೇವದೂತ' ಉಪದೇಶವನ್ನು ಬೋಧಿಸಿದ. ಇದರಿಂದ ನಲವತ್ತು ಸಾವಿರ

ಜನ ಬೌದ್ಧಧರ್ಮದ ಅನುಯಾಯಿಗಳಾದರು, ಅಲ್ಲದೆ ನಲವತ್ತು ಸಾವಿರ ಜನ ಭಿಕ್ಷುಗಳಾದರು. ವನವಾಸಿಗೆ ಬಂದ ರಕ್ಷಿತ 'ಅನಂತಗ್ಗ'ವನ್ನು ಉಪದೇಶಿಸಿದ. ಅಲ್ಲಿ ಅರುವತ್ತು ಸಾವಿರ ಜನ ಬೌದ್ಧಧರ್ಮಕ್ಕೆ ಸೇರಿದರು, ಮೂವತ್ತೇಳು ಸಾವಿರ ಜನ ಭಿಕ್ಷುಗಳಾದರು. ಅಲ್ಲದೆ ರಕ್ಷಿತ ೫೦೦ ವಿಹಾರಗಳನ್ನು ಕಟ್ಟಿಸಿದ.[13] ಈ ಸಂಖ್ಯೆಗಳ ಬಗ್ಗೆ ಅನುಮಾನ ವ್ಯಕ್ತಪಡಿಸಬಹುದಾದರೂ, ಈ ಕಾಲದಲ್ಲಿ ಧರ್ಮ ಪ್ರಸಾರವಾಗಿರುವ ಬಗ್ಗೆ ಸಂದೇಹವಿರಲಾರದು. ಈ ಗ್ರಂಥಗಳಲ್ಲದೆ ಬೌದ್ಧಧರ್ಮದ ದಾಕ್ಷಿಣಾತ್ಯ ಹಾಗೂ ಔತ್ತರೇಯ ಸಂಪ್ರದಾಯಗಳಿಗೆ ಸೇರಿದ 'ಥೂಪವಂಶ', 'ಸದ್ಧಮ್ಮ ಸಂಗ್ರಹ', 'ಮಿಲಿಂದಪಞ್ಹ', 'ಸಮಂತಪಾಸಾದಿಕ' ಮೊದಲಾದ ಇತರ ಗ್ರಂಥಗಳಲ್ಲೂ ಈ ವಿಷಯದ ಉಲ್ಲೇಖಗಳು ದೊರಕುತ್ತವೆ.[14] ಕ್ರಿ.ಶ. ೭ನೆಯ ಶತಮಾನದಲ್ಲಿ ಕರ್ನಾಟಕವನ್ನು ಸಂದರ್ಶಿಸಿದ ಹುಯೆನ್‌ತ್ಸಾಂಗ್ ಕೊಂಕಣ ಪುರದಲ್ಲಿ ಅಶೋಕ ಕಟ್ಟಿಸಿದ ಸ್ತೂಪಗಳು ಇವೆ ಎಂದು ಹೇಳಿದ್ದಾನೆ ಈ ಕೊಂಕಣಪುರ ಉತ್ತರ ಕನ್ನಡ ಜಿಲ್ಲೆಯ ಬನವಾಸಿ ಇರಬಹುದೆಂದು ಊಹೆ ಇದೆ.[15]

ಸಾತವಾಹನ ಯುಗದಲ್ಲಿ (ಕ್ರಿ.ಪೂ. ೨ರಿಂದ ಕ್ರಿ.ಶ. ೩ನೆಯ ಶತಮಾನ) ಬೌದ್ಧ ಧರ್ಮ ಕರ್ಣಾಟಕದಲ್ಲಿ ನೆಲೆಗೊಂಡಿತ್ತು ಎಂದು ಹೇಳಬಹುದಾಗಿದೆ. ಈ ಕಾಲದಲ್ಲಿ ಕರ್ಣಾಟಕದ ಪಕ್ಕದ ಪ್ರದೇಶಗಳಲ್ಲಿ ಈ ಧರ್ಮ ವ್ಯಾಪಕವಾಗಿತ್ತೆಂಬುದಕ್ಕೆ ಅಮರಾವತಿ, ನಾಗಾರ್ಜುನಕೊಂಡ, ಜಗ್ಗಯ್ಯಪೇಟ ಮೊದಲಾದ ಆಂಧ್ರದೇಶದ ನೆಲೆಗಳಲ್ಲಿರುವ ಬೌದ್ಧಸ್ಮಾರಕಗಳು, ಭಾಜ, ಕಾರ್ಲೆ, ಕನ್ಹೇರಿ, ನಾಸಿಕ, ಅಜಂತ, ಜುನ್ನರ್ ಮೊದಲಾದ ಮಹಾರಾಷ್ಟ್ರದ ಸ್ಥಳಗಳಲ್ಲಿರುವ ಬೌದ್ಧ ಗುಹಾಲಯಗಳು ಸಾಕ್ಷ್ಯಗಳಾಗಿವೆ.[16] ಇಂದಿನ ಕರ್ಣಾಟಕದ ಗಡಿಯ ಬಳಿ ಇರುವ ಬ್ರಹ್ಮಪುರಿ (ಕೊಲ್ಹಾಪುರ)[17] ಹಾಗೂ ಬೀದರ್ ಜಿಲ್ಲೆಯ ಗಡಿಯಿಂದ ಅನತಿ ದೂರದಲ್ಲಿರುವ ತೇರ್ (ಉಸ್ಮಾನಾಬಾದ್ ಜಿಲ್ಲೆ)[18] ಗಳಲ್ಲಿನ ಉತ್ಖನನಗಳಿಂದ ಅಲ್ಲೆಲ್ಲಾ ಸಾತವಾಹನ ಕಾಲದ ಬೌದ್ಧಸ್ತೂಪಗಳಿದ್ದ ಬಗ್ಗೆ ಮಾಹಿತಿಗಳು ದೊರಕಿವೆ. ಕರ್ನಾಟಕದಲ್ಲಿ ಈ ರೀತಿಯಲ್ಲಿ ಬಹುಸಂಖ್ಯೆಯಲ್ಲಿ ವಸ್ತುವಾಸ್ತು ಅವಶೇಷಗಳು ದೊರಕಿಲ್ಲದಿದ್ದರೂ ಈ ಪ್ರದೇಶದಲ್ಲೂ ಬೌದ್ಧಧರ್ಮದ ನೆಲೆಗಳು ಇದ್ದಿರಬೇಕೆಂಬುದಕ್ಕೆ ಇತ್ತೀಚೆಗೆ ಗುಲ್ಬರ್ಗ ಜಿಲ್ಲೆಯ ಸನ್ನತಿಯಲ್ಲಿ ಬೆಳಕಿಗೆ ಬಂದ ಅವಶೇಷಗಳು ಸೂಚನೆ ನೀಡುತ್ತವೆ. ಸನ್ನತಿ ಒಂದು ದೊಡ್ಡ ಊರಾಗಿತ್ತೆಂದು ಅಲ್ಲಿನ ಅವಶೇಷಗಳ ಹರಹಿನಿಂದ ಊಹಿಸಬಹುದು. ಆ ಸ್ಥಳದ ಅನ್ವೇಷಣೆಯಲ್ಲಿ ಕಂಡುಬಂದಿರುವ ಆಧಾರಗಳಿಂದ ಕಡೆಯಪಕ್ಷ ೪ ಸ್ತೂಪಗಳಾದರೂ ಅಲ್ಲಿದ್ದಿರಬೇಕೆಂದು ಹೇಳಬಹುದು. ಈ ಸ್ತೂಪಗಳ ಹೊರಮೈಗೆ ಕವಚಿದ್ದ ಶಿಲಾಫಲಕಗಳಲ್ಲಿ ಬುದ್ಧನನ್ನು ಸಿಂಹಾಸನ, ಪಾದ, ಕುದುರೆ, ಬೋಧಿವೃಕ್ಷ ಈ ಚಿಹ್ನೆಗಳಿಂದ ತೋರಿಸಲಾಗಿರುವುದಲ್ಲದೆ, ಒಂದೆಡೆ ಬುದ್ಧನನ್ನು ಮಾನವರೂಪದಲ್ಲೇ ಶಿಲ್ಪಿಸಲಾಗಿದೆ. ಅನೇಕ ಶಿಲ್ಪಫಲಕಗಳಲ್ಲಿ ಬುದ್ಧನ ಜೀವಿತದ ಕಥೆಗಳ ಮತ್ತು ಜಾತಕಕಥೆಗಳ ನಿರೂಪಣೆ ಇದೆ.[19] ಹೆಚ್ಚಿನ ಶಿಲ್ಪಗಳು ಬೇರೆ ಬೇರೆ ವ್ಯಕ್ತಿಗಳ ಕೊಡುಗೆಗಳಾಗಿದ್ದು ಅವುಗಳನ್ನು ದಾನ ಮಾಡಿದವರಲ್ಲಿ ರಾಜ್ಯಾಧಿಕಾರಿಗಳು

ಹಾಗೂ ನಟ, ಚರ್ಮಕಾರ ಇಂಥ ಸಾಮಾನ್ಯ ಜನರೂ ಅನೇಕ ಮಂದಿ ಗೃಹಸ್ಥರೂ ಸ್ತ್ರೀಯರೂ ಇದ್ದಾರೆ.[20] ಬೌದ್ಧಧರ್ಮ ಕರ್ನಾಟಕದಲ್ಲಿ ಆ ಕಾಲದ ಹೊತ್ತಿಗೆ ಸಮಾಜದ ಎಲ್ಲಾ ವರ್ಗಗಳಲ್ಲೂ ಕೆಲವು ಸ್ಥಳಗಳಲ್ಲಾದರೂ ಚೆನ್ನಾಗಿ ಹರಡಿರಬೇಕೆಂದು ಇವುಗಳಿಂದ ಅರಿಯಬಹುದಾಗಿದೆ. ಬನವಾಸಿ ಪ್ರಾಂತ್ಯದಲ್ಲಿ ಸಹ ಬೌದ್ಧಧರ್ಮವಿದ್ದ ಬಗ್ಗೆ ಮಾಹಿತಿಗಳು ದೊರೆಯುತ್ತವೆ. ಈಗ ಮಹಾರಾಷ್ಟ್ರದ ಪುಣೆ ಜಿಲ್ಲೆಯಲ್ಲಿರುವ ಪ್ರಸಿದ್ಧವಾದ ಕಾರ್ಲೆಯ ಬೌದ್ಧಗುಹಾಲಯದ ಮುಂಭಾಗವನ್ನು ಮಾಡಿಸಿದವನು ಬನವಾಸಿಯ ಶ್ರೇಷ್ಠಿಯೊಬ್ಬನೆಂದು ಕ್ರಿ.ಪೂ. ೧ನೆಯ ಶತಮಾನದ ಅಲ್ಲಿಯ ಒಂದು ಶಾಸನ ತಿಳಿಸುತ್ತದೆ.[21] ಬನವಾಸಿಯಲ್ಲಿ ನಾಗನಿಕಾ ಎಂಬುವಳು ವಿಹಾರವೊಂದನ್ನು ಕಟ್ಟಿಸಿದ ವಿಷಯ ಆ ಸ್ಥಳದ ನಾಗರಕಲ್ಲಿನ ಶಾಸನದಿಂದ (ಕ್ರಿ.ಶ. ೩ನೆಯ ಶತಮಾನ) ತಿಳಿದುಬಂದಿದೆ.[22] 'ಮಹಾವಂಸ'ದಲ್ಲಿ ಸಹ ಕರ್ನಾಟಕದಲ್ಲಿ ಬೌದ್ಧಧರ್ಮವಿದ್ದ ಬಗ್ಗೆ ಪ್ರಸ್ತಾಪವಿದೆ. ಕ್ರಿ.ಪೂ. ೧೦೧–೭೭ರಲ್ಲಿ ಆಳಿದ ದುಟ್ಟಗಾಮಣಿ ತನ್ನ ರಾಜಧಾನಿ ಅನುರಾಧಪುರದಲ್ಲಿನ ಮಹಾಸ್ತೂಪವನ್ನು ನಿರ್ಮಿಸುವ ಮೊದಲು ಆ ಕೆಲಸದ ಪ್ರಾರಂಭೋತ್ಸವಸಮಾರಂಭವನ್ನು ಏರ್ಪಡಿಸಿದ್ದು, ಅದಕ್ಕಾಗಿ ವಿವಿಧ ದೇಶಗಳಿಂದ ಬೌದ್ಧಭಿಕ್ಷುಗಳು ಆಗಮಿಸಿದ್ದರು. ಹಾಗೆ ಬಂದಿದ್ದವರಲ್ಲಿ ಬನವಾಸಿಯ ಥೇರ ಚಂದಗುತ್ತ ಸಹ ಒಬ್ಬ. ಅವನು ಎಂಬತ್ತು ಸಾವಿರ ಭಿಕ್ಷುಗಳನ್ನು ತನ್ನೊಡನೆ ಕರೆತಂದಿದ್ದ ಎಂದು ಆ ಗ್ರಂಥದಲ್ಲಿ ಹೇಳಿಕೆ ಇದೆ.[23]

ಮೌರ್ಯ-ಸಾತವಾಹನ ಕಾಲದ ಕರ್ನಾಟಕದಲ್ಲಿ ಯಾವ ಬೌದ್ಧಧರ್ಮೀಯ ಪಂಥಗಳು ಇದ್ದುವೆಂಬುದನ್ನು ತಿಳಿಯಲು ಈ ನಾಡಿನಲ್ಲಿ ಸಾಕಷ್ಟು ಆಧಾರಗಳು ದೊರಕುವುದಿಲ್ಲ. ಅಶೋಕನ ಕಾಲದಲ್ಲಿ ಇಲ್ಲಿ ಹರಡಿದ ಬೌದ್ಧಪಂಥ ಹೀನಯಾನವೇ ಆಗಿರಬೇಕು. ಅದರಲ್ಲೂ ಥೇರವಾದದ ಒಂದು ಶಾಖೆಯಾದ ವೈಭಜ್ಯವಾದಿಗಳಿಗೆಅಶೋಕ ಹೆಚ್ಚು ಒಲವು ತೋರಿಸಿದ್ದಂತೆ ತೋರುತ್ತದೆ.[24] ತಾತ್ತ್ವಿಕ ಭಾಗದಲ್ಲಿ ನಾಲ್ಕು ಮಹಾಸತ್ಯಗಳ ವಿಚಾರ[25] ಇಲ್ಲೂ ಪ್ರಚಲಿತವಾಗಿರಬೇಕು. ಆಚರಣೆಯ ಭಾಗದಲ್ಲಿ ಪುರುಷರು ಹಾಗೂ ಸ್ತ್ರೀಯರು ಭಿಕ್ಷು ಭಿಕ್ಷುಣಿಯರಾಗುವುದು, ತತ್ಸಂಬಂಧಿತವಾದ ಕಾಷಾಯ ವಸ್ತ್ರಧಾರಣೆ, ಭಿಕ್ಷಾವೃತ್ತಿ, ಅಧ್ಯಯನ, ಧರ್ಮಪ್ರಚಾರ, ಚಾತುರ್ಮಾಸ, ವಿಹಾರವಾಸ ಇಂಥ ರೂಢಿಗಳು ಕರ್ನಾಟಕದಲ್ಲೂ ಹರಡಿರಬಹುದು. ಅಲ್ಲದೆ ಈ ಭಿಕ್ಷುಸಂಘಗಳನ್ನು ಗೌರವಿಸಿ, ಪೋಷಿಸಿ, ಗೃಹಸ್ಥಾಶ್ರಮದಲ್ಲೇ ಇರುತ್ತಿದ್ದ ಬೌದ್ಧಧರ್ಮಾನುಯಾಯಿಗಳ ವರ್ಗ ಸಹ ಬಲಯುತವಾಗಿರಬೇಕು. ಇವರು ಧಾರ್ಮಿಕ ಆಚರಣೆಯಲ್ಲಿ ಸ್ತೂಪ, ಬೋಧಿವೃಕ್ಷ ಇತ್ಯಾದಿಗಳನ್ನು ಪೂಜಿಸಬೇಕೆಂಬುದು, ಅಹಿಂಸೆ, ದಾನ, ಅನುಕಂಪ, ಈ ಉದಾತ್ತ ಅಂಶಗಳನ್ನು ಅನುಸರಿಸಬೇಕೆಂಬುದು ಬೌದ್ಧಧರ್ಮದ ನಿಯಮಗಳಾಗಿವೆ. ವ್ಯಕ್ತಿಗಳ ನೀತಿಯುತ ನಡವಳಿಕೆಯೇ ಜೀವನದಲ್ಲಿ ಮುಖ್ಯವಾದುದು ಎಂಬುದು ಹೀನಯಾನ ಪಂಥದ ಮುಖ್ಯ ತತ್ತ್ವಗಳಲ್ಲೊಂದು. ಕ್ರಿ.ಶ. ೨ನೆಯ ಶತಮಾನದ ಹೊತ್ತಿಗೆ ಮಹಾಯಾನ ಪಂಥ ಹುಟ್ಟಿಕೊಂಡಿತ್ತು. ಉತ್ತರ ಭಾರತದಲ್ಲಿ ಇದರ ಉಗಮವಾದರೂ ಕರ್ನಾಟಕದ ಪಕ್ಕದ ಆಂಧ್ರದೇಶದಲ್ಲಿ ಸುಮಾರು ಅದೇ

ಕಾಲದಲ್ಲೇ ಹರಡಲಾರಂಭಿಸಿತ್ತು ಎಂಬುದಕ್ಕೆ ಆಧಾರಗಳಿವೆ. ಆದ್ದರಿಂದ ಆ ಕಾಲದಲ್ಲಿ ಕರ್ಣಾಟಕದಲ್ಲೂ ಇದು ಪ್ರಚಲಿತವಾಗಿದ್ದರೆ ಆಶ್ಚರ್ಯವಿಲ್ಲ. ಮಹಾಯಾನದ ಮೂಲ ತಾತ್ತ್ವಿಕ ಸಿದ್ಧಾಂತಗಳಲ್ಲಿ ಹೀನಯಾನದ ಅಂಶಗಳೇ ಹೆಚ್ಚಿಗೆ ಕಂಡುಬರುತ್ತವೆಯಾದರೂ ಒಂದೆರಡು ಹೊಸವಿಷಯಗಳೂ ಸೇರಿದ್ದವು. ಅವುಗಳಲ್ಲಿ ಬುದ್ಧನನ್ನು ದೇವತ್ವದ ಮಟ್ಟಕ್ಕೆ ಏರಿಸಿ ಅವನನ್ನು ಮಾನವ ರೂಪದಲ್ಲಿ ಆರಾಧಿಸುವ ಪದ್ಧತಿ ಮುಖ್ಯವಾದುದು. ಬುದ್ಧ ಕರುಣಾಮಯಿ, ತಾನು ನಿರ್ವಾಣವನ್ನು ಹೊಂದಲು ಸಮರ್ಥನಾಗಿದ್ದರೂ ಲೋಕೋಪ ಕಾರಾರ್ಥವಾಗಿ ದುಃಖಿಜನರಮೇಲೆ ಕರುಣೆ ಇಟ್ಟು ತಾನು ನಿರ್ವಾಣತ್ವವನ್ನು ಹೊಂದದೆ ಬೋಧಿಸತ್ತ್ವರೂಪದಲ್ಲಿಕಾಲಕಾಲದಲ್ಲಿಕಾಣಿಸಿಕೊಳ್ಳುವನು ಎಂಬುದು ಹಾಗೂ ಒಬ್ಬನಲ್ಲದೆ ಹಲವು ಬುದ್ಧರನ್ನು ನಂಬುವುದು ಈ ಮಹಾಯಾನದ ಹೊಸ ವಿಚಾರಗಳು. ಬುದ್ಧನನ್ನು ಅರ್ಚಿಸುವುದು, ಆ ಮೂಲಕ ಅವನಿಗೆ ಶರಣಾಗಿ ಅವನ ಅನುಗ್ರಹವನ್ನು ಪಡೆಯಬಹುದೆಂದು ನಂಬುವುದು ಆಚರಣಾಭಾಗದಲ್ಲಿನ ಅಂಶಗಳು.[26] ಸನ್ನತಿಯ ಒಂದು ಶಿಲಾಫಲಕದಲ್ಲಿ ಬುದ್ಧನನ್ನು ಮಾನವರೂಪದಲ್ಲಿ ಶಿಲ್ಪಿಸಿದೆ.[27] ಮಹಾಯಾನ ಪಂಥ ಸಹ ೨-೩ನೆಯ ಶತಮಾನಗಳ ಹೊತ್ತಿಗೆ ಕರ್ಣಾಟಕದಲ್ಲಿ ಪ್ರಚಾರವಾಗಿತ್ತೆಂಬು ದಕ್ಕೆ ಇದು ಒಳ್ಳೆಯ ಆಧಾರ.

ಅಲ್ಲದೆ ಈ ಕಾಲದ ಹೊತ್ತಿಗೆ ಮಹಾಯಾನ ಮತ್ತು ಹೀನಯಾನ ಈ ಎರಡು ಪಂಥಗಳಲ್ಲೂ ಕೆಲವೊಂದು ಸೂಕ್ಷ್ಮ ತಾತ್ತ್ವಿಕ ವ್ಯತ್ಯಾಸಗಳಿಂದಾಗಿ ಹಲವು ಉಪಶಾಖೆ ಗಳು ಹುಟ್ಟಿಕೊಂಡಿದ್ದುವು. ಮಹಾರಾಷ್ಟ್ರ ಮತ್ತು ಆಂಧ್ರ ದೇಶಗಳಲ್ಲಿ ಈ ಕಾಲದಲ್ಲಿ 'ಭದಾಯನೀಯ', (ಭದ್ರಯಾನೀಯ), 'ಧಮ್ಮುತ್ತರೀಯ' (ಧರ್ಮೋತ್ತರೀಯ), 'ಚೇತಕ' (ಚೈತ್ಯಕ), 'ಅಪರಸೇಲೀಯ' (ಅಪರಶೈಲೀಯ) 'ಪುಬ್ಬಸೇಲೀಯ' (ಪೂರ್ವ ಶೈಲೀಯ), 'ಮಹೀಶಾಸಕ', 'ಬಹುಸ್ಸುತೀಯ' (ಬಹುಶ್ರುತೀಯ)—ಈ ಬೌದ್ಧಶಾಖೆ ಗಳಿದ್ದುವು. ಒಂದೊಂದು ಶಾಖೆಗೆ ಸಂಬಂಧಪಟ್ಟಂತೆ ಪ್ರತ್ಯೇಕ ವಿಹಾರಗಳು ಮತ್ತು ದೇವಾಲಯಗಳು, ಸ್ತೂಪ ಮುಂತಾದ ಧಾರ್ಮಿಕಸ್ಥಾನಗಳು ಇದ್ದುವು ಎಂಬುದಕ್ಕೆ ಶಾಸನಾಧಾರಗಳಿವೆ.[28] ಇವುಗಳಲ್ಲಿ ಹಲವಾದರೂ ಕರ್ಣಾಟಕದಲ್ಲೂ ಪ್ರಚಲಿತವಾಗಿರ ಬಹುದು. ಈ ಶಾಖೆಗಳಲ್ಲಿ 'ಧಮ್ಮುತ್ತರೀಯ', 'ಭದಾಯನೀಯ' ಇವು ಥೇರವಾದದ ಶಾಖೆ ಗಳೆಂದು 'ದೀಪವಂಸ' ತಿಳಿಸುತ್ತದೆ. 'ಮಹೀಶಾಸಕ' ಸಹ ಇದರ ಒಂದು ಶಾಖೆಯೇ.[29] ಪೂರ್ಣವಾಗಿ ಮಹಾಯಾನದ ಕಕ್ಷೆಯೊಳಗಿಲ್ಲದಿದ್ದರೂ ಆ ಪಂಥದ ತತ್ತ್ವಗಳಿಗೆ ಸಮೀಪ ವರ್ತಿಯಾಗಿದ್ದವು ಎಂದರೆ ಮಹಾಸಾಂಘಿಕ, ಬಹುಶ್ರುತೀಯ, ಮತ್ತು ಚೈತ್ಯಕ ಶಾಖೆಗಳು. ಇವುಗಳಲ್ಲಿ ಕೊನೆಯ ಎರಡು ಹಾಗೂ ಪುಬ್ಬಸೇಲೀಯ ಮತ್ತು ಅಪರ ಸೇಲೀಯಗಳು ಮಹಾಸಾಂಘಿಕದ ಪ್ರಭೇದಗಳು ಎನ್ನಲಾಗಿದೆ.[30] ನಳಿನಾಕ್ಷದತ್ತರ ಪ್ರಕಾರ ಬನವಾಸಿಯಲ್ಲಿ ಮಹೀಶಾಸಕ ಪಂಥ ಪ್ರಬಲವಾಗಿತ್ತು.[31] ಈ ಪಂಥದ ಸಿದ್ಧಾಂತ ಗಳು ಥೇರವಾದಕ್ಕೆ ಬಹು ಸಮೀಪವಾಗಿದ್ದುವು.[32] ಮಹೀಶಾಸಕ ಶಾಖೆಯು ಮಹಿಷ ದೇಶ (ಮಹಿಷ ಮಂಡಲ) ಅಥವಾ ಅಲ್ಲಿ ಮೊದಲು ಬೌದ್ಧಧರ್ಮ ಪ್ರಸಾರ ಮಾಡಿದ

ಮಹಾದೇವನಿಂದ ಪ್ರಚಾರವಾಗಿರಬೇಕು ಎಂಬ ಊಹೆ ಇದೆ.[33] ಚುಟುವಂಶದ ಒಬ್ಬ ರಾಣಿ ನಾಗಾರ್ಜುನ ಕೊಂಡದಲ್ಲಿ ಮಹೀಶಾಸಕರಿಗಾಗಿ ಒಂದು ವಿಹಾರವನ್ನು ಕಟ್ಟಿಸಿದಳು ಎಂದು ಅಲ್ಲಿಯ ಒಂದು ಶಾಸನ ತಿಳಿಸುತ್ತದೆ.[34]

ಹೀಗೆ ಈ ಶತಮಾನಗಳಲ್ಲಿ ಹಲವು ಬೌದ್ಧ ಪಂಥಗಳಿದ್ದುವೆಂಬುದಕ್ಕೆ ಸೂಚನೆಗಳಿದ್ದರೂ ಬೌದ್ಧಧರ್ಮದ ಒಂದು ವಿಶಿಷ್ಟ ಸಂಪ್ರದಾಯವನ್ನೂ ಗಮನಿಸಬೇಕು. ಮಹಾರಾಷ್ಟ್ರ, ಆಂಧ್ರಪ್ರದೇಶಗಳಲ್ಲಿಯ ಶಾಸನಗಳಿಂದ ವಿಹಾರಗಳು ಯಾವುದೇ ಪಂಥದವರ ಅಧಿಕಾರಕ್ಕೊಳಪಟ್ಟಿದ್ದರೂ, ವರ್ಷಾಕಾಲದಲ್ಲಿ ಚಾತುರ್ದಿಶ ಭಿಕ್ಷುಸಂಘಕ್ಕೂ ಅಲ್ಲಿ ಪ್ರವೇಶವಿತ್ತು. ಯಾವ ಪಂಥ, ಯಾವ ಶಾಖೆಯವರಾದರೂ ಅಂಥ ವಿಹಾರಗಳಲ್ಲಿ ಒಟ್ಟುಗೂಡಿ ಧರ್ಮಾಚರಣೆ ಮಾಡಬಹುದಾಗಿತ್ತೆಂದು ತೋರುತ್ತದೆ. ಈ ಸ್ಥಿತಿಯಲ್ಲಿ ವಿವಿಧ ದೇಶಗಳ ಭಿಕ್ಷುಗಳು ಸ್ಥಳದಿಂದ ಸ್ಥಳಕ್ಕೆ ಸಂಚರಿಸಿ ಧರ್ಮ ಪ್ರಸಾರ ಮತ್ತು ಸಾಂಸ್ಕೃತಿಕ ಕಸಿಗೆ ಅವಕಾಶ ಮಾಡಿಕೊಟ್ಟಿರಬೇಕು. ಸಿಂಹಳದ ಬೌದ್ಧಭಿಕ್ಷುಗಳು ಬನವಾಸಿಯಲ್ಲಿ ಧರ್ಮ ಪ್ರಚಾರಮಾಡಿದರೆಂದು ನಾಗಾರ್ಜುನಕೊಂಡದ ಒಂದು ಶಾಸನದಿಂದ ತಿಳಿಯುತ್ತದೆ.[35] ಇದೇ ಕಾಲದಲ್ಲಿ ಬೌದ್ಧಧರ್ಮ ಹರಡಿದ್ದ ಇತರೆಡೆಗಳಲ್ಲಿ ಪ್ರಚಲಿತವಿದ್ದ ಬುದ್ಧ, ಬೋಧಿವೃಕ್ಷ, ಸ್ತೂಪ, ನಾಗ, ಯಕ್ಷರ ಪೂಜೆ, ದೇವಾಲಯಗಳ ರಚನೆ, ಭಿಕ್ಷುಗಳಿಗೆ ಗೌರವ ಇತ್ಯಾದಿ ಸಂಪ್ರದಾಯಗಳೂ ಕರ್ನಾಟಕದಲ್ಲೂ ಇರಬೇಕು. ಹಿಂದೆ ತಿಳಿಸಿದ ಬನವಾಸಿಯ ನಾಗವಿಗ್ರಹವಲ್ಲದೆ ಸನ್ನತಿಯಲ್ಲಿ ಸಹ ಸು. ೫ ಅಡಿ ಎತ್ತರದ ಐದು ಹೆಡೆಗಳುಳ್ಳ ಒಂದು ದೊಡ್ಡ ನಾಗವಿಗ್ರಹ ಮತ್ತು ಇತರ ಅನೇಕ ಸಣ್ಣ ನಾಗವಿಗ್ರಹಗಳು, ಯಕ್ಷರ ಮೂರ್ತಿಗಳು ದೊರಕಿವೆ.

ಕ್ರಿ.ಶ. ೪ನೆಯ ಶತಮಾನದ ಹೊತ್ತಿಗೆ ಬೌದ್ಧಧರ್ಮದ ತತ್ತ್ವ, ಕಥೆ, ನಂಬಿಕೆಗಳು ಕರ್ನಾಟಕದಲ್ಲಿ ಜನಸಾಮಾನ್ಯರಲ್ಲಿ ವ್ಯಾಪಿಸಿರಬೇಕು. ಈ ಶತಮಾನದ ಒಂದು ತಾಮ್ರಪಟದಲ್ಲಿ, ಅದು ಶೈವ ಧರ್ಮೀಯನದಾದರೂ ಅಲ್ಲಿಯ ದೊರೆಯನ್ನು ವರ್ಣಿಸುವಾಗ "ಪ್ರಾಣಿನಾಂ ಪರಮಕಾರುಣಿಕತಯಾ ಬೋಧಿಸತ್ತ್ವೋಪಮಾನಸ್ಯ" ಎಂಬ ವರ್ಣನೆ ಇದೆ.[36] ಆದರೂ ಆ ಕಾಲದಾರಭ್ಯ ದೊರಕುವ ಶಾಸನಗಳನ್ನು ಗಮನಿಸಿದರೆ ಹೆಚ್ಚಿನವು ಬೌದ್ಧಧರ್ಮಕ್ಕಿಂತ ಇತರ ಧರ್ಮಗಳಿಗೆ ಸಂಬಂಧಿಸಿರುವುದು ಕಾಣುತ್ತದೆ. ಕಾರಣ ಅಸ್ಪಷ್ಟವಾದರೂ, ಬೌದ್ಧಧರ್ಮದ ಪ್ರಭಾವ ಇಳಿಮುಖವಾಗಿರಬೇಕು. ಆದರೆ ಅಲ್ಲಲ್ಲಿ ಬೌದ್ಧಧರ್ಮೀಯರು ಇದ್ದರೆಂಬುದಕ್ಕೆ ಸೂಚನೆಗಳಿವೆ. ೪ನೆಯ ಶತಮಾನದ ಗಂಗ ಮಾಧವನ ಒಂದು ಶಾಸನದಲ್ಲಿ 'ಶಾಕ್ಯಶಿಲಾ' ಎಂಬ ಪದದ ಪ್ರಯೋಗವಿದೆ. ಶೈವದತ್ತಿಗಳಾದರೆ ಲಿಂಗಮುದ್ರೆ ಕಲ್ಲುಗಳಿದ್ದಂತೆ, ಬೌದ್ಧರಿಗೆ ಕೊಟ್ಟ ದತ್ತಿಯಾದರೆ ಶಾಕ್ಯಶಿಲೆಯನ್ನು ನೆಡುತ್ತಿದ್ದಿರಬೇಕು. ಶಾಸನದ ಕೊನೆಯಲ್ಲಿ 'ಬುದ್ಧಸತ್ತ್ವಾಯ ದತ್ತಮಾ ಚಂದ್ರತಾರಕಂ' ಎಂದಿರುವುದರಿಂದ ಇದು ಬೌದ್ಧರಿಗೆ ಕೊಟ್ಟ ದತ್ತಿ ಎಂಬುದು ಸ್ಪಷ್ಟವೇ ಆಗುತ್ತದೆ. ಶಾಸನದಲ್ಲಿ ಬರುವ ಆಂತರಿಕ ಆಧಾರಗಳಿಂದ ಕೋಲಾರ ಜಿಲ್ಲೆಯ ಆವನಿಯ ಸಮೀಪದಲ್ಲೆಲ್ಲೋ ಈ ದತ್ತಿ ನೀಡಿದ್ದಂತೆ ತೋರುತ್ತದೆ.[37] ಸು. ೫೦೦ರ

ಕಾರವಾರ ಪ್ರದೇಶದ ಒಂದು ಶಾಸನದಲ್ಲಿ 'ನಿಷ್ಕಾರಣವತ್ಸಲ' ಬುದ್ಧನನ್ನು ಪ್ರಾರ್ಥಿಸಿ ವಿಹಾರ ಮತ್ತು ಆರ್ಯ ಸಂಘಗಳಿಗೆ ದಾನಕೊಟ್ಟ ವಿವರಗಳಿವೆ.[38] ೭ನೆಯ ಶತಮಾನ ಕರ್ಣಾಟಕದಲ್ಲಿ ಸಂಚರಿಸಿದ ಹುಯೆನ್‌ತ್ಸಾಂಗ್ ಬನವಾಸಿಯಲ್ಲಿ ನೂರು ಸಂಘಾರಾಮ ಗಳು ಮತ್ತು ಹೀನಯಾನ ಹಾಗೂ ಮಹಾಯನ ಪಂಥದ ಹತ್ತು ಸಾವಿರ ಭಿಕ್ಷುಗಳು ಇದ್ದರೆಂಬ ಹೇಳಿಕೆ ಇದೆ ಎನ್ನಲಾಗಿದೆ.[39] ಬಾದಾಮಿಯಲ್ಲಿ ಮೇಣಬಸದಿಗಳ ಜೊತೆ ಯಲ್ಲಿರುವ ಒಂದು ನೈಸರ್ಗಿಕ ಗುಹೆಯಲ್ಲಿ ದಶಬಾಧೆಗಳನ್ನು ನಿವಾರಿಸುವ ಅವ ಲೋಕಿತೇಶ್ವರನ ಒಂದು ಮೂರ್ತಿ ಇದೆ.

ಒಟ್ಟನಲ್ಲಿ ಮೌರ್ಯರ ಕಾಲದಲ್ಲಿ ಕರ್ಣಾಟಕಕ್ಕೆ ಕಾಲಿಟ್ಟ ಬೌದ್ಧಧರ್ಮ ಸಾತ ವಾಹನರ ಕಾಲದಲ್ಲಿ ಪ್ರಭಾವಿಯಾಗಿದ್ದು, ತದನಂತರ ಹಿನ್ನೆಲೆಗೆ ಸರಿಯುತ್ತ ಎಲ್ಲೋ ಕೆಲವೆಡೆಗಳಲ್ಲಿ ಮಾತ್ರ ಉಳಿದುಕೊಂಡಿತು ಎಂದು ಹೇಳಬಹುದಾಗಿದೆ. ಆದರೆ ಆ ಹೊತ್ತಿಗಾಗಲೇ ಬೌದ್ಧಧರ್ಮದ ತತ್ತ್ವ ಆಚರಣೆಗಳು, ಪರಿಭಾಷೆ ಇತ್ಯಾದಿಗಳು ಕರ್ಣಾಟಕದಲ್ಲಿ ಸಾಕಷ್ಟು ಮಟ್ಟಿಗೆ ಪ್ರಸಾರಗೊಂಡಿರಬೇಕು.[40]

## ಜೈನಧರ್ಮ

ಕರ್ಣಾಟಕದಲ್ಲಿ ಜೈನಧರ್ಮ ಕ್ರಿಸ್ತಪೂರ್ವದ ಕಾಲದಿಂದಲೇ ಹರಡಿರಬೇಕೆಂಬುದಕ್ಕೆ ಅನಂತರಕಾಲದ ಹಲವು ಸಾಹಿತ್ಯಿಕ ಮತ್ತು ಶಾಸನಗಳ ಆಧಾರಗಳು ದೊರಕುತ್ತವೆ.

ಸು. ೧೦ನೆಯ ಶತಮಾನದಲ್ಲಿ ರಚಿತವಾದ್ದೆಂದು ಕೆಲವರು ತಿಳಿಯುವ 'ವಡ್ಡಾರಾಧನೆ' ಯಲ್ಲಿರುವ ಈ ಸಂಬಂಧದ ಒಂದು ಕಥೆ ಹೀಗಿದೆ: ಭದ್ರಬಾಹು ಭಟಾರರು ಉಜ್ಜಯಿನಿ ಯಲ್ಲಿದ್ದಾಗ ಉತ್ತರ ದೇಶದಲ್ಲಿ ೧೨ ವರ್ಷಗಳ ಕಾಲ ಕ್ಷಾಮವುಂಟಾಗುತ್ತದೆಯೆಂಬು ದನ್ನು ಅರಿತು ತಮ್ಮ ಶಿಷ್ಯರೊಡಗೂಡಿ ದಕ್ಷಿಣ ದೇಶಕ್ಕೆ ಬರುತ್ತಾರೆ. ಅವರೊಡನೆ ಬಂದ ಶಿಷ್ಯರಲ್ಲಿ ಉಜ್ಜಯಿನಿಯ ರಾಜನಾಗಿದ್ದ ಸಂಪ್ರತಿ ಚಂದ್ರಗುಪ್ತನೂ ಒಬ್ಬ. ಭದ್ರಬಾಹು ಭಟಾರರು ಕಟ್ಬಪ್ಪು ನಾಡನ್ನು (ಶ್ರವಣಬೆಳಗೊಳ) ಸಮೀಪಿಸಿದಾಗ ತಮ್ಮ ಅವಸಾನ ಕಾಲ ಹತ್ತಿರವಾಯಿತೆಂದು ತಿಳಿದು ಶಿಷ್ಯ ಚಂದ್ರಗುಪ್ತನೊಡನೆ ಅಲ್ಲಿಯೇ ಉಳಿಯು ತ್ತಾರೆ. ಉಳಿದ ಶಿಷ್ಯರು ದ್ರಾವಿಡ ದೇಶಕ್ಕೆ ಹೋಗುತ್ತಾರೆ. ಭದ್ರಬಾಹು ಮುನಿಗಳು ಸಮಾಧಿ ಮರಣವನ್ನು ಹೊಂದಿದ ಮೇಲೆ ಚಂದ್ರಗುಪ್ತ ಅವರ ನಿಸಿದಿಗೆಯನ್ನು ಪೂಜಿಸುತ್ತ ಅಲ್ಲೇ ಉಳಿದಿರುತ್ತಾನೆ. ದ್ರಾವಿಡ ದೇಶಕ್ಕೆ ಹೋಗಿದ್ದ ಋಷಿಸಮುದಾಯ ಹಿಂದಕ್ಕೆ ಬಂದು ಚಂದ್ರಗುಪ್ತನಿಗೆ ಸಂನ್ಯಾಸವನ್ನು ಕೊಟ್ಟು ತಮ್ಮ ಮಧ್ಯದೇಶಕ್ಕೆ ಹಿಂತಿರುಗುತ್ತಾರೆ.[41]

ಇದು ಈ ನಾಡಿಗೆ ಜೈನಧರ್ಮದ ಆಗಮನದ ಬಗ್ಗೆ ಸಿಗುವ ಪ್ರಾಚೀನ ಹೇಳಿಕೆ. ಈ ಕಥೆ ಪರಂಪರೆಯಿಂದ ಬಂದಿರಬೇಕು. ಸು. ೭೦೦ರ ಶ್ರವಣಬೆಳಗೊಳದ ಒಂದು ಶಾಸನದಲ್ಲಿಯೇ ಭದ್ರಬಾಹು ಅಲ್ಲಿ ನೆಲಸಿದ ವಿಷಯವಿದೆ.[42] ಶ್ರುತಕೇವಲಿಯಾದ ಭದ್ರಬಾಹುವಿಗೆ ಚಂದ್ರಗುಪ್ತನೆಂಬ ಶಿಷ್ಯನಿದ್ದನೆಂದು ಹರಿಷೇಣನ 'ಬೃಹತ್ಕಥೆ'ಯೂ

(೯೩೧) ಹೇಳುತ್ತದೆ.[43] ಭದ್ರಬಾಹು ಚಂದ್ರಗುಪ್ತರು ಶ್ರವಣಬೆಳಗೊಳಕ್ಕೆ ಬಂದು ನೆಲಸಿದ ವಿಷಯ ಇನ್ನೂ ಹಲವು ಶಾಸನಗಳಲ್ಲಿ ಪ್ರಸ್ತಾಪಿತವಾಗಿದೆ.[44] ಈ ಶಾಸನಗಳಲ್ಲಿ ಬರುವ ಚಂದ್ರಗುಪ್ತ ಮೌರ್ಯವಂಶದ ಸ್ಥಾಪಕ ಚಂದ್ರಗುಪ್ತ ಎಂದು ಲೂಯಿ ರೈಸ್ ಅವರು ಮೊದಲು ಪ್ರತಿಪಾದಿಸಿದರು.[45] ರೈಸ್‌ಅವರ ಹೇಳಿಕೆ ಇತಿಹಾಸ ಸಿದ್ಧವೆಂಬ ಅಭಿಪ್ರಾಯ ವಿಶೇಷವಾಗಿದೆ. ಶ್ರವಣಬೆಳಗೊಳದ ಶಾಸನಗಳ ಸಂಪುಟ ಗಳನ್ನು ಅನಂತರ ಸಂಪಾದಿಸಿರುವ ಆರ್. ನರಸಿಂಹಾಚಾರ್ಯ ಹಾಗೂ ಬಿ. ಆರ್. ಗೋಪಾಲ್ ಅವರು ಇದೇ ಅಭಿಪ್ರಾಯವನ್ನು ಪೋಷಿಸಿದ್ದಾರೆ.[46] ಹಾಗಿದ್ದಲ್ಲಿ ಜೈನ ಧರ್ಮ ಕರ್ನಾಟಕಕ್ಕೆ ಮೊದಲು ಕಾಲಿಟ್ಟದ್ದು ಕ್ರಿ.ಪೂ. ೩ನೆಯ ಶತಮಾನದಲ್ಲಿ. ಆದರೆ ಈ ನಂಬಿಕೆಯನ್ನು ಅನೇಕ ವಿದ್ವಾಂಸರು ಪ್ರಶ್ನಿಸಿದ್ದಾರೆ.[47] ಇತರ ವಾದಗಳನ್ನು ಮುಂದಿಟ್ಟಿದ್ದಾರೆ. ಫ್ಲೀಟ್ ಅವರ ಪ್ರಕಾರ ಇಲ್ಲಿನ ಭದ್ರಬಾಹು ಕ್ರಿ.ಪೂ. ೩೭೦ರಲ್ಲಿ ಗತಿಸಿದ ಶ್ರುತಕೇವಲಿ ಭದ್ರಬಾಹುವಲ್ಲ; ಕ್ರಿ.ಪೂ. ೩೦-೩೧ರಲ್ಲಿ ಬಂದ ಇಮ್ಮಡಿ ಭದ್ರ ಬಾಹು. ಅವನ ಶಿಷ್ಯನಾದ ಗುಪ್ತಿಗುಪ್ತ ಎಂಬುವನೇ ಚಂದ್ರಗುಪ್ತ. ಗೋವಿಂದ ಪೈ ಪ್ರಕಾರ ಭದ್ರಬಾಹುವಿನೊಡನೆ ಬಂದ ಚಂದ್ರಗುಪ್ತ ಮೌರ್ಯವಂಶದ ಸ್ಥಾಪಕ ಚಂದ್ರಗುಪ್ತನಲ್ಲ; ಅಶೋಕನ ಮೊಮ್ಮಗ ಸಂಪ್ರತಿ ಚಂದ್ರಗುಪ್ತ. ಎಂ. ಡಿ. ವಸಂತ ರಾಜ್ ಪ್ರಕಾರ ಇಲ್ಲಿ ಹೇಳಿರುವ ಚಂದ್ರಗುಪ್ತ, ನಂದವಂಶದ ಅರಸನಾದ ನಂದ ಚಂದ್ರ ಗುಪ್ತ. ಈ ಎಲ್ಲಾ ವಿದ್ವಾಂಸರೂ ಒಂದು ವಿಷಯದಲ್ಲಿ, ಎಂದರೆ ಕರ್ನಾಟಕಕ್ಕೆ ಜೈನ ಧರ್ಮದ ಆಗಮನಕ್ಕೆ ಭದ್ರಬಾಹು-ಚಂದ್ರಗುಪ್ತರು ಕಾರಣರು ಎಂಬುದರಲ್ಲಿ ಸರಿ ಸುಮಾರು ಏಕಾಭಿಪ್ರಾಯವುಳ್ಳವರಾಗಿದ್ದಾರೆ. ವಸಂತರಾಜ್ ಅವರ ಪ್ರಕಾರ ಈ ಘಟನೆ ನಡೆದದ್ದು ಕ್ರಿ.ಪೂ. ೪ನೆಯ ಶತಮಾನದಲ್ಲಿ; ರೈಸ್ ಮೊದಲಾದವರ ಪ್ರಕಾರ ಕ್ರಿ.ಪೂ, ೩ನೆಯ ಶತಮಾನ; ಗೋವಿಂದ ಪೈಗಳ ಪ್ರಕಾರ ಕ್ರಿ.ಪೂ. ೩ನೆಯ ಶತ ಮಾನದ ಅಂತ್ಯ ಅಥವಾ ೨ನೆಯ ಶತಮಾನದ ಆದಿಭಾಗ; ಫ್ಲೀಟ್ ಅವರ ಪ್ರಕಾರ ಕ್ರಿ.ಪೂ. ೧ನೆಯ ಶತಮಾನ.

ಭದ್ರಬಾಹು-ಚಂದ್ರಗುಪ್ತರ ಆಗಮನಕ್ಕೆ ಮುಂಚೆಯೇ ಜೈನಧರ್ಮ ಕರ್ನಾಟಕ ದಲ್ಲಿ ಇದ್ದಿರಬೇಕೆಂದು ಪಿ. ಬಿ. ದೇಸಾಯರ ಊಹೆ. ಅವರ ಪ್ರಕಾರ ಕ್ರಿ.ಪೂ. ೪ನೆಯ ಶತಮಾನದಲ್ಲೇ ಜೈನಧರ್ಮ ಸಿಂಹಳದಲ್ಲಿತ್ತು. ಅದು ದಕ್ಷಿಣ ದೇಶದ ಮೂಲಕ ಹಾದು ಹೋಗಿರಬೇಕು. ಅಲ್ಲದೆ ಭದ್ರಬಾಹು ದಕ್ಷಿಣಕ್ಕೆ ಬರಬೇಕಾದರೆ ಅಲ್ಲಿ ಆ ವೇಳೆಗಾಗಲೇ ಇದ್ದ ಜೈನಧರ್ಮೀಯರು ತಮ್ಮನ್ನು ಸ್ವಾಗತಿಸಬಹುದೆಂಬ ಭರವಸೆ ಅವರಿಗೆ ಇರ ಬೇಕು. ಇದು ಅವರ ತರ್ಕ.[48] ಹಿಂದೆ ಕರ್ನಾಟಕ ದೇಶಕ್ಕೆ ಹೇಮಾಂಗದ ದೇಶವೆಂದು ಹೆಸರಿತ್ತು, ಇಲ್ಲಿ ಕ್ರಿ.ಪೂ. ೬ನೆಯ ಶತಮಾನದಲ್ಲಿ ಜೀವಂಧರನೆಂಬ ಜೈನ ದೊರೆ ಆಳು ತ್ತಿದ್ದ, ಮಹಾವೀರನು ದಕ್ಷಿಣಕ್ಕೆ ಬಂದಾಗ ಅವನು ಆತನಿಂದಲೇ ದೀಕ್ಷೆಪಡೆದು ಮುನಿ ಯಾದ. ಹೀಗೆ ಕೆಲವು ಜೈನ ಕಥೆಗಳಿದ್ದು ಇವುಗಳ ಪ್ರಸ್ತಾಪ ವಾದೀಭಸಿಂಹಸೂರಿಯ 'ಕ್ಷಾತ್ರಚೂಡಾಮಣಿ' ಎಂಬ ಸಂಸ್ಕೃತ ಗ್ರಂಥ, ಭಾಸ್ಕರ ಕವಿಯ ಕನ್ನಡ, ಕೃತಿ

'ಜೀವಂಧರ ಚರಿತೆ', ತಿರುತ್ತಕ್ಕದೇವರ 'ಜೀವಕ ಚಿಂತಾಮಣಿ' ಎಂಬ ತಮಿಳು ಕೃತಿ ಇವುಗಳಲ್ಲಿವೆಯೆಂದು ಟಿ. ಜಿ. ಕಲಘಟಗಿ ಅವರು ಸೂಚಿಸುತ್ತಾರೆ.[49]

ಕರ್ಣಾಟಕಕ್ಕೆ ಜೈನಧರ್ಮ ಪ್ರವೇಶಿಸಿದ ಕಾಲದ ವಿಷಯ ಜಟಿಲವಾದುದು. ಹೀಗೆಯೇ ಎಂದು ಹೇಳಲು ಗಟ್ಟಿ ಆಧಾರಗಳಿಲ್ಲ. ಆದರೆ ಕೆಲವು ಊಹೆಗಳನ್ನು ಮಾಡುವ ಅವಕಾಶವಿದೆ. 'ಕ್ಷತ್ರಚೂಡಾಮಣಿ' ಇತ್ಯಾದಿ ಗ್ರಂಥಗಳು ಈಚಿನವಾದ್ದರಿಂದ, ಮಹಾವೀರನು ದಕ್ಷಿಣಕ್ಕೆ ಬಂದಿದ್ದನೆಂಬುದಕ್ಕೆ ವಿಪುಲವಾಗಿರುವ ಪ್ರಾಚೀನ ಜೈನ ಸಾಹಿತ್ಯದಲ್ಲೇ ಬೇರೆ ಆಧಾರಗಳು ದೊರಕುವುದಿಲ್ಲವಾದ್ದರಿಂದ, ಈ ಸೂಚನೆಯು ಗಣ್ಯತೆ ಪ್ರಶ್ನಾರ್ಹ. ಪಿ. ಬಿ. ದೇಸಾಯಿಯವರ ತರ್ಕಕ್ಕೆ ಕೂಡ ಅಷ್ಟು ಭದ್ರವಾದ ನೆಲೆ ಇಲ್ಲ. ಕ್ರಿ.ಪೂ. ೪ನೆಯ ಶತಮಾನದಲ್ಲಿ ಸಿಂಹಳದಲ್ಲಿ ಜೈನಧರ್ಮವಿದ್ದುದಕ್ಕೆ ಅದು ದಕ್ಷಿಣ ದೇಶದ ಮೂಲಕವೇ ಹೋಗಿರಬೇಕೆಂದಿಲ್ಲ. ಹೀಗೆಯೂ ಇರಬಹುದು: ಹಾಥಿಗುಂಫ ಶಾಸನದಿಂದ ಕಳಿಂಗದಲ್ಲಿ ಬಹು ಹಿಂದೆಯೇ ಜೈನಧರ್ಮವಿದ್ದ ಮಾಹಿತಿ ದೊರಕುತ್ತದೆ.[50] ಕಳಿಂಗಕ್ಕೂ ಸಿಂಹಳಕ್ಕೂ ನಿಕಟಸಂಪರ್ಕವಿತ್ತೆಂದು ಸಿಂಹಳೀಯ ಚಾರಿತ್ರಿಕ ಆಧಾರಗಳಿಂದ ತಿಳಿದಿದೆ. ಸಿಂಹಳದ ಕಥೆಗಳ ಪ್ರಕಾರ ಅಲ್ಲಿ ಭಾರತೀಯ ಸಂಸ್ಕೃತಿ ಕಾಲಿಡಲು ಕಾರಣನಾದ ಶ್ರೀವಿಜಯ ತೆರಳಿದ್ದು ಕಳಿಂಗದಿಂದಲೇ.[51] ಭದ್ರಬಾಹು ಕರ್ಣಾಟಕಕ್ಕೆ ಬಂದಾಗ ಇಲ್ಲಿ ಜೈನಧರ್ಮೀಯರು ಇದ್ದಿರಲಾರರೆಂಬುದಕ್ಕೆ 'ವಡ್ಡಾರಾಧನೆ'ಯಲ್ಲಿಯ ಕಥೆಯ ವಿವರಗಳೇ ಸೂಚಕಗಳಾಗಿವೆ. ಆ ಕಥೆಯಲ್ಲಿ ಇಲ್ಲಿ ಮೊದಲೇ ಇದ್ದ ಶ್ರಾವಕರ ಅಥವಾ ಮುನಿಗಳ ಪ್ರಸ್ತಾಪವೇ ಇಲ್ಲ. ಚಂದ್ರಗುಪ್ತ ಮುನಿಯ ಸೇವೆಗೆ ಮೆಚ್ಚಿ ಅವನಿಗೆ 'ವನದೇವತೆಗಳು' ಭಿಕ್ಷೆ ನೀಡುತ್ತಿದ್ದುವು. ಅವನಿಗೆ ದೀಕ್ಷೆಕೊಟ್ಟವರು ಮೊದಲು ಮಧ್ಯದೇಶದಿಂದ ಬಂದು ದ್ರಾವಿಡದೇಶಕ್ಕೆ ತೆರಳಿ ವಾಪಸು ಬರುತ್ತಿದ್ದ ಮುನಿಗಣದವರು.[52]

ಫ್ಲೀಟ್ ಅವರ ಚಂದ್ರಗುಪ್ತ ಮತ್ತು ಗುಪ್ತಿಗುಪ್ತರ ನಾಮಸಮೀಕರಣ ಅಸಾಧ್ಯವೆನ್ನಿಸುತ್ತದೆ. ಹಾಗೆಯೇ ಭದ್ರಬಾಹುವಿನೊಡನೆ ಬಂದ ಚಂದ್ರಗುಪ್ತ, ಮೌರ್ಯ ಸಾಮ್ರಾಜ್ಯವನ್ನು ಸ್ಥಾಪಿಸಿ ಚಕ್ರಾಧಿಪತಿಯಾಗಿದ್ದ ಚಂದ್ರಗುಪ್ತನಾಗಿರುವುದಕ್ಕಿಂತಲೂ ಮೌರ್ಯಸಾಮ್ರಾಜ್ಯ ಛಿದ್ರವಾದ ಕಾಲದಲ್ಲಿದ್ದ ಅಶೋಕನ ಮೊಮ್ಮಗ ಸಂಪ್ರತಿ ಚಂದ್ರಗುಪ್ತ ಇರಬಹುದೆಂಬ ಊಹೆ ಪ್ರಾಯಃ ಸಾಧುವಾಗಿದೆ. 'ವಡ್ಡಾರಾಧನೆ' ಮೊದಲಾದ ಗ್ರಂಥಗಳ ಸಾಕ್ಷ್ಯಗಳನ್ನು ಕಡೆಗಣಿಸುವಂತಿಲ್ಲ. ಈ ವಿಷಯದಲ್ಲಿ ಗೋವಿಂದ ಪೈ ಅವರ ಅಭಿಪ್ರಾಯ ಗಮನಿಸತಕ್ಕದ್ದಾಗಿದೆ. ಈ ದೃಷ್ಟಿಯಿಂದ ಜೈನಧರ್ಮ ಕರ್ಣಾಟಕಕ್ಕೆ ಬಂದ ಕಾಲ ಕ್ರಿ.ಪೂ. ೨ನೆಯ ಶತಮಾನದ ಆದಿಭಾಗ ಆಗಬಹುದು.

ಭದ್ರಬಾಹು-ಚಂದ್ರಗುಪ್ತರ ಕಥೆಯ ಆಧಾರ ಬಿಟ್ಟರೆ, ಕ್ರಿ.ಶ. ೫ನೆಯ ಶತಮಾನದವರೆಗೆ ಜೈನಧರ್ಮ ಇಲ್ಲಿದ್ದ ಬಗ್ಗೆ ಯಾವ ನೇರ ಪುರಾತತ್ತ್ವ ಆಧಾರವೂ ದೊರಕಿಲ್ಲ. ಕದಂಬ ಮೃಗೇಶವರ್ಮನ ಹಲಸಿ ತಾಮ್ರಪಟವೇ (ಕ್ರಿ.ಶ. ಸು. ೫೦೦) ಸದ್ಯದಲ್ಲಿ ಅತಿಪ್ರಾಚೀನ ಆಧಾರ. ಆದರೂ ದಕ್ಷಿಣ ಭಾರತದಲ್ಲಿ ಜೈನಧರ್ಮದ ಇತಿಹಾಸವನ್ನು ಗಮನಿಸಿದಲ್ಲಿ ಕರ್ಣಾಟಕ ಅದರ ನೆಲೆವೀಡಾಗಿತ್ತು ಎಂಬ ಅಂಶ ಶ್ರುತವಾಗುತ್ತದೆ.

ಒಂದು ಅಭಿಪ್ರಾಯದಲ್ಲಿ ದಕ್ಷಿಣ ಭಾರತದ ಜೈನಧರ್ಮದ ಇತಿಹಾಸವೆಂದರೆ ಕರ್ನಾಟಕದ ಜೈನಧರ್ಮದ ಇತಿಹಾಸವೇ.[53] ಜೈನ ಪರಂಪರೆಯ ಪ್ರಕಾರ ಪ್ರಸಿದ್ಧ ಜೈನಾಚಾರ್ಯರಲ್ಲಿ ಒಬ್ಬರಾದ ಕುಂದಕುಂದಾಚಾರ್ಯರು ದಾಕ್ಷಿಣಾತ್ಯರು. ಕರ್ನಾಟಕದಲ್ಲಿ ಇವರ ಪ್ರಭಾವ ಸಾಕಷ್ಟಿರುವುದು ಮುಂದಿನ ಕಾಲದ ಜೈನ ಶಾಸನಗಳಲ್ಲಿ ಎದ್ದು ಕಾಣುತ್ತದೆ.[54] ಇಲ್ಲಿನ ಸುಮಾರು ಎಲ್ಲ ಜೈನ ಸಂಘೀಯರೂ ತಾವು ಕೊಂಡಕುಂದಾನ್ವಯಕ್ಕೆ ಸೇರಿದರೆಂದು ಹೇಳಿಕೊಂಡಿದ್ದಾರೆ. ಈ ಕೊಂಡಕುಂದಾಚಾರ್ಯನು ಅನಂತಪುರ ಜಿಲ್ಲೆಯ ಗುತ್ತಿ ತಾಲ್ಲೂಕಿನ ಕೊನಕೊಂಡ್ಲದಿಂದ ಬಂದವನೆಂದು ಪಿ. ಬಿ. ದೇಸಾಯಿ ತೋರಿಸಿದ್ದಾರೆ. ಆ ಊರಿನಲ್ಲಿರುವ ಒಂದು ಶಾಸನದಲ್ಲಿ ಆ ಸ್ಥಳ ಪದ್ಮನಂದಿ ಭಟ್ಟಾರಕರ ಜನ್ಮಸ್ಥಳವೆಂದು ಹೇಳಿದೆ. ಕೊಂಡಕುಂದರ ಇನ್ನೊಂದು ಹೆಸರು. ಪದ್ಮನಂದಿ. ಹಿಂದೆ ಈ ಊರು ಕೊಂಡಕುಂಡ, ಕುಂಡಕುಂದೆ ಎಂಬ ಅಚ್ಚಕನ್ನಡ ಹೆಸರಿನಿಂದ ಪರಿಚಿತವಾಗಿತ್ತು.[55] ಅನೇಕ ಜೈನಗ್ರಂಥಗಳನ್ನು ರಚಿಸಿರುವ ಕೊಂಡಕುಂದಾಚಾರ್ಯನ ಶಿಷ್ಯ ಉಮಾಸ್ವಾತಿ ಸಹ ದಾಕ್ಷಿಣಾತ್ಯನೇ. ಈತನ ಉಲ್ಲೇಖ ಕರ್ನಾಟಕದ ಶಾಸನಗಳಲ್ಲಿ ಅನೇಕ ಕಡೆ ಬರುತ್ತವೆ.[56] ಕೊಂಡಕುಂದಾಚಾರ್ಯನಂಥ ಅನ್ವಯಪ್ರವರ್ತಕನೂ ಉಮಾಸ್ವಾತಿಯಂಥವರೂ ಕರ್ನಾಟಕದಲ್ಲಿ ಇದ್ದಿರಬೇಕಾದರೆ ಜೈನಧರ್ಮ ಇಲ್ಲಿ ಸಾಕಷ್ಟು ಮಟ್ಟಿಗೆ ಇದ್ದಿರಬೇಕು. ಪಾದಲಿಪ್ತಾಚಾರ್ಯನೆಂಬ ಜೈನ ಗುರು (ಸು. ೧ನೆಯ ಶತಮಾನ) ದಕ್ಷಿಣಕ್ಕೆ ಬಂದಾಗ ಮಾನ್ಯಖೇಟದ ಬಳಿ ಜೈನರು ಇದ್ದರೆಂದು ಹರಿಭದ್ರಸೂರಿಯ ಒಂದು ಗ್ರಂಥ ತಿಳಿಸುತ್ತದೆ.[57]

ಬನವಾಸಿಯ-ಕದಂಬ ಅರಸರ ಕಾಲದಲ್ಲಿ ಜೈನಧರ್ಮಕ್ಕೆ ಸ್ವಲ್ಪಮಟ್ಟಿನ ರಾಜಪ್ರೋತ್ಸಾಹ ದೊರಕಿತು. ಹಲಸಿ ತಾಮ್ರಪಟದಲ್ಲಿ ಯುವರಾಜನಾಗಿದ್ದ ಕದಂಬ ಕಾಕುತ್ಸ್ಥವರ್ಮನು ಪಲಾಶಿಕೆಯಲ್ಲಿದ್ದಾಗ (ಬೆಳಗಾವಿ ಜಿಲ್ಲೆಯ ಹಲಸಿ) ಅರ್ಹಂತರಿಗೆ ಭೂಮಿದಾನ ಮಾಡಿದನೆಂದು ಹೇಳಿದೆ.[58] ಇನ್ನೊಂದು ಹಲಸಿ ತಾಮ್ರಪಟದಲ್ಲಿ ಮೃಗೇಶವರ್ಮ ತನ್ನ ತಂದೆಯ ಜ್ಞಾಪಕಾರ್ಥವಾಗಿ ಪಲಾಶಿಕಾನಗರದಲ್ಲಿ ಜಿನಾಲಯವೊಂದನ್ನು ಕಟ್ಟಿಸಿ, ಯಾಪನೀಯ ನಿರ್ಗ್ರಂಥ ಕೂರ್ಚಕರಿಗೆ ದತ್ತಿಗಳನ್ನು ಕೊಟ್ಟಂತೆ ತಿಳಿಸುತ್ತದೆ.[59] ಇದೇ ಅರಸು ಬೃಹತ್ಪರಲೂರ ಎಂಬ ಗ್ರಾಮದಲ್ಲಿ ಚೈತ್ಯಾಲಯದಲ್ಲಿ ಸಮ್ಮಾರ್ಜನ, ಉಪಲೇಪನ, ಅಭ್ಯರ್ಚನ, ಭಿನ್ನಸಂಸ್ಕಾರ, ಮಹಿಮೆ (ಉತ್ಸವ)ಗಳನ್ನು ನಡಸಲು ಅರ್ಹಂತರಿಗೆ ಭೂಮಿದಾನ ಮಾಡಿದನೆಂದೂ ಅಲ್ಲದೆ ಕಾಲವಾಟಿಕಾ ಗ್ರಾಮದಲ್ಲಿ ಒಂದು ಭಾಗವನ್ನು ಜಿನೇಂದ್ರದೇವರಿಗೆ, ಒಂದು ಭಾಗವನ್ನು ಶ್ವೇತಪಟ ಮಹಾಸಂಘಕ್ಕೆ, ಉಳಿದುದನ್ನು ನಿರ್ಗ್ರಂಥ ಮಹಾಶ್ರಮಣ ಸಂಘಕ್ಕೆ ಕೊಟ್ಟನೆಂದೂ ದೇವಗಿರಿಯ ಎರಡು ತಾಮ್ರಪಟಗಳು ಹೇಳುತ್ತವೆ.[60] ಇದೇ ಹಲಸಿಯ ಜಿನಾಲಯಕ್ಕೆ ದತ್ತಿ ನೀಡಿದ ಬಗ್ಗೆ ರವಿವರ್ಮನ ಕಾಲದ ಶಾಸನಗಳೂ ಇವೆ.[61] ರವಿವರ್ಮ ತನ್ನ ರಾಜ್ಯಧಾನಿಯಲ್ಲಿ ಅರಮನೆಯ ಬಳಿಯಲ್ಲೇ ಕಾಮ ಜಿನಾಲಯವೊಂದನ್ನು ಕಲ್ಲಿಸಿ ಅಲ್ಲಿ ಪೂಜೆ ಉತ್ಸವಾದಿಗಳಿಗೆ ವ್ಯವಸ್ಥೆಮಾಡಿದ್ದನೆಂದು ಗುಡ್ನಾಪುರ ಶಾಸನದಿಂದ ತಿಳಿಯುತ್ತದೆ.[62] ಹರಿವರ್ಮನ

೪ನೆಯ ವರ್ಷದ ಹಲಸಿ ತಾಮ್ರ ಶಾಸನದಲ್ಲಿ ಸಿಂಹಸೇನಾಪತಿಯ ಮಗನಾದ ಮೃಗೇಶ ಪಲಾಸಿಕಾದಲ್ಲಿ ಕಟ್ಟಿಸಿದ ಅರ್ಹದಾಯತನದಲ್ಲಿಯ ಪೂಜಾಪುರಸ್ಕಾರಾರ್ಥವಾಗಿ ಚಂದ್ರಕ್ಷಾಂಚ ಪ್ರಮುಖ ವಾರಿಷೇಣಾಚಾರ್ಯರ ಪಂಥದ ಕೂರ್ಚಕ ಸಂಘಕ್ಕೆ ಚಿಕ್ಕಪ್ಪನಾದ ಶಿವರಥನ ಉಪದೇಶದ ಮೇರೆಗೆ ಒಂದು ಗ್ರಾಮವನ್ನು ಅರಸ ದಾನಮಾಡಿದ ಎಂದು ಹೇಳಿದೆ.[63] ಅವನ ೫ನೆಯ ವರ್ಷದ ಅದೇ ಹಲಸಿಯ ಇನ್ನೊಂದು ಶಾಸನ ಸೇಂದ್ರಕ ಭಾನುಶಕ್ತಿಯ ವಿಜ್ಞಾಪನೆಯ ಮೇರೆಗೆ ಸಾಧುಜನರ ಉಪಯೋಗಕ್ಕಾಗಿ ಅಹರಿಷ್ಟಿ ಎಂಬ ಜಿನಾಲಯದಲ್ಲಿನ ಪೂಜೆಗೆ ಒಂದು ಗ್ರಾಮವನ್ನು ದಾನಕೊಟ್ಟ ವಿಷಯವಿದೆ.[64] ದೇವಶರ್ಮನೆಂಬ ಕದಂಬ ಯುವರಾಜ ಯಾಪನೀಯ ಸಂಘಕ್ಕೆ ದತ್ತಿಗಳನ್ನು ನೀಡಿದ್ದ.[65] ಕದಂಬರ ಕಾಲದಲ್ಲಿ ಜೈನರು ರಾಜರ ಮೇಲೆ ಸಾಕಷ್ಟು ಪ್ರಭಾವವನ್ನು ಬೀರಿದ್ದಂತೆ ಕಾಣುತ್ತದೆ. ರವಿಮಹಾರಾಜನು ವಿದ್ವಜ್ಜನರಲ್ಲಿ ಪ್ರಮುಖನಾಗಿದ್ದ ಜೈನ ಕುಮಾರದತ್ತನಿಂದ ರಾಜ್ಯ ಹಾಗೂ ಧರ್ಮದ ವಿಷಯದಲ್ಲಿ ಸಲಹೆಪಡೆಯುತ್ತಿದ್ದನೆಂದು ಒಂದು ಶಾಸನ ತಿಳಿಸುತ್ತದೆ.[66]

ಬಾದಾಮಿಯ ಚಾಲುಕ್ಯರು ವಿಶೇಷವಾಗಿ ಹಿಂದುಧರ್ಮಾನುಯಾಯಿಗಳಾಗಿದ್ದರೂ ಅವರ ಕಾಲದಲ್ಲಿ ಕೂಡ ರಾಜರ ಹಾಗೂ ಶ್ರೀಮಂತರ ಪ್ರೋತ್ಸಾಹ ಜೈನಧರ್ಮಕ್ಕಿತ್ತು. ದೊರೆ ಮಂಗಳೇಶನು ನಿರ್ಮಿಸಿದ ಪ್ರಸಿದ್ಧ ವಿಷ್ಣುಗೃಹವಾದ ಬಾದಾಮಿಯ ೩ನೆಯ ಗುಹೆಯ ಜೊತೆಯಲ್ಲೇ ನಾಲ್ಕನೆಯದಾಗಿ ಜೈನಗುಹೆಯೊಂದು ಇರುವುದು ಗಮನಾರ್ಹ. ಐಹೊಳೆಯಲ್ಲಿ ಸಹ ಎರಡು ಚಿಕ್ಕ ಜಿನಗುಹಾಲಯಗಳಿವೆ. ಇಲ್ಲಿ ಇಮ್ಮಡಿ ಪುಲಿಕೇಶಿಯ ಆತ್ಮೀಯನಾಗಿದ್ದ ರವಿಕೀರ್ತಿ ೬೩೪ರಲ್ಲಿ ಕಟ್ಟಿಸಿದ ಮೇಗುಟಿಯ ಜಿನಾಲಯ ಬಹು ಪ್ರಸಿದ್ಧ. ಅಲ್ಲದೆ ಚಾಲುಕ್ಯರ ಕಾಲದವೆನ್ನಬಹುದಾದ ಇನ್ನೂ ಎರಡು ಜಿನಾಲಯಗಳು ಐಹೊಳೆಯಲ್ಲಿವೆ. ಪಟ್ಟದಕಲ್ಲಿನಲ್ಲಿ ಸಹ ಒಂದಿದೆ. ಜೇಬುಳಗೇರಿಯ ಜೈನಪ್ರಮುಖನಾದ ಕಲಿಯಮ್ಮ ಎಂಬವನು ಇಮ್ಮಡಿ ಕೀರ್ತಿವರ್ಮನ ಕಾಲದಲ್ಲಿ ಅಣ್ಣಿಗೇರಿಯಲ್ಲಿ ಒಂದು ಜಿನಚೈತ್ಯವನ್ನು ಕಟ್ಟಿಸಿದ.[67] ಚಾಲುಕ್ಯ ವಿನಯಾದಿತ್ಯನ ತಂಗಿ ಕುಂಕುಮದೇವಿ ಪುಲಿಗೆರೆಯಲ್ಲಿ (ಲಕ್ಷ್ಮೇಶ್ವರ) ಜಿನಭವನವೊಂದನ್ನು ಕಟ್ಟಿಸಿದಳೆಂದೂ ಅದರ ನವಕರ್ಮಖಂಡಸ್ಫುಟಿತ ಸಂಸ್ಕಾರ ದಾನಶಾಲಾದಿ ಧರ್ಮ ಪ್ರವರ್ತನಾರ್ಥವಾಗಿಯೂ ಮೂಲಸಂಘದವರ ಸತ್ರಕ್ಕಾಗಿಯೂ ಆಳುಪ ಚಿತ್ರವಾಹನನ ವಿಜ್ಞಾಪನೆಯ ಮೇರೆಗೆ ದೊರೆ ವಿಜಯಾದಿತ್ಯ ಕೆಲವು ದತ್ತಿಗಳನ್ನು ನೀಡಿದನೆಂದು ಶಿಗ್ಗಾಂವಿ ತಾಮ್ರಶಾಸನ (೭೦೮) ವಿವರಿಸುತ್ತದೆ[68].

-ಲಕ್ಷ್ಮೇಶ್ವರ (ಧಾರವಾಡ ಜಿಲ್ಲೆ) ಆ ಕಾಲದಲ್ಲಿ ಒಂದು ಪ್ರಸಿದ್ಧ ಜೈನಕೇಂದ್ರವಾಗಿದ್ದಂತೆ ತೋರುತ್ತದೆ. ಅಲ್ಲಿಯ ಶಂಖಜಿನಾಲಯಕ್ಕೆ ಹಲವು ಚಾಲುಕ್ಯ ಅರಸರು ಪ್ರೋತ್ಸಾಹವಿತ್ತಿದ್ದರೆಂಬುದಕ್ಕೆ ಶಾಸನೋಲ್ಲೇಖಗಳಿವೆ. ಇಮ್ಮಡಿ ಪುಲಿಕೇಶಿಯ ಕಾಲದಲ್ಲಿ ಅವನ ಸಾಮಂತನಾಗಿದ್ದ ಸೇಂದ್ರಕ ದುರ್ಗಶಕ್ತಿ, ೬೮೩ರಲ್ಲಿ ವಿನಯಾದಿತ್ಯ, ೭೨೩ ಮತ್ತು ೭೩೦ರಲ್ಲಿ ವಿಜಯಾದಿತ್ಯ, ೭೩೫ರಲ್ಲಿ ಇಮ್ಮಡಿ ವಿಕ್ರಮಾದಿತ್ಯ ಇವರು

ಗಳು ದತ್ತಿಗಳನ್ನು ನೀಡಿದ್ದರು.[69] ಅಲ್ಲಿಯ ಒಂದು ಶಾಸನದಲ್ಲಿ ಅಲ್ಲಿದ್ದ ಗುರುಪರಂಪರೆಯ ಪ್ರಸ್ತಾಪವಿದೆ. 'ಜೈನೇಂದ್ರ ವ್ಯಾಕರಣ'ವನ್ನು ಬರೆದವನೂ ದೇವಗಣವೆಂಬ ಜೈನ ಶಾಖೆಯ ಪ್ರವರ್ತಕನೂ ಆದ ಆಚಾರ್ಯ ಪೂಜ್ಯಪಾದನು ಲಕ್ಷ್ಮೇಶ್ವರದಲ್ಲಿದ್ದಿರ ಬಹುದೆಂದು ಅಲ್ಲಿಯ ಶಾಸನಗಳಿಂದ ಊಹಿಸಬಹುದಾಗಿದೆ. ಅವನ ಪ್ರಶಿಷ್ಯನಾದ ನಿರವದ್ಯಪಂಡಿತ ವಿಜಯಾದಿತ್ಯನಿಂದ ದತ್ತಿಗಳನ್ನು ಸ್ವೀಕರಿಸಿದನು.[70] ಇಮ್ಮಡಿ ಕೀರ್ತಿ ವರ್ಮನ ಆಡೂರುಶಾಸನ ವರ್ಧಮಾನನ ಪ್ರಾರ್ಥನೆಯೊಂದಿಗೆ ಆರಂಭವಾಗಿ ಮುಂದೆ ಒಬ್ಬ ಗಾವುಂಡನು ನಿರ್ಮಿಸಿದ ಜಿನಾಲಯಕ್ಕೆ ಸೇಂದ್ರಕ ಮಾಧವತ್ತಿಯರಸ ದಾನ ಗಳನ್ನು ಕೊಟ್ಟನೆಂದು ತಿಳಿಸುತ್ತದೆ. ಈ ದತ್ತಿಯನ್ನು ಸ್ವೀಕರಿಸಿದವನು ಪ್ರಭಾಚಂದ್ರ ಮುನಿ.[71]

ರಾಯಚೂರು ಜಿಲ್ಲೆಯಲ್ಲಿರುವ ಕೊಪ್ಪಳಕ್ಕೆ ಹಿಂದೆ ಕೊಪಣನಗರವೆಂದು ಹೆಸರಿದ್ದು, ಅದು ಒಂದು ಮಹಾ ಜೈನಕ್ಷೇತ್ರವಾಗಿತ್ತು ಎಂದು ತಿಳಿಯುತ್ತದೆ. ಶ್ರವಣಬೆಳಗೊಳದ ಶಾಸನಗಳಲ್ಲಿ ಇದನ್ನು ಮಹಾತೀರ್ಥ, ಆದಿತೀರ್ಥ ಎಂದು ಕರೆಯಲಾಗಿದೆ. ಹೊಯ್ಸಳ ದಂಡನಾಯಕ ಗಂಗರಾಜ ತಾನು ಹೊಸದಾಗಿ ಕಟ್ಟಿಸಿದ ಮತ್ತು ಜೀರ್ಣೋದ್ಧಾರ ಮಾಡಿದ ಅನೇಕ ಜಿನಾಲಯಗಳಿಂದ ಅದು 'ಗಂಗವಾಡಿ ತೊಂಬತ್ತಱುಸಾಸಿರದ ಕೊಪಣವಾದದು' ಎಂದು ಶ್ರವಣಬೆಳಗೊಳದ ಒಂದು ಶಾಸನ ತಿಳಿಸುತ್ತದೆ.[72] ಶ್ರವಣ ಬೆಳಗೊಳದ ಶಾಸನದಲ್ಲೇ ಕೊಪಣವನ್ನು ಆದಿತೀರ್ಥವೆಂದು ಕರೆದಿರಬೇಕಾದರೆ, ಅದು ಬಹು ಹಿಂದಿನ ಕಾಲದಿಂದಲೇ ಜೈನಕೇಂದ್ರವಾಗಿರಬೇಕಷ್ಟೆ. ಹಲಗೇರಿಯ ಒಂದು ಶಾಸನವನ್ನು ಈ ಸಂಬಂಧದಲ್ಲಿ ಗಮನಿಸಬಹುದು.[73]

ತಲಕಾಡಿನ ಗಂಗರಸರು ಜೈನಧರ್ಮದ ಅನುಯಾಯಿಗಳಾಗಿದ್ದರು, ಆ ಧರ್ಮ ಆ ಭಾಗದಲ್ಲಿ ವ್ಯಾಪಕವಾಗಿದ್ದಿತು ಎಂಬ ಅಭಿಪ್ರಾಯ ಬಹುವಾಗಿ ಕಂಡುಬರುತ್ತದೆ.[74] ಆದರೆ ಪ್ರಸ್ತುತ ಅವಧಿಯ ಶಾಸನಾಧಾರಗಳು ಈ ಕಲ್ಪನೆಗೆ ಪುಷ್ಟಿನೀಡುವುದಿಲ್ಲ. ಗಂಗ ಅರಸರಿಗೆ ರಾಜ್ಯ ದೊರಕಿದ್ದೇ ಸಿಂಹನಂದಿ ಎಂಬ ಜೈನ ಆಚಾರ್ಯನಿಂದ ಎಂಬ ಒಂದು ಹೇಳಿಕೆ ಇದೆ. ಆದರೆ ಈ ವಿಷಯ ಮೊದಲಾಗಿ ದೊರಕುವುದು ಕ್ರಿ.ಶ. ೧೧೨೨ರ ಒಂದು ಶಾಸನದಲ್ಲಿ.[75] ಅಂದು ಗಂಗವಾಡಿಯಲ್ಲಿ ಜೈನಧರ್ಮ ಚೆನ್ನಾಗಿ ಹರಡಿದ್ದ ಕಾಲ. ಈ ಕಾಲದ ಗಂಗ ದೊರೆಗಳು ಬೇರೆಯೇ ದೇವರುಗಳ ಆರಾಧಕರಾಗಿದ್ದಂತೆ ಅವರ ಶಾಸನಗಳೇ ಸ್ಪಷ್ಟಪಡಿಸುತ್ತವೆ. ಗಂಗರ ಮೊದಲ ದೊರೆಗಳ ಹೆಸರು ಮಾಧವ, ಹರಿವರ್ಮ, ವಿಷ್ಣುಗೋಪ ಇತ್ಯಾದಿಗಳು ಅವರು ವೈಷ್ಣವ ಧರ್ಮಾವಲಂಬಿಗಳಾಗಿದ್ದಿರಬೇಕು ಎನ್ನಿ ಸುತ್ತವೆ. ಅವರಲ್ಲಿ ವಿಷ್ಣುಗೋಪ 'ದ್ವಿಜಗುರುದೇವತಾಪೂಜನಪರ', 'ನಾರಾಯಣ ಚರಣಾನುಧ್ಯಾತ'[76], ಗುರುಗೋಬ್ರಾಹ್ಮಣ ಪೂಜಕ.[77] ಅವನ ಮಗ 'ಇಮ್ಮಡಿ ಮಾಧವ 'ತ್ರ್ಯಂಬಕ ಚರಣಾನುಧ್ಯಾತ'[78], ಚಿರಪ್ರನಷ್ಟ ಬ್ರಹ್ಮದೇಯ ಬಹು ಸಹಸ್ರವಿಸರ್ಗ್ಗಾ ಗ್ರಯಣಕಾರಿ.'[79] ಅವನ ಮಗ ಅವಿನೀತನನ್ನು 'ಕಮಲೋದರ ಚರಣಕಮಲಾನು ಧ್ಯಾತ'[80] ಎಂದೂ ಪೆಣ್ಣಲೂರು ತಾಮ್ರಶಾಸನದಲ್ಲಿ ದುರ್ವಿನೀತನನ್ನು 'ಕಾತ್ಯಾಯನೀ

ಚರಣ ಪಂಕೇರುಹೆ ಸರಿಚರವಿದ್ಧಾನ್ತರಾತ್ಮ' ಎಂದೂ ಕರೆದಿದೆ.[81] ಶ್ರೀಪುರುಷ ನಾದರೋ ದೇವ ದ್ವಿಜಗುರು ಪೂಜಾತತ್ಪರ.[82] ಹೀಗಿರುವಲ್ಲಿ ಗಂಗ ದೊರೆ ದೊರೆಗಳು ಜೈನಮತಾವಲಂಬಿಗಳಾಗಿದ್ದರು ಎಂಬ ಹೇಳಿಕೆ ಸಾಧಾರವಾಗಿರುವಂತೆ ತೋರುವುದಿಲ್ಲ. ರಾಜಾಶ್ರಯ ಎಷ್ಟಿತ್ತೆಂಬುದರ ಬಗ್ಗೆ ಅನುಮಾನ ವ್ಯಕ್ತಪಡಿಸಬಹುದಾದರೂ, ಜೈನ ಮತ ಗಂಗವಾಡಿ ಭಾಗದಲ್ಲಿ ಪ್ರಾಚುರ್ಯದಲ್ಲಿತ್ತು ಎಂಬುದರ ಬಗ್ಗೆ ಅನುಮಾನವಿಲ್ಲ. ಆ ಸೀಮೆಯ ಶ್ರವಣಬೆಳಗೊಳ ಪ್ರಖ್ಯಾತ ಜೈನ ತೀರ್ಥಕ್ಷೇತ್ರವಾಗಿತ್ತೆಂಬ ವಿಷಯ ಈ ಕಾಲಕ್ಕೆ ಸೇರುವ ೮೫ ಶಾಸನಗಳು ಆ ಸ್ಥಳದಲ್ಲಿರುವುದರಿಂದಲೇ ಸ್ಪಷ್ಟವಾಗುತ್ತದೆ.[83] ಈ ಕೆಲವು ಶಾಸನಗಳಲ್ಲಿ ಜೈನಸಾಧಕರು ತಮಿಳು ನಾಡಿನಿಂದಲೂ ಇಲ್ಲಿಗೆ ಬರುತ್ತಿದ್ದರೆಂಬುದು ಅದರ ಖ್ಯಾತಿಯ ದ್ಯೋತಕವಾಗಿದೆ.[84] ಕೆಲವು ಸ್ಥಳಗಳಲ್ಲೂ ಜೈನಧರ್ಮವಿದ್ದ ಬಗ್ಗೆ ಒಂದೆರಡು ಆಧಾರಗಳು ದೊರಕುತ್ತವೆ. ವಿದಯಕೀರ್ತಿ ಎಂಬ ಒಬ್ಬ ಮುನಿ ಜನರ ಕಷ್ಟನಿವಾರಣೆ ಮಾಡುತ್ತಿದ್ದನೆಂದು ವಿದ್ವಜ್ಜನರಿಗೆ ಆಧಾರನಾಗಿದ್ದನೆಂದೂ ಗುಬ್ಬಿ ತಾಲ್ಲೂಕಿನ ೮೮೨ರ ಒಂದು ತಾಮ್ರಪಟದಲ್ಲಿ ಹೇಳಿದೆ.[85] ನಂದಿಬೆಟ್ಟದ ಈಶಾನ್ಯದಲ್ಲಿರುವ ಗೋಪಿನಾಥಗುಡ್ಡವೂ ಒಂದು ಜೈನಕೇಂದ್ರವಾಗಿತ್ತು. ಅಲ್ಲಿ ಶ್ರೀರಾಮ ಕಟ್ಟಿಸಿದ ಬಸದಿಯೊಂದಿತ್ತೆಂದೂ ಕುಂತಿ ಅದನ್ನು ಹೊಸದು ಮಾಡಿಸಿದಳೆಂದೂ ಈ ಬಸದಿಯಿಂದಾಗಿ ಅದು ಪವಿತ್ರಸ್ಥಳವಾಗಿತ್ತು ಎಂದೂ ಜಿನಮುನಿಗಳ ತಪಸ್ಸಿಗೆ ಬೇಕಾದ ಗುಹೆಗಳು ಅಲ್ಲಿದ್ದುವು ಎಂದೂ ಸು. ೭೫೦ರ ಅಲ್ಲಿಯ ಒಂದು ಶಾಸನ ತಿಳಿಸುತ್ತದೆ.[86]

ರಾಷ್ಟ್ರಕೂಟ ಅರಸರ ಕಾಲ ಕರ್ಣಾಟಕದಲ್ಲಿ ಜೈನಧರ್ಮದ ಪ್ರಗತಿಯುಗ. ಆ ಕಾಲದಲ್ಲಿ ಅರಸರಷ್ಟೇ ಅಲ್ಲದೆ ಅನೇಕ ಅಧಿಕಾರಿಗಳು ಹಾಗೂ ಸಾಮಂತರು ಅನೇಕ ರೀತಿಯಲ್ಲಿ ಈ ಧರ್ಮಕ್ಕೆ ಪ್ರೋತ್ಸಾಹವಿತ್ತರು. ಹಲವು ದೇಗುಲಗಳು ನಿರ್ಮಾಣವಾದುವು. ದಾನದತ್ತಿಗಳು ಹೆಚ್ಚಿದುವು. ಹಲವು ಆಚಾರ್ಯರು ಧರ್ಮಬೋಧನೆಯಲ್ಲಿ ನಿರತರಾಗಿದ್ದರಲ್ಲದೆ ಶಾಸ್ತ್ರಗ್ರಂಥಗಳ ರಚನೆ ಮಾಡಿದರು.[87]

ಅಮೋಘವರ್ಷ ಕೂಡ ಜೈನಧರ್ಮಕ್ಕೆ ಬಹುವಾಗಿ ಪ್ರೋತ್ಸಾಹ ನೀಡಿದ. 'ಗಣಿತ ಸಾರಸಂಗ್ರಹ' ಗ್ರಂಥದಲ್ಲಿ ಅಮೋಘವರ್ಷ ಸ್ಯಾದ್ವಾದಮತದ ಅನುಯಾಯಿಯಾಗಿದ್ದ, ಅಕಿಂಚನತಾ ನೀತಿಯನ್ನು ಅನುಸರಿಸಿ ಕೆಲವು ಕಾಲ ಸಿಂಹಾಸನವನ್ನು ತ್ಯಜಿಸಿದ್ದ ಎನ್ನಲಾಗಿದೆ.[88] ಜಿನಸೇನನ 'ಪಾರ್ಶ್ವಾಭ್ಯುದಯ'ದಲ್ಲಿ ಅಮೋಘವರ್ಷ ಆತನ ಶಿಷ್ಯನೆಂತಲೂ ರಾಜನು ಅವನ ಸ್ಮರಣಮಾತ್ರದಿಂದಲೇ ಪರಿಶುದ್ಧನಾಗುತ್ತಿದ್ದನೆಂತಲೂ ಹೇಳಿದೆ.[89] 'ಉತ್ತರಪುರಾಣ'ಕರ್ತೃ ಗುಣಭದ್ರನು ಇಮ್ಮಡಿ ಕೃಷ್ಣನ ಗುರುವಾಗಿದ್ದ.[90] ಅನೇಕ ರಾಷ್ಟ್ರಕೂಟ ಸಾಮಂತರೂ ಜಿನಧರ್ಮವನ್ನು ಅನುಸರಿಸುತ್ತಿದ್ದರು.

ಬಹುಶಃ ರಾಷ್ಟ್ರಕೂಟರ ಸಾಮಂತರಾಗಿದ್ದ ಕಾಲದಿಂದ ಗಂಗ ಅರಸರೂ ಜಿನ ಧರ್ಮಕ್ಕೆ ಹೆಚ್ಚಿನ ಒಲವನ್ನು ತೋರಿಸಿದಂತೆ ಕಾಣುತ್ತದೆ. ರಾಚಮಲ್ಲ ಕೊಡಗಿನಲ್ಲಿ ಜಿನಭವನಗಳನ್ನೆತ್ತಿಸಿದ.[91] ತನ್ನ ವಿಜಯ ಸಾಧನೆಯ ನೆನಪಿಗಾಗಿ ವಳ್ಳಿಮಲ್ಲೈ ಎಂಬಲ್ಲಿ

ಜೈನದೇವಾಲಯವೊಂದನ್ನು ಕಟ್ಟಿಸಿದ.[92] ಲಕ್ಷ್ಮೇಶ್ವರದಲ್ಲಿ ರಾಯರಾಚಮಲ್ಲ ವಸದಿ, ಗಂಗಪೆರ್ಮಾಡಿಚೈತ್ಯಾಲಯ, ಗಂಗಕಂದರ್ಪಚೈತ್ಯಮಂದಿರ ಎಂಬ ಜಿನಭವನ ಗಳಿದ್ದುವು.[93] ಅಮೋಘವರ್ಷನ ದಂಡನಾಯಕನಾಗಿ ಬನವಾಸಿಯುಲ್ಲಿದ್ದ ಬಂಕೆಯ ಜೈನಬಸದಿಯೊಂದಕ್ಕೆ ದಾನನೀಡಿದ್ದ.[94] ಬಂಕೆಯನ ಮಗ ಲೋಕಾದಿತ್ಯ ಜೈನಧರ್ಮದ ಪೋಷಕನೆಂದು ಅವನ ಗುರು ಗುಣಭದ್ರ ಹೊಗಳಿದ್ದಾನೆ.[95] ಸಾಮಂತರಾದ ಚಾಲುಕ್ಯ ನರಸಿಂಹ, ಶ್ರೀವಿಜಯ ಮೊದಲಾದವರೂ ಜಿನಧರ್ಮವನ್ನನುಸರಿಸುತ್ತಿದ್ದರು.

ಅಮೋಘವರ್ಷನ ಕೊಣ್ಣೂರು ಶಾಸನ ಅವನು ಬಸದಿಗಳಿಗೆ ದತ್ತಿನೀಡಿದ ವಿಷಯ ವನ್ನು ತಿಳಿಸುತ್ತದೆ.[96] ಸೌಂದತ್ತಿಯ ಒಂದು ಶಾಸನದಲ್ಲಿ ಅಲ್ಲಿಯ ಬಸದಿಯೊಂದನ್ನು 'ರಟ್ಟರ ಪಟ್ಟಜಿನಾಲಯ' ಎಂದು ಕರೆದು ರಾಷ್ಟ್ರಕೂಟರಿಂದ ಜಿನಧರ್ಮ ಪಡೆದ ಪ್ರೋತ್ಸಾಹದ ವಿವರಗಳನ್ನು ಕೊಟ್ಟಿದೆ.[97] ಕಂಬ ಗಂಗವಾಡಿಯನ್ನು ಆಳುತ್ತಿದ್ದಾಗ ಶ್ರವಣಬೆಳಗೊಳದಲ್ಲಿ ಮನಸಿಜನ ರಾಣಿ ಕೈಕೊಂಡಿದ್ದ ಮೌನವ್ರತ ಸಮಾಪ್ತಿಯ ಸಂದರ್ಭದಲ್ಲಿ ಯಾವನೋ ಒಬ್ಬ ಜೈನಯತಿಗೆ ಭೂಮಿದಾನ ಮಾಡಿದ.[98] ಅದೇ ಕಂಬ ತಲಕಾಡಿನಲ್ಲಿ ಬೀಡುಬಿಟ್ಟಿದ್ದಾಗ (೮೦೮) ತನ್ನ ಮಗ ಶಂಕರಗಂಡನ ವಿಜ್ಞಾಪ ನೆಯ ಮೇರೆಗೆ ಅಲ್ಲಿಯ ವಿಜಯ ಬಸದಿಗೆ ಪೂಜಾನಿಮಿತ್ತವಾಗಿ ವರ್ಧಮಾನ ಗುರುವಿಗೆ ಭೂಮಿಯನ್ನು ಕೊಟ್ಟ.[99] ೩ನೆಯ ಗೋವಿಂದನ ಕಾಲದ ಕಡಬ ತಾಮ್ರಶಾಸನದಲ್ಲಿ (೮೧೨) ಗಂಗಮಂಡಲದ ಚಾಕಿರಾಜನ ವಿಜ್ಞಾಪನೆಯ ಮೇರೆಗೆ ರಾಜನು ಅರ್ಕಕೀರ್ತಿ ಎಂಬ ಜಿನಮುನಿಗೆ ಜಿನೇಂದ್ರದೇವರ ಪೂಜೆಗಾಗಿ, ಕುಣಿಗಲ್ ವಿಷಯದ ಅಧಿಪತಿಯಾದ ವಿನಯಾದಿತ್ಯನ ಶನಿಪೀಡಾಪಹಾರವಾಗಲೆಂದು ದಾನಗಳನ್ನು ಕೊಟ್ಟ.[100]

ಈ ಅವಧಿಯ ವೀರಸೇನ, ಜಿನಸೇನ, ಗುಣಭದ್ರ, ಶಾಕಟಾಯನ, ಅಕಳಂಕ ಮುಂತಾದವರು ಜೈನಧರ್ಮ ಮತ್ತು ಸಾಹಿತ್ಯಗಳಿಗೆ ಅಮೂಲ್ಯ ಕಾಣಿಕೆಗಳನ್ನಿತ್ತಿ ದ್ದಾರೆ.[101] ಸಹಜವಾಗಿ ಈ ದಿಶೆಯಲ್ಲಿ ಇಷ್ಟೊಂದು ಸಾಧನೆಗಳಿರಬೇಕಾದರೆ, ಇದು ಜೈನಧರ್ಮ ಸಾಕಷ್ಟು ಪ್ರೋತ್ಸಾಹ, ಬೆಂಬಲವನ್ನು ಗಳಿಸಿಕೊಂಡಿದ್ದು ಪ್ರಭಾವಿ ಯಾಗಿದ್ದ ಕಾಲವೇ ಆಗಿರಬೇಕು. ಒಟ್ಟಿನಲ್ಲಿ ಕ್ರಿ.ಪೂ.ದಲ್ಲಿ ಕಾಲದ ಜೈನಧರ್ಮ ಕ್ರಮೇಣ ತನ್ನ ಪ್ರಭಾವವನ್ನು ಸ್ವಲ್ಪಸ್ವಲ್ಪವಾಗಿ ಬೆಳಸಿಕೊಳ್ಳುತ್ತ ೮-೯ನೆಯ ಶತಮಾನದ ಹೊತ್ತಿಗೆ ಬಹುಮುಖವಾಗಿ ಏಳ್ಗೆಯನ್ನು ಪಡೆಯಿತು ಎಂದು ಹೇಳ ಬಹುದು.

೧೦-೧೧ನೆಯ ಶತಮಾನಗಳ ಅವಧಿಯಲ್ಲಿ ಜೈನಧರ್ಮದ ವಿವಿಧ ಪ್ರಕಾರಗಳು ಕರ್ಣಾಟಕದಲ್ಲಿ ಹರಡಿದ್ದುವು. ದಿಗಂಬರ ಮತ್ತ ಶ್ವೇತಾಂಬರ ಪಂಥಗಳು ಪ್ರಸಿದ್ಧ ವಾದುವು. ಮೂಲ ಜೈನಧರ್ಮ ಈ ಪಂಥಗಳಾಗಿ ಒಡೆಯಲು ಜೈನಸಂಘದ ದಕ್ಷಿಣದ ಯಾತ್ರೆಯೇ ಒಂದು ಮುಖ್ಯ ಕಾರಣವಾಗಿದ್ದಂತೆ ತೋರುತ್ತದೆ.[102] ದಿಗಂಬರ ಸಂಪ್ರ ದಾಯದ ಜೈನ ಕಥೆಗಳಲ್ಲಿ ಜೈನಸಂಘ ದಕ್ಷಿಣಕ್ಕೆ ಬಂದ ಸಂದರ್ಭದಲ್ಲಿ ಅದು ಜೈನ ಧರ್ಮದ ಮೂಲ ಧಾರ್ಮಿಕ ಸ್ವರೂಪವನ್ನು ಉಳಿಸಿಕೊಂಡಿತು, ಉತ್ತರದಲ್ಲಿ ಉಳಿದಿದ್ದ

ಜೈನಪಂಥೀಯರು ಬದಲಾವಣೆಗೆ ಒಳಗಾಗಿ ಶ್ವೇತಾಂಬರರಾದರು ಎಂದು ಹೇಳುವುದ ರಿಂದ ಕರ್ಣಾಟಕದಲ್ಲಿ ಬಹುಮಟ್ಟಿಗೆ ಪ್ರಚಾರವಾಗಿದ್ದುದು ದಿಗಂಬರ ಜೈನಪಂಥವೆಂದು ತಿಳಿಯಬಹುದಾಗಿದೆ. ಆದರೆ ಶ್ವೇತಾಂಬರ ಪಂಥ ಸಹ ಇಲ್ಲಿದ್ದುದಕ್ಕೆ ಸಾಹಿತ್ಯ ಹಾಗೂ ಶಾಸನಗಳ ಆಧಾರಗಳು ದೊರಕುತ್ತವೆ. ಹರಿಭದ್ರನ ಹೇಳಿಕೆಯ ಪ್ರಕಾರ ಕ್ರಿ.ಶ. ಒಂದ ನೆಯ ಶತಮಾನದಲ್ಲಿ ಶ್ವೇತಾಂಬರರು ಮಾನ್ಯಖೇಟದ ಸುತ್ತಮುತ್ತ ಇದ್ದರು.[103] ಮೃಗೇಶವರ್ಮನ ಹಲಸಿ ತಾಮ್ರಪಟದಿಂದ ಅಲ್ಲಿ ಶ್ವೇತಪಟಮಹಾಶ್ರಮಣ ಸಂಘ ಮತ್ತು ನಿರ್ಗ್ರಂಥಮಹಾಶ್ರಮಣ ಸಂಘಗಳು ಇದ್ದುದು ತಿಳಿಯುತ್ತದೆ.[104] ಈ ಕಾಲ ದಲ್ಲಿ ಪ್ರಾಯಶಃ ದಿಗಂಬರರದಷ್ಟೇ ಪ್ರಭಾವಶಾಲಿಯಾಗಿದ್ದ ಇನ್ನೊಂದು ಜೈನಪಂಥ ಯಾಪನೀಯರದು. ಇದರ ಹೆಚ್ಚಿನ ವ್ಯಾಪ್ತಿ ಕಂಡುಬರುವುದು ಉತ್ತರ ಕರ್ಣಾಟಕ ಮತ್ತು ಸುತ್ತಮುತ್ತಲ ಪ್ರದೇಶಗಳಲ್ಲಿ. ಈ ಸಂಘದ ಸ್ಥಾಪಕ ಕಲಶ ಆಚಾರ್ಯ ಎಂಬ ಶ್ವೇತಾಂಬರ ಮುನಿ.. ಈತ ಕಲ್ಯಾಣದಲ್ಲಿ (ಗುಲ್ಬರ್ಗ ಜಿಲ್ಲೆಯ) ೧೪೮ರಲ್ಲಿ ಇದನ್ನು ಸ್ಥಾಪಿಸಿದ ಎಂಬ ಹೇಳಿಕೆ ಇದೆ. ದಕ್ಷಿಣಾಪಥದಲ್ಲಿ ಸಾಮಳಿಪುತ್ರನೆಂಬ ಶ್ವೇತಭಿಕ್ಷು ಜಾಪುಲಿ (ಯಾಪನೀಯ) ಸಂಘಕ್ಕೆ ಮೊದಲಿಗನಾದ, ಕರಹಾಟಕದ ರಾಣಿಯೊಬ್ಬಳು ಇದಕ್ಕೆ ಕಾರಣಳಾದಳು ಎಂಬ ಕಥೆ ಸಹ ಇದೆ. ಈ ಉಲ್ಲೇಖಗಳಿಂದ ಯಾಪನೀಯ ಸಂಘ ಹುಟ್ಟಿದ್ದು ಕರ್ಣಾಟಕದಲ್ಲಿ ಎಂಬುದು ಅರಿವಾಗುತ್ತದೆ.[105] ಮೃಗೇಶವರ್ಮನ ತಾಮ್ರಪಟದಲ್ಲಿ ಯಾಪನೀಯರ ಸ್ಪಷ್ಟ ಉಲ್ಲೇಖವಿದೆ.[106]

ಈ ಕಾಲದ ಅನೇಕ ಶಾಸನಗಳು ಈ ಪಂಥಗಳಲ್ಲೂ ವಿವಿಧ ಶಾಖೆಗಳಿದ್ದುವೆಂಬು ದನ್ನು ತಿಳಿಸುತ್ತವೆ. ಅವು ಸಂಘ, ಗಣ, ಗಚ್ಛ, ಅನ್ವಯ ಎಂಬ ಹೆಸರುಗಳಲ್ಲಿ ಪ್ರಚಲಿತ ವಾಗಿದ್ದುವು. ಇವುಗಳಲ್ಲಿ ಪ್ರಧಾನವಾದುದು ಸಂಘ, ಅನಂತರ ಗಚ್ಛ. ಗಚ್ಛದ ಶಾಖೆ ಗಳು ಅನ್ವಯುಗಳು. ಅನ್ವಯ ಅಥವಾ ಗಚ್ಛಗಳ ಸಮುದಾಯಗಳು, ಗಣಗಳು.[107] ಇವು ಗಳಲ್ಲಿ ಕೆಲವು, ವ್ಯಕ್ತಿಗಳ ಅಥವಾ ಊರುಗಳ ಹೆಸರುಗಳಲ್ಲಿ ಪ್ರಚಲಿತವಾಗಿವೆ. ಮೂಲ ಕೂಟದಿಂದ ಹೊರಟು ಮುಂದೆ ತಮ್ಮದೇ ಆದ ಸಂಪ್ರದಾಯವನ್ನು ಸ್ಥಾಪಿಸಿದಾಗ, ಹಾಗೆ ಸ್ಥಾಪಿಸಿದ ವ್ಯಕ್ತಿಗಳ ಅಥವಾ ಸ್ಥಾಪನೆಯ ಸ್ಥಳಗಳ ಹೆಸರುಗಳು ಇವಕ್ಕೆ ಬಂದಿರ ಬೇಕು ಎಂದು ಊಹೆ.[108] ಪ್ರಸ್ತುತ ಕಾಲದ ಶಾಸನಗಳಲ್ಲಿ ಈ ವಿವಿಧ ಶಾಖೆಗಳ ಬಗ್ಗೆ ಹೆಚ್ಚು ವಿವರಗಳು ದೊರಕುವುದಿಲ್ಲ. ಕಿತ್ತೂರ ಸಂಘ,[109] ಕೊಳತ್ತೂರ ಸಂಘ,[110] ನವಿಲೂರ್ ಸಂಘ[111] ಮತ್ತು ಶ್ರೀ ಸಂಘಗಳ ಹೆಸರು ಶ್ರವಣಬೆಳಗೊಳದ ಶಾಸನಗಳಲ್ಲಿ ಕಾಣುತ್ತವೆ. ಪ್ರಾಯಶಃ ನವಿಲೂರ್ ಮತ್ತು ಶ್ರೀ ಸಂಘಗಳು ಒಟ್ಟಾಗಿ ನವಿಲೂರ್ ಶ್ರೀ ಸಂಘವೆಂದು ಬಂದಿದೆ.[112] ಇನ್ನೊಂದೆಡೆ ನವಿಲೂರ್ ಶ್ರೀಸಂಘದ ಜೊತೆ ಅಜಿಗಣ ಜೊತೆಗೂಡಿದೆ.[113] ಶ್ರೀ ಸಂಘ ಮತ್ತು ಶ್ರೀಪೂರಾನ್ವಯ ಎಂದು ಒಂದು ಶಾಸನದಲ್ಲಿ ಒಟ್ಟಾಗಿ ಹೇಳಿದೆ.[114] ಒಂದು ಶಾಸನದಲ್ಲಿ ಸ್ತೂಪಾನ್ವಯದ ಉಲ್ಲೇಖವಿದ್ದಂತೆ ತೋರು ತ್ತದೆ.[115] ಈ ಎಲ್ಲಾ ಶಾಸನಗಳೂ ಕ್ರಿ.ಶ. ೭ನೆಯ ಶತಮಾನದವು. ೮ನೆಯ ಶತಮಾನದ ಆದಿಭಾಗಕ್ಕೆ ಸೇರುವ ಲಕ್ಷ್ಮೇಶ್ವರದ ಮೂರು ಶಾಸನಗಳಲ್ಲಿ ಮೂಲಸಂಘದ ಪ್ರಸ್ತಾಪ

ಇದೆ.[116] ಎರಡು ಶಾಸನಗಳಲ್ಲಿ ಮೂಲಸಂಘದ ದೇವಗಣದ ಹೆಸರಿದೆ.[117]

ಈ ವಿವಿಧ ಶಾಖೆಗಳಲ್ಲಿ ಎಷ್ಟು ಮಟ್ಟಿನ ತಾತ್ತ್ವಿಕ ವ್ಯತ್ಯಾಸಗಳು ಇದ್ದುವು ಎಂಬುದು ತಿಳಿಯದು. ಕೆಲವು ಅನಂತರದ ಕಾಲದ ಶಾಸನಗಳಿಂದ ಬೇರೆ ಬೇರೆ ಶಾಖೆಯವರಿಗೆ ಪ್ರತ್ಯೇಕ ಬಸದಿಗಳಿದ್ದುವು ಎಂದು ತಿಳಿಯುತ್ತದೆ.[118] ಮೇಲೆ ಹೇಳಿರುವ ಕದಂಬ ಶಾಸನಗಳಿಂದ ಯಾಪನೀಯ, ದಿಗಂಬರ ಶ್ವೇತಾಂಬರರ ಪ್ರತ್ಯೇಕ ಬಸದಿಗಳು ಇದ್ದುವೆಂದು ಸೂಚಿತವಾಗುತ್ತದೆ.

ಈ ಸಂಘ, ಗಣ, ಗಚ್ಛ ಇತ್ಯಾದಿಗಳು ಹೆಚ್ಚಿನ ಮಟ್ಟಿಗೆ ಮುನಿಸಮುದಾಯಗಳ ಜೊತೆಗೇ ಸೇರಿ ಬರುವುದು ಗಮನಾರ್ಹ. ಶ್ರಾವಕರ ವಿಷಯದಲ್ಲಿ ಅವರು ಯಾರಾದರೊಬ್ಬ ಮುನಿಯ ಶಿಷ್ಯರೆಂದು ಕಾಣುತ್ತದೆಯೇ ಹೊರತು, ಅವರೇ ಇಂಥ ಸಂಘಾದಿಗಳಿಗೆ ಸೇರಿದವರೆಂದು ತಮ್ಮನ್ನು ಹೇಳಿಕೊಳ್ಳುವುದಿಲ್ಲ. ಈ ಶಾಖೆ ಅನ್ವಯಗಳಿಗೆ ಪ್ರತ್ಯೇಕ ಗುರುಪರಂಪರೆಗಳಿದ್ದುವೆಂದು ತೋರುತ್ತದೆ. ಎಲ್ಲವೂ ಮೂಲತಃ ಜೈನಧರ್ಮೀಯವೇ ಆದ್ದರಿಂದ ವಿವಿಧ ಪರಂಪರೆಗಳಲ್ಲಿ ಕೆಲವು ಹೆಸರುಗಳು ಸಾಮಾನ್ಯವಾದುವು. ಉದಾಹರಣೆಗೆ, ೬-೭ನೆಯ ಶತಮಾನದ ಶ್ರವಣಬೆಳಗೊಳದ ಒಂದು ಶಾಸನದಲ್ಲಿಯ ಪರಂಪರೆ ಈ ರೀತಿ ಇದೆ: "ಮಹಾವೀರ ಗೌತಮಗಣಧರ ಸಾಕ್ಷಾಚ್ಛಿಷ್ಯ ಲೋಹಾರ್ಯ್ಯ ಜಮ್ಬು ವಿಷ್ಣುದೇವಾಪರಾಜಿತ ಗೋವರ್ಧನ ಭದ್ರಬಾಹು ವಿಶಾಖ ಪ್ರೋಷ್ಠಿಲ ಕೃತ್ತಿಕಾರ್ಯ್ಯ ಜಯನಾಮ ಸಿದ್ಧಾರ್ತ್ಥ ಧೃತಿಷೇಣ ಬುದ್ಧಿಲಾದಿ ಗುರು ಪರಮ್ಪರೀಣ ಕ್ರಮಾಭ್ಯಾಗತ... ಭದ್ರಬಾಹುಸ್ವಾಮಿನಾ."[119] ಲಕ್ಷ್ಮೇಶ್ವರದ ಶಂಖಬಸದಿಯ ಶಾಸನದಿಂದ ದೇವಾಚಾರ್ಯರಿಂದ ಆರಂಭವಾಗಿ ಚಿಕಣದೇವಾಚಾರ್ಯ, ರಾಮದೇವಾಚಾರ್ಯ, ಜಯದೇವ ಪಂಡಿತಾಚಾರ್ಯ, ಶ್ರೀ ವಿಜಯಪಂಡಿತಾಚಾರ್ಯ—ಈ ಪರಂಪರೆ ದೊರಕುತ್ತದೆ. ಅದೇ ಸ್ಥಳದ ಇನ್ನೊಂದು ಶಾಸನದಲ್ಲಿ ಮೂಲಸಂಘದ ದೇವಗಣದ ಪೂಜ್ಯಪಾದ, ಉದಯದೇವ, ನಿರವದ್ಯಪಂಡಿತ ಈ ಪರಂಪರೆ ಉಲ್ಲೇಖಿತವಾಗಿದೆ.[120]

ಸೈದ್ಧಾನ್ತಿಕರಂಗದಲ್ಲಿ ಜೈನಧರ್ಮ ಕೇವಲಜ್ಞಾನಪ್ರಾಪ್ತಿಯನ್ನು ಗುರಿಯಾಗಿ ತಿಳಿಯುತ್ತದೆ. ಪುಣ್ಯ ಪಾಪಗಳೆಲ್ಲವನ್ನೂ ಮೀರಿ ಇಹಕರ್ಮದ ಬಂಧದಿಂದ ಮುಕ್ತವಾದ ಸ್ಥಿತಿ ಕೇವಲಜ್ಞಾನಪ್ರಾಪ್ತಿಯಿಂದ ಒದಗುತ್ತದೆ. ಜೈನತತ್ತ್ವಗಳಲ್ಲಿ ನಂಬಿಕೆ (ಸಮ್ಯಕ್ ದರ್ಶನ), ಜೀವಾದಿ ಪದಾರ್ಥಗಳ ಯಥಾರ್ಥಜ್ಞಾನ (ಸಮ್ಯಕ್‌ಜ್ಞಾನ) ಮತ್ತು ಬಾಹ್ಯಾಭ್ಯಂತರ ಕ್ರಿಯಾನಿವೃತ್ತಿಯಾಗಿ ಸಮ್ಯಗ್‌ಜ್ಞಾನೋಪೇತಸ್ಥಿತಿಗೆ ಹೇತುವಾದ ಭವ್ಯಜೀವನ (ಸಮ್ಯಕ್ ಚಾರಿತ್ರ)—ಇವು ಆ ಗುರಿಯ ಸಾಧನೆಗೆ ಮಾರ್ಗ. ಹೊಸದಾಗಿ ಕರ್ಮಗಳು ತುಂಬಿಕೊಳ್ಳದಂತೆ ನೋಡಿಕೊಂಡು (ಸಂವರ) ಸಂಚಿತಕರ್ಮವನ್ನು ಕಳೆದುಕೊಂಡರೆ ಮೋಕ್ಷಸ್ಥಿತಿ ಒದಗುತ್ತದೆ. ಈ ಧರ್ಮದಲ್ಲಿ ಪರಮೋಚ್ಚ ದೇವತೆಯ ಕಲ್ಪನೆಯಿಲ್ಲದಿದ್ದರೂ ಗುರು ಜಿನರಲ್ಲಿ ಭಕ್ತಿಯಿಡಬೇಕೆಂಬ ಅಂಶವಿದೆ. ಅವರ ಸಹವಾಸ ಅಥವಾ ಸೇವೆ ಮೋಕ್ಷಸಾಧನೆಗೆ ಆವಶ್ಯ ಎಂಬ ಭಾವನೆ ಇಲ್ಲಿದೆ.

ಸೈದ್ಧಾನ್ತಿಕ ಗುರಿಯನ್ನು ಮುಟ್ಟಲು ದಶವಿಧ ಮಾರ್ಗಗಳು ಪ್ರತಿಪಾದಿತವಾಗಿವೆ.

ಅವು ಉತ್ತರಾಕ್ಷಮಾ, ಮಾರ್ದವ, ಆರ್ಜವ, ಸತ್ಯ, ಶೌಚ, ಸಂಯಮ, ತಪ, ತ್ಯಾಗ, ಆಕಿಂಚನ್ಯ, ಬ್ರಹ್ಮಚರ್ಯ. ಒಟ್ಟಿನಲ್ಲಿ ಇದು ಯೋಗಮಾರ್ಗ. ಈ ಮಾರ್ಗದ ಅನುಸರಣೆಗೆ ಶ್ರಮಣರಾಗುವುದು ಮುಖ್ಯ. ಎಂದರೆ ಧರ್ಮಾಚರಣೆಗಾಗಿ ಇಹಕರ್ಮ ಭೋಗಗಳನ್ನು ಪರಿತ್ಯಜಿಸಿ ಮುನಿಗಳಾಗುವ ಜೈನಧರ್ಮದ ಸಂಪ್ರದಾಯ ಕರ್ಣಾಟಕ ದಲ್ಲೂ ಹರಡಿತು. ಇವರುಗಳು ವಸ್ತ್ರತ್ಯಾಗ, ದೇಹದಂಡನೆ, ಬ್ರಹ್ಮಚರ್ಯ, ಸ್ನಾನ ಮಾಡದಿರುವುದು, ಕೊಡೆ ಪಾದರಕ್ಷೆಗಳನ್ನು ವಿಸರ್ಜಿಸುವುದು, ನೆಲ ಅಥವಾ ಹಲಗೆಯ ಮೇಲೆ ಮಲಗುವುದು, ನಿಂದಾ ಇತ್ಯಾದಿಗಳನ್ನು ಗಮನಿಸದೆ ಮನೆಮನೆಗೆ ಹೋಗಿ ಭಿಕ್ಷೆ ಬೇಡುವುದು ಈ ರೀತಿಯ ಕ್ರಮಗಳನ್ನು ಅನುಸರಿಸುತ್ತಿದ್ದರು. ಕಠಿಣ ತಪಸ್ಸಿನಲ್ಲಿ ನಿರತರಾಗುತ್ತಿದ್ದರು. ಈ ಶ್ರಮಣರು ಯಾವ ಒಂದು ಸ್ಥಳದಲ್ಲೂ ನೆಲಸದೆ ಪ್ರಯಾಣ ಮಾಡುತ್ತಿರಬೇಕೆಂಬ ನಿಯಮವಿತ್ತು. ಸಂಚಾರಕಾಲದಲ್ಲಿ ಧರ್ಮಪ್ರಸಾರಕಾರ್ಯ ವನ್ನು ಕೈಗೊಳ್ಳಬೇಕಾಗಿತ್ತು. ಮಳೆಗಾಲದ ನಾಲ್ಕು ತಿಂಗಳಲ್ಲಿ ಮಾತ್ರ (ಚಾತುರ್ಮಾಸ್ಯ) ಶ್ರಮಣರು ಒಂದೆಡೆ ನೆಲಸುತ್ತಿದ್ದರು. ಈ ಸಂದರ್ಭದಲ್ಲಿ ತಮ್ಮ ಧರ್ಮದ ಬಗ್ಗೆ ಹೆಚ್ಚಿನ ಅಧ್ಯಯನ ಮಾಡಲು ಹಾಗೂ ಪರಸ್ಪರ ವಿಚಾರ ವಿನಿಮಯ ಮಾಡಿಕೊಳ್ಳಲು ಅವಕಾಶ ಒದಗುತ್ತಿತ್ತು. ಈ ಮುನಿಧರ್ಮವನ್ನು ಸ್ತ್ರೀಯರು ಸಹ ಅನುಸರಿಸುತ್ತಿದ್ದರು. ಅವರನ್ನು ಕಂತಿಯರು ಎಂದು ಕರೆಯಲಾಗುತ್ತಿತ್ತು.

ಜೈನ ಧರ್ಮದ ಪ್ರಕಾರ ಮೋಕ್ಷ ಸಾಧನೆಗೆ ಈ ಮುನಿತನ ಅವಶ್ಯಾಂಶವಾಗಿದ್ದರೂ, ಇತರ ಅನೇಕ ಜನ ಗೃಹಸ್ಥಾಶ್ರಮದಲ್ಲೇ ಇದ್ದು ಜೈನಧರ್ಮವನ್ನು ಅನುಸರಿಸುತ್ತಿದ್ದರು. ಇವರು ಶ್ರಾವಕರು. ಮುನಿಗಳು ಅನುಸರಿಸಬೇಕಾಗಿದ್ದ ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ನೀತಿಗಳನ್ನು ಶ್ರಾವಕರೂ ಅನುಸರಿಸಬೇಕಾಗಿತ್ತು. ಆದರೆ ಇವು ಶ್ರಾವಕರಿಗೆ ಸ್ವಲ್ಪ ಹಗುರ ರೀತಿಯದಾಗಿ, ಗೃಹಸ್ಥಧರ್ಮಾವಿರುದ್ಧವಾಗಿ ಇರು ವಂತೆ ಇತ್ತು. ಜೈನಗ್ರಂಥಗಳು ಶ್ರಾವಕಧರ್ಮದ ಮೂಲಸೂತ್ರಗಳಾಗಿ ದಾನ ಪೂಜೆ ಶೀಲ ಉಪವಾಸಗಳನ್ನು ನಿಯಮಿಸುತ್ತವೆ

ಮುನಿ ಶ್ರಾವಕ ವರ್ಗಗಳಾಗಿ ಜೈನಧರ್ಮಾನುಯಾಯಿಗಳು ವಿಭಜಿತವಾಗಿದ್ದರೂ ಆ ವರ್ಗಗಳು ಪರಸ್ಪರಾನುವರ್ತಿಗಳಾಗಿದ್ದುವು. ಮುನಿಗಳು ಜನಸಾಮಾನ್ಯರಿಂದ ಭಿಕ್ಷೆಯೆತ್ತಿ ಜೀವಿಸಬೇಕಿತ್ತಲ್ಲದೆ ಧರ್ಮೋಪದೇಶ ಸಹ ಮಾಡಬೇಕಿತ್ತು. ಸಹಜವಾಗಿ ನಿಷ್ಠಾವಂತ ಮುನಿಗಳ ಬಗ್ಗೆ ಶ್ರಾವಕರಲ್ಲಿ ಭಕ್ತಿ ಗೌರವಗಳು ಬೆಳೆದು ಅವರ ತಪಶ್ಚರ್ಯೆಗೆ ಅನುಕೂಲಗಳನ್ನು ಮಾಡಿಕೊಡುತ್ತಿದ್ದರು. ಬಸದಿಗಳನ್ನು ಕಟ್ಟಿಸಿ ಅಲ್ಲಿ ಜಿನಪೂಜೆಗಲ್ಲದೆ ಮುನಿಗಳ ವಾಸಕ್ಕೂ ವ್ಯವಸ್ಥೆಮಾಡುತ್ತಿದ್ದರು.

ಹೀಗೆ ಪಾರಂಪರ್ಯವಾಗಿ ವ್ಯವಸ್ಥಿತವಾಗಿದ್ದ ಜೈನಧರ್ಮದ ವ್ಯವಹಾರಗಳು ಕರ್ಣಾಟಕದಲ್ಲಿ ಹೇಗಿದ್ದುವು ಎಂಬ ಬಗ್ಗೆ ಸಮಕಾಲೀನ ಶಾಸನಗಳು ಬೆಳಕು ಚೆಲ್ಲುತ್ತವೆ. ಮುನಿಗಳ ಕಠಿನ ತಪಸ್ಸಿನ ಬಗ್ಗೆ ಶ್ರವಣ ಬೆಳಗೊಳದ ಶಾಸನಗಳು ಮಾಹಿತಿ ನೀಡುತ್ತವೆ. ಸಲ್ಲೇಖನವ್ರತ ಜೈನರಲ್ಲಿ ವ್ಯಾಪಕವಾಗಿದ್ದಿತು. ಭದ್ರಬಾಹು ಚಂದ್ರಗುಪ್ತರ ಕಥೆ

ಯಲ್ಲೇ ಇದರ ಪ್ರಸ್ತಾಪವಿದೆ. ಸಮಾಧಿಮರಣವೆಂದೂ ಕರೆಯುತ್ತಿದ್ದ ಈ ವ್ರತ ಸ್ವಇಚ್ಛೆಯಿಂದ ದೇಹವನ್ನು ದಂಡಿಸಿ ಮರಣವನ್ನಪ್ಪುವುದೇ ಆಗಿತ್ತು. ಈ ವ್ರತವನ್ನು ಅಂಗೀಕರಿಸಿದವರು ಅನ್ನಪಾನಾದಿಗಳನ್ನು ತ್ಯಜಿಸಿ ಕರ್ಮಬಂಧಗಳ ಬಗ್ಗೆ ಪಶ್ಚಾತ್ತಾಪ ಪಡುತ್ತ ಪಂಚಪರಮೇಷ್ಠಿಗಳ ಧ್ಯಾನದಲ್ಲಿ ಮರಣಾಂತ ಕಾಲಕಳೆಯಬೇಕಿತ್ತು. ಈ ವ್ರತ ಕಠಿಣತರವಾಗಿರಬೇಕು. ಈ ವ್ರತ ಕತ್ತಿಯ ಅಲಗಿನಂತೆ, ಬೆಂಕಿಯಂತೆ, ವಿಷಸರ್ಪದ ಹಲ್ಲಿನಂತೆ ಕಠೋರವಾದ್ದು ಎಂದು ಶ್ರವಣಬೆಳಗೊಳದ ಒಂದು ಶಾಸನ ವರ್ಣಿಸುತ್ತದೆ.[121] ಬಹುಮಟ್ಟಿಗೆ ಜೀವನದ ಮೇಲೆ ಆಸೆಯನ್ನು ತೊರೆದವರು, ರೋಗಕ್ಕೆ ತುತ್ತಾದವರು, ಹಾವಿಂದ ಕಡಿಸಿಕೊಂಡು ಪ್ರಾಣದ ಆಸೆ ತೊರೆದವರು ಇತ್ಯಾದಿ ಜನ ಈ ವ್ರತವನ್ನು ಅಂಗೀಕರಿಸಿ ಮರಣ ಹೊಂದುತ್ತಿದ್ದರು.[122] ಸಮಾಧಿಮರಣಕ್ಕೆ ಕೆಲವು ಶಾಸ್ತ್ರನಿಷ್ಕೃಷ್ಟ ವಿಧಿಗಳಿದ್ದುವು. ಅವುಗಳಲ್ಲಿ ಇಂಗಿನೀಮರಣ, ಪಾಉಗ್ಗಮಣ ಈ ರೀತಿಯ ಪ್ರಭೇದ ಗಳೂ ಇದ್ದುವು. ಮುನಿಗಳೂ ಕಂತಿಗಳೂ ಸಂಸಾರಿಗಳಾದ ಸ್ತ್ರೀಪುರುಷರೂ ಈ ಸಮಾಧಿ ಮರಣ ವಿಧಿಯನ್ನು ಅನುಸರಿಸಬಹುದಾಗಿತ್ತು.[123] ಈ ವಿಧಿಯಿಂದ ಮಡಿದವರಿಗೆ ಸ್ಮಾರಕ ಗಳನ್ನು ನಿಲ್ಲಿಸುತ್ತಿದ್ದರು. ಇವೇ ನಿಸಿದಿ ಕಲ್ಲುಗಳು. ಈ ನಿಸಿದಿಗಳು ಪವಿತ್ರಸ್ಥಾನಗಳೆಂದು ಪರಿಗಣಿತವಾಗಿದ್ದುವು.[124]

ಶ್ರಾವಕರ ಧರ್ಮಶ್ರದ್ಧೆಯಿಂದ ಜಿನಪೂಜೆಗಾಗಿ ಜೈನ ದೇವಾಲಯಗಳು ನಿರ್ಮಾಣ ವಾಗುತ್ತಿದ್ದುವು. ಪ್ರಾಯಶಃ ಮುನಿಗಳು ಅಲ್ಲಿ ವಾಸಿಸುತ್ತಿದ್ದುದರಿಂದ ಅವುಗಳಿಗೆ ಬಸದಿ (ವಸತಿ) ಎಂಬ ಹೆಸರು ರೂಢಿಗೆ ಬಂದಂತೆ ತೋರುತ್ತದೆ. ಶಾಸನಗಳಲ್ಲಿ ಜಿನಗೃಹ, ಚೈತ್ಯಾಲಯ ಎಂಬ ಮಾತುಗಳೇ ಹೆಚ್ಚಾಗಿ ಬರುತ್ತವೆ. ಇಂಥ ಅನೇಕ ಚೈತ್ಯಾಲಯ ಗಳನ್ನು ರಾಜರು, ಸಾಮಂತರು ಮತ್ತು ಇತರ ವ್ಯಕ್ತಿಗಳು ನಿರ್ಮಾಣ ಮಾಡುತ್ತಿದ್ದರು; ಅಲ್ಲಿಯ ಪೂಜಾದಿಗಳಿಗೆ ದತ್ತಿಗಳನ್ನು ನೀಡುತ್ತಿದ್ದರು ಎಂಬುದಕ್ಕೆ ಅನೇಕ ಉದಾಹರಣೆ ಗಳನ್ನು ಹಿಂದೆಯೇ ಕೊಟ್ಟಿದೆ. ಈ ಬಸದಿಗಳಲ್ಲಿದ್ದ ಪೂಜಾವಿಧಾನ ಈಗ ಹಿಂದು ಜೈನಧರ್ಮಗಳಲ್ಲಿ ಕಾಣುವ ವಿಧಾನಕ್ಕಿಂತ ಬೇರೆಯಾಗಿರಲಿಲ್ಲ. ಮೃಗೇಶವರ್ಮನ ದೇವಗಿರಿ ಶಾಸನದಲ್ಲಿ ಚೈತ್ಯಾಲಯದಲ್ಲಿ ಉಪಲೇಪನ, ಅಭ್ಯಂಜನ, ಭಿನ್ನಸಂಸ್ಕಾರ ಹಾಗೂ ಮಹಿಮೆ (ಉತ್ಸವ) ನಡಸಲಾಗುತ್ತಿತ್ತೆಂದು ಹೇಳಿದೆ.[125] ಹರಿವರ್ಮನ ಒಂದು ಶಾಸನ ದಲ್ಲಿ ಹಲಸಿಯ ಜೈನ ಬಸದಿಗೆ 'ಪ್ರತಿವರ್ಷಮಷ್ಟಾಹ್ನಿಕಮಹಾಮಹ ಸತತ ಚರೂಪ ಲೇಪನ ಕ್ರಿಯಾರ್ತ್ಥ'ವಾಗಿ ದಾನ ಮಾಡಿದ ವಿಷಯವಿದೆ.[126] ಚಾಲುಕ್ಯ ಇಮ್ಮಡಿ ಕೀರ್ತಿವರ್ಮನ ಆಡೂರು ಶಾಸನದಲ್ಲಿ 'ಹವಿರಕ್ಷತಗನ್ಧಪುಷ್ಪಾದಿಗಳ್ಗೆ' ದಾನ ನೀಡಿದ ವಿಷಯವಿದೆ.[127] ಲಕ್ಷ್ಮೇಶ್ವರದ ಹಲವು ಶಾಸನಗಳಲ್ಲಿ ಜಿನಪೂಜೆಗಾಗಿ ದತ್ತಿಕೊಟ್ಟ ವಿಷಯವಿದೆ.[128] ಕದಂಬ ರವಿವರ್ಮನ ಹಲಸಿ ತಾಮ್ರಪಟದಲ್ಲಿರುವ ಮಾತುಗಳಿಂದ ಜಿನ ಭವನಗಳಲ್ಲಿ ಪೂಜೆ, ಉತ್ಸವ, ಹಬ್ಬ, ಆಹಾರದಾನಗಳು ನಡೆಯುತ್ತಿದ್ದುವೆಂದು ತಿಳಿಯುತ್ತದೆ.[129]

ಜೈನಧರ್ಮ ವ್ಯಾಪಕವಾಗಿ ಹಬ್ಬುತ್ತಿದ್ದಂತೆಯೇ ತತ್ಸಂಬಂಧಿತ ಶಾಸ್ತ್ರಪುರಾಣಗಳ

ಪ್ರಸಾರ ಬಹುಮಟ್ಟಿಗೆ ನಡೆದಿರಬೇಕು. ಜನಸಾಮಾನ್ಯರಲ್ಲಿ ಬಹುತೇಕ ತಾತ್ತ್ವಿಕವಾದ ಈ ಧರ್ಮದ ಸಿದ್ಧಾಂತಗಳು ರುಚಿಸಲು ಅನುಕೂಲವಾಗುವಂತೆ ಇದ್ದ ಅನೇಕ ಜೈನ ಕಥೆ ಪುರಾಣಗಳು ಸಾಕಷ್ಟುಮಟ್ಟಿಗೆ ಜನಶ್ರುತವಾಗುತ್ತಿರಬೇಕೆಂದು ತತ್ಕಾಲೀನ ಶಾಸನಗಳಿಂದ ಮತ್ತು ಸಂಸ್ಕೃತ-ಪ್ರಾಕೃತ ಸಾಹಿತ್ಯಗಳಿಂದ ತಿಳಿಯುತ್ತದೆ. ೨೪ ತೀರ್ಥಂಕರರ ಇತರ ಪೌರಾಣಿಕ ವ್ಯಕ್ತಿಗಳ ಕಥೆಗಳು ಮುಂದೆ ಹೇಗೆ ಕನ್ನಡ ಸಾಹಿತ್ಯದ ಕೃತಿವಸ್ತುಗಳಾದುವೆಂಬುದು ತಿಳಿದ ವಿಷಯ. ಪ್ರಸ್ತುತ ಕಾಲದ ಪುರಾತತ್ತ್ವ ಆಧಾರಗಳಿಂದ ವರ್ಧಮಾನ ಮತ್ತು ಪಾರ್ಶ್ವನಾಥರ ಪೂಜೆ ಈ ಕಾಲದಲ್ಲಿ ವಿಶೇಷ ಪ್ರಚಲಿತವಾಗಿದ್ದಿರಬೇಕೆಂದು ತಿಳಿಯ ಬರುತ್ತದೆ. ಎಲ್ಲೋರದ ಮತ್ತು ಬಾದಾಮಿಯ ಜೈನಗುಹೆಗಳಲ್ಲಿರುವ ಶಿಲ್ಪಗಳು ಇದಕ್ಕೆ ಮುಖ್ಯ ಸಾಕ್ಷಿ. ಅವುಗಳ ನಿರೂಪಣೆಯಲ್ಲಿ ಜೈನ ಪೌರಾಣಿಕ ಕಲ್ಪನೆಗಳು ಸ್ಪಷ್ಟವಾಗಿ ಮೂಡಿಬಂದಿವೆ. ಎಲ್ಲೋರದ ಜೈನ ಶಿಲ್ಪಗಳಲ್ಲಿ ಯಕ್ಷ, ಯಕ್ಷಿಣಿಯರ ಶಿಲ್ಪಗಳೂ ಇವೆ. ಐಹೊಳೆಯ ಮೇಗುತಿ ಗುಡಿಯಲ್ಲಿರುವ ಒಂದು ಅಂಬಿಕಾ ವಿಗ್ರಹ ಸುಮಾರು ೭ನೆಯ ಶತಮಾನದ್ದಾಗಿದ್ದು, ಕರ್ಣಾಟಕದಲ್ಲಿ ದೊರೆತ ಅತಿ ಪ್ರಾಚೀನ ವಿಗ್ರಹವಾಗಿದೆ. ಈ ದೇಶದಲ್ಲಿ ವಿಶೇಷವಾಗಿ ಪ್ರಚಲಿತವಾಗಿರುವ ಇನ್ನೊಂದು ಜೈನ ಪೌರಾಣಿಕ ಕಲ್ಪನೆ ಗೊಮ್ಮಟನದು. ಪ್ರಾಯಶಃ ಸು. ೬-೭ನೆಯ ಶತಮಾನದ ಹೊತ್ತಿಗೇ ಈ ಕಲ್ಪನೆ ಕರ್ಣಾಟಕದಲ್ಲಿದ್ದಿರಬೇಕೆಂಬುದಕ್ಕೆ ಗುಡ್ನಾಪುರ ಶಾಸನದಲ್ಲಿ ಸೂಚನೆಯಿದೆ.[130]

## ವೈದಿಕ-ಪೌರಾಣಿಕ ಹಿಂದುಧರ್ಮ

ಹಿಂದು ಎಂದು ವ್ಯವಹಾರದಲ್ಲಿರುವ ಧರ್ಮದ ಸ್ವರೂಪ ಬಹು ವಿಶಿಷ್ಟ ರೀತಿಯದು. ವಿಶ್ವದ ಇತರ ಧರ್ಮಗಳಿಗೆ ಒಬ್ಬ ಪ್ರವರ್ತಕನಿದ್ದು ಅವನು ನಿರೂಪಿಸಿದ ಸೈದ್ಧಾಂತಿಕ ತತ್ತ್ವಗಳ ನೆಲೆಗಟ್ಟಿನ ಮೇಲೆ ಮುಂದೆ ಆ ಧರ್ಮಗಳು ಬೆಳೆದಿದ್ದರೆ, ಈ ಧರ್ಮಕ್ಕೆ ಅಂಥ ಬೇರು ಇಲ್ಲ. ಹಲವು ಸಾಮಾಜಿಕ-ಆರ್ಥಿಕ ಹಿನ್ನೆಲೆಗಳಿಂದ ರೂಪಿತವಾಗಿ ಪರಂಪರಾನುಗತವಾಗಿ ಬಂದ ಜೀವನ ವಿಧಾನ, ಕಲ್ಪನೆ, ಕಟ್ಟುಪಾಡುಗಳೇ ಇದರ ಮೂಲಭೂತ ಅಂಶ. ಈ ದೃಷ್ಟಿಯಲ್ಲಿ ಇದು ಜನಪದೀಯ. ಆದರೆ ಕಾಲಕಾಲಕ್ಕೆ ಪ್ರತಿ ಬೆಳವಣಿಗೆಯ ಘಟ್ಟಗಳಿಗೂ ಸೈದ್ಧಾಂತಿಕ ಹಿನ್ನೆಲೆ ಒದಗುತ್ತ ಬಂದಿರುವುದರಿಂದ ಇದು ಜನಪದದಿಂದ ಭಿನ್ನ. ಹಿಂದುಧರ್ಮ ಆಲದಮರವಿದ್ದಂತೆ. ಒಂದು ಬೇರಿನಿಂದ ಹುಟ್ಟಿ ಬೆಳೆದ ಮರ ಅನಂತರ ಹಲವು ಬಿಳಲುಗಳನ್ನು ಬಿಟ್ಟು ಮುಂದೆ ತಾಯಿಬೇರು ಟೊಳ್ಳಾದರೂ ಹರಡಿದ ಬಿಳಲುಗಳ ಆಧಾರದಮೇಲೆಯೇ ಮರ ಬೆಳೆದುಕೊಳ್ಳಬಹುದು. ಈ ಪ್ರಕ್ರಿಯೆ ಅವಿಚ್ಛಿನ್ನವಾಗಿ ನಡೆಯಬಲ್ಲುದು. ಅಲ್ಲದೆ ಹಿಂದುಧರ್ಮ ನೀರಿನಂತೆ ದ್ರವಗುಣವುಳ್ಳದ್ದು. ಹಲವು ವಸ್ತು (ವಿಭಿನ್ನ ಧರ್ಮಾಂಶ)ಗಳನ್ನು ಕರಗಿಸಿಕೊಂಡರೂ ದ್ರವತ್ವವನ್ನು ಉಳಿಸಿಕೊಳ್ಳಬಲ್ಲುದು. ಆ ವಸ್ತುಗಳು ಕರಗಿಸಿಕೊಳ್ಳುವಂಥದಲ್ಲವಾದರೆ ಅದನ್ನು ತೇವಮಾಡಿ ಅದರ ಗುಣಗಳನ್ನೇ ಮಾರ್ಪಡಿಸಬಲ್ಲುದು. ಈ ಧರ್ಮದ ಈ ವೈಶಿಷ್ಟ್ಯದಿಂದಾಗಿ ಇಂದಿನ

ವ್ಯವಹಾರದಲ್ಲಿ ಜೈನ ಬೌದ್ಧದಂಥ ವಿಶಿಷ್ಟ ಮತಗಳ ಹೊರಗಿರುವುದೆಲ್ಲ ಹಿಂದು ಎಂಬ ಪದದ ಚೌಕಟ್ಟಿನಲ್ಲಿ ಸೇರಿದೆ. ಆದರೆ ಪ್ರಸ್ತುತ ವಿವೇಚನೆಯ ಕಾಲಕ್ಕೆ ಸಂಬಂಧಿಸಿದಂತೆ ಈ ಧರ್ಮದ ಒಂದು ಅಂಗವಾಗಿದ್ದ ಜನಪದಧರ್ಮವನ್ನು ಹಿಂದೆ ಪ್ರತ್ಯೇಕವಾಗಿ ವಿವರಿಸಿರುವುದರಿಂದ ಉತ್ತರ ಭಾರತದಲ್ಲಿ ಪ್ರವರ್ಧಮಾನಗೊಂಡ ವೈದಿಕ ಮತ್ತು ಪೌರಾಣಿಕ ಹಿಂದುಧರ್ಮಗಳ ಇತಿಹಾಸವನ್ನಷ್ಟೇ ಈ ಭಾಗದಲ್ಲಿ ಪರಿಶೀಲಿಸಲಾಗಿದೆ.

ಹಿಂದುಧರ್ಮ ಕರ್ಣಾಟಕಕ್ಕೆ ಬಂದದ್ದು ಉತ್ತರ ಭಾರತದೊಡನೆ ಈ ದೇಶದ ಸಂಪರ್ಕ ಪ್ರಾರಂಭವಾದಾಗಿನಿಂದ ; ಎಂದರೆ ಕ್ರಿ.ಪೂ. ಸು. ೬-೫ನೆಯ ಶತಮಾನಗಳಲ್ಲಿ. ಇಲ್ಲಿಂದ ಮುಂದೆ ಸಹ ಸಂಪರ್ಕಗಳು ಅವಿಚ್ಛಿನ್ನವಾಗಿ ನಡೆಯುತ್ತ, ಉತ್ತರ ಭಾರತದಲ್ಲಿ ಆವಿರ್ಭಾವವಾದ ಹೊಸ ಹೊಸ ಅಂಶಗಳೆಲ್ಲ ಇಲ್ಲೂ ಹರಡುತ್ತ ಬಂದುವು. ಈ ಸಂಪರ್ಕವು ಪ್ರಾರಂಭವಾದ ಕಾಲದ ಹೊತ್ತಿಗೆ ವೈದಿಕ ಹಿಂದುಧರ್ಮದ ರೂಪರೇಷೆಗಳು ಸಾಕಷ್ಟು ಮಟ್ಟಿಗೆ ಖಚಿತವಾಗಿದ್ದುವು. ಸಂಹಿತೆ, ಬ್ರಾಹ್ಮಣ, ಉಪನಿಷತ್, ವೇದಾಂಗ ಇತ್ಯಾದಿ ಸಾಹಿತ್ಯಗಳು ಬೆಳೆದಿದ್ದವು. ಅನೂಚಾನ ಆಚರಣೆಗಳನ್ನು ಕ್ರೋಡೀಕರಿಸುವ ಧರ್ಮಶಾಸ್ತ್ರಗಳು ಹುಟ್ಟಿಕೊಳ್ಳುತ್ತಿದ್ದುವು. ಶಿವ, ವಿಷ್ಣು, ಶಕ್ತಿ ಮೊದಲಾದ ದೇವತೆಗಳ ಕಲ್ಪನೆಯೂ ಭಕ್ತಿಮಾರ್ಗವೂ ರಾಮಾಯಣ ಭಾರತಗಳೂ ಹಲವು ಪುರಾಣಗಳೂ ರೂಪುಗೊಳ್ಳುತ್ತಿದ್ದ ಕಾಲ. ಸಹಜವಾಗಿ ಇವೆಲ್ಲದರ ಅಂಶಗಳು ಕರ್ಣಾಟಕದಲ್ಲಿ ಬಹು-ಹಿಂದಿನಿಂದಲೇ ಹರಡಲಾರಂಭಿಸಿರಬೇಕು.

ಹಿಂದುಧರ್ಮ ಇಲ್ಲಿ ಮೊದಲು ಹರಡಿದ ಬಗ್ಗೆ ಹೆಚ್ಚಿನ ಐತಿಹಾಸಿಕ ಆಧಾರಗಳು ದೊರೆಯುವುದಿಲ್ಲ. ಆದರೆ ಕರ್ಣಾಟಕದಲ್ಲಿ ಪ್ರಚಲಿತವಾಗಿರುವ ಐತಿಹ್ಯಗಳು ಈ ದಿಶೆಯಲ್ಲಿ ಬೆಟ್ಟುಮಾಡಿ ತೋರಿಸುತ್ತವೆ. ಶ್ರೀರಾಮ, ಲಕ್ಷ್ಮಣ, ಸೀತೆ, ಪಾಂಡವರು ಈ ರೀತಿಯ ಪೌರಾಣಿಕ ವ್ಯಕ್ತಿಗಳು ನೆಲಸಿದ್ದ ತಾಣಗಳೆಂದು ಹಲವು ಸ್ಥಳಗಳ ಬಗ್ಗೆ ಐತಿಹ್ಯಗಳಿವೆ. ಮುನಿಜನರ ಆಶ್ರಮಗಳು ಅಲ್ಲಲ್ಲಿದ್ದುವೆಂಬ ಕಥೆಗಳೂ ಇವೆ. ಈ ರೀತಿಯ ಐತಿಹ್ಯಗಳಿರುವ ಹೆಚ್ಚಿನ ಊರುಗಳಲ್ಲಿ ಪ್ರಾಚೀನ ಕಾಲದ ನೆಲೆಗಳೂ ಕಂಡುಬಂದಿವೆ. ಬಹು ಹಿಂದೆ ಔತ್ತರೇಯ ಜನ ಬಂದು ನೆಲಸಿದ್ದ ಅಥವಾ ಔತ್ತರೇಯ ಸಂಸ್ಕೃತಿಗಳು ಪಸರಿಸಿದ್ದುದರ ಬಗ್ಗೆ ಅನಂತರದ ಸಮಾಜಗಳಲ್ಲಿ ಉಳಿದುಕೊಂಡುಬಂದಿರುವ ನೆನಪುಗಳೇ ಈ ಐತಿಹ್ಯಗಳಿಗೆ ಕಾರಣವಾಗಿರಬಹುದೇನೋ ಎನ್ನಿಸುತ್ತದೆ. ಆದರೆ ಐತಿಹ್ಯಗಳನ್ನು ಐತಿಹಾಸಿಕ ಆಧಾರಗಳೆಂದು ಪರಿಗಣಿಸುವುದು ಕಷ್ಟ. ಅವನ್ನು ಗಣನೆಗೇ ತೆಗೆದುಕೊಳ್ಳದಿರುವುದೂ ತಪ್ಪಾದೀತು. ಮೌರ್ಯ ಸಾತವಾಹನರ ಕಾಲಕ್ಕೆ ಸಂಬಂಧಿಸಿದಂತೆ ಈ ನಾಡಿನ ಶಾಸನಗಳಲ್ಲಿ ಹಿಂದುಧರ್ಮದ ವಿಷಯಗಳನ್ನು ತಿಳಿಸುವ ಹೆಚ್ಚು ಶಾಸನಗಳು ದೊರೆತಿಲ್ಲ.

ವೈದಿಕ ಧರ್ಮ : ಯಜ್ಞಯಾಗಾದಿಗಳಲ್ಲಿ ಕರ್ಣಾಟಕದ ಜನರೂ ನಿರಂತರಾಗಿದ್ದರೆಂಬುದಕ್ಕೆ ಕೆಲವು ಸೂಚನೆಗಳಿವೆ. ಕ್ರಿ.ಪೂ. ೧ನೆಯ ಶತಮಾನದ್ದೆನ್ನಬಹುದಾದ ಒಂದು ಶಿಲಾಶಾಸನ ಬೆಳಗಾಂವಿ ಬಳಿಯ ವಡಗಾಂವ ಮಾಧವಪುರದಲ್ಲಿ ದೊರಕಿದ್ದು, ಅದರಲ್ಲಿ ಕಶ್ಯಪಗೋತ್ರದ ಬ್ರಾಹ್ಮಣನೊಬ್ಬ ಅನೇಕ ಕ್ರತುಗಳನ್ನೂ ಮೂರು ಸಲ ವಾಜಪೇಯ

ಯಾಗವನ್ನೂ ಮಾಡಿದನೆಂದು ಹೇಳಿದೆ. ಶಾಸನವಿರುವುದೇ ಷಟ್ಕೋನಾಕಾರದ ಯೂಪ ಸ್ತಂಭದಮೇಲೆ.[131] ಇದೇ ರೀತಿಯ ಇನ್ನೊಂದು ಯೂಪಸ್ತಂಭ ಚಿಕ್ಕಮಗಳೂರಿನ ಬಳಿಯ ಹಿರೇಮಗಳೂರಿನಲ್ಲಿದೆ. ಅದರ ಮೇಲೆ ಸಹ ಕ್ರಿ.ಶ. ೨ನೆಯ ಶತಮಾನದ ಕೆಲವು ಅಕ್ಷರಗಳಿವೆ.[132] ಧಾರವಾಡ ಜಿಲ್ಲೆಯ ಶಿರಹಟ್ಟಿಯಿಂದ ೧೫ ಮೈಲಿ ದೂರದಲ್ಲಿ ತುಂಗಭದ್ರಾ ನದಿಯ ದಂಡೆಯ ಮೇಲಿರುವ ಇಟಗಿ ಎಂಬ ಗ್ರಾಮದಲ್ಲಿ ಸಾತವಾಹನ ಯುಗಕ್ಕೆ ಸೇರಿದ ಒಂದು ನೆಲೆಯಲ್ಲಿ ವಾಜಪೇಯ ಯಾಗದಲ್ಲಿ ಉಪಯೋಗಿಸಲಾಗುವ ಮಣ್ಣಿನ ಉಖಾಪಾತ್ರ ದೊರಕಿದೆ.[133]

ಬನವಾಸಿಯ ಆದ್ಯಿಕದಂಬ ವಂಶದ ಅರಸರು ಸ್ವತಃ ವೈದಿಕಧರ್ಮಾವಲಂಬಿಗಳಾಗಿದ್ದರು. ತಾಳಗುಂದ ಶಾಸನದಲ್ಲಿ ಬರುವ ಮಾತುಗಳು ವೈದಿಕಧರ್ಮ ಅಂದಿದ್ದ ಸ್ಥಿತಿಯ ಬಗ್ಗೆ ಸ್ಪಷ್ಟ ಕಲ್ಪನೆಯನ್ನು ನೀಡುತ್ತವೆ.[134] ಕದಂಬ ರವಿವರ್ಮ ತನ್ನನ್ನು 'ಅಶ್ವಮೇಧಾವಭೃತಸ್ನಾನಪವಿತ್ರೀಕೃತಾನ್ವಯಾನಾಮ್ ತ್ರಿವರ್ಗ್ಗಸಮ್ಪನ್ನಾ ರವಿ ಮಹಾರಾಜಾ' ಎಂದು ಹೇಳಿಕೊಂಡಿದ್ದಾನೆ.[135] ಆ ವಂಶದ ಕೃಷ್ಣವರ್ಮನೂ ಅಶ್ವಮೇಧ ಯಜ್ಞವನ್ನು ಮಾಡಿದವನಾಗಿದ್ದ. ಅವನ ಮತ್ತು ಅವನ ಮಗ ವಿಷ್ಣುವರ್ಮನ ಶಾಸನಗಳಲ್ಲಿ ಈ ವಿಷಯ ಉಕ್ತವಾಗಿದೆ.[136] ಕೆಲವು ಗಂಗ ಶಾಸನಗಳಲ್ಲಿ ಸಹ ಇವನನ್ನು 'ಅವಿಚ್ಛಿನ್ನಾಶ್ವಮೇಧಾವಭೃಥೋಭಿಷಿಕ್ತ' ಎಂದು ಕರೆದಿರುವುದನ್ನು ನೋಡಿದರೆ ಆ ಯಜ್ಞವನ್ನು ಮಾಡುವುದು ಹೆಮ್ಮೆಯ ವಿಷಯವಾಗಿತ್ತೆಂದು ತಿಳಿಯುತ್ತದೆ.[137] ರಾಜರು ಈ ರೀತಿಯಲ್ಲಿ ಯಜ್ಞಗಳನ್ನು ಮಾಡುವ ಪ್ರವೃತ್ತಿ ಸುಮಾರು ೬ನೆಯ ಶತಮಾನದ ವರೆಗೂ ಮುಂದುವರಿಯಿತು. ಕರ್ಣಾಟಕದ ಇತಿಹಾಸದಲ್ಲಿ ಅಶ್ವಮೇಧಯಾಗ ಮಾಡಿದ ಕೊನೆಯ ರಾಜನೆಂದರೆ ಚಾಲುಕ್ಯ ವಂಶದ ಒಂದನೆಯ ಪುಲಕೇಶಿ.[138] ಮಂಗಲೇಶ, ಕೀರ್ತಿವರ್ಮರೂ ಇತರ ಕೆಲವು ಯಜ್ಞಗಳನ್ನು ಮಾಡಿದರೆನ್ನಲಾಗಿದೆ. ಅನಂತರದ ಕಾಲದಲ್ಲಿ ಕ್ಷತ್ರಿಯರು ಮಾಡಬೇಕಾಗಿದ್ದ ವೈದಿಕ ಯಜ್ಞಗಳಿಗೆ ಕರ್ಣಾಟಕದ ಅರಸರು ಗಮನ ಹರಿಸಲಿಲ್ಲವೆಂದು ತೋರುತ್ತದೆ. ಪ್ರಾಯಶಃ ಆ ಹೊತ್ತಿಗೆ ಪೌರಾಣಿಕ ಹಿಂದುಧರ್ಮದತ್ತ ಅವರ ಒಲವು ಹೆಚ್ಚಿದುದೇ ಇದಕ್ಕೆ ಕಾರಣವಾಗಿರಬೇಕು.

ವೈದಿಕ ಆಚಾರದಲ್ಲಿ ಕ್ಷತ್ರಿಯರಂತೆ ಬ್ರಾಹ್ಮಣರೂ ಯಜ್ಞಯಾಗಾದಿಗಳನ್ನು ಮಾಡುತ್ತಿದ್ದರು. ಸ್ಮೃತಿಗಳ ಪ್ರಕಾರ ಯಜನಯಾಜನಾದಿ ಷಟ್ಕರ್ಮಗಳು ಅವರಿಗೆ ನಿಯಮಿತವಾಗಿದ್ದುವು. ಇವನ್ನು ಅನುಸರಿಸಿ ಧರ್ಮನಿಷ್ಠರಾಗಿ ವೈದಿಕ ಧರ್ಮವನ್ನು ನಡಸಿಕೊಂಡು ಬರುತ್ತಿದ್ದ ಬ್ರಾಹ್ಮಣರ ಪ್ರಸ್ತಾಪ ಈ ಕಾಲದ ಅನೇಕ ಶಾಸನಗಳಲ್ಲಿ ದೊರಕುತ್ತವೆ. ವಡಗಾಂವ ಮಾಧವಪುರದ ಶಾಸನ ಮತ್ತು ತಾಳಗುಂದ ಶಾಸನಗಳ ಉಲ್ಲೇಖಗಳನ್ನು ಹಿಂದೆಯೇ ಪ್ರಸ್ತಾಪಿಸಿದೆ. ಕದಂಬ ರವಿವರ್ಮನ ಒಂದು ಶಾಸನದಲ್ಲಿ ದಾನವನ್ನು ಸ್ವೀಕರಿಸಿದ ಬ್ರಾಹ್ಮಣನನ್ನು ವೇದಪಾರಗನೆಂದು ಹೇಳಿದೆ.[139] ಕೃಷ್ಣವರ್ಮನ ಬೆನ್ನೂರು ಮಠ ತಾಮ್ರಪಟ ಇನ್ನೊಬ್ಬ ಬ್ರಾಹ್ಮಣನನ್ನು 'ಸತ್ಯತಪಸ್ಸ್ವಾಧ್ಯಾಯವಿಶಿಷ್ಟ', 'ಛನ್ದೋಗಪಾರಗ', 'ಯಜ್ಞವಿತ್', ಬ್ರಹ್ಮಯಜ್ಞಪರಾಯಣ' ಎಂದು ವರ್ಣಿಸು

ತ್ತದೆ.[140] ಕೃಷ್ಣವರ್ಮನ ಕಾಲದ ಹಳೇಬೀಡಿನ ತಾಮ್ರಪಟದಲ್ಲಿ ವಿಷ್ಣುಶರ್ಮನೆಂಬ ಬ್ರಾಹ್ಮಣನಿಗೆ ದಾನ ನೀಡಿದ ಸಂದರ್ಭದಲ್ಲಿ ಅವನ ಬಗ್ಗೆ 'ವೇದಪಾರಗಾಯ ಷಟ್ಕರ್ಮ ನಿರತಾಯ ಆಹಿತಾಗ್ನಯೇ' ಎಂಬ ವಿವರಗಳಿವೆ. ಬಾದಾಮಿಯ ಚಾಲುಕ್ಯ, ಗಂಗ, ರಾಷ್ಟ್ರಕೂಟ ಅರಸರ ಕಾಲದಲ್ಲೂ ವೈದಿಕಧರ್ಮ ಬ್ರಾಹ್ಮಣವರ್ಗಗಳಲ್ಲಿ ಮುಂದುವರಿದು ಕೊಂಡುಬಂದಿತ್ತು. ಬಲಿಚರುವೈಶ್ವದೇವಾಗ್ನಿಹೋತ್ರಕ್ರಿಯಾ ಪಂಚಮಹಾಯಜ್ಞೋತ್ಸರ್ಪಣಾರ್ಥವಾಗಿ ದಾನಕೊಟ್ಟಿರುವ ಪ್ರಸ್ತಾಪ ಒಂದು ಶಾಸನದಲ್ಲಿ ಬಂದಿದ್ದರೆ,[141] ಯಮನಿಯಮ ತಪಸ್ಸ್ವಾಧ್ಯಾಯ ಯಜನಯಾಜನ ಶಾಪಾನುಗ್ರಹ ಸಾಮರ್ಥ್ಯವುಳ್ಳವನು,[142] ಋಗ್ವೇದಪಾರಗ,[143] ಚತುರ್ವೇದ ಪಂಡಿತ,[144] ಮನ್ತ್ರಸೂತ್ರಾರ್ಥ ಕಲ್ಪತತ್ವವಿತ್,[145] ಅಖಿಲಮುಖಪ್ರಚಾರಚರುತರಮತಿ, ರಸಾಸ್ವಾದಿತಸೋಮಕಷಾಯಿತಮುಖ[146] ಇತ್ಯಾದಿ ವಿಶೇಷಣಗಳುಳ್ಳ ಬ್ರಾಹ್ಮಣರ ಪ್ರಸ್ತಾಪ ಹಲವು ಶಾಸನಗಳಲ್ಲಿ ಕಂಡುಬರುವುದು ಇದಕ್ಕೆ ಸಾಕ್ಷ್ಯವಾಗಿದೆ. ಈ ಕಾಲದ ಹೆಚ್ಚಿನ ತಾಮ್ರಪಟಗಳೆಲ್ಲ ವೇದಪಾರಗರಾಗಿ ಶ್ರೌತ ಕರ್ಮನಿರತರಾಗಿದ್ದ ಬ್ರಾಹ್ಮಣರಿಗೆ ರಾಜರು ಕೊಟ್ಟ ದತ್ತಿಗಳ ದಾಖಲೆಗಳೇ ಆಗಿವೆ.

ಪೌರಾಣಿಕ ಹಿಂದೂಧರ್ಮ : ಉತ್ತರ ಭಾರತದಲ್ಲಿ ಕ್ರಿ.ಪೂ.ದ ಶತಮಾನಗಳ ಸುಮಾರಿನಲ್ಲಿಯೇ ವೈದಿಕಧರ್ಮ ಕ್ರಮೇಣ ಹಿಂದೆ ಬಿದ್ದು ಅದರ ಸ್ಥಾನದಲ್ಲಿ ಶಿವ, ವಿಷ್ಣು ಇತ್ಯಾದಿ ದೇವತೆಗಳ ಕಲ್ಪನೆ, ಭಕ್ತಿಮಾರ್ಗ, ಮೂರ್ತಿಪೂಜೆ, ದಾನ ಉಪವಾಸಾದಿ ವ್ರತಾಚರಣೆಗಳು—ಇವು ಪ್ರಧಾನವಾಗಿ ಉಳ್ಳ ಹಿಂದುಧರ್ಮ ವ್ಯಾಪಿಸಲಾರಂಭಿಸಿತು.[147] ಈ ಧರ್ಮದ ವಿಶಿಷ್ಟ ನಂಬಿಕೆ ಆಚರಣೆಗಳು ಸುಮಾರು ಇದೇ ಕಾಲದಿಂದಲೇ ಹುಟ್ಟಿಕೊಳ್ಳಲಾರಂಭಿಸಿದ್ದ ಪುರಾಣಗಳಲ್ಲಿ ಕ್ರೋಡೀಕೃತವಾಗಿರುವುದರಿಂದ ಈ ಹಿಂದುಧರ್ಮದ ಪ್ರಕಾರವನ್ನು 'ಪೌರಾಣಿಕ-ಹಿಂದುಧರ್ಮ' ಎಂದು ಕರೆಯುವುದು ರೂಢಿ. ಉತ್ತರ ಭಾರತದಲ್ಲಿ ಇದು ಪ್ರಾರಂಭವಾಗಿ ಒಂದು ವ್ಯವಸ್ಥಿತವಾದ ಘಟ್ಟವನ್ನು ತಲುಪುವ ಸ್ಥಿತಿಯಲ್ಲಿದ್ದಾಗಲೇ ಇದರ ಪ್ರಭಾವ ದಕ್ಷಿಣಭಾರತದ ಮೇಲೆ ಬೀಳಲಾರಂಭಿಸಿತು. ಅಂದಿನಿಂದ ಮುಂದೆ ಶೈವ, ವೈಷ್ಣವ, ಶಾಕ್ತ ಇತ್ಯಾದಿ ಪಂಥಗಳಾಗಿ ಬೆಳೆಯುತ್ತಿದ್ದ ಎಲ್ಲ ಘಟ್ಟಗಳಲ್ಲೂ ದಕ್ಷಿಣೋತ್ತರ ಸಾಂಸ್ಕೃತಿಕ ಸಂಬಂಧ ಅವಿಚ್ಛಿನ್ನವಾಗಿ ನಡೆದು ಬಂದಿತ್ತು ; ಅದರ ಪರಿಣಾಮ ಕರ್ನಾಟಕದ ಧಾರ್ಮಿಕ ರಂಗದಲ್ಲೂ ಆಯಿತು.

ಮೌರ್ಯರ ಕಾಲದಲ್ಲಿ ಈ ಧರ್ಮ ದಕ್ಷಿಣ ಭಾರತದಲ್ಲಿ ಇದ್ದ ಬಗ್ಗೆ ಸ್ಪಷ್ಟ ಆಧಾರಗಳು ದೊರೆಯುವುದಿಲ್ಲ. ಸಾತವಾಹನರ ಕಾಲದಲ್ಲೂ ಕರ್ನಾಟಕದಲ್ಲಿ ಈ ಬಗ್ಗೆ ಸರಿಯಾದ ಮಾಹಿತಿಗಳು ಇಲ್ಲ. ಆದರೆ ಪಕ್ಕದ ಮಹಾರಾಷ್ಟ್ರದಲ್ಲಿರುವ ನಾನಾಘಾಟ್ ನಲ್ಲಿರುವ ಕ್ರಿ.ಪೂ. ೨ನೆಯ ಶತಮಾನದ ಒಂದು ಶಾಸನದಲ್ಲಿ[148] ಇಂದ್ರ, ಸಂಕರ್ಷಣ, ವಾಸುದೇವ, ಸೂರ್ಯ, ಯಮ, ವರುಣ, ಕುಬೇರ, ವಾಸವ ಈ ದೇವತೆಗಳನ್ನು ಹೆಸರಿಸಲಾಗಿರುವುದರಿಂದ, ಆ ಕಾಲದ ಹೊತ್ತಿಗೆ ಇಂದ್ರ, ಸೂರ್ಯ ವರುಣರಂಥ ವೈದಿಕ ದೇವತೆಗಳ ಜೊತೆಗೇ ವಾಸುದೇವ ಸಂಕರ್ಷಣರಂಥ ಪೌರಾಣಿಕ ದೇವತೆಗಳ ಕಲ್ಪನೆ

ಅರ್ಚನೆಗಳೂ ರೂಢಿಗೆ ಬಂದಿದ್ದುವು ಎಂದು ಹೇಳಬಹುದಾಗಿದೆ. ಅಲ್ಲದೆ ಇತರ ಅನೇಕ ಶಾಸನಗಳಲ್ಲಿ ಬರುವ ಕೃಷ್ಣ, ಶಿವ, ಸ್ಕಂದ, ಗೋಪಾಲ, ವಿಷ್ಣುಸ್ವಾಮಿ, ವಿಷ್ಣುಪಾಲಿತ ಈ ರೀತಿಯ ವ್ಯಕ್ತಿನಾಮಗಳು ಪೌರಾಣಿಕ ಹಿಂದುಧರ್ಮ ಹರಡುತ್ತಿದ್ದ ಬಗ್ಗೆ ಸ್ಪಷ್ಟ ಸೂಚನೆಗಳನ್ನು ನೀಡುತ್ತವೆ.[149] ಹಾಲನ 'ಗಾಥಾಸಪ್ತಶತಿ' ಪಶುಪತಿ ಮತ್ತು ಗೌರಿಯ ರನ್ನು ಕುರಿತ ಪ್ರಾರ್ಥನೆಯಿಂದ ಆರಂಭವಾಗಿದೆ. ಅದರಲ್ಲಿ ಇಂದ್ರ, ಕೃಷ್ಣರ ಪ್ರಸ್ತಾಪವೂ ಹರಿ ಅಥವಾ ತ್ರಿವಿಕ್ರಮ ಇತರ ದೇವತೆಗಳಿಗಿಂತ ಉಚ್ಚನೆಂಬ ಹೇಳಿಕೆಯೂ ಇದೆ.[150] ಗೌತಮೀಬಲಶ್ರೀಯ ಕ್ರಿ.ಶ. ೧ನೆಯ ಶತಮಾನದ ನಾಸಿಕ ಶಾಸನದಲ್ಲಿ,[151] ಗೌತಮೀ ಪುತ್ರ ಶಾತಕರ್ಣಿಯು ರಾಮ, ಕೇಶವ, ಅರ್ಜುನ, ಭೀಮಸೇನರಿಗೆ ಶೌರ್ಯದಲ್ಲಿ ಸಮಾನ, ನಾಭಾಗ, ನಹುಷ, ಜನಮೇಜಯ, ಸಗರ, ಯಯಾತಿ, ಅಂಬರೀಷರಿಗಿಂತ ಕಡಿಮೆ ಯಲ್ಲದ ಕಾಂತಿಯುಳ್ಳವನು ಎಂದು ಹೇಳಿರುವುದಲ್ಲದೆ ಅದೇ ಶಾಸನದಲ್ಲಿ ಗರುಡ, ಸಿದ್ಧ, ಯಕ್ಷ, ರಾಕ್ಷಸರ ಪ್ರಸ್ತಾಪ ಸಹ ಬಂದಿರುವುದರಿಂದ ಪೌರಾಣಿಕ ಕಲ್ಪನೆಗಳು ದಕ್ಷಿಣಾ ಪಥದಲ್ಲಿ ಈ ಕಾಲಕ್ಕೆ ವ್ಯಾಪಕವಾಗಿ ಹರಡಿದ್ದುವೆಂದು ಹೇಳಬಹುದಾಗಿದೆ. ಸುಮಾರು ಇದೇ ಕಾಲದ ತಮಿಳು ನಾಡಿನ ಸಂಘಂ ಸಾಹಿತ್ಯದಲ್ಲೂ ಭಾರತ ಯುದ್ಧ, ಅಕ್ರೂರನ ಕಥೆ, ಖಾಂಡವ ದಹನ, ಭೀಮನ ಪಾಕಕಲಾ ನೈಪುಣ್ಯ, ರಾಮ-ರಾವಣ ಪ್ರಸಂಗ, ಕೃಷ್ಣಕಥೆ ಇತ್ಯಾದಿ ವಿಷಯಗಳು ಅಲ್ಲಲ್ಲಿ ಬಂದಿರುವುದರಿಂದ ಪೌರಾಣಿಕ ಹಿಂದುಧರ್ಮ ಆ ಭಾಗದಲ್ಲಿ ಹರಡಿತ್ತು ಎಂದು ತಿಳಿಯಬಹುದು.[152] ಹೀಗಿರುವಲ್ಲಿ ಮಹಾರಾಷ್ಟ್ರ ಮತ್ತು ತಮಿಳು ನಾಡುಗಳ ಮಧ್ಯವರ್ತಿಯಾಗಿರುವ ಕರ್ಣಾಟಕದಲ್ಲೂ ಈ ಪೌರಾಣಿಕ ಹಿಂದು ಧರ್ಮ ತತ್ಕಾಲದಲ್ಲಿ ನೆಲೆಗೊಂಡಿರಬೇಕು.

ಕದಂಬರ ಕಾಲದ ಶಾಸನಗಳಲ್ಲಿ ಹಿಂದುಧರ್ಮದ ವಿಷಯದಲ್ಲಿ ಹೆಚ್ಚಿನ ಮಾಹಿತಿ ಗಳು ದೊರಕುತ್ತವೆ. ಕದಂಬ ಅರಸರು ವೈದಿಕ ಧರ್ಮಾನುಯಾಯಿಗಳಾಗಿದ್ದರೂ ಪೌರಾಣಿಕ ದೇವತೆಗಳನ್ನು ಪೂಜಿಸುತ್ತಿದ್ದರು. ಕದಂಬ ರಾಜರ ವ್ಯಕ್ತಿನಾಮಗಳಲ್ಲಿ ಭಗೀರಥ, ರಘು, ಕಾಕುತ್ಸ್ಥ, ರವಿ, ಕೃಷ್ಣ, ಹರಿ, ಭಾನು ಇಂಥ ಹೆಸರುಗಳು ಕಂಡು ಬರುತ್ತವೆ ಇವು ಹೆಚ್ಚಿನಮಟ್ಟಿಗೆ ರಾಮಾಯಣದೊಳಗಿನ ಮತ್ತು ವೈಷ್ಣವೀಯವಾದ ಹೆಸರುಗಳೇ ಆಗಿವೆ. ಆದರೆ ಇತರ ಪಂಥೀಯ ದೇವತೆಗಳ ಬಗ್ಗೆಯೂ ಗೌರವ ಇತ್ತು. ಕದಂಬ ರಾಜವಂಶದ ಸ್ಥಾಪಕನ ಹೆಸರಾದ ಮಯೂರ ಎಂಬುದು ಸ್ಕಂದನನ್ನು ಸೂಚಿಸುತ್ತದೆ. ಆ ವಂಶದವರು 'ಸ್ವಾಮಿ ಮಹಾಸೇನ ಮಾತೃಗಣಾನುಧ್ಯಾತ'ರೆಂದು ಶಾಸನಗಳು ತಿಳಿಸುತ್ತವೆ.[153] ಶಾಂತಿವರ್ಮನ ತಾಳಗುಂದ ಶಾಸನ 'ಸಿದ್ಧಮ್ ನಮಶ್ಶಿ ವಾಯ' ಎಂದು ಆರಂಭವಾಗುವುದೂ ಕೊನೆಯ ಭಾಗದಲ್ಲಿ 'ನಮೋ ಭಗವತೇ....... ಮಹಾದೇವಾಯ' ಎಂದಿರುವುದೂ ಆ ಕಾಲದಲ್ಲಿ ಶೈವಧರ್ಮ ಪ್ರಾಚುರ್ಯದಲ್ಲಿದ್ದ ಬಗ್ಗೆ ಸೂಚನೆಯಾಗಿವೆ.[154] ಹಲ್ಮಿಡಿ ಶಾಸನ[155] ಮತ್ತು ತಾಳಗುಂದದ ಇನ್ನೊಂದು ಶಾಸನದಲ್ಲಿ[156] ಬಂದಿರುವ ಪಶುಪತಿ ಎಂಬ ಒಬ್ಬ ವ್ಯಕ್ತಿಯ ಹೆಸರೂ ಇದಕ್ಕೆ ಪೂರಕ ಮಾಹಿತಿಯಾಗಿದೆ. ಅವರ ಕಾಲದ ಶಾಸನಗಳಲ್ಲಿ ಕಂಡುಬರುವ ಪ್ರಾರ್ಥನಾ ಶ್ಲೋಕ

ಗಳು ಆ ಕಾಲದಲ್ಲಿ ಪ್ರಚಲಿತವಾಗಿದ್ದ ಶೈವ, ವೈಷ್ಣವಪರ ಪೌರಾಣಿಕ ದೇವತೆಗಳ ಬಗೆಗಿನ ಕಲ್ಪನೆಗಳ ಬಗ್ಗೆ ಸೂಚನೆ ನೀಡುತ್ತವೆ. ಒಂದೆರಡನ್ನು ಇಲ್ಲಿ ಉದಹರಿಸ ಬಹುದು :

ಜಯತಿ ಶ್ರೀಪರಿಷ್ವ ಙ್ಗಶ್ಯಾಙ್ಗ ವ್ಯಾನತಿರಚ್ಯುತಃ
ದಾನವಾಕ್ಷ್ಣೋರ್ಯುಗಾನ್ತಾಗ್ನಿಃ ಶಿಷ್ಟಾನಾಂತು ಸುದರ್ಶನಃ ॥[157]

ಜಯತ್ಯುದ್ರಿಕ್ತದೈತ್ಯೇಂದ್ರ ಬಲವೀರ್ಯ್ಯವಿಮರ್ದನಃ
ಜಗತ್ಪ್ರವೃತ್ತಿ ಸಂಹಾರ ಸೃಷ್ಟಿಮಾಯಾಧರೋ ಹರಿಃ ॥[158]

ಸುರಾಸುರಮುಕುಟ ಪ್ರಣಿಹಿತಮಣಿಕಿರಣಖಚಿತಚರಣಯುಗಃ।
ದಂಡ ಕಮಂಡಲು ಹಸ್ತಃ ಪದ್ಮಪ್ರವರಾಸನೋ ಬ್ರಹ್ಮಾ ॥[159]

ಪರ ನಾರಾಯಣ ಬ್ರಹ್ಮತ್ರಿತಯಾಯ ನಮುಸ್ಸದಾ
ಚಕ್ರಾಕ್ಷಸೂತ್ರೋದ್ಯ್ಯಭಾವಭಾಸಿತಪಾಣಿನೇ ॥ [160]

ಜಯತಿ ಸುರವಧೂನಾಂ ಮನ್ಮಥಃ ಕಾಮಿನೀನಾಂ....।[161]

ಕದಂಬರ ಕಾಲದಲ್ಲಿ ದೇವಾಲಯಗಳನ್ನು ನಿರ್ಮಿಸುವ ಪದ್ಧತಿ ಸಹ ಬೆಳೆದಿರಬೇಕು. ತಾಳಗುಂದದಲ್ಲಿ ಮಹಾದೇವ ದೇವಾಲಯವಿದ್ದಂತೆ ಪೂರ್ವೋಕ್ತ ಶಾಸನದ ಆಧಾರದಿಂದ ತಿಳಿಯುತ್ತದೆ. ಜೈನದೇವಾಲಯಗಳು ಈ ಕಾಲದಲ್ಲಿ ಹುಟ್ಟಿದ್ದರ ಬಗ್ಗೆ ಹಿಂದೆಯೇ ತಿಳಿಸಿದ್ದೇನೆ. ಬನವಾಸಿಯ ಉತ್ಖನನದಲ್ಲಿ ಈ ಕಾಲದ ಸ್ಕಂದನದೆನ್ನಬಹುದಾದ ಒಂದು ವಿಗ್ರಹ ದೊರಕಿದೆ. ಶಿವಮೊಗ್ಗ ಜಿಲ್ಲೆಯ ಜಂಬೆಹಳ್ಳಿ ಎಂಬಲ್ಲಿ ದೊರಕಿರುವ ಒಂದು ಮಹಿಷಮರ್ದಿನಿಯ ಶಿಲ್ಪ ಕದಂಬರ ಕಾಲದ್ದು.[162]

ಬಾದಾಮಿಯ ಚಾಲುಕ್ಯರ ಆಳ್ವಿಕೆಯ ಕಾಲಘಟ್ಟದಲ್ಲಿ ಪೌರಾಣಿಕ ಹಿಂದುಧರ್ಮ ಹೆಚ್ಚು ವ್ಯಾಪಕವಾದಂತೆ ತೋರುತ್ತದೆ. ಈ ಹಿಂದಿನ ಶತಮಾನಗಳು ಉತ್ತರ ಭಾರತ ದಲ್ಲಿ ಸಹ ಈ ಧರ್ಮ ವ್ಯವಸ್ಥಿತವಾಗಿ ರೂಪುಗೊಳ್ಳುತ್ತಿದ್ದ ಕಾಲ. ಅಲ್ಲಿಯೂ ಪೂರ್ಣ ವಾಗಿ ನಿಶ್ಚಿತರೂಪವನ್ನು ತಾಳಿದ್ದು ೪-೫ನೆಯ ಶತಮಾನದಲ್ಲಿ ಎಂದೇ ಹೇಳಬಹುದು. ಹಾಗೆ ವ್ಯವಸ್ಥಿತವಾಗಿದ್ದ ಪೌರಾಣಿಕ ಧರ್ಮ ಸಹಜವಾಗಿ ಚಾಲುಕ್ಯರ ಕಾಲದಲ್ಲಷ್ಟೇ ಕರ್ಣಾಟಕದ ಭಾಗದಲ್ಲಿ ಪ್ರಚಾರಗೊಂಡಿರಬೇಕು. ಈ ಕಾಲದ ಶಾಸನಗಳಲ್ಲಿ ಹಲವು ರಾಜರನ್ನು 'ಪರಮ ಮಹೇಶ್ವರ', 'ಪರಮ ವೈಷ್ಣವ' ಇತ್ಯಾದಿಗಳಾಗಿ ಕರೆಯಲಾಗಿದೆ.[163] ಪ್ರಾರ್ಥನಾಪದ್ಯ ಗಳು ಹೆಚ್ಚುಮಟ್ಟಿಗೆ ವೈಷ್ಣವ ಕಾರ್ತಿಕೇಯ, ಸಪ್ತಮಾತೃಗಳು, ನಾರಾಯಣ ಈ ದೇವತೆ ಗಳಿಂದ ವರಪಡೆದರೆಂದೂ ಶಾಸನಗಳಲ್ಲಿವೆ. ಐಹೊಳೆ, ಬಾದಾಮಿ, ಪಟ್ಟದಕಲ್ಲು ಇತ್ಯಾದಿ ಸ್ಥಳಗಳಲ್ಲಿ ಕಟ್ಟಲಾದ ದೇವಾಲಯಗಳಲ್ಲಿ ಶಿವ ಮತ್ತು ವಿಷ್ಣು ಗೃಹಗಳು ವಿಶೇಷವಾಗಿ ಕಂಡುಬರುತ್ತವೆ.[164] ಐಹೊಳೆಯ ಒಂದು ಗುಡಿ ಕಾರ್ತಿಕೇಯನಿಗಿದ್ದಂತೆ ತೋರುತ್ತದೆ. ಈ ಸ್ಥಳಗಳಲ್ಲಿರುವ ಶಿಲ್ಪಸಂಪತ್ತು ಚಾಲುಕ್ಯ ಕಾಲದಲ್ಲಿ ಶೈವ ವೈಷ್ಣವ ಪುರಾಣಗಳಲ್ಲಿ ರುವ ಸುಮಾರು ಎಲ್ಲ ಕಲ್ಪನೆಗಳನ್ನೂ ಮೂರ್ತೀಕರಿಸಿದೆ ಎನ್ನಬಹುದು. ಶಿವ ನಟರಾಜ ನಾಗಿ, ಅರ್ಧನಾರೀಶ್ವರನಾಗಿ, ಗಂಗಾಧರನಾಗಿ, ಲಿಂಗಸ್ವರೂಪಿಯಾಗಿ, ಲಿಂಗೋದ್ಭವ

ನಾಗಿ, ತ್ರಿಪುರ ಸಂಹಾರಿಯಾಗಿ, ಚಂದ್ರಶೇಖರನಾಗಿ, ನಂದಿವಾಹನನಾಗಿ, ಲಕುಲೀಶನಾಗಿ ನಾನಾ ರೀತಿಯಲ್ಲಿ ಇದ್ದರೆ, ವಿಷ್ಣು ಪರವಾಸುದೇವನಾಗಿ, ಗರುಡವಾಹನನಾಗಿ, ಅನಂತಶಾಯಿಯಾಗಿ, ವರಾಹ, ತ್ರಿವಿಕ್ರಮ ನರಸಿಂಹರೂಪಿಯಾಗಿ ಕಾಣಿಸಿಕೊಂಡಿದ್ದಾನೆ. ಪಾರ್ವತಿ, ಮಹಿಷಮರ್ದಿನಿ, ಸಪ್ತಮಾತೃಕೆಯರು, ಗೌರಿ, ಲಕ್ಷ್ಮಿ, ಗಣಪತಿ, ಕಾರ್ತಿಕೇಯ, ಗ್ರಹಗಳು, ನಾಗ, ಯಕ್ಷ, ಸಿದ್ಧ ಗಂಧರ್ವರೂ ಭೃಂಗಿ, ಗರುಡ, ನಂದಿ ಮೊದಲಾದ ಅನೇಕ ಉಪದೇವತೆಗಳು ಸಾಕಷ್ಟು ಸಂಖ್ಯೆಯಲ್ಲಿವೆ. ಇವೆಲ್ಲದರಲ್ಲೂ ಕಂಡು ಬರುವ ಒಂದು ವಿಶೇಷಾಂಶವೆಂದರೆ ಶಿವ ಮತ್ತು ವಿಷ್ಣುವಿನ ಪ್ರಾಮುಖ್ಯ. ಒಂದೆರಡೆಡೆ ಹರಿಹರ ವಿಗ್ರಹಗಳೂ ಇವೆ. ವಿರಳವಾಗಿ ಬ್ರಹ್ಮ ಕಾಣಿಸಿಕೊಳ್ಳುತ್ತಾನೆ. ಆದರೆ ತ್ರಿಪುರುಷರ ಶಿಲ್ಪಗಳು ಸಾಕಷ್ಟು ಸಂಖ್ಯೆಯಲ್ಲಿವೆ. ಉಪದೇವತೆಗಳು ಇದ್ದರೂ ಅವು ಸಾಮಾನ್ಯವಾಗಿ ಪರಿಚರ ದೇವತೆಗಳಾಗಿಯೇ ಶಿಲ್ಪಿತವಾಗಿದ್ದು ಪ್ರಧಾನವಾಗಿ ಕಂಡುಬರುವುದು ವಿರಳ. ಗಣೇಶ ಮತ್ತು ಮಹಿಷಮರ್ದಿನಿ ಮಾತ್ರ ಇದಕ್ಕೆ ಅಪವಾದಗಳು. ವಿಷ್ಣು ಶಿವ ವಿಗ್ರಹಗಳಲ್ಲೂ ಎಲ್ಲ ಪೌರಾಣಿಕ ಕಲ್ಪನೆಗಳು ಕಾಣುವುದಿಲ್ಲ. ದಶಾವತಾರದ ಕಲ್ಪನೆಯಿದ್ದರೂ, ಅವುಗಳಲ್ಲಿ ಹೆಚ್ಚಾಗಿ ಕಂಡುಬರುವುದು ತ್ರಿವಿಕ್ರಮ, ವರಾಹ ಮತ್ತು ನರಸಿಂಹರದು ಮಾತ್ರ. ಶಿವನ ನಟರಾಜಲೀಲೆ ವಿಶೇಷ ಶಿಲ್ಪ ವಸ್ತುವಾಗಿತ್ತು.[165] ಲಿಂಗಗಳನ್ನು ಪ್ರತಿಷ್ಠಾಪಿಸಿರುವ ದೇವಾಲಯಗಳು ಬಹುಸಂಖ್ಯೆಯಲ್ಲಿವೆ. ವಿವಿಧ ರೀತಿಯ ಹಿಂದು ದೇವತೆಗಳ ಶಿಲ್ಪಗಳು ಕರ್ಣಾಟಕದಲ್ಲಿ ಮೊದಲು ಕಾಣಿಸಿಕೊಳ್ಳುವುದು ಚಾಲುಕ್ಯರ ಕಾಲದಲ್ಲಿಯೇ. ಹೆಚ್ಚಿನ ದೇವಾಲಯಗಳು ಬಾದಾಮಿ ಮತ್ತು ಪರಿಸರದ ಊರುಗಳಲ್ಲಷ್ಟೇ ಇರುವುದು, ಅಸಂಖ್ಯಾತ ದೇವಶಿಲ್ಪಗಳನ್ನು ಅವುಗಳಲ್ಲಿ ಅಳವಡಿಸಿರುವುದು—ಇವನ್ನು ನೋಡಿದರೆ ಪೌರಾಣಿಕ ಹಿಂದುಧರ್ಮದ ಪ್ರಸಾರಕ್ಕೆ ಚಾಲುಕ್ಯ ರಾಜರೇ ಮೊದಲು ಹೆಚ್ಚಿನ ಚಾಲನೆಯನ್ನು ನೀಡಿದರೆಂದು ತೋರುತ್ತದೆ. ಹಿಂದು ದೇವಮೂರ್ತಿಗಳ ಸಂಗ್ರಹಾಲಯಗಳಂತಿದ್ದ ಈ ಕಾಲದಲ್ಲಿ ಹುಟ್ಟಿದ ದೇವಾಲಯಗಳು ಪೌರಾಣಿಕ ಕಲ್ಪನೆಗಳ ಬಗ್ಗೆ ಜನಸಾಮಾನ್ಯರಲ್ಲಿಯೂ ಆಸಕ್ತಿಯನ್ನು ಕೆರಳಿಸಿ ಆ ಧರ್ಮದ ಅರಿವು ಹೆಚ್ಚು ಹೆಚ್ಚು ಜನರಲ್ಲಿ ಹರಡಲು ಕಾರಣವಾಗಿರಬಹುದು.

ಗಂಗರ ನಾಡಿನಲ್ಲಿ ಗಂಗ ಅರಸರುಗಳು ಬೇರೆ ಬೇರೆ ಹಿಂದು ದೇವತೆಗಳ ಆರಾಧಕರಾಗಿದ್ದರೆಂಬ ಅಂಶವನ್ನು ಹಿಂದೆಯೇ ತಿಳಿಸಿದೆ.[166] ಆದರೆ ಪೌರಾಣಿಕ ಹಿಂದುಧರ್ಮ ಎಷ್ಟರಮಟ್ಟಿಗೆ ಪ್ರಚಾರಗೊಂಡಿತ್ತೆಂಬ ಬಗ್ಗೆ ಹೆಚ್ಚಿನ ವಿವರಗಳು ದೊರಕುವುದಿಲ್ಲ. ಸೂರ್ಯನ ಆರಾಧನೆ ಈ ಕಾಲದಲ್ಲಿ ಪ್ರಚಲಿತವಾಗಿದ್ದ ಬಗ್ಗೆ ಕೆಲವು ಸೂರ್ಯ ವಿಗ್ರಹಗಳು ದೊರಕಿರುವುದು ಸಾಕ್ಷ್ಯವಾಗಿದೆ.[167] ಧರ್ಮದ ವಿಷಯದಲ್ಲಿ ರಾಷ್ಟ್ರಕೂಟರ ಕಾಲ ಬಾದಾಮಿ ಚಾಲುಕ್ಯರ ಕಾಲಸ್ಥಿತಿಯ ಮುಂದುವರಿಕೆ ಮಾತ್ರವೆಂದು ಹೇಳಬಹುದು. ಈ ಅರಸರ ಶಾಸನಗಳಲ್ಲಿ ಶಿವ ಹಾಗೂ ವಿಷ್ಣುವಿನ ಪ್ರಾರ್ಥನಾಪದ್ಯಗಳು ಕಂಡುಬರುತ್ತವೆ, ಅವರ ರಾಜ ಲಾಂಛನಗಳಲ್ಲೂ ಗರುಡ ಅಥವಾ ಶಿವನ ಮೂರ್ತಿಗಳಿದ್ದುವು. ಸಂಜಾನ್ ತಾಮ್ರಪಟದಲ್ಲಿ ಮಹಾಲಕ್ಷ್ಮಿಯ ಉಲ್ಲೇಖವಿದೆ. ಒಟ್ಟಿನಲ್ಲಿ ಹಿಂದು ಧಾರ್ಮಿಕ

ರಂಗದಲ್ಲಿ ಈ ಕಾಲದಲ್ಲಿ ಹೆಚ್ಚಿನ ಬದಲಾವಣೆಗಳೇನೂ ಕಂಡುಬರುವುದಿಲ್ಲ.

ಈ ಎಲ್ಲಾ ವಿವರಗಳನ್ನೂ ಗಮನಿಸಿದಲ್ಲಿ ಈ ಕಾಲದ ಹಿಂದು ಧರ್ಮವೆಂದರೆ ಸ್ಮಾರ್ತ ರೂಪವಾದ (ಸ್ಮೃತಿಗಳಿಂದ ಸಿದ್ಧವಾದ) ಪೌರಾಣಿಕ ಹಿಂದು ಧರ್ಮ. ಈ ಪೌರಾಣಿಕ ಹಿಂದು ಧರ್ಮದಲ್ಲಿಯೇ ವಿಶಿಷ್ಟ ಉಪಶಾಖೆಗಳು ಸಹ ಪ್ರಚಲಿತವಾಗಿದ್ದುವು. ಅವುಗಳಲ್ಲಿ ಭಾಗವತ ಮತ್ತು ಪಾಶುಪತ ಪಂಥಗಳನ್ನು ವಿಶೇಷವಾಗಿ ಹೆಸರಿಸಬೇಕು. ಇವುಗಳಲ್ಲಿ ಒಂದು ವೈಷ್ಣವ, ಇನ್ನೊಂದು ಶೈವ. ಈ ಹಿಂದೆ ಉಲ್ಲೇಖಿಸಿದ ಪೌರಾಣಿಕ ಧರ್ಮದ ಹಲವಾರು ಮಾಹಿತಿಗಳು ಈ ಪಂಥಗಳ ಸಂಬಂಧವಿರುವವುಗಳಾಗಿದ್ದರೂ ಆಗಿರಬಹುದು. ಆದರೆ ಹೆಚ್ಚಿನವುಗಳಲ್ಲಿ ಶಿವ-ವಿಷ್ಣು ಸಾಮರಸ್ಯ ಕಂಡುಬರುವುದರಿಂದ ಪಂಥೀಯ ಭೇದಗಳನ್ನು ಗುರುತಿಸುವುದು ಸುಲಭ ಸಾಧ್ಯವಲ್ಲ. ಆದರೂ ವಿಷ್ಣುಪಾರಮ್ಯವನ್ನು ಸಾರುವ, ಭಕ್ತಿಮಾರ್ಗವನ್ನು ಪ್ರತಿಪಾದಿಸುವ ವೈಷ್ಣವ ಭಾಗವತಧರ್ಮ ಏಕ ಕಾಲದಲ್ಲಿ ತಮಿಳುನಾಡು ಮತ್ತು ಉತ್ತರದೇಶದಲ್ಲಿ ಇದ್ದುದರಿಂದ ಕರ್ನಾಟಕದಲ್ಲೂ ಅದರ ಪ್ರಾಚುರ್ಯವಿರಬೇಕು. ಪೃಥ್ವೀಚಂದ್ರಭೋಗಶಕ್ತಿ ಎಂಬುವನು 'ಸೃಷ್ಟಿಸ್ಥಿತಿ ಸಂಹಾರ ಕಾರಣನಾದ ಸುರಾಸುರ ಗುರುವಾದ ಭಗವಂತನಾದ ವಾಸುದೇವನನ್ನು ಬಿಟ್ಟರೆ ವಿಶಿಷ್ಟ ದೇವತೆ ಯಾರೂ ಇಲ್ಲವೆಂದು ತಿಳಿದು ಜಯಪುರದಲ್ಲಿ ಭೋಗೇಶ್ವರ ಪ್ರತಿಷ್ಠಿತವಾದ ಪುರಾಣಪುರುಷ ಪರಮಾತ್ಮ ಭಗವನ್ನಾರಾಯಣನಿಗೆ' ಗಂಧ ಪುಷ್ಪ ದೀಪ ಧೂಪ ನೈವೇದ್ಯಾದಿ ಉಪಚಾರಕೋಸ್ಕರ ಕೆಲವು ದತ್ತಿಗಳನ್ನು ಬಿಟ್ಟನೆಂದು ಒಂದು ಶಾಸನ ತಿಳಿಸುವುದರಿಂದ[168] ಉತ್ಕಟ ಅಭಿಮಾನದ ವೀರ ವೈಷ್ಣವರಾಗಿ ಇದ್ದಂಥ ವ್ಯಕ್ತಿಗಳೂ ಇದ್ದಿರಬೇಕೆಂದು ಊಹಿಸಬಹುದು.

ಪಾಶುಪತ ಪಂಥದ ಬಗ್ಗೆ ಸ್ವಲ್ಪ ಹೆಚ್ಚಿನ ವಿವರಗಳು ದೊರಕುತ್ತವೆ. ಮೂಲತಃ ಗುಜರಾತ್ ದೇಶದಲ್ಲಿ ಕ್ರಿ.ಶ. ೧ನೆಯ ಶತಮಾನದ ಸುಮಾರಿನಲ್ಲಿ ಲಕುಲೀಶನೆಂಬುವನಿಂದ ರೂಪಿತವಾದ ಈ ಪಾಶುಪತ ಅಥವಾ ಲ(ನ)ಕುಲೀಶ ಪಾಶುಪತಪಂಥ, ತಾತ್ತ್ವಿಕವಾಗಿ ಸಾಂಖ್ಯ ಸಿದ್ಧಾಂತದ ತತ್ತ್ವವನ್ನು ಅಳವಡಿಸಿಕೊಂಡು ಯೋಗಮಾರ್ಗವನ್ನು ಪ್ರತಿಪಾದಿಸಿದ ಒಂದು ಶೈವ ಪಂಥ. ಈ ಪಂಥದ ಮೊದಲ ಪ್ರಸ್ತಾಪ ಕರ್ನಾಟಕದ ಶಾಸನಗಳಲ್ಲಿ ಸು. ೪೨೦ರ ಕದಂಬ ಕೃಷ್ಣವರ್ಮನ ಬೆನ್ನೂರು ಮತ ತಾಮ್ರಪಟದಲ್ಲಿ ಬಂದಿರುವಂತೆ ತೋರುತ್ತದೆ.[169] ಆದರೆ ಉಕ್ತವಾಗಿರುವ ರೀತಿಯಲ್ಲಿ ಖಚಿತತೆ ಇಲ್ಲ. ೭ಬಳರ ಚಾಲುಕ್ಯ ಶಾಸನವೊಂದರಲ್ಲಿ ಗಂಗೆಯ ಉತ್ತರ ತಡಿಯ ಮೃಗಥಣಿಕಾಹಾರ ವಿಷಯದಿಂದ ಬಂದ ಜ್ಞಾನಶಿವಾಚಾರ್ಯ ಎಂಬುವನ ಪ್ರಸ್ತಾಪವಿದೆ. ಇವನಿಗೆ 'ಶಿವ ಶಾಸನ'ನೆಂದೇ ಪ್ರಶಸ್ತಿಯಿತ್ತು. ಈತ ನಕುಲೀಶ ಪಂಥದವನಿರಬೇಕೆಂದು ಊಹಿಸಲಾಗಿದೆ.[170] ಸು. ೭ನೆಯ ಶತಮಾನದ ಚಿಕ್ಕಮಗಳೂರು ಜಿಲ್ಲೆಯ ಕಿಗ್ಗದ ಶಾಸನಗಳಲ್ಲಿ ಈ ಧರ್ಮಾಯರ ಉಲ್ಲೇಖವಿದೆ.[171] ಬಾದಾಮಿಯ ಬಳಿಯ ಮಹಾಕೂಟ ಪಾಶುಪತ ಪಂಥದ ಒಂದು ಕೇಂದ್ರವಾಗಿರಬೇಕೆನ್ನಿಸುತ್ತದೆ. ಆ ದೇವಾಲಯದ ಹೊರ ಭಿತ್ತಿಗಳ ಮೇಲೆ ಲಕುಲೀಶನ ವಿಗ್ರಹವಿದೆ. ಬಾದಾಮಿಯಲ್ಲಿ ಲಕುಲೀಶನ ಮೂರ್ತಿ

ಗಾಗಿಯೇ ಒಂದು ದೇವಾಲಯ ನಿರ್ಮಿತವಾಗಿದೆ. ಇದೂ ಬಾದಾಮಿ ಚಾಲುಕ್ಯರ ಕಾಲದ್ದು.[172] ಚಾಲುಕ್ಯ ಕಾಲದ ಶಾಸನಗಳಲ್ಲಿ ಒಂದನೆಯ ವಿಕ್ರಮಾದಿತ್ಯನನ್ನು 'ಮಾಹೇಶ್ವರ' ಎಂದು ಕರೆಯಲಾಗಿದೆ. ಇವನು ಸುದರ್ಶನಾಚಾರ್ಯರೆಂಬ ಗುರುಗಳಿಂದ 'ಶಿವಮಂಡಲದೀಕ್ಷೆ'ಯನ್ನು ತೆಗೆದುಕೊಂಡಿದ್ದ. ಆ ಸಂದರ್ಭದಲ್ಲಿ ಕೆಲವು ದಾನಗಳನ್ನು ಮಾಡಿದ. ದಾನಪಡೆದವರಲ್ಲಿ ರುದ್ರಶಿವಾಚಾರ್ಯ, ಗಾಯತ್ರೀ ಶಿವ, ಗೊಲ್ಲಭಟ್ಟ ಎಂಬ ಬ್ರಾಹ್ಮಣರೂ ಇದ್ದರೂ. ಈ ದೀಕ್ಷೆ ಮತ್ತು ಇಲ್ಲಿ ಉಕ್ತವಾಗಿರುವ ಸಂಗತಿಗಳು ಪಾಶುಪತ ಪಂಥಕ್ಕೆ ಸಂಬಂಧಿಸಿರಬೇಕೆಂದು ಊಹಿಸಲಾಗಿದೆ.[173] ರಾಷ್ಟ್ರಕೂಟರ ಕಾಲದಲ್ಲೂ ಈ ಪಂಥ ಅಲ್ಲಲ್ಲಿ ಪಸರಿಸಿತ್ತು. ಇವರ ಕಾಲದ ಎಲ್ಲೋರದ ಗುಹೆಗಳಲ್ಲಿ ಲಕುಲೀಶ ವಿಗ್ರಹಗಳಿವೆ. ಪ್ರಸ್ತುತ ವಿವೇಚನೆಯ ಮುಂದಿನ ಕಾಲದಲ್ಲಿ ಪಾಶುಪತ ಪಂಥ ಕರ್ಣಾಟಕದಲ್ಲಿ ಹೊಂದಿದ್ದ ಹೆಚ್ಚಿನ ಪ್ರಭಾವವನ್ನು ಗಮನಿಸಿದರೆ, ತಕ್ಕಷ್ಟು ಹಿಂದಿನಿಂದಲೇ ಇದು ಇಲ್ಲಿ ನೆಲೆಗೊಂಡು ಹಬ್ಬಿರಬೇಕು.[174]

ಈ ಕಾಲದಲ್ಲಿ ಕಾಪಾಲಿಕ ಮೊದಲಾದ ಇತರ ಶೈವಧರ್ಮಗಳೂ ಇದ್ದಿರಬಹುದು. ೫೦೦ರ ಒಂದು ಶಾಸನದಲ್ಲಿ 'ಕಾವಾಳಿಗಭಟಾರ' ಎಂಬ ಒಬ್ಬನು ದಾನ ಸ್ವೀಕರಿಸಿದ ವಿಷಯವಿದೆ. ಇವನು 'ಕಾಪಾಲಿಕ' ಗುರುವಾಗಿರಬಹುದು. ಆದರೆ ಹೆಚ್ಚಿದ ವಿವರ ಅಥವಾ ಉಲ್ಲೇಖಗಳು ಈ ಪಂಥದ ಬಗ್ಗೆ ದೊರಕುವುದಿಲ್ಲ. ಇದೇ ರೀತಿಯಲ್ಲಿ ಶಂಕರಾಚಾರ್ಯರು ಅದ್ವೈತ ತತ್ತ್ವ ಮತ್ತು ಷಣ್ಮತ ರೀತಿಗಳನ್ನು ಈ ಕಾಲದಲ್ಲೇ ಪ್ರತಿಪಾದಿಸಿದರು ಎಂಬ ಬಗ್ಗೆ ಸಾಕಷ್ಟು ಗ್ರಾಂಥಿಕ ಆಧಾರಗಳು ದೊರಕಿದರೂ ಅವುಗಳ ಅನುಯಾಯಿಗಳೂ ಇಲ್ಲಿದ್ದ ಬಗ್ಗೆ ಶಾಸನಾಧಾರಗಳು ಇದುವರೆಗೆ ಸಿಕ್ಕಿಲ್ಲ. ಇದೇ ಮಾತನ್ನು ಇತರ ವೇದಾಂತ ತತ್ತ್ವಾನುಯಾಯಿಗಳ ಬಗ್ಗೆಯೂ ಹೇಳಬಹುದು.

ಹಿಂದುಧರ್ಮದ ಸೈದ್ಧಾಂತಿಕ ಅಂಶಗಳು, ನಾನಾ ತತ್ತ್ವಪ್ರಭೇದಗಳು ಮತ್ತು ಪಂಥಗಳಿಗೆ ಸಂಬಂಧಿಸಿದಂತೆ ವ್ಯತ್ಯಾಸವಾಗುತ್ತ ಹೋಗಿವೆ. ಎಲ್ಲ ಹಿಂದುಪಂಥಗಳಲ್ಲೂ ಸಾಮಾನ್ಯವಾಗಿ ಕಂಡುಬರುವುದು ಪುನರ್ಜನ್ಮ ಮತ್ತು ಕರ್ಮಸಿದ್ಧಾಂತ. ಜೀವಿಗಳಿಗೆ ಪುನರ್ಜನ್ಮವೆಂಬುದು ಸಿದ್ಧ. ಈ ಪುನರ್ಜನ್ಮಗಳು ಆಯಾಜೀವಿಗಳು ಹಲವು ಜನ್ಮಗಳಲ್ಲಿ ಮಾಡಿದ ಕರ್ಮಗಳಿಂದ ರೂಪಿತವಾಗುತ್ತವೆ. ಅಲ್ಲದೆ ಜೀವಿಗಳ ವರ್ತಮಾನ ಜೀವಿತದ ಆಗುಹೋಗುಗಳೂ ಪೂರ್ವ ಕರ್ಮದ ಮೇಲೆಯೇ ನಿಂತಿರುತ್ತದೆ ಎಂಬುದು ಇದರ ತತ್ತ್ವ. ಈ ಪುನರ್ಜನ್ಮ ಚಕ್ರದಿಂದ ನಿವೃತ್ತವಾಗುವುದೇ ಮಾನವನ ಗುರಿ. ಅದೇ ಮೋಕ್ಷ. ಮಾನವಜನ್ಮ ಇತರ ಎಲ್ಲ ಜೀವಿಗಳ ಜನ್ಮಗಳಿಗಿಂತ ಉತ್ತಮವಾದ್ದರಿಂದ ಈ ಸ್ಥಿತಿಯಲ್ಲಿ ಮೋಕ್ಷಸಾಧನೆ ಮಾಡಿಕೊಳ್ಳಬೇಕು. ಮೋಕ್ಷದ ಸ್ವರೂಪದ ಬಗ್ಗೆ ಸ್ವಲ್ಪ ಭಿನ್ನ ಕಲ್ಪನೆಗಳಿವೆ; ದೇವತೆಗಳು ವಾಸಿಸುವ ಸಕಲ ಭೋಗ ವೈಭವಗಳಿಂದಕೂಡಿದ ಸುಖೀಸ್ಥಾನವಾದ ಸ್ವರ್ಗಲೋಕದ ಪ್ರಾಪ್ತಿ, ಉಚ್ಚ ದೈವವಾದ ಪರಮಾತ್ಮನ ಸಾನ್ನಿಧ್ಯವನ್ನು ಸೇರುವುದು, ಪರಮಾತ್ಮನಲ್ಲಿ ಲೀನವಾಗುವುದು ಇತ್ಯಾದಿ.

ಈ ರೀತಿಯ ಮೋಕ್ಷಸಾಧನೆಗೆ ಕರ್ಮ, ಜ್ಞಾನ, ಯೋಗ, ಮತ್ತು ಭಕ್ತಿಯ

ನಾಲ್ಕು ಮಾರ್ಗಗಳು ಪ್ರತಿಪಾದಿತವಾಗಿವೆ. ಯಜ್ಞಯಾಗಾದಿ ಕರ್ಮಗಳನ್ನು ಮಾಡುವುದರಿಂದ ಸ್ವರ್ಗ ಲಭಿಸುತ್ತದೆ ಎಂಬುದು ಕರ್ಮಮಾರ್ಗ. ತಾನು ಪ್ರಪಂಚ ಪರಮಾತ್ಮ ಇವುಗಳ ಸ್ವರೂಪಗಳನ್ನು ಸ್ಪಷ್ಟವಾಗಿ ಅರಿಯಬೇಕು ಎನ್ನುವುದು ಜ್ಞಾನ ಮಾರ್ಗ. ಸದಾಚಾರದಿಂದಿದ್ದು ದೇಹ ಮತ್ತು ಮನಸ್ಸಿನ ಮೇಲೆ ನಿಯಂತ್ರಣವನ್ನು ಸಾಧಿಸಿ ಪರಮತತ್ತ್ವದತ್ತ ತನ್ನ ಚಿಂತನೆಯನ್ನು ಕೇಂದ್ರೀಕರಿಸುವುದು ಯೋಗದ ವಿಧಾನ. ಪರಮ ದೈವಕ್ಕೆ ಪೂರ್ಣವಾಗಿ ಶರಣಾಗುವುದು, ತಾನು ಮಾಡುವ ಕ್ರಿಯೆಗಳನ್ನೆಲ್ಲಾ ಪರಮಾತ್ಮನಿಗೇ ಅರ್ಪಿಸುವುದು, ಅವನ ನಾಮಸ್ಮರಣೆ ಮಾಡುವುದು ಭಕ್ತಿ ಮಾರ್ಗ. ಇವೆಲ್ಲ ಮೋಕ್ಷಹೇತುಗಳೆಂದು ತಿಳಿಯಲಾಗಿದೆ.

ಆಚರಣಭಾಗದಲ್ಲಿ ಜ್ಞಾನ ಅಥವಾ ಯೋಗ ಮಾರ್ಗವನ್ನು ಅನುಸರಿಸುವವರು ಕರ್ಮ ಮತ್ತು ಪ್ರಪಂಚದ ಸಂಗದಿಂದ ದೂರವಾಗಬೇಕಿತ್ತು. ಇದು ಸಂನ್ಯಾಸಿಯಾಗಿಯೋ ಮುನಿಯಾಗಿಯೋ ನಿರ್ವಹಿಸಬೇಕಾದ್ದು. ಕರ್ನಾಟಕದಲ್ಲಿ ಪಾಶುಪತ ಪಂಥದ ಆಚಾರ್ಯರು ಯೋಗಮಾರ್ಗಾನುಯಾಯಿಗಳಾಗಿದ್ದರೆಂದು ತಿಳಿಯುತ್ತದೆ. ಉಳಿದ ವರ್ಗಗಳಲ್ಲಿ ಈ ಮಾರ್ಗಗಳು ಎಷ್ಟು ಪ್ರಮಾಣದಲ್ಲಿ ಬಳಕೆಯಲ್ಲಿದ್ದುವು ಎಂಬುದರ ಸೂಚನೆ ದೊರಕುವುದಿಲ್ಲ. ಕರ್ಮ ಮಾರ್ಗದ ಪ್ರಸ್ತಾಪ ವೈದಿಕ ಧರ್ಮದ ವಿಚಾರವನ್ನು ಹೇಳುವಾಗಲೇ ಬಂದಿದೆ. ಭಕ್ತಿಮಾರ್ಗದ ಬಗ್ಗೆ ಶಾಸನಗಳಲ್ಲಿ ದೊರಕುವ ವಿಷಯ ಅನಿರ್ದಿಷ್ಟ. ಹಿಂದು ಧಾರ್ಮಿಕ ಆಚರಣ ರಂಗದಲ್ಲಿ ಬಹು ಪ್ರಧಾನವಾಗಿದ್ದುದು ಸ್ಮೃತಿ ಪುರಾಣಗಳು ನಿರೂಪಿಸುವ ವಿಧಿವಿಧಾನಗಳು. ಇವಾದರೋ ಮೇಲೆ ಹೇಳಿದ ನಾಲ್ಕು ಮಾರ್ಗಗಳ ಮಿಶ್ರಣ. ಇವು ಬಹು ಜನಗಳ ಆಚರಣೆಗೆ ಅನುಕೂಲವಾಗಿದ್ದವು. ಮೊದಲಾಗಿ ಇದರ ಹಿನ್ನೆಲೆಯಲ್ಲಿ ಕಂಡುಬರುವುದು ಪುಣ್ಯಪಾಪಗಳ ಕಲ್ಪನೆ. ಸಾಧನಾಮಾರ್ಗಕ್ಕಿಂತ ಹೆಚ್ಚಾಗಿ ಇದು ನೀತಿಸಂಹಿತೆಗೆ ಸಂಬಂಧಿಸಿದ್ದು. ಮಾನವ ಸಹಜ ಪ್ರವೃತ್ತಿಗಳಿಗೆ ಅವಕಾಶ ಮಾಡಿಕೊಟ್ಟೂ ವ್ಯಕ್ತಿಚರ್ಯೆ ಸಮಾಜದ ಆರೋಗ್ಯಕ್ಕೆ ವ್ಯತಿರಿಕ್ತವಾಗದ ರೀತಿಯಲ್ಲಿ ನಡೆಯುವ ವಿಧಾನಗಳನ್ನು ಇಲ್ಲಿ ಕಾಣುತ್ತೇವೆ. ಒಂದು ಆರ್ಷೇಯ ಹೇಳಿಕೆಯು ಎಲ್ಲಾ ಧರ್ಮವಿಧಾನಗಳ ತತ್ತ್ವದ ಸಾರಾಂಶವನ್ನು ಪರರಿಗೆ ಅಹಿತವಾಗುವ ಕಾರ್ಯಗಳನ್ನು ಎಸಗದಿರುವುದೇ ಪುಣ್ಯ, ಪರಪೀಡನೆಯೇ ಪಾಪ ಎಂಬ ಮಾತುಗಳಿಂದ ಹೇಳಿದೆ. ಉತ್ತಮ ಜೀವನರೀತಿ ಎಂದರೆ ನಾಲ್ಕು ವಿಧದ ಪುರುಷಾರ್ಥಗಳ ಸಾಧನೆ. ಅವು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ. ಇವು ಒಂದಕ್ಕೊಂದು ಪೂರಕವಾಗಿರಬೇಕು ಎನ್ನುವ ತತ್ತ್ವ ಹಿಂದು ಧರ್ಮದಲ್ಲಿದೆ. ಈ ಮೂಲ ತತ್ತ್ವಗಳು ನಾನಾರೀತಿಯಲ್ಲಿ ಆಚರಣೆಯಲ್ಲಿ ಪ್ರಕಟವಾಗುತ್ತವೆ.

ಕರ್ನಾಟಕ ಪ್ರಾಚೀನ ಇತಿಹಾಸವನ್ನು ಗಮನಿಸಿದರೆ ಮೇಲೆ ಹೇಳಿದ ಯಾವ ಯಾವ ಅಂಶಗಳು ಈ ನಾಡಿನಲ್ಲಿ ಎಂದಿನಿಂದ ಪ್ರಚಲಿತವಾಗಲಾರಂಭಿಸಿದವು ಎಂದು ಊಹಿಸುವುದು ಕಷ್ಟ. ಆದರೆ ಇವೆಲ್ಲಾ ಇಲ್ಲಿನ ಸಮಾಜಜೀವನದಲ್ಲಿ ಪ್ರಚಲಿತವಾಗಿದ್ದುವು ಎಂಬುದು ಅನೇಕ ಸಣ್ಣ ಅಥವಾ ಸಾಂದರ್ಭಿಕ ಸಾಕ್ಷ್ಯಗಳಿಂದ ತಿಳಿಯುತ್ತದೆ.

"ಸುಕೃತತರತೋಪಚಿತ ವಿಪುಲ ಪುಣ್ಯಸ್ಕಂಧೇನ"[175] "ಜನ್ಮಾಂತರೋಪಾರ್ಜ್ಜಿತ ವಿಶಿಷ್ಟ ಪುಣ್ಯಸ್ಕನ್ಧಃ"[176], "ಪುಣ್ಯಕಾಂಕ್ಷಃ"[177], "ಪುಣ್ಯಫಲಭಾಗ್ಭವತಿ"[178], "ವಿಪುಲ ಪುಣ್ಯಸಮ್ಪಾದಿತಶರೀರಬುದ್ಧಿಸತ್ವಃ"[179], "ಸ್ವಪುಣ್ಯಫಲೋಪಭೋಕ್ತೃಣಾಂ"[180] "ಸಮೋದಮಾನಃ ಸುರಸುಂದರೀಭಿಃ ಚಿರಂ ಸದಾ ಕ್ರೀಡತಿ ನಾಕಪೃಷ್ಠೇ", "ಪಂಚಮಹಾ ಪಾತಕ ಸಂಯುಕ್ತೋಭವತಿ", "ನರಕೇ ಪಚ್ಯತೇ ತು ಸಃ ಕುಮ್ಭಿಪಾಕೇ ಸಪಚ್ಯತೇ" ಇತ್ಯಾದಿ ವಾಕ್ಯಗಳು ಕದಂಬ ಶಾಸನಗಳಲ್ಲಿದ್ದು ಪುಣ್ಯಪಾಪ ಕಲ್ಪನೆಗಳು ಆ ಕಾಲದಲ್ಲಿ ವ್ಯಾಪಕವಾಗಿದ್ದುವೆಂದು ತಿಳಿಸುತ್ತವೆ. ಅದಕ್ಕೆ ಹಿಂದಿನಿಂದಲೂ ಇವು ಹರಡಿದ್ದರೆ ಆಶ್ಚರ್ಯವೇನಿಲ್ಲ. ಪುಣ್ಯಸಂಪಾದನೆಗಾಗಿ ಧರ್ಮದಿಂದಲೂ ನಿಷ್ಠೆಯಿಂದಲೂ ಇದ್ದು ದಾನ ಉಪವಾಸಾದಿಗಳಲ್ಲಿ ನಿರತವಾಗಿರಬೇಕು ಎಂಬ ಭಾವನೆ ಸಮಾಜದಲ್ಲಿತ್ತು. ಹೆಚ್ಚಿನ ತಾಮ್ರಪಟಗಳಲ್ಲಿ ಹಾಗೂ ಶಿಲಾಶಾಸನಗಳಲ್ಲಿ, ರಾಜರು, ವರ್ತಕರು, ಸಾಮಾನ್ಯ ವ್ಯಕ್ತಿಗಳು ಸಹ ಹಲವಾರು ದತ್ತಿಗಳನ್ನು ಪುಣ್ಯಾರ್ಜನೆಯ ಉದ್ದೇಶದಿಂದ ಮಾಡುತ್ತಿದ್ದರೆಂಬ ವಿಷಯ ಸ್ಪಷ್ಟವಾಗುತ್ತದೆ. ಪೌರ್ಣಿಮಾ, ಅಮಾವಾಸ್ಯಾ, ಸಂಕ್ರಮಣ ಈ ರೀತಿಯ ಪರ್ವದಿನಗಳಲ್ಲಿ, ಜನನ, ಮರಣ, ಸಿಂಹಾಸನಾರೋಹಣ, ನೈಮಿತ್ತಿಕ ವ್ರತದಿನಗಳು, ಕ್ಷೇತ್ರಸಂದರ್ಶನ ಇತ್ಯಾದಿ ವಿಶೇಷ ಕಾಲಗಳಲ್ಲಿ ದಾನ ನೀಡುವುದು ಸಾಮಾನ್ಯವಾಗಿತ್ತು. ದಾನಗಳನ್ನು ಧಾರೆಯೆರೆದು ದಕ್ಷಿಣೆಯ ಸಹಿತವಾಗಿ ಸತ್ಪಾತ್ರರಾದ ವ್ಯಕ್ತಿಗಳಿಗೆ ಅಥವಾ ಸಂಸ್ಥೆಗಳಿಗೆ ಕೊಡುತ್ತಿದ್ದರು.[181] ಮಂಗಲೇಶನ ನೆರೂರು ತಾಮ್ರಶಾಸನದಲ್ಲಿ ಅವನು ಕಾರ್ತಿಕ ಏಕಾದಶಿಯ ದಿನ ಉಪವಾಸಮಾಡಿ, ಕಾರ್ತಿಕ ಮಹಾದ್ವಾದಶಿಯ ದಿನ ದಾನಮಾಡಿದನೆಂದು ಹೇಳಿವೆ.[182]

ಹಿಂದು ಧಾರ್ಮಿಕ ರಂಗದಲ್ಲಿ ದೇವಾಲಯಗಳು ಮುಖ್ಯಪಾತ್ರ ವಹಿಸಿದ್ದುವು. ದೇವಾಲಯಗಳು ಸುಮಾರು ಸಾತವಾಹನರ ಕಾಲದಿಂದಲೂ ಇದ್ದಿರಬಹುದಾದರೂ ಹೆಚ್ಚಿನ ಸಂಖ್ಯೆಯಲ್ಲಿ ಅವು ತಲೆಯೆತ್ತಿದ್ದು ಬಾದಾಮಿಯ ಚಾಲುಕ್ಯರ ಕಾಲದಲ್ಲಿ. ಬೇರೆಬೇರೆ ದೇವರಿಗಾಗಿ ರಾಜರೂ ಸಾಮಾನ್ಯ ವ್ಯಕ್ತಿಗಳೂ ದೇವಾಲಯಗಳನ್ನು ಕಟ್ಟಿಸುತ್ತಿದ್ದರು. ಈ ಕಾಲದಲ್ಲಿ ವ್ಯಕ್ತಿಗಳು ತಮ್ಮ ಹೆಸರಿನಲ್ಲೇ ದೇವರನ್ನೂ ದೇವಸ್ಥಾನಗಳನ್ನೂ ನಿರ್ಮಿಸುತ್ತಿದ್ದುದೂ ಗಮನಿಸತಕ್ಕದ್ದಾಗಿದೆ. ಉದಾಹರಣೆಗೆ, ಚಾಲುಕ್ಯ ವಿಜಯಾದಿತ್ಯನು ಪ್ರತಿಷ್ಠಿಸಿದ ದೇವರು ವಿಜಯಾದಿತ್ಯ ಭಟ್ಟಾರಕ. ಲೋಕಮಹಾದೇವಿ ಕಟ್ಟಿಸಿದ್ದು ಲೋಕೇಶ್ವರ ಭಟ್ಟಾರಕ ಎಂಬ ದೇವಾಲಯವನ್ನು.[183] ದೇವಾಲಯಗಳಲ್ಲಿ ನಿತ್ಯ ಹಾಗೂ ನೈಮಿತ್ತಿಕ ಪೂಜೆಗಳು ನಡೆಯುತ್ತಿದ್ದವು. ಹಲವು ವ್ಯಕ್ತಿಗಳು ನಿತ್ಯಪೂಜೆ ನಂದಾದೀವಿಗೆ ನೈವೇದ್ಯ ಇವಕ್ಕಾಗಿ ದಾನಗಳನ್ನು ಕೊಡುವುದು ಹಾಗೂ ದೇವಸ್ಥಾನಕ್ಕೆ ಉಪಕರಣಗಳನ್ನೂ ವಸ್ತ್ರಾಭರಣಗಳನ್ನೂ ದಾನಕೊಡುವುದು ರೂಢಿಯಲ್ಲಿತ್ತು.[184] ಕಾಲ ಕಾಲದಲ್ಲಿ ಉತ್ಸವಗಳು ಜರುಗುತ್ತಿದ್ದವು.

# ಸಮಾಜ

## ಪ್ರವೇಶ

ಸಾಹಿತ್ಯ ಸಮಕಾಲೀನ ಸಮಾಜದ ಪ್ರತಿಬಿಂಬ ಹಾಗೂ ಗತಿಬಿಂಬ, ಮಣ್ಣಿನ ವಾಸನೆ ಇದ್ದರೇ ಸಾಹಿತ್ಯದಲ್ಲಿ ಬನಿ ಇರುವುದು ಮತ್ತು ಅದಕ್ಕೆ ಮೌಲ್ಯ ಬರುವುದು—ಎನ್ನುವಂತಹ ಮಾತುಗಳು ಸಾಹಿತ್ಯಕ್ಕೂ ಸಮಾಜಕ್ಕೂ ಇರುವ ಸಾಮೀಪ್ಯವನ್ನು ಸೂಚಿಸುತ್ತವೆ. ಸಾಹಿತಿ ಸಮಾಜದ ಶಿಶು,-ಅದರ ಒಂದು ಅಂಶ; ಆದ್ದರಿಂದ ಅವನಿಂದ ಶಾಬ್ದಿಕವಾಗಿ ಹುಟ್ಟುವುದು ಎಂದರೆ ಅವನ ಕೃತಿಯೆನಿಸಿದ್ದು ಸಮಾಜದ ಚಿಂತನೆಯೇ ಎಂದೂ ಹೇಳಬಹುದು. ಯಾವುದೇ ಸಾಹಿತ್ಯಕೃತಿಗಾದರೂ ತತ್ಕಾಲೀನ ಸಮಾಜದ ಸ್ಥಿತಿಗಳು ಮತ್ತು ಚಿಂತನೆಯ ಧಾಟಿಗಳು ಮೂಲಸಾಮಗ್ರಿಯನ್ನು ಒದಗಿಸುತ್ತವೆ. ಎಂದರೆ ಸಾಹಿತ್ಯಕೃತಿಗಳ ಉಗಮ ಸಮಾಜವೆಂಬ ಕ್ಷೇತ್ರದಿಂದಲೇ. ಇದು ಎಷ್ಟು ಸತ್ಯವೋ ಸಾಹಿತ್ಯದ ಗುರಿ ಸಮಾಜ ಎಂಬುದೂ ಅಷ್ಟೇ ಸತ್ಯ. ಯಾವುದೇ ಕೃತಿಗಳ ಉದ್ದೇಶ ಸಮಕಾಲೀನ ಸಮಾಜದ ವ್ಯಕ್ತಿಗಳು ಅವನ್ನು ಓದಿ ಸವಿಯಬೇಕೆಂಬುದು, ತಿಳಿಯಬೇಕೆಂಬುದು. ಇದರಿಂದಾಗಿ ಸಾಹಿತ್ಯಕೃತಿಗಳು ಜನಗಳಿಗೆ ಹಿಡಿಸಬೇಕಾದರೆ ಆಯಾ ಸಮಾಜದ ಜನರಿಗೆ ಅರ್ಥವಾಗುವಂತೆಯೂ ಅವರ ಒಲವು ಅಭಿರುಚಿಗಳಿಗೆ ಒಗ್ಗುವ ರೀತಿಯಲ್ಲೂ ಇರಬೇಕಾಗುತ್ತದೆ. ಸಹಜವಾಗಿ ಬೇರೆ ಕಾಲದ ಸಾಹಿತ್ಯವನ್ನೂ ಅಲ್ಲಿ ಹೊಮ್ಮಿರುವ ಸಂಸ್ಕೃತಿಯನ್ನೂ ಅರ್ಥಮಾಡಿಕೊಳ್ಳಲು ತತ್ಕಾಲೀನ ಸಮಾಜದ ಹಿನ್ನೆಲೆ ಓದುಗನಿಗೆ ಬೇಕಾಗುತ್ತದೆ. ಸಾಹಿತ್ಯ-ಸಮಾಜಗಳ ಪರಸ್ಪರ ಸಂಬಂಧ ಪ್ರಭಾವಗಳನ್ನು ಗುರುತಿಸಿ, ಕೃತಿಗಳ ಸತ್ತ್ವವನ್ನೂ ಮೌಲ್ಯಗಳನ್ನೂ ಅಳೆಯುವುದು ಸಾಹಿತ್ಯ ವಿಮರ್ಶಕರ ಹಲವು ವಿಧಾನಗಳಲ್ಲೊಂದು. ಈ ದೃಷ್ಟಿಯಿಂದಲೂ ಸಾಮಾಜಿಕ ಹಿನ್ನೆಲೆ ಅತ್ಯವಶ್ಯ.

ಒಂದು ಕಾಲದ ಸಾಹಿತ್ಯಕೃತಿಗಳ ಅಧ್ಯಯನಕ್ಕೆ ಸಂಬಂಧಿಸಿದಂತೆ ಈ ಮೇಲಿನ ಹೇಳಿಕೆಗಳು ಗಮನಾರ್ಹ. ಅಷ್ಟೇ ಅಲ್ಲದೆ ಒಂದು ದೇಶದ ಸಾಹಿತ್ಯದ ಇತಿಹಾಸವನ್ನು ಅರಿಯುವಲ್ಲಿ ಆ ದೇಶದಲ್ಲಿ ಯಾವ ರೀತಿಯ ಸಾಮಾಜಿಕ ಬದಲಾವಣೆಗಳಾದುವು, ಅವುಗಳಿಂದ ಸಾಹಿತ್ಯರಂಗದಲ್ಲಿ ಉಂಟಾದ ಪರಿಣಾಮಗಳೇನು, ಸಾಹಿತ್ಯಿಕ ವಸ್ತು ರೀತಿ ಚಿಂತನೆಗಳಲ್ಲಿ ಅವನ್ನು ಗುರುತಿಸಬಹುದೇ ಮುಂತಾಗಿ ವಿಮರ್ಶಿಸಬೇಕಾಗುತ್ತದೆ. ಹಾಗೆಯೇ ಸಾಹಿತ್ಯರಂಗದಲ್ಲಿ ಕಾಣಿಸಿಕೊಂಡ ಹೊಸ ಭಾವನೆಗಳು ಸಮಾಜದ ಮೇಲೆ ಎಷ್ಟರಮಟ್ಟಿಗೆ ಪರಿಣಾಮಕಾರಿಯಾಗಿದ್ದವು ಎಂಬುದನ್ನೂ ಗಮನಿಸಬೇಕಾಗುತ್ತದೆ.

ಸಾಹಿತ್ಯದ ಉಗಮಕ್ಕೆ ಸಾಮಾಜಿಕ ಪರಿಸರ ಬಹುಮಟ್ಟಿಗೆ ಕಾರಣ. ಸಾಹಿತಿ ಅಥವಾ ಗ್ರಂಥಕಾರ ತನ್ನ ಕಾರ್ಯದಲ್ಲಿ ತೊಡಗಬೇಕಾದ್ದಕ್ಕೆ ಅಗತ್ಯವಾದ ಬಿಡುವು, ಗ್ರಂಥರಚನೆಗೆ ತಕ್ಕ ಪ್ರಚೋದನೆ ಪ್ರೋತ್ಸಾಹಗಳು, ಗ್ರಂಥಗಳನ್ನು ಓದುವ ಆವಶ್ಯಕತೆ ಅಭಿರುಚಿ ವ್ಯವಧಾನಗಳನ್ನುಳ್ಳ ಜನವರ್ಗ—ಇವು ಇರುವೆಡೆಗಳಲ್ಲೇ ಸಾಹಿತ್ಯ ಹುಟ್ಟಲು ಸಾಧ್ಯ. ಈ ದೃಷ್ಟಿಯಿಂದ ಸಂಪನ್ನ ನಾಗರಿಕ ಸಮಾಜಗಳಲ್ಲಷ್ಟೇ ಸಾಹಿತ್ಯ ಬೆಳೆಯ

ಬಲ್ಲುದು ಎಂದು ಹೇಳಬಹುದು. ಯಾವ ದೇಶದಲ್ಲಿ, ಯಾವ ಕಾಲದಲ್ಲಿ ಇಂಥ ಆರ್ಥಿಕ ಸಾಮಾಜಿಕ ಪರಿಸ್ಥಿತಿಗಳು ಒದಗಿಬಂದುವು ಎಂಬುದನ್ನು, ಸಾಹಿತ್ಯದ ಉಗಮವನ್ನು ಚರ್ಚಿಸುವ ಇತಿಹಾಸಕಾರ ಅರಿತಿರಬೇಕಾಗುತ್ತದೆ.[185] ಕನ್ನಡದ ಸಾಹಿತ್ಯ ಕೃತಿಗಳು ದೊರಕಿಲ್ಲದಿರುವ ಪ್ರಸ್ತುತ ವಿವೇಚನೆಯ ಕಾಲಕ್ಕೆ ಈ ಅಂಶವೇ ಹೆಚ್ಚು ಮುಖ್ಯವಾಗಿದೆ.

ಈ ಎಲ್ಲ ದೃಷ್ಟಿಯಿಂದಲೂ ಸಾಹಿತ್ಯೇತಿಹಾಸಕಾರನಿಗೆ ಬೇಕಾಗುವುದು ಕಾಲಕಾಲದಲ್ಲಿ ವ್ಯವಸ್ಥಿತವಾಗಿದ್ದಂಥ ಪರಿಸರದ ಸ್ಥಿತಿ. ಈ ದೃಷ್ಟಿಯಿಂದ ಸಾಮಾಜಿಕ ಹಿನ್ನೆಲೆ ಎಂಬುದನ್ನು ಇಲ್ಲಿ ವಿಶಾಲ ಅರ್ಥದಲ್ಲಿ ಬಳಸಲಾಗಿದೆ. ಸಮಾಜದ ಕೇವಲ ವರ್ಗ-ವರ್ಣವ್ಯವಸ್ಥೆ, ನಡೆ-ನಂಬಿಕೆಗಳನ್ನಷ್ಟೇ ಅಲ್ಲದೆ, ಕಾಲಕಾಲದಲ್ಲಿದ್ದ ಅಂಥ ಸಮಾಜ ವ್ಯವಸ್ಥೆಗೆ ಕಾರಣವಾದ ಆರ್ಥಿಕಸ್ಥಿತಿಗಳು, ವಿದ್ಯಾಪ್ರಸಾರ, ಪ್ರೋತ್ಸಾಹ—ಇವಕ್ಕೆ ಕಾರಣವಾದ ಆಡಳಿತವ್ಯವಸ್ಥೆ ಇತ್ಯಾದಿ ಅಂಶಗಳನ್ನೂ ಇಲ್ಲಿ ಗಮನಕ್ಕೆ ತೆಗೆದುಕೊಳ್ಳಲಾಗಿದೆ.

## ನಂದ-ಮೌರ್ಯ-ಸಾತವಾಹನರ ಕಾಲ

ನಾಗರಿಕ ಘಟ್ಟದ ಪ್ರಾರಂಭ: ಸುಮಾರು ೪ ಲಕ್ಷ ವರ್ಷಗಳಿಂದ ಕ್ರಿ. ಪೂ. ೬-೫ನೆಯ ಶತಮಾನಗಳವರೆಗಿನ ಅವಧಿಯಲ್ಲಿದ್ದ ಪ್ರಾಗೈತಿಹಾಸಿಕ ಕಾಲದ ಆರ್ಥಿಕ—ಸಾಮಾಜಿಕ ಪರಿಸ್ಥಿತಿಗಳನ್ನು ಈ ಹಿಂದೆಯೇ ವಿವರಿಸಲಾಗಿದೆ.[186] ಅನಂತರದ ಯುಗ ಕರ್ನಾಟಕದ ಇತಿಹಾಸದಲ್ಲಿ ಹೊಸ ಚೈತನ್ಯ ಚಟುವಟಿಕೆಗಳು ಪ್ರಾರಂಭವಾದ ಕಾಲ. ಗ್ರಾಮೀಣ ಸಾಮಾಜಿಕಸ್ಥಿತಿ ನಾಗರಿಕ(urban)ಸಮಾಜಸ್ಥಿತಿಗೆ ಪರಿವರ್ತನೆ ಹೊಂದಿದ್ದು ಈ ಕಾಲದಲ್ಲಿ. ನಂದ-ಮೌರ್ಯರ ಆಳ್ವಿಕೆ ಕರ್ಣಾಟಕದಲ್ಲಿ ಹರಡಿದಾಗಿನಿಂದ ಈ ಹೊಸ ತಿರುವು ಕಾಣಿಸಿಕೊಂಡಿರಬೇಕು.[187] ಕರ್ಣಾಟಕದ ಬಹುಭಾಗ ಒಂದು ರಾಜಕೀಯ ಚೌಕಟ್ಟಿನಲ್ಲಿ ಆಳವಟ್ಟಿದ್ದರಿಂದ ದೇಶದ ಒಳಗೆ ಶಾಂತಿ ಮತ್ತು ಭದ್ರತೆ ನೆಲೆಗೊಂಡು ಸಮಾಜದ ವಿವಿಧ ವರ್ಗಗಳ ಮತ್ತು ವ್ಯಕ್ತಿಗಳ ಆಸ್ತಿ, ಹಕ್ಕುಗಳನ್ನು ರಕ್ಷಿಸುವ ಕಾನೂನುಗಳು ಮತ್ತು ಅವನ್ನು ಜನ ಪಾಲಿಸುವಂತೆ ನೋಡಿಕೊಳ್ಳುವ ವ್ಯವಸ್ಥೆ ರೂಪಿತವಾಗಿರಬೇಕು. ಇದು ದೇಶದ ಸಂಪದಭಿವೃದ್ಧಿಗೆ ತಕ್ಕ ವಾತಾವರಣವನ್ನು ಒದಗಿಸುತ್ತದೆ. ಉತ್ತರಭಾರತದ ರಾಜರು ಕರ್ಣಾಟಕದ ಮೇಲೆ ತಮ್ಮ ಆಧಿಪತ್ಯವನ್ನು ಸಾಧಿಸಿದ ಸಂದರ್ಭದಲ್ಲಿ ಆ ಭಾಗಗಳಿಂದ ಬಂದ ಹಲವರು ರಾಜ್ಯಾಧಿಕಾರಿಗಳು ಇಲ್ಲಿ ಸಹಜವಾಗಿ ನೆಲೆಗೊಂಡಿದ್ದರು.[188] ಇವರುಗಳು ಮೂಲತಃ ತಮ್ಮ ನಾಡಿನಲ್ಲಿ ರೂಢವಾಗಿದ್ದ ನಾಗರಿಕ ಜೀವನ ವಿಧಾನಗಳನ್ನು ಇಲ್ಲಿಯೂ ವ್ಯವಸ್ಥೆಗೊಳಿಸಲು ತೊಡಗಿರಬೇಕು. ರಾಜ್ಯದ ಮುಖ್ಯ ಅಧಿಕಾರಿಗಳು, ಆಡಳಿತವನ್ನು ನಡಸಲು ಅವರು ನೇಮಿಸಿಕೊಂಡ ಹಲವು ಚಿಕ್ಕಪುಟ್ಟ ಪ್ರಾಂತೀಯ ಮತ್ತು ಸ್ಥಳೀಯ ಅಧಿಕಾರಿಗಳು, ಸೈನಿಕರು—ಇಂಥ ವ್ಯಕ್ತಿಗಳಿಂದ ಕೂಡಿದ ವರ್ಗ ಬೆಳೆಯಿತು. ಇವರು ಬೇಸಾಯಗಾರರು ಕಸುಬುದಾರರಂಥ ಆರ್ಥಿಕ ಉತ್ಪಾದನೆಗಳಲ್ಲಿ ತೊಡಗಿದ್ದ ವ್ಯಕ್ತಿಗಳಿಂದಲೇ ತೆರಿಗೆ ಮುಂತಾದ ವಿಧಾನಗಳಿಂದ ಧನ

ಸಂಗ್ರಹ ಮಾಡಲಾರಂಭಿಸಿ ಸಮಾಜದಲ್ಲಿ ಪ್ರತಿಷ್ಠಿತ ವರ್ಗದವರಾಗಿ ಬೆಳೆದರು. ದೇಶದಲ್ಲಿ ನೆಲಸಿದ್ದ ಶಾಂತಿ ಭದ್ರತೆಗಳಿಂದಾಗಿ ನಾಡಿನ ಆರ್ಥಿಕಸಂಪತ್ತು ವ್ಯಾಪಾರ ಉದ್ಯಮಗಳಿಂದ ಇನ್ನೂ ಹೆಚ್ಚಲು ಅವಕಾಶವಾಯಿತು. ಉತ್ತರ ಭಾರತದೊಡನೆಯ ರಾಜಕೀಯ ಸಂಪರ್ಕದಿಂದ ಆ ಪ್ರದೇಶಗಳೊಡನೆ ಉತ್ತಮವಾದ ಸಂಚಾರ ಮಾರ್ಗಗಳು ಬೆಳೆದು, ಇದೂ ವ್ಯಾಪಾರಾಭಿವೃದ್ಧಿಯನ್ನು ಸಾಧಿಸಿತು. ನಾಣ್ಯದ ಚಲಾವಣೆ ಬಂದು ವ್ಯಾಪಾರದ ವಿಧಾನಗಳು ಸುಲಭಗೊಂಡುವು.[189] ಧನಿಕ ವ್ಯಾಪಾರಿವರ್ಗಗಳ ಬೆಳೆವಣಿಗೆ ಸಹ ಈ ಕಾಲದಲ್ಲಿ ಆಯಿತು. ಈ ರೀತಿಯಲ್ಲಿ ವ್ಯಾಪಾರದಿಂದಲೋ ರಾಜಕೀಯ ಅಧಿಕಾರ ಅಂತಸ್ತುಗಳಿಂದಲೋ ಆಢ್ಯರಾದ ಧನಿಕ ವರ್ಗಗಳಿಂದ ಕೂಡಿದ ಪಟ್ಟಣಗಳು ಬೆಳೆಯಲಾರಂಭಿಸಿದುವು. ಆರ್ಥಿಕ ಬಲ ಮತ್ತು ಅಂತಸ್ತಿನ ಪ್ರಜ್ಞೆ ಇವುಗಳಿಂದಾಗಿ ನಗರವಾಸಿಗಳು ತಮಗಾಗಿ ದೊಡ್ಡ ಕಟ್ಟಡಗಳನ್ನು ನಿರ್ಮಿಸಿಕೊಳ್ಳುವುದು, ವಿವಿಧ ಉದ್ದೇಶಗಳಿಗಾಗಿ ಸೇವಕ ವರ್ಗಗಳನ್ನು ನಿಯಮಿಸಿಕೊಳ್ಳುವುದು, ಇದರಿಂದ ದೇಹಶ್ರಮವನ್ನು ಕಡಿಮೆ ಮಾಡಿಕೊಂಡು ಉಳಿತಾಯದ ಕಾಲವನ್ನು ವಿದ್ಯಾವಿನೋದಗಳಿಗೆ ಉಪಯೋಗಿಸಿಕೊಳ್ಳುವುದು—ಮುಂತಾದ ಜೀವನ ವಿಧಾನಗಳು ರೂಢವಾದುವು. ಬರೆವಣಿಗೆಯ ಕಲೆ ಸಹ ಹರಡಿದ್ದು ಈ ಕಾಲದಲ್ಲಿಯೇ. ಒಟ್ಟಿನಲ್ಲಿ ಕಲೆ ಸಾಹಿತ್ಯ ಮುಂತಾದುವು ಬೆಳೆಯಲು ಅವಶ್ಯವಾದ ಆರ್ಥಿಕ–ಸಾಮಾಜಿಕ ವಾತಾವರಣ ಈ ಕಾಲಕ್ಕೆ ರೂಪಗೊಳ್ಳಲಾರಂಭಿಸಿತು.[190]

ಈ ನಾಗರಿಕ ಘಟ್ಟದ ಪ್ರಾರಂಭಿಕ ಸ್ಥಿತಿಯ ಬಗ್ಗೆ ಬ್ರಹ್ಮಗಿರಿ,[191] ಮಸ್ಕಿಯಲ್ಲಿ[192] ನಡೆದಿರುವ ಉತ್ಖನನಗಳು, ಅಲ್ಲಿ ಮತ್ತು ಇತರ ಕಡೆಗಳಲ್ಲಿ ಕಂಡುಬಂದಿರುವ ಮೌರ್ಯ ಅಶೋಕನ ಶಾಸನಗಳು,[193] ಗುಲ್ಬರ್ಗದಲ್ಲಿ ಸಿಕ್ಕಿರುವ ನಾಣ್ಯರಾಶಿ,[194] ಸ್ವಲ್ಪಮಟ್ಟಿಗೆ ಮಾಹಿತಿ ನೀಡುತ್ತವೆ. ಆದರೆ ಸಾತವಾಹನರ ಕಾಲದಲ್ಲಿ ಈ ಸ್ಥಿತಿ ಹೆಚ್ಚು ವ್ಯವಸ್ಥಿತವಾಗಿತ್ತು ಎಂಬ ಬಗ್ಗೆ ಹಲವು ಸ್ಥಳೀಯ ಮತ್ತು ಬಾಹ್ಯಸಾಕ್ಷ್ಯಗಳು ದೊರಕುತ್ತವೆ. ಬ್ರಹ್ಮಗಿರಿ,[195] ಚಂದ್ರವಳ್ಳಿ,[196] ಬನವಾಸಿ[197] ಮತ್ತು ವಡಗಾಂವ್ ಮಾಧವಪುರ[198] ಗಳಲ್ಲಿ ನಡೆದಿರುವ ಉತ್ಖನನಗಳಿಂದ ಹಾಗೂ ಸನ್ನತಿ,[199] ಹೆರಕಲ್[200] ಮುಂತಾದೆಡೆಗಳಲ್ಲಿಯ ನೆಲೆಗಳ ಪರೀಕ್ಷೆಯಿಂದ ಸಾತವಾಹನ ಕಾಲದ ಹೊತ್ತಿಗೆ ಹಲವಾರು ನಗರಗಳು ಬೆಳೆದಿದ್ದುವು ಎಂದು ತಿಳಿಯುತ್ತದೆ. ಬನವಾಸಿ, ವಡಗಾಂವ್ ಮಾಧವಪುರ ಮತ್ತು ಬ್ರಹ್ಮಗಿರಿಗಳಲ್ಲಿ ಬೃಹದಾಕಾರದ ಇಟ್ಟಿಗೆಯಲ್ಲಿ ಕಟ್ಟಿದ ಮನೆಗಳು ಬೆಳಕಿಗೆ ಬಂದಿವೆ. ಬನವಾಸಿ ಮತ್ತು ಸನ್ನತಿಗಳಲ್ಲಿ ಕೋಟೆಗಳೂ ಕಂಡುಬಂದಿವೆ. ನಗರಗಳು ಸಂಪದ್ಭರಿತವಾಗಿದ್ದು, ಪ್ರಾಯಶಃ ಆಡಳಿತ ಕೇಂದ್ರಗಳಾಗಿ ಹೊರಗಿನ ಶತ್ರುಗಳಿಂದ ರಕ್ಷಣೆ ಪಡೆಯುವಂಥ ಆವಶ್ಯಕತೆ ಬೆಳೆದಿತ್ತೆಂದು ಅವು ಸೂಚಿಸುತ್ತವೆ. ಇಲ್ಲಿಯ ಹಲವು ಕಡೆಗಳಲ್ಲಿ ಸಾತವಾಹನ ರಾಜರ ಮತ್ತು ಚುಟು ಮೊದಲಾದ ಸಾಮಂತರ ನಾಣ್ಯಗಳು ದೊರಕಿರುವುದೂ ಮೇಲಿನ ಮತ್ತು ಇತರ ಅನೇಕ ಸ್ಥಳಗಳಲ್ಲಿ ಸುಮಾರು ಒಂದೇ ರೀತಿಯ ಪಾತ್ರೆಪದಾರ್ಥಗಳು ಮಣಿಗಳು ಇತ್ಯಾದಿ ವಸ್ತುಗಳು ದೊರಕಿರುವುದೂ ಆ

ಕಾಲದಲ್ಲಿ ಪದಾರ್ಥಗಳನ್ನು ಒಂದೆಡೆಯಿಂದ ಇನ್ನೊಂದೆಡೆಗೆ ಸಾಗಿಸಿ ವ್ಯಾಪಾರ ನಡಸುತ್ತಿದ್ದುದು ವಿಶೇಷವಾಗಿತ್ತೆಂಬುದನ್ನು ತಿಳಿಸುತ್ತವೆ. ಈ ವ್ಯಾಪಾರ ಕರ್ಣಾಟಕಕ್ಕೆ ಅಷ್ಟೆ ಸೀಮಿತವಾಗಿರಲಿಲ್ಲ. ಮಹಾರಾಷ್ಟ್ರ, ಆಂಧ್ರಪ್ರದೇಶ, ತಮಿಳುನಾಡಿನ ಇತರ ಕೆಲವು ಸ್ಥಳಗಳಲ್ಲೂ ಇದೇ ರೀತಿಯ ವಸ್ತುಗಳು ದೊರಕಿರುವುದರಿಂದ, ಆರ್ಥಿಕವಾಗಿ ಸಾಂಸ್ಕೃತಿಕವಾಗಿ ಕರ್ಣಾಟಕ ಬೇರೆ ಪ್ರದೇಶಗಳೊಡನೆಯೂ ಸಂಪರ್ಕ ಹೊಂದಿರಬೇಕು ಎಂದು ತಿಳಿಯುತ್ತದೆ.[201] ಉತ್ತರ ಭಾರತದ ಕೆಲವು ಗ್ರಂಥಗಳಲ್ಲಿ ವ್ಯಾಪಾರಿಗಳು ಸರಕುಗಳನ್ನು ಸಾಗಿಸಿಕೊಂಡು ದೂರದೂರ ಪ್ರದೇಶಗಳಿಗೆ ಭೇಟಿ ಕೊಡುತ್ತಿದ್ದರೆಂದು ಹೇಳಿದೆ. ಹೀಗೆ ಹೋಗುವುದನ್ನು 'ಸಾರ್ಥವಾಹ' ಎಂದು ಕರೆದಿದೆ. 'ಗಾಥಾಸಪ್ತಶತಿ'ಯಲ್ಲಿ ಇಂತಹ 'ಸಾರ್ಥವಾಹ'ಗಳ ಪ್ರಸ್ತಾಪ ಬರುತ್ತದೆ.[202] ಸಾತವಾಹನರ ಕಾಲದಲ್ಲಿ ಕರ್ಣಾಟಕ ಹೊರದೇಶಗಳೊಡನೆಯೂ ಸಂಪರ್ಕ ಸಾಧಿಸಿತ್ತು. ಟಾಲೆಮಿ ಕರ್ಣಾಟಕದ ಕೆಲವು ಸ್ಥಳಗಳನ್ನು ಹೆಸರಿಸುವುದಲ್ಲದೆ, ಇಲ್ಲಿಂದ ಸುಗಂಧವಸ್ತುಗಳು, ಸಂಬಾರ ಪದಾರ್ಥಗಳು ಮತ್ತು ವೈಡೂರ್ಯ ಇವು ನಿರ್ಯಾತವಾಗುತ್ತಿದ್ದ ವಿಷಯವನ್ನೂ ಹೇಳುತ್ತಾನೆ. ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿ, ಬೆಂಗಳೂರಿನ ಬಳಿ ಇರುವ ಯಶವಂತಪುರ ಮತ್ತು ಜಾಲಹಳ್ಳಿಗಳಲ್ಲಿ ರೋಮೀಯ ಅರಸರಾದ ಅಗಸ್ಟಸ್, ಟೈಬೀರಿಯಸ್, ಕ್ಲಾಡಿಯಸ್ ಇವರ ನಾಣ್ಯಗಳು ದೊರಕಿವೆ.[203]

ಭೂಮಿ ಜನಗಳ ಪ್ರಧಾನ ಆಸ್ತಿಯಾಗಿದ್ದು ಕೃಷಿ ಅಂದಿನ ಆರ್ಥಿಕ ಜೀವನದ ಬೆನ್ನೆಲುಬಾಗಿರಬೇಕು. ದಾನಗಳನ್ನು ಕೊಡುವಾಗ ವಿಶೇಷವಾಗಿ ಭೂಮಿದಾನವನ್ನೇ ಮಾಡುವ ಪದ್ಧತಿ ಇದಕ್ಕೆ ನಿದರ್ಶನ. ಈ ಕಾಲದಲ್ಲಿ ಕಸುಬುಗಳು ಬೆಳೆದಿದ್ದುವಲ್ಲದೆ, ಕಸುಬುಗಾರರ ಸಂಘಗಳೂ ಇದ್ದುವು. ಈ ಬಗ್ಗೆ ಕರ್ಣಾಟಕದಲ್ಲಿ ಅಷ್ಟಾಗಿ ಮಾಹಿತಿಗಳು ದೊರೆಯದಿದ್ದರೂ ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶದ ಶಾಸನಗಳು ಸೂಚನೆ ನೀಡುತ್ತವೆ. ಅಲ್ಲಿಯ ಶಾಸನಗಳಲ್ಲಿ ಧನ್ನಿಕ (ಧಾನ್ಯ ವ್ಯಾಪಾರಿ), ಮಾಲಾಕಾರ (ಹೂವಾಡಿಗ), ಕೋಲಿಕ (ನೇಕಾರ), ತಿಲಪಿಸಕ (ಗಾಣಿಗ), ಕಾಸಕಾರ (ಕಂಚುಗಾರ), ಕಮಾರ (ಕಮ್ಮಾರ), ಚಮ್ಮಕಾರ (ಚಮ್ಮಾರ), ಗಧಿಕ (ಗಂದಿಗೆಯವರು), ಸುವಣಕಾರ ಅಥವ ಹೇರಣಿಕ (ಅಕ್ಕಸಾಲೆ), ಮಣಿಕಾರ (ಸರಾಫು), ಮಿಠಿಕ (ಕಲ್ಲು ಹೊಳಪು ಮಾಡುವವನು), ಸೆಲವಡಕಿ (ಕಲ್ಲುಕುಟಿಗ), ವಡಕಿ (ಬಡಗಿ), ಓದಯಾತ್ರಿಕ (ನೀರೆತ್ತುವ ಯಂತ್ರಗಳನ್ನು ಮಾಡುವವನು), ದಾಸಕ (ಬೆಸ್ತ) ಇವರ ಹೆಸರುಗಳಿವೆ. ಕೋಲಿಕ ನಿಕಾಯ, ಕುಲಕರಿಕ (ಕುಂಬಾರ) ಶ್ರೇಣಿ, ಧನ್ನಿಕಶ್ರೇಣಿ, ವಸಾಕಾರ (ಮೇದ) ಶ್ರೇಣಿ, ಕಾಸಾಕಾರ ಶ್ರೇಣಿ ಮೊದಲಾದುವೂ ಇದ್ದುವು. ಈ ಶ್ರೇಣಿಗಳಿಗೆ ಜನಗಳು ಹಣವನ್ನೋ ಭೂಮಿಯನ್ನೋ ನೀಡಿ, ಅದರಿಂದ ಅವು ಕೆಲವು ಧರ್ಮಕಾರ್ಯಗಳನ್ನು ನೆರವೇರಿಸುವ ವ್ಯವಸ್ಥೆ ಇದ್ದುದರಿಂದ ಶ್ರೇಣಿಗಳು ನಂಬಿಕೆಗೆ ಅರ್ಹವಾದುವೂ ಬಹುಕಾಲ ಉಳಿಯುವಂಥವೂ ಆಗಿದ್ದಿರಬೇಕು.[204] ಆ ಕಾಲದ ಶಾಸನಗಳಲ್ಲಿ ಗಹಪತಿಗಳ (ಗೃಹಪತಿ) ಉಲ್ಲೇಖ ವಿಶೇಷವಾಗಿ ಬರುತ್ತದೆ. ಇವರು ಹೆಚ್ಚು ಭೂಮಿಯ ಒಡೆತನ ಹೊಂದಿದ್ದು

ಸ್ಥಿತಿವಂತರಾಗಿ ಲೇವಾದೇವಿ ಮಾಡುವವರಿರಬೇಕು ಎಂದು ಊಹಿಸಲಾಗಿದೆ.[205]

ಆಡಳಿತಾಂಗದಲ್ಲಿ ರಾಜ್ಯದ ಹಿರಿಯನಾಗಿ ರಾಜನಿರುತ್ತಿದ್ದರೆ, ಆಹರಗಳೆಂಬ ಪ್ರಾಂತ್ಯ ವಿಭಾಗಗಳಲ್ಲಿಯೂ ಮುಖ್ಯಾಧಿಕಾರಿಗಳಿರುತ್ತಿದ್ದರು. ಅವರುಗಳಲ್ಲಿ ಮಹಾಭೋಜ ಮತ್ತು ಮಹಾರಠಿಗಳು ಮುಖ್ಯರು. ಈ ಹುದ್ದೆಗಳು ವಂಶಪಾರಂಪರ್ಯವಾಗಿ ಬರುತ್ತಿದ್ದುವೆಂದು ತೋರುತ್ತದೆ. ಅಮಚ (ಅಮಾತ್ಯ), ಮಹಾಸೇನಾಪತಿ, ಮಹಾತಳವರ ಅಥವಾ ತಳವರ (ಮುಖ್ಯ ಪೋಲೀಸು ಅಧಿಕಾರಿ), ಗಾಮಿಕ (ಗ್ರಾಮದ ಒಡೆಯ), ಮಹಾತಾರಕ (ಕಂಚುಕಿ), ಭಾಂಡಾಗಾರಿಕ (ಭಂಡಾರಿ), ಮಹಾಮಾತ್ರ (ಧರ್ಮಸಂಘಗಳನ್ನು ನೋಡಿಕೊಳ್ಳುವವನು), ನಿಬಂಧಕಾರ (ದಾಖಲೆಗಳ ಅಧಿಕಾರಿ), ಪ್ರತೀಹಾರ ಮತ್ತು ದೂತಕ ಎಂಬ ಇತರ ರಾಜ್ಯಾಧಿಕಾರಿಗಳೂ ಇರುತ್ತಿದ್ದರು.[206]

ಆರ್ಥಿಕ–ಸಾಮಾಜಿಕವಾಗಿ ಹೀಗೆ ವ್ಯವಸ್ಥಿತವಾಗಿದ್ದ ಸಾತವಾಹನ ಕಾಲದಲ್ಲಿ ಹಲವು ಸಾಮಾಜಿಕ ಕಟ್ಟುಕಟ್ಟಳೆಗಳೂ ಜಾರಿಗೆ ಬರುತ್ತಿದ್ದವು. ವರ್ಣಧರ್ಮದ ಭಾವನೆ ಈ ಕಾಲಕ್ಕಾಗಲೆ ಇಲ್ಲಿನ ಸಮಾಜದಲ್ಲಿ ರೂಢಿತವಾಗುತ್ತಿದ್ದಂತೆ ತೋರುತ್ತದೆ. ರಾಜನಾದ ಗೌತಮೀಪುತ್ರ ಸಾತಕರ್ಣಿಯನ್ನು ಏಕಬಮ್ಮಣ (ಏಕ ಬ್ರಾಹ್ಮಣ) ಎಂದು ನಾಸಿಕ ಶಾಸನ ವರ್ಣಿಸುತ್ತದೆ. ಕೆಲವು ಶಾಸನಗಳಲ್ಲಿ ಕ್ಷತ್ರಿಯ ಮತ್ತು ಸೆಠಿ (ಶ್ರೇಷ್ಠಿ, ವೈಶ್ಯ)ಯ ಪ್ರಸ್ತಾಪ ಬರುತ್ತದೆ.[207] ವರ್ಣಧರ್ಮ ಮತ್ತು ತತ್ಸಂಬಂಧಿತ ಆಚರಣೆಗಳ ಮೂಲ ಔತ್ತರೇಯವಾಗಿದ್ದು, ಅಲ್ಲಿನ ಸ್ಮೃತಿಗಳಲ್ಲಿ ರೂಪಿತವಾಗಿರುವ ವ್ಯವಸ್ಥೆ ಇಲ್ಲಿಯೂ ಕ್ರಮಕ್ರಮವಾಗಿ ನೆಲೆಗೊಂಡಿರಬೇಕು. ಆದರೆ ಸಾತವಾಹನ ರಾಜರ ಶಾಸನಗಳನ್ನೇ ನೋಡಿದರೆ, ಅವುಗಳಲ್ಲಿ ಬರುವ ವಾಸಿಷ್ಠೀಪುತ್ರ, ಗೌತಮೀಪುತ್ರ ಇತ್ಯಾದಿ ಮಾತೃನಾಮಗಳು, ಪ್ರಾಯಶಃ ಸ್ಥಳೀಯವಾಗಿದ್ದ ಸಾಮಾಜಿಕ ರೀತಿಗಳನ್ನೂ ಜೊತೆಗೇ ಅಳವಡಿಸಿಕೊಳ್ಳುತ್ತಿದ್ದಂತೆ ತೋರುತ್ತದೆ. ನಾಗರಿಕ ಘಟ್ಟದ ಸಾಮಾಜಿಕ ವೈಶಿಷ್ಟ್ಯಗಳು ಬೆಳೆಯುತ್ತಿದ್ದ ಈ ಕಾಲದಲ್ಲಿ ಹಲವು ಕಸುಬುಗಳು ಸಹ ಕುಲವೃತ್ತಿಗಳಾಗಿ ಬೆಳೆದು ಉಪಜಾತಿಗಳು ಕಾಣಿಸಿಕೊಳ್ಳಲು ಆರಂಭಿಸಿರಬಹುದು.[208]

ಅನೇಕ ಶಾಸನಗಳಲ್ಲಿ ತಂದೆ, ಮಗ, ಹೆಂಡತಿ, ಮಗಳು, ಅಳಿಯ, ಸೋದರರು, ಸೋದರರ ಮಕ್ಕಳು ಇತ್ಯಾದಿ ಕುಟುಂಬ ವರ್ಗಗಳವರು ಒಟ್ಟಿಗೆ ಸೇರಿ ದಾನಗಳನ್ನು ನೀಡಿರುವುದು ಕಾಣಬರುವುದರಿಂದ, ಬಂಧುತ್ವದ ಸಹಬಾಳ್ವೆ ಸಮಾಜದಲ್ಲಿ ನಿಕಟವಾಗಿರಬೇಕು, ಅವಿಭಾಜ್ಯ ಕುಟುಂಬವ್ಯವಸ್ಥೆ ರೂಢಿಯದ್ದಿಲ್ಲಿರಬೇಕು ಎಂದು ಹೇಳಬಹುದಾಗಿದೆ.

ಸ್ತ್ರೀಯರ ಸ್ಥಾನ ಸಮಾಜದಲ್ಲಿ ಗಣ್ಯವಾಗಿತ್ತು. ಅವರು ಸ್ವಂತ ಆಸ್ತಿಯನ್ನೂ ಹೊಂದಿರಬಹುದಾಗಿತ್ತು. ಹಲವು ಶಾಸನಗಳಲ್ಲಿ ಸ್ತ್ರೀಯರನ್ನು ಗೌರವಯುತವಾಗಿ ಉಲ್ಲೇಖಿಸಿರುವುದಲ್ಲದೆ, ಅವರೇ ಸ್ವಂತವಾಗಿ ದಾನದತ್ತಿಗಳನ್ನು ನೀಡಿರುವ ಉಲ್ಲೇಖಗಳೂ ದೊರಕುತ್ತವೆ.[209]

ವ್ಯಕ್ತಿಗಳು ದಿನನಿತ್ಯದ ವ್ಯವಹಾರಗಳಲ್ಲಿ ಸ್ಮೃತಿಸಿದ್ಧದಾದ ನೀತಿಸಂಹಿತೆಯನ್ನು ಅಳವಡಿಸಿಕೊಳ್ಳಬೇಕು ಎಂಬ ಭಾವನೆಯಿತ್ತು. ಪುರಾಣೋಕ್ತ ರಾಮ, ಭೀಮ, ಅರ್ಜುನ

ನಹುಷ, ಜನಮೇಜಯ ಇತ್ಯಾದಿ ವ್ಯಕ್ತಿಗಳು ಆದರ್ಶಪ್ರಾಯರಾಗಿದ್ದರೆಂಬುದನ್ನು ಹಿಂದೆಯೇ ಪ್ರಾಸಂಗಿಕವಾಗಿ ತಿಳಿಸಿದೆ.

ಗಂಡಸರ ಮತ್ತು ಹೆಂಗಸರ ಉಡುಗೆತೊಡುಗೆಗಳ ಬಗ್ಗೆ ಸಮಕಾಲೀನ ಶಿಲ್ಪಗಳು ಸಾಕ್ಷ್ಯ ಒದಗಿಸುತ್ತವೆ. ಈ ಕಾಲದ ಹೆಚ್ಚಿನ ಶಿಲ್ಪಗಳಲ್ಲಿ ಸ್ತ್ರೀಯರು ಸೊಂಟದ ಕೆಳಗಿನ ಭಾಗಕ್ಕೆ ಮಾತ್ರ ವಸ್ತ್ರ ಧರಿಸುತ್ತಿದ್ದರೆಂದು ಕಾಣುತ್ತದೆ. ಪುರುಷರು ವಸ್ತ್ರವನ್ನು ಕಚ್ಚೆಹಾಕಿ ಉಡುತ್ತಿದ್ದರು; ಕೆಲವೊಮ್ಮೆ ಉತ್ತರೀಯ ಧರಿಸುತ್ತಿದ್ದರು, ಪೇಟ ಇಟ್ಟು ಕೊಳ್ಳುತ್ತಿದ್ದರು.[210] ಸ್ತ್ರೀಪುರುಷರಿಬ್ಬರೂ ಓಲೆ, ಕಡಗ, ಬಳೆ, ಕಾಲಂದಿಗೆ, ಸರ ಇತ್ಯಾದಿ ಆಭರಣಗಳನ್ನು ಧರಿಸುತ್ತಿದ್ದರು. ಅಮರಾವತಿ ನಾಗಾರ್ಜುನಕೊಂಡ ಮೊದಲಾದ ಕಡೆಗಳಲ್ಲಿ ರಾಜರು ಮತ್ತು ರಾಜಕುಲದ ಸ್ತ್ರೀಯರು ಮದ್ಯ ಸೇವಿಸುತ್ತಿರುವುದು ಶಿಲ್ಪಿತವಾಗಿದೆ. ಅಲ್ಲದೆ ಅವರು ನೃತ್ಯ ಮತ್ತು ವಿಹಾರಗಳಲ್ಲೂ ನಿರತರಾಗುತ್ತಿದ್ದರು. ಹಾಲನ 'ಗಾಥಾ ಸಪ್ತಶತಿ'ಯಲ್ಲಿ ಸಾಮಾನ್ಯಜನರ ಸಮಕಾಲೀನ ಜೀವನ ಚಿತ್ರಣ ಉತ್ತಮವಾಗಿ ಮೂಡಿಬಂದಿದೆ.[211]

## ಸಾತವಾಹನೋತ್ತರ ಯುಗ (ಕ್ರಿ.ಶ. ೬೫೦ರ ವರೆಗೆ)

ಸಾತವಾಹನರ ಕಾಲದ ಹೊತ್ತಿಗೆ ಉತ್ತರಭಾರತದಲ್ಲಿ ಸಮಾಜದ ರೀತಿನೀತಿಗಳ ವ್ಯವಸ್ಥೆಗೆ ಸಂಬಂಧಿಸಿದಂತೆ ನಾರದ, ಬೃಹಸ್ಪತಿ, ಮನು, ಯಾಜ್ಞವಲ್ಕ್ಯ, ಕೌಟಿಲ್ಯ, ಭೀಷ್ಮ, ಆಶ್ವಲಾಯನ, ಆಪಸ್ತಂಬ ಮೊದಲಾದ ಹಲವರು ಅರ್ಥಶಾಸ್ತ್ರ, ದಂಡನೀತಿ, ವ್ಯಕ್ತಿನೀತಿ, ಕುಲನೀತಿ ಮೊದಲಾದ ಹಲವು ವಿಷಯಗಳಲ್ಲಿ ಸಾಕಷ್ಟು ಜಿಜ್ಞಾಸೆ ನಡಸಿ ಸನಾತನವಾಗಿ ಬಂದ ಅಭಿಪ್ರಾಯಗಳನ್ನು ಗ್ರಂಥರೂಪದಲ್ಲಿ ಕ್ರೋಡೀಕರಿಸಿದ್ದರು. ಇವುಗಳಲ್ಲಿ ಕಂಡುಬರುವ ವಿಷಯಗಳು ಮಹಾಭಾರತ ರಾಮಾಯಣಾದಿ ಕಾವ್ಯಗಳಲ್ಲೂ ಅನೇಕ ಪುರಾಣಗಳಲ್ಲೂ ಸೇರಿಹೋಗಿದ್ದು ರಾಜರಿಗೆ, ಸಾಮಾನ್ಯ ಜನರಿಗೆ ಅವು ಒಳ್ಳೆಯ ಮಾರ್ಗದರ್ಶಿಕೆಗಳಾಗಿ ಒದಗುತ್ತಿದ್ದವು. ಸಾತವಾಹನರ ಕಾಲದಲ್ಲೇ ಅಲ್ಪಸ್ವಲ್ಪವಾಗಿ ಪ್ರಭಾವಿಯಾಗಲಾರಂಭಿಸಿದ ಈ ವ್ಯವಸ್ಥೆಯನ್ನು ಸ್ಥಳೀಯರು ಕ್ರಮಕ್ರಮವಾಗಿ ಹೆಚ್ಚಿನ ಆಸ್ಥೆಯಿಂದ ಆ ಮುಂದಿನ ಯುಗದಲ್ಲಿ ಕೂಡ ಅಳವಡಿಸಿಕೊಂಡರು. ಸಿದ್ಧರೂಪರೇಷೆಗಳಿದ್ದ ಸಮಾಜವ್ಯವಸ್ಥೆ ಹೆಚ್ಚು ಬದಲಾವಣೆಗಳಿಲ್ಲದೆ ಕೇವಲ ೯ನೆಯ ಶತಮಾನದ ವರೆಗಷ್ಟೇ ಅಲ್ಲ, ಇತ್ತೀಚಿನವರೆಗೂ ನಡೆದುಬಂದುದನ್ನು ಕಾಣಬಹುದಾಗಿದೆ. ಆದ್ದರಿಂದ ಈ ಅಂಶಗಳು ಎಷ್ಟರಮಟ್ಟಿಗೆ ರೂಢಿತವಾಗಿತ್ತು. ಎಂಬುದನ್ನು ಸಮಕಾಲೀನ ಶಾಸನ ಇತ್ಯಾದಿ ಆಧಾರಗಳಿಂದ ನಿರೂಪಿಸುವುದೇ ಸಾಮಾಜಿಕ ಹಿನ್ನೆಲೆಯ ಅಧ್ಯಯನವಾಗುತ್ತದೆ.

ಸಮಾಜದ ರೀತಿನೀತಿಗಳು ಹೆಚ್ಚಿನಮಟ್ಟಿಗೆ ಆರ್ಥಿಕಸ್ಥಿತಿಯ ಮೇಲೆ ನಿಂತಿರುವಂಥದು. ಮೇಲಿನ ಸ್ಮೃತಿಕಾರರು ರೂಪಿಸಿದ ಸಾಮಾಜಿಕ ಮೌಲ್ಯ ಮತ್ತು ರೀತಿಗಳಿಗೆ ಅವರ ಕಾಲದಲ್ಲಿ ಅವರ ನಾಡಿನಲ್ಲಿ ರೂಢಿತವಾಗಿದ್ದ ಆರ್ಥಿಕ ವ್ಯವಸ್ಥೆಯೇ ಮುಖ್ಯ ಹಿನ್ನೆಲೆ

ಯಾಗಿರಬೇಕು. ಅಲ್ಲದೆ ಆ ಆರ್ಥಿಕ ವ್ಯವಸ್ಥೆಗೆ ಅನುಕೂಲಕರವಾಗಿಯೂ ಅವು ಇರಬೇಕು. ಕರ್ನಾಟಕದಲ್ಲಿ ಸ್ಮೃತಿಸಿದ್ಧ ಸಾಮಾಜಿಕ ರೀತಿನೀತಿಗಳು ಹರಡಿದುವು; ಎಂದರೆ ಇಲ್ಲಿಯೂ ಉತ್ತರಭಾರತದಲ್ಲಿ ಸ್ಮೃತಿಗಳ ಕಾಲದಲ್ಲಿದ್ದ ರೀತಿಯ ಆರ್ಥಿಕ ಸ್ಥಿತಿ ಇದ್ದಿರಬೇಕು ಎನ್ನಿಸುತ್ತದೆ.

ಕದಂಬ, ಗಂಗ, ಚಾಲುಕ್ಯ, ರಾಷ್ಟ್ರಕೂಟರ ರಾಜ್ಯ ವಿಸ್ತರಣೆ ಮೊದಲಾದ ಸಾಧನೆಗಳನ್ನು ಗಮನಿಸಿದರೆ[212] ದೇಶದಲ್ಲಿ ಈ ಕಾಲದಲ್ಲಿ ಭದ್ರವಾದ, ಸಮೃದ್ಧವಾದ ಆರ್ಥಿಕ ಸ್ಥಿತಿ ಮತ್ತು ವ್ಯವಸ್ಥೆಗಳು ಇದ್ದಂತೆ ತೋರುತ್ತವೆ. ಈ ಕಾಲದಲ್ಲೂ ವ್ಯವಸಾಯವೇ ಮುಖ್ಯವಾದ ಆರ್ಥಿಕ ಮೂಲವಾಗಿದ್ದಿತು; ಅನೇಕ ರೀತಿಯ ದಾನಗಳಲ್ಲಿ ಭೂಮಿದಾನವೇ ಅಧಿಕವಾಗಿ ಪ್ರಚುರವಾಗಿದ್ದಿತು. ಭೂಮಿ ಸ್ಥಿರ ಆಸ್ತಿ, ಸರ್ವಕಾಲದಲ್ಲೂ ಉತ್ಪನ್ನ ನೀಡಬಲ್ಲುದು ಎಂಬುದೇ ಇದಕ್ಕೆ ಕಾರಣ. ಈ ಕಾಲದಲ್ಲಿ ಭೂಮಿಯ ಗುಣಧರ್ಮಗಳನ್ನು ಅರಿತು ತಕ್ಕಂತೆ ಬೆಳೆಗಳನ್ನು ಇಡುವ ಪದ್ಧತಿ ಇದ್ದಿರಬೇಕು. ಕೆಂಪುಭೂಮಿ (ಕಿಸುಮಣ್ಣು), ಕರಿಭೂಮಿ, ಎರೆಭೂಮಿ, ಕಲ್ಲಭೂಮಿ, ಚೌಳುಭೂಮಿ, ಉಪ್ಪುಭೂಮಿ (ಖಜ್ಜಾಣ), ಮುಂತಾದ ನಾನಾರೀತಿಯ ನೆಲದ ವರ್ಣನೆಗಳು ಶಾಸನಗಳಲ್ಲಿ ಸಿಕ್ಕುತ್ತವೆ[213]. ನದಿ ಇತ್ಯಾದಿಗಳಿಂದ ನೀರಿನ ಆಸರೆಯನ್ನು ಪಡೆದ ಭೂಮಿಗಳು ಗಟ್ಟಿದ್ದ; ನೀರ್ಮಣ್ಣು ಎಂದೂ ಮಳೆಯ ಆಸರೆಯಿಂದಷ್ಟೇ ಆಬಾದಾಗುತ್ತಿದ್ದವು ಬೆದೆಮಣ್, ಬೆದ್ದಿಲೆ ಅಥವಾ ಬೆದ್ದಲೆ ಎಂದೂ ಕರೆಯಲ್ಪಡುತ್ತಿದ್ದುವು.[214] ಗದ್ದೆ ಹೊಲಗಳಲ್ಲಿ ನಾನಾ ರೀತಿಯ ಪೈರುಗಳನ್ನು ಬೆಳೆಯುತ್ತಿದ್ದರು. ೧ನೆಯ ಪುಲಕೇಶಿಯ ಒಂದು ಶಾಸನದಲ್ಲಿ ಅಲಕ್ತಕವೆಂಬ ನಗರ ರಾಜಧಾನಿಯಾಗಿದ್ದ ದೇಶ ಜಾತಿಯ ಬತ್ತ, ಕಬ್ಬು, ಬಟಗಡ್ಲೆ, ನವಣೆ, ಸಾಮೆ, ಗೋದಿ ಮೊದಲಾದ ಧಾನ್ಯಗಳಿಂದ ಸಮೃದ್ಧವಾಗಿ ಕೃಷೀವಲರಿಂದ (ಬೇಸಾಯಗಾರರು) ತುಂಬಿದ್ದಿತೆಂಬ ವರ್ಣನೆಯಿದೆ.[215] ಪ್ರತಿವರ್ಷವೂ ಬತ್ತ, ಗೋದಿಯಿಂದ ಪುನ್ನಾಟದೇಶ ತುಂಬುತ್ತಿತ್ತು ಎಂದು ೬ನೆಯ ಶತಮಾನದ ಒಂದು ಶಾಸನ ತಿಳಿಸುತ್ತದೆ.[216] ತೋಟಗಳೂ ಅರಣ್ಯದ ಉತ್ಪನ್ನಗಳೂ ಆದಾಯಮೂಲವಾಗಿದ್ದುವು. ಮೇಲೆ ಹೇಳಿದ ಶಾಸನದಲ್ಲಿಯೇ ಪುನ್ನಾಟದಲ್ಲಿ ಕಾವೇರಿ, ಕಪಿನೀ ನದಿಗಳ ದಡಗಳು ಕದಳಿ, ಕ್ರಮುಕ, ನಾಳಿಕೇರ, ಪನಸ, ಚಂಪಕ, ತಾಂಬೂಲ, ವಕುಲ, ಅಶೋಕ, ಪುನ್ನಾಗ, ನಾಗವೃಕ್ಷಗಳಿಂದ ತುಂಬಿತ್ತು ಎಂದು ಹೇಳಿದೆ. ರಾಷ್ಟ್ರಕೂಟರ ಕಾಲದಲ್ಲಿ ಜೋಳ, ಸಾಮೆಯ ಜೊತೆಗೆ ಹತ್ತಿಯೂ ಮುಖ್ಯಬೆಳೆಯಾಗಿದ್ದಿರಬೇಕೆಂದೂ ಕರ್ಣಾಟಕದ ಕಾಡಿನ ಶ್ರೀಗಂಧ, ತೇಗ ಮೊದಲಾದ ಮರಗಳನ್ನು ಹೊರದೇಶಗಳಿಗೂ ಕಳುಹಿಸುತ್ತಿದ್ದಿರಬೇಕೆಂದೂ ಅಳ್ತೇಕರ್ ಅವರು ಅಭಿಪ್ರಾಯಪಟ್ಟಿದ್ದಾರೆ.[217] ಒಕ್ಕಲುತನ ಜೀವನಕ್ಕೆ ಮಹತ್ವವಿದ್ದಾಗಿತ್ತು. ಚಾಲುಕ್ಯ ವಿನಯಾದಿತ್ಯನ ಒಂದು ಶಾಸನ ಹಲವು ದಾನಗಳನ್ನು ಕೊಟ್ಟ ವಿಷಯವನ್ನು ತಿಳಿಸಿ, ಅದನ್ನು ಕೆಡಿಸಿದವರ ಒಕ್ಕಲ್ತನ ಹಾಳಾಗಲಿ, ರಕ್ಷಿಸಿದವರ ಭೂಮಿ ಬೆಳೆಯಲಿ ಎಂದು ಹೇಳುತ್ತದೆ.[218]

ವ್ಯವಸಾಯದ ಅಭಿವೃದ್ಧಿಗೆ ರಾಜ್ಯದ ಪ್ರೋತ್ಸಾಹವೂ ಇರುತ್ತಿತ್ತು. ೮ನೆಯ ಶತ

ಮಾನದ ಚಂದ್ರವಳ್ಳಿ ಶಾಸನದಲ್ಲಿಯೇ ಮಯೂರಶರ್ಮನು ಕೆರೆಯೊಂದನ್ನು ಕಟ್ಟಿಸಿದ ವಿಷಯವಿದೆ.[219] ಕದಂಬ ರವಿಮಹಾರಾಜನ ಗುಡ್ನಾಪುರ ಶಾಸನದಲ್ಲಿ ಗುಡ್ಡತಟಾಕದ ಪ್ರಸ್ತಾಪವಿದೆ.[220] ಕಾಕುತ್ಸ್ಥವರ್ಮ ತಾಳಗುಂದದಲ್ಲಿ ಕೆರೆಯನ್ನು ಕಟ್ಟಿಸಿದ.[221] ಈ ಪ್ರವೃತ್ತಿ ಕಾಲಕಾಲಕ್ಕೆ ಮುಂದುವರಿದಿದ್ದು, ಇದರಿಂದಾಗಿ ಅನೇಕ ಸ್ಥಳಗಳು ಕೆರೆಕಟ್ಟೆಗಳಿಂದ ಶೋಭಿಸುತ್ತ, ದೇಶದ ಕೃಷಿಯುತ್ಪನ್ನಗಳು ಹೆಚ್ಚುತ್ತಿದ್ದಿರಬೇಕು. ೭೧೮ರ ಚಾಲುಕ್ಯ ವಿಜಯಾದಿತ್ಯನ ಶಿಗ್ಗಾಂವಿ ಶಾಸನದಲ್ಲಿ ದತ್ತವಾದ ಗುಡ್ಡಿಗೆಱೆ (ಗುಡಿಗೆರೆ) ಗ್ರಾಮದ ಸೀಮೆಗಳನ್ನು ಹೇಳುವಾಗ ತಪಸ್ವಿತಟಾಕ, ಪುಲವಾರತಟಾಕ, ಮಕ್ಕಣ ತಟಾಕ, ಅರಸಿತಟಾಕ, ವೆಣ್ಣೆತಟಾಕ, ಕಂಪೇರ ತಟಾಕ, ಕೋಡಿತಟಾಕ ಎಂಬ ಕೆರೆಗಳನ್ನು ಹೆಸರಿಸಿದೆ.[222] ಇದೇ ರೀತಿಯಲ್ಲಿ ಲರ್ಗ್ಯರ ಗಂಗ ರಾಚಮಲ್ಲನ ಒಂದು ಶಾಸನದಲ್ಲಿ ದತ್ತವಾದ ಭೂಮಿಯ ಎಲ್ಲೆಯಾಗಿ ಗಾವುಗುಡ್ಡತಟಾಕ, ಸುವರ್ಣಕಾರ ತಟಾಕ, ಸೀಗೆಗೆರೆ ತಟಾಕ, ರಜಕತಟಾಕ, ಮಾಹಕಾರ ತಟಾಕ, ವೈಕೊನ್ತತಟಾಕ, ತೋಣ್ಡಿಗೆಱೆ, ನೌಕ್ಕಿಗೆಱೆ, ತೇನನ್ದಾಕಗೆಱೆ, ಸಿರಿಕ್ಕಗಱೆ ತಟಾಕ, ನಲ್ಲೂರ್ತ್ತಟಾಕ, ಮದವಡಿತಟಾಕ–ಇವುಗಳನ್ನು ಹೇಳಿದೆ.[223] ಒಂದೇ ಸ್ಥಳದಲ್ಲಿ ಇಷ್ಟೊಂದು ಕೆರೆಗಳಿರುವುದರ ಆರ್ಥಿಕ ಪರಿಣಾಮವನ್ನು ಊಹಿಸಬಹುದು. ಈ ಕೆರೆಗಳ ಹೆಸರುಗಳನ್ನು ನೋಡಿದರೆ ಸಾಮಾನ್ಯವಾಗಿ ಗ್ರಾಮಗ್ರಾಮಕ್ಕೆ ಸೇರಿದಂತೆ ಕೆರೆಗಳಿದ್ದುವೆಂದೂ ಬಹುಶಃ ರಾಜನಲ್ಲದೆ ರಾಣಿ, ಸುವರ್ಣಕಾರ, ಮೊದಲಾದವರೂ ತಟಾಕ ನಿರ್ಮಾಣವನ್ನು ಕೈಗೊಳ್ಳುತ್ತಿದ್ದರೆಂದೂ ಊಹಿಸಬಹುದಾಗಿದೆ. ಅರಣ್ಯಭೂಮಿಯನ್ನು ಹೊಸದಾಗಿ ಸಾಗುವಳಿಗೆ ತಂದರೆ, ಅದರಿಂದ ರಾಜನಿಗೆ ಬರಬೇಕಾದ ಕರಗಳಿಗೆ ವಿನಾಯಿತಿ ನೀಡಲಾಗುತ್ತಿತ್ತು.[224] ಅಮೋಘವರ್ಷನ ೮೨೦ರ ಒಂದು ಶಾಸನದಲ್ಲಿ ಬ್ರಾಹ್ಮಣರೂ ಕೃಷಿಕರ್ಮದಲ್ಲಿ ನಿರತರಾಗುತ್ತಿದ್ದರೆಂದು ಉಲ್ಲೇಖವಿದೆಯಾದ್ದರಿಂದ ಕೃಷಿಯೂ ಶ್ರೇಷ್ಠವಾದ ಕಸುಬುಗಳಲ್ಲಿಯೇ ಪರಿಗಣಿತವಾಗಿತ್ತೆಂದು ಭಾವಿಸಬಹುದಾಗಿದೆ.

ವ್ಯವಸಾಯದ ಜೊತೆಗೇ ರೂಢವಾಗುತ್ತಿದ್ದುದು ಪಶುಸಂಪತ್ತು. ಗೋವು ಪವಿತ್ರವೆಂಬ ಭಾವನೆ ಅಂದಿನಿಂದಲೂ ರೂಢಿಯಲ್ಲಿತ್ತು. ಗೋವುಗಳಿಗಾಗಿ ಗೋಮಾಳವನ್ನು ವ್ಯವಸ್ಥೆ ಮಾಡುವುದರ ಬಗ್ಗೆಯೂ ಶಾಸನವೊಂದರಲ್ಲಿ ಮಾಹಿತಿ ಇದೆ. ಪುನ್ನಾಟ ದೇಶದಲ್ಲಿ ಮಹಿಷಿ, ಗೋ ಮತ್ತು ಅಶ್ವಗಳಿದ್ದುವು; ಅಲ್ಲಿಯ ಗ್ರಾಮಗಳಲ್ಲಿ ಕುಕ್ಕುಟಗಳು ಬಹುಸಂಖ್ಯೆಯಲ್ಲಿದ್ದುವು ಎಂಬ ವಿಷಯ ೬ನೆಯ ಶತಮಾನದ ಒಂದು ಶಾಸನದಲ್ಲೇ ಬಂದಿದೆ.[225] ರಾಷ್ಟ್ರಕೂಟರ ಕಾಲದ ಒಂದು ಶಾಸನದಲ್ಲಿ ಕುರುಬರ (ಗೊಟ್ಟೆರೆಯರ್) ಪ್ರಸ್ತಾಪವಿದೆ.[226]

ಕೃಷಿ, ಪಶುಪಾಲನೆಯಲ್ಲದೆ ಆರ್ಥಿಕ ಉತ್ಪಾದನರಂಗದಲ್ಲಿ ಇತರ ಅನೇಕ ಕಸುಬುಗಳೂ ಅನುಸರಣೆಯಲ್ಲಿ ಇದ್ದುವು. ಕರ್ಣಾಟಕದ ಬಹುಭಾಗದಲ್ಲಿ ಹತ್ತಿ ಬೆಳೆಯುವುದರಿಂದ ನೇಕಾರಿಕೆ ಮುಖ್ಯ ಉದ್ಯಮವಾಗಿರಬೇಕು. ಬಾದಾಮಿ, ಐಹೊಳೆ ಮುಂತಾದೆಡೆಗಳ ಶಿಲ್ಪಗಳನ್ನು ನೋಡಿದರೆ, ನಾನಾ ರೇಖಾಮಯ ಚಿತ್ರಗಳುಳ್ಳ ಬಟ್ಟೆಗಳು ಇದ್ದುವೆಂದು

ತಿಳಿಯುತ್ತದೆ. ೬ನೆಯ ಶತಮಾನದ ಲಕ್ಷ್ಮೇಶ್ವರದ ಒಂದು ಶಾಸನದಲ್ಲಿ ನೇಕಾರರು ಸಂಘವಾಗಿ ಸೇರಿ ತಾವು ನೆಯ್ದ ಬಟ್ಟೆಯಲ್ಲಿ ಒಂದು ಸೀರೆಗೆ ಒಂದು ಸಾಂಪು (ಗೇಣು) ಅಳತೆಯಂತೆ ದೇವಸ್ಥಾನಕ್ಕೆ ದಾನಮಾಡಿದ ಉಲ್ಲೇಖವಿದೆ.[227] ರೇಷ್ಮೆ ಮುಂತಾದ ನಯವಾದ ವಸ್ತ್ರಗಳನ್ನು ನೇಯುವ ಪಟ್ಟಗಾರರೂ ಇದ್ದರು. 'ಪಟ್ಟಗಾಱರ ಸೇಣಿ' ಯ ಹೆಸರು ೬ನೆಯ ಶತಮಾನದ ಒಂದು ಶಾಸನದಲ್ಲಿದೆ.[228] ಪುಲಿಗೆಱೆಯಲ್ಲಿ ಪಟ್ಟಗಾಱರು ಮೂರು ಕೇರಿಗಳಲ್ಲಿ ವಾಸಿಸುತ್ತಿದ್ದರಂತೆ.[229] ಸಮ್ಮಗಾಱರಿಗೆ ತೆರಿಗೆಯನ್ನು ಬಿಟ್ಟುಕೊಟ್ಟ ಪ್ರಸ್ತಾಪ ೭೫೩ರ ಒಂದು ಶಾಸನದಲ್ಲಿ ಬರುತ್ತದೆ.[230] ಸುವಣ್ಣಕಾರ ಮತ್ತು ವಿಶ್ವಕರ್ಮಾಚಾರ್ಯರ ಪ್ರಸ್ತಾಪ ಅನೇಕ ಗಂಗ ಶಾಸನಗಳಲ್ಲಿ ಬಂದಿವೆ. ನಾನಾವಿಧವಾದ ಕಸುಬುಗಳು ಆ ಕಾಲದಲ್ಲಿದ್ದುವೆಂಬುದಕ್ಕೆ ಇವು ಸೂಚಕಗಳಾಗಿವೆ.

ಸಮಕಾಲೀನ ಶಾಸನೋಲ್ಲೇಖಗಳು ತತ್ಕಾಲದ ವ್ಯಾಪಾರ ವ್ಯವಹಾರಗಳ ಬಗ್ಗೆ ಸಾಕಷ್ಟು ಬೆಳಕು ನೀಡುವುದಿಲ್ಲವಾದರೂ, ಪ್ರಾಚೀನ ಕರ್ನಾಟಕದಲ್ಲಿ ಇದು ಬಹುಮುಖವಾಗಿದ್ದಿರಬೇಕೆಂದು ಕೆಲವು ಸಾಕ್ಷ್ಯಗಳಿಂದ ಹೇಳಬಹುದಾಗಿದೆ. ಈ ಕಾಲದಲ್ಲಿ ಹಿಂದಿನಂತೆಯೇ ವ್ಯಾಪಾರಿಗಳು ಈ ದೇಶದಲ್ಲಿ ಹಾಗೂ ಹೊರದೇಶಗಳೊಡನೆ ವ್ಯಾಪಾರ ನಡಸುತ್ತಿದ್ದರು. ದುರ್ಗಮವಾದ ದಾರಿಗಳಲ್ಲಿ ನಡೆದು ಮಹಾಟವಿಗಳನ್ನೂ ದಾಟಿ ವ್ಯಾಪಾರ ನಡೆಸುತ್ತಿದ್ದ ಸಾರ್ಥವಾಹಗಳ ಪ್ರಸ್ತಾಪ, ೬೯೯ರ ಒಂದು ಶಾಸನದಲ್ಲಿ ಸಾಂದರ್ಭಿಕವಾಗಿ ಬಂದಿದೆ.[231] "ಕರ್ನಾಟಕವು ದಕ್ಷಿಣ ಹಿಂದುಸ್ಥಾನದ—ಕನ್ನಡ, ತೆಲುಗು, ತಮಿಳುನಾಡುಗಳ—ವ್ಯಾಪಾರದ ಕೇಂದ್ರವಾಗಿದ್ದು ವಾಣಿಜ್ಯದ ಸೂತ್ರಗಳು 'ಅಯ್ಯಾವೊಳೆಯಯ್ನೂರ್ವರ್ ಸ್ವಾಮಿಗಳ್' ಎಂದು ಹೊಗಳಲ್ಪಟ್ಟ ವ್ಯಾಪಾರ ಸಂಘದ ಅಧೀನದಲ್ಲಿದ್ದುವು. ಒಂದು ಊರಿನಿಂದ ಇನ್ನೊಂದು ಊರಿಗೆ ಸರಕುಗಳನ್ನು ಒಯ್ದು ವ್ಯಾಪಾರ ಮಾಡಲಿಕ್ಕೆ ಅಲ್ಲಲ್ಲಿ ಪಡಿಮೂಲೆಗಳಿದ್ದುವು. ನಾಡಿನಿಂದ ನಾಡಿಗೆ ಹೋಗಲಿಕ್ಕೆ ರಾಜಬೀದಿಗಳಲ್ಲಿ ಗುಂಪುಕಟ್ಟಿಕೊಂಡು ಹೋಗುವ ಸಾರ್ಥವಾಹರಿದ್ದರು. ಕಟ್ಟಡವಿಯಲ್ಲಿ ಬೆಲೆಯುಳ್ಳ ಸಾಮಾನುಗಳನ್ನು ಬಂಡಿಗಳಲ್ಲಿಯಾಗಲಿ ಕುದುರೆ ಕತ್ತೆಗಳ ಬೆನ್ನ ಮೇಲೆಯಾಗಲಿ ಒಯ್ಯುತ್ತಿದ್ದರು. ಸರಕುಗಳ ರಕ್ಷಣೆಗಾಗಿ ಈ ವ್ಯಾಪಾರದ ಸಂಘಗಳಿಗೆ ರಕ್ಷಕ ದಲವನ್ನು ಇಟ್ಟುಕೊಳ್ಳುವ ಅಧಿಕಾರವಿತ್ತು. ಇವು ಒಳ್ಳೆಯ ಶ್ರೀಮಂತ ಕೇಂದ್ರಗಳಾಗಿದ್ದರಿಂದ ವ್ಯಾಪಾರದ ಆಡಳಿತಕ್ಕಾಗಿ, ರಾಜರಿಗಿದ್ದಂತೆ ಇವುಗಳಿಗೂ ಸ್ವಾಯತ್ತವಾದ ಅಧಿಕಾರವಿತ್ತು. ಸಂಘದ ನಿಯಮಗಳನ್ನು ಗೊತ್ತುಮಾಡಿ ಸರಕುಗಳ ಬೆಲೆಯನ್ನು ದೇಶಕಾಲ ಪರಿಸ್ಥಿತಿಗನುಸರಿಸಿ ನಿರ್ಬಂಧಿಸಿ ಭಿನ್ನ ಭಿನ್ನ ಸ್ಥಳಗಳಿಗೆ ವಿಶಿಷ್ಟ ಸರಕುಗಳ ವ್ಯಾಪಾರಕ್ಕೆ ಅಪ್ಪಣೆಯನ್ನು ಕೊಡುವುದು ಸಂಘದ ಮುಖ್ಯ ಕಾರ್ಯವಾಗಿತ್ತು. ತಮ್ಮದೇ ಆದ ಟಂಕಸಾಲೆಗಳಲ್ಲಿ ನಾಣ್ಯಗಳನ್ನು ತಯಾರಿಸುವ ವಿಶೇಷ ಅಧಿಕಾರವೂ ಈ ವ್ಯಾಪಾರ ಸಂಘಗಳಿಗೆ ಇತ್ತು.[232] ಈ ಅಯ್ಯಾವೊಳೆ ಅಯ್ನೂರ್ವರ ಸಂಘದ ಪ್ರಸ್ತಾಪ ಸು. ೬೦೦ರ ಐಹೊಳೆಯ ಶಾಸನದಲ್ಲಿ ಮೊದಲು ಕಂಡುಬರುತ್ತದೆ ಎಂದು ಫ್ಲೀಟ್ ಅವರ ಅಭಿಪ್ರಾಯ. ಆದರೆ ಇದು ಅನುಮಾನದ ವಿಷಯ.[233] ಇದಕ್ಕಿಂತ

ಹಿಂದೆಯೇ ವ್ಯಾಪಾರಸಂಘಗಳಿದ್ದುದಕ್ಕೆ ಉಲ್ಲೇಖಗಳು ದೊರಕುತ್ತವೆ. ಗಂಗ ಶ್ರೀಪುರುಷನ ಒಂದು ಶಾಸನದಲ್ಲಿ (೭೫೦)"ಅಯ್ವದಿಮ್ಬರುಂ ನಕರಮುಂ ಸೇಣಿಯುಂ" ಕೂಡಿ ದಾನ ನೀಡಿದ ವಿಷಯವಿದೆ.[234] ೭೧೦-೧೧೧ರ ಒಂದು ಶಾಸನದಲ್ಲಿ ನಗರ ಮಹಲ್ಲಕರನ್ನು (ನಗರಶ್ರೇಷ್ಠಿಗಳು) ಹೆಸರಿಸಲಾಗಿದೆ.[235]

ಚಾಲುಕ್ಯರೂ ರಾಷ್ಟ್ರಕೂಟರೂ ನಡಸಿದ ಕ್ಷಾತ್ರಸಾಧನೆಗಳನ್ನು ನೋಡಿದರೆ ಅವರ ಸೈನ್ಯಗಳ ನಡೆಗೆ ಅನುಕೂಲವಾಗುವ ಉತ್ತಮರಸ್ತೆ ಸಂಪರ್ಕಗಳಿದ್ದಿರಬೇಕೆನಿಸುತ್ತದೆ.[236] ಇವು ವ್ಯಾಪಾರಕ್ಕೂ ಅನುಕೂಲಕರವಾಗಿರಬೇಕು. ಮುಂದಿನ ಕಾಲದ ಹಲವು ಶಾಸನಗಳಲ್ಲಿ ರಾಜಪಥ, ಹೆಬ್ಬಟ್ಟೆ ಅಥವಾ ಬಟ್ಟೆ(ಹಾದಿ)ಯ ಪ್ರಸ್ತಾಪಗಳು ಸಿಕ್ಕುತ್ತವೆ.[237] ಎತ್ತಿನ ಬಂಡಿಗಳೂ ಎತ್ತು, ಕತ್ತೆ, ಕೋಣ, ಕುದುರೆ ಮುಂತಾದುವೂ ಸಾಮಾನು ಸಾಗಣೆಗೆ ಉಪಯೋಗದಲ್ಲಿದ್ದವೆಂದು ತೋರುತ್ತದೆ.[238] ಹೊರನಾಡುಗಳೊಡನೆ ಜಲ ಮಾರ್ಗವಾಗಿ ವ್ಯಾಪಾರ ನಡೆಯುತ್ತಿತ್ತು. ೬ನೆಯ ಶತಮಾನದಲ್ಲಿ ಪಶ್ಚಿಮ ಕರಾವಳಿಯನ್ನು ಸಂದರ್ಶಿಸಿದ ಅಲೆಕ್ಸಾಂಡ್ರಿಯದ ವರ್ತಕ ಕಾಸ್ಮೋಸ್ ಇಂಡಿಕೋಪ್ಲೂಸ್ಟಸ್ ಮಂಗಳೂರು ಮುಂತಾದ ಬಂದರುಗಳನ್ನು ಹೆಸರಿಸಿದ್ದಾನೆ.[239] ರಾಷ್ಟ್ರಕೂಟ ಅರಸರ ಕಾಲದಲ್ಲಿ ಅರಬ್ ದೇಶದಿಂದ ಬಂದ ಕೆಲವರು ಪಶ್ಚಿಮತೀರದಲ್ಲಿ ನೆಲಸಿದ್ದರು. ಕದಂಬ, ಗಂಗ, ಚಾಲುಕ್ಯ, ರಾಷ್ಟ್ರಕೂಟ ಅರಸರ ಕಾಲಗಳಲ್ಲಿ ಕರ್ಣಾಟಕವು ಪರ್ಷಿಯ, ಸಿಂಹಳ, ಇಂಡೊನೇಷ್ಯ, ಮಲಯ, ಬರ್ಮ, ಸಯಾಮ್, ಕಾಂಬೋಡಿಯ, ವಿಯೆಟ್ನಾಮ್ ದೇಶಗಳೊಡನೆ ಹಲವು ರೀತಿಯ ಸಂಪರ್ಕಗಳನ್ನು ಹೊಂದಿತ್ತು.[240] ಸಹಜವಾಗಿಯೇ ಆ ದೇಶಗಳೊಡನೆ ವ್ಯಾಪಾರ ಸಂಬಂಧವೂ ಇದ್ದಿರಬಹುದು.

ರಾಜರು, ರಾಜ್ಯದ ಆಡಳಿತಗಾರರು ವ್ಯಾಪಾರಕ್ಕೆ ಅನುಕೂಲಮಾಡಿಕೊಡುತ್ತಿದ್ದರು. ರಸ್ತೆಗಳನ್ನು ನಿರ್ಮಿಸುವುದೂ ವ್ಯಾಪಾರಿಗಳಿಗೆ ರಕ್ಷಣೆಯೊದಗಿಸುವುದೂ ರಾಜ್ಯದ ಕರ್ತವ್ಯವಾಗಿರಬೇಕು. 'ಕದಂಬರ ಕಾಲದ ಒಂದು ಶಾಸನದಲ್ಲಿ ನನ್ದಪದವೆಂಬ ಪಥವನ್ನೂ ಕರ್ಣ್ಣೇಸಕ ಎಂಬ ನದಿಗೆ ಕಟ್ಟಿಸಿದ ಸೇತುವೆಯನ್ನೂ ಪ್ರಸ್ತಾಪಿಸಿದೆ.[241] ಅಳತೆ ತೂಕಗಳು ರಾಜಮಾನ್ಯತೆ ಪಡೆದವಾಗಿರಬೇಕಿತ್ತು. ಕುಱುಗೋಡು ಎಂಬ ಊರಿನಲ್ಲಿ ೧೮ ಗೇಣಿನ ಕೋಲನ್ನು ಉಪಯೋಗಿಸಬೇಕೆಂದು ರಾಜನು ಶಾಸನವನ್ನು ಹೊರಡಿಸಿದ್ದನೆಂದು ಸು. ೭೫೦ರ ಒಂದು ಶಾಸನ ತಿಳಿಸುತ್ತದೆ. ಅಳತೆ ತೂಕಗಳಲ್ಲಿ ಮೋಸ ನಡೆದರೆ ರಾಜರೂ ಅಧಿಕಾರಿಗಳೂ ಮೋಸಮಾಡುವವರನ್ನು ಶಿಕ್ಷೆಗೆ ಗುರಿಪಡಿಸುತ್ತಿದ್ದರು.[242] ರಾಜರು ವಿವಿಧ ಮೌಲ್ಯದ ನಾಣ್ಯಗಳನ್ನು ಹೊರಡಿಸುತ್ತಿದ್ದರು. ಇವು ವ್ಯಾಪಾರ ವಿನಿಮಯಕ್ಕೆ ಸಹಾಯಕವಾಗಿದ್ದುವು. ದ್ರಮ್ಮ, ಸುವರ್ಣ, ಗದ್ಯಾಣಕ, ಕಳಂಜು, ಕಾಸು ಈ ಹೆಸರಿನ ನಾಣ್ಯಗಳು ಪ್ರಚಾರದಲ್ಲಿದ್ದುವು.[243] ಸು. ೭೫೦ರ ಒಂದು ಶಾಸನ 'ನವಿಲಪೊನ್' ಎಂಬ ನಾಣ್ಯವನ್ನು ಹೆಸರಿಸಿದೆ.[244] ಈ ಅರಸರು ಹೊರಡಿಸಿದ ಅನೇಕ ನಾಣ್ಯಗಳು ದೊರಕಿವೆ.[245]

ಕೃಷಿ, ಕಸಬುಗಳು, ವ್ಯಾಪಾರ ವಾಣಿಜ್ಯ ಇವುಗಳಿಂದ ಆರ್ಥಿಕ ಸಂಪತ್ತು ಅಭಿವೃದ್ಧಿಯಾಗುತ್ತಿದ್ದರ ಫಲಿತವಾಗಿ ಈ ದೇಶದಲ್ಲಿ ನಗರ ಘಟ್ಟದ (urban) ಸ್ಥಿತಿ ಚೆನ್ನಾಗಿ

ನೆಲೆಗೊಂಡಿತ್ತು. ಈ ಹಿಂದಿನ ಕಾಲಗಳಲ್ಲಿ ಎಲ್ಲೋ ಅಲ್ಲೊಂದು ಇಲ್ಲೊಂದು ನಗರಗಳಿದ್ದರೆ ಈ ಕಾಲದಲ್ಲಿ ಅವುಗಳ ಸಂಖ್ಯೆ ಹೆಚ್ಚಿತ್ತು. ರಾಜಧಾನಿಗಳಾಗಿದ್ದ ಬನವಾಸಿ, ತಲಕಾಡು, ಬಾದಾಮಿ, ಮಳಖೇಡಗಳಲ್ಲದೆ ಹಲಸಿ, ತಾಳಗುಂದ, ಉಚ್ಚಂಗಿ, ಮಣ್ಣೆ, ಐಹೊಳೆ, ಪಟ್ಟದಕಲ್ಲು, ಪುರಿಗೆರೆ(ಲಕ್ಷ್ಮೇಶ್ವರ), ಪಂಪಾತೀರ್ಥ (ಹಂಪೆ), ಹರೇಶಪುರ (ಹರಿಹರ), ಸೊರಟೂರು, ಮುಳಗುಂದ, ಮುದುಗುನ್ದೂರು, ಹೇಮಾವತಿ, ಮಂಗಳಾಪುರ ಮೊದಲಾದ ಹಲವು ಊರುಗಳೂ ತೀರ್ಥಕ್ಷೇತ್ರಗಳೂ ಬೆಳೆದಿದ್ದುವು. ಇಂಥ ಸ್ಥಳಗಳಲ್ಲಿ ಸಹಜವಾಗಿ ಸ್ಥಿತಿವಂತರಾದ, ಕಲೆ ಸಾಹಿತ್ಯಗಳಿಗೆ ಪ್ರೋತ್ಸಾಹ ನೀಡಬಲ್ಲ, ಅಂಥವಕ್ಕೆ ಸಾಕಷ್ಟು ವ್ಯವಧಾನವಿರುವ, ಆ ರೀತಿಯ ಪ್ರವೃತ್ತಿ ವ್ಯಕ್ತಿಗಳ ಮತ್ತು ಸಾಮಾಜಿಕ ಮಟ್ಟದ ಔನ್ನತ್ಯದ ಅಳತೆಗೋಲೆಂದು ಭಾವಿಸಿದ್ದ ಜನ ಸಾಕಷ್ಟು ಸಂಖ್ಯೆಯಲ್ಲಿ ಇದ್ದಿರಬೇಕು. ಎಂದರೆ ಶಿಷ್ಟಸಾಹಿತ್ಯದ ಬೆಳೆವಣಿಗೆಗೆ ಆವಶ್ಯಕವಾದ ಆರ್ಥಿಕ-ಸಾಮಾಜಿಕ ಪರಿಸರ ಅಲ್ಲಿ ಇದ್ದಿತೆಂದು ಹೇಳಬಹುದು.

ರಾಜ್ಯವ್ಯವಸ್ಥೆ : ಅಂದಿನ ರಾಜಕೀಯ ವ್ಯವಸ್ಥೆಯಲ್ಲಿ ಕೇಂದ್ರ ಮತ್ತು ಸ್ಥಳೀಯ ಆಡಳಿತದಲ್ಲಿ ನಿರತರಾಗಿದ್ದು ಆರ್ಥಿಕ ಬಲವನ್ನು ಹೊಂದಿ ಸಾಹಿತ್ಯಸೃಷ್ಟಿ ಮತ್ತು ಪೋಷಣೆಗಳಿಗೆ ಅನುವಾಗಬಲ್ಲ ವ್ಯಕ್ತಿ, ವರ್ಗಗಳು ಇರುವುದಕ್ಕೆ ಸಹಾಯಕವಾಗಿತ್ತು. ರಾಜ್ಯದ ನೇತಾರರಾಗಿದ್ದ ರಾಜರು ಸಾಹಿತ್ಯ ಕಲೆಗಳಿಗೆ ಹಿಂದಿನಿಂದಲೂ ಪ್ರೋತ್ಸಾಹ ನೀಡುತ್ತ ಬಂದಿದ್ದಾರೆ. ಸಾಹಿತ್ಯ ಮತ್ತು ವಿದ್ವತ್ ಪ್ರೇಮ ಅವರ ಹಿರಿಮೆಯನ್ನು ಸೂಚಿಸುವ ಒಂದು ಅಂಶವಾಗಿತ್ತು. ಕದಂಬ ರಾಜರು 'ಪ್ರತಿಕೃತ ಸ್ವಾಧ್ಯಾಯ ಚರ್ಚಾಪಾರಗ'ರಾಗಿದ್ದರು.[246] 'ವಿದ್ವತ್ಸುಹೃಜ್ಜನಮನಃಕುಮುದಕೌಮುದೀ ಶಶಾಙ್ಕಭೃತ್' ಎಂದು ಕದಂಬ ವಿಷ್ಣುವರ್ಮ ತನ್ನನ್ನು ಕರೆದುಕೊಂಡಿದ್ದಾನೆ.[247] ಹರಿವರ್ಮ 'ವಿದ್ವನ್ಮತಿಸುವರ್ಣನಿಕಷ',[248] ಗಂಗ ಮಾಧವನು 'ವಿದ್ವತ್ಕವಿಕಾಞ್ಚನನಿಕಷ', ಅವಿನೀತನು 'ವಿದ್ವತ್ಸುಪ್ರಥಮಗಣ್ಯ', ದುರ್ವಿನೀತ 'ಕಿರಾತಾರ್ಜುನೀಯ'ದ ಪಞ್ಚದಶಸರ್ಗಕ್ಕೆ ಟೀಕೆ ಬರೆದವನು ಇಂಥ ಹಲವು ಉದಾಹರಣೆಗಳನ್ನು ಕೊಡಬಹುದು.

ರಾಜತ್ವ ವಂಶಪಾರಂಪರ್ಯವಾಗಿ ಬರುತ್ತಿದ್ದ ಆ ಕಾಲದಲ್ಲಿ ಚಿಕ್ಕಂದಿನಲ್ಲಿಯೇ ರಾಜಕುಮಾರರಿಗೆ ಯುವರಾಜ ಪಟ್ಟವನ್ನು ಕಟ್ಟುವ, ಇತರ ರಾಜಕುಮಾರರನ್ನೂ ಆಡಳಿತಕ್ಕೆ ತರಬೇತಿಗೊಳಿಸುವ ರೂಢಿ ಇದ್ದಿತಾಗಿ.[249] ಸಹಜವಾಗಿ ಮೊದಲಿನಿಂದಲೂ ಉತ್ತಮ ಶಿಕ್ಷಣವನ್ನು ಅವರಿಗೆ ನೀಡುವ ಪದ್ಧತಿ ಇತ್ತು. ಇಮ್ಮಡಿ ವಿಕ್ರಮಾದಿತ್ಯ ಬಾಲ್ಯದಲ್ಲೇ ಶಾಸ್ತ್ರ, ಶಸ್ತ್ರಗಳಲ್ಲಿ ಸುಶಿಕ್ಷಿತನಾಗಿದ್ದ.[250] ಮಂಗಳೇಶ ಶಾಸ್ತ್ರಗಳಲ್ಲಿ ಪರಿಣತನಾಗಿದ್ದ.[251] ವಿಜಯಾದಿತ್ಯ ವಿನಯಾದಿತ್ಯರೂ ಶೈಶವದಲ್ಲಿ ಅಸ್ತ್ರಶಸ್ತ್ರ ವಿದ್ಯೆಗಳಲ್ಲಿ ಪ್ರವೀಣರಾಗಿದ್ದರು. ಕಾಳಿದಾಸ ತಿಳಿಸುವ 'ಶೈಶವೇಭ್ಯಸ್ತವಿದ್ಯಾನಾಂ' ಎಂಬ ಸ್ಥಿತಿ ಈ ಕಾಲದಲ್ಲಿ ಚೆನ್ನಾಗಿ ರೂಢಿತವಾಗಿದ್ದಿತು. ಚಿಕ್ಕಂದಿನಲ್ಲಿಯೇ ಬೆಳಸಿದ ಈ ಗುಣ ಮುಂದೆ ಇವರು ರಾಜರೋ ಉನ್ನತ ಅಧಿಕಾರಿಗಳೋ ಆದಾಗ ವಿದ್ವತ್ಪ್ರೇಮಕ್ಕೆ, ಸಾಹಿತ್ಯ ಪೋಷಣೆಗೆ ಇವರನ್ನು ಹದಗೊಳಿಸುತ್ತಿದ್ದಿತು.

ರಾಣಿಯರೂ ರಾಜಕುಮಾರಿಯರೂ ಉನ್ನತ ಸ್ಥಾನಮಾನವನ್ನು ಹೊಂದಿರುತ್ತಿದ್ದರು. ಸಮಕಾಲೀನ ಶಾಸನಗಳ ಅಧ್ಯಯನದಿಂದ ತೋರಿಬರುವ ಒಂದು ಮುಖ್ಯಾಂಶವೆಂದರೆ ಆದಿ ಕದಂಬರ ಕಾಲದಲ್ಲಿ ಇವರ ಉಲ್ಲೇಖ ಅತಿ ಕಡಿಮೆ. ಆದರೆ ಚಾಲುಕ್ಯ, ರಾಷ್ಟ್ರಕೂಟ, ಗಂಗ ಅರಸರ ಕಾಲದಲ್ಲಿ ಹೆಚ್ಚು. ಚಾಲುಕ್ಯ ಚಂದ್ರಾದಿತ್ಯನ ರಾಣಿ ವಿಜಯಭಟ್ಟಾರಿಕೆ ಸ್ವಂತವಾಗಿ ಶಾಸನವನ್ನು ಹೊರಡಿಸಿದ್ದಾಳೆ. ಈಕೆ ಸ್ವತಃ ಕವಯಿತ್ರಿಯೂ ಆಗಿದ್ದಳು. ಚಾಲುಕ್ಯ ವಿಜಯಾದಿತ್ಯನ ತಂಗಿ ಕುಂಕುಮದೇವಿ ತನ್ನ ಅಣ್ಣನ ಜೊತೆಯಲ್ಲಿ ವಿಜಯ ಸ್ಕಂಧಾವಾರದಲ್ಲಿದ್ದು ಆತ ದಾನ ನೀಡಲು ಪ್ರೇರಕಳಾದಳು ಎಂದು ಒಂದು ಶಾಸನ ತಿಳಿಸುತ್ತದೆ. ವಿಜಯಾದಿತ್ಯನ ತಾಯಿ ವಿನಯವತಿ ಹಾಗೂ ವಿಕ್ರಮಾದಿತ್ಯನ ಇಬ್ಬರು ರಾಣಿಯರು ಸ್ವಂತವಾಗಿ ಬಾದಾಮಿ ಮತ್ತು ಪಟ್ಟದಕಲ್ಲುಗಳಲ್ಲಿ ದೇವಾಲಯಗಳನ್ನು ಕಟ್ಟಿಸಿದರು. ಲೋಕತಿನಿಮ್ಮಡಿ ಎಂಬುವಳು ಕುರುತ್ತಕುಂಟವನ್ನು ಆಳುತ್ತಿದ್ದಳು. ಅಮೋಘ ವರ್ಷನ ರಾಣಿ ಲೋಕತಿನಿಮ್ಮಡಿ ಹಾಗೂ ಶಂಖಾದೇವಿ, ಅಸಗವ್ವೆ ಇವರು ರಾಷ್ಟ್ರಕೂಟರ ಕಾಲದಲ್ಲಿ ಬೇರೆ ಬೇರೆ ಪ್ರದೇಶಗಳನ್ನು ಆಳುತ್ತಿದ್ದರು. ಗಂಗ ಶ್ರೀಪುರುಷ, ಬೂತುಗ, ರಾಚಮಲ್ಲ ಇವರ ರಾಣಿಯರು ರಾಜ ಯುವರಾಜರ ಜೊತೆಯಾಗಿಯೋ ಸ್ವಂತವಾಗಿಯೋ ಕೆಲವು ಪ್ರಾಂತ್ಯಗಳ ಮೇಲೆ ಅಧಿಕಾರ ನಡಸುತ್ತಿದ್ದರು ; ರಾಜನ ಜೊತೆಯಲ್ಲಿ ವಿಜಯಯಾತ್ರೆಯಲ್ಲಿ-ಭಾಗವಹಿಸುತ್ತಿದ್ದರು. ಸ್ವಂತವಾಗಿ ದಾನ ಧರ್ಮಗಳನ್ನು ಮಾಡುತ್ತಿದ್ದರು. ಈ ವಿಷಯಗಳು ಅನೇಕ ಶಾಸನಗಳಿಂದ ತಿಳಿದಿವೆ.[253]

ರಾಜ್ಯದ ವ್ಯವಸ್ಥೆಯಲ್ಲಿ ರಾಜನೇ ಮುಖ್ಯನಾದರೂ ಆಡಳಿತ ನಿರ್ವಹಣೆಗಾಗಿ ಅವನು ಅನೇಕರನ್ನು ನಿಯಮಿಸಿಕೊಳ್ಳಬೇಕಾಗಿತ್ತು. ರಾಜನೀತಿಗೆ ಸಂಬಂಧಿಸಿದ ಅನೇಕ ಗ್ರಂಥಗಳಲ್ಲಿ ರಾಜನು ಮಂತ್ರಿಮಂಡಲವನ್ನು ರಚಿಸಿಕೊಂಡು, ಅವರ ಸಲಹೆಯಿಂದ ರಾಜ್ಯದ ರೀತಿ ನೀತಿಗಳನ್ನು ತೀರ್ಮಾನ ಮಾಡಬೇಕೆಂದೂ ಅಂಥ ಮಂತ್ರಿಗಳು ಸ್ವತಃ ಪ್ರಾಮಾಣಿಕರೂ ವಿದ್ಯಾವಂತರೂ ಆಗಿರಬೇಕೆಂದೂ ಅಂಥವರನ್ನಷ್ಟೇ ಮಂತ್ರಿಗಳಾಗಿ ಆಯ್ದುಕೊಳ್ಳಬೇಕೆಂದೂ ಹೇಳಿದೆ. ಆದರೆ ಪ್ರಸ್ತುತ ಕಾಲದ ಕರ್ಣಾಟಕದಲ್ಲಿ ಆ ರೀತಿಯ ಮಂತ್ರಿಮಂಡಳ ವ್ಯವಸ್ಥೆ ಇದ್ದ ಬಗ್ಗೆ ನೇರ ಆಧಾರಗಳು ದೊರಕುವುದಿಲ್ಲ. ಕದಂಬ ರಾಜರು ಆಡಳಿತಕ್ಕೆ ಸಂಬಂಧಿಸಿದಂತೆ ವೃದ್ಧರ ಉಪದೇಶಗಳನ್ನು ಗ್ರಹಿಸುತ್ತಿದ್ದರೆಂಬುದು 'ವೃದ್ಧೋಪದೇಶ ಗ್ರಾಹೀ' ಎಂಬ ಮಾತಿನಿಂದ ತಿಳಿಯುತ್ತದೆ. ಹರಿವರ್ಮನಿಗೆ ಅವನ ಕಕ್ಕ ಶಿವರಥನೂ ಇಮ್ಮಡಿ ಕೃಷ್ಣವರ್ಮನಿಗೆ ಹರಿದತ್ತಶ್ರೇಷ್ಠಿಯೂ ಮೃಗೇಶವರ್ಮನಿಗೆ ಧರ್ಮನನ್ದ್ಯಾಚಾರ್ಯ ಮತ್ತು ರವಿನನ್ದ್ಯಾಚಾರ್ಯರೂ ಉಪದೇಶಕರಾಗಿದ್ದರು.[254] ಐಹೊಳೆ ಶಾಸನದ ರವಿಕೀರ್ತಿ ಇಮ್ಮಡಿ ಪುಲಕೇಶಿಯ ನಿಕಟವರ್ತಿಯಾಗಿದ್ದ.[255] ಆದರೆ ಇವರೆಲ್ಲ ಮಂತ್ರಿಗಳ ಸ್ಥಾನಮಾನವನ್ನು ಹೊಂದಿದ್ದರೇ ಎಂಬುದು ಗೊತ್ತಾಗುವುದಿಲ್ಲ. ಆ ಕಾಲದಲ್ಲಿ ರಾಣಿ, ಯುವರಾಜ, ದಂಡಾಧಿಕಾರಿ, ಮಂತ್ರಿ, ಪುರೋಹಿತರಿದ್ದ ಪಂಚ ಪ್ರಧಾನ ವ್ಯವಸ್ಥೆ ಇದ್ದಿರಬಹುದೆಂಬ ಒಂದು ಸೂಚನೆ ಸಹ ಇದೆ.[256] ಯುವರಾಜರ ರಾಣಿಯರೂ ಆಡಳಿತದಲ್ಲಿ ಭಾಗವಹಿಸುತ್ತಿದ್ದರೆಂಬುದನ್ನು ಹಿಂದೆಯೇ ಸೂಚಿಸಿದ್ದೇವೆ. ಆದರೆ ಇತರರ

ವಿಷಯಗಳು ತಿಳಿಯುವುದಿಲ್ಲ. ಪುರೋಹಿತನ ಪ್ರಸ್ತಾಪ ಒಂದು ಶಾಸನದಲ್ಲಿ, ಯಾವುದೋ ಧಾರ್ಮಿಕ ಕಾರ್ಯ ನಿರ್ವಹಣೆಯ ಸಂಬಂಧದಲ್ಲಿ, ಒಂದು ಕಡೆ ಮಾತ್ರ ಬಂದಿದೆ. ರಾಷ್ಟ್ರಕೂಟರ ಕಾಲದಲ್ಲಿದ್ದ ಬಂಕೇಶ ಮೊದಲಾದ ಹಲವು ದಂಡನಾಯಕರ ಹೆಸರುಗಳು ತಿಳಿದಿವೆ. ಆದರೆ ಚಾಲುಕ್ಯ ಶಾಸನಗಳಲ್ಲಿ ಉಕ್ತರಾದ ಮಹಾಸಂಧಿವಿಗ್ರಹಿಗಳು ರಾಜ್ಯದ ಆಡಳಿತದಲ್ಲಿ ಮುಖ್ಯಪಾತ್ರವಹಿಸುತ್ತಿದ್ದ ಮಂತ್ರಿಗಳಾಗಿರಬಹುದು ಎನ್ನಿಸುತ್ತದೆ[257]. ಇವರು ವಿದೇಶಾಂಗ ವ್ಯವಹಾರಗಳ ಜೊತೆಗೆ ರಾಜಪತ್ರಗಳ ಮೇಲ್ವಿಚಾರಣೆಯನ್ನೂ ನೋಡಿಕೊಳ್ಳುತ್ತಿದ್ದರು. ಇವರಲ್ಲದೆ ಕೇಂದ್ರಾಡಳಿತಕ್ಕೆ ಸಂಬಂಧಪಟ್ಟಂತೆ ಭಂಡಾರಿ ಮೊದಲಾದ ಅಧಿಕಾರಿಗಳೂ ಇದ್ದಿರಬೇಕು.

ಕದಂಬರ ಕಾಲದಾರಭ್ಯ ರಾಜ್ಯ ವಿಸ್ತಾರಗೊಂಡ ಹಾಗೆ ವಿವಿಧ ಪ್ರದೇಶಗಳ ಆಡಳಿತವನ್ನು ನಡಸಲು ಅನುಕೂಲವಾಗುವಂತೆ ಅನೇಕ ಸಣ್ಣ ಸಣ್ಣ ವಿಭಾಗಗಳು ಏರ್ಪಟ್ಟಿದ್ದುವು. ಕದಂಬರ ಶಾಸನಗಳಲ್ಲಿ ಸುದ್ದಿಕುನ್ದೂರ ವಿಷಯ, ಸೇಂದ್ರಕ ವಿಷಯ, ವಳ್ಳಾವಿ ವಿಷಯ, ಕರವನ್ನಾಡ್ಗ ವಿಷಯ, ತಗರೆ ವಿಷಯ, ಮೊಗಲೂರು ವಿಷಯ, ಆಸನ್ದಿ ವಿಷಯ ಈ ಪ್ರಾಂತ್ಯಗಳ ಹೆಸರುಗಳು ಬರುತ್ತವೆ.[258] ಸಿನ್ದುಥಯಾ ರಾಷ್ಟ್ರ ಎಂಬುದು ಕದಂಬ ವಿಷ್ಣುಶರ್ಮನ ತಂಗಳಿ ಶಾಸನದಲ್ಲಿದೆ.[259] ಹಲ್ಮಿಡಿ ಶಾಸನದಲ್ಲಿ ನರಿದಾವಿಳೆ ನಾಡಿನ ಹೆಸರಿದೆ.[260] ಚಾಲುಕ್ಯ ಶಾಸನಗಳಲ್ಲಿ ಕೊಂಕಣವಿಷಯ,[261] ಸೆಡೆಕಲ್ಲಿ ವಿಷಯ[262], ಎಡೆವೊಳಲ್ ವಿಷಯ[263] (ಎಡೆವೊಳಲ್ ಭೋಗ)[264], ತುರನೂರ ವಿಷಯ,[265] ವೆಳ್ವೊಲ ವಿಷಯ,[266] ಪಾನುಂಗಲ್‌ವಿಷಯ[267] ಮೊದಲಾದ ವಿಭಾಗಗಳು ಕಂಡುಬರುತ್ತವೆ. ಹಾಗೆಯೇ ಗಂಗವಾಡಿ-೬೦೦೦,[268] ಪುನ್ನಾಟ-೬೦೦೦,[269] ಕೈವಾರ ವಿಷಯ,[270] ಮುದುಕೊಟ್ಟೂರು ವಿಷಯ,[271] ಕೊರಿಕುಂದವಿಷಯ,[272] ಮರುಕರ ವಿಷಯ (ಮರುಗರೆ ನಾಡು),[273] ಪರುವಿ ವಿಷಯ[274], ಎಡೆನಾಡು-೭೦[275] ಕೋಳಾಲವಿಷಯ[276] (ಕೊವಳಾಲನಾಡು-೩೦೦)[277] ಕೊಡಗುಂನ್ನಾಡು (ಕೊಡಗೂರ ವಿಷಯ)[278], ನೊಳಂಬಳಿಗೆ-೧೦೦೦[279], ನೀರ್ಗುನ್ದನಾಡು-೩೦೦[280], ಇಂಗಲ್ವಾಡಿ-೩೦೦[281], ಗಂಗವೂರ-೩೦[282], ನೆಲ್ಲಗುಂಡಿ-೧೨[283], ಬೆಳತ್ತೂರ್ನಾಡು[284], ಪನ್ನನಾಡು[285], ಪುಲ್ವರೆನಾಡು-೧೦೦೦[286], ಬೇಪೋಡು-೧೦೦೦[287], ಕುಣಿಗಲ್ನಾಡು[288] ಆಸಂದಿನಾಡು[289], ಕಪ್ಪಿಪ್ಪು-೧೭೦೦[290], ವಡಗರೆ-೩೦೦ (ವಡಗರೆನಾಡು)[291], ತಜಿತಕಾಡು-೨೫[292], ಸಿಂದನಾಡು-೮೦೦೦[293], ತಗರೆ-೭೦[294], ಮೂನ್ಯವಿಷಯ[295] (ಮುಶ್ಣೆ-೨೦೦[296]), ವಡುಗವಳಿ-೧೨೦೦೦[297] ಮೊದಲಾದ ಅನೇಕ ವಿಷಯಗಳ (ನಾಡುಗಳ) ಹೆಸರು ಗಂಗರ ಶಾಸನಗಳಲ್ಲಿವೆ. ರಾಷ್ಟ್ರಕೂಟ ರಾಜ್ಯದಲ್ಲಿ ರಾಷ್ಟ್ರ, ವಿಷಯ, ಭುಕ್ತಿ ಎಂಬ ವಿಭಾಗಗಳು ಇದ್ದುವು. ಸಿಹರಿ-೧೨, ಸೆಬ್ಬಿ-೩೦, ಆಲತಗೆ-೭೦, ಅರಿಕೊಟ್ಟಗ-೩೨೦ ಇತ್ಯಾದಿಗಳೂ[298], ಬನವಾಸಿ-೧೨೦೦೦[299], ಕೊವಳಾಲನಾಡು-೩೦೦[300], ಅಗಳಿ-೧೨[301] ಮೊದಲಾದುವೂ ಈ ಕಾಲದಲ್ಲಿದ್ದುವೆಂದು ತಿಳಿಯುತ್ತದೆ. ಹೀಗೆ ವಿಭಾಗವಾಗಿದ್ದ ನಾಡು–ವಿಷಯಗಳು ಅನೇಕ ಗ್ರಾಮಗಳಿಂದ ಕೂಡಿದ ಆಡಳಿತ ಘಟಕಗಳಾಗಿದ್ದುವು.

ಹಿಂದೆ ಉಕ್ತವಾದ ಹೆಸರುಗಳು ಆಯಾ ಘಟಕಗಳ ಮುಖ್ಯ ಊರುಗಳಾಗಿದ್ದು, ಅಲ್ಲಿ ಆ ನಾಡುಗಳ ಆಡಳಿತ ಕೇಂದ್ರಗಳು ಇದ್ದಿರಬೇಕೆಂದೂ ಸಹಜವಾಗಿ ಅವು ದೊಡ್ಡ ಊರುಗಳಾಗಿರಬಹುದೆಂದೂ ಊಹಿಸಬಹುದಾಗಿದೆ.

ಪ್ರಾಂತೀಯ ವಿಭಾಗಗಳಲ್ಲಿನ ಆಡಳಿತ ನಿರ್ವಹಣೆಗಾಗಿ ಹಲವು ಮಟ್ಟದ ಅಧಿಕಾರಿಗಳು ಇರುತ್ತಿದ್ದರು. ಇವರಲ್ಲಿ ಮುಖ್ಯರಾದವರು ಮಾಂಡಲಿಕರು. ಒಂದು ಅಥವಾ ಹಲವು ನಾಡುಗಳ ಮೇಲೆ ಇವರ ಆಧಿಪತ್ಯವಿರುತ್ತಿತ್ತು. ಆಡಳಿತ ರೀತಿ, ನಿರ್ವಹಣೆಯಲ್ಲಿ ಇವರು ರಾಜನ ತದ್ರೂಪಾಗಿದ್ದರು. ಪ್ರಾಂತೀಯ ಆಡಳಿತದಲ್ಲಿ ಹೆಚ್ಚುಕಡಿಮೆ ಸ್ವತಂತ್ರರಾಗಿದ್ದರು. ರಾಜ ಪರಮೋಚ್ಚನಾಗಿದ್ದು, ಇವರು ಅವನ ಸಾಮಂತರಾಗಿ ಅವನಿಗೆ ಕಾಲಕಾಲಕ್ಕೆ ಪೊಗದಿಯನ್ನೂ ಸಮಯ ಬಿದ್ದಾಗ ಸೈನ್ಯ ಸಹಾಯವನ್ನೂ ನೀಡಬೇಕಾಗಿದ್ದುದಷ್ಟೇ ವ್ಯತ್ಯಾಸ. ಈ ಪ್ರಾಂತ್ಯಾಧಿಕಾರಿಗಳಲ್ಲಿ ಕೆಲವರು ಕುಲಪರಂಪರೆಯಲ್ಲಿ ತಮ್ಮದೇ ಆದ ಭಾಗದ ಮೇಲೆ ಆಡಳಿತವನ್ನು ನಡಸುತ್ತಿದ್ದರು. ಹಾಗೆ ಇದ್ದ ಸಾಮಂತ ರಾಜಮನೆತನಗಳಲ್ಲಿ ಕೇಕಯ, ಸೇಂದ್ರಕ, ಸಾನ್ತರ, ಆಳುಪ, ನೊಳಂಬ, ಮೌರ್ಯ, ನಳ, ಬಾಣ ಮುಂತಾದವರನ್ನು ಹೆಸರಿಸಬಹುದು. ಕೆಲವು ಪ್ರಾಂತ್ಯಗಳ ಆಡಳಿತವನ್ನು ನಡಸಲು ರಾಜ ತನ್ನ ಸ್ವಂತ ಬಂಧುಗಳನ್ನೋ ನಿಷ್ಠಾವಂತರಾದ ಸಮರ್ಥ ಅಧಿಕಾರಿಗರನ್ನೋ ನಿಯಮಿಸುವ ರೂಢಿಯೂ ಇತ್ತು. ಚಾಲುಕ್ಯರಲ್ಲಿ ಕುಬ್ಜ ವಿಷ್ಣುವರ್ಧನ, ರಾಷ್ಟ್ರಕೂಟರಲ್ಲಿ ಸ್ತಂಭ ಮುಂತಾದವರು ಪ್ರಾಂತ್ಯಾಧಿಪತಿಗಳಾಗಿದ್ದುದು ಪ್ರಸಿದ್ಧ ವಿಷಯ. ರಾಷ್ಟ್ರಕೂಟ ೩ನೆಯ ಗೋವಿಂದನ ಕೈಕೆಳಗೆ ರಾಜಾದಿತ್ಯ ಬನವಾಸಿನಾಡನ್ನು ಆಳುತ್ತಿದ್ದ.[302] ಲೋಕಾದಿತ್ಯ ಬಂಕಾಪುರ ಪ್ರಾಂತ್ಯದ ಒಡೆಯನಾಗಿದ್ದ.[303] ಕದಂಬರ ಕಾಲದಲ್ಲಿ ದೇಶ ಮತ್ತು ಗ್ರಾಮಗಳ ಭೋಜಕರು[304], ಭೋಜರು[305], ಆಯುಕ್ತಕರು[306], ಸೇನಾಪತಿಗಳು ಪ್ರಾಂತ್ಯಗಳ ಆಡಳಿತದಲ್ಲಿದ್ದರು. ಚಾಲುಕ್ಯರ ಕಾಲದಲ್ಲಿ ವಿಷಯಪತಿ, ಸಾಮಂತ, ಗ್ರಾಮಭೋಗಿಕ, ಮಹತ್ತರ, ದೇಶಾಧಿಪತಿ, ರಾಜಪುರುಷ ಮುಂತಾದವರಿರುತ್ತಿದ್ದರು.[307] ವಿಷಯಪತಿ, ಭೋಗಪತಿ, ರಾಷ್ಟ್ರಪತಿ ಇವರುಗಳೂ ಪ್ರಾಂತ್ಯದ ಅಧಿಕಾರಿಗಳಾಗಿದ್ದರೆಂದು ರಾಷ್ಟ್ರಕೂಟ ಶಾಸನಗಳಿಂದ ತಿಳಿಯುತ್ತದೆ.[308] ಗಂಗರಾಜ್ಯದಲ್ಲಿ ಸಣ್ಣ ಪುಟ್ಟ ಭಾಗಗಳನ್ನು ಬೇರೆ ಬೇರೆಯವರ ಆಡಳಿತಕ್ಕೆ ಒಪ್ಪಿಸಿದಂತೆ ತೋರುತ್ತದೆ. ಗಂಗ ಶ್ರೀಪುರುಷನ ಕೈಕೆಳಗೆ ವಿಜಯಾದಿತ್ಯ ಆಸಂದಿ ನಾಡನ್ನು ಆಳುತ್ತಿದ್ದ. ಅವನ ಅಧೀನದಲ್ಲಿ ಎಬಿಮ್ಮನ್ ಎಂಬುವನು ಆಸನ್ದಿ ಊರನ್ನು ಆಳುತ್ತಿದ್ದ.[309] ನ್ರಿಪಮರಿ ಅರಸ ತಳಿಕುಮುರಿಯನ್ನು ಆಳುತ್ತಿದ್ದ.[310] ನೀರ್ಗುನ್ದನಾಡನ್ನು ನೀರ್ಗುನ್ದರಸರು[311] ಆಳುತ್ತಿದ್ದರು. ವಡಗರೆನಾಡು ಕುನ್ದಸತ್ತಿ ಅರಸರ ಅಧೀನದಲ್ಲಿತ್ತು ; ಅವರ ಸಾಮಂತ ಸಿಜ್ಗಡಿ ಅರಸ ಮುದುಗುನ್ದೂರನ್ನು ಆಳುತ್ತಿದ್ದ.[312] ಆಡಳಿತದಲ್ಲಿ ಸಣ್ಣ ಘಟಕಗಳಾಗಿದ್ದ ಗ್ರಾಮಗಳಲ್ಲಿ ಗ್ರಾಮಕ, ಗಾವುಣ್ಡ, ಪೆರ್ಗಡೆ ಇತ್ಯಾದಿ ಅಧಿಕಾರಿಗಳು ಇರುತ್ತಿದ್ದರು.

ರಾಜ್ಯ ಬೆಳೆದಂತೆಲ್ಲಾ, ರಾಜ್ಯದ ಸಂಪತ್ತು ಹೆಚ್ಚಿದಂತೆಲ್ಲಾ ಆಡಳಿತರಂಗವೂ ಹೀಗೆ ಬಹುಮುಖವಾಗಿ ಬೆಳೆಯುತ್ತಿದ್ದುದರಿಂದ ಅನೇಕ ನಾಡುಗಳಲ್ಲಿ ಮತ್ತು ಗ್ರಾಮ ನಗರ

ಗಳಲ್ಲಿ ಆಳ್ವಿಕೆ ನಡಸುತ್ತಿದ್ದವರ ಸಂಖ್ಯೆಯೂ ಹೆಚ್ಚುತ್ತ ಹೋಯಿತು. ಇವರು ತಮ್ಮ ಕರ್ತವ್ಯ ಪಾಲನೆಗಾಗಿ ರಾಜನಿಂದ ದತ್ತವಾದ ಸ್ವಂತ ಆಸ್ತಿಯನ್ನು ಹೊಂದಿರುತ್ತಿದ್ದರಲ್ಲದೆ ಅನೇಕ ರೀತಿಯ ತೆರಿಗೆಗಳನ್ನೂ ಸಂಗ್ರಹಿಸುತ್ತಿದ್ದುದರಿಂದ ಆರ್ಥಿಕವಾಗಿಯೂ ಸ್ಥಿತಿವಂತರಾಗಿರುತ್ತಿದ್ದರು. ಸಹಜವಾಗಿ ಹೀಗೆ ಬೆಳೆದ ಅಸಂಖ್ಯಾತ ಸಾಮಂತ ಮತ್ತು ಅಧಿಕಾರವರ್ಗದ ಜನ ಸಾಹಿತ್ಯದ ವಿಷಯದಲ್ಲಿ ಅಭಿಮಾನಿಗಳಾಗಿರಲು ಅವಶ್ಯವಾದ ಹೆಚ್ಚಿನ ಸಮಯ ಮತ್ತು ಧನವನ್ನು ಹೊಂದಿದವರಾಗಿದ್ದು ಸಾಹಿತ್ಯ ಪೋಷಕರಾಗಿರುವ ಸಾಧ್ಯತೆ ಇದೆ.

ವಿದ್ಯಾಭ್ಯಾಸ: ಪೋಷಣೆ ಮಾತ್ರವಲ್ಲದೆ ಶಿಷ್ಟ ಸಾಹಿತ್ಯದ ಸೃಷ್ಟಿಗೆ ಕಾರಣವಾಗುವುದು ಅದನ್ನು ನಿರ್ಮಿಸಬಲ್ಲ ಜನ. ಇಂಥ ಜನ ವಿದ್ಯಾವಂತವರ್ಗಕ್ಕೆ ಸೇರಿದವರು. ವಿದ್ಯೆಯ ಬಗ್ಗೆ ಗೌರವ ಅಭಿರುಚಿಗಳು, ವಿದ್ಯಾಭ್ಯಾಸದ ಪ್ರಸಾರ ಇವು ಹೆಚ್ಚಿದಷ್ಟೂ ಸಾಹಿತ್ಯಕೃತಿಗಳು ಸಂಖ್ಯೆಯಲ್ಲಿ ಹೆಚ್ಚುವುದಲ್ಲದೆ ಅವುಗಳ ಗುಣಮಟ್ಟವೂ ಹೆಚ್ಚುತ್ತದೆ. ದೇಶದಲ್ಲಿ ವಿದ್ಯಾಭ್ಯಾಸಕ್ಕೆ ಸಿಗುವ ಪ್ರೋತ್ಸಾಹಕ್ಕೂ ಸಾಹಿತ್ಯದ ಬೆಳೆವಣಿಗೆಗೂ ನೇರ ಸಂಬಂಧವಿರುತ್ತದೆ. ಪ್ರಾಚೀನ ಕಾಲದಲ್ಲಿ ವಿದ್ಯೆಗೆ ತಕ್ಕಮಟ್ಟಿನ ಪ್ರೋತ್ಸಾಹ ದೊರಕುತ್ತಿತ್ತು. ರಾಜರುಗಳೇ ವಿದ್ಯಾಪ್ರೇಮಿಗಳೂ ಸ್ವತಃ ವಿದ್ಯಾವಂತರೂ ಆಗಿರುತ್ತಿದ್ದರೆಂಬುದನ್ನು ಹಿಂದೆಯೇ ಸೂಚಿಸಿದೆ.[313] ರಾಜನ ಅನುಚರ ಅಧಿಕಾರವರ್ಗವೂ ಈ ವಿಷಯದಲ್ಲಿ ರಾಜನನ್ನು ಅನುಸರಿಸುತ್ತಿತ್ತು. ಸಮಾಜದಲ್ಲಿ ಉನ್ನತ ಮಟ್ಟದವರೆಂದು ಪರಿಗಣಿತರಾಗಿದ್ದ ಈ ವರ್ಗದವರ ರೀತಿನೀತಿಗಳನ್ನೂ ನಡೆವಳಿಕೆಗಳನ್ನೂ ಸಾಧ್ಯತೆ ಇರುವ ಇತರ ಸ್ಥಿತಿವಂತ ಜನವರ್ಗಗಳವರೂ ಅನುಕರಿಸುವುದು ಲೋಕರೂಢಿ. ಹೀಗಾಗಿ ಇಂಥ ವರ್ಗಗಳಲ್ಲಿ ಸಾಕಷ್ಟು ವಿದ್ಯಾಪ್ರಸಾರವಾಗುತ್ತಿದ್ದ ಸಾಧ್ಯತೆ ಇದೆ. ನಗರಘಟ್ಟದ ಸಮಾಜವ್ಯವಸ್ಥೆ ರೂಢಿತವಾಗಿ ಈ ವರ್ಗಗಳು ರೂಪುಗೊಂಡಾಗಿನಿಂದ ಈ ಸ್ಥಿತಿಯ ಬೆಳೆವಣಿಗೆ ಎಂದು ಹೇಳಬಹುದು. ವಿದ್ಯಾವಂತರ ಸಂಖ್ಯಾಪ್ರಮಾಣ ತತ್ಕಾಲದಲ್ಲಿದ್ದ ಈ ಮೇಲಿನ ವರ್ಗಗಳ ಪ್ರಮಾಣಕ್ಕೆ ಅನುಗುಣವಾಗಿರುತ್ತದೆ.

ಗ್ರಂಥರೂಪದಲ್ಲಿರುವ ಶಿಷ್ಟ ಸಾಹಿತ್ಯದ ಉಗಮಕ್ಕೆ ಮೂಲಭೂತವಾದುದು ಅಕ್ಷರ ವಿದ್ಯೆ. ಅಶೋಕನ ಶಾಸನಗಳು ಕರ್ನಾಟಕದಲ್ಲಿ ಬರಹದ ಕಲೆ ಇದ್ದ ಬಗ್ಗೆ ದೊರಕುವ ಅತ್ಯಂತ ಪ್ರಾಚೀನ ದಾಖಲೆಗಳು. ಕ್ರಿ.ಪೂ. ೩ನೆಯ ಶತಮಾನದ ಈ ಶಾಸನಲೇಖಗಳು ಉತ್ತರ ಭಾರತದಲ್ಲಿ ಆ ವೇಳೆಗಾಗಲೇ ಪ್ರಚಲಿತವಾಗಿದ್ದ ಬ್ರಾಹ್ಮೀಲಿಪಿಯಲ್ಲಿವೆ. ಈ ಸ್ಥಿತಿಯನ್ನು ನೋಡಿದರೆ ಉತ್ತರ ಭಾರತದೊಡನೆ ಆರ್ಥಿಕ-ರಾಜಕೀಯ ಸಂಪರ್ಕಗಳು ಬೆಳೆಯುತ್ತಿದ್ದಂತೆಯೇ ದಿನನಿತ್ಯದ ವ್ಯವಹಾರಗಳಿಗಾಗಿ ಈ ನಾಡಿನಲ್ಲೂ ಲಿಪಿಯ ಆವಶ್ಯಕತೆ ಉಂಟಾಗಿ, ಇತರ ಅಂಶಗಳೊಡನೆ ಬರೆವಣಿಗೆಯ ಕಲೆಯೂ ಉತ್ತರ ಭಾರತದಿಂದ ಇಲ್ಲಿಗೆ ಹರಡಿರಬೇಕೆನ್ನಿಸುತ್ತದೆ. ಅಶೋಕನ ಕಾಲದಲ್ಲಷ್ಟೇ ಇಲ್ಲಿ ಲಿಪಿಪ್ರಸಾರವಾರಂಭವಾಗಿರಬಹುದೇ ಎನ್ನುವುದು ಒಂದು ಕ್ಲಿಷ್ಟವಾದ ಪ್ರಶ್ನೆ. ಬಂಡೆಗಳ ಮೇಲೆ ಕೊರೆದ ಅಶೋಕನ ಶಾಸನಗಳ ಉದ್ದೇಶ ಜನ ಅವನ್ನು ಓದಿ ಅರ್ಥಮಾಡಿಕೊಳ್ಳಲಿ ಎಂಬುದೇ

ಆದ್ದರಿಂದ, ಆ ಹೊತ್ತಿಗೆ ಸ್ಥಳೀಯ ಜನರಲ್ಲಿ ಕೆಲವರಿಗಾದರೂ ಲಿಪಿಜ್ಞಾನ ಇದ್ದಿರಬೇಕು. ಹೀಗಿದ್ದರೂ ಕರ್ಣಾಟಕದಲ್ಲಿ ಲಿಪಿ ಪ್ರಸಾರವಾದ ಕಾಲ ಕ್ರಿ.ಪೂ. ೪–೩ನೆಯ ಶತಮಾನಗಳಿಗಿಂತ ಹಿಂದೆ ಹೋಗುವ ಸಾಧ್ಯತೆ ಇಲ್ಲ. ಸಹಜವಾಗಿ ಕರ್ಣಾಟಕದಲ್ಲಿ ಶಿಷ್ಟ ಸಾಹಿತ್ಯ ಹುಟ್ಟಿದ್ದರೆ ಅದು ಅಂದಿನಿಂದ ಈಚೆಗೆಯೇ. ಕರ್ಣಾಟಕದಲ್ಲಿ ಈ ಮುಂದಿನ ಕಾಲಘಟ್ಟಗಳಲ್ಲಿ ಈ ಲಿಪಿ ಬಹಳ ಮಟ್ಟಿಗೆ ತನ್ನ ಸ್ವರೂಪವನ್ನು ಬದಲಾಯಿಸಿಕೊಳ್ಳುತ್ತ ಬಂದಿರುವುದು ಕಾಣುತ್ತದೆ.[314] ಲಿಪಿಯಲ್ಲಿ ಬದಲಾವಣೆಯಾಗಲು ಮುಖ್ಯ ಕಾರಣ ಅದರ ಚಲಾವಣೆಯೇ ಆದ್ದರಿಂದ ಮುಂದಿನ ಕಾಲದಲ್ಲಿ ಲಿಪಿಯ ಬಳಕೆ ಎಂದರೆ ಅಕ್ಷರ ಜ್ಞಾನ ಸಾಕಷ್ಟು ಮಟ್ಟಿಗೆ ಹರಡಿರಬೇಕು. ಕ್ರಿ.ಶ. ಸು. ೭ನೆಯ ಶತಮಾನದಿಂದ ನಾಗರೀಲಿಪಿ ಸಹ ಕರ್ಣಾಟಕದಲ್ಲಿ ಪ್ರಚಲಿತವಾಗಿತ್ತು. ಚಾಲುಕ್ಯ ಇಮ್ಮಡಿ ಕೀರ್ತಿವರ್ಮನ ಕಾಲದ ಒಂದು ಶಾಸನವೇ (೭೫೫) ಈ ನಾಡಿನಲ್ಲಿ ದೊರೆತ ಅತ್ಯಂತ ಪ್ರಾಚೀನ ನಾಗರೀಲಿಪಿಯ ಲೇಖ[315]

ಪ್ರಾಚೀನ ಭಾರತದಲ್ಲಿ ಗುರುಕುಲಗಳು, ಘಟಿಕಾಸ್ಥಾನಗಳು ಮತ್ತು ಮಠಗಳು ವಿದ್ಯಾಪ್ರಸಾರ ಮಾಡುವ ಕೇಂದ್ರಗಳಾಗಿದ್ದುವು. ಶಾಸನಾಧಾರಗಳು ಸಾಕಷ್ಟಿಲ್ಲದಿದ್ದರೂ ಈ ರೀತಿಯವು ಕರ್ಣಾಟಕದಲ್ಲೂ ಇದ್ದಿರಬೇಕೆನಿಸುತ್ತದೆ.[316] ಪುರಾಣಕಥೆಗಳು ಇತ್ಯಾದಿಗಳಲ್ಲಿ ಬರುವ ಆಶ್ರಮಗಳು ಗುರುಕುಲಗಳು ಒಂದು ರೀತಿಯವಾದರೆ, ನಿತ್ಯ ವ್ಯವಹಾರಗಳಲ್ಲಿ ನಿರತರಾಗಿದ್ದ ಕೆಲವು ವ್ಯಕ್ತಿಗಳೇ ಅರ್ಥಿಗಳನ್ನು ಆಕರ್ಷಿಸಿ ವಿದ್ಯಾದಾನ ಮಾಡುವ ಪದ್ಧತಿಯೂ ಇದ್ದಿರಬೇಕು. ಹೆಚ್ಚಿನ ಸಂದರ್ಭಗಳಲ್ಲಿ ಮನೆತನದ ಹಿರಿಯರೇ ತಮ್ಮ ಸಂತತಿಯವರಿಗೆ ಗುರುಗಳಾಗುತ್ತಿದ್ದರು. ಶಿಲ್ಪ, ಚಿತ್ರ ಮುಂತಾದ ಕಲಾವಿದ್ಯೆಗಳು, ಇತರ ಹಲವು ವೃತ್ತಿವಿದ್ಯೆಗಳು ಇದೇ ರೀತಿ ಈಗಲೂ ಮುಂದುವರಿಯುತ್ತ ಬಂದಿರುವುದು ವಿದಿತ. ತಾಳಗುಂದ ಶಾಸನದಲ್ಲಿರುವ ಹೇಳಿಕೆಯ ಪ್ರಕಾರ ಮಯೂರ ಶರ್ಮ ಮೊದಲು ವಿದ್ಯಾಭ್ಯಾಸಮಾಡಿದ್ದು ವೀರಶರ್ಮನಲ್ಲಿ. ವೀರಶರ್ಮ ಮಯೂರನ ತಂದೆಯೇ ಎಂದೂ ತಿಳಿದಿದೆ.[317] ರಾಜರು, ರಾಜಕುಮಾರರು ಇತ್ಯಾದಿ ಪ್ರತಿಷ್ಠಿತ ವ್ಯಕ್ತಿಗಳು ಪ್ರತ್ಯೇಕ ಗುರುಗಳನ್ನು ನಿಯಮಿಸಿಕೊಳ್ಳುವ ಪರಿಪಾಠವಿದ್ದಂತೆ ತೋರುತ್ತದೆ. ಅಮೋಘವರ್ಷ ತನ್ನ ಮಗ ಕೃಷ್ಣನಿಗೆ ಗುಣಭದ್ರಾಚಾರ್ಯನನ್ನು ಗುರುವಾಗಿ ನೇಮಿಸಿದ್ದ.[318]

ಪ್ರಾಚೀನಕಾಲದ ವಿದ್ಯಾಪ್ರಸಾರ ಕೇಂದ್ರಗಳಲ್ಲಿ ಪ್ರಾಯಶಃ ಬಹು ಸಂಖ್ಯೆಯಲ್ಲಿದ್ದುವೆಂಧರೆ ಅಗ್ರಹಾರಗಳು. ನಾನಾಗೋತ್ರಸೂತ್ರದ ಹಲವು ಬ್ರಾಹ್ಮಣರಿಗೆ ಒಂದು ಹಳ್ಳಿಯ ಆದಾಯವನ್ನೆಲ್ಲ ಅನುಭವಿಸುವ ಹಕ್ಕನ್ನು ಕೊಟ್ಟು, ಅವರು ಅಲ್ಲಿ ನೆಲಸಿ ತಮ್ಮ ಧರ್ಮಾಚರಣೆಯನ್ನು ಮಾಡಿಕೊಂಡು ಹೋಗುವಂತೆ ಅನುಕೂಲವನ್ನು ಕಲ್ಪಿಸಿಕೊಡುವ ಈ ಅಗ್ರಹಾರವ್ಯವಸ್ಥೆ ಕರ್ಣಾಟಕದಲ್ಲೂ ಇತ್ತು. ಇಂಥ ಅಗ್ರಹಾರಗಳನ್ನು ಆಡಳಿತವರ್ಗದವರು ಗೌರವದಿಂದ ನಡಸಿಕೊಳ್ಳುತ್ತಿದ್ದರು. ಅಲ್ಲಿಯ ಮಹಾಜನ ಸಭೆ ಅವುಗಳ ಆಡಳಿತವನ್ನು ನೋಡಿಕೊಳ್ಳುತ್ತಿತ್ತು. ಷಟ್ಕರ್ಮನಿರತರಾಗಿದ್ದ ಬ್ರಾಹ್ಮಣರು ಅಲ್ಲಿ ವಾಸಿಸುತ್ತಿದ್ದರು. ಷಟ್ಕರ್ಮಗಳಲ್ಲಿ ಅಧ್ಯಯನ ಅಧ್ಯಾಪನಗಳೂ ಸೇರಿದ್ದುವು. ಈ

ಲೋಕೋಪಕಾರಕ ಕಾರ್ಯ ನಡೆಯುತ್ತಿದ್ದುದರಿಂದಲೇ ಹಳ್ಳಿಗಳನ್ನೇ ಇಡಿಯಾಗಿ ದಾನ ಕೊಡುವ, ಅವುಗಳ ಆಡಳಿತದ ಬಗ್ಗೆ ಅವರಿಗೇ ಅಧಿಕಾರ ನೀಡುವ ಔದಾರ್ಯವನ್ನು ಆಡಳಿತವರ್ಗದವರು ತೋರಿಸುತ್ತಿದ್ದರೆಂದು ಕಾಣುತ್ತದೆ. ಪ್ರತ್ಯೇಕ ಹಳ್ಳಿಗಳಲ್ಲದೆ ಕೆಲವು ದೊಡ್ಡ ಊರುಗಳಲ್ಲಿ ಒಂದು ಕೇರಿಯೇ ಇವರಿಗೆ ಮೀಸಲಾಗಿರಬಹುದಾಗಿತ್ತು. ಅವನ್ನು 'ಬ್ರಹ್ಮಪುರಿ' ಎಂದು ಶಾಸನಗಳು ನಿರ್ದೇಶಿಸುತ್ತವೆ. ಇವುಗಳ ಬಗ್ಗೆ ಹೆಚ್ಚಿನ ವಿವರಗಳು ಮುಂದಿನ ಕಾಲದ ಶಾಸನಗಳಲ್ಲಷ್ಟೇ ಬಹುವಾಗಿ ದೊರಕಿದರೂ ಪ್ರಸ್ತುತ ವಿವೇಚನೆಯ ಕಾಲದಲ್ಲೂ ಈ ವ್ಯವಸ್ಥೆಯಿತ್ತು ಎಂಬುದಕ್ಕೆ ಸೂಚನೆಗಳಿವೆ. ಕುರಕುತ್ಸ ಗೋತ್ರದ ಭವಾರ್ಯ, ಕೋಲನಾರ್ಯ, ಶಿವಾರ್ಯ, ಯಜ್ಞಾರ್ಯ, ಹೆರಾರ್ಯ, ಹಾರ್ಯಾರ್ಯ, ಆತ್ರೇಯ ಗೋತ್ರದ ದೇವಾರ್ಯ, ವಸಿಷ್ಠಗೋತ್ರದ ಯುವ್ವಾರ್ಯ, ಯುಕ್ತಾರ್ಯ, ವತ್ಸಗೋತ್ರದ ಪಣ್ಣಾರ್ಯ, ಯಜ್ಞಾರ್ಯ, ನಾಗಾರ್ಯ, ಭೃತಾರ್ಯ, ಕೌಶಿಕ ಗೋತ್ರದ ಭವಾರ್ಯ, ಸೋಮಾರ್ಯ, ಕೌಣ್ಡಿನ್ಯ ಗೋತ್ರದ ಬಪ್ಪಶರ್ಮ, ಹಾರೀತ ಗೋತ್ರದ ಭೂತಶರ್ಮ, ಪುರುಕುತ್ಸ ಗೋತ್ರದ ಭೃತಾರ್ಯ, ಭಾರದ್ವಾಜ ಗೋತ್ರದ ಭೂತಶರ್ಮ ಮೊದಲಾದ ೨೫ ಜನ ಬ್ರಾಹ್ಮಣರಿಗೆ ಕತಟ್ವಾಕ ಎಂಬ ಗ್ರಾಮ ವನ್ನು ಕದಂಬ ವಿಷ್ಣುಶರ್ಮ ದಾನಮಾಡಿದ ಎಂದು ಕ್ರಿ.ಶ. ೫ನೆಯ ಶತಮಾನದ ತಂಗಳಿ ತಾಮ್ರಪಟ ತಿಳಿಸುತ್ತದೆ.[319] ಗಂಗ ಶ್ರೀಪುರುಷನ ಜಾವಳಿ ತಾಮ್ರಪಟ ದಲ್ಲೂ ಇದೇ ರೀತಿಯ ಉಲ್ಲೇಖವಿದೆ.[320] ಆಂಗೀರಸ ಗೋತ್ರದ ಶಿವಶರ್ಮ, ದಿನಶಮ್ಮ ಮೊದಲಾದ ವೇದವೇದಾಂಗಪಾರಗರೂ ಧರ್ಮಶಾಸ್ತ್ರ, ಸಮಯಗಳನ್ನು ತಿಳಿದವರೂ ಆದ ೧೨೦ ಬ್ರಾಹ್ಮಣರಿಗೆ ಬೆಲ್ಲೂರು ಎಂಬ ಹಳ್ಳಿಯನ್ನು ರಾಜನು ಸರ್ವ ಬಾಧಾಪರಿಹಾರವಾಗಿ ಮಾಡಿಕೊಟ್ಟನೆಂದು ಆ ಶಾಸನ ತಿಳಿಸುತ್ತದೆ. ಅಗ್ರಹಾರವೆಂಬ ಹೆಸರು ಇವುಗಳಲ್ಲಿಲ್ಲದಿದ್ದರೂ ಇವುಗಳ ವ್ಯವಸ್ಥೆಯನ್ನು ನೋಡಿದರೆ ಅವು ಅಗ್ರಹಾರ ಗಳೆಂಬುದು ಸ್ಪಷ್ಟವಾಗುತ್ತದೆ. ಬಾದಾಮಿಯ ಒಂದು ಶಾಸನದಲ್ಲಿ ವಾತಾಪ್ಯಧಿಷ್ಠಾ-ನವು 'ಚತುರ್ದಶವಿದ್ಯೋಪಲಸಿತಾನೇಕಸಹಸ್ರದ್ವಿಜವರೋಪಶೋಭಿತೇ' ಎಂದು ವರ್ಣಿತ ವಾಗಿದೆ. ಅಲ್ಲಿ ಬ್ರಹ್ಮಪುರಿ ಇರಬೇಕು.[321] ಇಂಥ ವಿದ್ಯಾಕೇಂದ್ರಗಳು ಸಾಹಿತ್ಯಕೇಂದ್ರ ಗಳೂ ಆಗಿದ್ದರೆ ಆಶ್ಚರ್ಯವಿಲ್ಲ.

ವಿದ್ಯಾರ್ಥಿಗಳು ಪ್ರಾಥಮಿಕ ಅಧ್ಯಯನದ ಅನಂತರ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಘಟಿಕಾಸ್ಥಾನಗಳಿಗೆ ಹೋಗುತ್ತಿದ್ದರೆಂದು ತಾಳಗುಂದ ಶಾಸನದಿಂದ ತಿಳಿಯುತ್ತದೆ. ಕರ್ನಾಟಕದಲ್ಲಿ ದೇವಾಲಯಗಳಿಗೆ ಸೇರಿದಂತಿದ್ದ ಬಳ್ಳಿಗಾವೆಯ ಕೇದಾರಮಠದಂಥ ಮಠಗಳೂ ಸಾಲೊಟಗಿ, ಕಳಶ ಮೊದಲಾದೆಡೆಯಲ್ಲಿದ್ದ ವಿದ್ಯಾಸಂಸ್ಥೆಗಳೂ ವಿಶೇಷ ವಿದ್ಯಾಭ್ಯಾಸಕ್ಕೆ ಕೇಂದ್ರಗಳಾಗಿದ್ದವೆಂಬುದಕ್ಕೆ ೧೦-೧೧ನೆಯ ಶತಮಾನದ ಶಾಸನಾಧಾರ ಗಳಿವೆ.[322] ಇದೇ ಸ್ಥಿತಿ ಈ ಕಾಲದಲ್ಲೂ ಇದ್ದಿರಬೇಕು.[323] ಹಿಂದು ದೇವಾಲಯಗಳಲ್ಲದೆ ಬೌದ್ಧ ಜೈನ ಸಂಸ್ಥೆಗಳೂ ಇದೇ ರೀತಿಯಲ್ಲಿ ವ್ಯವಸ್ಥಿತವಾಗಿದ್ದರೆ ಆಶ್ಚರ್ಯವಿಲ್ಲ. ಬೌದ್ಧ ವಿಹಾರಗಳು ಹಿಂದಿನಿಂದಲೂ ವಿದ್ಯಾಪ್ರಸಾರದಲ್ಲಿ ನಿರತವಾಗಿದ್ದುವೆಂಬುದು ನಾಲಂದಾ

ಮತ್ತು ಇತರೆಡೆಗಳ ಬಗ್ಗೆ ಸಿಗುವ ವಿವರಗಳಿಂದ ತಿಳಿದಿದೆ. ಜೈನರಲ್ಲಿ ನಾಲ್ಕು ಮಹಾದಾನಗಳನ್ನು (ಆಹಾರ, ಅಭಯ, ಭೈಷಜ್ಯ ಮತ್ತು ವಿದ್ಯಾ) ವಿಶೇಷವಾಗಿ ಮಾಡಬೇಕೆಂಬ ನಿಯಮವಿದೆ. ಶ್ರಾವಕರು ಜೈನಬಸದಿಗಳಲ್ಲಿ ಈ ದಾನಗಳಿಗೆ ವ್ಯವಸ್ಥೆ ಮಾಡುತ್ತಿದ್ದರೆಂಬುದಕ್ಕೆ ಸೂಚನೆಗಳಿವೆ. ೫ನೆಯ ಶತಮಾನದ ರವಿವರ್ಮನ ಹಲಸಿ ತಾಮ್ರಪಟದಲ್ಲಿ ಅಲ್ಲಿಯ ಜೈನಬಸದಿಗೆ ದಾನನೀಡಿದ ಮೊತ್ತದಲ್ಲಿ ತಪಸ್ವಿಗಳಿಗೆ ಆಹಾರ ದಾನಮಾಡಬೇಕೆಂದು ಹೇಳಿ, ಉಳಿದ ಮೊತ್ತವನ್ನು ಅನೇಕ ಶಾಸ್ತ್ರಾಗಮಗಳನ್ನು ಚೆನ್ನಾಗಿ ತಿಳಿದಿದ್ದ ಕುಮಾರದತ್ತನೆ ಮೊದಲಾದ ಪಂಡಿತ ತಪೋಧನರಿಗಾಗಿ ವಿನಿಯೋಗಿಸಬೇಕೆಂದು ಹೇಳಿದೆ.[324] ಪುರಿಗೆಱೆಯ ಜಿನಮಂದಿರದಲ್ಲಿಯ ಪೂಜಾದಿಗಳಿಗಲ್ಲದೆ ಶಾಲೆಗಾಗಿಯೂ ದಾನಮಾಡಿದಂತೆ ಚಾಲುಕ್ಯ ಕಾಲದ ಒಂದು ಶಾಸನ ತಿಳಿಸುತ್ತದೆ.[325] ಅಲ್ಲಿಯ ಗುರು ಪೀಠದ ಪರಂಪರೆಗೆ ಸೇರಿದವರಲ್ಲಿ ಒಬ್ಬ ಶ್ರೀವಿಜಯದೇವ ಪಂಡಿತ. ಆತ ಕವಿ, ವಾದಿ ಎಂದು ೭೩೫ರ ಒಂದು ಶಾಸನ ವರ್ಣಿಸಿದೆ.[326]

ಶಿಲ್ಪವಿದ್ಯೆ, ಧನುರ್ವಿದ್ಯೆ ಇತ್ಯಾದಿ ಪ್ರಾಯೋಗಿಕ ವಿದ್ಯೆಗಳು ವಿಶೇಷವಾಗಿ ವಂಶ ಪಾರಂಪರ್ಯವಾಗಿ ಕಲಿಸುವುದಾದ್ದರಿಂದ, ಮೇಲಿನ ರೀತಿಯ ವಿದ್ಯಾಕೇಂದ್ರಗಳಲ್ಲಿ ಗ್ರಂಥಸ್ಥ ವಿದ್ಯೆಗಳ ಅಧ್ಯಯನ ಅಧ್ಯಾಪನಗಳಷ್ಟೇ ನಡೆಯುತ್ತಿದ್ದಿರಬೇಕು. ಚತುರ್ವೇದ ಗಳು, ವೇದಾಂಗಗಳು, ವೇದಾಂತ, ಸ್ಮೃತಿ, ಇತಿಹಾಸ, ಅರ್ಥಶಾಸ್ತ್ರ, ದಂಡನೀತಿ, ಧರ್ಮಶಾಸ್ತ್ರ, ವ್ಯಾಕರಣ, ಜ್ಯೋತಿಷ, ಸಾಹಿತ್ಯ ಇತ್ಯಾದಿಗಳು ಅಂಥ ಗ್ರಾಂಥಿಕ ವಿದ್ಯೆಗಳು.[327] ಕಳಶದ ಅಗ್ರಹಾರದಲ್ಲಿನ ಎಲ್ಲ ಇನ್ನೂರು ಬ್ರಾಹ್ಮಣರೂ ವ್ಯಾಕರಣ, ದಂಡನೀತಿ, ಸಾಹಿತ್ಯ; ಪುರಾಣ ಮೊದಲಾದವುಗಳಲ್ಲೂ ಅವುಗಳಿಗೆ ಟೀಕೆವ್ಯಾಖ್ಯಾನ ಗಳನ್ನು ರಚಿಸುವುದರಲ್ಲೂ ನಿಷ್ಣಾತರಾಗಿದ್ದರೆಂದು ಒಂದು ಶಾಸನದ ಹೇಳಿಕೆ.[328] ಇದೇ ವಿಷಯಗಳ ಬಗ್ಗೆ ಆ ಸ್ಥಳದಲ್ಲಿ ಶಿಕ್ಷಣವೂ ದೊರೆಯುತ್ತಿದ್ದಿರಬೇಕು. ೭೭೯ರ ಒಂದು ಶಾಸನದಲ್ಲಿ ಬ್ರಾಹ್ಮಣನೊಬ್ಬನನ್ನು ವೇದ ವೇದಾಂಗ ಇತಿಹಾಸ ಪುರಾಣ ವ್ಯಾಕರಣ ಮೀಮಾಂಸಾ ನ್ಯಾಯ ನಿರುಕ್ತಗಳಲ್ಲಿ ಪರಿಣತನೆಂದು ವರ್ಣಿಸಿರುವುದು ಅಂದಿನ ವಿದ್ಯಾಧ್ಯಯನ ಶಾಖೆಗಳ ಪರಿಚಯ ಮಾಡಿಕೊಡುತ್ತದೆ. ಕೌಮಾರ ವ್ಯಾಕರಣವನ್ನು ಕಲಿಸುತ್ತಿದ್ದ ಒಬ್ಬ ವಿದ್ವಾಂಸನ ಪ್ರಸ್ತಾಪ ಒಂದು ಶಾಸನದಲ್ಲಿದೆ.[329] ಕೆಲವು ವ್ಯಕ್ತಿಗಳು ಕೆಲವೇ ವಿಷಯಗಳಲ್ಲಿ ಹೆಚ್ಚಿನ ಪರಿಣತಿಯನ್ನು ಹೊಂದುತ್ತಿರ ಬೇಕೆಂದು ಇದು ಸೂಚಿಸುತ್ತದೆ.

ಈ ಕಾಲದಲ್ಲಿ ಉನ್ನತ ಶಿಕ್ಷಣವೆಲ್ಲ ಸಂಸ್ಕೃತದಲ್ಲೇ ನಡೆಯುತ್ತಿರಬಹುದೆಂದು ಅಳ್ತೇಕರ್ ಅವರು ಅಭಿಪ್ರಾಯಪಟ್ಟಿದ್ದಾರೆ.[330] ಆದರೆ ಜೈನಧರ್ಮೀಯ ಶಾಲೆಗಳಲ್ಲಿ ಅವರ ಮೂಲಧರ್ಮಗ್ರಂಥಗಳ ಭಾಷೆ ಪ್ರಾಕೃತವಾದ್ದರಿಂದ ಮತ್ತು ಹಲವು ಪ್ರಾಕೃತ ಗ್ರಂಥಗಳು ಕರ್ಣಾಟಕದಲ್ಲಿಯೇ ರಚಿತವಾದವೆಂದು ತಿಳಿದಿರುವುದರಿಂದ ಪ್ರಾಕೃತ ಭಾಷೆ ಸಹ ಈ ಜೈನ ವಿದ್ಯಾಸಂಸ್ಥೆಗಳ ಮಟ್ಟಿಗಾದರೂ ಬೋಧನಭಾಷೆಯಾಗಿರಬಹುದು. ನೂರಾರು ಗ್ರಾಮಗಳಲ್ಲಿ ಹಂಚಿಹೋಗಿರುವ ಕನ್ನಡ ಶಾಸನಗಳು, ಶ್ರವಣಬೆಳಗೊಳ,

ಬಾದಾಮಿ ಮೊದಲಾದೆಡೆಗಳಲ್ಲಿರುವ ೭-೭ನೆಯ ಶತಮಾನದ ಕನ್ನಡ ಕವಿತೆಗಳು. ಇವನ್ನು ನೋಡಿದರೆ ಕನ್ನಡ ಭಾಷೆಯಲ್ಲೂ ಸಾಕಷ್ಟುಮಟ್ಟಿನ ಅಧ್ಯಯನ ನಡೆಯುತ್ತಿರಬೇಕು ಎನಿಸುತ್ತದೆ.

ಮೇಲೆ ತಿಳಿಸಿದ ರೀತಿಯ ವಿದ್ಯಾಕೇಂದ್ರಗಳೆಲ್ಲ ಹಿಂದು ಅಥವ ಇತರ ಧರ್ಮಗಳಿಗೆ ಸಂಬಂಧಿಸಿದ ಸಂಸ್ಥೆಗಳೇ ಆಗಿವೆ. ಇವುಗಳಲ್ಲಿ ಆಯುರ್ವೇದ, ದಂಡನೀತಿ, ಜ್ಯೋತಿಷ, ವ್ಯಾಕರಣಗಳಂಥ ನಿತ್ಯೋಪಯೋಗಿ ವಿದ್ಯೆಗಳ ಜೊತೆಗೆ ಧಾರ್ಮಿಕ ವಿಷಯಗಳ ಅಧ್ಯಯನ ಹೆಚ್ಚಿನ ಪಾತ್ರವಹಿಸುವುದು ಎಷ್ಟು ಸಹಜವೋ ಆ ಕಾಲದ ಸಾಹಿತ್ಯಕೃತಿಗಳೂ ಹೆಚ್ಚಿನಮಟ್ಟಿಗೆ ಧಾರ್ಮಿಕ ವಸ್ತುಗಳನ್ನು ಅಳವಡಿಸಿಕೊಂಡಿದ್ದಿರುವುದು ಅಷ್ಟೇ ಸಹಜ.

ಧರ್ಮ ಮತ್ತು ವಿದ್ಯಾಭ್ಯಾಸಗಳ ನಿಕಟ ಸಂಬಂಧದಿಂದಾಗಿ ವಿದ್ಯೆ ಕೆಲವು ಜನ ವರ್ಗಗಳಿಗೆ ಸೀಮಿತವಾಗುವ ಪರಿಸ್ಥಿತಿಯೂ ಹುಟ್ಟಿರಬೇಕು. ಬೌದ್ಧ ಜೈನ ವಿದ್ಯಾಕೇಂದ್ರಗಳಲ್ಲಿ ಆ ಧರ್ಮದವರಿಗೆ ಒಲವು ಪ್ರೋತ್ಸಾಹಗಳು ಇರುವುದೂ ಅಗ್ರಹಾರಗಳಲ್ಲಿ ಬ್ರಾಹ್ಮಣ ವರ್ಗಗಳಲ್ಲಿ ಹೆಚ್ಚಿನ ವಿದ್ಯಾಪ್ರಸಾರವಾಗುವುದೂ ಸಾಮಾನ್ಯವಾಗಿರಬೇಕು. ಆದರೆ ವಸ್ತುಸ್ಥಿತಿ ಆ ರೀತಿಯೇ ಇತ್ತೇ ಎಂಬುದು ಸಮಕಾಲೀನ ಮಾಹಿತಿಗಳಿಂದ ಸ್ಪಷ್ಟವಾಗುವುದಿಲ್ಲ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಲ್ಲ ೧೨ ವರ್ಷಗಳವರೆಗೆ ವೇದಾಧ್ಯಯನ ಮಾಡಬೇಕೆಂದು ಧರ್ಮಶಾಸ್ತ್ರಗಳು ವಿಧಿಸುತ್ತವೆ. ಈ ವಿಷಯವನ್ನು ಚರ್ಚಿಸಿರುವ ಆಳ್ತೇಕರ್ ಅವರು ಶಾಸ್ತ್ರದ ಹೇಳಿಕೆ ಹೀಗಿದ್ದರೂ ಕಡೆಯಪಕ್ಷ ರಾಷ್ಟ್ರಕೂಟರ ಕಾಲಕ್ಕಾದರೂ ವೈಶ್ಯರು ವೇದವ್ಯಾಸಂಗದ ಹಕ್ಕನ್ನು ಕಳೆದುಕೊಂಡಿದ್ದರು, ಕ್ಷತ್ರಿಯರು ಪೌರಾಣಿಕ ಧರ್ಮದ ಬಗ್ಗೆಯೇ ಒಲವನ್ನು ತೋರಿಸುತ್ತಿದ್ದುದರಿಂದ ಹಾಗೂ ಅವರು ಕ್ಷಾತ್ರಧರ್ಮದ ಬಗ್ಗೆ ಆಸ್ಥೆಯನ್ನು ವಹಿಸಬೇಕಾಗಿದ್ದುದರಿಂದ ವೇದಾಧ್ಯಯನ ಸುಮಾರು ಬ್ರಾಹ್ಮಣ ವರ್ಗಕ್ಕಷ್ಟೇ ಸೀಮಿತವಾಗಿತ್ತು ಎಂದು ಅಭಿಪ್ರಾಯಪಟ್ಟಿದ್ದಾರೆ.[331] ವಿದ್ಯಾಕೇಂದ್ರಗಳು ವೇದಗಳಲ್ಲದೆ ಇತರ ವಿಷಯಗಳ ಅಧ್ಯಯನಕ್ಕೆ ಸಂಬಂಧಿಸಿದಂತೆ ಬೇರೆ ಬೇರೆ ವರ್ಗದ ಜನರಿಗೆ ಎಷ್ಟರಮಟ್ಟಿಗೆ ಉಪಯುಕ್ತವಾಗಿದ್ದುವೆಂಬುದನ್ನು ಅರಿಯುವುದು ಕಷ್ಟ. ಉತ್ತಮಮಟ್ಟದ ಕಾವ್ಯಗುಣಗಳನ್ನು ತಕ್ಕಮಟ್ಟಿಗೆ ಹೊಂದಿರುವ ಕ್ರಿ.ಶ. ೮೦೦ರ ಒಂದು ಶಾಸನವನ್ನು ಮಲಗಾರ (ಮಾಲಾಕಾರ) ಕುನ್ದವಾಸಿಯ ಮಗ ಮರಮ್ಮ ಎಂಬುವನು ಬರೆದಿದ್ದಾನೆ[332]. ಕೆಲವೆಡೆಯಾದರೂ ಇತರ ವರ್ಗಗಳವರಿಗೆ ಕಲಿಕೆಯ ಸೌಲಭ್ಯವಿದ್ದಿರಬೇಕೆಂದು ಇಂಥ ಸಾಕ್ಷ್ಯಗಳು ಸೂಚಿಸುತ್ತವೆ. ಆದರೆ ಈ ರೀತಿಯ ಸಾಕ್ಷ್ಯಗಳು ಶಾಸನಗಳಲ್ಲಿ ವಿರಳವಾಗಿ ಮಾತ್ರ ಬರುತ್ತದೆ ಎಂಬುದು ಗಮನಾರ್ಹ. ಈ ಸ್ಥಿತಿಯಿಂದ ವ್ಯಕ್ತವಾಗುವ ಬಂದು ಅಂಶವೆಂದರೆ ವಿದ್ಯಾಭ್ಯಾಸದ ಸೌಲಭ್ಯ ಕೆಲವು ಧರ್ಮ ಮತ್ತು ಜನವರ್ಗಗಳಿಗಷ್ಟೇ ಸುಲಭ ಲಭ್ಯವಾಗಿದ್ದಿತು ಎಂಬುದು. ಶಿಷ್ಟ ಸಾಹಿತ್ಯಸೃಷ್ಟಿಗೆ ಇಂಥ ವರ್ಗಗಳೇ ಕಾರಣವಾಗಿರುವುದು ಸಹಜ.

**ಸಮಾಜ ವ್ಯವಸ್ಥೆ:** ಭಾರತೀಯ ಸಮಾಜದಲ್ಲಿ ಪ್ರಭಾವಶಾಲಿಯಾದ ಪಾತ್ರವನ್ನು ವಹಿಸಿದ್ದ ವರ್ಣ ಮತ್ತು ಜಾತಿಗಳ ವ್ಯವಸ್ಥೆ ಕರ್ನಾಟಕ ದೇಶದಲ್ಲಿ ಸಾತವಾಹನರ

ಕಾಲದ ಹೊತ್ತಿಗೇ ಅಂಕುರಿಸಲಾರಂಭಿಸಿತು ಎಂಬ ವಿಷಯವನ್ನು ಹಿಂದೆಯೇ ತಿಳಿಸಿದ್ದೇವೆ. ಮುಂದಿನ ಕಾಲಘಟ್ಟದಲ್ಲಿ ಇದು ಬಹುವ್ಯಾಪಕವಾಯಿತು. ಈ ಕಾಲದ ಹೊತ್ತಿಗೆ ಮನು ಮೊದಲಾದವರ ಧರ್ಮಶಾಸ್ತ್ರಗಳು ಸಮಾಜ ರೀತಿನೀತಿಗಳಿಗೆ ಆಧಾರಸ್ತಂಭಗಳಾಗಿ ಪರಿಗಣಿತವಾಗಿದ್ದವು. ಕದಂಬರ ಹಲವು ಶಾಸನಗಳಲ್ಲಿ ದಾನಗಳನ್ನು ಮಾಡಿದ ವಿಷಯವನ್ನು ತಿಳಿಸಿದ ಅನಂತರ, ಅದನ್ನು ಎಲ್ಲರೂ ಪಾಲಿಸಿಕೊಂಡು ಹೋಗಬೇಕೆಂದು ವಿಧಿಸುವಲ್ಲಿ 'ಮನು ಹೀಗೆ ಹೇಳುತ್ತಾನೆ' ("ಮಾನವೇ ಚ ಪ್ರೋಕ್ತಮ್"[333], "ಅತ್ರ ಮನು ಗೀತಾ ಶ್ಲೋಕಾ ಭವನ್ತಿ"[334]) ಇತ್ಯಾದಿಯಾಗಿ ಹೇಳಿ ಮನುಸ್ಮೃತಿಯ ಶ್ಲೋಕಗಳನ್ನು ಉದ್ಧರಿಸುವುದನ್ನು ನೋಡಿದರೆ, ಆ ಗ್ರಂಥದ ಬಗ್ಗೆ ಅಗಾಧಗೌರವ ಬೆಳೆದಿತ್ತೆಂಬುದು ವಿದಿತವಾಗುತ್ತದೆ. ಇಂಥ ಗ್ರಂಥಗಳಲ್ಲಿ ವರ್ಣ-ಜಾತಿ ವ್ಯವಸ್ಥೆಯ ಸ್ಪಷ್ಟಪ್ರತಿಪಾದನೆ ಇರುವುದರಿಂದ, ಅವುಗಳನ್ನು ಇಲ್ಲಿನ ಸಮಾಜದಲ್ಲಿ ಅಳವಡಿಸುವ ಸಾರ್ವಜನಿಕ ಪ್ರಯತ್ನಗಳು ನಡೆದಿರಬೇಕೆನಿಸುತ್ತದೆ. ಕರ್ಣಾಟಕದ ಶಾಸನಗಳಲ್ಲಿ ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರ ವರ್ಣಗಳ ಪ್ರಸ್ತಾಪ ಕಂಡುಬರುತ್ತದೆ. ವರ್ಣಾಶ್ರಮ ಧರ್ಮವನ್ನು ಸಂರಕ್ಷಿಸುವುದು ರಾಜನ ಪವಿತ್ರಕರ್ತವ್ಯಗಳಲ್ಲೊಂದು ಎಂದು ಕೆಲವೆಡೆ ಉಕ್ತವಾಗಿದೆ.[335] ರಾಷ್ಟ್ರಕೂಟ ಕರ್ಕರಾಜನನ್ನು "ಮನುದರ್ಶಿತ ಮಾರ್ಗ್ಗಾನುಗಾಮೀ"[336] ಎಂದೂ ಗಂಗ ಶ್ರೀಪುರುಷನನ್ನು 'ಮನ್ವಾದಿಭಿರ್ಯಥೋಕ್ತ ಧರ್ಮಾಭಿರಕ್ಷಿತ ಚಾತುರ್ವರ್ಣಾಶ್ರಮಃ'[337] ಎಂದೂ ಶಾಸನಗಳು ವರ್ಣಿಸಿವೆ.

ಕುಲದ (ವಂಶ) ಬಗ್ಗೆ ಹೆಚ್ಚಿನ ಗೌರವವನ್ನು ತೋರಿಸುವ ಒಂದು ಪ್ರವೃತ್ತಿ ಸಹ ಈ ಕಾಲದಲ್ಲಿ ವಿಶೇಷವಾಗಿ ಬೆಳೆಯಿತು. ಅನೇಕ ರಾಜವಂಶಗಳವರು ತಮ್ಮ ಕುಲದ ಹಿರಿಯರ ಹಿರಿಮೆಗಳನ್ನು ವಿಶೇಷವಾಗಿ ಹೇಳಿಕೊಳ್ಳುವುದು, ಪ್ರಸಿದ್ಧ ಪೌರಾಣಿಕ ವ್ಯಕ್ತಿಗಳೊಡನೆ ತಮ್ಮ ಕುಲದ ಸಂಬಂಧವನ್ನು ಸಾರಿಕೊಳ್ಳುವುದು-ಇಂಥ ವಿಷಯಗಳು ಸರ್ವೇಸಾಮಾನ್ಯವಾಯಿತು. ಕ್ರಿ.ಶ. ೭ನೆಯ ಶತಮಾನದಲ್ಲಿ ಅಂಥ ಸ್ಥಿತಿ ಇತ್ತು. ತಾಳಗುಂದ ಶಾಸನದಲ್ಲಿ ಕದಂಬವಂಶದವರು ಅನೇಕ ಯಜ್ಞಯಾಗಾದಿ ಕರ್ಮಗಳನ್ನು ಆಚರಿಸುತ್ತಿದ್ದ ನಿಷ್ಠಾವಂತರೆಂದು ಗೌರವ ಹೆಮ್ಮೆಗಳಿಂದ ವರ್ಣಿಸಿರುವುದೂ ಹಾರೀತಿಪುತ್ರರೆಂದು ಕರೆದಿರುವುದೂ ಕಾಣುತ್ತದೆ. ಪಲ್ಲವ ನರೇಂದ್ರನು ಮಯೂರಶರ್ಮನ ಉದ್ಧಟತನವನ್ನು ನೋಡಿ ಹುಬ್ಬುಗಂಟಿಕ್ಕಿದರೂ ಅವನ ಕುಲದ ಹಿರಿಮೆಯನ್ನು ಕಂಡು ಸ್ನೇಹಬೆಳೆಸಿದನೆಂದು ತಾಳಗುಂದ ಶಾಸನ ತಿಳಿಸುತ್ತದೆ.[338] ಚಾಲುಕ್ಯ ಶಾಸನಗಳಲ್ಲಿ "ಭಗವನ್ನಾರಾಯಣ ಪ್ರಸಾದಾಸಾದಿತ", "ಸಪ್ತಮಾತೃಕಾಲಬ್ಧ ವರಪ್ರಸಾದ"—ಇತ್ಯಾದಿ ವಿಶೇಷಣಗಳನ್ನು ನೀಡಿ ತಮ್ಮ ಕುಲದ ಹಿರಿಮೆಯ ಪ್ರಸ್ತಾಪಮಾಡುವುದು ಇದೇ ಪ್ರವೃತ್ತಿಯ ಮುಂದುವರಿಕೆಯೇ. ಹಿಂದೆ ಅನಾಮಧೇಯರಾಗಿದ್ದರೂ ತರ್ಯಲ್ಲ ಎಂಬ ಚಿಕ್ಕ ರಾಜವಂಶದ ಕುಲವನ್ನು ಹೇಳುವಲ್ಲಿ ಮನು, ಇಕ್ಷ್ವಾಕು, ಹರಿಶ್ಚಂದ್ರ, ದಿಲೀಪ, ಕುಶ, ತರ್ಯಲ್ಲ ಮೊದಲಾದ ರವಿವಂಶದವರ ಕುಲದಲ್ಲಿ ಸಕಸ್ವಾಮಿ ಎಂಬುವನು ಹುಟ್ಟಿದ ಎಂದು ಆ ವಂಶದವರ ಒಂದು ಶಾಸನ ತಿಳಿಸುತ್ತದೆ.[339] ಕುಲದ ಬಗ್ಗೆ ಹೆಮ್ಮೆ, ತಮ್ಮ ಕುಲವೃದ್ಧಿ

ಯಾಗುತ್ತಿರಬೇಕೆಂಬ ಆಕಾಂಕ್ಷೆ ಇವು ಜನರ ಮನಸ್ಸನ್ನು ಹಿಡಿದಿದ್ದ ವಿಷಯವಾಗಿತ್ತು. ತಮ್ಮ ಕುಲದ ಹಿರಿಮೆಯನ್ನು ಎತ್ತಿ ಹಿಡಿಯುವಂತೆ ತಮ್ಮ ಸಾಧನೆಗಳು ಇರಬೇಕೆಂಬ ಮನೋಭಾವವೂ ಇತ್ತು. ಕದಂಬ ರವಿವರ್ಮನ ಒಂದು ಶಾಸನದಲ್ಲಿ ಕುಲವೃದ್ಧಿಗಾಗಿ, ಕೀರ್ತಿವೃದ್ಧಿಗಾಗಿ ನಿಮಿತ್ತಜ್ಞಾನಪಾರಗರಾದ ಬಂಧುಷೇಣರಿಂದ ಕದಂಬಕುಲ ಸ್ಥಾಪಿತ ವಾಯಿತು ಎಂದು ಹೇಳಿದೆ.[340] ಸಾಂತರ ವಂಶದ ವಿಕ್ರಮಾದಿತ್ಯ ಎಂಬುವನು ತನ್ನನ್ನು ಆ ಕುಲದ ತಿಲಕ ಎಂದು ಕರೆದುಕೊಂಡಿದ್ದಾನೆ.[341] ರಾಷ್ಟ್ರಕೂಟ ಕಕ್ಕರಾಜ ನನ್ನು 'ರಾಷ್ಟ್ರಕೂಟಕುಲಾಮಲಗಗನಮೃಗಲಾಂಛನ' ಎಂದು ಒಂದು ಶಾಸನ ವರ್ಣಿಸುತ್ತದೆ. ದಾನವನ್ನು ಕೊಡುವ ಒಂದು ಸಂದರ್ಭದಲ್ಲಿ ಪ್ರತಿಗ್ರಾಹಿಯನ್ನು "ವಿದಿತ ಕುಲೋದ್ಗಮಾಯ ವೇದಪಾರಗಾಯ ಅಸ್ಖಲಿತವೃತ್ತಯೇ....ತ್ರಿಯಂಬಕ ಸ್ವಾಮಿನೇ" ಎಂದು ಒಂದು ಕದಂಬ ಶಾಸನ ವಿವರಿಸುತ್ತದೆ. ಹೀಗೆ ದಾನ ಸ್ವೀಕರಿಸಲು ಅವನ ಕುಲ ಗೋತ್ರಗಳೂ ಶುದ್ಧವಾಗಿರಬೇಕಾಗಿತ್ತು.[342]

ಕುಲ ಬಹುಕಾಲ ಚೆನ್ನಾಗಿ ಮುಂದುವರಿಯಬೇಕೆಂಬುದು ಎಲ್ಲ ಪ್ರಾಣಿವರ್ಗದ ಸಹಜ ಆಕಾಂಕ್ಷೆಯಾದರೂ ಈ ಕಾಲದಲ್ಲಿ ಬೆಳೆದ ಕುಲದ ಬಗ್ಗೆಯ ಅಭಿಮಾನ ಅನೇಕ ರೀತಿಯ ಸಾಮಾಜಿಕ ಸ್ಥಿತ್ಯಂತರಗಳಿಗೆ ಅವಕಾಶಮಾಡಿತು. ಮೊದಲಾಗಿ ವ್ಯಕ್ತಿತ್ವವೆಂಬುದಕ್ಕೆ ಅವಕಾಶ ಕಡಿಮೆಯಾಯಿತು. ಒಬ್ಬ ವ್ಯಕ್ತಿ ಸ್ವತಃ, ಯಾವುದೇ ಕರ್ತೃತ್ವಶಕ್ತಿ ಇಲ್ಲದವನಾಗಿರಲಿ, ವ್ಯವಹಾರದಲ್ಲಿ ಬಹು ಉತ್ತಮನೇನೂ ಆಗಿರದಿರಲಿ ಅವನು ಹಿಂದಿನಿಂದಲೂ ಪ್ರಸಿದ್ಧವಾದ ಕುಲವೊಂದಕ್ಕೆ ಸೇರಿದವನಾಗಿದ್ದರೆ, ಅವನಿಗೆ ಗೌರವ ದೊರಕುವ ಅವಕಾಶ ಒದಗಿಬರುತ್ತದೆ. ಹಾಗೆ ಹೇಳಿಕೊಳ್ಳಬಹುದಾದ ವಿಶೇಷ ಕುಲಪರಂಪರೆಯಿಲ್ಲದವನು ತನ್ನ ಏಳ್ಗೆಯನ್ನು ಸಾಧಿಸಿಕೊಳ್ಳಲು ಅಗಾಧವಾಗಿ ಶ್ರಮ ವಹಿಸಬೇಕಾಗುತ್ತದೆ. ಇಲ್ಲಿ ಕುಲ ದೊಡ್ಡದಾಗಿ ವ್ಯಕ್ತಿ ಗೌಣವಾಗುತ್ತಾನೆ. ತಮ್ಮ ತಮ್ಮ ಕುಲದ ಬಗ್ಗೆ ಬೆಳೆದ ಅಭಿಮಾನದಿಂದ ಕುಲದ ಹಿರಿಮೆಯನ್ನು, ಕುಲತನವನ್ನು ಉಳಿಸಿಕೊಳ್ಳುವ ಪ್ರವೃತ್ತಿಯೂ ಬೆಳೆದು ಕುಲಧರ್ಮಗಳ ಬಗ್ಗೆ ಸಹ ಗೌರವ ಬೆಳೆಯು ವುದು ಸಹಜ. ವರ್ಣವ್ಯವಸ್ಥೆಯ ಜೊತೆಗೆ ಈ ವಂಶಪಾರಂಪರ್ಯ ಜೀವನಕ್ರಮದ (ಕುಲಧರ್ಮದ) ಬಗ್ಗೆ ಬೆಳೆದ ಗೌರವ ಮನೋಭಾವ ಸಮಾಜವನ್ನು ಹೆಚ್ಚುಮಟ್ಟಿಗೆ ವರ್ಗೀಕರಿಸುವ ಶಕ್ತಿಯುಳ್ಳಂಥದು. ಒಂದು ವಂಶದವರು ಆ ವಂಶದಲ್ಲಿ ಪಾರಂಪರ್ಯ ವಾಗಿ ಬಂದ ವೃತ್ತಿಧರ್ಮವನ್ನು ಬಿಟ್ಟು ಬೇರೊಂದನ್ನು ಅನುಸರಿಸುವುದನ್ನು ಅಸಹಜವೆಂದು ತಿಳಿಯುವ, ಅಂಥವನ್ನು ವಕ್ರದೃಷ್ಟಿಯಿಂದ ನೋಡುವ ಪ್ರವೃತ್ತಿ ಸರ್ವೇಸಾಮಾನ್ಯ ವಾಯಿತು. ಇದರಿಂದ ಹೆಚ್ಚಿನ ಜನರು ತಮ್ಮ ಕುಲದ ವೃತ್ತಿಗಳನ್ನೇ ಮುಂದುವರಿಸಿ ಕೊಂಡು ಹೋಗಬೇಕಾದ ಪರಿಸ್ಥಿತಿ ಒದಗಿಬಂದು ಜಾತಿಗಳು ಸ್ನಿಗ್ಧವಾಗಿ, ಸಮಾಜವು ಸುಲಭವಾಗಿ ಬದಲಾವಣೆ ಹೊಂದಲು ಸಾಧ್ಯವೇ ಆಗದಂತೆ ವರ್ಗೀಕೃತವಾಗಲಾರಂಭಿ ಸಿತು.

ಇಂಥ ಪರಿಸ್ಥಿತಿಯಲ್ಲಿ ಕಮ್ಮಾರ, ಚಮ್ಮಾರ ಮುಂತಾದವರು ತಮ್ಮ ವೃತ್ತಿಗಳನ್ನು

ಬಿಟ್ಟು ಜ್ಞಾನಾರ್ಜನೆ ಮಾಡುವ ಅವಕಾಶ ಒದಗಿಬರುವುದು ಅಶಕ್ಯ. ಹೀಗಾಗಿ ಗುರುಕುಲವಾಸ, ವಿದ್ಯಾರ್ಜನೆ ಈ ರೀತಿಯ ಸಾಹಿತ್ಯ ರಚನೆಗೆ ಬೇಕಾದ ಪರಿಕರಗಳು ಕೆಲವೇ ಜಾತಿಗಳವರ, ವಂಶದವರ ಸ್ವತ್ತಾಗುತ್ತ ಬಂದಿರಬೇಕು. ಪ್ರಾಚೀನ ಕರ್ಣಾಟಕದ ಮುಂದಿನ ಕಾಲದ ಸಾಹಿತ್ಯಕೃತಿಗಳನ್ನು ನೋಡಿದರೆ ಈ ಅಂಶ ಎದ್ದು ಕಾಣುತ್ತದೆ. ಈ ಪರಿಸ್ಥಿತಿಯಲ್ಲಿ ಸಾಹಿತ್ಯ ಕೆಲವೇ ಸಮಾಜವರ್ಗಗಳ ಸ್ವತ್ತಾಗುವುದು ಸಹಜ.

ಕರ್ಣಾಟಕದಲ್ಲಿ ಇಂಥ ಸ್ಥಿತಿ ಸುಮಾರು ೪–೫ನೆಯ ಶತಮಾನಗಳ ಅನಂತರದಲ್ಲಿ ಒದಗಿರಬಹುದು ಎಂದು ಕೆಲವು ಸಾಂದರ್ಭಿಕ ಸಾಕ್ಷ್ಯಗಳಿಂದ ಊಹಿಸಬಹುದು. ಔತ್ತರೇಯ ನೀತಿ ನಿಯಮಗಳನ್ನು ಪಾರಂಪರ್ಯವಾಗಿ ರೂಢಿಸಿಕೊಂಡು, ಅಲ್ಲಿಂದಲೇ ಬಂದು ನೆಲಸಿದ ಕುಲಗಳ ಸಂಖ್ಯೆ ಈ ದೇಶದಲ್ಲಿ ಹೆಚ್ಚು ಇರಲಾರದು. ಸಹಜವಾಗಿ ಔತ್ತರೇಯ ರೀತಿಯ ಹಲವು ವರ್ಣವರ್ಗಗಳಿಗೆ ಈ ಯಾವ ಕುಲ-ವರ್ಣದ ಸೋಂಕೂ ಇಲ್ಲದಿದ್ದ ಇಲ್ಲಿಯ ಹಲವು ಜನ ಸೇರ್ಪಡೆಯಾಗಿರಬೇಕು. ಕದಂಬ, ಗಂಗ ಶಾಸನಗಳಲ್ಲಿ ಬರುವ ವ್ಯಕ್ತಿನಾಮಗಳನ್ನು ಗಮನಿಸಿದರೆ ಇದರ ಸುಳಿವು ದೊರಕುತ್ತದೆ. ಅವುಗಳಲ್ಲಿ ಕೆಲವೆಡೆ ಉಕ್ತವಾಗಿರುವ ಕೋಲನ, ಪಣ್ಣ,[343] ತದಙ್ಗುಟ್ಟ,[344] ಮಾದಿಶಮ್ಮ[345] ಮುಂತಾದ ಬ್ರಾಹ್ಮಣರು ಸ್ಥಳೀಯ ಮೂಲದವರೇ ಇರಬೇಕೆನಿಸುತ್ತದೆ. ಆದರೆ ಈ ಸ್ಥಿತಿ ಹೆಚ್ಚುಕಾಲ ಮುಂದುವರಿದಂತೆ ತೋರುವುದಿಲ್ಲ. ಸಮಾಜದಲ್ಲಿ ವರ್ಣ-ಕುಲ ಪದ್ಧತಿ ಪ್ರಚಲಿತವಾಗಿದ್ದರೂ, ಇಂಥ ರೂಢಿಗೆ ವಿರೋಧವಾಗಿ ನಡೆದಿರುವ ಕೆಲವರ ವಿಷಯಗಳೂ ಇತಿಹಾಸದಲ್ಲಿ ಕಂಡುಬರುತ್ತವೆ. ಉದಾಹರಣೆಗೆ, ಕದಂಬ ಮಯೂರಶರ್ಮನೇ ಸ್ವತಃ ಬ್ರಾಹ್ಮಣನಾಗಿದ್ದರೂ ಕ್ಷಾತ್ರವೃತ್ತಿಯನ್ನು ಕೈಕೊಂಡ. ಕೆಲವು ಸಂದರ್ಭಗಳಲ್ಲಿ ಬ್ರಾಹ್ಮಣರೂ ಕೃಷಿಕರ್ಮವನ್ನು ಮಾಡುತ್ತಿದ್ದರೆಂದು ಹಿಂದೆಯೇ ತಿಳಿಸಿದೆ. ಜನಸಾಮಾನ್ಯರ ನೆಲೆಯವರೇ ಆಗಿದ್ದು ಸ್ವಪೌರುಷದಿಂದ ರಾಜ್ಯ ಅಧಿಕಾರಗಳನ್ನು ಸಾಧಿಸಿ, ಅನಂತರ ಉತ್ತಮ ಕುಲದವರು ತಾವೆಂದು ಪರಿಗಣಿಸಿರುವ ಜನರ ಕೆಲವು ಉದಾಹರಣೆಗಳನ್ನು ಇತಿಹಾಸದಿಂದ ಕೊಡಬಹುದು. ಪ್ರಾಯಶಃ ಇಂಥವನ್ನು ಆಯಾ ವ್ಯಕ್ತಿಗಳ ಸ್ವತಃಸಾಧನೆ ಎಂದೂ ರೂಢಿಯ ಅಪವಾದಗಳೆಂದೂ ಪರಿಗಣಿಸಬಹುದು.

ಈ ವರ್ಣ-ಕುಲಗಳನ್ನು ಸ್ವಲ್ಪಮಟ್ಟಿಗೆ ನಿರಾಕರಿಸಿದವರು ಜೈನರು ಮತ್ತು ಪಾಶುಪಾತರು. ಇವರ ಈ ಮನೋಧರ್ಮ ಲೋಕರೂಢಿಯಾಗಿ ಬೆಳೆಯುತ್ತಿದ್ದ ವ್ಯವಸ್ಥೆಯನ್ನು ಎಷ್ಟರಮಟ್ಟಿಗೆ ತಡೆಯಿತು ಎಂದು ಊಹಿಸುವುದು ಕಷ್ಟ. ಆದರೆ ಕೇವಲ ಒಂದೇ ಜಾತಿ ಅಥವಾ ವರ್ಗಗಳ ಸ್ವತ್ತಾಗಬಹುದಾಗಿದ್ದ ವಿದ್ಯೆ ಮತ್ತು ಸಾಹಿತ್ಯವನ್ನು ಭೇದವಿಲ್ಲದೆ ಆಸಕ್ತರೆಲ್ಲರಿಗೂ ಎಟುಕುವಂತೆ ಮಾಡಿದ ಪ್ರಯತ್ನ ಈ ಧರ್ಮಾನುಯಾಯಿಗಳಲ್ಲಿ ಕಾಣುತ್ತದೆ.[346]

ಮೇಲಿನ ಸಾಮಾಜಿಕ ವಿಚಾರಗಳಿಂದ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಮೂರು ಅಂಶಗಳು ಸ್ಫುರಿತವಾಗುತ್ತವೆ:

ನಂದ-ಮೌರ್ಯರ ಕಾಲದಲ್ಲಿ ಕರ್ಣಾಟಕದಲ್ಲಿ ಪ್ರಚಲಿತವಾಗಲಾರಂಭವಾದ ನಗರ

ಘಟ್ಟದ ಸಂಸ್ಕೃತಿ (Urban Stage) ಸಾತವಾಹನರ ಕಾಲದಲ್ಲಿ ಒಂದು ಸ್ಥಿತಿಯನ್ನು ಪಡೆದು ಅಂದಿನಿಂದ ದಿನೇ ದಿನೇ ಆರ್ಥಿಕವಾಗಿ ಉನ್ನತಿಯನ್ನು ಸಾಧಿಸಿಕೊಂಡಿತು. ಇದರ ಫಲಿತವಾಗಿ ಸಂಪತ್ತಿನ ಹೆಚ್ಚಳವಾಗಿ ಸ್ಥಿತಿವಂತ ವರ್ಗಗಳು ರೂಪಿತವಾದುವು. ಇದರ ಜೊತೆಯಲ್ಲೇ ರಾಜಕೀಯವ್ಯವಸ್ಥೆ ಬಹುಮುಖವಾಗಿ ಬೆಳೆದು ಅಧಿಕಾರಿ ಜನರ ಸಂಖ್ಯೆಯೂ ಬೆಳೆಯಿತು. ಹೀಗೆ ಸ್ಥಾಪಿತವಾದ, ಕಲೆ ಸಾಹಿತ್ಯಾದಿಗಳತ್ತ ಅಭಿರುಚಿ ತೋರಲು ಧನ ಮತ್ತು ಸಮಯಾವಕಾಶವುಳ್ಳ ಉಚ್ಚವರ್ಗ ಸಾಹಿತ್ಯಸೃಷ್ಟಿಗೆ ಬೆನ್ನಲು ಬಾಗಿರಬೇಕು ಎಂಬುದು ಮೊದಲನೆಯದು. ವ್ಯಕ್ತಿಪೋಷಣೆಯಲ್ಲಿ ಬೆಳೆದ ಸಾಹಿತ್ಯದಲ್ಲಿ ವ್ಯಕ್ತಿಗಳನ್ನು ಉದಾತ್ತರಾಗಿ, ವೀರರಾಗಿ ಚಿತ್ರಿಸುವ ಸಾಹಿತ್ಯಕೃತಿಗಳು ಹುಟ್ಟುವ ಸಾಧ್ಯತೆ ಹೆಚ್ಚು ಎಂಬುದು ಇದರ ಉಪಾಂಶ.[347]

ಹೆಚ್ಚಿನ ವಿದ್ಯಾಕೇಂದ್ರಗಳು ಧರ್ಮಸಂಬಂಧದ ಸಂಸ್ಥೆಗಳೂ ಆಗಿದ್ದುವು. ಆದ್ದರಿಂದ ತತ್ಕಾಲೀನ ಗ್ರಾಂಥಿಕ ಸಾಹಿತ್ಯ ಹೆಚ್ಚಿನ ಮಟ್ಟಿಗೆ ಧರ್ಮಸಂಬಂಧವಾದುದೇ ಆಗಿರ ಬೇಕೆಂಬುದು ಎರಡನೆಯದು.

ಕುಲವಂಶಗಳ ಬಗೆಗಿನ ಗೌರವಮನೋಭಾವ ಪ್ರಬಲವಾಗಿದ್ದುದರಿಂದ, ಜಾತಿ-ಕುಲ ಗಳು ಸ್ನಿಗ್ಧವಾಗತೊಡಗಿದವು. ಗ್ರಾಂಥಿಕವಿದ್ಯಾಧ್ಯಯನವೂ ಕುಲಧರ್ಮಗಳಲ್ಲಿ ಒಂದೆಂದು ಪರಿಗಣಿಸಿದ್ದ ಕೆಲವೇ ವರ್ಗಗಳವರು ಸಾಹಿತ್ಯಸೃಷ್ಟಿಗೆ ಬಹುಪಾಲುಕಾರಣರಾಗುವ ಸ್ಥಿತಿಯೂ ಇದ್ದಿತು ಎಂಬುದು ಮೂರನೆಯದು. ಇವರು ರಚಿಸಿದ ಸಾಹಿತ್ಯ ಅವರ ಶಾಸ್ತ್ರಾಧ್ಯಯನಕ್ಕೆ, ಗ್ರಾಂಥಿಕ ವಿದ್ಯೆಗಳಿಗೆ ಸಂಬಂಧಿಸಿರುವ ಸಂಭವ ಹೆಚ್ಚು ಎಂಬುದು ಇದರ ಉಪಾಂಶ.

# ಕಲೆಗಳು

## ವಾಸ್ತುಕಲೆ

### ಪೀಠಿಕೆ

ಭಾರತೀಯ ಮನೋಧರ್ಮ ಆಧ್ಯಾತ್ಮಪರವಾದದ್ದು. ಇದು ಅದರ ಕಲೆಗಳಲ್ಲಿಯೂ ವ್ಯಕ್ತವಾಗಿದೆ. ಭಾರತೀಯ ಜೀವನ, ಧರ್ಮ ಸಂಸ್ಕೃತಿಗಳನ್ನೇ ಆ ಕಲೆಗಳು ಕಾಣಿಸಿವೆ; ಅನನ್ಯವಾದ ಮಾರ್ಗವೊಂದನ್ನು ರೂಪಿಸಿವೆ.

ಆನಂದಕುಮಾರಸ್ವಾಮಿಯವರ ಅನ್ವೇಷಣೆಯ ಸಾಧನೆಯಿಂದಾಗಿ ಭಾರತೀಯ ಕಲೆಗಳ ಅಧ್ಯಯನದಲ್ಲಿ ಹೊಸದಿಗಂತವೊಂದು ತೆರೆಯಿತೆನ್ನಬೇಕು. ಅಲ್ಲಿಯವರೆಗೂ ಪಾಶ್ಚಾತ್ಯ ವಿದ್ವಾಂಸರ ಕುತೂಹಲಕ್ಕೆ ಮೀಸಲಾಗಿ, ಬಹುಶಃ ತಪ್ಪು ಅಭಿಪ್ರಾಯಕ್ಕೆ ಕಾರಣವಾಗಿದ್ದ ಭಾರತೀಯ ಕಲೆ ಆಗ ಸರಿಯಾಗಿ ಅರ್ಥವಾಗಲು ತೊಡಗಿತು; ಅದರ ಆಧ್ಯಾತ್ಮಿಕ ಸ್ವರೂಪವನ್ನು ಎತ್ತಿತೋರಿಸಲು ಸಾಧ್ಯವಾಯಿತು. ಅಲ್ಲಿಂದೀಚೆಗೆ ಹಲವು

ವಿದ್ವಾಂಸರ ಪರಿಶ್ರಮದ ಮೂಲಕ ಭಾರತೀಯ ಕಲೆ ಜಗತ್ತಿನ ಕಲಾಸಾಮ್ರಾಜ್ಯದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದುಕೊಳ್ಳುವುದರಲ್ಲಿ ಯಶಸ್ವಿಯಾಗಿದೆ.

ಕಲೆ ಸಂಸ್ಕೃತಿಯ ವಿಕಾಸದ ಹಂತಗಳನ್ನು ಪ್ರತಿನಿಧಿಸುತ್ತದೆ, ಪ್ರತಿಮಿಸುತ್ತದೆ. ರಾಷ್ಟ್ರದ ಹಾಗೂ ಜನತೆಯ ಸಂಸ್ಕೃತಿಸಂಬಂಧವಿರುವ ಕಲೆ, ಅದರ ರಾಜಕೀಯ ಸಾಮಾಜಿಕ ಬುನಾದಿಯಿಂದಲೇ ಕೂಡಿರುತ್ತದೆ. ಹೀಗಿರುವಾಗ ಇಲ್ಲಿ 'ಕಲೆಗಾಗಿ ಕಲೆ' ಎಂಬುದು ಒಪ್ಪತಕ್ಕದ್ದಲ್ಲ. ಒಂದು ಗೊತ್ತಾದ ಜನಸಮೂಹದ ಸಂಸ್ಕೃತಿ ಸಮಾಜದ ಕೆಲವು ವ್ಯಕ್ತಿಗಳ ಸೃಷ್ಟ್ಯಾತ್ಮಕ ಶಕ್ತಿಯ ಫಲವಾಗಿದೆ.[348] ಆದ್ದರಿಂದ ಭಾರತೀಯ ಕಲೆ ಭಾರತೀಯರ ಆಧ್ಯಾತ್ಮಿಕಮನೋಭಾವ, ನಂಬಿಕೆ ಹಾಗೂ ಸಂಪ್ರದಾಯಗಳ ನಿರೂಪಣೆಯೇ ಆಗಿದೆ. ಅದು ಪ್ರಧಾನವಾಗಿ ಧಾರ್ಮಿಕವಾದುದು, ತಾತ್ತ್ವಿಕವಾದುದು. ಎಂದ ಮಾತ್ರಕ್ಕೆ ತತ್ತ್ವ ಹಾಗೂ ಧರ್ಮಶಾಸ್ತ್ರಗಳ ಸೂತ್ರಗಳಿಂದ ಕೂಡಿದ್ದು ಎಂದು ಇದರ ಅರ್ಥವಲ್ಲ. ಭಾರತೀಯರು ಧರ್ಮ ಮತ್ತು ಕಲೆಯನ್ನು ಯಾವಾಗಲೂ ಬೇರೆ ಬೇರೆ ಎಂದು ವಿಭಜಿಸಿದಂತೆ ಕಾಣಬರುವುದಿಲ್ಲ. ಇವೆರಡೂ ಅವರ ಜೀವನದಲ್ಲಿ ಹಾಸು ಹೊಕ್ಕಾಗಿ ಸೇರಿಹೋಗಿವೆ.

ಭಾರತೀಯ ಕಲಾ ಸಂಪ್ರದಾಯದಲ್ಲಿ ಶುದ್ಧ ವೈಯಕ್ತಿಕ ಕಲೆಯೆಂಬುದು ವಿರಳ; ಅದರ ವ್ಯಾಪ್ತಿಯಲ್ಲಿ, ಆಳದಲ್ಲಿ ಅದು ರಾಷ್ಟ್ರೀಯವಾದುದು. ಅದರ ಆದರ್ಶಗಳು ರಾಷ್ಟ್ರದ ಆದರ್ಶಗಳು; ಅದರ ಸೂತ್ರಗಳು ಸಾಮಾನ್ಯಜನರಿಂದ ಮಾನ್ಯವಾದ ಸೂತ್ರಗಳು. ಕಲೆಗಾರ ತನ್ನ ಜನಾಂಗದ ಆದರ್ಶ ಹಾಗೂ ದರ್ಶನಗಳನ್ನು ರೂಪಿಸುತ್ತಿದ್ದ. ಆದ್ದರಿಂದ ಇಲ್ಲಿ ಕಲೆ ಜನಾಂಗವೊಂದರ ಸಾಮೂಹಿಕ ಅಭಿವ್ಯಕ್ತಿಯಾಗಿ ನಿಂತಿದೆ. ಹೀಗಾಗಿ, ಈ ಕಲೆಯ ಒಂದು ಮಹತ್ತ್ವ ಎಂದರೆ, ಕಲೆಯನ್ನು ಸಾರ್ವಜನಿಕರ ಸೊತ್ತನ್ನಾಗಿ ಮಾಡಿ ಜನತೆಯ ಉಡಿಗೆತೊಡಿಗೆಗಳಲ್ಲಿ, ಆಚಾರವ್ಯವಹಾರಗಳಲ್ಲಿ, ಮನೆಬಳಕೆಯ ವಸ್ತುಗಳಲ್ಲಿ, ಕಲೆಯನ್ನು ಸಂಮಿಶ್ರಣಗೊಳಿಸಿ ಜನಪ್ರಿಯವಾಗುವಂತೆ ಮಾಡಿದುದು.[349] ಜೀವನದ ತತ್ತ್ವಗಳನ್ನೂ ಮೌಲ್ಯಗಳನ್ನೂ ಎತ್ತಿ ತೋರಿಸುವ ಇಲ್ಲಿಯ ಕಲೆಗಳು ಬದುಕುವ ಕಲೆಯನ್ನೂ ಕಲಿಸಿಕೊಡುತ್ತವೆ. ಭಾರತೀಯ ಧಾರ್ಮಿಕ ಸಂಸ್ಕೃತಿಯ ಭಾವನೆ ಜೀವನಗಳ ಸ್ಪಂದನವಾಗಿದ್ದು, ಆಧ್ಯಾತ್ಮಿಕ ಆನುವಂಶಿಕತೆಯನ್ನು ಪಡೆದುಕೊಂಡಿವೆ. ಕಲಾವಿದರು ಕೇವಲ ತಮ್ಮ ಹೊರಗಣ್ಣಿನ 'ಮಾದರಿ'ಗಳನ್ನು ಪ್ರತಿಮಾಡಿದವರಲ್ಲ; ಅವರ 'ಮಾದರಿ'ಗಳು ಮನಸ್ಸಿನ ಪ್ರತಿಮೆಗಳು, ಧ್ಯಾನದಿಂದಾದ ದರ್ಶನಗಳು. ಈ ದೃಷ್ಟಿಯಿಂದಲೇ ಭಾರತೀಯ ಕಲೆ ಸರ್ವೋಚ್ಚ ಸೃಷ್ಟಿಗುಣವುಳ್ಳದ್ದು, ಧ್ಯಾನದಿಂದ ಫಲಿತವಾದದ್ದು.[350]

ಶೈಲಿ, ವಿಧಾನ, ತತ್ತ್ವ ಹಾಗೂ ಮೌಲ್ಯಗಳಲ್ಲಿ ಭಾರತೀಯ ಕಲೆಗೆ ತನ್ನದೇ ಆದ ವೈಶಿಷ್ಟ್ಯವಿದೆ, ಸಂಪ್ರದಾಯವನ್ನು ಸೃಜಿಸುವ ಶಕ್ತಿ ಇದೆ. ಇಲ್ಲಿ ಭಕ್ತಿಯೇ ಚಾಲನ ಶಕ್ತಿ, ಆಧ್ಯಾತ್ಮವೇ ಸ್ಫೂರ್ತಿ. ಗೋಚರಾಗೋಚರಗಳ, ಲೌಕಿಕಾಲೌಕಿಕಗಳ ನಡುವೆ ಇಲ್ಲಿನ ಕಲೆಗಳು ನಡೆದಾಡಿವೆ. ಆತ್ಮ ಅನಂತ; ಅದು ಏಕಮೇವ, ಒಡೆಯ, ಸೃಷ್ಟಿಗೆ

ಕಾರಣಕರ್ತ—ಎಂಬ ದೃಷ್ಟಿ ಭಾರತೀಯ ಕಲೆಯ ಜೀವ, ಉಸಿರು. ಶಿಲ್ಪವಾಗಲಿ, ಚಿತ್ರವಾಗಲಿ, ಯಾವುದೇ ಕಲೆಯಾಗಲಿ ಇದಕ್ಕನುಸಾರವಾಗಿಯೇ ಸೃಷ್ಟಿಯಾಗುತ್ತಿತ್ತು. ಕಲೆಗಾರ ತನ್ನನ್ನು, ತನ್ನ ಆತ್ಮನನ್ನು ಪ್ರಕೃತಿಯೊಡನೆ ಸಮೀಕರಿಸುತ್ತಿದ್ದುದು ಎಲ್ಲ ಏಷ್ಯನ್ ಕಲೆಗಳ ಮೂಲವಿಷಯವಾಗಿತ್ತೆನ್ನಬೇಕು. ಹಾಗೆಂದ ಮಾತ್ರಕ್ಕೆ ಕಲೆ ಪ್ರಕೃತಿಯ ನಕಲಾಗಿತ್ತು ಎಂದು ಅರ್ಥವಲ್ಲ. ಭಾರತೀಯ ಜೀವನದಲ್ಲಿ ಕಲಾವಿದ ಕೇವಲ ಬಿಂಬಗ್ರಾಹಿಯಲ್ಲ; ಅವನು ದಾರ್ಶನಿಕನೂ ಗುರುವೂ ಆಗಿದ್ದಾನೆ.[351] ಎಂಬ ಮಾತನ್ನು ಇಲ್ಲಿ ಗಮನಿಸಬೇಕು. ಭಾರತದಲ್ಲಿ ವೈದಿಕ, ಬೌದ್ಧ, ಜೈನ ಮುಂತಾದ ವಿವಿಧ ರೀತಿಯ ಕಲಾಪ್ರಕಾರಗಳು ಪ್ರಸಿದ್ಧವಾಗಿವೆ. ಜಾತಿಮತಗಳಲ್ಲಿ ಭರತಖಂಡ ಅನೇಕತೆಯನ್ನು ಹೊಂದಿದ್ದರೂ, ಅದು ಮೂಲಸತ್ತ್ವದಲ್ಲಿ ಒಂದೇ ಎಂಬುದಕ್ಕೆ ಲಲಿತ ಕಲೆಗಳೂ ಸಾಕ್ಷ್ಯ ಹೇಳಬಲ್ಲವು.

ಭಾರತೀಯ ಕಲೆ ವೇದಕಾಲದಿಂದಲೂ ಅನುಸ್ಯೂತವಾಗಿ ನಡೆದುಬಂದಿದೆ. ವೇದಕಾಲೀನ ಕಲೆಯಲ್ಲಿ ನಾವು ತತ್‌ಕ್ಷಣದ ಬೆಳವಣಿಗೆಯೇನನ್ನೂ ಕಾಣದಿದ್ದರೂ ಲಲಿತಕಲೆಗಳಲ್ಲಿ ಅದು ತನ್ನದೇ ಆದ ಸಂಪತ್ತನ್ನು ಪಡೆದಿತ್ತು. ವೇದಕಾಲದ ನಂತರ ಇಲ್ಲಿಯ ಕಲೆಗೆ ಪ್ರೇರಣೆಯಾಗಿ, ಜೀವಶಕ್ತಿಯಾಗಿ ನಿಂತಿದ್ದೆಂದರೆ ಬುದ್ಧನ ಬೋಧನೆ. ಈ ಕಲೆಯ ಇತಿಹಾಸದಲ್ಲಿ ಬೌದ್ಧಕಾಲ ಹೊಸ ಮನ್ವಂತರವೊಂದನ್ನು ತೆರೆಯಿತು; ಬೌದ್ಧಕಲೆಯೆಂಬ ಹೊಸ ವಿಧಾನ ಸ್ಥಾಪನೆಯಾಯಿತು. ಮಾನವಚಾರಿತ್ರ್ಯವನ್ನೂ ಬದುಕಿನ ವಾಸ್ತವತೆಯನ್ನೂ ಈ ಕಾಲ ತುಂಬಿಕೊಟ್ಟಿತು. ಅಶೋಕನ ಕಾಲದಲ್ಲಿ ಇದು ಹೆಚ್ಚು ಪ್ರಚಾರಕ್ಕೆ ಬಂದಿತು. ಬೌದ್ಧಧರ್ಮದ ಪ್ರಸಾರದ ಜೊತೆಯಲ್ಲಿ ಕಲೆಯ ಪ್ರಸಾರವೂ ನಡೆಯಿತು. ಬೌದ್ಧಕಲೆಯ ಶ್ರೇಷ್ಠ ನಿದರ್ಶನಗಳನ್ನು ಬಾರ್ಹೂತ್, ಸಾಂಚಿ, ಮಥುರ, ಬುದ್ಧಗಯ, ಸಾರನಾಥ, ಅಮರಾವತಿ, ಅಜಂತ, ಎಲ್ಲೋರ ಮುಂತಾದೆಡೆಗಳಲ್ಲಿ ಕಾಣಬಹುದು. ಇಲ್ಲಿ ಆ ಕಾಲದ ವಾಸ್ತುಶಿಲ್ಪ, ಚಿತ್ರಕಲೆಗಳನ್ನು ಪ್ರತಿನಿಧಿಸುವ ಬೌದ್ಧ ಪುರಾತನ ಅವಶೇಷಗಳಿವೆ. ಪ್ರಾಯಶಃ ಇವು ಕ್ರಿ.ಪೂ. ೩ನೆಯ ಶತಮಾನಕ್ಕಿಂತ ಹಿಂದಿನವುಗಳಾಗಿರಲಿಕ್ಕಿಲ್ಲ. ಆದರೂ ವಿಕಾಸ ಹೊಂದಿದ ಸ್ಥಿತಿಯನ್ನು ತಲುಪಬೇಕಾದರೆ ಕೆಲವು ಶತಮಾನಗಳೇ ಹಿಡಿದಿರಬೇಕೆಂದು ಹೇಳಬೇಕಾಗುತ್ತದೆ. ದಕ್ಷಿಣ ಭಾರತದಲ್ಲಿ ಕೆತ್ತನೆಯ ಕಲೆ ಕ್ರಿ.ಪೂ. ೩ನೆಯ ಶ. ದ ಹೊತ್ತಿಗೆ ಉನ್ನತಸ್ಥಿತಿಯಲ್ಲಿತ್ತೆಂಬುದು ವಿದ್ವಾಂಸರ ಗ್ರಹಿಕೆ.[352]

ಮತ್ತೊಂದು ವಿಚಾರವೆಂದರೆ, ಕಲೆಗಳಿಗೂ ರಾಜರಿಗೂ ಇರುವ ಸಂಬಂಧ ಮತ್ತು ಸಂಪರ್ಕ. ಕಲೆಯ ಬೆಳವಣಿಗೆಗೆ ರಾಜರ ನಿರಂತರ ಪ್ರೋತ್ಸಾಹ ಸಹಾಯ ಸಿಕ್ಕಿದುವು. ವೈಯಕ್ತಿಕ ಅಭಿರುಚಿಯೋ ವೈಭವ ಪ್ರದರ್ಶನವೋ ದಾನಶೀಲತೆಯೋ ಅಥವಾ ದಿಗ್ವಿಜಯ ಸ್ಮರಣೆಯೋ ರಾಜರಿಂದಲೂ ರಾಜಸಂಬಂಧಿಗಳಿಂದಲೂ ನಾಡಿನ ನಾನಾ ಕಡೆಗಳಲ್ಲಿ ದೇವಾಲಯಗಳು ನಿರ್ಮಾಣಗೊಂಡಿವೆ. ರಾಜರು ದತ್ತಿಗಳನ್ನು ಬಿಡುವುದರ ಮೂಲಕ ಅವು ದೇಶದ ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಕೇಂದ್ರಗಳಾಗಿ, ಆದರಿಂದ ಜನ

ಜೀವನದ ಒಳಿತು ಸಾಧಿತವಾಗಿವೆ. ಒಂದೊಂದು ಮನೆತನದ ಕಾಲದಲ್ಲೂ ವಿಶೇಷ ರೀತಿಯ ಕಲಾವಿಧಾನ ಪ್ರಕಟವಾಗಿದ್ದು, ತನ್ನದೇ ಆದ ತಂತ್ರನೈಪುಣ್ಯವನ್ನು ಅದು ಪಡೆದುಕೊಂಡಿದೆ. ಈ ಹಿನ್ನೆಲೆಯಲ್ಲಿ ಭಾರತೀಯ ಕಲೆಗೆ ಮಹತ್ತ್ವವಿದೆ. ಭಾರತೀಯ ಧರ್ಮ ಮತ್ತು ತತ್ತ್ವಗಳ ಬೆಳಕಿನಲ್ಲಿ ಓದುವವರಿಗೆ ಅದು ಸುಲಭವಾಗಿ ಗ್ರಾಹ್ಯವಾಗುವುದು[೩೬೩], ವಿಶೇಷವಾದ ಅರ್ಥವನ್ನು ಕೊಡುವುದು.

ಮೇಲಿನ ವಿವೇಚನೆಯಿಂದ ಭಾರತೀಯ ಕಲೆಯ ವಿಶಿಷ್ಟತೆಯನ್ನು ತಿಳಿದಂತಾಯಿತು. ಕರ್ಣಾಟಕದ ಕಲೆಗಳಿಗೂ ಇದು ಅನ್ವಯಿಸುವುದು. ಭಾರತೀಯ ಸಂಪ್ರದಾಯದಲ್ಲಿಯೇ ಇದು ನಡೆದು, ಅದರ ವಿಶೇಷವಿಧಾನ ರೂಪವಿನ್ಯಾಸಗಳನ್ನೆಲ್ಲ ಪಡೆದಿರುವುದರ ಜತೆಗೆ 'ಕರ್ಣಾಟಕ ಶೈಲಿ' ಎಂಬ ವಿಶಿಷ್ಟ ಪ್ರಕಾರವೊಂದನ್ನು ಭಾರತೀಯ ಕಲಾಪರಂಪರೆಗೆ ತನ್ನ ಕಾಣಿಕೆಯಾಗಿ ನೀಡಿದ್ದು ಇದರ ಒಂದು ವಿಶೇಷ. ಇದರ ಮೊದಲ ಹೊಳಹು ವಾಸ್ತುಪ್ರಾಸಾದ ನಿರ್ಮಾಣ ಮತ್ತು ವಿಗ್ರಹಗಳ ಕೆತ್ತನೆಗಳಲ್ಲಿ; ಕ್ರಮೇಣ ವಿವಿಧ ಅಂಗೋಪಾಂಗಗಳನ್ನು ಬೆಳಸಿಕೊಂಡು 'ಕರ್ಣಾಟಕಶೈಲಿ' ಎಂಬುದು ರೂಢಿಗತವಾಗಿರಬೇಕು. ಲೋಕಪ್ರಖ್ಯಾತವಾಗಿರುವ ಅಜಂತ ಎಲ್ಲೋರ ಶಿಲ್ಪಗಳು, ಬಾಹುಬಲಿಯ ಬೃಹನ್ಮೂರ್ತಿ, ಬೇಲೂರು ಶಿಲಾಬಾಲಿಕೆಗಳು ಭಾರತೀಯ ಕಲಾಪರಂಪರೆಗೆ ಕರ್ಣಾಟಕದ ಸತ್ತ್ವಪೂರ್ಣ ಕಾಣಿಕೆಗಳಾಗಿವೆ. ವಾಸ್ತುಶಿಲ್ಪಕಲೆಯ ತೊಟ್ಟಿಲಾಗಿರುವ ಬಾದಾಮಿ, ಐಹೊಳೆ, ಪಟ್ಟದಕಲ್ಲುಗಳ ಕಲೆಯನ್ನು ಮರೆಯುವಂತಿಲ್ಲ. ಮೌರ್ಯರು, ಸಾತವಾಹನರು, ಕದಂಬರು, ಗಂಗರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರದ ಅರಸರು ಮೈಸೂರು ದೊರೆಗಳು ಮುಂತಾಗಿ ಸಣ್ಣ ದೊಡ್ಡ ರಾಜರುಗಳೆಲ್ಲ ಕರ್ಣಾಟಕದ ಕಲೆಗಳನ್ನು ಆಸಕ್ತಿಯಿಂದ ಬೆಳಸಲು ಪ್ರೋತ್ಸಾಹವನ್ನು ಕೊಟ್ಟಿದ್ದಾರೆ. ಕರ್ಣಾಟಕದಲ್ಲಿ ಮೊದಲು ಬೌದ್ಧ ಜೈನಧರ್ಮಗಳೂ ತರುವಾಯ ವೈದಿಕಧರ್ಮವೂ ಪ್ರಾಬಲ್ಯದಲ್ಲಿದ್ದವುಗಳಾದ್ದರಿಂದ, ಕಲೆಗಳ ಇತಿಹಾಸದಲ್ಲಿಯೂ ಅದರ ಪ್ರಭಾವವಿದೆ. ಇಲ್ಲಿಯ ಕಲಾವಿದರು ತಮ್ಮ ಅಸದೃಶ ಪ್ರತಿಭೆಯಿಂದ ಸಂಸ್ಕೃತಿ ಕರ್ಣಾಟಕವನ್ನು ಕಡೆದಿದ್ದಾರೆ, ಕಟ್ಟಿದ್ದಾರೆ. ವೈವಿಧ್ಯ, ಉತ್ಕೃಷ್ಟತೆ ಹಾಗೂ ಅಪೂರ್ವತೆಗಳಿಂದ ಕೂಡಿದ ಕಲೆಗಳ ಸೃಷ್ಟಿ ಇಲ್ಲಿ ನಡೆದಿದೆ. ಸಂಖ್ಯೆ ಗುಣಗಳೆರಡರಲ್ಲಿಯೂ ಕರ್ಣಾಟಕ ಮೊದಲ ಮನ್ನಣೆಗೆ ಪಾತ್ರವಾಗುವಂಥ ಕಲಾನಿರ್ಮಿತಿಯನ್ನು ಪಡೆದಿದೆ.

ಕರ್ಣಾಟಕದ ಇತಿಹಾಸ ನಮಗೆ ಖಚಿತವಾಗಿ ತಿಳಿದುಬಂದಿರುವುದು ಕ್ರಿ.ಪೂ. ೪ನೆಯ ಶ.ದಿಂದ ಈಚೆಗೆ; ಕ್ರಿ.ಪೂ. ೩ನೆಯ ಶ.ದಲ್ಲಿ ಕನ್ನಡ ನಾಡನ್ನು ಮೌರ್ಯರು ಆಳುತ್ತಿದ್ದರು. ಇದರ ಹಿಂದಿನದು ಇತಿಹಾಸಪೂರ್ವಕಾಲ. ಇದರ ಬಗ್ಗೆ ನಮಗೆ ಗೊತ್ತಿರುವುದು ಅತ್ಯಲ್ಪ. ಕ್ರಿ.ಶ. ೯–೧೦ನೆಯ ಶ.ದವರೆಗೆ ಕದಂಬರು, ಗಂಗರು, ಬಾದಾಮಿ ಚಾಲುಕ್ಯರು ಮತ್ತು ರಾಷ್ಟ್ರಕೂಟರ ಆಳ್ವಿಕೆ ಬರುತ್ತದೆ. ಈ ಪ್ರತಿಯೊಂದು ಮನೆತನದ ಆಳ್ವಿಕೆಯ ಕಾಲದಲ್ಲೂ ಕರ್ಣಾಟಕ ಕಲೆ ಪರಿಣತಿಯ ಹಲವು ಪ್ರಮುಖ ಮಜಲುಗಳನ್ನು ಮುಟ್ಟಿತು, ದಾಟಿತು. ಕರ್ಣಾಟಕದಲ್ಲಿ ಸು. ೯ನೆಯ ಶ.ದವರೆಗೆ ಅದರ ಚರಿತ್ರೆಯನ್ನು ಕೆಲಮಟ್ಟಿಗೆ ಗುರುತಿಸಬಹುದು.

## ಕರ್ನಾಟಕದಲ್ಲಿ ವಾಸ್ತುಕಲೆಯ ಆರಂಭ

ಭಾರತೀಯ ವಾಸ್ತುವಿನ ಶೈಲಿ ಮತ್ತು ವರ್ಗೀಕರಣದ ಬಗ್ಗೆ ಕೆಲ ವಿಚಾರಗಳನ್ನಿಲ್ಲಿ ಗಮನಿಸಬೇಕು. ಪ್ರಾಚೀನ ವಾಸ್ತುಶಾಸ್ತ್ರದ ಪ್ರಕಾರ ಮೊದಲಿದ್ದ ಎರಡು ಶೈಲಿಗಳೆಂದರೆ ವಿಶ್ವಕರ್ಮ ಮತ್ತು ಮಯ ಎಂಬ ಹೆಸರಿನಿಂದ ಪ್ರಸಿದ್ಧವಾದವು. ಇದರ ಮೇಲೆಯೇ ಮುಂದೆ ನಾಗರ ಮತ್ತು ದ್ರಾವಿಡ ಶೈಲಿಗಳು ರೂಪಿತವಾದ್ದು. ಅನಂತರ ಭಾರತೀಯ ಶಿಲ್ಪ ಶಾಸ್ತ್ರವನ್ನು ಗಮನಿಸಿ ವಿದ್ವಾಂಸರು ದ್ರಾವಿಡ, ನಾಗರ ಮತ್ತು ವೇಸರಗಳೆಂದು ಮೂರು ರೀತಿಗಳನ್ನು ವಿಂಗಡಿಸಿದರು. ಇವುಗಳ ಬಗ್ಗೆ 'ಬೃಹತ್ ಸಂಹಿತೆ' ಮತ್ತು ಆಗಮಗಳಲ್ಲಿ ಕೆಲಮಟ್ಟಿಗೆ, ಮತ್ತು 'ಮಾನಸಾರ'ದಲ್ಲಿ ವಿವರವಾಗಿ, ನಿರೂಪಣೆಯಿದೆ. ಈ ಶೈಲಿಗಳು ವಾಸ್ತು ಶಿಲ್ಪಗಳೆರಡಕ್ಕೂ ಅನ್ವಯಿಸುತ್ತವೆ. ಇವು ಪ್ರಾಯಃ ಭೌಗೋಳಿಕ ಆಧಾರದ ಮೇಲೆ ರಚಿತವಾದುವೆಂದು ತೋರುತ್ತದೆ. ಬಾಗಿದ ರೇಖೆಯಾಕಾರದ ಶಿಖರ, ಆಮಲಕ ಮತ್ತು ಮೇಲೆ ಶೃಂಗದ ಸಂಕೇತದ ಕಳಶ–ನಾಗರ ಶೈಲಿಯ ಲಕ್ಷಣವಾದರೆ, ಮೆಟ್ಟಿಲು ಮೆಟ್ಟಿಲು ಏರಿ ಕಿರಿದಾಗುತ್ತಾ ಹೋಗುವ ಶಿಖರವಿರುವುದು ದ್ರಾವಿಡಶೈಲಿಯ ಮುಖ್ಯ ಲಕ್ಷಣವಾಗಿದೆ. ವೇಸರದಲ್ಲಿ ಈ ಎರಡು ಶೈಲಿಗಳೂ ಸಮ್ಮಿಶ್ರಿತವಾಗಿವೆಯೆನ್ನಬಹುದು. ನಾಗರ ಉತ್ತರಭಾರತದಲ್ಲೂ ದ್ರಾವಿಡ ಪಲ್ಲವರ ಮತ್ತು ಚೋಳರ ಕಲೆಯಲ್ಲೂ ವೇಸರ ಕರ್ನಾಟಕದಲ್ಲೂ ಪ್ರಚಾರವಾಗಿದ್ದಂತೆ ಸ್ಥೂಲವಾಗಿ ತಿಳಿದುಬರುತ್ತದೆ. ವೇಸರ ಕಲ್ಯಾಣ ಚಾಳುಕ್ಯ ಶೈಲಿಯಲ್ಲಿ ಸೇರಿಹೋಗುತ್ತದೆ; ಕೆಲವು ಸಾರಿ ಬೇರೆ ಬೇರೆ ಶೈಲಿಯ ರಚನೆಗಳನ್ನು ಅಕ್ಕಪಕ್ಕದಲ್ಲಿಯೇ ಕಾಣಬಹುದು. ೭ನೆಯ ಶತಮಾನದ ಐಹೊಳೆ ಮತ್ತು ಪಟ್ಟದ ಕಲ್ಲುಗಳು ಇದಕ್ಕೆ ನಿದರ್ಶನ. ಇನ್ನೂ ಕೆಲವರು ವಿದ್ವಾಂಸರು ಇಂಡೊ ಆರ್ಯನ್ ಶೈಲಿ ಮತ್ತು ದ್ರಾವಿಡ ಶೈಲಿಗಳೆಂದು ಕರೆದು, ಔತ್ತರೇಯ ಹಾಗೂ ದಾಕ್ಷಿಣಾತ್ಯ ರೀತಿಗಳನ್ನು ಗುರುತಿಸುತ್ತಾರೆ.

ಅನೇಕ ವಿದ್ವಾಂಸರು ಕರ್ನಾಟಕದಲ್ಲಿ ಈ ಕೆಳಗಿನ ಐದು ವಾಸ್ತುಶೈಲಿಗಳು ಪ್ರಖ್ಯಾತವಾಗಿದ್ದುವು ಎಂದು ಅಭಿಪ್ರಾಯಪಟ್ಟಿದ್ದಾರೆ: ಕದಂಬ, ಗಂಗ ಅಥವಾ ಜೈನ, ಚಾಲುಕ್ಯ, ಹೊಯ್ಸಳ ಮತ್ತು ವಿಜಯನಗರ. ಇವುಗಳಲ್ಲಿ ಚಾಲುಕ್ಯ ಮತ್ತು ಹೊಯ್ಸಳ ವಾಸ್ತು ರೀತಿಗಳೇ ಮುಖ್ಯವಾದುವು.[೩೫೪] ಜೇಮ್ಸ್ ಫರ್ಗುಸನ್ ದಾಕ್ಷಿಣಾತ್ಯ ವಾಸ್ತುವನ್ನು ದ್ರಾವಿಡ ಮತ್ತು ಚಾಲುಕ್ಯ ಎಂದು ಎರಡು ಭಾಗಗಳನ್ನಾಗಿ ಮಾಡಿದ್ದಾನೆ. ಆದರೆ ಚಾಲುಕ್ಯಶೈಲಿ ದ್ರಾವಿಡದ ಬೆಳವಣಿಗೆಯಷ್ಟೇ ಎಂಬ ಅಭಿಪ್ರಾಯವೂ ಇದೆ.[೩೫೫] ಕರ್ನಾಟಕ ಕಲೆ ತನ್ನದೇ ಆದ ಮಾರ್ಗವೊಂದನ್ನು ಅನುಸರಿಸಿದ್ದು, ಅದನ್ನು ಯಾವ ಶೈಲಿಯೆಂದು ಕರೆಯಬೇಕೆಂಬುದರಲ್ಲಿ ಭಿನ್ನಾಭಿಪ್ರಾಯವಿದೆ. ಚಾಲುಕ್ಯರೇ ಇದನ್ನು ಮೊದಲು ಮಾಡಿದ್ದರಿಂದ 'ಚಾಲುಕ್ಯಶೈಲಿ' ಎಂದು ಫರ್ಗುಸನ್ ಹೇಳಿದರೆ, ಅದರ ವಿಕಾಸಕ್ಕೆ ಹೊಯ್ಸಳರು ಕಾರಣವಾದ್ದರಿಂದ 'ಹೊಯ್ಸಳಶೈಲಿ' ಎಂಬುದಾಗಿ ಆರ್. ನರಸಿಂಹಾಚಾರ್ಯರು ಅಭಿಪ್ರಾಯಪಡುತ್ತಾರೆ. 'ದಾಕ್ಷಿಣಾತ್ಯ' ಅಥವಾ 'ಮೈಸೂರು ಶೈಲಿ' ಎಂಬ ದೇಶದ ಹೆಸರುಗಳನ್ನಿಡುವುದೇ ಉತ್ತಮವೆಂದು ವಿನ್ಸೆಂಟ್ ಸ್ಮಿತ್ ಸೂಚಿಸಿದ್ದಾರೆ.

ಇ. ಬಿ. ಹ್ಯಾವೆಲ್ 'ದ್ರಾವಿಡ–ಶೈವ', 'ಆರ್ಯ–ವೈಷ್ಣವ' ಎಂಬ ಧಾರ್ಮಿಕ ಹೆಸರಿಡಲು ಸೂಚಿಸುತ್ತಾರೆ. ರಾಜವಂಶಗಳೂ ಧರ್ಮವೂ ವಾಸ್ತುವಿನ ವಿಕಾಸಕ್ಕೆ, ರೂಪಣಕ್ಕೆ ಕಾರಣವಾಗಿವೆ ಎಂಬುದರಲ್ಲಿ ಸಂಶಯವಿಲ್ಲ. ಪ್ರತಿಯೊಂದು ರಾಜಮನೆತನದ ಕಾಲದಲ್ಲೂ ವಿಶಿಷ್ಟ ವಾಸ್ತುಕಲಾಮಾರ್ಗವೊಂದು ಪ್ರಚಲಿತವಾಗಿತ್ತೆಂಬುದನ್ನು ಅಲ್ಲಗಳೆಯುವಂತಿಲ್ಲ. ಆದರೆ ಈ ಶೈಲಿಯನ್ನು ಕರ್ಣಾಟಕದ ಅರಸು ಮನೆತನಗಳೇ ಬಲಪಡಿಸಿದ್ದರಿಂದ 'ಕರ್ಣಾಟಕಶೈಲಿ' ಎಂದು ಕರೆಯುವುದು ಉಚಿತವೆಂದು ತೋರುತ್ತದೆ.[356]

ಜಗತ್ತಿನ ಯಾವುದೇ ದೇಶದಲ್ಲಿ ಕಲಾವಿದ ವಾಸ್ತು ಮತ್ತು ಶಿಲ್ಪಗಳಲ್ಲಿ ತನ್ನ ಕೌಶಲವನ್ನು ತೋರಲು ದೇವಾಲಯವೇ ಅತ್ಯುತ್ತಮ ಮಾಧ್ಯಮ. ಕರ್ಣಾಟಕದಲ್ಲಿಯೂ ಅಷ್ಟೆ. ಇಲ್ಲಿ ದೇವಾಲಯ, ಶಿಲ್ಪ, ಮತ್ತಿತರ ಕಲಾತ್ಮಕ ಸಾಧನಗಳನ್ನು ಮಾಡಲುವಾಸ್ತುಕಾರರ ಮತ್ತು ಶಿಲ್ಪಕಾರರ ಕ್ರಮಬದ್ಧ ವೃತ್ತಿಸಂಘಗಳೇ ಇದ್ದಂತೆ ತೋರುತ್ತದೆ.[357] ಅವರಲ್ಲಿ ಕಾಲದಿಂದ ಕಾಲಕ್ಕೆ ವಿಶೇಷ ಶೈಲಿಗಳೂ ವ್ಯಕ್ತವಾಗಿರಬೇಕು. ಕರ್ಣಾಟಕದಲ್ಲಿ ಇಂತಹ ಹಲವು ಶೈಲಿಗಳನ್ನು ಕಾಣಬಹುದು ಇವುಗಳಲ್ಲಿ ನಮ್ಮ ಸದ್ಯದ ಅವಧಿಗೆ ಸಂಬಂಧಪಟ್ಟಂತೆ ಚಾಲುಕ್ಯ ಪೂರ್ವಶೈಲಿ ಮತ್ತು ಚಾಲುಕ್ಯಶೈಲಿ ಎಂದು ಎರಡು ಭಾಗ ಮಾಡಿಕೊಳ್ಳಬಹುದು. ಮೊದಲನೆಯದು ಕ್ರಿ.ಶ. ೫ನೆಯ ಶತಮಾನದವರೆಗಿನದಾಗಿದ್ದು, ಅದರಲ್ಲಿ ಗುಪ್ತಶೈಲಿಯ ಪ್ರಭಾವ ತೋರುತ್ತದೆ; ಎರಡನೆಯದು ೬ರಿಂದ ೧೦ನೆಯ ಶತಮಾನದವರೆಗಿನದಾಗಿದ್ದು, ಅದು ಔತ್ತರೇಯ ಮತ್ತು ದಾಕ್ಷಿಣಾತ್ಯ ಶೈಲಿಗಳ ಮಿಶ್ರಣವನ್ನು ತೋರಿಸುತ್ತದೆ.

ಭಾರತೀಯ, ಆ ಮೂಲಕ ಜಗತ್ತಿನ, ವಾಸ್ತುಕಲೆಗೆ ಕರ್ಣಾಟಕ ವಾಸ್ತುಕಲೆ ತನ್ನ ಅಪೂರ್ವ ಕಾಣಿಕೆಯನ್ನು ನೀಡಿದೆ. ತನ್ನದೇ ವಾಸ್ತುವಿನ ಮೂಲಶೈಲಿಗಳನ್ನು ಕೊಟ್ಟಿದೆ. ಕರ್ಣಾಟಕದಲ್ಲಿ ವಾಸ್ತು ಎಂದು ಪ್ರಾರಂಭವಾಯಿತೆಂಬುದು ಇನ್ನೂ ಪ್ರಶ್ನೆಯಾಗಿಯೇ ಉಳಿದಿದೆ. ಬಹುಮಟ್ಟಿಗೆ ವಿಹಾರಗಳು ಮತ್ತು ಚೈತ್ಯಗಳೇ ಕರ್ಣಾಟಕ ವಾಸ್ತುವಿನ ಆರಂಭಕೃತಿಗಳು. ಅಶೋಕನಿಗಿಂತ ಹಿಂದೆ ಇಲ್ಲಿ ವಾಸ್ತು ಇತ್ತೆಂಬುದಕ್ಕೆ ಯಾವ ಆಧಾರಗಳೂ ಇಲ್ಲ. ಮರ ಮತ್ತು ದಿಮ್ಮಿಗಳಿಂದ ರಚಿತವಾಗಿರುವ ಕಟ್ಟಡಗಳಿದ್ದರೆ, ಅವು ಈಗ ನಾಶವಾಗಿರಲು ಸಾಕು. ಅಶೋಕನ ಕಾಲದಲ್ಲಂತೂ ಕರ್ಣಾಟಕದಲ್ಲಿ ಸ್ತೂಪಗಳಿದ್ದವೆಂಬುದಕ್ಕೆ ಸಾಕ್ಷಿಗಳಿವೆ. ಕರ್ಣಾಟಕದ ಕೆಲಭಾಗಗಳು ಅವನ ಆಳ್ವಿಕೆಯಲ್ಲಿದ್ದುದರಿಂದ ಅದು ಸಹಜವೇ ಆಗಿದೆ. ಬನವಾಸಿಯ ಉತ್ತರಕ್ಕಿರುವ ಬಯಲಿನಲ್ಲಿ ಮೂರು ಸ್ತೂಪಗಳ ಇಟ್ಟಿಗೆಯ ಬುಡಗಳು ಕಾಣಿಸುತ್ತವೆಯೆಂಬುದನ್ನಿಲ್ಲಿ ನೆನೆಯಬಹುದು.[358]

ಬೌದ್ಧಧರ್ಮ ಪ್ರಬಲಸ್ಥಿತಿಯಲ್ಲಿದ್ದಾಗ ದೇಶದ ಹಲವಾರು ಕಡೆ ಗುಹಾಲಯಗಳು ನಿರ್ಮಿತವಾದುವು. ಆದರೆ ಎಲ್ಲೋರ ಮತ್ತು ಅಜಂತದ ಕೆಲವು ಗುಹಾಲಯಗಳನ್ನು ಕನ್ನಡಿಗ ದೊರೆಗಳು ಕಟ್ಟಿಸಿದ್ದರಿಂದ, ಕರ್ಣಾಟಕ ವಾಸ್ತುಚರಿತ್ರೆಯಲ್ಲಿ ಅವುಗಳಿಗೆ ವಿಶೇಷ ಸ್ಥಾನವಿದೆ.

ಕರ್ನಾಟಕದ ವಾಸ್ತುಕಲೆ ಅಶೋಕನ ಕಾಲದಿಂದ ಪ್ರಾರಂಭವಾಗಿರಬೇಕೆಂಬುದನ್ನು ಹಿಂದಿನ ವಿಚಾರಗಳು ಸ್ಪಷ್ಟಪಡಿಸುತ್ತವೆ. ಇದಾದ ತರುವಾಯ ಸಾತವಾಹನರ ಕಾಲಕ್ಕೆ ಬರುತ್ತೇವೆ. ಸಾತವಾಹನರ ಕಾಲದ ದಾಖಲೆಗಳು ಸಾಕಷ್ಟು ಸಿಕ್ಕಿವೆಯೆನ್ನಬಹುದು. ಚಿತ್ರದುರ್ಗದ ಚಂದ್ರವಳ್ಳಿಯಲ್ಲಿ ಸಿಕ್ಕಿದ ಆಧಾರಗಳಿಂದ, ಬನವಾಸಿಯಲ್ಲಿ ದೊರೆತ ವೃತ್ತಾಯತಾಕಾರದ ಅಡಿಪಾಯ ಮತ್ತು ಕೆಲವು ದೊಡ್ಡ ಆಕಾರದ ಇಟ್ಟಿಗೆಗಳಿಂದ ಸಾತವಾಹನರ ಕಾಲದಲ್ಲಿ ಇಟ್ಟಿಗೆ ಕಟ್ಟಡಗಳಿದ್ದುವೆಂಬುದು ಗೊತ್ತಾಗುತ್ತದೆ.[359] ಸಾತವಾಹನರು ಕರ್ನಾಟಕದ ಸಂಸ್ಕೃತಿಯನ್ನು ರೂಪಿಸಿದ ಮೊದಲಿಗರಲ್ಲಿ ಒಬ್ಬರು. ಇವರ ಕಾಲದಲ್ಲಿ ಬಹಳವಾಗಿ ಸ್ತೂಪಗಳೂ ವಿಹಾರಗಳೂ ನಿರ್ಮಾಣವಾದುವು. ಧನಿಕರಾದವರು ಕಲೆಗೆ ಹೆಚ್ಚು ಪ್ರೋತ್ಸಾಹ ಕೊಡುತ್ತಿದ್ದರು. ಭೂತಪಾಲನೆಂಬ ಬನವಾಸಿಯ ಶ್ರೀಮಂತ ಕಾರ್ಲೆಯಲ್ಲಿ ಚೈತ್ಯಗೃಹವನ್ನು ಕಟ್ಟಿಸಿದನಂತೆ.[360] ಇವರ ಕಾಲದಲ್ಲಿಯೇ ಸಾಂಚಿಸ್ತೂಪದ ಸುತ್ತಲೂ ಇರುವ ತೋರಣ, ಕಟಕಟೆಗಳೂ ಅಮರಾವತಿ ಸ್ತೂಪವೂ ಭಾಜ್, ನಾಸಿಕ್, ಕನ್ಹೇರಿ ಮೊದಲಾದವುಗಳಲ್ಲಿನ ಗುಹಾಂತರ್ದೇವಾಲಯಗಳೂ ನಿರ್ಮಿತವಾದಂತೆ ತಿಳಿದುಬರುತ್ತದೆ. ಇದಲ್ಲದೆ ಅಜಂತದ ಕೆಲವು ಗವಿಗಳು ಇವರ ಕಾಲದವು ಎಂಬುದಕ್ಕೆ ಆಧಾರವಿದೆ. ಅಜಂತದ ಗವಿಗಳಲ್ಲಿ ಪ್ರಾಚೀನವಾದ ೯ನೆಯ ಗವಿ ಮತ್ತು ದೊಡ್ಡದೂ ರಮ್ಯವೂ ಆದ ೧೦ನೆಯ ಗವಿ ಕ್ರಿ.ಶ. ೨ನೆಯ ಶತಮಾನದ ಸಾತವಾಹನ ವಾಸಿಷ್ಠೀ ಪುತ್ರ ಪುಲುಮಾವಿಯ ಕಾಲದ್ದು ಎಂಬುದನ್ನು ಮುಂಭಾಗದಲ್ಲಿರುವ ಶಾಸನವೊಂದು ತಿಳಿಸುತ್ತದೆ.[361] ಈ ಸಮಯದಲ್ಲಿ ೪೭೬-೫೧೫ರ ವರೆಗೆ ಆಳಿದ ವಾಕಾಟಕ ಹರಿಸೇನನ ಮಂತ್ರಿಯೊಬ್ಬ ಅಜಂತದ ೧೬, ೧೭ನೆಯ ಗುಹೆಗಳನ್ನು ಕಟ್ಟಿಸಿದನೆಂಬುದನ್ನು ನೆನೆಯಬಹುದು.[362]

## ಕದಂಬರ ಕಾಲದ ವಾಸ್ತುಕಲೆ

ಕನ್ನಡನಾಡನ್ನು ಆಳಿದ ಮೊದಲ ಗಣ್ಯ ಕನ್ನಡ ರಾಜವಂಶವೆಂದರೆ ಕದಂಬರದು. ವಾಸ್ತುವಿನ ಇತಿಹಾಸದಲ್ಲಿ ಇವರ ಪಾತ್ರ ಕಡಿಮೆಯದೇನಲ್ಲ. ವಾಸ್ತವವಾಗಿ, ಕರ್ನಾಟಕದ ವಾಸ್ತುಕಲೆಗೆ ಬುನಾದಿ ಹಾಕಿದವರೆಂದರೆ ಬನವಾಸಿಯ ಕದಂಬರೆನ್ನಬೇಕು. ಇವರ ಪ್ರಾಚೀನ ರಚನೆಗಳು ಇನ್ನೂ ಉಳಿದಿದ್ದು, ಅವು ಅವರ ಅನೇಕ ಶಾಸನಗಳಿಂದ ವ್ಯಕ್ತವಾಗುತ್ತವೆ. ಕದಂಬರ ಕಾಲದಲ್ಲಿ ಸ್ತೂಪ, ವಿಹಾರ ಮತ್ತು ಚೈತ್ಯಗಳು ರಚನೆಯಾದುವು. ವಾಸ್ತುಕಲೆಗೆ ಹೆಚ್ಚಾಗಿ ಪ್ರೋತ್ಸಾಹ ನೀಡಿದ ಅವರು ಬನವಾಸಿ, ಹಲಸಿ ಮೊದಲಾದ ಕಡೆಗಳಲ್ಲಿ ತಮ್ಮ ಕುರುಹುಗಳನ್ನು ಬಿಟ್ಟುಹೋಗಿದ್ದಾರೆ.

ಇಂಥವುಗಳಲ್ಲಿ ಪ್ರಣವೇಶ್ವರ ದೇವಾಲಯ ಮುಖ್ಯವಾದುದು. ಇದು ದಕ್ಷಿಣ ಭಾರತದಲ್ಲಿಯೇ ಅತ್ಯಂತ ಪುರಾತನವಾದ್ದೆನ್ನಲಾಗಿದೆ. ಕ್ರಿ.ಶ. ೫ನೆಯ ಶತಮಾನದಲ್ಲಿ ಆಳಿದ ಕಾಕುತ್ಸ್ಥವರ್ಮ ಮತ್ತು ಶಾಂತಿವರ್ಮರ ತಾಳಗುಂದದ ಶಾಸನ ಇದನ್ನು ಉಲ್ಲೇಖಿಸುತ್ತದೆ. ಹಿಂದಿನ ಸಾತಕರ್ಣಿ ಮತ್ತಿತರರು ಇದನ್ನು ಪೂಜಿಸುತ್ತಿದ್ದುದು ಅದರಿಂದ ಗೊತ್ತಾಗು

ತ್ತದೆ. ಶಾಸನದ ಕಾಲ ಸು. ೪೫೦; ಹೀಗಾಗಿ ಈ ದೇವಾಲಯ ಅದಕ್ಕೆ ಮೊದಲೇ ರಚಿತವಾಗಿರಬೇಕು. ಇದರ ಬಹುಭಾಗ ಅನಂತರ ನವೀಕರಿಸಲ್ಪಟ್ಟಿದ್ದರೂ ಇವರ ಗರ್ಭಗುಡಿ ೪೫೦ಕ್ಕಿಂತ ಹಿಂದೆಯೇ ರಚಿತವಾಗಿರಬೇಕೆಂಬುದನ್ನು ದ್ವಾರಬಂಧದ ಕಂಬದ ಮೇಲಿರುವ ಮೃಗೇಶವರ್ಮನ ಹೆಂಡತಿ ಪ್ರಭಾವತಿಯ ಶಾಸನ ತಿಳಿಸುತ್ತದೆ. ಕದಂಬರ ಮತ್ತೊಂದು ಪ್ರಾಚೀನ ಕೃತಿಯೆಂದರೆ ಹಲಸಿಯಲ್ಲಿರುವ ಜೈನ ಬಸದಿ. ಇದನ್ನು ಮೃಗೇಶವರ್ಮ ಕಟ್ಟಿಸಿದಂತೆ ಅವನ ತಾಮ್ರದ ಶಾಸನವೊಂದರಿಂದ ತಿಳಿದುಬರುತ್ತದೆ. ಇದರಲ್ಲಿ ಗರ್ಭಗೃಹ ಮತ್ತು ಸುಖನಾಸಿ ಮಾತ್ರ ಇದ್ದು, ಸುಖನಾಸಿ ಗರ್ಭಗೃಹಕ್ಕಿಂತ ದೊಡ್ಡದಾಗಿದೆ. ಶಿಲಾಕಟ್ಟಡಗಳ ಪ್ರಾರಂಭಿಕ ಘಟ್ಟವನ್ನು ಇದರಲ್ಲಿ ಸುಲಭವಾಗಿ ಗುರುತಿಸಬಹುದು. ಕದಂಬ ವಾಸ್ತುಕಲೆಯ ಮುಂದಿನ ಮೆಟ್ಟಿಲನ್ನು ಹಲಸಿಯ ಕಲ್ಲೇಶ್ವರ ದೇವಾಲಯದಲ್ಲಿ ಕಾಣಬಹುದು. ಗರ್ಭಗೃಹ ಮತ್ತು ಸುಖನಾಸಿಗಳ ಜೊತೆಗೆ ಮಂಟಪವೂ ಸೇರಿಕೊಂಡುದು ಇದರ ಗಮನಾರ್ಹ ಬೆಳೆವಣಿಗೆ. ಆದಿ ಕದಂಬರ ರಾಜಧಾನಿ ಬನವಾಸಿಯಲ್ಲಿ ಮಧುಕೇಶ್ವರನ ದೇವಾಲಯವಿದೆ. ಇದರ ಮುಂಭಾಗವೆಲ್ಲ ಅನಂತರ ರೂಪಿತವಾದುದಾದರೂ, ಗರ್ಭಗುಡಿ ಒಳಮಂಟಪ ಮತ್ತು ಪ್ರದಕ್ಷಿಣ ಪಥ—ಇವಿಷ್ಟಾದರೂ ಹಳೆಯವಿರಬೇಕು. ಇದರ ರಚನೆ ಮತ್ತು ವಿನ್ಯಾಸದ ಆಧಾರಗಳ ಮೇಲೆ ಇದು ಕ್ರಿ. ಶ. ೮ನೆಯ ಶತಮಾನದಲ್ಲಿ ರಚಿತವಾಗಿರಬೇಕೆಂದು ಊಹಿಸಿದೆ.[363]

'ಕದಂಬಶೈಲಿ'ಯೊಂದು ಇತ್ತೇ ಇಲ್ಲವೇ ಎಂಬುದರಲ್ಲಿ ಭಿನ್ನಾಭಿಪ್ರಾಯ ವ್ಯಕ್ತವಾಗಿದೆ. ಕೆಲವರು ಇಂಥದೊಂದು ಪ್ರಕಾರವನ್ನು ಹೇಳಿದರೆ, ಮತ್ತೆ ಕೆಲವರು ಅದನ್ನು ಚಾಲುಕ್ಯ ಸಂಪ್ರದಾಯದಲ್ಲಿಯೇ ಸೇರಿಸಲು ಯತ್ನಿಸಿದ್ದಾರೆ. ಕಸಿನ್ಸ್ ಮತ್ತು ಫರ್ಗುಸನ್ ಕದಂಬ ಮತ್ತು ಚಾಲುಕ್ಯರ ರಚನೆಗಳನ್ನು ಪ್ರತ್ಯೇಕಿಸಿಲ್ಲ. ಗರ್ಭಗೃಹ ಮತ್ತು ಸುಖನಾಸಿಗಳನ್ನು ಬೇರೆ ಬೇರೆ ಮಾಡಿದವರಲ್ಲಿ ಕದಂಬರೇ ಮೊದಲಿಗರೆಂಬ ವಿಷಯವನ್ನು ತಿಳಿಸಿದ ಮೋರೆಸ್ ಅವರು ಕದಂಬ ಶೈಲಿಯೊಂದನ್ನು ಹೇಳಿದ್ದಾರೆ. ಇದಲ್ಲದೆ, ಚಾಲುಕ್ಯ ಮತ್ತು ಪಲ್ಲವರಲ್ಲಿ ಬಹಳವಾಗಿ ಬೆಳೆದ ಶಿಲಾದೇವಾಲಯಗಳಿಗೆ ಕದಂಬರ ಕಟ್ಟಡಗಳು ಮೂಲಮಾದರಿಗಳನ್ನು ಒದಗಿಸಿರಬಹುದೆಂಬ ಅನುಮಾನವನ್ನು ಮಾಡಬಹುದಾಗಿದೆ.[364] ಕರ್ಣಾಟಕ ವಾಸ್ತುಕಲೆಯ ಮುಂದಿನ ವಿಕಾಸಕ್ಕೆ ಕದಂಬರದು ಮೊದಲ ಮೆಟ್ಟಿಲು ಎಂಬುದರಲ್ಲಿ ಸಂಶಯವಿರಲಾರದೆಂದು ತೋರುತ್ತದೆ.

## ಗಂಗರ ಕಾಲದ ವಾಸ್ತುಕಲೆ

ಕದಂಬರ ತರುವಾಯ ಕರ್ಣಾಟಕದ ಕಲೆ ಮತ್ತು ವಾಸ್ತುವನ್ನು ಮುಂದುವರಿಸಿದ ಕೀರ್ತಿ ಗಂಗರದು. ಇವರ ಅನೇಕ ಕಟ್ಟಡಗಳು ತಲಕಾಡಿನ ಮರಳಿನಲ್ಲಿ ಈಗ ಕಣ್ಮರೆಯಾಗಿ ಹೋಗಿವೆ. ಅವರ ಶಾಸನಗಳಿಂದ ಅಂಥ ಹಲವಾರು ನಿರ್ಮಾಣಗಳು ತಿಳಿದುಬಂದಿವೆ.

ಗಂಗರು ಜೈನಧರ್ಮಕ್ಕೆ ವಿಶೇಷ ಪ್ರೋತ್ಸಾಹವನ್ನು ಕೊಟ್ಟಿದ್ದು, ಗಂಗವಾಡಿ, ಬನವಾಸಿಗಳಲ್ಲಿ ಜಿನಾಲಯಗಳು ನಿರ್ಮಿತವಾದುವೆಂತೆ ಶಾಸನಾಧಾರಗಳು ಹೇಳುತ್ತವೆ. ಈ ವಂಶದ ಮೂಲಸ್ಥಾಪಕನಾದ ಮಾಧವನು ಮಂಡಲೀಬೆಟ್ಟದ ಮೇಲೆ ಜೈನಶೈಲಿಯಲ್ಲಿ ಮರದ ಬಸದಿಯೊಂದನ್ನು ಕಟ್ಟಿಸಿದನೆಂದು ತಿಳಿದುಬರುತ್ತದೆ. ಅವನೀತ ಮತ್ತು ಅವನ ಮಗ ದುರ್ವಿನೀತ ದೇವಾಲಯಗಳ ಮತ್ತು ಬಸದಿ ಚೈತ್ಯಾಲಯಗಳ ಪೋಷಕರಾಗಿದ್ದರು. ಗಡಮಾರಿನಲ್ಲಿ ಕಂದಚ್ಚಿ ಎಂಬ ಶಿಲ್ಪಿ ನಿರ್ಮಿಸಿದ ಜೈನ ಬಸದಿಯೊಂದಕ್ಕೆ ಶ್ರೀಪುರುಷನು ದತ್ತಿ ನೀಡಿದನಂತೆ.[365] ಅವನೀತನ ನೆನಪಿಗೆ ನಿರ್ಮಿತವಾಗಿದ್ದಿರಬಹುದಾದ ವಿನೀತೇಶ್ವರ ದೇವಾಲಯ, ನೀತಿಮಾರ್ಗೇಶ್ವರ ದೇವಾಲಯ, ನಾಗರೇಶ್ವರ ದೇವಾಲಯ ಮತ್ತು ಶಿವಮಾರೇಶ್ವರ ದೇವಾಲಯಗಳಿಗೆ ಗಂಗರಾಜರು ಸಹಾಯ ನೀಡುತ್ತಿದ್ದರೆಂದು ಶಾಸನಗಳು ತಿಳಿಸುತ್ತವೆ.[366] ತಲಕಾಡಿನ ಅರ್ಕೇಶ್ವರ ದೇವಾಲಯ, ಪಾತಾಳೇಶ್ವರ ದೇವಾಲಯ ಮತ್ತು ಮರಳೇಶ್ವರ ದೇವಾಲಯಗಳು ಗಂಗರ ಉನ್ನತಿ ಕಾಲದಲ್ಲಿ ನಿರ್ಮಾಣವಾದವು. ಅರ್ಕೇಶ್ವರದಲ್ಲಿ ಶಿವಮಾರ ಮತ್ತು ಎರೆಯಪ್ಪರ ದತ್ತಿ ಶಾಸನಗಳಿವೆ. ಸತ್ಯವಾಕ್ಯ ಪೆರ್ಮಾಡಿಯ ಶಾಸನದಿಂದ ಕಾಂಚಿಯ ನರಸಿಂಹ ದೇವಾಲಯ ಮತ್ತು ಬೇಗೂರಿನ ವಾಗೇಶ್ವರ ದೇವಾಲಯ ಇದೇ ಕಾಲಕ್ಕೆ ಸೇರಿದಂಥವು ಎಂದು ತಿಳಿದುಬರುತ್ತದೆ. ಒಂದು ಕಾಲದಲ್ಲಿ ಗಂಗರ ರಾಜಧಾನಿಯಾಗಿದ್ದ ಮನ್ನೆಯ ಕಪಿಲೇಶ್ವರ ದೇವಾಲಯ ಮತ್ತು ಸೋಮೇಶ್ವರ ದೇವಾಲಯಗಳು ಇಟ್ಟಿಗೆಯ ಕಟ್ಟಡಗಳಾಗಿದ್ದು, ಪ್ರಾಯಶಃ ಕ್ರಿ.ಶ. ೮ನೆಯ ಶತಮಾನಕ್ಕೆ ಸೇರಿರಬಹುದು.[367]

ಇವುಗಳಲ್ಲದೆ ಶ್ರವಣಬೆಳಗೊಳದಲ್ಲೂ ಗಂಗರ ಕಾಲದ ಕೆಲವು ರಚನೆಗಳು ಸಿಗುತ್ತವೆ. ಇವುಗಳಲ್ಲಿ ಉಲ್ಲೇಖನೀಯವಾದುದೆಂದರೆ ಚಂದ್ರಪ್ರಭ ಬಸದಿ. ಇದು ಸು. ೮೦೦ಕ್ಕೆ ಸೇರಿದುದಾಗಿದ್ದು, ೨ನೆಯ ಶಿವಮಾರನು ಕಟ್ಟಿಸಿರಬೇಕೆಂದು ನವರಂಗದಲ್ಲಿರುವ ಶಾಸನದಿಂದ ತಿಳಿದುಬರುತ್ತದೆ. ಈ ಬಸದಿಯಲ್ಲಿ ಗರ್ಭಗೃಹ, ಸುಖನಾಸಿ, ನವರಂಗ ಮತ್ತು ಮಂಟಪಭಾಗಗಳಿವೆ. ಇದಲ್ಲದೆ ಶ್ರವಣಬೆಳಗೊಳದ ಸಮೀಪದ ಕಂಬದಹಳ್ಳಿಯಲ್ಲಿ ಸು. ೯೦೦ಕ್ಕೆ ಸೇರಿದ ಹಲವು ಪುರಾತನ ಕಟ್ಟಡಗಳು ದೊರೆಯುತ್ತವೆ. ಇವುಗಳಲ್ಲಿ ಆದಿನಾಥನ ಬಸದಿ ಮುಖ್ಯವಾದುದು.[368] ಹೀಗೆ ಗಂಗ ಸಾಮ್ರಾಜ್ಯದ ಉಚ್ಛ್ರಾಯ ಕಾಲದಲ್ಲಿ ಕರ್ನಾಟಕ ವಾಸ್ತುಕಲೆ ಪ್ರಮುಖ ಮಜಲನ್ನು ಮುಟ್ಟಿತು.

## ಚಾಲುಕ್ಯರ ಕಾಲದ ವಾಸ್ತುಕಲೆ

ಕರ್ನಾಟಕ ವಾಸ್ತುಕಲೆಯ ಇತಿಹಾಸದಲ್ಲಿ ಚಾಲುಕ್ಯರು ಮಹತ್ತ್ವದ ಪಾತ್ರ ವಹಿಸಿದರು. ರಾಜಕೀಯವಾಗಿಯೂ ತುಂಬ ವ್ಯಾಪಕತೆ ಕನ್ನಡ ನಾಡಿಗೆ ಉಂಟಾದುದು ಮೊದಲ ಸಲ ಇವರ ಕಾಲದಲ್ಲಿಯೇ. ತಮ್ಮ ಅಮೂಲ್ಯವಾದ ಸಾಧನೆಗಳ ಮೂಲಕವೂ ಭಾರತೀಯ ಇತಿಹಾಸದಲ್ಲಿ ಇವರು ಖ್ಯಾತಿವೆತ್ತಿದ್ದಾರೆ. ಉತ್ತರದಲ್ಲಿ ಗುಪ್ತರ ಯುಗ ವಾಸ್ತುಶಿಲ್ಪಕ್ಕೆ ಹೇಗೆ ಸುವರ್ಣಯುಗವೋ, ದಕ್ಷಿಣದಲ್ಲಿ ಚಾಲುಕ್ಯರ ಕಾಲ ಹಾಗೆ

ಸುವರ್ಣಯುಗ. 'ಚಾಲುಕ್ಯಶೈಲಿ' ಈ ಕಾಲದಲ್ಲಿ ಪ್ರವರ್ತಿಸಿತು.[369] ಚಾಲುಕ್ಯರ ಕಾಲದ ಕಲಾವಿದರು ತಮ್ಮ ಜನತೆಯ ಆಶೆ ಆಶೋತ್ತರಗಳನ್ನು ಪ್ರಕಾಶಪಡಿಸುವ ಶಕ್ತಿಯನ್ನು ಪಡೆದುಕೊಂಡಿದ್ದರು. ಇದಕ್ಕೆ ಬೇಕಾದ ಅನುಕೂಲ ಪ್ರೋತ್ಸಾಹಗಳನ್ನು ಕೊಡಲು ಚಾಲುಕ್ಯರಾಜರಿದ್ದರು.

ಚಾಲುಕ್ಯ ವಾಸ್ತುಶೈಲಿ ಚಾಲುಕ್ಯರು ನಿರ್ಮಿಸಿದ ಕೃತಿಗಳಿಗೆ ಮಾತ್ರ ಸೀಮಿತವಲ್ಲ. ಅದು ಆ ಕಾಲದಲ್ಲಿ ನಿರ್ಮಾಣಗೊಂಡ ಎಲ್ಲ ರಚನೆಗಳಿಗೂ ಅನ್ವಯಿಸುವಂಥದು. ಚಾಲುಕ್ಯ ವಾಸ್ತುವಿನ ಇತಿಹಾಸವನ್ನು ಆ ಕಾಲದ ಆಡಳಿತ ದೃಷ್ಟಿಯಿಂದ ಎರಡು ಭಾಗವಾಗಿ ಮಾಡಿಕೊಳ್ಳಬಹುದು : ಬಾದಾಮಿ ಚಾಲುಕ್ಯರದು ಮತ್ತು ಕಲ್ಯಾಣ ಚಾಲುಕ್ಯರದು. ಬಾದಾಮಿ ಚಾಲುಕ್ಯರ ಆಳ್ವಿಕೆ ೫೦೦-೭೬೦ರ ವರೆಗಿನದಾದರೆ, ಕಲ್ಯಾಣ ಚಾಲುಕ್ಯರದು ೯೭೦-೧೧೭೦ರವರೆಗೆ ಇದ್ದಿತು.

ಚಾಲುಕ್ಯರ ಕಾಲದ ವಾಸ್ತುಕೃತಿಗಳು ಸಾಂದ್ರವಾಗಿ ನೆಲೆನಿಂತದ್ದು ಐಹೊಳೆ, ಪಟ್ಟದಕಲ್ಲು, ಮಹಾಕೂಟ ಮತ್ತು ಬಾದಾಮಿಗಳಲ್ಲಿ. ಇವು ಚಾಲುಕ್ಯ ವಾಸ್ತುಶಿಲ್ಪದ ತೌರು. ಇಲ್ಲಿನ ಜಗದ್ವಿಖ್ಯಾತ ದೇವಾಲಯಗಳೂ ಗುಹಾಲಯಗಳೂ ಬಾದಾಮಿ ಚಾಲುಕ್ಯ ವಾಸ್ತುಶಿಲ್ಪದ ವೈಭವವನ್ನು ಇಂದಿಗೂ ಸಾರುತ್ತಿವೆ.

ಚಾಲುಕ್ಯರೀತಿಯ ವಾಸ್ತುವಿನ ಉಗಮವನ್ನು ಕ್ರಿ.ಶ. ೫ನೆಯ ಶತಮಾನದಿಂದ ಗುರುತಿಸಬಹುದು. ಇದರ ಹುಟ್ಟೂರು ಐಹೊಳೆ. ಇದು ಚಾಲುಕ್ಯರ ಪ್ರಾರಂಭದ ರಾಜಧಾನಿಯಾಗಿತ್ತು. ಇಲ್ಲಿ ಆರಂಭವಾದ ಚಾಲುಕ್ಯವಾಸ್ತು ಕ್ರಮೇಣ ಸುತ್ತಮುತ್ತ ಹರಡಿಕೊಂಡಿತು. ಇದರಿಂದಾಗಿ ಐಹೊಳೆ ಪ್ರಾಚೀನ ಚಾಲುಕ್ಯ ವಾಸ್ತುಕಲೆಯ ಕೇಂದ್ರವೆಂದು ಗುರುತಿಸಬಹುದು. ದೇವಾಲಯಗಳ ಪ್ರಥಮ ಪ್ರಯತ್ನಗಳು ಬಹುಶಃ ನಡೆದಿದ್ದು ಇಲ್ಲಿಯೇ. ಕರ್ಣಾಟಕ ಹಾಗೂ ದ್ರಾವಿಡ ಎರಡೂ ಶೈಲಿಗಳಿಗೆ ಇಲ್ಲಿ ಮಾದರಿಗಳು ದೊರೆಯುತ್ತವೆ.

ಐಹೊಳೆ ಮತ್ತು ಅದರ ಸುತ್ತಣ ಹಳ್ಳಿಗಳಲ್ಲಿ ೧೦೦ಕ್ಕೂ ಮಿಕ್ಕ ಸಣ್ಣ ದೊಡ್ಡ ದೇವಾಲಯಗಳಿವೆ. ಇವೆಲ್ಲ ೫, ೬, ೭ನೆಯ ಶತಮಾನಗಳಲ್ಲಿ ಕಟ್ಟಿದವು. ಇವುಗಳಲ್ಲಿ ಲಾಡಖಾನ್, ಕೊಂಟಿ, ದುರ್ಗಾ, ಹುಚ್ಚುಮಲ್ಲಿ, ಮೇಗುತಿ ದೇವಾಲಯಗಳು ಮುಖ್ಯವಾದುವು. ಐಹೊಳೆಯ ಅತ್ಯಂತ ಪ್ರಾಚೀನ ದೇವಾಲಯವೆಂದರೆ ಲಾಡಖಾನ್ ಎಂದು ಹೇಳಲಾಗಿದೆ. ಸು. ೪೫೦ರಲ್ಲಿ ಇದನ್ನು ಕಟ್ಟಿತೆಂದು ಹೇಳುತ್ತಾರೆ. ಆದರೆ ಇತ್ತೀಚಿನ ಸಂಶೋಧನೆಗಳಿಂದ ಇದು ಇನ್ನೂ ಈಚಿನ ದೇವಾಲಯವೆಂದು ತಿಳಿದುಬರುವುದು.[370] ಇಲ್ಲಿ ವ್ಯಕ್ತವಾಗಿರುವ ಗಂಗಾ ಯಮುನಾ ಚಿತ್ರವಿರುವ ಕಲಶದ ಆಶಯ ಗುಪ್ತರ ಪ್ರಭಾವವನ್ನು ತೋರಿಸುತ್ತದೆನ್ನಲಾಗಿದೆ.[371] ಇದು ಇಳಿಜಾರಾಗಿರುವ ಮೇಲ್ಛಾವಣಿಯನ್ನು ಹೊಂದಿದ್ದು, ಮುಖಮಂಟಪ, ರಂಗಮಂಟಪ, ಗರ್ಭಗೃಹಗಳನ್ನೊಳಗೊಂಡಿವೆ. ಇಲ್ಲಿನ ಗಮನಾರ್ಹ ಅಂಶಗಳೆಂದರೆ ಚೌಕಾಕಾರದ ಕಲ್ಲುಕಂಬಗಳು ಮತ್ತು ಚೌಕಹಜಾರದ ಮೇಲಿರುವ ಮತ್ತೊಂದು ಗರ್ಭಗೃಹ.[372] ಹೇಳಿಕೊಳ್ಳುವಂತಹ ಅಲಂಕಾರ ಕೆತ್ತನೆಗಳೇನೂ ಇಲ್ಲ.

ರಚನೆಯಲ್ಲಿ ಒರಟುತನ, ಕಂಬ ಮತ್ತು ಒಟ್ಟು ಕಟ್ಟಡಗಳ ಕುಬ್ಜಾಕಾರಗಳೇ ಮುಂತಾದ ಲಕ್ಷಣಗಳುಳ್ಳ ಕೊಂಟಗುಡಿದೇವಾಲಯಗಳ ಗುಂಪು ಅದರ ಪ್ರಾಚೀನತೆಯನ್ನು ಸಾರುತ್ತದೆ.[373] ಇವೆಲ್ಲಕ್ಕಿಂತ ಭಿನ್ನವಾದ, ಬಹು ಆಕರ್ಷಕವಾದ ಕಟ್ಟಡವೆಂದರೆ ದುರ್ಗಾ ದೇವಾಲಯ. ಇದರ ಕಾಲವನ್ನು ಕ್ರಿ.ಶ. ೬ ಅಥವಾ ೭ನೆಯ ಶತಮಾನವೆನ್ನಲಾಗಿದೆ. ಕಟ್ಟಡ ದೇವಾಲಯಗಳ ನಿರ್ಮಾಣ ಕಾರ್ಯದಲ್ಲಿ ಇದು ಎರಡನೆಯ ಹಂತ. ಇದಲ್ಲದೆ ವೈದಿಕ ದೇವಾಲಯಕ್ಕೆ ಬೌದ್ಧ ಚೈತ್ಯದ ತಲವಿನ್ಯಾಸವನ್ನು ಹೊಂದಿಸಿಕೊಳ್ಳುವ ಪ್ರಯೋಗಕ್ಕೆ ಬಹುಶಃ ಇದೊಂದು ಉದಾಹರಣೆಯಾಗಿದೆ.[374] ಶಿಖರ ಗರ್ಭಗೃಹದ ಮೇಲೆ ಇದೆ. ಕೈಸಾಲೆಯ ಕಂಬಗಳ ಮೇಲೆ ಶಿಲ್ಪಗಳಿವೆ. ಮತ್ತೊಂದು ಮುಖ್ಯ ದೇವಾಲಯವೆಂದರೆ ಹುಚ್ಚಮಲ್ಲಿ ಗುಡಿ. ಇದು ಅತ್ಯಂತ ಚಿಕ್ಕದು, ಸರಳವಾದುದು, ಇದರ ಒಂದು ವಿಶೇಷ ಲಕ್ಷಣವೆಂದರೆ, ಗರ್ಭಗುಡಿಗೂ ಪ್ರಧಾನ ಹಜಾರಕ್ಕೂ ನಡುವೆ ಇರುವ ಅಂತರಾಳ. ಐಹೊಳೆಯ ಸುಂದರ ಕಟ್ಟಡಗಳಲ್ಲಿ ಶಾಸನಪ್ರಸಿದ್ಧವಾದ ಮೇಗುತಿ ದೇವಾಲಯ ಗಮನಾರ್ಹವಾದುದು. ಇದರಲ್ಲಿ ದೇವಾಲಯ ರಚನೆಯ ಸ್ವಲ್ಪ ಪ್ರಗತಿಯನ್ನು ಕಾಣಬಹುದು. ಇದರಲ್ಲಿರುವ ಒಂದು ಶಾಸನದ ಪ್ರಕಾರ, ಇಮ್ಮಡಿ ಪುಲಿಕೇಶಿಯ ಆಶ್ರಯದಲ್ಲಿದ್ದ ರವಿಕೀರ್ತಿಯಿಂದ ೬೩೪ರಲ್ಲಿ ಇದು ನಿರ್ಮಿತವಾಯಿತೆಂದು ತಿಳಿದುಬರುತ್ತದೆ. ಇದು ದ್ರಾವಿಡ ಶೈಲಿಯ ಜೈನ ದೇವಾಲಯ. ಆರಾಧನಾಮಂದಿರ, ಹಜಾರಗಳೆಂಬ ಎರಡು ಭಾಗಗಳಿವೆ. ಗರ್ಭಗುಡಿಯ ಗೋಡೆಯ ಮೇಲೆ ದೊಡ್ಡ ಆಕಾರದ ಜಿನಮೂರ್ತಿ ಕೆತ್ತಲ್ಪಟ್ಟಿದೆ.

ಐಹೊಳೆಯಲ್ಲಿ ಮೇಲಿನ ದೇವಾಲಯಗಳಲ್ಲದೆ, ರಾಮಲಿಂಗ, ಜ್ಯೋತಿರ್ಲಿಂಗ, ಸಿದ್ಧೇಶ್ವರ, ಮಲ್ಲಿಕಾರ್ಜುನ ಮುಂತಾದ ಇನ್ನೂ ಹಲವಾರು ದೇವಾಲಯಗಳಿವೆ. ಇದಲ್ಲದೆ ಬಾದಾಮಿಯಂತೆ ಇಲ್ಲಿಯೂ ಗುಹಾಲಯಗಳುಂಟು. ಇವು ಅಲ್ಲಿನವುಗಳಂತೆ ದೊಡ್ಡವಲ್ಲದಿದ್ದರೂ ಚಾರಿತ್ರಿಕವಾಗಿ ಮುಖ್ಯವಾದವು. ಮೇಗುತಿಯ ಉತ್ತರಕ್ಕಿರುವ ಚಿಕ್ಕಗುಡ್ಡಗಳಲ್ಲಿಯ ಮೂರು ಗುಹೆಗಳು ಈ ದೃಷ್ಟಿಯಿಂದ ಗಮನಾರ್ಹ. ಮೊದಲದರಲ್ಲಿ ಶಿವಲಿಂಗವಿದೆ; ಎರಡನೆಯದರಲ್ಲಿ ನಟರಾಜನ ವಿಗ್ರಹವಿದೆ. ೩ನೆಯ ಗುಹೆಯಲ್ಲಿನ ನಟರಾಜ ವಿಗ್ರಹವನ್ನು 'ರಾವಣ' ಎಂದು ತಪ್ಪು ತಿಳಿದುಕೊಂಡಿದ್ದರಿಂದ ಇದು 'ರಾವಣಗುಡಿ' ಎಂದೇ ಪ್ರಚಾರದಲ್ಲಿದೆ. ಇವುಗಳಲ್ಲದೆ ಮೇಗುತಿಯ ದಕ್ಷಿಣಕ್ಕೆ ಇನ್ನೂ ಒಂದು ಜೈನಗುಡಿಯೊಂದಿದೆ. ಐಹೊಳೆಯ ಹತ್ತಿರದಲ್ಲಿರುವ ಮಹಾಕೂಟೇಶ್ವರ ದೇವಾಲಯವನ್ನು ಇಲ್ಲಿಯೇ ಉಲ್ಲೇಖಿಸಬಹುದು. ಚಾಲುಕ್ಯರ ಪ್ರಾಚೀನ ದೇವಾಲಯಗಳಲ್ಲಿ ಇದೂ ಒಂದಾಗಿದೆ. ಹೀಗೆ ಐಹೊಳೆ ಮತ್ತು ಅದರ ಸುತ್ತಮುತ್ತಲ ಪ್ರದೇಶ ದೇವಾಲಯಗಳ ಸಮೃದ್ಧಿಯಿಂದ ಕೂಡಿದೆ. ಚಾಲುಕ್ಯ ವಾಸ್ತುವಿನ ಬೆಳೆವಣಿಗೆಯ ಮೊದಲ ಘಟ್ಟವನ್ನು ಇಲ್ಲಿನ ನಿರ್ಮಾಣಗಳು ಎತ್ತಿ ತೋರಿಸುತ್ತವೆ.[375]

ಚಾಲುಕ್ಯ ವಾಸ್ತುವಿನ ಬೆಳೆವಣಿಗೆಯ ಮುಂದಿನ ಹಂತವನ್ನೂ ಅದರ ಉನ್ನತಿಯನ್ನೂ ಪಟ್ಟದಕಲ್ಲಿನಲ್ಲಿ ನೋಡುತ್ತೇವೆ.[376] ಇದರಲ್ಲಿ ಆರ್ಯ-ದ್ರಾವಿಡಶೈಲಿಗಳು ಅಕ್ಕಪಕ್ಕದಲ್ಲಿರುವ ದೇವಾಲಯಗಳಲ್ಲದೆ, ಸಮ್ಮಿಶ್ರಶೈಲಿಯ ದೇವಾಲಯಗಳೂ ಇವೆ. ಈ

ಕಾರಣದಿಂದಲೇ ಪಟ್ಟದಕಲ್ಲು ಉತ್ತರ ದಕ್ಷಿಣಭಾರತಗಳ ವಾಸ್ತುಶೈಲಿಗಳ ಸಂಗಮ ಭೂಮಿ ಎನಿಸಿದೆ.[377] ಇಲ್ಲಿ ೧೨ ದೇವಾಲಯಗಳಿವೆ. ಪರ್ಸಿ ಬ್ರಾನ್ ವಿಭಾಗಿಸುವ ಹಾಗೆ, ಪಾಪನಾಥ, ಜಂಬುಲಿಂಗ, ಕರಿಸಿದ್ದೇಶ್ವರ ಮತ್ತು ಕಾಶಿನಾಥಗಳು ಉತ್ತರ ಶೈಲಿಯಲ್ಲೂ ಸಂಗಮೇಶ್ವರ, ವಿರೂಪಾಕ್ಷ, ಮಲ್ಲಿಕಾರ್ಜುನ ಮತ್ತು ಗಳಗನಾಥಗಳು ದಕ್ಷಿಣ ಶೈಲಿಯಲ್ಲೂ ಇವೆ.

ಈ ದೇವಾಲಯಗಳಲ್ಲಿ ಪಾಪನಾಥ ಪ್ರಮುಖವಾದ್ದು. ೬೮೦ರ ಸುಮಾರಿಗೆ ನಿರ್ಮಾಣವಾದಂತೆ ತಿಳಿದುಬರುತ್ತದೆ. ದೊಡ್ಡದಾದ ಪಾಪನಾಥ ದೇವಾಲಯ ಒಂದರಲ್ಲಿಯೇ ಔತ್ತರೇಯ ಮತ್ತು ದಾಕ್ಷಿಣಾತ್ಯ ಲಕ್ಷಣಗಳೆರಡನ್ನೂ ಸೇರಿಸುವ ಪ್ರಯತ್ನ ನಡೆದಿರುವಂತೆ ಕಾಣುತ್ತದೆ. ಇದರಲ್ಲಿ ಸುಖವಾಸಿ ಇಲ್ಲ. ಮೂಲತಃ ಇದು ವಿಷ್ಣು ಸೂರ್ಯರಿಗೆ ನಿವೇದಿತವಾಗಿದ್ದು, ನಂತರ ಶಿವನದಾಗಿ ಮಾರ್ಪಾಡಾಗಿರಬೇಕೆಂದು ಕಸಿನ್ಸ್ ಹಾಗೂ ಪರ್ಸಿ ಬ್ರೌನ್ ಅಭಿಪ್ರಾಯಪಡುತ್ತಾರೆ.[378] ಗೋಡೆಗಳ ಗಾತ್ರ, ಕಂಬಗಳ ಆಕಾರಗಳಲ್ಲಿ ಗುಹಾದೇವಾಲಯಗಳ ಪ್ರಭಾವವಿದೆಯೆಂದು ಕೂಡ ಅವರು ಹೇಳುತ್ತಾರೆ.[379] ಚತ್ತರ ರೇವಡಿ ಒವಜ್ಜ ಎಂಬುವನು ಕಟ್ಟಿರಬೇಕೆಂದು ದೇವಾಲಯದ ಗೋಡೆಯ ಮೇಲಿರುವ ಶಾಸನವೊಂದರಿಂದ ತಿಳಿದುಬರುತ್ತದೆ.

ಇದಾದ ತರುವಾಯದ್ದು ವಿರೂಪಾಕ್ಷ ದೇವಾಲಯ. ಇದು ದ್ರಾವಿಡ ಸಂಪ್ರದಾಯದ್ದಾಗಿದ್ದು, ಸಂವಿಧಾನ ಮತ್ತು ನಿರ್ವಹಣೆಯಲ್ಲಿ ಮೇಲಿನದಕ್ಕಿಂತ ಹೆಚ್ಚು ವಿಕಾಸವನ್ನು ಪಡೆದುಕೊಂಡಿದ್ದಾಗಿದೆ. ಇದನ್ನು ೭೪೦ರಲ್ಲಿ ೨ನೆಯ ವಿಕ್ರಮಾದಿತ್ಯನ ಹಿರಿಯ ರಾಣಿ ಲೋಕಮಹಾದೇವಿ ಎಂಬುವಳು ತನ್ನ ಪತಿ ಪಲ್ಲವರ ಮೇಲೆ ಮೂರು ಬಾರಿ ವಿಜಯಯಾತ್ರೆ ಮಾಡಿದ ಸ್ಮಾರಕವಾಗಿ ಕಟ್ಟಿಸಿದಳೆಂದು ದೇವಾಲಯದಲ್ಲಿರುವ ವಿಕ್ರಮಾದಿತ್ಯನ ಶಾಸನಗಳಿಂದ ವ್ಯಕ್ತವಾಗುತ್ತದೆ. ಲೋಕಮಹಾದೇವಿ ಇದನ್ನು ಕಟ್ಟಿಸಿದ್ದರಿಂದ, ಇದಕ್ಕೆ 'ಲೋಕೇಶ್ವರ' ಎಂದು ಹೆಸರಾಗಿದೆ. ಇದು ಕಾಂಚಿಯ ರಾಜಸಿಂಹೇಶ್ವರ ದೇವಾಲಯವನ್ನು ಹೋಲುತ್ತದೆಂದು ಹೇಳುತ್ತಾರೆ. ೨ನೆಯ ವಿಕ್ರಮಾದಿತ್ಯ ರಾಜಸಿಂಹೇಶ್ವರದಿಂದ ಆಕರ್ಷಿತನಾಗಿದ್ದು, ಅಲ್ಲಿಂದ ಶಿಲ್ಪಿಗಳನ್ನು ಕರಸಿದ್ದನೆಂದು ೨ನೆಯ ಕೀರ್ತಿವರ್ಮನ ತಾಮ್ರಶಾಸನವೊಂದರಿಂದ ತಿಳಿದುಬರುತ್ತದೆ. ಇದಲ್ಲದೆ ಇದನ್ನು ಕಟ್ಟಿದ ವಾಸ್ತುಕಾರರು ಸರ್ವಸಿದ್ಧಿ ಆಚಾರಿ ಮತ್ತು ಗುಂಡ ಎಂದು ಗೊತ್ತಾಗುತ್ತದೆ. ಒಟ್ಟಾರೆ ಇದೊಂದು ಪ್ರಮುಖ ವಾಸ್ತುಕೃತಿ. ಇದರ ಪಕ್ಕದಲ್ಲಿರುವ ಮಲ್ಲಿಕಾರ್ಜುನ ದೇವಾಲಯ ಇದೇ ಕಾಲದ ಇದನ್ನೇ ಹೋಲುವ ಮತ್ತೊಂದು ದೇವಾಲಯ. ಇದನ್ನು ೨ನೆಯ ವಿಕ್ರಮಾದಿತ್ಯನ ಮತ್ತೊಬ್ಬ ರಾಣಿ ತ್ರೈಲೋಕ್ಯಮಹಾದೇವಿ ನಿರ್ಮಿಸಿದಳೆಂದು ತಿಳಿದುಬರುತ್ತದೆ. ಇದು ತ್ರೈಲೋಕ್ಯೇಶ್ವರ ದೇವಾಲಯವೆಂದು ಪ್ರಸಿದ್ಧವಾಗಿದೆ.

ಸುಮಾರು ಇದೇ ಕಾಲದಲ್ಲಿ ಗಳಗನಾಥ, ಕಾಶೀನಾಥ, ಜಂಬುಲಿಂಗ ಮತ್ತು ಕರಿಸಿದ್ಧೇಶ್ವರ ದೇವಾಲಯಗಳು ನಿರ್ಮಾಣವಾಗಿರಬೇಕೆಂದು ತಿಳಿಯಲಾಗಿದೆ. ಇದಕ್ಕೆ ಕೆಲವು ವರ್ಷಗಳ ಮೊದಲೇ ಸಂಗಮೇಶ್ವರ (ವಿಜಯೇಶ್ವರ) ದೇವಾಲಯವನ್ನು

ವಿಜಯಾದಿತ್ಯ ಕಟ್ಟಿಸಿದಂತೆ ತಿಳಿದುಬರುತ್ತದೆ. ಇದು ವಿರೂಪಾಕ್ಷ ದೇವಾಲಯದ ಶೈಲಿಯಲ್ಲಿದ್ದು, ತೆರದ ಮಂಟಪವೊಂದು ಬೇರೆ ಇದೆ. ಇದಲ್ಲದೆ, ಲಕ್ಷ್ಮೇಶ್ವರದಲ್ಲಿರುವ ಆನೆಸಜ್ಜೆಯ ಬಸದಿಯನ್ನು ವಿಜಯಾದಿತ್ಯನ ತಂಗಿ ಕುಂಕುಮ ಮಹಾದೇವಿ ಕಟ್ಟಿಸಿದಳಂತೆ. ಹೀಗೆ ಪಟ್ಟದಕಲ್ಲು, ಬಾದಾಮಿ, ಐಹೊಳೆಗಳು ಚಾಲುಕ್ಯರ ವಾಸ್ತುಕಲೆಯ ಪ್ರಗತಿಯನ್ನೂ ಪರಿಣತಿಯನ್ನೂ ತೋರಿಸುವುವು.

ಬಾದಾಮಿ ಚಾಲುಕ್ಯರ ಕಾಲದಲ್ಲಿ ಕಟ್ಟಿದ ದೇವಾಲಯಗಳಂತೆಯೇ ಕೊರೆದು ಮಾಡಿದ ಗುಹಾಂತರ್ದೇವಾಲಯಗಳೂ ಪ್ರಸಿದ್ಧವಾಗಿವೆ. ಬಾದಾಮಿ ಚಾಲುಕ್ಯರು ಮೊದಲು ಐಹೊಳೆಯನ್ನೂ ತರುವಾಯ ಬಾದಾಮಿಯನ್ನೂ ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದರು. ಐಹೊಳೆಯಲ್ಲಿ ದೇವಾಲಯಗಳು ನಿರ್ಮಿತವಾಗುತ್ತಿದ್ದ ಕಾಲದಲ್ಲಿಯೇ ಬಾದಾಮಿಯಲ್ಲಿ ಗುಹಾಲಯಗಳು ನಿರ್ಮಾಣವಾಗುತ್ತಿದ್ದುವೆಂದು ತೋರುತ್ತದೆ. ಈ ಕಾರಣದಿಂದಲೇ ಐಹೊಳೆಯಂತೆ ಬಾದಾಮಿಯಲ್ಲೂ ಪ್ರಾಚೀನ ನಿರ್ಮಿತಿಗಳು ಕಾಣುವುದು. ಐಹೊಳೆ ಕಟ್ಟಿದ ದೇವಾಲಯಗಳಿಗೆ, ಬಾದಾಮಿ ಗುಹಾಂತರ್ದೇವಾಲಯಗಳಿಗೆ ಗಣ್ಯಕೇಂದ್ರಗಳಾದುವು.

ಬಾದಾಮಿಯ ಬೆಟ್ಟಗಳಲ್ಲಿ ಶಿಲೆಯನ್ನು ಕೊರೆದು ಮಾಡಿರುವ ಕಂಬಗಳಿರುವ ನಾಲ್ಕು ಸುಂದರ ಗುಹಾದೇವಾಲಯಗಳಿವೆ. ಇವು ೬,೭ನೆಯ ಶತಮಾನಗಳಲ್ಲಿ ಆದವು. ಇವುಗಳಲ್ಲಿ ಒಂದು ಶಿವ, ಒಂದು ಜಿನ, ಉಳಿದವು ವಿಷ್ಣುವಿಗೆ ಸಂಬಂಧಪಟ್ಟವು. ೧ನೆಯ ಪುಲಕೇಶಿಯ ಮಕ್ಕಳಾದ ಕೀರ್ತಿವರ್ಮ ಮತ್ತು ಮಂಗಳೇಶರು ಈ ದೇವಾಲಯಗಳ ನಿರ್ಮಾಣಕ್ಕೆ ಕಾರಣರಾದರು. ಇವರಲ್ಲಿ ಮಂಗಳೇಶ ಈ ಗುಹಾಲಯಗಳ ರಚನೆಗೆ ಹೆಚ್ಚು ದುಡಿದಿದ್ದರಿಂದ 'ಚಾಲುಕ್ಯ ವಾಸ್ತುಕಲೆಯ ಪಿತಾಮಹ'ನೆಂದು ಹೆಸರಾಗಿದ್ದಾನೆ.[380] ಮೇಲ್ಕಂಡ ಗುಹೆಗಳಲ್ಲಿ ೩ನೆಯ ವೈಷ್ಣವ ಗುಹೆ ಗಮನಾರ್ಹವಾದುದಾಗಿದೆ. ಬಾದಾಮಿಯ ಈ ವೈಷ್ಣವ ಗುಹೆಯ ಕಂಬದ ಮೇಲೆ ಮಂಗಳೇಶನ ಶಾಸನವೊಂದು ಕೆತ್ತಿದ್ದು, ಅದು ೫೭೮ರದೆಂದು ಗೊತ್ತಾಗಿದೆ. ವೈಷ್ಣವ ಗುಹಾದೇವಾಲಯವನ್ನು ಮಂಗಳೇಶ ತನ್ನ ಹಿರಿಯಣ್ಣನೂ ರಾಜನೂ ಆದ ಕೀರ್ತಿವರ್ಮನ ಸೂಚನೆಯಂತೆ ಪೂರ್ಣಗೊಳಿಸಿದನೆಂಬುದನ್ನೂ ಮತ್ತು ವಿಷ್ಣುದೇವತೆಯ ಪ್ರತಿಮೆಯನ್ನು ಪ್ರತಿಷ್ಠಾಪನೆ ಮಾಡಿದ ಸಂದರ್ಭದಲ್ಲಿ ಲಂಜೇಶ್ವರ ಗ್ರಾಮವನ್ನು ದೇವಾಲಯಕ್ಕೆ ದತ್ತಿಬಿಟ್ಟದ್ದನ್ನೂ ಈ ಶಾಸನ ಹೇಳುತ್ತದೆ.[381] ಹಲ್ಮಿಡಿ ಶಾಸನ ಸಿಕ್ಕುವವರೆಗೆ ಕನ್ನಡದ ಪ್ರಾಚೀನತಮ ಶಾಸನವೆನಿಸಿತ್ತು ಇದು. ೪ನೆಯ ಜೈನಗುಹೆ ಉಳಿದ ಗವಿಗಳಿಗಿಂತ ಈಚಿನದಾಗಿ ಸು. ೬೫೦ರಲ್ಲಿ ಕೊರೆದಂತೆ ಕಾಣುತ್ತದೆ.[382]

ಈ ನಾಲ್ಕು ಗುಹಾಲಯಗಳೂ ಬಂಡೆಯ ಕಡಿದಾದ ಮುಖದ ಮುಂದಿನ ಕಾಲುದಾರಿಗೆ ಸೇರಿದಂತಿವೆ. ಎಲ್ಲ ಒಂದೇ ಮಾದರಿಯಲ್ಲಿವೆ. ಇವುಗಳಲ್ಲಿ ಕಂಬಗಳಿರುವ ಮೊಗಸಾಲೆ, ಅಂಕಣಗಳಿರುವ ಹಜಾರ ಮತ್ತು ಚಿಕ್ಕ ಚತುರಸ್ರ ಗರ್ಭಗುಡಿ—ಈ ಸಾಮಾನ್ಯ ಲಕ್ಷಣಗಳನ್ನು ಕಾಣುತ್ತೇವೆ. ಈ ಗುಹೆಗಳ ನಿರ್ಮಾಣಕೌಶಲ ಉಚ್ಚ

ಮುಟ್ಟಿದ್ದಾಗಿದ್ದು, ಕರ್ಣಾಟಕ ಕಲೆಯ ಸಮೃದ್ಧಿ ಕಾಣುತ್ತದೆ.

ಬಾದಾಮಿಯಲ್ಲಿ ಗುಹಾಲಯಗಳಲ್ಲದೆ ದೇವಾಲಯಗಳೂ ಕಂಡುಬರುತ್ತವೆ. ಇವುಗಳಲ್ಲಿ ಗನುನಿಸಬೇಕಾದವು ಎಂದರೆ ಮಾಲೆಗಿತ್ತಿ ಶಿವಾಲಯ ಮತ್ತು ಭೂತನಾಥ ದೇವಾಲಯಗಳು. ಇವುಗಳಲ್ಲಿ ಮಾಲೆಗಿತ್ತಿ ಶಿವಾಲಯವೇ ಅತ್ಯಂತ ಪ್ರಾಚೀನವಾದುದು. ಐಹೊಳೆಯ ಮೇಗುತಿ ದೇವಾಲಯದ ರಚನೆಯು ಕಾಲಕ್ಕೆ ಸೇರಿದುದು. ಇದು ಚಿಕ್ಕದಾದರೂ ಉಜ್ವಲ ನಿರ್ಮಾಣವಾಗಿದೆ.

ಇದು ಚಾಲುಕ್ಯವಾಸ್ತುವಿನ ಸಂಕ್ಷಿಪ್ತಾವಲೋಕನ. ಸಾಮಾನ್ಯವಾಗಿ ಚಾಲುಕ್ಯ ಶೈಲಿಯನ್ನು ವೇಸರ ರೀತಿಗೆ ಸಮಾನವಾಗಿ ಹೇಳುವುದುಂಟು ನಾಗರ ಹಾಗೂ ದ್ರಾವಿಡ ರೀತಿಗಳೆರಡೂ ವೇಸರದಲ್ಲಿ ಕೂಡಿವೆ. ಹೀಗಾಗಿ, ಚಾಲುಕ್ಯವಾಸ್ತು, ಔತ್ತರೇಯ ಹಾಗೂ ದಾಕ್ಷಿಣಾತ್ಯ ಶೈಲಿಗಳ ಫಲ. ಆದರೆ, ಮೊದಮೊದಲ ದೇವಾಲಯಗಳಲ್ಲಿ ಈ ಎರಡು ಶೈಲಿಗಳ ಮಿಶ್ರಣ ಕಾಣುವುದಾದರೂ ಕ್ರಮೇಣ ಸ್ವತಂತ್ರ ರೀತಿಯೊಂದನ್ನು ರೂಢಿಸಿದ್ದು ಕಾಣುತ್ತದೆ.[383] ಹೆನ್ರಿಕಸಿನ್ಸ್ ಅವರು ಸರಿಯಾಗಿಯೇ ಊಹಿಸಿರುವಂತೆ, ಚಾಲುಕ್ಯ ವಾಸ್ತು ಹಲವು ಹಂತಗಳಲ್ಲಿ ವಿಕಾಸಹೊಂದಿದ್ದು, ಮೂಲದಲ್ಲಿ ಶುದ್ಧಾಂಗವಾಗಿ ದ್ರಾವಿಡ ಶೈಲಿಯಾಗಿದ್ದುದು ಅನಂತರದ ಕಾಲದಲ್ಲಿ ಹಲವಾರು ಬದಲಾವಣೆಗಳನ್ನು ಮಾಡಿಕೊಂಡಿತು.[384] ಅದು ದಾಕ್ಷಿಣಾತ್ಯ ಶೈಲಿಯನ್ನೇ ಹೆಚ್ಚು ಮೂಲಭೂತವಾಗಿ ಅವಲಂಬಿಸಿದ್ದರೆ ಅದಕ್ಕೆ ಆಶ್ಚರ್ಯಪಡಬೇಕಾದ್ದಿಲ್ಲ

ಚಾಲುಕ್ಯವಾಸ್ತುವಿನ ಲಕ್ಷಣಗಳನ್ನು ಕುರಿತು ಬರೆಯುತ್ತ ಕಸಿನ್ಸ್ ಹೀಗೆಂದಿದ್ದಾರೆ: ಚಾಲುಕ್ಯ ವಾಸ್ತುಕಾರರು ಪಲ್ಲವ ಶಿಖರದ ಅಂತಸ್ತುಗಳ ಯೋಜನೆಯನ್ನು ಉಳಿಸಿಕೊಂಡದ್ದಲ್ಲದೆ, ಪ್ರತಿ ಅಂತಸ್ತಿನ ಎತ್ತರವನ್ನು ಕಡಿಮೆಮಾಡಿಕೊಂಡರು ಮತ್ತು ಅವುಗಳನ್ನು ಆಲಂಕಾರಿಕ ವಿವರಗಳಿಂದ ತುಂಬಿದರು. ಇದೇ ಸಮಯದಲ್ಲಿ ಔತ್ತರೇಯ ಶಿಖರದ ಲಕ್ಷಣಗಳನ್ನು ಸ್ವೀಕರಿಸಿದರು; ಮತ್ತು ಶಿಖರದಲ್ಲಿರುವ ಪಟ್ಟಿಕೆಯನ್ನು ರೂಪಿಸಲು ಪ್ರತಿ ಅಂತಸ್ತಿನ ಮೇಲೆ ಮಧ್ಯೆ ಪಟ್ಟಿಕೆಗಳನ್ನು ಅಥವಾ ಪ್ರತಿಮಾ ಗೂಡುಗಳನ್ನು ನಿರ್ಮಿಸಿದರು. ಇನ್ನು ಇನೆಯ ಅಂಶವೆಂದರೆ, ಬೌದ್ಧ ಚೈತ್ಯದ ಗಜಪೃಷ್ಠಾಕಾರದ ಗುಣವನ್ನು ಪ್ರಸಿದ್ಧ ದುರ್ಗಾ ದೇವಾಲಯದಲ್ಲಿ ಸೇರಿಸಿದ್ದು.[385]

ಬಾದಾಮಿ ಚಾಲುಕ್ಯರ ದೇವಾಲಯಗಳು ಗುಪ್ತಶೈಲಿಯ ತರುವಾಯ ವಿನ್ಯಾಸಗೊಂಡವು. ಇವು ಸಾಮಾನ್ಯವಾಗಿ ಕಲ್ಲು ದಿಮ್ಮಿಗಳನ್ನು ಒಂದರ ಮೇಲೊಂದರಂತೆ ಒಡ್ಡಿ ಕಟ್ಟಿದ ಕಟ್ಟಡಗಳಾಗಿದ್ದುವು. ಇಂಥ ಬಾದಾಮಿ, ಐಹೊಳೆ ಮತ್ತು ಪಟ್ಟದಕಲ್ಲುಗಳಲ್ಲಿ ಕಾಣುತ್ತವೆ. ಇವು ಹೊಸದಾಗಿ ರೂಪಿಸಿಕೊಂಡ ಚಾಲುಕ್ಯ ಶೈಲಿಯ ಒಳ್ಳೆಯ ನಿದರ್ಶನಗಳು. ಐಹೊಳೆಯ ದುರ್ಗಾ ದೇವಾಲಯ ಮತ್ತು ಪಟ್ಟದಕಲ್ಲಿನ ಪಾಪನಾಥ ಹಾಗೂ ವಿರೂಪಾಕ್ಷ ದೇವಾಲಯಗಳನ್ನು ಬಿಟ್ಟರೆ, ಉಳಿದವು ಸಾಮಾನ್ಯವಾದವು. ಈ ಕಾಲದಲ್ಲಿ ಕಟ್ಟಡಕ್ಕೆ ಕೆಂಪು ಅಥವಾ ತಿಳಿಹಳದಿ ಮಿಶ್ರಿತ ಮರಳುಗಲ್ಲುಗಳನ್ನು ಉಪಯೋಗಿಸುತ್ತಿದ್ದುದರಿಂದ, ಕುಶಲ ಕೆತ್ತನೆಗಳು ಕಾಣಿಸುವುದಿಲ್ಲ.

ಬಾದಾಮಿ ಚಾಲುಕ್ಯರ ಕಾಲದ ಚಿಕ್ಕದೇವಾಲಯಗಳಲ್ಲಿ ಗರ್ಭಗೃಹ ಮತ್ತು ಮಂಟಪಗಳೆಂಬ ಎರಡು ಭಾಗಗಳಿರುತ್ತವೆ. ಮೇಗುತಿ ಮತ್ತು ಕೊಂಟಿಗುಡಿಗಳು ಇದರ ನಿದರ್ಶನಗಳಾಗಿವೆ. ಆದರೆ ಲಾಡಖಾನ್ ದೇವಾಲಯದಲ್ಲಿ ಪ್ರತ್ಯೇಕ ಗರ್ಭಗೃಹವಿದೆ. ಒಂದೇ ಒಂದು ದೊಡ್ಡ ಹಜಾರವಿರುವುದನ್ನು ಕಾಣುತ್ತೇವೆ. ಮುಂದಿನ ಶತಮಾನದ ದೊಡ್ಡ ದೇವಾಲಯಗಳಲ್ಲಿ ಒಂದು ಹಜಾರ ಮತ್ತು ಎರಡು ಗರ್ಭಗೃಹಗಳು ಕೆಲವಲ್ಲಿ ಕಂಡರೆ, ಮತ್ತೆ ಕೆಲವಲ್ಲಿ ಒಂದು ಗರ್ಭಗೃಹದ ಜತೆಗೆ ಎರಡು ಮೂರು ದ್ವಾರಗಳು ಹಾಗೂ ಮಂಟಪಗಳಿರುವುದನ್ನು ಕಾಣುತ್ತೇವೆ. ಇನ್ನೂ ಕಂಬಗಳಿಂದ ಕೂಡಿದ ಹಜಾರ ವಿದೆ. ಕಟ್ಟಡಗಳ ತಲವಿನ್ಯಾಸದಲ್ಲಿ ಸಮತಲ ಚತುರಸ್ರ ಅಥವಾ ದೀರ್ಘ ಚತುರಸ್ರ ಕಾಣಿಸುತ್ತದೆ. ಕಂಬಗಳು ಮೊದಮೊದಲು ದಪ್ಪ ಹಾಗೂ ಚತುರಸ್ರವಾಗಿದ್ದು, ಅನಂತರ ವೃತ್ತಾಕಾರವನ್ನು ಪಡೆದವು. ದುರ್ಗಾ, ವಿರೂಪಾಕ್ಷ ಮತ್ತು ಪಾಪನಾಥ ದೇವಾಲಯಗಳು ಇಂಥ ಕಂಬಗಳನ್ನು ಒಳಗೊಂಡಿರುವುದನ್ನು ನೋಡಬಹುದು.

### ರಾಷ್ಟ್ರಕೂಟರ ಕಾಲದ ವಾಸ್ತುಕಲೆ

ಬಾದಾಮಿ ಚಾಲುಕ್ಯರ ತರುವಾಯ ಕರ್ನಾಟಕದ ಅಖಂಡ ಸಾಮ್ರಾಜ್ಯಕ್ಕೆ ಉತ್ತರಾಧಿಕಾರಿಗಳಾಗಿ ಬಂದವರು ರಾಷ್ಟ್ರಕೂಟರು. ದಕ್ಷಿಣ ಭಾರತವನ್ನೆಲ್ಲ ತಮ್ಮ ಹತೋಟಿಗೆ ತಂದುಕೊಂಡ ಇವರು, ರಾಜಕೀಯವಾಗಿ ತುಂಬ ಪ್ರಭಾವಶಾಲಿಗಳಾದರು. ಕರ್ನಾಟಕ ಕಲೆ, ಆ ಮೂಲಕ ಭಾರತೀಯ ಕಲೆ, ಈ ಕಾಲದ ಎಲ್ಲೋರ ಮತ್ತು ಎಲಿಫೆಂಟಾದ ವಾಸ್ತುಶಿಲ್ಪ ಕೃತಿಗಳಿಗಿಂತ ಕಲೆಯ ಇತಿಹಾಸದಲ್ಲಿ ಹೊಸ ಮೈಲು ಗಲ್ಲೊಂದನ್ನು ಸಾಧಿಸಿತು. ಚಾಲುಕ್ಯರು ಬಿಟ್ಟುಹೋಗಿದ್ದ ಕಲಾಪರಂಪರೆಯ ಹಿನ್ನೆಲೆ ಯಲ್ಲಿ ಕೆಲಸಮಾಡಿದ ರಾಷ್ಟ್ರಕೂಟರು, ಅದನ್ನು ಗಮನಾರ್ಹವಾಗಿ ಮುಂದುವರಿಸಿದ ರೆನ್ನಬೇಕು.

ರಾಷ್ಟ್ರಕೂಟರ ಕಾಲದಲ್ಲಿ ಶೈವಧರ್ಮ ಪುನರುಜ್ಜೀವನಗೊಂಡಿತು ; ವಾಸ್ತುಕಲೆಯ ಚಟುವಟಿಕೆಗಳಿಗೆ ಸ್ಫೂರ್ತಿ ನೀಡಿತು. ಸಾಮ್ರಾಜ್ಯದ ಸ್ಥಾಪಕನಾದ ದಂತಿದುರ್ಗ ಉಜ್ಜಯಿನಿಯ ಮಹಾಕಾಳನ ಉಪಾಸಕನಾಗಿದ್ದ. ಇವನ ನಂತರ ಬಂದ ೧ನೆಯ ಕೃಷ್ಣನು ಲೋಕವಿಖ್ಯಾತವಾದ ಕೈಲಾಸನಾಥ ದೇವಾಲಯವನ್ನೂ ಹಲವಾರು ಶಿವ ದೇವಾಲಯಗಳನ್ನೂ ನಿರ್ಮಿಸುವುದರ ಮೂಲಕ ಶಿವಭಕ್ತಿಯನ್ನು ಮೆರೆದ. ಶಿಲೆಯಲ್ಲಿ ಕೊರೆದು ಮಾಡಿದ ಈ ಕಾಲದ ದೇವಾಲಯಗಳು ಬೌದ್ಧ ಚೈತ್ಯಮಂದಿರಗಳಿಗಿಂತ ಭಿನ್ನವಾದವು. ಇವುಗಳಲ್ಲಿ ಗರ್ಭಗುಡಿಯ ಮುಂದಿನ ಹಜಾರ ದೊಡ್ಡ ದೊಡ್ಡ ಕಂಬಗಳ ಸಾಲಿನಿಂದ ನಿರ್ಮಿತವಾಗಿರುವುದನ್ನು ನೋಡುತ್ತೇವೆ. ಈ ಕಂಬಗಳು ವಿನ್ಯಾಸದಲ್ಲಿ ಮಾತ್ರವಲ್ಲದೆ, ರೂಪ ಮತ್ತು ಅಲಂಕಾರಗಳಲ್ಲಿ ಕೂಡ ಚೈತ್ಯಗಳ ಕಂಬಗಳಿಗಿಂತ ಭಿನ್ನವಾಗಿವೆ. ಕಂಬಗಳು ಸ್ಥೂಲ ಚತುರಸ್ರವಾಗಿರುವ ದೇವಾಲಯಗಳು ಎಲ್ಲೋರ, ಮಾಲ್ಖೇಡ್, ಎಲಿಫೆಂಟಾ, ಜೋಗೇಶ್ವರಿ ಮತ್ತು ಮಂಡಪೇಶ್ವರಗಳಲ್ಲಿ ಕಾಣುತ್ತೇವೆ.

ಎಲ್ಲೋರ ಒಂದರಲ್ಲಿ ೧೭ ವೈದಿಕ ದೇವಾಲಯಗಳೂ ೪ ಜೈನಮಂದಿರಗಳೂ ಇವೆ. ಇವೆಲ್ಲ ಏಕಕಾಲದಲ್ಲಿ ಕಟ್ಟಿದವೆಂದು ಹೇಳಲಾಗುವುದಿಲ್ಲ.

ಕಟ್ಟಿದ ದೇವಾಲಯಗಳಿಗಿಂತ ಕೊರೆದ ಗುಹಾಲಿಯಗಳು ಪ್ರಾಚೀನವೆಂಬುದು ತಿಳಿದ ವಿಷಯವೇ. ಕಟ್ಟಿದ ದೇವಾಲಯಗಳ ವಿನ್ಯಾಸದಲ್ಲಿ ಪ್ರಗತಿ ಸಾಧಿತವಾಗುತ್ತಿದ್ದಂತೆ ಗುಹಾಂತರ್ದೇವಾಲಯಗಳ ನಿರ್ಮಾಣದಲ್ಲಿ ಹಿನ್ನಡೆ ಆಗಿರಬೇಕು. ಬಾದಾಮಿ ಚಾಲುಕ್ಯರ ಕಾಲದಲ್ಲಿಯೇ ಕಟ್ಟಿದ ದೇವಾಲಯಗಳ ನಿರ್ಮಾಣಕಾರ್ಯವನ್ನು ಗುಹಾಲಯಗಳಿಗೆ ಹೋಲಿಸಿದಾಗ ಇದು ಸ್ಪಷ್ಟವಾಗುತ್ತದೆ. ಆದರೂ ಗುಹಾಂತರ್ದೇವಾಲಯಗಳ ನಿರ್ಮಾಣ ಪೂರ್ತಿ ನಿಂತುಹೋಯಿತೆಂದು ಹೇಳಲಾಗದು. ಅದು ೯ನೆಯ ಶತಮಾನದ ವರೆಗೆ ಉಚ್ಛ್ರಾಯದಲ್ಲಿತ್ತು. ಇದಕ್ಕೆ ನಿದರ್ಶನವಾಗಿ ಎಲ್ಲೋರದ ಗುಹಾಲಯವನ್ನೇ ಹೇಳಬಹುದು. ಜಗತ್ತಿನ ಇಂಥ ವಾಸ್ತುರೀತಿಯಲ್ಲಿ ಇವು ಅಸದೃಶವಾದವು.

ಇವುಗಳಲ್ಲಿ ಉಲ್ಲೇಖನಾರ್ಹವಾದುವು ರಾವಣಗುಹೆ, ದಶಾವತಾರ ಗುಹೆ ಮತ್ತು ಕೈಲಾಸ ದೇವಾಲಯಗಳು. ರಾವಣಗುಹೆ ಮತ್ತು ದಶಾವತಾರ ಗುಹೆಗಳು ಕೈಲಾಸ ದೇವಾಲಯಗಳಿಗಿಂತ ಪ್ರಾಚೀನವಾದವೆನ್ನಲಾಗಿದೆ.[386] ರಾವಣಗುಹೆಯ ಮುಂಭಾಗದಲ್ಲಿ ೪, ತೆರೆದ ಹಜಾರದಲ್ಲಿ ೧೬ ಹೀಗೆ ಕಂಬಗಳಿವೆ. ದಶಾವತಾರ ಗುಹೆ ಎರಡು ಅಂತಸ್ತುಗಳಿವೆ. ಮೊದಲನೆಯದರಲ್ಲಿ ಒಂದು ದೊಡ್ಡ ಹಜಾರ ಮತ್ತು ೧೪ ಚತುರಸ್ರ ಕಂಬಗಳಿವೆ. ಎರಡನೆಯದರಲ್ಲಿ ಸಮಕೋನದ ಹಜಾರ ಮತ್ತು ೫೪ ಕಂಬಗಳಿವೆ. ಈ ಕಂಬಗಳು ೬ ಸಾಲುಗಳಲ್ಲಿದ್ದು, ಪ್ರತಿಯೊಂದರಲ್ಲೂ ೯ ಕಂಬಗಳಿವೆ. ದ್ವಾರದಲ್ಲಿ ದಂತಿದುರ್ಗನ ದೀರ್ಘ ಶಾಸನವೊಂದನ್ನು ಕೆತ್ತಲಾಗಿದೆ.

ಎಲ್ಲೋರದ ಗುಹಾಂತರ್ದೇವಾಲಯಗಳಲ್ಲಿ ಕೈಲಾಸ ದೇವಾಲಯವೇ ಅತ್ಯಂತ ಗಮನಾರ್ಹವಾದುದು. ಪ್ರಾಯಶಃ ಕಲ್ಲುಕೊರೆದು ಮಾಡಿದ ಭಾರತೀಯ ಗುಹಾ ವಾಸ್ತುಶಿಲ್ಪದಲ್ಲಿ ಇದೊಂದು ಅತ್ಯುತ್ಕೃಷ್ಟ ಸಾಧನೆ. ಪರ್ಸಿ ಬ್ರೌನ್ ಅವರು ಹೀಗೆ ಬರೆಯುತ್ತಾರೆ: "....it is something more than a record of artistic form; it is a great spiritual achievement, every portion being a rich statement glowing with meaning. The Kailāsa is an illustration of one of those rare occasions when men's minds, Hearts and hands work in unison towards the consummation of a supreme ideal."[387] ಎಲ್ಲೋರದ ಕೈಲಾಸ ದೇವಾಲಯ ಒಂದು ಅಖಂಡ ಶಿಲೆಯಲ್ಲಿ ನಿರ್ಮಿತವಾಗಿದೆ. ಇದನ್ನು ೮ನೆಯ ಶತಮಾನದಲ್ಲಿ ರಾಷ್ಟ್ರಕೂಟ ಚಕ್ರವರ್ತಿ ೧ನೆಯ ಕೃಷ್ಣನು ನಿರ್ಮಿಸಿದನು. ಪೂರ್ಣರೂಪದ, ಯಾವ ಭಾಗಗಳೂ ಬಿಟ್ಟುಹೋಗದ, ಅತ್ಯಂತ ಸಮರ್ಪಕವಾದ ದೇವಾಲಯವಿದು. ಇದರಲ್ಲಿ ಮುಖಮಂಟಪ, ನಂದಿಮಂಟಪ, ಸಭಾಮಂಟಪ ಮತ್ತು ಗರ್ಭಗೃಹಗಳಿವೆ. ದ್ರಾವಿಡ ಶೈಲಿಯಲ್ಲಿ ರಚಿತವಾದುದಾಗಿದೆ. ಧ್ವಜಸ್ತಂಭಗಳು ಮತ್ತು ನಂದಿಮಂದಿರಗಳು ಬಹಳ ಮುಖ್ಯ

ವಾಗಿದ್ದು, ದಾಕ್ಷಿಣಾತ್ಯ ಸ್ತಂಭಶೈಲಿಯ ವಿಕಾಸದಲ್ಲಿ ಮಹತ್ತ್ವದ ಹಂತಗಳಾಗಿವೆ. ಇದು ಸಂವಿಧಾನದಲ್ಲಿ ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯವನ್ನು ಹೋಲುತ್ತದೆಯಾದರೂ, ಎತ್ತರದಲ್ಲಿ ಅದಕ್ಕಿಂತ ಎರಡರಷ್ಟಿದೆ.

ಎಲ್ಲೋರದಲ್ಲಿ ಗಮನಿಸಬಹುದಾದ ಮತ್ತೊಂದು ನಿರ್ಮಾಣವೆಂದರೆ ಧೂಮರಲೇನಾ ೨೯ನೆಯ ಗುಹೆ. ಇಲ್ಲಿನ ವಾಸ್ತು ಕಲಾತ್ಮಕವಾದ್ದು, ಬೃಹತ್ಪ್ರಮಾಣದ್ದು ; ೮ ನೆಯ ಶತಮಾನದ ಈ ದೇವಾಲಯ ಕೆಲವು ವಿಷಯಗಳಲ್ಲಿ ಎಲಿಫೆಂಟಾದ ತ್ರಿಮೂರ್ತಿ ರಚನೆಯನ್ನು ಹೋಲುತ್ತದೆ. ಈ ಕಾಲದಲ್ಲಿಯ ಎಲಿಫೆಂಟಾದ ಶಿಲ್ಪಕೃತಿಗಳು ಕಲೆಯ ಅತ್ಯುನ್ನತ ಅಭಿವ್ಯಕ್ತಿಗಳೆಂದು ಹೆಸರಾಗಿವೆ.

ಎಲ್ಲೋರದಲ್ಲಿ ಕೆಲವು ಜೈನ ಗುಹಾಂತರ್ದೇವಾಲಯಗಳೂ ಕಂಡುಬರುತ್ತವೆ. ಇವು ೮-೯ನೆಯ ಶತಮಾನಗಳಲ್ಲಿ ನಿರ್ಮಾಣಗೊಂಡಿರಬೇಕೆಂಬ ಅಭಿಪ್ರಾಯವಿದೆ. ಇಂಥ ದೇವಾಲಯ ಸಮೂಹಗಳಲ್ಲಿ ಮೂರು ಗಮನಾರ್ಹವಾದುವು. ಇವುಗಳಲ್ಲಿ ಒಂದು ಕೈಲಾಸ ದೇವಾಲಯದ ಪ್ರತಿ (ಛೋಟಾ ಕೈಲಾಸ್). 'ಇಂದ್ರಸಭಾ' ಮತ್ತು 'ಜಗನ್ನಾಥಸಭಾ' ಎರಡಂತಸ್ತಿನವು ; ಮೊದಲನೆಯದು ವಿಸ್ತಾರದಲ್ಲಿ, ಅಲಂಕಾರ ಮತ್ತು ನಿರ್ಮಾಣ ಕೌಶಲಗಳಲ್ಲಿ ಮುಖ್ಯವಾದುದು. ಇವೆರಡೂ ಸಂಯೋಜನೆ, ವಾಸ್ತುಲಕ್ಷಣಗಳಲ್ಲಿ ಎಲ್ಲೋರದ ವೈದಿಕ ದೇವಾಲಯಗಳಿಗೆ ಸದೃಶವಾಗಿವೆ. ಪ್ರಾಯಶಃ ಅಮೋಘವರ್ಷ ನೃಪತುಂಗನ ಕಾಲದಲ್ಲಿ ಇವು ನಿರ್ಮಾಣವಾಗಿರಬೇಕು. ಐಹೊಳೆಯ ಒಂದು ಜೈನಗುಹೆಯೂ ಈತನ ಕಾಲದ್ದೆಂಬ ಅಭಿಪ್ರಾಯವಿದೆ.

ರಾಷ್ಟ್ರಕೂಟರ ಕಾಲದಲ್ಲಿ ಕಟ್ಟಿದ ದೇವಾಲಯಗಳು ವಿರಳ. ನಂದಿಯ ಭೋಗ ನಂದೀಶ್ವರ ದೇವಾಲಯ ದ್ರಾವಿಡ ಶೈಲಿಯಲ್ಲಿದೆ; ವಿಸ್ತಾರವಾದ ಅಲಂಕೃತ ಕಟ್ಟಡವಾಗಿದೆ. ರಾಷ್ಟ್ರಕೂಟರ ಮುಮ್ಮಡಿ ಗೋವಿಂದನ ೮೦೬ರ ತಾಮ್ರ ಶಾಸನವೊಂದು ಈ ದೇವಾಲಯವನ್ನು ಉಲ್ಲೇಖಿಸುತ್ತದೆ. ಇದಲ್ಲದೆ, ೮೧೦ರ ಮತ್ತೊಂದು ಶಾಸನ ಪ್ರಕಾರ ಇದು ಬಾಣವಿದ್ಯಾಧರನ ರಾಣಿ ರತ್ನಾವಳಿಯಿಂದ ಆದುದೆಂದು ತಿಳಿದುಬರುತ್ತದೆ. ದಕ್ಷಿಣಕ್ಕಿರುವ ಅರುಣಾಚಲೇಶ್ವರ ದೇವಾಲಯ ಕೂಡ ೮೮೦ರಲ್ಲಿ ನಿರ್ಮಾಣಗೊಂಡಿರಲು ಸಾಧ್ಯವಿದೆ. ಶ್ರವಣಬೆಳಗೊಳದ ಚಂದ್ರಗಿರಿಯಲ್ಲಿನ ೧೩ ಬಸದಿಗಳಲ್ಲಿ ಅತ್ಯಂತ ಪ್ರಾಚೀನ ಬಸದಿಯು ೮ನೆಯ ಶತಮಾನದ್ದಾಗಿರಬೇಕೆಂದು ಎಂ. ಎಚ್. ಕೃಷ್ಣ ಅವರು ಅಭಿಪ್ರಾಯಪಡುತ್ತಾರೆ.[೩೪೪] ಹಾಗೆಯೇ ಪಟ್ಟದಕಲ್ಲಿನ ಜೈನ ಬಸದಿಯನ್ನು ಕ್ರಿ.ಶ. ೮ನೆಯ ಶತಮಾನದಲ್ಲಿ ೧ನೆಯ ಕೃಷ್ಣನು ಕಟ್ಟಿಸಿರಬೇಕೆಂದು ಹೇಳಬಹುದಾಗಿದೆ. ರಾಷ್ಟ್ರಕೂಟರ ರಾಜಧಾನಿ ಮಾಳ್ಖೇಡದಲ್ಲಿ ಕಂಡುಬಂದ ವಾಸ್ತುಗಳಲ್ಲಿ ಆಕರ್ಷಣೆಯಿಲ್ಲ. ಸಂಡೂರಿನ ದೇವಾಲಯ ಕಲ್ಲಿನಿಂದ ಕಟ್ಟಲ್ಪಟ್ಟದ್ದು, ೩ನೆಯ ಇಂದ್ರನ ಶಿಲ್ಪವಿದೆಯೆಂಬುದು ಹರ್‌ಮನ್ ಗೊಯೆಟ್ಸ್ ಅವರ ಅಭಿಪ್ರಾಯ.

ರಾಷ್ಟ್ರಕೂಟರ ಒಲವು ಗುಹಾಂತರ್ದೇವಾಲಯಗಳ ಕಡೆಗೆ ಹೆಚ್ಚು ; ಕಟ್ಟಿದ

ದೇವಾಲಯಗಳು ಅಲ್ಲೊಂದು, ಇಲ್ಲೊಂದು ಅಷ್ಟೆ. ಅವರ ಕಾರ್ಯವೆಲ್ಲ ಇದ್ದ ದೇವಾಲಯಗಳಿಗೆ ದತ್ತಿಬಿಟ್ಟು, ಶಾಸನ ಹಾಕುವುದರಲ್ಲಿ ಹೆಚ್ಚು ವಿನಿಯೋಗವಾದಂತೆ ತೋರುತ್ತದೆ.

ಇಲ್ಲಿಯವರೆಗಿನ ವಿವೇಚನೆಯಿಂದ ಕ್ರಿ.ಶ. ೯ನೆಯ ಶತಮಾನದವರೆಗಿನ ಕರ್ಣಾಟಕ ವಾಸ್ತುವಿನ ಒಂದು ಸಾಮಾನ್ಯ ಸಮೀಕ್ಷೆ ದೊರೆತಂತಾಯಿತು. ಕದಂಬರ ಪೂರ್ವಕಾಲದಲ್ಲಿ ಕರ್ಣಾಟಕವಾಸ್ತು ಅಸ್ಪಷ್ಟರೂಪದಲ್ಲಿತ್ತು. ಕರ್ಣಾಟಕವಾಸ್ತು ಮೊತ್ತಮೊದಲು ರೂಪಿತವಾದುದು ಕದಂಬರ ಕಾಲದಲ್ಲಿ. ಗಂಗರು ಅದನ್ನು ಸಾಕಷ್ಟು ಬೆಳಸಿದರು. ತಮ್ಮದೇ ಆದ ಪರಂಪರೆಯೊಂದರ ಪ್ರವರ್ತಕರಾದವರು ಚಾಲುಕ್ಯರು. ಇದನ್ನು ಉನ್ನತಸ್ಥಿತಿಗೆ ಮುಂದುವರಿಸುವುದರಲ್ಲಿ ತುಂಬ ಪ್ರಯತ್ನಪಟ್ಟವರು ರಾಷ್ಟ್ರಕೂಟರು. ಸಾಮಾನ್ಯವಾಗಿ ವಾಸ್ತು ಇತಿಹಾಸದ ಮೈಲುಗಲ್ಲುಗಳನ್ನು ಗುರುತಿಸುವಾಗ, ಕ್ರಿ.ಶ. ೩ನೆಯ ಶತಮಾನದಿಂದ ಕ್ರಿ.ಶ. ೮ನೆಯ ಶತಮಾನದ ಅವಧಿ ವಾಸ್ತುಕಲೆಯ ಪರ್ವಕಾಲ ಎನ್ನುವುದನ್ನು ಅಲ್ಲಗಳೆಯುವುದಿಲ್ಲ. ಈ ಕಾಲಮಾನದಲ್ಲಿ ಹೊಸ ರೀತಿಗಳು ಬರತೊಡಗಿದುದೇ ಇದಕ್ಕೆ ಕಾರಣ. ಗುಹಾಂತರ್ದೇವಾಲಯಗಳಿಂದ ಕಟ್ಟಡ ದೇವಾಲಯಗಳಿಗೆ ವಿಕಾಸ ಸಾಗಿತ್ತು. ಕ್ರಿ.ಶ. ೬ನೆಯ ಶತಮಾನದ ಬಾದಾಮಿ ಚಾಲುಕ್ಯರ ಕಾಲಕ್ಕೆ ಇಂಥ ದೇವಾಲಯಗಳ ಸ್ಪಷ್ಟರೂಪವೊಂದು ಸಿದ್ಧಗೊಂಡಿತು. ಕ್ರಿ.ಪೂ. ೩ನೆಯ ಶತಮಾನ ಕ್ರಿ.ಶ.೪-೫ನೆಯ ಶತಮಾನದವರೆಗೆ ಉಚ್ಛ್ರಾಯಸ್ಥಿತಿಯಲ್ಲಿದ್ದ. ಬೌದ್ಧವಾಸ್ತು ಮುಂದೆ ವೈದಿಕ, ಜೈನ ವಾಸ್ತುಗಳಿಗೆ ದಾರಿಮಾಡಿತು. ಬೌದ್ಧ ವಾಸ್ತುವಿನ ಕಾಲಾವಧಿಯಲ್ಲಿಯೇ ವೈದಿಕ ಶ್ರದ್ಧೆ ಪೋಷಿತವಾದರೂ ವಾಸ್ತುಕಲೆಯ ಇತಿಹಾಸದ ದೃಷ್ಟಿಯಿಂದ ಅದು ಪುನರುಜ್ಜೀವನಗೊಂಡದ್ದು ಕ್ರಿ.ಶ. ೬ನೆಯ ಶತಮಾನದಲ್ಲಿ, ಚಾಲುಕ್ಯರಿಂದ. ಚಾಲುಕ್ಯರ ಕಾಲದಲ್ಲಿ ವೈದಿಕ ಮತ್ತು ಪೌರಾಣಿಕ ಧರ್ಮಶ್ರದ್ಧೆ ಪುನರುಜ್ಜೀವನಗೊಂಡದ್ದಲ್ಲದೆ, ಆ ಧರ್ಮದ ಗುಹಾಂತರ್ದೇವಾಲಯಗಳು ಅವರ ರಾಜಧಾನಿ ಬಾದಾಮಿಯಲ್ಲಿ ನಿರ್ಮಿತವಾಗಿದ್ದು, ಇಂದಿಗೂ ವಿಶೇಷ ಶೈಲಿಯ ವೈದಿಕ ಸ್ಮಾರಕಗಳಾಗಿ ಉಳಿದುಕೊಂಡಿವೆ. ಚಾಲುಕ್ಯರು ಬೌದ್ಧ ಅನುಯಾಯಿಗಳೊಡನೆ ಸಹಿಷ್ಣುತೆಯಿಂದಿದ್ದುದಲ್ಲದೆ, ಬೌದ್ಧ ದೇವಾಲಯಗಳ ನಿರ್ಮಾಣವನ್ನು ಮುಂದುವರಿಸಲೂ ಅವಕಾಶ ಕಲ್ಪಿಸಿದ್ದರು. ಆದರೆ ರಾಷ್ಟ್ರಕೂಟರ ಕಾಲದಲ್ಲಿ ಹೀಗಾಗದೆ, ಅಕ್ರಮಣಶೀಲ ಧಾರ್ಮಿಕ ಪ್ರವೃತ್ತಿ ತಲೆಯೆತ್ತಿ, ಬೌದ್ಧವಿಹಾರಗಳನ್ನು ತಮ್ಮ ಧರ್ಮದ ದೇವಾಲಯಗಳನ್ನಾಗಿ ಮಾರ್ಪಡಿಸಿದಂತೆ ತೋರುತ್ತದೆ.[೩೪೨] ಎಲ್ಲೋರದ ೧೫ನೆಯ ದಶಾವತಾರ ಗುಹೆ ಇದಕ್ಕೆ ಒಂದು ಉದಾಹರಣೆ.

## ಶಿಲ್ಪಕಲೆ

ಭಾರತೀಯ ಕಲಾವಿಮರ್ಶಕರ ದೃಷ್ಟಿಯಲ್ಲಿ, ಕಲೆಯ ಅತ್ಯುತ್ತಮ ಅಭಿವ್ಯಕ್ತಿಯೆಂದರೆ ಶಿಲ್ಪ. ಸಾಮಾನ್ಯವಾಗಿ ಅದು ಮೊದಲು ದೇವರ ಪ್ರತಿಮೆಗಳಿಂದಲೇ ಪ್ರಾರಂಭವಾಗಿರಬೇಕೆಂದು ತೋರುತ್ತದೆ. ಶಿಲ್ಪದ ಉಗಮವನ್ನು ಕುರಿತಾದ ಕೆಲವು ಸಾಂಪ್ರ

ದಾಯಿಕ ಕಥೆಗಳು ಇದನ್ನೇ ಸಮರ್ಥಿಸುತ್ತವೆ.[390] ಮಾನವರೂಪಗಳನ್ನು ಬಳಸಿಯೇ ಪೌರಾಣಿಕ ವ್ಯಕ್ತಿಗಳ ಶಿಲ್ಪಗಳು ನಿರ್ಮಾಣವಾದುವು.[391] ಶಿಲ್ಪ ಮೊದಮೊದಲು ಮರದ್ದಾಗಿದ್ದು, ತರುವಾಯ ಬಂದ ಕಲ್ಲಿನ ಶಿಲ್ಪ ಮರದ ಮುಂದಿನ ಮಾದರಿಯೇ ಆಯಿತು. ಇಲ್ಲಿಯೂ ದಕ್ಷಿಣೋತ್ತರ ಮಾರ್ಗಗಳುಂಟು.

ಭಾರತೀಯ ಶಿಲ್ಪಕಲೆಗೆ ಬಹುತೇಕವಾಗಿ ದೇವಾಲಯಗಳೇ ಕೇಂದ್ರಸ್ಥಾನ. ಗುಹಾ ಗುಹಾಲಯಗಳನ್ನೂ ಕಟ್ಟಡ ದೇವಾಲಯಗಳನ್ನೂ ಹೆಚ್ಚು ಆಕರ್ಷಕವಾಗುವಂತೆ ಮಾಡಲು ಶಿಲ್ಪವನ್ನು ಆಶ್ರಯಿಸಿದಂತೆ ಕಾಣುತ್ತದೆ. ಪ್ರತಿಯೊಂದು ಚಿಕ್ಕ ದೊಡ್ಡ ದೇವಾಲಯವೂ ವೈವಿಧ್ಯಪೂರ್ಣವಾದ ಶಿಲ್ಪವಿತರಣೆಯನ್ನು ಒಳಗೊಂಡಿರುವುದನ್ನು ನೋಡುತ್ತೇವೆ. ಇದರಿಂದಾಗಿಯೇ, ಭಾರತೀಯ ವಾಸ್ತು ಶಿಲ್ಪಪ್ರಧಾನವಾದುದು ಎಂಬ ಮಾತು ಪ್ರಚಲಿತವಾಗಿರುವುದು.

ಭಾರತೀಯ ಶಿಲ್ಪಕಲೆ ಮೊದಲಿನಿಂದಲೂ ಸ್ವತಂತ್ರವಾಗಿ ಬೆಳೆದುಕೊಂಡುಬಂದಿದೆ. ಕ್ರಿ.ಪೂ. ೩, ೪ನೆಯ ಶತಮಾನಗಳಿಗಿಂತ ಹಿಂದೆಯೇ ಅದರ ಉಗಮವಾಗಿರಬೇಕೆಂದು ಊಹಿಸಬಹುದಾಗಿದೆ. ಅಶೋಕನ ಶಾಸನಸ್ತಂಭಗಳು ಮತ್ತು ಸಾಂಚಿ ಸ್ತೂಪದಲ್ಲಿಯೇ ಇದನ್ನು ಗುರುತಿಸುತ್ತೇವೆ. ಮುಂದೆ ಗುಪ್ತರ ಕಾಲದಲ್ಲಿ ವಿಗ್ರಹಗಳ ಕೆತ್ತನೆ ಹೆಚ್ಚಾದುದನ್ನು ನೋಡುತ್ತೇವೆ. ಇವೆಲ್ಲವೂ ಬೌದ್ಧಪರವಾದುವು. ಕ್ರಿ.ಶ. ೧-೨ನೆಯ ಶತಮಾನಗಳ ಹೊತ್ತಿಗೆ ದೇವಾಲಯಗಳ ಒಳ ಹೊರ ಭಾಗಗಳನ್ನು ಅಲಂಕರಿಸುವ ಕೆಲಸದಲ್ಲಿ ಶಿಲ್ಪವನ್ನು ಹೆಚ್ಚು ಹೆಚ್ಚಾಗಿ ಬಳಸಲು ಪ್ರಾರಂಭಿಸಿತು. ಈ ಕಾಲಕ್ಕಾಗಲೇ ಬೌದ್ಧ ಶಿಲ್ಪದ ಜೊತೆಗೆ ಜೈನ, ವೈದಿಕಪರ ಶಿಲ್ಪಗಳೂ ಕೂಡಿಕೊಂಡವು. ಸಾಮಾನ್ಯವಾಗಿ ದೇವಾಲಯಗಳಲ್ಲಿ ಮೂರ್ತಿಶಿಲ್ಪವೇ ಹೆಚ್ಚು. ದೇವಾಲಯಗಳಲ್ಲಿ ಮಾತ್ರವಲ್ಲದೆ, ಬಿಡಿ ಬಿಡಿಯಾಗಿಯೂ ಶಿಲ್ಪಗಳು ದೊರೆಯುವುದಕ್ಕೆ ಸಾಕಷ್ಟು ನಿದರ್ಶನಗಳಿವೆ.

ಭಾರತೀಯತ್ವವನ್ನು ಹಿನ್ನೆಲೆಯಾಗಿಟ್ಟುಕೊಂಡು ರೂಪಿತವಾಗಿರುವ ಕರ್ಣಾಟಕ ಶಿಲ್ಪಕ್ಕೆ ದೊಡ್ಡ ಪರಂಪರೆಯೊಂದಿದೆ. ಅದು ಉತ್ತರ ದಕ್ಷಿಣಗಳೆರಡರ ಸಮನ್ವಯವನ್ನೂ ಸಾಧಿಸಿದೆ. ಆದರೆ ಅದರ ಇತಿಹಾಸ ಯಾವಾಗ ಆರಂಭವಾಯಿತೆಂಬುದು ಮಾತ್ರ ಅನಿರ್ದಿಷ್ಟ. ಸಾಮಾನ್ಯವಾಗಿ ಅಜಂತದ ಶಿಲ್ಪಗಳು ಇದಕ್ಕೆ ಸ್ಫೂರ್ತಿ ಎಂದು ಹೇಳುವುದುಂಟು. ಅಜಂತದ ಮಹಾಯಾನ ಶಾಖೆಗೆ ಸೇರಿದ ೨೧ ಗವಿಗಳಲ್ಲಿ ೧೬, ೧೭, ೧೯ನೆಯ ಗವಿಗಳಲ್ಲಿ ಶಿಲ್ಪವಿದೆ. ಆಮೇಲೆ ಕೊರೆದ ಸು. ೭ ಮತ್ತು ೮ನೆಯ ಶತಮಾನದವು ಎನಿಸಿದ ೧೨ ಗವಿಗಳಲ್ಲಿ ಶಿಲ್ಪ ಅಷ್ಟು ರಮ್ಯವಾಗಿಲ್ಲ. ಬುದ್ಧನ ಪ್ರತಿಮೆ, ಅವನ ಚರಿತ್ರೆಯ ಕಥೆಗಳು, ಶಿಲ್ಪಪಟ್ಟಿಕೆಗಳು ಸಾಮಾನ್ಯವಾಗಿ ಇವುಗಳೆಲ್ಲದರಲ್ಲೂ ಕಾಣಬರುವ ವಿಷಯಗಳು.

ಈಗ ತಿಳಿದಂತೆ ಅತಿ ಪ್ರಾಚೀನ ಕರ್ಣಾಟಕ ಶಿಲ್ಪಕೃತಿಯೆಂದರೆ ಬನವಾಸಿಯ ಮಧುಕೇಶ್ವರ ಗುಡಿಯಲ್ಲಿ ದೊರೆತಿರುವ ನಾಗಪ್ರತಿಮೆ. ಇದು ಕ್ರಿ.ಶ. ೨ನೆಯ ಶತಮಾನದ್ದಾಗಿದ್ದು, ಸಾತವಾಹನರ ಕಾಲದ್ದೆಂದು ಹೇಳಬಹುದಾಗಿದೆ. ಈ ಕಾಲಕ್ಕೆ ಸೇರಿದ ಸಾಂಚಿ

ಭಾರ್ಹೂತ್, ಅಮರಾವತಿ, ಕಾರ್ಲೆ ಮೊದಲಾದವುಗಳಲ್ಲಿನ ಶಿಲ್ಪಗಳು ಪ್ರಸಿದ್ಧವಾಗಿವೆ. ಕರ್ಣಾಟಕದಲ್ಲಿ ಕ್ರಿ.ಶ. ೨-೩ನೆಯ ಶತಮಾನಗಳಲ್ಲಿ ಸಾತವಾಹನರ ಪ್ರತ್ಯೇಕ ಶೈಲಿಯೊಂದು ಪ್ರಚಲಿತವಾಗಿದ್ದಂತೆ ತಿಳಿದುಬರುತ್ತದೆಂದು ಪಂಚಮುಖಿಯವರು ಅಭಿಪ್ರಾಯಪಡುತ್ತಾರೆ.[೨೨] ಈ ಹೇಳಿಕೆಯನ್ನು ಸಮರ್ಥಿಸುವ ಆಧಾರಗಳಿರುವಂತಿಲ್ಲ. ಗೋಕಾಕದ ಬಳಿಯ ತ್ರಿಮೂರ್ತಿ ಪ್ರತಿಮೆ ಕ್ರಿ.ಶ. ೩-೪ನೆಯ ಶತಮಾನಕ್ಕೆ ಸೇರಿದ್ದೆಂದು ಹೇಳುತ್ತಾರೆ. ತರುವಾಯದ್ದು ಕದಂಬ ಶಿಲ್ಪ. ಆದಿಕದಂಬರ ಪ್ರಾಚೀನ ಶಿಲ್ಪಕೃತಿಯೆಂದರೆ ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕಿಗೆ ಸೇರಿದ ಜಂಬೆಹಳ್ಳಿಯಲ್ಲಿರುವ ದುರ್ಗಾ ವಿಗ್ರಹವೇ ಆಗಿದೆ. ಕದಂಬರ ಕಾಲದಲ್ಲಿ ಕರ್ಣಾಟಕ ಶಿಲ್ಪ ಸ್ಪಷ್ಟವಾಗಿ ತೋರಿರಬಹುದಾದರೂ, ಹೆಚ್ಚಾಗಿ ದಾಖಲೆಗಳಿಲ್ಲ.

ಗಂಗರ ಆದಿಯ ಶಿಲ್ಪ ಕ್ರಿ.ಶ. ೯ನೆಯ ಶತಮಾನದ ನೀತಿಮಾರ್ಗ ಗಂಗರಾಜನ ಮರಣವನ್ನು ಚಿತ್ರಿಸುವ ಕಲ್ಲುಕೆತ್ತನೆಯಾಗಿದೆ. ಇದರಲ್ಲಿ ರಾಜನ ಚಿತ್ರದೊಡನೆ, ಆತನ ತಲೆಯ ಬಳಿ ಪಟ್ಟಾಭಿಷಕ್ತನಾದ ರಾಜಕುಮಾರ ಮತ್ತು ಕಾಲಿನ ಕಡೆ ಸ್ವಾಮಿಯ ಜೊತೆಯಲ್ಲಿ ಸಮಾಧಿಯಾಗಲು ಜೀವವನ್ನು ತ್ಯಜಿಸುವ ಸೇವಕ ಅಗರಯ್ಯ ಈ ಶಿಲ್ಪಗಳೂ ಕೆತ್ತಲ್ಪಟ್ಟಿವೆ. ಶ್ರವಣಬೆಳ್ಗೊಳದ ದೊಡ್ಡಬೆಟ್ಟದ ಜೈನವಿಗ್ರಹಗಳಲ್ಲಿ ಮೊಣಕಾಲಿನವರೆಗಿನ ಭರತೇಶನ ವಿಗ್ರಹವೊಂದಿದೆ. ಅಲ್ಲಿರುವ ಶಾಸನಾಧಾರದ ಪ್ರಕಾರ ಇದು ಕ್ರಿ.ಶ. ೯ನೆಯ ಶತಮಾನದ್ದಿರಬಹುದು. ೪ಂರ ಎರೆಯಪ್ಪನ ಕಾಲದ ಬೇಗೂರು ಸ್ತಂಭವೊಂದು ಉಲ್ಲೇಖನಾರ್ಹವಾದುದು. ಎರೆಯಪ್ಪನ ಆಜ್ಞೆಯಂತೆ ನಾಗತ್ತರನು ಮಹೇಂದ್ರನ ಮಗನಾದ ಅಯ್ಯಪ್ಪನೊಡನೆ ಹೋರಾಡಿ ವೀರಸ್ವರ್ಗ ಪಡೆದ ಶಿಲ್ಪವಿದಾಗಿದೆ. ಇದರಲ್ಲಿ ನಾಯಕನ ಮರಣ, ಅಪ್ಸರೆಯರ ಸಹಿತ ಸ್ವರ್ಗಾರೋಹಣ ಮತ್ತು ದೇವೇಂದ್ರನ ಪಕ್ಕದಲ್ಲಿ ಆಸೀನ—ಎಂಬ ಮೂರು ಚಿತ್ರಾಂಕಣಗಳಿವೆ. ಹೋರಾಟಚಿತ್ರ ರೋಮಾಂಚಕವಾಗಿದೆ. ಇದರಿಂದ ಸಮಕಾಲೀನ ಜೀವನವನ್ನು ಚಿತ್ರಿಸಿಕೊಳ್ಳಬಹುದಾಗಿದೆ. ಒಟ್ಟಿನಲ್ಲಿ, ಗಂಗರು ವೀರಗಲ್ಲುಗಳ, ಅಲಂಕಾರಪಟ್ಟಿಕೆಗಳ ರಚನೆಯಲ್ಲಿ ಅದ್ವಿತೀಯ ಕುಶಲರಾಗಿದ್ದಾರೆಂಬುದನ್ನು ಇವು ಸಾರುತ್ತವೆ.

ಕರ್ಣಾಟಕ ಶಿಲ್ಪಕಲೆಯ ಇತಿಹಾಸದಲ್ಲಿ ಬಾದಾಮಿ ಚಾಲುಕ್ಯರದೊಂದು ದೊಡ್ಡ ಸ್ಥಾನ. ಅದಕ್ಕೆ ಭದ್ರುತಳಹದಿಯನ್ನು ಹಾಕಿದವರೇ ಇವರು. ಶಿಲ್ಪ ಚಟುವಟಿಕೆ ವ್ಯಾಪಕವಾಗಿ ವಿತರಣೆಗೊಂಡಿದ್ದೂ ಮೊತ್ತಮೊದಲು ಅದ್ದೂರಿಯಾಗಿ ಬಾಳಿದ್ದು ಇವರ ಕಾಲದಲ್ಲಿಯೇ. ಇವರ ಅವಧಿಯಲ್ಲಿ ಶಿಲ್ಪ ತನ್ನ ಚಿತ್ರವತ್ತತೆ, ಬಂಧ ಭಂಗಿಗಳು ಮತ್ತು ಅಭಿವ್ಯಂಜಕತೆಗಳಲ್ಲಿ ಉನ್ನತ ಮಟ್ಟವನ್ನು ಮುಟ್ಟಿತು. ರೂಪಸೌಂದರ್ಯ ಹಾಗೂ ತಂತ್ರ ಕೌಶಲಗಳೆರಡರಲ್ಲಿಯೂ ಇಲ್ಲಿಯದು ಗಮನಾರ್ಹ ಸಾಧನೆ. ಹೀಗಾಗಿ ಶಿಲ್ಪಕಲೆಯಲ್ಲಿ ಚಾಲುಕ್ಯಪಂಥವೆಂಬ ನೂತನ ಮಾರ್ಗವೊಂದು ಪ್ರವರ್ತಿಸಿತು.

ಮಹಾಕೂಟದ ಸ್ತಂಭಶಾಸನ ವಾಕಾಟಕರಿಗೂ ಬಾದಾಮಿ ಚಾಲುಕ್ಯರಿಗೂ ಇದ್ದ ಸಾದೃಶ್ಯಗಳನ್ನು ವಿವರಿಸುತ್ತದೆ. ಇದು ಕ್ರಿ.ಶ. ೬ನೆಯ ಶತಮಾನಕ್ಕೆ ಸೇರಿದುದು.

ಐಹೊಳೆ, ಪಟ್ಟದಕಲ್ಲು ಮತ್ತು ಬಾದಾಮಿಯಲ್ಲಿನ ಕಟ್ಟಿದ ದೇವಾಲಯಗಳಲ್ಲಿ ಹಾಗೂ ಗುಹಾಲಯಗಳಲ್ಲಿ ಶಿಲ್ಪದ ಹಲವಾರು ಮುಖಗಳನ್ನೂ ಪ್ರಭೇದಗಳನ್ನೂ ಕಾಣಬಹುದು. ಇವುಗಳ ಶಿಲ್ಪಗಳನ್ನು ಆರ್. ಎಸ್. ಪಂಚಮುಖಿಯವರು, ಧಾರ್ಮಿಕ ಮತ್ತು ಸಾಮಾಜಿಕ ಎಂದು ಎರಡು ಭಾಗಮಾಡಿ, ಅವುಗಳಲ್ಲಿ ಮತ್ತೆ ದೇವತಾ ವಿಗ್ರಹಗಳು, ಪೌರಾಣಿಕ ಕಥೆಗಳನ್ನು ರೂಪಿಸುವ ವಿಗ್ರಹಗಳು, ಸಮಾಜದ ಅಥವಾ ಧರ್ಮದ ಪರಿಸ್ಥಿತಿಯನ್ನು ಸೂಚಿಸುವ ಚಿತ್ರಗಳು, ರಾಜ ಅಥವಾ ರಾಜಕೀಯ ಪುರುಷರ ವಿಗ್ರಹಗಳು ಮತ್ತು ಸಾಮಾನ್ಯ ಜನತೆಯ ಆಚಾರ ವಿಚಾರಗಳನ್ನು ರೂಪಿಸುವ ಮೂರ್ತಿಪಟ್ಟಿಕೆಗಳು ಎಂಬುದಾಗಿ ೫ ಒಳವಿಭಾಗ ಮಾಡಿದ್ದಾರೆ.[393] ಶಿಲ್ಪಗಳು ಅತ್ಯಂತ ವಾಸ್ತವವಾಗಿರುವುದು ಮಾತ್ರವಲ್ಲದೆ, ಸ್ವತಂತ್ರ ಶೈಲಿಯನ್ನೂ ಪಡೆದಿವೆ. ಈ ಕಾಲದ ಪುರಾತನ ದೇವಾಲಯಗಳ ಗೋಡೆಗಳ ಮೇಲೆ ವೀರರ, ಯೋಧರ ಹಾಗೂ ರಾಮಾಯಣ ಭಾರತ ಭಾಗವತ ದೃಶ್ಯಗಳ ಶಿಲ್ಪಗಳು ಕಾಣಬರುತ್ತವೆ. ಇನ್ನು ಐಹೊಳೆ, ಪಟ್ಟದಕಲ್ಲು ಮತ್ತು ಬಾದಾಮಿಗಳಲ್ಲಿನ ಶಿಲ್ಪಕಲೆಯ ನೇರ ಪ್ರಸ್ತಾಪಕ್ಕೆ ತೊಡಗಬಹುದು.

ಐಹೊಳೆಯ ಲಾಡಖಾನ್ ದೇವಾಲಯ ಮೊದಲ ಮತ್ತು ಕುತೂಹಲಕರ ಕೆತ್ತನೆಯಾಗಿದೆ. ಪೂರ್ಣಕುಂಭ ಮತ್ತು ಮಿಥುನಗಳ ಆಶಯ ಇಲ್ಲಿ ಪ್ರಧಾನವಾದುದು. ಮಿಥುನ ಸಮೂಹದ ಕಿನ್ನರಿ ಅಶ್ವಮುಖಿಯಾಗಿದ್ದಾಳೆ. ಇದರ ಮುಂಟಪದ ಕಂಬದ ಮೇಲೆ ಕೆತ್ತಲಾಗಿರುವ ಗಂಗಾ ಮತ್ತು ಯಮುನಾ ವಿಗ್ರಹಗಳು ಗುಪ್ತ ದೇವಾಲಯದ ಕುರುಹುಗಳೆಂದು ಹೇಳುತ್ತಾರೆ.[394] ಐಹೊಳೆಯ ದುರ್ಗಾ ದೇವಾಲಯದ ಶಿಲ್ಪಗಳು ಗಮನಾರ್ಹವಾಗಿವೆ. ಇಲ್ಲಿ ಶಿವ, ನರಸಿಂಹ, ಮಹಿಷಾಸುರಮರ್ದಿನಿ, ವಿಷ್ಣು, ವರಾಹ ಮತ್ತಿತರ ದೇವತೆಗಳ ಅಂಕಣ ಫಲಕಗಳಿವೆ. ಇದರ ಮುಂಭಾಗದ ಕೈಸಾಲೆಯ ಕಂಬಗಳ ಮೇಲೆ ಕೆತ್ತಲಾಗಿರುವ ಶಿಲ್ಪಗಳು ಪರಿಣಾಮಕಾರಿಯಾಗಿವೆ. ಇದಲ್ಲದೆ, ದೇವಾಲಯದ ಕಂಬಗಳ ತಳಭಾಗದಲ್ಲಿ ಸುಂದರವಾದ ಸ್ತ್ರೀ ಚಿತ್ರಗಳು ಕಾಣಬರುತ್ತವೆ. ಹೀಗೆಯೇ ಕೊಂಟಿಗುಡಿಯ ಒಳಮಾಳಿಗೆಯಲ್ಲಿನ ಶಿವ, ವಿಷ್ಣು ಮತ್ತು ಬ್ರಹ್ಮರ ಮೂರ್ತಿಚಿತ್ರವಿರುವ ಅಂಕಣ ಫಲಕಗಳೂ ಕೂಡ ಮನಸೆಳೆಯುತ್ತವೆ. ಇವಕ್ಕೆ ಸಂಬಂಧಿಸಿದಂತೆಯೇ ಶೇಷಶಾಯಿ, ಹರಗೌರಿ ಮತ್ತು ಬ್ರಹ್ಮ ನಿರೂಪಣೆಯ ಅಂಕಣಫಲಕಗಳು ಕಾಣಸುತ್ತವೆ. ಐಹೊಳೆಯ ಗುಡ್ಡದ ಮೇಲಿನ ಜೈನ ದೇವಾಲಯದಲ್ಲಿ ಉತ್ತಮ ಮಾದರಿಯ ಒಂದು ಅಂಬಿಕಾ ಶಿಲ್ಪವಿದೆ. ಇಲ್ಲಿ ೨ನೆಯ ಪುಲಕೇಶಿಯ ಪ್ರಸಿದ್ಧ ಶಾಸನವೊಂದಿದೆ.

ಪಟ್ಟದ ಕಲ್ಲಿನಲ್ಲಿ ಚಾಲುಕ್ಯ ಶಿಲ್ಪಕಲೆ ಕಂಚಿಯ ಪಲ್ಲವಕಲೆಯಿಂದ ಪ್ರೇರಣೆ ಪಡೆದು ಸಂಪದ್ಯುಕ್ತವಾಗಿರುವುದನ್ನು ನೋಡುತ್ತೇವೆ. ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ವಾಸ್ತುಕಾರ ಸರ್ವಸಿದ್ಧಿ ಶಿಲ್ಪದಲ್ಲಿ ಹಲವು ಮಾದರಿಗಳನ್ನು ತಂದಂತೆ ತಿಳಿದುಬರುತ್ತದೆ. ವಿರೂಪಾಕ್ಷ ದೇವಾಲಯದ ಶಿಲ್ಪಗಳು ಶಿವ, ನಾಗನಾಗಿನಿಯರು ಮತ್ತು ರಾಮಾಯಣದ ದೃಶ್ಯಗಳಿಂದ ನಿರೂಪಿತವಾಗಿವೆ. ಇಲ್ಲಿನ ಕಂಬಗಳಲ್ಲಿ ಗಂಗಾ ಮತ್ತು ಅಮೃತದ ಕಥೆ, ಇಂದ್ರಾಹಲ್ಯೆಯರು, ಶರಪಂಜರದ ಮೇಲೆ ಮಲಗಿರುವ ಭೀಷ್ಮರ ಕಡೆಗಾಲದ ಚಿತ್ರ

ಮೊದಲಾದ ವಿವಿಧ ಶಿಲ್ಪಗಳು ಕಾಣಬರುತ್ತವೆ. ತ್ರಿಲೋಕೇಶ್ವರ ದೇವಾಲಯವೆಂದು ಕೀರ್ತಿತವಾದ ಮಲ್ಲಿಕಾರ್ಜುನ ದೇವಾಲಯದಲ್ಲೂ ಕೆಲವು ಶಿಲ್ಪಗಳು ಗೋಚರಿಸುತ್ತವೆ. ಇಲ್ಲಿನ ಕಂಬಗಳ ಮೇಲೆ ಪಂಚತಂತ್ರದ ನೀತಿಕಥೆಗಳ ಶಿಲ್ಪಗಳಿವೆ. ಪಾಪನಾಥ ದೇವಾಲಯದಲ್ಲಿಯೂ ಸುಂದರವಾದ ವಿಗ್ರಹ ಕೆತ್ತನೆಯನ್ನು ಕಾಣುತ್ತೇವೆ. ಮಿಥುನಗಳೂ, ಕಂಬದ ಮೇಲಿನ ತ್ರಿಪುರಾಂತಕ ಮತ್ತು ಅಂಕಣಫಲಕಗಳಲ್ಲಿ ಚಿತ್ರಿತವಾಗಿರುವ ರಾಮಾಯಣದ ಕಥೆ ಇವೂ ಕಲಾತ್ಮಕವಾಗಿವೆ.

ಬಾದಾಮಿ ಚಾಲುಕ್ಯರ ಶಿಲ್ಪಕಲೆಯ ಇತಿಹಾಸದಲ್ಲಿ ಗಣ್ಯವಾದವೆಂದರೆ ಬಾದಾಮಿಯ ಗುಹೆಗಳು. ಇಲ್ಲಿಯ ೪ ಗುಹಾಲಯಗಳಲ್ಲಿಯೂ ಅತ್ಯುನ್ನತ ಶಿಲ್ಪಗಳುಂಟು. ೧ನೇ ಗುಹೆಯ ಪ್ರವೇಶದಲ್ಲಿಯೇ ನಟರಾಜನ ಪ್ರತಿಮೆ ಇದೆ. ಪ್ರಾಚೀನ ಶಿಲ್ಪಕಲೆಯ ಪ್ರಾತಿನಿಧಿಕ ಕೃತಿ ಇದು. ಕೀರ್ತಿವರ್ಮನ ಕಾಲದಲ್ಲಿ ಇದು ರಚಿತವಾಗಿರಬೇಕೆಂಬುದು ವಿದ್ವಾಂಸರ ಅಭಿಪ್ರಾಯ. ಇದೇ ಗುಹೆಯ ಅರ್ಧನಾರೀಶ್ವರಶಿಲ್ಪ ಕೂಡ ಪ್ರಮುಖವಾದುದು. ೨ನೆಯ ಗುಹೆಯಲ್ಲಿ ನರಸಿಂಹನ ನಿಂತಿರುವ ಮೂರ್ತಿ ಮತ್ತು ಹರಿಹರಶಿಲ್ಪಗಳ ಜೊತೆಗೆ ದ್ವಾರಪಾಲಕರು, ಯಕ್ಷರು, ವರಾಹ, ತ್ರಿವಿಕ್ರಮರ ಮೂರ್ತಿಶಿಲ್ಪಗಳಿವೆ. ಭಾಗವತ ಮೊದಲಾದ ಪೌರಾಣಿಕ ಕಥಾಚಿತ್ರಗಳನ್ನು ಇಲ್ಲಿ ಕೆತ್ತಲಾಗಿದೆ. ಸಂಪದ್ಭರಿತವಾದ ವೈಷ್ಣವ ಗುಹೆಯಲ್ಲಿ ಅನಂತಶಾಯಿ ವಿಷ್ಣು, ನರಸಿಂಹ, ವರಾಹ, ತ್ರೈಲೋಕ್ಯಮೋಹನ, ತ್ರಿವಿಕ್ರಮ ಮೊದಲಾದ ಅತ್ಯುತ್ತಮ ಉಬ್ಬುಶಿಲ್ಪಗಳಿವೆ. ಸಾಲುಗಂಬಗಳ ಬೋದಿಗೆಗಳನ್ನು ಅಲಂಕರಿಸಲು ಮಾಡಿರುವ ಚಾಚುಪೀಠದ ಮೂರ್ತಿಗಳು ಕೂಡ ಮನಸ್ಸನ್ನು ಸೆಳೆಯುವಂತಿವೆ. ಒಳಮಾಳಿಗೆಯ ಕೆತ್ತನೆ ಸಮೃದ್ಧವಾಗಿದ್ದು, ನಮೂನೆ ಮತ್ತು ವಸ್ತುವಿನಲ್ಲಿ ವೈವಿಧ್ಯವಿದೆ. ೪ನೆಯ ಜೈನ ಗುಹೆಯಲ್ಲಿ ಆದಿನಾಥ ತೀರ್ಥಂಕರನ ಮೂರ್ತಿಶಿಲ್ಪವಿದೆ.

ಬಾದಾಮಿ ಚಾಲುಕ್ಯ ಶಿಲ್ಪಕಲೆಯ ಒಂದೆರಡು ವಿಶೇಷ ವಿಷಯಗಳನ್ನಿಲ್ಲಿ ಗಮನಿಸಬಹುದು. ಶಿಲ್ಪಗಳು ಅವುಗಳ ರೂವಾರಿಗಳ ಹೆಸರನ್ನು ಒದಗಿಸುತ್ತವೆ. ಐಹೊಳೆ ಮತ್ತು ಪಟ್ಟದಕಲ್ಲುಗಳ ಕೆಲವು ಶಿಲ್ಪಗಳಲ್ಲಿ ಬಲದೇವ ಆರ್ಯ, ಚೆಂಗಮ್ಮ, ಗನಸೊಬ್ಬ ಮತ್ತು ನರಸೊಬ್ಬ ಮುಂತಾಗಿ ಹೆಸರುಗಳು ಬಂದಿವೆ. ಬಹುಸಂಖ್ಯೆಯಲ್ಲಿ ಗೋಚರವಾಗುವ ಈ ಶಿಲ್ಪಗಳ ಹೆಸರುಗಳಿಂದ ಆಗ ಇದೊಂದು ವೃತ್ತಿಯಾಗಿತ್ತೆಂದು ಹೇಳಲು ಸಾಧ್ಯವಿದೆ. ಇನ್ನೊಂದು ಮುಖ್ಯ ಸಂಗತಿಯೆಂದರೆ ಚಾಲುಕ್ಯ ಶಿಲ್ಪಕಲೆಯಲ್ಲಿ ಪೌರಾಣಿಕ ಆರಾಧನೆಯ ಮತ್ತು ವೈದಿಕ ಸಂಸ್ಕೃತಿಯ ಪುನರುಜ್ಜೀವನ ಕಂಡುಬರುವುದು.[395] ಬಾದಾಮಿಯ ಶೈವ ಮತ್ತು ವೈಷ್ಣವ ಪ್ರತಿಮೆಗಳು, ಐಹೊಳೆಯ ಮತ್ತು ಪಟ್ಟದಕಲ್ಲಿನ ಲಾಡಖಾನ್, ದುರ್ಗಾ, ಹುಚ್ಚುಮಲ್ಲಿ ಮೊದಲಾದ ದೇವಾಲಯಗಳಲ್ಲಿನ ಶೈವ ಅಥವಾ ವೈಷ್ಣವಪರ ಶಿಲ್ಪಗಳು ಇದಕ್ಕೆ ನಿದರ್ಶನಗಳಾಗಿವೆ. ರಾಮಾಯಣ, ಭಾರತ, ಭಾಗವತ ಮತ್ತು ಹರಿವಂಶದ ಕಥೆಗಳು ವಿರೂಪಾಕ್ಷ, ಮಲ್ಲಿಕಾರ್ಜುನ, ಸಂಗಮೇಶ್ವರ, ದುರ್ಗಾ ಮೊದಲಾದ ದೇವಾಲಯಗಳ ಕಂಬಗಳ ಅಂಕಣಫಲಕಗಳಲ್ಲಿ ಕೆತ್ತಲಾಗಿವೆ. ಅಲ್ಲದೆ ಐಹೊಳೆ, ಪಟ್ಟದಕಲ್ಲು ಮತ್ತು ಬಾದಾಮಿಗಳಲ್ಲಿ ವಿಷ್ಣುವಿನ

ಅವತಾರಗಳ ಶಿಲ್ಪಗಳನ್ನು ನೋಡುತ್ತೇವೆ. ಅವತಾರಗಳಲ್ಲಿ, ಹಿರಣ್ಯಕಶಿಪುವನ್ನು ಬಗಿಯುತ್ತಿರುವ ನರಸಿಂಹ, ಭೂಮಿಯನ್ನು ಎತ್ತುತ್ತಿರುವ ವರಾಹ, ಗೋವರ್ಧನಗಿರಿಯನ್ನು ಎತ್ತುತ್ತಿರುವ ಕೃಷ್ಣ—ಇವು ಸಾಮಾನ್ಯವಾಗಿ ಕಂಡುಬರುವಂಥವು. ಪಟ್ಟದಕಲ್ಲು ಮತ್ತು ಐಹೊಳೆಯ ಶಿಲ್ಪಗಳಲ್ಲಿ ವಿಷ್ಣು ಮತ್ತು ಶಿವರ ಭಿನ್ನರೂಪಗಳು ಸಾಮಾನ್ಯವಾಗಿ ಕಾಣಿಸಿಕೊಳ್ಳುತ್ತವೆ. ಆಗಾಗ್ಗೆ ಕಾಣಿಸಿಕೊಳ್ಳುವ ಇನ್ನೆರಡು ದೃಶ್ಯಗಳೆಂದರೆ ನಟರಾಜ ಅಥವಾ ಶಿವತಾಂಡವ ನೃತ್ಯಭಂಗಿ ಮತ್ತು ಶೈವದೇವತೆ ದುರ್ಗಾ ಅಥವಾ ಮಹಿಷಾಸುರ ಮರ್ದಿನಿ. ಹಾಗೆಯೇ ಒಂದು ಕಡೆ ರಾಮನ ಜನನದಿಂದ ರಾವಣನ ಸಂಹಾರದವರೆಗಿನ ರಾಮಾಯಣದ ಕಥೆ ಶಿಲ್ಪಿತವಾಗಿದೆ.

ಚಾಲುಕ್ಯಯುಗದಲ್ಲಿ ಕರ್ಣಾಟಕಶಿಲ್ಪದ ಹುಲುಸು ಬೆಳೆಯನ್ನು ಕಾಣುತ್ತೇವೆ. ಚಾಲುಕ್ಯರ ಆಳ್ವಿಕೆಯ ೬, ೭, ಲನೆಯ ಶತಮಾನಗಳು ಕರ್ಣಾಟಕ ಶಿಲ್ಪದ ಇತಿಹಾಸದಲ್ಲೇ ಸ್ವರ್ಣಯುಗ.[396] ಈ ಮಾತು ಆಮೇಲಿನ ಚಾಲುಕ್ಯರಿಗೆ ಕೂಡ ಅನ್ವಯಿಸಿದಂತೆ ಹೇಳಿದ್ದರೂ, ಇದರ ಬಹುಪಾಲು ಕೀರ್ತಿ ಬಾದಾಮಿ ಚಾಲುಕ್ಯರದು ಎಂಬುದನ್ನು ಮರೆಯುವ ಹಾಗಿಲ್ಲ.

ಎಲ್ಲೋರ ಮತ್ತು ಎಲಿಫೆಂಟಾಗಳಲ್ಲಿ ನಿರ್ಮಾಣವಾದ ರಾಷ್ಟ್ರಕೂಟ ಶಿಲ್ಪಗಳಲ್ಲಿ ಆ ಕಾಲದ ಕಲೆಯ ಅತ್ಯುತ್ಕೃಷ್ಟ ಅಭಿವ್ಯಕ್ತಿಯನ್ನು ಕಾಣುತ್ತೇವೆ. ೧ನೆಯ ಕೃಷ್ಣನ ಕಾಲದಲ್ಲಿ ನಿರ್ಮಿತವಾದ ಎಲ್ಲೋರದ ಕೈಲಾಸ ದೇವಾಲಯದ ಶಿಲ್ಪಗಳಲ್ಲಿ ಅದನ್ನು ಕಾಣಬಹುದು. ಇಲ್ಲಿಯ ಕೆಲವು ಶಿಲ್ಪಗಳು ಪ್ರಭಾವಪೂರ್ಣವಾಗಿವೆ. ಇವುಗಳಲ್ಲಿ ರಾವಣ ಕೈಲಾಸ ಪರ್ವತವನ್ನು ಅಲ್ಲಾಡಿಸುತ್ತಿರುವುದು ಒಂದು. ಸಾಮಾನ್ಯವಾಗಿ ಇದು ಶಿಲ್ಪಿಗಳಿಗೆ ಹೆಚ್ಚು ಪ್ರಿಯವಾಗಿದ್ದದ್ದರಿಂದ ಎಲ್ಲೋರದಲ್ಲಿ ಅನೇಕ ಸಲ ಈ ವಸ್ತು ಕಾಣಿಸಿಕೊಂಡಿದೆ. ಕೈಲಾಸ ದೇವಾಲಯದಲ್ಲಿಯೇ ಇದು ಎರಡು ಸಲ ಕಾಣಿಸಿಕೊಂಡಿದೆ. ಇತರ ಸುಂದರ ಕೆತ್ತನೆಗಳೆಂದರೆ ಹರಿಹರ, ಅರ್ಧನಾರೀಶ್ವರ, ಗಜಾಸುರಸಂಹಾರ ಮೂರ್ತಿ, ತ್ರಿಪುರಾಂತಕ, ಗರುಡಾರೂಢ ನಾರಾಯಣ, ಭೈರವ ಮುಂತಾದವು. ವಾಲಿ–ಸುಗ್ರೀವರ ಕದನ, ಜಟಾಯು-ರಾವಣರ ಯುದ್ಧ ಮುಂತಾದವು ಸಣ್ಣಪ್ರಮಾಣದಲ್ಲಿದ್ದರೂ ಶ್ರೇಷ್ಠ ಶಿಲ್ಪಗಳೆನಿಸಿವೆ. ಜೊತೆಗೆ ಕೈಲಾಸ ದೇವಾಲಯ ರಾಮಾಯಣ, ಮಹಾಭಾರತ, ವಿಷ್ಣುಪುರಾಣಗಳ ಕಥಾನಕಗಳ ಶಿಲ್ಪಗಳಿಂದ ಅಲಂಕೃತವಾಗಿದೆ. ಇವೆಲ್ಲ ಕ್ರಿ.ಶ. ೮ನೆಯ ಶತಮಾನಕ್ಕೆ ಸೇರಿದವುಗಳು. ಇಲ್ಲಿನ ಮಹತ್ತ್ವಪೂರ್ಣ ಮಿಥುನಗಳಲ್ಲಿ ಒಂದು ಕ್ರಿ.ಶ. ೬ನೆಯ ಶತಮಾನಕ್ಕೆ ಸೇರಿದುದಾಗಿದೆ.[397]

ಎಲ್ಲೋರದ ರಾವಣಗುಹೆ ಮತ್ತು ದಶಾವತಾರ ಗುಹೆಗಳಲ್ಲೂ ಗಮನಾರ್ಹ ಶಿಲ್ಪಕೃತಿಗಳಿವೆ. ರಾವಣಗುಹೆಯ ಗೋಡೆಗಂಬಗಳ ನಡುವ್ಣಣ ಅಂಕಣಗಳು ಉಬ್ಬುಶಿಲ್ಪಗಳಿಂದ ತುಂಬಿವೆ. ಮಂದಿರದ ಮುಂಭಾಗದಲ್ಲಿ ದ್ವಾರಪಾಲಕರನ್ನು ಕಾಣುತ್ತೇವೆ. ದಕ್ಷಿಣ ಗೋಡೆಯಮೇಲೆ ಮಹಿಷಾಸುರಮರ್ದಿನಿ, ಪಾರ್ವತೀಪರಮೇಶ್ವರ, ತಾಂಡವೇಶ್ವರ, ರಾವಣನು ಕೈಲಾಸವನ್ನು ಎತ್ತುತ್ತಿರುವುದು ಮೊದಲಾದ ಶೈವಮೂರ್ತಿಗಳಿವೆ.

ದಶಾವತಾರ ಗುಹೆಯ ಗೋಡೆಗಂಬಗಳ ಅಂಕಣಫಲಕಗಳಲ್ಲಿ ಹಿಂದುಪುರಾಣದಿಂದ ಉದಾಹೃತವಾದ ಬೃಹದಾಕಾರದ ಶಿಲ್ಪಗಳಿವೆ. ಇವುಗಳಲ್ಲಿ ಹಿರಣ್ಯಕಶಿಪುವಿನ ವಧೆಯ ದೃಶ್ಯ ಅತ್ಯಂತ ಸುಂದರ ಶಿಲ್ಪವಾಗಿದೆ. ಮತ್ತೊಂದು ಇಂಥ ಶಿಲ್ಪವೆಂದರೆ, ಶಿವನ ತಾಂಡವ ನರ್ತನದ್ದು.

ಎಲ್ಲೋರದ ವೈದಿಕ ದೇವಾಲಯಗಳ ಶಿಲ್ಪಗಳಂತೆ ಜೈನದೇವಾಲಯದ ಶಿಲ್ಪಗಳೂ ಮುಖ್ಯವಾಗಿವೆ. ಇಂದ್ರಸಭಾ ಮತ್ತು ಜಗನ್ನಾಥಸಭಾಗಳು ಪ್ರಮುಖವಾಗಿ ಗಮನ ಸೆಳೆಯುವ ಕೇಂದ್ರಗಳು. ಮೊದಲನೆಯದರಲ್ಲಿ ಗೊಮ್ಮಟ, ಶಾಂತಿನಾಥ ಮತ್ತು ಪಾರ್ಶ್ವನಾಥ ಪ್ರತಿಮೆಗಳೂ ಎರಡನೆಯದರಲ್ಲಿ ಮಹಾವೀರ ಪ್ರತಿಮೆಯೂ ಇವೆ. ಇಂದ್ರಸಭಾದ ಮೇಲಂತಸ್ತಿನ ಮತ್ತು ಮುಂಭಾಗದ ಶಿಲ್ಪಗಳನ್ನು ಅತ್ಯಂತ ವಿಸ್ತಾರವಾಗಿ ಕೆತ್ತಲಾಗಿದೆ. ಇವೆಲ್ಲ ನೃಪತುಂಗನ ಕಾಲಮಾನದಲ್ಲಿ ರಚಿತವಾಗಿರಬೇಕೆಂದು ತೋರುತ್ತದೆ.

ಎಲ್ಲೋರದ ಶಿಲ್ಪಕ್ಕೆ ಸಂಬಂಧಿಸಿದಂತೆ ಒಂದು ಸ್ಪಷ್ಟ ಸಂಗತಿಯೆಂದರೆ, ಬೌದ್ಧ, ವೈದಿಕ ಮತ್ತು ಜೈನ–ಈ ಮೂರು ಧರ್ಮಗಳಿಗೂ ಪ್ರಾತಿನಿಧ್ಯ ದೊರಕಿದೆ ಎಂಬುದು. ಎಲ್ಲೋರದ ಆದಿಬೌದ್ಧ ಗುಹೆಗಳು ಗಮನಾರ್ಹಮೌಲ್ಯದ ಯಾವುದೇ ಶಿಲ್ಪವನ್ನು ಹೊಂದಿರುವಂತೆ ಕಾಣಬರುವುದಿಲ್ಲವೆಂದು ಯಾಜ್ದಾನಿಯವರು ಅಭಿಪ್ರಾಯಪಡುತ್ತಾರೆ.[398] ಆದರೆ ಎಲ್ಲೋರದ ವೈದಿಕ ಶಿಲ್ಪ ಅನಂತಶಕ್ತಿಯನ್ನು ಹೊಂದಿದೆ. ಇಲ್ಲಿ ಗಮನಾರ್ಹವಾದ ಮತ್ತೊಂದು ವಿಚಾರವೆಂದರೆ, ಈ ಶತಮಾನಗಳಲ್ಲಿ ಶೈವಧರ್ಮ ಜನಪ್ರಿಯವಾಗಿದ್ದು, ಯಾಜ್ದಾನಿ ಅವರು ಹೇಳುವಂತೆ ದೇವತೆಗಳನ್ನು ಲಯಕಾರಿಯಾಗಿ ಕಲ್ಪಿಸಿಕೊಂಡಿರುವುದು. ಈ ಶಿಲ್ಪಗಳು ಒಂದು ಪಕ್ಷ ಆ ಕಾಲದ ಧಾರ್ಮಿಕ ಘರ್ಷಣೆಯನ್ನು ಪ್ರತಿನಿಧಿಸುತ್ತವೆ ಎಂದು ಹೇಳುವುದಾದರೂ ಈ ಪುರಾಣಕಥೆಗಳನ್ನು ಶುದ್ಧಕಲೆಯ ದೃಷ್ಟಿಯಿಂದ ಕಡೆದಿರಬಹುದಾದ ಸಾಧ್ಯತೆಯನ್ನು ಸುಲಭವಾಗಿ ತೆಗೆದುಹಾಕುವಂತಿಲ್ಲವಾಗಿದೆ.

ರಾಷ್ಟ್ರಕೂಟರ ಶಿಲ್ಪಸಾಧನೆಯ ಮತ್ತೊಂದು ಮಜಲನ್ನು ಎಲಿಫೆಂಟಾದಲ್ಲಿ ಕಾಣುತ್ತೇವೆ. ಇಲ್ಲಿನ ಉತ್ಕೃಷ್ಟ ಅರ್ಧನಾರೀಶ್ವರ ಶಿಲ್ಪ ಈಗ ವಿಕಾರಗೊಂಡಿದೆ. ಮತ್ತೊಂದು ಉತ್ಕೃಷ್ಟ ಶಿಲ್ಪವೆಂದರೆ ತ್ರಿಮೂರ್ತಿ ಶಿಲ್ಪ. ಇದರ ಪಕ್ಕದಲ್ಲಿರುವುದು ಪಾರ್ವತೀ ಶಿವರ ಮದುವೆಯ ಶಿಲ್ಪ. ಎಲಿಫೆಂಟಾದ ಈ ಕಲೆಗಳ ಕಾಲ ಪ್ರಾಯಶಃ ೬೫೦ಕ್ಕಿಂತ ನಂತರದ್ದಲ್ಲವೆಂದು ಒಂದು ಅಭಿಪ್ರಾಯವಿದೆ.[399] ಇತರ ಕಡೆಯ ಶಿಲ್ಪಗಳಿಗೆ ಬಂದರೆ, ಶಿವಮೊಗ್ಗ ಜಿಲ್ಲೆಯ ಮಾವಳಿಯಲ್ಲಿರುವ ಶಿಲ್ಪಫಲಕಗಳನ್ನು ಇಲ್ಲಿ ನೆನೆಯಬಹುದು. ಇವು ಕ್ರಿ.ಶ. ೯ನೆಯ ಶತಮಾನದ ಪ್ರಾರಂಭದ ೩ನೆಯ ಗೋವಿಂದನ ಆಳ್ವಿಕೆಯಲ್ಲಿ ರಚಿತವಾಗಿದ್ದಿರಬಹುದೆಂಬ ಅಭಿಪ್ರಾಯವಿದೆ.[400] ಇದಲ್ಲದೆ, ರಾಮೇಶ್ವರ ದೇವಾಲಯದ ಮುಂಭಾಗದಲ್ಲಿ ನದಿದೇವತೆ ಗಂಗಾದೇವಿಯು ಮಕರವಾಹನನ ಮೇಲೆ ಕುಳಿತಿರುವ ಗಂಭೀರ ಶಿಲ್ಪವಿದೆ. ಈಬಗೆಯ ಅಲಂಕೃತಕೃತಿ ಗುಪ್ತ ಹಾಗೂ ಚಾಲುಕ್ಯ ಶೈಲಿಯಿಂದ ಬೆಳೆವಣಿಗೆ ಹೊಂದಿದ ಮಾದರಿ. ನಂದಿಗ್ರಾಮದ ಭೋಗನಂದೀಶ್ವರ

ದೇವಾಲಯದಲ್ಲಿಯ ಕೆಲವು ವಿಗ್ರಹಗಳೂ ಗಮನಾರ್ಹವಾದವು.

ಕರ್ನಾಟಕ ಶಿಲ್ಪದಲ್ಲಿ ದೇವಾಲಯದ ವಿಗ್ರಹಗಳಂತೆ, ಚಿತ್ರಪಟ್ಟಿಕೆಗಳಂತೆ ವೀರಗಲ್ಲುಗಳು, ಮಾಸ್ತಿಗಲ್ಲುಗಳು ಮತ್ತು ಸ್ತಂಭಗಳನ್ನು ಗಮನಿಸಬೇಕಾಗುತ್ತದೆ. ಪರಾಕ್ರಮದಿಂದ ಹೋರಾಡಿ ವೀರಸ್ವರ್ಗವನ್ನು ಪಡೆದ ವೀರನೊಬ್ಬನ ಸ್ಮಾರಕ ವೀರಗಲ್ಲುಗಳು, ಪತಿ ಸತ್ತಮೇಲೆ ಸತಿ ಸಹಗಮನ ಮಾಡಿದ ಸ್ಮಾರಕ ಮಾಸ್ತಿಗಲ್ಲುಗಳು. ಸ್ತಂಭಗಳಲ್ಲಿ ಮಾನಸ್ತಂಭ, ಬ್ರಹ್ಮದೇವರ ಸ್ತಂಭ, ಗರುಡಗಂಬ, ಧ್ವಜಸ್ತಂಭ, ಜಯಸ್ತಂಭ ಮುಂತಾದ ರೀತಿಗಳಿವೆ. ಕಂಬದ ಸುತ್ತಲೂ ಚಿತ್ರಪಟ್ಟಿಕೆ, ವಿಗ್ರಹಗಳನ್ನು ಕೊರೆದಿರುತ್ತಾರೆ. ಕೊರೆದ ಶಾಸನ ಸ್ತಂಭಗಳು ಕೆಲವೆಡೆ ಸಿಗುತ್ತವೆ. ಇದಕ್ಕೆ ಕ್ರಿ.ಶ. ೨ನೆಯ ಶತಮಾನದ ಶಿಕಾರಿಪುರ ತಾಲೂಕಿನ ಮಳವಳ್ಳಿಯ ಶಾಸನಕಂಬ ಮತ್ತು ತಾಳಗುಂದದ ಪ್ರಣವೇಶ್ವರ ದೇವಾಲಯದ ಮುಂದಿರುವ ಶಾಸನಕಂಬ ಉದಾಹರಣೆಗಳಾಗಿವೆ.[401]

## ಚಿತ್ರಕಲೆ

ಕರ್ನಾಟಕದ ಚಿತ್ರಕಲೆ ಕ್ರಿ.ಪೂ.ದಿಂದಲೂ ಪ್ರಸಿದ್ಧಿಗೆ ಬಂದಿರಬೇಕು. ಆದರೆ ಇದರ ಗುರುತುಗಳು ಸಿಗುವುದು ಬಹಳ ಕಡಿಮೆ. ಆಯಾ ಕಾಲದ ರಾಜರು ಚಿತ್ರಕಲೆಗೆ ಪ್ರೋತ್ಸಾಹ ಕೊಡುತ್ತಿದ್ದರು; ಅಲ್ಲದೆ ಚಿತ್ರಕಾರರನ್ನು ತಮ್ಮ ಆಸ್ಥಾನದಲ್ಲಿ ನೇಮಿಸಿಕೊಳ್ಳುತ್ತಿದ್ದರು. ೭೦೭ರ ಮನ್ನೆಯ ದಾಖಲೆಯ ಪ್ರಕಾರ, ಗಂಗರಾಜರ ಆಸ್ಥಾನ ಚಿತ್ರಕಾರನೊಬ್ಬ ಈ ಕಲೆಯಲ್ಲಿ ಅತ್ಯಂತ ಪ್ರಸಿದ್ಧನಾಗಿದ್ದನಂತೆ. ೭೭೬ರ ದೇವರಹಳ್ಳಿಯ ದಾಖಲೆಯಲ್ಲಿ ಚಿತ್ರಗಳನ್ನು ರಚಿಸುವುದರಲ್ಲಿ ನಿಪುಣ ಕಲಾವಿದನೊಬ್ಬನ ಉಲ್ಲೇಖವಿದೆ. ಆದರೆ ಇವರ ಚಿತ್ರವೆಲ್ಲ ಕಳೆದುಹೋಗಿ ಈಗ ಹೆಸರುಗಳು ಮಾತ್ರ ಉಳಿದುಕೊಂಡಿವೆ.[402]

ಕರ್ನಾಟಕ ಚಿತ್ರರಚನೆ ಮೊದಲು ಗುಹೆ, ಗುಡಿ, ಗೋಪುರಗಳಲ್ಲಿ ಆರಂಭವಾಗಿರಬೇಕು. ಕರ್ನಾಟಕ ಚಿತ್ರಕಲೆಯ ಉಪಲಬ್ಧ ಪ್ರಾಚೀನ ನಿದರ್ಶನವೆಂದರೆ ಗೊಂಬಿಗುಡ್ಡವೇ ಆಗಿದೆ. ಇದು 'ಚಿತ್ರಗಳ ಬೆಟ್ಟ'ವೆಂದೇ ಪ್ರಸಿದ್ಧವಾಗಿದೆ. ಇಲ್ಲಿ ಪ್ರಾಣಿಗಳ ರೇಖಾತ್ಮಕ ಕೆತ್ತನೆಗಳು, ರೇಖಾಚಿತ್ರಗಳು ಹಾಗೂ ಮಾನವ ಆಕೃತಿಗಳು ಗೋಚರವಾಗಿವೆ.[403] ಅಜಂತದ ಗುಹೆ ಮತ್ತು ದೇವಾಲಯಗಳಲ್ಲಿಯ ಚಿತ್ರಗಳಂತೂ ಪ್ರಖ್ಯಾತವಾಗಿವೆ.

ಅಜಂತದ ಹಲವು ಚಿತ್ರಗಳು ಬಾದಾಮಿ ಚಾಲುಕ್ಯರ ಕಾಲದಲ್ಲಿ ರಚಿತವಾದವು. ಕ್ರಿ.ಶ. ೭ನೆಯ ಶತಮಾನದಲ್ಲಿ ಆಳಿದ ೨ನೆಯ ಪುಲಿಕೇಶಿಯ ಕಾಲದಲ್ಲಿ ಈ ಕಲೆ ಉನ್ನತಸ್ಥಿತಿಗೆ ಮುಟ್ಟಿತು. ಅಜಂತದ ಈ ಭಿತ್ತಿಚಿತ್ರಗಳ ಕಾಲ ಕ್ರಿ.ಪೂ. ೧ನೆಯ ಶತಮಾನದಿಂದ ಕ್ರಿ.ಶ. ೭ನೆಯ ಶತಮಾನದವರೆಗೆ. ಗುಹೆಗಳ ಗೋಡೆ, ಕಂಬ, ಉಪ್ಪರಿಗೆ, ಒಳಭಾಗಗಳಲ್ಲಿ ಕಂಡುಬರುವ ಚಿತ್ರಗಳು ಆಯಾ ಕಾಲದ ಬೌದ್ಧಭಿಕ್ಷುಗಳು ಹಾಗೂ ರಾಜರು ಕೈಗೊಂಡ ಧರ್ಮಪ್ರಸಾರದ ದ್ಯೋತಕಗಳಾಗಿವೆ.

ಅಜಂತದಲ್ಲಿ ೨೯ ಗುಹೆಗಳಿದ್ದು, ಅದರಲ್ಲಿ ೧೬ ಕನ್ನಡನಾಡಿನ ಚಿತ್ರಕಲಾವೈಭವ

ವನ್ನು ಸಾರುತ್ತಿವೆ. ಆದರೆ ಇವುಗಳೆಲ್ಲದರಲ್ಲೂ ಚಿತ್ರಗಳು ಉಳಿದುಕೊಂಡು ಬಂದಿಲ್ಲ; ಇಂದು ೬ ಗುಹೆಗಳಲ್ಲಿ ಮಾತ್ರ ಚಿತ್ರ ಕಾಣಿಸುತ್ತಿದೆ. ೯–೧೦ನೆಯ ಗುಹೆಗಳು ಕ್ರಿ.ಪೂ. ೧೦೦ರಲ್ಲಿಯೂ, ೧೬–೧೭ನೆಯ ಗುಹೆಗಳು ೪೦೦–೫೦೦ರಲ್ಲಿಯೂ ೧–೨ನೆಯ ಗುಹೆಗಳು ೬೨೬–೬೨೮ರಲ್ಲಿಯೂ ಕೊರೆಯಲ್ಪಟ್ಟಂತೆ ತಿಳಿದುಬರುತ್ತದೆ. ೯–೧೦ ನೆಯ ಗುಹೆಗಳ ಚಿತ್ರಗಳು ಸಾತವಾಹನರ ಕಾಲದವು; ಉಳಿದವು ಬಾದಾಮಿ ಚಾಲುಕ್ಯರವು. ಈ ಗುಹಾಚಿತ್ರಗಳನ್ನು ಪ್ರಕೃತಿ ಚಿತ್ರಗಳು, ಅಲಂಕಾರಾರ್ಥ ಚಿತ್ರಗಳು, ಸಮಕಾಲೀನ ಚಾರಿತ್ರಿಕ ಚಿತ್ರಗಳು ಮತ್ತು ಬುದ್ಧನ ಜೀವನಚರಿತ್ರೆಗೆ ಸಂಬಂಧಿಸಿದ ಚಿತ್ರಗಳೆಂದು ನಾಲ್ಕು ಬಗೆಯಾಗಿ ವಿಂಗಡಿಸಬಹುದು.

ಮೊದಲ ಗುಹೆ ತುಂಬ ಅಲಂಕಾರಪೂರ್ಣವಾದುದು. ಇದರಲ್ಲಿ ಕನ್ನಡದ ರಾಜ ೨ನೆಯ ಪುಲಕೇಶಿ ಪಾರಸಿ ರಾಯಭಾರಿಗೆ ಸ್ವಾಗತ ನೀಡುತ್ತಿರುವ ಬಣ್ಣದ ಚಿತ್ರವಿದೆ. ಈ ಗುಹೆಯ ಮತ್ತೊಂದು ಅತ್ಯುತ್ತಮ ಚಿತ್ರವೆಂದರೆ ಅಂತರಾಳದ ಪಶ್ಚಿಮಾರ್ಧದ ಗೋಡೆಯ ಮೇಲಿರುವ ಜಾತಕ ಕಥೆಗಳ ಚಿತ್ರ. ಉತ್ತರಭಾಗದ ಭಿತ್ತಿಯ ಮೇಲೆ ಬೋಧಿಸತ್ತ್ವ ಪದ್ಮಪಾಣಿಯ ಚಿತ್ರವಿದೆ. ಪಶ್ಚಿಮ ಗೋಡೆಯ ಮೇಲೆ ಮಾರನ ಸೋಲನ್ನು ಕುರಿತ ಚಿತ್ರವಿದೆ. ಜಗತ್ತಿನ ಶ್ರೇಷ್ಠ ಕಲಾಕೃತಿಗಳ ಸಾಲಿಗೆ ಸೇರುವ ಚಿತ್ರಕೃತಿಗಳು ಇವು. ಇವಲ್ಲದೆ ೧ನೆಯ ಗುಹೆಯಲ್ಲಿ ಅವಲೋಕಿತೇಶ್ವರಚಿತ್ರ, ಬುದ್ಧನ ರೂಪಭಂಗಿಗಳು, ವಜ್ರಪಾಣಿ, ಚಂಪೆಯ ಜಾತಕ ಮೊದಲಾದ ಚಿತ್ರಸಮೂಹಗಳಿವೆ. ೨ನೆಯ ಗುಹೆಯ ಗೋಡೆಯ ಮೇಲೆ ಬೋಧಿಸತ್ತ್ವನಿಗೆ ಪುಷ್ಪಸಮರ್ಪಣೆ, ಇಂದ್ರಾದಿ ದೇವತೆಗಳು, ಬುದ್ಧನ ಜನನ ನಿರೀಕ್ಷೆಯಲ್ಲಿರುವ ಮಾಯಾದೇವಿಯ ಚಿತ್ರ ಮೊದಲಾದ ಚಿತ್ರಗಳಿವೆ. ೧೬ನೆಯ ಗುಹೆಯಲ್ಲಿ ಬುದ್ಧನ ಜನನ ಬಾಲ್ಯದ ಕಥೆಗಳು ಮತ್ತು ಭಿಕ್ಷು ಜೀವನಕ್ಕೆ ಸಂಬಂಧಿಸಿದ ಕೆಲವು ಐತಿಹ್ಯಗಳು ಚಿತ್ರಿತವಾಗಿವೆ. ೧೭ನೆಯ ಗುಹೆಯಲ್ಲಿ ಬುದ್ಧನ ಪೂರ್ವಾವತಾರಗಳ ಕಥೆಗಳು ಚಿತ್ರಿತವಾಗಿದ್ದು, ಸುಂದರವಾಗಿವೆ. ಇಲ್ಲಿನ ಚಿತ್ರಗಳಲ್ಲಿ ಕಂಡುಬರುವ ಎರಡು ಪ್ರಮುಖ ಗುಣಗಳೆಂದರೆ, ದೈವಿಕಪ್ರಶಾಂತತೆ ಮತ್ತು ಮಾನವ ಭಾವನೆಗಳ ಚಿತ್ರಣ.

ಅಜಂತದ ಭಿತ್ತಿಚಿತ್ರಗಳ ನಿರ್ಮಾಣದ ಕಾಲವನ್ನು ಭಾರತೀಯ ಚಿತ್ರಕಲೆಯ ಸುವರ್ಣಯುಗವೆಂದು ಹೇಳಬಹುದಾಗಿದೆ. ಇಲ್ಲಿನ ಕೆಲವು ಚಿತ್ರಗಳು ಅತ್ಯುತ್ಕೃಷ್ಟ ಕಲಾಕೃತಿಗಳು. ಕನ್ನಡ ರಾಜರ ಕಾಲದಲ್ಲಿ ನಿರ್ಮಿತವಾಗಿರುವ ಇವು, ಕರ್ಣಾಟಕ ಚಿತ್ರಕಲೆಯಲ್ಲಿ ಪ್ರಭಾವಪೂರ್ಣ ಇತಿಹಾಸದ ಒಂದು ಅಧ್ಯಾಯ.

ಬಾದಾಮಿಯ ಗುಹಾಂತರ್ದೇವಾಲಯಗಳ ಚಿತ್ರಗಳು ಈಗ ಮಸುಕಾಗಿವೆ. ೩ನೆಯ ವೈಷ್ಣವ ಗುಹೆಯ ಭಿತ್ತಿಚಿತ್ರ ಕ್ರಿ.ಶ. ೭ನೆಯ ಶತಮಾನಕ್ಕೆ ಸೇರಿದುದು. ಶಿವ ಮತ್ತು ಪಾರ್ವತಿಯರ ಚಿತ್ರವಿದ್ದು, ಶಿವ ಸಿಂಹಾಸನದ ಮೇಲೆ ಕುಳಿತಿದ್ದಾನೆ; ಅವನ ಭಕ್ತರು, ಸೇವಕರು, ಅಪ್ಸರೆಯರು ಇದ್ದಾರೆ. ಇಲ್ಲಿನ ಚಿತ್ರಶೈಲಿ ಅಜಂತದ ಚಿತ್ರಶೈಲಿಯನ್ನು ಹೋಲುತ್ತದೆ. ಇದರಿಂದ ದ್ರಾವಿಡ ಕಲಾವಿದರು ಒಬ್ಬರನ್ನೊಬ್ಬರು ಹೇಗೆ

ಮತ್ತು ಎಷ್ಟು ಅರ್ಥಮಾಡಿಕೊಂಡಿದ್ದರೆಂಬುದನ್ನು ಮತ್ತು ಮಾನವ ಭಾವಗಳನ್ನು ಗ್ರಹಿಸಿದ್ದರೆಂಬುದನ್ನು ಅರಿಯಬಹುದು.[404] ಬಿಜಾಪುರದ ಕುಮುಟಗಿರಿಯ ಒಂದು ಭಿತ್ತಿ ಚಿತ್ರ ಕ್ರಿ.ಶ. ೭ನೆಯ ಶತಮಾನದ ೨ನೆಯ ಪುಲಿಕೇಶಿಯ ಆಳ್ವಿಕೆಯದಾಗಿದ್ದು, ಇಲ್ಲಿ ಪೋಲೊ ಆಟವನ್ನು ಚಿತ್ರಿಸಿದೆ. ರೂಪದ ಮತ್ತು ರೇಖೆಯ ಮೇಲಿನ ಪ್ರಭುತ್ವವನ್ನೂ ಪರಿಶೀಲನ ಶಕ್ತಿಯನ್ನು ಇದು ಪ್ರಕಾಶಪಡಿಸುತ್ತದೆ.[405]

ಕರ್ನಾಟಕ ಚಿತ್ರಕಲೆಯ ಮತ್ತೊಂದು ಕೇಂದ್ರವೆಂದರೆ ಎಲ್ಲೋರ. ಎಲ್ಲೋರದ ಗುಹಾಲಯಗಳ ಒಳಮಾಳಿಗೆಗಳಲ್ಲಿ ಕೆಲವು ಚಿತ್ರಕಲೆಗಳುಂಟು. ಇಲ್ಲಿಯ ಕಲೆಯೂ ಅಜಂತದ ಕಲೆಯನ್ನೇ ಹೋಲುತ್ತದೆ. ಹವಾಮಾನದ ಪರಿಸ್ಥಿತಿಯ ಕಾರಣದಿಂದಾಗಿ, ಇಲ್ಲಿನ ಚಿತ್ರಗಳ ಬಣ್ಣಗಳು ಕ್ಷೀಣಿಸಿರುವುದನ್ನು ಕಾಣಬಹುದು. ಈ ಚಿತ್ರಗಳು ಕ್ರಿ.ಶ. ೭–೮ನೆಯ ಶತಮಾನಗಳಲ್ಲಿ ರಚಿತವಾಗಿರುವಂತೆ ಕಾಣಬರುತ್ತದೆ. ಎಲ್ಲೋರದಲ್ಲಿ ಚಿತ್ರಕಲೆಯ ವೈಭವವನ್ನು ಕಾಣಬೇಕಾದರೆ ಕೈಲಾಸ ದೇವಾಲಯದ ಚಿತ್ರಗಳಿಗೇ ಹೋಗಬೇಕಾಗುತ್ತದೆ. ಇದರಲ್ಲಿ ಅಸಂಖ್ಯಾತ ಚಿತ್ರಗಳಿವೆ. ಮುಖಮಂಟಪ, ಒಳ ಮಾಳಿಗೆಯಲ್ಲಿರುವ ಚಿತ್ರಗಳು ಕ್ರಿ.ಶ. ೮ನೆಯ ಶತಮಾನವೆಂದು ತೋರುತ್ತದೆ. ಭಿತ್ತಿ ಮತ್ತು ಛಾವಣಿಗಳ ಮೇಲೆ ಪದರ ಪದರವಾಗಿ ಕಾಲಾನುಕ್ರಮವಾಗಿ ನಿರೂಪಿತವಾಗಿರುವ ವರ್ಣಚಿತ್ರಗಳಿವೆ. ಇವುಗಳಲ್ಲಿ ಶಾರ್ದೂಲವೇರಿದ ವೈದಿಕದೇವತೆ ಮತ್ತು ಮಹಿಷಾ ರೂಢ ಯಮನ ಚಿತ್ರಗಳು ಗಮನಾರ್ಹವಾದವುಗಳು. ಕೈಲಾಸ ದೇವಾಲಯದ ಈ ಎಲ್ಲ ಚಿತ್ರಗಳೂ ಬೇರೆ ಬೇರೆ ಅವಧಿಯಲ್ಲಿ ರಚಿತವಾಗಿರಬೇಕೆಂದು ತೋರುತ್ತದೆ. ಇದು 'ರಂಗಮಹಲು' ಅಥವಾ 'ವರ್ಣಚಿತ್ರಗಳ ಅರಮನೆ'ಯೆಂದೇ ಪ್ರಸಿದ್ಧವಾಗಿದೆ.

ಎಲ್ಲೋರದಲ್ಲಿನ ಜೈನ ದೇವಾಲಯಗಳಾದ ಇಂದ್ರಸಭಾ ಸಮೂಹಗಳ ಒಳಮಾಳಿಗೆ ಗಳು ಕೂಡ ಚಿತ್ರಗಳಿಂದ ಅಲಂಕೃತವಾಗಿವೆ. ಇಲ್ಲಿನ 'ಅಪ್ಸರಾ' ಚಿತ್ರಗಳು ಕೈಲಾಸ ದೇವಾಲಯದ ಚಿತ್ರಗಳಿಗಿಂತ ಅಜಂತದ ಚಿತ್ರಗಳಿಗೆ ಹೆಚ್ಚು ಹತ್ತಿರವಾಗಿವೆ. ಜೈನ ಕಲಾಕಾರರು ಉತ್ತಮ ಪ್ರತಿಕಾರರು ಎಂಬುದಾಗಿ ಯಾಜ್ದಾನಿಯವರು ಅಭಿಪ್ರಾಯ ಪಡುತ್ತಾರೆ[406]; ಅವರೇ ಮುಂದುವರಿದು, ಎಲ್ಲೋರದ ಕಲೆ ಶುದ್ಧಾಂಗವಾಗಿ ಅನು ಕರಣಾತ್ಮಕವಾದುದು, ಯಾವುದೇ ಸೃಷ್ಟ್ಯಾತ್ಮಕ ಶಕ್ತಿಯನ್ನು ತೋರಿಸದು ಎಂದು ಹೇಳುತ್ತಾರೆ.[407] ಇಂದ್ರಸಭಾದ ಈ ಚಿತ್ರಗಳು ಕ್ರಿ.ಶ. ೯ನೆಯ ಶತಮಾನದವು.

ಪ್ರಾಚೀನ ಕರ್ನಾಟಕದ ಚಿತ್ರಕಲೆಯ ಪ್ರಮುಖ ಕೇಂದ್ರಗಳೆಂದರೆ ಕ್ರಮವಾಗಿ ಅಜಂತ, ಬಾದಾಮಿ ಮತ್ತು ಎಲ್ಲೋರಗಳಾಗಿವೆ. ಮೊದಲನೆಯದರಲ್ಲಿ ಬೌದ್ಧಧರ್ಮದ ಪ್ರಭಾವ ಹಿನ್ನೆಲೆಗಳನ್ನು ಕಂಡರೆ, ಎರಡು ಮೂರನೆಯದರಲ್ಲಿ ವೈದಿಕಧರ್ಮದ ಹಿನ್ನೆಲೆ ಪ್ರಭಾವಗಳನ್ನು ನೋಡುತ್ತೇವೆ. ಚಿತ್ರಕಲೆಯ ಇತಿಹಾಸದಲ್ಲಿ ಬೌದ್ಧಧರ್ಮದ ಕಾಲವೇ ಅತ್ಯುನ್ನತವಾದುದೆಂಬುದು ವಿದ್ವಾಂಸರ ಅಭಿಪ್ರಾಯ. ಇದಕ್ಕೆ ಅಜಂತದ ಚಿತ್ರಗಳು ನಿದರ್ಶನ. ಅಜಂತದಿಂದ ಬಾದಾಮಿಗೆ ಬಂದರೆ, ಚಿತ್ರಕಲೆ ತನ್ನ ಉತ್ಕೃಷ್ಟತೆಯನ್ನು ಕಳೆದುಕೊಂಡಂತೆ ಭಾಸವಾಗುತ್ತದೆ. ಆದರೆ, ಎಲ್ಲೋರದಲ್ಲಿ ಅದು ಮತ್ತೆ ಉನ್ನತಿ

ಯನ್ನು ಕಂಡರೂ ಬಹಳ ಕಾಲ ಅದು ಇರಲಿಲ್ಲ. ಯಾಜ್ದಾನಿಯವರ ಪ್ರಕಾರ ಇಂದ್ರ ಸಭಾ ಮತ್ತು ಜಗನ್ನಾಥ ಸಭಾಗಳ ಚಿತ್ರಮಾಲಿಗಳೇ ದಕ್ಷಿಣ ಚಿತ್ರಕಲೆಯ ಕೊನೆಯ ಮಜಲು.[408] ಈ ಏಳುಬೀಳುಗಳಿಗೆ ಕಾರಣ, ಬೇರೆ ಬೇರೆ ರಾಜವಂಶಗಳ ಭಿನ್ನ ಧಾರ್ಮಿಕ ಶ್ರದ್ಧಾಸಕ್ತಿಗಳು.

## ಸಂಗೀತ-ನೃತ್ಯಕಲೆಗಳು

ಭಾರತೀಯ ಸಂಗೀತದಲ್ಲಿ ಕರ್ಣಾಟಕ ಸಂಗೀತಕ್ಕೆ ತನ್ನದೇ ಆದ ಸ್ಥಾನವಿದೆ. 'ಕರ್ಣಾಟಕ ಸಂಗೀತ'ವೆಂದೇ ಅದು ಪ್ರಸಿದ್ಧವಾಗಿ ದಕ್ಷಿಣ ಭಾರತಾದ್ಯಂತ ಪ್ರಚಲಿತ ವಾಗಿದೆ. ದಕ್ಷಿಣ ಭಾರತದ ಸಂಗೀತವೆಂದರೆ ಕರ್ಣಾಟಕ ಸಂಗೀತವೆಂದೇ ತಿಳಿಯ ಲಾಗಿದೆ.

ಸಂಗೀತದ ಉಪಲಬ್ಧ ಆಧಾರಗಳನ್ನು ಕಾಣಬೇಕಾದರೆ, ಶಾಸನ, ಶಿಲ್ಪ, ಚಿತ್ರಾದಿ ಗಳನ್ನೇ ಗಮನಿಸಬೇಕಾಗುತ್ತದೆ. ಪ್ರಾಚೀನ ಕಾಲದ ಸಂಗೀತವಾದ್ಯಗಳು ಇವುಗಳಲ್ಲಿ ಉಕ್ತವಾಗಿರುವುದನ್ನು ಕಾಣುತ್ತೇವೆ. ವಾದ್ಯಗಳನ್ನು ಬಾರಿಸುತ್ತಿರುವ ಯಕ್ಷಗಂಧರ್ವರ ವಿಗ್ರಹಗಳನ್ನು ನೋಡಬಹುದು. ಈ ರೀತಿಯ ಉಲ್ಲೇಖಗಳಲ್ಲಿ ಗುಹಾಂತರ್ದೇವಾಲಯ ಗಳು ಮುಖ್ಯವೆನಿಸಿವೆ. ಇವುಗಳಲ್ಲಿ ಅಜಂತದ ಗುಹೆಗಳನ್ನು ಮೊದಲು ಹೆಸರಿಸಬೇಕು. ಅಜಂತದ ೧೦ನೆಯ ಗುಹೆಯ ಎಡಗಡೆಯ ಗೋಡೆಯಮೇಲೆ ಚಿತ್ರಿತವಾಗಿರುವ ನೃತ್ಯ ಚಿತ್ರದ ೧೫ ಮಂದಿ ಕಲಾವಿದರಲ್ಲಿ ೧೨ ಮಂದಿ ಸಂಗೀತಗಾರರಾಗಿರುವಂತೆ ತೋರು ತ್ತದೆ. ಇವರೆಲ್ಲ ಸ್ತ್ರೀಯರಾಗಿದ್ದು, ವಾದ್ಯಮೇಳಕ್ಕೆ ಸೇರಿದವರಾಗಿರುತ್ತಾರೆ. ಇದರ ತರುವಾಯ ೧ನೆಯ ಗುಹೆಗೆ ಬಂದರೆ, ನರ್ತಕಿಗೆ ಸಹಾಯಕವಾಗಿ ಸಂಗೀತಗಾರರ ತಂಡ ವೊಂದು ಕಾಣಸಿಗುತ್ತದೆ. ಇವರೂ ಸ್ತ್ರೀಯರೇ. ಇವರಲ್ಲಿ ಇಬ್ಬರು ತಾಳವನ್ನು, ಒಂದು ಜೋಡಿ ತಬಲವನ್ನು, ಮತ್ತೊಬ್ಬಳು ಮೃದಂಗವನ್ನು, ಮಗದೊಬ್ಬಳು ವೀಣೆಯಂತಹ ವಾದ್ಯವನ್ನು, ಇನ್ನೊಬ್ಬಳು ಕೊಳಲನ್ನು ಹಿಡಿದು ನುಡಿಸುತ್ತಿರುವ ಚಿತ್ರವಿದೆ. ಈ ಸಂಗೀತವಾದ್ಯಗಳ ವೈವಿಧ್ಯವೇ ಸಂಗೀತದ ಬೆಳೆವಣಿಗೆಯನ್ನು ತೋರಿಸುತ್ತದೆಂದು ಹೇಳಬಹುದು. ಅಜಂತವನ್ನು ಬಿಟ್ಟರೆ, ತಿರುಮಕೂಡಲಿನ ಶಿಲ್ಪಕೃತಿಯೊಂದು ಗಮ ನಾರ್ಹಕೃತಿ. ಇದರಲ್ಲಿ ಸ್ತ್ರೀಯೊಬ್ಬಳು ಬಾಗಿದ ಬಿಲ್ಲಿನಿಂದ ತಂತಿವಾದ್ಯವನ್ನು ಮೀಟು ತ್ತಿರುವ ದೃಶ್ಯವಿದೆ. ಇದು ಚಾಲುಕ್ಯರ ಕಾಲಕ್ಕಿಂತಲೂ ಪೂರ್ವದ್ದೆಂದು ವಿದ್ವಾಂಸರ ಅಭಿಪ್ರಾಯ.

ಕ್ರಿ.ಶ. ೭ ಮತ್ತು ೮ನೆಯ ಶತಮಾನಗಳಲ್ಲಿ ಕಾಣಿಸಿಕೊಂಡ ವೈಷ್ಣವ-ಶೈವ ಧಾರ್ಮಿಕ ಪುನರುಜ್ಜೀವನ ಸಂಗೀತದಲ್ಲೂ ಗಮನಾರ್ಹವಿಕಾಸಕ್ಕೆ ಕಾರಣವಾಯಿತು. ಚಾಲುಕ್ಯ ಮತ್ತು ರಾಷ್ಟ್ರಕೂಟರ ರಚನೆಗಳಲ್ಲಿ ಇದಕ್ಕೆ ನಿದರ್ಶನಗಳುಂಟು. ಚಾಲುಕ್ಯರ ಸಂಗೀತ ವೈಶಿಷ್ಟ್ಯವನ್ನು ತಿಳಿಯಬೇಕಾದರೆ ಬಾದಾಮಿ, ಪಟ್ಟದಕಲ್ಲು, ಐಹೊಳೆಗಳ ಚಿತ್ರಪಟ್ಟಿಕೆ ಗಳನ್ನು ನೋಡಬೇಕು. ಇವುಗಳಲ್ಲಿ ನರ್ತನ, ವಾದನ, ಗಾನಗಳಿಗೆ ಸಂಬಂಧಿಸಿದ ಚಿತ್ರ

ಗಳು ದೊರಕುತ್ತವೆ. ಇಲ್ಲಿನ ವಿಗ್ರಹಗಳಲ್ಲಿ ಸಂಗೀತ-ನೃತ್ಯದ ಮೇಳಗಳು ಕೆತ್ತಿವೆ. ಸಪ್ತಧಾರೆ, ಏಕಧಾರೆ, ರುದ್ರವೀಣೆ, ಸರಸ್ವತೀವೀಣೆ, ಮೃದಂಗ ಮುಂತಾದ ತಂತಿ ವಾದ್ಯಗಳ ಅನೇಕ ಸಾಮಗ್ರಿಗಳು ಇಲ್ಲಿ ಉಲ್ಲೇಖಿತವಾಗಿವೆ. ಬಾದಾಮಿಯ ೧ನೆಯ ಗುಹೆಯಲ್ಲಿ ರುದ್ರವೀಣೆಯನ್ನು ಹಿಡಿದ ಶಿವನ ಚಿತ್ರವಿದೆ. ೨ನೆಯ ಗುಹೆಯ ತ್ರಿವಿಕ್ರಮ ಮೂರ್ತಿಯ ಕೆಳಗಡೆ ಝಲ್ಲರಿ, ಪಟಹ, ಕೊಂಬುಗಳನ್ನು ಬಾರಿಸುವ ಸಂಗೀತ ಗಾರರ ಚಿತ್ರಗಳಿವೆ. ಚಾಲುಕ್ಯ ೨ನೆಯ ವಿಕ್ರಮಾದಿತ್ಯನ ಒಂದು ಶಾಸನದಲ್ಲಿ, ವಿಜಯಾ ದಿತ್ಯನು 'ಗಾನ್ಧರ್ವರ್ಗೆ ನಿಱಿಸಿದಾ ಪೂರ್ವ್ವಮರ್ಯಾದೆಗಳಾನ್ ಶ್ರೀ ವಿಕ್ರಮಾದಿತ್ಯ ಭಟಾರರಾ ಲೋಕಮಹಾದೇವಿಯರ್ ಗಾನ್ಧರ್ವರ್ಗ್ಗೆ ನಿತ್ತಾರ್' ಎಂದು ತಿಳಿಸಿದೆ.[409]

ರಾಷ್ಟ್ರಕೂಟರ ಕಾಲದ ಒಂದೆರಡು ಉಲ್ಲೇಖಗಳೂ ಸಿಗುತ್ತವೆ. ಎಲ್ಲೋರದ 'ಇಂದ್ರಸಭಾ' ಗುಹಾಲಯದಲ್ಲಿ ಗೊಮ್ಮಟೇಶ್ವರನ ಪ್ರತಿಮೆಯೊಂದಿದೆ. ಇದರ ಮೇಲುಗಡೆ ಪಟಹ ಮತ್ತು ಝಲ್ಲರಿಗಳನ್ನು ಬಾರಿಸುವುದರ ಚಿತ್ರಗಳಿರುವುದಲ್ಲದೆ, ಕೆಲವು ಸಂಗೀತ ಗಾರರ ವಿಗ್ರಹಗಳೂ ಕಾಣಸಿಗುತ್ತವೆ. ಇನ್ನೊಂದೆಂದರೆ, ನೆಲಮಂಗಲ ತಾಲ್ಲೂಕಿನ ನರಸಮಂಗಲದ ರಾಮೇಶ್ವರ ದೇವಾಲಯದ್ದು. ಇದರ ನವರಂಗದ ಒಳಮಾಳಿಗೆಯ ಮೇಲೆ ಶಿವನ ನಾಟ್ಯಚಿತ್ರದ ಅಕ್ಕಪಕ್ಕದಲ್ಲಿ ಪಟಹ, ಝಲ್ಲರಿ ಬಾರಿಸುವವರನ್ನು ಕಾಣಬಹುದು. ಇದು ೮೦೦ರದ್ದೆಂದು ಊಹಿಸುತ್ತಾರೆ. ಈ ಕೆಲವೇ ಆಧಾರಗಳಿಂದ ಪ್ರಾಚೀನ ಕರ್ನಾಟಕದ ಸಂಗೀತದ ಸ್ವರೂಪವನ್ನು ತಿಳಿದುಕೊಳ್ಳಬೇಕಾಗುತ್ತದೆ.

ಕನ್ನಡ ನಾಡಿನಲ್ಲಿ ನಾಟ್ಯಸಂಪ್ರದಾಯ ದೇವದಾಸಿಯರಿಂದ ಬಹಳ ಹಿಂದಿನಿಂದಲೂ ಬೆಳೆದು ಬಂದಿರಬೇಕು. ದೇವಾಲಯಗಳಲ್ಲಿ ದೇವರನ್ನು ಸಂತೋಷಪಡಿಸಲು ನೃತ್ಯ ಉಪಯೋಗವಾಗುತ್ತಿದ್ದುದಕ್ಕೆ 'ದೇವದಾಸಿ' ಪದ್ಧತಿ ಎಂದು ಹೆಸರಾಗಿದೆ. ಇದೊಂದು ಧಾರ್ಮಿಕ ಕ್ರಿಯೆಯಾಗಿ ಪ್ರಚಲಿತವಾಗುತ್ತಿತ್ತು. ಪ್ರತಿಯೊಂದು ದೇವಾಲಯದಲ್ಲಿಯೂ ನೃತ್ಯಮಂಟಪ, ರಂಗಮಂಟಪ, ನಾಟ್ಯಶಾಲೆಗಳು ಇರುವುದನ್ನು ಇಲ್ಲಿ ಜ್ಞಾಪಿಸಿಕೊಳ್ಳ ಬಹುದು. ಕರ್ನಾಟಕದಲ್ಲಿ ನೃತ್ಯಕಲೆ ಇತರ ಕಲೆಗಳಂತೆ ಪ್ರಮುಖ ಸ್ಥಾನವನ್ನು ಪಡೆದಿದೆ. ಪ್ರಾಚೀನ ಕರ್ನಾಟಕದ ನೃತ್ಯಕಲೆಯ ಇತಿಹಾಸವನ್ನು ತಿಳಿಯಲು ಹೆಚ್ಚು ಆಧಾರಗಳೇನೂ ದೊರಕುವುದಿಲ್ಲ. ಸಾಹಿತ್ಯ, ಶಾಸನ, ವಾಸ್ತುಶಿಲ್ಪಾದಿಗಳಲ್ಲಿ ಅಲ್ಲೊಂದು ಇಲ್ಲೊಂದು ಉಲ್ಲೇಖ ಸಿಗುವಷ್ಟರಿಂದಲೇ ಅದರ ಇತಿಹಾಸವನ್ನು ರೂಪಿಸಬೇಕಾಗು ತ್ತದೆ. ಕ್ರಿ.ಶ. ೪ನೆಯ ಶತಮಾನದ ಪಟ್ಟದಕಲ್ಲಿನ ಶಿಲಾಲೇಖದಲ್ಲಿ ನಟಸೇವ್ಯನೆಂಬ ಪ್ರಸಿದ್ಧನಟನೊಬ್ಬನ ವಿಷಯ ವರ್ಣಿತವಾಗಿದೆ.[410]

ನೇರವಾದ ಈ ಆಧಾರಗಳನ್ನು ಬಿಟ್ಟರೆ, ನೃತ್ಯದ ಬಗ್ಗೆ ವಿಷಯಗಳನ್ನು ಒದಗಿಸಬಲ್ಲ ವೆಂದರೆ ದೇವಾಲಯಗಳು. ಕರ್ನಾಟಕ ದೇವಾಲಯ ಗುಹಾಲಯಗಳ ಶಿಲ್ಪಕೃತಿಗಳಲ್ಲಿ ನೃತ್ಯದ ಇಂಥ ವಿವಿಧ ಭಂಗಿಗಳನ್ನು ಕಾಣುತ್ತೇವೆ. ಇವುಗಳಲ್ಲಿ ಮೊದಲು ಗಮನಿಸ ಬೇಕಾದದ್ದು ಅಜಂತದ ಗವಿಗಳನ್ನು. ಕನ್ನಡದ ದೊರೆಗಳ ಕಾಲದಲ್ಲಿ ರಚಿತವಾಗಿರ ಬೇಕೆನ್ನುವ ೬ ಗುಹೆಗಳಲ್ಲಿ ೧೦ ಮತ್ತು ೧ನೆಯ ಗುಹೆಗಳಲ್ಲಿ ನೃತ್ಯಕ್ಕೆ ಸಂಬಂಧಿಸಿದ

ಕೆಲವು ದಾಖಲೆಗಳು ಸಿಗುತ್ತವೆ. ೧೧ನೆಯ ಗುಹೆಯ ಎಡಗೋಡೆಯ ಮೇಲೆ ನೃತ್ಯ ಚಿತ್ರವೊಂದಿದೆ. ಇದು ಕ್ರಿ.ಶ. ೨ನೆಯ ಶತಮಾನದ್ದೆಂದು ಹೇಳುತ್ತಾರೆ. ನೃತ್ಯವನ್ನು ಪ್ರತಿನಿಧಿಸುವ ಅಜಂತದ ಆದಿಯ ಚಿತ್ರವೆಂದರೆ ಇದೇ. ಇಲ್ಲಿನ ೧೫ ಮಂದಿ ಕಲಾವಿದರಲ್ಲಿ ಮೂವರು ನೃತ್ಯಕಾರರಿರಬೇಕೆಂದು ವಿದ್ವಾಂಸರು ನಿರ್ಣಯಿಸುತ್ತಾರೆ. ಈ ಚಿತ್ರ ಧಾರ್ಮಿಕವಾಗಿ ತುಂಬ ಮಹತ್ತ್ವದ್ದು. ಈ ಬಗ್ಗೆ ಬರೆಯುತ್ತ ಯಾಜ್ದಾನಿ ಅವರು, ದಕ್ಷಿಣದಲ್ಲಿ ಧಾರ್ಮಿಕ ದೇವಾಲಯಗಳಿಗೆ ಸಂಬಂಧಿಸಿದಂತೆ ಸ್ತ್ರೀನೃತ್ಯ ಮತ್ತು ಸಂಗೀತಗಾರರ ವ್ಯವಸ್ಥೆ ಅಸ್ತಿತ್ವಕ್ಕೆ ಬಂದದ್ದು ಬೌದ್ಧಧರ್ಮದ ಆಗಮನದ ಮೊದಲೇ ಎಂದು ಸೂಚಿಸುತ್ತಾರೆ.[411] ಇದೇ ಶೈಲಿಯ ಚಿತ್ರವೊಂದು ೧೧ನೆಯ ಗುಹೆಯ ಎಡಭಿತ್ತಿಯ ಮೇಲೆ ಇವೆ. ಇದು 'ಮಹಾಜನಕ ಜಾತಕ' ಘಟನಾವಳಿಗಳ ಚಿತ್ರಣ. ಇಲ್ಲಿನ ಕಲಾವಿದೆಯ ಭಂಗಿ ಬಹುತೇಕವಾಗಿ ೧೧ನೇ ಗುಹೆಯ ಇಬ್ಬರು ನೃತ್ಯಕಾರರನ್ನು ಹೋಲುತ್ತದೆಂದು ಹೇಳುತ್ತಾರೆ. ಇಲ್ಲಿನ ನರ್ತಕಿಗೆ ಸಹಾಯಕವಾಗಿ ಹಿಂದೆಯೇ ಹೇಳಿದಂತೆ ಸಂಗೀತಗಾರರ ತಂಡವೊಂದಿದೆ. ಇದೇ ಗುಹೆಯ ಮುಂಭಾಗದ ಕೈಸಾಲೆಯಲ್ಲಿ ಮತ್ತೊಂದು ನೃತ್ಯದೃಶ್ಯವಿದೆ. ನಾಗಾರಾಜ ರಾಣಿಯರ ಎದುರು ನೃತ್ಯಮಾಡುತ್ತಿರುವ ಚಿತ್ರವಿದು. ಈ ಚಿತ್ರ ಹಾನಿಗೊಳಗಾಗಿದ್ದರೂ, ಇಬ್ಬರು ನೃತ್ಯಕಾರರನ್ನು ಹೇಗೋ ಪತ್ತೆಹಚ್ಚಬಹುದು.

ಬಾದಾಮಿ ಚಾಲುಕ್ಯರ ಕಲಾಕೇಂದ್ರಗಳೆನಿಸಿರುವ ಬಾದಾಮಿ, ಪಟ್ಟದಕಲ್ಲು ಮತ್ತು ಐಹೊಳೆಗಳಲ್ಲಿ ನರ್ತನವನ್ನು ತೋರಿಸುವ ಕೆಲವು ವಿಗ್ರಹಗಳು ಸಿಗುತ್ತವೆ. ಮೋಹಿನಿ ಮತ್ತು ಇತರ ದೇವತಾ ವಿಗ್ರಹಗಳ ವಿವಿಧ ಭಂಗಿಗಳನ್ನು ಈ ಸಮಯದಲ್ಲಿ ಉಲ್ಲೇಖಿಸಬಹುದು. ಇವೆಲ್ಲವೂ ಆ ಕಾಲದ ರಸಿಕತೆಯನ್ನೂ ಕಲಾಭಿರುಚಿಯನ್ನೂ ತಿಳಿಸುತ್ತವೆ. ಚಾಲುಕ್ಯ ರಾಜ ೨ನೆಯ ವಿಕ್ರಮಾದಿತ್ಯನ ಮಹಾರಾಣಿ ಲೋಕಮಹಾದೇವಿ ನೃತ್ಯದ ಉಪಾಸಕಳಾಗಿದ್ದಳು. ರಾಷ್ಟ್ರಕೂಟರ ಕಾಲಕ್ಕೆ ಬಂದರೆ, ನರಸಮಂಗಲದ ರಾಮೇಶ್ವರ ಮತ್ತು ಅರಳಗುಪ್ಪೆಯ ಕಲ್ಲೇಶ್ವರ ದೇವಾಲಯಗಳ ತಾಂಡವನೃತ್ಯದ ನಟರಾಜ ವಿಗ್ರಹಗಳು ಗಮನಾರ್ಹವಾಗಿವೆ. ಇಷ್ಟಲ್ಲದೆ ಚಾಲುಕ್ಯ ರಾಷ್ಟ್ರಕೂಟರ ಬೇರಾವ ದಾಖಲೆಗಳೂ ನಮಗೆ ದೊರಕುವುದಿಲ್ಲ. ಈ ಸಮಯದಲ್ಲಿ ಯಾಜ್ದಾನಿಯವರು ಒಂದು ವಿಷಯದ ಕಡೆಗೆ ನಮ್ಮ ಗಮನವನ್ನು ಸೆಳೆಯುತ್ತಾರೆ. ಶಕ್ತಿವಾದದ ಪ್ರಭಾವದಲ್ಲಿ, ವೈದಿಕ ದೇವಾಲಯಗಳಿಗೆ ಸಂಬಂಧಿಸಿದಂತಿರುವ ನೃತ್ಯಕಾರ ಮತ್ತು ಸಂಗೀತಗಾರರ ವ್ಯವಸ್ಥೆ ಮಹತ್ತ್ವದಲ್ಲಿ ಮತ್ತು ಕಲಾತ್ಮಕ ಗುಣಗಳಲ್ಲಿ ಕ್ರಿ.ಶ. ೮ನೆಯ ಶತಮಾನದಿಂದೀಚೆಗೆ ಹೆಚ್ಚು ಬೆಳವಣಿಗೆ ಪಡೆಯಿತೆಂಬುದೇ ಆ ಮುಖ್ಯ ವಿಷಯ.[412] ಬಹುಸಂಖ್ಯಾತ ಮನೋಹರವಾದ ನೃತ್ಯಭಂಗಿಗಳನ್ನು ದೇವಾಲಯಗಳ ಹೊರಭಾಗಗಳಲ್ಲಿ ನೋಡಬಹುದಾಗಿದೆ.

ಮೇಲಿನ ಸಂಗೀತ—ನೃತ್ಯಗಳ ದಾಖಲೆಗಳು ಕರ್ಣಾಟಕದಲ್ಲಿ ಸಂಗೀತ ನೃತ್ಯಕಲೆಗಳ ಅವಿಚ್ಛಿನ್ನ ಇತಿಹಾಸವನ್ನು ಕೊಡಲಾರವೆಂಬುದು ಖಚಿತವಿರುವ ವಿಷಯ. ಇದಕ್ಕೆ ಕಾರಣವೂ ಸ್ಪಷ್ಟವೇ. ವಾಸ್ತು, ಶಿಲ್ಪ, ಚಿತ್ರಾದಿಗಳಿಗೆ ದೊರಕುವ ಹೇರಳ ಸಾಮಗ್ರಿ

ಗಳು ಸಂಗೀತ–ನೃತ್ಯಗಳ ಬಗ್ಗೆ ದೊರಕುವುದು ಸಾಧ್ಯವಿಲ್ಲ. ಇದಲ್ಲದೆ, ಇವುಗಳ ಬಗ್ಗೆ ಶಾಸನೋಕ್ತ ನೇರ ಆಧಾರಗಳು ದೊರಕುವುದು ಅಪೂರ್ವವಾದುದರಿಂದ, ಆ ಕಾಲದ ಸಂಗೀತ ನೃತ್ಯಗಳ ನಿಜವಾದ ಸ್ವರೂಪವೇನು ಎಂಬುದನ್ನು ತಿಳಿಯಲು ಕಷ್ಟವಾಗುತ್ತದೆ. ಶಿಲ್ಪ ಚಿತ್ರಾದಿಗಳಲ್ಲಿ ಸಂಗೀತ ನೃತ್ಯಗಳನ್ನು ಕುರಿತಂತೆ ಕೆಲವು ಉಲ್ಲೇಖಗಳು ದೊರೆತರೂ ನಿರ್ದಿಷ್ಟ ಕಾಲದ ಸಾಮಾಜಿಕ ಸ್ಥಿತಿಯನ್ನು ಪ್ರತಿಬಿಂಬಿಸುತ್ತವೆಂದು ಎಷ್ಟೋ ಸಲ ಹೇಳಲಾಗುವುದಿಲ್ಲ. ಅವು ಕೇವಲ ಕಲಾದೃಷ್ಟಿಯಿಂದ ಬಂದಿರಲೂ ಸಾಕು.

ಮೇಲಿನ ವಿವೇಚನೆಯಿಂದ, ಕ್ರಿ.ಶ ೯ನೆಯ ಶತಮಾನದವರೆಗಿನ ಪ್ರಾಚೀನ ಕರ್ನಾಟಕದ ಕಲಾತ್ಮಕ ಚಟುವಟಿಕೆಯನ್ನು ಸ್ವಲ್ಪಮಟ್ಟಿಗೆ ತಿಳಿದಂತಾಯಿತು. ವಾಸ್ತವವಾಗಿ ಈ ಅವಧಿಯನ್ನು ಕರ್ನಾಟಕ ಕಲೆಯ ಪರಿಷ್ಕಾರ ಯುಗವೆಂದು ಕರೆಯಬಹುದೆನಿಸುತ್ತದೆ. ಕರ್ನಾಟಕ ಕಲೆ ಪೂರ್ಣರೂಪದಲ್ಲಿ ಪ್ರಕಟಗೊಂಡದ್ದು, ಆಳ ವೈಶಾಲ್ಯಗಳೆರಡನ್ನೂ ಪಡೆದುಕೊಂಡದ್ದು ಚಾಲುಕ್ಯರ ಕಾಲದಲ್ಲಿ. ವಾಸ್ತು ಶಿಲ್ಪಾದಿ ಲಲಿತಕಲೆಗಳ ಪ್ರಥಮ ವ್ಯಾಪಕಕೇಂದ್ರವೇ ಇದು. ಗುಹಾಂತರ್ದೇವಾಲಯಗಳ ಮುಂದಿನ ವಿಕಾಸದಲ್ಲಿ ಕಟ್ಟಡ ದೇವಾಲಯಗಳಾದರೂ ಇವೆರಡರ ಒಟ್ಟು ಕೆಲಸವನ್ನು ಇಲ್ಲಿ ಕಾಣಬಹುದು. ಸಂಯೋಜನ ಕುಶಲತೆ, ತಾಂತ್ರಿಕಸಿದ್ಧಿ, ನಿರ್ಮಾಣನೈಪುಣ್ಯ ಇವು ಮುಂದಿನ ಕಾಲಕ್ಕೆ ಮಾದರಿಯಾದವು. ರಾಷ್ಟ್ರಕೂಟರ ಕಾಲದಲ್ಲಿ ಚಾಲುಕ್ಯರಿಗಿಂತ ಭಿನ್ನವಾದ ಅಥವಾ ವಿಕಾಸಶೀಲ ಕಲೆಯೇನೂ ಕಾಣಬರದೆ, ಹಿಂದಿನದನ್ನೇ ಸಮರ್ಥವಾಗಿ ಮುಂದುವರಿಸಿರುವುದು ಕಾಣುತ್ತದೆ. ಇದನ್ನು ಹಿಂದಿನದರ ಜೊತೆಯಲ್ಲಿಯೇ ಸೇರಿಸಿಬಿಡಬಹುದು. ವಾಸ್ತುವಿನ ದೃಷ್ಟಿಯಿಂದ ರಾಷ್ಟ್ರಕೂಟರ ಕಾಲದಲ್ಲಿ ಎಲ್ಲೋರದ ಕೈಲಾಸ ದೇವಾಲಯವೊಂದನ್ನು ಬಿಟ್ಟರೆ ಅಂತಹ ಬಹುದೊಡ್ಡ ಸಾಧನೆಯಿಲ್ಲ. ಆದರೆ ಶಿಲ್ಪ ಮತ್ತು ಚಿತ್ರಕಲೆಗಳಲ್ಲಿ ಗಮನಾರ್ಹ ಸಿದ್ಧಿಯನ್ನು ಈ ಕಾಲದಲ್ಲಿ ಕಾಣುತ್ತೇವೆ. ಪ್ರಸ್ತುತ ಕಾಲಮಾನದಲ್ಲಿ ಸಂಗೀತ ಮತ್ತು ನೃತ್ಯವನ್ನು ಕುರಿತಂತೆ ಸಿಗುವ ಆಧಾರಗಳು ತುಂಬ ಕಡಿಮೆ.

ಕಲೆಯ ಚಾಲನಶಕ್ತಿಯಾದುದು ಧರ್ಮವೆಂದೇ ಹೇಳಬೇಕು. ಪ್ರಾಚೀನ ಕರ್ನಾಟಕದಲ್ಲಿ ಮೊದಲು ಬೌದ್ಧ ಧರ್ಮವೂ ನಂತರ ವೈದಿಕ ಜೈನಧರ್ಮಗಳೂ ಈ ಪಾತ್ರವನ್ನು ವಹಿಸಿರುವಂತೆ ಕಾಣಬರುತ್ತದೆ. ಬೌದ್ಧಧರ್ಮದ ಕಾಲದಲ್ಲಿ ಬುದ್ಧನ ಪರವಾದ ಚಟುವಟಿಕೆಗಳೇ ಪ್ರಧಾನವಾದರೆ, ವೈದಿಕ ಧರ್ಮದ ಕಾಲದಲ್ಲಿ ಮಹಾಭಾರತ, ರಾಮಾಯಣ, ಭಾಗವತ, ಪುರಾಣಾದಿ ಕೃತಿಗಳ ಚಿತ್ರಗಳೇ ಹೆಚ್ಚು ಕಾಣಬರುತ್ತವೆ. ಕರ್ನಾಟಕದಲ್ಲಿ ಕ್ರಿ.ಶ. ೪–೫ನೆಯ ಶತಮಾನದವರೆಗೆ ಬೌದ್ಧಕಲೆಯೇ ಪ್ರಧಾನವಾಗಿದ್ದಿರಬೇಕೆಂದು ತೋರುತ್ತದೆ. ವೈದಿಕಶ್ರದ್ಧೆ ಕೆಲವು ರಾಜರಿಂದ ಈ ಕಾಲದಲ್ಲಿಯೇ ಪೋಷಿತವಾಗಿದ್ದರೂ ಅದು ಪುನರುಜ್ಜೀವನಗೊಂಡದ್ದು ಚಾಲುಕ್ಯರ ಕಾಲದಲ್ಲಿ, ಕ್ರಿ.ಶ. ೬ನೆಯ ಶತಮಾನದಲ್ಲಿ. ಚಾಲುಕ್ಯರು ಬಾದಾಮಿ, ಐಹೊಳೆ, ಪಟ್ಟದಕಲ್ಲುಗಳಲ್ಲಿ ನಿರ್ಮಿಸಿರುವ ಗುಹಾಲಯಗಳೂ ದೇವಾಲಯಗಳೂ ಅವರ ಅನನ್ಯ ವೈದಿಕ ಸ್ಮಾರಕಗಳಾಗಿವೆ. ಆದರೆ ಇವರು ಬೌದ್ಧಕಲೆಯನ್ನು ಪೂರ್ಣವಾಗಿ ಹಿಂದಟ್ಟಿದರೆಂದು ಅರ್ಥವಲ್ಲ; ಈ ದೃಷ್ಟಿ

ಯಿಂದ ಅವರು ಪರಮತಸಹಿಷ್ಣುಗಳು. ಆದ್ದರಿಂದ ಇವರ ಕಾಲದಲ್ಲೂ ಬೌದ್ಧ ಕಲಾ ನಿರ್ಮಾಣ ಮುಂದುವರಿಯಲು ಅವಕಾಶವಾಯಿತು. ಆದರೆ ಈ ಪರಿಸ್ಥಿತಿ ಮುಂದುವರಿಯಿತೆನ್ನುವಂತಿಲ್ಲ; ರಾಷ್ಟ್ರಕೂಟರ ಕಾಲದಲ್ಲಿ ಆಕ್ರಮಣಶೀಲ ಧಾರ್ಮಿಕ ಪ್ರವೃತ್ತಿ ಕಾಣಿಸಿಕೊಂಡಂತೆ ತೋರುತ್ತದೆ. ಬೌದ್ಧಧರ್ಮದ ವಿರುದ್ಧ ವೈದಿಕಶ್ರದ್ಧೆ ಹೋರಾಟಕ್ಕೆ ನಿಂತಂತೆ ಕಾಣುತ್ತದೆ. ಈ ಮೊದಲು ಬೌದ್ಧವಿಹಾರವಾಗಿದ್ದು, ತರುವಾಯ ವೈದಿಕ ದೇವಾಲಯವಾಗಿ ಮಾರ್ಪಾಟಾದ ಎಲ್ಲೋರದ ೧೫ನೆಯ 'ದಶಾವತಾರ' ಗುಹೆಯ ನಿದರ್ಶನವನ್ನಿಲ್ಲಿ ನೆನೆಯಬಹುದು. ಅದರಿಂದ ಕಲೆಯನ್ನು ಧರ್ಮ ನಿಯಂತ್ರಿಸುತ್ತಿತ್ತು ಎಂಬುದನ್ನು ಮನಗಾಣಬಹುದು.

ಒಟ್ಟಿನಲ್ಲಿ ಹೇಳುವುದಾದರೆ, ಕರ್ಣಾಟಕ ಕಲೆಗಳ ಇತಿಹಾಸದಲ್ಲಿ ಈ ಅವಧಿ ಮೊದಲ ಮೆಟ್ಟಿಲು. ಕಲೆಗಳಲ್ಲಿ ಕರ್ಣಾಟಕ ಶೈಲಿ ಎಂಬುದು ತಲೆಯೆತ್ತಿದ್ದು ಈ ಕಾಲದಲ್ಲಿ. ದೇವಾಲಯಗಳ ಸುತ್ತಲೂ ವಿಗ್ರಹಗಳನ್ನು ಕೆತ್ತುವುದು ಇದರ ಒಂದು ವೈಶಿಷ್ಟ್ಯ. ಪ್ರಾಯಶಃ ಇದು ಗುಪ್ತ ಕಾಲದ ತರುವಾಯ, ಕರ್ಣಾಟಕದ ಚಾಲುಕ್ಯರಲ್ಲಿ ಪ್ರಕಟವಾಯಿತು. ಈ ವಿಶೇಷ ಶೈಲಿಯಲ್ಲಿ ಔತ್ತರೇಯ ಮತ್ತು ದಾಕ್ಷಿಣಾತ್ಯ ಶೈಲಿಗಳ ಸ್ವತಂತ್ರ ಪ್ರಯೋಗಗಳನ್ನೂ ಮಿಶ್ರವನ್ನೂ ಕಾಣುತ್ತೇವೆ. ಈ ದೃಷ್ಟಿಯಿಂದ ಏಕತಾನತೆಯನ್ನು ಕಳೆದುಕೊಂಡು ವೈವಿಧ್ಯವನ್ನು ಪಡೆದುಕೊಂಡದ್ದು ಕರ್ಣಾಟಕ ಕಲೆಯ ಒಂದು ಗಮನಾರ್ಹ ಅಂಶ. ಆದರೆ ಈ ವೈವಿಧ್ಯ ಕನ್ನಡಿಗರ ವೈಯಕ್ತಿಕತೆಗೆ ಭಂಗತರಲಿಲ್ಲ. ಕರ್ಣಾಟಕ ಕಲೆಗಳು ಆ ಜನರ ಅಪೂರ್ವ ಸೃಷ್ಟ್ಯಾತ್ಮಕ ಶಕ್ತಿಯ ಪ್ರತೀಕವಾಗಿ, ಅವರ ಆಶೆ ಆಶೋತ್ತರಗಳ, ಅಭಿರುಚಿ ಸಂಪನ್ನತೆಗಳ ಅಭಿವ್ಯಕ್ತಿಯೆನಿಸಿತು.

## ಅಡಿಟಿಪ್ಪಣಿಗಳು

1 ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ, ೧, ಮೈಸೂರು, ೧೯೭೪, ಪು. ೨೯೦-೨೯೨.

2 ಆದಿಶಿಲಾಯುಗದ ಅಂತ್ಯಕಾಲಕ್ಕೆ ಸೇರಿದ ಯೂರೋಪಿನ ಕೆಲವು ಗುಹಾಚಿತ್ರಗಳಲ್ಲಿ ಕೈಗಳಿಗೆ ಬಣ್ಣ ಬಳಿದುಕೊಂಡು ಗೋಡೆಯ ಮೇಲೆ ಒತ್ತಿರುವುದು ಕಂಡುಬಂದಿದೆ. ಇಂದಿಗೂ ನಮ್ಮ ದೇಶದಲ್ಲಿ ಅದೇ ರೀತಿಯಲ್ಲಿ ಹಸ್ತಮುದ್ರೆಯನ್ನು ಗೋಡೆಗಳ ಮೇಲೆ ಒತ್ತುವ ಸಂಪ್ರದಾಯವಿದೆ. ಅಲ್ಲದೆ ಕೆಲವು ಐರೋಪ್ಯ ಹಸ್ತಮುದ್ರೆಗಳಲ್ಲಿ ನಾಲ್ಕೇ ಬೆರಳುಗಳು ಮೂಡಿರುವುದನ್ನು ಪುರಾತತ್ತ್ವಜ್ಞರು ಗುರುತಿಸಿದ್ದಾರೆ. ಆಫ್ರಿಕಾದ ಕೆಲವು ಬುಡಕಟ್ಟಿನ ಜನ ದೇವರ ಪ್ರೀತ್ಯರ್ಥವಾಗಿ ಒಂದು ಬೆರಳನ್ನು ಕಡಿದುಕೊಳ್ಳುವುದು ಇಂದಿಗೂ ರೂಢಿಯಲ್ಲಿದೆ. ಕರ್ಣಾಟಕದಲ್ಲೂ ಇಂಥ ಪದ್ಧತಿ ಇತ್ತೆಂಬುದು ಸಂಜಾನ್ ತಾಮ್ರಶಾಸನದಿಂದ ಗೊತ್ತಾಗುತ್ತದೆ. ನೃಪತುಂಗ ಜನರಿಗೆ ಒದಗಿದ್ದ ಯಾವುದೋ ಕೇಡಿನ ನಿವಾರಣಾರ್ಥವಾಗಿ ತನ್ನ ಕಿರುಬೆರಳನ್ನು ಮಹಾಲಕ್ಷ್ಮಿಗೆ ಒಪ್ಪಿಸಿದನು ಎಂದು ಆ ಶಾಸನದಲ್ಲಿ ಹೇಳಿದೆ.

ಧರ್ಮಾನಂದ ಕೊಸಾಂಬಿ ಎಂಬ ವಿದ್ವಾಂಸರು ಮಹಾರಾಷ್ಟ್ರದಲ್ಲಿರುವ ಪ್ರಾಗೈತಿಹಾಸಿಕ ನೆಲೆಗಳು ಮತ್ತು ಈಗ ಪ್ರಸಿದ್ಧವಾದ ಹಲವು ದೇವಕ್ಷೇತ್ರಗಳು ಪರಸ್ಪರವಾಗಿ ಸಮೀಪ

ದಲ್ಲಿರುವ ಅಂಶವನ್ನು ಗುರುತಿಸಿದ್ದಾರೆ. ಇಂಥ ತಾಣಗಳ ಪವಿತ್ರತೆಯ ಕಲ್ಪನೆ ಶಿಲಾಯುಗದ ಕಾಲದಿಂದಲೂ ಇದ್ದು, ಇಂದಿಗೂ ಮುಂದುವರಿದಿರಬಹುದು. ಕರ್ನಾಟಕದಲ್ಲಿ ಈ ರೀತಿಯ ಅಧ್ಯಯನ ಇನ್ನೂ ನಡೆಯಬೇಕಾಗಿದೆ. ನೋಡಿ: F. R. Allchin, *The Birth of Indian Civilization*, Hammondsworth, 1968, p. 308.

3 ಕಅಸಂ ಕಸಾಚ., ೧, ಪು. ೨೧೨-೨೧೪.

4 Allchin: op. cit., p. 298, 308.

5 H. D. Sankalia, *Pre-History and Proto-History of India and Pakistan*, Poona, 1974, pp. 535–37; Allchin: op. cit., p. 167, 311.

6 ಕೆಲವು ಪ್ರದೇಶಗಳಲ್ಲಿ ಇಂದಿಗೂ ರೂಢಿಯಲ್ಲಿರುವ ಮೃತಹಿರಿಯರ ಹೆಸರನ್ನು ನವಜಾತರಿಗೆ ಇಡುವ ಪದ್ಧತಿಗೆ ಇಂಥ ಹಿಂದಿನ ನಂಬಿಕೆಗಳೇ ಆಧಾರವಾಗಿರಬಹುದು.

7 Allchin: op. cit, pp. 262–64.

8 ಟಿ. ನರಸೀಪುರದ ಸುತ್ತಣ ಪ್ರದೇಶದಲ್ಲಿ ಕೊಂತಿಪೂಜೆ ಎಂಬ ಹಬ್ಬವನ್ನು ಗ್ರಾಮೀಣರು ಆಚರಿಸುತ್ತಾರೆ. ಅದರಲ್ಲಿ ಆ ಪ್ರದೇಶದಲ್ಲಿ ದೊರೆಯುವ ನವಶಿಲಾಯುಗೀನ ಕಲ್ಲುಕೊಡಲಿಗಳನ್ನೋ ಅಥವಾ ಅದೇ ಆಕಾರದ ಮಣ್ಣಿನ ಪ್ರತೀಕಗಳನ್ನೋ ಪೂಜಿಸುವ ರೂಢಿಯಿದೆ.

9 ಕಅಸಂ ಕಸಾಚ., ೧, ಪು. ೨೧೬.

10 ಈ ಸ್ಥಳದ ಸಮಾಧಿಗಳು ಕ್ರಿಸ್ತಶಕಾರಂಭದ ಆಸುಪಾಸಿನ ಕಾಲದ್ದು ಎಂದು ಇತರ ಮಾಹಿತಿಗಳಿಂದ ತರ್ಕಿಸಲಾಗಿದೆ.

11 ಇಂಗ್ಲೆಂಡ್‌ನ ಅವೆಬರಿ, ಫ್ರಾನ್ಸ್‌ನ ಕಾರ್ನಾಕ್ ಮತ್ತು ಇತರ ಸ್ಥಳಗಳಲ್ಲಿ ಸುಮಾರು ಇದೇ ರೀತಿಯ ರಚನೆಗಳಿದ್ದು ಅವುಗಳ ಬಗ್ಗೆ ನಡೆಸಿರುವ ಸಂಶೋಧನೆಗಳು ಈ ಅಂಶವನ್ನು ಹೊರತಂದಿವೆ. ಬೃಹತ್ ಶಿಲಾಸಮಾಧಿ ಸಂಸ್ಕೃತಿಗಳ ವಿವರಗಳಿಗೆ ನೋಡಿ: B. K. Gururaja Rao, *The Megalithic Culture in South India*, Mysore' 1972, pp. 137–80.

12 ಕರ್ನಾಟಕದ ಜನಪದ ಧರ್ಮದ ಬಗ್ಗೆ ಇವನ್ನು ನೋಡಬಹುದು: ಕನ್ನಡ ವಿಶ್ವಕೋಶ, ಸಂ. ೬; ೭, ಪು. ೬೮೫; ೮೦೪; ಎಸ್. ನಾಗರಾಜು, ಗ್ರಾಮದೇವತೆಗಳು ಮತ್ತು ಸಂಪ್ರದಾಯಗಳು—ಪಡಸಾವಳಿ ಗ್ರಾಮ, ಜಾನಪದ, ಸಂ. ೩, ಪು. ೭೩; ಮತಿಘಟ್ಟ ಕೃಷ್ಣಮೂರ್ತಿ, ಏಳುಕೊಳ್ಳದ ಎಲ್ಲಮ್ಮ, ಬೆಂಗಳೂರು, ೧೯೬೫.

13 Geiger, *Mahavaṃsa*, Ch. xii, 29, 37; *Dipavaṃsa*, viii, 5, 8.

14 *JRAS.*, 1898, 1890; *Milinda Pañho*, S. B. E. Series, p. 331; B. C. Law, *A History of Pali Literature*, pp. 560–62; Frauwallner, *The Earliest Vinaya Texts and Beginnings of Buddhist Literature*, Roma, 1956, p. 22.

15 ಎಂ. ಚಿದಾನಂದಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು, ೧೯೬೬. ಪು. ೧೧೪.

16 K. A. Nilakanta Sastri, *A Comprehensive History of India*, Calcutta, 1957, p. 742ff.

17 H. D. Sankalia and M. G. Dikshit: *The Excavations at Brahmapur, (Kolhapur)*, Poona, 1952.

18 *Indian Archaeology—A Review*, 1668–69, p. 17.

19 *KTA.*, p. 1017.

20 *Annual Report of Indian Epigraphy*, 1966–67, B. No. 238–41.

21 *EI.*, vii, p. 48.
22 *EI.*, xxxiv, p. 238.
23 Geiger, *Mahavamsa*, xxix, 42, p. 194; S. Nagaraju, Karnataka Contacts with Ceylon, *Srikanthika*, Mysore, 1973, p. 153.
24 R. Subrahmanyam, *Salihundam*, Hyderabad, 1964, p. 15.
25 ಕಅಸಂ ಕಸಾಚ., ೧, ಪು. ೧೬೦.
26 ಎಂ. ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೧೧೯.
27 *KTA.*, p. 1017. ಕ್ರಿಸ್ತಶಕದ ಆದಿ ಶತಮಾನಗಳ ಕಾಲದ ಎರಡು ಬುದ್ಧ ಶಿಲ್ಪಗಳು ಹೊನ್ನಾವರ ತಾಲ್ಲೂಕಿನ ಹೈಗುಂದ ಎಂಬಲ್ಲಿ ಬೆಳಕಿಗೆ ಬಂದಿವೆಯೆಂದು ಇತ್ತೀಚೆಗೆ ವರದಿಯಾಗಿದೆ (D.H. 21-4-75).
28 H. Sarkar, Some Aspects of Buddhist Monuments at Nagarjunakonda, *Ancient India*, No. 16, p. 65.
29 *Dipavamsa*, v, 39–48; *JRAS.*, 1891, p. 409; *JRAS.*, 1892, p. 1.
30 A. M. Sastry, *Some Aspects of Early Buddhism*, Varanasi, 1965, p. 52, 94.
31 N. Dutt. *Early Monastic Buddhism*, ii, p. 114.
32 H. Sarkar, op. cit., p. 69.
33 Frauwallner, op. cit., p. 20.
34 H. Sarkar, op. cit., p. 69.
35 ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೧೧೪.
36 *EC.*, x, Mulbagal, 157, c. 338 A.D.
37 *EC.*, xvi, Tumkur, 78, c. 400 A.D.
38 *EI.*, xxiii, p. 75.
39 G. M. Moraes, *Kadamba Kula*, Bombay, 1931, p. 256.
40 ೭ನೆಯ ಶತಮಾನದ ಹೊತ್ತಿಗೆ ಭಾರತದ ಇತರೆಡೆಗಳಲ್ಲಿ ವಜ್ರಯಾನ ಇತ್ಯಾದಿ ಬೌದ್ಧ ತಾಂತ್ರಿಕ ಪಂಥಗಳು ಇದ್ದರೂ, ೮೫೦ರವರೆಗಿನ ಕರ್ಣಾಟಕದಲ್ಲಿ ಅವುಗಳ ಇರುವಿಕೆಗೆ ಮಾಹಿತಿಗಳು ದೊರಕಿಲ್ಲ.
41 ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೬೯-೭೦.
42 *EC.*, ii, Mysore, 1973, No. 1.
43 ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೭೧.
44 *EC.*, ii, 1973, ಶಾಸನ ೩೧ (ಸು. ೬೫೦), ೪೦ (೧೧೬೩), ೬೬ (೧೧೦೦), ೬೭ (೧೧೩೯); Vol. iii, ಶ್ರೀರಂಗಪಟ್ಟಣ ೧೪೭-೧೪೮ (ಸು. ೯೦೦) ಇತ್ಯಾದಿ.
45 *EC.*, ii, 1889, Intro.
46 *EC.*, ii, 1973, Intro.
47 ಈ ಚರ್ಚೆಗಳಿಗೆ ನೋಡಿ: R. Narasimhachar (Ed), *EC.*, ii, Intro. pp. 35-42; *EC.*, ii, 1973, Intro. p. xlii; ಎಂ. ಗೋವಿಂದ ಪೈ, 'ಕರ್ಣಾಟಕಕ್ಕೆ ಜೈನ ಧರ್ಮದ ಆಗಮನ', ಕಸಾಪ., xxvi, i, ii; ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೭೧; ಎಂ. ಡಿ. ವಸಂತರಾಜ್, ಸನ್ಮತಿ ಶ್ರೀವಿಹಾರ, ಮೈಸೂರು, ೧೯೭೧.
48 P. B. Desai, *Jainism in South India*, p. 1–2.
49 'ಕರ್ಣಾಟಕದ ಪರಂಪರೆ', ೧, ಪು. ೧೯೫.
50 *EC.*, xx, p. 79.
51 *The Age of Imperial Unity*. p. 225.

52 ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೨೦.
53 B. A. Saletore, *Medieval Jainism*, p. 2.
54 *EC*., iv, Ch. 51, 151, 153 ; v, Bl. 123-24 ; vii, Sh. 4, 57, 58 ; ix, Bn. 82; xii, Tm. 38, Gb. 5 etc.
55 *EC*., ii, 1973, Intro. p. xlvi.
56 Ibid., p. xlv.
57 *MAR*., 1923, p. 10-11 ; ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೨೩.
58 *IA*., xx, p. 22.
59 *IA*., vi, p. 24.
60 ರಾ. ಸ್ವಾ. ಪಂಚಮುಖಿ, ಕರ್ನಾಟಕದ ಇತಿಹಾಸ, ಪು. ೧೩೩.
61 *IA*., vi, p. 28, 29.
62 B. R. Gopal, Gudnapur Inscription of Kadamba Ravivarma, *Srikanthika*, Mysore, 1973, p. 61.
63–5 *IA*., vi, p. 30 ; 31 ; 24.
66 Moraes, op. cit., p. 252.
67 *EI*., xxi, p. 204.
68 *EI*., xxxii, p. 317.
69 *South Indian Inscriptions*, xx, Nos. 3, 4, 5, 6, 7.
70 Ibid., No. 6.
71 *Karnatak Inscriptions*, i, No. 3.
72 ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೨೮.
73 P. B. Desai, op. cit., p. 374.
74 ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೨೨.
75 *EC*., vii, Sh. 4.
76 *EC*., vi, Mudagere, 36.
77 *MAR*., 1942, p. 13.
78 ನೋಡಿ : ಅಡಿಟಿಪ್ಪಣಿ ೭೬.
79–80 *EC*., xii, Madhugiri 110.
81–82 *MAR*., 1942, p. 131.
83 *EC*., II, 1973, Intro. p. xxii ; ಗಂಗ ಅರಸರೇ ಹೊರಡಿಸಿದ ಇಲ್ಲಿನ ಅತಿಪ್ರಾಚೀನ ಶಾಸನ ಕ್ರಿ.ಶ. ೪೪೪ರದು.
84 ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೨೯.
85 *EC*., XII, Gubbi 61.
86 ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೨೯.
87 'ಕರ್ನಾಟಕದ ಪರಂಪರೆ', ಪು. ೩೯೦.
88 A. S. Altekar, *Rashtrakutas and Their Times*, p. 312.
89 *IA*., XII, p. 216–18.
90 *JBBRAS*., xxii, p. 85 ; Altekar, op. cit., p. 312.
91 *IA*., VI, p. 103.
92 *IA*., IV, p. 140.
93 *IA*., VII, p. 105.
94 *EI*., VI, p. 29.
95 Altekar, op. cit., p. 312.

96 *EI.*, XX, p. 1.
97 *JBBRAS.*, X, p. 204.
98 ಪಂಚಮುಖಿ, ಪೂರ್ವೋಕ್ತ, ಪು. ೩೦೨.
99 *MAR.*, 1927, p. 114.
100 ಪಂಚಮುಖಿ, ಪೂರ್ವೋಕ್ತ, ಪು. ೩೧೫.
101 ನೋಡಿ : ಇದೇ ಸಂಪುಟದಲ್ಲಿ ಪು. ೨೪೦, ೨೪೮.
102_3 ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೬೯ ; ೭೩
104 ನೋಡಿ : ಅಡಿಟಿಪ್ಪಣಿ ೬೦.
105 ವಿವರಗಳಿಗೆ ನೋಡಿ : ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೭೪.
106 *IA.*, VI, p. 24. ಇದೇ ಶಾಸನದಲ್ಲಿ 'ಕೂರ್ಚಕ'ದ ಪ್ರಸ್ತಾಪವೂ ಇದೆ. ಇದು ಶ್ವೇತಾಂಬರ ವಿರಬಹುದು.
107_8 ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೮೬ ; ೮೭.
109–15 *EC.*, II, 1973, No. 91 ; 111 ; 118, 121, 124, 129, 132 ; 112, 117 ; 112; 134 ; 115.
116 *SII.*, Vol. XX, No. 4 (683 A.D.), No. 5 (723 A.D.) and No. 6 (730 A.D.).
117 Ibid., No. 6, 7 (735 A.D.).
118 ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೮೭.
119 *EC.*, II, 1973, No. 1.
120 ನೋಡಿ : ಅ.ಟಿ. ೧೧೬.
121 *EC.*, II, 1973, No. 25.
122-24 ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೯೩ ; ೯೪-೯೫ ; ೯೬-೯೮.
125 ನೋಡಿ : ಅ.ಟಿ. ೬೦.
126 *IA.*, VI, p. 30.
127 *KI.*, I, No. 3.
128 ನೋಡಿ : ಅ.ಟಿ. ೬೯.
129 *IA.*, VI, p. 25.
130 Śrikanthikā, p. 61 ; ಜೈನಧರ್ಮದ ಬಗೆಗೆ ವಿವರಗಳಿಗೆ ನೋಡಿ : ಚಿದಾನಂದ ಮೂರ್ತಿ, ಪೂರ್ವೋಕ್ತ, ಪು. ೬೭-೧೦೭ ; 'ಕರ್ಣಾಟಕದ ಪರಂಪರೆ', ಪು. ೧೯೫-೨೦೩.
131 ಪಂಚಮುಖಿ, 'ಕರ್ನಾಟಕದ ಇತಿಹಾಸ', ಭಾಗ ೨, ಪು. ೪೭.
132 *MAR.*, 1945, p. 110.
133 ಪಂಚಮುಖಿ, ಪೂರ್ವೋಕ್ತ, ಭಾಗ ೨, ಪು. ೪೮.
134 *EC.*, VII, Shikaripur, 176.
135 ದುಮ್ಮ್ರಾಯ ದತ್ತಿ ತಾಮ್ರಪಟ, *MAR.*, 1943, p. 48.
136 ಬೆಣ್ಣೂರು ಮಠ ತಾಮ್ರಪಟ, *EC.*, V, Bl. 245 ; ತಂಗಳಿ ತಾಮ್ರಪಟ, *EC.*, VI, Kd. 162 etc.
137 ಉದಾ : ದುರ್ವಿನೀತನ ಪೆಣ್ಣಊರು ದತ್ತಿಶಾಸನ, *MAR.*, 1942, p. 131. ಅಶ್ವಮೇಧ ವನ್ನು ಮಾಡುವ ಮೊದಲು ಯಜ್ಞಾಶ್ವ ಸಂಚರಿಸುವ ಪ್ರದೇಶದವರೆಲ್ಲಾ ಯಜ್ಞ ಮಾಡು ವವನ ಅಧಿಪತ್ಯವನ್ನು ಒಪ್ಪಿಕೊಳ್ಳಬೇಕಾಗಿತ್ತು. ಹಾಗಿಲ್ಲದಿದ್ದಲ್ಲಿ ಇವನು ಅವರ ಮೇಲೆ ಯುದ್ಧಮಾಡಿ ಬಗ್ಗಿಸಬೇಕಾಗಿತ್ತು. ಅದ್ದರಿಂದ ಬಲಿಷ್ಠ ರಾಜರಷ್ಟೇ ಈ ಯಜ್ಞ ಮಾಡಬಲ್ಲವ ರಾಗಿದ್ದರು. ಸಹಜವಾಗಿ ಈ ಯಜ್ಞ ಸಾಧನೆ ಹೆಮ್ಮೆಯ ವಿಷಯ.

138 *KI.*, II, No. 2.
139 ನೋಡಿ : ಅ.ಟಿ. ೧೩೫.
140 *EC.*, V, Belur 245.
141 ಇಮ್ಮಡಿ ಪುಲಿಕೇಶಿಯ ಲೋಹಣೇರ ತಾಮ್ರಪಟ, *EI.*, XXVII, p. 131.
142 ಗಂಗ ಇಮ್ಮಡಿ ಮಾಧವನ ಪೆನುಗೊಂಡೆ ಶಾಸನ, *EI.*, XIV, p.
143 ಚಳುಕ್ಯ ವಿನಯಾದಿತ್ಯನ ಸೊರಬ ತಾಮ್ರಪಟ, *EC.*, Sb. 571.
144 ರಾಷ್ಟ್ರಕೂಟ ಅವಿಧೇಯನ ಪಾಂಡುರಂಗಪಲ್ಲಿ ಶಾಸನ, *MAR.*, 1929, p. 197.
145 ಗಂಗಶ್ರೀಪುರುಷನ ಬರದೂರು ದತ್ತಿಶಾಸನ, *MAR.*, 1944, p. 60.
146 ಗಂಗ ರಾಚಮಲ್ಲನ ಪೆರ್ಜ್ಜರಜ್ಜು ದತ್ತಿಶಾಸನ, *MAR.*, 1942, p. 75.
147 Nilakanta Sastri (ed), op. cit., p. 378ff.
148 J. Burgess, *Report of the Ellora Cave Temples and Brahmanical and Jaina Caves in Western India*, London 1883, p. 60.
149 *KTA.*, p. 106.
150 Nilakanta Sastry, op. cit., p. 320–21.
151 J. Burgess, *Report on the Buddhist Cave Temples and Their Inscriptions* ASWI., 4, London, 1883, p. 108.
152 Nilakanta Sastri, op. cit., p. 551.
153 *EC.*, VIII, Sb. 33; V, Bl. 121, 245; *IA.*, VI, p. 25, 30, *MAR.*, 1943, p. 48, etc.
154 *EC.*, VII, Shikaripur, 176.
155 *MAR.*, 1936, p. 72.
156 *MAR.*, 1911, p. 33.
157 ನೋಡಿ : ಅ.ಟಿ. ೧೫೫.
158 *EC.*, V, Belur 121.
159 *EC.*, IV Hunasur, 18.
160 *EC.*, Kadur, 62.
161 ನೋಡಿ : ಅ.ಟಿ. 62.
162 ಕನ್ನಡ ವಿಶ್ವಕೋಶ, ಸಂ. ೩, ಪು. ೬೬೪-೬೬.
163 *EHD.*, p. 243.
164 'ಕನ್ನಡ ವಿಶ್ವಕೋಶ', ೭, ಪು. ೩೨೪ಮುಂ.
165 ಬಾದಾಮಿಯ ೧ನೆಯ ಗುಹೆ, ಐಹೊಳೆಯ ರಾವಳಫಡಿ, ಹುಚ್ಚಮಲ್ಲಿಗುಡಿ, ಕೊಂತಿಗುಡಿ ಪಟ್ಟದಕಲ್ಲಿನ ವಿರೂಪಾಕ್ಷಗುಡಿ ಮೊದಲಾದೆಡೆಗಳಲ್ಲಿರುವ ವೈವಿಧ್ಯಮಯ ನಟರಾಜ ವಿಗ್ರಹಗಳು ನಟರಾಜನ ಕಲ್ಪನೆ ಆ ಕಾಲದಲ್ಲಿದ್ದ ಬಗ್ಗೆ ಸೂಚನೆ ನೀಡುತ್ತವೆ.
166 ನೋಡಿ : ಇದೇ ಸಂಪುಟದಲ್ಲಿ ಪು. ೩೫೧.
167 M. Hanumantha Rao and S. Nagaraju, *Excavations at Hemmige*, Mysore, 1974, p. 9.
168 ಪಂಚಮುಖಿ, ಪೂರ್ವೋಕ್ತ, ಭಾಗ ೨, ಪು. ೬೨.
169 *EC.*, V, Belur 245.
170 ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೧೩೭ ; ಪಂಚಮುಖಿ, ಪೂರ್ವೋಕ್ತ, ಭಾಗ ೨, ಪು. ೬೩.
171 *EC.*, VI, Kp. 39.

172 ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೧೩೯.
173 ಪಂಚಮುಖಿ, ಪೂರ್ವೋಕ್ತ, ಭಾಗ ೨, ಪು. ೬೪.
174 ಈ ಪಂಥದ ಬಗ್ಗೆ ವಿವರಗಳಿಗೆ ನೋಡಿ: ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೧೩೩-೧೫೧.
175 ಕದಂಬ ವಿಷ್ಣುವರ್ಮನ ತಾಮ್ರಪಟ (ಕ್ರಿ.ಶ. ಸು. ೪೫೦), *EC.*, VI, Kd. 162.
176 ಕದಂಬ ಕೃಷ್ಣವರ್ಮನ ಶಾಸನ ಕ್ರಿ.ಶ. (ಸು. ೫೦೦), *KI.*, II, No. 1.
177-78 ರವಿವರ್ಮನ ದುಮ್ಮಾರ್ಯ ದತ್ತಿಶಾಸನ *MAR.*, 1943, p. 48.
179 ಹರಿವರ್ಮನ ಹಲಸಿ ತಾಮ್ರಪಟ (೫ನೆಯ ಶ.), *IA.*, VI, p. 31.
180 ರವಿವರ್ಮನ ಹಲಸಿ ತಾಮ್ರಪಟ (೫ನೆಯ ಶ ), *IA.*, VI, p. 25.
181 Ex : *EC.*, VIII, Sb. 33, *EC.*, V, Bl. 245, *MAR.*, 1943, p. 48. etc.
182 ಪಂಚಮುಖಿ, ಪೂರ್ವೋಕ್ತ, ಭಾಗ ೨, ಪು. ೬೭.
183-84 ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೧೭೫.
185 ಇಲ್ಲಿ ಶಿಷ್ಟ ಅಥವಾ ಗ್ರಾಂಥಿಕ ಸಾಹಿತ್ಯವನ್ನಷ್ಟೇ ಗಮನದಲ್ಲಿರಿಸಿಕೊಳ್ಳಲಾಗಿದೆ.
186-88 ಕಅಸಂ ಕಸಾಚ., ಸಂ. ೧, ಪು. ೨೮೯-೩೦೨ ; ೩೦೧-೩೦೪ ; ೩೦೩.
189 ಕ್ರಿ.ಪೂ. ೩-೨ನೆಯ ಶತಮಾನಗಳ ಹೊತ್ತಿಗೆ ಉತ್ತರ ಭಾರತದಲ್ಲಿ ಪ್ರಚಲಿತವಿದ್ದ ರೀತಿಯ ಮುದ್ರಾಂಕಿತ ನಾಣ್ಯಗಳು ಕರ್ನಾಟಕದಲ್ಲೂ ಉಪಯೋಗದಲ್ಲಿದ್ದುದಕ್ಕೆ ಗುಲ್ಬರ್ಗ ಭಾಗದಲ್ಲಿ ದೊರಕಿದ ಒಂದು ನಾಣ್ಯರಾಶಿ ಸಾಕ್ಷ್ಯವಾಗಿದೆ. ನೋಡಿ: 'ಕನ್ನಡ ವಿಶ್ವಕೋಶ', ಸಂ. ೬, ಪು. ೪೧೩.
190 ಕನ್ನಡ ಸಾಹಿತ್ಯವೂ ಈಗ ಹುಟ್ಟಿರಬಹುದೇ ಎಂಬುದು ಬೇರೆಯ ಪ್ರಶ್ನೆ.
191–92 *Ancient India*, No. 4, p. 180 ; No. 13, p. 4.
193 D. C. Sirkar, *Inscriptions of Aśoka*, Delhi, 1967, p. 32.
194 ಅ.ಟಿ. ೧೮೯.
195–96 *Ancient India*, No. 4, p. 180.
197 *Indian Archaeology—A Review*, 1970–71 (Cyclostyled), p. I–55.
198 ಇದರ ವಿಷಯ ಇನ್ನೂ ಪ್ರಕಟವಾಗಿಲ್ಲ.
199 'ಕನ್ನಡ ವಿಶ್ವಕೋಶ', ಸಂ. 6, ಪು. ೪೧೩.
200 *Ancient India*, No. 13, p. 7.
201 *Ancient India*, No. 4, p. 309, No. 5, p. 103.
202 K. A. Nilakanta Sastri, op. cit., p. 437.
203 M. Seshadri, Roman Contacts with South India *Archaeology*, XIX, No. 4, p. 244.
204 *Karnataka through the Ages*, p. 108–109.
205 Nilakanta Sastri, op. cit., p. 464.
206 *Karnataka through the Ages*, p. 108.
207 ನೋಡಿ: ಅ.ಟಿ. ೧೫೧, ಅದೇ, ಬೇಡ್ಸಾ ೧, ಕಾರ್ಲೆ ೧, ಕುಡ ೧೯, ೨೫, ೨೬, ೫.
208 Nilakanta Sastri, op. cit., p. 314.
209–10 *Karnataka through the Ages*, p. 109.
211 ಎಸ್. ವಿ. ಪರಮೇಶ್ವರಭಟ್ಟ, ಗಾಥಾಸಪ್ತಶತಿ.
212 ಕಅಸಂ ಕಸಾಚ., ಸಂ. ೧, ಪು. ೩೦೦-೬೪.

213 ಪಂಚಮುಖಿ, ಪೂರ್ವೋಕ್ತ, ಪು. ೧೭೬.
214 ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೩೬೪.
215 ಪಂಚಮುಖಿ, ಪೂರ್ವೋಕ್ತ, ಭಾಗ ೨, ಪು. ೧೭೬.
216 *EC.*, XIV, Yd. 175.
217 Altekar, op. cit., p. 354.
218 ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೪೬೪. "ಇದಾನ್ ಕೊಳೆ ಈರೆಟ್ಟಿತ್ತಜಿಳುಂ ಒಕ್ಕಲ್ತಸಂ ಕೆಯ್ವೊನಾ ವಿತ್ತಿದಲ್ಲಿ ವೆಳೆಯಾದೆ ಕೆಡುಗೆ ಇದಾನ್ ಕಾದು ಸಲ್ವೊನ್ ಪರಮ ಕಲ್ಯಾಣತೀರ್ಥಂಗಳ್ ಅಪ್ಪಾರ್, ನೆಲನುಂ ವೆಳಗೆ..." *EC.*, VII, Sk. 154.
219 *MAR.*, 1929, p. 50.
220 *Srikanthika*, p. 61.
221 *EC.*, VII, Sk. 176.
222 ಪಂಚಮುಖಿ, ಪೂರ್ವೋಕ್ತ, ಭಾಗ ೨, ಪು. ೧೭೮.
223 *MAR.*, 1942, p. 208.
224 ನೋಡಿ : ಅ.ಟ. ೨೨೨.
225 ನೋಡಿ : ಅಟ. ೨೧೬.
226 *MAR.*, 1940, No. 100.
227 ಪಂಚಮುಖಿ, ಪೂರ್ವೋಕ್ತ, ಭಾಗ ೨, ಪು. ೧೮೭.
228-30 ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೪೪೧ ; ೪೪೪.
231 *MAR.*, 1942, p. 208.
232 ಪಂಚಮುಖಿ, ಪೂರ್ವೋಕ್ತ, ಭಾಗ ೨, ಪು. ೧೮೦.
233 ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೩೮೨.
234 *EC.*, VI, Kd. 145. ಹಾಗೂ ನೋಡಿ: *IA.*, VIII, p. 285 (c. 735 A.D.).
235 ಪಂಚಮುಖಿ, ಪೂರ್ವೋಕ್ತ, ಭಾಗ ೨, ಪು. ೧೮೫.
236 Altekar, op. cit., p. 360.
237-38 ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೩೮೮.
239 *KTA.*, p. 225.
240 ಎಸ್. ನಾಗರಾಜು, ಆಗ್ನೇಯ ಏಷ್ಯಾದೊಡನೆ ಕರ್ನಾಟಕದ ಸಾಂಸ್ಕೃತಿಕ ಸಂಬಂಧ, ಪ್ರಬುದ್ಧ ಕರ್ನಾಟಕ, ೫೧-೩.
241 *EC.*, VI, Kadur 162.
242 ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೩೯೫.
243 Altekar, op. cit., p. 364.
244 *South Indian Inscriptions*, IX, No. 53.
245 A. V. Narasimha Murthy, *The Coins of Karnataka*, Mysore, 1975.
246 *EC.*, VIII, Sb. 34 *IA.*, VI, p. 25. ಇತ್ಯಾದಿ.
247 *EC.*, VI, Kadur 162.
248 *IA.*, VI, p. 31.
249 Altekar, op. cit., p. 152; ಪಂಚಮುಖಿ, ಪೂರ್ವೋಕ್ತ, ಭಾಗ ೨, ಪು. ೧೨-೧೭.
250 *MAR.*, 1909, p. 12, Ainuli Plates (749 A.D.); *EI.*, V, p. 200, Vakkaleri Plates (757 A.D.).
251 *IA.*, VI, p. 363.
252 Yazdani (ed), *The Early History of Deccan*, London, 1960, p. 234.

253 M. V. Krishna Rao, *The Gangas of Talkad*, Madras, 1936, p. 129.
254 ಪಂಚಮುಖಿ, ಪೂರ್ವೋಕ್ತ, ಭಾಗ ೨, ಪು. ೧೭.
255 *EI.*, VI, p. 1.
256 ಪಿ. ಬಿ. ದೇಸಾಯಿಯವರ ಲೇಖನ, ಜಯಕರ್ನಾಟಕ, ಸಂ. ೧೫.
257 Yazdani, op. cit., p. 236.
258 ಪಂಚಮುಖಿ, ಪೂರ್ವೋಕ್ತ, ಭಾಗ ೨, ಪು. ೬.
259 *EC.*, VI, Kadur 162.
260 *MAR.*, 1936, p. 72.
261 ನೆಲಮಂಗಲ ಲಕ್ಷ್ಮೀನಾರಾಯಣರಾಯರು ಮತ್ತು ಆರ್. ಎಸ್. ಪಂಚಮುಖಿ, 'ಕರ್ನಾಟಕದ ಅರಸು ಮನೆತನಗಳು', ಧಾರವಾಡ, ೧೯೪೬, ಪು. ೭೯.
262 *IA.*, VI, p. 88.
263 *IA.*, XIX, p. 146.
264 *IA.*, VII, p. 300.
265 ಲಕ್ಷ್ಮೀನಾರಾಯಣರಾಯರು ಮತ್ತು ಪಂಚಮುಖಿ, ಪೂರ್ವೋಕ್ತ, ಪು. ೮೮.
266 *EI.*, IX, p. 202.
267 *EI.*, V, p. 202.
268 *EC.*, X, Mb. 255, etc.
269 S. Srikanta Sastri, *Sources of Karnataka History*, Vol. I. p. 32.
270 *MAR.*, 1924, p. 79.
271 *MAR.*, 1910, p. 18.
272 *EC.*, X, Malur 72.
273 *MAR.*, 1916, p. 34.
274 *MAR.*, 1924, p. 69.
275 ನೋಡಿ : ೮೬, ೧೦೦.
276-78 ನೆಲಮಂಗಲ ಲಕ್ಷ್ಮೀನಾರಾಯಣರಾಯರು ಮತ್ತು ಪಂಚಮುಖಿ, ಪೂರ್ವೋಕ್ತ, ಪು. ೧೪೯ ; ೧೫೭ ; ೧೫೨.
279-83 ಅದೇ, ಪು. ೧೫೭.
284-89 ಅದೇ, ಪು. ೧೫೮.
290-91 ಅದೇ, ಪು. ೧೫೯.
292 ಅದೇ, ಪು. ೧೬೦.
293-94 ಆದೇ, ಪು. ೧೬೭.
295 ಅದೇ, ಪು. ೧೭೦.
296-97 ಅದೇ, ಪು. ೧೭೪.
298 Altekar, op. cit., p. 137–38.
299-301 ಪಂಚಮುಖಿ, ಪೂರ್ವೋಕ್ತ, ಭಾಗ ೨, ಪು. ೩೦೨.
302 *EC.*, VIII, Sorab, 10.
303 Yazdani (ed), op. cit, p. 303.
304 *EC.*, VIII, Sorab 43 ; *MAR.*, 1929, p. 197 ; *IA.*, VI, p. 28.
305 *IA.*, VI, p. 25.
306 *IA.*, VI, p. 24.
307 Yazdami (ed), op. cit., p. 236–37.

308 Ibid., p. 303–04.
309 *EC.*, VI, Kadur 145.
310 *EC.*, VIII, Soraba 411.
311 *EC.*, V, Channarayapatna 208.
312 *MAR.*, 1947–56, p. 123.
313 ಇದೇ ಸಂಪುಟದಲ್ಲಿ ಹಿಂದೆ ನಿರೂಪಿತವಾಗಿದೆ.
314 ಎ.ವಿ. ನರಸಿಂಹಮೂರ್ತಿ, ಕನ್ನಡ ಲಿಪಿಯ ಉಗಮ ಮತ್ತು ವಿಕಾಸ, ಮೈಸೂರು, ೧೯೬೮,
315 *EI.*, III, p. 1.
316 ಪಂಚಮುಖಿ, ಪೂರ್ವೋಕ್ತ, ಭಾಗ ೨, ಪು. ೩೧-೪೫.
317 ನೋಡಿ : ಅ.ಟಿ. 62.
318 Yazdani, op. cit., p. 306.
319 *EC.*, VI, Kadur 162.
320 *EC.*, VI, Mudagere 63.
321 ಪಂಚಮುಖಿ, ಪೂರ್ವೋಕ್ತ, ಭಾಗ ೨, ಪು. ೪೪.
322–23 ನೋಡಿ: ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೨೧೭-೩೦ ; Altekar, op. cit., p. 401–3.
324 *IA.*, VI, p. 25.
325 ಪಂಚಮುಖಿ, ಪೂರ್ವೋಕ್ತ, ಭಾಗ ೨, ಪು. ೬೫.
326 *SII.*, XX, No. 7.
327 ಪಂಚಮುಖಿ, ಪೂರ್ವೋಕ್ತ, ಭಾಗ ೨, ಪು. ೩೪.
328 Altekar, op. cit., p. 402–3.
329–31, Ibid, p. 400.
332 *EC.*, VIII, Sb. 22.
333 *MAR.*, 1943, p. 48.
334 *EC.*, V, Belur 121.
335 ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೪೩೦ ; *EI.*, XXVIII, p. 62 (578 A.D.) *MAR.*, 1930, p. 113 (500 A.D).
336 *EC.*, XII, Gubbi 61 (812 A.D.).
337 *MAR.*, 1944, p. 60 (725 A.D.).
338 *EC.*, VII. Shikaripur 176.
339 *EC.*, VI. Cm. 63.
340 *IA.*, VI, p. 25.
341 *EC.*, VIII, Nr. 60.
342 ಪಂಚಮುಖಿ, ಪೂರ್ವೋಕ್ತ, ಭಾಗ ೨, ಪು. ೫೯.
343 *EC.*, VI, Kd. 162.
344 *MAR.*, 1942, No. 75.
345 *IA.*, VI, p. 88.
346 ಪಾಶುಪತ ಪಂಥದವರ ಈ ವೈಶಾಲ್ಯ ಇಲ್ಲದೆ ಹೋಗಿದ್ದರೆ ಮುಂದೆ ವೀರಶೈವಧರ್ಮ ಮತ್ತು ಅದಕೊಟ್ಟಿಗಿನ ಸಾಹಿತ್ಯ ಹುಟ್ಟುವುದೇ ಅಸಾಧ್ಯವಾಗುತ್ತಿತ್ತೇನೋ?
347 ಸಮಕಾಲೀನ ಕನ್ನಡ ಕೃತಿಗಳು ಹೆಚ್ಚಾಗಿ ದೊರಕದಿದ್ದರೂ, ಇಂಥ ಸಾಹಿತ್ಯ ಬೆಳೆದಿರಬಹುದಾದ್ದಕ್ಕೆ, ಅನೇಕ ಶಾಸನಗಳಲ್ಲಿ ಬರುವ ರಾಜವಂಶದ ರಾಜರ ಹಿರಿಮೆಯ ಚಿತ್ರಣ,

ಬಾದಾಮಿ ಶಾಸನದಲ್ಲಿ ಬರುವ 'ಸಾಧುಗೆ ಸಾಧು ಮಾಧುರ್ಯಂಗೆ ಮಾಧುರ್ಯಂ.....,' ತ್ರಿಪದಿ, ಶ್ರವಣಬೆಳಗೊಳದ ನಿಸಿದಿ ಶಾಸನಗಳು ಇವನ್ನು ಉದಾಹರಿಸಬಹುದು.

348 Bhupendranata Datta, *Indian Art in Relation to Culture*, p. 2.
349 'ಮೈಸೂರು ರಾಜ್ಯ', ೧೯೫೬, ಪು. ೧೮೩೫.
350 Bharathaiyer, *Indian Art—A Short Introduction*, p. 2.
351 ಅ. ನ. ಕೃಷ್ಣರಾಯ, 'ಸಜೀವ ಸಾಹಿತ್ಯ', ಪು. ೧೨೧.
352 G. Yazdani (ed), *The Early History of the Deccan*, pt. vii-xi, pp. 717-722.
353 E. B. Havell, *The Ideals of Indian Art*, p. 51.
354 R. S. Mugali, *The Heritage of Karnataka*, p. 161.
355 Tarapada Bhattacharya, *The Canons of Indian Art*, p. 154.
356 ವೆಂಕೋಬರಾವ್, ಮೈಸೂರು ದೇಶದ ವಾಸ್ತುಶಿಲ್ಪ, ಪು. ೨೯.
357 R. S. Panchamukhi, *An Outline of Karnataka Sculpture*, p. 45.
358 ಎಂ. ಎಚ್. ಕೃಷ್ಣ, 'ಕನ್ನಡನಾಡಿನ ಚರಿತ್ರೆ', ಮೂರನೆಯ ಭಾಗ (ಕರ್ನಾಟಕದ ಕಲೆಗಳು), ಪು. ೩.
359 *Karnataka through the Ages*, p. 194.
360 ಎಂ. ವಿ. ಕೃಷ್ಣರಾವ್, ಕರ್ನಾಟಕದ ಚರಿತ್ರೆ, ಪು. ೧೭.
361 ಎಂ. ಎಚ್. ಕೃಷ್ಣ, ಪೂರ್ವೋಕ್ತ, ಪು. ೬.
362 ಎಂ. ವಿ. ಕೃಷ್ಣರಾವ್, ಪೂರ್ವೋಕ್ತ, ಪು. ೧೭.
363 ಕನ್ನಡ ವಿಶ್ವಕೋಶ, ಸಂ. ಪು. ೬೬೪.
364 ಅದೇ, ಪು. ೬೬೪.
365-66 ಎಂ. ವಿ. ಕೃಷ್ಣರಾವ್ ಮತ್ತು ಎಂ. ಕೇಶವಭಟ್ಟ : 'ಕರ್ನಾಟಕದ ಇತಿಹಾಸ ದರ್ಶನ', ಪು. ೧೦೨೫.
367 *Karnataka through the Ages*, p. 195.
368 'ಮೈಸೂರು ರಾಜ್ಯ', ೧೯೫೬, ಪು. ೧೨೬.
369 ಚಾಲುಕ್ಯರದೇ ಒಂದು ವಿಶಿಷ್ಟ ವಾಸ್ತುರೀತಿಯಿದೆ ಎಂದು ಹೇಳಿ 'ಚಾಲುಕ್ಯವಾಸ್ತು' ಎಂದು ಮೊದಲು ಹೆಸರಿಟ್ಟವರು ಫರ್ಗುಸನ್.
370 Srikanthika, Mysore, 1073, p. 25.
371 *Karnataka through the Ages*, p. 383.
372 ಗರ್ಭಗೃಹದ ಮೇಲಿನ ಇನ್ನೊಂದು ಗರ್ಭಗೃಹದ ರಚನೆ ತೀರ ಈಚಿನದು.
373 ಎಚ್. ತಿಪ್ಪೇರುದ್ರಸ್ವಾಮಿ, 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ', ಪು. ೫೮೧.
374 K. A. Nilakantha Sastri, *History of South India*, p. 451.
375 ಪಟ್ಟದಕಲ್ಲು ಮತ್ತು ಬಾದಾಮಿಗಳಿಗೆ ಹೋಲಿಸಿದರೆ ಐಹೊಳೆಯಲ್ಲಿ ದೇವಾಲಯಗಳ ಸಂಖ್ಯೆ ಹೆಚ್ಚು.
376 'ಮೈಸೂರು ರಾಜ್ಯ', ೧೯೫೬, ಪು. ೧೨೭.
377–79 *Karnataka through the Ages*, p, 383.
380 ಅದೇ, ಪು. ೩೮೧.
381 B. R. Gopal (ed), *Karnataka Inscriptions*, Vol. V, Intro. XIII.
382 ಎಂ. ಎಚ್. ಕೃಷ್ಣ, ಕನ್ನಡನಾಡಿನ ಚರಿತ್ರೆ, ೩ನೆಯ ಭಾಗ ಪು. ೧೭.

383 ಇದರ ಸಾಮರ್ಥ್ಯಕೌಶಲವನ್ನೂ ಪರಿಣತಿಯನ್ನೂ ಕಲ್ಯಾಣ ಚಾಲುಕ್ಯರಲ್ಲಿ ಕಾಣುತ್ತೇವೆ.
384 *Karnataka Darshana*, pp. 338–39.
385–86 *Karnataka through the Ages*, p. 381; p. 262.
387 Quoted: *Karnataka through the Ages*, p. 263.
388 ಎಂ. ಎಚ್. ಕೃಷ್ಣ, ಪೂರ್ವೋಕ್ತ, ಪು. ೧೬.
389 G. Yazdani (ed), *The Early History of Deccan*, p. 731.
390 ಉದಾಹರಣೆಗೆ ವಿಷ್ಣುಧರ್ಮೋತ್ತರ ಪುರಾಣದಲ್ಲಿ ಬರುವ ಸಾಂಪ್ರದಾಯಿಕ ಕಥೆಯನ್ನೇ ನೋಡಬಹುದು.
391 ಶಿವರಾಮ ಕಾರಂತ, 'ಕಲೆಯ ದರ್ಶನ', ಪು. ೮೨.
392 R. S. Panchamukhi, *An Outline of Karnataka Sculpture*, p. 75.
393 ಆರ್. ಎಸ್. ಪಂಚಮುಖಿ, 'ಕರ್ಣಾಟಕದ ಇತಿಹಾಸ', ಪು. ೧೦೩.
394 'ಮೈಸೂರು ರಾಜ್ಯ', ೧೯೫೬, ಪು. ೧೨೭.
395 ಉತ್ತರ ಭಾರತದಲ್ಲಿ ರಾಮಾಯಣ, ಭಾರತ, ಭಾಗವತಾದಿ ಪುರಾಣಕಥೆಗಳನ್ನು ಚಿತ್ರಿಸುವ ಹಾಗೂ ಆ ಮೂಲಕ ವೈದಿಕ ಸಂಸ್ಕೃತಿಯನ್ನು ಪುನರುಜ್ಜೀವಿಸುವ ಕೆಲಸ ಗುಪ್ತರ ಕಾಲದಲ್ಲಿ ನಡೆಯಿತು. ಕೆಲವು ವಿಷಯಗಳಲ್ಲಿ ಗುಪ್ತರಿಗೂ ಸಮಕಾಲೀನ ಕರ್ಣಾಟಕ ಕೃತಿಗಳಿಗೂ ಸಾದೃಶ್ಯಗಳು ಕಾಣಬರುತ್ತವೆ. ಈ ಹಿನ್ನೆಲೆಯಲ್ಲಿ ದಕ್ಷಿಣ ಭಾರತದ ಪಶ್ಚಿಮ ಕಲಾಕಾರರ ಮೂಲಕ ಗುಪ್ತರ ಈ ಕಲೆ ಕರ್ಣಾಟಕಕ್ಕೆ ಬಂದಿತೆಂದು ಒಂದು ಅಭಿಪ್ರಾಯವಿದೆ. ನೋಡಿ: R. S. Panchamukhi, *An Outline of Karnataka Sculpture*, p. 78–79.
396 ಶಿವರಾಮ ಕಾರಂತ, 'ಚಾಲುಕ್ಯ ವಾಸ್ತು ಮತ್ತು ಶಿಲ್ಪ'; ಪು. ೭೪.
397 C. Sivaramamurthy, *Indian Sculpture*, p. 85.
398 G. Yazdani (ed), op. cit, p. 754.
399–400 Quoted: *KTA.*, p. 264.
401 ವೆಂಕೋಬರಾವ್, 'ಮೈಸೂರು ದೇಶದ ವಾಸ್ತುಶಿಲ್ಪ', ಪು. ೬೦.
402 *KTA.*. p. 390.
403 R. S. Mugali, *The Heritage of Karnataka*, p. 168.
404–05 *Karnotaka Darshana*, p. 368.
406–07 G. Yazdani (ed), op. cit. (ed), p. 773.
408 Ibid., p. 774.
409 ಆರ್. ಎಸ್. ಪಂಚಮುಖಿ, 'ಕರ್ನಾಟಕದ ಇತಿಹಾಸ', ಪು. ೧೨೮.
410 ಉದ್ಧೃತ: ರಂ. ಶ್ರೀ. ಮುಗಳಿ, 'ಕನ್ನಡ ಸಾಹಿತ್ಯ ಚರಿತ್ರೆ', ಪು. ೧೩.
411–12 G. Yazdani (ed), op. cit., p. 763; 781.

## ಅಧ್ಯಾಯ ನಾಲ್ಕು

# ಕನ್ನಡ ಭಾಷಾಸ್ವರೂಪ

### ಅವಸ್ಥಾಭೇದಗಳು

ಕನ್ನಡ ಭಾಷೆಯ ಪ್ರಥಮ ಸ್ವರೂಪದ ಸ್ಪಷ್ಟ ಪರಿಚಯ ನಮಗಾಗುವುದು ಬಹು ಮಟ್ಟಿಗೆ ಸು. ೪೫೦ರ ಹಲ್ಮಿಡಿ ಶಾಸನದಲ್ಲಿ. ಈಚೆಗೆ ಹಲವಾರು ಗದ್ಯಪದ್ಯ ಶಾಸನಗಳು ದೊರೆತಿವೆ. ಸು. ೮೫೦ರಲ್ಲಿ ಹುಟ್ಟಿದ 'ಕವಿರಾಜಮಾರ್ಗ'ವು ದೊರೆತವುಗಳಲ್ಲಿ ಮೊತ್ತ ಮೊದಲ ಕನ್ನಡ ಗ್ರಂಥ. ಆದಿಕಾಲದಿಂದ ಹಿಡಿದು ಸು. ೮೫೦ರವರೆಗಿನ ಕನ್ನಡ ಭಾಷಾ ಸ್ವರೂಪವನ್ನು ಕುರಿತು ವಿಚಾರಮಾಡುವಲ್ಲಿ ಸಂಪೂರ್ಣವಾಗಿ ಈ ಎರಡು ಮೂಲಗಳನ್ನೇ ಅವಲಂಬಿಸಬೇಕಾಗಿದೆ.

ಕಾಲಾನುಗುಣವಾಗಿ ಸ್ಥಿತ್ಯಂತರ ಹೊಂದುತ್ತ ಹೋಗುವುದು ಜೀವಂತ ಭಾಷೆಯ ಲಕ್ಷಣವೆಂದು ಭಾಷಾವಿಜ್ಞಾನಿಗಳು ಹೇಳುತ್ತಾರೆ. ಈ ಹೇಳಿಕೆಗೆ ಕನ್ನಡ ಭಾಷೆಯೂ ಹೊರತಲ್ಲ. ಅದು ಕಾಲದಿಂದ ಕಾಲಕ್ಕೆ ಬದಲಾವಣೆ ಹೊಂದುತ್ತ ನಡೆದು, ಅಲ್ಲಲ್ಲಿ ವಿಶಿಷ್ಟ ಘಟ್ಟಗಳನ್ನೇ ನಿರ್ಮಿಸಿದೆ. ಹೀಗೆ ಪರಿವರ್ತನೆ ಹೊಂದುತ್ತ ನಡೆದಿರುವ ಕನ್ನಡ ಭಾಷೆಯಲ್ಲಿ ಅಂಥ ಎಷ್ಟು ಘಟ್ಟಗಳಿವೆ ಎಂಬ ವಿಚಾರದಲ್ಲಿ ವಿದ್ವಾಂಸರು ಸಾಕಷ್ಟು ಚರ್ಚೆ ನಡಸಿದ್ದಾರೆ. ಬಿ. ಎಲ್. ರೈಸ್ ಅವರು ಪೂರ್ವದ ಹಳಗನ್ನಡ, ಹಳಗನ್ನಡ ಮತ್ತು ಹೊಸಗನ್ನಡ ಎಂಬ ಮೂರು ಹಂತಗಳನ್ನು ಗುರುತಿಸುತ್ತ[1] ಪೂರ್ವದ ಹಳಗನ್ನಡ ವನ್ನು ವಿಲ್ಕ್ಸ್ ಅವರು ಬನವಾಸಿಯ ಭಾಷೆಯೆಂದು ವಿವರಿಸಿರುವುದಾಗಿಯೂ ಭಾಷೆಯ ಈ ಪ್ರಾಚೀನ ರೂಪವು ಸು. ೭ನೆಯ ಶತಮಾನದ ಅಂತ್ಯಭಾಗದವರೆಗೆ ಮುಂದುವರಿಯಿ ತೆಂದು ಹೇಳಬಹುದಾಗಿಯೂ ೮ರಿಂದ ೧೪ನೆಯ ಶತಮಾನದವರೆಗೆ ಹಳಗನ್ನಡ ಮತ್ತು ಈಚೆಗೆ ಹೊಸಗನ್ನಡವೆಂದು ತಿಳಿಯಬಹುದಾಗಿಯೂ ಅಭಿಪ್ರಾಯಪಟ್ಟಿರುತ್ತಾರೆ. ಮುಂದುವರಿದು ೧೪ನೆಯ ಶತಮಾನದಿಂದೀಚೆಗೆ ಹೊಸಗನ್ನಡವೆಂದು ಗುರುತಿಸುವ ಅವರು ಈ ಬಗೆಯ ವಿಭಜನೆ ಖಚಿತವಾದುದೇನಲ್ಲ, ಈ ಹಂತಗಳು ಒಂದರೊಳ ಗೊಂದು ಹೆಣೆದುಕೊಳ್ಳುತ್ತವೆ ಎಂಬ ಅಭಿಪ್ರಾಯವನ್ನೂ ವ್ಯಕ್ತಪಡಿಸಿದ್ದಾರೆ. ಪೂರ್ವದ ಹಳಗನ್ನಡವೆಂಬ ಅವಸ್ಥೆ ಇತ್ತೆಂದು ತೋರಿಸಲು ಕೆಲವು ಆಧಾರಗಳನ್ನೂ ಅವರು ಮುಂದಿ ಸಿದ್ದಾರೆ.

ಎಫ್. ಕಿಟ್ಟೆಲ್ ಅವರು ಪೂರ್ವದ ಹಳಗನ್ನಡವೆಂಬ ಹಂತವನ್ನು ಒಪ್ಪುವುದಿಲ್ಲ.

ಅವರು ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ ಎಂಬ ಮೂರು ಹಂತಗಳನ್ನು ಗುರುತಿಸುತ್ತಾರೆ; ೮೦೦ರಿಂದ ೧೨೫೦ರವರೆಗೆ ಹಳಗನ್ನಡ, ೧೨೫೦ರಿಂದ ೧೮೦೦ರವರೆಗೆ ನಡುಗನ್ನಡ, ಅಲ್ಲಿಂದೀಚೆಗೆ ಹೊಸಗನ್ನಡ ಎಂದು ಹೇಳಿದ್ದಾರೆ.[2]

ಆರ್. ನರಸಿಂಹಾಚಾರ್ಯರು ರೈಸರು ನಿರೂಪಿಸಿರುವಂತೆಯೇ ಮೂರು ಹಂತಗಳನ್ನು ಹೇಳಿ ಪೂರ್ವದ ಹಳಗನ್ನಡವೆಂಬುದು ಇತ್ತೆಂಬುದಕ್ಕೆ ಅದರ ಕೆಲವು ವಿಶಿಷ್ಟ ಲಕ್ಷಣಗಳನ್ನು ನಿರೂಪಿಸಿದ್ದಾರೆ. ಇವುಗಳ ಜೊತೆಗೆ ನಡುಗನ್ನಡವೆಂಬ ಹಂತವನ್ನೂ ಕಿಟ್ಟೆಲರನ್ನು ಅನುಸರಿಸಿ ಒಪ್ಪಿ ಕೊಂಡಿದ್ದಾರೆ. ಈ ಬಗ್ಗೆ ಕಿಟ್ಟೆಲ್ ಅವರು ಮಾಡಿರುವಂತೆ ಹೊಸಗನ್ನಡವೆಂಬುದು ಅದ್ಯತನ ಕಾಲದ ಗದ್ಯರಚನೆಗಳಿಗೆ, ರೂಢಿಯ ಸಂಭಾಷಣೆಗಳಿಗೆ ಸೀಮಿತಗೊಳ್ಳುವುದಾದರೆ, ಹಳಗನ್ನಡ ಮತ್ತು ಹೊಸಗನ್ನಡಗಳ ಮಧ್ಯದ ಒಂದು ಅವಸ್ಥಾಭೇದವು, ಅವರೇ ನಡುಗನ್ನಡ ಎಂಬ ಹೆಸರಿಂದ ಕರೆದಿರುವುದು, ಅತ್ಯವಶ್ಯವಾಗುತ್ತದೆ ಎಂದು ಹೇಳಿದ್ದಾರೆ.[3] ಇದರಿಂದಾಗಿ ಅವರು ನಾಲ್ಕು ಹಂತಗಳನ್ನು ಒಪ್ಪಿದಂತಾಗಿದೆ.

ಬಿ. ಎಂ. ಶ್ರೀಕಂಠಯ್ಯ ಮತ್ತು ಟಿ. ಎಸ್. ವೆಂಕಣ್ಣಯ್ಯನವರು ಈ ಅವಸ್ಥಾಭೇದಗಳನ್ನು ಕುರಿತಂತೆ ನಾಲ್ಕು ಹಂತಗಳನ್ನು ಗುರುತಿಸಿದರೂ, ಅವುಗಳಲ್ಲಿ ಪೂರ್ವದ ಹಳಗನ್ನಡವೆಂಬ ಹಂತದ ಅವಧಿಯನ್ನು ಕೆಲಮಟ್ಟಿಗೆ ಬೇರೆಯಾಗಿ ನಿರ್ದೇಶಿಸಿದ್ದಾರೆ. "ಕನ್ನಡಭಾಷೆಗೆ ಹಳಗನ್ನಡ ರೂಪವು ಬರುವುದಕ್ಕೆ ಮುಂಚೆ ಮತ್ತೊಂದು ರೂಪವು— ಪೂರ್ವದ ಹಳಗನ್ನಡ ರೂಪವು ಇತ್ತೆಂದು ಒಪ್ಪಿಕೊಳ್ಳಲೇಬೇಕಾಗುತ್ತದೆ" ಎಂದು ಒಂದೆಡೆ ರೈಸರ ವಾದಕ್ಕೆ ಪೂರಕವಾಗಿ ಹೇಳಿದರೂ, ಮತ್ತೊಂದೆಡೆ "ಸು. ಆರನೆಯ ಶತಮಾನದಿಂದ ಎಂಟನೆಯ ಶತಮಾನದವರೆಗಿನ ಶಾಸನಗಳಲ್ಲಿ ಹಳಗನ್ನಡದಿಂದ ಭಿನ್ನವಾದ ಶಬ್ದರೂಪಗಳೂ ಪ್ರಯೋಗಗಳೂ ಇರುವಂತೆಯೇ ಹಳಗನ್ನಡದ ಶಬ್ದರೂಪಗಳೂ ಪ್ರಯೋಗಗಳೂ ಇವೆ. ಅಷ್ಟೇ ಅಲ್ಲ. ಅವಕ್ಕಿಂತಲೂ ಇವು ಹೆಚ್ಚುಹೆಚ್ಚಾಗಿ ಕಂಡುಬರುತ್ತವೆ. ಇದರಿಂದ ಕನ್ನಡ ಭಾಷೆಗೆ ಹಳಗನ್ನಡ ರೂಪವು ರೈಸ್ ಅವರ ಪೂರ್ವದ ಹಳಗನ್ನಡ ಕಾಲದಲ್ಲಿಯೆ ಪ್ರಚಾರಕ್ಕೆ ಬರುತ್ತಿತ್ತೆಂದು ಹೇಳಬೇಕಾಗುತ್ತದೆ. ಸಾರಾಂಶವೇನೆಂದರೆ ಕನ್ನಡ ಭಾಷೆಗೆ ಪೂರ್ವದ ಹಳಗನ್ನಡವೆಂಬ ಒಂದು ಅವಸ್ಥೆಯಿತ್ತೆಂದು ಇಟ್ಟುಕೊಳ್ಳಬೇಕು; ಆದರೆ ಅದರ ಕಾಲದ ಪರಿಮಿತಿಯನ್ನು ನಿರ್ಧರಿಸುವುದು ಕಷ್ಟ. ರೈಸರು ಪೂರ್ವದ ಹಳಗನ್ನಡದ್ದೆಂದು ಕರೆಯುವ ಕಾಲವನ್ನು ಪೂರ್ವದ ಹಳಗನ್ನಡವು ಹಳಗನ್ನಡವಾಗಿ ರೂಪಾಂತರವಾಗುತ್ತಿದ್ದ ಕಾಲವೆಂದು ಕರೆಯಬಹುದು" ಎಂದು ಹೇಳಿದ್ದಾರೆ.[5]

ಈ ಮೇಲಿನ ಅಭಿಪ್ರಾಯಗಳಲ್ಲಿ ಕೊನೆಯದೇ ಹೆಚ್ಚು ಸಮಂಜಸವೆಂದು ತೋರುತ್ತದೆ. ಪೂರ್ವ ಹಳಗನ್ನಡದ್ದೆಂದೇ ಕೆಲವು ವಿಶಿಷ್ಟವಾಗಿ ರೂಪಗಳು ಇದ್ದರೂ ಇವುಗಳ ಜೊತೆಗೆ ಹಳಗನ್ನಡದ ರೂಪಗಳು ವಿಶೇಷವಾಗಿ ಬಳಕೆಗೊಂಡು ಬಂದಿರುವುದರಿಂದ ನಮ್ಮ ಪರಿಶೀಲನೆಯ ಕಾಲಕ್ಕಾಗಲೇ ಪೂ. ಹ.ಗ.ವು ಹ.ಗ.ವಾಗಿ ಪರಿವರ್ತನೆ ಹೊಂದುತ್ತಿದ್ದಿತು ಎಂಬುದು ಒಪ್ಪಬೇಕಾದ ಅಂಶ. ಸು. ೮೦೦ರವರೆಗಿನ ಶಾಸನಗಳಲ್ಲಿ

ಪೂ. ಹೆ. ಗದ್ದೆನ್ನುವ ರೂಪಗಳು ದಟ್ಟವಾಗಿದ್ದು, ಹ. ಗ.ದ ರೂಪಗಳು ವಿರಳವಾಗಿವೆ. ಅಲ್ಲಿಂದ ಮುಂದೆ ಮುಂದೆ ಬಂದಂತೆ ಪೂ.ಹ.ಗ. ರೂಪಗಳು ಹಾಗೂ ಹ.ಗ.ರೂಪಗಳು ಸಮಪ್ರಮಾಣದಲ್ಲಿ ಮಿಶ್ರವಾಗಿ ಬಳಕೆಯಾಗಿವೆ. ಅನಂತರ ಹ.ಗ.ದ ರೂಪಗಳ ಕೈ ಮೇಲಾಗಿ ಪೂ.ಹ.ಗ.ದ ರೂಪಗಳು ಕುಗ್ಗುತ್ತಿರುವುದು ಕಂಡುಬರುತ್ತದೆ. ೯ನೆಯ ಶತಮಾನದ ಉತ್ತರಾರ್ಧದ ಕೆಲವು ಶಾಸಗಳಲ್ಲಿಯೂ ಪೂ.ಹ.ಗ.ದ ಕೆಲವು ರೂಪಗಳಿವೆ. ಆದುದರಿಂದ ರೈಸ್ ಮೊದಲಾದವರು ಪೂ.ಹ.ಗ.ವೆನ್ನುವುದು ಎರಡೆರಡು ರೂಪಗಳು ಸಮಾನಾಂತರವಾಗಿ ಬಳಕೆಯಾಗುತ್ತಿದ್ದ ಸಂಕ್ರಮಣ ಘಟ್ಟ, ಕಾಲಕ್ರಮದಲ್ಲಿ ಒಂದು ಕುಗ್ಗಿ ಮತ್ತೊಂದು ಪ್ರಭುತ್ವವನ್ನು ಸ್ಥಾಪಿಸುತ್ತ ನಡೆದಿರುವ ಪರಿವರ್ತನೆಯ ಘಟ್ಟ ಎನ್ನಬಹುದು. ಅದಕ್ಕೆ ಮೊದಲಿನಲ್ಲಿ ಪೂ.ಹ.ಗದ್ದೆಂದು ದೃಢವಾಗಿ ಹೇಳಬಹುದಾದ ಬಹು ಪ್ರಾಚೀನ ಘಟ್ಟವಿದ್ದಿರುವುದು ತರ್ಕಸಮ್ಮತವಾಗಬಲ್ಲ ಅನುಮಾನವಾದೀತು. ಹಲ್ಮಿಡಿ ಶಾಸನದಿಂದ (ಸು. ೪೫೦) ಕವಿರಾಜಮಾರ್ಗದವರೆಗಿನ (ಸು. ೮೫೦) ಭಾಷೆಯನ್ನು, ಸು. ೪ ಶತಮಾನಗಳ ಭಾಷೆಯನ್ನು, ಒಂದೇ ಘಟಕವಾಗಿ ಸ್ವೀಕರಿಸಿ ಮೊದಲು ಇಲ್ಲಿ ವಿವೇಚಿಸಲಾಗಿದೆ. 'ಕವಿರಾಜಮಾರ್ಗ'ದ ಭಾಷೆಯನ್ನು ಕುರಿತಂತೆ, ಬಳಿಕ ಪ್ರತ್ಯೇಕವಾಗಿ ವಿಚಾರಮಾಡಿದೆ.

'ಕವಿರಾಜಮಾರ್ಗ'ಕಾರನು ತನ್ನ ಗ್ರಂಥದ ಮೊದಲೆರಡು ಪರಿಚ್ಛೇದಗಳಲ್ಲಿ ಕನ್ನಡ ವ್ಯಾಕರಣಕ್ಕೆ ಸಂಬಂಧಪಟ್ಟ ಕೆಲವು ಸಂಗತಿಗಳನ್ನು ಹೇಳಿದ್ದಾನೆ. ಅವುಗಳಲ್ಲಿ ವಚನ ವಿಭಕ್ತಿಗಳನ್ನು ಕುರಿತ ಮಾತುಗಳು ಮುಖ್ಯವಾದುವು. ಸಂಸ್ಕೃತದ ವ್ಯಾಕರಣದ ಅನುಕರಣೆಯಿದ್ದರೂ ತನ್ನ ಕಾಲದವರೆಗಿನ ಕನ್ನಡ ಭಾಷಾ ಸ್ವರೂಪವನ್ನು ಗಮನಿಸಿಯೇ ಆತನು ಈ ಅಂಶಗಳನ್ನು ನಿರೂಪಿಸಿದ್ದಾನೆಂದು ಹೇಳಬಹುದು. ವ್ಯಾಕರಣದ ದೃಷ್ಟಿಯಿಂದ ಕನ್ನಡ ಭಾಷೆ ಸಂಸ್ಕೃತದಿಂದ ಭಿನ್ನವಾಗಿರುವ ಒಂದೆರಡು ಎಡೆಗಳನ್ನೂ ಆತನು ಗುರುತಿಸಿದ್ದಾನೆ. ಆದರೆ ವ್ಯಾಕರಣಕ್ಕೆ ಸಂಬಂಧಪಟ್ಟಂತೆ ಆತನ ನಿರೂಪಣೆಯು ತನ್ನ ಕಾಲದವರೆಗಿನ ಕನ್ನಡ ಭಾಷಾ ಸ್ವರೂಪವನ್ನು ಖಚಿತವಾಗಿ ಹಿಡಿದಿಡುವಲ್ಲಿ ಕೃತಕೃತ್ಯವಾಗದೆ ಹೋಗಿದೆ. ಅವನ ಉದ್ದೇಶವೇ ಬೇರೆಯಾದ್ದರಿಂದ, ಈ ವಿಷಯದಲ್ಲಿ ಅವನನ್ನು ಆಕ್ಷೇಪಿಸುವಂತೆಯೂ ಇಲ್ಲ.

## ವ್ಯಾಕರಣ

ಈ ಯುಗದ ಭಾಷೆಯ ಸ್ವರೂಪವನ್ನು ಕುರಿತು ವಿಚಾರಮಾಡುವಲ್ಲಿ, ವ್ಯಾಕರಣದ ಬಂಧಕ್ಕೆ ಇದು ಹೇಗೆ ಅಳವಟ್ಟಿದೆ ಎಂಬುದರಿಂದ ಈ ವಿವೇಚನೆಯನ್ನು ಆರಂಭಿಸಬಹುದು :

ವರ್ಣಮಾಲೆ: ಈ ಅವಧಿಯ ವರ್ಣಮಾಲೆಗೂ ಇಂದು ಬಳಸುತ್ತಿರುವ ವರ್ಣಮಾಲೆಗೂ ಹೆಚ್ಚು ಅಂತರವೇನಿಲ್ಲ. ಹಿಂದೆ ಬಳಕೆಯಲ್ಲಿದ್ದ ಱ ಮತ್ತು ೞ ಎಂಬೆರಡು ವರ್ಣಗಳು ಮಾತ್ರ ಈಗ ಲುಪ್ತವಾಗಿವೆ. ಸ್ವರಗಳು : ಅಆಇಈಉಊಋ ಎಏಐ ಒಓ

ಔ; ವರ್ಗೀಯ ವ್ಯಂಜನಗಳು: ಕಖಗಘಙ; ಚಛಜಝಞ; ಟಠಡಢಣ; ತಥದಧನ ಪಫಬಭಮ; ಅವರ್ಗೀಯ ವ್ಯಂಜನಗಳು: ಯರಲವಶಷಸಹಳ; ಯೋಗವಾಹಗಳು: ಅನುಸ್ವಾರ: ಂ; ವಿಸರ್ಗ: ಃ. ಇದು ಈ ಕಾಲದ ವರ್ಣಮಾಲೆಯ ಸ್ವರೂಪ.

ಕನ್ನಡ ಲಿಪಿ ಬ್ರಾಹ್ಮೀಲಿಪಿಯಿಂದ ಕವಲೊಡೆದು ವಿಕಾಸಗೊಂಡು ಬಂದುದೆಂಬುದು ಸರ್ವಮಾನ್ಯವಾದ ವಿಚಾರ. ಸು. ೪೫೦ರ ವೇಳೆಗೆ ಅದು ಸ್ವತಂತ್ರವಾಗಿ ರೂಪುಗೊಂಡಿತ್ತೆಂಬುದಕ್ಕೆ ಹಲ್ಮಿಡಿಶಾಸನವೇ ಸಾಕ್ಷಿ. ಆ ವೇಳೆಗಾಗಲೇ ಕನ್ನಡವು ತನಗೆ ಬೇಕಾದ ೫ ಚಿಗಳನ್ನೂ ರೂಪಿಸಿಕೊಂಡಿತ್ತೆಂಬುದಕ್ಕೆ ಈ ಶಾಸನವೇ ಸಾಕ್ಷಿಯಾಗಿದೆ. ಈ ಯುಗದ ಭಾಷೆಯನ್ನೂ ಲಿಪಿಯನ್ನೂ ಓದಿ ತಿಳಿಯಲು ಈಗ ಸ್ವಲ್ಪ ಪರಿಶ್ರಮಪಡಬೇಕು. ಆಧುನಿಕ ಯುಗದ ವರ್ಣಮಾಲೆಯ ಹಿನ್ನೆಲೆಯಲ್ಲಿ ನೋಡಿದರೆ ಇಲ್ಲಿ ಕೆಲವೆಡೆ ವ್ಯತ್ಯಾಸಗಳಿವೆ. ಱಕಾರದ ಬಳಕೆ ಅಲ್ಲಲ್ಲಿ ಕಂಡುಬಂದರೂ ಅದಕ್ಕೆ ಬದಲಾಗಿ ರೇಫೆಯ ಬಳಕೆಯೇ ಹೆಚ್ಚು. ಉಚ್ಚಾರಣೆಯಲ್ಲಿ ಅಂತರವಿದ್ದರೂ ಎಏ ಮತ್ತು ಒಓ ವರ್ಣಗಳ ಚಾಕ್ಷುಷ ರೂಪದಲ್ಲಿ ಮಾತ್ರ ಹೆಚ್ಚು ವ್ಯತ್ಯಾಸ ಕಂಡುಬರುವುದಿಲ್ಲ. ಸಂಯುಕ್ತ ಸ್ವರಗಳಾದ ಐ ಔಗಳು ಸ್ವತಂತ್ರವಾಗಿ ಕಾಣುವುದಿಲ್ಲ. ಅವು ಅಯ್, ಅವ್ ಎಂಬ ವಿರಳ ರೂಪದಲ್ಲಿವೆ. ಅನುಸ್ವಾರದ ಬಳಕೆ ಕಡಿಮೆಯಿದ್ದು, ಅದರ ಕಾರ್ಯವನ್ನು ವರ್ಗಪಂಚಮಗಳು ನಿರ್ವಹಿಸಿವೆ. ಅಕ್ಷರಗಳು ತ್ರಿಕೋಣ, ಚಚ್ಚೌಕ ಇಲ್ಲವೆ ಲಂಬರೇಖಾತ್ಮಕವಾಗಿವೆ.

ನಾಮಪದ: (i) ನಾಮಪದಗಳಲ್ಲಿ ಲಿಂಗ ವಚನ ವಿಭಕ್ತಿಗಳ ವಿವಕ್ಷೆಯಿದ್ದು, ಪುಂ-ಸ್ತ್ರೀ-ನಪುಂಸಕ ಎಂಬ ಮೂರು ಲಿಂಗಭೇದವನ್ನು ನಾವು ಕಾಣುತ್ತೇವೆ. ನಾಮಪದದ ಲಿಂಗವು ಅರ್ಥಾನುಸಾರಿಯಾದುದರಿಂದ ಅದನ್ನು ಪ್ರಕೃತಿಯೇ ಸೂಚಿಸುತ್ತದೆ. ಉದಾ: ಪುಲ್ಲಿಂಗ: ಕಪ್ಪೆಯ್ಯನ್, ಮಗನ್, ಕಾದೊನ್, ಪಾತಕನ್, ಸಲ್ವೋನ್; ಸ್ತ್ರೀಲಿಂಗ: ತಪಶ್ಚಲೆ, ಸೂಳೆ, ಮಗಳ್; ನಪುಂಸಕಲಿಂಗ: ದೇಹಮ್, ದೋಷಂ, ಪಾವು, ಕವಿಲೆ, ಪಟಿ, ಕೆಱೆ. ನಾಮಪದದ ಪುಲ್ಲಿಂಗ ರೂಪಗಳು ಇ, ಎ, ಇತ್ತಿ ಎಂಬ ಪ್ರತ್ಯಯಗಳನ್ನು ಪಡೆದು ಸ್ತ್ರೀಲಿಂಗರೂಪಗಳಾಗಿವೆ. ಉದಾ: ಇ: ಜಮ್ಬು ನಾಯ್ಗಿರ್, ಅರಸಿ; ಎ: ಪ್ರಾಣವಲ್ಲಭೆ; ಇತ್ತಿ: ಶಿಷಿತ್ತಿ, ದೇವೆಡಿತ್ತಿ.

(ii) ನಾಮಪದಗಳಲ್ಲಿ ಏಕವಚನ ಮತ್ತು ಬಹುವಚನ ಎಂಬ ಸ್ಪಷ್ಟವಾದ ಎರಡು ರೂಪಗಳಿವೆ. ಪ್ರಕೃತಿರೂಪವು ಏಕವಚನದ ಅರ್ಥವನ್ನು ಸೂಚಿಸುತ್ತದೆ. ಬಹುವಚನವನ್ನು ಸೂಚಿಸುವಲ್ಲಿ ಗಳ್, ಆರ್, ಅರ್, ದಿರ್, ವಿರ್—ಈ ಪ್ರತ್ಯಯಗಳು ಸೇರುತ್ತವೆ. ಇವುಗಳಲ್ಲಿ ಆರ್ ಎಂಬುದು ಪ್ರಾಚೀನ ರೂಪ. ಉದಾ: ಗಳ್: ಅಧಿಕಾರಿಗಳ್, ಅವ್ವೆಗಳ್, ವ್ರತಗಳ್, ಕವಿಲೆಗಳ್, ಕಲ್ಗಳ್; ಆರ್: ಆಳಿವಾರ್, ಅನಿನ್ದಿತಾರ್, ರಾಜ್ಞೀಮತಿಗನ್ತಿಯಾರ್; ಅರ್: ಪಾರ್ವರ್, ಕೆಳೆಯರ್, ಸೂಳೆಯರ್, ವಲ್ಲಭೆಯರ್; ವಿರ್: ಮುದುತಾಯ್ವಿರ್.

ಕೆಲವೆಡೆ ಬಹುವಚನದಲ್ಲಿ ಅತಿಶಯತೆಯನ್ನು ಸೂಚಿಸುವ ಸಲುವಾಗಿ ಪುಂ-ಸ್ತ್ರೀ ಲಿಂಗಗಳಲ್ಲಿ ಆರ್ ಪ್ರತ್ಯಯದ ಜೊತೆಗೆ ಕಳ್ ಪ್ರತ್ಯಯವೂ ಸೇರಬಂದಿದೆ. ಉದಾ:

ವೀರಭಟರ್ಕ್ಕಳ್, ಗೊರವರ್ಕ್ಕಳ್. ಗೌರವಾನ್ವಿತರನ್ನು ಕುರಿತು ಹೇಳುವಲ್ಲಿ ಪುಂ-ಸ್ತ್ರೀ ಲಿಂಗಗಳಲ್ಲಿ ಏಕವಚನದಲ್ಲಿಯೂ ಬಹುವಚನದ ಪ್ರಯೋಗವಾಗಿದೆ. ಉದಾ: ಪುಂ : ಅರಸರ್, ರಿಷಿಯರ್ ,ಭಟ್ಟಾರಕರ್, ಯುವರಾಜರ್; ಸ್ತ್ರೀ : ಶಿಸಿತ್ತಿಯರ್, ಮಗಳ್ದಿರ್, ಮಹಾದೇವಿಯರ್.

(ii) ನಾಮಪದಗಳಿಗೆ ಸೇರುವ ವಿಭಕ್ತಿ ಪ್ರತ್ಯಯಗಳು ಎರಡೂ ವಚನಗಳಲ್ಲಿ ಮತ್ತು ಮೂರೂ ಲಿಂಗಗಳಲ್ಲಿ ಸಮಾನವಾದುವಾಗಿವೆ. ಇವು ಏಕವಚನದಲ್ಲಿ ಪ್ರಕೃತಿಯ ಮುಂದೆಯೂ ಬಹುವಚನದಲ್ಲಿ ಬಹುವಚನದ ಪ್ರತ್ಯಯ ಬಂದ ಮೇಲೂ ಸೇರುತ್ತವೆ. ಕವಿರಾಜಮಾರ್ಗದಲ್ಲಿ "ಕಾರಕಮಾಱು ಕರ್ಮಕರಣಾದಿಕದಿಂ ಪ್ರಥಮಾದಿ ಭೇದ ನಿರ್ಧಾರದಿಂದದಂ ಪಿಡಿದು ನಿಲ್ವ ವಿಭಕ್ತಿಗಳೇೞಿನಿಕ್ಕುಂ"[6] ಎಂಬ ನಿರೂಪಣೆಯಿದೆ.

ಪ್ರಥಮಾ ವಿಭಕ್ತಿಗೆ ಪ್ರತ್ಯೇಕವಾದ ಪ್ರತ್ಯಯವಿಲ್ಲ. ಪ್ರಕೃತಿಯನ್ನೇ ಪ್ರಥಮೆಯ ಅರ್ಥದಲ್ಲಿ ಬಳಸಲಾಗಿದೆ. ಉದಾ: ಕದಂಬಪನ್, ಶ್ರೀಧರನ್, ಸುಪಣ್ಡಿತನ್, ಮುನಿ, ಗುರವರ್; ಇನಜ್ಞಾರಾ ಮೆಳ್ಳವಾಸಗುರವರ್ ಕಟ್ಬಿಪ್ಪಬೆಟ್ಟಮ್ಮೇಲ್ಸಾಲು ಕೆಯ್ದಾರ್ (ಎ.ಕ. ii. ೩೧) ದ್ವಿತೀಯೆಗೆ ಅನ್, ಅಮ್(ಅಂ), ಅ ಎಂಬ ಪ್ರತ್ಯಯಗಳಿವೆ. ಇವುಗಳ ಜೊತೆಗೆ ಆನ್, ಆ ಎಂಬ ದೀರ್ಘ ರೂಪಗಳು ಬಳಕೆಯಾಗಿರುವುದು ಇಲ್ಲಿನ ವೈಶಿಷ್ಟ್ಯ. ಉದಾ: ಅನ್: ಏ.ವ, ಸಿಂಘಮನ್, ಮಣ್ಡಲಮನ್, ಉಡುಗುರೆಯನ್; ಬ. ವ: ಪೆಣ್ಡಿರನ್, ಪನ್ದಿಗಳನ್; ಅವಮ್: ಮನವಮ್, ಬೞಿಯಮ್, ಪುಲ್ಲಮ್; ಅಂ : ಏ. ವ: ಕಳನ್ತೂರನಂ, ಕೆಯ್ಯಂ, ಯತಿಯಂ, ಅರಸನಂ; ಬ. ವ: ಪಲರಂ, ಪಾರ್ವರುಮಂ, ಬ್ರಾಹ್ಮಣರುಮಂ; ಅ: ಪುಲ್ಲ, ದೇಹವ, ಕಯ್ಯ, ರಾಜ್ಯವ, ಆಸನಮ; ಆನ್ : ಏ. ವ: ದೇಗುಲಮಾನ್, ಸಿದ್ಧಿಯಾನ್, ನೃಪನಾನ್, ಎಡೆಯಾನ್; ಬ. ವ: ನೃಪರ್ಕ್ಕಳಾನ್, ಪೂರ್ವಮಳ್ಯಾದೆಗಳಾನ್; ಆ: ಫಲಮಾ, ಸಮೂಹಬಲಮಾ.

೭ನೆಯ ಶತಮಾನದ ಶಾಸನಗಳಲ್ಲಿ ಆನ್-ಅನ್ ಮತ್ತು ಆ-ಅ ಎಂಬ ಎಲ್ಲ ರೂಪಗಳೂ ಸಮಾನಾಂತರವಾಗಿ ಬಳಕೆಯಾಗಿದ್ದರೆ, ೮ನೆಯ ಶತಮಾನದಲ್ಲಿ ಆನ್-ಅನ್ ಎಂಬುವು ಹಾಗೆ ಬಳಕೆಯಾಗಿವೆ. ಆದರೆ ೯ನೆಯ ಶತಮಾನಕ್ಕೆ ಬರುವ ವೇಳೆಗೆ ಆನ್ ಪ್ರತ್ಯಯದ ಬಳಕೆ ಕುಗ್ಗಿ, ಅನ್ ಪ್ರತ್ಯಯವೇ ಮೇಲುಗೈ ಆಗಿರುವುದು ಕಂಡುಬರುತ್ತದೆ. ೧೦ನೆಯ ಶತಮಾನಕ್ಕೆ ಬಂದರಂತೂ ಆನ್ ಪ್ರತ್ಯಯದ ಬಳಕೆ ಬಹುಮಟ್ಟಿಗೆ ಇಲ್ಲವಾಗಿ ಅನ್ ಎಂಬುದು ಅದರ ಸ್ಥಾನವನ್ನು ಹಿಡಿದಿದೆ. ಈ ವಿವರಣೆಯಿಂದ ನಮಗೆ ಆನ್ ಮತ್ತು ಆ ಪ್ರತ್ಯಯಗಳು ಅನ್ ಮತ್ತು ಅ ಪ್ರತ್ಯಯಗಳಿಗಿಂತ ಪ್ರಾಚೀನವೆಂಬುದು ಸಿದ್ಧವಾಗುತ್ತದೆ.[7]

ತೃತೀಯೆಗೆ ಇಮ್ (ಇಂ), ಇನ್, ಇಂದ, ಇಂದು ಎಂಬ ಪ್ರತ್ಯಯಗಳಿವೆ. ಇಮ್ (ಇಂ), ಇನ್ ಎಂಬ ಪ್ರತ್ಯಯಗಳಲ್ಲಿ ವಿಶೇಷಭೇದವಿಲ್ಲ. ಉದಾ: ಇಮ್: ಭಕ್ತಿಯಿಮ್, ಅಧಿಕಾರದಿಮ್; ಇಂ: ಗುಣದಿಂ, ಮುನಿಸಿಂ, ಸ್ವರ್ಲೋಕದಿಂ; ಇನ್:

ಏ. ವ: ತಪದಿನ್, ಸನ್ಮಾರ್ಗದಿನ್; ಬ. ವ: ಕುಮಾರರಿನ್, ಮಾಲೆಗಳಿನ್; ಇಂದ: ಧವಳೈಕಛತ್ರಛಾಯೆ ಇಂದ, ದೇವದಣ್ಡದಿನ್ದ; ಇಂದು: ವಿಧಾನದಿನ್ದು.

ಚತುರ್ಥಿ ವಿಭಕ್ತಿಯಲ್ಲಿ ಕೆ, ಗೆ ಎಂಬುವು ಪ್ರಧಾನ ಪ್ರತ್ಯಯಗಳು.[8] ಇವೇ ವಿಭಿನ್ನ ಸನ್ನಿವೇಶಗಳಲ್ಲಿ ಕ್ಕೆ, ಗ್ಗಿ, ಂಗೆ, ಇಗೆ ಎಂಬ ರೂಪಗಳನ್ನು ತಳೆಯುತ್ತವೆ.

ಉದಾ: ಕೆ: ಆಲಯಕೆ, ದೇಗುಲಕೆ; ಗೆ: ದೇವೆಱೆಯಗೆ, ಕಲ್ಮನೆಗೆ, ಭಟಾರಗೆ, ಭಟ್ಟಡಿಗಳ್ಗೆ; ಕ್ಕೆ: ಜಿನಾಲಯಕ್ಕೆ, ರಮ್ಯಸುರಲೋಕಸುಕಕ್ಕೆ, ವಂಸಕ್ಕೆ; ಗ್ಗಿ: ರೇಫೆ ಇದಿರಾದಾಗ ದ್ವಿತ್ವ ಬರುತ್ತದೆ: ಊರ್ಗ್ಗೆ, ದೇವರ್ಗ್ಗೆ; ಂಗೆ: ಭಟರಿಂಗೆ: ಸುತನ್ಗೆ, ಅರಸನ್ಗೆ, ಅಱಿಮೊನ್ಗೆ; ಇಗೆ: ಕಾಲನಿಗೆ,

ಈ ಕಾಲದ ಭಾಷೆಯಲ್ಲಿ ಪಂಚಮೀವಿಭಕ್ತಿಯ ಪ್ರಯೋಗವಿಲ್ಲ. ಕವಿರಾಜಮಾರ್ಗ ದಲ್ಲೇನೋ ಪಂಚಮಿಗೆ ಅತ್ತಣಿಂ ಎಂಬ ಪ್ರತ್ಯಯವನ್ನು ಹೇಳಿ 'ಅವನೀಶನತ್ತಣಿಂ' ಎಂಬ ಪ್ರಯೋಗವನ್ನು ಕೊಡಲಾಗಿದೆ.[9] ಶಾಸನದಲ್ಲಿ 'ಪುರಿಗೆಱೆಯಿಮ್' ಎಂಬೆಡೆ ತೃತೀಯೆಯ ಪ್ರತ್ಯಯವನ್ನೇ ಪಂಚಮಿಯ ಅರ್ಥದಲ್ಲಿ ಬಳಸಲಾಗಿದೆ.[10]

ಷಷ್ಠೀವಿಭಕ್ತಿಗೆ ಅ ಎಂಬ ಪ್ರತ್ಯಯವಿದೆ. ಆದರೆ ಅದರ ದೀರ್ಘರೂಪದ ಬಳಕೆ ಈ ಕಾಲದ ವೈಶಿಷ್ಟ್ಯ. ಉದಾ: ಏ. ವ: ಅಱಿದೊನ, ಸಂಘದ, ಪುಲ್ಲ, ಕಟ್ಟಿಪ್ಪಿನ; ಬ. ವ: ಗುರವರ, ಭಟಾರರ, ತಮ್ಮಡಿಗಳ, ಲೋಕನುಹಾದೇವಿಯರ. ಆ: ಏ. ವ: ಆಳಿದೊನಾ, ಬಾಳಾ, ಧರ್ಮ್ಮದಾ, ಮಂಗಳೀಸನಾ; ಬ. ವ: ತಾಯ್ವಿರಾ, ಭಟಾ ರರಾ, ಮಹಾರಾಜರಾ, ಮನಸಿಜರಾ.

೭ನೆಯ ಶತಮಾನದ ಶಾಸನಗಳಲ್ಲಿ ಅ ಮತ್ತು ಆ ಎಂಬೆರಡೂ ರೂಪಗಳ ಬಳಕೆ ಯಿದೆ. ಅವುಗಳಲ್ಲಿ ಆ ಪ್ರತ್ಯಯದ ಪ್ರಾಚುರ್ಯವೇ ಹೆಚ್ಚು. ೮ನೆಯ ಶತಮಾನದ ಶಾಸನಗಳಲ್ಲಿಯೂ ಹೆಚ್ಚುಕಡಿಮೆ ಇದೇ ಪರಿಸ್ಥಿತಿ ಕಂಡುಬರುತ್ತದೆ. ೯ನೆಯ ಶತಮಾ ನಕ್ಕೆ ಬರುವ ವೇಳೆಗೆ ಆ ಪ್ರತ್ಯಯದ ಬಳಕೆ ಕುಗ್ಗಿ ೧೦ನೆಯ ಶತಮಾನಕ್ಕಂತೂ ಅ ಪ್ರತ್ಯಯವೇ ಎಲ್ಲೆಡೆ ಬಳಕೆಯಾಗಿದೆ.[11]

ಸಪ್ತಮಿಗೆ ಉಳ್, ಒಳ್ ಪ್ರತ್ಯಯಗಳು ವಿಶೇಷವಾಗಿ ಪ್ರಯೋಗವಾಗಿವೆ. ಇವಲ್ಲದೆ ಉಳ, ಉಳ್ಳೇ, ಉಳ್ಳಿ, ಒಳೆ, ಒಳು, ಅಲ್ಲಿ, ಅಲಿ, ಇ, ಎ, ಏ ಎಂಬ ಬೇರೆ ಪ್ರತ್ಯಯ ಗಳೂ ಸಪ್ತಮ್ಯರ್ಥದಲ್ಲಿ ಬಳಕೆಯಾಗಿವೆ. ಈ ಪ್ರತ್ಯಯಗಳಲ್ಲಿ ಹೆಚ್ಚಿನವು ಉಳ್ ಎಂಬ ಒಂದೇ ಮೂಲದಿಂದ ಉತ್ಪನ್ನವಾದುವು. "ಉಳ್ ಎಂಬುದರ ಮುಂದೆ ಸಪ್ತಮ್ಯ ರ್ಥದ ಎ, ಏ ಕಾರಗಳು ಸೇರಿ ಉಳೆ, ಉಳ್ಳೇ ಎಂಬಿವುಗಳಾಗಿವೆ. ಆದಿ ಉ ಕಾರವು ಒ ಕಾರದಲ್ಲಿ ಪರಿಣಮಿಸಿದುದರಿಂದ ಉಳ್ ಎಂಬುದು ಒಳ್ ಎಂದಾಯಿತು. ಇದು ಉಕಾರದೊಂದಿಗೆ ಸ್ವರಾಂತವಾಗಿ ಒಳು ಎಂಬುದೂ ಎಕಾರ ಸೇರುವುದರಿಂದ ಒಳೆ ಎಂಬುದೂ ಉಂಟಾದುವು."[12] ಉದಾ: ಉಳ್: ವೆಟ್ಟದುಳ್, ಧರಣಿಯುಳ್, ಆಹವದುಳ್, ಪಥದುಳ್, ಊರುಳ್; ಒಳ್: ಯೋಗದೊಳ್, ಮಾರ್ಗದೊಳ್, ವನದೊಳ್; ಉಳ: ಪ್ರಿಥುವೀರಾಜ್ಯದುಳ, ಕಾದಳಾಲದುಳ; ಉಳ್ಳೇ: ಉದಿತಶ್ರೀ

ಕಟ್ಟಿಪ್ಪಿನುಳ್ಳೇ; ಉಳ್ಳಿ :ಪರ್ವತದುಳ್ಳಿ, ಸುಮಾರ್ಗ್ಗದುಳ್ಳಿ, ಶ್ರೀಸಂಘದುಳ್ಳಿ; ಒಳೆ: ಊರೊಳೆ, ಸಮಾಧಿಯೊಳೆ; ಒಳು; ಊರೊಳು, ಪುತ್ತೂರೊಳು; ಅಲ್ಲಿ; ವಿತ್ತಿದಲ್ಲಿ, ಅಲಿ: ಒಡ್ಡಲಿ; ಇ: ಸಂಘದಿ; ಎ: ಸಮುಕ್ಷದೆ, ಮನದೆ; ಏ. ಪಙ್ಞಪದದೆ.

ಸಂಬೋಧನೆಗೆ ಪ್ರತ್ಯೇಕ ಪ್ರತ್ಯಯವೇನೂ ಇಲ್ಲ. ಶಾಸನಗಳಲ್ಲಿ ಸಂಬೋಧನ ರೂಪ ಗಳು ಬಹಳ ಕಡಿಮೆ. ಒಂದೆಡೆ ಕೇವಲ ಪ್ರಕೃತಿಯೇ ಸಂಬೋಧನೆಯ ರೂಪದಲ್ಲಿ ಬಳಕೆಯಾಗಿದ್ದರೆ, ಮತ್ತೊಂದೆಡೆ ನಾಮಪದಕ್ಕೆ ಏ ಎಂಬ ಪ್ರತ್ಯಯವನ್ನು ಸೇರಿಸ ಲಾಗಿದೆ. ಉದಾ : ಪ್ರಕೃತಿಗೆ: "ಕುಲಮುದ್ದ ನೀನೀ ಕಯ್ಯ ಪೊಕ್ಕು ಕಾದೆನ್ದು ಬೆಸಸೆ"— ಎಂಬಲ್ಲಿ ಕುಲಮುದ್ದ ಎಂಬ ಪ್ರಕೃತಿ ರೂಪವೇ ಸಂಬೋಧನಾರ್ಥದಲ್ಲಿದೆ. ಏ: "ಬಾಳೇ ಪೆರ್ಗೊರವಂ ಸಮಾಧಿ ನೆರೆದೊನ್."

ಹೀಗೆ ಪಂಚಮಿಯ ಹೊರತಾಗಿ ಎಲ್ಲ ವಿಭಕ್ತಿಗಳೂ ಈ ಕಾಲದಲ್ಲಿ ಬಳಕೆಯಾಗಿ ರುವುದನ್ನು ನಾವು ಕಾಣುತ್ತೇವೆ. ಕೆಲವೆಡೆಗಳಲ್ಲಿ ಒಂದು ವಿಭಕ್ತಿಗೆ ಬದಲು ಮತ್ತೊಂದು ವಿಭಕ್ತಿ ಬಳಕೆಯಾಗುವುದೂ ಉಂಟು; ವಿಭಕ್ತಿಪಲ್ಲಟವೆಂದು ವ್ಯಾಕರಣದಲ್ಲಿ ಇದನ್ನು ಕರೆ ದಿದೆ. ಉದಾ: "ಇದಂ ಕಾದು ಸಲಿಪೊಂಗೆ... ಫಲಪ್ರಾಪ್ತಿ ಅಕ್ಕುಂ" ಎಂಬ ಚತುರ್ಥಿಯ ರೂಪಕ್ಕೆ ಬದಲಾಗಿ "ಇದಂ ಕಾದು ಸಲಿಪೊನ್....ಫಲಪ್ರಾಪ್ತಿ ಅಕ್ಕುಂ" ಎಂಬ ಪ್ರಥ ಮೆಯ ರೂಪ ಬಳಕಯಾಗಿದೆ. "ಲೋಕಾದಿತ್ಯ ಎಬಿಅರಸರ್ ಮಗನ್ದಿರ್ ಮಲ್ಲಡಿಯುಂ" ಎಂಬಲ್ಲಿ 'ಎಬಿ ಅರಸರ' ಎಂಬ ಷಷ್ಠಿಗೆ ಬದಲು ಪ್ರಥಮ ಬಳಕೆಯಾಗಿದೆ. "ಭಟಾರರ.... ರಾಜ್ಯಂಗೆಯೆ" ಎಂಬಲ್ಲಿ 'ಭಟಾರರ್' ಎಂಬ ಪ್ರಥಮೆಗೆ ಬದಲು ಷಷ್ಠಿ ಬಳಕೆಯಾಗಿದೆ.

ಪ್ರಕೃತಿಗಳಿಗೆ ವಿಭಕ್ತಿ ಪ್ರತ್ಯಯಗಳು ಕೆಲವೊಮ್ಮೆ ನೇರವಾಗಿ ಸೇರಿದರೆ ಮತ್ತೆ ಕೆಲವೊಮ್ಮೆ ಪ್ರಕೃತಿ ಮತ್ತು ವಿಭಕ್ತಿ ಪ್ರತ್ಯಯಗಳ ನಡುವೆ ಬೇರೆ ಪ್ರತ್ಯಯಗಳು ಬಂದು ಸೇರಿಕೊಳ್ಳುತ್ತವೆ. ಇವುಗಳನ್ನು ಆಗಮಗಳು ಅಥವಾ ಔಪವಿಭಕ್ತಿಗಳು ಎಂದು ಕರೆದಿದ್ದಾರೆ. ಈ ಕಾಲದ ಭಾಷೆಯಲ್ಲಿ ಯ್, ಇನ್, ದ್ ಮೊದಲಾದ ಆಗಮಗಳು ಬಂದಿವೆ. ಉದಾ: ಯ್: ಎಡೆ+ಆನ್ = ಎಡೆಯಾನ್, ಮೇರೆ + ಉಳ್ = ಮೇರೆ ಯುಳ್, ವಾರಣಾಸಿ + ಅ = ವಾರಣಾಸಿಯ, ಕುದುರೆ + ಒಳ್ = ಕುದುರೆಯೊಳ್. ಇನ್: ಸ್ವಾಧ್ಯಾಯಸಂಪತ್ತು + ಇಮ್ = ಸ್ವಾಧ್ಯಾಯಸಂಪತ್ತಿನಿಮ್, ಕಟ್ಟಿಪ್ಪು + ಉಳ್ = ಕಟ್ಟಿಪ್ಪಿನುಳ್; ದ್: ಅಧಿಕಾರ + ಇಂ ಅಧಿಕಾರದಿಂ, ಸರ್ಪ್ಪ + ಅ = ಸರ್ಪದ, ಪರೂತ + ಉಳ್ = ಪರೂತದುಳ್, ಸುಮಾರ್ಗ್ಗ + ಉಳ್ಳಿ = ಸುಮಾರ್ಗ್ಗದುಳ್ಳಿ.

ಸರ್ವನಾಮ: ಸರ್ವನಾಮಗಳು ಪ್ರತಿಯೊಂದು ಭಾಷೆಯಲ್ಲೂ ಹೆಚ್ಚು ಬದಲಾವಣೆ ಗಳನ್ನು ಹೊಂದದೆ ಸ್ಥಿರವಾಗಿರುವಂಥವು. ಇಲ್ಲಿ ಸ್ವೀಕರಣವೂ ವಿರಳ. ಈ ಕಾಲದಲ್ಲಿ ಬಳಕೆಯಾಗಿರುವ ಸರ್ವನಾಮಗಳೇ ಹೆಚ್ಚು ಬದಲಾವಣೆಗಳನ್ನು ಹೊಂದದೆ ಮುಂದಿನ ಕಾಲಗಳಿಗೂ ಹರಿದುಬಂದಿವೆ. ಸರ್ವನಾಮಗಳಲ್ಲಿ ಪುರುಷವಾಚಕ, ಆತ್ಮಾರ್ಥಕ, ನಿರ್ದೇಶನಾತ್ಮಕ ಮತ್ತು ಪ್ರಶ್ನಾರ್ಥಕ ಎಂದು ನಾಲ್ಕು ಬಗೆ. ಅವುಗಳ ಸ್ವರೂಪ ಈ ಕೆಳಕಂಡಂತೆ ಇದೆ:

| | | ಏಕವಚನ | ಬಹುವಚನ |
|---|---|---|---|
| ಪುರುಷವಾಚಕ : | ಉ. ಪು. | ಆನ್ | — |
| | ಮ. ಪು. | ನೀನ್ | ನೀಮ್ |
| | ಪ್ರ. ಪು. | — | ಅವರ್ |
| | | ಅದು | — |
| ಆತ್ಮಾರ್ಥಕ : | | ತಾನ್ | ತಾಮ್ |

ಪ್ರಥಮ ಪುರುಷದ ಸರ್ವನಾಮಗಳೇ ನಿರ್ದೇಶನಾತ್ಮಕವಾಗಿಯೂ ಬಳಸಲ್ಪಟ್ಟಿದೆ. ಅವರ್, ಅದು ಎಂಬುವು ದೂರನಿರ್ದೇಶನಾತ್ಮಕಗಳಾದರೆ, ಇವನ್, ಇದು, ಈತ ಸಮೀಪನಿರ್ದೇಶನಾತ್ಮಕಗಳಾಗಿವೆ. ಪ್ರಶ್ನಾರ್ಥಕ ಸರ್ವನಾಮಗಳಾಗಿ ಆವೋನ್, ಆರುಂ, ಏನ್ ಎಂಬುವು ಬಳಕೆಯಾಗಿವೆ.

ಗುಣವಾಚಕ : ಗುಣವಾಚಕಗಳು ನಾಮಪದಗಳಿಗೆ ವೈಶಿಷ್ಟ್ಯವನ್ನು ತಂದು ಕೊಡುವ ರೀತಿಯಲ್ಲಿ ಬಳಕೆಯಾಗಿವೆ. ನಲ್, ಪೆರ್, ಇನಿ, ಕರ್, ಒಳ್—ಇವೇ ಮೊದಲಾದುವು ಈ ಅವಧಿಯ ಶಾಸನಗಳಲ್ಲಿ ಕಾಣುವ ಗುಣವಾಚಕಗಳು. ಅಚ್ಚಗನ್ನಡ ಗುಣವಾಚಕಗಳ ಸಂಖ್ಯೆ ಕಡಿಮೆ. ಸಂಸ್ಕೃತದಿಂದ ಸ್ವೀಕರಣ ಹೆಚ್ಚು. ನಲ್ : ನಲ್ಗಿರಿ, ನಲ್ತಪ ; ಪೆರ್ : ಪೆರಿಯ, ಪೆರ್ಗ್ಗೊರವಂ, ಪೆವ್ವಳ್ಳ ; ಇನಿ : ಇನಿತು, ಇನಿಬರ್ ; ಕರ್ : ಕರ್ಗ್ಗಲ್ ; ಒಳ್ : ಒಳ್ತು. ಸಂಸ್ಕೃತದಿಂದ ಅಧಿಕ, ಅಂಧ, ಅನವದ್ಯ, ಕುಲ ತಿಲಕ, ಪರಾಯಣ ಮೊದಲಾದ ಗುಣವಾಚಕಗಳನ್ನು ಸ್ವೀಕರಿಸಲಾಗಿದೆ.

ನಾಮಪದಗಳಿಗೆ ಹಿಂದೆ ಬಂದ ಸಂಖ್ಯಾವಾಚಕಗಳು ಗುಣವಾಚಕಗಳ ರೂಪ ತಳೆದಿವೆ. ಇರ್ಪ್ಪತ್ತೊಂದು ದಿವಸಂ, ಇರ್ಕ್ಕಾಲ, ಒಂದು ತಿಙ್ಗಳ್, ಮೂರು ತಿಙ್ಗಳುಳ್, ಸಾಸಿರ ಕವಿಲೆಯುಂ ಎಂಬ ಕಡೆಗಳಲ್ಲಿ ಸಂಖ್ಯಾವಾಚಕಗಳು ಗುಣವಾಚಕಗಳಾಗಿರುವು ದನ್ನು ಕಾಣಬಹುದು. ಆ, ಈ ಎಂಬ ನಿರ್ದೇಶನಾತ್ಮಕ ಸರ್ವನಾಮಗಳೂ ಗುಣ ವಾಚಕಗಳಾಗಿ ಬಳಕೆಯಾಗಿವೆ. ಆ ಕಳನ್ತೂರನಂ, ಈ ಧರಣಿಯುಳ್, ಈ ಪರ್ವತ ದುಳ್ಳೆ ಎಂಬೆಡೆಗಳಲ್ಲಿ ಇದನ್ನು ಕಾಣಬಹುದು.

ಸಂಖ್ಯಾವಾಚಕ : ಈ ಯುಗದಲ್ಲಿ ಬಳಕೆಯಾಗಿರುವ ಸಂಖ್ಯಾವಾಚಕಗಳೇ ಇಂದಿಗೂ ಹೆಚ್ಚು ವ್ಯತ್ಯಾಸವಾಗದೆ ಉಳಿದುಬಂದಿವೆ. ಒಂದು, ಎರಡು, ಮೂಱು, ನಾಲ್ಕು, ಅಯ್ದು, ಆಱು, ಏೞು, ಎಂಟು ಎಂಬ ರೂಪಗಳೇ ಇಲ್ಲಿಯೂ ಕಂಡುಬರುತ್ತವೆ. ಪಂಚ, ದ್ವಾದಶ ಮೊದಲಾದ ಸಂಸ್ಕೃತ ಸಂಖ್ಯಾವಾಚಿಗಳೂ ಬಳಕೆಯಾಗಿವೆ. ಹತ್ತರಿಂದ ನೂರರ ವರೆಗಿನ ಸಂಖ್ಯೆಗಳು ಕೂಡುವಿಕೆ ಇಲ್ಲವೆ ಗುಣಿಸುವಿಕೆಯಿಂದ ನಿರ್ಮಾಣವಾಗಿವೆ: ಉದಾ : ಪನ್ನೆರಡು : ಪತ್ತು + ಎರಡು ; ಪದಿನಯಿದು : ಪತ್ತು + ಅಯಿದು. ಇರ್ಪ್ಪತ್ತು : ಎರಡು + ಪತ್ತು ; ಏೞ್ನೂಱು : ಏೞು + ನೂಱು. ಸಾಸಿರ ಎಂಬುದು ಸಹಸ್ರ ಎಂಬ ಸಂಸ್ಕೃತದಪದದ ತದ್ಭವವಾಗಿ ಬಂದಿದೆ. ಅನ್, ಅರ್ ಎಂಬ ಪ್ರತ್ಯಯಗಳನ್ನು ತಳೆದು

ಸಂಖ್ಯಾವಾಚಕಗಳು ನಾಮಪದಗಳಾಗಿ ಬಳಕೆಯಾಗಿವೆ : ಉದಾ : ಅನ್ : ಒರ್ವ್ವನ್ ಓವ್ವನ್ ; ಅರ್ : ಏಳ್ನೂರ್ವ್ವರಂ, ಸಾಸಿರ್ವ್ವರಂ.

ಅನೆ ಅಥವಾ ಅನೆಯ ಎಂಬ ಪ್ರತ್ಯಯವು ಮೂಲಸಂಖ್ಯಾವಾಚಿಗಳಿಗೆ ಸೇರಿ ತನ್ಮೂಲಕ ಅವು ಶ್ರೇಣಿಸಂಖ್ಯಾವಾಚಿಗಳಾಗಿ ಮಾರ್ಪಟ್ಟು ಅನಂತರ ಗುಣವಾಚಿಗಳಾಗಿ ಪ್ರಯೋಗಿಸಲ್ಪಟ್ಟಿವೆ. ಉದಾ : ಅನೆ : ನಾಲ್ವತ್ತೆರಡನೆ ; ಅನೆಯ : ಏಳನೆಯ, ಎಂಟನೆಯೊಳು. ಮೆ ಎಂಬ ಪ್ರತ್ಯಯವು ಸೇರಿ ಸಂಖ್ಯಾವಾಚಕವು ಕಾಲವಾಚಕದ ರೂಪವನ್ನು ತಾಳಿದೆ. ಉದಾ : ಒರ್ಮ್ಮೆ, ಮೂಮೆ.

ಕ್ರಿಯಾಪದ : ಧಾತುಗಳನ್ನು ಸಹಜ. ಪ್ರತ್ಯಯಾಂತ ಮತ್ತು ಸಂಯುಕ್ತ ಎಂದು ವಿಭಾಗಿಸುವುದುಂಟು. ಸಹಜ ಧಾತುಗಳು ಸಕರ್ಮಕ ಇಲ್ಲವೆ ಅಕರ್ಮಕ ರೂಪವುಳ್ಳವಾಗಿರುತ್ತವೆ. ಅಟ್ಟು, ಅಪ್ಪು, ಇಕ್ಕು, ಕೊಡು, ಕೇಳ್, ಕೊಳ್, ತರ್, ನೋನ್, ಪಡೆ, ಪೇಳ್—ಈ ಮೊದಲಾದುವು ಸಕರ್ಮಕಗಳಾದರೆ, ಆಗು, ಇರ್, ಉಳ್, ಕಿಡು, ತಣಿ, ನಡೆ, ನಿಲ್, ಪೋಗು, ಬರ್, ಮಿಗು—ಈ ಮೊದಲಾದವು ಅಕರ್ಮಕಗಳು.

ಪ್ರತ್ಯಯಾಂತ ಧಾತುಗಳಲ್ಲಿ ಪ್ರೇರಣಾರ್ಥಕವೆಂಬ ರೂಪವುಂಟು. ಸಹಜ ಧಾತುಗಳಿಗೆ ಪ್ಪು, ಪು, ಇಸು ಎಂಬ ಪ್ರತ್ಯಯಗಳು ಸೇರಿ ಅವು ಪ್ರೇರಣಾರ್ಥಕಗಳಾಗಿರುವುದನ್ನು ನಾವಿಲ್ಲಿ ಕಾಣುತ್ತೇವೆ. ಉದಾ : ಪ್ಪು : ಮುಡಿಪ್ಪಿದಾರ್ ; ಪು : ಮುಡಿಪಿ ; ಇಸು : ಬಿಡಿಸಿದರ್, ಕಿಡಿಸು, ಪಾಲಿಸಿದೊಂ.

ಧಾತುಗಳಿಗೆ ಹತ್ತುವ ಪ್ರತ್ಯಯಗಳು ಭಿನ್ನವಾದಂತೆ ಅವುಗಳಿಂದಾಗುವ ಕ್ರಿಯಾಪದಗಳ ಅರ್ಥಸ್ವರೂಪದಲ್ಲಿಯೂ ಭಿನ್ನತೆಯುಂಟಾಗುತ್ತದೆ. ಇದರ ಆಧಾರದ ಮೇಲೆ ಕ್ರಿಯಾಪದಗಳನ್ನು ಸಾಮಾನ್ಯಾರ್ಥಕ, ವಿಧ್ಯರ್ಥಕ, ನಿಷೇಧಾರ್ಥಕ ಮತ್ತು ಅಪೂರ್ಣ ಎಂದು ವಿಭಾಗಿಸಿದ್ದಾರೆ. ಈ ಕಾಲದ ಭಾಷೆಯಲ್ಲಿ ಕ್ರಿಯಾಪದದ ಈ ಎಲ್ಲ ರೂಪಗಳನ್ನೂ ನಾವು ಕಾಣಬಹುದು.

ದ ಎಂಬುದು ಭೂತಕಾಲವನ್ನೂ ಉತ್ತ (ಉತ) ಎಂಬುದು ವರ್ತಮಾನ ಕಾಲವನ್ನೂ ಮು, ವ, ಪ್ಪ ಎಂಬುವು ಭವಿಷ್ಯತ್ಕಾಲವನ್ನೂ ಸೂಚಿಸುವ ಪ್ರತ್ಯಯಗಳು.

ಧಾತುಗಳಿಗೆ ಮೊದಲು ಕಾಲವಾಚಕ ಪ್ರತ್ಯಯಗಳೂ ಅನಂತರ ಪುರುಷವಾಚಕ ಪ್ರತ್ಯಯಗಳೂ ಸೇರಿ ಅವು ಸಾಮಾನ್ಯ ಕ್ರಿಯಾಪದಗಳಾಗುತ್ತವೆ. ಪುರುಷವಾಚಕ ಪ್ರತ್ಯಯಗಳು ಪ್ರಥಮ ಪುರುಷನಲ್ಲಿ ಲಿಂಗವಚನಗಳನ್ನೂ ಸೂಚಿಸುತ್ತವೆ. ಈ ಕಾಲದಲ್ಲಿ ಕಂಡುಬರುವ ಪುರುಷವಾಚಕ ಪ್ರತ್ಯಯಗಳು ಇಂತಿವೆ :

| | ಏಕವಚನ | ಬಹುವಚನ |
|---|---|---|
| ಉತ್ತಮ : | ಎನ್ | — |
| ಮಧ್ಯಮ : | — | — |
| ಪ್ರಥಮ : | ಆನ್, ಅನ್, ಅಂ | ಆರ್, ಅರ್ |
| | ಆಳ್, ಅಳ್ | ಆರ್ |
| | ಅದು | ಅವು |

ನೋಡು, ಕಾಡು, ಕಾದು, ಮೊದಲಾದ ಧಾತುಗಳು ಸ್ವಸ್ವರೂಪದಲ್ಲಿ ಮಧ್ಯಮ ಪುರುಷದ ವಿಧ್ಯರ್ಥಕಗಳಾಗಿ ಬಳಸಲ್ಪಟ್ಟಿವೆ. ಕ್ವಚಿತ್ತಾಗಿ ಕೇಳೊಯ್ ಎಂಬಲ್ಲಿ ಕೇಳ್ ಎಂಬ ಧಾತುವಿಗೆ ಒಯ್ ಪ್ರತ್ಯಯ ಸೇರಿದೆ. ಇಲ್ಲಿಯೂ ಕೇಳ್ ಎಂಬುದಷ್ಟೇ ಸಾಕಾಗಿತ್ತು. ಆದರೆ ಕ್ರಿಯೆಯೊಂದನ್ನು ವಿಧಿಸುವ ಸಲುವಾಗಿ ಕರ್ತೃವಿನ ಗಮನ ಸೆಳೆಯಲು ಒಯ್ ಸೇರಿಸಲಾಗಿದೆ.

ಧಾತು ಮತ್ತು ಪುರುಷವಾಚಕ ಪ್ರತ್ಯಯದ ನಡುವೆ ನಿಷೇಧಸೂಚಕ ಪ್ರತ್ಯಯವು ಸೇರಿಬಂದು ಧಾತುಗಳು ನಿಷೇಧಾರ್ಥವನ್ನು ಪಡೆಯುತ್ತವೆ. ಉದಾ : ಉ.ಪು : (ಏ.ವ) ಮೆಚ್ಚೆನ್ ; ಪ್ರ.ಪು : (ಬ.ವ) ನಿಲ್ಲವು.

ಧಾತುಗಳಿಗೆ ಇ, ದು, ತು ಪ್ರತ್ಯಯಗಳು ಸೇರಿದಾಗ ಅವು ಭೂತನ್ಯೂನ ರೂಪವನ್ನು ತಾಳುತ್ತವೆ. ಉದಾ : ಇ : ಆಗಿ, ಇಕ್ಕಿ, ಏಱಿ, ಒಟ್ಟಿ, ನೋಡಿ ; ದು : ಕೊನ್ದು, ನಿನ್ದು, ಕಾದು, ಕೊರೆದು ; ತು: ಕಿೞ್ತು, ನೋನ್ತು

ಧಾತುಗಳಿಗೆ ಗೆ, ತೆ, ಪಿ, ಪು, ಮೆ, ವು, ತನ, ಮುಂತಾದ ಪ್ರತ್ಯಯಗಳನ್ನು ಸೇರಿಸಿ ಅವುಗಳನ್ನು ನಾಮಪದಗಳ ರೂಪದಲ್ಲಿ ಪ್ರಯೋಗಿಸಲಾಗಿದೆ. ಉದಾ : ಗೆ: ಆಳ್ಗೆ ; ತೆ : ನೆಗೞ್ತೆ ; ಪಿ : ನೋನ್ಪಿ ; ಪು : ವರ್ಪು ; ಮೆ : ಮದುಮೆ ; ವು : ಇರವು ; ತನ : ಒಕ್ಕಲ್ತನ.

ಕರ್ಮಣಿ ಪ್ರಯೋಗಕ್ಕೆ ಈ ಕಾಲದಲ್ಲಿ ಹೆಚ್ಚಿನ ಪ್ರಾಶಸ್ತ್ಯವಿಲ್ಲ. ಆದರೆ ಹಲ್ಮಿಡಿ ಶಾಸನದಲ್ಲಿ ಕ್ವಚಿತ್ತಾಗಿ 'ಪೊಗೞ್ಪೊಟ್ಟಣ' ಎಂಬ ಕರ್ಮಣಿ ರೂಪವಿದೆ. ಹಾಗೆಯೇ 'ಎಯ್ದೆಪ್ಪಡುವಾರ್', 'ಎಱೆವೆಪ್ಪಡುವೋರ್' ಎಂಬ ಕರ್ಮಣಿ ರೂಪಗಳನ್ನೂ ವಿದ್ವಾಂಸರು ಶಾಸನಗಳಲ್ಲಿ ಗುರುತಿಸಿದ್ದಾರೆ.[13] ಆದರೆ ಈ ಬಗೆಯ ಪ್ರಯೋಗಗಳು ತೀರ ಕಡಿಮೆ.

ಕ್ರಿಯಾವಿಶೇಷಣ : ಕ್ರಿಯಾವಿಶೇಷಣಗಳನ್ನು ಕಾಲವಾಚಕ, ಸ್ಥಾನವಾಚಕ ಮತ್ತು ರೀತಿವಾಚಕ ಎಂದು ವಿಭಾಗಿಸುತ್ತಾರೆ. ಕ್ರಿಯಾಪದಗಳಲ್ಲಿ ವೈಶಿಷ್ಟ್ಯವನ್ನು ತರಲು ಬಳಸುವ ಹಲವು ಕ್ರಿಯಾವಿಶೇಷಣಗಳಿಗೆ ಈ ಕಾಲದ ಭಾಷೆಯಲ್ಲಿ ಉದಾಹರಣೆಗಳು ದೊರೆಯುತ್ತವೆ. ಕಾಲವಾಚಕ : ಅಂದು, ಇಂದು, ಎಂದು, ಪಿನ್ ; ಸ್ಥಾನವಾಚಕ : ಇಲ್ಲಿ, ಕೆೞಗೆ, ಪೊಱಗೆ, ಮೇಲ್, ಮೇಲೆ, ಇದಿರ್ ; ರೀತಿವಾಚಕ : ಅಂತು, ಅಂತೆ, ಇಂತು, ಎಂತು.

ಸಮುಚ್ಚಯ : ಊಂ, ಉಂ, ಅಂ, ಆನು, ಊ, ಮೇಣ್ ಎಂಬುವು ಸಮುಚ್ಚಯಗಳು. ಊಂ : ಸೊರ್ಕ್ಕಗಾಮುಂಡರೂಂ ಎಡೆಯ ಗಾಮುಂಡರೂ *(IA.*, xix. p. 143 ; *HGOK.* p. 251) ಉಂ : ಅದಾನೞವೋರುಂ....ಅಱಿಮೆನೆನ್ದು ಪಾದೇಶಂ ಕೊಡುವೋರುಂ ಪಞ್ಚಮಹಾಪಾತಕ ಸಂಯುಕ್ತರಪ್ಪಾರ್. (ಎಕ. VI, ಕೊಪ್ಪ. ೩೮). ಅಂ : ಜಲದುಳಂ, ಸ್ಥಳದುಳಂ; ಆನು :....ಅದು ಮರಣನು ಪೊಕುಳಿಯಾನು ಕೊಡಂಗೆಯಾನು ಪೊಱಗಾಗಲೆ ಸಲೆವುಗೆಯ ಭಾಗಕಂ....(ಎಕ. VIII, ಸೊರಬ. ೫೭೧) ; ಮೇಣ್ : ಕೆಟ್ಟವರ್ಮೇಣ್ಣತ್ತರವಿಚಾರಮ್ (IA. x, p. 61)

## ರೂಪವ್ಯತ್ಯಾಸಗಳು

ಇ.ಪಿ. ರೈಸ್ ಮತ್ತು ಆರ್. ನರಸಿಂಹಾಚಾರ್ಯರು ಕನ್ನಡ ಭಾಷೆಗೆ ಪೂರ್ವದ ಹಳಗನ್ನಡ ಎಂಬ ಹಂತವುಂಟೆಂದು ಒಪ್ಪಿ ಅದನ್ನು ಸಾಧಾರವಾಗಿ ಸಮರ್ಥಿಸಿದ್ದಾರೆ. ಪೂ.ಹ.ಗ. ಎಂಬ ಪ್ರತ್ಯೇಕವಾದ ಹಂತವೊಂದನ್ನು ಗುರುತಿಸುವಷ್ಟು ಮಟ್ಟಿಗೆ ಆ ಕಾಲದ ಭಾಷೆ ವೈಲಕ್ಷಣ್ಯಪೂರ್ಣವಾದುದೇ ಎಂಬುದನ್ನೀಗ ವಿಚಾರ ಮಾಡಬೇಕು. ಪೂ.ಹ.ಗದ ವೈಲಕ್ಷಣ್ಯಗಳನ್ನು ವಿವರಿಸಿರುವಲ್ಲಿ ದ್ವಿತೀಯಾ ಮತ್ತು ಷಷ್ಠೀ ವಿಭಕ್ತಿಗಳಲ್ಲಿ ಆನ್, ಆ ಎಂಬ ದೀರ್ಘರೂಪದ ಪ್ರತ್ಯಯಗಳಿವೆ; ಸಪ್ತಮಿಯಲ್ಲಿ ಉಳ್ ಎಂಬ ಪ್ರತ್ಯಯದ ಪ್ರಯೋಗವಿದೆ; ಪ್ರ. ಪು.ದ ಆಖ್ಯಾತ ಪ್ರತ್ಯಯಗಳಲ್ಲಿ ಮತ್ತು ಕ್ರಿಯೆಯ ನಿಷೇಧರೂಪಗಳಲ್ಲಿ ದೀರ್ಘತ್ವವಿದೆ ಎಂಬುದು ಮುಖ್ಯವಾದವು. ಆದರೆ ಅದೇ ಕಾಲದಲ್ಲಿಯೇ ದ್ವಿತೀಯ ಮತ್ತು ಷಷ್ಠಿಗಳಲ್ಲಿ ಆನ್, ಆ ಗಳು ಇರುವಂತೆ ಅನ್, ಅ ಗಳೂ ಇವೆಯಲ್ಲ, ಸಪ್ತಮಿಯಲ್ಲಿ ಉಳ್ ಇರುವಂತೆ ಒಳ್ ಎಂಬುದೂ ಇದೆಯಲ್ಲ, ಪ್ರ.ಪು.ದ ಆಖ್ಯಾತ ಪ್ರತ್ಯಯಗಳಲ್ಲಿ ಮತ್ತು ಕ್ರಿಯೆಯ ನಿಷೇಧರೂಪಗಳಲ್ಲಿ ದೀರ್ಘತ್ವವಿರುವಂತೆಯೇ ಹ್ರಸ್ವರೂಪಗಳೂ ಇವೆಯಲ್ಲ ಎಂಬ ವಿಚಾರ ನಮ್ಮ ಮನಸ್ಸಿಗೆ ಬಾರದೆ ಇರದು. ಹೀಗೆಂದಮೇಲೆ ಪೂ.ಹ.ಗಕ್ಕೆಂದೇ ವಿಶಿಷ್ಟವಾದ ಲಕ್ಷಣಗಳಿಲ್ಲ ಎಂದಂತಾಯಿತು.

ಆದರೆ ಈ ಸಂದರ್ಭದಲ್ಲಿ ಗಮನಾರ್ಹವಾದ ಅಂಶವೊಂದಿದೆ. ಪೂ.ಹ.ಗದ್ದೆಂದು ವಿದ್ವಾಂಸರು ಗುರುತಿಸಿರುವ ವೈಲಕ್ಷಣ್ಯಗಳು ಹ.ಗ.ದ ಭಾಷೆಯಲ್ಲಿಯೂ ಇವೆಯೇ ಎಂದು ಪರಿಶೀಲಿಸಿದಾಗ ಇಲ್ಲವೆಂಬುದು ಗೋಚರವಾಗುತ್ತದೆ. ಆದುದರಿಂದ ಹ.ಗ.ದ ಹಿನ್ನೆಲೆಯಲ್ಲಿ ಅವು ಪೂ.ಹ.ಗ.ದ ವೈಲಕ್ಷಣ್ಯಗಳೆಂಬುದು ಸ್ಪಷ್ಟವಾಗುತ್ತದೆ. ಪೂ.ಹ.ಗ.ದ ವೈಲಕ್ಷಣ್ಯಗಳಲ್ಲಿ ಕೆಲವು ಹ.ಗದಲ್ಲಿಯೂ ಕಾಣಸಿಗಬಹುದು. ಆದರೆ ಅಲ್ಲಿ ಅವು ಕ್ವಚಿತ್ ಪ್ರಯೋಗಗಳೇ ಹೊರತು ಪ್ರಚುರರೂಪಗಳಲ್ಲ. ಪೂ.ಹ.ಗ ಯುಗವನ್ನು ಒಂದು ಸ್ವತಂತ್ರ ಘಟ್ಟವೆಂದು ಸ್ವೀಕರಿಸದೆ, ಅದು ಪೂ.ಹ.ಗ.ವು ಹ.ಗ.ವಾಗಿ ಪರಿವರ್ತಿತವಾಗುತ್ತಿದ್ದ ಕಾಲ ಎಂದು ಹೇಳಿದರೂ ಅದರದೇ ಆದ ಕೆಲವು ವೈಲಕ್ಷಣ್ಯಗಳು ಕಂಡುಬರುತ್ತವೆ. ರೈಸ್ ಮತ್ತು ನರಸಿಂಹಾಚಾರ್ಯ ಅವರ ವಿವರಣೆಗಳ ಆಧಾರದ ಮೇಲೆ ಪೂ.ಹ.ಗದ ವೈಲಕ್ಷಣ್ಯಗಳನ್ನು ಹೀಗೆ ಸಂಗ್ರಹಿಸಬಹುದು:[14]

ನಾಮಪದ: (1) ಹ.ಗ.ದಲ್ಲಿ ದ್ವಿತೀಯೆಗೆ ಅನ್ ಮತ್ತು ಷಷ್ಠಿಗೆ ಅ ಎಂಬ ಪ್ರತ್ಯಯಗಳಿವೆ. ಪೂ.ಹ.ಗ. ದಲ್ಲಾದರೋ ಈ ಪ್ರತ್ಯಯಗಳ ಜೊತೆಗೆ ಆನ್ ಮತ್ತು ಆ ಎಂಬ ದೀರ್ಘತ್ವವಿರುವ ರೂಪಗಳೂ ಇವೆ. ಉದಾ: ದ್ವಿತೀಯೆ: ಕೋಟಿಯಾನ್ ಅದಾನ್, ದೇಗುಲಮಾನ್, ಸಿದ್ಧಿಯಾನ್; ಷಷ್ಠಿ: ಸಂಘದಾ, ಅವ್ವೆಗಳಾ, ಬಾಳಾ, ಧರ್ಮ್ಮದಾ, ಮಂಗಳೀಸನಾ, ಪೆರ್ಗ್ಗಂಜಿಯ ಕೋಟಿಯಾನ್ ರೋಹಿಸಿ ಒಟ್ಟು (ಎಕ VIII. ಸೊರಬ. ೧೦) ಅದಾನಟಿವೊನ್ಗೆ ಮಹಾಪಾತಕಮ್ ಸ್ವಸ್ತಿ (ಹಲ್ಮಿಡಿ ಶಾಸನ. ಎಂ.ಎ.ಆರ್.) ಶ್ರೀ ನವಿಲೂರ್ಸಂಘದಾ ಗುಣಮತಿ ಅವ್ವೆಗಳಾ ನಿಸಿಧಿಗೆ (ಎಕ. II. ಶ್ರಬೆ, ೧೯) ಶ್ರೀ ಬಾಳಾಮೇಲ್ಕಿ ಖಿಮೇಲೆ ಸಪ್ಪ್ಪದ ಮಹಾದಂತಾಗ್ರದುಳ್ (ಎಕ. II. ಶ್ರಬೆ, ೨೫)

೨) ಹ.ಗ.ದಲ್ಲಿ ಸಪ್ತಮಿಗೆ ಒಳ್ ಎಂಬ ಪ್ರತ್ಯಯದ ಪ್ರಯೋಗವಿದ್ದರೆ ಪೂ.ಹ.ಗ. ದಲ್ಲಿ ಉಳ್ ಎಂಬ ಪ್ರತ್ಯಯವೂ ಇದೆ. ಉದಾ : ದಂತಾಗ್ರದುಳ್, ಮೇರೆಯುಳ್, ಮೆಟ್ಟಿದುಳ್, ಧರಣಿಯುಳ್, ಊರುಳ್ ಸರ್ಪದ ಮಹಾದನ್ತಾಗ್ರದುಳ್ (ಎಕ II) ಶ್ರಬೆ. ೨೫) ; ಕುಡಿಮುದ್ದನ್ ಮೇರೆಯುಳ್ಳಿಱಿದು ವಿಟ್ಟಿನ್ (ಎಕ. II. ಚನ್ನರಾಯ ಪಟ್ಟಣ, ೨೦೮)

(೩) ಚತುರ್ಥೀ ವಿಭಕ್ತಿಯಲ್ಲಿ ಹ.ಗ.ದಲ್ಲಿ ಗೆ ಬರುವೆಡೆಗಳಲ್ಲಿ ಪೂ.ಹ.ಗ.ದಲ್ಲಿ ಕೆಲ ವೆಡೆ ಕೆ ಪ್ರತ್ಯಯವು ಬಂದಿದೆ. ಉದಾ : ದೇವರ್ಕ್ಕೆ, ಮುತ್ತರಸರ್ಕ್ಕೆ, ಕಲ್ಮನೆಗೆ ಇತ್ತೊದು ಲಂಜಿಗೇಸರಂ ದೇವರ್ಕೆ....(*IA*. x. p. 60)

(೪) ಹ.ಗ.ದಲ್ಲಿ ಇತ್ತುದು, ಕೊಟ್ಟುದು ಎಂಬಲ್ಲಿ ನಪುಂಸಕಲಿಂಗದ ಪ್ರತ್ಯಯ ವಾಗಿ ಉದು ಎಂಬುದು ಬಳಕೆಯಾಗಿದ್ದರೆ ಪೂ.ಹ.ಗ.ದಲ್ಲಿ ಇದರ ಜೊತೆಗೆ ಇತ್ತೊದು, ಕೊಟ್ಟೊದು ಎಂಬಂತೆ ಒದು ಎಂಬ ಪ್ರತ್ಯಯವೂ ಬಳಕೆಯಾಗಿದೆ. ಶ್ರೀಮತ್ ಪ್ರಿಥಿವೀ ವಲ್ಲಭ ಮಂಗಳೀಸನಾ ಕಲ್ಮನೆಗೆ ಇತ್ತೊದು (*IA*. x. p. 60)

(೫) ಹ.ಗ.ದಲ್ಲಿ ಸಂಖ್ಯೆ ಗುಣವಾಚಕಗಳ ಷಷ್ಠೀವಿಭಕ್ತಿಯ ಪ್ರತ್ಯಯ. ಪೂ.ಹ. ಗ.ದಲ್ಲಿ ಆ ಎಂದು ದೀರ್ಘರೂಪವನ್ನು ಪಡೆದಿದೆ. ಏೞನೆಯಾ ನರಕದಾ ಪುೞು ಅಕುಂ (*IA* x. p 60) ; ಶ್ರೀನಿರ್ವ್ವಿನೀತರಾ ಕಿಱಿಯಾ ಮಗನ್ದಿರ್ (ಎಕ vi, ಚಿಕ್ಕಮಗ ಳೂರು, ೫೦).

ಕ್ರಿಯಾಪದ : (೬) ಹ.ಗ.ದಲ್ಲಿ ಕ್ರಿಯಾಪದಗಳ ನಿಷೇಧರೂಪಗಳು ಹ್ರಸ್ವರೂಪ ದಲ್ಲಿದ್ದರೆ ಪೂ.ಹ.ಗ.ದಲ್ಲಿ ಅವುಗಳಿಗೆ ದೀರ್ಘತ್ವವೂ ಇದೆ. ಉದಾ : ಹ.ಗ : ತಪ್ಪದೆ. ಬೆಳೆಯದೆ, ಇಲ್ಲದೆ, ನಿಲ್ಲದೆ ; ಪೂ.ಹ.ಗ : ತಪ್ಪಾದೆ, ವೆಳೆಯಾದೆ, ಇಲ್ಲಾದೆ, ನಿಲ್ಲಾದೆ, ಸಂಗಂಗಳ ಪೇೞ್ದ ಸಿದ್ಧಸಮಯಸ್ತಪ್ಪಾದೆ ನೋನ್ತಿನ್ಪಿಬನಿನ್ (ಎಕ II.ಶ್ರಬೆ. ೨೭) ಇದಾನ್ಕೊಳೆ ಈರೇೞ್ಪಿತ್ತ್ರಱುಳಂ ಒಕ್ಕಲ್ತನಂ ಕೆಯ್ವೊನಾ ವಿತ್ತಿದಲ್ಲಿ ವೆಳೆಯಾದೆ ಕೆಡುಗೆ (ಎಕ VIII. ಶಿಕಾರಿಪುರ, ೧೫೪) ; ಇದನ್ ವಕ್ರಮ್ ಇಲ್ಲಾದೆ ಕಾದು ಸಲಿಪೊನ್ (*EI*. ix. 22. *HGOK*. 116)

(೭) ಉ.ಪು.ದ ವಿಧ್ಯರ್ಥಕ ಕ್ರಿಯೆಯಲ್ಲಿ ಹ.ಗ.ದಲ್ಲಿ ಗೆ ಅಥವಾ ಕೆ ಪ್ರತ್ಯಯವು ಬಳಕೆಯಾಗಿದ್ದರೆ ಪೂ.ಹ.ಗ.ದಲ್ಲಿ ಅದರ ಜೊತೆಗೆ ಗ ಅಥವಾ ಕ ಎಂಬ ಪ್ರತ್ಯಯವೂ ಬಳಕೆಯಾಗಿದೆ. ಉದಾ : ಹ.ಗ : ಕೆಡುಗೆ, ರಕ್ಷಿಕ್ಕೆ, ಪುಟ್ಟುಗೆ, ಕೊಳ್ಗೆ ; ಪೂ.ಹ.ಗ : ಕೆಡುಗ, ರಕ್ಷಿಕ, ಪುಟ್ಟಿಲ್ಕ, ಕೊಳ್ಗ. ಒಕ್ಕರ್ಗಲ್ಲಪೊರ್ತ್ತಿವಿಕ್ಕಳ್ವದಿರ್ದ ಕೆಡುಗ (ಎಕ. III. ಹೆಗ್ಗಡದೇವನಕೋಟೆ, ೧೪೫), ಮೂನೂರ್ವರುಂ ರಕ್ಷಿಕ ಕಿಱಿಯ ಅರಸುಂಗೆ ಒಕ್ಕಲ್ ಪೆೞ್ಚುಗೆ (*HKL*. 185) ಒಕ್ಕಲುಳ್ಪೊತ್ತಿನ್ನಕ್ಕಳ್ಪುಟ್ಟಿಲ್ಕ ಪುಟ್ಟಿದೊಂದು ಪುರೀಗ (ಎಕ, III. ಹೆಕೋ. ೧೫೬) ಅನ್ದಿನಾ ತೆಱಿಪಿ ಕೊಳ್ಗ ಅನ್ದಿನಾ ಕೆಯ್ಪಸನೆ ಕೊಳ್ಗ (ಎಕ. III. ಹೆಕೋ. ೧೫೬)

(೮) ಹ.ಗ.ದಲ್ಲಿ ಆಖ್ಯಾತ ಪ್ರತ್ಯಯಗಳು ಅನ್, ಅರ್ ಎಂದಾಗಿದ್ದರೆ ಪೂ.ಹ.ಗ.

ದಲ್ಲಿ ಇವುಗಳ ಜೊತೆಗೆ ಒನ್–ಆನ್, ಒರ್–ಆರ್ ಎಂಬ ರೂಪಗಳೂ ಇವೆ. ಉದಾ ನಳವೊನ್ಗೆ ಮಹಾಪಾತಕಮ್ ಸ್ವಸ್ತಿ (ಹಲ್ಮಿಡಿ ಶಾಸನ, ಎಂ.ಎ.ಆರ್, 1936), ನನ್ದಿಸೇನ ಪ್ರವರ ಮುನಿವರನ್ದೇವಲೋಕಕ್ಕೆ ಸನ್ದಾನ್ (ಎಕ. II. ಶ್ರಬೆ. ೯೮) ವಲ್ಲವರಸರಿನ್ದ ಐಞ್ಞೂಕೊಱಞ್ಞೂಱೆ ಪಟಂಸೂಡಿದೋರ್ (ಎಕ VI. ಚಿಕ್ಕಮಗಳೂರು. ೫೦), ಕಳ್ಬಪ್ಪುಬೆಟ್ಟ ಮ್ಮೇಲ್ಕಾಲಂ ಕೆಯ್ದಾರ್ (ಎಕ. II. ಶ್ರಬೆ. ೩೧)

(೯) ಮೇಲೆ ಹೇಳಿದ ಒನ್, ಒರ್ ಎಂಬ ರೂಪಗಳು ಪೂ.ಹ.ಗ.ದಲ್ಲಿ ಓನ್, ಓರ್ ಎಂಬಂತೆ ದೀರ್ಘತ್ವವನ್ನು ಪಡೆದಿರುವುದೂ ಉಂಟು. ಬಾರಣಾಸಿಯೊಳ್ ಸಾಸಿರ ಕವಿಲೆಯನ್ ಕೊನ್ದೋನ ಲೋಕಕ್ಕೆ ಸನ್ದೋನುವುಕ್ಕುವುವ್ (ಎಕ. VIII, ಸೊರಬ ೧೦) ಪರಮಕಲ್ಯಾಣಭಾಗಿಗಳ್ ಆಪ್ಪೋರ್ (ಎಕ. VII. ಶಿಕಾರಿಪುರ, ೧೫೪)

(೧೦) ಅವಧಾರಣೆಯ ಎ ಪ್ರತ್ಯಯ ಹಾಗೂ ಸಮುಚ್ಚಯದ ಉಂ ಪ್ರತ್ಯಯಗಳು ಹ.ಗ.ದಲ್ಲಿ ಸಂಧಿಕಾರ್ಯನಡೆದು ಪೂರ್ವಪದದೊಡನೆ ಸೇರಿಹೋಗುತ್ತವೆ. ಆದರೆ ಪೂ.ಹ.ಗ.ದಲ್ಲಿ ಈ ಪ್ರತ್ಯಯಗಳು ಬೇರೆಯಾಗಿಯೇ ಉಳಿಯುತ್ತವೆ. ಉದಾ : ಬೆಳ್ಳಿಯಾಕೊಡೆಯಾನೇಱಿಸಿಎ ಮಜ್ಗಲುಳ್ಳೆ ಅಷ್ಟಶತಂ ಕ್ಷೇತ್ರಗೊಟ್ಟೋಳ್ (*IA*. X. p. 104); ವಿಜ ಅರಸನ್ಗೆ ಬಾಳ್ಗಳ್ಚು ಪಲ್ಮಡಿಉಂ ಮೂಱುವಳ್ಳಿಉಂ ಕೊಟ್ಟಾರ್ (ಹಲ್ಮಿಡಿ ಶಾಸನ, ಎಂ.ಎ.ಆರ್, 1936.)

ಶಬ್ದರೂಪಗಳು: (೧೧) ಪೂ.ಹ.ಗ.ದಲ್ಲಿ ಬಳಕೆಯಾಗಿರುವ ಕೆಲವು ಶಬ್ದರೂಪಗಳು ಹ.ಗ.ದಲ್ಲಿ ಅದೇ ರೂಪದಲ್ಲಿ ದೊರೆಯುವುದಿಲ್ಲ. ಇದಲ್ಲದೆ ಪೂ.ಹ.ಗ.ದ ಆ ರೂಪಗಳು ತಮಿಳಿನ ರೂಪಗಳೊಡನೆ ವಿಶೇಷ ಸಾಮ್ಯವನ್ನು ಹೊಂದಿರುವುದು ಕಂಡುಬರುತ್ತದೆ.

ಇಲ್ಲೆ (ಪೂ.ಹ.ಗ) ಇಲ್ಲ (ಹ.ಗ.) ಇಲ್ಲೈ ; ವೈಕೊನ್ತ (ಸಂ. ವೈಕುಂಠ) ವೈಗುನ್ದಂ ಅಱಿಮೆನ್–ಅಱಿಯಿಂ–ಅಱಿಮಿನ್ ; ಕೊಡು-ಕುಡು-ಕೊಡು ; ಕಟ್ಟಿನ್ ಕೆಟಿಗೆ–ಕಟ್ಟಿನ ಕೆಟಿಗೆ-ಕಟ್ಟಿನ್‌ಕೀೞ್ ; ಆಗ–ಅಕ್ಕೆ ಆಗ ; ಲಿಖಿಚ್ಚಿದೋನ್-ಲಿಖಿಸಿದಂ-ಲಿಖಿತ್ತೋನ್ ; ಅಱಿತ್ತೋನ್–ಅಱಿದಂ–ಅಱಿತ್ತೋನ್.

ವರ್ಣಗಳು : (೧೨) ಪೂ.ಹ.ಗ.ದಲ್ಲಿ ಮೂಲದ್ರಾವಿಡದ ವಕಾರವು ಉಳಿದಿದೆ. ಅದು ಬಕಾರವಾಗಿ ಪರಿವರ್ತಿತವಾಗಿರುವುದೂ ಉಂಟು. ಆದರೆ ಹ.ಗ.ದಲ್ಲಿ ಬಕಾರವೇ ಎಲ್ಲೆಡೆ ಕಂಡುಬರುತ್ತದೆ. ಉದಾ: ಹ. ಗ. ಬಿತ್ತಿದಲ್ಲಿ, ಬೆಳೆಯದೆ, ಬೆಟ್ಟದೊಳ್ ; ಪೂ.ಹ.ಗ : ವಿತ್ತಿದಲ್ಲಿ, ವೆಳೆಯಾದೆ, ವೆಟ್ಟದುಳ್.

ವಿತ್ತಿದಲ್ಲಿ ವೆಳೆಯಾದೆ ಕೆಡುಗೆ (ಎಕ. VIII, ಶಿಕಾರಿಪುರ, ೧೫೪), ಕಟ್ಟಪ್ಪಿನಾ ವೆಟ್ಟದುಳ್ (ಎಕ. II ಶ್ರಬೆ. ೩೦), ಪಲ್ಮಡಿಗೆ ಕುಱುಮ್ಬಿಡಿವಿಟ್ಟಾರ್ (ಹಲ್ಮಿಡಿ ಶಾಸನ ಎಂ.ಎ.ಆರ್, 1936.)

(೧೩). ಪೂ.ಹ.ಗ.ದ ಕೆಲವು ಪದಗಳ ಆದಿಯಲ್ಲಿ ಎ, ಒ ಕಾರಗಳಿದ್ದರೆ ಹ.ಗ.ದಲ್ಲಿ ಅವು ಇ, ಉ ಕಾರಗಳಾಗಿ ಮಾರ್ಪಟ್ಟಿವೆ. ಉದಾ : ಪೂ.ಹ.ಗ. ಕೆಡು, ಕೆಸು, ಎಱು, ಪೊಗು, ತೊಱು, ಕೊಱು—ಹ.ಗ : ಕಿಡು, ಕಿಸು, ಇಱು, ಪುಗು, ತುಱು, ಕುಱು

(೧೪) ಏಕವ್ಯಂಜನವಿರಬೇಕಾದಲ್ಲಿ ಪೂ.ಹ.ಗ.ದಲ್ಲಿ ವ್ಯಂಜನದ್ವಿತ್ವವನ್ನು ಬಳಸಲಾಗಿದೆ. ಈ ಎಡೆಗಳಲ್ಲಿ ಹ.ಗ.ದಲ್ಲಿ ಏಕವ್ಯಂಜನವಿದೆ. ಉದಾ: ಪೂ.ಹ.ಗ. ತಟಿಕ್ಕಾಡು, ತಲೆಪ್ಪೊಱಿ, ಎಱಿತ್ತನಂ; ಹ.ಗ: ತಟಿಕಾಡು, ತಲೆವೊಱಿ, ಎಱಿತನಂ

(೧೫) ಬಿಂದುವಿನ ಪ್ರಯೋಗವಾಗಬೇಕಾದೆಡೆಯಲ್ಲಿ ಪೂ.ಹ.ಗ.ದಲ್ಲಿ ನ ಕಾರವು ಪ್ರಯುಕ್ತವಾಗಿದೆ. ಈ ಎಡೆಗಳಲ್ಲಿ ಹ.ಗ.ದಲ್ಲಿ ಬಿಂದುವಿನ ಪ್ರಯೋಗವಿದೆ. ಉದಾ: ಪೂ.ಹ.ಗ: ಇಂಬಿನಿನ್, ನೋನ್ಪಿ, ಅವನ್ಗೆ, ಸುತನ್ಗೆ; ಹ.ಗ: ಇಂಬಿನಿಂ, ನೋಂಪಿ, ಅವಂಗೆ, ಸುತಂಗೆ

ಇತರ ಅಂಶಗಳು: (೧೬) ಶಿಷ್ಯ ಎಂಬುದಕ್ಕೆ ಶಿಷಿತ್ತಿ ಎಂಬ ಅಪೂರ್ವವಾದ ಸ್ತ್ರೀಲಿಂಗರೂಪವಿರುವುದು.[15] ಶಕಟರೇಫೆಗೆ ಬದಲಾಗಿ ರಳಯುಕ್ತವಾದ ಪೆಟಿನ್, ಪೆಟ್ಟಿಗೆ ಎಂಬ ಶಬ್ದರೂಪಗಳಿರುವುದು,[16] ಶ್ರವಣಬೆಳಗೊಳದ ಶಾಸನವೊಂದರಲ್ಲಿ 'ಚೆದುರುವುದು' ಎಂಬ ಅರ್ಥದಲ್ಲಿ ಪಿರಿಗುಂ ಎಂಬ ಪದ ಬಳಕೆಯಾಗಿರುವುದು—ಇವೇ ಮೊದಲಾದುವು ಪೂ.ಹ.ಗ.ದಲ್ಲಿ ಕೆಲವು ವೈಲಕ್ಷಣ್ಯಗಳೆನ್ನಬಹುದು.

## ಉಪಭಾಷೆಗಳು

ಭಾಷೆಯ ಲಿಖಿತ ದಾಖಲೆಗಳ ಆಧಾರದ ಮೇಲೆ ಯುಗದ ಭಾಷೆಯ ಸ್ವರೂಪವನ್ನು ವ್ಯಾಕರಣದ ಚೌಕಟ್ಟಿನಲ್ಲಿ ಸಂಕ್ಷೇಪವಾಗಿ ನೋಡಿದ್ದಾಯಿತು. ಇಷ್ಟರಿಂದಲೇ ಭಾಷಾಸ್ವರೂಪ ಪೂರ್ತಿಯಾಗಿ ಅರಿವಾಗುವುದಿಲ್ಲ. ಇದಕ್ಕೆ ಆ ಕಾಲದ ಆಡುನುಡಿಯ ಸ್ವರೂಪ, ಉಪಭಾಷಾಸ್ವರೂಪ ವೈಲಕ್ಷಣ್ಯಗಳ ವಿವೇಚನೆಯೂ ಅಗತ್ಯವಾಗುತ್ತದೆ. ಆದರೆ ಅದನ್ನು ತಿಳಿಯಲು ನಮಗೆ ತಕ್ಕ ಆಧಾರಗಳಿಲ್ಲ. ಕನ್ನಡಭಾಷಾ ಕ್ಷೇತ್ರದಲ್ಲಿ ಇಂದು ಮೈಸೂರು ಕನ್ನಡ, ಮಂಗಳೂರು ಕನ್ನಡ, ಧಾರವಾಡ ಕನ್ನಡ, ಗುಲ್ಬರ್ಗ ಕನ್ನಡ ಮೊದಲಾದ ನಾಲ್ಕಾರು ಉಪಭಾಷೆಗಳನ್ನು ಗುರುತಿಸಿ ವಿಶ್ಲೇಷಿಸಿದೆ.

ಪೂ.ಹ.ಗ. ಯುಗದಲ್ಲಿಯೂ ಈ ಬಗೆಯ ಉಪಭಾಷೆಗಳು ಅಥವಾ ಪ್ರಾಂತಭೇದಗಳು ಇದ್ದುವೇ ಎಂಬುದು ಚರ್ಚೆಯ ವಿಷಯವಾಗಬೇಕಾಗಿಲ್ಲ. ಭಾಷಾಕ್ಷೇತ್ರವೊಂದು ಇದ್ದಲ್ಲೆಲ್ಲ, ಅಲ್ಪಸ್ವಲ್ಪ ವ್ಯತ್ಯಾಸವಾದರೂ ಇರುವ ಉಪಭಾಷೆಗಳು ಇದ್ದೇ ತೀರುತ್ತವೆ. ಆದರೆ ಈ ಬಗೆಯ ಪ್ರಾಂತಭೇದ ಬರಹದ ಮೂಲಕ ಎಷ್ಟರಮಟ್ಟಿಗೆ ಪ್ರತಿನಿಧಿಸಲ್ಪಟ್ಟಿತ್ತು ಎಂಬುದು ಚರ್ಚಿತವಾಗಬೇಕಾದ ವಿಚಾರ. 'ಕವಿರಾಜಮಾರ್ಗ'ಕಾರನೇನೋ ಉತ್ತರ-ದಕ್ಷಿಣ ಎಂಬೆರಡು ಭಿನ್ನ ಮಾರ್ಗಗಳನ್ನು ಪ್ರಸ್ತಾಪಿಸಿದ್ದಾನೆ.[17] ನೋಡುವೆನ್, ಬೇಡುವೆನ್, ಬರಿಪೆನ್, ಇರಿಪೆನ್, ತರಿಪೆನ್ ಎಂಬ ರೂಪಗಳು ಉತ್ತರಮಾರ್ಗದವು; ನೋಟಿಪ್ಪೆನ್, ಬೇಟಿಪ್ಪೆನ್, ಬರಿಸುವೆನ್, ಇರಿಸುವೆನ್, ತರಿಸುವೆನ್ ಎಂಬ ರೂಪಗಳು ದಕ್ಷಿಣಮಾರ್ಗದವು—ಎಂದು ಕೆಲವು ಉದಾಹರಣೆಗಳನ್ನೂ ಕೊಟ್ಟಿದ್ದಾನೆ. ಅಲ್ಲದೆ ಬರಿಪ್ಪೆನ್, ಇರಿಪ್ಪೆನ್, ತರಿಪ್ಪೆನ್ ಎಂಬುವು ಉತ್ತರೋತ್ತರ ಮಾರ್ಗದ ರೂಪಗಳು ಎಂದೂ ಹೇಳಿದ್ದಾನೆ. ಆದರೆ ಇಷ್ಟರಿಂದಲೇ ಉತ್ತರ ದಕ್ಷಿಣ ಎಂಬ ಮಾರ್ಗ ಪ್ರಭೇದದ

ಸ್ವರೂಪ ಉದ್ದೇಶಗಳು ನಮಗೆ ಸ್ಪಷ್ಟವಾಗುವುದಿಲ್ಲ. ಹೀಗಾಗಿ ಅಂದಿನ ಬರೆವಣಿಗೆಯಲ್ಲಿ ಪ್ರಾಂತಭೇದಗಳು ಯಾವುವಿದ್ದವು, ಅವುಗಳ ರೂಪರೇಷೆಗಳೇನು ಎಂಬುದನ್ನು ಖಚಿತ ವಾಗಿ ಹೇಳಲಾಗುವುದಿಲ್ಲ.

ಈ ಯುಗದ ಗದ್ಯಶಾಸನಗಳನ್ನು ನೋಡಿದಾಗ ಅವು ಆಡುನುಡಿಗೆ ಸಾಕಷ್ಟು ಹತ್ತಿರ ವಾಗಿರುವುದನ್ನು ನಾವು ಕಾಣುತ್ತೇವೆ. ೭೩೭ರ ಸುಮಾರಿನ ಬಾದಾಮಿಯ ಶಾಸನ ವೊಂದನ್ನು ಇಲ್ಲಿ ಉಲ್ಲೇಖಿಸಬಹುದು :

ಸ್ವಸ್ತಿ॥ ವಿಜಯಾದಿತ್ಯ ಸತ್ಯಾಶ್ರಯ ಶ್ರೀ ಪೃಥಿವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಭಟಾರರಾ ಪ್ರಾಣವಲ್ಲಭೆ ವಿನಾಪೊಟಿಗಳೆನ್ವೊರ್ ಸೂಳೆಯರ್ ಇವರಾ ಮುದುತಾಯ್ವಿರ್ ರೇವಮಂಚಳ್ಗ ಆವರಾ ಮಗಳ್ದಿರ್ ಕುಚಿಪೊಟಿಗಳವರಾ ಮಗಳು ವಿನಾಪೊಟಿಗಳ್ ಇಲ್ಲಿಯೆ ಹಿರಣ್ಯಗರ್ಭಮಿಟ್ಟು ಎಲ್ಲಾ ದಾನಮುಂಗೊಟ್ಟು ದೇವನಾ ಪೀಠ ಮಾನ್ ಕಿಸುವಿನೆ ಕಟ್ಟಿ ಬೆಳ್ಳಿಯಾ ಕೊಡೆಯಾನೇಱಿಸಿಎ ಮಂಗಲುಳ್ಳೆ ಅಷ್ಟಶತಂ ಕ್ಷೇತ್ರಂ ಗೊಟ್ಟೊಳ್ ಇದಾನಳಿದೊನ್ ಪಂಚಮಹಾಪಾತಕನಕ್ಕುಮ್ (*IA*. X. P. 104)

ಮೇಲಿನ ಶಾಸನದಲ್ಲಿ ಚಾಲುಕ್ಯ ವಿಕ್ರಮಾದಿತ್ಯನ ಸೂಳೆ ವಿನಾಪೊಟಿ ಎಂಬವಳು ದೇವರಿಗೆ ಬಂಗಾರದ ಪೀಠ, ಬೆಳ್ಳಿಯ ಕೊಡೆ–ಇವುಗಳನ್ನು ಮಾಡಿಸಿಕೊಟ್ಟು, ಒಂದಷ್ಟು ಭೂಮಿಯನ್ನು ದಾನಕೊಟ್ಟ ವಿವರಣೆಯಿದೆ. ಈ ನಿರೂಪಣೆ ಬಹುಮಟ್ಟಿಗೆ ಮಾತ ನಾಡುವ ಧಾಟಿಯಲ್ಲಿದೆ. ಈ ಯುಗದ ಕೆಲವು ಶಾಸನಗಳಲ್ಲಿ ಗೋಇಂದರಸರ್, ಸಕ್ಷಿ, ಅಮಾಸೆ, ಪರುಠ, ಅಸ್ವಮೇದ ಮುಂತಾದ ಆಡುಮಾತಿನ ರೂಪಗಳೂ ಕಂಡುಬರುತ್ತವೆ.

ಹಳಗನ್ನಡದಲ್ಲಿ ಅಕಾರಾಂತವಾದ ಎಲ್ಲ ಪ್ರಕೃತಿ ರೂಪಗಳೂ ವ್ಯಂಜನಾಂತವಾಗಿರು ವುದು ಒಂದು ನಿಯಮದಂತೆ ಕಂಡುಬರುತ್ತದೆ. ಅರಸಂ, ನೆಲಂ, ಪಣಂ, ಮಗಂ, ಅಳಿಯಂ ಇತ್ಯಾದಿ. ಆದರೆ ಶಾಸನಗಳಲ್ಲಿ ಈ ಬಗೆಯ ರೂಪಗಳ ಜೊತೆಗೆ ಅರಸ, ನೆಲ, ಪಣ, ಮಗ, ಅಳಿಯ ಎಂಬ ಸ್ವರಾಂತ ರೂಪಗಳೂ ಇವೆ. ಉದಾ : ಬನವಾಸಿಯ ಆನೆಸೆಟಿಯ ಅಳಿಯ ಬಸನ್ತಕುಮರ ಎಡೆವೊಟಿಲ್ನಾಡ ಸಲೆವುಗೆಯ ಕೊಟ್ಟ ಶಾಸನಮ ಪಡೆದು ಶನ್ತಪನ ಮಗ ದೇವಜಿಯಗೆ ನಷ್ಟಪ್ಪಗೊಣ್ಡು ಕೊಟ್ಟನದು ಮರಣನು ಪೊಕುಳಿಯಾನು ಕೊಡಂಗೆಯಾನು ಪೊಜಗಾಗಲಿ ಸಲೆವುಗೆಯ ಭಾಗಕಂ ಮಱವಸನ್ತಕುಮರ ಇದಕ್ಕೆ ಸಕ್ಷಿ ರೇವಮಗಾವಿಗನು....(EC. VIII. Sb. 571. 27ರಿಂದ 31ನೆಯ ಪಂಕ್ತಿ ಪೂರ್ತ)

ಈ ಮೇಲಿನ ಗದ್ಯ ಶಾಸನದಲ್ಲಿ ಅಳಿಯ, ಕುಮರ, ಮಗ ಎಂಬ ಸ್ವರಾಂತ ರೂಪ ಗಳೇ ಇವೆ. ಆಡುಮಾತಿನಲ್ಲಿ ಇವೆಲ್ಲವೂ ಸ್ವರಾಂತಗಳಾಗಿಯೇ ಇದ್ದು, ಅವೇ ರೂಪ ಗಳು ಶಾಸನದೊಳಕ್ಕೂ ನುಸುಳಿ ಬಂದಿರಬಹುದು.

## ಕನ್ನಡ ಮತ್ತು ತಮಿಳು

ಇಂದಿನ ದ್ರಾವಿಡ ಭಾಷೆಗಳಿಗೆಲ್ಲ ಮೂಲವಾದ ಭಾಷೆಯೊಂದಿತ್ತೆಂದೂ ಅದರಿಂದಲೇ ತಮಿಳು, ಕನ್ನಡ, ತೆಲುಗು, ಮಲಯಾಳ ಮೊದಲಾದ ಭಾಷೆಗಳು ಕವಲೊಡೆದು

ಸ್ವತಂತ್ರವಾಗಿ ರೂಪುಗೊಂಡು ಬೆಳವಣಿಗೆ ಹೊಂದಿದುವೆಂದೂ ಭಾಷಾವಿಜ್ಞಾನಿಗಳು ತೋರಿಸಿಕೊಟ್ಟಿದ್ದಾರೆ. ಸು. ೪೫೦ಕ್ಕೆ ಕೆಲವು ಶತಮಾನಗಳು ಹಿಂದಿನಿಂದಲೇ ಕನ್ನಡವು ಮೂಲದಿಂದ ಬೇರ್ಪಟ್ಟು ಸ್ವತಂತ್ರ ಭಾಷೆಯಾಗುತ್ತ ಸಾಗಿದೆ. ಪೂ.ಹ.ಗ.ದ ಯುಗ ದಲ್ಲಿ ಕನ್ನಡದ ಕೆಲವು ಶಬ್ದರೂಪಗಳು ತಮಿಳಿಗೆ ಹೆಚ್ಚು ಹತ್ತಿರವಾಗಿರುವಂತೆ ಕಂಡು ಬರುತ್ತದೆ. ಇದು ತಮಿಳಿನ ಪ್ರಭಾವ ಎನ್ನುವಂತಿಲ್ಲ, ಕನ್ನಡವು ಮೂಲದಿಂದ ಬೇರ್ಪಟ್ಟು ಬೆಳೆಯುತ್ತಿದ್ದುದರ ಕುರುಹಾಗಿ ಅಲ್ಲಿನ ಕೆಲವು ಲಕ್ಷಣಗಳು ಇಲ್ಲಿ ಉಳಿದಿವೆ ಎನ್ನಬಹುದು. ಆ ಲಕ್ಷಣಗಳಲ್ಲಿ ಕೆಲವನ್ನು ಕನ್ನಡವು ಕಾಲಾಂತರದಲ್ಲಿ ಕಳೆದುಕೊಂಡಿದ್ದರೆ, ತಮಿಳು ಉಳಿಸಿಕೊಂಡು ಬಂದಿವೆ. ಆದರೆ ತಮಿಳಿನದೇ ವೈಲಕ್ಷಣ್ಯ ಎನ್ನಬಹುದಾದ ಒಂದೆರಡು ಅಂಶಗಳು ಈ ಯುಗದ ಭಾಷೆಯ ಮೇಲೆ ಪ್ರಭಾವ ಬೀರಿರುವುದೂ ಕಂಡುಬರುತ್ತದೆ.

(೧) ೭೫೦ರ ಸುಮಾರಿನ ದಕ್ಷಿಣ ಕನ್ನಡ ಜಿಲ್ಲೆಯ ಉದಯಾವರದ ಕನ್ನಡ ಶಾಸನ ವೊಂದರಲ್ಲಿ ನಾಟು, ನಕರ, ಧರ್ಮನಾಯ್ಗನ್ ಎಂಬ ರೂಪಗಳಿವೆ. ಹೀಗೆಯೇ ಬೇರೆ ಶಾಸನಗಳಲ್ಲಿ ಮಕನ್ದಿರ್, ಮಹಾಪಾತಗನ್, ನರಗ ಎಂಬ ರೂಪಗಳೂ ದೊರೆಯುತ್ತವೆ. ಇವೆಲ್ಲಾ ತಮಿಳು ಛಾಯೆಯ ರೂಪಗಳು. ಇವು ಕನ್ನಡದಲ್ಲಿ ಕ್ರಮವಾಗಿ ನಾಡು, ನಗರ, ಧರ್ಮ್ಮನಾಯ್ಕನ್, ಮಗನ್ದಿರ್, ಮಹಾಪಾತಕನ್, ನರಕ ಎಂದಾಗಬೇಕು.

(೨) ೮೦೦ರ ಸುಮಾರಿನ ಸೊರಬದ ಶಾಸನವೊಂದರಲ್ಲಿ "ಬನವಾಸಿ ಮಂಡಲ ಮಾನ ಸಮುದ್ರಾನ್ತ ರಾಜಾದಿತ್ಯರಾಸರ್ ಆಳೆ...." ಎಂದು ಮುಂತಾದ ವಾಕ್ಯವಿದೆ. (ಎಕ. VIII. ಸೊರಬ ೧೦) ಇದರಲ್ಲಿ'ರಾಜಾದಿತ್ಯರಾಸರ್' ಎಂಬಲ್ಲಿರುವ 'ಅರಾಸ' ಎಂಬ ಪದದ ಮೇಲೆ ತಮಿಳಿನ ಪ್ರಭಾವವಿದೆ. ಅರಸ ಎಂಬುದೇ ಇಲ್ಲಿ ಆರಾಸ ಎಂದಾಗಿದೆ. ಇದು ಬಹುಶಃ ತಮಿಳಿನಿಂದ ಕನ್ನಡಕ್ಕೆ ಬಂದಿರುವ ತದ್ಭವವೆಂದು ಕಾಣುತ್ತದೆ.[18]

ಸು. ೭೫೩ರ ಕೋಲಾರದ ಶಾಸನವೊಂದರಲ್ಲಿ "ಈ ಧರ್ಮ್ಮಮಾನ್ನಿರಕ್ಷಿಚಿದೋನ್" ಎಂದು ಮುಂತಾದ ವಾಕ್ಯವೊಂದಿದೆ. (*EC.* X. *Kl.* VI; *HGOK.* 126) ಇಲ್ಲಿ 'ಇರಕ್ಷಿಚ್ಚು' ಎಂಬುದು ತಮಿಳಿನ ಪ್ರಭಾವವಿರುವ ರೂಪ.[19] ಕನ್ನಡಭಾಷೆಯ ಜಾಯಮಾನದ ಪ್ರಕಾರ ಸಂಸ್ಕೃತದ ಈ ಪದವು ರಕ್ಷಿಸು ಎಂದಿರಬೇಕು.

## ಕನ್ನಡ ಮತ್ತು ಸಂಸ್ಕೃತ

ಈ ಕಾಲ ಕನ್ನಡ–ಸಂಸ್ಕೃತಗಳ ಮೈತ್ರಿ ಬಲಿಷ್ಠವಾದ್ದೂ ವಿಶಿಷ್ಟವಾದ್ದೂ ಆಗಿತ್ತು. ಪ್ರಾಯಃ ಕನ್ನಡದ ಉದಯಕಾಲ ಎನ್ನಬಹುದಾದ ಈ ಯುಗದ ವೇಳೆಗೆ ಸಂಸ್ಕೃತವು ಸರ್ವಾಂಗ ಪರಿಪೂರ್ಣವಾಗಿ ಬೆಳೆದಿತ್ತು. ಪುರಾಣಗಳು, ಮಹಾಕಾವ್ಯಗಳು, ನಾಟಕ ಗಳು, ಕಾವ್ಯಮೀಮಾಂಸೆ ಮೊದಲಾದ ಶಾಸ್ತ್ರಗಳೂ ಆ ಭಾಷೆಯಲ್ಲಿ ಹುಟ್ಟಿದ್ದುವು. ಇಂತಹ ಪ್ರಬುದ್ಧ ಭಾಷೆಯೊಂದರ ಸಾಹಚರ್ಯದಲ್ಲಿದ್ದ ಕನ್ನಡವು ಸಹಜವಾಗಿಯೇ ಅದರಿಂದ ಪ್ರಭಾವಿತವಾಯಿತು. ಅದರ ನೆರಳಿನಲ್ಲಿದ್ದುಕೊಂಡೇ ಸ್ವತಂತ್ರವಾದ ನೆಲೆ ಗಟ್ಟನ್ನು ಪಡೆಯುವ ಪ್ರಯತ್ನದಲ್ಲಿ ತೊಡಗಿತು.

ಈ ಕಾಲದಲ್ಲಿ ಪದ್ಯಶಾಸನಗಳು ಕಡಿಮೆ, ಗದ್ಯಶಾಸನಗಳೇ ಹೆಚ್ಚು. ಪದ್ಯಶಾಸನಗಳಲ್ಲಿ ಶ್ರವಣಬೆಳಗೊಳದ ಶಾಸನಗಳೇ ಪ್ರಧಾನವಾದುವು. ಪದ್ಯಗಳಲ್ಲಿ ಕೆಲವೆಡೆ ಸಂಸ್ಕೃತ ಭೂಯಿಷ್ಠ ಶೈಲಿ ಕಂಡುಬಂದರೆ ಮತ್ತೆ ಕೆಲವೆಡೆ ಸಂಸ್ಕೃತ-ಕನ್ನಡಗಳ ಹಿತಮಿತವಾದ ಮಿಶ್ರಣವು ಕಂಡುಬರುತ್ತದೆ.

ವೃತ್ತಗಳ ಧಾಟಿಗೊಪ್ಪುವ ಸಮಾಸಶ್ಲಿಷ್ಟತೆಗೆಂದು ಸಂಸ್ಕೃತದ ಪದ ಪದಪುಂಜಗಳನ್ನು ಧಾರಾಳವಾಗಿ ಬಳಸಿರುವುದಕ್ಕೆ ನಿದರ್ಶನಗಳು ಬೇಕಾದ ಹಾಗಿವೆ ; ತುಂಬ ವಿರಳವಾಗಿ ಅಲ್ಲದೆ ಅಚ್ಚಕನ್ನಡ ನುಡಿಗಟ್ಟಿನ ವಾಕ್ಯಬಂಧಗಳನ್ನು ಒಳಕೊಂಡ ಪದ್ಯರಚನೆಗಳನ್ನು ಸಾಧಾರಣವಾಗಿ ಕಾಣುವುದು ಕಷ್ಟ. ಗದ್ಯಶಾಸನಗಳಲ್ಲಿ ಕನ್ನಡತನಕ್ಕೆ ಪ್ರಾಶಸ್ತ್ಯ ಸಂದಿದೆ; ಆದರೆ ರಚನೆಗಳಲ್ಲಿ ಒಂದು ಪರಿಷ್ಕೃತವಾದ, ಆಕರ್ಷಕವಾದ ಪದವಾಕ್ಯಗಳ ಸಾಮರಸ್ಯ ಕಂಡುಬರುವಂತೆ ತೋರುವುದಿಲ್ಲ. ಇದು ಶೈಲಿಗೆ ಸಂಬಂಧಿಸಿದ ಒಂದೆರಡು ಅಂಶಗಳು.

ವ್ಯಾಕರಣದೃಷ್ಟಿಯಿಂದ ಕೆಲವಂಶಗಳನ್ನು ಸೂಚಿಸಬಹುದು. ಪ್ರಾಯಃ ಕೆಲವು ಆರಂಭಕಾಲೀನ ಶಾಸನಗಳಲ್ಲಿ ಸಂಸ್ಕೃತ ವಿಭಕ್ತ್ಯಂತ ರೂಪಗಳು ಇರುವಂತೆಯೇ ಸಂಧಿ ಕಾರ್ಯವನ್ನು ಪಡೆದು, ಕನ್ನಡ ಪದಗಳೊಡನೆ ಸಮಾಸಗೊಂಡು ಬಳಕೆಯಾಗಿರುವುದುಂಟು.

ಉದಾ : ಸು. ೭ನೆಯ ಶತಮಾನದ ಶ್ರವಣಬೆಳಗೊಳದ ಈ ಪದ್ಯವನ್ನು ನೋಡಿ :

ಶ್ರೀ ದುರಿತಾಭೂದ್ವ್ಯಪಮಾನ್ನೀಟ್ಟಿಲಱಿ ಪೊದೆದಜ್ಞಾನಶೈಲೇನ್ದ್ರಮಾನ್ಪೋೞ್
ದುರಮಿಥ್ಯಾತ್ವ ಪ್ರಮೂಢಸ್ಥಿರತರ ನೃಪನಾನ್ಮೆಟ್ಟಿ ಗನ್ಧೇಭಮಾಯ್ದಾನ್
ಸುರವಿದ್ಯಾವಲ್ಲಭೇನ್ದ್ರಸ್ಸುರವರಮುನಿಭಿಸ್ತುತ್ಯ ಕಟ್ವಪ್ಪಿನಾಮೇಲ್
ಚರಿತಶ್ರೀ ನಾಮಧೇಯಪ್ರಭು ಮುನಿನ್ವ್ರತಗಳ್ನೋನ್ತು ಸೌಖ್ಯಸ್ಥನಾಯ್ದಾನ್ ॥
(ಎಕ. II. ಶ್ರಬೆ. ೧೪)

ನೆಱೆದಾದ ವ್ರತಶೀಲನೋನ್ಪಿಗುಣದಿಂ ಸ್ವಾಧ್ಯಾಯಸಮ್ಪತ್ತಿ[ನಿಮ್]
ಕಱೆಇಲ್ನಲ್ತಧರ್ಮ್ಮದಾ ಸಸಿಮತಿಶ್ರೀಗನ್ತಿಯುರ್ವ್ವನ್ದು ಮೇಲ್
ಅಱಿದಾಯುಷ್ಯಮನೆನ್ತು ನೋಡೆನಗೆ ತಾನಿನ್ತೆನ್ದು ಕಟ್ವಪ್ಪಿನುಳ್
ತೊಱೆದಾರಾಧನೆ ನೋನ್ತು ತೀರ್ತ್ಥಗಿರಿ ಮೇಲ್ಸ್ವರ್ಗ್ಗಾಲಯಕ್ಕೇಱಿದಾರ್ ॥
(ಎಕ. II. ಶ್ರಬೆ. ೮೬)

ಈ ಯುಗದ ಗದ್ಯದ ಭಾಷೆಯಲ್ಲಿ ಸಂಸ್ಕೃತದ ಅತಿಯಾದ ಪ್ರವೇಶವಿಲ್ಲ. ಗದ್ಯ ಶೈಲಿಯು ವಿಶೇಷವಾದ ಕನ್ನಡತನವನ್ನು ಪ್ರಕಟಿಸುತ್ತದೆ. ೮ನೆಯ ಶತಮಾನದ ನಂಜನಗೂಡಿನ ಒಂದು ಚಿಕ್ಕ ಗದ್ಯಶಾಸನವನ್ನು ನೋಡಿ :

ಸ್ವಸ್ತಿಶ್ರೀಮತ್ ಅಮಿತಭಟ್ಟಡಿಗಳ್ಗೆ ಕೆಸಿಲ್ಮನೆ ಒಡೆಒಗ್ಗರ್ಳೆಲ್ಲ ತಮ್ಮ ಕೆಱೆಯ ಕೆಱಿಗೆ ಕಱನಿ ಮಣ್ ಅವರ ಮಗನ್ದಿಸೋರ್ನಮುಡಿಗ ಕೊಟ್ಟರ್ ಪನ್ನಿರ್ವ್ವರುಂ ಸಾಕ್ಷಿ ಅದಂ ಕೆಡಿಸಿದೊನ್ಪಞ್ಚ ಮಹಾಪಾತಕನಕ್ಕು. (ಎಕ. III, ನಂಜನಗೂಡು, ೧೮೭)

ಕೆಲವು ಗದ್ಯಶಾಸನಗಳಲ್ಲಿ ಸಂಸ್ಕೃತ–ಕನ್ನಡ ಶೈಲಿಗಳ ಒಂದು ವಿಚಿತ್ರ ಮಿಶ್ರಣ ಕಂಡುಬರುತ್ತದೆ. ಕ್ರಿ.ಶ. ೪೬೬ರ ಮಡಿಕೇರಿಯ ಶಾಸನದ ಈ ಕೆಲವು ಪಂಕ್ತಿಗಳನ್ನು ನೋಡಿ: (೧೫ ರಿಂದ ೨೧ನೆ ಪಂಕ್ತಿ ಪೂರ್ತಿ)....ದೇಸಿಗಗಣಂ ಕೊಣ್ಡಕುನ್ದಾನ್ವಯ. ಗುಣಚನ್ದ್ರ ಭಟಾರ ಸಿಷ್ಯಸ್ಯ ಅಭಣನ್ದಿ ಭಟಾರ ತಸ್ಯ ಸಿಷ್ಯಸ್ಯ ಸೀಳಭದ್ರ ಭಟಾರ ಸಿಷ್ಯಸ್ಯ ಜಯಣನ್ದಿ ಭಟಾರ ಸಿಷ್ಯಸ್ಸಗುಣಣನ್ದಿ ಭಟಾರ ಸಿಷ್ಯಸ್ಸ ಚನ್ದಣನ್ದಿ. ಭಟಾರಗ್ಗೆ ಅಷ್ಟಾಅಸೀತಿ ಉತ್ತರಸ್ಯ ತ್ರಯೋಸತಸ್ಯ ಸಂವತ್ಸರಸ್ಯ ಮಾಘಮಾಸಂ ಶೋಮವಾರಂ ಸ್ವತಿ ನಕ್ಷತ್ರ ಸುದ್ಧ ಪಞ್ಚಮಿ ಅಕಾಳವರ್ಷ ಪ್ರಥುವೀವಲ್ಲಭ ಮನ್ತ್ರಿ ತಳವನ ನಗರ ಶ್ರೀವಿಜಯ ಜಿನಾಲಯಕ್ಕೆ ಪೂನಾಡು ಛಾಸಹಸ್ರ ಎಡೆನಾಡು ಸಪ್ತರಿ ಮಧ್ಯೆ ಬದಣೆಗುಪ್ಪೆ ನಾಮ ಅವಿನೀತ ಮಹಾಧಿರಾಜೇನ ದತ್ತೇನ ಪಡಿಯೇಱಿಱಿಳಂ ಊರೂರೊಳ್ಪನ್ನಿರ್ಕ್ಕಣ್ಡುಗಜಿಗ್ಗೆಯ್ದು ಅಮ್ಬಲಿಮಣ್ಣಂ ತಳವನಪುರದೊಳ್ತಳವಿತ್ತಿಯ. ಮಣ್ಪೊಗರಿಗೆಱಿಯೊಳ್ಪನ್ನಿರ್ಕ್ಕಣ್ಡುಗಂ ಪಿರಿಕೆಱೆಯೊಳಂ ರಾಜಮಾನಂ ಅನುಮೋದನ ಪನ್ನಿರ್ಕ್ಕಣ್ಡುಗಂ ಮನೋಹರಂ ದತ್ತಂ ಬದಣೆಗುಪ್ಪೆ....(ಎಕ. I. ಕೊಡಗುಜಿಲ್ಲೆ ೧)

## ಶಬ್ದಕೋಶ

ಈ ಅವಧಿಯ ಭಾಷೆಯ ಶಬ್ದಭಂಡಾರ ಅಷ್ಟು ದೊಡ್ಡದೇನಲ್ಲ. ಶಾಸನಗಳಲ್ಲಿ ಒಂದೇ ಬಗೆಯ ಪದಗಳ ಹಾಗೂ ಪದಪುಂಜಗಳ ಪುನರುಕ್ತಿಗಳ ಬಳಕೆಯಿಂದ ಶಬ್ದ ಕೋಶಕ್ಕೆ ಹೆಚ್ಚಿನ ವ್ಯಾಪ್ತಿ ಬಂದಿಲ್ಲ. ಗದ್ಯಶಾಸನಗಳು ಸಾಮಾನ್ಯವಾಗಿ "ಸ್ವಸ್ತಿ ಶ್ರೀ ವಿನಯಾದಿತ್ಯ ರಾಜಶ್ರಯ ಶ್ರೀ ಪೃಥಿವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಭಟರ ಪೃಥಿವೀ ರಾಜ್ಯಂಕೆಯೆ...." "ಸ್ವಸ್ತಿಶ್ರೀ ವಿಜಯಾದಿತ್ಯ ಸತ್ಯಾಶ್ರಯ ಶ್ರೀ ಪೃಥುವೀ ವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಭಟಾರರ್...." ಸ್ವಸ್ತಿಶ್ರೀ ವಿಜಯಾಧಿತ್ಯನ್ ಆಳುಪೇನ್ದ್ರ ಪರಮೇಶ್ವರ ಅಧೀರಾಜರಾಜನ್ ಉತ್ತಮ ಪಾಣ್ಡ್ಯನ್ ಸೋಮವಱಿಶ್ಯೋಭವನ್...." ಎಂದು ಮುಂತಾಗಿ ಆರಂಭವಾದರೆ, "....ಇದಾನ್ ಕಾದು ಸಲ್ವೊನ್ ಪರಮಕಲ್ಯಾಣಭಾಗಿಗಳ್ ಅಪ್ಪೋರ್ ನೆಲನುಂ ವೆಳೆಗೆ ಆ ಪಾರ್ವ್ವರುಂ ಪ್ರಜೆಯುಮ್ ತಣಿಗೆ", "ದತ್ತಿಯಾನ್ ಕಿಡಿಪೋನ್ ವಾರಣಾಸಿಯಳ್ ಸಾಸಿರ್ವ್ವರ್ ಪ್ಪಾರ್ವ್ವರುಂ ಕವಿಲೆಯುಮಾನ್ ಕೊನ್ದ ಲೋಕಕ್ಕೆ ಸನ್ದೋನ್ ಅಕ್ಕುಮ್", "....ಈ ಒಕ್ಕಲ್ ಪಡೆದುವು ಇದಾ ಅಳಿಪೊ ಸಿವವಾಳ್ವಿಯು ವಾರಣಾಸಿಯುಮನ್ ಅಱಿದ ಪಞ್ಚಮಹಾಪಾತಕನ್ ಅಕ್ಕುಂ" ಎಂದು ಮುಂತಾಗಿ ಮುಕ್ತಾಯವಾಗುತ್ತವೆ. ಈ ನಡುವೆ ಯಾರಿಗೋ ಒಂದಷ್ಟು ಭೂಮಿಯನ್ನೋ ಮತ್ತೇನನ್ನೋ ದಾನವಾಗಿ ಕೊಟ್ಟದ್ದು, ಅದಕ್ಕೆ ಯಾರು ಯಾರು ಸಾಕ್ಷಿ ಎಂಬ ಅಂಶಗಳು ನಿರೂಪಿಸಲ್ಪಟ್ಟಿರುತ್ತವೆ. ಹೀಗೆ ವಿಷಯದ ಏಕರೂಪತೆಯಿಂದಾಗಿ ಶಬ್ದಭಂಡಾರ ಬೆಳೆದಿಲ್ಲ. ಪದ್ಯಶಾಸನಗಳ ಮೂಲಕ ಪದಕೋಶ ಸ್ವಲ್ಪ ಬೆಳೆದಿದೆಯಾದರೂ ಅಲ್ಲಿಯೂ ಪುನರುಕ್ತಿ ದೌರ್ಬಲ್ಯವಿದೆ. ಜೈನ ಸವಣರು ಅಥವಾ ಕಂತಿಯರು ವ್ರತವನ್ನು ಸ್ವೀಕರಿಸಿ ಸಮಾಧಿಮರಣದ ಮೂಲಕ

ಸ್ವರ್ಗವನ್ನೈದುವ ವಿಷಯವನ್ನೊಳಗೊಂಡ ಶ್ರವಣಬೆಳಗೊಳದ ಶಾಸನಗಳಲ್ಲಿ ಒಂದೇ ಬಗೆಯ ಪದಪುಂಜಗಳ ಬಳಕೆ ಸಹಜ.

ಶಿಲೆ, ರಾಷ್ಟ್ರ, ವಿಪುಲ, ಶೀಲ, ಮೃತ್ಯು, ದಾನ, ಶಾಪ, ಅಕ್ಷರ, ಪ್ರಭಾವ, ಧರಣಿ, ಶಾಸನ, ಕುಮಾರ, ಗ್ರಾಮ, ಸಿದ್ಧಿ, ಕುಲ, ಲೋಕ, ಕ್ಷೇತ್ರ, ಆಯುಷ್ಯ, ಪ್ರಾಸಾದ ಮೊದಲಾದ ಸರಳಪದಗಳು ಸಮಸಂಸ್ಕೃತದ ಸ್ವೀಕರಣ ನಿಯಮಗಳಿಗೆ ಅನುಸಾರವಾಗಿ ಕನ್ನಡಕ್ಕೆ ಬಂದಿವೆ.

ಕೆಲವು ಸಂಸ್ಕೃತ ಪದಗಳು ತದ್ಭವಗಳಾಗಿಯೂ ಬಂದಿವೆ. ಕವಿಲೆ > ಕಪಿಲಾ, ಬಸದಿ < ವಸತಿ, ತಾಣ < ಸ್ಥಾನ, ವಣ್ಣ < ವರ್ಣ, ಮೋನ < ಮೌನ, ಉಜ್ಜುಗ < ಉದ್ಯೋಗ, ದೆಸೆ < ದಿಶಾ, ಸಂಗ < ಸಂಘ, ಮಾ < ಮಹಾ, ನಿಸಿಧಿ < ನಿಷೇಧಿಕಾ, ಜನ್ನ < ಯಜ್ಞ, ದೇಗುಲ < ದೇವಕುಲ ; ಪಡಿ < ಪ್ರತಿ, ಸಸಿ < ಶಶಿ, ಆಚಾರಿ < ಆಚಾರ್ಯ, ಅಯ್ಯ < ಆರ್ಯ, ಅಬ್ಬೆ < ಅಂಬಾ—ಇತ್ಯಾದಿ. ಈ ತದ್ಭವ ರೂಪಗಳು ಪ್ರಾಕೃತ ರೂಪಗಳಿಗೆ ಹತ್ತಿರವಾಗಿರುವುದರಿಂದ ಇವು ಪ್ರಾಕೃತದಿಂದಲೇ ಬಂದವು ಎಂದು ತಿಳಿಯಲಾಸ್ಪದವಿದೆ.[20]

'ಪನ್ನಾಸು' ಎಂಬ ಪದವೊಂದು ೭೪೦ರ ಸುಮಾರಿನ ಬಿಜಾಪುರ ಜಿಲ್ಲೆಯ ಪಟ್ಟದ ಕಲ್ಲಿನ ಶಾಸನದಲ್ಲಿ ಬಳಕೆಯಾಗಿದೆ. ಸಂಸ್ಕೃತದ ಪಂಚಾಶತ್ ಎಂಬುದು ಪ್ರಾಕೃತದಲ್ಲಿ ಪಣ್ಣಾಸ ಅಥವಾ ಪನ್ನಾಸ ಎಂದಾಗಿ ಆರ್ಯಭಾಷೆಗಳಲ್ಲಿ ಪನ್ನಾಸ್ ಎಂದು ಬಳಕೆಯಾಗುತ್ತವೆ. ಭಾರತೀಯ ಆರ್ಯಭಾಷೆಗಳಲ್ಲಿ ಪನ್ನಾಸ್ ಎಂದರೆ ಐವತ್ತು ಎಂದರ್ಥ. ಕನ್ನಡ ಶಾಸನದಲ್ಲಿ ಬಳಕೆಯಾಗಿರುವ ಈಪದ ಯಾವುದೋ ಒಂದು ಬಗೆಯ ಕಂದಾಯವನ್ನು ಸೂಚಿಸುವಂತೆ ತೋರುತ್ತದೆ ಎಂದು ಜಿ. ಎಸ್. ಗಾಯಿ ಅಭಿಪ್ರಾಯಪಟ್ಟಿದ್ದಾರೆ.[21] "ಸ್ವಸ್ತಿ ವಿಕ್ರಮಾದಿತ್ಯ ಪೃಥುವಿವಲ್ಲಭ ಲೋಕಮಹಾದೇವಿಯರಾ ಲೋಕೇಶ್ವರದಾ ನೆರೆಯ ಮಂಗಲ್ಲ ಪನ್ನಾಸುಗಳಾನ್ ಇತ್ತ ಸಮಯಮ್...." (*IA*. X. 167, No. CV. *HGOK* p. 113) ಎಂಬಲ್ಲಿ ಪನ್ನಾಸು ಎಂಬುದು ಕಂದಾಯದ ಯಾವುದೋ ರೂಪವನ್ನು ಸೂಚಿಸುವಂತಿದೆ. ಮುಂದಿನ ಯುಗದ ಶಾಸನಗಳಲ್ಲಿ ಪನ್ನಾಸು ಎಂಬುದು ಐವತ್ತು ಎಂಬ ಅರ್ಥವನ್ನು ಸೂಚಿಸುವ ರೀತಿಯಲ್ಲೂ ಬಳಕೆಯಾಗಿವೆ.

## ಭಾಷೆಯ ಅಸ್ಥಿರತೆ

ಈ ಯುಗದ ಭಾಷೆಯ ಬಳಕೆಯಲ್ಲಿ ಅಸ್ಥಿರತೆ ಕಂಡುಬರುತ್ತದೆ. ಶಬ್ದರೂಪಗಳಲ್ಲಿ ಏಕರೂಪತೆಯಿಲ್ಲ. ಪೃಥಿವೀ, ಪ್ರಿಥಿವಿ, ಪೃಥುವಿ, ಪ್ರಥಿವೀ, ಪೃಥ್ವೀ ; ಸಕ್ಸಿ, ಸಕ್ಷಿ, ಶಕ್ಷಿ, ಸಾಕ್ಷಿ, ಸಕ್ಕಿ ; ಕವಿಲಿ, ಕವಿಲೆ ; ಅಕುಮ್, ಅಕುಂ, ಅಕ್ಕುಮ್, ಅಕ್ಕುಂ ; ತೀರ್ಥ, ತೀರ್ಥ ; ಪೆಬಿನ್, ಪೆಜಿನ್ ; ಭಟರಕ, ಭಟ್ಟಾರಾಕ; ಭಟರ, ಬಟಾರ, ಭಟಾರ, ಭಟ್ಟಾರಕ ; ಸಾಸಿರ್ವ್ವ, ಸಾಸಿರ್ವ್ವರ್ ; ಅಬಿವ್ರೊನ್, ಅಬಿವ್ರೊ, ಅಬಿವ್ರೊನ್ ; ಖನ್ತಿಯರ್, ಕನ್ತಿಯರ್, ಕನ್ತಿಯಾರ್, ಗನ್ತಿಯಾರ್ ; ವಾರಣಾಶಿ, ವಾರಣಾಸಿ, ವಾರಾ

ಣಾಸಿ, ಬಾರಣಾಸಿ, ಬಾರಣಾಶಿವ; ಬನಮಾಸಿ, ಬನವಾಸಿ, ಬನವಸಿ; ಪೊಕ್ಕಂ, ಪೊಕ್ಕ: ಗಮುಣ್ಡ, ಗಾಮುಣ್ಡ,–ಎಂಬಂತೆ ಒಂದೇ ಪದ ಹಲವು ರೂಪಗಳಲ್ಲಿ ಕಾಣಿಸಿಕೊಳ್ಳುತ್ತದೆ.

ಕೆಲವು ಸಂಸ್ಕೃತ ಪದಗಳ ವಿಕೃತ ಸ್ವರೂಪವನ್ನು ನೋಡಬಹುದು: ಉದಾ: ವರಿಷ, ಸಿಷ್ಯ, ಪ್ರುಥಿವೀ, ಸಕ್ಸಿ, ಸುದ್ಧ. ಇವು ತದ್ಭವಗಳಾಗಿ ಬಳಕೆ ಯಾಗಬೇಕಾಗಿದ್ದರೆ ಬರಿಸ, ಸಿಸ್ಯ, ಪೃಥುವಿ, ಸಕ್ಕಿ, ಸುದ್ದ ಎಂದಾಗಬೇಕಾಗಿತ್ತು. ತತ್ಸಮಗಳಾಗಿಯೇ ಬಳಕೆಯಾಗಬೇಕಾಗಿದ್ದರೆ, ವರ್ಷ, ಶಿಷ್ಯ, ಪೃಥ್ವಿ, ಸಾಕ್ಷಿ, ಶುದ್ಧ ಎಂದಿರಬೇಕಾಗಿತ್ತು.

ವಾಕ್ಯರಚನೆಯಲ್ಲಿ ಅಲ್ಲಲ್ಲಿ ಶೈಥಿಲ್ಯ ಹಾಗೂ ಸಂದಿಗ್ಧತೆ ಕಂಡುಬರುತ್ತದೆ. ಅವಧಾರಣೆಯನ್ನು ಸೂಚಿಸುವ ಎ ಪ್ರತ್ಯಯ ಹಾಗೂ ಸಮುಚ್ಚಯದ ಉಂ ಪ್ರತ್ಯಯಗಳು ಪೂರ್ವಪದದೊಡನೆ ಕೂಡಿ ಸಂಧಿಯಾಗದೆ ಬೇರೆಯಾಗಿಯೇ ಉಳಿದಿರುವುದರಿಂದ ಈ ಶೈಥಿಲ್ಯ ತಲೆದೋರಿದೆ: ಉದಾ: ಅನ್ದಿನಾ ತೆಱೆಎ ಕೊಳ್ಗ ಅನ್ದಿನಾ ಕೆಯ್ವಸನೆ ಕೊಳ್ಗ (ಎಕ. II. ಹೆ.ಕೋ. ೧೫೬) ವಿಜ ಅರಸನ್ಗೆ ಬಾಳ್ಗಚ್ಚು ಪಲ್ಮಡಿಉಂ ಮೂಱು ವಳ್ಳಿಉಂ ಕೊಟ್ಟಾರ್ (ಹಲ್ಮಿಡಿಶಾಸನ. ಎಂ.ಎ.ಆರ್.)

ಹೀಗೆಯೇ ಇನ್ನೂ ಕೆಲವೆಡೆ ಸಂಧಿಯಾಗದೆ ವಾಕ್ಯಗಳಲ್ಲಿ ಶಿಥಿಲತೆ ಬಂದಿದೆ: ಇನ್ತು ಣ್ಣೋರುಂ ಉಣಿಯ ಕೊಡುವೋರುಮ್ ದೇವೆಡಿತ್ತಿಯೆರಿನ್ದುಂ ಸಾಎರಿನ್ದುಮ್ ಅಭರಮ್ ಎತ್ತಿ ಆಯೆತಿಎ ಕೊಳ್ವೋರುಮ್....(ಎಕ. VI ಕೊಪ್ಪ ೩೭) ಏಱಿನೆಯಾ ನರಕದಾ ಪುಱು ಅಕುಂ (IA. X. p. 60), ಕೆಸಿಲ್ಮನೆ ಒಡೆಒರ್ಗಳೆಲ್ಲ ತಮ್ಮ ಕೆಱೆಇಯ ಕೆಱಿಗೆ....(ಎಕ. III ನಂಜನಗೂಡು, ೧೮೭), ಈ ಮೊದಲಾದ ವಾಕ್ಯಗಳನ್ನು ಈ ಮಾತಿಗೆ ಉದಾಹರಣೆಯಾಗಿ ಕೊಡಬಹುದು.

ರೂಪದ ಅನಿರ್ದಿಷ್ಟತೆಯಿಂದಾಗಿ ಅರ್ಥದಲ್ಲಿ ಸಂದಿಗ್ಧತೆಯಿರುವ ವಾಕ್ಯಗಳೂ ಅಲ್ಲಲ್ಲಿ ಇವೆ. ರಣಮುಖದುಳ್ಳ ಕೋಽಲ ನೆರಿಯಕ್ಕರ್ಮನಿನ್ದ್ಯಗುಣನ್ (ಎಕ. XI. ಚಿತ್ರದುರ್ಗ, ೪೩), ಭಟ್ಟರ್ಗ್ಗೀ ಗಱಿದ್ದೆ ಒಡ್ಡಲಿ ಆಪತ್ತೊನ್ದಿ ವಿಟ್ಟಾರಕರ (ಹಲ್ಮಿಡಿಶಾಸನ, ಎಂ.ಎ.ಆರ್) ಈ ಮೊದಲಾದೆಡೆಗಳಲ್ಲಿ ಸಂದಿಗ್ಧತೆ ಇರುವುದನ್ನು ಕಾಣಬಹುದು. ಹೀಗೆಯೇ ಲಿಪಿಸ್ಖಾಲಿತ್ಯಗಳು ಸಾಕಷ್ಟಿವೆ. ಅಲ್ಪಪ್ರಾಣಗಳಿಗೆ ಮಹಾಪ್ರಾಣಗಳನ್ನು ಬರೆಯುವುದು, ಮಹಾಪ್ರಾಣಗಳಿಗೆ ಅಲ್ಪಪ್ರಾಣಗಳನ್ನು ಬರೆಯುವುದು ಹ್ರಸ್ವಗಳಿಗೆ ದೀರ್ಘಗಳನ್ನೂ ದೀರ್ಘಗಳಿಗೆ ಹ್ರಸ್ವಗಳನ್ನೂ ಬರೆಯುವುದು, ಶ,ಷ,ಸಗಳಲ್ಲಿ ಒಂದಕ್ಕೆ ಮತ್ತೊಂದನ್ನು ಬರೆಯುವುದು—ಇವೇ ಮೊದಲಾದುವು ಪ್ರಧಾನವಾದ ಲಿಪಿಸ್ಖಾಲಿತ್ಯಗಳು. ಲಿಕಿತಂ (ಲಿಖಿತಂ), ಪೊನ್ಧುಗೆ (ಪೊನ್ದುಗೆ), ಕೇಚರ (ಖೇಚರ), ವಿಜಯಾಧಿತ್ಯನ್ (ವಿಜಯಾದಿತ್ಯನ್), ಭಿಂಬ (ಬಿಂಬ), ವಿಮನ (ವಿಮಾನ), ಪದಿನಱು (ಪದಿನಾಱು), ಸ್ವತಿ (ಸ್ವಾತಿ), ಆರಿಷ್ಟನೇಮಿ (ಅರಿಷ್ಟನೇಮಿ), ಶೋಮವಾರ (ಸೋಮವಾರ), ಪರಮೇಸ್ವರ (ಪರಮೇಶ್ವರ), ಮೊದಲಾದುವುಗಳನ್ನು ಈ ಸಂದರ್ಭಕ್ಕೆ ಉದಾಹರಿಸಬಹುದು.

## 'ಕವಿರಾಜಮಾರ್ಗ'ದ ಸೂಚನೆಗಳು

ಕವಿರಾಜಮಾರ್ಗಕಾರನ ಒಂದೆರಡು ಹೇಳಿಕೆಗಳು ಆ ಯುಗದ ಭಾಷೆಯ ಪರಿಸ್ಥಿತಿಯ ಬಗ್ಗೆ ಬೆಳಕು ಚೆಲ್ಲುವಂತಿವೆ;

ದೋಷಮಿನಿತೆಂದು ಬಗೆದು
ದ್ಭಾಸಿಸಿ ತಱಿಸಂದು ಕನ್ನಡಂಗಳೊಳೆಂದುಂ
ವಾಸುಗಿಯುಮುಱಿಯಲಾಱದೆ
ಬೇಸಱುಗುಂ ದೇಶಿ ಬೇಱೆವೇಱಪ್ಪುದಱಿಂ ॥ ೧-೪೬

ಮೇಲಿನ ಪದ್ಯಕ್ಕೆ ವ್ಯಾಖ್ಯಾನಮಾಡುತ್ತಾ ಎಂ. ವಿ. ಸೀತಾರಾಮಯ್ಯ ಅವರು "....ಆಗಲೂ ಕೆಲಕೆಲವು ಪ್ರಾದೇಶಿಕ ಲಕ್ಷಣಗಳುಳ್ಳ 'ಕನ್ನಡಂಗಳ್' ಇದ್ದಿರಬೇಕು; ಅವುಗಳ 'ದೇಶಿ' ಎಂದರೆ ಪ್ರಾದೇಶಿಕ ವೈಲಕ್ಷಣ್ಯ ಬೇರೆಬೇರೆಯಾಗಿದ್ದಿರಬೇಕು. ಒಂದು ಪ್ರಾಂತದಲ್ಲಿ ನಿರ್ದುಷ್ಟವೆನಿಸಿದ ಭಾಷಾಪ್ರಯೋಗ ಇನ್ನೊಂದರಲ್ಲಿ ದೋಷವಾಗಿ ಕಾಣುತ್ತಿದ್ದಿರಬೇಕು. ಹೀಗೆ ಸರ್ವಸಾಮಾನ್ಯವಾದ ದೋಷಗಳು–ಇವು ಕೂಡಿ, ದೋಷಪ್ರಮಾಣ ಅಪರಿಮಿತವಾಗಿದ್ದಿರಬೇಕು. ಸಾವಿರ ನಾಲಗೆಯುಳ್ಳ ಆದಿಶೇಷನೂ ಅವನ್ನು ತಿಳಿಯ ಹೇಳಲಾರದಷ್ಟು ಅಗಣಿತವಾಗಿದ್ದುವು ಎಂದು 'ಮಾರ್ಗಕಾರ' ಉತ್ಪ್ರೇಕ್ಷಿಸಿ ಹೇಳುವ ಮಟ್ಟಿಗೆ ಕನ್ನಡದ ಪರಿಸ್ಥಿತಿ ಶೋಚನೀಯವಾಗಿತ್ತು."[22] ಎಂದು ಹೇಳಿದ್ದಾರೆ. ಇದರಿಂದ ಕವಿರಾಜಮಾರ್ಗಪೂರ್ವ ಯುಗದ ಕನ್ನಡ ಭಾಷೆಯ ಅಸ್ಥಿರತೆಯ ಅಥವಾ ಪ್ರಾಯೋಗಿಕತೆಯ ಅರಿವಾಗುತ್ತದೆ.

ಈ ಕಾಲದ ಕೊನೆಗೆ ವಿಶಿಷ್ಟವಾದ ಭಾಷಾಪ್ರಜ್ಞೆಯೊಂದು ಮೂಡಿರುವುದು ಕಂಡು ಬರುತ್ತದೆ. 'ಕವಿರಾಜಮಾರ್ಗ'ಕಾರನು ಕಾವ್ಯದೋಷಗಳನ್ನು ಕುರಿತು ಬಹುವಿಸ್ತಾರವಾಗಿ ವಿವೇಚನೆ ಮಾಡಿದ್ದಾನೆ. ದಂಡಿ-ಭಾಮಹರ ಕೃತಿಗಳನ್ನು ಅನುಸರಿಸಿ ಹೇಳಿದರೂ ತನ್ನವರೆಗಿನ ಭಾಷಿಕ ಬೆಳವಣಿಗೆಯನ್ನು ಗಮನದಲ್ಲಿರಿಸಿಕೊಂಡೇ ಈ ಅಂಶಗಳನ್ನು ಹೇಳಿದ್ದಾನೆಂದು ಊಹಿಸಲು ಅವಕಾಶವಿದೆ. "ಮಾರ್ಗಕಾರನು ಉದಾಹರಿಸಿರುವ ಪದ್ಯಗಳನ್ನೂ, ಅವನು ಎಣಿಸುವ ದೋಷಗಳನ್ನೂ ನೋಡಿದರೆ ದೊಡ್ಡ ಚಿಕ್ಕ ಕಾವ್ಯಗಳು ಅವನಿಗೆ ದೊರಕಿರಬೇಕು. ಅವನ್ನು ಕುರಿತೇ ನುಡಿಯುತ್ತಿದ್ದಾನೆಂದೂ ಭಾಸವಾಗುತ್ತದೆ."[23]

ಕಾವ್ಯದಲ್ಲಿ ದೋಷವಿರಬಾರದೆಂದೂ ಸ್ವಲ್ಪ ದೋಷವಿದ್ದರೂ ಅದು ಸಂಪೂರ್ಣ ಕಾವ್ಯಕ್ಕೇ ಕಳಂಕವನ್ನುಂಟುಮಾಡುತ್ತದೆಂದೂ ಎಚ್ಚರಿಸುತ್ತ ಮಾರ್ಗಕಾರನು ಶ್ರುತದುಷ್ಟ, ಅರ್ಥದುಷ್ಟ, ಶ್ರುತಿಕಷ್ಟ, ಕಲ್ಪನೋಕ್ತಿ ಕಷ್ಟ, ಛಂದೋಭಂಗ, ಕಾರಕದೋಷ, ವಚನದೋಷ ಮುಂತಾದ ಹಲವಾರು ದೋಷಗಳನ್ನು ಲಕ್ಷ್ಯಸಮೇತ ತೋರಿಸಿ ಕಾವ್ಯ ರಚನೆಯಲ್ಲಿ ಅವುಗಳನ್ನು ನಿವಾರಿಸಬೇಕೆಂದಿದ್ದಾನೆ.

ಸಂಸ್ಕೃತ ಮತ್ತು ಕನ್ನಡ ಭಾಷೆಗಳ ಮಿಶ್ರಣವನ್ನು ಕುರಿತಂತೆ ಅವನು ಹೇಳಿರುವ ಮಾತುಗಳು ಈ ಅವಧಿಯ ಭಾಷಾಪ್ರಜ್ಞೆಯ ದ್ಯೋತಕವಾಗಿವೆ. ಕನ್ನಡ ಪದಗಳನ್ನು

ಸಮಸಂಸ್ಕೃತ ಪದಗಳೊಂದಿಗೆ ಹೊಂದಿಕೆಯಾಗುವಂತೆ ಅರಿತು ಬೆರಸಿ ಹೇಳಬೇಕು. ಅವ್ಯಯಗಳನ್ನು ಸಮಾಸಮಾಡಿ ಪ್ರಯೋಗಿಸಬೇಕು, ಅರಿಸಮಾಸವನ್ನು ಮಾಡಬಾರದು —ಎಂದು ಮುಂತಾಗಿ ಹೇಳಿರುವ ಅಂಶಗಳು ಭಾಷಾಪ್ರಯೋಗಗಳನ್ನು ನಿರ್ದುಷ್ಟವಾಗುವಂತೆ ಕ್ರಮಗೊಳಿಸಬೇಕೆಂಬ ಉದ್ದೇಶವನ್ನು ಸೂಚಿಸುತ್ತವೆ.

ಈ ಕಾಲದಲ್ಲಿ ಹುಟ್ಟಿದ ಏಕೈಕ ಕೃತಿಯಾದ 'ಕವಿರಾಜಮಾರ್ಗ'ವು ಸಂಕ್ರಮಣ ಯುಗದಲ್ಲಿ ನಡೆದಿರುವ ಭಾಷಾಪರಿವರ್ತನೆಯ ಮುಕ್ತಾಯದ ಘಟ್ಟವನ್ನು ಸೂಚಿಸುವಂತೆ ತೋರುತ್ತದೆ. ಪೂ.ಹ.ಗ.ದ ಲಕ್ಷಣಗಳೆಲ್ಲ ಮಾಯವಾಗಿ ಹ.ಗ.ದ ಲಕ್ಷಣಗಳೇ ನೆಲೆಗೊಂಡ ಹಂತವನ್ನು ಇಲ್ಲಿ ಕಾಣಬಹುದು. ಹೀಗಾಗಿ 'ಕವಿರಾಜಮಾರ್ಗ'ವು ಹಳಗನ್ನಡದ ಗ್ರಂಥ. ಪೂ.ಹ.ಗ.ದ ಲಕ್ಷಣಗಳು ಅಲ್ಲೊಂದು ಇಲ್ಲೊಂದು ಎಂಬಂತೆ ಬಹು ವಿರಳವಾಗಿ ಕಾಣಿಸಿಕೊಳ್ಳುತ್ತವೆ. "ಮೊಗಮೆಂಬಂಬುಜದಲರಾ·ನಗೆಯೆಂಬಾ" (೩-೨೫) ಎಂಬಲ್ಲಿ ಷಷ್ಠಿಗೆ ದೀರ್ಘತ್ವವು 'ಕವಿರಾಜಮಾರ್ಗ'ಕಾರನ ಕಾಲಕ್ಕೆ ತೀರ ವಿರಳವಾಗಿ ಬಿಟ್ಟಿದ್ದುದರಿಂದ ಅವುಗಳ ದೀರ್ಘ ಪ್ರಯೋಗವನ್ನು ಕುರಿತು ಈತನು ನಿಯಮಗಳನ್ನು ರೂಪಿಸಿರುವುದು ಕಂಡುಬರುತ್ತದೆ. "ಬಾರಾದೆ, ಬಗೆಯಾದೆ, ತಡೆದಾನ್, ಆನನಾನ್, ಅಟ್ಟಿದೇನ್" (೧-೧೭೮) ಎಂಬ ರೂಪಗಳನ್ನು ಮಾರ್ಗಕಾರನು ಗೌರವದೋಷಕ್ಕೆ ಉದಾಹರಣೆಯಾಗಿ ಕೊಟ್ಟಿರುವುದನ್ನು ನೋಡಿದರೆ ಶಾಸನಗಳಲ್ಲಿ ಯಥೇಚ್ಛವಾಗಿ ಕಂಡುಬರುವ ಈ ರೂಪಗಳು ಮಾರ್ಗಕಾರನ ದೃಷ್ಟಿಯಲ್ಲಿ ತಪ್ಪು.ಎನ್ನಿಸಿರುವುದು ಏಕೆಂದು ತಿಳಿಯದು. ಈ ಸಂದರ್ಭವನ್ನು ಕುರಿತು ಎಂ. ವಿ. ಸೀತಾರಾಮಯ್ಯ ಅವರು "I-೧೭೮ ಈ ಪದ್ಯ ಗೌರವದೋಷಕ್ಕೆ ಉದಾಹರಣೆಯಾಗಿರದೆ, ನಿಜವಾಗಿ ಲಘುದೋಷಕ್ಕೆ ಉದಾಹರಣೆ ಎಂಬ ನಮ್ಮ ಊಹೆ ಸರಿಯಾಗಿರುವ ಪಕ್ಷಕ್ಕೆ, ದೀರ್ಘ ಆಕಾರವುಳ್ಳ ನಿಷೇಧಾತ್ಮಕ (ಬಾರಾದೆ ಇತ್ಯಾದಿ) ಕ್ರಿಯಾರೂಪಗಳು ಕವಿರಾಜಮಾರ್ಗಕಾರನಿಗೂ ಸಮ್ಮತವೆಂದಾಗುತ್ತದೆ"[೨೪] ಎಂದಿದ್ದಾರೆ.

ಕವಿರಾಜಮಾರ್ಗದ ಭಾಷೆ ಪರಿಷ್ಕೃತವೂ ಶುದ್ಧವೂ ಆದುದಾಗಿದೆ. ಕನ್ನಡ-ಸಂಸ್ಕೃತಗಳು ಸಾಧಿಸಿರುವ ಒಳ್ಳೆಯ ಮೈತ್ರಿಯನ್ನು ಈ ಗ್ರಂಥ ಸೂಚಿಸುತ್ತದೆ. ಅಚ್ಚಗನ್ನಡ ಶೈಲಿ, ಕನ್ನಡ-ಸಂಸ್ಕೃತಗಳ ಹಿತಮಿತ ಮಿಶ್ರಣದ ಶೈಲಿ, ಸಂಸ್ಕೃತ ಭೂಯಿಷ್ಠವಾದ ಶೈಲಿ—ಹೀಗೆ ಎಲ್ಲಕ್ಕೂ ನಾವು 'ಕವಿರಾಜಮಾರ್ಗ'ದಲ್ಲಿ ಉದಾಹರಣೆಗಳನ್ನು ಕಾಣಬಹುದು. ಅವನ ಅಚ್ಚಗನ್ನಡ ಶೈಲಿಗೊಂದು ಉದಾಹರಣೆ :

ನೆನೆದಿರುಳುಂ ಪಗಲುಂ ನಿ
ನ್ನನೆ ಪೀನವೊಱಲ್ದು ಮಱುಗಿ ಕಾತರಿಸುತ್ತುಂ
ಮನದೊಳ್ ಸೈರಿಸಲಾಱೆಂ
ನಿನಗೆನಸುಂ ಕರುಣಮಿಲ್ಲ ಮರವಾನಿಸನಯ್ ॥ (೨-೮೩)

ಸಂಸ್ಕೃತ-ಕನ್ನಡಗಳ ಹಿತ-ಮಿತವಾದ ಮಿಶ್ರಣಕ್ಕೆ ಒಂದು ಉದಾಹರಣೆ :

ದೋಸಮೇನಾನುಂ ಸ್ವಲ್ಪಮಾದೊಡಂ
ಮಾಸಿಸಿರ್ಕುಮಣಂ ಕೃತಿವಧುವಂ
ಪೇಸದೆ ದುರ್ಜನದೊಳಾದ ಪರಿಚಯಂ
ಮಾಸಿಸಿ ಕಿಡಿಸುವವೊಲೊಪ್ಪುವ ಕುಲವಧುವಂ ॥ (೧–೧೧೨)

ಸಂಸ್ಕೃತಭೂಯಿಷ್ಠವಾದ ಶೈಲಿಗೊಂದು ಉದಾಹರಣೆ :

ನಯವಿದುದಿತಯುಕ್ತಿವ್ಯಕ್ತಿಲೋಕ ಪ್ರತೀತ್ಯಾ
ಶ್ರಯ ಸಕಳಕಳಾಲೀಲಾಕರಾಲ್ಪೋಪಜಲ್ಪಂ
ನಿಯತಸಮಯಸಾರಾಸಾಧನೀಯಾದಿ ತಾರಾ
ನ್ವಯಪರಮತಪೋಸುಷ್ಠಾನನಿಷ್ಠಾರ್ಥಸಿದ್ಧಂ ॥ (೪–೨೧೫)

## ಸಾರಾಂಶ

ಈ ಯುಗದ ಭಾಷಾಸ್ವರೂಪದ ವಿವೇಚನೆಯ ಮುಖ್ಯಾಂಶಗಳನ್ನು ಈ ಕೆಳಕಂಡಂತೆ ಸಂಗ್ರಹಿಸಬಹುದು.

೧) ಈ ಕಾಲದ ಉದಯದ ವೇಳೆಗಾಗಲೇ ಕನ್ನಡ ಭಾಷೆಯು ತನ್ನ ಅಗತ್ಯಗಳಿಗನು ಗುಣವಾಗಿ ಸ್ವತಂತ್ರವಾದ ವರ್ಣಮಾಲೆಯನ್ನು ನಿರ್ಮಿಸಿಕೊಂಡಿದೆ. ೨) ಕೆಲವಾರು ಶತಮಾನಗಳಷ್ಟು ಮುಂಚೆಯೇ ಕನ್ನಡ ಭಾಷೆಯು ವ್ಯವಹಾರದಲ್ಲಿದ್ದು, ಈ ಕಾಲಕ್ಕೆ ಕಾಲಿಡುವ ವೇಳೆಗೆ ಅದು ತಕ್ಕಷ್ಟು ಮಾಗಿದೆ. ಭಾಷೆಯ ಕಾರ್ಯವಿಧಾನವನ್ನು ವ್ಯಾಕರಣದ ಚೌಕಟ್ಟಿನಲ್ಲಿ ವಿವರಿಸಬಹುದಾದ ಮಟ್ಟ ಇಲ್ಲಿ ರೂಪುಗೊಂಡಿದೆ. ಈ ಯುಗದ ಮೊದಲ ಬರೆಹವೆನಿಸಿದ ಹಲ್ಮಿಡಿಶಾಸನವು ಭಾಷೆಯನ್ನು ಬರೆಹಕ್ಕೆ ಪಳಗಿಸಲು ಮಾಡುತ್ತಿದ್ದ ಆರಂಭದ ಪ್ರಯತ್ನ ಎಂಬ ಅಭಿಪ್ರಾಯವನ್ನು ಮೂಡಿಸಿದರೆ, ಈ ಯುಗದ ಕೊನೆಯಲ್ಲಿ ಆಲೋಕಸ್ತಂಭವಾಗಿ ನಿಂತಿರುವ 'ಕವಿರಾಜಮಾರ್ಗ'ವು ಭಾಷೆಯ ಸಾಧಿಸಿರುವ ಪ್ರಬುದ್ಧತೆಯನ್ನು ಸೂಚಿಸುತ್ತದೆ. (೩) ಹಳಗನ್ನಡಕ್ಕಿಂತ ಭಿನ್ನವಾದ ಕೆಲವು ಲಕ್ಷಣಗಳನ್ನು ಆರಂಭದ ಭಾಷೆ ಒಳಗೊಂಡಿದೆ. ಭಾಷೆಯ ಬೆಳವಣಿಗೆಯಲ್ಲಿ ಇದೊಂದು ವಿಶಿಷ್ಟವಾದ ಹಂತವೆನಿಸುವಂತಿದ್ದು 'ಪೂರ್ವದ ಹಳಗನ್ನಡ' ಎಂದು ಅದನ್ನು ಕರೆಯಬಹುದಾಗಿದೆ. ಹಳಗನ್ನಡದ ಲಕ್ಷಣಗಳೂ ಈ ಯುಗದಲ್ಲಿ ಕೂಡಿಬಂದಿರುವುದರಿಂದ, ಇದು ಪೂ.ಹ.ಗ.ವು ಹ.ಗ.ವಾಗಿ ಮಾರ್ಪಡುತ್ತಿದ್ದ ಸಂಕ್ರಮಣಯುಗವೆನಿಸಿದೆ. (೪) ಈ ಯುಗದ ಭಾಷಾಕ್ಷೇತ್ರದಲ್ಲಿ ಉಪಭಾಷೆಗಳಿದ್ದಿವೆಯಾದರೂ ಅವುಗಳ ಸ್ವರೂಪ ನಿರ್ಧಾರಕ್ಕೆ ಇಂದು ನಮಗೆ ತಕ್ಕ ಆಧಾರಗಳಿಲ್ಲ. (೫) ಮುಂದಿನಯುಗಗಳಲ್ಲಿ ಕಂಡುಬರುವಂತೆಯೆ ಈ ಯುಗದ ಭಾಷೆಯ ಮೇಲೂ ಸಂಸ್ಕೃತವು ತನ್ನ ಪ್ರಭಾವವನ್ನು ಬೀರಿದೆ. (೬) ಈ ಯುಗದ ಭಾಷೆಯು ಭಾವನೆಗಳ ಅಭಿವ್ಯಕ್ತಿಗೆ ತಕ್ಕ ಮಾಧ್ಯಮವಾಗಿ ರೂಪುಗೊಂಡಿದ್ದರೂ ಅದರ ಬಳಕೆಯಲ್ಲಿ ಅಸ್ಥಿರತೆಕಂಡುಬರುತ್ತದೆ. ಶಬ್ದರೂಪಗಳ ಅನೇಕರೂಪತೆ ವಿರೂಪತೆಗಳೂ ವಾಕ್ಯರಚನೆಯಲ್ಲಿ ಸಂದಿಗ್ಧತೆ ಶಿಥಿಲತೆಗಳೂ ಅಲ್ಲಲ್ಲಿ ಕಂಡುಬರುತ್ತವೆ. (೭) ಭಾಷೆಯ ಬಳಕೆಯವ್ಯಾಪ್ತಿ

ಸೀಮಿತವಾದ್ದರಿಂದ ಶಬ್ದಭಂಡಾರವೂ ಪ್ರಾಯಃ ಸೀಮಿತವಾಗಿದೆ. (೮) ಮೂಲದ್ರಾವಿಡ ಭಾಷೆಯಿಂದ ಬೇರ್ಪಟ್ಟು ಸ್ವತಂತ್ರವಾಗಿ ಬೆಳೆಯುತ್ತಿದ್ದ ಭಾಷೆ, ಮೂಲದ ಕೆಲವು ಲಕ್ಷಣ ಗಳನ್ನು ಇನ್ನೂ ಉಳಿಸಿಕೊಂಡಿದೆ. ತಮಿಳಿನೊಡನೆ ಹೋಲುವ ಆ ರೂಪಗಳೆಲ್ಲ ಮೂಲ ದ್ರಾವಿಡದವು. ಇದರ ಜೊತೆಗೆ ತಮಿಳಿನ ಪ್ರಭಾವವೂ ಇದೆ. ೯) ಅಭಿವ್ಯಕ್ತಿಯ ಮಾಧ್ಯಮ ವಾಗಿ ಪದ್ಯಕ್ಕಿಂತ ಹೆಚ್ಚು ಪ್ರಾಶಸ್ತ್ಯ ಗದ್ಯಕ್ಕೆ ದೊರೆತಿದೆ. ಪದ್ಯಶೈಲಿಯು ಪರಿಷ್ಕೃತ ರೂಪವನ್ನು ತೋರಿದರೆ, ಗದ್ಯವು ಆಡುನುಡಿಯತ್ತ ಒಲೆದಿರುವುದು ಕಂಡುಬರುತ್ತದೆ. ರಚನೆಯ ದೃಷ್ಟಿಯಿಂದ ಈ ಯುಗದ ಭಾಷೆಯಲ್ಲಿ ಜಟಿಲತೆಯಿಂದ ಸರಳತೆಯತ್ತ ಸಾಗುತ್ತಿರುವ ಲಕ್ಷಣಗಳು ಕಾಣಿಸುತ್ತವೆ. ೧೦) ಭಾಷೆಯ ಬಳಕೆಯಲ್ಲಿ ಒಪ್ಪುತಪ್ಪು ಗಳನ್ನು ಕುರಿತ ವಿಶಿಷ್ಟಪ್ರಜ್ಞೆಯೊಂದು ಈ ಅವಧಿಯ ಕೊನೆಕೊನೆಗೆ ಮೂಡಿರುವುದು ಕಂಡುಬರುತ್ತದೆ.

## ಅಡಿಟಿಪ್ಪಣಿಗಳು

1 Lewis Rice, *Karnataka Bhasha Bhushana*, Bangalore, 1884, Intro. p. vi.
2 F. Kittel, *A Grammar of the Kannada Language*, 1903, p. 40.
3 R. Narasimhacharya, *History of the Kannada Language*, Mysore, 1969, pp. 189–90.
4-5 'ಕನ್ನಡ ಕೈಪಿಡಿ', ೧, ಮೈಸೂರು, ೧೯೬೫, ಪು. ೩೩೪-೩೫.
6 (ಸಂ.) ಎಂ. ವಿ. ಸೀತಾರಾಮಯ್ಯ, 'ಕವಿರಾಜಮಾರ್ಗಂ', ೧-೧೧೪.
7 G. S. Gai, *Historical Grammar of Old Kannada*, Poona, 1946, p. 42.
8 ಹೋಲಿಸಿ : 'ಶಬ್ದಮಣಿದರ್ಪಣ', ೧೯೫೯, ಸೂತ್ರ ೧೨೩
9 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೧-೧೧೫.
10–11 G. S. Gai, op. cit., p. 54.
12 ಪ್ರ. ಗೋ. ಕುಲಕರ್ಣಿ, 'ಕನ್ನಡ ಭಾಷೆಯ ಚರಿತ್ರೆ', ೧೯೬೭, ಪು. ೩೮೯.
13–14 R. Narasimhacharya, op. cit., p. 188 ; 182-88.
15-16 ಈ ಅಂಶಗಳನ್ನು ಗೋವಿಂದ ಪೈ ಅವರು ಹಿಂದೆಯೇ ಗುರುತಿಸಿದ್ದಾರೆ. ನೋಡಿ: 'ಮೂರು ಉಪನ್ಯಾಸಗಳು', ಧಾರವಾಡ, ೧೯೬೦, ಪು. ೧೨೫, ೧೨೮.
17 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೨-೧೦೨-೦೭.
18-19 ಡಿ. ಎಲ್. ನರಸಿಂಹಾಚಾರ್, ಕನ್ನಡದಲ್ಲಿ ಶಬ್ದರಚನೆ, 'ಪೀಠಿಕೆಗಳು ಲೇಖನಗಳು', ಮೈಸೂರು. ೧೯೭೧, ಪು. ೭೭೬.
20 A. N. Narasimhia, *A Grammar of the Oldest Kanarese Inscriptions*, Mysore, 1941, p. 140.
21 G. S. Gai, op. cit., p. 75.
22 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೧೩೬.
23 (ಸಂ.) ವಿ. ಸೀತಾರಾಮಯ್ಯ, 'ಕವಿರಾಜಮಾರ್ಗ', ಐಬಿಎಚ್, ಪ್ರಕಾಶನ, ಪು. ೧೫೪-೫೫.
24 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪೀಠಿಕೆ, ಪು. xcii.

# ಅಧ್ಯಾಯ ಐದು

# ಶಾಸನ ಸಾಹಿತ್ಯ

## ವಸ್ತು, ಸಾಹಿತ್ಯಮೌಲ್ಯ, ವಿಶೇಷತೆ

ಶಾಸನಗಳನ್ನು ಸಾಹಿತ್ಯವೆಂದು ಪರಿಗಣಿಸುವಾಗ ಒಂದು ಸಂಗತಿಯನ್ನು ನೆನಪಿನಲ್ಲಿಡಬೇಕು: ಸಾಹಿತ್ಯ ನಿರ್ಮಾಣ ಶಾಸನಗಳ ಮೂಲೋದ್ದೇಶವಲ್ಲ; ಅವು ಪ್ರಧಾನವಾಗಿ ಅಧಿಕೃತ ಸ್ವರೂಪದ ದಾಖಲೆಗಳು. ಆದರೆ ನಡೆದ ಘಟನೆಯೊಂದನ್ನು ವರ್ಣಿಸುವಾಗಿ ಕಾವ್ಯಗಳ ಪ್ರಭಾವದಿಂದ ಅಥವಾ ವರ್ಣಿಸುವವನ ಭಾವಪೂರ್ಣತೆಯಿಂದ ಶಾಸನಗಳಲ್ಲಿ ಕಾವ್ಯಾಂಶ ಕಾಣಿಸಿಕೊಳ್ಳಬಹುದು.[1] ಅಂಥ ಕಡೆಗಳಲ್ಲಿ ಶಾಸನಗಳ ಸಾಮಾಜಿಕ, ಧಾರ್ಮಿಕ, ಚಾರಿತ್ರಿಕ ಮೌಲ್ಯಗಳ ಜೊತೆಗೆ ಸಾಹಿತ್ಯಕ ಮೌಲ್ಯವೂ ಗಮನಾರ್ಹವಾಗುತ್ತದೆ. ಎಷ್ಟೋ ಕಡೆಗಳಲ್ಲಿ ಇದು ಇತರ ಮೌಲ್ಯಗಳನ್ನು ಮರಸಿಬಿಡುವಷ್ಟರ ಮಟ್ಟಿಗೆ ಎದ್ದು ಕಾಣುವುದೂ ಉಂಟು. ಸಾಹಿತ್ಯಾಭ್ಯಾಸಿಗಳು ಶಾಸನಗಳ ಅನ್ಯಮುಖಗಳನ್ನು ಬಿಟ್ಟು ಕಾವ್ಯಮುಖವೊಂದನ್ನೇ ಅಧ್ಯಯನ ಮಾಡುವುದೂ ಸಾಧ್ಯ. ಹೀಗಾಗಿ ಶಾಸನಗಳಿಗೆ ಚರಿತ್ರೆಯಲ್ಲಿ ಮಾತ್ರವಲ್ಲದೆ ಸಾಹಿತ್ಯ ಚರಿತ್ರೆಯಲ್ಲೂ ಉಚಿತ ಸ್ಥಾನವಿದೆ.

ಶಾಸನಗಳ ಕಾವ್ಯಮೌಲ್ಯಕ್ಕೆ ಸಂಬಂಧಿಸಿದಂತೆ ಗಮನಿಸಬೇಕಾದ ಮುಖ್ಯಾಂಶವೊಂದಿದೆ. ಕಾವ್ಯಾಂಶರಹಿತವಾದ ಶಾಸನಗಳನ್ನು ವರ್ಜಿಸಿ ಉಳಿದುವನ್ನೆಲ್ಲ ನೋಡಿದಾಗ ಶಾಸನಕವಿಗಳದೇ ಒಂದು ವಿಶಿಷ್ಟವರ್ಗವೆಂಬುದು ತಿಳಿದುಬರುತ್ತದೆ. ಅವರು ಯಾರೂ ಪ್ರಥಮವರ್ಗದ ಕವಿಗಳಾಗಿ ತೋರುವುದಿಲ್ಲ; ಶಾಸನ ಕ್ಷೇತ್ರ ನಮಗೆ ದ್ವಿತೀಯ ವರ್ಗದ, ಸಾಮಾನ್ಯ ಶಕ್ತಿಯ, ಕವಿಗಳನ್ನು ಕಾಣಿಸಬಲ್ಲುದೇ ಹೊರತು ಮಹಾಕವಿಗಳನ್ನಲ್ಲ.[2] ಈ ಶಾಸನಕವಿಗಳಲ್ಲಿ ಸಾಮಾನ್ಯವಾಗಿ ಪ್ರತಿಭೆಗಿಂತ ಪಾಂಡಿತ್ಯ ಹಾಗೂ ಅನುಕರಣಪ್ರವೃತ್ತಿ ಅಧಿಕವಾಗಿರುತ್ತದೆ.[3] ಇವರಲ್ಲಿ ಕಾವ್ಯ ಶಾಸನಗಳೆರಡನ್ನೂ ರಚಿಸಿದವರು ಕೆಲವರಾದರೆ, ಬಹುಮಂದಿ ಕಾವ್ಯರಚನೆಗೆ ಕೈಹಾಕದೆ ಶಾಸನರಚನೆಯಲ್ಲಿ ತಮ್ಮ ಶಕ್ತಿಯನ್ನು ಪ್ರಕಟಿಸಿ ಸಂತೃಪ್ತರಾದರು. ಅಷ್ಟಾಗಿ ಪಾಂಡಿತ್ಯವೇನೂ ಇಲ್ಲದೆ ತಮ್ಮ ಜಾನಪದ ಸತ್ತ್ವದಿಂದ ಸ್ವೋಪಜ್ಞತೆಯನ್ನು ಮೆರೆದಿರುವ ಕವಿಗಳೂ ಉಂಟು. "ಕುರಿತೋದದೆಯುಂ ಕಾವ್ಯಪ್ರಯೋಗಪರಿಣತಮತಿಗಳ್" ಎಂಬ ಉಕ್ತಿ ಇಂಥವರಿಗೂ ಅನ್ವಯಿಸಬಲ್ಲುದು. ಒಟ್ಟಿನಲ್ಲಿ, ಶಾಸನಗಳಲ್ಲಿ ನಾವು ಮಹೋನ್ನತವಾದ ಕಾವ್ಯವನ್ನು ನೋಡಲಾರೆವು;

ಹಾಗೆ ಶ್ರೇಷ್ಠವಾದ ಕಾವ್ಯ ಅಲ್ಲಿ ಗೋಚರಿಸಿದರೂ, ಅದು ಕಾವ್ಯಪ್ರಪಂಚದ ಅನುಕರಣವಾಗಿರುವುದೇ ಹೆಚ್ಚು. ಹೀಗಾಗಿ ಶಾಸನಗಳು ತಮ್ಮ ಸಾಹಿತ್ಯಮೌಲ್ಯದಲ್ಲಿ ಪ್ರಮಾಣದಲ್ಲಿ ಕಾವ್ಯಗಳಿಗೆ ಹೊಯ್‌ಕಯ್ಯಾಗಿ ನಿಲ್ಲಲಾರವು ಎಂಬುದು ಸ್ಪಷ್ಟ. ಆದರೆ ಮಹೋನ್ನತ ಕವಿತೆಯೊಂದೇ ಕವಿತೆಯಲ್ಲ. ಅದಕ್ಕೂ ಕೆಳಗಿನ ಕಾವ್ಯಸ್ತರಗಳು ಹಲವಾರು. ಅವುಗಳಲ್ಲಿ ಬಹುಪಾಲನ್ನು ಶಾಸನಲೋಕ ನಮಗೆ ನೀಡುತ್ತದೆ. ಉದಾತ್ತ ಕವಿತೆ ('great poetry')ಯನ್ನಲ್ಲದಿದ್ದರೂ ಉತ್ಕೃಷ್ಟ ಕವಿತೆ ('good poetry')ಯನ್ನಲ್ಲಿ ಆಸ್ವಾದಿಸಬಹುದು. ಎಂತಲೇ ಸಾಹಿತ್ಯದೃಷ್ಟಿಯಿಂದಲೂ ಶಾಸನಗಳಿಗೆ ಮಹತ್ತ್ವವಿದೆ.

ಶಾಸನಗಳು ಕಾವ್ಯವಾಗಿ ಉದ್ದಿಷ್ಟವಾಗದ ವ್ಯವಹಾರಿಕ ದಾಖಲೆಗಳಾದುದರಿಂದ, ಒಂದು ಭಾಷೆಯ ಆರಂಭಕಾಲದಲ್ಲೇ ಅವು ರೂಪುಗೊಳ್ಳುತ್ತವೆ. ಆದ್ದರಿಂದ ಯಾವುದೇ ಭಾಷೆಯ ಮತ್ತು ಸಾಹಿತ್ಯದ ಉಗಮದ ಮೇಲೆ ಅವು ಅಮೂಲ್ಯವಾದ ಬೆಳಕು ಚೆಲ್ಲುತ್ತವೆ. ಅವುಗಳ ಅಧ್ಯಯನದಿಂದ ಆಯಾ ಭಾಷೆ ಸಾಹಿತ್ಯಗಳ ಪ್ರಾಚೀನತೆಯನ್ನು ನಿರ್ಣಯಿಸಬಹುದು. ರಾಜಕೀಯ ಚರಿತ್ರೆಯ ರಚನೆಗೆ ಶಾಸನಗಳು ಹೇಗೆ ಅಗತ್ಯವಾದ ಬುನಾದಿಯಾಗಿವೆಯೋ ಹಾಗೆಯೇ ಭಾಷೆ ಸಾಹಿತ್ಯಗಳ ಹಳಮೆಯನ್ನು ಗೊತ್ತು ಮಾಡಲೂ ಅವು ಅತ್ಯಂತ ವಿಶ್ವಾಸಾರ್ಹ ಸಾಧನಗಳಾಗಿವೆ.

ಕನ್ನಡ ಶಾಸನಗಳ ವಿಷಯಕ್ಕೆ ಬಂದರೆ, ಅವು "ಕನ್ನಡ ಸಾಹಿತ್ಯದ ತಲಕಾವೇರಿ" ಎನ್ನಬಹುದು.[4] ಕನ್ನಡ ಭಾಷೆಯ ಮತ್ತು ಸಾಹಿತ್ಯದ ಪ್ರಾಚೀನತೆಯನ್ನರಿಯಲು ಸದ್ಯಕ್ಕೆ ಈ ಶಾಸನಗಳೇ ನಮಗಿರುವ ಏಕೈಕ ಖಚಿತ ಆಧಾರ. ಉಳಿದ ಆಧಾರಗಳು ಸಂದಿಗ್ಧವೂ ಪರೋಕ್ಷವೂ ಆದವು. ಕಾವ್ಯ ಗುಣಸಂಪನ್ನವಾದ ಶಾಸನಗಳು ಕನ್ನಡದಲ್ಲಿ ಬೇಕಾದಷ್ಟಿವೆ. ಕಾವ್ಯಗಳನ್ನು ಬರೆದಿರುವ ಅನೇಕ ಈಚಿನ ಖ್ಯಾತ ಕವಿಗಳು—ರನ್ನ, ಜನ್ನ, ನಾಗಚಂದ್ರ, ಶಾಂತಿನಾಥ, ಪಾರ್ಶ್ವ, ಮಧುರ ಮೊದಲಾದವರು ಶಾಸನಗಳನ್ನೂ ರಚಿಸಿದ್ದಾರೆ; ಶಾಸನಗಳಿಂದಲೇ ತಿಳಿದುಬರುವ ಅನೇಕ ಕವಿಗಳುಂಟು; ಹೆಸರು ಹೇಳಿಕೊಳ್ಳದ ಅಜ್ಞಾತ ಕವಿಗಣವಂತೂ ಬಹುದೊಡ್ಡ ಸಂಖ್ಯೆಯಲ್ಲಿದೆ. ಕನ್ನಡ ಸಾಹಿತ್ಯದ ಬೆಳವಣಿಗೆಗೆ, ಶ್ರೀಮಂತಿಕೆಗೆ ಇವರೆಲ್ಲರೂ ತಮ್ಮ ಕೊಡುಗೆಯನ್ನಿತ್ತಿದ್ದಾರೆ.

ಈಗ ಇತಿಹಾಸಜ್ಞರು ಕನ್ನಡದ ಪ್ರಾಚೀನತಮ ಶಾಸನವೆಂದು (ಸು. ೪೫೦) ಸಾಮಾನ್ಯವಾಗಿ ತಿಳಿಯುತ್ತಬಂದಿರುವ ಹಲ್ಮಿಡಿ ಶಾಸನವನ್ನು ನೋಡಬಹುದು.[5]

೧. ಜಯತಿ ಶ್ರೀಪರಿಷ್ವಙ್ಗಶ್ಶಾರ್ಙ್ಗ[ವ್ಯಾನತಿ]ರಚ್ಯುತಃ
ದಾನವಾಕ್ಷ್ಣೋರ್ಯುಗಾನ್ತಾಗ್ನಿಃ [ಶಿಷ್ಟಾನಾನ್ತು] ಸುದರ್ಶನಃ
೨. ಸಮಃ ಶ್ರೀಮತ್ಕದಂಬಪನ್ತ್ಯಾಗಸಂಪನ್ನನ್ಕಲಭೋರ [ನಾ] ಅರಿಕ
೩. ಕುಸ್ಥಭಟ್ಟೋರನಾಳೆ ನರಿದಾವಿ [ಳೆ] ನಾಡುಳ್ ಮೃಗೇಶ ನಾ
೪. ಗೇನ್ದ್ರಾಭೀಳಭರ್ಟಹರಪ್ಪೋರ್ ಶ್ರೀ ಮೃಗೇಶ ನಾಗಾಹ್ವಯ
೫. ರಿವ್ವರ್ರಾ ಬಟರಿಕುಲಾಮಲವ್ಯೋಮತಾರಾಧಿನಾಥನ್ನಳಪ
೬. ಗಣಪಶುಪತಿಯೊ ದಕ್ಷಿಣಾಪಥ ಬಹು ಶತಹವನಾ

೭. ಹವದು[ಳ್] ಪಶುಪ್ರದಾನಶೌರ್ಯ್ಯೋದ್ಯಮಭರಿತೋ[ನ್ದಾನ]ಪ
೮. ಶುಪತಿಯೆನ್ದು ಪೊಗಳಪ್ಪೊಟ್ಟಣ ಪಶುಪತಿ
೯. ನಾಮಧೇಯನಾ ಸರಕ್ಕೆಲ್ಲ ಭಟರಿಯಾ ಪ್ರೇಮಾಲಯ
೧೦. ಸುತನ್ಗೆ ಸೇನ್ದ್ರಕಬಣೋಭಯ ದೇಶದಾ ವೀರಾಪುರುಷ ಸಮಕ್ಷ
೧೧. ದೆ ಕೇಕಯ ಪಲ್ಲವರಂ ಕಾದೆಱಿದು ಪೆತ್ತಜಯನಾ ವಿಜ
೧೨. ಅರಸನ್ಗೆ ಬಾಳ್ಗಚ್ಚು ಪಲ್ಮಡಿಉಂ ಮೂಳಿವಳ್ಳಿಉಂ ಕೊ
೧೩. ಟ್ಟಾರ್ ಬಟಾರಿ ಕುಲದೊನಳಕದಮ್ಬನ್ಕಳ್ದೋನ್ ಮಹಾಪಾತಕನ್
೧೪. ಇರ್ವ್ವರುಂ ಸಟ್ಟಿಜ್ಗದರ್ ವಿಜಾರಸರುಂ ಪಲ್ಮಡಿಗೆ ಕುಱು
೧೫. ಮ್ಬಿಡಿವಿಟ್ಟಾರ್ ಅದಾನಳಿವೊನ್ಗೆ ಮಹಾಪಾತಕಮ್ ಸ್ವಸ್ತಿ
೧೬. ಭಟ್ಟರ್ಗ್ಗೀ ಗಱ್ದೆ ಒಡ್ಡಲಿ ಆ ಪತ್ತೊನ್ದಿ ವಿಟ್ಟಾರಕರ

ಈ ಶಾಸನದಲ್ಲಿ 'ಮೃಗೇಶ ನಾಗೇಂದ್ರಾಭೀಳರ್' ಎಂಬಲ್ಲಿ ಶ್ಲೇಷೆಯನ್ನೂ 'ದಾನಪಶುಪತಿ', 'ಬಟರಿಕುಲಾಮಲವ್ಯೋಮ ತಾರಾಧಿನಾಥನ್' ಎಂಬಲ್ಲಿ ಎರಡು ಸಾಂಪ್ರದಾಯಿಕ ರೂಪಕಗಳನ್ನೂ ನೋಡುತ್ತೇವೆ. ಇಷ್ಟೇ ಇಲ್ಲಿರುವ ಕಾವ್ಯಾಂಶ; ಉಳಿದುದೆಲ್ಲ ವಿಷಯದ ವರದಿಯಾಗಿದೆ. ಭಾವೋತ್ಸಾಹದಿಂದ ಹೇಳುವಾಗ, 'ಕುಲಾಮಲವ್ಯೋಮ ತಾರಾಧಿನಾಥನ್' ಎನ್ನುವಲ್ಲಿ, ಗದ್ಯದ ನಡುವೆಯೇ ಪದ್ಯದ ಲಯ ಮೂಡಿರುವುದು ಕುತೂಹಲಕಾರಿಯಾಗಿದೆ; ಕನ್ನಡ ಸಾಹಿತ್ಯ ಚಂದ್ರೋದಯದ ಮುನ್‌ಸೂಚನೆ ಇಂಥ ರೂಪಕದಲ್ಲಿದೆಯೇನೊ. ಅಂತೂ ಹಲ್ಮಿಡಿ ಶಾಸನ ಕನ್ನಡದ ಪ್ರಥಮ ಶಾಸನವಾದರೂ, ಕನ್ನಡ ಶಾಸನಸಾಹಿತ್ಯ ಅದರಿಂದ ಮೊದಲಾಗುವುದಿಲ್ಲ.

ಹಲ್ಮಿಡಿ ಶಾಸನವಾದಮೇಲೆ ನಮ್ಮ ಲಕ್ಷ್ಯ ಸೆಳೆಯತಕ್ಕದ್ದು ಕ್ರಿ.ಶ. ೫ನೆಯ ಶತಮಾನದ್ದೆಂದು ಹೇಳಲಾದ ತಮಟಕಲ್ಲು ಶಾಸನ.[೬] ಆದರೆ ಇದರ ಕಾಲ ವಾದಗ್ರಸ್ತವಾಗಿದೆ. ಇದು ೫ನೆಯ ಶತಮಾನದ ಶಾಸನವೆಂಬುದು ನಿಶ್ಚಿತವಾಗಿದ್ದಲ್ಲಿ ಕನ್ನಡ ಶಾಸನ ಸಾಹಿತ್ಯವನ್ನು ಇದರಿಂದ ಆರಂಭಮಾಡಲು ಅಡ್ಡಿಯಿರುತ್ತಿರಲಿಲ್ಲ; ಏಕೆಂದರೆ, ಇದರಲ್ಲಿ ಹಲ್ಮಿಡಿ ಶಾಸನದಲ್ಲಿರುವುದಕ್ಕಿಂತ ಹೆಚ್ಚಿನ ಕಾವ್ಯಗುಣವಿದೆ.

ಬಿಣಮಣಿಅನ್ತು ಭೋಗಿ ಬಿಣಮುಳ್ಳಣಿವಿಲ್ಮನದೋನ್
ರಣಮುಖದುಳ್ಳಕೋಲಂ ನೆರಿಯಕ್ಕ್ಷಮನಿನ್ದ್ಯಗುಣನ್
ಪ್ರಣಯಿಜನಕ್ಕೆ ಕಾಮನಸಿತೋತ್ಪಲವರ್ಣನವನ್
ಗುಣಮಧುರಾಂಕ್ಕ ದಿವ್ಯಪುರುಷನ್ ಪುರುಷಪ್ರವರನ್ ॥

ಈ ಪದ್ಯದ ಪೂರ್ವಾರ್ಧವನ್ನು ಅರ್ಥೈಸುವಲ್ಲಿ ತುಸು ಕ್ಲೇಶವಿದ್ದರೂ ಇದೊಂದು ಸುಂದರವಾದ ಪದ್ಯ; "ತೀರ ಹಳೆಯ ಕನ್ನಡದಲ್ಲಿದ್ದು ಸಾಹಿತ್ಯಗುಣದಿಂದ ಕೂಡಿದ ಚೊಕ್ಕಾದ ಸ್ವಭಾವಚಿತ್ರ."[೭]

ಕ್ರಿ.ಶ. ೫, ೬, ೭ನೆಯ ಶತಮಾನಗಳಿಗೆ ಸೇರಿದ ಗಂಗ, ಕದಂಬ, ಚಾಲುಕ್ಯರ ಅನೇಕ ಶಾಸನಗಳನ್ನು ಗೋವಿಂದ ಪೈ ಉದ್ಧರಿಸಿಕೊಟ್ಟಿದ್ದಾರೆ.[೮] ಅವುಗಳಲ್ಲಿ ಸಾಹಿತ್ಯ ಗುಣ ಸೊನ್ನೆ. ಆದರೆ ಕ್ರಿ.ಶ. ೭ನೆಯ ಶತಮಾನದಲ್ಲಿ ಕಂಡುಬರುವ ಶ್ರವಣಬೆಳ್ಗೊಳದ

ಹಾಗೂ ಬಾದಾಮಿಯ ಶಾಸನಗಳು ಸಾಹಿತ್ಯದೃಷ್ಟಿಯಿಂದ ಪ್ರಮುಖವಾಗಿವೆ ; ಕನ್ನಡ ಶಾಸನ ಸಾಹಿತ್ಯದ ಚರಿತ್ರೆ ನಿಜವಾಗಿ ಇವುಗಳಿಂದ ಮೊದಲಾಗುತ್ತದೆ.

ಶ್ರವಣಬೆಳ್ಗೊಳದ ಶಾಸನಗಳ ಕಾಲ ಕ್ರಿ.ಶ. ಸು. ೬೫೦-೭೦೦ ಎಂದು ಹೇಳಲಾಗಿದೆ. ಆದರೆ ಅವುಗಳಲ್ಲಿ "ಕೆಲವಾದರೂ ಅದಕ್ಕೆ ಒಂದೊ ಹೆಚ್ಚೊ ಶತಮಾನಗಳ ಹಿಂದೆ ಕೆತ್ತಲ್ಪಟ್ಟಿರಬಹುದು" ಎಂದು ಗೋವಿಂದ ಪೈ ಅಭಿಪ್ರಾಯಿಸುತ್ತಾರೆ.[9] ಈ ಶಾಸನಗಳು ವಿವಿಧ ವೃತ್ತಗಳಲ್ಲಿವೆ; ಇವು ಜೈನಧರ್ಮಕ್ಕೆ ಸಂಬಂಧಿಸಿದ್ದು, ಜೈನ ಸಂನ್ಯಾಸಿಗಳ ಅಥವಾ ಸಂನ್ಯಾಸಿನಿಯರ ಶೀಲ, ತಪಸ್ಸು, ದೇಹತ್ಯಾಗ, ಸ್ವರ್ಗಸಂಪಾದನೆಗಳ ಉಜ್ವಲ ಚಿತ್ರಗಳನ್ನೊದಗಿಸುತ್ತವೆ; ಈ ದೃಷ್ಟಿಯಿಂದ ಶ್ರವಣಬೆಳ್ಗೊಳದ ಬೆಟ್ಟವೊಂದು ಚಿತ್ರಕೂಟ. ಒಂದೊಂದು ಶಾಸನವೂ ಪುಟ್ಟ ಭಾವಗೀತೆಯಾಗಿ, ಸೊಗಸಾದ ಉಪಮೆ ರೂಪಕಗಳಿಂದ ಆಕರ್ಷಿಸುತ್ತದೆ. ಸಾಹಿತ್ಯ ಸ್ವಾರಸ್ಯವುಳ್ಳ ಸುಮಾರು ೨೦-೩೦ ಪದ್ಯಗಳಲ್ಲಿ ಕೆಲವನ್ನು ಇಲ್ಲಿ ಗಮನಿಸಬಹುದು.[10]

ದುರಿತವೃಕ್ಷವನ್ನು ಕಿತ್ತು, ಅಜ್ಞಾನಪರ್ವತವನ್ನು ಭೇದಿಸಿ, ಮಿಥ್ಯಾತ್ವವೆಂಬ ದೊರೆಯನ್ನು ಸೀಳಿ, ಪಂಚೇಂದ್ರಿಯಗಳೆಂಬ ಮದ್ದಾನೆಗಳನ್ನು ಮೆಟ್ಟಿ, ಕಟ್ವಿಪ್ಪಿನ ಮೇಲೆ ವ್ರತಗಳನ್ನು ಕೈಕೊಂಡು ಸುಖಿಯಾದ ಚರಿತಶ್ರೀ ಎಂಬ ಮುನಿಯ ಚಿತ್ರವಿದು :

ಶ್ರೀ ದುರಿತಾಭ್ಯೊದ್ವೃಷಮಾಸ್ಕೀಱ್ತಿಲಱಿ ಪೊದೆದಜ್ಞಾನಶೈಲೇನ್ದ್ರಮಾಸ್ಫೋಟಿರ್
ದುರ ಮಿಥ್ಯಾತ್ವಪ್ರಮೂಢ ಸ್ಥಿರತರಸ್ಯಪನಾನ್ಮೆಟ್ಟಿ ಗನ್ಧೇಭಮುಯ್ದಾನ್
ಸುರವಿದ್ಯಾವಲ್ಲಭೇನ್ದ್ರಾಸ್ಸುರವರಮುನಿಭಿಸ್ತುತ್ಯ ಕಟ್ಬಪ್ಪಿನಾಮೇಲ್
ಚರಿತಶ್ರೀ ನಾಮಧೇಯಪ್ರಭು ಮುನಿನ್ವ್ರತಳ್ನೋನ್ತು ಸೌಖ್ಯಸ್ಥನಾಯ್ದಾನ್
೧೨(೩)

ಕೊಳತ್ತೂರ ಸಂಘದ ಮುನಿಯೊಬ್ಬ, "ಹೀಗೆ ಬದುಕುವುದು ಇನ್ನು ಸಾಧ್ಯವಿಲ್ಲ." ಎಂದು ನಿಶ್ಚಯಿಸಿ, ತಪಸ್ಸು ಸಂಯಮಗಳನ್ನಾಚರಿಸಿ, ಸಮಾಧಿಸ್ಥಿತನಾಗಿ ಸುರಲೋಕ ಮಹಾವಿಭವವನ್ನು ಪಡೆದನೆಂಬುದು ಈ ಪದ್ಯದ ಹೇಳಿಕೆ :

ಎಡೆಪಱಿಗೀ ನಡೆಕೆಯ್ದು ತಪಂ ಸಯ್ಯಮಮಾನ್ಕೊಳತ್ತೂರ ಸಂಘ
ನಡೆಕೊಱಿದಿನ್ತ ವಾಟ್ಟಿಡರಿದಿನ್ನೆನಗೆನ್ದು ಸಮಾಧಿ ಕೂಡಿವಿ
ಎಡೆವಿಡಿಯಲ್ಕವಡಿಂ ಕಟವಪ್ರಮೇಱಿಯೆ ನಿಲ್ಲದನನ್ದನ್
ಪಡೆಗಮೊಱಿಪ್ಪ....ನ್ದೀ ಸುರಲೋಕಮಹಾವಿಭವಸ್ಥನಾದವರ್
—೯೩ (೩೩)

ರಾಗದ್ವೇಷತುಲರಹಿತರೂ ಶುದ್ಧಾತ್ಮರೂ ಆದ ವೇಗೂರಿನ ಸರ್ವಜ್ಞಭಟ್ಟಾರಕರು ಸ್ವರ್ಗಾಗ್ರವನ್ನೇರಿದುದು ಈ ಪದ್ಯದ ವಸ್ತು :

ರಾಗದ್ವೇಷತಮೋಮಲವ್ಯಪಗತಶ್ಶುದ್ಧಾತ್ಮಸಂಯೋದ್ಧಕರ್
ವೇಗೂರಾ ಪರಮ ಪ್ರಭಾವ ರಿಷಿಯಸ್ಸರ್ವಜ್ಞಭಟ್ಟಾರಕರ್
...ಗಾದೇವ...ನ.ಡಿತ...ಸ್ತಬ್ಬ...ಲಗ್ರದೊಳ್
ಶ್ರೀಕೀರ್ಣ್ಣಮಲಪುಷ್ಪ...ಸ್ವರ್ಗಾಗ್ರಮಾನೇಱಿದಾರ್ —೧೩

ಕಟವಪ್ರ ಶೈಲವನ್ನೇರಿ, ಕತ್ತಿಯ ಮೇಲೆ, ಬೆಂಕಿಯ ಮೇಲೆ, ಸರ್ಪದಂಷ್ಟ್ರದ ಮೇಲೆ ಹೇಗೊ ಹಾಗೆ ನೂರೆಂಟು ವರ್ಷ ಉಗ್ರತಪವನ್ನೆಸಗಿ, ಸಮಾಧಿಸ್ಥನಾಗಿ ಸಿದ್ಧಿಗಳಿಸಿದ ಕಳಂತೂರ ಯತಿಯ ಚಿತ್ರವನ್ನು ಇಲ್ಲಿ ನೋಡುತ್ತೇವೆ:

ಬಾಳಾ ಮೇಲ್ ಶಿಖಿ ಮೇಲೆ ಸರ್ಪ್ಪದ ಮಹಾದನ್ತಾಗ್ರದುಳ್ ಸಲ್ವವೋಲ್
ಸಾಲಾಮ್ಪಾಲ ತಪೋಗ್ರದಿನ್ತು ನಡದೊಂ ನೂಱೆಣ್ಟು ಸಂವತ್ಸರಂ
ಕೇಳೊಯ್ಪಿನ್ ಕಟವಪ್ರಶೈಲಮಡಱ್ದೀನವ್ಮಾ ಕಳನ್ತೂರನಂ
ಬಾಲೇ ಪೆಗ್ಗೊರವಂ ಸಮಾಧಿನೆಱೆದೊನ್ ನೋಡಿನ್ತೆಯ್ದಿದಾನ್ ಸಿದ್ಧಿಯಾನ್

—೭೭

ಮಹಾಸೇನಋಷಿ ಕಬ್ಬಪ್ಪಿನ ಬೆಟ್ಟದಮೇಲೆ ಸಿದ್ಧಸಮಯಾನುಸಾರವಾಗಿ ನೋಂತು, ಅತಿ ವೈಭವೋಪೇತವಾದ ಸ್ವರ್ಗಾಗ್ರವನ್ನೇರಿದುದನ್ನು ಹೀಗೆ ಚಿತ್ರಿಸಲಾಗಿದೆ:

ಮಾಸೇನರ್ ಪರಮಪ್ರಭಾವ ರಿಸಿಯರ್ಕ್ಕಳ್ವಪ್ಪಿನಾ ಪೆಟ್ಟದುಳ್
ಶ್ರೀಸಂಗಂಗಳ ಪೇೞ್ದ ಸಿದ್ಧಸಮಯನ್ತಪ್ಪಾದೆ ನೋನ್ತಿವ್ಪಿನಿನ್
ಪ್ರಾಸ್ತಾದಾನ್ತರಮಾನ್ವಿ ಚಿತ್ರಕನಕಪ್ರಜ್ವಲ್ಯದಿನ್ಮಿಕ್ಕುದಾನ್
ಸಾಸಿರ್ವ್ವರ್ವ್ವರ ಪೂಜೆದನ್ದುಯೆ ಅವರ್ಸ್ವರ್ಗ್ಗಾಗ್ರಮಾನೇಱಿದಾರ್

—೩೭

ಶ್ರವಣಬೆಳ್ಗೊಳದ ಶಾಸನ ಪದ್ಯಗಳೆಲ್ಲ ಅತ್ಯುತ್ತಮವೂ ಅತ್ಯಂತ ಪ್ರಸಿದ್ಧವೂ ಆದುದು, ನಂದಿಸೇನ ಮುನಿವರರನ್ನು ಕುರಿತ ಈ ಪದ್ಯ:

ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಱವೋಲ್ಮಂಜುವೊಲ್ತೋಱಿ ಬೇಗಂ
ಪಿರಿಗುಂ ಶ್ರೀರೂಪಲೀಲಾಧನವಿಭವಮಹಾರಾಶಿಗಳ್ ನಿಲ್ಲವಾರ್ಗ್ಗಂ
ಪರಮಾರ್ತ್ಥಂ ಮೆಚ್ಚೆನಾನೀ ಧರಣಿಯುಳಿರವಾನೆನ್ದು ಸನ್ಯಾಸನಂಗೆ
ಯ್ದುರುಸತ್ವನ್ನನ್ದಿಸೇನ ಪ್ರವರ ಮುನಿವರನ್ದೇವಲೋಕಕ್ಕೆ ಸನ್ದಾನ್

ನಂದಿಸೇನನ ಇಹವಿರಕ್ತಿಯನ್ನು ಬಹಳ ನಾಟಕೀಯವಾಗಿ, ಪರಿಣಾಮಕಾರಿಯಾಗಿ ಅಭಿವ್ಯಕ್ತಿಗೊಳಿಸುವ ಈ ಪದ್ಯದ "ಶ್ರೀರೂಪ ಲೀಲಾ ಧನವಿಭವ ಮಹಾರಾಶಿಗಳ್ ನಿಲ್ಲವಾರ್ಗಂ" ಎಂಬ ಸೂಕ್ತಿ, ಪಂಪನಲ್ಲಿ "ಅಮರೇಂದ್ರೋನ್ನತಿ ಖೇಚರೇಂದ್ರವಿಭವಂ ಭೋಗೀಂದ್ರಭೋಗಂ ಮಹೇಂದ್ರಮಹೈಶ್ವರ್ಯಗಳಿವೆಲ್ಲಮಧ್ರುವಂ" ಎಂದು ಪ್ರತಿಧ್ವನಿಗೊಂಡಿರುವಂತೆ ತೋರುತ್ತದೆ.

ವಿನಯಾಚಾರಪರನೂ ತಪೋಧಿಕನೂ ಆದ ಚಂದ್ರದೇವಾಚಾರ್ಯ ಎಂಬ ವ್ಯಕ್ತಿ ತಪಸ್ಸಿನಿಂದ, ವಿನಯಾಚಾರಪರತೆಯಿಂದ, ಶ್ರವಣಬೆಳ್ಗೊಳದ ಶೈಲದಲ್ಲಿ 'ಸಾಧು'ಗಳು ಪಡೆಯುವ ಪೂಜ್ಯವಾದ 'ಶಿವನಿಲೆ'ಯನ್ನು ಪಡೆದನಂತೆ. ಜೈನಪರವಾದೊಂದು ಸಂಗತಿಯಲ್ಲಿ 'ಶಿವನಿಲೆ'ಯೆಂಬ ಮಾತು ಮುಕ್ತಿಸ್ಥಾನವೆಂಬರ್ಥದಲ್ಲಿ ಬಂದಿರುವುದು ಕುತೂಹಲಕರವಾಗಿದೆ. ಇದು ಹೇಗಿದ್ದರೂ, ಆಚಾರ್ಯನ ಕೀರ್ತಿಯನ್ನು ಹೇಳುವಾಗ, ಬರೆಹಗಾರ ಕವಿಮನೋಭಾವ ತೋರಿದ್ದಾನೆ.

ಸ್ವಸ್ತಿ ಶ್ರೀ ಅನವದ್ಯನ್ನದಿರಾಷ್ಟ್ರದುಳ್ಳೆ ಪ್ರಥಿತಯಶೋ [ಕು]ನ್ದಕಾನ್ವನ್ದು [ಸೈ]ಲಾವನ್
ವಿನಯಾಚಾರ ಪ್ರಭಾವನ್ತಪದಿನ್ನಧಿಕನ್ನಂಪ್ರದೇವಾಚಾರ್ಯನಾಮನ್
ಉದಿತ ಶ್ರೀ ಕಟ್ಟಪ್ಪಿನುಳ್ಳೇ ರಿಷಿಗಿರಿಶಿಲೆ ಮೇಲ್ನೋನ್ತು ತನ್ದೇಹಮಿಕ್ಕಿ
ನಿರವದ್ಯನ್ನೇಱಿ ಸ್ವರ್ಗ್ಗಂ ಶಿವನಿಶೆ ಪಡೆದಾನ್ಸಾಧುಗಳ್ಪೂಜ್ಯಮಾನನ್ ॥ ೭೪

ಅನಂತವಃ ತಿಗಂತಿ, ದ್ವಾದಶವಿಧ ತಪಸ್ಸಿನಿಂದ ಕಟವಪ್ರಗಿರಿಯಮೇಲೆ ಉಪಮಾತೀತ ಸುರಲೋಕ ಸೌಖ್ಯವನ್ನು ಪಡೆದಳು—ಎಂದು ಒಂದು ಶಾಸನದಲ್ಲಿ ಬಂದಿದೆ.

ಶ್ರೀ ತಪಮಾನ್ದ್ವಾದಶದಾ ವಿಧಾನ ಮುಖದಿನ್ನೆಯ್ದೊನ್ದುತ್ತಾ ಧಾತ್ರಿಮೇಲ್
ಚಪಲಿಲ್ಲಾ ನವಿಲೂರ ಸಂಘದ ಮಹಾನಸ್ತ್ರಾಪತೀಗನ್ತಿಯಾರ್
ವಿಪುಲ ಶ್ರೀ ಕಟವಪ್ರನಲ್ಗಿರಿಯ ಮೇಲ್ನೋನ್ತೊಂದು ಸನ್ಮಾರ್ಗ್ಗದಿನ್
ಉಪಮೀಲ್ಯಾ ಸುರಲೋಕ ಸೌಖ್ಯದೆಡೆಯಾನ್ತಾಮೆಯ್ದಿ ಇಟ್ಟಾಳ್ ॥ ೯೪

ಕೆಲವು ಶಾಸನಗಳು ಮಳೆ, ಗಾಳಿ, ಬಿಸಿಲು ಮುಂತಾದವುಗಳ ಏಟಿಗೆ ಸಿಕ್ಕಿ ಅಳಿಸಿ ಹೋಗಿವೆ; ಮತ್ತೆ ಕೆಲವು ಅಷ್ಟಿಷ್ಟು ಮಟ್ಟಿಗೆ ಉಳಿದುಕೊಂಡು ಅಲ್ಲಲ್ಲಿ ಕಾವ್ಯ ಸೌಂದರ್ಯದ ಹನಿಗಳನ್ನು ಹೊತ್ತು ನಿಂತಿವೆ: (೧) ಹಾವು ಮುಟ್ಟಿ ಹರಣನೀಗಿ ರಮ್ಯಸುರಲೋಕಕ್ಕೆ ಭಾಗಿ ಆದ ಲಕ್ಷಣವಂತ ಅಕ್ಷಯಕೀರ್ತಿಯ ವರ್ಣನೆ (೨೧), (೨) ಧೀರ, ನತ, ಸಂಯುತಾತ್ಮನಾದ ಇಂದ್ರನಂದಿ ಆಚಾರ್ಯನ ವರ್ಣನೆ (ಶಾ.ಸ. ೯೫), (೩) 'ಚಿತ್ರಗಿರಿಕೂಟ' ಆದ ಶ್ರವಣಬೆಳ್ಗೊಳದಲ್ಲಿ 'ತುಂಗೋಚ್ಚ ಭಕ್ತಿ'ಯಿಂದ ಮರಣವನ್ನಪ್ಪಿದ ಗುಣಕೀರ್ತಿಯ ವರ್ಣನೆ (ಶಾ. ಸ. ೧೦೫), (೪) ಸಮಾಧಿ ಮರಣದ ಮೂಲಕ ದೇವಲೋಕದ 'ಸ್ವಭಾವ ಸೌಂದರ್ಯ'ವನ್ನು ಹೊಂದಿದ ನವಿಲೂರು ಸಂಘದ ಪ್ರಭಾವತಿಯ ಮರಣದ ವರ್ಣನೆ (ಶಾ. ಸ. ೧೧೪)–ಇಂಥ ಕೆಲವಲ್ಲಿ ಅವನ್ನು ಕಾಣಬಹುದಾಗಿದೆ.

ಪದ್ಯಗಳಲ್ಲಿ ಕೆಲವು ಕಡೆ ಕಂಡುಬರುವ, 'ಬಾಲೇ' ಮುಂತಾದ ಸಂಬೋಧನ ಶಬ್ದಗಳು ಕುತೂಹಲ, ಆಶ್ಚರ್ಯಗಳನ್ನುಂಟುಮಾಡುತ್ತವೆ. ಇದು ಸಾಮಾನ್ಯವಾಗಿ 'ಛಂದೋಂಬುಧಿ'ಯಂತಹ ಶಾಸ್ತ್ರಕೃತಿಗಳಲ್ಲಿ ನಾವು ನೋಡಿರುವ ತಂತ್ರ. ಪದ್ಯಗಳಿಗೆ ಒಂದು ರೀತಿಯ ನಾಟಕೀಯತೆಯುಂಟಾಗಿ, ಕಾವ್ಯಾತ್ಮಕ ಪರಿಸರ ಸೃಷ್ಟಿಯಾಗಲು ಈ ಸಂಬೋಧನೆಗಳೂ ನೆರವಾಗುತ್ತವೆ ಎನ್ನಬಹುದು. ಇನ್ನು ಅನೇಕ ಪದ್ಯಗಳ ಅಂತ್ಯದಲ್ಲಿ ಬರುವ 'ಸ್ವರ್ಗಾಲಯಕ್ಕೇಱಿದಾರ್', 'ಸ್ವರ್ಗಾಗ್ರಮಾನೇಱಿದಾರ್', 'ದೇವಲೋಕಕ್ಕೆ ಸಂದಾನ್' ಎಂಬಂತಹ ವಾಕ್ಯಗಳನ್ನು ಲಕ್ಷಿಸಬಹುದು. ಇವುಗಳಲ್ಲಿರುವ ದೀರ್ಘಯುಕ್ತವಾದ ಪ್ರತ್ಯಯಗಳು ಪೂರ್ವದ ಹಳಗನ್ನಡದ ಲಕ್ಷಣ, ನಿಜ. ಆದರೆ ಸ್ವರ್ಗದ ಎತ್ತರವನ್ನೂ ಅಲ್ಲಿಗೇರುವಿಕೆಯ ದೀರ್ಘಕ್ರಿಯೆಯನ್ನೂ 'ಏಱಿದಾರ್', 'ಸ್ವರ್ಗಾಗ್ರಮಾನ್', 'ಸಂದಾನ್' ಎಂಬ ಮಾತುಗಳು ಅಭಿನಯಿಸಿ ತೋರುವುದರಿಂದ ಸಾರ್ಥಕವಾಗಿವೆಯೆನಿಸುತ್ತದೆ.

ಶ್ರವಣಬೆಳ್ಗೊಳದ ಶಾಸನ ಪದ್ಯಗಳನ್ನು ಕಟ್ಟಿದವರು ಪ್ರೌಢಕವಿಗಳಾಗಿರಬೇಕೆಂದೂ

ಅವರು "ಇವೊಂದೊಂದು ಪದ್ಯವನ್ನು ಮಾತ್ರವಲ್ಲ, ಅದರಂತೆಯೇ ಕನ್ನಡ ಕಾವ್ಯಗಳನ್ನು ರಚಿಸಿರಬೇಕೆಂಬುದನ್ನು ಅಲ್ಲಗಳೆಯಲಾಗುವುದಿಲ್ಲ" ಎಂದೂ ಗೋವಿಂದ ಪೈ ವಾದಿಸಿದ್ದಾರೆ.[11] ಆದರೆ, "ಇವುಗಳ ರಚಕರು ಬೇರೆ ಕನ್ನಡ ಕಾವ್ಯಗಳನ್ನು ರಚಿಸಿರಬೇಕೆಂದು ನಿರ್ಧರಿಸುವಷ್ಟು ಕಾವ್ಯಗುಣವು ಪ್ರಕರ್ಷದಲ್ಲಿ ಕಂಡುಬರುವುದಿಲ್ಲ"[12] ಎಂಬ ರಂ. ಶ್ರೀ. ಮುಗಳಿಯವರ ವಾದವನ್ನು ಒಪ್ಪಬೇಕಾಗುತ್ತದೆ. ಅವರ ನಿಲವನ್ನು ಈ ಶಾಸನಗಳಲ್ಲಿ ಕಂಡುಬರುವ ಭಾಷಾವೈಲಕ್ಷಣ್ಯಗಳೂ ಪುಷ್ಟೀಕರಿಸುತ್ತವೆ.

ಶ್ರವಣಬೆಳಗೊಳದ ಈ ಪದ್ಯಮಯ ಶಾಸನಗಳಲ್ಲಿ ಒಂದು ವಿಶಿಷ್ಟ ಅಂಶವನ್ನು ಗಮನಿಸಬೇಕು. ಅವುಗಳೆಲ್ಲ ಮರಣಹೊಂದಿದ ಜೈನಯತಿಗಳ, ಕಂತಿಗಳ, ಗುಡ್ಡಗುಡ್ಡಿಗಳ ವರ್ಣನೆ. ಅವುಗಳೆಲ್ಲ ಜೈನಧರ್ಮ ಪರವಾದ ಪ್ರಶಸ್ತಿಶಾಸನಗಳು. ಪ್ರಾಕೃತಭಾಷೆಯಲ್ಲಿ ಈ ವೇಳೆಗೆ ಜೈನಸಾಹಿತ್ಯ ಕೃತಿಗಳು ಬಹುಸಂಖ್ಯೆಯಲ್ಲಿ ರಚಿತವಾಗಿದ್ದುವು ಎಂಬುದನ್ನು ನೆನೆಯಬೇಕು. ಈ ಕೃತಿಗಳನ್ನು ಆ ಭಾಷೆಯಲ್ಲಿ ರಚಿಸಿದ ಆ ಕವಿಗಳೇ ಈ ನಿಸಿದಿಗಲ್ಲುಗಳ, ಸ್ಮಾರಕಶಿಲೆಗಳ ಮೇಲಿನ ಶಾಸನಗಳನ್ನೂ ರಚಿಸಿರಬೇಕು. ಸಾಹಿತ್ಯ ಕೃತಿಗಳು ಎಲ್ಲ ಜನರಿಗಾಗಿ ರಚಿತವಾದುವುಗಳಲ್ಲ. ಆದರೆ ಈ ಶಾಸನಗಳು ಜನಸಾಮಾನ್ಯರನ್ನೂ ಆಕರ್ಷಿಸಬೇಕು. ಆ ಯತಿಯ, ಜಿನಭಕ್ತನ ಹಿರಿಮೆ ಸರ್ವರಿಗೂ ತಿಳಿಯಬೇಕು. ಇದು ಪ್ರಚಲಿತ ಆಡುಮಾತಿನಲ್ಲಿ ತಿಳಿಸಿದಾಗದಷ್ಟೇ ಸಾಧ್ಯ. ಎಂತಲೇ ಅದೇ ಕವಿಗಳು ಈ ಬಿಡಿಪದ್ಯಗಳನ್ನು ರಚಿಸಿದರು. ರಚನಾಶಕ್ತಿ ಅವರಿಗೆ ಆ ವೇಳೆಗೆ ಮೈಗೂಡಿತ್ತಾದ್ದರಿಂದ ಕಷ್ಟವಾಗಲಿಲ್ಲ. ಭಾಷೆ ಮಾತ್ರ ಬೇರೆಯಾಗಿತ್ತು. ಆದ್ದರಿಂದ ಸಾಹಿತ್ಯದೃಷ್ಟಿಯಿಂದ ಪ್ರಮುಖವಾದ ಈ ಶಾಸನಗಳೂ ಜೈನಕವಿಗಳದ್ದೇ ಎಂಬ ಊಹೆಯುಕ್ತವಾಗಿದೆ.

ಇವುಗಳನ್ನು ಕಳೆದರೆ ಉಳಿದವು ಸಂಖ್ಯೆಯಲ್ಲಿ ತೀರ ಕಡಿಮೆ. ಬಹುಶಃ ಇವು ಆ ಇತರ ತುಣುಕುಗಳ ರಚನೆ ಪ್ರೇರಕವಾಗಬಹುದು. ಇವುಗಳು ಸಹ ವ್ಯಕ್ತಿ ಪ್ರಶಂಸೆಯ ಶಾಸನಗಳೆಂಬುದು ನಿಜ.

ಸಮಕಾಲೀನ ತಾಮ್ರ ಶಾಸನಗಳ ಭಾಷೆ ಸಂಸ್ಕೃತವಾದರೂ ಸಹ ದತ್ತಿನೀಡಿದ ಭೂಮಿಯ ವಿವರಗಳನ್ನು, ಮೇರೆಗಳನ್ನು ಕೊಡುವಾಗ ಕನ್ನಡ ಭಾಷೆಯನ್ನು ಪಯೋಗಿಸಲಾಗಿದೆ. ಹಲ್ಮಿಡಿಶಾಸನದಂತಹ ಕದಂಬ ಕಾಲದ ಕನ್ನಡ ಶಾಸನಗಳು ಬಹಳ ಕಡಿಮೆ. ಬಾದಾಮಿಯ ಚಾಲುಕ್ಯರ, ರಾಷ್ಟ್ರಕೂಟರ ಶಾಸನಗಳಲ್ಲಿ ಕ್ರಮೇಣ ಕನ್ನಡ ಭಾಷೆಯನ್ನು ಹೆಚ್ಚು ಹೆಚ್ಚಾಗಿ ಬಳಸಲಾಯಿತು.

ಬಾದಾಮಿ ಶಾಸನ ಕೂಡ ವಿಖ್ಯಾತವಾದುದು. ಕ್ರಿ.ಶ. ಸು. ೭೦೦ರಲ್ಲಿ ಕಪ್ಪೆಅರಭಟ್ಟನೆಂಬ ವೀರನನ್ನು ಕೊಂಡಾಡುವ ಈ ಪದ್ಯಗಳನ್ನು ಅಲ್ಲಿ ಕಂಡರಿಸಲಾಗಿದೆ.[13]

ಕಪ್ಪೆಅರಭಟ್ಟನ್ ಶಿಷ್ಟಜನಪ್ರಿಯನ್
ಕಷ್ಟಜನವರ್ಜಿತನ್ ಕಲಿಯುಗವಿಪರೀತನ್

ವರನ್ತೇಜಸ್ವಿನೋ ಮೃತ್ಯುರ್ನತು ಮಾನಾವಖಣ್ಡನಮ್
ಮೃತ್ಯುಸ್ತತ್ಕ್ಷಣಿಕೋ ದುಃಖಮ್ಮಾನಭಂಗನ್ದಿನೇ ದಿನೇ

ಸಾಧುಗೆ ಸಾಧು ಮಾಧೂರ್ಯ್ಯನ್ಗೆ ಮಾಧೂರ್ಯ್ಯಂ ಬಾಧಿಪ್ಪ
ಕಲಿಗೆ ಕಲಿಯುಗ ವಿಪರೀತನ್ಮಾಧವನೀತನ್ಪೆಱಸಲ್ಲ

ಒಳ್ಳಿತ್ತ ಕೆಯ್ವೊರಾರ್ಪ್ಪೊರ್ಗ್ಗಲ್ಲದುಮಡಱನ್ತೆ ಬಲ್ಲಿತ್ತು ಕಲಿಗೆ
ವಿಪರೀತಾ ಪುರಾಕೃತಮಿಲ್ಲಿ ಸನ್ದಿಕ್ಕುಮದು ಬನ್ದು

ಕಟ್ಟಿದ ಸಿಂಘಮುನ್ಕೆಟ್ಟೊಡೇ (ದೇ?) ನೇಮಗೆನ್ದು ಬಿಟ್ಟವೋಲ್ಕಲಿಗೆ ವಿ
[ಪ] ರೀತಂಗಹಿತರ್ಕ್ಕಳ್ಕೆಟ್ಟಮ್ಮ್ರ್ಗೀಣ್ಣನ್ತ್ತರವಿಚಾರಂ

ಈ ಶಾಸನ ತನ್ನ ಕವಿತಾಗುಣದಿಂದ ಮಾತ್ರವಲ್ಲದೆ ಛಂದಸ್ಸಿನ ದೃಷ್ಟಿಯಿಂದಲೂ ಮಹತ್ತ್ವದ್ದಾಗಿದೆ. 'ಕನ್ನಡ ಛಂದಸ್ಸಿನ ತಾಯಿಬೇರಾದ' ತ್ರಿಪದಿಯ ಪ್ರಾಚೀನ ರೂಪವನ್ನು ಇಲ್ಲಿ ಕಾಣುತ್ತೇವೆ. ನಮಗೆ ಸಿಕ್ಕಿರುವ ಮೊದಲ ತ್ರಿಪದಿಗಳಿವು. ತ್ರಿಪದಿ ಮೂಲತಃ ಜನಪದ ಛಂದಸ್ಸು; ಆದರೆ ಈ ಬಾದಾಮಿ ಶಾಸನದ ತ್ರಿಪದಿಗಳು ಜನಪದವಾಗಿರದೆ ಪ್ರೌಢವಾಗಿದ್ದು, ಪಂಡಿತರಚಿತವೆಂದು ತೋರುತ್ತವೆ. "ಸಾಧುಗೆ ಸಾಧು...." ಎಂಬೊಂದು ಪದ್ಯವನ್ನು ಬಿಟ್ಟರೆ, ಉಳಿದವುಗಳಲ್ಲಿ ಲಾಲಿತ್ಯವಾಗಲಿ ಅರ್ಥ ಸುಕರತೆಯಾಗಲಿ ಇಲ್ಲ. ಮುಂದೆ ಚಂಪೂ ಕಾವ್ಯಗಳ ನಡುವೆ ಕಂಡುಬರುವ ತ್ರಿಪದಿಗಳನ್ನು ಇವು ಹೋಲುತ್ತವೆ. "ಒಬ್ಬ ಕನ್ನಡ ವೀರನ ಆವೇಶಯುತವಾದ ಸ್ವಭಾವ ಚಿತ್ರವು ಅಲ್ಲಿದೆ"[14] ಎಂಬುದು ಸರಿ, ಆದರೆ "ಅದರಲ್ಲಿ ಭಾವ ಭಾಷೆಗಳ ಯೋಗ್ಯಮಿಲನವುಳ್ಳ ಸ್ವಯಂಪೂರ್ಣವಾದ ಭಾವಗೀತೆಯ ಸತ್ವವೂ ತುಂಬಿದೆ"[15] ಎಂಬ ಮಾತು ಹೆಚ್ಚಾಯಿತು ಎನಿಸುತ್ತದೆ. ಭಾವ ಸೊಗಸಾಗಿದ್ದರೂ, ಭಾಷೆಯಲ್ಲಿ ಅಷ್ಟಾಗಿ ಹೃದ್ಯತೆಯಿಲ್ಲ; ಅಲ್ಲದೆ ಚಮತ್ಕಾರಕ್ಕೆ ಪ್ರಾಧಾನ್ಯ ಸಂದಿದೆ. ಹೀಗಾಗಿ ಬಾದಾಮಿ ಶಾಸನದ ಸಾಹಿತ್ಯಿಕ ಯೋಗ್ಯತೆ ಬಹಳ ಎತ್ತರದ್ದೇನೂ ಅಲ್ಲವೆನ್ನಬೇಕು. ಆದರೆ ತನಗಿಂತ ಹಿಂದಿನ ಜನಪದ ಸಾಹಿತ್ಯದ ಅಸ್ತಿತ್ವವನ್ನು ಸ್ಥಾಪಿಸುವಲ್ಲಿ ಅದು ಉಪಾದೇಯವಾಗಿದೆ.

ಬಾದಾಮಿ ಚಾಲುಕ್ಯರು ಆಳಿದ ಪ್ರದೇಶಗಳಲ್ಲಿ ಕಂಡುಬಂದಿರುವ ಅವರ ಕೆಲವು ಉಲ್ಲೇಖನೀಯ ಗದ್ಯಶಾಸನಗಳು ವಸ್ತುವಿನ ದೃಷ್ಟಿಯಿಂದ ದಾನದತ್ತಿಗಳ ದೇವಾಲಯಗಳ ನಿರ್ಮಾಣ ಮೊದಲಾದವುಗಳನ್ನು ಕುರಿತವಾಗಿವೆ. ಅವುಗಳ ಭಾಷಾಶೈಲಿಯಲ್ಲಿ ಸಂಸ್ಕೃತದಿಂದ ಪ್ರಭಾವಿತವಾದ, ಆದರೂ ಹದವಾಗಿ ಸಂಸ್ಕೃತ ಕನ್ನಡ ಮಿಶ್ರಣವಿರುವ, ಗದ್ಯಶೈಲಿಯ ಗುಣಗಳನ್ನು ಕಾಣಬಹುದಾಗಿದೆ. ಇವನ್ನು ಸಮಕಾಲೀನ ದಕ್ಷಿಣ ಕರ್ನಾಟಕದ ಗಂಗಾದಿ ಅರಸರ ಕಾಲದ ಗದ್ಯಶಾಸನಗಳೊಡನೆ ಹೋಲಿಸಿದಾಗ, ಹೆಚ್ಚು ಪರಿಷ್ಕೃತವಾದ ವಸ್ತುವಿನ್ಯಾಸ ಭಾಷಾಶೈಲಿಗಳನ್ನು ಅಲ್ಲಿ ಕಾಣಬಹುದು. ಕೆಲವು ನಿದರ್ಶನಗಳು:

ಚಾಲುಕ್ಯ ಮಂಗಲೇಶನ (೫೯೭–೬೦೯) ಬಾದಾಮಿಯ ವೈಷ್ಣವಗವಿಯ ಶಾಸನ[16] ನಿರಾಡಂಬರ ಗದ್ಯ ಶೈಲಿಯನ್ನೊಳಗೊಂಡಿದೆ:

ಸ್ವಸ್ತಿ ಶ್ರೀಮತ್ ಪ್ರಿಥಿವೀವಲ್ಲಭ ಮಂಗಲೀಸನಾ
ಕಲ್ಮನೆಗೆ ಇತ್ತೊದು ಲಂಜಿಗೇಸರಂ ದೇವರ್ಕ್ಕೆ ಪೊನಿಜೀವ

ಮಾಲಕಾರರ್ಗೆ ಅರ್ದ್ಧವಿಸದಿ ಇತ್ತೊದಾನಱವೊನ್
ಪಞ್ಚಮಹಾಪಾತಕನಕುಂ ಏೞನೆಯಾ ನರಕದಾ ಪುೞುಅಕುಂ ॥

ಹಲ್ಮಿಡಿಯ ಶಾಸನದ ಗದ್ಯದೊಂದಿಗೆ ಹೋಲಿಸಿದಾಗ ಇದರಲ್ಲಿ ಆ ಪ್ರೌಢಿಮೆ ಕಾಣಬರುವುದಿಲ್ಲ. ಆ ಶಾಸನ ದೊರೆಯುವ ಮೊದಲು ಇದೇ ಕನ್ನಡದ ಪ್ರಾಚೀನತಮ ಶಾಸನವೆಂದು ಗಣಿಸಲ್ಪಟ್ಟಿತ್ತು

ಚಾಲುಕ್ಯರ ೨ನೆಯ ಪುಲಕೇಶಿಯ ಆಳ್ವಿಕೆಯ ಕಾಲದ, ಗದ್ದೆಮನೆಯ ಕಾಡಿನಲ್ಲಿ ದೊರೆತ ಶಾಸನ ಒಂದು[17] ವೀರಗಲ್ಲಾಗಿದ್ದು, ಪೆಟ್ಟಣಿ ಎಂಬವನ ಶೌರ್ಯಸಾಹಸಗಳನ್ನು ಸೊಗಸಾಗಿ ವರ್ಣಿಸಿದೆ. ಅವನು ರಣರಂಗದಲ್ಲಿ ಮಹೇಂದ್ರನನ್ನೂ ಭಯಗೊಳಿಸುವಂತಹ ಶೂರನಾಗಿದ್ದನಂತೆ.

ಸ್ವಸ್ತಿ ಶ್ರೀ ಶಿಲಆದಿತ್ಯನ್ ದಿಶಾಮ್ಬುರ್ಗ್ಗನ್ ಅಕೆವಾಳನ್ ಅಗ್ಗಳಕಣ್ಣಕನ್
ಪೇರಾಳ್ಕೆವರೆ ಪೆಟ್ಟಣಿ ಸತ್ಯಾಙ್ಕನಟ್ಟುಳ್ವ ಭಟನ್ ಬೆದರೆ ಮಹೇನ್ದ್ರನ್
ಬೇಡರ ರಾಯರ ಮಲಪ್ಪರ ಕಾಳೆಗದುಳಿವಿಱಿದು ಸ್ವರ್ಗ್ಗಾಲಯ
ಕ್ಕೇಱಿದನ್...

ಕ್ರಿ.ಶ. ೭-ಲನೆ ಶತಮಾನ ಸಾಹಿತ್ಯಾಂಶಗಳ ದೃಷ್ಟಿಯಿಂದ ಈ ಮೇಲಿನ ಶಾಸನಗಳಂತೆ ಆಶಾದಾಯಕ ಎಂದು ತೋರದಿದ್ದರೂ ಭಾಷೆಯ ರಚನೆ, ಭಾವವಾಹಿತ್ವಶಕ್ತಿ, ವಿಚಾರಶಕ್ತಿ, ಬಳಕೆಯ ಉದ್ದೇಶ ಇವುಗಳ ಸ್ವರೂಪವನ್ನು ಮನಗಾಣಿಸಲು ಕೆಲವು ಗಂಗಕಾಲೀನ ಶಾಸನಗಳು ಸಮರ್ಥವಾಗಿವೆ. ಮುಖ್ಯವಾಗಿ ಇಲ್ಲಿ ಕನ್ನಡ ಭಾಷೆಯ ಕನ್ನಡತನ, ಸಂಸ್ಕೃತದ ರೀತಿ ರಚನೆಗಳನ್ನು ಅನುಕರಿಸದ ದೇಶೀಯತೆ ಮನಂಬುಗುವಂತಿರುವುದು ಕಾಣುತ್ತದೆ. ಭೂಮಿಕಾಣಿಗಳ ಸಂಬಂಧವಾದ ವ್ಯವಹಾರದಲ್ಲಿ ಆ ಕಾಲದ ಹಳ್ಳಿಗಳ ಸಾಮಾನ್ಯ ಜನರ ನಡುವಿನ ಭಾಷೆ ಎಷ್ಟು ನಿರಾಡಂಬರ, ಸಹಜ ಆಗಿರುತ್ತಿತ್ತು ಎಂದು ತಿಳಿಯುವಲ್ಲಿ ಇಂಥ ಶಾಸನಗಳನ್ನು ನೋಡಿ ತಿಳಿಯಬೇಕಾಗುತ್ತದೆ. ಕೆಲವು ನಿದರ್ಶನಗಳು.[18]

ಸ್ವಸ್ತಿ ಶ್ರೀ ಪೆಮ್ಮಾರ್ನಡಿಗಳ್ಪೃಥಿವೀರಾಜ್ಯಂಗೆಯೆ ಅದಿಯೆ ನಾಡಿಯ
ಕರೆಗಾಡು ಎೞ್ಪತ್ತುಮಾನಾಳೆ ಪೆರ್ಗ್ಗಣೆಯ ಕೊಮ್ಮಮಾದಮೊರಿಯು
....[ಪ್ರಿ]ವ ಉಮಿಕಾರಿಯು ಇರ್ವ್ವರುಮನೊಡ್ಡಿತ್ತ ನಾಗೆಯು ಎೞ್ಪದಿ
....ದಲಾಗೆ ಪಡೆದುದು ಕೆಱಿಗ್ಗೞಿ ಕೆೞಗು ಅರಕಾವಿನಾ ಬಾಗೆ
....[ಇ] ಪನ್ನಿ [ರ್ಪಿ] ನಿರ್ವತ್ತ ಅಮಸವಱು ಇದಾನ್ನಲಿಸಿದೋನೆ
....ಫಲಮಕ್ಕು ಇದಾ ಅೞಿತ್ತೋನ್ಕೊಂಡುಮ್ಮಾರಿಪೋಗುವೊ
....ರಾಣಾಸಿ ಅೞಿತ್ತ ಪಾಪ ಅಕ್ಕು ಒಕ್ಕಲುಳ್ಳೊ
....ರ್ಮಕ್ಕಳ್ಪುಟ್ಟಿಲ್ಲೊ ಪುಟ್ಟದೊಡು ಪೊನ್ದುಗೆ ಕೞ
....ಜೆಯರೊಡೆಪಜ್ಜಾಡಿವ ಕೆಟೊ
ಸ್ವಸ್ತಿ ಶ್ರೀಮತ್
ಅವಿತ ಭಟ್ಟಡಿಗಳ್ಗೆ ಕೆಸಿಲ್ಕನೆ ಒ

ಡೆ ಒಗ್ಗರ್ಗಳೆಲ್ಲ ತಮ್ಮ ಕೆಱೆಯ ಕೆಱಿಗೆ
ಕಱಿನಿ ಮಣ್ ಆವರ ಮಗನ್ದಿ ಸೋರ್ಮಡಿಗ ಕೊಟ್ಟರ್
ವನ್ನಿರ್ವರು ಸಾಕ್ಷಿ ಅದಂ ಕೆಡಿಸಿದೊನ್ಪಞ್ಚ
ಮಹಾಪಾತಕನಕ್ಕು

ಸ್ವಸ್ತಿ ಶ್ರೀಮತ್ ಶಿವಪೂರಂ
ಪ್ರಿಥುವೀರಾಜ್ಯಂ ಕೆಯೆ ವೆಡಿ
ರೂನ್ಸ್ವರ್ಗತ್ತಿಱಿಯ ಮರಿಯಾದಿ
ಕೊಟ್ಟಾನ್ ಸೇಬಿಗೆ ವಿಟ್ಟಾರ್ ಈದಾನಱಿತ್ತೋನ್
ಪಞ್ಚಮಹಾಪಾತಕ ಸಂಯ್ಯುಕ್ತನ
ಪ್ಪೋನ್ ಅನ್ದಿನಾ ತೆಱಿಎ ಕೊಳ್ಗ
ಅನ್ದಿನಾ ಕೆಯ್ಪ್ಪಸಸೆ ಕೊಳ್ಗ
ದೇವ ಮಣ್ಣು ವಾನ್ದಾರಿ ಎಱಿ
ತ್ತನಮೆ ಆದಾನ್ ಅಱಿತ್ತೋನ್ ಪಂಚೋ
ವಾರನಾಸಿ ಸಾಸಿರ್ವರು ವ್ರಾಮ್ಮಣರು
ಸಾಸಿರ ಕವಿಲೆಯುಮಾನ್ ಕೊನ್ದೋನ್
ಅಪ್ಪೋನ್ ಒಕ್ಕಲುಳ್ಪ್ರಿತ್ತಿನ್ಮಕ್ಕಳ್ಪ
ಟ್ಟೆಲ್ಕ ಪುಟ್ಟದೊಂದು ಪುರಿಂಗ

## ಛಂದಸ್ಸು

ಆರಂಭಕಾಲದಿಂದ ಸು. ೮೫೦ರ ವರೆಗಿನ ಕನ್ನಡ ಶಾಸನಗಳ ವಸ್ತು, ಸಾಹಿತ್ಯಮೌಲ್ಯ, ವಿಶೇಷತೆಗಳನ್ನು ಇಲ್ಲಿಯವರೆಗೆ ಕೆಲಮಟ್ಟಿಗೆ ಗಮನಿಸಿದ್ದಾಯಿತು. ಇನ್ನು ಈಯವಧಿಯ ಪದ್ಯಶಾಸನಗಳ ಛಂದಸ್ಸನ್ನು ಕುರಿತು ಕೆಲವು ಸಂಗತಿಗಳನ್ನು ನೋಡಬಹುದು. ಮುಖ್ಯವಾಗಿ ಈ ಪರಿಶೀಲನೆಗೆ ಒದಗತಕ್ಕ ಪದ್ಯಸಾಹಿತ್ಯವೆಂದರೆ ಶ್ರವಣಬೆಳುಗೊಳದ ಚಿಕ್ಕಬೆಟ್ಟದ ಮೇಲೆ ಕೊರೆದಿರುವ ಕೆಲವು ಬಂಡೆಗಲ್ಲು ಶಾಸನಗಳ ಬಿಡಿಪದ್ಯಗಳು[19] ಮುಂತಾದುವು. ಗಣ್ಯವಾದೊಂದು ಮೊತ್ತದಲ್ಲಿ ಸಿಕ್ಕುವ ಈ ಪದ್ಯಗಳಲ್ಲಿ ನಡೆದಿರುವ ಛಂದಃಪ್ರಯೋಗಗಳನ್ನು ಪರಿಶೀಲಿಸುವ ಮುನ್ನ ಅಲ್ಲಿ ಇಲ್ಲಿ ಕಂಡುಬಂದಿರುವ ಕೆಲವು ಪದ್ಯಗಳ ವಿಷಯವನ್ನು ಮೊದಲು ಗಮನಿಸಬಹುದು.

ಈ ಅಧ್ಯಾಯದ ಆರಂಭಭಾಗದಲ್ಲಿ ಉದಾಹರಿಸಿರುವ, ಚಿತ್ರದುರ್ಗದ ತಮಟಕಲ್ಲು ಶಾಸನವೆಂದು ಜನಪ್ರಿಯವಾಗಿರುವ, "ಬಿಣಮಣಿಅನ್ತು ಭೋಗಿ ಬಿಣದೊಳ್ಮಣಿವಿಲ್ಮನದೋನ್...." ಎಂದು ಮೊದಲಾಗುವ ಶಾಸನಪದ್ಯ (ಸು. ೫೦೦)[20] ಪಿಂಗಲನು ಅವಿತಥವೆಂದು ಕರೆಯುವ, ಇತರ ಲಾಕ್ಷಣಿಕರು ನರ್ಕುಟಕ, ನರ್ದಟಕ ಎಂದು ಕರೆದಿರುವ[21] ಒಂದು ವರ್ಣಸಮವೃತ್ತ. ಇದೇ ಗಣವಿನ್ಯಾಸದ ವೃತ್ತವು ನಿರ್ದಿಷ್ಟಸ್ಥಾನದಲ್ಲಿ ಯತಿ ಪಾಲಿತವಾಗಿದ್ದರೆ 'ಕೋಕಿಲಕ'ವೆನ್ನಿಸುವುದೆಂದು ಪಿಂಗಲಾದ್ಯರೇ ಇನ್ನೊಂದು ಪ್ರಭೇದ

ವನ್ನು ಗುರುತಿಸಿದ್ದಾರೆ. ಆದರೆ ಪೂರ್ವೋಕ್ತ ಶಾಸನಪದ್ಯದಲ್ಲಿ ಯತಿ ಸೂಚಿತಸ್ಥಾನದಲ್ಲಿ ಕಂಡುಬಂದಿಲ್ಲವಾದ್ದರಿಂದ ಪ್ರಾಚೀನರನ್ನು ಅನುಸರಿಸಿ ಅದನ್ನು ಅವಿತಥವೆಂದೋ ನರ್ಕುಟಕವೆಂದೋ ಕರೆಯಬಹುದು. ಆದಿಪ್ರಾಸ, ಅಂತ್ಯಪ್ರಾಸ, ಪಾದಾಂತದಲ್ಲಿ ಪದದ ನಿಲುಗಡೆ ಇಂಥ ಕೆಲವು ಬಂಧಲಕ್ಷಣಗಳು ಆರಂಭಕಾಲದ ಶಾಸನಸಾಹಿತ್ಯದಲ್ಲಿ ಸಾಮಾನ್ಯವಾಗಿ ಕಾಣುವಂಥವೇ ಆಗಿವೆ.

ಇನ್ನು ಕೆಲವು ವರ್ಣವೃತ್ತಗಳು ಬಾದಾಮಿ, ಬೆಲವತ್ತೆ (ಮೈಸೂರು ತಾಲ್ಲೂಕು), ನರಸಿಂಹರಾಜಪುರ ಈ ಕೆಲವು ಸ್ಥಳಗಳಲ್ಲಿ ಕಂಡುಬಂದಿರುವ ಶಾಸನಗಳಲ್ಲಿ ನೋಡಲು ದೊರೆಯುತ್ತವೆ.[೨೨] ಇವು ಕೂಡ ಲಿಪಿ ಮತ್ತು ಅಂತರ್ಗತ ಐತಿಹಾಸಿಕ ಸಾಕ್ಷ್ಯಗಳ ಆಧಾರದ ಮೇಲೆ ಸು. ೭-೮ನೆಯ ಶತಮಾನಕ್ಕೆ ಸೇರಿದವೆಂದು ಗ್ರಹಿಸಲಾಗಿದೆ. ಅಸಲಿಖಿತ ಗ್ರಂಥಪಾತಗಳಿಂದ ಕೂಡಿರುವ ಆವೃತ್ತಗಳು ಮತ್ತೇಭವಿಕ್ರೀಡಿತ, ಶಾರ್ದೂಲವಿಕ್ರೀಡಿತ, ಮಹಾಸ್ರಗ್ಧರೆ ಈ ಹೆಸರಿನವಾಗಿವೆ. ಈ ಮೊದಲು ನೋಡಿದ ಒಂದು ವಿರಳವೃತ್ತಜಾತಿಯ ಜತೆಗೆ ಮುಂದಿನ ಕಾಲದಲ್ಲಿ ಕನ್ನಡ ಸಾಹಿತ್ಯದಲ್ಲಿ ದೃಢವಾಗಿ ನೆಲೆಯೂರಿದ ಖ್ಯಾತಕರ್ಣಾಟಕಗಳೊಳಗಿನ ಕೆಲವು ವೃತ್ತಗಳು ಸು. ೭-೮ನೆಯ ಶತಮಾನಗಳ ಪರಿಸರದಲ್ಲಿಯೇ ಅಲ್ಲಿ ಇಲ್ಲಿ ಪ್ರಚಾರಕ್ಕೆ ಬಂದಿದ್ದುವೆಂದು ಇದರಿಂದ ತಿಳಿಯುತ್ತದೆ. ವೃತ್ತಬಂಧಗಳಲ್ಲಿ ಪ್ರಾಯೋಗಿಕ ಘಟ್ಟವನ್ನು ದಾಟಿ ಬಂದಿರುವ ಅಥವಾ ಬರುತ್ತಿರುವ ಸೂಚನೆಯನ್ನು, ಸಂಸ್ಕೃತ ಕಾವ್ಯ ಸಾಹಿತ್ಯಕ್ಕೆ ಬಹುಮಟ್ಟಿಗೆ ಅಪರಿಚಿತಗಳಾದ ಇಲ್ಲಿಯ ಮತ್ತೇಭವಿಕ್ರೀಡಿತ ಮಹಾಸ್ರಗ್ಧರೆಗಳು ನಮಗೆ ಕೊಡುತ್ತವೆ. ಕನ್ನಡಕ್ಕೆ ಅಳವಟ್ಟ ಹೊಸ ಸಂಸ್ಕೃತವೃತ್ತಭೇದಗಳು, ಉತ್ತರಕಾಲೀನ ಚಂಪೂಕಾವ್ಯಗಳಲ್ಲಿ ಯಾವ ಬಂಧಲಕ್ಷಣಗಳನ್ನು ಒಳಕೊಂಡು ಗೋಚರಿಸುತ್ತಿವೆಯೋ ಅವು, ಈ ಕಾಲಕ್ಕಾಗಲೇ ಬಂದು ಹೋಗಿವೆಯೆಂಬುದನ್ನು ಇಲ್ಲಿ ಕಾಣಬಹುದು. ಆದಿಪ್ರಾಸವಿದ್ದು, ಯತಿಪಾಲನೆ ಐಚ್ಛಿಕವಾಗಿರುವ ಸಂಗತಿಯೂ ಈ ಘಟ್ಟದಲ್ಲಿಯೇ ಕಾಣುವುದನ್ನು ಲಕ್ಷಿಸಬೇಕು. ಭಾಷೆಯ ದೃಷ್ಟಿಯಿಂದ ಹಳತನದ ಲಕ್ಷಣಗಳು ಸ್ಪಷ್ಟವಾಗಿವೆ.

ನರಸಿಂಹರಾಜಪುರದಲ್ಲಿ ಸಿಂಗಣಗದ್ದೆ ಜೈನಮಠದಲ್ಲಿ ದೊರೆತು ಮೈಸೂರು ಪುರಾತತ್ತ್ವ ಇಲಾಖೆಯ ೧೯೨೦ನೆಯ ಇಸವಿಯ ವರದಿಯಲ್ಲಿ ಪ್ರಕಟವಾಗಿರುವ, ಗಂಗ ಶ್ರೀಪುರುಷನ ಕಾಲದ (೭೨೬-೮೮) ಸಂಸ್ಕೃತ-ಕನ್ನಡ ಹಾಗೂ ಗದ್ಯ-ಪದ್ಯ ಮಿಶ್ರಿತವಾದೊಂದು ತಾಮ್ರ ಶಾಸನದಲ್ಲಿ[೨೩] ಎರಡು ಕಂದಪದ್ಯಗಳು ಲಿಖಿತವಾಗಿರುವುದನ್ನು ಆರ್. ನರಸಿಂಹಾಚಾರ್ಯರು ತಮ್ಮ ಪ್ರಾರಂಭಿಕ ಟಿಪ್ಪಣಿಯಲ್ಲಿ ಗುರುತಿಸಿದ್ದಾರೆ. ಭಾಷೆಯ ದೃಷ್ಟಿಯಿಂದ ಸಾಕಷ್ಟು ಹಳತನದ ಲಕ್ಷಣಗಳು ಇದ್ದರೂ, ಛಂದಸ್ಸಿನ ದೃಷ್ಟಿಯಿಂದ ಉತ್ತರಕಾಲೀನ ಕಂದಪದ್ಯಗಳ ಹಾಗೆ ಸಲಕ್ಷಣವಾಗಿದೆ. ಇದಕ್ಕೆ ಒಂದೇ ಅಪವಾದ ಎಂದರೆ ಮೊದಲನೆಯ ಕಂದದ ೨ನೆಯ ಪಾದದ ಕೊನೆಯ ಗಣ ಪಂಚಮಾತ್ರಕವಿರುವುದು. ಮಿಶ್ರಪ್ರಾಸದ ಒಂದಂಶದಲ್ಲಿ ಇಲ್ಲಿಯೂ ಕೆಲಮಟ್ಟಿನ ಹಳತನವಿದೆ. ಕನ್ನಡ ಸಾಹಿತ್ಯದ ಪ್ರಥಮಕಂದಗಳೆಂದು ಕೆಲವರು ಇವನ್ನು ಭಾವಿಸುತ್ತಾರೆ.[೨೪]

"ಮಾತ್ರಾಕ್ಷರಗಣನೆಯಲ್ಲಿ ಅಷ್ಟೊಂದು ನಿಷ್ಠುರ ನಿಯಮವು ತೋರುವುದಿಲ್ಲ"—ಎಂಬ ಗಮನಿಕೆಯನ್ನು, ಇಲ್ಲಿಯ ಕಂದಪದ್ಯ ಮತ್ತು ಶ್ರವಣಬೆಳ್ಗೊಳದ ಕೆಲವು ವೃತ್ತ ಜಾತಿಗಳನ್ನು ನೋಡಿ ಒಪ್ಪಬಹುದೆಂದು ತೋರುತ್ತದೆ.[25]

ಇದರ ಬಳಿಕ ನಮ್ಮ ಗಮನಕ್ಕೆ ಬರುವುದು ದೇಶ್ಯಛಂದಸ್ಸಿನ ಕೆಲವು ಪದ್ಯಗಳು. ಬಾದಾಮಿಯ ತಟ್ಟುಕೋಟಿ ಶಾಸನದೊಳಗಿನ (ಸು. ೭೦೦)[26] ಕಪ್ಪೆ ಅರಭಟ್ಟನೆಂಬವನ ಘನತೆಯನ್ನು ಕೀರ್ತಿಸುವ ಮೂರು ತ್ರಿಪದಿಗಳು ಇವುಗಳಲ್ಲಿ ಮುಖ್ಯವಾದವು. ಆರ್. ನರಸಿಂಹಾಚಾರ್ಯರು ಗಮನಿಸಿದಂತೆ "ಸುಮಾರು ೭೦೦ರಲ್ಲಿಯೇ ಕನ್ನಡದಲ್ಲಿ ತ್ರಿಪದಿ ಇದ್ದಿತು" ಎಂದು ಇದರಿಂದ ವಿದಿತವಾಗುತ್ತದೆ.[27] ಇದುವರೆಗೆ ದೊರೆತಿರುವ ಅಚ್ಚಗನ್ನಡ ಛಂದಸ್ಸಿನ ಮಟ್ಟುಗಳಲ್ಲೆಲ್ಲ ಇವೇ ಪ್ರಾಚೀನತಮವಾದುವು ಎಂದು ದೊರೆತ ದಾಖಲೆಗಳ ಆಧಾರದಿಂದ ಹೇಳಬಹುದಾಗಿದೆ. ಆ ಮೊದಲಿನಿಂದಲೂ ತ್ರಿಪದೀಬಂಧವು ಜನಸಾಮಾನ್ಯರ ನಾಲಗೆಯ ಮೇಲೆ ನಲಿಯುತ್ತಿದ್ದು, ತಮ್ಮ ಪ್ರೀತ್ಯಾದರಗಳಿಗೆ ಪಾತ್ರರಾದ ವೀರಪುರುಷರ ಗುಣಗಾನಕ್ಕೆ ಅಂತಹ ಇತರ ಉದ್ದೇಶಗಳಿಗೆ ಅದನ್ನು ಬಳಸುತ್ತಿದ್ದಿರಬೇಕು ಎಂದು ಇದರಿಂದ ಊಹಿಸಬಹುದಾಗಿದೆ.

ಭಾಷೆ ಛಂದಸ್ಸುಗಳ ದೃಷ್ಟಿಯಿಂದ ಕೆಲಮಟ್ಟಿಗೆ ವೈಲಕ್ಷಣ್ಯಗಳನ್ನು ತೋರಿಸುವ ಬಾದಾಮಿಯ ಶಾಸನದ ಪದ್ಯಗಳು ಒಟ್ಟನಲ್ಲಿ ಲಕ್ಷಣಬದ್ಧವಾದವು. ಗಣಗಳ ಸಂಖ್ಯೆ, ಗಣವಿನ್ಯಾಸ, ರಸದಶಸ್ಥಾನದ ಯತಿನಿಯಮ, ರೂಢಿಗತ ಹಾಡಿಕೆಯ ಪರಿಪಾಠಿಗೆ ಅನುಗುಣವಾಗಿ ಏರ್ಪಡುವ ನಿಲುಗಡೆಯ ಎಡೆಗಳು, ಪ್ರಾಸ ಒಳಪ್ರಾಸಗಳ ಕಟ್ಟಳೆಯ ಪಾಲನೆ ಈಯಂಶಗಳನ್ನು ಗಮನಿಸಿದರೆ ಅದು ತಿಳಿಯುತ್ತದೆ. ಸ್ವಲ್ಪ ವಿವರದಲ್ಲಿ ನೋಡಿದಾಗ ವೈಲಕ್ಷಣ್ಯಗಳೂ ಕಾಣುತ್ತವೆ. ಶಾಸನದ ಆದಿಭಾಗದ ಎರಡು ಸಾಲುಗಳು ಗದ್ಯವೇ ಪದ್ಯವೇ ಎಂಬ ವಿಷಯದಲ್ಲಿ ಚರ್ಚೆಯಿದೆ. ಎ. ಎನ್. ನರಸಿಂಹಯ್ಯನವರೂ ಆರ್. ಎಸ್. ಪಂಚಮುಖಿಯವರೂ ಪದ್ಯವೆಂದಿದ್ದಾರೆ.[28] ಆದರೆ ಪ್ರಾಚೀನ ಕನ್ನಡ ಪದ್ಯದ ಅವಶ್ಯಲಕ್ಷಣವಾದ ಪ್ರಾಸ ಇಲ್ಲಿ ಕಾಣದಿರುವುದರಿಂದ ಇದೊಂದು ಗದ್ಯಭಾಗವಾಗಿರುವುದೇ ಸಂಭವನೀಯ. ಈಗಿನ್ನು ತ್ರಿಪದಿಗಳ ವೈಲಕ್ಷಣ್ಯಗಳನ್ನು ಒಂದೊಂದು ಪದ್ಯದಲ್ಲಿಯೂ ಕಾಣುವ ಕ್ರಮದಲ್ಲಿ ನೋಡಬಹುದು.

ಮೊದಲ ಪದ್ಯದ ಮೊದಲ ಪಾದದಲ್ಲಿ ೩ನೆಯ ವಿಷ್ಣುಗಣದೆಡೆ ಒಳಪ್ರಾಸವಿಲ್ಲ; ಆದರೆ ೨ನೆಯ ಗಣವನ್ನು ವಿಷ್ಣುವಿಗೆ ಪರ್ಯಾಯವಾಗಿ ತರಬಹುದಾದ ಬ್ರಹ್ಮನನ್ನಾಗಿ ಮಾಡಿಕೊಂಡರೆ, ೩ನೆಯ ಗಣದಲ್ಲಿ ಒಳಪ್ರಾಸ ಏರ್ಪಡುತ್ತದೆ. ಆಗ ಈ ಗಣದ ಮೌಲ್ಯ ಒಂದಂಶದಿಂದ ಹಿಗ್ಗಿ ಇದೊಂದು ರುದ್ರಗಣವಾಗುತ್ತದೆ. ಲಯದ ದೃಷ್ಟಿಯಿಂದ ಇಲ್ಲಿ ೨ನೆಯ ಗಣವನ್ನು ಹಿಗ್ಗಿದ ವಿಷ್ಣುವನ್ನಾಗಿ, ೩ನೆಯ ಗಣವನ್ನು ಕುಗ್ಗಿದ ವಿಷ್ಣುವನ್ನಾಗಿ ಮಾಡಿಕೊಳ್ಳಬಹುದೆಂದು ತೋರುತ್ತದೆ. ಈಗಲೂ ಪ್ರಚಲಿತವಿರುವ ತ್ರಿಪದಿಯ ನಾನಾ ವಾಚನವಿಧಾನಗಳಲ್ಲಿ ಯಾವ ಒಂದು ವಿಧಾನಕ್ಕೆ ಬಾದಾಮಿ ಶಾಸನದ ಪದ್ಯಗಳು ಅಳವಡುತ್ತಿದ್ದವೋ ಈಗ ತಿಳಿಯುವುದು ನಮಗೆ ಶಕ್ಯವಿಲ್ಲ. ಇನ್ನು ಎರಡನೆಯ

ಪದ್ಯದಲ್ಲಿ ಕುಳ ಳಕಾರ-ದೇಶ್ಯ ಲಕಾರಗಳಿಗೆ ಪ್ರಾಸಮಾಡಿದ್ದು (ಒಳಪ್ರಾಸವನ್ನೂ ಹೀಗೆಯೇ ಯೋಜಿಸಿದೆ) ಇದು ವೈಯಾಕರಣ ಮತದಂತೆ ದೂಷ್ಯವಾದ್ದು. ಆದರೂ ಇಲ್ಲಿ ಇಂಥ ಪ್ರಾಸವನ್ನು ಪುರಸ್ಕರಿಸಿರುವುದು ನೋಡಿದರೆ, ಜನರೂಢಿಯ ಭಾಷೆ ಛಂದಸ್ಸುಗಳಲ್ಲಿ ಶಾಸ್ತ್ರನಿಯಮಗಳನ್ನು ಅಷ್ಟಾಗಿ ಲಕ್ಷಿಸುತ್ತಿರಲಿಲ್ಲವೆಂದೋ ಅಂಥ ನಿಯಮಗಳನ್ನು ಪರಿಪುಷ್ಟದಶೆಯ ಈಚಿನ ಕಾಲದ ಕನ್ನಡ ಸಾಹಿತ್ಯವನ್ನು ಲಕ್ಷಿಸಿ ಹೇಳಿರಬಹುದೆಂದೋ ತಿಳಿಯಬೇಕಾಗುತ್ತದೆ. ಅದೇ ಪದ್ಯದಲ್ಲಿ ಕಾಣುವ ಇನ್ನೊಂದು ವೈಲಕ್ಷಣ್ಯವೆಂದರೆ, ೨ನೆಯ ಪಾದದ ಕೊನೆಯ ಗಣ ಅಂಶಗಣದ ರಚನೆಗೆ ಒಗ್ಗದಿರುವುದು. ಆದರೆ ಇಂಥವು ಜನಪದಸಾಹಿತ್ಯದ ಪದ್ಯಗಳಲ್ಲಿ ಸಾಮಾನ್ಯವಾಗಿ ಬರುವುದು ರೂಢಿಯಾದ್ದರಿಂದ, ಇಲ್ಲಿಯೂ ಅದೇ ಕಾರಣದಿಂದಾಗಿ ಈ ಬಗೆಯ ಗಣರಚನೆ ಕಾಣಿಸಿಕೊಂಡಿದೆಯೆಂದು ಹೇಳಬಹುದು. ತ್ವರಿತೋಚ್ಚಾರದಿಂದ ಅದನ್ನೊಂದು ದ್ವಿಲಘ್ವಾದಿಯ ವಿಷ್ಣುಗಣವನ್ನಾಗಿ ಮಾಡಿಕೊಂಡು ಹಾಡುತ್ತಿದ್ದಿರಬಹುದೋ ಏನೋ? ಕೊನೆಯದಾದ ೩ನೆಯ ಪದ್ಯದಲ್ಲಿ ವಿಚಾರಣೀಯವಾಗಿ ತೋರುವ ಒಂದೇ ವೈಲಕ್ಷಣ್ಯವೆಂದರೆ, ೨ನೆಯ ಪಾದದ ೩ ಗಣಗಳ ಬಳಿಕ ತ್ರಿಪದಿಯ ಹಾಡಿಕೆಯ ಪರಿಪಾಠಿಯಂತೆ ಬರಬೇಕಾದ ಸಹಜವಾದ ನಿಲುಗಡೆಗೆ ಅವಕಾಶವಾಗದಿರುವುದು. ಇದಕ್ಕೆ ಸಮರ್ಪಕವಾದ ಸಮಾಧಾನವನ್ನು ಕಂಡುಕೊಳ್ಳುವುದು ಸದ್ಯದ ಸ್ಥಿತಿಯಲ್ಲಿ ಕಷ್ಟ. ಒಟ್ಟು ಬಂಧದ ಛಂದಸ್ಸಿನಿಂದ ಈ ಶಾಸನದ ತ್ರಿಪದಿಗಳಲ್ಲಿ ಕಂಡುಬರುವ ವೈಲಕ್ಷಣ್ಯಗಳೇನೂ ಮುಖ್ಯವಾದುವಲ್ಲ.

ಸು. ೮೦೦ರಲ್ಲಿ ಲಿಖಿತವಾದ ಹುಮ್ಮಚದ ಶಾಸನ ಒಂದರಲ್ಲಿ[೨೧] ಕೆಲವು ತ್ರಿಪದಿಗಳಿದ್ದು, ಇವುಗಳಲ್ಲಿ ಒಂದರ ಹೊರತು ಉಳಿದವು ಅಲ್ಲಲ್ಲಿ ಗಲಿತವಾಗಿವೆ. ಎರಡನ್ನು ಉದ್ಧರಿಸಬಹುದು :

[ಮೋನ]ಮುಂ ಪಾೞಿಯು। [ಮ್ಮ]ನದ ನಿರ್ಮ್ಮಳಿ[ಕೆ]ಯು
ಮನಿತು[ಮೊ]ಳ್ಳುಣಮುಮುೞಿವು ಧರ್ಮ್ಮಮುಂ ಜಕ್ಕ
ನಿನಗಲ್ಲದಿಲ್ಲ ಭುವನದೊಳ್ ॥

ಬ್ರಹ್ಮನಿಂದಱಿವು ಸು। ಸಮ್ಮ್ಯನಾಪ್ರ್ಯನೊ[ಳ್ದೊ]ರೆ
ಧರ್ಮ್ಮದೊಳ್ಪಲಿಯ ಸಮನೆಂಬ ಜಕ್ಕಯ್ಯ
ನಿರ್ಮ್ಮಲ ಸುದ್ಧ ಭುವನದೊಳ್ ॥

ಮೊದಲನೆಯ ತ್ರಿಪದಿಯಲ್ಲಿ ಗಣಿಸತಕ್ಕ ಒಂದು ವೈಲಕ್ಷಣ್ಯವಿದೆ. ೨ನೆಯ ಪಾದದ ೩-೪ನೆಯ ಗಣಗಳನ್ನು ಕ್ರಮವಾಗಿ ರುದ್ರ, ವಿಷ್ಣು ಎಂದಿಟ್ಟುಕೊಳ್ಳಬೇಕು, ಇಲ್ಲವೆ ಬಾದಾಮಿಯ ಎರಡನೆಯ ತ್ರಿಪದಿಯಲ್ಲಿ ನೋಡಿದಂತೆ, ತ್ವರಿತೋಚ್ಚಾರದಿಂದ ೪ನೆಯ ಗಣವನ್ನು ವಿಷ್ಣುವಿಗೆ ಹೊಂದಿಸಬೇಕು ಎಂಬುದೇ ಅದು. ಲಯ ಸಾಮಂಜಸ್ಯದ ದೃಷ್ಟಿಯಿಂದ ಪ್ರಾಯಃ ಮೊದಲನೆಯ ವಿಧಾನವೇ ರಚಯಿತನಿಗೆ ಇಷ್ಟವಾಗಿದ್ದಿರಬಹುದು. ಎರಡನೆಯ ತ್ರಿಪದಿಯ ಮೊದಲನೆಯ ಪಾದದಲ್ಲಿ ಕೂಡ ೩-೪ನೆಯ ಸ್ಥಾನಗಳಲ್ಲಿ ಇದೇ ಬಗೆಯ ಗಣರಚನೆಯನ್ನು ನಾವು ಎದುರುಗೊಳ್ಳುತ್ತೇವೆ. ಇಲ್ಲಿ "ಸಮ್ಮ್ಯನಾಪ್ರ್ಯ। ನೊ[ಳ್ದೊ]ರೆ"

ಎಂದೋ ತ್ವರಿತೋಚ್ಚಾರದಿಂದ "ಪಿರ್ನೊ[ಳ್ದೊ]ರೆ" ಎಂಬುದನ್ನು ವಿಷ್ಣುವಿಗೆ ಹೊಂದಿಸಿಯೋ ಹಾಡಿಗೆ ಅನುಕೂಲಮಾಡಿಕೊಳ್ಳಬೇಕಾಗುತ್ತದೆ. ಇಲ್ಲಿಯೂ ಪ್ರಾಯಃ ಮೊದಲ ವಿಧಾನವೇ ರಚಯಿತನ ದೃಷ್ಟಿಯಲ್ಲಿದ್ದಿರಬಹುದು. ಒಳಪ್ರಾಸದ ದೃಷ್ಟಿಯಿಂದ "ಬ್ರಹ್ಮ-ಸರ್ಮ್ಮ" ವಿಸಂಗತವಾಗಿದೆ, ನಿಜ; ಆದರೆ ಗ್ರಾಮ್ಯವಾದ ಆಡುನುಡಿಯಲ್ಲಿ 'ಬ್ರಹ್ಮ' ಶಬ್ದವು ಬ್ರಹ್ಮ>ಬರ್ಮ್ಮ ಆಗಿ ನುಡಿಯುವುದು ಸಾಧ್ಯವಾದರಿಂದ, ಆ ಪ್ರಾಸ ಸಹಜವೂ ಸರಿಯಾಗಿಯೂ ಆಗಿದೆಯೆನ್ನಬಹುದು; ರಚನೆಗೆ ಲಿಖಿತರೂಪವನ್ನು ಕೊಟ್ಟು ಶಾಸನಸ್ಥಗೊಳಿಸುವಾಗ, ಶುದ್ಧರೂಪದಲ್ಲಿ 'ಬ್ರಹ್ಮ' ಎಂದೇ ಶಬ್ದವನ್ನಿಟ್ಟಿರಬಹುದು. ಈಯಂಶವನ್ನು ನಾಲ್ಕನೆಯ ತ್ರಿಪದಿಯ "ಮಾಸರ-ಈಶ್ವರ (>ಈಸರ)" ಎಂಬ ಒಳಪ್ರಾಸವೂ ಪೋಷಿಸಬಹುದೆಂದು ತೋರುತ್ತದೆ. ಇನ್ನು ಕೆಲಮಟ್ಟಿಗೆ ತ್ರುಟಿತವಾದ ೩ನೆಯ ತ್ರಿಪದಿಯಲ್ಲಿ ಲೆಕ್ಕಿಸಬಹುದಾದ ವಿಶೇಷವೇನೂ ಇಲ್ಲ. ಉಳಿದವುಗಳ ವಿಷಯವೂ ಅಷ್ಟೆ. ತ್ರಿಪದಿಗಳಲ್ಲಿ ೨ನೆಯ ಪಾದಾಂಶದ ಪುನರಾವರ್ತನೆಯ ಬಳಿಕ, ಎಂದರೆ ಕೊನೆಯ ಗಣವಾಗಿ ಜಕ್ಕ, ಜಕ್ಕಯ್ಯ ಎಂಬುದಾಗಿ ವರ್ಣನೆಗೆ ವಿಷಯವಾದವನ ಹೆಸರು ಕಾಣಿಸಿಕೊಳ್ಳುವುದು ಜನಪದ ತ್ರಿಪದಿಗಳ ರಚನೆಯಲ್ಲಿ ಬಂಧಕ್ಕೆ ಸಂಬಂಧಿಸಿದ ಒಂದು ಸಾಮಾನ್ಯಾಂಶದ ಅನುಸರಣೆಯೇ ಆಗಿದೆ. ಇದನ್ನು ಗಮನಿಸಿದಾಗ, ಆದಿಪ್ರಾಸನಿಯಮವನ್ನಿಟ್ಟೂ ಈ ತ್ರಿಪದಿಗಳು ಲಕ್ಷಣದಲ್ಲಿ ಕೆಲಮಟ್ಟಿಗೆ ಜಾನಪದೀಯ ಕೂಡ ಆಗಿವೆಯೆಂದು ಹೇಳಬಹುದು.

ಸೊರಬ ಶಾಸನದ (ಸು. ೮೦೦)[30] ಐದು ತ್ರಿಪದಿಗಳು ಮುಂದಿನ ಪರಿಶೀಲನೆಯ ವಿಷಯ. ಇವುಗಳಲ್ಲಿಯೂ ಅನೇಕ ಕಡೆ ಅಕ್ಷರಗಳು ಅಳಿಸಿಹೋಗಿ, ಪದ್ಯಗಳ ಸ್ವರೂಪ ಸ್ಪಷ್ಟವಾಗದೆ ಹೋಗಿದೆ. ಬರೆಹಕಾರ-ಕೊರೆಹಕಾರರ ಸ್ಖಾಲಿತ್ಯಗಳನ್ನು ಸರಿಪಡಿಸಿಕೊಂಡು ಓದಿದರೆ, ಇವು ಸಾಧಾರಣ ತ್ರಿಪದಿಯ ಲಕ್ಷಣಕ್ಕೆ ಸಂಬರುವಂತೆ ರಚಿತವಾಗಿವೆ ಎನ್ನಬಹುದು. ಮೊದಲ ತ್ರಿಪದಿಯ ಆದಿಗೆ ರುದ್ರ, ವಿಷ್ಣು ಎಂದು ಕ್ರಮವಾಗಿ ಗಣಗಳನ್ನಿಟ್ಟುಕೊಳ್ಳಬೇಕಾಗಬಹುದು. ಕೆಲವೆಡೆ ಪ್ರಾಸಸ್ಥಾನದಲ್ಲಿ ವರ್ಗಪಂಚಮಾಕ್ಷರಗಳನ್ನು ಅಭೇದದಿಂದ ಬಳಸಿದೆ.

ಈ ಕೆಲವು ತ್ರಿಪದಿಗಳನ್ನು ಬಿಟ್ಟರೆ ಬೇರೆ ಅಂಶವೃತ್ತಗಳೇನೂ ವಿಶೇಷವಾಗಿ ತಿಳಿಯಬಂದಿಲ್ಲ. ಆದರೆ ಬಾದಾಮಿಯದೆಂಬ ಇನ್ನೊಂದು ಶಾಸನದ "ಪುಟ್ಟಿ ಮಣಿನಾಗಕಂಭಂಗ ಜಗತುಂಗ...." ಎಂಬ ಅಶುದ್ಧಪಾಠದ ಕೆಲವು ಸಾಲುಗಳು ಈಗಾಗಲೇ ಸರಿಯಾಗಿ ಭಾವಿಸಿರುವಂತೆ[31] ಪಿರಿಯಕ್ಕರ ಛಂದಸ್ಸಿನ ಒಂದು ಪದ್ಯದ ಅಪಲಿಖಿತವಾಗಿರುವಂತೆ ತೋರುತ್ತದೆ. ಕೊನೆಯ ಪಾದ ಮೂಲಲೇಖದಲ್ಲಿ "ಕಿಟ್ಟ। ಸಾಸಿರ। ದೊಂಬಯ್ಯೊ। ಱಜುವ। ತ್ತಱುವರ। ನಿಱಿದೊಳ್ಪ। ಪ್ರಕಟಿಸಿದಾನ್" ಎಂದಿದ್ದಿರಬಹುದು.

ಇನ್ನು ಶ್ರವಣಬೆಳ್ಗೊಳದ ಶಾಸನಪದ್ಯಗಳ[32] ಗುಂಪಿನತ್ತ ನಮ್ಮ ಲಕ್ಷ್ಯವನ್ನು ಹೊರಳಿಸಬಹುದು. ಲಿಪಿಯ ಆಧಾರದ ಮೇಲೆ ಸು. ೭-೮ನೆಯ ಶತಮಾನವೆಂದು

ಗೊತ್ತುಮಾಡಿರುವ ಅಂಥ ಪದ್ಯಗಳು ಸಂಖ್ಯೆಯಲ್ಲಿ ೨೦–೩೦ ಇರಬಹುದು. ಛಂದಸ್ಸಿನ ದೃಷ್ಟಿಯಿಂದ ಇವುಗಳಲ್ಲಿ ಖ್ಯಾತ ಕರ್ಣಾಟಕಗಳೂ ವಂಶಸ್ಥ, ವಸಂತತಿಲಕ, ಮಂಗಲ ಮಂಗನಾ, ಮಲ್ಲಿಕಾಮಾಲೆ ಇಂಥ ವಿರಳಪ್ರಯೋಗದ ವರ್ಣವೃತ್ತಗಳೂ ಕಂಡು ಬಂದಿವೆ. ಛಂದಸ್ಸಿಗೆ ಒಗ್ಗುವುದು, ಒಗ್ಗದಿರುವುದು ಎಂಬ ಇಬ್ಬಗೆಯ ರಚನೆಗಳೂ ಉಂಟು. ವಿವರದಲ್ಲಿ ಇವುಗಳ ಸ್ವರೂಪವನ್ನು ಈಗ ನೋಡಬಹುದು :

(i) ಖ್ಯಾತ ಕರ್ಣಾಟಕಗಳು : ಶಾರ್ದೂಲವಿಕ್ರೀಡಿತ : ೧೫ (೧೩), ೨೫ (೨೨), ೩೦ (೨೭), ೧೩೪(೧೧೬); ಮತ್ತೇಭವಿಕ್ರೀಡಿತ : ೮೬ (೭೬), ೮೬ (೭೭), ೧೧೨ (೯೭), ೧೧೩ (೯೮), ೧೨೧ (೧೦೬); ಉತ್ಪಲಮಾಲೆ : ೨೪ (೨೧), ೮೯ (೭೯); ಚಂಪಕಮಾಲೆ : ೨೯ (೨೬), ೧೨೩ (೧೦೮); ಸ್ರಗ್ಧರೆ : ನಿದರ್ಶನಗಳಿಲ್ಲ; ಮಹಾ ಸ್ರಗ್ಧರೆ : ೧೪ (೧೨), ೬೮ (೮೮). ಈ ಗುಂಪಿನ ವೃತ್ತಗಳು ಇನ್ನೂ ಕೆಲವು ಇರುವ ಸಾಧ್ಯತೆಯಿದೆ. ಶಾಸನಗಳ ಅಕ್ಷರಗಳು ತುಂಬ ಅಳಿಸಿರುವುದರಿಂದಲೂ ಬೇರೆ ಕೆಲವು ಕಾರಣಗಳಿಂದಲೂ ಅವುಗಳ ಲಕ್ಷಣ ಸುಲಭವಾಗಿ ತಿಳಿಯುವಂತಿರುವುದಿಲ್ಲ. ಸ್ರಗ್ಧರೆಗೆ ಯಾವ ನಿರ್ದಶನವೂ ಗೋಚರಿಸದಿರುವುದಕ್ಕೆ ವಿಶೇಷ ಕಾರಣವೇನೂ ಇದ್ದಿರಲಾರದು. ಪೂರ್ವೋಕ್ತ ವೃತ್ತಗಳಲ್ಲಿ ಕೆಲವು ಲಕ್ಷಣಶುದ್ಧವೆಂದು ಮೇಲುನೋಟದಿಂದಲೇ ತಿಳಿಯುತ್ತದೆ. ಇನ್ನು ಕೆಲವು ಬಗೆಬಗೆಯ ಸ್ಖಾಲಿತ್ಯಗಳ ದೆಸೆಯಿಂದಲೂ ಇತರ ಕಾರಣಗಳಿಂದಲೂ ಪಾಠ ಕೆಟ್ಟು ಭ್ರಾಂತಿಗೆ ಕಾರಣವಾಗಿರಬಹುದು. ಒಂದು ಉದಾಹರಣೆಯನ್ನಿಲ್ಲಿ ಕೊಡಬಹುದು :

121(106)ರ ಶಾಸನ ಮತ್ತೇಭವಿಕ್ರೀಡಿತವೆಂದು ಮೇಲೆ ಹೇಳಿದೆ. ಇದರ ಮೊದಲನೆಯ ಪಾದದ ಪಾಠ "ನವಿಲೂರಾ ಶ್ರೀಸಂಘದುಳ್ಳೆ ಗುರವಂ ನಮ್ಮೌನಿಯಾಚಾರಿಯರ್" ಎಂದಿದೆ. ಇದನ್ನು ಪ್ರಸ್ತಾರಿಸಿದರೆ ಸಮಜಸತತಗ ಎಂದಾಗುತ್ತದೆ. ಇಂಥದೊಂದು ವೃತ್ತ ಅತಿಧೃತಿ ಛಂದೋವರ್ಗದಲ್ಲಿ ಪ್ರಸಿದ್ಧವಾದ್ದಲ್ಲ; ಆದ್ದರಿಂದ ಮುಂದಿನ ಪಾದಗಳಿಗೆ ಮುಂದುವರಿದು ಪ್ರಸ್ತಾರ ಹಾಕಿದರೆ, ಅಲ್ಲಿ ಕೆಲವು ಕಡೆ ಅಕ್ಷರಗಳು ಗಲಿತವಾಗಿದ್ದೂ ಸಭರನಮಯಲಗ ಎಂಬ ಗಣವಿನ್ಯಾಸವಿರುವುದು ತೋರುತ್ತದೆ. ಇದು ತಿಳಿದಾಗ ಮೊದಲ ಪಾದದ ಪಾಠವೂ ಬಹುಮಟ್ಟಿಗೆ ಅದೇ ಗಣವಿನ್ಯಾಸದಲ್ಲಿದ್ದಿರಬಹುದೆಂದು ಭಾವಿಸಲು ಅವಕಾಶವಾಗುತ್ತದೆ. ಕೆಟ್ಟಿರುವ ಪಾಠವನ್ನು ಊಹಾತ್ಮಕ ಪರಿಷ್ಕರಣದ ಬಲದಿಂದ ಸರಿಪಡಿಸಿ "ನವಿಲೂರಾ ಸಿರಿಸಂಘದುಳ್ಳೆ ಗುರವಂ ನಮ್ಮೌನಿಯಾಚಾರಿಯರ್" ಎಂದು ಮಾಡಿಕೊಂಡರೆ ಪಾದ ಸರಿಯಾಗುತ್ತದೆ. ೧೧೨(೯೭)ರ "ನಮಿಲೂರಾ ಸಿರಿಸಂಘದಾಜಿಗಣದಾ ರಾಜ್ಞೀಮತೀಗನ್ತಿಯಾರ್" ಇಂಥ ಬಾಹ್ಯ ಸಾಕ್ಷ್ಯವೂ ಮೇಲಿನ ಪರಿಷ್ಕರಣವನ್ನು ಪೋಷಿಸುತ್ತದೆ. ಆದರೆ ಎಲ್ಲ ಕಡೆಗೂ ಹೀಗೆಯೇ ಇರುತ್ತದೆ ಎನ್ನುವಂತಿಲ್ಲ. ಉದಾಹರಣೆಗೆ ೯೪ (೮೪)ರ ವೃತ್ತ ಒಟ್ಟಿನಲ್ಲಿ ಮಹಾ ಸ್ರಗ್ಧರೆಯೇ ಆದರೂ ಅದರ ಗಣರಚನೆ ಪ್ರಾಸಯೋಜನೆಗಳಲ್ಲಿ ವರ್ಣವೃತ್ತಗಳ ಸಾಮಾನ್ಯನಿಯಮಗಳಿಗೆ ಭಂಗಬಂದಿದೆ. ಆದರೆ ಇದನ್ನು ಬರೆಹಕಾರರಿಂದಲೋ

ಕೊರೆಹಕಾರರಿಂದಲೋ ಆಗಿರಬಹುದಾದ ದೋಷವೆಂದುಕೊಂಡು ಸರಿಪಡಿಸಲು ಹೋದರೆ ಆ ಯತ್ನ ಫಲಕಾರಿಯಾಗುವಂತೆ ತೋರುವುದಿಲ್ಲ. ಒಂದೆರಡು ಅಂಥ ದೋಷಗಳೂ ಇರಬಹುದು. ಆದರೆ ಗಣವಿನ್ಯಾಸ ಪ್ರಾಸಯೋಜನೆಗಳಲ್ಲಿ ಮೂಲಲೇಖಕನೇ ಮಹಾಸ್ರಗ್ಧರೆಯ ಸಾಮಾನ್ಯಲಕ್ಷಣವನ್ನು ಬಲ್ಲವನಾಗಿಯೂ, ಕೆಲಮಟ್ಟಿನ ಸ್ವಾತಂತ್ರ್ಯವನ್ನು ವಹಿಸಿರುವಂತೆ .ಕಂಡುಬರುತ್ತದೆ. ಕನ್ನಡ ಕವಿತ್ವದ ರಚನೆಯ ಆರಂಭದೆಸೆಯಲ್ಲಿ ಸ್ವಾತಂತ್ರ್ಯಪ್ರೀತಿ ಕಾರಣವಾಗಿಯೋ ಪ್ರಯೋಗಪರೀಕ್ಷೆಗಳು ಕಾರಣವಾಗಿಯೋ ಇಂಥ ನಿದರ್ಶನಗಳು ಹುಟ್ಟುತ್ತಿದ್ದಿರಬಹುದು. ೯೦ (೮೦), ೧೦೮ (೯೩), ೧೨೧ (೧೦೬) ಈ ಸಂಖ್ಯೆಯ ಶಾಸನಗಳನ್ನು ಪ್ರಸ್ತಾರಿಸಿದಾಗಲೂ ಇದು ತಿಳಿಯುತ್ತದೆ. ಇನ್ನು ೧೧೪ (೯೯), ೧೧೭ (೧೦೨) ಇಂಥ ಕಡೆಗಳಲ್ಲಿ ಪದ್ಯಲಕ್ಷಣವಿದ್ದರೂ ಛಂದಸ್ಸು ಇಂಥದೇ ಎಂದು ಹೇಳುವುದು ಕಷ್ಟ.

ಉಳಿದ ವೃತ್ತಗಳ ವಿಚಾರ: ೧೨೦ (೧೦೫) ಮೂರು ಪಾದಗಳು ಮಾತ್ರವೇ ಇರುವ ಒಂದು ಪದ್ಯಶಾಸನ; ಛಂದಸ್ಸು ವಸಂತತಿಲಕ. ಇನ್ನೊಂದು ಪಾದ ಏಕಿಲ್ಲ? ಪಂಚಪಾದಿಯಾದ ವರ್ಣವೃತ್ತಗಳಿರುವಂತೆಯೇ ತ್ರಿಪಾದಿಯಾದ ವರ್ಣವೃತ್ತಗಳೂ ಇರಬಹುದೇ? ಆದರೆ ಕೆತ್ತಬೇಕಾಗಿದ್ದ ಇನ್ನೊಂದು ಸಾಲನ್ನು ಕೆತ್ತದೆ ಬಿಟ್ಟಿರುವುದು ಈ ನಿದರ್ಶನದಲ್ಲಿ ಸಾಧ್ಯ. ಏಕೆಂದರೆ ಶಾಸನದ ಅರ್ಥ ಪೂರ್ತಿಯಾದಂತೆ ತೋರುವುದಿಲ್ಲ. ೧೩೦ (೧೧೩)ರ ಮಂಗಲಮಂಗನಾ (ಅಥವಾ ಮಂಗಳ) ವೃತ್ತ ವಿರಳವಾದ ಕನ್ನಡ ಸಾಹಿತ್ಯದ ವೃತ್ತಗಳಲ್ಲಿ ಒಂದು, ಶಾಸನವೃತ್ತದಲ್ಲಿ ೨ನೆಯ ಪಾದದ ಮೊದಲನೆಯ ಗಣ ನಗಣವಾಗುವುದರ ಬದಲು ಜಗಣವಾಗಿದೆ; ೩ನೆಯ ಪಾದದ ಎರಡನೆಯ ಗಣ ಭಗಣವಾಗುವುದರ ಬದಲು ರಗಣವಾಗಿದೆ. ೯೪ (೮೯)ರ ಮಹಾಸ್ರಗ್ಧರೆಯ ವಿಷಯದಲ್ಲಿ ನೋಡಿದಂತೆ, ಇಲ್ಲಿಯೂ ಪ್ರಾಯಃ ಪಾಠವು ಕೆಟ್ಟಿರದೆ, ಕವಿ ವಹಿಸಿದ ಸ್ವಾತಂತ್ರ್ಯದ ಫಲವಾಗಿ ಗಣವಿನ್ಯಾಸದಲ್ಲಿ ವ್ಯತ್ಯಾಸ ತಲೆದೋರಿರಬಹುದು. ೧೩೩ (೧೧೫) ಕೂಡ ಒಂದು ಕುತೂಹಲಕಾರಿ ರಚನೆಯಾಗಿದ್ದು, ಅದು ಒಟ್ಟಿನಲ್ಲಿ ಒಂದು ಮಂಗಲಮಂಗನಾ ವೃತ್ತವೆಂದೂ ಅದರಲ್ಲಿ ಕವಿಸ್ವಾತಂತ್ರ್ಯ ಮೂಲವಾಗಿ ವ್ಯತ್ಯಾಸಗಳಾಗಿವೆಯೆಂದೂ ತಿಳಿದರೆ ತಪ್ಪಾಗಲಾರದು. ೧೩೨ (೧೧೪)ರ ವಂಶಸ್ಥ ೩೪ (೩೧)ರ ಮಲ್ಲಿಕಾಮಾಲೆ ಇವುಗಳಲ್ಲಿ ವಿಶೇಷಗಳೇನಿಲ್ಲ.

ಮುಖ್ಯವಾಗಿ ಲಿಪಿಯ ಆಧಾರದ ಮೇಲೆ, ಕೆಲವೊಮ್ಮೆ ಐತಿಹಾಸಿಕ ಸಾಕ್ಷ್ಯಗಳ ಆಧಾರದ ಮೇಲೆ ಸು. ೭-೮ನೆಯ ಶತಮಾನಗಳಿಗೆ ಸೇರಿದವೆಂದು ಗೊತ್ತುಮಾಡಿರುವ ಶ್ರವಣಬೆಳ್ಗೊಳದ ಶಾಸನಪದ್ಯಗಳು ಭಾಷೆ ಛಂದಸ್ಸುಗಳ ದೃಷ್ಟಿಯಿಂದ ಈಚಿನ ವ್ಯಾಕರಣ ಛಂದಶ್ಶಾಸ್ತ್ರಗಳ ಕಟ್ಟುಕಟ್ಟಳೆಗಳಿಗೆ ಒಳಪಡದ ರೀತಿರಚನೆಗಳನ್ನು ಅಲ್ಲಲ್ಲಿ ಮನಗಾಣಿಸುತ್ತವೆಯೆಂಬುದರಲ್ಲಿ ಸಂದೇಹವಿಲ್ಲ. ಪ್ರಯೋಗಶೀಲ, ಪರಿಣತಿ ಎರಡಕ್ಕೂ ನಿದರ್ಶನಗಳು ತೋರುತ್ತಿರುವುದನ್ನು ಗಮನಿಸಿದರೆ, ಪ್ರಾಯಃ ಪೂರ್ವದ ಹಳಗನ್ನಡ ಹಳಗನ್ನಡಕ್ಕೆ ತಿರುಗುತ್ತಿರುವ ಭಾಷಾಸ್ಥಿತಿಗೆ ಅನುಗುಣವಾಗಿ ಛಂದಃಪ್ರಯೋಗಗಳ

ತೀರ ಪ್ರಾಚೀನಕಾಲ ಪರಿಷ್ಕೃತಛಂದಸ್ಸಿನ ಪರಿಣತಿಯ ಕಾಲದ ಕಡೆಗೆ ಸಾಗುವ ಯತ್ನದಲ್ಲಿದ್ದಿರಬಹುದೆಂದು ತೋರುತ್ತದೆ.

## ಅಡಿಟಿಪ್ಪಣಿಗಳು

1 ಶಿಲೆಯಲ್ಲಿ ಕಾವ್ಯಗಳನ್ನೇ ಕೆತ್ತಿರುವ ಉದಾಹರಣೆಗಳುಂಟು ; ಆದರೆ ಅವು ವಿಶಾಲವಾದ ಅರ್ಥದಲ್ಲಿ ಶಾಸನಗಳೇ ವಿನಾ ನಿಯತಾರ್ಥದಲ್ಲಲ್ಲ.

2 ರವಿಕೀರ್ತಿಯಂಥ ಕವಿಗಳು ತಾವು ಕಾಳಿದಾಸ, ಭಾರವಿಯರಿಗೆ ಸಮಾನರೆಂದು ಹೇಳಿಕೊಂಡಿದ್ದರೂ, ಅದು ಅಭಿಮಾನದ ಮಾತೇ ವಿನಾ ಯಥಾರ್ಥ ಸಂಗತಿಯಲ್ಲ. ಐಹೊಳೆ ಶಾಸನದ ರವಿಕೀರ್ತಿಯಲ್ಲಾಗಲಿ, ತಾಳಗುಂದ ಶಾಸನದ ಕುಬ್ಜನಲ್ಲಾಗಲಿ ಕಾಳಿದಾಸಾದಿ ಪೂರ್ವಕವಿಗಳ ಅನುಕರಣೆಯಿದೆ.

3 ಆ ಪಾಂಡಿತ್ಯದ ವಿಷಯದಲ್ಲಿಯೂ ಒಮ್ಮೊಮ್ಮೆ ಸಂಶಯ ಹುಟ್ಟುತ್ತದೆ, ಅಲ್ಲಲ್ಲಿ ಕಂಡುಬರುವ ದೋಷಗಳನ್ನು ನೋಡಿದರೆ, ಎಲ್ಲ ಬಗೆಯ ದೋಷಗಳಿಗೂ ಲಿಪಿಕಾರ ಅಥವಾ ರೂವಾರಿಯೇ ಕಾರಣವೆಂದು ಹೇಳಬಹುದು.

4 ಎಂ. ಚಿದಾನಂದಮೂರ್ತಿ, 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ', ಪು. ೩೧.

5 *MAR.*, 1936, p.

6 *EC.*, XI, Cd. 43.

7 ರಂ. ಶ್ರೀ. ಮುಗಳಿ, 'ಕನ್ನಡ ಸಾಹಿತ್ಯ ಚರಿತ್ರೆ', ಪು. ೯.

8 'ಮೂರು ಉಪನ್ಯಾಸಗಳು', ಪು. ೧೩೧-೧೩೭.

9 ಅದೇ, ಪು. ೧೨೬.

1( *EC.*, II,

11 ಪೈ, ಪೂರ್ವೋಕ್ತ, ಪು. ೧೨೭

12 'ಕನ್ನಡ ಸಾಹಿತ್ಯ ಚರಿತ್ರೆ', ಪು. ೧೨

13 *IA.*, X, p, 61.

14-15 'ಕನ್ನಡ ಸಾಹಿತ್ಯ ಚರಿತ್ರೆ', ಪು. ೧೨.

16 *IA.*, X, p. 60.

17 *MAR.*, 1933, p. 83

18 *EC.*, III, Nj. 147, 187, Hg. 156 (1974).

19 *EC.*, II. 1973.

20 *EC.*, XI Cd. 43.

21 ನೋಡಿ : *Jayadaman*, Bombay, 1949.

22 *SII.*, IX, pt. I, 403, No. 395 ; *EC.*, III, Mysore 6 ; ಆರ್. ಎಸ್. ಪಂಚಮುಖಿ, ಕರ್ನಾಟಕದ ಇತಿಹಾಸ I, ಭಾಗ ೨, ಪು. ೧೬೩-೨೪

23 *MAR.*, 1920, p. 23, Note, p. 28.

24 ಎಂ. ಎಂ. ಕಲಬುರ್ಗಿ, 'ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ', ಧಾರವಾಡ, ೧೯೭೩, ಪು. ೧೩೫.

25 ಆರ್. ಎಸ್. ಪಂಚಮುಖಿ, ಪೂರ್ವೋಕ್ತ, ಪು. ೧೨೪.

26 *IA.*, X, p. 61.
27 'ಶಾಸನ ಪದ್ಯಮಂಜರಿ', ಬೆಂಗಳೂರು ೧೯೨೩, ಪು. ೨೬೫.
28 *GOKI.*, p. 363; 'ಕರ್ನಾಟಕದ ಇತಿಹಾಸ', I ಪು. ೧೨೨.
29 *EC.*, VIII, Nr. 62.
30 *EC.*, VIII, Sb. 22.
31 ಎಂ.ಎಂ. ಕಲಬುರ್ಗಿ, ಪೂರ್ವೋಕ್ತ, ಪು. ೧೩೪.
32 *EC.*, II, 1973.

## ಅಧ್ಯಾಯ ಆರು

# ಕನ್ನಡ ಸಾಹಿತ್ಯೋದಯ

## ಕನ್ನಡ ಸಾಹಿತ್ಯದ ಪ್ರಾಚೀನತೆ

### ಪೀಠಿಕೆ

ಕನ್ನಡ ಭಾಷೆ ಕ್ರಿಸ್ತಶಕದ ಆದಿಭಾಗದಿಂದ, ಪ್ರಾಯಶಃ ಅದಕ್ಕೆ ಇನ್ನೂ ೧–೨ ಶತಕಗಳಷ್ಟು ಪೂರ್ವದಿಂದ ಕನ್ನಡ ನಾಡಿನಲ್ಲಿ ಅಸ್ತಿತ್ವದಲ್ಲಿದೆಯೆಂದು ಹೇಳುವುದಕ್ಕೆ ಕೆಲವು ಪ್ರಮಾಣಗಳು ದೊರೆತಿವೆ. ಆ ಪ್ರಮಾಣಗಳು ಯಾವುವು ಎನ್ನುವುದನ್ನು ಮೊದಲನೆಯ ಸಂಪುಟದಲ್ಲಿ 'ಕನ್ನಡ ಭಾಷೆಯ ಪ್ರಾಚೀನತೆ' ಎಂಬ ಪ್ರಕರಣದಲ್ಲಿ ನಾವು ಗಮನಿಸಿದ್ದೇವೆ. ಕನ್ನಡ ಭಾಷೆ ಕ್ರಿ.ಶ. ೨–೩ನೆಯ ಶತಮಾನಗಳಲ್ಲಿ ಲಿಪಿಯ ಅವಲಂಬನೆಯನ್ನು ಪಡೆದು ಗ್ರಂಥಸ್ಥವಾಗುವುದಕ್ಕೆ ಆರಂಭವಾಗಿರಬೇಕೆಂದೂ ಈ ಕಾಲದಲ್ಲಿ ಕನ್ನಡಿಗರಲ್ಲಿ ಬಾಯಿಂದ ಬಾಯಿಗೆ ಪ್ರಚಾರಗೊಳ್ಳುತ್ತಿದ್ದ ಜಾನಪದ ಸಾಹಿತ್ಯ ಕೂಡ ಇದ್ದಿರಬೇಕೆಂದೂ ಅದು ಗ್ರಂಥಸ್ಥರೂಪವನ್ನು ಪಡೆಯಿತೋ ಇಲ್ಲವೋ ಎಂಬುದನ್ನು ತಿಳಿಯಲು ಈಗ ಪ್ರಮಾಣಗಳಿಲ್ಲವೆಂದೂ ಕೆಲವರು ಭಾವಿಸಿದ್ದಾರೆ.[1]

ಪ್ರಮಾಣಗಳ ಅಭಾವವಿರುವುದು ದಿಟ. ಆದರೆ ಸುದೀರ್ಘವೂ ಶ್ರೀಮಂತವೂ ಆದ ಪರಂಪರೆಯನ್ನುಳ್ಳ, ಇತಿಹಾಸವನ್ನುಳ್ಳ ಕನ್ನಡ ನುಡಿ ಈಗ ತಲೆದೋರಿ ನಿಂತಿರುವ ಆರಂಭಕಾಲದಿಂದ ಎಷ್ಟೆಷ್ಟು ಹಿಂದಕ್ಕೆ ತನ್ನ ಬೇರುಗಳನ್ನು ಹರಡಿದೆ ಎಂಬುದನ್ನು ತಿಳಿಯುವುದು ಒಂದು ಕುತೂಹಲದ ವಿಷಯ; ಭಾಷೆಯ ವಿಷಯದಲ್ಲಿ ಅಭಿಮಾನವುಳ್ಳ ಕನ್ನಡಿಗರು ಅದೇ ಮಾಧ್ಯಮದ ಮೂಲಕವಾಗಿ ಹೊಮ್ಮಿದ ತಮ್ಮ ಬದುಕು ಸಂಸ್ಕೃತಿಗಳ ಹಾಗೂ ಸಾಧನೆ ಸಾಹಸಗಳ ಬೇರು ಈ ನೆಲದಲ್ಲಿ ಎಷ್ಟು ಆಳಕ್ಕೆ ಇಳಿದಿದೆ ಎಂಬುದನ್ನು ತಿಳಿಯಲು ಸಹಜವಾಗಿಯೇ ಅಪೇಕ್ಷಿಸಿದರೆ, ಅದಕ್ಕೆ ಅಗತ್ಯವಾದ ಶೋಧಗಳನ್ನು ಕೈಗೊಳ್ಳಬೇಕಾಗುತ್ತದೆ. ಆ ಶೋಧಗಳು ವಿವಿಧವಾಗಿರುತ್ತವೆ. ಜ್ಞಾತಾಜ್ಞಾತ ಮೂಲಗಳಿಂದ ದೊರೆಯುವ ಭಾಷಾಸಾಹಿತ್ಯಗಳ ಸಾಕ್ಷ್ಯಗಳನ್ನೆಲ್ಲ ಹುಡುಕಿ ತೆಗೆದು ಒಂದು ಕ್ರಮದಲ್ಲಿ ಸಂಯೋಜಿಸಿದರೆ ಮಸುಕಾಗಿಯಾದರೂ ನಮ್ಮ ಅಜ್ಞಾತ ಪರಂಪರೆಯ ಪ್ರವಾಹರೇಖೆ ಮಿಂಚಿ, ಶೋಧಗಳ ಯತ್ನ ಯಶಸ್ವಿ ಎನಿಸಬಹುದು. ಯಶಸ್ಸು ಅನಿಶ್ಚಿತವೆಂದಾದರೆ, ಹೊಸ ಆಧಾರಗಳೂ ಉಲ್ಲೇಖಗಳೂ ಕಣ್ಣಿಗೆ ಬೀಳುವವರೆಗೆ ಕಾಯುತ್ತ ನಿಲ್ಲಬಹುದು; ನಿಲ್ಲಬೇಕಾಗುವುದು.

ಕಳೆದ ಶತಮಾನದ ಕೊನೆಯ ಪಾದದಿಂದ ವಿದೇಶೀಯ ಮತ್ತು ಸ್ವದೇಶೀಯರಾದ ವಿದ್ವಾಂಸರು ಕನ್ನಡ ಸಾಹಿತ್ಯದ ಆರಂಭದಶೆಯನ್ನು ಅಥವಾ ಪ್ರಾಚೀನತೆಯ ಸಂದರ್ಭಗಳನ್ನು ಕಂಡುಹಿಡಿಯಲು ಬಗೆಬಗೆಯ ಪ್ರಯತ್ನಗಳನ್ನು ನಡಸಿದ್ದಾರೆ. ಎಫ್. ಕಿಟ್ಟೆಲ್, ಬಿ. ಎಲ್. ರೈಸ್, ಆರ್. ನರಸಿಂಹಾಚಾರ್, ಎಂ. ಗೋವಿಂದ ಪೈ ಈ ಕೆಲವರ ಪ್ರಯತ್ನಗಳು ಸಾಕಷ್ಟು ಗಾಢವಾದವು ; ಶ್ರದ್ಧಾಪೂರ್ವಕವಾದವು. ಇವರಲ್ಲಿ ಗೋವಿಂದ ಪೈ ಅಗ್ರಗಣ್ಯರು. ಇವರು ಆಗಾಗ ಬೇರೆ ಬೇರೆ ಪತ್ರಿಕೆಗಳಿಗೆ ಬರೆದ ನಾಲ್ಕಾರು ಸಂಶೋಧನ ಲೇಖನಗಳಲ್ಲಿ, ಕನ್ನಡ ಸಾಹಿತ್ಯದ ಹಳಮೆಯನ್ನು ತಮಗೆ ಆಗಾಗ ತೋರಿದ ಆಧಾರಗಳ ಬಲದ ಮೇಲೆ ಹಿಂದು ಹಿಂದಕ್ಕೆ ಒಯ್ಯುವ ಯತ್ನಮಾಡಿದ್ದಾರೆ. ಅವರ ಊಹೆಗಳನ್ನೂ ನಿರ್ಣಯಗಳನ್ನೂ ವಿಮರ್ಶಕರು ಮರುಪರಿಶೀಲನೆಗೆ ಎತ್ತಿಕೊಂಡು, ವಿಚಾರದ ಒರೆಗಲ್ಲಿಗೆ ತೀಡಿ ಪರೀಕ್ಷಿಸಿದ್ದಾರೆ, ಒಪ್ಪುವುದು ಬಿಡುವುದು ಮಾಡಿದ್ದಾರೆ ; ಹೊಸ ಹಾದಿ ಹಿಡಿಯಲು ಪ್ರಚೋದನೆಯನ್ನೂ ಪಡೆದಿದ್ದಾರೆ. ಪೂರ್ವೋಕ್ತರಾದ ವಿದ್ವಾಂಸರ ಸಂಶೋಧನೆಯ ಸಾರಾಂಶವನ್ನು ಇಲ್ಲಿ ಒಗ್ಗೂಡಿಸಿದರೆ, ಎಂದಿನಿಂದ ಕನ್ನಡ ಭಾಷೆಯಲ್ಲಿ ಸಾಹಿತ್ಯರಚನೆ ತೊಡಗಿರಬಹುದು, ಆ ಹಳಗಾಲದಲ್ಲಿ ಕನ್ನಡ ಸಾಹಿತ್ಯದ ಸ್ವರೂಪ ಹೇಗೆ ಇದ್ದಿರಬಹುದು ಮುಂತಾದ ಸಂಗತಿಗಳ ಒಂದು ಸಾಮಾನ್ಯ ಪರಿಚಯವನ್ನು ನಾವು ಮಾಡಿಕೊಂಡಂತಾಗುವುದು.

## ಸಾಧನಗಳು

ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ಅಥವಾ ಕನ್ನಡ ಸಾಹಿತ್ಯದ ಆರಂಭಕಾಲದ ಸ್ಥಿತಿಗತಿಗಳನ್ನು ಗೊತ್ತುಮಾಡಲು ನಡಸಿದ ಪ್ರಯತ್ನಗಳು ಬಹುಮಟ್ಟಿಗೆ ಸ್ವಭಾಷಿಕ ಹಾಗೂ ಅನ್ಯಭಾಷಿಕ ಸಾಕ್ಷ್ಯಗಳ ಮೇಲೆ ಆಧಾರಗೊಂಡಿವೆ. ಸ್ವಭಾಷಿಕ ಸಾಕ್ಷ್ಯಗಳು ಎಂದರೆ ಮುಖ್ಯವಾಗಿ, ಕನ್ನಡ ನಾಡಿನಲ್ಲಿ ಬಹು ಹಿಂದಿನಿಂದಲೇ ಲಿಖಿತವಾಗುತ್ತ ಬಂದ ಶಾಸನ ಸಾಹಿತ್ಯ ಮತ್ತು ಉಪಲಬ್ಧ ಗ್ರಾಂಥಿಕ ಸಾಹಿತ್ಯ—ಇವುಗಳಿಂದ ಹೊರಪಡುವ ಸಂಗತಿಗಳು. ಇವು ನೇರವಾಗಿಯೋ ಸೂಚ್ಯವಾಗಿಯೋ ನಮ್ಮ ಸಾಹಿತ್ಯದ ಪ್ರಾಚೀನತೆಯ ಪ್ರಮಾಣಗಳನ್ನು ಒಳಕೊಂಡಿರುವುದು ಸಾಧ್ಯ. ಅನ್ಯಭಾಷಿಕ ಸಾಕ್ಷ್ಯಗಳು ಎಂದರೆ ಸಂಸ್ಕೃತ ಪ್ರಾಕೃತ ತಮಿಳು ಹೀಗೆ ಬೇರಾವುದಾದರೂ ಪ್ರಾಚೀನತರ ಭಾಷೆಯ ಗ್ರಂಥಗಳಲ್ಲಿ ಸೇರಿಕೊಂಡಿರಬಹುದಾದ ಪ್ರಾಚೀನತೆಯ ಪ್ರಮಾಣಗಳು. ಇವು ಮಾತ್ರವಲ್ಲದೆ ಕನ್ನಡ ನಾಡಿನಲ್ಲಿ ಕನ್ನಡ ಭಾಷಾಸಾಹಿತ್ಯಗಳ ಕ್ರಮಾಗತವಾದ ಬೆಳವಣಿಗೆಗೆ ಒದಗಿ ಬಂದ ಐತಿಹಾಸಿಕ ಧಾರ್ಮಿಕ ಸಾಂಸ್ಕೃತಿಕ ಮತ್ತು ಭಾಷಿಕ ಚಲನವಲನಗಳನ್ನು ಲಕ್ಷ್ಯಕ್ಕೆ ತಂದುಕೊಂಡು ಅಜ್ಞಾತವಾದ ಅವಧಿಯ ಸಂಗತಿಗಳನ್ನೂ ಸಂದರ್ಭಗಳನ್ನೂ ಊಹೆಯಿಂದ ಕಟ್ಟನಿಲ್ಲಿಸುವುದು ಕೂಡ ಅತಾರ್ಕಿಕವಾಗಲಾರದು. ಈ ಎಲ್ಲ ದಿಕ್ಕುಗಳಲ್ಲಿ ಈವರೆಗೆ ನಡೆದಿರುವ ಪ್ರಯತ್ನಗಳಲ್ಲಿ ಮುಖ್ಯವಾದುವನ್ನು, ಬೇರೆ ಬೇರೆ ವಿಭಾಗಗಳನ್ನಾಗಿ ವಿಂಗಡಿಸಿಕೊಂಡು ಸಂಗ್ರಹಿಸಲು, ಸಂದರ್ಭೋಚಿತವಾಗಿ ಅವುಗಳ ಯುಕ್ತಾಯುಕ್ತತೆಯನ್ನು ವಿಮರ್ಶಿಸಲು ಇನ್ನು ಮುಂದೆ ತೊಡಗಬಹುದು.

## ಭಾಷಿಕ ಸಾಕ್ಷ್ಯಗಳು

ಆಯ್ದ ಕನ್ನಡ ಮಾತುಗಳಲ್ಲಿ ಮನಸ್ಸನ್ನು ಮುಟ್ಟಿ ಹೃದಯಕ್ಕೆ ಸೊಗಸುವಂತಹ ಉತ್ಕೃಷ್ಟವಾದ ಮಾತುಗಾರಿಕೆ ಎಲ್ಲಿ ಕಾಣುವುದೋ ಅಲ್ಲಿ ಕನ್ನಡ ಸಾಹಿತ್ಯವಿದೆ ಎನ್ನಬಹುದು. ಹೀಗೆನ್ನುವುದರಿಂದ ಈ ಸಾಹಿತ್ಯಕ್ಕೆ ಆ ಭಾಷೆಯು ಅವಲಂಬನೆಯಿದೆಯೆಂದಾಯಿತು. ಈ ಭಾಷೆ ಎಂದು ಹುಟ್ಟಿತೋ ಅಂದೇ ಸಾಹಿತ್ಯವೂ ಹುಟ್ಟಿತು ಎಂದು ಸ್ಥೂಲವಾಗಿ ಹೇಳಬಹುದು. ಭಾಷೆ ಪರಸ್ಪರರನ್ನು ಅರ್ಥಮಾಡಿಕೊಳ್ಳಲು ಬಳಸುವ ಭಾವದ ಸಂಕೇತ ಎನ್ನುವಲ್ಲಿ ಇದು ಸರಿ. ಆದರೆ ಭಾಷೆ ವಸ್ತುನಿರ್ದೇಶಕ ಧ್ವನಿಘಟಕವಷ್ಟೇ ಎಂದು ತಿಳಿಯುವುದಾದರೆ ಭಾಷೆಗೆ ಸಾಹಿತ್ಯ ಎನ್ನಲಾಗದು. ಭಾಷೆಯ ಧ್ವನಿಘಟಕಗಳು ತಮ್ಮ ಒಂದು ಧರ್ಮವಾದ ಭಾವವಾಹಿತ್ವ ಲಕ್ಷಣವನ್ನು ಎಲ್ಲಿ ಹೊಮ್ಮಿಸುವಂತೆ ವಿಶಿಷ್ಟರೀತಿಯಿಂದ ಸಂಯೋಜನೆಗೊಂಡಿರುತ್ತವೆಯೋ ಅಲ್ಲಿ ಸಾಹಿತ್ಯದ ಗುಣ ಸಮಾವೇಶವಾಗುತ್ತದೆ. ಆದ್ದರಿಂದ ಕನ್ನಡ ಭಾಷೆಯ ಹಳೆಯ ಕುರುಹುಗಳನ್ನು ನಾವು ಹಿಂದಿನ ಸಂಪುಟದ ಒಂದು ಪ್ರಕರಣದಲ್ಲಿ ಗುರುತಿಸಿದ್ದರೂ, ಆ ಕುರುಹುಗಳು ಕಾಣಿಸಿಕೊಂಡ ಕಾಲದಲ್ಲಿಯೇ ಕನ್ನಡ ಸಾಹಿತ್ಯವೆಂದು ಈಗ ನಾವು ತಿಳಿಯುವ ಅರ್ಥದಲ್ಲಿ ಸಾಹಿತ್ಯವಿದ್ದಿತೆಂದು ಧೈರ್ಯವಾಗಿ ಹೇಳುವಂತಿಲ್ಲ.

ಕನ್ನಡ ಸಾಹಿತ್ಯಕ್ಕೆ ಅಧಿಷ್ಠಾನವಾದ ಕನ್ನಡ ಭಾಷೆ ಕ್ರಿಸ್ತಶಕಕ್ಕೆ ಕೆಲವು ಶತಮಾನಗಳ ಹಿಂದಿನಿಂದಲೇ ಸ್ವತಂತ್ರವಾಗಿ ಇದ್ದಿರುವುದು ಸಾಧ್ಯ. ಆಗ ಅದರ ಸ್ವರೂಪ ಹೇಗಿದ್ದಿರಬಹುದು ಎಂಬುದನ್ನು ಊಹಿಸುವುದು ಕೂಡ ಸ್ವಲ್ಪ ಕಷ್ಟವೇ. ಈವರೆಗೆ ಗೊತ್ತುಮಾಡಿರುವ ಸಾಕ್ಷ್ಯಗಳನ್ನಿಲ್ಲಿ ಸಂಗ್ರಹಿಸಬಹುದು :

(i) ಕನ್ನಡ ನಾಡಿನ ಕೆಲವು ಸ್ಥಳಗಳಲ್ಲಿ ಮೌರ್ಯ ಚಕ್ರವರ್ತಿ ಅಶೋಕನ ಕೆಲವು ಪ್ರಾಕೃತ ಶಾಸನಗಳು ದೊರೆತಿದ್ದು, ಅವುಗಳಲ್ಲಿ ಬ್ರಹ್ಮಗಿರಿ ಶಾಸನದ ಮೊದಲನೆಯ ಸಾಲಿನಲ್ಲಿರುವ 'ಇಸಿಲ' ಎಂಬ ಸ್ಥಳನಾಮವು 'ಎಸಿಲ್' ಎಂಬ ಕನ್ನಡ ಪದದ (ತ. ಎಯಿಲ್ = ಕೋಟೆ ಅಥವಾ ಕೋಟೆ ಬಳಸಿದ ಊರು) ಪ್ರಾಕೃತರೂಪವೆಂಬುದಾಗಿಯೂ ಆ ಕಾಲದಲ್ಲಿ ಎಂದರೆ ಕ್ರಿ.ಪೂ. ೩ನೆಯ ಶತಕದಲ್ಲಿ ಕನ್ನಡ ಭಾಷೆ ಅಸ್ತಿತ್ವದಲ್ಲಿತ್ತೆಂಬುದನ್ನು ಈ ಅಂಶ ಸೂಚಿಸುತ್ತದೆ ಎಂಬುದಾಗಿಯೂ ಒಂದು ಅಭಿಪ್ರಾಯ ವ್ಯಕ್ತವಾಗಿದೆ.[೨]

(ii) ಈಚೆಗೆ ಸಾತವಾಹನರ ಶಾಸನಗಳಲ್ಲಿ ಮತ್ತು ನಾಣ್ಯಗಳಲ್ಲಿ ಉಲ್ಲೇಖವಾಗಿರುವ 'ಪುಲುಮಾಯಿ' 'ವಿಲಿವಾಯಕುರ' ಇಂಥ ಕೆಲವು ಶಬ್ದಗಳು ಪ್ರಾಯಶಃ ತೆಲುಗು ಅಥವಾ ಕನ್ನಡ ಆಗಿರಬಹುದು.[೩]

(iii) ಸಾತವಾಹನ ದೊರೆ ಹಾಲ (ಸು. ೨೦–೨೪) ಸಂಕಲಿಸಿದ ಮಹಾರಾಷ್ಟ್ರೀ ಪ್ರಾಕೃತಭಾಷೆಯ ಪದ್ಯಗ್ರಂಥ 'ಗಾಥಾ ಸಪ್ತಶತಿ'ಯಲ್ಲಿ ಸಂಸ್ಕೃತ ಪ್ರಾಕೃತ ಭಾಷೇತರವಾದ ಅತ್ತಾ, ತುಪ್ಪ, ಪೊಟ್ಟ(ಂ), ತೀರಇ ಈ ಕೆಲವು ದೇಶಿಯೆಂದ ಶಬ್ದಗಳು ಕ್ರಮವಾಗಿ ಕನ್ನಡ ಭಾಷೆಯ ಅತ್ತೆ, ತುಪ್ಪ, ಪೊಟ್ಟೆ, ತೀರ್ ಎಂಬ ನಾಮ ಮತ್ತು ಕ್ರಿಯಾಪ್ರಕೃತಿಗಳೇ ಆಗಿವೆ.[೪]

(iv) ಗ್ರೀಕ್ ಭೂಗೋಲ ಶಾಸ್ತ್ರಜ್ಞ ಟಾಲೆಮಿ (ಸು. ೧೫೦) ತನ್ನ ಭೂಗೋಳ ದಲ್ಲಿ (Geographike Huphegesis) ಹೆಸರಿಸಿರುವ ಹಲವು ವ್ಯಕ್ತಿ-ಸ್ಥಳವಾಚಕ ಗಳಲ್ಲಿ ಸಿರಿ ಪೊಲೆಮಾಇಒಸ್ (Siropolemaios) ಸಾತವಾಹನ ದೊರೆ ಶ್ರೀ ಪುಳು ಮಾಯಿಯ, ನಾಗರೂರಿಸ್ (Nagarouris), ಕಲ್ಲಿಗೇರಿಸ್ (Kalligeris), ಮೊಡೊ ಗುಲ್ಲ (Modogoulla), ಪೆತಿರ್ಗಲ (Petirgala) ಎಂಬವು ಪ್ರಾಯಶಃ ನಾಗರೂರು, ಕಲಕೇರಿ, (ಅಥವಾ ಕಲ್ಕೇರಿ), ಮುದ್ಗಲ, ಹತ್ತಿರಕಿ(ೇ) ಹಾಳ ಎಂಬ ಕನ್ನಡ ನಾಡಿನ ಕೆಲವು ಊರುಗಳ ವಿದೇಶೀಯ ರೂಪಗಳು.[5] ಹೀಗೆಯೇ ಇಲ್ಲಿಯ ಬನವಾಸ್ಸೆ (Banavoausce) ಸಂಸ್ಕೃತ ವನವಾಸಿ ಶಬ್ದದ ತದ್ಭವರೂಪವಾದ ಬನವಾಸಿಗೆ ಸದೃಶ ವಾದ್ದು. ಪುನ್ನಾಟದ ಅಪಭ್ರಂಶವಾಗಿ ಲಿಖಿತವಾದ್ದು ಪೌನ್ನತ (Pounnata)[6].

(v) '*The Oxyrhynchus Papyri*, Part III' ಎಂಬ ಪ್ರಕಟಿತ ಗ್ರಂಥದಲ್ಲಿ ೪೧೩ನೆಯ ಸಂಖ್ಯೆಯದೆಂಬ ಒಂದು ವಲ್ಕಲೇಖದಲ್ಲಿ ಚಿಕ್ಕದೊಂದು ಗ್ರೀಕ್ ಭಾಷೆಯ ಪ್ರಹಸನವು ಲಿಖಿತವಾಗಿದೆ. ಇದರಲ್ಲಿ ಕಂಡುಬರುವ ಗ್ರೀಕೇತರವಾದ ಹಾಗೂ ಅಪರಿಚಿತ ವಾದ ಕೆಲವು ಶಬ್ದಗಳೂ ವಾಕ್ಯಗಳೂ ಬಹುಶಃ ಕನ್ನಡ ಭಾಷೆಯವಾಗಿರಬಹುದು.[7]

ಈ ಮೇಲ್ಕಂಡ ಭಾಷಿಕಸಾಕ್ಷ್ಯಗಳನ್ನು ಕೊಂಚಮಟ್ಟಿಗೆ ವಸ್ತುವಿವರಣೆಯೊಡನೆ ಇಲ್ಲಿ ವಿಮರ್ಶಿಸುವುದು ಸೂಕ್ತ.

(i) ಬ್ರಹ್ಮಗಿರಿ ಶಾಸನ ಸಾಕ್ಷ್ಯ: ಈ ಶಾಸನದಲ್ಲಿ 'ಇಸಿಲ' ಎಂಬ ಪದ ಪ್ರಯೋಗ ವಾಗಿದೆ. ಈ ಪದ 'ಎಸಿಲ್' ಎಂಬ ಕನ್ನಡ ಪದದ ಪ್ರಾಕೃತರೂಪವಾಗಿರಬೇಕು. ಹೀಗೆಂದು ಅಭಿಪ್ರಾಯಪಟ್ಟವರು ಡಿ. ಎಲ್. ನರಸಿಂಹಾಚಾರ್ಯರು. ಅವರು ತಮ್ಮ ಅಭಿಪ್ರಾಯವನ್ನು ವಿವರವಾಗಿಯೂ ಸಾಧಾರವಾಗಿಯೂ ಪ್ರತಿಪಾದಿಸಿ ಒಂದು ಲೇಖನ ವನ್ನು ಪ್ರಕಟಿಸಿದ್ದರೆ, ಈ ಸಾಕ್ಷ್ಯವನ್ನು ವಿಮರ್ಶಿಸಲು ಅವಕಾಶವಾಗುತ್ತಿತ್ತು. ಅವರು ಈ ಬಗೆಗೆ ತಮ್ಮ ನಿರ್ಣಯವನ್ನಷ್ಟೇ ಪ್ರಾಸ್ತಾವಿಕವಾಗಿ ಎರಡು ಸಂದರ್ಭಗಳಲ್ಲಿ ಹೇಳಿ ಮುಗಿಸಿದ್ದಾರೆ:

(ಅ) "ಬ್ರಹ್ಮಗಿರಿಯ ಶಾಸನದಲ್ಲಿ ಕಾಣುವ ಇಸಿಲ ಎಂಬ ನಗರದ ಹೆಸರು ಎಸಿಲ್ (ಕೋಟೆ, ಕೋಟೆಯಿಂದ ಬಳಸಿದ ಊರು) ಎಂಬ ಶಬ್ದದ ಪ್ರಾಕೃತರೂಪವೆಂದು ಹೇಳ ಬಹುದು; ಇದರಲ್ಲಿ ಕಾಣುವ ಸಕಾರ ಆ ಶಬ್ದ ಕನ್ನಡವಿರಬೇಕೆಂಬುದಕ್ಕೆ ಒಂದು ಆಧಾರವಾಗಿದೆ."[8]

(ಆ) It can be shown that the place name Isila occuring in the first line of the Brahmagiri edict of Asoka, where in his 'mahāmātas' resided, is a Prakritization of the Kannada word *esil* whose Tamil cognate is *eyil* meaning fort or fortified town; the name Eyilnādu (the land of forts and fortified towns) occurs in two Tamil inscriptions of the Kolar district of the Mysore State.[9]

ತೀ. ನಂ. ಶ್ರೀಕಂಠಯ್ಯನವರು ಪೂರ್ವೋಕ್ತ ವಿದ್ವಾಂಸರ ವಾದಸರಣಿಯನ್ನು ಬಹು ಮಟ್ಟಿಗೆ ಪೂರ್ತಿಯಾಗಿ ಒಪ್ಪಿರುವುದನ್ನು ಇಲ್ಲಿ ನೆನೆಯಬಹುದು.[10] ಈ ವಿಷಯದಲ್ಲಿ ಇದಕ್ಕಿಂತ ಹೆಚ್ಚೇನೂ ವಿಚಾರವಿಮರ್ಶೆಗಳು ನಡೆದಿರುವಂತೆ ತೋರುವುದಿಲ್ಲ. ಕ್ರಿ.ಪೂ. ೩ನೆಯ ಶತಮಾನದಲ್ಲಿ ಲಿಖಿತವಾದ ಅಶೋಕನ ಶಾಸನದೊಳಗಿನ ಈ 'ಇಸಿಲ' ಎಂಬ ಪದ 'ಎಸಿಲ್' ಎಂದಿದ್ದಿರಬಹುದಾದ ಕನ್ನಡ ಪದದ ಆರ್ಯೀಕೃತ ರೂಪವಾಗಿರಬೇಕು ಎಂಬುದು ಕನ್ನಡ ಭಾಷೆಯ ವಿದ್ವಜ್ಜನರಲ್ಲಿ ಈಗ ಬಹುಮಟ್ಟಿಗೆ ಅಂಗೀಕೃತವಾಗಿದೆ. ಸಂವಾದಿರೂಪ ದೊರೆಯುವ ತಮಿಳಿನಲ್ಲೇನೋ ಎಯಿಲ್‌ಗೆ ಶಾಸನಪ್ರಯೋಗಗಳಿವೆ; ನರಸಿಂಹಾಚಾರ್ಯರೇ ಅವನ್ನು ತೋರಿಸಿದ್ದಾರೆ. ಆದರೆ 'ಎಸಿಲ್'ಗೆ ಪ್ರಕಟಿತ ಶಾಸನ ಸಾಹಿತ್ಯದಲ್ಲಾಗಲಿ, ಉಪಲಬ್ಧ ಗ್ರಾಂಥಿಕ ಸಾಹಿತ್ಯದಲ್ಲಾಗಲಿ ಒಂದೇ ಒಂದು ಪ್ರಯೋಗವೂ ಕಾಣದಿರುವುದು ವಿಚಾರಣೀಯವಾಗಿದೆ. ಕನ್ನಡ ನಾಡಿನ ವೀರಜೀವನದ ಕೆಲವು ಘಟ್ಟಗಳಲ್ಲಾದರೂ ಈ ಶಬ್ದ ಶಾಸನಗಳಲ್ಲಿ ತಲೆದೋರಲಿಲ್ಲವೆಂಬುದು ಆಶ್ಚರ್ಯದ ವಿಷಯ. ಹೀಗಾಗಿ, ಈ ಶಬ್ದದ ಅಸ್ತಿತ್ವವನ್ನು ಯಾರಾದರೂ ಸಂಧೇಹಿಸಲು ಅವಕಾಶ ವಿದ್ದೇ ಇದೆ.

(ii) ಸಾತವಾಹನಕಾಲೀನ ಪುಲುಮಾಯಿ, ವಿಲಿವಾಯಕುರ ಶಬ್ದಗಳು: ಸಾತ ವಾಹನರ ಶಾಸನಗಳಲ್ಲಿ ಬರುವ ಈ ಕೆಲವು ಶಬ್ದಗಳು ಕನ್ನಡವೋ ತೆಲುಗೋ ಆಗಿರ ಬೇಕೆಂದು ಒಂದು ಊಹೆಯಿದೆ. ವಿನ್ಸೆಂಟ್ ಎ. ಸ್ಮಿತ್ ಅವರು 'ವಿಲಿವಾಯಕುರ' ಎಂಬ ಶಬ್ದ ಪ್ರಶಸ್ತಿಸೂಚಕವೇ ಅಂಕಿತನಾಮವೇ ಎಂಬ ಸಂದೇಹವನ್ನೆತ್ತುವಾಗ, ಆ ಶಬ್ದ ಪ್ರಾಯಶಃ ತೆಲುಗು ಅಥವಾ ಕನ್ನಡ ಭಾಷೆಗೆ ಸೇರಿರಬಹುದಾದ್ದು ಎಂದು ಪ್ರಾಸಂಗಿಕವಾಗಿ ಭಾವಿಸಿರುತ್ತಾರೆ.[11] ಇದು ಊಹೆ. ಸ್ಮಿತ್ತರ ಸಲಹೆಯ ಅಂಶ ವಿದ್ವಾಂಸರ ಪರಿಶೀಲನೆಗೆ ಅಷ್ಟು ಒಳಗಾಗಿರುವಂತೆ ತೋರುವುದಿಲ್ಲ. ಪ್ರಿಸ್‌ಲಸ್ಕಿ (Przyluski) ವಿಳಿವಯ = ಕುದುರೆ, ಮತ್ತು ಕುರ = ಪಟ್ಟಣ ಎಂಬರ್ಥದ ಆರ್ಯೇತರ ಪದವೆಂದು ತಿಳಿದರೆ[12], ಗೋವಿಂದ ಪೈ ಇಲ್ಲಿಯ ಕುರ ಎಂಬುದು ಕುಮಾರ ಎಂಬ ಸಂಸ್ಕೃತಪದದ ಪ್ರಾಕೃತರೂಪವೆಂದು (ಕುಮಾರ–ಕುಮರ–ಕುಂವರ–ಕುಂಅರ–ಕುಂರ–ಕುರ) ಎಂದು ತಿಳಿಯುತ್ತಾರೆ.[13] ಗೋಪಾಲಾಚಾರಿಯವರು ಪುಳುಮಾಯಿ ಎಂಬ ಪದ ಪುಳು ಮಾವಿ, ಪುಳುಮಾಈ ಎಂಬ ರೂಪಗಳಲ್ಲಿಯೂ ಉಚ್ಚರಿಸಲ್ಪಡುತ್ತದೆಯೆಂದೂ ವಿಳಿ ವಾಯಕುರ, ಅಡವಿ, ಎಹುವುಳ ಈ ಕೆಲವು ಶಬ್ದಗಳಂತೆ ದ್ರಾವಿಡಮೂಲದ್ದು ಎಂದು ತೋರುವುದೆಂದೂ ಭಾವಿಸಿದ್ದಾರೆ.[14] ಆದರೆ ಈ ಕೆಲವು ಶಬ್ದಗಳ ಅರ್ಥನಿಷ್ಪತ್ತಿಗಳು ಕನ್ನಡ ಭಾಷೆಯುವು ಎಂದು ಖಚಿತಪಡಿಸುವುದು ಸುಲಭವಲ್ಲ.

(iii) 'ಗಾಥಾ ಸಪ್ತಶತಿ'ಯ ಸಾಕ್ಷ್ಯ: ಭಾಷೆ ಸಾಹಿತ್ಯಗಳ ಪ್ರಾಚೀನತೆಗೆ ಈ ಭಾಷಿಕ ಸಾಕ್ಷ್ಯವನ್ನು ವಿಮರ್ಶಿಸಿದವರು ಗೋವಿಂದ ಪೈ ಅವರು. ಹಾಲನೆಂಬ ಸಾತವಾಹನ ರಾಜನ 'ಗಾಹಾ ಸತ್ತಸಈ' ('ಗಾಥಾ ಸಪ್ತಶತೀ') ಎಂಬ ಪ್ರಾಕೃತ ಭಾಷೆಯ ಪದ್ಯಸಂಕಲನದೊಳಗಿನ ಕೆಲವು ಶಬ್ದಗಳು ಇಲ್ಲಿ ವಿವೇಚನೆಯ ವಿಷಯ. ಈ

ರಾಜನು ಮೊದಲನೆಯ ಶತಮಾನದಲ್ಲಿದ್ದವನು (ಸು. ೨೦–೨೪) ಎಂಬುದು ಇತಿಹಾಸಕಾರರ ಮತ. ಪೈ ಅವರ ಪ್ರಕಾರ ಕ್ರಿ.ಪೂ. ೧ನೆಯ ಶತಮಾನ. ಈತನ ಪೂರ್ವೋಕ್ತ ಪ್ರಾಕೃತಗ್ರಂಥದಲ್ಲಿ ಅಲ್ಲಲ್ಲಿ ಸಂಸ್ಕೃತ ಪ್ರಾಕೃತೇತರ ಭಾಷೆಯ ಕೆಲವು ಶಬ್ದಗಳು (ದೇಶ್ಯ ಶಬ್ದಗಳು) ಕಂಡುಬಂದಿವೆಯೆಂದೂ ಅವನ್ನು ವಿಮರ್ಶಿಸಿದರೆ ಅವು ಕನ್ನಡ ಶಬ್ದಗಳೆಂದು ತಿಳಿಯುವುದೆಂದೂ ಅವರ ಅಭಿಪ್ರಾಯವಾಗಿದೆ. ಅವರು ಕನ್ನಡವೆಂದು ಭಾವಿಸಿರುವ ಶಬ್ದಗಳು ಹೀಗಿವೆ: ಅತ್ತಾ (ಸಂ. ಶ್ವಶ್ರೂ, ಕ. ಅತ್ತೆ), ತುಪ್ಪ (ಸಂ. ಘೃತ, ಕ. ತುಪ್ಪ), ಪೊಟ್ಟ (ಸಂ. ಉದರ, ಕ. ಪೊಟ್ಟೆ), ಫಲಹೀ (ಸಂ. ಕಾರ್ಪಾಸ, ಕ. ಪಚ್ಚಿ), ತೀರಇ (ಸಂ. ಶಕ್ಯ, ಕ. ತೀರ್).[15]

ಈ ಉದಾಹರಣೆಗಳ ಮೇಲಿಂದ ಅವರು ಹೀಗೆ ವಿಚಾರಮಾಡಿದ್ದಾರೆ : (i) "ಪೊಟ್ಟ ತುಪ್ಪ ಎಂಬೀ ಶಬ್ದಗಳು ನಾಮಪದಗಳೆಂಬುದರಿಂದ ಅವನ್ನು ಆ ಕಾಲದ ವಾಗ್ವ್ಯಾಪಾರದಲ್ಲಿ ವಾಡಿಕೆಯಾಗಿದ್ದ ಕನ್ನಡ ನುಡಿಯಿಂದ ಪ್ರಾಕೃತದಲ್ಲಿ ಆಯ್ದುಕೊಂಡಿರಬಹುದು...." (ii) "ಕನ್ನಡ ಧಾತುಗಳನ್ನು ಪ್ರಾಕೃತ ಕ್ರಿಯಾರೂಪಗಳಲ್ಲಿ ಪ್ರಯೋಗಿಸಿಯದೆ ಎಂದರೆ, ಅವು ಆ ಕಾಲಕ್ಕಿಂತ ಪೌರ್ವಿಕವಾದ (ಅಥವಾ ಹೆಚ್ಚಾದರೆ ಸಮಕಾಲೀನವಾದ ಕನ್ನಡ ಸಾಹಿತ್ಯದಿಂದಲೆ ಬಹುಶಃ ಕಾವ್ಯಸಾಹಿತ್ಯದಿಂದಲೆ) ಆಯ್ದುಕೊಂಡುವಾಗಿರಬೇಕೆಂದು ಊಹಿಸಲು ಆಕ್ಷೇಪವಿರದು". (iii) "ಯಾವುದಾದರೊಂದು ಭಾಷೆ ಇನ್ನೊಂದರಿಂದ ಕ್ರಿಯಾಪದಗಳನ್ನು ಕೊಳ್ಳುವುದಾದರೆ, ತನಗಿಂತ ಸಮೃದ್ಧತರವಾದ (ಅಲ್ಲವೆ ಕನಿಷ್ಠ ಪಕ್ಷಕ್ಕೆ ತನ್ನಷ್ಟೆ ಆದರೂ ಸಮೃದ್ಧವಿರುವ) ಭಾಷೆಯಿಂದಲ್ಲದೆ, ತನಗಿಂತ ಕಡಿಮೆಯಾಗಿರುವ ಭಾಷೆಯಿಂದ ಎಂದಿಗೂ ಅಲ್ಲ. ಆದರಲ್ಲಿಯೂ ಆರ್ಯಭಾಷೆಯೂ ರಾಜಪುರಸ್ಕೃತವೂ ಆಗಿದ್ದ ಆಗಣ ಪ್ರಾಕೃತವು, ಆಗ್ಗೆ ಕನ್ನಡವು ತನ್ನಷ್ಟೇ ಆದರೂ ಸಮೃದ್ಧವಾಗಿರದಿದ್ದರೆ, ಅದರಿಂದ ಕ್ರಿಯಾಪದಗಳನ್ನು ತಾನಾಂತುಕೊಂಡೀತೆಂದು ಬಗೆಯಲಳವಲ್ಲ. ಇಂತಹ ಸಮೃದ್ಧಿ ಎಂದರೇನು ? ಸಾಹಿತ್ಯವಿಸ್ತಾರವನ್ನು ಬಿಟ್ಟು ಭಾಷೆಗೆ ಬೇರೆ ಸಮೃದ್ಧಿಯುಂಟೇ ?"[16]

ಈ ವಿಚಾರಲಹರಿಯಿಂದ ಹೊರಟು ಪೈ ಅವರು ಈ ನಿರ್ಣಯದ ದಂಡೆಯನ್ನು ಸೇರುತ್ತಾರೆ : (i) "....ಗಾಥಾ ಸಪ್ತಶತಿ ರಚಿಸಲ್ಪಟ್ಟ ಕ್ರಿ.ಶ. ೧ನೆಯ–೨ನೆಯ ಶತಕಗಳ ಒಂದೆರಡು ಶತಮಾನಗಳ ಮುಂಚಿನಿಂದಲೆ, ಅಂದರೆ ಕ್ರಿಸ್ತಶಕವು ಉಪಕ್ರಮಿಸುವುದಕ್ಕೆ ಮುಂಚೆಯೇ, ಕನ್ನಡದಲ್ಲಿ ಕಾವ್ಯಸಾಹಿತ್ಯವು ಇದ್ದಿರಬೇಕೆಂದು ನಿರ್ಧರಿಸಬಹುದು."[17] (ii) ಹೀಗೆ ಕ್ರಿ.ಪೂ. ೧ನೆಯ ಶತಕದ ಈ ಪ್ರಾಕೃತಗ್ರಂಥದಲ್ಲಿ ಶುದ್ಧ ಕನ್ನಡವೆಂದು ಕಂಡಿತವಾಗಿ ಬಲ್ಲ ಈ ಕೆಲವೇ ಆದರೂ ಶಬ್ದಗಳು ದೊರೆವುದರಿಂದ ಆ ಹಿಂದಣ ಶತಮಾನದಲ್ಲೂ ಕನ್ನಡಭಾಷೆ ಬಳಕೆಯಲ್ಲಿ ಇದ್ದಿತೆಂದು ಸುಲಭವಾಗಿ ಸಿದ್ಧವಾಗುತ್ತದೆ. ಹಾಗಾದರೆ ಕನ್ನಡ ಭಾಷೆ ಆ ಕಾಲಕ್ಕೂ ಕೆಲವು ಶತಮಾನಗಳ ಹಿಂದಿನಿಂದಲೇ, ಅಂದರೆ ಹೆಚ್ಚಲ್ಲವಾದರೆ ಕನಿಷ್ಠಪಕ್ಷಕ್ಕೆ ಕ್ರಿ.ಪೂ. ೨ನೆಯ ಅಥವಾ ೩ನೆಯ ಶತಮಾನದಿಂದಲಾದರೂ ಅಸ್ತಿತ್ವದಲ್ಲಿ ಇದ್ದಿರಬೇಕೆಂದು ನಿಸ್ಸಂಶಯವಾಗಿ ನಿರ್ಧರಿಸಬಹುದು."[18]

ಇದನ್ನು ಪುನರ್ವಿಮರ್ಶಿಸಿದ ವಿಮರ್ಶಕರ ಎದುರುಮಾತು ಹೀಗಿದೆ: "ಸಂಸ್ಕೃತ ಪ್ರಾಕೃತ ಭಾಷೆಗಳಲ್ಲಿ ಸೇರಿಕೊಂಡ ಕನ್ನಡ ಮುಂತಾದ ದ್ರಾವಿಡ ವರ್ಗದ ಶಬ್ದಗಳು ಯಾವುವು, ಯಾವ ಕಾಲಕ್ಕೆ ಯಾವ ಪರಿಸ್ಥಿತಿಯಲ್ಲಿ ಸೇರಿದುವು, ಅವನ್ನು ನಿಶ್ಚಿತಗೊಳಿಸುವ ಕ್ರಮವೇನು ಎಂಬುದು ಜಟಿಲವಾದ ಪ್ರಶ್ನೆಯಾಗಿದೆ. ಅದಕ್ಕೆ ವ್ಯಾಸಂಗ ಹೆಚ್ಚಬೇಕು. ಅಲ್ಲಿಯವರೆಗೆ ಈ ಊಹೆ (ಪೈ ಅವರ ವಾದಸರಣಿಯ ಮೂರನೆಯ ಅಂಶಕ್ಕೆ ಅನ್ವಯಿಸಿ) ವಿಚಾರಣೀಯವೆನ್ನಬಹುದಾದರೂ ನಿರ್ಣಾಯಕವಾಗಲಾರದು. ಸಾಹಿತ್ಯಪದವಿಗೇರದ ವ್ಯವಹಾರ ಭಾಷೆಗಳಿಂದ ಸಾಹಿತ್ಯವುಳ್ಳ ಭಾಷೆಗಳು ನಾಮಪದಗಳನ್ನು ಮಾತ್ರ ಎರವಲಾಗಿ ತೆಗೆದುಕೊಳ್ಳುತ್ತವೆ, ಕ್ರಿಯಾಪದಗಳನ್ನಲ್ಲ ಎಂಬುದನ್ನು ಸರ್ವಂಕಷವಾದ ಅಭ್ಯಾಸದಿಂದ ಭಾಷಾಪಂಡಿತರು ಸಿದ್ಧಮಾಡುವವರೆಗೆ ಅದು ವಿವಾದ್ಯವೆಂದೇ ಹೇಳಬೇಕಾಗುತ್ತದೆ."[19]

ಪೈ ಅವರು ಹಾಲನ ಕಾಲ ಕ್ರಿ.ಪೂ. ೧ನೆಯ ಶತಮಾನ ಎಂದಿದ್ದರೆ, ಸಾಮಾನ್ಯವಾಗಿ ಚರಿತ್ರಕಾರರು ಕ್ರಿ.ಶ. ೧ನೆಯ ಶತಮಾನ ಎನ್ನುತ್ತಾರೆ. ಪೈ ಅವರ ಪಟ್ಟಿಯ ಪದಗಳು ಎಷ್ಟರಮಟ್ಟಿಗೆ ಕನ್ನಡದವು ಅಥವಾ ದ್ರಾವಿಡಸಾಮಾನ್ಯವಾದವು ಎನ್ನುವುದು ಕೂಡ ವಿಚಾರಣೀಯ. ಅತ್ತಾ, ತುಪ್ಪ, ಪೊಟ್ಟ, ಫಲಹಿ, ತೀರಇ ಈ ಎಲ್ಲ ಖಂಡಿತವಾಗಿ ಕನ್ನಡವೆಂದು ಅವರು ತೋರಿಸುವ ಶಬ್ದಗಳಿಗೂ ತಮಿಳು ತೆಲುಗು ಮೊದಲಾದ ಇತರ ದ್ರಾವಿಡಭಾಷೆಗಳಲ್ಲಿ ಸಂವಾದಿ ರೂಪಗಳು ದೊರೆಯುತ್ತವೆ. ಆದ್ದರಿಂದ ಆ ಶಬ್ದಗಳು ಯಾವಾಗ ಯಾವ ಭಾಷೆಯ ಮೂಲಕ ಪೂರ್ವೋಕ್ತ ಪ್ರಾಕೃತ ಗ್ರಂಥದೊಳಗೆ ಸೇರಿದವೆಂದು ನಾವು ಹೇಳುವ ಸ್ಥಿತಿಯಲ್ಲಿಲ್ಲ. ದ್ರಾವಿಡಭಾಷೆಗಳು ಇನ್ನೂ ಬಲಿತು ಒಡೆಯದ, ಒಂದೇ ಆಗಿದ್ದ ಯಾವುದೋ ಘಟ್ಟದಲ್ಲಿ ಅವು ಪ್ರಾಕೃತಭಾಷೆಯೊಳಕ್ಕೆ ಸೇರಿರುವುದು ಕೂಡ ಅಸಂಭವವಲ್ಲ.

(iv) ಟಾಲೆಮಿಯ ಭೂಗೋಳದಲ್ಲಿಯ ಉಲ್ಲೇಖಗಳು: ಈಜಿಪ್ಟ್ ದೇಶದ ಗ್ರೀಕ್ ಭೂಗೋಳ ಶಾಸ್ತ್ರಜ್ಞ ಟಾಲೆಮಿ (ಕ್ರಿ.ಶ. ಸು. ೧೫೦) ತನ್ನ ಭೂಗೋಳ ಗ್ರಂಥದಲ್ಲಿ ಭರತಖಂಡದ ನಾನಾ ಸ್ಥಳಗಳ ಸ್ಥಾನನಿರ್ದೇಶನಾದಿಯನ್ನು ಮಾಡಿದ್ದು, ಇವುಗಳಲ್ಲಿ ಕರ್ಣಾಟಕಕ್ಕೆ ಸಂಬಂಧಿಸಿದವೂ ಕೆಲವು ಬರುತ್ತವೆಂದು ಮೆಕ್ರಿಂಡಲ್ ಮುಂತಾದವರ ಸಮೀಕರಣಗಳಿಂದ ಸ್ಪಷ್ಟವಾಗಿತ್ತು.[20] ಇಂಥ ಹೆಸರುಗಳಲ್ಲಿ ಕೆಲವು ಅಚ್ಚಗನ್ನಡ ಶಬ್ದಗಳ ಗ್ರೀಕ್ ರೂಪಗಳೆಂದು ಈಚೆಗೆ ಗೋವಿಂದ ಪೈ ಮೊದಲಾದ ವಿದ್ವಾಂಸರ ಅಭಿಪ್ರಾಯವಾಗಿದೆ. ಈ ದಿಕ್ಕಿನಲ್ಲಿ ಗೋವಿಂದ ಪೈ ಅವರ ವಿಚಾರಗಳು ಗಮನಾರ್ಹವಾಗಿವೆ. ಈಜಿಪ್ಟಿನ ರೇವುಪಟ್ಟಣ ಅಲೆಕ್ಸಾಂಡ್ರಿಯದ ನಿವಾಸಿಯಾದ ಟಾಲೆಮಿ ತಾನು ಕಂಡ ಪ್ರವಾಸಿಗರನ್ನೂ ನಾವಿಕರನ್ನೂ ವಿಚಾರಿಸಿ ಅವರು ಕೊಟ್ಟ ಭಾರತ ಭೂಭಾಗದ ಸ್ಥಳ ವಿವರಗಳನ್ನು ಗ್ರೀಕಿನಲ್ಲಿ ಕೊಟ್ಟಿದ್ದಾನೆಂದೂ ಗ್ರೀಕ್ ಭಾಷಾವ್ಯಾಕರಣ ಮರ್ಯಾದೆಯನ್ನು ಹಿಡಿದು ಇಲ್ಲಿಯ ಸ್ಥಳಗಳು ಯಾವುವೆಂಬುದನ್ನು ಕಂಡುಹಿಡಿಯಬೇಕೆಂದೂ ಅವರು ಅಭಿಪ್ರಾಯಪಟ್ಟಿದ್ದಾರೆ. "ಪ್ತೊಲೆಮಿಯ ಗ್ರಂಥದಲ್ಲಿ ದಕ್ಷಿಣಾಪಥದ ಪಡುಗಡೆಯ

ಒಳದೇಶದಲ್ಲಿ ಆತನು Benda (ಅಥವಾ Binda) ಎಂದಿರುವ ಭೀಮಾನದಿಗೂ Banaouasci ಎಂದಿರುವ (ಈಗಣ ಉತ್ತರ ಕನ್ನಡ ಜಿಲ್ಲೆಯಲ್ಲಿರುವ) ಬನವಾಸಿಗೂ ನಡುವೆ ಈ ೧೦ ಊರುಗಳನ್ನು ಹೇಳಿದೆ—(1) Nagarouris (2) Tabaso (3) Inde (4) Tiripangalida (5) Hippokoura (6) Soubouttou ಅಥವಾ Sabatha (7) Sirimalaga (8) Kalligeris (9) Modogoulla (10) Petirgala''—ಎಂಬುದಾಗಿ ಭೀಮಾನದಿ ಬನವಾಸಿಗಳ ನಡುವೆ ಬರುವ ಈ ಸ್ಥಳಗಳನ್ನಾಯ್ದುಕೊಂಡು, ಇವು ಉತ್ತರ ಕರ್ಣಾಟಕದವು ಎಂದೂ ಆ ಶಬ್ದಗಳು ಅಚ್ಚಕನ್ನಡ ಅಥವಾ ಸಂಸ್ಕೃತದ ಅಪಭ್ರಂಶರೂಪಗಳಾಗಿರಬೇಕೆಂದೂ ಪೀಠಿಕೆಯಾಗಿ ಮೊದಲು ಹೇಳಿದ್ದಾರೆ; ಅನಂತರ ಅವುಗಳಿಗೆ ಕನ್ನಡ ನಾಡಿನ ಭೂಪಟದಲ್ಲಿ ಸ್ಥಾನನಿರ್ದೇಶನ ಮಾಡುವ ಹಾಗೂ ಕನ್ನಡದ ಶಬ್ದರೂಪಗಳನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಈ ಮೇಲಿನ ಹೆಸರುಗಳಿಗೆ ಕ್ರಮವಾಗಿ ಇಂದಿನ ಉತ್ತರ ಕರ್ಣಾಟಕದ ಸೀಮೆಯೊಳಗಿನ ನಾಗರೂರು ಅಥವಾ ನಾಗೂರು, ತಾವಸಿ, ಇಂಡಿ, (ಗಡ) ಹಿಂಗಲಜ, ಹೂವಿನ ಹಿಪ್ಪರಗಿ, ಸವಡಿ, ಚಿಮ್ಮಲಗಿ, ಕಲಕೇರಿ, ಮುದ್ಗಲ, ಹತ್ತಿರ್ಕಿಹಾಳ—ಎಂಬವು ಸದೃಶವಾದವು ಎಂದು ಅವರು ಗ್ರಹಿಸಿದ್ದಾರೆ.[21] ಹಿಪ್ಪೊಕೂರ ಎಂಬ ಹೆಸರಿನ ನ್ಯಾಯವಾದ ರೂಪ 'ಇಪ್ಪೊಕೂ(ಕು)ರ' ಎಂದಿರಬೇಕೆಂದೂ ಇದು ಕನ್ನಡ ನಾಡಿನ ಯಾವ ಊರನ್ನು ಹೇಳುವುದೋ ವಿಚಾರಣೀಯವೆಂದೂ ಪುನರಾಲೋಕನದಲ್ಲಿ ಒಂದು ಶಬ್ದಕ್ಕೆ ಮಾತ್ರ ತಿದ್ದುಪಡಿ ಸೂಚಿಸಿದ್ದಾರೆ.[22]

ಪೂರ್ವೋಕ್ತ ಸ್ಥಳನಾಮಗಳಲ್ಲಿ ಕನ್ನಡದ ಅಂಶಗಳೆಷ್ಟು ಎಂಬುದು ವಿಚಾರಣೀಯ. ಗೋವಿಂದ ಪೈ ಅವರೇ ಈಚೆಗೆ ಬರೆದ ಇನ್ನೊಂದು ಲೇಖನದಲ್ಲಿ ಆಯಂಶಗಳನ್ನು ಹೀಗೆ ತೋರಿಸಿದ್ದಾರೆ[23]: (i) ನಾಗರೂರಿಸ್: ನಾಗರ + ಊರು (ಕ. ಊರು) (ii) ಕಲ್ಲಿಗೇರಿಸ್: ಕಲ–ಕಲ್ (= ಕ. ಕಲ್ಲು) + ಕೇರಿ (ಉ. ಕ.ದಲ್ಲಿ ಕೆರೆ, ಕುಂಟೆ, ಕೊಳ್ಳ ಎಂದರ್ಥ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬೀದಿ ಎಂದರ್ಥ) = ಕಲಕೇರಿ, ಕಲ್ಕೇರಿ (iii) ಮೊಡೊಗುಲ್ಲ: ಮುದು + ಕಲ್ (= ಬಹಳ ಹಳೆಯ ಕಲ್ಲು; ನೋಡಿ: ಆನೆಕಲ್, ಸುರತ್ಕಲ್, ಬೆನಗ್ಗಲ್ ಇ. ಮತ್ತು ಹಳೆಯಂಗಡಿ, ಹಳನಾಡು) (iv) ಪೆತಿರ್ಗಲ: ಹತ್ತಿರಕಿ(ೀ)ಹಾಳ (ಹಳ್ಳ = ಝರಿ, ಹೊನಲು). "ಇವನ್ನೆಲ್ಲ ಪರಿಶೀಲಿಸುವಂದು ಪ್ತೊಲೆಮಿಯ ಗ್ರಂಥವು ರಚಿತವಾದ ಕ್ರಿ.ಶ. ೨ನೆಯ ಶತಮಾನದ ಮೊದಲಿಗಿಂತ ೧–೨ನೆಯ ಶತಮಾನಗಳಿಗಿಂತ ಹಿಂದಿನಿಂದಲೇ ಕನ್ನಡ ಭಾಷೆ ಇದ್ದಿರಬೇಕೆಂದು ಸಿದ್ಧವಾಗುತ್ತದೆ"—ಎಂಬುದಾಗಿ ಈ ಪರಿಶೀಲನೆಯ ಫಲಿತಾಂಶವನ್ನು ಅವರು ಸೂಚಿಸಿದ್ದಾರೆ.

ಬೇರೆ ವಿದ್ವಾಂಸರು ಬೇರೆ ಬೇರೆಯಾಗಿ ಸಮೀಕರಣಗಳನ್ನು ಮಾಡಿರುವುದುಂಟು. ಉದಾಹರಣೆಗೆ: (i) ನಾಗರೂರಿಸ್: ನಗರ (?), ಕಲ್ಲಿಗೇರಿಸ್: ಕೊಲ್ಲಗಿರಿ, ಕೊಲ್ಹಾಪುರ ಇತ್ಯಾದಿ.[24] (ii) ತಗರ (ತಾರ್ಕ್ಷ್ಯಪುರ ಅಥವಾ ತಗರಪುರ): ತೊರ್ಕೆ.[25] Pounnata, Modogoulla, Kalligeris ಈ ಶಬ್ದಗಳು ಕ್ರಮವಾಗಿ ಪುನ್ನಾಟ,

ಮುದುಗಲ್, ಕಲ್ಲಿಗೆಱೆ ಎಂಬ ಕನ್ನಡ ಹೆಸರುಗಳಾಗಿವೆಯೆಂದೂ ಬನವಾಸಿ ತದ್ಭವ ಶಬ್ದವಿರಬಹುದೆಂದೂ ಆದ್ದರಿಂದ ಕನ್ನಡ ನುಡಿ ಕ್ರಿ.ಶ. ಆದಿಭಾಗದಿಂದಲೂ ಇದ್ದಿತೆಂದು ಹೇಳಬಹುದೆಂದೂ ಡಿ. ಎಲ್. ನರಸಿಂಹಾಚಾರ್ ಭಾವಿಸಿದ್ದಾರೆ[26]; ಪುನಲ + ನಾಟ = ಪುನ್ನಾಟ (ಹೊಳೆ ಹೊನಲುಗಳ ನಾಡು) ಎಂಬ ನಿಷ್ಪತ್ತಿಯೂ ಅವರದೇ.[27] ಅಂತೂ ಟಾಲೆಮಿಯ ಭೂಗೋಳದ ಸಾಕ್ಷ್ಯಗಳನ್ನಾಧರಿಸಿ, ಕನ್ನಡ ಭಾಷೆ ಕ್ರಿ.ಶ. ೨ನೆಯ ಶತಮಾನದ ಮಧ್ಯಭಾಗದಿಂದ ಅಥವಾ ಅದರ ಸ್ವಲ್ಪ ಮೊದಲಿಂದ ಇದ್ದಿತೆಂದು ಕನ್ನಡ ನಾಡಿನ ವಿದ್ವಾಂಸರು ಅಭಿಪ್ರಾಯಪಡುವರೆಂದು ಹೇಳಬಹುದು.

(೫) ಗ್ರೀಕ್ ಪ್ರಹಸನದಲ್ಲಿ ಕನ್ನಡ ಮಾತುಗಳು : ೧೯ನೆಯ ಶತಮಾನದ ಕೊನೆಯ ಭಾಗದಲ್ಲಿ (೧೮೯೯) ಬಿಬ್ಲಿಕಲ್ ಆರ್ಕಿಯಲಾಜಿಕಲ್ ಅಸೋಸಿಯೇಷನ್ನಿನವರು ಈಜಿಪ್ಟಿನ ಆಕ್ಸಿರಿಂಕಸ್ (oxyrhynchus) ಎಂಬಲ್ಲಿ ಕೆಲವು ಪರಿಶೋಧನೆಗಳನ್ನು ನಡಸಿದಾಗ ಅವರಿಗೆ ಹಲವು ವಲ್ಕಲೇಖಗಳು ದೊರೆತವು. ಬರ್ನಾರ್ಡ್ ಪಿ. ಗ್ರೆನ್‌ಫೆಲ್ (Bernard P. Grenfell) ಮತ್ತು ಆರ್ಥರ್ ಎಸ್. ಹಂಟ್ (Arthur S. Hunt) ಅವರು ಹಲವರು ವಿದ್ವಾಂಸರ ನೆರವಿನಿಂದ ಆ ವಲ್ಕಲೇಖಗಳಲ್ಲಿ ೨ನೆಯ ಶತಮಾನಕ್ಕೆ ಸೇರಿದವನ್ನು ಸಂಪಾದಿಸಿ ಪ್ರಕಟಿಸಿದರು. ಅವುಗಳ ಇಂಗ್ಲಿಷ್ ಭಾಷಾಂತರಗಳನ್ನು ಕೊಟ್ಟು ಟಿಪ್ಪಣಿಗಳನ್ನು ಸೇರಿಸಿದರು. ಇದೇ 'The oxyrhynchus papyri, partIII' ಎಂಬ ಗ್ರಂಥ.[28] ಇಲ್ಲಿ ೪೧೩ನೆಯ ಸಂಖ್ಯೆಯ ವಲ್ಕಲೇಖದಲ್ಲಿ ಒಂದು ಚಿಕ್ಕ ಗ್ರೀಕ್ ಪ್ರಹಸನವಿದೆ. ಈ ಪ್ರಹಸನದಲ್ಲಿ ಗ್ರೀಕೇತರವಾದ ಯಾವುದೋ ಅಪರಿಚಿತ ಭಾಷೆಯ ಕೆಲವು ಸಂವಾದ ಭಾಗಗಳಿವೆ.

ಶಾಸನತಜ್ಞ ಹುಲ್ಷ್, ಈ ಬಗ್ಗೆ ತಾವು ತಾವು ಬರೆದ ಒಂದು ಲೇಖನದಲ್ಲಿ[29] ಗ್ರೀಕ್ ಪ್ರಹಸನದೊಳಗಿನ ಆ ಕೆಲವು ಅಪರಿಚಿತ ಭಾಷೆಯ ಶಬ್ದಗಳೂ ವಾಕ್ಯಗಳೂ ಕನ್ನಡದವೆಂದು ತಿಳಿದರು ; ಸಂದರ್ಭದ ಕಥಾಭೂಮಿಯನ್ನು ಭಾರತದ ಪಶ್ಚಿಮತೀರದಲ್ಲಿ ಕಾರವಾರ ಮಂಗಳೂರುಗಳ ನಡುವೆಯ ಯಾವುದೋ ಒಂದು ಬಂದರವಾಗಿರಬೇಕೆಂದು ಊಹಿಸಿದರು. ಈಜಿಪ್ಟಿನಲ್ಲಿ ನೆಲಸಿದ ಕನ್ನಡನಾಡಿನ ಪಶ್ಚಿಮತೀರವಾಸಿಯೊಬ್ಬನಿಂದಲೋ ಅಥವಾ ಭಾರತದಲ್ಲಿ ತಂಗಿದ್ದು ಇಲ್ಲಿಯ ದೇಶಭಾಷೆಯನ್ನು ಕಲಿತ ಯಾವನಾದರೊಬ್ಬ ಗ್ರೀಕ್ ವ್ಯಕ್ತಿಯಿಂದಲೋ ಪ್ರಹಸನಕಾರನು ಆ ಭಾಷೆಯನ್ನು ಕಲಿತನೆಂದು ಮುಂತಾಗಿ ಅವರು ವಾದಿಸಿದ್ದಾರೆ. ಆಫ್ರಿಕಾ ಭಾರತಗಳ ನಡುವೆ ಸಮುದ್ರವ್ಯಾಪಾರವಿದ್ದಿತೆಂಬುದಕ್ಕೆ ಆಧಾರಗಳನ್ನು ಅವರು ತೋರಿಸುತ್ತಾರೆ. ಅವರು ಪ್ರಹಸನದ ಗ್ರೀಕೇತರ ಪ್ರಯೋಗಗಳನ್ನು ಕನ್ನಡವಾಗಿ ಓದಿರುವ ರೀತಿ ಕಾಲೋಚಿತವಾಗಿಲ್ಲ. ಹಳಗನ್ನಡ ಮರ್ಯಾದೆಯ ಶಬ್ದರೂಪಗಳು ಅವರ ಲಕ್ಷ್ಯದಲ್ಲಿದ್ದರೂ ಆ ಎಚ್ಚರವನ್ನು ಅವರು ಎಲ್ಲಕಡೆಯೂ ಉಳಿಸಿಕೊಳ್ಳದೆ ಹೋದುದರಿಂದ ಅವರ ತೀರ್ಮಾನ ಸಂಶಯಗ್ರಸ್ತವಾಗುತ್ತದೆ. ಉದಾಹರಣೆಗೆ "ಬೇಱೆ ಕೊಂಚ ಮಧುಪಾತ್ರಕ್ಕೆ ಹಾಕಿ" (having poured a little wine into the cup seperately), "ಪಾನಮ್ ಬೇಱಿತ್ತಿ ಕಟ್ಟಿ

ಮಧುವಮ್ ಬೇಱಿತ್ತುವೆನು" (having taken up the cup seperately and having covered (it), I shall take wine seperately)—ಇಂಥ ಪುನರ್ರಚನೆಗಳನ್ನು ನೋಡಬಹುದು.

ಬಿ. ಎಲ್. ರೈಸ್ ಅವರು ಹುಲ್ಷ್ ಅವರ ಲೇಖನವನ್ನು ಬೇಗನೆ ತಮ್ಮ ಲಕ್ಷ್ಯಕ್ಕೆ ತಂದುಕೊಂಡು ಕಥಾಭೂಮಿ ಪಶ್ಚಿಮತೀರವಾಗಿದ್ದಲ್ಲಿ ಪ್ರಹಸನದೊಳಗಿನ ವಿದೇಶೀಯವಾದ ಮಾತುಗಳು ಕನ್ನಡವಾಗಿರುವುದು ಅಸಂಭವವೇನಲ್ಲವೆಂದೂ ಈ ವಿಷಯ ವಿಚಾರಣೀಯವಾಗಿದ್ದು ಅನಿರೀಕ್ಷಿತವಾದ ರೀತಿಯಲ್ಲಿ ಅತ್ಯಂತ ಪೂರ್ವಕಾಲಿಕವಾದ ಸಂದರ್ಭ ಸಂಗತಿಗಳೊಡನೆ ಮೈಸೂರಿನ ಭಾಷೆಯನ್ನು ಕೂಡಿಸತಕ್ಕದ್ದಾಗಿದೆಯೆಂದೂ ಭಾವಿಸಿದರು.[30] ಹೀಗೆಯೇ ಜಾರ್ಜ್ ಎ. ಗ್ರಿಯರ್‌ಸನ್ ಅವರು ಸ್ವಸಂಪಾದಿತವಾದ 'ಭಾರತೀಯ ಭಾಷಾ ಸರ್ವೇಕ್ಷಣ' ಗ್ರಂಥದಲ್ಲಿ ಕನ್ನಡ ಭಾಷೆ ಸಾಹಿತ್ಯಗಳ ಬಗೆಗೆ ಪ್ರಸ್ತಾಪಿಸುವಾಗ, ಹುಲ್ಷ್ ಅವರ ಪ್ರಕಾರ ಕನ್ನಡ ನುಡಿಯ ಅತ್ಯಂತ ಪ್ರಾಚೀನ ಉಲ್ಲೇಖಗಳು ಮೇಲಿನ ನಾಟಕದೊಳಗೆ ಸಿಕ್ಕತಕ್ಕವಾಗಿವೆ ಎಂದಿರುವುದು ಕಾಣುತ್ತದೆ.[31] ಸಿಲ್ವೆನ್‌ಲೆವಿ, ಭಾರತೀಯ ರಂಗಭೂಮಿಯ ಇತಿಹಾಸ ರಚನೆಯ ದೃಷ್ಟಿಯಿಂದ ಪ್ರಹಸನಕ್ಕೆ ಪ್ರಾಮುಖ್ಯವಿದೆಯೆಂದೂ ಆದ್ದರಿಂದ ಅದರ ವಿಶೇಷ ಅಧ್ಯಯನ ನಡೆಯತಕ್ಕದ್ದೆಂದೂ ಪ್ರಾಸಂಗಿಕವಾಗಿ ಸೂಚಿಸಿದರಲ್ಲದೆ ಭಾಷೆಯ ದೃಷ್ಟಿಯಿಂದ ಇಲ್ಲಿಯ ಕುತೂಹಲಕರ ಸಂಗತಿಯ ಬಗ್ಗೆ ಏನನ್ನೂ ಹೇಳಲಿಲ್ಲ.[32]

ಆರ್. ನರಸಿಂಹಾಚಾರ್ ಅವರು ಹುಲ್ಷ್ ಅವರ ಪ್ರಯತ್ನಗಳನ್ನು ಪರೋಕ್ಷವಾಗಿ ಒಪ್ಪಿಕೊಂಡು, ಪೂರ್ವೋಕ್ತ ಪ್ರಹಸನದಲ್ಲಿ ಕೆಲವು ಕನ್ನಡ ಮಾತುಗಳಿವೆಯೆಂದು ಭಾವಿಸಿದಂತೆ ತೋರುತ್ತದೆ. ಅವರು ಕವಿಚರಿತೆಯ ಪ್ರಥಮ ಸಂಪುಟಕ್ಕೆ ಬರೆದ ಉಪೋದ್ಘಾತದಲ್ಲಿ "ಕೆಳಗಣ ಈಜಿಪ್ಟಿನಲ್ಲಿಯ ಆಕ್ಸಿರಿಂಕಸ್ ಎಂಬ ಸ್ಥಳದಲ್ಲಿ ದೊರೆತ ಕ್ರಿ.ಶ. ಎರಡನೆಯ ಶತಮಾನದಲ್ಲಿ ರಚಿತವಾದ ಒಂದು ಗ್ರೀಕ್ ನಾಟಕದಲ್ಲಿ ಕೆಲವು ಕನ್ನಡ ಶಬ್ದಗಳು ದೊರೆಯುತ್ತವೆ" ಎಂದು ಹೇಳಿರುವುದನ್ನೆ[33] ದ್ವಿತೀಯ ಸಂಪುಟದ ಉಪೋದ್ಘಾತದಲ್ಲಿ ಕೂಡ ಬಹುಮಟ್ಟಿಗೆ ಪುನರಾವರ್ತಿಸಿದ್ದಾರೆ.[34] ಆದರೆ ತಾವು ಕನ್ನಡ ಭಾಷೆಯ ಇತಿಹಾಸ ಕುರಿತು ನೀಡಿದ ಇಂಗ್ಲಿಷ್ ಉಪನ್ಯಾಸಗಳಲ್ಲಿ ಪ್ರಹಸನದೊಳಗಿನ ಭಾರತೀಯ ಶಬ್ದಗಳು ಹುಲ್ಷ್ ಅವರ ಪ್ರಕಾರ ಕನ್ನಡವೆಂದು ಬರೆಯುವುದರ ಮೂಲಕ ಒಂದು ಬಗೆಯ ತಾಟಸ್ಥ್ಯವಹಿಸಿದ್ದಾರೆ.[35] ಇ. ಪಿ. ರೈಸ್ ಅವರು ಕೂಡ ಇದೇ ಬಗೆಯ ತಾಟಸ್ಥ್ಯವಹಿಸಿ, ಹುಲ್ಷರ ನಿರೂಪಣೆ ನಿಜವಾಗಿದ್ದರೆ ಇವೇ ಕನ್ನಡ ನುಡಿಯ ಅತ್ಯಂತ ಪ್ರಾಚೀನ ಕುರುಹುಗಳೆಂದಿದ್ದಾರೆ.[36] ಈಚೆಗೆ 'ಕನ್ನಡ ಕೈಪಿಡಿ'ಯ ಮೊದಲ ಸಂಪುಟದ ನಾಲ್ಕನೆಯ ಭಾಗವಾದ ಕನ್ನಡ ಭಾಷಾಚರಿತ್ರೆಯಲ್ಲಿಯೂ ಹೀಗೆಯೇ ಮಾಡಿದೆ.[37]

ಹೀಗೆ ಹುಲ್ಷ್, ರೈಸ್, ಗ್ರಿಯರ್‌ಸನ್, ನರಸಿಂಹಾಚಾರ್ ಮುಂತಾದ ವಿದ್ವಾಂಸರು ಪೂರ್ವೋಕ್ತ ಗ್ರೀಕ್ ಪ್ರಹಸನದ ಅಪರಿಚಿತ ಭಾಷೆಯ ಶಬ್ದಗಳೂ ವಾಕ್ಯಗಳೂ ಕನ್ನಡವಿರಬಹುದೆಂದು ಸ್ಥೂಲವಾಗಿ ಸೂಚನೆ ಸಲಹೆಗಳನ್ನು ನೀಡಿದ್ದು ಸಹಜವಾಗಿ ಈ ದಿಕ್ಕಿ

ನಲ್ಲಿ ವಿವರವಾದ ಅಧ್ಯಯನವನ್ನು ಕೈಕೊಳ್ಳಲು ಇತರ ವಿದ್ವಾಂಸರನ್ನು ಪ್ರೇರಿಸಿದಂತೆ ತೋರುತ್ತದೆ. ಇವರಲ್ಲಿ ಕೆಲವರ ಪ್ರಯತ್ನಗಳನ್ನು ಮುಂದೆ ಪರಿಶೀಲಿಸಬಹುದು.

ಆರ್. ಶಾಮಶಾಸ್ತ್ರಿಗಳು ೧೯೨೬ನೆಯ ವರ್ಷದ ಮೈಸೂರು ಪುರಾತತ್ತ್ವ ಇಲಾಖೆಯ ವರದಿಗಳಲ್ಲಿ ಮೊದಲ ಸಲ ಈ ಸಂಬಂಧವಾದ ವಿವರ ಪರಿಶೀಲನೆಯನ್ನು ಕೈಕೊಂಡಂತೆ ತೋರುತ್ತದೆ.[38] ಸೂಕ್ತವಾದ ಪೀಠಿಕೆಯೊಡನೆ, ಕಥಾಸಂದರ್ಭ ಸ್ಫುಟವಾಗುವ ಹಾಗೆ ಸಂವಾದಭಾಗದ ವಿದೇಶೀಯ ವಾಕ್ಯಗಳ ಕನ್ನಡರೂಪವನ್ನು ಅವರು ಶ್ರಮವಹಿಸಿ ರಚಿಸಿಕೊಟ್ಟಿದ್ದಾರೆ. ಅವರ ಪುನರ್ರಚನೆಗಳ ಭಾಷೆ ಇಲ್ಲಿ ಹಳಗನ್ನಡ ಅಲ್ಲಿ ಹೊಸಗನ್ನಡ ಎನ್ನುವಂತೆ ಆಗಿರುವುದು, ನಾಟಕದ ಕಥಾಸಂದರ್ಭ ಸಹಜವಾಗಿ ಸಮಂಜಸವಾಗಿ ಹೊಂದಿಕೊಂಡು ಒಡಮೂಡುತ್ತ ಹೋಗಿಲ್ಲದಿರುವುದು ನೋಡಿದರೆ ಅವರ ಶ್ರಮ ಸಾರ್ಥಕವಾಗಿಲ್ಲ ಎನ್ನಬೇಕಾಗುತ್ತದೆ. ಉದಾಹರಣೆಗೆ "ಹೋ ಬಿತ್ತು", "ಹೊಯ್ಸಿ ಕೊಳ್ ಮೋಸದೆ", "ಇದು ಒಪ್ಪಿತೆ" ಇಂಥ ವಾಕ್ಯಗಳು ಕ್ರಿ.ಶ. ೨ನೆಯ ಶತಮಾನದ ಕನ್ನಡಭಾಷೆಯಾಗಿರುವುದು ಸಾಧ್ಯವಿಲ್ಲ. ಮೀಣ (=ಸ್ನಾನ), ತೊಯಿಗೆ (=ತೊವ್ವೆ), ಪಗಡೆ (=ಪಗಡೆಯಾಟ), ಹಬ್ಬೆಡೆ (=ಹಬ್ಬದ ಎಡೆ) ಇಂತಹ ಬಿಡಿಶಬ್ದಗಳಾದರೂ ಅಷ್ಟೇ. ಎಷ್ಟೋ ಕಡೆ ಪದ ಮತ್ತು ವಾಕ್ಯರಚನೆಗಳು ಹೀಗೆ ಹಳಗನ್ನಡ ಭಾಷಾಮರ್ಯಾದೆಗೆ ಅನುಗುಣವಾಗಿಲ್ಲದಿರುವುದು ಮಾತ್ರವಲ್ಲದೆ ಕೃತಕವೂ ವಿಲಕ್ಷಣವೂ ಆಗಿರುವುದು ಕಾಣುತ್ತದೆ. ಮೂಲದೊಡನೆ ಈ ಪುನರ್ರಚನೆಗಳನ್ನು ಹೋಲಿಸಿದಾಗ ಅವು ಬಹುಮಟ್ಟಿಗೆ ಕಥಾಸಂದರ್ಭವು ಸುಸೂತ್ರವಾಗಿ ಹೊಂದಿಕೊಳ್ಳುವಂತೆ ಶ್ರಮವಹಿಸಿ ಪೂರೈಸಿದ ಚತುರ ಸಂಯೋಜನೆಯೆಂಬಂತೆ ಕಾಣುವುದು. ಉದಾಹರಣೆಗೆ : Trachountermana = "ದ್ರಾಕ್ಷವುಂ ತೆರಮಾನ" (Wine is the ransom).

ಶಾಮಶಾಸ್ತ್ರಿಗಳು ಮೈಸೂರು ಪುರಾತತ್ತ್ವ ಇಲಾಖೆಯ ವರದಿಗಳಲ್ಲಿ ಪ್ರಕಟಿಸಿದ ಲೇಖನದ ಪೂರ್ಣಪಾಠವೇ ಮರುವರ್ಷ (೧೯೨೭) ಪ್ರಬುದ್ಧ ಕರ್ಣಾಟಕದಲ್ಲಿ ಕೂಡ ಪುನರ್ಮುದ್ರಿತಗೊಂಡಿದ್ದು[39], ಪ್ರಾಯಃ ಸಂಪಾದಕೀಯವಾದೊಂದು ಆರಂಭದ ಕನ್ನಡ ಟಿಪ್ಪಣಿ ಇಲ್ಲಿ ಗಮನಿಸತಕ್ಕದ್ದಾಗಿದೆ. ಟಿಪ್ಪಣಿಯು ಮೊದಲಿಗೆ ಕವಿಚರಿತೆಕಾರರ ಅಭಿಪ್ರಾಯವನ್ನು ಉದ್ಧರಿಸಿ, ಶಾಸ್ತ್ರಿಗಳ ಪ್ರಯತ್ನವನ್ನು ಸೂಚಿಸಿ, ಕೊನೆಗೆ ಹೀಗೆ ಬರೆಯಲಾಗಿದೆ : "ಎರಡನೆಯ ಶತಮಾನದ ಕನ್ನಡದ ಸ್ವರೂಪವು ಹೇಗಿತ್ತೆಂಬುದನ್ನು ಯಾರೂ ನಿಷ್ಕೃಷ್ಟವಾಗಿ ಅರಿಯರು ; ಅದರಲ್ಲಿಯೂ ಜನಸಾಮಾನ್ಯದಲ್ಲಿ ಬಳಕೆಯಾಗಿದ್ದಿರಬಹುದಾದ ಅದರ ಸ್ವರೂಪವನ್ನು ಊಹಿಸುವುದು ಕಷ್ಟ. ಅಲ್ಲದೆ ಈ ನಾಟಕದ ವಿಷಯವು ದಕ್ಷಿಣ ಹಿಂದೂಸ್ಥಾನದ ಪಶ್ಚಿಮತೀರದಲ್ಲಿ ನಡೆದ ಸಂಗತಿಯಾಗಿದ್ದರೆ, ಅದರಲ್ಲಿ ಉಪಯುಕ್ತವಾಗಿರುವ ಅಜ್ಞಾತಭಾಷೆಯು ಕನ್ನಡ ಹೇಗೋ ಹಾಗೇ ಮಲೆಯಾಳವೋ ತುಳುವೋ ಕೊಂಕಣಿಯೋ ಮಹಾರಾಷ್ಟ್ರಿಯೋ ಆಗಿದ್ದರೂ ಆಗಿರಬಹುದು. ಆದ್ದರಿಂದ ಕನ್ನಡಿಗರು, ವಿಶೇಷವಾಗಿ ಪಶ್ಚಿಮ ತೀರದಲ್ಲಿರುವ ಕನ್ನಡಿಗರು, ಇದನ್ನು ವಿಮರ್ಶೆ ಮಾಡತಕ್ಕದ್ದಾಗಿದೆ. ನಾವು ಇದು ನಮ್ಮದೆಂದು ಹೇಳುವುದರ ಜೊತೆಗೆ ಇತರರು ಇದು

ನಮ್ಮದಲ್ಲವೆಂದು ಹೇಳಿದರೆ ನಮ್ಮ ಹಕ್ಕು ಇನ್ನೂ ದೃಢಪಡುವುದಿಲ್ಲವೇ ?"[40]

ಆರ್. ಶಾಮಶಾಸ್ತ್ರಿಗಳ ಪೂರ್ವೋಕ್ತ ವರದಿಯೊಳಗಿನ ಗ್ರೀಕ್ ಪ್ರಹಸನದ ಅನುವಾದ ಟಿಪ್ಪಣಿಗಳು ಪ್ರಕಟವಾದ ಸಮಯದಲ್ಲೇ ಎಲ್. ಡಿ. ಬಾರ್ನೆಟ್ ಈ ಸಂಬಂಧವಾಗಿ ತಮ್ಮ ಅಭಿಪ್ರಾಯವನ್ನೂ ಸ್ಪಷ್ಟಪಡಿಸಿದರು. ಅವರ ವಾದದ ಸಾರಾಂಶವನ್ನು ಸಾಲೆತೊರೆ ಹೀಗೆ ಸಂಗ್ರಹಿಸಿದ್ದಾರೆ : ಕ್ರಿ.ಶ. ೨ನೆಯ ಶತಮಾನದಲ್ಲಾಗಲಿ ಪ್ರಾಯಶಃ ಆ ಪೂರ್ವದಲ್ಲಾಗಲಿ, ಅಷ್ಟು ಪ್ರಾಚೀನಕಾಲದಲ್ಲಿ ಕನ್ನಡ ಭಾಷೆಯು ಇದ್ದುದು ನಮಗೆ ತಿಳಿದಿಲ್ಲ. ಹಳಗನ್ನಡದ ಅತ್ಯಂತ ಪ್ರಾಚೀನ ಗ್ರಂಥ ಎಂದರೆ ಕವೀಶ್ವರನ 'ಕವಿರಾಜಮಾರ್ಗ'. ಗ್ರೀಕ್ ಪ್ರಹಸನದಲ್ಲಿ ಕನ್ನಡದ್ದೆಂದು ಪುನರ್ರಚಿಸಿರುವ ವಾಕ್ಯಭಾಗಗಳ ಮೌಲ್ಯಮಾಪನಕ್ಕೆ ಈ ಕೆಲವು ಅಂಶಗಳನ್ನು ಗಮನಿಸಬೇಕಾಗುತ್ತದೆ : (i) ಅಪರಿಚಿತ ಭಾಷೆಯ ವಾಕ್ಯಭಾಗಗಳ ಕನ್ನಡ ಪುನರ್ರಚನೆ ಅತಿಪ್ರಾಚೀನ ಕನ್ನಡ ಮಹಾಕಾವ್ಯಗಳ ಭಾಷೆಯನ್ನು ಹೋಲುವಂತಿದ್ದರೆ, ತಾತ್ಕಾಲಿಕವಾಗಿ ಅದನ್ನು ಒಪ್ಪಬಹುದು ; ಅದು ನಡುಗನ್ನಡ ಅಥವಾ ಹೊಸಗನ್ನಡ ಕಾಲದ ಭಾಷಾವೈಲಕ್ಷಣ್ಯಗಳನ್ನು ತೋರಿಸುವಂತಿದ್ದರೆ, ಆಗ ಅದನ್ನು ನಾವು ತಿರಸ್ಕರಿಸಬೇಕು. (ii) ಅಂಥ ಪುನರ್ರಚನೆಯಿಂದ ಹೊರಡುವ ಅರ್ಥ ಸಮಂಜಸವಾದ ಆಶಯದಿಂದ ಕೂಡಿ ಸಹಜವಾಗಿರಬೇಕಲ್ಲದೆ, ಒತ್ತಾಯಪೂರ್ವಕವಾಗಿ ಹೊಂದಿಸಿದ್ದಾಗಿರಬಾರದು. (iii) ಪುನರ್ರಚನೆಯು ನಾಟಕದ ಪಾಠವನ್ನು ಮಿತಿಮೀರಿ ಬದಲಾಯಿಸುವುದಕ್ಕೆ ಅವಕಾಶಕೊಡಬಾರದು. ಈ ಅಂಶಗಳನ್ನು ಲಕ್ಷ್ಯದಲ್ಲಿಟ್ಟು ಕೊಂಡು ವಿಚಾರಮಾಡಿದರೆ, ಈ ಮೂರೂ ದೃಷ್ಟಿಗಳಿಂದ ಹುಲ್ಷರ ಪುನರ್ರಚನೆ ಅಸಮರ್ಥನೀಯವಾಗಿ ತೋರುತ್ತದೆ. ನಾಟಕದೊಳಗಿನ ಅಪರಿಚಿತ ಭಾಷಾಭಾಗಗಳು ಭಾರತೀಯವಾಗಿದ್ದರೂ, ಅದರ ಸರಿಯಾದ ಪುನರ್ರಚನೆ ಇನ್ನೂ ಆಗಬೇಕಾಗಿದೆ.[41]

ಹೀಗೆಯೇ ಹುಲ್ಷರ ಪ್ರಯತ್ನವನ್ನು ಗಮನಿಸಿದ ಎ. ಬಿ. ಕೀತ್, ಮುಖ್ಯವಾಗಿ ಗ್ರೀಕ್ ಪ್ರಹಸನಕರ್ತೃ ತನ್ನ ನಾಟಕದಲ್ಲಿ ತಾನು ಉದ್ದೇಶಿಸಿದ ಪ್ರೇಕ್ಷಕವರ್ಗಕ್ಕೆ ಏನೇನೂ ಅರ್ಥವಾಗದ ವಿದೇಶೀಯ ಮಾತುಗಳಿಂದ ಕಟ್ಟಿದ ಸಂವಾದಭಾಗಗಳನ್ನು ಹೆಣೆಯುವನೆಂಬುದು ಮೇಲುನೋಟಕ್ಕೆ ವಿಚಿತ್ರವೆಂದೂ ಈಜಿಪ್ಟಿಗೆ ಇಂಡಿಯ ಪರಿಚಿತವಿದ್ದರೂ ಪ್ರಹಸನವೊಂದರಲ್ಲಿ ಕನ್ನಡವನ್ನೋ ಸಂಸ್ಕೃತವನ್ನೋ ಬಳಸುವಮಟ್ಟಿಗೆ ಭಾಷಿಕ ತಿಳಿವಳಿಕೆ ಆ ದೇಶಗಳವರ ನಡುವೆ ಇದ್ದಿತೆಂದು ನಂಬಲು ಕಿಂಚಿತ್ತೂ ಆಧಾರವಿಲ್ಲವೆಂದೂ ಅಭಿಪ್ರಾಯಪಟ್ಟಿದ್ದಾರೆ. ಹೀಗೆ ಭಾವಿಸಿ ಹುಲ್ಷರ ಮತ್ತು ಆ ವಿದೇಶೀಯ ವಾಕ್ಯಗಳು ಸಂಸ್ಕೃತವಿರಬಹುದೇ ಎಂದು ಸಂದೇಹಿಸಿದ ಗ್ರಿಯರ್‌ಸನ್ನರ ವಾದಗಳನ್ನು ಪೂರ್ತಿ ತಳ್ಳಿಹಾಕಿದ್ದಾರೆ.[42]

ಬಾರ್ನೆಟ್, ಕೀತ್ ಇವರ ಹಾಗೆಯೇ ವಿಚಿಕಿತ್ಸ ಬುದ್ಧಿಯಿಂದ ಈ ಸಂಗತಿಯನ್ನು ಪರಿಶೀಲಿಸಿದ ಇನ್ನೊಬ್ಬ ವಿದ್ವಾಂಸರೆಂದರೆ ಮಿಥಿಕ್ ಸಂಸ್ಥೆಯ ಎಸ್. ಶ್ರೀಕಂಠಯ್ಯನವರು. ಇವರು ಆರ್. ಶಾಮಶಾಸ್ತ್ರಿಗಳು ಮಂಡಿಸಿದ ವಿಚಾರಗಳನ್ನು ಐತಿಹಾಸಿಕವಾಗಿ ಮತ್ತು ಭಾಷಿಕವಾಗಿ ವಿಮರ್ಶಿಸುತ್ತ, ಪ್ರಹಸನದ ಮಾತುಗಳು ಕನ್ನಡವಾಗಿ

ರುವ ಸಾಧ್ಯತೆಯನ್ನು ನಿರಾಕರಿಸಿದ್ದಾರೆ.[43] ಅವರು ಕೊಡುವ ಕಾರಣಗಳನ್ನು ಹೀಗೆ ಸಂಗ್ರಹಿಸಬಹುದು : (೧) ೭ನೆಯ ಶತಮಾನದ ಮೊದಲು ಕನ್ನಡದಲ್ಲಿ ಸಾಹಿತ್ಯವಿದ್ದುದಕ್ಕೆ ಕುರುಹುಗಳಿಲ್ಲ. (೨) ಪ್ರಹಸನದಲ್ಲಿ ಕನ್ನಡವೆಂದು ಗುರುತಿಸಲಾಗಿರುವ ಶಬ್ದಗಳು ಹೊಸಗನ್ನಡವೆಂಬಂತೆ ತೋರುವುವು. (೩) ಆ ಶಬ್ದಗಳನ್ನು ತಮಿಳು ಪದಗಳಂತೆಯೂ ಪುನರ್ರಚಿಸಿಕೊಡುವುದು ಸಾಧ್ಯವಿದೆ. (೪) ಗ್ರೀಕ್ ಪ್ರಹಸನವೊಂದರಲ್ಲಿ ದೂರಾಂತರ ಪ್ರದೇಶದ ಸಂಬಂಧವಿಲ್ಲದ ಭಾಷೆಯೊಂದರ ಬಳಕೆ ಹಾಗೆ ಆಗಿರುವುದು ಸಹಜವಲ್ಲ. (೫) ನಾಟಕದ ಭಾರತೀಯ ಪಾತ್ರಗಳು ಬಳಸುವ ಭಾಷೆಯು ವಿದೇಶೀಯವೆಂದಿಟ್ಟುಕೊಂಡರೆ ಕೆಲವು ಅಸಾಂಗತ್ಯಗಳು ತಲೆದೋರುತ್ತವೆ.

ಆರ್. ಶಾಮಶಾಸ್ತ್ರಿಗಳ ಮತ್ತು ಎಸ್. ಶ್ರೀಕಂಠಯ್ಯನವರ ಪ್ರತಿಪಾದನೆ ನಿರಾಕರಣೆಗಳ ವಾದಸರಣಿಗಳನ್ನು ಗಮನಿಸಿದರಾದರೂ, ಗೋವಿಂದ ಪೈ ಗ್ರೀಕ್‌ಮೂಲದಲ್ಲಿಯೇ ಪ್ರಹಸನವನ್ನು ಸ್ವತಂತ್ರವಾಗಿ ಅಭ್ಯಾಸಮಾಡಿ, ಅದರೊಳಗಿನ ವಿದೇಶೀಯ ಶಬ್ದಗಳೂ ವಾಕ್ಯಗಳೂ ಕನ್ನಡವೇದೇ ಸಾಧಿಸಿದ್ದು ಕುತೂಹಲಕರವಾಗಿದೆ.[44] ಮುಖ್ಯವಾಗಿ ಅವರು ಶಾಮಶಾಸ್ತ್ರಿಗಳ ಪ್ರತಿಪಾದನೆಯನ್ನು ವಿಮರ್ಶಿಸಿ, ತಮಗೆ ಸರಿಕಂಡಂತೆ ನಾಟಕದ ಸಂದರ್ಭರಚನೆಯನ್ನು ನಿರೂಪಿಸಿ ಶಬ್ದಾರ್ಥಗಳನ್ನು ವ್ಯಾಖ್ಯಾನಿಸಿದ್ದಾರೆ. ಇದು ಕೂಡ ಈ ಮೊದಲಿನವರ ಪ್ರಯತ್ನಗಳ ಹಾಗೆಯೇ ಶ್ರಮ ಶ್ರದ್ಧೆಗಳು ಕೂಡಿದ ವೈಯಕ್ತಿಕವಾದೊಂದು ಪುನರ್ರಚನೆಯ ಪ್ರಯತ್ನವೇ. ವಿದ್ವಾಂಸರಲ್ಲಿ ಕೆಲವರಿಗಾದರೂ ಆ ಪುನರ್ರಚನೆಗಳು ತೃಪ್ತಿಕರವಾಗಿವೆಯೆಂದು ಹೇಳುವ ಸ್ಥಿತಿಯಿಲ್ಲ. ಉದಾಹರಣೆಗೆ ಈ ಕೆಲವನ್ನು ನೋಡಬಹುದು: Laita Lianta lalle=ಐತಾ ಎಂತಾಳಲ್ಲೇ; alemaka=ಅಲ್ಲ, ಎಮ್ಮಕ್ಕ ; Arminthi=ಅರ್ ಮಿಂದಿ (ನೀನು ಹೊಳೆಯಲ್ಲಿ ಮಿಂದಿ;) Skalmakata bapteiragoumi=ಕಳ್ ಮಗ ತಾ, ಬಾ, ಒಪ್ಪು ತೆರಕಂ ಈ (ಕಳ್ಳನ್ನು ಮೊಗೆದು ತೆಕ್ಕೊಂಡು ಬಾ, ಎಲ್ಲರಿಗೂ ಒಪ್ಪಿಗೆಯಾಗುವ ರೀತಿಯಲ್ಲಿ ಹಂಚಿಕೊಡು); Trachounteramana=ದ್ರಾಕುಂ ತೀರ್ಮಾನ (the wine is finished); Malpiniakouroukou koubi Karakondu ba=ಮಲ್ಪಿನಾಯಕರುಕ್ಕು ಕೊಬಿ ಕರಕೊಂಡು ಬಾ. ಈ ಬಗೆಯ ಪುನರ್ರಚನೆಗಳು ಭಾಷೆ ಪ್ರಯೋಗಗಳ ದೃಷ್ಟಿಯಿಂದ ಕ್ರಿ.ಶ. ೨ನೆಯ ಶತಮಾನದ ಭಾಷೆ ಪ್ರಯೋಗಗಳನ್ನು ಖಂಡಿತವಾಗಿ ಪ್ರತಿಬಿಂಬಿಸಲಾರವೆಂದೇ ತೋರುತ್ತವೆ. ಶಾಮಶಾಸ್ತ್ರಿಗಳ ಪುನರ್ರಚನೆಗಳ ಭಾಷಿಕ ಅಸಾಮಂಜಸ್ಯಗಳನ್ನು ಎಸ್. ಶ್ರೀಕಂಠಯ್ಯನವರು ನಿಚ್ಚಟವಾಗಿ ಎತ್ತಿ ಟೀಕಿಸಿದ್ದನ್ನು ಗಮನಿಸಿಯೂ ಪೈಯವರು ಬಹುಮಟ್ಟಿಗೆ ಅದೇ ಬಗೆಯ ಟೀಕೆಗಳಿಗೆ ವಿಷಯವಾಗುವ ರೀತಿಯಲ್ಲಿ ಪ್ರಹಸನದ ಅಪರಿಚಿತ ಭಾಷಾಭಾಗಗಳನ್ನು ಕನ್ನಡವಾಗಿ ಪುನರ್ರಚಿಸಿರುವುದು ವಿಲಕ್ಷಣವಾಗಿ ತೋರುತ್ತದೆ. ಅಲ್ಲದೆ ಅವರೇ ಈಚೆಗೆ ಬರೆದ ಇನ್ನೊಂದು ಲೇಖನದಲ್ಲಿ[45] ತಮ್ಮ ಮೊದಲಿನ ನಿರೂಪಣೆಯದೇ ಸಾರಸಂಗ್ರಹವನ್ನು ಕೊಟ್ಟು ಪ್ರಹಸನದ ಮಾತುಗಳನ್ನು ಕನ್ನಡವೆಂದೇ ಸಾಧಿಸಿದ್ದಾರೆ. ಈ ಸಂಬಂಧವಾದ ತಮ್ಮ ನಿವೇದನೆಯನ್ನು ಇಲ್ಲಿ ಉಪ

ಸಂಹರಿಸುತ್ತ ಅವರು ಹೀಗೆಂದಿದ್ದಾರೆ: "ಈ ಪ್ರಹಸನದಲ್ಲಿ ನೃತ್ಯವಿದೆ, ಅದು ಇಲ್ಲಿಯ ನಮ್ಮ ತ್ರಣ ಹೆಂಗಸರ ನೃತ್ಯ. ನರ್ತನಕ್ಕೆ ಹಾಡುಗಳು ಬೇಕು. ಹಾಡುಗಳೆಂದರೆ ಕಾವ್ಯ ಸಾಹಿತ್ಯ. ಮೊತ್ತ ಮೊದಲಿನ ಕವಿತೆಗಳೆಲ್ಲ ಹೆಚ್ಚು ಕಡಿಮೆ ಎಲ್ಲವೂ ಭಾಷೆಗಳಲ್ಲಿ ಎಂಬಂತೆ, ಹಾಡುಗಳಾಗಿದ್ದುವು; ಹಾಡುಗಳನ್ನು ಬಿಟ್ಟು ಬೇರೆ ಕವಿತೆಗಳು ಇರಲಿಲ್ಲ. ಹಾಗಾದರೆ ಈ ಪ್ರಹಸನದ ಸು. ೭ನೆಯ ಶತಮಾನದ ಹಿಂದಿನಿಂದಲೇ ತಕ್ಕಮಟ್ಟಿನ ಕಾವ್ಯಗಳಲ್ಲವಾದರೆ ಕವಿತೆಗಳಾದರೂ ಇದ್ದಿರಬೇಕು ಎಂದು ನಿರ್ಣಯಿಸಬಹುದು."[46] ಊಹೆಯನ್ನು ಹೆಚ್ಚು ಮುಂದುಮಾಡಿ ಸಾಹಿತ್ಯದ ಪ್ರಾಚೀನತೆಯನ್ನು ಸ್ಥಾಪಿಸುವ ಒಂದು ಪ್ರಯತ್ನ ಇಲ್ಲಿ ನಡೆದಿರುವಂತೆ ಭಾಸವಾಗುತ್ತದೆ.

ಬಿ. ಎಂ. ಶ್ರೀಕಂಠಯ್ಯನವರು ಪ್ರಹಸನದಲ್ಲಿ ವಿಚಾರಣೀಯ ಭಾಗಗಳ ಭಾಷಿಕ ಸ್ವರೂಪವನ್ನು ಸ್ವತಃ ವಿಮರ್ಶಿಸದೆ "ಕೆಲವರು ಕ್ರಿ.ಪೂ.ದಲ್ಲಿಯೇ ಬನವಾಸಿಯಲ್ಲಿ ಪೂರ್ವದ ಹಳಗನ್ನಡವನ್ನು ಆಡುತ್ತಿದ್ದರೆಂದೂ ೨ನೆಯ ಶತಮಾನದ ಗ್ರೀಕ್ ನಾಟಕ ವೊಂದರಲ್ಲಿ ಕನ್ನಡ ವಾಕ್ಯಗಳು ಸಿಕ್ಕುತ್ತವೆಂದೂ ಹೇಳುತ್ತಾರೆ" ಎಂಬುದಾಗಿ ಮಾತ್ರ ಅಭಿಪ್ರಾಯಪಟ್ಟು ಒಂದು ಬಗೆಯಾಗಿ ತಾಟಸ್ಥ್ಯಪಕ್ಷವನ್ನು ವಹಿಸಿದ್ದಾರೆ.[47] ಆದರೆ ವಿವರವಾದ ವಿವೇಚನೆಗೆ ಈ ವಿಷಯವನ್ನು ಪೈ ಅವರ ಅನಂತರದಲ್ಲಿ ಎತ್ತಿಕೊಂಡವರು ಎಂದರೆ ಭಾಸ್ಕರ ಆನಂದ ಸಾಲೆತೊರೆ ಅವರು.[48] ಇವರು ಪ್ರಹಸನದ ಐತಿಹಾಸಿಕವಾದ ಅಂಶಗಳನ್ನು ಪುನರಾಲೋಕನಮಾಡಿ ಬೇರೊಂದು ಭಾಷಿಕ ಪುನರ್ರಚನೆಯನ್ನು ಕೊಟ್ಟಿದ್ದಾರೆ. ಇವರು ಆರಂಭದಿಂದ ಗೋವಿಂದ ಪೈಗಳವರೆಗೆ ಈ ವಿಷಯದಲ್ಲಿ ನಡೆದ ವಿಚಾರ ವಿಮರ್ಶೆಗಳನ್ನೆಲ್ಲ ಲಕ್ಷ್ಯಕ್ಕೆ ತಂದುಕೊಂಡು, ಪ್ರಹಸನದ ಘಟನೆ ನಡೆದ ಸ್ಥಳ ಪೈ ಅವರು ಭಾವಿಸುವಂತೆ ಉಡುಪಿಯ ಹತ್ತಿರದ ಉದ್ಯಾವರವಲ್ಲ, ಮಲ್ಪೆಯ ಸುತ್ತುಮುತ್ತು ಎಂದು ಸಾಧಿಸಿದ್ದಾರೆ. ಈ ಪ್ರಹಸನದ ಗ್ರೀಕೇತರ ಭಾಷೆಯ ಸ್ವರೂಪವನ್ನು ನಿರ್ಣಯಿಸುವಾಗ ಅನುಸರಿಸಬೇಕಾದ ತತ್ತ್ವಗಳು ಇಂಥವು ಎಂದು ಬಾರ್ನೆಟ್ ಸೂಚಿಸಿದ ಸಲಹೆಗಳೆಲ್ಲ ಒಪ್ಪತಕ್ಕವೇ ಎಂದು ತಾವೂ ಅನುಮೋದಿಸಿದ್ದಾರೆ; ಆದರೆ ತಾವೇ ಗ್ರೀಕೇತರ ಭಾಷೆಯ ಪುನರ್ರಚನೆಗಳನ್ನು ಮಾಡುವಾಗ ಆ ತತ್ತ್ವಗಳಲ್ಲಿ ಯಾವುದನ್ನೂ ಲಕ್ಷಿಸಿಲ್ಲ ಎಂಬುದು ವಿಚಾರಣೀಯವಾಗಿದೆ. ಹೀಗಾಗಿ ಹುಲ್ಷ್, ಶಾಮಶಾಸ್ತ್ರಿ, ಪೈಅವರ ಪುನರ್ರಚನೆಗಳ ಹಾಗೆಯೇ ಇವರು ಮಾಡಿರುವ ಪುನರ್ರಚನೆಗಳು ಕೂಡ ಹಲವು ಭಾಷಿಕ ಅಸಾಮಂಜಸ್ಯಗಳಿಂದ ತುಂಬಿವೆ. ಉದಾಹರಣೆಗೆ ಈ ಕೆಲವನ್ನು ನೋಡಬಹುದು: ಎಲೇ ತಾಳಿ ಅಂತಾಳ್ ಲಲ್ಲೆ=Lalle asks you to wait ? (is it not so ?); ಮೀಯೋಣೇ=Shall we take our bath ? ; ಭರ್ತಿ ಈಸು=Cause to be served in plenty ; ಇಷ್ಟು ಅವಗೆ ಪೊಯ್ಯೆ ಮೆಲ್ಲ ಕರಕೆ=Pour a little into his hand slowly ; ನೀಗಳ್ ಏಕೆ ಎದ್ರೊ=why did you get up ? ಹೀಗೆಯೇ ದೃಶ್ಯಮಾನವಾದ ಸಂದರ್ಭ ಅಸ್ಪಷ್ಟತೆಯಿಂದ ಗೋಜಾಗಿರುವುದೂ ನಡುನಡುವೆ ಪಾಠಗಳ ತಿದ್ದುಪಾಟುಗಳು ಹೊಕ್ಕಿರುವುದೂ ಇಲ್ಲಿಯ ಇತರ ದೌರ್ಬಲ್ಯಗಳು.

ಕರ್ಣಾಟಕ ಇತಿಹಾಸದ ಮೂಲಾಧಾರಗಳಲ್ಲಿ ಒಂದಾಗಿ ಈ ಪ್ರಹಸನದ ಇಂಗ್ಲಿಷ್ ಅನುವಾದವನ್ನೂ ಮೈಸೂರು ಪುರಾತತ್ತ್ವ ಇಲಾಖೆಯ ವರದಿಯಲ್ಲಿ (೧೯೨೭) ಬಂದಿರುವಂತೆ ವಿದೇಶೀಯವೆನ್ನಲಾದ ವಾಕ್ಯಗಳ ಕನ್ನಡ ರೂಪವನ್ನೂ ಎಸ್. ಶ್ರೀಕಂಠಶಾಸ್ತ್ರಿಯವರು ತಮ್ಮ ಒಂದು ಪುಸ್ತಕದಲ್ಲಿ ಪ್ರಕಟಿಸಿದ್ದಾರೆ.[49] ಆದರೆ ಆ ಪುಸ್ತಕದ ಉಪೋದ್ಘಾತದಲ್ಲಿ ಈ ಬಗ್ಗೆ ಬರೆಯುತ್ತ ಪಶ್ಚಿಮತೀರದ ಮಲ್ಪಿ ಬಂದರದಲ್ಲಿ ಆಡುತ್ತಿದ್ದಂಥ ಕನ್ನಡವೆಂದು ಗುರುತಿಸಿರುವ ಆ ಕೆಲವು ಮಾತುಗಳು ಕನ್ನಡ ಭಾಷೆಯ ಕ್ರಮಿಕವಿಕಾಸದ ಲಕ್ಷಣಗಳಿಗೆ ಹೊಂದುವಂತಿಲ್ಲ, ಆದ್ದರಿಂದ ಅವರೆಗಿನ ಪುನರ್ರಚನೆಯ ಪ್ರಯತ್ನಗಳನ್ನು ನಿಷ್ಫಲವೆಂದು ತಿಳಿಯಬೇಕಾಗಿದೆ ಎಂಬ ಅರ್ಥದಲ್ಲಿ ತಮ್ಮ ಅಭಿಪ್ರಾಯವನ್ನು ನೀಡಿದ್ದಾರೆ.[50] ಹೀಗೆಯೇ ಇನ್ನೊಬ್ಬ ವಿದ್ವಾಂಸರು, ಎ. ಎನ್. ನರಸಿಂಹಯ್ಯನವರು, ಶಾಮಶಾಸ್ತ್ರಿಗಳು ಗ್ರೀಕ್ ಪ್ರಹಸನದ ಮಾತುಗಳು ಕನ್ನಡವೆಂದು ತೋರಿಸಲು ಪ್ರಯತ್ನಿಸಿದ್ದರೂ ಅವು ಹಳಗನ್ನಡದ ಮಾತುಗಳೆಂದು ಒಪ್ಪುವಂತೆ ಮಾಡುವುದರಲ್ಲಿ ಕೃತಕೃತ್ಯರಾಗಿಲ್ಲ ಎಂದು ಹೇಳಿದ್ದಾರೆ.[51] ರಂ. ಶ್ರೀ. ಮುಗಳಿಯವರು ಈ ವಿಷಯದಲ್ಲಿರುವ ಮತಭೇದವನ್ನು ಎರಡು ಸಂದರ್ಭಗಳಲ್ಲಿ ಸೂಚಿಸಿದ್ದಾರೆ; ತಮ್ಮ ಮಟ್ಟಿಗೆ ಅವರು ತಾಟಸ್ಥ್ಯ ಪಕ್ಷ ಹಿಡಿದಿದ್ದಾರೆ.[52] ಕೆ. ಎ. ನೀಲಕಂಠಶಾಸ್ತ್ರಿಗಳು ಪ್ರಾಸಂಗಿಕವಾಗಿ ಈ ಬಗ್ಗೆ ಬರೆಯುವಾಗ, ಅಷ್ಟು ಪ್ರಾಚೀನಕಾಲದಲ್ಲಿಯೇ ಒಂದು ಪ್ರತ್ಯೇಕ ಭಾಷೆಯಾಗಿ ಕನ್ನಡ ಅಭಿವೃದ್ಧಿ ಹೊಂದಿತ್ತೇ ಎನ್ನುವುದು ಸಂದೇಹಕರವೆಂದೂ ಕನ್ನಡವೆನ್ನಲಾದ ಶಬ್ದಗಳಲ್ಲಿ ಭಾಗಶಃ ಶಬ್ದಗಳಾದರೂ ವಿದೇಶೀಯ ಭಾಷೆಯೆಂದು ಭಾವನೆಯುಂಟಾಗುವಂತೆ ಮಾಡಲು ಉದ್ದೇಶಪೂರ್ವಕವಾಗಿ ಕೆಡಿಸಿರುವ ಗ್ರೀಕ್ ಶಬ್ದಗಳಾಗಿವೆ ಎಂಬ ಸೂಚನೆಯಿದೆಯೆಂದೂ ಬರೆದಿದ್ದಾರೆ; ಅಲ್ಲದೆ ಇಲ್ಲಿಂದ ಮುಂದೆ ವಿಚಾರಮಾಡಲು ಈ ಸಮಸ್ಯೆ ಬಹುತೊಡಕಿನದಾಗಿದೆಯೆಂದು ಅವರು ಭಾವಿಸಿದ್ದಾರೆ.[53]

ಈ ವಿಷಯವಾಗಿ ವ್ಯಕ್ತವಾಗಿರುವ ಈಚಿನ ಅಭಿಪ್ರಾಯ ತೀ. ನಂ. ಶ್ರೀಕಂಠಯ್ಯನವರದು. ಅವರು ಕರ್ಣಾಟಕದ ಭಾಷೆಗಳ ಪರಿಚಯ ಮಾಡಿಕೊಡುವ ತಮ್ಮ ಒಂದು ಲೇಖನದಲ್ಲಿ[54] ಪ್ರಾಸಂಗಿಕವಾಗಿ ಈ ಬಗ್ಗೆ ತಮ್ಮ ಅಭಿಪ್ರಾಯವನ್ನು ಹೀಗೆ ತಿಳಿಸಿದ್ದಾರೆ: "ಪೂರ್ವೋಕ್ತ ಗ್ರೀಕ್ ಪ್ರಹಸನದೊಳಗಿನ ಭಾರತೀಯ ಪಾತ್ರಗಳು ಆಡುವ ಕೆಲವು ವಾಕ್ಯಗಳನ್ನು ಶಾಸನತಜ್ಞ ಹುಲ್ಷ್ ಕನ್ನಡ ಭಾಷೆಯವಾಗಿ ಓದತೊಡಗಿದಂದಿನಿಂದ (೧೯೦೪) ವಿದ್ವಾಂಸರ ಕುತೂಹಲಕೆರಳಿ ಕನ್ನಡ ವಾಕ್ಯಗಳಾಗಿ ಅವನ್ನು ಪುನರ್ರಚಿಸುವ ಪ್ರಯತ್ನಗಳು ನಡೆದುವು. ಗೋವಿಂದ ಪೈ ಈ ಬಗ್ಗೆ ಅಮೂಲ್ಯವಾದ ಅಭ್ಯಾಸವನ್ನು ಕೈಕೊಂಡರು; ಆದರೆ ಅವರ ತೀರ್ಮಾನಗಳನ್ನು ಒಪ್ಪಿಕೊಳ್ಳಲು ತೀವ್ರವಾದ ತೊಡಕುಗಳಿವೆ; ದುರದೃಷ್ಟವಶಾತ್ ಈ ಸಂಬಂಧವಾದ ವಾದವನ್ನು ಇಲ್ಲಿ ಮಂಡಿಸಲು ಅವಕಾಶವಿಲ್ಲ. ಎಲ್. ಡಿ. ಬಾರ್ನೆಟ್ ಅವರು ಅಪರಿಚಿತ ಭಾಷೆಯಲ್ಲಿರುವ ಪ್ರಹಸನದ ಭಾಗಗಳ ಪುನರ್ರಚನೆ ಕನ್ನಡದ ಅತ್ಯಂತ ಪ್ರಾಚೀನರೂಪವನ್ನು ತೋರಿಸುವಂತಿರಬೇಕು; ಅವುಗಳ ಸಾಂದರ್ಭಿಕ ನಿರೂಪಣೆ ಸ್ವಾಭಾವಿಕವಾದ ಅರ್ಥವನ್ನು—ಸಹಜವಾಗಿಯೇ,

ಒತ್ತಾಯದಿಂದ ಹೊರಡಿಸುವ ಹಾಗೆ ಅಲ್ಲ—ಕೊಡುವಂತಿರಬೇಕು ಎಂಬುದಾಗಿ ಅಭಿಪ್ರಾಯಪಟ್ಟಿರುವುದು ಅತ್ಯಂತ ಸಮರ್ಪಕವಾಗಿದೆ. ಬಾರ್ನೆಟ್ ಅವರು ತಮ್ಮದೇ ಆದ ಅಂತಿಮ ತೀರ್ಮಾನವನ್ನು ಈ ರೀತಿ ಕೊಟ್ಟಿದ್ದಾರೆ. 'ಈ ಭಾಗಗಳು ಕನ್ನಡ ಭಾಷೆಯವು ಎನ್ನುವುದೇ ತುಂಬ ಸಂದಿಗ್ಧವಾದ ವಿಷಯ; ಒಬ್ಬರ ವಿವರಣೆಗೂ ಇನ್ನೊಬ್ಬರ ವಿವರಣೆಗೂ ತುಂಬ ವ್ಯತ್ಯಾಸ ಕಾಣುತ್ತದೆ; ಆ ವಿವರಣೆಯನ್ನು ಕೊಟ್ಟವರಿಗೆ ಹೊರತು ಇತರರಿಗೆ ಅದು ಸ್ವಲ್ಪವೂ ತೃಪ್ತಿಕರವಾಗಿ ತೋರುವುದಿಲ್ಲ' ಇಲ್ಲಿಗೆ ಈ ವಿಷಯ ಸದ್ಯಕ್ಕೆ ವಿರಮಿಸುತ್ತದೆ. ಈ ಭಾಷೆ ನೈಜವೂ ಭಾರತೀಯವೂ ಆಗಿದ್ದ ಪಕ್ಷದಲ್ಲಿ ಅದು ಪ್ರಾಚೀನ ತುಳುವಾಗಿರುವ ಸಾಧ್ಯತೆ ಹೆಚ್ಚು ಎಂದು ತೋರುತ್ತದೆ."

ಈ ಪರಿಶೀಲನೆಯ ಫಲಿತಾಂಶವನ್ನು ಇಲ್ಲಿ ಹೀಗೆ ಸಂಗ್ರಹಿಸಬಹುದು : ಆಕ್ಸಿರಿಂಕಸ್ ವಲ್ಕಲೇಖಗಳಲ್ಲಿ ೩ನೆಯ ಭಾಗದ ೪೧೩ನೆಯ ಲೇಖವು ಒಂದು ಚಿಕ್ಕ ಗ್ರೀಕ್ ಪ್ರಹಸನವನ್ನು ಒಳಕೊಂಡಿದೆ. ಇದರ ಕೆಲವು ಭಾಗಗಳು ಅಪರಿಚಿತವಾದ ಒಂದು ವಿದೇಶೀಯ ಭಾಷೆಯಲ್ಲಿರುವಂತೆ ತೋರುತ್ತವೆ. ಆ ಭಾಗಗಳ ಭಾಷೆ ಕನ್ನಡವೆಂದು ಮೊದಲು ಹುಲ್ಷ್ ಅಭಿಪ್ರಾಯಪಟ್ಟರು. ಬಿ. ಎಲ್. ರೈಸ್ ಅದರ ಸಂಭಾವ್ಯತೆಯನ್ನು ಒಪ್ಪಿದರು. ಇದು ಕೊಟ್ಟ ಪ್ರಚೋದನೆಯಿಂದಾಗಿ ಗ್ರಿಯರ್ಸನ್, ಆರ್. ನರಸಿಂಹಾಚಾರ್, ಇ. ಪಿ. ರೈಸ್ ಮುಂತಾದವರು ವಿಶೇಷವಾಗಿ ವಿಚಾರ ವಿಮರ್ಶೆಗೆ ಹೋಗದೆ ಹುಲ್ಷರ ಅಭಿಪ್ರಾಯವನ್ನು ಉದ್ಧರಿಸುತ್ತ ಬಂದರು. ಪ್ರಹಸನದೊಳಗಿನ ಅಪರಿಚಿತ ಭಾಷೆಯ ಮಾತುಗಳು ಕನ್ನಡವೆಂಬ ಹುಲ್ಷರ ಗ್ರಹಿಕೆ ಸರಿಯಾಗಿದ್ದಲ್ಲಿ, ಅವೇ ಕನ್ನಡ ಭಾಷೆಯ ಪ್ರಾಚೀನತಮ ಉಲ್ಲೇಖಗಳೆಂದು ತಂತಮ್ಮ ಗ್ರಂಥಗಳಲ್ಲಿ ಸಂದರ್ಭ ಬಂದಾಗ ದಾಖಲಿಸುತ್ತ ಬಂದರು. ಇಂಥ ಒಂದು ಘಟ್ಟದಲ್ಲಿ ಎಲ್. ಡಿ. ಸ್ವಾಮಿಕಣ್ಣು ಪಿಳ್ಳೆ ಅವರು ಕನ್ನಡ ತಮಿಳಿನ ಹಿರಿಯಕ್ಕನಿರಬಹುದು ಎಂಬುದಾಗಿ ಸಲಹೆಮಾಡಿದ ಹಾಗೆ ಕೂಡ ವರದಿಯಾಗಿದೆ.[೫೫] ಆರ್. ಶಾಮಶಾಸ್ತ್ರಿಗಳು ಸಹಜವಾಗಿಯೇ ಉತ್ಸಾಹಗೊಂಡು, ಹೆಚ್ಚು ಶ್ರಮವಹಿಸಿ, ಪ್ರಹಸನದ ಸಂವಾದ ಭಾಗಗಳನ್ನು ಪೂರ್ತಿಯಾಗಿ ಅಭ್ಯಾಸ ಮಾಡಿ, ಹುಲ್ಷರ ಪಾಠಗಳಿಂದ ಅಲ್ಲಲ್ಲಿ ಬೇರೆಯಾದ ಪಾಠಗಳನ್ನು ಸೂಚಿಸಿದರು; ಪ್ರಹಸನದ ಅಪರಿಚಿತ ಭಾಷಾಭಾಗಗಳು ಕನ್ನಡವೆಂಬ ಅವರ ಅಭಿಪ್ರಾಯವನ್ನೇ ತಾವೂ ಎತ್ತಿ ಹಿಡಿದರು.

ಈ ಘಟ್ಟದಲ್ಲಿ ಕೆಲವರು ವಿದ್ವಾಂಸರು ಈ ವಿಷಯದಲ್ಲಿ ಹೆಚ್ಚಿನ ಎಚ್ಚರಿಕೆ ಅವಶ್ಯವೆಂದು ತಿಳಿದು ಹೊಸದಾಗಿ ವಿಚಾರ ವಿಮರ್ಶೆಗಳಿಗೆ ತೊಡಗಿದರು. ಎಲ್. ಡಿ. ಬಾರ್ನೆಟ್ ಮತ್ತು ಎ. ಬಿ. ಕೀತ್ ಪ್ರಾಯಃ ಮೊದಲ ಸಲ ಹುಲ್ಷ್, ಗ್ರಿಯರ್‌ಸನ್ (ಮತ್ತು ಶಾಮಶಾಸ್ತ್ರಿಗಳ) ಗ್ರಹಿಕೆಗಳನ್ನು ಸಕಾರಣವಾಗಿ ನಿರಾಕರಿಸಿದರೆಂದು ತೋರುತ್ತದೆ. ಎಸ್. ಶ್ರೀಕಂಠಯ್ಯನವರೂ ಶಾಮಶಾಸ್ತ್ರಿಗಳ ಸೂಚನೆಗಳು ತೃಪ್ತಿಕರವಲ್ಲ, ಅವೇ ಅಂತಿಮವಲ್ಲ ಎಂದು ವಾದಿಸಿದರು. ಈಗ ಗೋವಿಂದ ಪೈ ಗ್ರೀಕ್ ಮೂಲದಲ್ಲಿಯೇ ಪ್ರಹಸನವನ್ನು ವಿವರವಾಗಿ ಅಭ್ಯಾಸ ಮಾಡಿ ನಾಟಕದ ಕಥಾಭೂಮಿ, ಸಂದರ್ಭ ಮೊದ

ಲಾದವನ್ನು ತಮಗೆ ತೃಪ್ತಿಕರವೆಂದು ತೋರಿದ ರೀತಿಯಲ್ಲಿ ವಿಶದಪಡಿಸಿದರು. ಪ್ರಹಸನದಲ್ಲಿ ಕನ್ನಡ ಮಾತುಗಳಿವೆಯೆಂದು ಸಾಧಿಸಿದ್ದಲ್ಲದೆ ಬೇರೊಂದು ಪುನರ್ರಚನೆಯನ್ನು ಕೊಟ್ಟರು. ಮುಂದೆ ಸಾಲೆತೊರೆ ನಾಟಕದ ಸನ್ನಿವೇಶ ಕಥಾಭೂಮಿಗಳಿಗೆ ಸಂಬಂಧಪಟ್ಟಂತೆ ಹೊಸ ಸಲಹೆಗಳನ್ನು ಮಂಡಿಸಿದರು, ಕನ್ನಡವೆನ್ನಲಾದ ಮಾತುಗಳ ಹೊಸ ಪುನರ್ರಚನೆಯನ್ನು ಮಾಡಿದರು; ಅಷ್ಟು ಹಿಂದಿನ ಕಾಲದಲ್ಲಿ ಕೂಡ ಕನ್ನಡವಿದ್ದಿರುವುದು ಸಾಧ್ಯ ಎಂದು ವಾದಿಸಿದರು.

ಇಲ್ಲಿಂದೀಚೆಗೆ ವಿದ್ವಾಂಸರು ಬಾರ್ನೆಟ್ ಮುಂತಾದವರ ಪ್ರತಿಭಟನೆಯನ್ನು ಗಮನಕ್ಕೆ ತಂದುಕೊಂಡು ಪೂರ್ವೋಕ್ತ ಗ್ರೀಕ್ ಪ್ರಹಸನದಲ್ಲಿ ಕನ್ನಡದ್ದು ಎಂದು ಹುಲ್ಷ್ ಮೊದಲಾದವರು ಗುರುತಿಸಿರುವ ಮಾತುಗಳು ಕನ್ನಡದ್ದಾಗಿರುವ ಸಾಧ್ಯತೆಯಿಲ್ಲ, ಅವರ ಪುನರ್ರಚನೆಗಳು ಅದನ್ನು ಸಾಧಿಸಲು ಸಮರ್ಥವಾಗಿಲ್ಲ ಹಾಗೂ ಆ ಪುನರ್ರಚನೆಗಳೆಲ್ಲ ಹಲವು ವಿಧಗಳಲ್ಲಿ ದೋಷಯುಕ್ತವಾದವು' ಎಂದು ಮುಂತಾಗಿ ವಾದಿಸತೊಡಗಿದ್ದು ಕಂಡುಬರುತ್ತದೆ. ಇವರಲ್ಲಿ ಎಸ್. ಶ್ರೀಕಂಠಶಾಸ್ತ್ರಿ, ಎ. ಎನ್. ನರಸಿಂಹಯ್ಯ, ರಂ. ಶ್ರೀ. ಮುಗಳಿ, ಕೆ. ಎ. ನೀಲಕಂಠಶಾಸ್ತ್ರಿ, ತೀ. ನಂ. ಶ್ರೀಕಂಠಯ್ಯ ಇವರ ಅಭಿಪ್ರಾಯಗಳನ್ನು ಮೇಲೆ ಸಂಕ್ಷೇಪಿಸಿದೆ. ಇವರು ತಮ್ಮ ಆಕ್ಷೇಪಣೆಗಳಿಗೆ ಕೊಟ್ಟಿರುವ ಕಾರಣಗಳನ್ನೇ ಈಚೆಗೆ ಈ ವಿಷಯವನ್ನು ಕುರಿತವರು ಕೂಡ ಮುಂದೆಮಾಡಿರುವುದು ಕಾಣುತ್ತದೆ.[56]

ಪ್ರಹಸನದ ಪ್ರಯೋಗ ಎಲ್ಲಿಯೇ ನಡೆದಿರಲಿ, ಅಲ್ಲಿ ನಿರೂಪಿತವಾಗಿರುವ ಘಟನೆ ಭಾರತದೊಡನೆ ಸಂಬಂಧಿಸಿದ್ದು ಎನ್ನುವಲ್ಲಿ ವಿದ್ವಾಂಸರಲ್ಲಿ ಏಕಾಭಿಪ್ರಾಯವಿರುವಂತಿದೆ. ಏಕೆಂದರೆ ಸಂಪಾದಿತ ಪಠ್ಯದ ಅನುವಾದದಲ್ಲಿ 'ಭಾರತದ ಸಾಗರ'ವನ್ನು (Indian Ocean) ದಾಟಿ ಹೋಗಬೇಕೆಂಬುದಾಗಿ ಒಂದು ಪಾತ್ರದ ಮಾತಿದೆ. ಪಾತ್ರ ಇನ್ನೊಂದರ ಒಂದು ಸಂವಾದಭಾಗದಲ್ಲಿ ಭಾರತದ ಮುಂದಾಳುಗಳನ್ನು ಸಂಬೋಧಿಸಿದ ಮಾತು (Ye Indian chiefs) ಬರುತ್ತದೆ. ಈ ಇನ್ನೊಂದು ಪಾತ್ರ ಸ್ವಲ್ಪ ಮೊದಲಿನ ಸಂವಾದ ಸಂದರ್ಭದಲ್ಲಿ ಮಲ್ಪಿನಾಯಕ್ (Malpinaik) ಎಂಬ ಒಂದು ಮಾತನ್ನು ಹೇಳವಂತಿದ್ದು, ದಕ್ಷಿಣ ಕನ್ನಡ ಜಿಲ್ಲೆಯ ಸಂಬಂಧವನ್ನು ಅದರೊಡನೆ ತಳುಕುಹಾಕುವಂತೆ ಅದು ಪ್ರೇರಣೆನೀಡಿದೆ. ಇಷ್ಟುಮಟ್ಟಿಗೆ ದೊರೆತ ಸೂಚನೆಗಳಿಂದ ಪ್ರಚೋದನೆಗೊಂಡ ಹುಲ್ಷ್ ಪ್ರಹಸನದ ಗ್ರೀಕೇತರ ಶಬ್ದಗಳಲ್ಲಿ ಕನ್ನಡವನ್ನು ಕಾಣಲು ಕುತೂಹಲಗೊಂಡಿದ್ದರೆ ಅದು ಸಹಜವೇ. ಐತಿಹಾಸಿಕ ಸನ್ನಿವೇಶಗಳಿಗೆ ಅವರು ಪ್ರಾಮುಖ್ಯವಿತ್ತು, ತಮಗಿದ್ದ ಕನ್ನಡದ ತಿಳಿವಳಿಕೆಯಷ್ಟರಲ್ಲಿ ಅದೊಂದು ಬಗೆಯಾದ ಭಾಷಿಕ ಪುನರ್ರಚನೆಯನ್ನು ಮಾಡಿದರು. ಕನ್ನಡ ಭಾಷೆಯ ಕ್ರಮಾಗತವಾದ ಬೆಳವಣಿಗೆ, ವ್ಯಾಕರಣಮರ್ಯಾದೆಗಳನ್ನು ಅಷ್ಟಾಗಿ ಲಕ್ಷ್ಯಕ್ಕೆ ತೆಗೆದುಕೊಳ್ಳದೆ ಪ್ರಹಸನದ ವಿಚಾರಣೀಯ ಭಾಗಗಳನ್ನು ಕನ್ನಡವೆಂದೇ ದೃಢವಾಗಿ ನಂಬಿದ್ದು, ಮುಂದೆ ವಿದ್ವಾಂಸರಿಗೆ ಹಲವು ವರ್ಷಗಳವರೆಗೆ ಕಣ್ಮಾಯೆ ಕವಿಸಿತೆಂದು ಹೇಳಬಹುದು. ಹುಲ್ಷ್ ಮಾಡಿದ ಘಟನೆಯ ಐತಿಹಾಸಿಕ ವಿಶ್ಲೇಷಣೆಯನ್ನು

ಅವರು ಬಹುಮಟ್ಟಿಗೆ ಒಪ್ಪಿಕೊಂಡದ್ದು, ಪ್ರಹಸನದ ವಿಚಾರಣೀಯ ಭಾಗಗಳ ಭಾಷೆ ಕನ್ನಡವಾಗಿರುವ ಸಂಭಾವ್ಯತೆಯನ್ನು ಸುಮ್ಮನೆ ಒಪ್ಪಿಕೊಳ್ಳುವಂತೆ ಮಾಡಿತು. ಹೊಸ ಗನ್ನಡದ ಪುನರುಜ್ಜೀವನದ ಸುಪ್ರಭಾತದಲ್ಲಿ ಹೊಸ ಹೊಸ ದಿಕ್ಕುಗಳಲ್ಲಿ ಕನ್ನಡದ ಹಿರಿಮೆ ಗರಿಮೆಗಳು ಹಬ್ಬಬೇಕಾಗಿರುವಾಗ, ಭಾಷೆಗೆ ತಕ್ಕಷ್ಟು ಹಳಮೆಯನ್ನು ಸಂಪಾದಿಸಿ ಕೊಡುವ ಅಭಿಮಾನಪಡಬೇಕಾದ ಒಂದು ಶೋಧವನ್ನು ಒಮ್ಮೆಗೇ ತಿರಸ್ಕರಿಸಿಬಿಡುವುದು ಪುನರುಜ್ಜೀವನದ ಪುರಸ್ಕರ್ತರಿಗೆ ಪ್ರಾಯಃ ಇಷ್ಟವಾಗಿರಲಾರದು. ರೈಸ್ ಒಪ್ಪಿದರು, ಆರ್. ನರಸಿಂಹಾಚಾರ್ಯರೂ ಶಾಮಶಾಸ್ತ್ರಿಗಳೂ ಒಪ್ಪಿದರು. ಪ್ರಬಲವಾದ ಆಕ್ಷೇಪಣೆಯ ದನಿಗಳಿದ್ದೂ ಪೈ, ಸಾಲೆತೊರೆ ಅನಂತರದ ವರ್ಷಗಳಲ್ಲಿ ಪ್ರಹಸನದ ಗ್ರೀಕೇತರ ಶಬ್ದಗಳು ಕನ್ನಡವೆಂದೇ ಸಾಧಿಸಿದರು. ಭಾಷಾ ಸಾಹಿತ್ಯಜ್ಞರಾದ ರಾ. ನರಸಿಂಹಾಚಾರ್, ಬಿ.ಎಂ. ಶ್ರೀಕಂಠಯ್ಯ, ಟಿ. ಎಸ್. ವೆಂಕಣ್ಣಯ್ಯ ಇವರುಗಳು ಈಗ ಅವರ ಉಲ್ಲೇಖಗಳಿಂದ ತೋರುವಂತೆ ತಾಟಸ್ಥ್ಯಪಕ್ಷ ವಹಿಸದೆ, ಪ್ರಹಸನದ ಕಥಾಸಂದರ್ಭ ಮತ್ತು ಸಮಸ್ಯೆಯ ಭಾಷಾಭಾಗಗಳನ್ನು ನಿಷ್ಪಾಕ್ಷಿಕವಾಗಿ ಸ್ವತಂತ್ರವಾಗಿ ಪರೀಕ್ಷಿಸಿದ್ದರೆ, ಈ ವಿವಾದ ಎಷ್ಟೋ ಮೊದಲೇ ನಿಲುಗಡೆಗೆ ಬರಬಹುದಾಗಿತ್ತು. ಆದು ತಪ್ಪಿ ಕೆಲವು ಇತಿಹಾಸಜ್ಞರು ಮಾಡಿದ ದೋಷಪೂರ್ಣ ಭಾಷಿಕ ಪುನರ್ರಚನೆಗಳಿಂದ ಈ ಪ್ರಹಸನಸಾಕ್ಷ್ಯ ಕನ್ನಡ ಭಾಷೆ ಸಾಹಿತ್ಯಗಳ ಪ್ರಾಚೀನತೆಯ ದೃಷ್ಟಿಯಿಂದ ಏನು ಬೆಳಕನ್ನು ಬೀರಬಹುದಾಗಿದ್ದಿತೋ ಅದು ಸಾಧ್ಯವಾಗದೆ ಹೋಯಿತು ; ಇಲ್ಲದ ಸಂದಿಗ್ಧತೆಗೆ ಅವಕಾಶವಾಯಿತು.

ವಾಸ್ತವವಾಗಿ ಪ್ರಹಸನದ ಗ್ರೀಕೇತರ ಶಬ್ದಗಳೂ ವಾಕ್ಯಗಳೂ ಅಕ್ಷರಗಳ ಗೋಜು ಗೊಂದಲದ ಹಾಗೆ ತೋರುತ್ತದೆ. ಅವು ದಿಟವಾಗಿ ಯಾವ ಭಾಷೆಯವು, ಏನನ್ನು ಹೇಳುತ್ತವೆ, ಆಯಾ ಸಂದರ್ಭ ಸನ್ನಿವೇಶಗಳಿಗೆ ಅವು ಸಾರ್ಥಕವಾಗಿ ಹೊಂದಿಕೊಳ್ಳುವುದು ಹೇಗೆ ಈ ಪ್ರಶ್ನೆಗಳಿಗೆ ಸದ್ಯದ ಸ್ಥಿತಿಯಲ್ಲಿ ಉತ್ತರ ಸುಲಭವಲ್ಲ. ಹುಲ್ಷರು ಮೊದಲುಗೊಂಡು ಪೈಗಳವರೆಗೆ ಒಬ್ಬೊಬ್ಬರೂ ಶ್ರಮವಹಿಸಿ ಗ್ರೀಕೇತರ ಶಬ್ದಗಳನ್ನೂ ವಾಕ್ಯಗಳನ್ನೂ ಸ್ವತಂತ್ರವಾಗಿ ಪುನರ್ರಚಿಸಿಕೊಟ್ಟಿದ್ದರೂ ಅವು ಭಾಷಿಕವಾಗಿ ತುಂಬ ಅಸಮರ್ಪಕವಾದ ಪುನರ್ರಚನೆಗಳೆನ್ನದೆ ವಿಧಿಯಿಲ್ಲ; ಹಾಗೆಯೇ ಅವು ಕಥಾಸಂದರ್ಭದೊಡನೆ ಸರಳವಾಗಿಯೂ ಸಹಜವಾಗಿಯೂ ಹೊಂದಿಕೊಳ್ಳದೆ ಹೇಗೋ ಚತುರತೆಯಿಂದ ಮಾತುಜೋಡಿಸಿ ಅರ್ಥಹೊರಡಿಸಿದ್ದರಿಂದ ಹೊಂದಿಕೊಂಡ ಹಾಗೆ ತೋರುತ್ತವೆ. ಉದಾಹರಣೆಗೆ, 'ಮಲ್ಪಿನಾಯಕ್' ಎಂಬ ಶಬ್ದವನ್ನು, ಪ್ರಹಸನದ ಕಥಾಪ್ರದೇಶ ಉದ್ಯಾವರವೆಂಬ ಊರು ಎಂಬ ತೀರ್ಮಾನಕ್ಕೆ ಬರಲು ಪೈ ಅವರು ಹೇಗೆ ಬಳಸಿಕೊಳ್ಳುತ್ತಾರೆ ಎಂದು ನೋಡಿದರೆ ತಿಳಿಯುವುದು. ಲಿಖಿತವು 'ಮಲ್ಪಿನಾಯಕ್' ಎಂದಿದ್ದರೂ ಗ್ರೀಕ್ ಭಾಷಾಶಾಸ್ತ್ರದಂತೆ 'ಅಲ್ಪಿನಾಯಕ್' ಎಂದು ಓದುವುದು ಸಾಧ್ಯವೆಂದು ಅವರು ವಾದಿಸಿ, 'ಅಲ್ಪಿ'ಗೂ 'ಅಲೂಪ'ವಂಶಕ್ಕೂ ಸಂಬಂಧವನ್ನು ಕಲ್ಪಿಸುತ್ತಾರೆ.[57] ಆದರೆ ಈ ವಂಶದ ಪ್ರಾಚೀನವಾದ ಉಲ್ಲೇಖಗಳು ಆಳುಪ, ಆಳುವ, ಆಳ್ವ ಎಂಬ ಹೆಸರುಗಳಲ್ಲಿ ಮಾತ್ರ ಶಾಸನಗಳಲ್ಲಿ ಕಂಡುಬರುತ್ತವೆ. ಕಡೆಗೆ 'ಮಲ್ಪಿನಾಯಕ್' ಎಂಬ ಪದಕ್ಕೆ

ಕರ್ಣಾಟಕದ ಪಶ್ಚಿಮತೀರದೊಂದಿಗೆ ಏನಾದರೂ ಸಂಬಂಧವಿದೆಯೇ ಎನ್ನುವುದೇ ಸಂಶಯಾಸ್ಪದ. ಯಾವ ಶಬ್ದ ಸಮಗ್ರ ಪ್ರಹಸನದ ಕಥಾವಸ್ತುವನ್ನು ಸಂಯೋಜಿಸಿರುವಂತೆ ತೋರುವುದೋ, ಅದರ ಗ್ರೀಕೇತರ ಭಾಷಾಭಾಗಗಳ ಪುನರ‍್ರಚನೆಗೆ ಪ್ರೇರಕಬಿಂದುವಾಗಿರುವಂತೆ ಭಾಸವಾಗುವುದೋ, ಅದರ ರೂಪರಚನೆಯೇ ಹೀಗೆ ಸಮಸ್ಯಾತ್ಮಕವಾಗಿರುವಾಗ ಅದನ್ನು ಅವಲಂಬಿಸಿದ ಯಾವ ತೀರ್ಮಾನಗಳು ತಾನೇ ದೃಢವಾಗಿ ನಿಲ್ಲುವುದು ಸಾಧ್ಯವಿದೆ? ಅಲ್ಲದೆ ಕೆಲವರು ಭಾವಿಸುವಂತೆ ಗ್ರೀಕೇತರ ಭಾಷಾಭಾಗಗಳಲ್ಲಿ ಕೆಲವಂಶವಾದರೂ ವಿರೂಪಗೊಳಿಸಿದ ಗ್ರೀಕ್ ಭಾಷೆಯ ಅಂಶಗಳೇ ಎನ್ನುವುದು ನಿಶ್ಚಯವಾದರೆ, ಉಳಿದ ಭಾಗಗಳ ವಿಚಾರದಲ್ಲೂ ಅದರ ಸಾಧ್ಯತೆ ಇದ್ದೇ ಇರುತ್ತದೆ; ಆಗ ಅನ್ಯಥಾ ಪ್ರಯತ್ನಗಳೆಲ್ಲ ಹುಸಿಯೆನಿಸುತ್ತವೆ. ಕನ್ನಡವೆನ್ನಲಾದ ಭಾಗಗಳಿಗೆ ತಮಿಳುರೂಪಗಳನ್ನು ಕೊಟ್ಟು ಅಂಥ ಪುನರ‍್ರಚನೆಗೆ ಅವಕಾಶವಿರುವುದನ್ನು ಒಬ್ಬರು ಸಲಹೆಮಾಡಿದರೆ, ಪ್ರಾಚೀನ ತುಳು ಇರಬಹುದೇ ಎಂಬ ಪ್ರಶ್ನೆಯನ್ನು ಇನ್ನೊಬ್ಬರು ಎತ್ತಿದ್ದಾರೆ. ಇಂಥ ಸ್ಥಿತಿಯಲ್ಲಿ ಎಲ್. ಡಿ. ಬಾರ್ನೆಟ್ ಅವರ ಪರೀಕ್ಷಾಂಶಗಳನ್ನೇ ನಾವೂ ಪುನರುಚ್ಚರಿಸಿ, ಅವರ ನಿರ್ಣಯವನ್ನೇ ಒಪ್ಪಿ, ಪೂರ್ವೋಕ್ತ ಗ್ರೀಕ್ ಪ್ರಹಸನದ ಗ್ರೀಕೇತರ ಶಬ್ದಗಳೂ ವಾಕ್ಯಗಳೂ ಕನ್ನಡವೆಂದು ಹೇಳಲು ಇನ್ನೂ ಪ್ರಬಲ ಪ್ರಮಾಣದ ಆವಶ್ಯಕತೆಯಿದೆಯೆಂದೂ ಪ್ರಾಯಶಃ ಅವು ಕನ್ನಡ ಭಾಷೆಯವಲ್ಲವೆಂದೂ ತಿಳಿಯುವುದೆ ಸರಿಯೆಂದು ತೋರುತ್ತದೆ.

ಈವರೆಗೆ ಪರಿಶೀಲಿಸಿದ ಭಾಷಿಕ ಸಾಕ್ಷ್ಯಗಳಿಂದ ಕನ್ನಡ ಭಾಷೆ ಸಾಹಿತ್ಯಗಳ ಪ್ರಾಚೀನತೆಯ ಬಗೆಗೆ ನಿರ್ಣಯಿಸಬಹುದಾದ ಅಂಶಗಳನ್ನು ಇಲ್ಲಿ ಕ್ರೋಡೀಕರಿಸಬಹುದು: (೧) ಅಶೋಕನ (ಕ್ರಿ.ಪೂ. ೩ನೆಯ ಶತಮಾನ) ಬ್ರಹ್ಮಗಿರಿ ಶಾಸನದೊಳಗಿನ 'ಇಸಿಲ'ವೆಂಬ ಶಬ್ದದ ಕನ್ನಡ ಮೂಲವೆನ್ನಲಾದ 'ಎಸಿಲ್' ಶಬ್ದದ ಅಸ್ತಿತ್ವ ಸಂಭಾವ್ಯವಾದೊಂದು ಊಹಿತ ಪುನರ‍್ರಚನೆ. (೨) ಸಾತವಾಹನ (ಕ್ರಿ.ಪೂ. ೨ನೆಯ ಶತಮಾನ—ಕ್ರಿ.ಶ. ೨ನೆಯ ಶತಮಾನ) ಶಾಸನಗಳ ಮತ್ತು ನಾಣ್ಯಗಳ ಪುಲುಮಾಯಿ ವಿಲಿವಾಯಕುರ ಈ ಮುಂತಾದ ಶಬ್ದಗಳ ಅರ್ಥನಿಷ್ಪತ್ತಿಗಳು ಇನ್ನು ಅತ್ಯಂತ ಅನಿಶ್ಚಿತ. (೩) ಹಾಲನ (ಸು. ೨೦-೨೪) ಸಂಕಲಿತ ಕೃತಿ 'ಗಾಥಾಸಪ್ತಶತಿ'ಯೊಳಗೆ ಬಂದಿರುವ ಕನ್ನಡವೆಂದು ಕೆಲವರು ಭಾವಿಸಿರುವ ಪೊಟ್ಟ ಮೊದಲಾದ ಕೆಲವು ಶಬ್ದಗಳು ದ್ರಾವಿಡ ಭಾಷಾವರ್ಗಕ್ಕೆ ಸಾಮಾನ್ಯವಾದವು, ಕನ್ನಡಕ್ಕೆ ವಿಶಿಷ್ಟವಾದವಲ್ಲ. (೪) ಗ್ರೀಕ್ ಭೂಗೋಲಶಾಸ್ತ್ರಜ್ಞ ಟಾಲೆಮಿ (ಸು. ೧೫೦) ತನ್ನ ಗ್ರಂಥದಲ್ಲಿ ಉಲ್ಲೇಖಿಸುವ ಸ್ಥಳವಾಚಕಗಳಲ್ಲಿ ಕೆಲವನ್ನು ದ್ರಾವಿಡಸಾಮಾನ್ಯ ಮೂಲವಾದವೆಂದರೂ, ಮುದುಗಲ್ ಕಲ್ಲಿಗೆರಿಸ ಇಂಥ ಕೆಲವನ್ನು ಹೋಲುವ ಶಬ್ದಗಳು ಕನ್ನಡ ಮೂಲವಾದವು ಎಂದು ತಿಳಿಯಲು ಅಡ್ಡಿಯಿರಲಾರದು. ಇದು ಸರಿಯಾದರೆ, ಈ ಭಾಷೆಗೆ ಇವೇ ಪ್ರಾಚೀನತಮ ಉಲ್ಲೇಖಗಳು. (೫) ಆಕ್ಸಿರಿಂಕಸ್ ವಲ್ಕಲೇಖದಲ್ಲಿಯ (೨ನೆಯ ಶತಮಾನ) ಗ್ರೀಕೇತರ ಶಬ್ದಗಳೂ ವಾಕ್ಯಗಳೂ ಕನ್ನಡವಿರಲಾರವು.

ಈ ಫಲಿತಾಂಶಗಳು ಡಿ. ಎಲ್. ನರಸಿಂಹಾಚಾರ್ಯರು ಕನ್ನಡ ಭಾಷೆ ಸಾಹಿತ್ಯಗಳ ಹಳಮೆಯ ಬಗ್ಗೆ ಪ್ರಾಸಂಗಿಕವಾಗಿ ಬರೆದಿರುವ ಸೂಚನೆಗಳನ್ನು ಪೋಷಿಸುತ್ತವೆ. ಆ ಸೂಚನೆಗಳನ್ನು ಇಲ್ಲಿ ಪುನರುಚ್ಚರಿಸಬಹುದು: "ಕನ್ನಡ ನುಡಿ-ಕ್ರಿ.ಶ. ಆದಿಭಾಗದಿಂದಲೂ ಇದ್ದಿತೆಂದು ಹೇಳಬಹುದಾಗಿದೆ. ಕ್ರಿ.ಶ. ೨-೩ನೆಯ ಶತಮಾನಗಳಲ್ಲಿ ಅದಕ್ಕೆ ಲಿಪಿಯೊಂದು ಉಂಟಾಗಿ ಅದು ಗ್ರಂಥಸ್ಥವಾಗುವುದಕ್ಕೆ ಮೊದಲಿಟ್ಟಿರಬಹುದು. ಆ ಕಾಲದಲ್ಲಿ ಕನ್ನಡಿಗರಲ್ಲಿ ಬಾಯಿಂದ ಬಾಯಿಗೆ ಪ್ರಚಾರಗೊಳ್ಳುತ್ತಿದ್ದ ಜಾನಪದ ಸಾಹಿತ್ಯವೂ ಇದ್ದಿರಬಹುದು. ಇದು ಗ್ರಂಥಸ್ಥರೂಪವನ್ನು ಪಡೆಯಿತೋ ಇಲ್ಲವೋ ಎಂಬುದನ್ನು ತಿಳಿಯಲು ಈಗ ಪ್ರಮಾಣಗಳಿಲ್ಲ."[58]

## ಕ್ರಿ.ಶ. ೨ನೆಯ ಶತಮಾನದಿಂದ ೫ನೆಯ ಶತಮಾನದವರೆಗೆ ಕನ್ನಡ ಸಾಹಿತ್ಯವಿದ್ದುದರ ಬಗೆಗೆ ಐತಿಹಾಸಿಕ ಸಾಕ್ಷ್ಯಗಳು

ಈ ಮೇಲಣ ಸೂಚನೆಯನ್ನೇ ಅನ್ಯ ವಿದ್ವಾಂಸರು ಕೆಲವರು ತಮಗೆ ತೋರಿದ ಐತಿಹಾಸಿಕ ಪ್ರಮಾಣಗಳನ್ನು ಕೊಡುವುದರ ಮೂಲಕ ತಾವು ಕೂಡ ಮಾಡಿರುವುದುಂಟು. ಅವರ ಅಭಿಪ್ರಾಯಗಳನ್ನು ಇಲ್ಲಿ ಗಮನಿಸಬಹುದು.

(೧) ವಿಂಧ್ಯಾವಳೀಪ್ರಾಂತ ಕನ್ನಡ ಸಾಹಿತ್ಯದ ಸೆಲೆ: "ಕನ್ನಡ ಸಾಹಿತ್ಯದ ಬೇರು ಕ್ರಿ.ಶ.ಕ್ಕಿಂತಲೂ ಅಡಿಯಲ್ಲಿ ನೆಟ್ಟು ಹರಡಿಕೊಂಡಿತ್ತು" ಎಂಬುದಾಗಿ ನಂಬುವ ಮುಳಿಯ ತಿಮ್ಮಪ್ಪಯ್ಯನವರು ತಮ್ಮ ಒಂದು ಉಪನ್ಯಾಸದಲ್ಲಿ ಆ ನಂಬುಗೆಯ ಮೂಲವಾದ ಕಾರಣಗಳನ್ನೂ ವಾದಗಳನ್ನೂ ವಿವರವಾಗಿ ಮಂಡಿಸಿದ್ದಾರೆ.[59] ಇಲ್ಲಿ ಆ ಉಪನ್ಯಾಸದ ಅಗತ್ಯಾಂಶಗಳನ್ನು ಸಂಗ್ರಹಿಸಬಹುದು: ರಾಷ್ಟ್ರಕೂಟರ ದಂತಿದುರ್ಗನ ಸಾಮನ್‌ಗಡ ಶಾಸನದ (೭೫೩) ನಿರೂಪಣೆಯನ್ನು ನೋಡಿದರೆ, ಮಹಾನದಿ ರೇವಾನದಿಗಳು ಹುಟ್ಟಿ ಹರಿಯುವ ಭಾಗವಾದ ವಿಂಧ್ಯಾವಳೀ ಪ್ರಾಂತ ಆ ಅಚ್ಚಕನ್ನಡ ಅರಸರ ಪೂರ್ವದ ನೆಲೆಯಾಗಿತ್ತು. ಇಲ್ಲಿ ಮಾರ್ಗೀಯ ಕನ್ನಡ ಸಾಹಿತ್ಯ ತಲೆದೋರಿದಂತೆ 'ಕವಿರಾಜಮಾರ್ಗ'ದ ದ್ವಿತೀಯ ಪರಿಚ್ಛೇದದಿಂದ ತಿಳಿಯಬಹುದು. ದೇಸಿ ಸಾಹಿತ್ಯದಿಂದಲೇ ಮಾರ್ಗಸಾಹಿತ್ಯದ ಉದಯ ತಾನೇ. ಆದ್ದರಿಂದ ಮೊದಲು ದೇಸಿ ಸಾಹಿತ್ಯವಿದ್ದಿರಬೇಕು. ಅತಿ ಪುರಾತನಕಾಲದಲ್ಲಿ ಅಲ್ಲಿ (ವಿಂಧ್ಯಾವಳಿ ಪ್ರಾಂತದಲ್ಲಿ) ತಲೆದೋರಿದ 'ಗಾಥಾಸಪ್ತಶತಿ'ಯಲ್ಲಿ 'ಪೊಟ್ಟ ತೀರ ತುಪ್ಪ ಪಳ್ಳಿ' ಮೊದಲಾದ ಹಲವು ಅಚ್ಚಕನ್ನಡ ಪದಗಳು ಕಂಡು ಬರುತ್ತಿವೆ. ಈ ಕನ್ನಡ ದೇಸಿ ಹಾಡು 'ಗಾಥಾಸಪ್ತಶತಿ'ಗೆ ಉಗಮಸ್ಥಾನ. ಆ ವಿಂಧ್ಯಾವಳೀ ಪ್ರಾಂತದಲ್ಲಿ ಕನ್ನಡವೇ ದೇಶಭಾಷೆಯಾಗಿ ಇದ್ದಿರಬಹುದೇ ? 'ಗಾಥಾಸಪ್ತಶತಿ'ಯ ಆದಿಭಾಗದ "ಅಮಿಅಂ ಪಾವುಅಕಬ್ಬಂ...." ("=ಅಮೃತಂ ಪ್ರಾಕೃತಕಾವ್ಯಂ....") ಎಂಬ ಗಾದೆಯನ್ನು ವಿಶ್ಲೇಷಿಸಿದರೆ ಒಂದನೆಯ ಶತಮಾನದಲ್ಲಿ ಅಲ್ಲಿ ದೇಶಭಾಷೆಯಾಗಿದ್ದುದು ಪ್ರಾಕೃತವಲ್ಲ ಎಂದು ಹೊಳೆಯುತ್ತದೆ. ಪ್ರಾಕೃತ ರಾಜಭಾಷೆಯಾಗಿದ್ದು ಲಕ್ಷ್ಯಲಕ್ಷಣಗ್ರಂಥಗಳಿಂದ ಕೂಡಿತ್ತು. ದೇಸಿಯಾದ ಕನ್ನಡ ಸಾಹಿತ್ಯಕ್ಕೆ ಆಗ ರಾಜ

ಸಭೆಗಳಲ್ಲಿ ಆಸರೆಯಿರಲಿಲ್ಲ. ಹಿಂದಣ ಉತ್ತಮ ಕನ್ನಡ ದೇಸಿಗಬ್ಬದ ಬಾಹ್ಯರೂಪ ಈಗ ದುರ್ಲಭ. ಅದು 'ದೇಸಿಯೊಳ್ ಪುಗುವುದು' ಎಂದು ಸಂಕಲ್ಪಮಾಡಿಕೊಂಡ ಈಚಿನ ಮಹಾಕವಿಗಳ ರಗಳೆ ಮೊದಲಾದ ರೂಪಗಳಲ್ಲಿ ಮಾರ್ಗಪ್ರಬಂಧಲಕ್ಷಣದೊಡನೆ ಕಾಣಿಸಿಕೊಂಡಿದ್ದರೆ, ಬನವಾಸಿಯ ಕದಂಬರ ಕಾಲದಿಂದಲೂ ದಕ್ಷಿಣಕನ್ನಡ ಉತ್ತರ ಕನ್ನಡ ಜಿಲ್ಲೆಗಳಲ್ಲಿ ಕೊರವಂಜಿ ಹಾಡು, ಒನಕೆವಾಡು ಮುಂತಾದ ದೇಸಿಹಾಡುಗಳಲ್ಲಿ ಅದರ ಅಚ್ಚ ದೇಸಿರೂಪಗಳನ್ನೇ ಕಾಣಬಹುದಾಗಿದೆ

ಮುಳಿಯ ತಿಮ್ಮಪ್ಪಯ್ಯನವರು ಸಾತವಾಹನ ರಾಜ ಹಾಲನ ಕಾಲಕ್ಕೆ (೧ನೆಯ ಶತಮಾನ) ವಿಂಧ್ಯಾವಳೀ ಪ್ರಾಂತದಲ್ಲಿ ಕನ್ನಡ ದೇಶಭಾಷೆಯಾಗಿದ್ದು ಅದರಲ್ಲಿಯ ಜನಪದ ಸಾಹಿತ್ಯಸಮೃದ್ಧಿಯೇ 'ಗಾಥಾಸಪ್ತಶತಿ'ಯ ರಚನೆಗೆ ವಸ್ತುವನ್ನೂ ಸ್ಫೂರ್ತಿಯನ್ನೂ ಒದಗಿಸಿತೆನ್ನುವಂತೆ ಅರ್ಥಮಾಡಿದ್ದಾರೆ; ರಾಜಾಸ್ಥಾನದಲ್ಲಿ ಪ್ರಾಕೃತಕ್ಕೆ ಮನ್ನಣೆಯಿದ್ದು, ಅದು ಲಕ್ಷಣ-ಲಕ್ಷ್ಯಗ್ರಂಥಗಳಿಂದ ಕೂಡಿ ಉನ್ನತ ಸ್ಥಾನದ ಮರ್ಯಾದೆಯನ್ನು ಪಡೆದಿತ್ತು ಎಂಬುದರಿಂದಾಗಿ ಕನ್ನಡದಲ್ಲಿ ಗ್ರಾಂಥಿಕ ಸಾಹಿತ್ಯ ಸಾಧ್ಯವಾಗದೆ, ಬಹುಕಾಲದವರೆಗೆ ಜಾನಪದಸ್ವರೂಪದಲ್ಲಿಯೇ ಉಳಿಯುವಂತಾಯಿತು ಎಂಬಂತೆ ವಿಚಾರಮಾಡಿದ್ದಾರೆ. ೧ನೆಯ ಶತಮಾನದ ವೇಳೆಗೆ ಪ್ರಾಕೃತಭಾಷೆ ಗ್ರಂಥಸ್ಥವಾಗಿದ್ದುದಕ್ಕೆ ಲಿಖಿತ ಪ್ರಮಾಣಗಳಿವೆ. ಕನ್ನಡದಲ್ಲಿ ಜಾನಪದ ಸಾಹಿತ್ಯವಿದ್ದಿರಬಹುದು ಎನ್ನುವುದನ್ನು ಸಂಭವನೀಯವಾದ ಊಹೆಯೆಂದು ಮಾನ್ಯಮಾಡಬೇಕಾಗಿದೆ. ಆದ್ದರಿಂದ ಸಾತವಾಹನರ ಮತ್ತು ಬನವಾಸಿಯ ಕದಂಬರ ಕಾಲದಿಂದ ಆ ಸಾಹಿತ್ಯ ಪರಿಗೀತವಾಗಿ ಈತನಕ ಬಂದಿದೆ. ಎಂಬ ಅವರ ಮಾತು ಹಳಮೆಗೆ ಬಂದು ನಿಶ್ಚಿತವಾದ ಪ್ರಮಾಣವಾಗದು. ಅಲ್ಲದೆ ಅವರು ರಾಷ್ಟ್ರಕೂಟರ ಪೂರ್ವಸ್ಥಾನವನ್ನು ಗೊತ್ತುಮಾಡಿರುವುದು, 'ಕವಿರಾಜಮಾರ್ಗ' 'ಗಾಥಾಸಪ್ತಶತಿ'ಗಳ ಕೆಲವು ಪದ್ಯಗಳಿಗೆ ಅರ್ಥಮಾಡಿರುವುದು, 'ಪಂಪಭಾರತ'ದ ರಗಳೆಯನ್ನು ದೇಸಿಹಾಡೆಂದು ಭಾವಿಸಿರುವುದು ನಿರ್ದುಷ್ಟವಾಗಿದೆಯೆಂದು ಹೇಳುವಂತಿಲ್ಲ; ಇಲ್ಲೆಲ್ಲ ಅವರ ವಿಚಾರಲಹರಿಯಲ್ಲಿ ಊಹೆಗೆ ಹೆಚ್ಚು ಸ್ಥಾನ ದೊರೆತಿದೆ.

ಈ ಅವಧಿಯಲ್ಲಿ ಗ್ರಂಥಸ್ಥ ಸಾಹಿತ್ಯ ಕನ್ನಡದಲ್ಲಿ ತಲೆದೋರಿರಬೇಕು ಎಂಬುದನ್ನು ಇನ್ನೊಂದು ರೀತಿಯಲ್ಲಿ ಟಿ. ಎಸ್. ವೆಂಕಣ್ಣಯ್ಯನವರು ಮಂಡಿಸಿದ್ದಾರೆ.[60] ಅವರು ಈ ಬಗ್ಗೆ ಹೂಡಿರುವ ವಾದವನ್ನು ಹಿನ್ನೆಲೆಯೊಡನೆ ಇಲ್ಲಿ ಉದ್ಧರಿಸಬಹುದು.

ಬೌದ್ಧರು ಕನ್ನಡ ಸಾಹಿತ್ಯದ ಆದಿಕವಿಗಳು : "ಕ್ರಿ. ಶ. ೧, ೨ನೆಯ ಶತಮಾನಗಳಲ್ಲಿ ಬೌದ್ಧಮತವು ಪ್ರಬಲಿಸಿತ್ತೆಂಬುದು ಚರಿತ್ರೆಯಲ್ಲಿ ಪ್ರಸಿದ್ಧವಾದ ಸಂಗತಿ. ಆ ಕಾಲದಲ್ಲಿ ಬೌದ್ಧಕವಿಗಳು ಕನ್ನಡ ಭಾಷೆಯಲ್ಲಿ ವಿಶೇಷವಾಗಿ ಗ್ರಂಥರಚನೆ ಮಾಡದೆ ಬಿಟ್ಟಿರಲಾರರು. ಪ್ರಾಚೀನ ಕಾಲದಲ್ಲಿ ಬೌದ್ಧಮತವು ಕನ್ನಡನಾಡಿನಲ್ಲಿ ಬಹುಕಾಲ ಪ್ರಾಬಲ್ಯ ದಶೆಯಲ್ಲಿತ್ತೆಂಬುದಕ್ಕೂ ಬೌದ್ಧರು ಕನ್ನಡದಲ್ಲಿ ಗ್ರಂಥರಚನೆ ಮಾಡಿರಬೇಕೆಂಬುದಕ್ಕೂ ಕೊಡಬಹುದಾದ ಆಧಾರಗಳಲ್ಲಿ ಮುಖ್ಯವಾದ ಕೆಲವನ್ನು ಇಲ್ಲಿ ತಿಳಿಸುತ್ತೇವೆ.

೧ನೆಯ ಶತಮಾನದಲ್ಲಿದ್ದ ಅಶೋಕ ಮಹಾರಾಜನ ರಾಜ್ಯವು ಕನ್ನಡನಾಡಿನವರೆಗೂ ಹಬ್ಬಿದ್ದಿತೆಂದು ಕಾಣುತ್ತದೆ. ಕನ್ನಡನಾಡಿನ ಹಲವು ಭಾಗಗಳು ಆತನ ರಾಜ್ಯಕ್ಕೆ ಒಳಪಟ್ಟಿದ್ದುವೆಂದು ಅಥವಾ ಆ ಪ್ರಾಂತಗಳನ್ನು ಆ ಕಾಲದಲ್ಲಿ ಆಳುತ್ತಿದ್ದ ರಾಜರು ಅಶೋಕನಲ್ಲಿ ಗೌರವವನ್ನು ಇಟ್ಟಿದ್ದರೆಂದೂ, ಅಶೋಕನ ಬೌದ್ಧಮತಬೋಧಕ ಶಿಲಾ ಶಾಸನಗಳು ಈ ಪ್ರದೇಶದಲ್ಲಿ ದೊರೆಯುವುದರಿಂದ ಗೊತ್ತಾಗುತ್ತದೆ. ಇದೂ ಅಲ್ಲದೆ ಬೌದ್ಧಮತವನ್ನು ಪ್ರಚಾರಮಾಡಬೇಕೆಂದು ಸಂಕಲ್ಪಿಸಿ ಅಶೋಕ ಮಹಾರಾಜನು ಇತರ ದೇಶಗಳಿಗೆ ಬೌದ್ಧಮತ ಬೋಧಕರನ್ನು ಕಳುಹಿಸಿದಂತೆಯೇ ಬನವಾಸಿಗೂ ಮಹಿಷ ಮಂಡಲಕ್ಕೂ ಕಳುಹಿಸಿದನೆಂದು ತಿಳಿದುಬಂದಿರುತ್ತದೆ. ಆದುದರಿಂದ ಅಶೋಕನ ಕಾಲ ದಲ್ಲಿ ಬೌದ್ಧಮತವು ಕನ್ನಡ ನಾಡಿನಲ್ಲಿ ವ್ಯಾಪಿಸಿತ್ತೆಂಬುದರಲ್ಲಿ ಸಂಶಯವಿಲ್ಲ.

ಕ್ರಿಸ್ತ ಶಕದ ೨ನೆಯ ಶತಮಾನದ ಆದಿಭಾಗದಲ್ಲಿ ಕನ್ನಡ ನಾಡಿನಲ್ಲಿ ಪ್ರಸಿದ್ಧರಾಗಿ ಆಳಿದ ಶಾತವಾಹನರೂ ಅವರಾದ ಮೇಲೆ ಪಲ್ಲವರೂ ಬೌದ್ಧಮತಕ್ಕೆ ವಿಶೇಷವಾಗಿ ಪ್ರೋತ್ಸಾಹ ಕೊಟ್ಟರೆಂದು ಉತ್ತರ ಕರ್ಣಾಟಕದಲ್ಲಿ ದೊರೆಯುವ ಶಾಸನಗಳಿಂದ ಗೊತ್ತಾಗುತ್ತದೆ. ಶಾತವಾಹನರು ಬೌದ್ಧಮತಾವಲಂಬಿಗಳಾಗಿದ್ದರೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಅವರ ಕಾಲದಲ್ಲಿ ರಾಜರು, ಸಾಮಂತರು, ಹೆಗ್ಗಡೆಗಳು, ವ್ಯಾಪಾರಿಗಳು, ಬಡಗಿಗಳು ಮುಂತಾಗಿ ಅನೇಕರು ಬೌದ್ಧದೇವಾಲಯಗಳನ್ನೂ ವರ್ಷಾ ಕಾಲದಲ್ಲಿ ವಾಸಮಾಡಲು ಬೌದ್ಧಭಿಕ್ಷುಗಳಿಗೆ ಮಠಗಳನ್ನೂ ಕಟ್ಟಿಸಿಕೊಟ್ಟಂತೆ ಶಾಸನ ಗಳಿಂದ ತಿಳಿದುಬರುತ್ತದೆ. ಇದರಿಂದ ಸುಮಾರು ಕ್ರಿ.ಶ. ೬–೭ನೆಯ ಶತಮಾನದವರೆಗೂ ಬೌದ್ಧಮತವು ಕನ್ನಡ ದೇಶದಲ್ಲಿ ಬಹಳ ಪ್ರಾಬಲ್ಯಸ್ಥಿತಿಯಲ್ಲಿದ್ದಿತೆಂದು ಕಾಣುತ್ತದೆ.

ಭರತಖಂಡದಲ್ಲಿ ಹುಟ್ಟಿದ (ವೈದಿಕ, ಜೈನ ಇತ್ಯಾದಿ) ಇತರ ಮುಖ್ಯ ಮತಗಳ ತತ್ತ್ವಗಳನ್ನು ತಿಳಿಸುವ ಗ್ರಂಥಗಳು ರಚಿತವಾದುದು ಸಾಮಾನ್ಯವಾಗಿ ಸಂಸ್ಕೃತ ಭಾಷೆ ಯಲ್ಲಿ. ಆದರೆ ಬೌದ್ಧಮತ ವಿಷಯಕವಾದ ಗ್ರಂಥಗಳು ಮೊದಲು ರಚಿತವಾದುದು ಪಾಳಿ ಭಾಷೆಯಲ್ಲಿ; ಈಗಲೂ ಬೌದ್ಧಮತದ ಒಂದು ಶಾಖೆಯ ಗ್ರಂಥಗಳು ಇರುವುದು ಪಾಳಿಯಲ್ಲಿಯೇ. ವೈದಿಕಮತದ ಭಾಷೆಯು ಹೇಗೆ ಸಂಸ್ಕೃತವೋ, ಬೌದ್ಧಮತದ ಭಾಷೆಯು ಹಾಗೆ ಪಾಳಿ ಎಂದು ಹೇಳಬಹುದು. ಬುದ್ಧದೇವನು ಜನರಿಗೆ ಧರ್ಮಬೋಧೆ ಮಾಡಿದ ಭಾಷೆಯು ಆ ಕಾಲದಲ್ಲಿ ಆತನು ಸಂಚಾರಮಾಡಿದ ರಾಜ್ಯದಲ್ಲಿ ಜನರು ಆಡುತ್ತಿದ್ದ ಪಾಳಿ (ಪ್ರಾಕೃತ) ಭಾಷೆಯೇ. ಆತನು ತನ್ನ ಮತವನ್ನು ಪ್ರತಿಪಾದಿಸುವ ಗ್ರಂಥವಾವುದನ್ನೂ ಬರೆಯಲಿಲ್ಲ. ಆತನ ಕಾಲಾನಂತರ ಆತನ ಉಪದೇಶಗಳನ್ನೂ ಬೌದ್ಧಸಂಪ್ರದಾಯದ ನಿಯಮಗಳನ್ನೂ ಬರೆದ ಆತನ ಶಿಷ್ಯರೂ ಪಾಳಿಭಾಷೆಯನ್ನೇ ಉಪಯೋಗಿಸಿದರು. ಇದರಿಂದ ಪಾಳಿಭಾಷೆಗೆ (ಎಂದರೆ ಒಂದು ವಿಧವಾಗಿ ಜನರು ಮಾತನಾಡುವ ದೇಶಭಾಷೆಗೆ) ಹಿಂದೆ ಎಂದೂ ಇಲ್ಲದೆ ಇದ್ದ ಗೌರವವೂ ಪ್ರಾಶಸ್ತ್ಯವೂ ಉಂಟಾದುವು. ಒಂದು ವಿಧವಾಗಿ ನೋಡಿದರೆ ಬುದ್ಧದೇವನೇ ದೇಶಭಾಷಾ ಸಾಹಿತ್ಯ ಗಳ ಬೀಜವನ್ನು ಬಿತ್ತಿದನೆಂದು ಹೇಳಿದರೆ ಅನುಚಿತವಾಗಲಾರದು.

ಅಶೋಕ ಮಹಾರಾಜನು ಬೌದ್ಧಮತ ಪ್ರಚಾರಕರನ್ನು ಬನವಾಸಿ ಮಹಿಷಮಂಡಲಗಳಿಗೆ ಕಳುಹಿಸಿದನೆಂದು ಹಿಂದೆ ಹೇಳಿರುವೆವಷ್ಟೆ. ಬೌದ್ಧಮತ ತತ್ತ್ವಗಳನ್ನು ಬೋಧಿಸುವುದಕ್ಕಾಗಿ ಈ ದೇಶಕ್ಕೆ ಬಂದವರು ಕನ್ನಡ ಭಾಷೆಯನ್ನು ಕಲಿತು ಬೌದ್ಧಮತದ ವಿಷಯಗಳನ್ನು ತಿಳಿಸುವ ಗ್ರಂಥಗಳನ್ನು ಕನ್ನಡದಲ್ಲಿ ರಚಿಸಿರಬೇಕು. ಏಕೆಂದರೆ ಅನ್ಯಮತೀಯರನ್ನು ಸ್ವಮತಕ್ಕೆ ಆಕರ್ಷಣಮಾಡಿಕೊಳ್ಳಬೇಕೆಂದು ಅಪೇಕ್ಷಿಸುವವರು, ಅದರಲ್ಲಿಯೂ ಜನಸಾಮಾನ್ಯರನ್ನು ಆಕರ್ಷಿಸಲಿಚ್ಛಿಸುವವರು ದೇಶಭಾಷೆಯ ಸಹಾಯವನ್ನು ಅಪೇಕ್ಷಿಸುವುದು ಸ್ವಾಭಾವಿಕವೂ ಆವಶ್ಯಕವೂ ಆಗಿದೆ. ಇದು ಬರಿಯ ಊಹೆಯಲ್ಲ. ಇದಕ್ಕೆ ತಕ್ಕ ನಿದರ್ಶನವನ್ನು ನೋಡುವುದಕ್ಕೆ ಬಹುದೂರ ಹೋಗಬೇಕಾದುದಿಲ್ಲ. ಆಧುನಿಕ ಕಾಲದಲ್ಲಿ ಪಾಶ್ಚಾತ್ಯದೇಶಗಳಿಂದ ಬಂದ ಕ್ರೈಸ್ತಮತದ ಪಾದ್ರಿಗಳು ಇಂಡಿಯಾದೇಶದ ನಾನಾಭಾಗಗಳಲ್ಲಿ ಕ್ರೈಸ್ತಮತವನ್ನು ಜನಸಾಮಾನ್ಯರಲ್ಲಿ ಪ್ರಚಾರಮಾಡಬೇಕೆಂಬ ಉದ್ದೇಶದಿಂದ ದೇಶಭಾಷೆಗಳನ್ನು ಕಲಿಯುವುದರಲ್ಲಿ ಎಷ್ಟು ಆಸಕ್ತಿಯನ್ನು ತೋರಿಸಿರುವರೆಂಬುದನ್ನೂ ದೇಶಭಾಷೆಗಳ ಬೆಳೆವಣಿಗೆಗೆ ಎಷ್ಟರಮಟ್ಟಿಗೆ ಸಹಾಯಕರಾಗಿರುವರೆಂಬುದನ್ನೂ ನೋಡಿದರೆ ಅದು ಸ್ಪಷ್ಟವಾಗಿ ಗೊತ್ತಾಗುತ್ತದೆ.

ಈ ಊಹೆಗೆ ಸಾಧನವಾಗಿ ತಮಿಳು ಭಾಷೆಯಲ್ಲಿ ಕೇವಲ ಪ್ರಾಚೀನವಾದ ಗ್ರಂಥವೊಂದು ಬೌದ್ಧಕೃತವೆಂದು ತಮಿಳು ಪಂಡಿತರೊಬ್ಬರಿಂದ ತಿಳಿದುಬಂದಿದೆ. ವಂಗಭಾಷೆಯಲ್ಲಿಯೂ ಬೌದ್ಧರು ಮೊದಲು ಗ್ರಂಥರಚನೆ ಮಾಡಿದರೆಂದು ತಿಳಿದುಬಂದಿದೆ.

ಈ ರೀತಿ 'ಕವಿರಾಜಮಾರ್ಗ'ದಲ್ಲಿ ಉಕ್ತರಾಗಿರುವ ಮಹಾಕವಿಗಳಲ್ಲಿ ಕೆಲವರಾದರೂ ಬೌದ್ಧರಾಗಿದ್ದಿರಬೇಕೆಂದು ಸಿದ್ಧಾಂತ ಮಾಡುವುದು ಸಾಹಸವಾಗಿ ಕಾಣುವುದಿಲ್ಲ.

ಹಾಗಾದರೆ ಆ ಬೌದ್ಧಕವಿಗಳ ಹೆಸರುಗಳನ್ನು ಸಂಪೂರ್ಣವಾಗಿ ಅಳಿಸಿ ಅವರ ಗ್ರಂಥಗಳ ಗುರುತು ಅಷ್ಟಿಷ್ಟೂ ಇಲ್ಲದಂತೆ ಮಾಡಬಲ್ಲ ಪ್ರಬಲವಾದ ಕಾರಣವೇನಿರಬಹುದು? ಎಂತಹ ಐತಿಹಾಸಿಕ ಸನ್ನಿವೇಶವು ಬಂದರೂ ಒಂದು ಜಾತಿಯ ಗ್ರಂಥರಾಶಿಯೇ ಸಮಗ್ರವಾಗಿ ನಿರ್ನಾಮವಾಗುವುದುಂಟೆ ? ಎಂಬ ಪ್ರಶ್ನೆಗಳು ಬರುವುವು. ಇವುಗಳಿಗೆ ಸಮಾಧಾನವು ಚರಿತ್ರೆಯಲ್ಲಿ ಇಲ್ಲದೆ ಹೋಗಿಲ್ಲ.

ಎಲ್ಲಾ ಕಾಲಗಳಲ್ಲಿಯೂ ಎಲ್ಲಾ ಜನರಲ್ಲಿಯೂ ಮತಮಾತ್ಸರ್ಯವು ಸ್ವಲ್ಪ ಹೆಚ್ಚು ಕಡಿಮೆಯಾಗಿ ಇದ್ದೇ ಇರುವುದು. ಜಗತ್ತಿನ ಇತಿಹಾಸವನ್ನು ಓದಿದರೆ ಮತಕ್ಕಾಗಿ ಹರಿದಷ್ಟು ರಕ್ತದ ಕಾಲುವೆಗಳು ಮತ್ತಾವ ಕಾರಣಕ್ಕಾಗಿಯೂ ಹರಿದಂತೆ ಕಂಡುಬರುವುದಿಲ್ಲ.... ಇಂತಹ ನಡವಳಿಕೆಯು ಭಾರತೀಯ ಸಮಾಜದಿಂದ ಬಾಹ್ಯವಲ್ಲವೆಂಬುದು ಬೌದ್ಧಮತದ ಚರಿತ್ರೆಯಿಂದ ಗೊತ್ತಾಗುತ್ತದೆ.

ಕ್ರಿಸ್ತಶಕಕ್ಕೆ ಕೆಲವು ಶತಮಾನಗಳ ಹಿಂದೆಯೇ ಇಂಡಿಯಾದೇಶದಲ್ಲಿ ಹುಟ್ಟಿ ಹಲವು ಶತಮಾನಗಳ ಕಾಲ ಇಲ್ಲಿ ಅತ್ಯಂತ ಪ್ರಬಲವಾಗಿದ್ದ ಬೌದ್ಧಮತವು ಈಗ ಅನ್ಯದೇಶೀಯ ಮತವೆಂದು ತೋರುವಷ್ಟುಮಟ್ಟಿಗೆ ಇಲ್ಲಿ ನಿಶ್ಶೇಷವಾಗಿ ಹೋಗಿದೆ. ಶಿಲಾಶಾಸನಗಳ ಪ್ರಬಲತರವಾದ ಪ್ರಮಾಣಗಳಿಲ್ಲದೆ ಹೋಗಿದ್ದರೆ ಬೌದ್ಧಮತವು ಕನ್ನಡ

ದೇಶದಲ್ಲಿ ಹರಡಿತ್ತೆಂದು ಹೇಳುವುದೂ ಅಸಾಧ್ಯವಾಗಿರುತ್ತಿತ್ತು. ಬೌದ್ಧಮತ ವಿಧ್ವಂಸನ ಕಾರ್ಯವು ಈ ದೇಶದಲ್ಲಿ ಇಷ್ಟು ಚೆನ್ನಾಗಿ ನಡೆದಿರುವುದನ್ನು ನೋಡಿದರೆ ಅವರು ಬರೆದ ಗ್ರಂಥಗಳ ವಿನಾಶವು ಏಕೆ, ಹೇಗೆ ಆಗಿರಬೇಕೆಂದು ಊಹಿಸುವುದು ಕಷ್ಟವಾಗಲಾರದು. ಬೌದ್ಧಮತ ವಿನಾಶಕ್ಕೆ ಆರಂಭವಾಗುವುದು ಸುಮಾರು ೭–೮ನೆಯ ಶತಮಾನಗಳಲ್ಲಿ. ಮಹಾಪಂಡಿತನೂ ಕರ್ಮಕಾಂಡ ಪ್ರತಿಪಾದಕನೂ ಆದ ಕುಮಾರಿಲಭಟ್ಟನು ಪ್ರಬಲಿಸಿ ವೇದಪ್ರಾಮಾಣ್ಯವನ್ನು ಸಕಲರೂ ಅಂಗೀಕರಿಸುವಂತೆ ಸ್ಥಾಪನೆಮಾಡುವುದಕ್ಕಾಗಿ ಸುಧನ್ವನಂತಹ ರಾಜರುಗಳ ಸಹಾಯವನ್ನು ಪಡೆದು ಬೌದ್ಧರ ಹುಟ್ಟಡಗಿಸುವ ಕಾರ್ಯದಲ್ಲಿ ಬದ್ಧಕಂಕಣನಾದನು. ಬೌದ್ಧವಿನಾಶಕ್ಕಾಗಿ ವೀರಕರ್ಮಠನಾದ ಆ ಬ್ರಾಹ್ಮಣನು ಮಾಡಿದ ಪ್ರಯತ್ನಗಳು 'ಶ್ರೀಶಂಕರ ದಿಗ್ವಿಜಯ'ದ ಮೊದಲನೆಯ ಆಶ್ವಾಸದಲ್ಲಿ ಉಕ್ತವಾಗಿವೆ. ಆ ಘೋರವಾದ ಧರ್ಮಯುದ್ಧದ ಕಾಲದಲ್ಲಿ ಕನ್ನಡ ನಾಡಿನಲ್ಲಿ ಜೈನಮತಾವಲಂಬಿಗಳಾದ ಗಂಗರು ರಾಷ್ಟ್ರಕೂಟರಂತಹ ಪ್ರಬಲರಾದ ರಾಜರು ಕನ್ನಡ ನಾಡಿನಲ್ಲಿ ಇಲ್ಲದೆ ಹೋಗಿದ್ದರೆ ಜೈನಮತದ ಗತಿಯೂ ಏನಾಗುತ್ತಿತ್ತೋ ಊಹಿಸಬಹುದು. ಆಂಧ್ರದೇಶದಲ್ಲಿ ಜೈನಮತವು ಕೆಲಕೆಲವೆಡೆ ಪ್ರಬಲವಾಗಿತ್ತು. ಕನ್ನಡದಲ್ಲಿಯೂ ತಮಿಳಿನಲ್ಲಿಯೂ ವಿಶೇಷವಾಗಿ ಗ್ರಂಥರಚನೆ ಮಾಡಿದಂತೆಯೇ ಆಂಧ್ರಭಾಷೆಯಲ್ಲಿಯೂ ಗ್ರಂಥ ರಚನೆ ಮಾಡದೆ ಹೋಗಿರಲಾರರು. ಆದರೂ ಆಂಧ್ರಸಾಹಿತ್ಯದಲ್ಲಿ ಹುಡುಕಿದರೂ ಒಂದು ಜೈನಗ್ರಂಥವೂ ದೊರೆಯುವುದಿಲ್ಲ. ಜೈನ, ಬೌದ್ಧಮತದ ವಿರೋಧಿಯಾದ ಕುಮಾರಿಲಭಟ್ಟನು ಆಂಧ್ರನೆಂಬ ಹೇಳಿಕೆಯು ಈ ಸಂದರ್ಭದಲ್ಲಿ ಬೇಕಾದ ವಿವರವನ್ನು ಸೂಚಿಸುತ್ತದೆ. ಆಂಧ್ರ ಜೈನಗ್ರಂಥಗಳಿಗೆ ಬಂದಿರಬಹುದಾದ ಅವಸ್ಥೆಯೇ ಕನ್ನಡ ಬೌದ್ಧ ಗ್ರಂಥಗಳಿಗೂ ಬಂತೆಂದು ಏಕೆ ನಂಬಬಾರದು.

ಇದುವರೆಗೆ ಚರ್ಚಿಸಿರುವ ವಿಷಯಗಳಿಂದ ನಿರ್ಧರಿಸಬಹುದಾದ ಅಂಶಗಳನ್ನು ಸಂಗ್ರಹವಾಗಿ ಬರೆದು ಈ ಲೇಖನವನ್ನು ಮುಗಿಸುತ್ತೇವೆ: ೧. ಬಹುಶಃ ಬೌದ್ಧರೇ ಕನ್ನಡ ಭಾಷೆಗೆ ಆದಿಕವಿಗಳು. ೨. ಕನ್ನಡ ದೇಶದಲ್ಲಿ ಬೌದ್ಧಮತವು ಪ್ರಾಬಲ್ಯಕ್ಕೆ ಬಂದ ಕಾಲದಿಂದ—ಎಂದರೆ ಸುಮಾರು ಕ್ರಿಸ್ತಶಕದ ಆದಿಭಾಗದಿಂದಲೂ ಕನ್ನಡ ಭಾಷೆಯಲ್ಲಿ ಗ್ರಂಥರಚನೆಯಾಗುತ್ತಿದ್ದಿರಬೇಕು. ೩. ಮೊದಮೊದಲು ವಿಶೇಷವಾಗಿ ಗ್ರಂಥ ರಚನೆಗೆ ಮಾರ್ಗದರ್ಶಕರಾದವರು ಬೌದ್ಧರೇ ಆಗಿರಬಹುದು. ೪. ಜನಸಾಮಾನ್ಯದಲ್ಲಿ, ಬೌದ್ಧಮತವನ್ನು ಹರಡಿ ಜನರನ್ನು ತಮ್ಮ ಮತಕ್ಕೆ ಆಕರ್ಷಣಮಾಡಿಕೊಳ್ಳಬೇಕೆಂಬುದು ಬೌದ್ಧಲೇಖಕರ ಉದ್ದೇಶವಾಗಿದ್ದುದರಿಂದ ಆ ಕಾಲದಲ್ಲಿ ವೀರಶೈವ ಮತದ ಪ್ರಾದುರ್ಭಾವಕಾಲದಲ್ಲಿ ಆದಂತೆಯೇ ವಿಶೇಷವಾಗಿ ಗ್ರಂಥರಚನೆಯಾಗಿರಬಹುದು. ೫. ಪ್ರಾಚೀನಕಾಲದಲ್ಲಿ, ಅದರಲ್ಲಿಯೂ ಬೌದ್ಧಮತ ಪ್ರಾಬಲ್ಯವು ನಾಶವಾದಂದಿನಿಂದ ಜೈನರೂ ವೈದಿಕಮತಾನುಸಾರಿಗಳಾದ ಕವಿಗಳೂ ಗ್ರಂಥರಚನೆ ಮಾಡಿದರು. ೬. ಬೌದ್ಧಮತದ ನಾಶದೊಂದಿಗೆ ಬೌದ್ಧಗ್ರಂಥನಾಶವೂ ಆಯಿತು. ಹೀಗಾದುದರಿಂದಲೇ ಕವಿರಾಜಮಾರ್ಗವು ದೊರಕದೆ ಹೋಗಿದ್ದರೆ, ಪ್ರಾಚೀನಕಾಲದಲ್ಲಿ ಕನ್ನಡ

ಸಾಹಿತ್ಯವು ವಿಸ್ತಾರವಾಗಿಯೂ ಉನ್ನತವಾಗಿಯೂ ಇದ್ದಿತೆಂದು ಊಹಿಸುವುದೂ ಅಸಾಧ್ಯವಾಗುತ್ತಿತ್ತು."

ಈ ವಾದದ ಕೆಲವಂಶಗಳು ಗೋವಿಂದ ಪೈ ಅವರಿಗೂ ಸಮ್ಮತವಾಗಿರುವಂತೆ ತೋರುತ್ತದೆ. "ಕನ್ನಡ ಭಾಷೆಗೆ ಜೈನರೇ ಆದಿಕವಿಗಳು"—ಎಂಬ ಕವಿಚರಿತೆಕಾರರ ಅಭಿಪ್ರಾಯಕ್ಕೆ ಪ್ರತಿಕ್ರಿಯೆಯಾಗಿ ಅವರು ಹೀಗೆ ಅಭಿಪ್ರಾಯಪಟ್ಟಿದ್ದಾರೆ.[61] "....ಪ್ರಥಮತಃ ಕನ್ನಡದಲ್ಲಿ ಕಾವ್ಯವನ್ನು ಬರೆದವರು ಜೈನರೋ ಜೈನೇತರರೋ ಎಂಬುದನ್ನು ನಿಶ್ಚೃಷ್ಟವಾಗಿ ಹೇಳುವ ಬಗೆ ಹೇಗೆ ? ಜೈನರಿಂದ ಎಷ್ಟೋ ಮುಂಚೆ ದಕ್ಷಿಣ ದೇಶಕ್ಕೆ ಇಳಿತಂದ ಬೌದ್ಧರೇಕೆ ಕನ್ನಡದಲ್ಲಿ ಕಾವ್ಯರಚನೆಯನ್ನು ತೊಡಗಿರಬಾರದು ? ಅಥವಾ ಬೌದ್ಧರಿಗಿಂತ, ಬುದ್ಧನೇ ಹುಟ್ಟುವುದಕ್ಕಿಂತ ಎಷ್ಟು ಶತಕಗಳ ಹಿಂದೇನೋ ದಕ್ಷಿಣಾಪಥಕ್ಕೆ ಬಂದಿದ್ದ ಬ್ರಾಹ್ಮಣರೇ ಯಾಕೆ ಕನ್ನಡ ಸಾಹಿತ್ಯದ ಸೃಷ್ಟಾರರಾಗಿರಬಾರದು ? ತಮಿಳು-ತೆಲುಗುಗಳಲ್ಲಿ ಜೈನಕಾಲಕ್ಕಿಂತ ಹಿಂದೆಯೇ ಅಗಸ್ತ್ಯ-ಕಣ್ವರಿಂದಲೇ ಆಗಲಿ, ಅಲ್ಲವೆ ಆ ಋಷಿಗಳ ಗೋತ್ರಜರಾರೇ ಅನ್ಯರಿಂದಾಗಲಿ, ಸಾಹಿತ್ಯಾರಂಭವಾಗಿತ್ತೆಂದು ಐತಿಹ್ಯವಿದೆಯಷ್ಟೆ ; ಹಾಗೆಯೇ ಏಕೆ ಕನ್ನಡದಲ್ಲಿಯೂ ಆಗಿಹೋಗಿರಬಾರದು? ಹೇಗೂ ಜೈನರು ಕನ್ನಡ ನಾಡಿನಲ್ಲಿ ಕಾಲೂರುವುದಕ್ಕೆ ಮುಂಚೆ ಇಲ್ಲಿ ಸಾಹಿತ್ಯವಿದ್ದಿಲ್ಲ, ಆ ಬಳಿಕ ತಾನೆ ಆದಾದುದು, ಮತ್ತು ಅವರಿಂದ ತಾನೆ ಆದುದು ಎಂದಿಷ್ಟು ಸಾಧಾರವಾಗಿ ರುಜುವಾಗುವ ತನಕ, ಕನ್ನಡದ ಆದಿಕವಿಗಳು ಯಾರೆಂದು ತಿಳಿದಿಲ್ಲ ಎನ್ನುವುದು ಲೇಸಲ್ಲದೆ, ಈಗ ನಮಗುಳ್ಳ ಸಾಹಿತ್ಯದಲ್ಲಿ ಹಳೆಯವು ಜೈನಗ್ರಂಥಗಳು, ಉತ್ಕೃಷ್ಟವಾಗಿರುವುವುಗಳಲ್ಲಿ ಹೆಚ್ಚಿನವು ಜೈನಗ್ರಂಥಗಳು ಎಂಬಿಷ್ಟು ಕಾರಣದಿಂದಲೆ, ಕನ್ನಡ ಸಾಹಿತ್ಯದ ಆದಿಕವಿಗಳು ಜೈನರೆಂದು ಇಷ್ಟು ಸುನಿಶ್ಚಿತವಾಗಿ ಹೇಳುವುದು ಸಂ. ಯೆಂದಾಗದು."

ಟಿ. ಎಸ್. ವೆಂಕಣ್ಣಯ್ಯನವರ ವಾದಸರಣಿಗೆ ಮುಂದೆ ಹೀಗೆ ವಿರಳವಾಗಿ ಕೆಲವರು ಸಾಹಿತ್ಯಚರಿತ್ರಕಾರರು ಒಪ್ಪಿಗೆ ಕೊಟ್ಟಿದ್ದರೂ ಅಸಮ್ಮತಿ ಸೂಚಿಸಿದವರ ಹಾಗೂ ತಾಟಸ್ಥ್ಯಪಕ್ಷವನ್ನು ವಹಿಸಿದವರ ಸಂಖ್ಯೆಯೇ ಹೆಚ್ಚು ಎಂದು ಹೇಳಬಹುದು. ಬೌದ್ಧ ಕವಿ ಬರೆದುದೆಂಬ ಒಂದೇ ಒಂದು ಸಾಹಿತ್ಯಕೃತಿ ದೊರೆಯುವುದಿಲ್ಲ ಎನ್ನುವುದು ಮೊದಲುಗೊಂಡು, ಹಲವು ಕಾರಣಗಳನ್ನು ಎತ್ತಿಹಿಡಿದು, ಅಷ್ಟು ಹಿಂದೆ ಕನ್ನಡದಲ್ಲಿ ಗ್ರಂಥಸ್ಥ ಸಾಹಿತ್ಯವಿರಲಿಲ್ಲವೆಂದು ಕೆಲವರು ಸ್ಪಷ್ಟಪಡಿಸುವ ಯತ್ನಮಾಡಿದ್ದಾರೆ. ಇವರಲ್ಲಿ 'ಕನ್ನಡವಕ್ಕಿ' ಎಂಬ ಮರೆಹೆಸರಿನ ಒಬ್ಬ ಲೇಖಕರು ಹೀಗೆ ವಾದಿಸಿದ್ದಾರೆ.[೬೨] ಇದು ಮೌರ್ಯ, ಸಾತವಾಹನ ಮತ್ತು ಕದಂಬರ ಕಾಲ.. ಕ್ರಿ.ಶ. ೬ನೆಯ ಶತಮಾನದ ವರೆಗೆ ಆಂಧ್ರ, ಕರ್ಣಾಟಕ ಮತ್ತು ತಮಿಳು ದೇಶಗಳಲ್ಲಿ ದೊರೆತ ಶಾಸನಗಳೆಲ್ಲ ಪ್ರಾಕೃತ ಭಾಷೆಯಲ್ಲಿಯೇ ಇವೆ. ಆ ಕಾಲದ ರಾಜರು ಹೊರಡಿಸುತ್ತಿದ್ದ ರಾಜಾಜ್ಞೆಗಳ, ಅಶೋಕನ ಧರ್ಮಪ್ರಸಾರದ ಹಾಗೂ ವಿವಿಧ ಜಾತಿವೃತ್ತಿಗಳ ಜನರು ಪ್ರಚುರಿಸಿದ ದಾನಧರ್ಮಗಳ ವಿಷಯವನ್ನು ಆ ಶಾಸನಗಳು ಒಳಕೊಂಡಿರುವುದನ್ನು ನೋಡಿದರೆ ಅವು

ಗಳ ಬರೆಹದ ಪ್ರಾಕೃತಭಾಷೆ ದ್ರಾವಿಡದೇಶದಲ್ಲೆಲ್ಲ ಚೆನ್ನಾಗಿ ಪರಿಚಿತವಾಗಿತ್ತೆಂದು ಸ್ಪಷ್ಟವಾಗುತ್ತದೆ. ದಕ್ಷಿಣದೇಶಕ್ಕೆ ಬಂದ ಬೌದ್ಧಮತ ಪ್ರಚಾರಕರು ಆ ದೇಶೀಯರಿಗೆ ಪ್ರಾಕೃತದ ಪರಿಚಯವಿದ್ದುದರಿಂದ, ಅರ್ಥವಾಗುತ್ತಿದ್ದುದರಿಂದ, ತಮ್ಮ ಮತತತ್ತ್ವಗಳನ್ನು ಆ ಭಾಷೆಯಲ್ಲೇ ಜನರಿಗೆ ಬೋಧಿಸಿದರು. ದ್ರಾವಿಡಭಾಷಾ ವ್ಯವಸಾಯಕ್ಕೆ ಅವರು ಕೈಹಾಕಲು ಅವಕಾಶವೂ ಇರಲಿಲ್ಲ, ಆವಶ್ಯಕತೆಯೂ ಕಾಣಬರಲಿಲ್ಲ. ಆದ್ದರಿಂದ ನಮಗೆ ಬೌದ್ಧರ ಗ್ರಂಥಗಳೊಂದು ಇಲ್ಲಿಯ ಭಾಷೆಗಳಲ್ಲಿ ಕಾಣಬರುವುದಿಲ್ಲ. ಅಲ್ಲದೆ ಕರ್ಣಾಟಕದಲ್ಲಿ ಬೌದ್ಧಮತ ಅಷ್ಟು ಚೆನ್ನಾಗಿ ಪ್ರಚಾರವೂ ಆಗಲಿಲ್ಲ; ಜೈನಪ್ರಾಬಲ್ಯದಿಂದ ಅದು ಬೇಗ ಕೊನೆಗೊಂಡಿತು. ಆದ್ದರಿಂದ "ಬೌದ್ಧರೇ ಕನ್ನಡಕ್ಕಾದಿ ಕವಿಗಳು, ಬೌದ್ಧಮತದ ನಾಶದೊಂದಿಗೆ ಬೌದ್ಧಗ್ರಂಥಗಳೂ ನಾಶವಾದುವು"—ಎಂಬ ಊಹೆ ನಿರಾಧಾರವಾದ್ದು.

ಈ ವಿಷಯದಲ್ಲಿ ಬಿ. ಎಂ. ಶ್ರೀಕಂಠಯ್ಯನವರೂ ಆರ್. ನರಸಿಂಹಾಚಾರ್ಯರೂ ಇಷ್ಟು ಸ್ಪಷ್ಟವಾಗಿ ಕನ್ನಡದಲ್ಲಿ ಬೌದ್ಧಸಾಹಿತ್ಯದ ಅಸ್ತಿತ್ವವನ್ನು ಅಲ್ಲಗಳೆಯಲಿಲ್ಲ; ತಮ್ಮ ಅನಿಶ್ಚಿತವಾದ ನಿಲವನ್ನು ವ್ಯಕ್ತಪಡಿಸಿ ಮುಂದುವರಿದಿರುವುದು ಕಾಣುತ್ತದೆ: (i) ಶ್ರೀಕಂಠಯ್ಯನವರ ಮಾತು:[೬೩] "....ಬ್ರಾಹ್ಮಣರು ದೇಶಭಾಷೆಯಲ್ಲಿ ಮತಪ್ರಚಾರಣೆಯನ್ನು ಮಾಡಲಿಲ್ಲ; ಸಂಸ್ಕೃತವನ್ನೇ ಉಪಯೋಗಿಸಿದರು. ಬೌದ್ಧರು ಮಾಡಿದ್ದರೂ ಮಾಡಿರಬಹುದು; ಆದರೆ ಆ ಕಾಲದಲ್ಲಿ ಪ್ರಾಕೃತವೇ ಹೆಚ್ಚು ಪ್ರಚಾರದಲ್ಲಿದ್ದದ್ದರಿಂದ ಅದರಲ್ಲಿಯೇ ಬರೆದಿರಬಹುದು; ಕನ್ನಡದಲ್ಲಿ ಬರೆದಿದ್ದರೆ ೮–೯ನೆಯ ಶತಮಾನದ ಹೊತ್ತಿಗೆ ಅವರು ಕ್ಷೀಣದೆಶೆಗೆ ಬಂದು ಅವರ ಮಠಗಳೆಲ್ಲಾ ನಾಶವಾದದ್ದರಿಂದ ಅವರ ಗ್ರಂಥಗಳು ನಾಶವಾಗಿರಬೇಕು. ನಮಗೆ ತಿಳಿದಿರುವ ಮಟ್ಟಿಗೆ ಜೈನಮತಗ್ರಂಥಗಳೇ ಮೊದಲು ಕನ್ನಡದಲ್ಲಿ ಹೊರಟುವು ಎಂದು ಹೇಳಬೇಕಾಗಿದೆ." (ii) ಆರ್. ನರಸಿಂಹಾಚಾರ್ಯರ ಅಭಿಪ್ರಾಯದ ಸಾರಾಂಶ:[೬೪] ಜೈನರ ಕಾಲಕ್ಕಿಂತ ಮೊದಲು ಬೌದ್ಧಕಾಲವೊಂದು ಕನ್ನಡ ಸಾಹಿತ್ಯದಲ್ಲಿ ಆಗಿರಬೇಕೆಂದು ಕೆಲವರು ವಿದ್ವಾಂಸರು ಸೂಚಿಸಿದ್ದಾರೆ. ತೆಲುಗು ವಿದ್ವಾಂಸರು ಕೆಲವರು ತಮ್ಮ ಸಾಹಿತ್ಯದ ವಿಷಯದಲ್ಲಿ ಕೂಡ ಇಂಥದೇ ಸೂಚನೆ ಮಾಡಿದ್ದಾರೆ; ತಮ್ಮ ಸಾಹಿತ್ಯದಲ್ಲಿ ಕೆಲವೇ ಜೈನಕೃತಿಗಳು ಉಳಿದುಬಂದಿದ್ದರೂ ಬೌದ್ಧಕೃತಿಗಳು ಪೂರ್ತಿಯಾಗಿ ನಷ್ಟವಾಗಿವೆಯೆಂದು ಅವರು ಹೇಳಿದ್ದಾರೆ. ಬೇರೆ ಬೇರೆ ಕಾಲಗಳಲ್ಲಿ ಬೌದ್ಧರೂ ಜೈನರೂ ಒಟ್ಟಿಗೆ ಬರೆದಿರುವುದರಿಂದ ತಮಿಳಿನ ವಿಚಾರದಲ್ಲಿ ಹೀಗೆ ಒಂದಾದ ಮೇಲೆ ಒಂದು ಕಾಲವಿಭಾಗಗಳನ್ನು ಅಲ್ಲಿ ಹೇಳುವುದಿಲ್ಲ. ಸ್ವಲ್ಪವೇ ಇರುವ ಬೌದ್ಧಕೃತಿಗಳು ಇಲ್ಲಿ ೧೧ನೆಯ ಶತಮಾನದವರೆಗೆ ಬೇರೆಯವರ ಕೃತಿಗಳ ಜತೆಜತೆಗೆ ಸಿಗುತ್ತವೆ....ಕನ್ನಡದಲ್ಲಿ ಬೌದ್ಧಕಾಲವೆಂಬುದು ಒಂದು ಇದ್ದಿತೋ ಇಲ್ಲವೋ ಇಲ್ಲಿಯ ಸಾಹಿತ್ಯವಂತೂ ಸಾಕಷ್ಟು ಪ್ರಾಚೀನವಾದ್ದು.

ಹೀಗೆಯೇ ಎಸ್. ಶ್ರೀಕಂಠಶಾಸ್ತ್ರಿಯವರ ಒಂದು ಹೇಳಿಕೆಯಲ್ಲಿ ಕೂಡ ಒಂದು ಅನಿಶ್ಚಿತವಾದ ನಿಲವು ಹೀಗೆ ವ್ಯಕ್ತಗೊಂಡಿದೆ:[೬೪ಅ] "ದೇಶಭಾಷೆಗಳಲ್ಲಿ ವಾಙ್ಮಯ

ಪ್ರಪಂಚ ಮೂಲಸ್ತಂಭವು ಜೈನಕವಿಗಳಿಂದಲೇ ನಡಲ್ಪಟ್ಟಿತೆಂಬುದು ಸರ್ವಜನಶ್ಲಾಘ್ಯವಾಗಿದೆ. ಕಾರ್ಣಾಟಕಾಂಧ್ರದ್ರವಿಡ ವಾಙ್ಮಯಗಳಲ್ಲಿ ಜೈನಯುಗಕ್ಕೆ ಮುಂಚಿತವಾಗಿ ಒಂದು ಬೌದ್ಧಯುಗವಿದ್ದಿತೋ ಇಲ್ಲವೋ ಸಂಶಯಾರ್ಹವಾದುದೇ ವಿನಾ ನಿಶ್ಚಯಾಂಶವಲ್ಲ. ಹಾಗಿದ್ದ ಪಕ್ಷದಲ್ಲಿ ಬೌದ್ಧ ವಾಙ್ಮಯವೆಲ್ಲವೂ ನಿಶ್ಶೇಷವಾಗಿ ನಿರ್ನಾಮವಾಯಿತೆಂದು ಹೇಳಲು ಜೈನಬ್ರಾಹ್ಮಣ ಮತಗಳ ಉಚ್ಛ್ರಾಯಸ್ಥಿತಿಯೆಂಬ ಕಾರಣವೊಂದೇ ಸಾಲದು."

ಈ ಸ್ಪಷ್ಟ ತಿರಸ್ಕರಣೆ ತಾಟಸ್ಥ್ಯಗಳು ಮುಂದಿನ ಶೋಧಕ ಪ್ರಯತ್ನಗಳನ್ನು ಒಂದು ಬಗೆಯಲ್ಲಿ ನಿರುತ್ಸಾಹಗೊಳಿಸಿದಂತೆ ತೋರುತ್ತದೆ. ಆದರೂ ಈಚೆಗೆ ರಂ. ಶ್ರೀ ಮುಗಳಿಯವರು ಈ ಬಗ್ಗೆ ತಮ್ಮ ಚಿಂತನೆಯನ್ನು ಹೀಗೆ ನಿರೂಪಿಸಿದ್ದಾರೆ:[೬೫] "ಕ್ರಿ.ಪೂ. ೩ನೆಯ ಶತಕ ಎಂದರೆ ಅಶೋಕನ ಕಾಲದಿಂದ ಬೌದ್ಧಮತಪ್ರಚಾರವು ದಕ್ಷಿಣದಲ್ಲಿ ಆರಂಭವಾಗಿ ಕ್ರಿ.ಶ. ಮೊದಲ ಶತಕದವರೆಗೆ ಪ್ರಭಾವಿಯಾಗಿದ್ದು ಆಮೇಲೆ ಇತರ ಭಾರತದಲ್ಲಿ ಕುಂದಿದಂತೆ ಇಲ್ಲಿಯೂ ಕುಂದುತ್ತ ಹೋಯಿತೆಂಬುದು ಸತ್ಯ. ಬನವಾಸಿಯಲ್ಲಿದ್ದ ವಿಹಾರಗಳು, ಆ ಮೇಲಿನ ಬೌದ್ಧ ಉಲ್ಲೇಖಗಳು, ೧೧ನೆಯ ಶತಮಾನದವರೆಗಿದ್ದ ಡಂಬಳದ ವಿಹಾರ ಇವು ಬೌದ್ಧವರ್ಚಸ್ಸಿಗೆ ಸಾಕ್ಷಿಯಾಗಿವೆ. ಶಾತವಾಹನವಂಶದ ರಾಜರು ಬೌದ್ಧಮತಕ್ಕೆ ತುಂಬ ಆಶ್ರಯವನ್ನು ಕೊಟ್ಟರೆಂದೂ ತಿಳಿಯುತ್ತದೆ. ಆದರೆ ಕನ್ನಡದಲ್ಲಿ ಗ್ರಂಥರಚನೆ ಮಾಡುವ ಪ್ರೇರಣೆ ಸಾಹಿತಿಗಳಲ್ಲದ ಆ ಪ್ರಚಾರಕ ಸಂನ್ಯಾಸಿಗಳಿಗೆ ದೊರೆತಿರಲಾರದು. ಕನ್ನಡದಲ್ಲಿ ಅವರು ಗ್ರಂಥಗಳನ್ನು ರಚಿಸಿದ್ದರೆ, ಒಂದು ಗ್ರಂಥವೂ ಇಂದು ಉಪಲಬ್ಧವಾಗದೆ ಇರುವುದೇಕೆ ಎಂಬುದು ತಿಳಿಯದು. ಸಂಸ್ಕೃತ-ಪ್ರಾಕೃತದಲ್ಲಿಯೂ ಅವರು ಗ್ರಂಥರಚನೆ ಮಾಡಿದಂತಿಲ್ಲ. ಹೆಚ್ಚಾಗಿ ಅವರು ಪ್ರಾಕೃತ ಭಾಷೆಯಲ್ಲಿದ್ದ ಮತಗ್ರಂಥಗಳ ಆಧಾರದಿಂದ ಬೋಧೆಯನ್ನು ಮಾಡಿರಬಹುದು. ಇದರಿಂದ ದಕ್ಷಿಣದಲ್ಲಿಯ ಜನಕ್ಕೆ ಪ್ರಾಕೃತ ತಿಳಿಯುತ್ತಿತ್ತೆಂದೂ ಅದು ವ್ಯವಹಾರ ಭಾಷೆಯಾಗಿತ್ತೆಂದೂ ಸಿದ್ಧವಾಗುವುದಿಲ್ಲ. ಪಂಡಿತರಲ್ಲಿ ಸಂಸ್ಕೃತ ಪ್ರಾಕೃತ ಎರಡನ್ನೂ ಬಲ್ಲವರ ಸಂಖ್ಯೆ ಹೆಚ್ಚಾಗುತ್ತಿರಬೇಕು. ಅಂತೇ ಎರಡೂ ಭಾಷೆಗಳಲ್ಲಿ ಶಾಸನಗಳನ್ನು ಬರೆಯುವ ಸಲುವಳಿ ಉಂಟಾಗಿರಬೇಕು. ಜನಕ್ಕೆ ತಿಳಿಯುವ ಭಾಷೆಯಲ್ಲಿ ಶಾಸನ ಬರೆಯಬೇಕೆಂಬ ತತ್ತ್ವವು ಆಗಿನ್ನೂ ಬೇರೂರಿರಲಿಲ್ಲ."

ಟಿ. ಎಸ್. ವೆಂಕಣ್ಣಯ್ಯನವರು ಮೊದಲ ಸಲ ಸಾಹಿತ್ಯಚರಿತ್ರೆಯ ಕಾಲವಿಭಾಗದ ದೃಷ್ಟಿಯಿಂದಲೂ ಪ್ರಾಚೀನತೆಯ ದೃಷ್ಟಿಯಿಂದಲೂ 'ಕನ್ನಡದಲ್ಲಿ ಬೌದ್ಧರು ಗ್ರಂಥಗಳನ್ನು ಬರೆದಿದ್ದಾರೆಯೇ ?' ಎಂಬ ಮಹತ್ವದ ಪ್ರಶ್ನೆಯನ್ನೆತ್ತಿಕೊಂಡು ಬರೆದಿರುವುದು ಸಾಧ್ಯ. ಈಗ ಆ ಧರ್ಮ ಅಳಿದುಹೋದಂತೆಯೇ ಆ ಸಾಹಿತ್ಯವೂ ಅಳಿದುಹೋಗಿದೆ ಎಂಬ ಉತ್ತರವನ್ನು ತಮಗೆ ತೋರಿದ ಆಧಾರಗಳ ಮೇಲೆ ಅವರು ಕಂಡುಕೊಂಡಿದ್ದಾರೆ. ಆ ಆಧಾರಗಳನ್ನು ಹೀಗೆ ಪಟ್ಟಿ ಮಾಡಬಹುದು: (i) ಸಾತವಾಹನರು ಮತ್ತು ಪಲ್ಲವರು ಬೌದ್ಧಮತಕ್ಕೆ ವಿಶೇಷವಾಗಿ ಪ್ರೋತ್ಸಾಹವನ್ನಿತ್ತರು; ದೊರೆಗಳಿಂದ ಜನಸಾಮಾನ್ಯರ

ವರೆಗೆ ದೇವಾಲಯ ಮತ್ತು ಮಠಗಳ ನಿರ್ಮಾಣಕ್ಕೆ ನೆರವು ದೊರೆತು ಆ ಮತ ಕ್ರಿ.ಶ. ೬-೭ನೆಯ ಶ. ದವರೆಗೆ ಇಲ್ಲಿ ಪ್ರಾಬಲ್ಯ ಸ್ಥಿತಿಯಲ್ಲಿರಲು ಸಾಧ್ಯವಾಯಿತು. (ii) ಬುದ್ಧನು ಧರ್ಮಬೋಧೆಗಾಗಿ ತಾನು ಸಂಚಾರಮಾಡಿದ ರಾಜ್ಯದಲ್ಲಿ ಜನರು ಆಡುತ್ತಿದ್ದ ಪಾಳಿ ಎಂಬ ಪ್ರಾಕೃತಭಾಷೆಯನ್ನು ಬಳಸುವುದರ ಮೂಲಕವಾಗಿ ಒಂದು ವಿಧದಲ್ಲಿ ದೇಶ ಭಾಷಾ ಸಾಹಿತ್ಯಗಳ ಬೆಳೆವಣಿಗೆಗೆ ಬೀಜವನ್ನು ಬಿತ್ತಿದನು. (iii) ಬೌದ್ಧಮತಪ್ರಸಾರಕ್ಕೆ ಎಂದು ಅಶೋಕನಿಂದ ಕಳುಹಲ್ಪಟ್ಟ ಧರ್ಮಪ್ರಸಾರಕರು ತಮ್ಮ ಮತದ ವಿಷಯವನ್ನು ಕನ್ನಡ ನಾಡಿನ ಜನಸಾಮಾನ್ಯರಲ್ಲಿ ಹರಡುವುದಕ್ಕಾಗಿ ಕನ್ನಡ ಭಾಷೆಯನ್ನು ಕಲಿತಿರಬೇಕು, ಅದರಲ್ಲಿ ಗ್ರಂಥಗಳನ್ನು ರಚಿಸಿರಬೇಕು. (iv) ತಮಿಳು ಮತ್ತು ಬಂಗಾಳಿಭಾಷೆಗಳಲ್ಲಿ ಪ್ರಾಚೀನ ಸಾಹಿತ್ಯ ರಚಿತವಾಗಿರುವುದು ಬೌದ್ಧರಿಂದ. ಹಾಗೆಯೇ ಕವಿರಾಜಮಾರ್ಗದಲ್ಲಿ ಉಕ್ತರಾಗಿರುವ ಕವಿಗಳಲ್ಲಿ ಕೆಲವರಾದರೂ ಬೌದ್ಧಧರ್ಮದವರಾಗಿರುವುದು ಅಸಂಭವವಲ್ಲ. (v) ಕ್ರಿ.ಶ. ಸು. ೭-೮ನೆಯ ಶತಮಾನದ ಹೊತ್ತಿಗೆ ಪ್ರಬಲಿಸಿದ ವೈದಿಕ ಮತದ ಪ್ರಾಬಲ್ಯದಿಂದ, ಆ ಮತದ ಧುರೀಣರ ಬೌದ್ಧಮತ ವಿರೋಧಿಯಾದ ಚಟುವಟಿಕೆಗಳಿಂದ ಬೌದ್ಧಮತ ಈ ನಾಡಿನಲ್ಲಿ ಕ್ಷೀಣಿಸಿತು; ಅದರ ಪರಿಣಾಮವಾಗಿ ಬೌದ್ಧಕವಿಗಳ ಹೆಸರಳಿದು ಅವರ ಗ್ರಂಥಗಳ ಗುರುತುಗಳೂ ನಾಶವಾದುವು. ಇದೇ ಕಾರಣಕ್ಕಾಗಿ ಆಂಧ್ರದಲ್ಲಿ ಜೈನಗ್ರಂಥಗಳು ಅಳಿದುಹೋದುದು ಸದೃಶವಾದ ಸಂದರ್ಭವೆನ್ನಬಹುದು.

ಹೀಗೆ ಸಂಗ್ರಹಿಸಿದ ವಾದವನ್ನು ಇಲ್ಲಿ ಸ್ವಲ್ಪಮಟ್ಟಿಗೆ ವಿಮರ್ಶಿಸಬಹುದು. ಪ್ರಾಚೀನ ಕನ್ನಡ ಸಾಹಿತ್ಯದ ಇತಿಹಾಸದ ಒಂದು ಘಟ್ಟದಲ್ಲಿ ಬೌದ್ಧಕವಿಗಳ ಕಾಲ ಒಂದಿತ್ತೇ ಎಂಬುದು ಈಗಿನ ಮಟ್ಟಿಗೆ ಒಂದು ಬರಿಯ ಊಹೆಯೇ. ಕ್ರಿ.ಪೂ. ೩ನೆಯ ಶತಕದಿಂದ ಕ್ರಿ.ಶ. ೩ನೆಯ ಶತಮಾನದರೆಗೆ ದಕ್ಷಿಣಭಾರತದ ಐತಿಹಾಸಿಕ ಸ್ಥಿತಿಗತಿಗಳನ್ನು ನೋಡಿದರೆ, ಮೌರ್ಯರು, ಸಾತವಾಹನರು ಮತ್ತು ಅವರ ಕೆಲವು ಶಾಖೆಗಳವರು ಹಾಗೂ ಆದಿ ಕದಂಬರು ಕರ್ಣಾಟಕದೇಶವನ್ನಾಳಿದುದು ತಿಳಿಯುತ್ತದೆ. ಈ ಕಾಲದಲ್ಲಿ ವೈದಿಕ ಮತ್ತು ಬೌದ್ಧಧರ್ಮಗಳು ಪ್ರಾಬಲ್ಯಸ್ಥಿತಿಯಲ್ಲಿದ್ದು ವೈದಿಕಧರ್ಮದ ಅನುಯಾಯಿಗಳು ಆರ್ಷೇಯವಾದ ವೈದಿಕಸಾಹಿತ್ಯವನ್ನು ಸಂಸ್ಕೃತಮೂಲವನ್ನು ಹಿಡಿದು, ಬೌದ್ಧರು ಬುದ್ಧನ ಉಪದೇಶಸಂಹಿತೆಯನ್ನು ಪ್ರಾಕೃತ ಮೂಲವನ್ನು ಹಿಡಿದು ತಮ್ಮ ಧರ್ಮದ ಪೋಷಣೆಗೆ, ಪ್ರಭಾವನೆಗೆ ಬಳಸಿಕೊಳ್ಳುತ್ತಿದ್ದರು. ಬ್ರಾಹ್ಮಣರು ನಿತ್ಯನೈಮಿತ್ತಿಕಾದಿ ಕರ್ಮಗಳ ನಿರ್ವರ್ತನೆಗೆ, ಆಧ್ಯಾತ್ಮಿಕ ಸಾಧನೆಗೆ ಪರಂಪರಾಗತವಾದ ವೈದಿಕವಾಙ್ಮಯ ಸಮೃದ್ಧವಾಗಿ ಒದಗಿದ್ದರಿಂದ ಅವುಗಳ ರೂಪಾಂತರಗಳಿಗಾಗಿ ದೇಶಭಾಷೆಯನ್ನು ಆಶ್ರಯಿಸುವ ಅಗತ್ಯ ಅವರಿಗೆ ಬೀಳಲಿಲ್ಲ.

ಬ್ರಾಹ್ಮೀಲಿಪಿಯ ಅಶೋಕನ ಪ್ರಾಕೃತಶಾಸನಗಳ ಮೂಲಕ ಪ್ರಾಕೃತವು ಆ ಕಾಲದ ರಾಜಭಾಷೆಯೋ ವ್ಯವಹಾರಭಾಷೆಯೋ ಆಗಿದ್ದುದು ಸ್ಪಷ್ಟ. ಜನಸಾಮಾನ್ಯರನ್ನು ಉದ್ದೇಶಿಸಿ ಹೊರಡಿಸಿದ, ನೀತಿನಿರೂಪಣೆಯೇ ಮುಖ್ಯವಿಷಯವಾದ ಆ ಶಾಸನ

ಗಳ ಭಾಷೆ ಸಕಲರಿಗೂ ಅಲ್ಲವಾದರೆ ಹೆಚ್ಚು ಮಂದಿಗಾದರೂ ತಿಳಿಯುವಂತಿರದಿದ್ದರೆ ಅಶೋಕನು ಅದರ ಸ್ಥಾನದಲ್ಲಿ ಸೂಕ್ತವಾದ ಜನಭಾಷೆಯನ್ನೇ ಬಳಸುತ್ತಿದ್ದನೆಂದು ತೋರುತ್ತದೆ. ಕನ್ನಡ ನಾಡಿನಲ್ಲಿ ಪ್ರಾಕೃತ ಭಾಷೆ ವ್ಯಾಪಕವಾದ ಪ್ರಭಾವವನ್ನೇ ಹೊಂದಿದ್ದುದನ್ನು ಇದು ತೋರಿಸುತ್ತದೆ. ಅಶೋಕನು ಕಳುಹಿಸಿದ ಬೌದ್ಧಮತ ಪ್ರಚಾರಕರು ಬುದ್ಧನ ಉಪದೇಶಗಳನ್ನೂ ಮತತತ್ತ್ವಗಳನ್ನೂ ಪ್ರಾಕೃತದಲ್ಲಿ ಬೋಧಿಸಿದರೋ ಕನ್ನಡದಲ್ಲಿಯೋ ಊಹಿಸಲು ಸರಿಯಾದ ಪ್ರಮಾಣಗಳಿಲ್ಲ. ಅವರು ಈ ಪ್ರದೇಶದ ದೇಶಭಾಷೆಯಲ್ಲಿ, ಎಂದರೆ ಕನ್ನಡದಲ್ಲಿ ಬೋಧಿಸಿದ್ದರೂ ಇರಬಹುದು. ಸಾರಾಂಶವನ್ನು ಅಶೋಕನ ಶಿಲಾಶಾಸನಗಳೇ ಒಳಕೊಂಡಿರುತ್ತಿದ್ದುದು ಕಾರಣವಾಗಿ ಅಥವಾ ಈ ಬಗೆಯ ಇತರ ಕಾರಣಗಳಿಂದಾಗಿ ಅವರು ಗ್ರಂಥರಚನೆಗೆ ತೊಡಗಲಿಲ್ಲವೋ ಏನೋ. ಸಾಹಿತ್ಯರಚನೆಗೆ ಅನುವಾಗುವ ಹದಕ್ಕೆ ಭಾಷೆ ಇನ್ನೂ ಸಿದ್ಧವಾಗಿರಲಿಲ್ಲವೋ ಏನೋ. ಸಂಸ್ಕೃತ ಪ್ರಾಕೃತಗಳನ್ನು ತಿಳಿದಿರುತ್ತಿದ್ದ ಅಂದಿನ ಸುಶಿಕ್ಷಿತ ಸಾಮಾಜಿಕವರ್ಗದೊಡನೆ ಅವರು ತಮಗೆ ಸಹಜವಾಗಿಯೇ ಪರಿಣತಿಯಿರುತ್ತಿದ್ದ ಆಯಾ ಭಾಷೆಗಳಲ್ಲಿಯೇ ವ್ಯವಹರಿಸುತ್ತಿದ್ದಿರಬಹುದು.

ಮುಂದೆ ಸಾತವಾಹನರು, ಅವರ ಶಾಖೆಯ ಚುಟುಗಳು ಮಹಾರಠಿಗಳು ಮೊದಲಾದವರು ಮತ್ತು ಮೊದಲ ಕದಂಬರಾಜರು ಮೌರ್ಯರನ್ನನುಸರಿಸಿ ಪ್ರಾಕೃತಭಾಷೆಗೆ ಮನ್ನಣೆಕೊಟ್ಟರು. ಈ ಸೀಮೆಯ ಕನ್ನಡ ಅಥವಾ ತೆಲುಗು ಭಾಷೆಗೆ ಪ್ರಾಮುಖ್ಯ ಕೊಡದೆ ಪ್ರಾಕೃತಭಾಷೆಗೆ ಆಡಳಿತಭಾಷೆಯ ಹಿರಿತನವನ್ನು ಕೊಟ್ಟದ್ದು ಅದರಲ್ಲೇ ಶಾಸನಗಳನ್ನೂ ನಾಣ್ಯಗಳನ್ನೂ ಪ್ರಕಟಿಸಿದ್ದರಿಂದ ತಿಳಿಯುತ್ತದೆ. ಪ್ರಾಕೃತಸಾಹಿತ್ಯ ಸಾತವಾಹನರ ರಾಜ್ಯಾವಧಿಯಲ್ಲಿ ವಿಶೇಷವಾಗಿ ಪೋಷಣೆಗೊಂಡಿತೆಂಬುದನ್ನು ನೆನೆದರೆ, ದೇಶಭಾಷೆಗಳಲ್ಲಿ ಸಾಹಿತ್ಯಿಕ ಚಟುವಟಿಕೆಗಳು ನಡೆಯುವುದಕ್ಕೆ ತಕ್ಕ ಪೋಷಣೆ ಪ್ರೋತ್ಸಾಹಗಳ ವಾತಾವರಣ, ಭಾಷೆಯ ಕಸುವು ಕೌಶಲಗಳು ಆ ಉತ್ತರಕಾಲದಲ್ಲಿ ಬೆಳೆಯುತ್ತ ಹೋಗಲು ಆ ಸನ್ನಿವೇಶ ತಳಹದಿಯಂತೆ ಕೆಲಸಮಾಡಿತೆಂದು ಕಾಣುತ್ತದೆ. ವೈದಿಕ ಅನುಯಾಯಿಗಳಾಗಿದ್ದ ಸಾತವಾಹನರು ಮೊದಲು ಬೌದ್ಧಧರ್ಮದ ಸಹಿಷ್ಣುಗಳಾಗಿ, ಬಳಿಕ ಸಕ್ರಿಯ ಪೋಷಕರೂ ಆದರು. ಜೈನಧರ್ಮ ಕರ್ಣಾಟಕದಲ್ಲಿ ಬೇರೂರಿ ಬಲಗೊಂಡಂತೆ ಬೌದ್ಧಧರ್ಮ ಬಲಗೊಳ್ಳುವುದಕ್ಕೆ ಆಗಲಿಲ್ಲ. ಜೈನಧರ್ಮವನ್ನಪ್ಪಿದ ದೊರೆಗಳೂ ಪಂಡಿತರೂ ಪುರಾಣಕಾರರೂ ಆ ಧರ್ಮದ ಪ್ರಸಾರದಲ್ಲಿ ತುಂಬ ಉತ್ಸಾಹ ತೋರಿದರು. ಬ್ರಾಹ್ಮಣೇತರ ಸಮಾಜವರ್ಗದ ಮೇಲೆ ಅದರ ಪ್ರಭಾವ ಗಾಢವಾಗಿ ಆಗಿ, ಜನಸಾಮಾನ್ಯರೂ ಆ ಧರ್ಮದ ತೆಕ್ಕೆಗೆ ಬರುವಂತಾದಮೇಲೆ ಅವರನ್ನು ಅದರಲ್ಲಿಯೇ ನೆಲೆಗೊಳಿಸುವ ಹೊಣೆಗಾರಿಕೆ ಮತಾಚಾರ್ಯರ ಮೇಲೆ, ಕವಿಗಳ ಮೇಲೆ ವಿಶೇಷವಾಗಿ ಬಿದ್ದಿತು.[66] ತಾವು ಸಂಸ್ಕೃತ ಪ್ರಾಕೃತ ಪ್ರೇಮಿಗಳೂ ಪಂಡಿತರೂ ಆಗಿದುದ್ದು ದಿಟ. ಆದರೆ ಈ ಮೇಲಿನ ಹೊಣೆಗಾರಿಕೆಯಿಂದಾಗಿ ಅವರು ತಮ್ಮ ಮತತತ್ತ್ವಗಳನ್ನು ಜನ ಭಾಷೆಯಲ್ಲಿ, ಆ ವೇಳೆಗೆ ಗ್ರಂಥರಚನೆಗೆ ಬಲಿತು ಬೆಳೆದಿದ್ದ ಭಾಷೆಯಲ್ಲಿ

ಹೇಳುವುದು ಸೂಕ್ತವೆಂದು ಸುಲಭವೆಂದೂ ಅವರಿಗೆ ತೋರಿತು. ಆದರೆ ಇಂಥ ಸಂದರ್ಭ ಸಾತವಾಹನರ ಮತ್ತು ಆದಿಕದಂಬರ ಕಾಲದಲ್ಲಿರಲಿಲ್ಲವೆಂದು ಕಾಣುತ್ತದೆ.

ಸಂಸ್ಕೃತ ಪ್ರಾಕೃತಸಾಹಿತ್ಯಗಳ ವಸ್ತುವಿನ್ಯಾಸ ಭಾವಭಾವನೆಗಳನ್ನೂ ಭಾಷಾ ಶೈಲಿಗಳನ್ನೂ ಪದ ಪದಪುಂಜಗಳನ್ನೂ ಕನ್ನಡ ಭಾಷೆಯೊಳಗೆ ಬೆರಸಿ ನುರಿಸುವ ಘಟ್ಟ ಪ್ರಾಯಃ ಸಾತವಾಹನರ ಕಾಲದಲ್ಲಿ ನಡೆದು, ಕದಂಬರ ಮತ್ತು ಗಂಗರ ಕಾಲದಲ್ಲಿ ಸಂಸ್ಕೃತಭಾಷೆ ಸಾಹಿತ್ಯಗಳ ಉತ್ಕೃಷ್ಟ ವಾತಾವರಣದ ಗಾಳಿಬೆಳಕುಗಳಲ್ಲಿ ಇನ್ನೂ ಪುಟ ಗೊಂಡು ಮುನ್ನಡೆದು, ಸರಿಸುಮಾರು ಅದೇ ಕಾಲದಲ್ಲಿ ಕನ್ನಡದಲ್ಲಿ ಸ್ವತಂತ್ರವಾಗಿ ಸಾಹಿತ್ಯರಚನೆ ತೊಡಗುವಂತಾಗಿರಬೇಕು.

ಈವರೆಗೆ ಪರಿಶೀಲಿಸಿದ ಐತಿಹಾಸಿಕ ಸಾಕ್ಷ್ಯಗಳಿಂದ ಕನ್ನಡ ಸಾಹಿತ್ಯದ ಪ್ರಾಚೀನತೆಯ ಬಗೆಗೆ ನಿರ್ಣಯಿಸಬಹುದಾದ ಅಂಶಗಳನ್ನು ಹೀಗೆ ಕ್ರೋಡೀಕರಿಸಬಹುದು: (i) ಮಾನ್ಯಖೇಟಾತ್ಪೂರ್ವದ ರಾಷ್ಟ್ರಕೂಟ ರಾಜರ ಕುಲರಾಜಧಾನಿ ವಿಂಧ್ಯಾವಳೀ ಪ್ರಾಂತ ದಲ್ಲಿ ನೆಲೆಗೊಂಡಿತ್ತು ಎನ್ನುವುದನ್ನು ಚರಿತ್ರಜ್ಞರು ಇನ್ನೂ ಅಂಗೀಕರಿಸಿಲ್ಲ; ಒಂದು ಪಕ್ಷ ಅದು ಕನ್ನಡ ನಾಡಿನ ಸೀಮೆಯಾಗಿದ್ದಿರಬಹುದಾದರೂ, ಅಲ್ಲಿ ಕ್ರಿ.ಶ. ಆರಂಭದ ಶತ ಮಾನಗಳಲ್ಲಿಯೇ ಮಾರ್ಗಸಾಹಿತ್ಯ ಕನ್ನಡದಲ್ಲಿ ಮೊಳೆದೋರಿತ್ತು ಎನ್ನುವುದಕ್ಕೆ ಆಂತರಿಕ ಮತ್ತು ಬಾಹ್ಯಪ್ರಮಾಣಗಳು ಸಹಾಯಕವಾಗಿಲ್ಲ. ಅಷ್ಟು ಹಿಂದಿನ ಕಾಲದಲ್ಲಿ ಕೇವಲ ಕಂಠಸ್ಥವಾದ ದೇಸಿಸಾಹಿತ್ಯ ಕನ್ನಡದಲ್ಲಿ ಇದ್ದಿರಬಹುದು ಎಂಬುದನ್ನು ಸಂಭಾವ್ಯವಾ ದೊಂದು ಊಹೆಯಾಗಿ ಒಪ್ಪಬಹುದು. (ii) ಮೌರ್ಯ ಸಾತವಾಹನರ ಕಾಲದಲ್ಲಿ ಕನ್ನಡ ಭಾಷೆಯ ಅಸ್ತಿತ್ವದ ಕುರುಹುಗಳು ಅಸ್ಪಷ್ಟವಾಗಿ ಮಾತ್ರ ಗೋಚರಿಸುತ್ತಿರು ವುದನ್ನು ನೋಡಿದರೆ, ಸಾಹಿತ್ಯದ ಅಸ್ತಿತ್ವವನ್ನು ಸಂದೇಹಿಸಬೇಕಾಗುತ್ತದೆ. ಕರ್ಣಾಟಕ ದಲ್ಲಿ ಬೌದ್ಧಧರ್ಮಪ್ರಾಬಲ್ಯ ಕಾಲದಲ್ಲಿ, ಜೈನಧರ್ಮೀಯರಿಗಿಂತ ಮೊದಲೇ ಬೌದ್ಧ ಧರ್ಮೀಯರಾದ ಕವಿಗಳು ಸಾಹಿತ್ಯರಚನೆ ಮಾಡಿದರೆಂಬುದು ಈಗಿನ ಮಟ್ಟಿಗೆ ಒಂದು ಊಹೆ; ಅಷ್ಟು ಸಂಭಾವ್ಯವಲ್ಲದ ಊಹೆ.

## ಶಾಸನಗಳು : ಸಾಹಿತ್ಯದ ಪ್ರಾಚೀನತೆಗೆ ನಿರ್ದಿಷ್ಟ ಸಾಕ್ಷ್ಯ

ಕನ್ನಡ ಸಾಹಿತ್ಯದ ಹಳಮೆಯನ್ನು ಗುರುತಿಸುವಲ್ಲಿ ಕೆಲಮಟ್ಟಿಗೆ ಸಾಮಗ್ರಿಯ ಅಭಾವದಿಂದ ಮತ್ತು ಸಂದಿಗ್ಧತೆಯಿಂದ ನಿರ್ದಿಷ್ಟ ಪ್ರಮಾಣವಾಗದ ಮೇಲಿನ ಭಾಷಿಕ ಮತ್ತು ಐತಿಹಾಸಿಕ ಸಾಕ್ಷ್ಯಗಳನ್ನು ಹೊರತುಪಡಿಸಿದರೆ, ಕ್ರಿ.ಶ. ೫–೬ನೆಯ ಶತಮಾನ ಗಳಿಂದ ಈಚೆಗೆ ಬಹುಸಂಖ್ಯೆಯಲ್ಲಿ ದೊರೆಯುವ ಕನ್ನಡ ಶಾಸನಗಳು ದೊರಕಿಸುವ ಪ್ರಮಾಣಗಳನ್ನು ಪರಿಶೀಲಿಸುವುದು ಮುಂದಿನ ಘಟ್ಟದಲ್ಲಿ ಅನಿವಾರ್ಯವಾಗುತ್ತದೆ.

ಈ ಸಂಬಂಧದಲ್ಲಿ ಗೋವಿಂದ ಪೈ ಅವರ ಅಭಿಪ್ರಾಯದ ಕೆಲವು ಅವತರಣಿಕೆಗಳನ್ನು ಇಲ್ಲಿ ಮೊದಲು ಉದ್ಧರಿಸಬಹುದು: (i) "ಕನ್ನಡದಲ್ಲಿ ಸಾಹಿತ್ಯ ಸಮೃದ್ಧಿ, ಮುಖ್ಯತಃ ಕಾವ್ಯಸಮೃದ್ಧಿ ಇಲ್ಲದಿದ್ದರೆ (ಅಲ್ಲವೆ ಇರುವವರೆಗೆ), ಶಿಲಾಲೇಖಗಳು ಪದ್ಯರೂಪದಲ್ಲಿ

ರಚಿಸಲ್ಪಡವು, ಕಾವ್ಯಬದ್ಧವಾದ ಶಿಲಾಲೇಖಗಳು ಪ್ರಕಟವಾಗಿ ನಿರಿಸಲ್ಪಡವು ; ಏಕೆಂದರೆ ಸಾಹಿತ್ಯಶೂನ್ಯವಾದ ಭಾಷೆಯಲ್ಲಿ, ಕಾವ್ಯಹೀನವಾದ ಭಾಷೆಯಲ್ಲಿ, ಕಾವ್ಯರೂಪಿಯಾದ ಶಿಲಾಲೇಖವೆಂದರೆ ಮೊಲದ ಕೋಡೇ ಸರಿ !"[67] (ii) "ಯಾವೊಂದು ಭಾಷೆಯಲ್ಲಿ ಸಾಹಿತ್ಯವು ಸಾಕಷ್ಟು ಸಮೃದ್ಧವಾಗಿರದ ಮುಂಚೆ ಆ ಭಾಷೆಯಲ್ಲಿ ಶಾಸನಗಳು ರಚಿಸಲ್ಪಡವು, ಆದರಲ್ಲಿ ಪದ್ಯಸಾಹಿತ್ಯವು ಬೆಳೆದಿರದ ಮುಂಚೆ ಸಾವಿರಾರು ಮಂದಿಯ ಓದಿಕೆಯ ಬಗ್ಗೆ ತಿಳುವಳಿಕೆಯ ಬಗ್ಗೆ ತಾನೆ ಬಯಲಲ್ಲಿ ಬಹಿರಂಗವಾಗಿ ಇರಿಸಲ್ಪಡುವ ಶಿಲಾಲೇಖಗಳು ಪದ್ಯಗಳಲ್ಲಿ ರಚಿಸಲ್ಪಡವು"[68]. (iii) "ಯಾವೊಂದು ಭಾಷೆಗೆ ನುಡಿತ ವಿದ್ದರೆ ಮಾತ್ರ ಸಾಲದು, ಆದರಲ್ಲಿ ಶಾನೆ ಪ್ರೌಢವಲ್ಲದಿದ್ದರೆ ಸಾಕಷ್ಟು ಯೋಗ್ಯವೂ ವಿಸ್ತೃತವೂ ಆದ ಸಾಹಿತ್ಯವಿಲ್ಲದ ಮುಂಚೆ ಅದು ವ್ಯಾಕರಣಬದ್ಧವಾಗದು, ಅಂಥಾ ಸಾಹಿತ್ಯವೂ ವ್ಯಾಕಣವೂ ಇಲ್ಲದ ಭಾಷೆ ಶಾಸನಗಳಲ್ಲಿ ಬಳಸಲ್ಪಡದು."[69] (iv) "ಸಾಹಿತ್ಯವಿದ್ದಿಲ್ಲದ ಮುಂಚೆ ಶಾಸನಗಳು ಹುಟ್ಟಲಾರವು ಎಂದಿಷ್ಟು ಖಂಡಿತ....[70] (v) "ಯಾವ ಭಾಷೆಯಲ್ಲೂ ಸಾಹಿತ್ಯವಿದ್ದಿಲ್ಲದ ಮುಂಚೆ, ಆ ಭಾಷೆ ವ್ಯಾಕರಣಬದ್ಧ ವಾಗಿಲ್ಲದ ಮುಂಚೆ, ಭಾವಪ್ರಕಾಶನಕ್ಕೆ ಯೋಜಿಸಲ್ಪಡಲಾಗದ ಮುಂಚೆ, ಸಾಹಿತ್ಯ ದಲ್ಲಿ ಪಳಗಿಸಲ್ಪಡಲಿಕ್ಕೆ ಬಂದಿಲ್ಲದ ಮುಂಚೆ ಆ ಭಾಷೆಯಲ್ಲಿ ಶಾಸನಗಳು ಪ್ರಾಯಿಕವಾಗಿ ಹುಟ್ಟಲಾರವು ಎಂದಿಷ್ಟು ಸ್ಪಷ್ಟ...."[71]

ಈ ಮೇಲಿನ ಅವತರಣಿಕೆಗಳನ್ನು ಒಪ್ಪಿದರೆ ಕನ್ನಡದಲ್ಲಿ ಶಾಸನ ಸಾಹಿತ್ಯ ಕಾಣಿಸಿ ಕೊಂಡ ಕಾಲಕ್ಕೆ ಮೊದಲು ಗ್ರಾಂಥಿಕ ಸಾಹಿತ್ಯವಿದ್ದಿತೆಂದು ಗ್ರಹಿಸಲು ಸಾಧ್ಯವಾಗು ತ್ತದೆ. ಇಂಥ ಗ್ರಹಿಕೆಯಿಂದ ಮುಂದುವರಿದು ಬಹಳ ಹಳೆಯವೆಂದು ತಾವು ಅಂಗೀ ಕರಿಸಿರುವ ಕೆಲವು ಕನ್ನಡ ಶಾಸನಗಳ ಕಾಲಕ್ಕಿಂತ ೧–೨ ಶತಮಾನಗಳ ಹಿಂದಕ್ಕೆ ಕನ್ನಡ ಸಾಹಿತ್ಯದ ಹಳಮೆಯನ್ನು ಕೊಂಡೊಯ್ಯುವ ಪ್ರಯತ್ನವನ್ನು ಅವರು ಮಾಡಿ ದ್ದಾರೆ. ಸಾರಾಂಶವನ್ನಿಲ್ಲಿ ಗಮನಿಸಬಹುದು :

ಕ್ರಿ.ಶ. ೭೦೦ರಿಂದ ಹಿಂದಿನವು ಎಂದು ತಿಳಿಯಲು ಶಕ್ಯವಿರುವ ಕೆಲವು ಕನ್ನಡ ಭಾಷೆಯ ಶಾಸನಗಳು ಇವು : ಬಾದಾಮಿಯ ಚಾಲುಕ್ಯ ವಿಕ್ರಮಾದಿತ್ಯನ ನಂ. ೫೭೧ ನೆಯ ಸೊರಬ ತಾಮ್ರಪಟ (೬೯೨), ಚಿತ್ರವಾಹನನ ತೇದಿಯಿಲ್ಲದ ನಂ. ೩೭ನೆಯ ಕೊಪ್ಪ ಮತ್ತು ಚಿತ್ರವಾಹನನ ತಂದೆ ಗುಣಸಾಗರನ ನಂ. ೩೮ನೆಯ ಕೊಪ್ಪ ತಾಲ್ಲೂಕು ಕಿಗ್ಗದ ಶಿಲಾಶಾಸನಗಳು (ಎಕ. ೬), ಚಾಲುಕ್ಯ ವಿನಯಾದಿತ್ಯನ ತೇದಿಯಿಲ್ಲದ ನಂ. ೧೫ನೆಯ ಸೊರಬ (ಎಕ. ೮) ಮತ್ತು ನಂ. ೧೫೪ನೆಯ ಶಿಕಾರಿಪುರ (ಎಕ.೭) ಶಿಲಾ ಶಾಸನಗಳು, ವಿನಯಾದಿತ್ಯನ ತಂದೆ ಚಾಲುಕ್ಯ ೧ನೆಯ ವಿಕ್ರಮಾದಿತ್ಯನ (೬೫೪-೮೦) ತೇದಿಯಿಲ್ಲದ ನಂ. ೭೯ನೆಯ ಸಾಗರದ ಶಾಸನ, ಬರೆಹದಿಂದ ಕ್ರಿ.ಶ. ೭ನೆಯ ಶತ ಮಾನದ ನಡುಗಾಲವೆಂದು ನಿಶ್ಚಯಿಸಿರುವ ಕಾಲದ ಗದ್ದೆಮನೆಯ ವೀರಗಲ್ಲು (ಮೈಆರ್. ೧೯೨೩, ನಂ. ೭೨), ತಲಕಾಡು ಗಂಗರ ಭೂವಿಕ್ರಮನ ಬೆದಿರೂರು ತಾಮ್ರ ಶಾಸನ, ಕ್ರಿ.ಶ. ೬೩೩ರದು (ಮೈಆರ್. ೧೯೨೪), ಚಾಲುಕ್ಯ ಮಂಗಲೇಶನ

(೫೯೭–೬೦೯) ಬಾದಾಮಿ ವೈಷ್ಣವ ಗುಹೆಯ ಬಂಡೆಶಾಸನ (ಇಂ ಆ. ೧೦, ೧೮೮೧), ಬನವಾಸಿ ಕದಂಬರ ಭೋಗಿವರ್ಮನ ಸು. ೫೦೦ರ ತಗರೆ ಶಿಲಾಶಾಸನ (ಮೈಆರಿ, ೧೯೧೮), ಗಂಗ ದುರ್ವಿನೀತನ ಮಗ ಪೊಲವೀರನ (ಸು. ೫೯೯–೫೫೦) ತೇದಿಯಿಲ್ಲದ ತಗರೆ ತಾಮ್ರಶಾಸನ (ಮೈಆರಿ. ೧೯೧೮), ಹೆಸರು ಹೇಳಿರದ ದುರ್ವಿನೀತನ ಇನ್ನೊಬ್ಬ ಮಗನ ತೇದಿಯಿಲ್ಲದ (ಸು. ೫೨೦–೫೫೦) ಸಿರಗುಂದದ ಶಿಲಾಶಾಸನ (ಎಕ. ೬), ದುರ್ವಿನೀತನ (ಸು. ೪೭೮–೫೨೦) ಆಳ್ವಿಕೆಯ ೨೦ನೆಯ ವರ್ಷದ ಉತ್ತನೂರು ತಾಮ್ರ ಶಾಸನ (ಮೈಆರಿ. ೧೯೧೨), ದುರ್ವಿನೀತನ ಸೋದರಮಾವ ಪುನ್ನಾಟದ ಕೊನೆಯ ಅರಸು ರವಿದತ್ತನ ಕ್ರಿ.ಶ. ೪೯೧ನೆಯ ವರ್ಷದ ಕೊಮರಲಿಂಗದ ತಾಮ್ರಶಾಸನ (ಇಂ ಆ. ೧೮, ೧೮೮೯), ಈ ರವಿದತ್ತನ ಪೂರ್ವಿಕ ೧ನೆಯ ಸ್ಕಂದವರ್ಮನ ಕ್ರಿ.ಶ. ೪೧೩ನೆಯ ವರ್ಷದ ಬಸವನಪುರದ ತಾಮ್ರಶಾಸನ (ಮೈಆರಿ. ೧೯೩೬), ದುರ್ವಿನೀತನ ಅಜ್ಜ ಗಂಗರ ತಡಂಗಾಲ ಇಮ್ಮಡಿ ಮಾಧವನ ನಂ. ೫೨ನೆಯ ಶಿಕಾರಿಪುರ ತಾಲ್ಲೂಕು ತಾಗರ್ತಿಯ ತಾಮ್ರಶಾಸನ (ಎಕ. ೭) ಮತ್ತು ಕೆರೆಗಾಲೂರು ತಾಮ್ರಶಾಸನ (ಮೈಆರಿ. ೧೯೩೦), ಈ ಇಮ್ಮಡಿ ಮಾಧವನ ಮುತ್ತಜ್ಜ ೧ನೆಯ ಮಾಧವನ ನಂ. ೧ನೆಯ ೩೦೧ನೆಯ ನಂದಿಯ ತಾಮ್ರಶಾಸನ (ಮೈಆರಿ. ೧೯೧೪), ಬನವಾಸಿಯ ಕದಂಬ ಕಾಕುತ್ಸ್ಥವರ್ಮನ (ಸು. ೨೬೫–೨೮೨) ಹಲ್ಮಿಡಿಯ ಶಿಲಾಶಾಸನ (ಮೈಆರಿ. ೧೯೩೬).[72]

ಈ ಪಟ್ಟಿಗೆ ನಡುವೆ ಸೂಕ್ತವಾದೆಡೆ ಸೇರಬೇಕಾದ್ದು, ಬರೆಹದಿಂದ ಕ್ರಿ.ಶ. ೫೦೦ ರಿಂದ ಹಿಂದಿನದೆಂದು ನಿಶ್ಚಯಿಸಿರುವ ನಂ. ೪೩ನೆಯ ಚಿತ್ರದುರ್ಗ ಜಿಲ್ಲೆಯ ತಮಟ ಕಲ್ಲಿನ ಶಿಲಾಶಾಸನ (ಎಕ. ೧೧). ಭಾಷೆ ಛಂದಸ್ಸುಗಳ ದೃಷ್ಟಿಯಿಂದ ಈ ಶಾಸನದ "ಬಿಣಮಣಿಅನ್ತು ಭೋಗಿ...." ಎಂಬ ವೃತ್ತವನ್ನು ಪ್ರತ್ಯೇಕವಾಗಿಯೇ ತಮ್ಮ ಕೆಲವು ಲೇಖನಗಳಲ್ಲಿ ಪರಿಶೀಲಿಸಿ, ಸಾಹಿತ್ಯದ ಪ್ರಾಚೀನತೆಯನ್ನು ವಾದಿಸಲು ಒಂದು ಗಣ್ಯ ಸಾಕ್ಷ್ಯವನ್ನಾಗಿ ಅದನ್ನು ಪೈ ಅವರು ಗ್ರಹಿಸಿದ್ದಾರೆ.

ಗೋವಿಂದ ಪೈ ಅವರು ಸಾಧಾರಣವಾಗಿ ಎಂ.ಎಚ್.ಕೃಷ್ಣ ಅವರ ಗೊತ್ತುಪಡಿಯಂತೆ ಸು. ಐದನೆಯ ಶತಕದ್ದಾಗಿ ಹಲವರು ವಿದ್ವಾಂಸರು ಭಾವಿಸುವ ಹಲ್ಮಿಡಿ ಶಾಸನ ಕಾಲವನ್ನು ಕ್ರಿ.ಶ. ೩ನೆಯ ಶತಕದ್ದಾಗಿ ಗ್ರಹಿಸಿ, ಅಲ್ಲಿಂದ ಕನ್ನಡ ಶಾಸನ ಸಾಹಿತ್ಯದ ಆರಂಭ ಕಾಲವನ್ನು ಗುರುತಿಸಿರುವುದು ಮೇಲಿನ ಪಟ್ಟಿಯಿಂದ ವಿದಿತವಾಗುತ್ತದೆ. ಈ ಕೆಲವು ಶಾಸನಗಳ ಐತಿಹಾಸಿಕ ಸಂದರ್ಭಗಳಿಂದಲೂ ವಿಶೇಷವಾಗಿ ಸು. ೬೫೦–೭೦೦ ರಲ್ಲಿ ಬರೆಯಲ್ಪಟ್ಟವೆಂದು ಲಿಪಿವಿಕಾಸದ ಆಧಾರದ ಮೇಲೆ ಭಾವಿಸಿರುವ ಶ್ರವಣಬೆಳ್ಗೊಳದ ಹಲವು ಶಾಸನಗಳ ಭಾಷೆ ಛಂದಸ್ಸುಗಳನ್ನು ಪರಿಶೀಲಿಸಿಯೂ ಅವರು "ಈ ಶಿಲಾಲೇಖಗಳಿಗೆ ಕಡಿಮೇ ಅಂದರೆ ೨–೩ ಆದರೂ ಶತಮಾನಗಳ ಹಿಂದಣಿಂದಲೆ, ಅಂದರೆ ಕ್ರಿ.ಶ. ೨–೩ನೆಯ ಶತಕದಿಂದಲಾದರೂ ಸಂಸ್ಕೃತ ಮಿಶ್ರಣದ ಹಾಗೂ ಸಂಸ್ಕೃತದ ಛಂದೋಬದ್ಧವಾದ ಕನ್ನಡ ಸಾಹಿತ್ಯವಿದ್ದಿರಬೇಕು"—ಎಂದು ಒಮ್ಮೆಯೂ[73] "ಹಲ್ಮಿಡಿ ಶಿಲಾ

ಲೇಖದ ಕ್ರಿ.ಶ. ೫ನೆಯ ಶತಕಕ್ಕೆ ಸಾಕಷ್ಟು ಹಿಂದಿನಿಂದಲೆ ಕನ್ನಡದಲ್ಲಿ ಸಂಸ್ಕೃತಮಿಶ್ರಣದ (ಅತಏವ ಸಂಸ್ಕೃತ ಛಂದೋಬದ್ಧವೂ ಆದ) ಕನ್ನಡ ಸಾಹಿತ್ಯವು ಇದ್ದಿರಬೇಕು" ಎಂದು ಇನ್ನೊಮ್ಮೆಯೂ[74] ತಮ್ಮ ತೀರ್ಮಾನವನ್ನು ಸೂಚಿಸಿದ್ದಾರೆ. ಹೀಗೆ ಕ್ರಿ.ಶ. ೯ನೆಯ ಶತಮಾನದಿಂದ ೫ನೆಯ ಶತಮಾನದ ಕೊನೆಯ ವರೆಗೆ ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ಸೋಸಿದಂತೆ ಭಾವಿಸಿರುವ ಅವರೇ ತಮ್ಮ ಈ ಪ್ರಯತ್ನವನ್ನು ಮುಂದುವರಿಸುತ್ತ, "ಇನ್ನು ಆ ಸೋಸನ್ನು ಮತ್ತೂ ಎಷ್ಟು ಹಿಂದಿನವರೆಗೆ ಒಯ್ಯಲಾಗುತ್ತದೊ ನೋಡೋಣ" ಎಂಬ ಸಂಕಲ್ಪವಾಕ್ಯದೊಡನೆ ಇನ್ನೂ ಆಳಕ್ಕೆ ಮುಳುಗುಹಾಕಿದ್ದಾರೆ. ಫಲವಾಗಿ, ಕ್ರಿ.ಶ. ೫ನೆಯ ಶತಕದೆಂದು ತಾವು ತಿಳಿಯುವ ಹಲ್ಮಿಡಿ ಶಾಸನಕ್ಕಿಂತ ಹಳೆಯದೆಂದು ತಮಗೆ ತೋರಿದ ಇನ್ನೊಂದು ಕನ್ನಡ ಶಾಸನವನ್ನು ಹೆಕ್ಕಿ ತೆಗೆದು, ಇನ್ನೂ ಹಿಂದಿನ ಕಾಲಕ್ಕೆ ಕನ್ನಡ ಸಾಹಿತ್ಯದ ಉಗಮವನ್ನು ಒಯ್ದಿದ್ದಾರೆ.

ಪೈ ಅವರು ಗುರುತಿಸಿರುವ ಆ ಪ್ರಾಚೀನತಮ ಕನ್ನಡ ಶಾಸನ ಎಂದರೆ, ಎಪಿಗ್ರಾಫಿಯ ಕರ್ನಾಟಿಕದೊಳಗಿನ ನಂ. ೧೯೯ನೆಯ ಸಂ. ೫, ೧೯೭೪ ನಂ. ೫೨೦) ನಂಜನಗೂಡು ತಾಲ್ಲೂಕಿನ ಗಟ್ಟವಾಡಿ ಗ್ರಾಮದ ಒಂದು ಶಿಲಾಶಾಸನ. ಇದು ಅವರ ಮಾತಿನಲ್ಲಿಯೇ "ಕೆಲವು ಮಂದಿ ಹಳ್ಳಿಗರು ಒಂದು ಕೆರೆಯನ್ನು ಕಟ್ಟಿಸಿ ಆ ಬಗ್ಗೆ ಸಾಕ್ಷಿಗಳನ್ನಿಟ್ಟು ಕೊರೆದಿರಿಸಿದ ಶಿಲಾಲೇಖ." ಇದರ ಆರಂಭದಲ್ಲಿಯೇ ತೇದಿಯನ್ನು 'ಶಕವರಿಷ ನೂಱಪನ್ನೊನ್ದನೆಯ ೧೧೧ ಆಂಗ್ರಿರ ಸಂವತ್ಸರ' ಎಂದಿದೆ. ಗುಣಿಸಿದರೆ ಇದು ಕ್ರಿ.ಶ. ೧೮೯-೯೦ನೆಯ ಶುಕ್ಲಸಂವತ್ಸರಕ್ಕೆ ಬರುವುದಲ್ಲದೆ ಆಂಗಿರಸವಾಗದು, ಆದ್ದರಿಂದ ಶಕ ವರ್ಷವನ್ನು ೧೧೪ ಎಂದು ಬರೆಯಬೇಕಾದೆಡೆ ಹಳ್ಳಿಗರು ತಿಳಿಯದೆ ತಪ್ಪುಲೆಕ್ಕಹಾಕಿ ೧೧೧ ಎಂಬುದಾಗಿ ಬರೆದಿರಬೇಕೆಂದೂ ಇಂಥ ತಪ್ಪುಗಳು ಆ ಕಾಲದ ಶಾಸನಗಳಲ್ಲಿ ಅಲ್ಲಲ್ಲಿ ದೊರೆಯುತ್ತವೆಯೆಂದೂ ಪೈ ಅವರು ಅಭಿಪ್ರಾಯಪಟ್ಟು ಶಕ ೧೧೪ ಎಂದರೆ ಕ್ರಿ.ಶ. ೧೯೨-೯೩ರ ಆಂಗಿರಸ ಸಂವತ್ಸರದಲ್ಲಿ ಪೂರ್ವೋಕ್ತ ಶಾಸನವನ್ನು ಹಾಕಿಸಿರಬೇಕೆಂದು ಅವರು ಗ್ರಹಿಸಿದ್ದಾರೆ. ಹೀಗೆ ಗ್ರಹಿಸಿ ತಮ್ಮ ನಿರ್ಣಯವನ್ನು ಈ ರೀತಿ ಸ್ಪಷ್ಟಪಡಿಸಿದ್ದಾರೆ: (i) "ಕ್ರಿಸ್ತಶಕದ ೨ನೆಯ ಶತಕದ ಅಷ್ಟು ಹಿಂದಣ ಕಾಲದಲ್ಲೂ ಹುಟ್ಟಿದ ಶಾಸನಗಳು ಸಿಕ್ಕಿವೆ, ಅಂದರೆ ಕನ್ನಡ ಶಾಸನಗಳು ಅದಕ್ಕೂ ಒಂದಾದರೂ ಶತಕಕ್ಕೆ ಹಿಂದಿನಿಂದ ಹುಟ್ಟತೊಡಗಿರಬೇಕು. ಸಾಹಿತ್ಯವಿದ್ದಿಲ್ಲದ್ದ ಮುಂಚೆ ಶಾಸನಗಳು ಹುಟ್ಟಲಾರವು ಎಂದಿಷ್ಟು ಕಂಡಿತವಿರುವುದರಿಂದ, ಕ್ರಿ.ಶ. ೧ನೆಯ ಶತಮಾನಕ್ಕೆ ಹಿಂದೆಯೇ ಕನ್ನಡದಲ್ಲಿ ಪ್ರಗಲ್ಭವಾದ ಸಾಹಿತ್ಯವಲ್ಲವಾದರೆ ಸಾಮಾನ್ಯವಾದ ಸಾಹಿತ್ಯವಾದರೂ ಹುಟ್ಟಿರಬೇಕು ಎಂದು ಸಹಜವಾಗಿ ಅನುಮೇಯಿಸಲಾಗುತ್ತದೆ."[75] (ii) "....ಈ ಶಾಸನದ ಕ್ರಿ.ಶ. ೨ನೆಯ ಶತಕಕ್ಕೆ ಹಿಂದಿನಿಂದಲೇ ಕನ್ನಡದಲ್ಲಿ ಪ್ರಗಲ್ಭವಾದ ಸಾಹಿತ್ಯವಲ್ಲವಾದರೆ ಸಾಮಾನ್ಯವಾದ ಸಾಹಿತ್ಯವಾದರೂ ಹುಟ್ಟಿರಬೇಕು, ಅತಏವ ಅಷ್ಟರಮಟ್ಟಿಗೆ ಭಾಷೆಯೂ ಅನುಕೂಲವಾಗಿರಬೇಕು, ಉಪಪನ್ನವಾಗಿದ್ದಿರಬೇಕು ಎಂದು ಸಹಜವಾಗಿ ಅನುಮೇಯಿಸಲಾಗುತ್ತದೆ. ಹಾಗಾದರೆ ಕನ್ನಡ ಸಾಹಿತ್ಯದ ಆರಂಭವನ್ನು ಕ್ರಿ.ಶ. ಮೊದಲನೆಯ

ಶತಮಾನದ ಹಿಂದಕ್ಕೆ ತಳ್ಳಬೇಡವಾದರೆ ಆ ಶತಮಾನದಲ್ಲಾದರೂ ಇರಿಸಬೇಕಾಗುತ್ತದೆ."[76]

ಕನ್ನಡ ಶಾಸನಗಳ ಭಾಷೆ ಶೈಲಿ ಛಂದಸ್ಸುಗಳನ್ನು ಒರೆಯಿಕ್ಕಿ ನೋಡಿ ಶಾಸನ ಸಾಹಿತ್ಯ ಉಗಮುಗೊಳ್ಳುವ ಮೊದಲಲ್ಲಿ ಕನ್ನಡದಲ್ಲಿ ಪ್ರಗಲ್ಭವಲ್ಲದಿದ್ದರೂ ಸಾಮಾನ್ಯವಾದ ಸಾಹಿತ್ಯವಂತೂ ನಿರ್ಮಾಣವಾಗಿದ್ದಿರಬೇಕು ಎನ್ನುವ ಗ್ರಹಿಕೆಯಿಂದ ಪೈ ಅವರು ಮುಂದೊಡ್ಡುವ ಕೆಲವು ಕಾರಣಗಳು ಹೀಗಿವೆ: (i) ಶ್ರವಣಬೆಳ್ಗೊಳದ ಕೆಲವು ಶಾಸನಗಳಲ್ಲಿ ಕಂಡುಬರುವ ಕನ್ನಡ ಪದ್ಯಗಳ ಲಿಪಿಯ ಆಧಾರದ ಮೇಲೆ ಕಾಲವನ್ನು ಕ್ರಿ.ಶ. ಸು. ೭೦೦ ಎಂದು ತೋರಿಸಿದ್ದರೂ ಅವುಗಳಲ್ಲಿ ಕೆಲವಾದರೂ ಆ ಕಾಲಕ್ಕೆ ಒಂದೋ ಹೆಚ್ಚೋ ಶತಮಾನಗಳ ಹಿಂದೆ ಕೆತ್ತಲ್ಪಟ್ಟಿರಬಹುದು. (ii) ಪದ್ಯ ಶಾಸನಗಳು ಸಾಮಾನ್ಯವಾಗಿ ವರ್ಣವೃತ್ತಗಳಲ್ಲಿದ್ದು, ಇವುಗಳಲ್ಲಿ ಹಲವು (ಉದಾ. ನಂ. ೨೨, ೨೭, ೮೮) ಪ್ರೌಢ ಕವಿಗಳ ರಚನೆಯೆನ್ನುವ ಮಟ್ಟಿಗೆ ಮೇಲುಮಟ್ಟದಲ್ಲಿವೆ. ನಾಗಚಂದ್ರ ಜನ್ನ ಮೊದಲಾದ ಈಚಿನ ಖ್ಯಾತ ಕನ್ನಡಕವಿಗಳಂತೆ ಆ ಪದ್ಯಶಾಸನಗಳ ಕವಿಗಳೂ ಕಾವ್ಯಕರ್ತೃಗಳಾಗಿರುವುದೂ ಸಂಭವನೀಯವಾಗಿದೆ. (iii) ದ್ವಿತೀಯಾ ಮತ್ತು ಷಷ್ಠೀ ವಿಭಕ್ತಿಗಳಲ್ಲಿ ಮತ್ತು ಶಬ್ದಾಂತರಾಳದಲ್ಲಿ ದೀರ್ಘಾದೇಶಗಳು, ವಿಸಂಧಿ ಮಿಶ್ರಪ್ರಾಸ ಮುಂತಾದ ವಿಶಿಷ್ಟ ಶಾಬ್ದಿಕ ವೈಯಾಕರಣ ವೈಲಕ್ಷಣ್ಯಗಳು ಇವುಗಳಲ್ಲಿ ಕಂಡುಬರುತ್ತವೆ. (iv) ಸಂಸ್ಕೃತ ವೃತ್ತವೇ ಆದರೂ ಆ ಸಾಹಿತ್ಯದಲ್ಲಿ ದೊರೆಯದ ಕನಕಾಬ್ಜಿನಿಯಂಥ ವೃತ್ತಗಳೂ ಮಹಾಸ್ರಗ್ಧರೆ ಮತ್ತೇಭವಿಕ್ರೀಡಿತಗಳಂಥವೂ ಬಳಕೆಗೊಂಡಿವೆ. (v) ವೃತ್ತಗಳು ವೈವಿಧ್ಯಮಯವಾಗಿವೆ. (vi) ಕಾಲಕ್ರಮೇಣ ಭಾಷೆ ಭಾವಗಳ ಪುಷ್ಟಿಗೆ ಕನ್ನಡ ನುಡಿಸಿರಿಗೆಯೊಡನೆ ಸ್ವಲ್ಪಸ್ವಲ್ಪವಾಗಿ ಸಂಸ್ಕೃತದ ಶಬ್ದಗಳು ಸೇರುತ್ತ ಹೋಗಿವೆ.[77]

ಪೈ ಅವರ ಪರಿಶೀಲನೆಯ ಪ್ರಕಾರ: "ಅಚ್ಚಗನ್ನಡ ಛಂದಸ್ಸುಗಳನ್ನು ಬಹುಶಃ ನಿರವಶೇಷವಾಗಿ ಎಂಬಂತೆ ತೊರೆದುಬಿಟ್ಟು, ಸಂಸ್ಕೃತ ಛಂದಸ್ಸುಗಳಲ್ಲಿಯೇ ಕನ್ನಡ ಕವಿತೆಗಳನ್ನು ರಚಿಸುವ ರೂಢಿ ಪ್ರಸಾರದಲ್ಲಿ ಕೆಲ ಶತಮಾನಗಳ ಕಾಲಕ್ಕಾದರೂ ಪಸರಿಸಿರದ ಮುಂಚೆ, ಅದೇ ರೂಢಿ ಪ್ರಸಾರದಲ್ಲಿ ಹಲ ಶತಕಗಳಿಂದ ಸರ್ವಸಾಧಾರಣವಾಗಿರದ ಮುಂಚೆ, ಶಿಲಾಲೇಖಗಳು ಸಂಸ್ಕೃತ ಛಂದಸ್ಸಿನಲ್ಲಿ ರಚಿಸಲ್ಪಡಲಿಕ್ಕೆ ಬಂದಾವೆಂದು ಎಣಿಸಲಾಗುವುದಿಲ್ಲ."[78] ಆದ್ದರಿಂದ ತಮಟಕಲ್ಲಿನ ಶಾಸನಕ್ಕಿಂತ "ಹಲವು ಶತಕಗಳ ಹಿಂದೆಯೇ ಕನ್ನಡ ಕವಿಗಳು ಅಚ್ಚಗನ್ನಡ ಛಂದಸ್ಸುಗಳನ್ನು ಬಹುತರವಾಗಿ ನೀಗಿ, ಸಂಸ್ಕೃತ ಛಂದಸ್ಸುಗಳಲ್ಲಿ ಕಾವ್ಯಗಳನ್ನು ರಚಿಸುತ್ತಿರಬೇಕೆಂಬಾಗುತ್ತದೆ. ಹೀಗಾದರೆ ಅಂತಹ ಕಾಲಕ್ಕಿಂತ ಇನ್ನೆಷ್ಟು ಕಾಲ ಹಿಂದಿನವರೆಗೆ ಅಚ್ಚಗನ್ನಡ ಛಂದಸ್ಸುಗಳೇ ರೂಢಿಯಾಗಿದ್ದು ಅವಲ್ಲಿಯೇ ರಚಿಸಲ್ಪಟ್ಟ ಕನ್ನಡಕಾವ್ಯಸಾಹಿತ್ಯವಿದ್ದಿತೋ ಸರ್ವಜ್ಞಾನಿಯಾದ ಅದೊಬ್ಬ ವಿಧಾತನೇ ಬಲ್ಲ!"[79]

ಗೋವಿಂದ ಪೈ ಅವರು ಕ್ರಿ.ಶ. ೧ನೆಯ ಶತಮಾನದಿಂದ ಕನ್ನಡವಲ್ಲಿ ಗ್ರಾಂಥಿಕ ಸಾಹಿತ್ಯವಿದ್ದಿತೆಂದು ನಂಜನಗೂಡಿನ ನಂ. ೧೯೫ನೆಯ ಗಟ್ಟವಾಡಿ ಗದ್ಯಶಾಸನ

ಸಾಕ್ಷ್ಯವನ್ನು ಅವಲಂಬಿಸಿಯೂ ಸಂಸ್ಕೃತ ಛಂದಸ್ಸಿನ ಪದ್ಯಜಾತಿಗಳಿಗೆ ಮೊದಲು ಅಚ್ಚಗನ್ನಡ ಛಂದಸ್ಸಿನ ಪದ್ಯಜಾತಿಗಳ ಸಾಹಿತ್ಯಯುಗವೊಂದು ಸಂದಿರಬೇಕು ಎಂದು ತಮಟಕಲ್ಲಿನ ಶಿಲಾಶಾಸನ (ಸು. ೫೦೦) ಮುಂತಾದ ಪದ್ಯಶಾಸನಗಳ ಸಾಕ್ಷ್ಯವನ್ನು ಅವಲಂಬಿಸಿಯೂ ಅಭಿಪ್ರಾಯಪಟ್ಟಿದ್ದಾರೆ ಎಂದು ಮೇಲೆ ನೋಡಿದ್ದಾಯಿತು. ಅವರು ಬನವಾಸಿಯ ಕದಂಬರು, ಗಂಗರು ಮುಂತಾದ ಅರಸುಮನೆತನಗಳ ರಾಜರ ಆಳ್ವಿಕೆಗೆ ಕೊಟ್ಟಿರುವ ಕಾಲ ಮತ್ತು ತತ್ಕಾಲೀನ ಭಾಷೆ ಛಂದಸ್ಸುಗಳ ಪ್ರಯೋಗದಿಂದ ನಿಷ್ಪನ್ನವಾಗುವ ಪೂರ್ವಕಾಲೀನ ಸಾಹಿತ್ಯಿಕ ಸ್ಥಿತಿಗತಿಗಳ ಸಂಭಾವ್ಯವಾದ ಅನುಮಾನ ಅನುಮೇಯಗಳು—ಇವುಗಳು ವಿದ್ವಾಂಸರವಲಯದಲ್ಲಿ ನಾನಾ ಕಾರಣಗಳಿಗಾಗಿ ಸಾರ್ವತ್ರಿಕ ಮನ್ನಣೆಯನ್ನು ಪಡೆದಿಲ್ಲ. ಇದರಿಂದಾಗಿ ಕನ್ನಡ ಸಾಹಿತ್ಯದ ಪ್ರಾಚೀನತೆಗೆ ಅವರು ಒದಗಿಸಿರುವ ಸಾಕ್ಷ್ಯಗಳೂ ತನ್ಮೂಲಕವಾದ ನಿರ್ಣಯಗಳೂ ಬಹುಮಟ್ಟಿಗೆ ವೈಯಕ್ತಿಕ ಸ್ವರೂಪದ್ದಾಗಿವೆ. ಅವು ಗ್ರಾಹ್ಯವಾಗದಿರುವುದಕ್ಕೆ ಪ್ರತಿಕೂಲವಾದ ಸಂದರ್ಭಗಳಾವುವು ಎಂಬುದನ್ನು ಮುಂದೆ ನೋಡಬಹುದು.

ಪೈ ಪ್ರಾಚೀನತಮ ಕನ್ನಡ ಶಾಸನವೆಂದು ನಂ. ೧೯೯ನೆಯ ನಂಜನಗೂಡು ಶಾಸನವನ್ನು ತೋರಿಸಿದ್ದಾರೆ; ಇದರ ಕಾಲ ಕ್ರಿ.ಶ. ೨ನೆಯ ಶತಮಾನವೆಂದಿದ್ದಾರೆ. ಈಗ ಸಾಮಾನ್ಯವಾಗಿ ತೀರ ಹಳೆಯ ಕನ್ನಡ ಶಾಸನವೆಂದು ಒಪ್ಪಿತವಾಗಿರುವುದು ಎಂ. ಎಚ್. ಕೃಷ್ಣ ಅವರು ಕಂಡುಹಿಡಿದು ಪ್ರಕಟಿಸಿರುವ ಹಲ್ಮಿಡಿ ಶಾಸನ; ಇವರು ಇದಕ್ಕೆ ಸೂಚಿಸಿರುವ ಕಾಲ ಸು. ೪೫೦. ಈ ಶಾಸನ ಹುಟ್ಟಿದ ಕಾಲದಲ್ಲಿದ್ದ ಬನವಾಸಿ ಕದಂಬ ಕಾಕುತ್ಸ್ಥವರ್ಮನಿಗೆ ತಾವು ಗೊತ್ತುಪಡಿಸಿರುವ ಆಳ್ವಿಕೆಯ ಕಾಲಮಾನದಲ್ಲಿ ಎಂದರೆ ೨೬೫ರಿಂದ ೨೮೨ ರೊಳಗೆ ಅದು ಹುಟ್ಟಿತೆಂದು ಪೈ ಅವರು ಬೇರೆಯೇ ಆಗಿ ಕಾಲಗಣನೆಮಾಡಿದ್ದಾರೆ. ಹೀಗೆಯೇ ೪ನೆಯ ಮತ್ತು ೫ನೆಯ ಶತಮಾನಗಳ ಆದಿಭಾಗದಲ್ಲಿ ಹುಟ್ಟಿದವೆಂದು ಅವರು ತೋರಿಸಿರುವ ಇತರ ಶಾಸನಗಳ ಕಾಲಗಣನೆಯ ವಿಷಯದಲ್ಲಿಯೂ ಅವರಿಗೂ ಬೇರೆಯವರಿಗೂ ಸ್ಪಷ್ಟ ಭಿನ್ನಮತವಿದೆ. ೫೭೮ರಲ್ಲಿ ಹುಟ್ಟಿದಂತೆ ತಿಳಿಯುವ ಬಾದಾಮಿ ಚಾಲುಕ್ಯರ ಮಂಗಲೇಶನ ಬಾದಾಮಿ ವೈಷ್ಣವ ಗುಹೆಯ ಬಂಡೆ ಶಾಸನವೇ ಕನ್ನಡದ ತೀರ ಹಳೆಯ ಶಾಸನವೆಂದು ಮೊದಲು ಅಂಗೀಕೃತವಾಗಿದ್ದು,[80] ಬಳಿಕ ಆ ಸ್ಥಾನ ಬನವಾಸಿ ಕದಂಬರ ಕಾಕುತ್ಸ್ಥವರ್ಮನ ಆಳಿಕೆಯ ಕಾಲದ (ಸು. ೪೨೨-೪೪೭) ಹಲ್ಮಿಡಿ ಶಾಸನಕ್ಕೆ (ಸು. ೪೫೦) ಸಿಕ್ಕಿತು. ಬರೆಹದ ಆಧಾರದ ಮೇಲೆ ಈ ಶಾಸನದ ಕಾಲವನ್ನು ಕೆಲವರು' ಬಾದಾಮಿ ವೈಷ್ಣವಗುಹೆಯ ಶಾಸನಕ್ಕಿಂತ ಈಚೆಗೆ ತರುವ ಪ್ರಯತ್ನಗಳನ್ನು ಮಾಡಿರುವುದುಂಟು[81]; ಆದರೆ ಹಿಂದಕ್ಕೆ ಒಯ್ಯುವುದು ಸಾಧ್ಯವಿದೆಯೆಂದೂ ಯಾರೂ ಸೂಚಿಸಿಲ್ಲ ಎಂಬುದನ್ನು ಗಮನಿಸಬೇಕು.

ಬಾದಾಮಿಯ ಮತ್ತು ಹಲ್ಮಿಡಿಯ ಶಾಸನಗಳಿಗಿಂತ ಹಿಂದಿನವು ಎಂದು ಶಾಸನೋಕ್ತ ತೇದಿಗಳ ಆಧಾರದ ಮೇಲೆ ಹೇಳಬಹುದಾದ ಕೆಲವು ಶಾಸನಗಳೇನೋ ಇವೆ. ಉದಾ: ನಂಜನಗೂಡು ನಂ ೧೧೦ (ಶಕ ೨೫ = ಕ್ರಿ.ಶ. ೧೦೩), ನಂ. ೧೯೯ (ಶಕ ೧೧೧ = ಕ್ರಿ.ಶ.

೧೮೯), ನಂ. ೧೨೨ (ಶಕ ೧೮೮ = ಕ್ರಿ.ಶ. ೨೬೬), ಸಕಲೇಶಪುರ. ನಂ. ೫೨ (ಶಕ ೨೭೯ = ಕ್ರಿಶ. ೩೫೭) ಇತ್ಯಾದಿ. ರೈಸ್, ಫ್ಲೀಟ್, ಕೀಲ್‌ಹಾರ್ನ್, ಎ. ವೆಂಕಟಸುಬ್ಬಯ್ಯ ಈ ಕೆಲವರು ಶಾಸನತಜ್ಞರು ಆ ಶಾಸನಗಳಲ್ಲಿ ತೇದಿಗಳು ತಪ್ಪಾಗಿ ಉಲ್ಲೇಖಗೊಂಡಿವೆಯೆಂಬ ಕಾರಣದಿಂದಲೋ ಶಾಸನಗಳೇ ಕೃತಕವೆಂಬ ಕಾರಣ ದಿಂದಲೋ ಅವುಗಳಲ್ಲಿ ಯಾವುದೊಂದನ್ನೂ ಅಷ್ಟು ಹಳೆಯ ಶಾಸನವೆಂದು ಒಪ್ಪಿ ಕೊಂಡಿಲ್ಲ.[82] ಪೈ ಅವರು ನಂಜನಗೂಡು ನಂ. ೧೯೯ರ ಶಾಸನ ಶಕ ೧೧೪ರ ಆಂಗಿರಸ ಸಂವತ್ಸರದಲ್ಲಿ ಹುಟ್ಟಿರಬೇಕೆಂದು ತಾವು ಗ್ರಹಿಸಿರುವುದಕ್ಕೆ ತಮ್ಮವೇ ಆದ ಕೆಲವು ಕಾರಣ ಗಳನ್ನು ಊಹಿಸಿದ್ದಾರೆ. ಆ ಕಾರಣಗಳು ಊಹೆಗಳೇ. ಈ ಬಗ್ಗೆ ರೈಸ್ ಶಕ ೧೧೧ ಎಂಬುದು ಶಕ ೭೧೧ ಎಂಬುದರ ಪ್ರತಿಯಾಗಿ ಆಗಿರುವ ತಪ್ಪು ಎಂದು ಗ್ರಹಿಸಿದ್ದರೆ, ಫ್ಲೀಟ್ ಶಾಸನವನ್ನೇ ಕೃತಕವೆಂದಿದ್ದಾರೆ. ಇವರ ಲೆಕ್ಕದಂತೆ ಶಾಸನದ ಬರೆಹ ಕ್ರಿ.ಶ. ೯ ಅಥವಾ ೧೦ನೆಯ ಶತಮಾನದ್ದು. ಈಚೆಗೆ ಈ ಶಾಸನ ಹುಟ್ಟಿದ ಕಾಲ ಮತ್ತು ಅಲ್ಲಿ ಉಕ್ತನಾದ ಎಱೆಹವೆಮ್ಮಡಿ ಎಂಬ ದೊರೆಯ ಐತಿಹಾಸಿಕತೆ ಇವನ್ನು ಚರ್ಚಿಸುವಾಗ ಹೀಗೆ ಅಭಿಪ್ರಾಯ ಪಡಲಾಗಿದೆ: "ಶಕವರ್ಷವು ೧೧೧ಕ್ಕೆ ಬದಲು ೭೧೧ ಆಗಿದ್ದು, ಶಾಸನದಲ್ಲಿ ಉಕ್ತವಾದ ಆಂಗಿರಸ ಸಂವತ್ಸರವು ಶಕವರ್ಷ ೭೧೪ಕ್ಕೆ (ಕ್ರಿ.ಶ. ೭೯೨) ಹೊಂದಿಕೆಯಾಗುವ ಕಾರಣ, ಕ್ರಿ.ಶ. ೭೯೨ ಶಾಸನಕಾಲವಾಗಿರಬೇಕೆಂಬುದು ರೈಸ್ ಅವರ ಅಭಿಪ್ರಾಯವಾಗಿದೆ. ಆದರೆ ಶಾಸನದ ಲಿಪಿಯು ಸ್ಪಷ್ಟವಾಗಿ ೧೦ನೆಯ ಶತಮಾನ ದ್ದಾಗಿದೆ. ಆದ್ದರಿಂದ ಶಾಸನದ ಕಾಲ ಕ್ರಿ.ಶ. ೯೧೨–೧೫ ಅಥವಾ ೯೭೨–೭೫ ಆಗಿರ ಬಹುದು...."[83] ಶಾಸನೋಕ್ತ ಎಱೆಹವೆಮ್ಮಡಿ ೮೮೫ ರಿಂದ ೯೨೦ ರವರೆಗೆ ಆಳಿದ ಗಂಗದೊರೆ ನೀತಿಮಾರ್ಗ ಎಱೆಯಪ್ಪನಾಗಿರಬಹುದು ಎಂಬ ಸಮೀಕರಣದಿಂದಲೂ ಮೇಲ್ಕಾಣಿಸಿದ ಕಾಲವನ್ನು (೯೧೨–೧೫) ಸಮರ್ಥಿಸುವ ಪ್ರಯತ್ನ ಮಾಡಿದೆ. ಅಂತೂ ಪೈ ಅವರ ಪೂರ್ವೋಕ್ತ ಶಾಸನಕ್ಕೆ ಒಪ್ಪಿರುವ ಕಾಲ ಹಲವರಿಗೆ ಸಮ್ಮತವಿಲ್ಲ ಎಂದು ಇದರಿಂದ ತಿಳಿಯುತ್ತದೆ.

ಇನ್ನು ಹಲ್ಮಿಡಿ ಶಾಸನದ ಮತ್ತು ಇತರ ಶಾಸನಗಳ ವಿಷಯದಲ್ಲಿಯೂ ಅವರು ಒಪ್ಪುವ ಕಾಲಮಾನವು ತತ್ತತ್ಕಾಲೀನ ಅರಸುಮನೆತನಗಳ ಅರಸರಿಗೆ ಅವರು ಗೊತ್ತು ಪಡಿಸಿರುವ ಕಾಲಮಾನಕ್ಕೆ ಹೊಂದಿಕೊಂಡಿರುತ್ತದೆಯಾದ್ದರಿಂದ ಅವೆಲ್ಲ ಕಾಲಸೂಚನೆ ಗಳೂ ವೈಯಕ್ತಿಕವೆಂಬ ಕಾರಣದಿಂದಾಗಿ ಪ್ರಸ್ತುತ ಸಂದರ್ಭಕ್ಕೆ ಒದಗುವಹಾಗಿಲ್ಲ. ಈಯಂಶವನ್ನು ಮನದಂದರೆ ಈಗ ಸಾಧಾರಣವಾಗಿ ಅಂಗೀಕೃತವಾಗಿರುವಂತೆ ಬನವಾಸಿ ಕದಂಬರ ಕಾಕುತ್ಸ್ಥವರ್ಮನ (ಸು. ೪೨೨–೪೭) ಆಳಿಕೆಯಲ್ಲಿ ಹುಟ್ಟಿದ ಹಲ್ಮಿಡಿ ಶಾಸನ ವನ್ನು ಶಾಸನಸಾಹಿತ್ಯದ ನೆಲೆಗಟ್ಟು ಎಂದು ಗ್ರಹಿಸಿ, ಕ್ರಿ.ಶ. ಸು. ೫ನೆಯ ಶತಮಾನ ದಿಂದ ಕನ್ನಡದಲ್ಲಿ ವಿಶಾಲವಾದ ಅರ್ಥದಲ್ಲಿ ಸಾಹಿತ್ಯರಚನೆ ನಡೆದಿದೆಯೆಂದು ತಿಳಿಯ ಬೇಕಾಗುತ್ತದೆ. ಈ ಸಂದರ್ಭದಲ್ಲಿ ಈ ಅವತರಣಿಕೆಯನ್ನು ನೆನೆಯಬಹುದು. "ಕನ್ನಡ ಶಾಸನಸಾಹಿತ್ಯದ ಮತ್ತು ಸಾಹಿತ್ಯದ ಚರಿತ್ರೆಯಲ್ಲಿ ಹಲ್ಮಿಡಿಯ ಶಾಸನವು ಅಗ್ರ

ಪೂಜೆಗೆ ಅರ್ಹವಾಗಿದೆ. ಮೊತ್ತಮೊದಲಿನ ಗ್ರಂಥಸ್ಥವಾದ ಗದ್ಯ ಎಂಬ ವಿಚಾರದಿಂದ ಇದರ ಮಹತ್ತ್ವವು ಹಿರಿದಾಗಿದೆ. ಸಂಸ್ಕೃತಭಾಷೆಯ ಬೆಂಬಲದಿಂದ ವಚನರೂಪವಾಗಿ ಪ್ರಕಟವಾದ ಕನ್ನಡಸಾಹಿತ್ಯದ ಉಗಮದ ಕುರುಹುಗಳನ್ನು ನಾವಿಲ್ಲಿ ಕಾಣಬಹುದು."[೩೪]

ಶಾಸನಗಳ ಭಾಷೆ ಶೈಲಿಗಳ ವಿಷಯದಲ್ಲಿ ಗೋವಿಂದ ಪೈ ಅವರ ಗ್ರಹಿಕೆಗಳು ಸಂಭವನೀಯವಿರುವಂತೆ ತೋರುತ್ತದೆ. ಸಂಸ್ಕೃತಪದಗಳು ಅಚ್ಚಗನ್ನಡದ ಮಾತು ಗಾರಿಕೆಯಲ್ಲಿ ಬೆರೆಯುವುದು ಒಮ್ಮೆಗೇ ಘಟಿಸಿದ್ದಲ್ಲ, ಸಾಮಾನ್ಯವ್ಯವಹಾರದ ಆವಶ್ಯಕತೆಗಿಂತ ಮುಂದುವರಿದು ಧರ್ಮವಿಷಯ ಮೊದಲಾದವನ್ನು ಒಳಕೊಳ್ಳುವ ಸಂದರ್ಭ ಬಿದ್ದಾಗ ಕಾಲಕ್ರಮದಲ್ಲಿ ಬೆರೆತುಬಂದದ್ದು ಎಂದು ಪೈ ಹೇಳುತ್ತಾರೆ. ಹಾಗೆಯೇ ಅಚ್ಚ ಕನ್ನಡದ್ದೇ ಆದ ಪದ್ಯಜಾತಿಗಳಿಂದ ಕಟ್ಟಿದ ಕನ್ನಡ ಸಾಹಿತ್ಯರಚನೆಯ ಪದ್ಧತಿ ಒಂದು ಕಾಲಕ್ಕೆ ರೂಢಿತಪ್ಪಿ ಸಂಸ್ಕೃತ ವೃತ್ತಗಳನ್ನು ವಿಶೇಷವಾಗಿ ಬಳಸಿದ ಪದ್ಧತಿ ಪ್ರವರ್ತಿಸಿತೆಂದಿದ್ದಾರೆ. ಭಾಷೆ ಛಂದಸ್ಸುಗಳಲ್ಲಿ ಹೀಗೆ ಅಚ್ಚಗನ್ನಡವೇ ಆದ ಕಾಲವೊಂದು ಸ್ವತಂತ್ರವಾಗಿ ಇದ್ದಿತೇ, ಸಂಸ್ಕೃತಸಮ್ಮಿಶ್ರವಾದ ಕನ್ನಡಸಾಹಿತ್ಯ ಪದ್ಧತಿಯೊಡನೆ ಅದು ಸಮಾನಾಂತರ ಪ್ರವಾಹವಾಗಿ ಹರಿಯುತ್ತ ಇದ್ದಿರಬಹುದೇ ಅಥವಾ ಅಂಥ ಶುದ್ಧ ದೇಶ್ಯವಾದ ಪದ್ಧತಿ ಇರಲೇ ಇಲ್ಲವೇ ಎನ್ನುವುದನ್ನು ನಿಷ್ಕೃಷ್ಟವಾಗಿ ಗೊತ್ತುಮಾಡುವುದಕ್ಕೆ ನಮಗೆ ತಕ್ಕ ಪ್ರಮಾಣಗಳಿಲ್ಲ. ಬಾದಾಮಿ (ತಟ್ಟುಕೋಟೆ) ಶಾಸನದ ತ್ರಿಪದಿಗಳ ಭಾಷೆಯ ದೃಷ್ಟಿಯಿಂದ, ಈಚಿನ ಜನಪದ ಮತ್ತು ಗ್ರಾಂಥಿಕ ತ್ರಿಪದಿ ಅಥವಾ ಇತರ ದೇಶ್ಯ ಛಂದಸ್ಸುಗಳ ಪದ್ಯಗಳಲ್ಲಿ ಬಳಸಿರುವ ಭಾಷೆಯ ದೃಷ್ಟಿಯಿಂದ, ಎಂದಾದರೂ ಸಂಸ್ಕೃತ ಪ್ರಾಕೃತ ಭಾಷೆಗಳ ಪದಗಳಿಂದ, ಪದಸಮುಚ್ಚಯಗಳಿಂದ ಅಮಿಶ್ರವಾದ ಒಂದು ಕವಿತ್ವಪದ್ಧತಿ ಕನ್ನಡದಲ್ಲಿದ್ದಿತು ಎಂಬುದನ್ನು ಕಲ್ಪಿಸಿಕೊಳ್ಳುವುದು ಕೂಡ ಕಷ್ಟವಾಗುತ್ತದೆ. ಆದರೆ ಛಂದಸ್ಸಿನ ದೃಷ್ಟಿಯಿಂದ ಈಗ ದೊರೆಯುವ ಪ್ರಮಾಣಗಳನ್ನಾಧರಿಸಿದರೂ ಶುದ್ಧದೇಶ್ಯವಾದ ಒಂದು ಪದ್ಧತಿ ಪ್ರಾಚೀನಕಾಲದಲ್ಲಿ, ಶಾಸನಗಳ ಕಾಲವಾದ ೫–೬ನೆಯ ಶತಮಾನಗಳಲ್ಲಿಯೂ ಆದಕ್ಕೆ ಸ್ವಲ್ಪ ಕಾಲ ಹಿಂದೆಯೂ ಇದ್ದಿರುವುದು ಅಸಂಭವವೇನಲ್ಲ. ಅದು ಗ್ರಂಥಸ್ಥವಾಗಿಲ್ಲದೆ ಕಂಠಸ್ಥವಾಗಿಯೇ ಇದ್ದಿರಬಹುದು. ಅಲ್ಲದೆ ಅದು ಲಿಖಿತರೂಪವನ್ನು ಪಡೆದ ಸಂಸ್ಕೃತ-ಕನ್ನಡ ಸಮ್ಮಿಶ್ರ ಛಂದೋಬದ್ಧ ಸಾಹಿತ್ಯಪದ್ಧತಿಯೊಡನೆ, ಸ್ವತಂತ್ರ ಸಂಸ್ಕೃತಛಂದೋಬದ್ಧ ಸಾಹಿತ್ಯ ಪದ್ಧತಿಯೊಡನೆ ಸಮಾನಾಂತರ ಪ್ರವಾಹವಾಗಿಯೂ ಹರಿದುಕೊಂಡು ಬಂದಿರಬಹುದು.

ಈ ವಿಷಯದಲ್ಲಿ ಬಿ. ಎಂ. ಶ್ರೀಕಂಠಯ್ಯನವರ ಸಲಹೆ:[೩೫] "....ಸು. ೬–೭ನೆಯ ಶತಮಾನಗಳವರೆಗೆ ಸಂಸ್ಕೃತ ಮತ, ನಾಗರಿಕತೆ ಮತ್ತು ಸಾಹಿತ್ಯಜ್ಞಾನ ಇವು ಕನ್ನಡ ಜನರಲ್ಲಿ ವ್ಯಾಪಿಸಿ ಅವರ ಭಾಷೆ ಪುಷ್ಟಿಯಾಗಿ ಕಾವ್ಯಕರ್ಮಕ್ಕೆ ಸಾಧ್ಯವಾಯಿತೆಂದೂ ಆರಂಭವಾದಾಗ ಸಂಸ್ಕೃತದ ಸಂಸ್ಕಾರಬಲವೇ ಸರ್ವವ್ಯಾಪಿಯಾಗಿತ್ತೆಂದೂ ಬಹುಶಃ ಅಚ್ಚಗನ್ನಡದಲ್ಲಿ, ಕನ್ನಡ ಛಂದಸ್ಸಿನಲ್ಲಿ ಕವಿತ್ವವಿದ್ದು ನಶಿಸಿಹೋಗಿ ಆ ಕಾಲದ ಗ್ರಂಥಗಳಲ್ಲಿ ತನ್ನ ಕೆಲವು ಚಿಹ್ನೆಗಳನ್ನು ಸೇರಿಸಿ ಹಾಡಿನ ರೂಪದಲ್ಲಿ ಜನಸಾಮಾನ್ಯರಲ್ಲಿ

ಬಳಕೆಯಾಗಿರುತ್ತಾ ವೀರಶೈವರ ಪ್ರೋತ್ಸಾಹದಲ್ಲಿ ಮತ್ತೆ ತಲೆಯೆತ್ತಿತೆಂದೂ ಊಹಿಸ ಬಹುದಾಗಿದೆ."

೮೦. ಶ್ರೀ. ಮುಗಳಿಯವರು ಹೇಳುವುದು:[೩೬] "ಕನ್ನಡದಲ್ಲಿ ಮೊದಲು ಅಚ್ಚ ಗನ್ನಡದ ಯುಗವಾಗಿರಬೇಕೆಂಬ ಊಹೆ ನಮಗೆ ಸಮ್ಮತವಿಲ್ಲ. ಕನ್ನಡ ಭಾಷೆ-ಸಾಹಿತ್ಯ ಗಳು ಗ್ರಂಥಸ್ಥವಾದ ರೂಪದಲ್ಲಿ ಸಂಸ್ಕೃತದ ಸಾಕಷ್ಟು ಪ್ರಭಾವದಿಂದಲೇ ಹುಟ್ಟಿ ಬೆಳೆದಿವೆ. ಅಚ್ಚಗನ್ನಡ ದೇಸಿ ಹಾಗೂ ಛಂದಸ್ಸಿನ ಎಳೆಗಳನ್ನು ಕನ್ನಡದ ನೇಯ್ಗೆಯಲ್ಲಿ ಗುರುತಿಸಬಹುದಾದರೂ ತಮಿಳಿನ ಹಾಗೆ ಸಂಸ್ಕೃತದಿಂದ ಬಹುಶಃ ಅಲಿಪ್ತವಾದ ಗ್ರಾಂಥಿಕ ಸ್ವರೂಪವು ಇದ್ದಿತೆಂದು ತೋರುವುದಿಲ್ಲ."

ಕನ್ನಡ ಸಾಹಿತ್ಯರಚನೆಗೆ ಸಂಸ್ಕೃತ ಪ್ರಾಕೃತ ಭಾಷೆಗಳ ಗಾಢಸಂಪರ್ಕ ಪ್ರಭಾವ ಗಳನ್ನು ಪ್ರಾಯಶಃ ಒಪ್ಪಬೇಕಾಗುತ್ತದೆ. ಕಾಲದ ದೃಷ್ಟಿಯಿಂದ ದೊರತವುಗಳಲ್ಲಿ ಮೊದಲನೆಯದೆಂಬ ಹಲ್ಮಿಡಿ ಶಾಸನದಲ್ಲಿಯೇ ಸಂಸ್ಕೃತ ಶಬ್ದಗಳ ಅವುಗಳ ಸಮಾಸಗಳ ಮಿಗಿಲಾದ ಪ್ರಭಾವ ಗೋಚರಿಸುತ್ತದೆ. ಎಂದರೆ ಕ್ರಿ.ಶ. ಐದನೆಯ ಶತಮಾನದ ವೇಳೆಗೇ ಆ ಸಂಪರ್ಕ ಪ್ರಭಾವಗಳು ದಟ್ಟವಾಗಿ ಕನ್ನಡಕ್ಕೆ ಒದಗಿತ್ತು ಎಂದಾಯಿತು. ಇದು ಗದ್ಯಶಾಸನ. ಪೂರ್ವದ ಹಳಗನ್ನಡದ ವೈಲಕ್ಷಣ್ಯಗಳನ್ನು ಹೆಚ್ಚಾಗಿ ಉಳ್ಳ ಶಾಸನಗಳು ಗದ್ಯದಲ್ಲಿದ್ದು, ಕೆಲವು ಮಾತ್ರ ಪದ್ಯದಲ್ಲಿವೆ. ಇದನ್ನು ಗಮನಿಸಿದರೆ, ಮೊದಮೊದಲು ಶಾಸನಗಳನ್ನು ಗದ್ಯದಲ್ಲಿಯೇ ಬರೆಯುವ ರೂಢಿಯಿದ್ದು, ಈಚೆಗೆ ಪದ್ಯದಲ್ಲಿ ಬರೆಯು ವುದು ಪ್ರಚಲಿತವಾದಹಾಗೆ ತೋರುತ್ತದೆ. ಈಯವಧಿಯಲ್ಲಿ ಸಂಸ್ಕೃತದ ವೃತ್ತಗಳು ಕನ್ನಡದೊಳಗೆ ಪ್ರವೇಶಿಸಿರಬಹುದು. ಶ್ರವಣಬೆಳ್ಗೊಳದ ಶಾಸನಗಳಲ್ಲಿ ಇಂಥವು ಕಂಡು ಬರುತ್ತವೆ; ಹೀಗೆಯೇ ಕನ್ನಡ ಮಟ್ಟುಗಳ ಮೇಲೆಯೂ ಸಂಸ್ಕೃತದ ದಟ್ಟ ಪ್ರಭಾವ ವಾಗಿದೆ.

ಗದ್ಯಶಾಸನಗಳು ಕನ್ನಡ ಸಾಹಿತ್ಯದ ಹಳಮೆಯ ಬಗೆಗೆ ಏನು ಬೆಳಕನ್ನು ಚೆಲ್ಲ ಬಹುದು ಮೊದಲು ನೋಡೋಣ: ಆಳುಪ, ಗಂಗ, ಬಾದಾಮಿ ಚಾಲುಕ್ಯ ಈ ಮನೆ ತನಗಳ ಕಾಲದ ಕೆಲವು ಪ್ರಾಚೀನ ಗದ್ಯಶಾಸನಗಳು, ಕ್ರಿ.ಶ. ೬ರಿಂದ ೮ನೆಯ ಶತಮಾನಕ್ಕೆ ಸೇರಿದವೆಂದು ಇತಿಹಾಸ ಮತ್ತು ಲಿಪಿಯ ಆಧಾರಗಳಿಂದ ಸ್ಪಷ್ಟವಾಗಿ ತಿಳಿದುಬಂದಿರತಕ್ಕವು, ಬೇರೆ ಬೇರೆ ಶಾಸನಸಂಪುಟಗಳಲ್ಲಿ ಅಚ್ಚಾಗಿ ಕಾಣಲು ದೊರೆಯು ತ್ತಿವೆ. ಮುಖ್ಯವಾಗಿ ಇಲ್ಲಿ ಊರಳಿವು ಮುಂತಾದ ಸಂದರ್ಭಗಳಲ್ಲಿ ಕಾದಾಡಿ ಪ್ರಾಣಾ ರ್ಪಣೆ ಮಾಡಿದ ವೀರನ ಸ್ಮರಣೆ, ಭೂಮಿಯನ್ನೋ ಗೋವುಗಳನ್ನೋ ಯಾರದೋ ಅರಸನ ಕಾಲದಲ್ಲಿ ಯಾರಿಗೋ ದಾನವಾಗಿ ಕೊಟ್ಟದ್ದು, ಬೇರೆ ಬೇರೆ ಕಾರಣಗಳಿಗಾಗಿ ತೆರಿಗೆಯ ವಿನಾಯಿತಿಯನ್ನು ಪ್ರಕಟಿಸಿದ್ದು, ದೇವಸ್ಥಾನ ಅಥವಾ ಅದರ ಭಾಗಗಳ ನಿರ್ಮಾಣವನ್ನು ದಾಖಲೆಗೊಳಿಸಿದ್ದು ಈ ಮುಂತಾದ ವಿಷಯಗಳು ನಿರೂಪಿತವಾಗಿವೆ. ಈ ಶಾಸನಗಳೆಲ್ಲ ಸಾಮಾನ್ಯವಾಗಿ ಗದ್ಯದಲ್ಲಿಯೇ ಲಿಖಿತವಾಗಿದ್ದು, ಪ್ರಮಾಣದಲ್ಲಿ ಚಿಕ್ಕವಾಗಿದ್ದು, ಬಹುಮಟ್ಟಿಗೆ ಪ್ರತಿಪಾದ್ಯ ವಿಷಯದ ಶುಷ್ಕವರದಿಗಳೆನ್ನುವಂತಿವೆ. ಇವು

ಗಳಲ್ಲಿ ಮನಸ್ಸನ್ನು ಸೆರೆಹಿಡಿಯುವ ಸಾಹಿತ್ಯಾಂಶಗಳೇನೂ ಕಾಣುವುದಿಲ್ಲ. ಆದರೆ ಬೆಡಗಿಲ್ಲದ ಈ ನುಡಿಗಳ ಗಡಣದಲ್ಲಿಯೇ ಅಚ್ಚಕನ್ನಡತನವೆಂಬ ಗುಣ ಇಡುಗಿದೆಯೆಂಬು ದನ್ನು ತಪ್ಪದೆ ಗಮನಿಸಬೇಕು. ಶ್ರವಣಬೆಳ್ಗೊಳದ ಮೃತ್ಯುಲೇಖಗಳ ಪದ್ಯಗಳು ಮುಂದೆ ಹೆಮ್ಮರವಾಗಿ ಬೆಳೆದ ಮಾರ್ಗಕವಿತ್ವದ ಲಕ್ಷಣಗಳ ಮುನ್ಸೂಚನೆಗಳನ್ನು ತೋರಿಸುವಂತೆ ಈ ಗದ್ಯಶಾಸನಗಳು 'ವಡ್ಡಾರಾಧನೆ'ಯಲ್ಲಿ ಮುಂದೆ ಕಂಡಂಥ ದೇಸಿಕವಿತ್ವ ಲಕ್ಷಣದ ಮುನ್ಸೂಚನೆಗಳನ್ನೂ ಕೆಲಸುಟ್ಟಿಗೆ ಕೊಡುತ್ತವೆ. ಅಲ್ಲದೆ ಸಂದರ್ಭವಿಶೇಷಗಳ ಅಧಿಕೃತ ದಾಖಲೆಗಳಾಗಬೇಕಾದ ಈ ಶಾಸನಗಳು ಕವಿತ್ವದ ಭಾಷೆಯನ್ನು ಅನುಸರಿಸುವುದು ಅಸಂಭವ, ಪ್ರಾಯಃ ಅನುಚಿತ. "ಪೋಗಿ ಪೋಗಿ ಕೊಳ್ವೋರುಂ ಕೊಣ್ಡು ಉಣ್ಬೋರುಂ" (ಎಕ., ೭, ಕೆಪಿ. ೩೭), "ಕೆಡಿಸಿದೋನುಂ ಕೇಡುವೇಡಿದೋನುಂ ಓತೋನುಂ ಒದವಿ ದೋನುಂ" (ಮೈಆರಿ. ೧೯೧೬, ಪು. ೩೭). ಎಂದು ವರ್ಣಾವೃತ್ತಿಗೆ ಎಡೆಗೊಟ್ಟ ಒಂದೆರಡು ವಾಕ್ಯವಿನ್ಯಾಸಗಳಲ್ಲಿ ಸಾಹಿತ್ಯದ ರೀತಿ ಒಂದಿಷ್ಟು ಮಿಂಚುವಂತೆ ಭಾಸ ವಾಗುತ್ತದೆ. ಆದರೆ ಒಟ್ಟಿನಲ್ಲಿ ಇವುಗಳಲ್ಲಿ ಸಾಹಿತ್ಯದ ಸೊಗಸು ಪಲ್ಲವಿಸಿರುವಂತೆ ತೋರು ವುದಿಲ್ಲ ; ಅದನ್ನು ನಾವು ಕಾಣಬೇಕಾದರೆ ಪ್ರಾಯಃ ರಾಷ್ಟ್ರಕೂಟರ ಕಾಲಕ್ಕೇ, ೧೦ನೆಯ ಶತಮಾನಕ್ಕೇ, ಕಾಲಿಡಬೇಕಾಗುತ್ತದೆ.

ಕ್ರಿ.ಶ. ಸು. ೭, ೮ನೆಯ ಶತಮಾನಗಳ ಕನ್ನಡ ಗದ್ಯಶಾಸನಗಳು, ನಿರೂಪಿಸುವ ವಸ್ತುವಿನ ವಿವರಗಳಿಗೆ ಸಾಮಾನ್ಯವಾಗಿ ಪ್ರವೇಶಿಸುವುದಿಲ್ಲ ; ಮುಖ್ಯವಿಷಯದ ಉಲ್ಲೇಖ ವನ್ನಷ್ಟೇ 'ನಿರ್ಭಾವ ಗದ್ಯಧ್ವನಿ'ಯಲ್ಲಿ ವರದಿಮಾಡಿ ಕೃತಕೃತ್ಯವಾದಂತೆ ತೋರುತ್ತವೆ; ಇಲ್ಲಿಯೂ ಅವು ಒಂದು ಪೂರ್ವಯೋಜಿತವಾದ ಚೌಕಟ್ಟಿನಲ್ಲಿಯೇ ಲಿಖಿತವಾಗಿರುತ್ತವೆ; ಶಾಸನದ ಕೊನೆಗೆ ಕೊಟ್ಟ ದಾನವನ್ನು ಅಳಿಯುವಾತನಿಗೆ ಪಾಪ ಬರುತ್ತದೆಂದು ತಿಳಿ ಸುವ ಸಾಂಪ್ರದಾಯಿಕ ವಾಕ್ಯವಿರುತ್ತದೆ. ಮುಖ್ಯವಿಷಯ ಮತ್ತು ಈ ಸಾಂಪ್ರದಾಯಿಕ ಶಾಪವಾಕ್ಯ ಸ್ವತಂತ್ರ ಶಾಸನವಾಗಿ ಲಿಖಿತವಾಗಿರುವಂತೆಯೇ ಒಮ್ಮೊಮ್ಮೆ ಸಂಸ್ಕೃತ ಶಾಸನವೊಂದರ ಕೊನೆಯಲ್ಲಿ ಸೇರಿಕೊಂಡು ಬಂದಿರುವುದು ಕೂಡ ಉಂಟು (ಉದಾ: ಎಕ., ೩-ನಂ. ೧೭೫ ಇ.). ಸಂಸ್ಕೃತದ ಶಾಸನಭಾಗ ಗದ್ಯಪದ್ಯಗಳಲ್ಲಿದ್ದರೆ ಹೀಗೆ ತೇಪೆಗೊಂಡು ಬರುವ ಕನ್ನಡ ಶಾಸನಭಾಗ ಗದ್ಯಮಾತ್ರದಲ್ಲಿಯೇ ಇರುವುದು ಕುತೂ ಹಲಕರವಾಗಿರುತ್ತದೆ. ಸಂಸ್ಕೃತ ಭಾಷೆಯಲ್ಲಿ ರಚಿತವಾದ ಗಂಗ ಕದಂಬ ಮತ್ತು ಬಾದಾಮಿ ಚಾಲುಕ್ಯರ ಕಾಲದ ಶಾಸನಗಳು ಉತ್ತಮ ಸಾಹಿತ್ಯದ ಲಕ್ಷಣಗಳನ್ನು ಪ್ರಕಟಿಸುವ ಉತ್ಕೃಷ್ಟ ಗದ್ಯಪದ್ಯಗಳಿಂದ ಅವುಗಳ ಯಥೋಚಿತ ವ್ಯಾಪ್ತಿ ವೈವಿಧ್ಯಗಳಿಂದ ಆಕರ್ಷಣೀಯವಾಗಿ ತೋರುತ್ತಿರುವುದಕ್ಕೆ ತಾಳಗುಂದ ಐಹೊಳೆ ಮೊದಲಾದ ಕಡೆಯ ಸಂಸ್ಕೃತ ಭಾಷೆಯ ಶಾಸನಗಳನ್ನು ಉದಾಹರಿಸಬಹುದು. ಇದೇ ಅವಧಿಯ ಕನ್ನಡ ಶಾಸನಗಳಲ್ಲಿ ಭಾಷೆ ಶೈಲಿ ಛಂದಸ್ಸುಗಳ ದೃಷ್ಟಿಯಿಂದ ಮೆಚ್ಚತಕ್ಕ ಅಂಶಗಳು ಕಾಣಸ ದಿರುವುದು, ಕನ್ನಡಭಾಷೆ ಸಾಹಿತ್ಯರಚನೆಗೆ ತಕ್ಕ ಹದದಲ್ಲಿ ಇನ್ನೂ ಸಿದ್ಧವಾಗಿರಲಿಲ್ಲ ವೆಂದು ಹೇಳುವುದಕ್ಕೆ ಎಡೆಕೊಡುತ್ತದೆ ; ಅಥವಾ ಶಾಸನದ ಭಾಷೆಯ ಉದ್ದೇಶ,

ಪ್ರಯೋಜನ ಮುಂತಾದವು ಸಾಹಿತ್ಯಿಕ ಭಾಷೆಯ ಉದ್ದೇಶ ಪ್ರಯೋಜನ ಇವುಗಳಿಂದ ಭಿನ್ನವಾಗಿದ್ದಿರಬೇಕು ಎಂದು ತಿಳಿಯಬೇಕಾಗುತ್ತದೆ. ಆದರೆ ಸಂಸ್ಕೃತ ಭಾಷೆಯ ಪ್ರಶಸ್ತಿ ಶಾಸನಗಳು ಈ ವೇಳೆಗಾಗಲೇ ಉತ್ತಮ ಮಾದರಿಗಳನ್ನು ಸಾಹಿತ್ಯದೃಷ್ಟಿಯಿಂದ ಸಿದ್ಧ ಪಡಿಸಿರಬೇಕಾದರೆ, ಕನ್ನಡ ಅದರ ಪ್ರಭಾವಕ್ಕೆ ಒಳಗಾಗದಿರಲು ಸಾಧ್ಯವೇ ? ಆ ಅರಸು ಮನೆತನಗಳು ಸಂಸ್ಕೃತ ಭಾಷಾಭಿಮಾನದಿಂದ ಅದರ ಪರಂಪರಾಗತ ಸಾಹಿತ್ಯಸಂಪನ್ನತೆಗೆ ಮನಸೋತು ಕನ್ನಡವನ್ನು ಕಡೆಗಣಿಸಿದರೇ ? ಕನ್ನಡ ನಾಡಿನವರಾಗಿಯೂ ಕವಿಗಳು ಸಂಸ್ಕೃತ ಕವಿತ್ವರಚನೆ ತಮ್ಮ ಪಾಂಡಿತ್ಯ ಪರಿಶ್ರಮಗಳ ನಿಕಷವೆಂದು ತಿಳಿದು ಅದನ್ನೇ ಒಲಿದರೇ ?—ಈ ಬಗೆಯ ಹಲವು ಪ್ರಶ್ನೆಗಳಿಗೆ ಇಲ್ಲಿ ಎಡೆಯಿದೆ.

ಇಂಥ ಸಂದರ್ಭಗಳು ಏನಿದ್ದರೂ ಸು. ೭ರಿಂದ ೮ನೆಯ ಶತಮಾನದವರೆಗೆ ಕನ್ನಡ ಗದ್ಯಶಾಸನಗಳು ಕನ್ನಡ ಸಾಹಿತ್ಯದ ಮಾದರಿಗಳೆಂಬ ರೀತಿಯ ರಚನೆಗಳಾಗಿಲ್ಲವೆಂಬುದು ನಿಜ. ಪ್ರಾಯಃ ಆಗಿನ್ನೂ ಕನ್ನಡ ಕಣ್ತೆರೆಯುತ್ತಿದ್ದಿರಬಹುದು. ಹೆಚ್ಚು ಪಾಲು ಗದ್ಯ ಶಾಸನಗಳು ಸಾಹಿತ್ಯದೃಷ್ಟಿಯಿಂದ ನೀರಸವೆಂಬುದು ನಿಜವಾದರೂ, ಕೆಲವು ಶಾಸನಗಳಲ್ಲಿ ಒಳ್ಳೆಯ ಕಾವ್ಯದ ಎಳೆಗಳು ಅಲ್ಲಲ್ಲಿ ಮಿಂಚಿರುವುದು ಗಮನಿಸತಕ್ಕದ್ದಾಗಿದೆ. ಈಗಾಗಲೇ ವಿದ್ವಾಂಸರು ಗಮನಿಸಿರುವ ಎರಡು ಶಾಸನಗಳನ್ನು ಇಲ್ಲಿ ಸ್ವಲ್ಪ ವಿವರವಾಗಿ ಪರಿಶೀಲಿಸಬಹುದು. ಇವುಗಳಲ್ಲಿ ಮೊದಲನೆಯದು ಕದಂಬ ಕಾಕುತ್ಸ್ಥವರ್ಮನ ಕಾಲದ್ದೆನ್ನಲಾದ ಹಲ್ಮಿಡಿ ಶಾಸನ (ಸು. ೪೫೦), ಎರಡನೆಯದು ಶಿವಮೊಗ್ಗ ಜಿಲ್ಲೆಯ ಸೊರಬದ ಒಂದು ವೀರಗಲ್ಲು (ಸು. ೮೦೦).

ಹಲ್ಮಿಡಿ ಶಾಸನದ ವಾಕ್ಯಬಂಧ ತೀರ ಶುಷ್ಕ ಎನ್ನುವಂಥದಲ್ಲ. ಹೋಲಿಸಿ ಹೇಳುವುದಾದರೆ, ಮೇಲಾದ ಮಾರ್ದವ ಸಮಂಜಸಿಕೆಗಳು ಕಾಣುತ್ತವೆ. ಈ ಶಾಸನವನ್ನು ಕಂಡುಹಿಡಿದು ಪ್ರಕಟಿಸಿರುವ ಎಂ. ಎಚ್. ಕೃಷ್ಣ ಅವರು ಈ ವಿಷಯದಲ್ಲಿ ಹೇಳುವುದು ಹೀಗೆ : "(೧) ಕನ್ನಡಕ್ಕೂ ಸಂಸ್ಕೃತಕ್ಕೂ ಉಭಯಸಂಬಂಧವು ಕ್ರಿ.ಶ. ೪೫೦ಕ್ಕೆ ಬಹಳ ಹಿಂದೆಯೇ ಆರಂಭವಾಗಿ ಸಂಸ್ಕೃತ ಸಮಸ್ತಪದಗಳಿಂದ ಕೂಡಿದ ಪ್ರೌಢವಾದ ಕನ್ನಡವು ೫ನೆಯ ಶತಮಾನದ ವೇಳೆಗೆ ಚೆನ್ನಾಗಿ ಬಳಕೆಗೆ ಬಂದಿತ್ತು. (೨) ಜನಸಾಮಾನ್ಯದ ನಡೆವಳಿಕೆಯಲ್ಲೂ ಬರವಣಿಗೆಯಲ್ಲೂ ಹೆಚ್ಚಾಗಿ ಶುದ್ಧ ಕನ್ನಡ ಪದಗಳೇ ಉಪಯೋಗದಲ್ಲಿದ್ದುವು. ರಾಜರ ಆಸ್ಥಾನಗಳಲ್ಲಿಯೂ ಪಂಡಿತರ ಬರವಣಿಗೆಗಳಲ್ಲಿಯೂ ಸಂಸ್ಕೃತ ಪದಗಳಿಂದ ಹೆಚ್ಚಾಗಿ ಕೂಡಿದ ಭಾಷೆಯು ಪ್ರಚಾರದಲ್ಲಿತ್ತು. 'ಪೆತ್ತಜಯನ್' ಮೊದಲಾದ ಪದರೂಪಗಳು ಸಂಸ್ಕೃತಮಾರ್ಗವನ್ನು ಅನುಸರಿಸಿದ್ದುವು. (೩) ಪೂರ್ವದ ಕನ್ನಡದ ಪದರೂಪಗಳು ಸುಪ್ರಸಿದ್ಧವಾದ ವ್ಯಾಕರಣನಿಯಮಗಳಿಗೆ ಕಟ್ಟುಬಿದ್ದಿದ್ದುವು. ಕನ್ನಡವು ಚೆನ್ನಾಗಿ ಬೆಳೆದು ಬಲಿತ ಭಾಷೆಯಾಗಿತ್ತು. (೪) ಇದಕ್ಕೆ ಈ ಭಾಷೆಯೂ ಇದರ ವಾಙ್ಮಯವೂ ಕೆಲವು ಶತಮಾನಗಳ ಹಿಂದೆಯೇ ಬದುಕಿ ಬಾಳಿರಬೇಕು."[37]

ಈ ವಿಷಯದಲ್ಲಿ ರಂ. ಶ್ರೀ. ಮುಗಳಿಯವರ ಅಭಿಪ್ರಾಯ ಹೀಗೆ[38] : "ಈ ಶಾಸನಕಾರನು ಪ್ರೌಢ ಸಂಸ್ಕೃತಕ್ಕೆ ಮಾರುಹೋದ ಪಂಡಿತಕವಿಯೆಂಬುದನ್ನು ಅವನ ಒಂದೆರಡು

ರೂಪಕಗಳೂ ಸಮಸ್ತಪದಗಳೂ ತಿಳಿಸುತ್ತವೆ. ಆದರೆ ಶಾಸನದ ತೀರ ಸಂಕ್ಷಿಪ್ತವಾದ ಚಾರಿತ್ರಿಕ ನಿವೇದನದಲ್ಲಿ ಕವಿತ್ವಕ್ಕೆ ಹೆಚ್ಚಿನ ಅವಕಾಶ ದೊರೆತಿಲ್ಲ. ಇದರಲ್ಲಿಯ 'ಪೆತ್ತ ಜಯನ್' ಎಂಬ ಸಮಾಸವು ಕನ್ನಡ ಸಂಸ್ಕೃತಗಳ ಚಿರಕಾಲದ ಸಂಬಂಧಕ್ಕೆ ಸಾಕ್ಷಿಯಾಗಿದೆ. ಯಾಕೆಂದರೆ ಕನ್ನಡದ ಕ್ರಿಯಾರೂಪವೊಂದು ಸಂಸ್ಕೃತ ಶಬ್ದದೊಡನೆ ನಿರ್ದೋಷವಾಗಿ ಬೆರೆತಿರುವುದು ಸಂಬಂಧವು ಹೊಸತಾಗಿದ್ದಾಗ ಸಾಧ್ಯವಿಲ್ಲ. ಪೂರ್ವದ ಹಳಗನ್ನಡವೆಂಬ ರೂಪದಲ್ಲಿ 'ಪೊಗಟಿಪ್ಪೊಟ್ಟಣ' ಎಂಬುದು ಕರ್ಮಣಿಯ ಪ್ರಾಚೀನ ರೂಪವಾಗಿದೆ ಮಾತ್ರವಲ್ಲ, ಕನ್ನಡದ ಮೇಲಾದ ಸಂಸ್ಕೃತ ವರ್ಚಸ್ಸಿನ ಹಳಮೆಗೆ ಗುರುತಾಗಿದೆ. ಈ ಶಾಸನದಿಂದ ೧–೨ ಶತಕಗಳ ಹಿಂದಿನಿಂದ ಕನ್ನಡವು ಗ್ರಾಂಥಿಕ ಭಾಷೆಯಾಗಿ ಬೆಳೆಯತೊಡಗಿತ್ತು ಎಂದು ಹೇಳಬಹುದೇ ಹೊರತು ಬಹಳ ಹಿಂದಿನಿಂದ ಮೊದಲಾಗಿ "ಚೆನ್ನಾಗಿ ಬೆಳೆದು ಬಲಿತ ಭಾಷೆಯಾಗಿತ್ತು" ಎಂದೆನ್ನುವಂತಿಲ್ಲ. ಉಳಿದ ಪೂರ್ವದ ಹಳಗನ್ನಡ ನಿದರ್ಶನಗಳಂತೆ ಇದೂ ರೂಪಗೊಳ್ಳುತ್ತಲಿದ್ದ ಹಳಗನ್ನಡದ ಸಂಕ್ರಮಣಾವಸ್ಥೆಗೆ ನಿದರ್ಶನವಾಗಿದೆ. ಕನ್ನಡ ವಾಙ್ಮಯವು ಕೆಲವು ಶತಮಾನಗಳ ಹಿಂದೆಯೇ ಬೆಳೆದು ಬದುಕಿದ ಬಗೆಗೆ ಇದು ಆಧಾರವಾಗಲಾರದು. ಬಹುಶಃ ಸಂಸ್ಕೃತ ಮುಗ್ಧರಾದ ಪಂಡಿತರು ಕನ್ನಡಕ್ಕೆ ಕೆಲಕಾಲದಿಂದ ಮಾತ್ರ ಒಲಿದು ಸಂಸ್ಕೃತ ಭೂಯಿಷ್ಠವಾದ ಕನ್ನಡ ಶೈಲಿಯುಳ್ಳ ಗ್ರಂಥರಚನೆಗೆ ತೊಡಗಿದ್ದರೆಂದು ಅದು ಸೂಚಿಸುತ್ತಿರಬಹುದು. ಬಳಿಕೆಯ ಕನ್ನಡದಲ್ಲಿ ಇದಕ್ಕಿಂತ ಪೂರ್ವದಲ್ಲಿಯೇ ಸಂಸ್ಕೃತಪದಗಳು ಸೇರಿ ಕನ್ನಡವೇ ಎನ್ನುವಷ್ಟು ಒಂದಾಗಿರಬೇಕು."

ಇದರಿಂದ ಬೇರೆಯಾಗಿ ಯೋಚಿಸಿರುವ ಇನ್ನೊಂದು ಅಭಿಪ್ರಾಯ : "ಹಲ್ಮಿಡಿ ಶಾಸನದಲ್ಲಿ ಬೆಳೆದು ನಿಂತ ಕನ್ನಡ ಗದ್ಯವನ್ನು ಕಾಣಬಹುದೆಂದು ಕೆಲವರು ಭಾವಿಸುತ್ತಾರೆ. ಅಲ್ಲಿಯ 'ಪೆತ್ತಜಯನ್' ಎಂಬ ವಿಲಕ್ಷಣರೂಪವನ್ನೂ, 'ಪೊಗಟಿಪ್ಪೊಟ್ಟಣ' ಎಂಬ ಕರ್ಮಣೀರೂಪವನ್ನೂ(?), 'ಬಹುಶತಹವನಾಹವದುಳ್....' ಎಂಬ ಉಕ್ತಿಯಲ್ಲಿ ಬರುವ ಶ್ಲೇಷೆಯನ್ನೂ ಗಮನಿಸಿದರೆ. ಸಂಸ್ಕೃತದ ಪ್ರಭಾವಕ್ಕೆ ತೀವ್ರವಾಗಿ ಒಳಗಾಗಿರುವ ಮತ್ತು ಸಂಸ್ಕೃತದಲ್ಲಿ ವಾಕ್ಯಗಳನ್ನು ಕಲ್ಪಿಸಿಕೊಂಡು ಅವುಗಳನ್ನು ಕನ್ನಡಕ್ಕೆ ಅನುವಾದಿಸಿರುವ ಒಬ್ಬ ಸಂಸ್ಕೃತ ವಿದ್ವಾಂಸನ ಕನ್ನಡ ಭಾಷೆಯನ್ನು ಅಲ್ಲಿ ಕಾಣಬಹುದು."

ಈ ಮೂರು ಮತಗಳಲ್ಲಿ ಮೊದಲೆರಡು ಕನ್ನಡ ಭಾಷೆಯು ೫ನೆಯ ಶತಮಾನಕ್ಕೆ ಸಾಕಷ್ಟು ಹಿಂದೆಯೇ ಸಂಸ್ಕೃತ ಭಾಷೆಯ ಪ್ರಭಾವಕ್ಕೆ ಸಿಕ್ಕು ಗ್ರಂಥಸ್ಥವಾಗತೊಡಗಿದ್ದಿತು ಎಂಬುದನ್ನು ಒಪ್ಪಿಕೊಳ್ಳುತ್ತವೆ. ಆದರೆ ಮೂರನೆಯದು ಕನ್ನಡ ಭಾಷೆಯಲ್ಲಿ ಗದ್ಯ ಹೆಚ್ಚು ಕಡಮೆ ಆ ಕಾಲದಲ್ಲಿ ಇನ್ನೂ ರೂಪಗೊಳ್ಳುತ್ತಿತ್ತು, ಸಂಸ್ಕೃತದ ಧಾಟಿಯನ್ನು ಅನುಕರಿಸುತ್ತಿತ್ತು ಎನ್ನುವ ಅಭಿಪ್ರಾಯದಿಂದ ಕೂಡಿರುವಂತೆ ತೋರುತ್ತದೆ. ಕೃಷ್ಣರ ನಿರ್ಣಯಗಳು ಮತ್ತಿನವಂಗೆ ಉತ್ಸಾಹಮೂಲವಾಗಿ ಉತ್ಪ್ರೇಕ್ಷಿತವೆಂಬಂತೆ ತೋರಿದ್ದರೆ ಅದು ಸಹಜ. ಮೂರನೆಯ ಅಭಿಪ್ರಾಯದಲ್ಲಿ ಕೆಲವು ಶಾಬ್ದಿಕ ವೈಲಕ್ಷಣ್ಯ

ಗಳನ್ನೂ ಸಹಜ ಓಘವಿಲ್ಲದ ಭಾಷಾಶೈಲಿಯನ್ನೂ ಲಕ್ಷಿಸಿ ಹಳಮೆಯ ವ್ಯಾಪ್ತಿಗೆ ಕಡಿವಾಣ ಹಾಕುವ ವಿಚಾರ ವ್ಯಕ್ತಪಟ್ಟಿದೆ. ಪ್ರಾಯಃ ಈ ಎರಡೂ ಅಭಿಪ್ರಾಯಗಳು ಎರಡು ದೃಷ್ಟಿಕೋನಗಳ ತುದಿಗಳನ್ನು ತಾಕುವಂತೆ ತೋರುತ್ತವೆ. ನಡುವಣ ದಾರಿಯಲ್ಲಿ ನಡೆದಿರುವ ಮುಗಳಿಯವರ ಮತದಲ್ಲಿ ಹುರುಳಿರುವಂತಿದೆ. ಶಾಸನದ ಭಾಷೆ ಕನ್ನಡ ಸಂಸ್ಕೃತ ಭಾಷೆಗಳ ಗಾಢವೂ ವ್ಯಾಪಕವೂ ಪ್ರಾಚೀನವೂ ಆದ ಸಂಬಂಧವನ್ನೂ ಸ್ವಲ್ಪಮಟ್ಟಿಗಾದರೂ ಸಾಹಿತ್ಯಿಕ ಭಾಷೆಯ ಲಕ್ಷಣಗಳನ್ನೂ ತೋರಿಸುತ್ತವೆಯೆಂದು ಹೇಳುವುದಕ್ಕೆ ಅವಕಾಶವಿದೆ. ಮೃಗೇಶ ಮತ್ತು ನಾಗರೆಂಬವರನ್ನು ಮೃಗೇಶ ಮತ್ತು ನಾಗೇಂದ್ರರಿಗೆ ಹೋಲಿಸಿರುವ ಉಪಮೆಯೂ ಪಶುಪತಿಯೆಂಬವನು ಬಟರಿಕುಲವೆಂಬ ಗಗನವನ್ನು ಬೆಳಗಿದ ಚಂದ್ರನೆಂದು ವರ್ಣಿಸಿರುವ ರೂಪಕವೂ ಆತ ನೂರಾರು ಯುದ್ಧಗಳೆಂಬ ಯಜ್ಞಗಳಲ್ಲಿ ಶತ್ರುಗಳನ್ನು ಬಲಿಯಾಗಿ ನೀಡುವ ಶೌರ್ಯವುಳ್ಳಾತನೆಂದು ಕೀರ್ತಿಸುವಲ್ಲಿ, ಪ್ರೇಮಾಲಯಸುತನೆಂದು ವಿಜಅರಸನನ್ನು ಕರೆದಿರುವಲ್ಲಿ ಕಂಡುಬರುವ ಅಲಂಕಾರೋಕ್ತಿ ವಿನ್ಯಾಸವೂ ಮೇಲಿನ ಅಂಶಗಳನ್ನು ನಿರ್ದೇಶಿಸುತ್ತವೆ. ಹೀಗೆಯೇ 'ಪೊಗಟ್ಟಿಪ್ಪೊಟ್ಟಣ' ಎಂಬ ಕರ್ಮಣಿಪ್ರಯೋಗವೂ 'ಪೆತ್ತಜಯನ್' ಎಂಬ ಗಮಕಸಮಾಸವೂ ಕನ್ನಡವು ಸಂಸ್ಕೃತದ ವರ್ಚಸ್ಸನ್ನು ಹೇಗೆ ಒಳಗೊಳ್ಳುತ್ತ ಮುನ್ನಡೆದಿತ್ತೆಂಬುದನ್ನು ಸಂಕೇತಿಸುತ್ತವೆ. 'ಬಾಳ್ಗಚ್ಚು' ಎಂಬ ವೀರೋಚಿತ ವಿಧಿಯೂ 'ಕುಱುಮ್ಬಿಡಿ' ಎಂಬ ತೆಂಗೆಯ ಬಗೆಯೂ 'ಪತ್ತೊನ್ದಿ' ಎಂಬ ಗಣಿತವಿಧಾನವೂ ಕನ್ನಡಸಂಸ್ಕೃತಿ ಸಾಕಷ್ಟು ಹಿಂದಿನಿಂದ ಸ್ವತಂತ್ರವಾಗಿ ಬೆಳೆದುಕೊಂಡು ಬರುತ್ತಿದ್ದುದನ್ನು ಸೂಚಿಸುತ್ತವೆ.

ಸೊರಬದ ಹೋಬಳಿ ಮಾವಳಿ ಗ್ರಾಮದ ಸು. ೮೦೦ರ ಬಸ್ತಿ ಹಿತ್ತಲ ವೀರಗಲ್ಲು (ಎಕ., ೮, ಎಸ್‌ಬಿ. ನಂ. ೧೦) ಆಳುಪರ ಚಿತ್ರವಾಹನ ಮತ್ತು ಕೊಲ್ಲಿಪಲ್ಲವನೊಳಂಬ ಇವರಿಗೆ ನಡೆದೊಂದು ಘರ್ಷಣೆಯಲ್ಲಿ, ಚಿತ್ರವಾಹನನ ಪಕ್ಷದ ಕುಲಮುದ್ದನೆಂಬ ಕಲಿಯು ಶೌರ್ಯದಿಂದ ಹೋರಾಡಿ ಗೆದ್ದು, ಯುದ್ಧದಲ್ಲಿಯೇ ವೀರಮರಣವನ್ನು ಪಡೆದ ಒಂದು ಸಂದರ್ಭವನ್ನು ಮೊದಲ ಭಾಗವಾಗಿ ಒಳಕೊಂಡಿದೆ. ಗದ್ಯದಲ್ಲಿರುವ ಈ ಶಾಸನ ನಡೆದ ಘಟನೆಯ ಶುಷ್ಕವರದಿಯಾಗಿರದೆ ಸಾಹಿತ್ಯದೃಷ್ಟಿಯಿಂದ ಮನೋಜ್ಞವಾದ ವರ್ಣನಾಂಶವನ್ನು ಒಳಕೊಂಡಿರುವುದು ಗಮನಾರ್ಹವಾಗಿದೆ. ಆ ಭಾಗವನ್ನಿಲ್ಲಿ ಉದ್ಧರಿಸಿಕೊಡಬಹುದು :

"ಸ್ವಸ್ತಿ ಪ್ರಭೂತವರ್ಷ ಶ್ರೀ ಪೃಥಿವೀವಲ್ಲಭ ಮಹಾರಾಜಾಧಿರಾಜಪರಮೇಶ್ವರ ಭಟ್ಟಾರಕ ಶ್ರೀ ಗೋಇನ್ದರಸಚ್ಚರ್ತುಸ್ಸಮುದ್ರಾನ್ತವಸುಧೆಯುಂ ಧವಳೈಕಛತ್ರಚ್ಛಾಯೆಯಿನ್ದಾಳೆ। ಬನವಾಸಿ ಮಣ್ಡಲಮಾನಾಸಮುದ್ರಾನ್ತ ರಾಜಾದಿತ್ಯರಾಸರ್ ಆಳೆ। ಆಳುವ ಖೇಡಮಱುಸಾಸಿರನುಮಾನ್ ಚಿತ್ರವಾಹನನಾಳುತ್ತುಂ ಬಾಯ್ಕೇಳದಿರೆ ಮುನಿದು ಕೊಲ್ಲಿಪಲ್ಲವನೊಬಿಮ್ಬಂ ನೊಬಿಮ್ಬರಾದಿತ್ಯನನ್ವೆಸಸಲಾ ಕಾಕರಾಸರುಮೆಬ್ದು ಪೆರ್ಗ್ಗಿಂಜಿಯ ಕೋಟೆಯಾನ್ ರೋಹಿಸಿ ಬಿಟ್ಟು ಎರಡುಂ ಬಲದ ವೀರಭಟರ್ಕ್ಕಳೋಬ್ದು ಪೊಱಮಟ್ಟು ಬಿಲ್ವಿಲ್ಲೊಳ್ಕುದುರೆ ಕುದುರೆಯೊಳ್ಕಟ್ಟೆ ಅತಿತುಮುಲ ಕಾಳಗ ಪೆಚ್ಚು ಬಲದ

ಕೆಯ್ಯಂ ಚಿತ್ರವಾಹನನೊತ್ತಿ ಪುಗುತ್ತನ್ದು ಕಾದಿಸೆ ಕಣ್ಡು ಕುಲಮುದ್ದ ನೀನೀ ಕಯ್ಯು ಪೊಕ್ಕು ಕಾದೆನ್ದು ಬೆಸೆಸೆ ಪ್ರಸಾದಮೆನ್ದೆಯ್ದಿ ಕಿಟ್ಟ ಕಾದಿ ಮಱುವಕ್ಕದವರ ಮೆಯ್ಮೆಯ್ಯು ವ್ವಾಗೆ ಎಚ್ಚೊಡಿಸಿ ಆ ಕಯ್ಯಂ ಗೆಲ್ದು ತಾನುಂ ಪಲವುಂ ಏಸುವೆತ್ತು ಎಯ್ದೆವದಪ್ಪಿದ ಪ್ಪೊಲ್ಕಣೆಪಂಜರದೊಳೆಱಗಿ ಭೀಷ್ಮನ್ವಿಬ್ದನ್ತೆ ನೆಲಮುಟ್ಟದೆ ಬಿಱ್ದೋನಾನ್ದೇವಗಣಿಕ್ಕೆ ಯರರ್ಗ್ಗೆಮ್ಬಿಡಿದು ಬನ್ದಿದಿರ್ಗ್ಗೊಣ್ಡಿಯೆ ವೀರಲೋಕಕ್ಕೆ ಸನ್ದೋನ್ ||...."

ಈ ಉದ್ಧೃತಭಾಗ ಭಾಷೆಗೆ ಭಾವಾಭಿವ್ಯಕ್ತಿಯ ಕಸುವು ಕಾಲಕ್ರಮದಲ್ಲಿ ಕೈಗೂಡು ತ್ತಿರುವುದನ್ನು ನಿದರ್ಶಿಸುತ್ತದೆ. ಇಲ್ಲಿ ನಾಟಕೀಯತೆ, ವರ್ಣನೆ, ದೃಷ್ಟಾಂತ, ದೃಶ್ಯ ಕಲ್ಪನೆ ಈ ಕೆಲವು ಸಾಹಿತ್ಯಿಕವಾದ ಅಂಶಗಳನ್ನು ನಾವು ಕಾಣಬಹುದಾಗಿದೆ. ಈ ಗುಣ ಗಳು ಇಲ್ಲಿಂದ ಮುನ್ನಡೆದಂತೆಲ್ಲ ಹೆಚ್ಚು ಹೆಚ್ಚಾಗಿ ಶಾಸನಗಳಲ್ಲಿ ಕಾಣಿಸಿಕೊಂಡಿವೆ. ಆದರೆ ಕ್ವಚಿತ್ತಾಗಿ ಕಂಡುಬರುವ ಇಂತಹ ನಿದರ್ಶನಗಳಿಂದ ತತ್ಕಾಲೀನವಾದ ಭಾಷಾ ಸಾಹಿತ್ಯಗಳ ಬಗ್ಗೆ ಖಚಿತವಾದ ಯಾವುದೇ ನಿಲವನ್ನು ತಳೆಯುವುದು, ಅದರಿಂದ ಅವು ಗಳ ಬೆಳವಣಿಗೆಯ ವಿದ್ಯಮಾನಗಳೆಲ್ಲ ಹೀಗೆಯೇ ನಡೆದಿರಬಹುದೆಂದು ಊಹಿಸುವುದು ಕಷ್ಟವಾಗುತ್ತದೆ.

ಮೈಸೂರು, ಶಿವಮೊಗ್ಗ, ಚಿಕ್ಕಮಗಳೂರು, ಕೋಲಾರ, ಹಾಸನ ಮೊದಲಾದ ಜಿಲ್ಲೆ ಗಳಲ್ಲಿ ದೊರೆತ, ಮೇಲೆ ಗಮನಿಸಿದ ಕೆಲವು ಪ್ರಾಚೀನ ಶಾಸನಗಳು ಗದ್ಯದಲ್ಲಿಯೇ ಇರುವುದು ಕುತೂಹಲಕರವಾಗಿದೆ. ಸು. ೮೦೦ರ ಮೊದಲಿನ ಕಾಲಮಾನದ ಈ ಶಾಸನ ಗಳು ಪೂರ್ವದ ಹಳಗನ್ನಡದ ಭಾಷಾವೈಲಕ್ಷಣ್ಯಗಳನ್ನು ತೋರಿಸುವುದಾಗಿದ್ದು, ತಮ್ಮ ಹಳಮೆಯ ಗುರುತಾಗಿ ತಮಿಳು ಭಾಷೆಯೊಡನೆ ಸಾದೃಶ್ಯವಿರುವುದನ್ನು ಪದಕೋಶ ಮತ್ತು ವ್ಯಾಕರಣ ಪ್ರಕ್ರಿಯೆಗಳ ದೃಷ್ಟಿಯಿಂದ ಸೂಚಿಸತಕ್ಕವಾಗಿವೆ. ಉತ್ತರಕಾಲೀನ ಶಾಸನಗಳ ಭಾಷೆಯೊಡನೆ, ಕೆಲಮಟ್ಟಿಗೆ ಸಮಕಾಲೀನವೇ ಆದ ಶ್ರವಣಬೆಳ್ಗೊಳದ ಶಾಸನಗಳ ಭಾಷೆಯೊಡನೆ ಹೋಲಿಸಿ ನೋಡಿದರೆ ಆ ಗದ್ಯಶಾಸನಗಳ ಭಾಷೆಯಲ್ಲಿ ಶಬ್ದ ಗಳ ಆಯ್ಕೆ, ಜೋಡಣೆ, ವ್ಯಾಕರಣನಿಯಮಗಳ ಕಟ್ಟುಪಾಡಿನ ಅನುಸರಣೆ, ಭಾವ ವಾಹಿತ್ವ ಮುಂತಾದವುಗಳು ತಕ್ಕ ರೀತಿಯಲ್ಲಿ ತೋರುವುದಿಲ್ಲವೆಂದೂ ಇದು ಭಾಷೆಯ ಅಪಕ್ವತೆಯ ಸೂಚಕವೆಂದೂ ಕೆಲವರು ಭಾವಿಸುವಂತೆ ತೋರುತ್ತದೆ. ಈ ವಿಷಯದಲ್ಲಿ ಕೆಲಮಟ್ಟಿಗೆ ಸತ್ಯಾಂಶವಿದೆ. ಆದರೆ ಶ್ರವಣಬೆಳ್ಗೊಳದ ಬೆಟ್ಟಗಳ ಪದ್ಯಶಾಸನಗಳನ್ನು ಭಾಷೆಯ ದೃಷ್ಟಿಯಿಂದ ವಿಮರ್ಶಿಸುವುದಾದರೆ ಮೇಲಿನ ಅಭಿಪ್ರಾಯ ಪೂರ್ತಿಯಾಗಿ ನಿಜವೆನ್ನಲಾಗದು. ಇಲ್ಲಿಯ ಸಮಕಾಲೀನ ಪದ್ಯಗಳಲ್ಲಿ ಹೃದ್ಯವಾದ ಸಾಹಿತ್ಯಾಂಶಗಳು ಕಂಡುಬರುತ್ತವೆ.

ಲಿಪಿಯ ಆಧಾರದಿಂದ ಸು. ೫೦೦ರದೆಂದು ಹೇಳಲಾದ, ಗುಣಮಧುರನೆಂಬ ಪುರುಷ ಶ್ರೇಷ್ಠನನ್ನು ಹೊಗಳುವ ತಮಟಕಲ್ಲಿನ ಶಾಸನದ ಕನ್ನಡ ಪದ್ಯ (ಎಕ., ೧೧- ಚಿತ್ರದುರ್ಗ ೪೩) ಅದೇ ಕಾಲಾವಧಿಯದಾಗಿರುವುದು ನಿಜವಾದರೆ ಕನ್ನಡ ಸಾಹಿತ್ಯದ ಮೊತ್ತಮೊದಲ ಪದ್ಯವೆಂಬ ಗಣನೆಗೆ ಬರುತ್ತದೆ. ಅದರ ಭಾಷೆಯಲ್ಲಿ ಹಳಮೆಯ ಲಕ್ಷಣ

ಗಳು ಅಚ್ಚಿರಿದಿದೆ. ಈಚಿನ ಕನ್ನಡ ಸಾಹಿತ್ಯದಲ್ಲಿ ವಿಶೇಷವಾಗಿ ಕಂಡುಬಂದಿಲ್ಲದ ಅತ್ಯಷ್ಟಿ ಛಂದೋವರ್ಗದ 'ನತ್ಕುಟಕ'ವೆಂಬ ವಿರಳವಾದೊಂದು ವರ್ಣವೃತ್ತ. ಈ ಪದ್ಯದ ಕಾಲ ವಿಚಾರದ ಸಂದಿಗ್ಧತೆ ಪರಿಹಾರವಾಗಬೇಕಾಗಿದೆ. ಸು. ೬೫೦–೭೦೦ರ ಅವಧಿಯದೆಂದು ಲಿಪಿ ಪ್ರಮಾಣದಿಂದ ಗೊತ್ತುಮಾಡಿರುವ ಈಚೆಯ ಬಿಡಿಬಿಡಿಯಾದ ಕೆಲವು ಪದ್ಯ ಗಳಲ್ಲಿ, ಎಂದರೆ ಜೈನ ಯತಿಗಳ ಸಂನ್ಯಸನವಿಧಿಪೂರ್ವಕವಾದ ಮರಣವನ್ನು ಉಲ್ಲೇಖಿ ಸಿರುವ ಶ್ರವಣಬೆಳ್ಗೊಳದ ಮೃತ್ಯುಲೇಖಗಳಲ್ಲಿ ಸಾಹಿತ್ಯದೃಷ್ಟಿಯಿಂದ ಗಮನಸೆಳೆಯುವ ಅಂಶಗಳಿವೆ. ಉದಾಹರಣೆಗೆ "ದುರಿತಾಭೂದ್ವೃಷಮಾಸ್ಕಿಚ್ತ್ರಿಲಱಿ...." (೧೪/೧೨), "ರಾಗದ್ವೇಷತಮೋಮಲವ್ಯಪಗತರ್...." (೧೫/೧೩), "ಬಾಳಾ ಮೇಲ್ಬಿಖಿಮೇಲೆ ಸರ್ಪ್ಪದ ಮಹಾದನ್ತಾಗ್ರದುಳ್...." (೨೫–೬೨), "ಮಾಸೇನರ್ಪ್ಪರಮುಪ್ರಭಾವರಿಷಿಯರ್...." (೩೦/೨೭), "ನೆಱಿದಾದ ವ್ರತಶೀಲನೋನ್ಪಿಗುಣದಿಂ...." (೮೬/೭೬), "ಅನವದ್ಯನ್ನದಿರಾಪ್ಪ್ರದುಳ್ಳೆ ಪ್ರಥಿತಯಶೋ...." (೯೪/೮೪), "ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಱಿವೋಲ್...." (೯೮/೮೮), "ಎಡೆಪಱಿಗೀ ನಡೆಕೆಯ್ದು ತಪಂ...." (೧೦೮/೯೩), "ತಪಮಾನಾದ್ದ್ವದಶದಾ ವಿಧಾನಮುಖದಿನ್...." (೧೧೩/೯೮)—ಈ ಕೆಲವು ವೃತ್ತಗಳನ್ನು ಪರಿಶೀಲಿಸಬಹುದು. ಭಾಷೆ ಛಂದಸ್ಸುಗಳ ದೃಷ್ಟಿಯಿಂದ ಶೈಥಿಲ್ಯ ಗಳೂ ವೈಚಿತ್ರ್ಯಗಳೂ ಇವುಗಳಲ್ಲಿ ಸ್ಪಷ್ಟವಾಗಿದ್ದು, ಅನಂತರದ ಪ್ರೌಢಕವಿಗಳ ರಚನೆ ಗಳೊಡನೆ ಹೋಲಿಸಿ ನೋಡಿದಾಗ ಒಂದು ಬಗೆಯ ಪೂರ್ವಕಾಲಿಕ ಸ್ಥಿತ್ಯಂತರಗಳನ್ನೂ ಪ್ರಾಯೋಗಿಕ ಪ್ರಯತ್ನಗಳನ್ನೂ ತೋರಿಸುವಂತಿವೆ. ಲಿಪಿಕಾರ ಸ್ಖಾಲಿತ್ಯಗಳೂ ಕೂಡಿ ಭಾಷಿಕಸ್ಥಿತಿಯ ಪರಿಶೀಲನೆಯನ್ನು ಜಟಿಲಗೊಳಿಸಿರುವುದುಂಟು. ಛಂದಸ್ಸುಗಳಲ್ಲಿ ಸಂಸ್ಕೃತ ಸಾಹಿತ್ಯದಲ್ಲಿ ಪ್ರಚುರವಾದ ಶಾರ್ದೂಲವಿಕ್ರೀಡಿತದಂತಹ ವೃತ್ತದ ಜೊತೆಗೆ ಅಪ್ರಚುರವಾದ ಮಹಾಸ್ರಗ್ಧರೆ, ಮತ್ತೇಭವಿಕ್ರೀಡಿತ, ಉತ್ಪಲಮಾಲೆಗಳಂಥವೂ ತಕ್ಕ ಮಟ್ಟಿಗೆ ಹೆಚ್ಚು ಸಂಖ್ಯೆಯಲ್ಲಿಯೇ ಕಂಡುಬಂದಿವೆ. ಶಾಸನಕವಿಗಳು ಸಂಸ್ಕೃತ ವೃತ್ತಗಳ ನಿಯಮನಿಬಂಧನೆಗಳನ್ನು ಬಲ್ಲವರಾಗಿದ್ದು ಅವನ್ನು ತಮ್ಮ ಕವಿತ್ವಪದ್ಧತಿಗೆ ಅಳವಡಿಸಿ ಕೊಂಡಿರುವುದು ಕಾಣುತ್ತದೆ ; ಜತೆಗೆ ಅವರು ಪ್ರಯೋಗಶೀಲರಾಗಿ ಆ ಜಾಡಿನ ಹೊಸ ವೃತ್ತಗಳನ್ನು ಅಲ್ಪವ್ಯತ್ಯಾಸಗಳೊಡನೆ ಕಲ್ಪಿಸಿಕೊಂಡರೆಂದು ತಿಳಿಯುವುದರಿಂದ ಅವರು ಕನ್ನಡ ಕವಿತ್ವದ ರೂಪರೇಷೆಗಳ ಬಗೆಗೆ ಪ್ರತಿಭೆ ಕೌಶಲಗಳಿಂದ ಸ್ವತಂತ್ರವಾಗಿ ಯೋಚಿಸ ಬಲ್ಲವರಾಗಿದ್ದರೆಂದು ಹೇಳಬಹುದು ; ಇಂಥ ಪ್ರಯೋಗಗಳನ್ನು ಇವರು ಬಹುಮಟ್ಟಿಗೆ ೬–೭ನೆಯ ಶತಮಾನಗಳ ಆಚೀಚೆಯ ಕಾಲದಿಂದ ನಡಸುತ್ತಿದ್ದಿರಬೇಕು ಎಂದು ಭಾವಿಸಿ ದರೆ ತಪ್ಪಾಗಲಾರದು.

ಒಂದೊಂದೇ ಕಂಡುಬರುವ ಪೂರ್ವೋಕ್ತ ಮೃತ್ಯುಲೇಖಗಳ ಶಾಸನಪದ್ಯಗಳು ಕನ್ನಡ ಸಾಹಿತ್ಯದಲ್ಲಿ ಕವಿತ್ವರಚನೆ ಆದರ ಆರಂಭದೆಸೆಯಲ್ಲಿ ತೊಟ್ಟುತೊಟ್ಟಾಗಿ ತೊಡಗಿತೆಂಬು ದನ್ನು ಹೇಳುತ್ತದೆ ಎಂದು ಕೆಲವರ ಅಭಿಪ್ರಾಯ.[೩೧] ವೃತ್ತಬಂಧದ ವಿಶ್ಲೇಷಣೆಯಿಂದಲೂ ಈಯಂಶವನ್ನು ಅವರು ಸಮರ್ಥಿಸಿರುವುದು ಕಂಡುಬರುತ್ತದೆ. ಈ ಸಂಬಂಧವಾಗಿ "ಶ್ರವಣ

ಬೆಳ್ಗೊಳದ ಬಿಡಿಪದ್ಯಗಳ ಛಂದಸ್ಸು, ಎಂದರೆ ಕೆಲವೆಡೆ ಯತಿಸಾಧನೆ ಮತ್ತು ಕೆಲವೆಡೆ ಯತಿಭಂಗ ಇವು ಆ ವೃತ್ತಗಳನ್ನು ಕನ್ನಡಕ್ಕೆ ಒಗ್ಗಿಸಿಕೊಳ್ಳುತ್ತಿದ್ದ ಆರಂಭದ ಪ್ರಯತ್ನಗಳನ್ನು ಸೂಚಿಸುವಂತೆ ಕಾಣುತ್ತದೆ"—ಎಂದಿರುವ ಅಭಿಪ್ರಾಯ ವಿಚಾರಾರ್ಹವಾದ್ದು.[೩೦] ಆದರೆ ಈಚಿನ ಕನ್ನಡ ಕಾವ್ಯಪದ್ಧತಿಯಲ್ಲಿ ಕೂಡ ಯತಿಯ ಪಾಲನೆ ಉಲ್ಲಂಘನೆಗಳು ಸ್ವಚ್ಛಂದವಾಗಿ ತಲೆದೋರಿರುವುದರಿಂದ ಈ ಪ್ರವೃತ್ತಿಯಲ್ಲಿ ನಿಯತ ಯತಿ ಪಾಲನೆಯ ಘಟ್ಟ ಎಂದು ನಿಂತಿತು, ಉಲ್ಲಂಘನೆಯ ಘಟ್ಟ ಎಂದು ತೊಡಗಿತು ಎಂಬುದರ ಬಗೆಗೆ ನಾವು ಏನೂ ಹೇಳುವ ಸ್ಥಿತಿಯಲ್ಲಿಲ್ಲ. ಹೀಗೆಯೇ ಕನ್ನಡಕ್ಕೆ ವಿಶೇಷವಾದ ದ್ವಿತೀಯಾಕ್ಷರ ಪ್ರಾಸದ ಪ್ರಯೋಗ ಪರಿಪಾಠ ಮತ್ತು ಮಿಶ್ರಪ್ರಾಸಗಳ ಹೊಕ್ಕು ಬಳಕೆಗಳ ಆರಂಭ ವಿಷಯದಲ್ಲಿಯೂ ಕಾಲಮಾನವನ್ನು ನಿಗದಿಮಾಡುವುದಕ್ಕೆ ಸಾಧ್ಯವಿಲ್ಲ. ಹಾಗೆ ನೋಡಿದರೆ ಸಂಸ್ಕೃತದಲ್ಲಿಲ್ಲದ ದ್ವಿತೀಯಾಕ್ಷರ ಪ್ರಾಸದ ನಿಯಮಬದ್ಧವಾದ ಪ್ರಯೋಗ ಕನ್ನಡ ಕವಿತ್ವದಲ್ಲಿ ಒಂದು ಅವಶ್ಯನಿಯಮವೆಂಬಂತೆ ಸಂಘಟಿಸಿದ್ದು ಸಾಕಷ್ಟು ಹಿಂದಿನಿಂದ ನಡೆಯುತ್ತ ಬಂದ ಛಂದಃಪ್ರಯೋಗಗಳ ಫಲವೇ ಇರಬಹುದು.

ಇಂಥ ಅನುಮಾನಕ್ಕೆ ಎಡೆಯಿದ್ದೂ ಸಂಸ್ಕೃತದಲ್ಲಿ ಕಂಡುಬರುವ ಹಾಗೆ ವೃತ್ತಪಾದಾಂತದಲ್ಲಿ ಬಹುತೇಕವಾಗಿ ನಿಯತವಾಗಿ ಎನ್ನುವಂತೆ ಪದದ ನಿಲುಗಡೆಯಾಗುವುದು, ಪೂರ್ತಿಯಾಗಿ ಲಕ್ಷಣಕ್ಕೆ ಹೊಂದದಿರುವ ಇಲ್ಲವೆ ಪಾದಗಳು ಎಲ್ಲವೂ ಇಲ್ಲದಿರುವ ಇಲ್ಲವೆ ಪದ್ಯಲಕ್ಷಣವಿದ್ದೂ ಛಂದಸ್ಸಿನ ಚೌಕಟ್ಟಿಗೆ ಸೇರದಿರುವ ಪದ್ಯಗಳು ಅಲ್ಲಲ್ಲಿ ಕಾಣಿಸಿಕೊಳ್ಳುವುದು, ಒಂದೇ ಬಗೆಯ ವಸ್ತುರಚನೆಯ ಒಂಟಿ ಪದ್ಯಗಳಲ್ಲೇ ಕವಿತ್ವ ನಿರ್ಮಿತಿ ಕೃತಕೃತ್ಯವಾಗುವುದು—ಇಂಥ ಸಂಗತಿಗಳನ್ನು ಪರಿಶೀಲಿಸಿದರೆ ಪ್ರಾಯಃ ಸು. ೬೦೦-೬೫೦ರ ಅವಧಿಯಲ್ಲಿ ಕನ್ನಡದಲ್ಲಿ ಸಾಹಿತ್ಯ ಪ್ರಾಯೋಗಿಕ ಸ್ಥಿತಿಯಲ್ಲಿ ಕಣ್ಣು ಬಿಡುತ್ತಿದ್ದಿರುವುದು ಸಾಧ್ಯ ಎನ್ನಬೇಕಾಗುತ್ತದೆ. ಆದರೆ ಉಪಲಬ್ಧವಾದ ಮಾಹಿತಿಯಿಂದಲೇ ಸಾಹಿತ್ಯದ ಪ್ರಾಚೀನತೆಯನ್ನು ಗೊತ್ತುಮಾಡ ಹೊರಡುವುದು ಭಾಷೆಗೆ ಪ್ರಾಯಃ ಅನ್ಯಾಯಮಾಡಿದಂತೆ. ಏಕೆಂದರೆ ಇಲ್ಲಿ ಎದುರಿಸಬೇಕಾದ ಕೆಲವು ತೊಡಕುಗಳುಂಟು. ಅವನ್ನು ಹೀಗೆ ಪಟ್ಟಿಮಾಡಬಹುದು : (೧) ಶ್ರವಣಬೆಳ್ಗೊಳದ ಮೃತ್ಯುಲೇಖಗಳ ಪದ್ಯ (ಸು. ೬೫೦) ಹಾಗೂ ಕದಂಬ ಗಂಗ ಮತ್ತು ಚಾಲುಕ್ಯಕಾಲೀನವಾದ ವೀರಗಲ್ಲು ದಾನಶಾಸನಗಳ ಗದ್ಯ (ಸು. ೪೫೦-೮೦೦) ಭಾಷೆಯ ಹದವನ್ನು ಒಂದೇ ಬಗೆಯಾಗಿ ತೋರಿಸುವುದಿಲ್ಲ. ಇಲ್ಲಿ ಬರೆಹಕಾರ ಕೊರೆಹಕಾರರ ಸ್ಖಾಲಿತ್ಯಗಳೂ ಭಾಷಾವೈಲಕ್ಷಣ್ಯಗಳೂ ಕೂಡಿಯೇ ಭಾಷೆಯ ಅಪಕ್ವತೆಯ ಭ್ರಾಂತಿಯನ್ನುಂಟುಮಾಡಬಹುದು. ಪದ್ಯರಚನೆಗಳನ್ನು ಲಕ್ಷಿಸಿ ಹೇಳುವುದಾದರೆ, ಕೆಲವಾದರೂ ವ್ಯಾಕರಣನಿಯಮಗಳಿಗೆ ಕಟ್ಟುಬಿದ್ದ ವಾಕ್ಯರಚನೆಯನ್ನು ಉಳ್ಳವಾಗಿವೆ, ಒಳ್ಳೆಯ ಸಾಹಿತ್ಯಾಂಶಗಳಿಂದ ಮನೋಜ್ಞವಾಗಿವೆ. (೨) ಸು. ೭ನೆಯ ಶತಮಾನಕ್ಕೆ ಹಿಂದಿನ ಕರ್ಣಾಟಕದ ಶಾಸನಗಳು, ಕನ್ನಡಿಗ ಕವಿಗಳಾದ ಕುಬ್ಜ ರವಿಕೀರ್ತಿ ಮುಂತಾದವರು ಬರೆದವು, ಬಹುಪಾಲು ಸಂಸ್ಕೃತ ಪ್ರಾಕೃತಭಾಷೆಗಳಲ್ಲಿವೆಯೆಂಬುದು ನಿಜ. ಇವು ಆಯಾ ಕಾಲದಲ್ಲಿ ಆಯಾ

ಭಾಷೆಗಳಿಗೆ ರಾಜಾಸ್ಥಾನಗಳಲ್ಲಿಯೂ ಶಿಕ್ಷಿತಸಮಾಜದಲ್ಲಿಯೂ ಇದ್ದ ಸ್ಥಾನಮಾನಗಳ ಮತ್ತು ಉತ್ಕೃಷ್ಟ ಪರಂಪರೆಯ ಫಲವಿರಬಹುದು. ಕನ್ನಡ ಭಾಷೆಯ ಅಸಾಮರ್ಥ್ಯ ಅಥವಾ ಕವಿಗಳ ಅವಜ್ಞೆ ಇವು ಒಳ್ಳೆಯ ಕನ್ನಡ ಕವಿತ್ವದ ಅಭಾವಕ್ಕೆ ಕಾರಣಗಳಲ್ಲ ದಿರಬಹುದು. ಅಲ್ಲದೆ ರವಿಕೀರ್ತಿ ಐಹೊಳೆ ಶಾಸನದಲ್ಲಿ (೬೩೪) ಬರೆದು ಸೇರಿಸಿರುವ ಮತ್ತೇಭವಿಕ್ರೀಡಿತ ಆರ್ಯಾಗೀತಿಗಳು ಪ್ರಚಲಿತವಿದ್ದಿರಬಹುದಾದ ಕನ್ನಡ ಕಾವ್ಯ ಪದ್ಧತಿಯ ಪ್ರಭಾವದ ಫಲವಾದ ಸ್ವೀಕರಣವಾಗಿರಬಹುದು. (೩) ಕವಿರಾಜ ಮಾರ್ಗೋಕ್ತನಾದ ಗದ್ಯಕವಿ ದುರ್ವಿನೀತನು ನಲ್ಲಾಳ್ ತಾಮ್ರಪಟಗಳಲ್ಲಿ ಮತ್ತು ಗುಮ್ಮರೆಡ್ಡಿಪುರದ ಶಾಸನ ಮೊದಲಾದವುಗಳಲ್ಲಿ ಕವಿ, ವಿದ್ವಾಂಸ ಎಂದು ಹಾಡಿ ಹೊಗಳಿ ರುವ ಗಂಗದೊರೆ ದುರ್ವಿನೀತನಾಗಿದ್ದಿರಬಹುದೆಂಬ (ಸು. ೬೦೦) ಬಹುಜನ ವಿದ್ವಾಂಸರ ಒಂದು ಪ್ರಬಲ ಸಂಭವನೀಯ ಊಹಾಸಾಕ್ಷ್ಯವನ್ನು ಸರಿಯಾದ ಕಾರಣಗಳಿಲ್ಲದೆ ತಳ್ಳಿ ಹಾಕಿದಂತಾಗುತ್ತದೆ. (೪) ಕನ್ನಡ ಕಾವ್ಯಪದ್ಧತಿಯ ವೈಶಿಷ್ಟ್ಯಗಳಾಗಿ ಪರಿಣಮಿಸಿರುವ ನಿಯತಯತಿಯನ್ನು ಉಲ್ಲಂಘಿಸಿದ್ದು, ಆದಿಪ್ರಾಸವನ್ನು ಪುರಸ್ಕರಿಸಿದ್ದು, ಪಾದಾಂತದಲ್ಲಿ ಪದವನ್ನು ನಿಲ್ಲಿಸದೆ ಮುಂದಕ್ಕೆ ಒಯ್ಯುವ ಪದ್ಧತಿಯನ್ನು ರೂಢಿಸಿದ್ದು, ಸಂಸ್ಕೃತದಲ್ಲಿ ಅಪ್ರಚುರವಾದ ಉತ್ಪಲಮಾಲೆ, ಮತ್ತೇಭವಿಕ್ರೀಡಿತ, ಮಹಾಸ್ರಗ್ಧರೆ ಇಂತಹ ವೃತ್ತ ಗಳನ್ನು ಸ್ವತಂತ್ರವಾಗಿ ಕಲ್ಪಿಸಿದ್ದು—ಈ ಕೆಲವು ಛಂದೋಲಕ್ಷಣಗಳೆಲ್ಲ ಬಿಡುವುದೂ ಹೊಡುವುದೂ ಇಂಥ ಯಾವ ಪ್ರಾಯೋಗಿಕ ಕಾವ್ಯವ್ಯವಸಾಯವೂ ಇಲ್ಲದೆ ಹಠಾತ್ತನೆ ಒಮ್ಮೆಲೇ ಕಾಣಿಸಿಕೊಂಡವು ಎಂದು ನಂಬಬೇಕಾಗುತ್ತದೆ. (೫) 'ಕವಿರಾಜಮಾರ್ಗ', ಜಯಕೀರ್ತಿಯ 'ಛಂದೋನುಶಾಸನ', 'ಶಬ್ದಮಣಿದರ್ಪಣ' ಮುಂತಾದ ಲಕ್ಷಣಗ್ರಂಥ ಗಳಲ್ಲಿ ಹಾಗೂ 'ಸೂಕ್ತಿಸುಧಾರ್ಣವ', ಮಲ್ಲ ಮತ್ತು ಅಭಿನವವಾದಿವಿದ್ಯಾನಂದರ 'ಕಾವ್ಯ ಸಾರ'ಗಳು ಈ ಕೆಲವು ಸಂಕಲನ ಗ್ರಂಥಗಳಲ್ಲಿ ಉಲ್ಲೇಖಗೊಂಡ ಕವಿಕಾವ್ಯಗಳ ಹಳಮೆಯ ಗಡುವನ್ನು ಪ್ರಬಲವಾದ ಆಧಾರಗಳೇನೂ ಇಲ್ಲದೆ ಕಿರಿದುಗೊಳಿಸಬೇಕಾಗುತ್ತದೆ. (೬) ಕಾಲಮಾನದ ದೃಷ್ಟಿಯಿಂದ ಹಿಂದುಹಿಂದಕ್ಕೆ ಸರಿದಂತೆಲ್ಲ ಕಾಲಪುರುಷನ ತುಳಿತಕ್ಕೆ ಸಿಕ್ಕು ಪ್ರಾಚೀನ ಸಾಹಿತ್ಯ ನಷ್ಟವಾಗಿರುವುದರ ಸಾಧ್ಯತೆಯನ್ನು ತಿಳಿದೂ ತಿಳಿಯದವ ರಂತೆ ವರ್ತಿಸಬೇಕಾಗುತ್ತದೆ. ಕನ್ನಡದಲ್ಲಿಯೇ ಕವಿರಾಜಮಾರ್ಗೋಕ್ತರಾದ ಕವಿಗಳಲ್ಲಿ ಯಾರಾದರೊಬ್ಬರ, ಈಚೆಯ ಕವಿಗಳಲ್ಲಿ ಅಸಗ ಗುಣವರ್ಮ(I) ಈ ಕೆಲವರ ಒಂದೇ ಒಂದಾದರೂ ಕೃತಿಯು ಈಗ ದೊರೆಯದೆ ಇರುವುದರಲ್ಲಿ ಕಾಲಪುರುಷನ ಕೈವಾಡವೇ ಮಿಗಿಲು ಎಂದು ತಿಳಿದರೆ ಪ್ರಾಯಶಃ ತಪ್ಪಲ್ಲ. (೭) ಭಾಷೆ ಸಾಹಿತ್ಯಗಳ ದೃಷ್ಟಿಯಿಂದ ಒಂದು ಶಾಸನವೂ ಒಂದು ಸಾಹಿತ್ಯಕೃತಿಯೂ ಪರಸ್ಪರವಾಗಿ ಹೋಲುವುದಕ್ಕಿಂತ ವ್ಯತ್ಯಾಸಗಳನ್ನು ತೋರಿಸುವುದಕ್ಕೆ ಗಣ್ಯಕಾರಣಗಳಿರುವುದರಿಂದ, ಶಾಸನಸಾಹಿತ್ಯದ ಸ್ವರೂಪ ಹುಟ್ಟು ಬೆಳವಣಿಗೆಗಳ ಮಾನಸೂತ್ರಗಳನ್ನು ಅನ್ವಯಿಸಿ ಸಾಹಿತ್ಯದ ಪ್ರಾಚೀ ನತೆಯನ್ನು ಅಳೆದಂತಾಗುತ್ತದೆ. (೮) ಒಂದೇ ಭಾಷಿಕವರ್ಗದ ಭಾಷೆಗಳಲ್ಲಿ ತಮಿಳಿಗೆ ಕ್ರಿ.ಶ. ೧–೨ನೆಯ ಶತಮಾನಗಳ ಹಳಮೆ ಸಾಧ್ಯವಾಗಿದ್ದರೆ, ಅದು ಆ ಸಾಹಿತ್ಯದ

ಉಪಲಬ್ಧಿಯಿಂದ; ಕನ್ನಡದಲ್ಲಿ ಅದು ಸಾಧ್ಯವಾಗದಿದ್ದರೆ ಅದಕ್ಕೆ ಸಾಹಿತ್ಯ ನಿರ್ಮಿತಿಯ ಅಭಾವ ಎಂಬುದೊಂದೇ ಕಾರಣವಾಗಿರಬೇಕಾಗಿಲ್ಲ, ಅನುಪಲಬ್ಧಿ ಕೂಡ ಕಾರಣವಾಗಿರಬಹುದು ಎಂಬ ತರ್ಕವನ್ನು ಕಡೆಗಣಿಸಿದಂತಾಗುತ್ತದೆ.

ಈ ಕೆಲವು ಆಕ್ಷೇಪಗಳು ಬರಿಯ ಊಹೆಗಳಾಗಿರಬಹುದು, ಪ್ರಶ್ನೆಗಳು ಸಾಧುವೆಂದು ತೋರದಿರಬಹುದು. ಆದರೆ ಕನ್ನಡ ಸಾಹಿತ್ಯದ ಪ್ರಾಚೀನತೆಯ ಸಮಸ್ಯೆಗೆ ಬೇರೆ ಬೇರೆಯ ದಿಕ್ಕುಗಳಿಂದ ಆಳಕ್ಕಿಳಿದು ಹೆಣೆದುಕೊಂಡ ಬೇರುಗಳುಂಟು. ಶಾಸನ ಸಾಹಿತ್ಯದ ಅಸ್ತಿತ್ವ ಸ್ವರೂಪ ಇವುಗಳ ವಿಮರ್ಶೆಯಿಂದಲೇ ಸಮಸ್ಯೆ ನಿವೃತ್ತಿಯಾಗದು ಎನ್ನುವುದರತ್ತ ಅವು ನಮ್ಮ ಗಮನವನ್ನು ಸೆಳೆಯುವುದು ಸಾಧ್ಯವಿದೆ. "ಶಾಸನಗಳನ್ನು ಗಮನಿಸಿ ಹೇಳುವುದಾದರೆ, ಕನ್ನಡ ಸಾಹಿತ್ಯದ ಇತಿಹಾಸವನ್ನು ಸು. ಕ್ರಿ.ಶ. ೬೫೦ಕ್ಕಿಂತ ಹಿಂದಕ್ಕೆ ತೆಗೆದುಕೊಂಡು ಹೋಗಲು ಸಾಧ್ಯವಾಗಲಾರದು" ಎಂಬುದು ಪಾಕ್ಷಿಕ ಪರಿಶೀಲನೆಯ ನಿರ್ಣಯವಾಗಿ ಮಾತ್ರ ಸರಿಯಾಗಬಹುದು. ಆದರೆ ಶಾಸನೇತರ ಸಾಕ್ಷ್ಯಗಳು ಸರಿಯಾಗಿ ಒದಗುತ್ತಿಲ್ಲ, ಅವುಗಳ ಆಳ ಅಗಲಗಳು ಸರಿಯಾಗಿ ಗೋಚರಿಸುತ್ತಿಲ್ಲ ಎನ್ನುವ ಸದ್ಯದ ಸ್ಥಿತಿಯನ್ನು ಮನದಂದರೆ ಹಳಮೆಯ ಸೀಮೆಗೆ ಗಡಿಗಲ್ಲು ನೆಡುವ ಧೈರ್ಯ ಇನ್ನೂ ನಮಗೆ ಬಂದಿಲ್ಲವೆಂದೇ ತೋರುತ್ತದೆ. ಹಳಮೆಯ ಸಂದರ್ಭಗಳನ್ನು ವಿವಿಧ ಮುಖಗಳಲ್ಲಿ ವಿವೇಚಿಸುವ ಅಗತ್ಯವಿದೆ; ಹಾಗೂ ಅಂಥ ಸಂದರ್ಭಗಳನ್ನು ವಿಶದಪಡಿಸುವ ಹೊಸ ಹೊಸ ಆಧಾರ ಸಾಮಗ್ರಿಗಳಿಗಾಗಿ ಕಾಲಪುರುಷನ ಕೃಪೆಯನ್ನು ಹಾರೈಸಬೇಕಾಗಿದೆ.

ಈ ಪರಿಶೀಲನೆಯಿಂದ ಹೊರಪಡುವ ಕೆಲವು ನಿರ್ಣಯಗಳನ್ನು ಹೀಗೆ ಹೇಳಬಹುದು: (i) ಪ್ರತ್ಯೇಕವಾಗಿಯೂ ಗಾಢವಾಗಿಯೂ ವಿಚಾರ ವಿಮರ್ಶೆಗಳು ನಡೆದು ಇತಿಹಾಸಜ್ಞರು ತೀರ್ಮಾನಿಸುವವರೆಗೆ, ಹಲ್ಮಿಡಿ ಶಾಸನ ಕದಂಬ ಕಾಕುತ್ಸ್ಥವರ್ಮನ ಕಾಲದ ಶಾಸನ; ಅದರ ಕಾಲ ಎಂ. ಎಚ್. ಕೃಷ್ಣ ಅವರು ಊಹಿಸಿರುವ ಹಾಗೆ ಸು. ೪೫೦. ಆದ್ದರಿಂದ ಅದೇ ಕನ್ನಡ ಶಾಸನಗಳಲ್ಲೆಲ್ಲ ಪ್ರಾಚೀನತಮವಾದ್ದು. (ii) ಅಚ್ಚಕನ್ನಡಿಗರಾದ ಆದಿ ಕದಂಬರ ಕಾಲದಿಂದ ಕನ್ನಡ ಭಾಷೆಗೆ ಪ್ರಾಶಸ್ತ್ಯ ದೊರೆತು, ಕನ್ನಡದಲ್ಲಿ ಶಾಸನ ಸಾಹಿತ್ಯದ ರಚನೆ ಮೊದಲುಗೊಂಡಿತು. ಅಲ್ಲಿಂದ ಮುಂದೆ ಗಂಗರು, ಬಾದಾಮಿಯ ಚಾಲುಕ್ಯರು, ರಾಷ್ಟ್ರಕೂಟರು ಈ ಮೊದಲಾದವರ ಕಾಲದಲ್ಲಿ ಅದರ ವ್ಯಾಪ್ತಿ ಬೆಳೆಯಿತು, ಗುಣವೂ ಹೆಚ್ಚಿತು. (iii) ಈಯವಧಿಯ ಗದ್ಯ ಮತ್ತು ಪದ್ಯ ಶಾಸನಗಳ ಸಾಹಿತ್ಯದ ಭಾಷೆ ಶೈಲಿಗಳು ಪೂರ್ವದ ಹಳಗನ್ನಡ-ಹಳಗನ್ನಡಗಳ, ಪ್ರಯೋಗ-ಪರಿಣತಿಗಳ, ಸಾಮಾನ್ಯ-ಉತ್ಕೃಷ್ಟಗಳ ಸಮ್ಮಿಶ್ರತೆಯನ್ನೂ ಸಂಕ್ರಮಣವನ್ನೂ ತೋರಿಸತಕ್ಕವಾಗಿವೆ. (iv) ಆರಂಭದ ಗದ್ಯಶಾಸನ ಪದ್ಯಶಾಸನಗಳಲ್ಲಿ ವಸ್ತು, ಭಾಷೆ, ಶೈಲಿ, ಉದ್ದೇಶ ಈ ಅಂಶಗಳಲ್ಲಿ ಪ್ರತ್ಯೇಕತೆ ಅಥವಾ ವ್ಯತ್ಯಾಸಗಳು ಹೆಚ್ಚು. ಈಯಂಶಗಳನ್ನೂ ಸಂಸ್ಕೃತ ಶಾಸನಗಳಿಗೆ ಅನುಬಂಧ ರೂಪವಾಗಿ ಸೇರುವ ಗದ್ಯನಿಬದ್ಧ ಕನ್ನಡ ಭಾಷಾ ಶಾಸನಭಾಗಗಳಲ್ಲಿಯ ಇವೇ ಅಂಶಗಳನ್ನೂ ಪರಿಶೀಲಿಸಿದರೆ ಕನ್ನಡದಲ್ಲಿ ಲಿಖಿತ ಸಾಹಿತ್ಯ ಮೊದಲು ಗದ್ಯದಲ್ಲಿ ತೊಡಗಿತೆಂದು ತಿಳಿಯಲು ಅವಕಾಶವಾಗುತ್ತದೆ. (v) ಹಲ್ಮಿಡಿ

ಶಾಸನದಿಂದ ತೊಡಗಿ ಶ್ರವಣಬೆಳ್ಗೊಳದ ಪದ್ಯಶಾಸನಗಳ ಕಾಲಕ್ಕೆ ಬರುವವರೆಗೆ, ರಾಷ್ಟ್ರಕೂಟ ಮನೆತನ ತಲೆಯೆತ್ತುವವರೆಗೆ, ಕನ್ನಡ ಸಾಹಿತ್ಯದ ಕಾಲವನ್ನು ಶಾಸನ ಸಾಹಿತ್ಯದ ಕಾಲವೆಂದು ಗುರುತಿಸಬಹುದು. ಈ ಕಾಲದಲ್ಲಿ ಆಗಲಿ, ಇದರ ಆರಂಭದೆಸೆಯಲ್ಲಿ ಆಗಲಿ, ಗ್ರಂಥರಚನೆ ಎಂಬರ್ಥದಲ್ಲಿ ಸಾಹಿತ್ಯಸೃಷ್ಟಿ ಕನ್ನಡ ಭಾಷೆಯಲ್ಲಿ ಆಗಿತ್ತೇ ಇಲ್ಲವೇ ಎನ್ನುವುದು ಸರಿಯಾದ ಆಧಾರಗಳ ಅಭಾವದಿಂದಾಗಿ ಇನ್ನೂ ನಿರ್ಧರಿಸಲು ಸಾಧ್ಯವಾಗಿಲ್ಲ.

## ಶಾಸನಗಳು ಒದಗಿಸುವ ಸಾಕ್ಷ್ಯ

ಶಾಸನ ತಾನೇ ಸಾಹಿತ್ಯದ ಲಕ್ಷ್ಯವಾಗುವುದರ ಜತೆಗೆ, ಸಾಹಿತ್ಯನಿರ್ಮಾಣವನ್ನು ಸೂಚಿಸುವ ಬಾಹ್ಯಪ್ರಮಾಣಗಳಲ್ಲಿ ತಾನೂ ಒಂದಾಗಿರುವುದುಂಟು. ಪ್ರಾಚೀನತೆಯನ್ನು ಲಕ್ಷಿಸಿ, ಎರಡು ಸಂದರ್ಭಗಳನ್ನು ಇಲ್ಲಿ ಗಮನಿಸಿದೆ.

(i) ಬಿಜಾಪುರ ಜಿಲ್ಲೆಯ ಪಟ್ಟದಕಲ್ಲು ವಿರೂಪಾಕ್ಷ ದೇವಾಲಯದಲ್ಲಿ, ಪೂರ್ವಭಾಗದ ಅರ್ಧಮಂಟಪದ ಎಡದೆಸೆಯ ಕಂಬದ ಹಿಮ್ಮುಗ್ಗುಲಿನಲ್ಲಿ ಎರಡು ಸಂಸ್ಕೃತ ಆರ್ಯಾವೃತ್ತಗಳೂ ಅದೇ ಮಂಟಪದ ಇನ್ನೊಂದೆಡೆ ಒಂದು ಕನ್ನಡ ಉತ್ಪಲಮಾಲೆಯೂ ಲಿಖಿತವಾಗಿವೆ.[91] ಎರಡು ಲಿಖಿತಗಳ ಕೊನೆಯಲ್ಲಿಯೂ ಅಚಲನ್ ಎಂಬವನ ಹೆಸರಿದೆ. ಕನ್ನಡ ಪದ್ಯದ ಕೊನೆಗಿರುವ ಹೆಸರಿನ ಹಿಂದೆ 'ದೇವಯ್ಯಗಳಾ ಮಗ' ಎಂಬ ಹೆಚ್ಚಿನ ಬರೆಹವಿದೆ. ಪದ್ಯಗಳಲ್ಲಿ ನಟಸೇವ್ಯನೆಂಬ ನರ್ತಕನೊಬ್ಬನ ಹಿರಿಮೆಯನ್ನು ಹೊಗಳಿದೆ. ಈ ಪದ್ಯಗಳ ರಚನಾಕಾಲವನ್ನು ವಿರೂಪಾಕ್ಷದೇವಾಲಯದ ನಿರ್ಮಾಣಕಾಲವನ್ನು ಹಿಡಿದು ಸು. ೭೪೪ ಎಂದು ಊಹಿಸಿದೆ. ಸಂಸ್ಕೃತ ಆರ್ಯಾವೃತ್ತಗಳು ದ್ವಿತೀಯಾಕ್ಷರ ಪ್ರಾಸದಿಂದ ಘಟಿತವಾಗಿರುವುದು ಕುತೂಹಲಕರವಾಗಿದೆ. ಕನ್ನಡದ ಪದ್ಯ ಸಂಸ್ಕೃತದಲ್ಲಿ ವಿಶೇಷ ಬಳಕೆಯಿಲ್ಲದ ಉತ್ಪಲಮಾಲಾವೃತ್ತವಾಗಿರುವುದೂ ಗಮನಿಸತಕ್ಕದ್ದಾಗಿದೆ. ಆ ಪದ್ಯ:

ಖ್ಯಾತಮಹಾಪ್ರಭಾವ ಭರತಾಗಮಯುಕ್ತ ಬಹುಪ್ರಕಾರದಾ
ಮಾತಿನೊಳೆಲ್ಲಮೇನೊ ನಟಸೇವ್ಯನ ಮುನ್ತೆ ಯಥೋಕ್ತ ಮಾರ್ಗದಿ
ನ್ದೀ ತೆಱದಿರ್ದುದುಗ್ರತಲಸಞ್ಚರಮೆಮ್ಬುದಿದೆನ್ದು ಪೇೞ್ವೊದಿ
ನ್ನಾತನೆ ನರ್ತ್ತಕಂ ನಟರೊಳಗ್ಗಳಮೀ ಭುವನಾನ್ತರಾಳದೊಳ್ ॥

ಈ ಶಿಲಾಲೇಖಗಳ ಕಾಲವನ್ನು ಕ್ರಿ.ಶ. ೮ನೆಯ ಶತಕದ ಕೊನೆಯ ಭಾಗವೆಂದು ಊಹಿಸಿ, ಪಾಠವನ್ನು ಉದ್ಧರಿಸಿ, ಅರ್ಥಬರೆದು "ಈ ಶಿಲಾಲೇಖಗಳಿಂದ ಆ ಕಾಲದ ಒಬ್ಬ ಪ್ರಖ್ಯಾತ ನಟಶ್ರೇಷ್ಠನ ವಿಷಯವು ಗೊತ್ತಾದದ್ದೊಂದಲ್ಲದೆ ಕವಿಚರಿತೆಗೆ ಸೇರುವುದಕ್ಕೆ ಒಬ್ಬ ಪ್ರಾಚೀನ ಕವಿಯೂ ಸಿಕ್ಕಹಾಗಾಯಿತು. ಕನ್ನಡದಲ್ಲಿ ಹೆಸರು ಗೊತ್ತಾದ ಕವಿಗಳೊಳಗೆ ಈ ಅಚಲನೇ ಮೊಟ್ಟಮೊದಲಿನವನು"—ಎಂದು ಒಂದು ಟಿಪ್ಪಣಿಯನ್ನು ಸೇರಿಸಿದ್ದಾರೆ, ಗೆಳೆಯರ ಗುಂಪಿನ ಮಧುರಚೆನ್ನರು ತಮ್ಮ ಒಂದು ಲೇಖನದಲ್ಲಿ. ಶಿಲಾಲೇಖದೊಳಗಿನ 'ನಟಸೇವ್ಯ' ಎಂಬ ಮಾತು ಒಂದು ಬಿರುದೆಂದೂ ಆ ಬಿರುದನ್ನು ಹೊಂದಿ

ದ್ದಾ ತನ ಹೆಸರಿನ ಉಲ್ಲೇಖವಿಲ್ಲವೆಂದೂ ತಿಳಿಯುವ ಅವರು ಎರಡನೆಯ ಶಿಲಾಲೇಖದ ಕೊನೆಗೆ 'ದೇವಯ್ಯಗಳಾ ಮಗ ಅಚಲನ್' ಎಂದಿರುವುದನ್ನು ಲಕ್ಷಿಸಿ 'ಇವನು ಈ ಶಿಲಾಲೇಖನಗಳನ್ನು ರಚಿಸಿದ ಕವಿಯಾಗಿರಬಹುದು; ಇದುವರೆಗೆ ಹೆಸರು ಗೊತ್ತಾದ ಪ್ರಾಚೀನ ಕನ್ನಡ ಕವಿಗಳಲ್ಲೆಲ್ಲ ಇವನೇ ಮೊದಲನೆಯವನು. ಇವನ ತಂದೆ ದೇವಯ್ಯ. ಇದಕ್ಕಿಂತ ಹೆಚ್ಚಿಗೇನೂ ತಿಳಿಯದು" ಎಂಬುದಾಗಿಯೂ ತಿಳಿಸಿದ್ದಾರೆ.[1] ಆ ಅಚಲನಿಗೆ ವಿದ್ವಾಂಸರು ಊಹಿಸಿರುವ ಕಾಲ ಸರಿಯಾಗಿದ್ದ ಪಕ್ಷದಲ್ಲಿ, ಈತ ಶಾಸನಪದ್ಯಗಳನ್ನು ಕಲ್ಲಿನ ಮೇಲೆ ಬರೆದವನೋ ಕೊರೆದವನೋ ಆಗಿರದಿದ್ದ ಪಕ್ಷದಲ್ಲಿ, ಅಥವಾ ಕೆಲವರು ಭಾವಿಸುವಂತೆ ನಟಸೇವ್ಯ ಮತ್ತು ಅಚಲರೆಂಬವರು ಒಬ್ಬನೇ ವ್ಯಕ್ತಿಯಾಗಿದ್ದು ಆತ ಒಬ್ಬ ಕಲಾವಿದಮಾತ್ರನಾಗಿಲ್ಲದ ಪಕ್ಷದಲ್ಲಿ, ಪ್ರಾಯಃ ಆತನೇ ಶಾಸನಕವಿಗಳಲ್ಲಿ ಮೊದಲಿಗನಾಗಿ ಸ್ಥಾನಪಡೆಯುತ್ತಾನೆ. ಆದರೆ ಈ ವಿಷಯದಲ್ಲಿ ನಿಶ್ಚಯಿಸ್ಪವಾಗಿ ಏನನ್ನು ಹೇಳುವುದೂ ಕಷ್ಟ.

(ii) ಹುಂಚದ ಹೋಬಳಿ ಹುಂಚದ ಪಂಚಬಸ್ತಿ ಅಂಗಳದಲ್ಲಿರುವ ಕಲ್ಲಿನ ಮೇಲೆ ಕೆತ್ತಲಾದ ಒಂದು ದೊಡ್ಡ ಶಾಸನದಲ್ಲಿ (ಎಕ. ೮, ಎನ್‌ಆರ್. ೩೫, ಪು. ೩೬೦) ಗಂಗ ದೊರೆ ನೃಪಕಾಮನ ಮೊಮ್ಮಗ ಶ್ರೀವಲ್ಲಭನೆನಿಸಿದ ಶ್ರೀಪುರುಷನು "ಅನ್ವರ್ಥನಾಮಮು ತಾಳ್ದಿ ಗಜಶಾಸ್ತ್ರ ಕರ್ತೃವೆನಿಸಿ"ದನೆಂದೂ ಆತನ ಮಗ "ಶಿವಮಾರದೇವಂ ಸೈಗೊಟ್ಟ ನೆಂಬೆರಡನೆಯ ಪೆಸರಂ ತಾಳ್ದಿ ಶಿವಮಾರಮತಮೆಂದು ಗಜಶಾಸ್ತ್ರಮಂ ಮಾಡಿ ಮತ್ತಂ

ಕಂ॥ ಏವೇೞ್ವುದೊ ಶಿವಮಾರನು
ಹೀವಳಯಾಧಿಪನ ಸುಭಗಕವಿತಾಗುಣಮಂ
ಭೂವಳಯದೊಳ್ ಗಜಾಷ್ಟಕ
ಮೋವನಿಗೆ[ಯು]ಮೊನಕೆವಾ[ಡು]ಮಾದುದೆ ಪೇೞ್ಗಂ ॥

ಎಂದೂ ಉಲ್ಲೇಖವಿದೆ. ಶ್ರೀಪುರುಷನ ಕೃತಿ ಯಾವ ಭಾಷೆಯಲ್ಲಿತ್ತು, ಏನೆಂದು ಹೇಳುವಂತಿಲ್ಲ; ಶಿವಮಾರನ (ಸು. ೮೩೫) ರಚನೆಯಾದ 'ಶಿವಮಾರಮತ'ವೆಂಬ ಹೆಸರಿನ ಗಜಶಾಸ್ತ್ರವು (= ಗಜಾಷ್ಟಕ) ಓವನಿಗೆಯೂ ಒನಕೆವಾಡೂ ಆಗಿ ಜನಪ್ರಿಯವಾಗಿದ್ದಿತೆಂದು ತಿಳಿಯುವುದರಿಂದ ಪ್ರಾಯಃ ಅದು ತ್ರಿಪದಿ ಛಂದಸ್ಸಿನ ಎಂಟು ಕನ್ನಡ ಪದ್ಯಗಳ ಒಂದು ಲಘುಕಾವ್ಯವಾಗಿರಬೇಕೆಂದು ಈಗಾಗಲೇ ಗ್ರಹಿಸಲಾಗಿದೆ. ಈ ಕೃತಿ ಈಗ ದೊರೆಯುವುದಿಲ್ಲ. ಈ ಗಂಗದೊರೆ ಶಿವಮಾರನು ಬಹುಶಾಸ್ತ್ರಗಳಲ್ಲಿ ಪಂಡಿತನಾಗಿದ್ದನೆಂದು ಬೇರೆ ಶಾಸನಗಳಲ್ಲಿಯೂ ಕೊಂಡಾಡಿದೆ (ಎಕ. ೯, ಎನ್. ೬೧).

ಹೊರಪಡುವ ಸಂಗತಿಗಳು: (i) ಬಾದಾಮಿಯ ಚಾಲುಕ್ಯರ ಕಾಲದ ಪಟ್ಟದಕಲ್ಲು ಶಾಸನವೊಂದರಲ್ಲಿ ಹೆಸರಿಸಿರುವ ಅಚಲನೆಂಬುವನು ಒಬ್ಬ ಶಾಸನಕವಿ ಇರಬಹುದು; ಕವಿಯೇ ಆಗಿದ್ದರೆ ಈತನು ಕನ್ನಡದಲ್ಲಿ ಗ್ರಂಥರಚನೆ ಮಾಡಿದ್ದನೇ ಇಲ್ಲವೇ ತಿಳಿಯದು. (ii) ಗಂಗರ ಸೈಗೊಟ್ಟ ಶಿವಮಾರನು ರಚಿಸಿದ್ದ ಗಜಾಷ್ಟಕವೆಂಬ ಒಂದು ರಚನೆ ಬಹುಮಟ್ಟಿಗೆ ಒಂದು ಕನ್ನಡ ಭಾಷೆಯ ಪದ್ಯಕೃತಿಯಾಗಿತ್ತೆಂದು ತೋರುತ್ತದೆ; ಇದು ಸರಿ

ಯಾದರೆ ಕವಿ ಮತ್ತು ಕೃತಿಯ ಹೆಸರು ತಿಳಿದ ಮೊತ್ತಮೊದಲ ಸಾಹಿತ್ಯೋಲ್ಲೇಖ ಇದೇ. ಇದು ಲಿಖಿತವಾಗಿತ್ತೇ, ಜನಪದ ಸಾಹಿತ್ಯದ ಕೃತಿಗಳಂತೆ ಕಂಠಸ್ಥವಾಗಿ ಮಾತ್ರ ರೂಢಿಯಲ್ಲಿತ್ತೇ ತಿಳಿಯದು.

## 'ಕವಿರಾಜಮಾರ್ಗ' ಒದಗಿಸುವ ಸಾಕ್ಷ್ಯಗಳು

ಕನ್ನಡದಲ್ಲಿ ಸಾಹಿತ್ಯೇತಿಹಾಸದ ಹೆಜ್ಜೆಗುರುತುಗಳನ್ನು ಹಿಡಿಯಹೊರಟವರಿಗೆ ಶಾಸನಗಳು ಮೊದಲ ಗಟ್ಟಿನೆಲವಾದರೆ, ಒಂದೆರಡು ಶತಮಾನಗಳ ಈಚೆಗೆ ರಾಷ್ಟ್ರಕೂಟರ ಅರಸಾಳ್ವಿಕೆಯಲ್ಲಿ ಹುಟ್ಟಿದ 'ಕವಿರಾಜಮಾರ್ಗ'ವೇ ಅನಂತರದ ನೆಲೆಗಟ್ಟು. ಪ್ರಾಚೀನ ಕರ್ಣಾಟಕದ ಮಾನ್ಯಖೇಟದಲ್ಲಿದ್ದುಕೊಂಡು ೮೧೪ರಿಂದ ೮೭೭ರ ವರೆಗೆ ರಾಜ್ಯವಾಳಿದ ರಾಷ್ಟ್ರಕೂಟ ಚಕ್ರವರ್ತಿ ಅಮೋಘವರ್ಷನ ಕಾಲದಲ್ಲಿ ರಚಿತವಾದ ಈ ಗ್ರಂಥದ ಲಿಖಿತಕಾಲವನ್ನು ಸು. ೮೫೦ ಎಂದು ಸಾಮಾನ್ಯವಾಗಿ ಇಟ್ಟುಕೊಳ್ಳಲಾಗಿದೆ. ಇದರ ವಸ್ತು ಅಲಂಕಾರಶಾಸ್ತ್ರದ ನಾನಾ ವಿಷಯಗಳ ನಿರೂಪಣೆ. ಈನಿರೂಪಣೆಯಲ್ಲಿ ಎಲ್ಲಿಯಾದರೂ ಆ ಪೂರ್ವಕಾಲದ ಕನ್ನಡ ಸಾಹಿತ್ಯದ ಬಗೆಗೆ ಏನಾದರೂ ಸೂಚನೆಗಳು ದೊರೆಯುತ್ತವೆಯೇ, ಆ ಸೂಚನೆಗಳಿಂದ ಪ್ರಾಚೀನತೆಯ ವ್ಯಾಪ್ತಿಯನ್ನು ಎಲ್ಲಿಯವರೆಗೆ ಗ್ರಹಣಮಾಡಬಹುದು—ಇವು ಈಗ ವಿಚಾರಣೀಯವಾದಂಶಗಳಾಗಿವೆ.

ಕನ್ನಡ ಕಾವ್ಯಗಳಲ್ಲಿ ಎಂದರೆ ಕಾವ್ಯಪ್ರಕಾರಗಳಲ್ಲಿ ಮೇಲಾದ ಗುಣವುಳ್ಳ ಗದ್ಯ ಪದ್ಯ ಸಮ್ಮಿಶ್ರಣದ ಪ್ರಕಾರವನ್ನು ಗದ್ಯಕಥೆಯೆಂಬ ಹೆಸರಿಂದ ಪ್ರಾಚೀನರಾದ ಆಚಾರ್ಯರು (= ಕವಿಗಳು) ರಚಿಸಿರುತ್ತಾರೆ—ಎಂಬುದಾಗಿ ಪ್ರಥಮ ಪರಿಚ್ಛೇದದ ಆರಂಭಭಾಗದಲ್ಲಿ ಹೇಳಿದೆ (ಪ. ೨೭). ಅಲ್ಲದೆ ಅಲಂಕಾರ ವ್ಯಾಕರಣಶಾಸ್ತ್ರಗಳ ನಿಯಮಗಳಿಗೆ ಒಪ್ಪುವಂತಹ ಒಳ್ಳೆಯ ಗದ್ಯಕಾವ್ಯಗಳನ್ನು ಬರೆಯಬೇಕಾದರೆ, ಅನೇಕ ಬಗೆಯ ವಿದ್ಯೆಗಳನ್ನೂ ಭಾಷೆಗಳನ್ನೂ ಬಲ್ಲಂತಹ, ಲೌಕಿಕ ಧಾರ್ಮಿಕ ವರ್ಣನೆಗಳಿಂದ ಆರ್ದ್ರವಾದ ಪ್ರಖ್ಯಾತವಸ್ತುವನ್ನು ವಿಸ್ತರಿಸಲು ಶಕ್ತನಾದಂತಹ ವ್ಯಕ್ತಿಯಾಗಿರಬೇಕೆಂದು ಹೇಳಿದೆ (ಪ. ೨೮). (ಕನ್ನಡ ಭಾಷೆಯಲ್ಲಿ) ವಿಮಳೋದಯ, ನಾಗಾರ್ಜುನ, ಜಯಬಂಧು, ದುರ್ವಿನೀತ ಮುಂತಾದವರು ಈ ಕ್ರಮದಲ್ಲಿ ತೊಡಗಿ ಎಂದರೆ ಅಂತಹ ಸಾಮರ್ಥ್ಯವನ್ನು ಪಡೆದವರಾಗಿ, ಗದ್ಯವೆಂಬ ಆಶ್ರಮದ ಗುರುಪದವಿಯನ್ನು ಪಡೆದರೆಂದು ಮುಂದುವರಿದು ಹೇಳಿದೆ (ಪ. ೨೯).

ಈ ಹೇಳಿಕೆಯಲ್ಲಿ ಕನ್ನಡ ಸಾಹಿತ್ಯದ ಪ್ರಾಚೀನತೆಯ ದೃಷ್ಟಿಯಿಂದ ಒಂದೆರಡು ಅಂಶಗಳು ಸ್ಫುಟವಾಗುತ್ತವೆ. ಅವು ಯಾವುವೆಂದರೆ: (i) ಕನ್ನಡದಲ್ಲಿ ಒಂದಕ್ಕಿಂತ ಹೆಚ್ಚಾದ ಕಾವ್ಯಪ್ರಕಾರಗಳಿದ್ದುವು. (ii) ಅವುಗಳಲ್ಲಿ ಗದ್ಯಕಥೆಯೆಂಬುದು ಗದ್ಯಪದ್ಯವನ್ನು ಬೆರಸಿ ಬರೆಯುತ್ತಿದ್ದ ಒಂದು ಪ್ರಕಾರ. (iii) ಕನ್ನಡದಲ್ಲಿ ಪ್ರಾಯಃ ಇಂಥ ಗದ್ಯಕಥೆಗಳನ್ನು ಅಥವಾ ಗದ್ಯಕಾವ್ಯಗಳನ್ನು ಬರೆದವರಲ್ಲಿ ಖ್ಯಾತರಾದ ವಿಮಳೋದಯಾದಿ

ಕವಿಗಳು ಖ್ಯಾತವಾದ ವಸ್ತುವನ್ನು ವರ್ಣನೆಗಳಿಂದ ಪುಷ್ಟವನ್ನಾಗಿ ಮಾಡಿ ಬರೆಯು ವಲ್ಲಿ ಒಳ್ಳೆಯ ವ್ಯುತ್ಪತ್ತಿಯುಳ್ಳವರಾಗಿದ್ದರು. ಹೀಗೆ ಅರ್ಥಮಾಡುವುದು ಸರಿಯಾಗಿ ದ್ದರೆ, ಕನ್ನಡದಲ್ಲಿ 'ಕವಿರಾಜಮಾರ್ಗ'ಕ್ಕಿಂತ ಹಿಂದೆ ಕೆಲಮಟ್ಟಿಗೆ ಸಾಹಿತ್ಯಸಂಪನ್ನ ಗದ್ಯ ರಚನೆಗಳಿದ್ದು, ಅದರಲ್ಲಿ ಗದ್ಯಕಥೆಯೆಂಬ ಒಂದು ಪ್ರಕಾರವನ್ನು ಅದೇ ಭಾಷೆಯ ಪೂರ್ವಕವಿಗಳು ರೂಢಿಸಿದ್ದರೆಂದು ಹೇಳಬೇಕಾಗುತ್ತದೆ. ಆದರೆ ಹಳಮೆಯ ಗಡಿಯನ್ನು ಎಲ್ಲಿ ಗುರುತಿಸಬೇಕೆಂದು ತಿಳಿಯುವುದಕ್ಕೆ ಇಲ್ಲಿ ನಿಖರವಾದ ಸೂಚನೆಯಿಲ್ಲ. ೫೦–೧೦೦ ವರ್ಷಗಳಷ್ಟು ಹಿಂದಿನ ಕಾಲಾವಧಿಗೆ ಸ್ಥೂಲವಾಗಿ ಗುರುತಿಸಿದರೆ ದೊಡ್ಡ ತಪ್ಪೇನೂ ಆಗುವುದಿಲ್ಲ. 'ವಡ್ಡಾರಾಧನೆ', 'ಚಾವುಂಡರಾಯ ಪುರಾಣ'ಗಳು ಹಳೆಯ ಗದ್ಯಕಥೆಗಳ ಮಾದರಿಯಲ್ಲಿ ಹುಟ್ಟಿದ ಈಚೆಯ ಕಾಲದ ಗದ್ಯಕಥೆಗಳಾಗಿರಬಹುದು.[೨]

ಹೀಗೆಯೇ ಶ್ರೀವಿಜಯ, ಚಂದ್ರ, ಲೋಕಪಾಲ ಮುಂತಾದವರ ಮೀರಿಸುವುದಕ್ಕಾಗದ ಪದ್ಯಕಾವ್ಯಗಳು ಕನ್ನಡದ ಅಗ್ರಮಾನ್ಯವಾದ ಅಥವಾ ಅತ್ಯುತ್ಕೃಷ್ಟವಾದ ಪದ್ಯ ಕಾವ್ಯಕ್ಕೆ ಯಾವಾಗಲೂ ಉದಾಹರಣೆಗಳಾಗಿವೆ ಎಂದೂ (ಪ. ೩೨) ಕನ್ನಡದಲ್ಲಿ ಯಷ್ಟೇ ಕಂಡುಬರುತ್ತಿರುವ, ನಡೆಯುತ್ತಿರುವ ಕಾಲದಲ್ಲಿ ಕೂಡ ಪ್ರಸಿದ್ಧವಾಗಿರುವ ಚತ್ತಾಣ ಮತ್ತು ಬೆದಂಡೆಗಳೆಂಬ ಪದ್ಯಕಾವ್ಯಪ್ರಕಾರಗಳಲ್ಲಿ ಪ್ರಾಚೀನರಾದ ಕವಿಗಳೂ ಗ್ರಂಥರಚನೆ ಮಾಡಿದ್ದಾರೆ ಎಂದೂ (ಪ. ೩೩) ಪ್ರಥಮ ಪರಿಚ್ಛೇದದಲ್ಲಿ ಮುಂದುವರಿದು ಹೇಳಿದೆ. ಅವುಗಳ ಲಕ್ಷಣವನ್ನು ಮುಂದಿನೆರಡು ಪದ್ಯಗಳಲ್ಲಿ ವಿವರಿಸಿದೆ.

ಇಲ್ಲಿ ಪ್ರಾಚೀನತೆಯ ದೃಷ್ಟಿಯಿಂದ ಊಹಿಸಬಹುದಾದ ಸಂಗತಿಗಳು: (i) 'ಕವಿರಾಜಮಾರ್ಗ'ಕ್ಕೆ ಹಿಂದೆ ಕನ್ನಡದಲ್ಲಿ ಗದ್ಯಕಾವ್ಯಗಳ ಹಾಗೆಯೇ ಪದ್ಯಕಾವ್ಯ ಗಳೂ ಇದ್ದುವು. (ii) ಆ ಕಾವ್ಯಗಳಲ್ಲಿ ಶ್ರೀವಿಜಯ ಮೊದಲಾದವರು ಬರೆದವು ಗಣ್ಯ ವಾದವು. (iii) ಚತ್ತಾಣ ಮತ್ತು ಬೆದಂಡೆಗಳೆಂಬ ಎರಡು ಬಗೆಯ ಪದ್ಯಕಾವ್ಯಗಳು 'ಕವಿರಾಜಮಾರ್ಗ'ಕಾರನ ಕಾಲದಲ್ಲಿ ಪ್ರಸಿದ್ಧವಾಗಿದ್ದುವು; ಅಲ್ಲದೆ ಆ ಹಿಂದೆಯೂ ಆ ಎರಡು ಬಗೆಯ ಕಾವ್ಯಗಳು ಪ್ರಾಚೀನ ಕವಿಗಳಿಂದ ರಚಿತವಾಗಿದ್ದವು. ಗಣನೆಮಾಡಬಹು ದಾದ ಒಳ್ಳೆಯ ಪದ್ಯಕವಿಗಳೂ ಪದ್ಯಕಾವ್ಯಗಳೂ ಕವಿರಾಜಮಾರ್ಗಕಾರನ ಕಾಲ ದಲ್ಲಿಯೂ ಅದರ ಮೊದಲೂ ಆಗಿಹೋದದ್ದು, ಕನ್ನಡಕ್ಕೆ ವಿಶಿಷ್ಟವಾದ ಎರಡು ಪದ್ಯಕಾವ್ಯ ಪ್ರಕಾರಗಳು ಸಾಕಷ್ಟು ಹಿಂದಿನ ಕಾಲದಲ್ಲಿಯೇ ತಲೆದೋರಿದ್ದುದು, ಮೇಲಿನ ಹೇಳಿಕೆ ಯಿಂದ ವಿಶದವಾಗುತ್ತವೆ. ಇಲ್ಲಿ ಹೇಳಿರುವ 'ಪುರಾತನಕವಿಗಳ್' ಎಂಬುದರ ಹಳಮೆಯ ವ್ಯಾಪ್ತಿ ಇಷ್ಟೇ ಎನ್ನುವಂತಿಲ್ಲ; ಇಲ್ಲಿಯೂ ೫೦–೧೦೦ ವರ್ಷಗಳ ಹರಹು ಉತ್ಪ್ರೇಕ್ಷೆಯೇ ನಲ್ಲ. ಈ ಗದ್ಯಪದ್ಯ ಕೃತಿಗಳು ಕಾಲನ ಹಾವಳಿಗೆ ತುತ್ತಾಗಿ ಹಾಳಾಗಿದ್ದರೂ, ನೃಪತುಂಗನ ಕಾಲಕ್ಕೆ ಅವು ಅತ್ಯಂತ ಜನಪ್ರಿಯವಾಗಿದ್ದವೆಂಬುದರಿಂದ, ರಾಷ್ಟ್ರಕೂಟರ ಕಾಲಕ್ಕೆ ಕನ್ನಡ ಭಾಷೆ ಚೆನ್ನಾಗಿ ಬಲಿತ ಭಾಷೆಯಾಗಿತ್ತೆಂದೂ ಅದರಲ್ಲಿ ಸಾಕಷ್ಟು ಸಾಹಿತ್ಯ ವಿತ್ತೆಂದೂ ತಿಳಿಯುವುದಾಗಿ ಕೆ.ಬಿ. ಪಾಠಕ್ 'ಕವಿರಾಜಮಾರ್ಗ'ದ ತಮ್ಮ ಪರಿಷ್ಕರಣಕ್ಕೆ ಬರೆದ ಮುನ್ನುಡಿಯಲ್ಲಿ ತಿಳಿಸಿದ್ದಾರೆ.

ಕವಿರಾಜಮಾರ್ಗಕಾರನು ಕನ್ನಡನಾಡಿನ ತಿರುಳೆಂದು ಹೇಳುವ ಕಿಸುವೊಳಲು (= ಪಟ್ಟದಕಲ್ಲು) ಮುಂತಾದವು ಆಗ್ಗೆ ಕೆಲವು ಶತಮಾನಗಳ ಹಿಂದಿನಿಂದಲೇ ನಾಡಿನ ಖ್ಯಾತ ರಾಜಕೀಯ ಮತ್ತು ಸಾಂಸ್ಕೃತಿಕ ಕೇಂದ್ರಗಳಾಗಿದ್ದು, ಅಲ್ಲಿ ಕಲೆಗಳಿಗೆ ಹೇಗೋ ಹಾಗೆಯೇ ಕನ್ನಡ ಸಾಹಿತ್ಯದ ಬೆಳೆವಣಿಗೆಗೆ ಕೂಡ ಅನುಕೂಲಕರವಾದ ಸನ್ನಿವೇಶವಿದ್ದಿರಬೇಕೆಂದು ಊಹಿಸಲು ಮುಂದಿನ ಪದ್ಯಗಳು ಎಡೆಗೊಡುತ್ತವೆ (ಪ. ೩೮-೪೪). ಕನ್ನಡ ನಾಡಿನ ಜನಸಾಮಾನ್ಯರು ಸಹಜವಾಗಿಯೇ ಬುದ್ಧಿವಂತರಾಗಿದ್ದು, ಕ್ರಮಬದ್ಧವಾದ ವ್ಯಾಸಂಗವಿಲ್ಲದೆಯೂ ಕಾವ್ಯರಚನೆ ಮಾಡಬಲ್ಲವರಾಗಿದ್ದರು ಎಂದಿರುವಲ್ಲಿ, ಪ್ರಾಯಃ ಕನ್ನಡದಲ್ಲಿ ಜಾನಪದಕಾವ್ಯವಿದ್ದುದರ ಬಗೆಗೆ ಪರೋಕ್ಷ ಸೂಚನೆಯಿರಬಹುದು; ಇಲ್ಲವೆ ನೈಸರ್ಗಿಕ ಪ್ರತಿಭೆಯಿಂದ ಕನ್ನಡಿಗರು ಕಾವ್ಯ ಕಟ್ಟಬಲ್ಲವರಾಗಿದ್ದರು ಎಂದರ್ಥವಾಗಬಹುದು. ಸ್ವಲ್ಪವೇ ದೋಷ ಕಂಡರೂ ಕೃತಿಗಳನ್ನು ಟೀಕಿಸುತ್ತಿದ್ದರೆನ್ನುವಲ್ಲಿ, ಕನ್ನಡ ಭಾಷೆಯ ಕೃತಿಗಳನ್ನೇ ಕುರಿತಿದ್ದರೂ ಕುರಿತಿರಬಹುದು.

'ಕವಿರಾಜಮಾರ್ಗ'ದ ಕಾಲಕ್ಕೆ ಕನ್ನಡ ನುಡಿಯಲ್ಲಿ ವಿಪುಲವಾದ ಭಾಷಾಪ್ರಭೇದಗಳು ಏರ್ಪಟ್ಟಿದ್ದುವೆಂದೂ (ಪ. ೪೬), ಈ ಕಾರಣದಿಂದಾಗಿ ಪ್ರಾಚೀನ ಕನ್ನಡ ಕವಿಗಳ ಕಾವ್ಯಮಾರ್ಗದಲ್ಲಿ ಕಂಡುಬಂದ ದೋಷಗಳನ್ನೂ ತನಗೆ ದೋಷವೆಂದು ಕಂಡುಬಂದ ಬೇರೆ ಕೆಲವನ್ನೂ ಪಂಡಿತರಿಗೆ ವಿವರಿಸುವುದಾಗಿಯೂ (ಪ. ೪೭) ಆ ಗ್ರಂಥದ ಕರ್ತೃ ಸೂಚಿಸಿದ್ದಾನೆ. "ಪುರಾಣಕವಿಗಳ ಸಂತತಗತ ಮಾರ್ಗ" ಎಂದು ಉಲ್ಲೇಖಿಸುವುದು, ಕನ್ನಡಭಾಷೆಯಲ್ಲಿ ಸಾಕಷ್ಟು ಹಿಂದಿನಿಂದ ಶಿಷ್ಟಕವಿಗಳು ರೂಢಿಸಿದ ಕಾವ್ಯಮಾರ್ಗವೊಂದು ಜನಪದಕವಿಗಳ ಕಾವ್ಯಮಾರ್ಗದಿಂದ ಬೇರೆಯಾಗಿ ಬೆಳೆದುಕೊಂಡು ಬಂದಿದ್ದುದನ್ನು ಸೂಚಿಸುವಂತೆ ತೋರುತ್ತದೆ. ಅಂಥ ಕಾವ್ಯಮಾರ್ಗದ ಸೂಚನೆ ಮುಂದಿನ ಪದ್ಯದಲ್ಲಿಯೂ (ಪ. ೪೮) ಇದೆ. ಶಾಸ್ತ್ರಜ್ಞತೆ ವ್ಯುತ್ಪತ್ತಿಗಳಿಲ್ಲದವರು; ಚೆನ್ನಲ್ಲ ಎಂದು ತಿಳಿದಿದ್ದೂ (?) ರೂಢಿಯಲ್ಲಿ ನೆಲೆಗೊಂಡಿರುವ ಕಾವ್ಯಗಳನ್ನೇ (ಎಂದರೆ ಲಕ್ಷ್ಯಗಳನ್ನೇ) ತಮ್ಮ ಕಾವ್ಯ ರಚನೆಗೆ ಮಾದರಿಗಳಾಗಿ ಮಾಡಿಕೊಂಡು (ಎಂದರೆ ಲಕ್ಷಣವನ್ನಾಗಿ ಗ್ರಹಿಸಿ) ಹಳಗನ್ನಡವನ್ನು ಹೊಲಗಿಡಿಸಿ ತಮ್ಮ ಕಾವ್ಯಗಳನ್ನು ಬರೆಯುವರು ಎಂಬ ಆಕ್ಷೇಪಣೆಯ ಧ್ವನಿ ಅಲ್ಲಿ ವ್ಯಕ್ತವಾಗಿರುವಂತೆ ತೋರುತ್ತದೆ. ಅಲಂಕಾರ ವ್ಯಾಕರಣ ಮೊದಲಾದ ಶಾಸ್ತ್ರಗಳಲ್ಲಿ ತಿಳಿವಳಿಕೆ ಪಡೆದು ಕಾವ್ಯರಚನೆಗೆ ಕೈಹಾಕಬೇಕು; ಕವಿರಚಿತವಾದ ಗ್ರಂಥಗಳನ್ನು ನೋಡಿಯೇ ಬರೆಯುವುದರಿಂದ, ಪರಂಪರೆಯಿಂದ ಬಂದ ಕನ್ನಡ ಭಾಷೆಯ ರೂಪ ರಚನೆಗಳು ಕೆಡುತ್ತವೆ ಎಂಬುದು 'ಕವಿರಾಜಮಾರ್ಗ'ಕಾರನ ಆಶಯವಿರುವಂತಿದೆ. ಆತನಿಗೆ ಕನ್ನಡ ಕಾವ್ಯಪದ್ಧತಿಯ ದೋಷಾದೋಷಗಳನ್ನು ತೋರಿಸಿ, ಅದರ ಶೋಭೆಯನ್ನು ಬೆಳಸುವ ಅಲಂಕಾರಗಳನ್ನು ವಿವರಿಸಿ, ಸಂಸ್ಕೃತಭಾಷೆಯಲ್ಲಿರುವ ಹಾಗೆಯೇ ಕನ್ನಡದಲ್ಲಿಯೂ ಒಂದು ಅಲಂಕಾರ ಗ್ರಂಥವನ್ನು ರಚಿಸಬೇಕೆಂಬ ಸಂಕಲ್ಪಕ್ಕೆ ಈ ಮೇಲಿನ ಕೆಲವು ಮಾತುಗಳ ಒಂದು ಪೂರ್ವಪೀಠಿಕೆಯನ್ನು ಆತ ಹಾಕಿದ್ದಾನೆಂದು ಕೂಡ ಇಲ್ಲಿ ಊಹಿಸಲವಕಾಶವಿದೆ. ಇದು ಹೇಗಿದ್ದರೂ, 'ಕವಿರಾಜಮಾರ್ಗ' ಕಾಲಕ್ಕೆ ಮೊದಲು ಹಳಗನ್ನಡ

ಭಾಷೆಯೂ ಅದರಲ್ಲಿ ಬರೆಯಲ್ಪಟ್ಟ ಸಾಹಿತ್ಯವೂ ಇದ್ದಿತೆನ್ನುವುದರಲ್ಲಿ ಅನುಮಾನವಿಲ್ಲ. ಆದರೆ ಎಷ್ಟು ಮೊದಲು ಎನ್ನುವುದನ್ನಳಿಯಲು ತಕ್ಕ ಸಾಧನವಿಲ್ಲ.

'ಕವಿರಾಜಮಾರ್ಗ'ಕ್ಕಿಂತ ಹಿಂದೆ ಹಳಗನ್ನಡ ಕವಿಗಳೂ ಶಾಸನೇತರ ಸಾಹಿತ್ಯವೂ ಇದ್ದುದಕ್ಕೆ ಈವರೆಗೆ ನೋಡಿದ ಆಧಾರಗಳು ಸಾಕಾಗುತ್ತವೆ. ಇವುಗಳ ಸ್ವರೂಪ ವಿವೇಚನೆಯನ್ನು ಕುರಿತ ಲಕ್ಷಣಗ್ರಂಥಗಳಿದ್ದುವೇ ಎಂಬುದು ವಿಚಾರಣೀಯವಾದ್ದು. ಮೇಲೆ ಹೇಳಿದ ಆಶಯದ ಪದ್ಯ "ನೆಲಸಿದ ಕಾವ್ಯಂ ಕಾವ್ಯ|ಕ್ಕೆ ಲಕ್ಷಣಂ ಸತತಂ...." ಎಂಬುದನ್ನು ವಿಶ್ಲೇಷಿಸುತ್ತ ಮುಳಿಯ ತಿಮ್ಮಪ್ಪಯ್ಯನವರು ಅವುಗಳ ಅಭಾವವನ್ನೂ ಗೋವಿಂದ ಪೈ ಅವರು ಅಸ್ತಿತ್ವವನ್ನೂ ವಾದಿಸಿದ್ದಾರೆ. (i) ತಿಮ್ಮಪ್ಪಯ್ಯನವರ ವಾದ: ಸಂಸ್ಕೃತ ಪ್ರಾಕೃತಗಳಲ್ಲಿ ಲಕ್ಷಣಗ್ರಂಥಗಳನ್ನು ,ಮುಖೋದ್ಗೀತವಾಗಿ ಬಲ್ಲ ಪರಮಾಚಾರ್ಯರಿದ್ದಂತೆ ಕನ್ನಡದಲ್ಲಿ ಇರಲಿಲ್ಲವಾದ್ದರಿಂದ ಕನ್ನಡ ಕವಿಗಳಿಗೆ ಲಕ್ಷಣರೂಪವಾದ ಕಾವ್ಯರಚನಾ ಪದ್ಧತಿಯನ್ನು ಇದಮಿತ್ಥಂ ಎಂದು ತಿಳಿಸಿಕೊಡುವುದು ಸಾಧ್ಯವಿರಲಿಲ್ಲ. 'ಹಿಂದಿನ ಕನ್ನಡ ಕಾವ್ಯವೇ ಮುಂದಿನದಕ್ಕೆ ಲಕ್ಷಣವೆಂದು ಭಾವಿಸಿಕೊಂಡು ಕೆಲವರು ಕಾವ್ಯವನ್ನು ರಚಿಸುತ್ತಾರೆ' ಮುಂತಾಗಿ ಅರ್ಥವಾಗುವ ಪದ್ಯ ಕನ್ನಡದಲ್ಲಿ ಆವರೆಗೆ ಲಕ್ಷಣ ಗ್ರಂಥಗಳೇ ಇದ್ದಿಲ್ಲ ಎಂಬುದನ್ನು ಶಬ್ದತಃ ನಿರೂಪಿಸುತ್ತದೆ. ಸುಸಂಸ್ಕೃತರು ಕೆಲವರು ಇರಬಹುದು. ಆದರೆ ಕವಿರಾಜಮಾರ್ಗಕಾರ ನಾಡವರ ಹೃದಯದ ಮಟ್ಟವನ್ನು ಚಿತ್ರಿಸಿದ್ದಾನೆ. "ಇದರಿಂದ, ಆಗ ಕನ್ನಡ ಸಾಹಿತ್ಯದಲ್ಲಿ ಲಕ್ಷಣಗ್ರಂಥದ ಅಭಾವವೇ ಹೊಳೆಯುತ್ತಿದ್ದುದು ವಿಶದವಾಗುತ್ತಿದೆ. ಧಾನ್ಯಾದಿಗಳ ಕೊಳುಕೊಡೆಯ ವ್ಯವಹಾರವು, ಮಾನಪಾತ್ರವಿಲ್ಲದೆ ಕೈಸೆರೆಯಿಂದಲೆ ಎಷ್ಟು ಕಾಲ ನಡೆದೀತು ?"[೯೩]

(ii) ಪೈ ಅವರ ವಾದ: 'ಕವಿರಾಜಮಾರ್ಗ'ದ ಮೂರು ಪರಿಚ್ಛೇದಗಳಲ್ಲಿಯೂ ಅಲ್ಲಲ್ಲಿ "ಪೂರ್ವಶಾಸ್ತ್ರಪದವಿಧಿಯಂ| ತೆಱಿತಿದಿರೆ ಪೇೞ್ವೆನಿನಿಸಂ ಕನ್ನಡದೊಳ್" (೨-೪೬), "ಅತಿಶಯ|ಧವಳೋಕ್ತಿ ಕ್ರಮದಿಂ" (೨-೫೫) ಎಂದು ಮುಂತಾಗಿ ಬಂದಿದೆ. ಇದರಿಂದ ಕವಿರಾಜಮಾರ್ಗಕಾರನು ತನಗೆ ಹಿಂದಿನ ಆಲಂಕಾರಿಕರ ಮತವನ್ನೂ ಕೆಲವೊಮ್ಮೆ ತನ್ನ ಭಿನ್ನಾಭಿಪ್ರಾಯವನ್ನೂ ಸೂಚಿಸಿರುತ್ತಾನೆಂದು ತೋರುವುದು. ಆದ್ದರಿಂದ "ಕವಿರಾಜಮಾರ್ಗಕ್ಕಿಂತ ಹಿಂದೆ ಕನ್ನಡದಲ್ಲಿ ಇತರ ಅಲಂಕಾರಗ್ರಂಥಗಳೂ ಇದ್ದುವೆಂದು ಸ್ವಯಮೇವ ಸಿದ್ಧವಾಗುತ್ತದೆ."[೯೪] ಆದರೆ ಅಂತಹ ಉಲ್ಲೇಖಗಳು ಸಂಸ್ಕೃತ ಕವಿಗಳನ್ನೂ ಲಾಕ್ಷಣಿಕರನ್ನೂ ಕುರಿತಿರಬಹುದಲ್ಲ ಎಂಬ ಪೂರ್ವಪಕ್ಷವನ್ನು ಅವರೇ ಹಾಕಿಕೊಂಡು, ಯತಿಪ್ರಾಸಗಳ ಉಲ್ಲೇಖ ಬರುವ ಬೇರೆ ಎರಡು ಪದ್ಯಗಳನ್ನೆತ್ತಿ (೧-೭೫, ೨-೪೫), ಅಲ್ಲಿ ಕುರಿತಿರುವುದು ಕ್ರಮವಾಗಿ ಕನ್ನಡ ಆಲಂಕಾರಿಕರು ಮತ್ತು ಪೂರ್ವಕಾಲೀನ ಕನ್ನಡ ಸಾಹಿತ್ಯ ಎಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ "ದೋಸಮನೆ ಗುಣದವೋಲು| ದ್ಭಾಸಿಸಿ ಕನ್ನಡದೊಳೊಲ್ದು ಪೂರ್ವಾಚಾರ್ಯರ್...." ಎಂಬ ಮೊದಲಿನ ಉಲ್ಲೇಖದಲ್ಲಿ ಉಕ್ತರಾದ ಪೂರ್ವಾಚಾರ್ಯರು ಕನ್ನಡ ಆಲಂಕಾರಿಕರೇ ಆಗಿರಬೇಕಾಗಿಲ್ಲ, ಕನ್ನಡ ಕವಿಗಳೂ ಆಗಬಹುದು. ಅವರ "ಪ್ರಾಸಾನುಪ್ರಾಸಾಂತ| ಪ್ರಾಸಂಗಳ್ ಮೂಱುಮತಿಶ

ಯಂಗಳ್...." ಎಂದು ಇನ್ನೊಂದು ಉಲ್ಲೇಖದ ವಿಷಯದಲ್ಲಿ ಆಕ್ಷೇಪವಿರಲಾರದು.

ಈ ಸಂದರ್ಭದಲ್ಲಿ ರಂ.ಶ್ರೀ. ಮುಗಳಿಯವರು ಪೈಯವರ ಅಭಿಪ್ರಾಯವನ್ನು ವಿಮರ್ಶಿಸುತ್ತ, ಅವರು ತೋರಿಸಿರುವ ಆಧಾರಗಳನ್ನು ದುರ್ಬಲವೆಂದು ಸಕಾರಣವಾಗಿ ನಿರಾಕರಿಸಿದ್ದಾರೆ. "ಕನ್ನಡದಲ್ಲಿ ಪ್ರಾಚೀನಕಾಲದಿಂದಲೂ ವಿಮರ್ಶಕರು ಇದ್ದರೆಂಬೂ ಅವರು ಗ್ರಂಥಗಳನ್ನು ಬರೆದಿರಬಹುದೆಂದೂ ತಿಳಿಯಲು ಬೇರೆ ಆಧಾರಗಳು ಇದೇ ಗ್ರಂಥದಲ್ಲಿರುವಾಗ ಮೇಲಿನ ಆಧಾರಗಳನ್ನು ಕೈಬಿಡುವುದೇ ಮೇಲು" ಎಂದು ಹೇಳುವುದರ ಮೂಲಕ ಹಿಂದೆ ಲಕ್ಷಣಗ್ರಂಥಗಳ ರಚನೆಯನ್ನು ಒಪ್ಪಿರುವಂತೆ ತೋರುತ್ತದೆ.[95] ಮುಂದುವರಿದು ಅವರೇ "....ವ್ಯಾಕರಣ, ಛಂದಸ್ಸು, ಅಲಂಕಾರ ಇವಕ್ಕೆ ಸಂಬಂಧಿಸಿದ ಕನ್ನಡ ಗ್ರಂಥಗಳು 'ಕವಿರಾಜಮಾರ್ಗ'ಕ್ಕಿಂತ ಪೂರ್ವದಲ್ಲಿ ಇದ್ದುವೆಂದು ಎದೆತಟ್ಟಿ ಹೇಳುವಂತಿಲ್ಲ. ೯ನೆಯ ಶತಮಾನದಿಂದಲೇ ಅವುಗಳ ಪ್ರಾರಂಭವಾಗಿರಲೂಬಹುದು. ಆದರೂ ಊಹೆಗೆ ತುಸುಮಟ್ಟಿಗೆ ಇಂಬಿದೆ ಎಂಬುದನ್ನು ಒಪ್ಪಬೇಕು"—ಎಂದಿದ್ದಾರೆ.[96]

ಪೈ ಅವರು ಅಲಂಕಾರಗ್ರಂಥಗಳು ಮಾತ್ರವೇ ಅಲ್ಲ, ವ್ಯಾಕರಣಗ್ರಂಥಗಳು ಕೂಡ ಕವಿರಾಜಮಾರ್ಗಕಾಲಕ್ಕೆ ಹಿಂದೆ ಇದ್ದವೆಂದು "ತೆಱಸಂದಾ ಸಕ್ಕದಮುಂ...." (೧-೫೮), "ಕಾರಕದೋಷಮುಂ ವಚನದೋಷಮುಂ...." (೧-೧೧೩) ಮೊದಲಾದ ಉಲ್ಲೇಖಗಳನ್ನಾಧರಿಸಿ ಅಭಿಪ್ರಾಯಪಟ್ಟಿದ್ದಾರೆ. "ಸಾಹಿತ್ಯವಿದ್ದಲ್ಲದೆ ವ್ಯಾಕರಣಗ್ರಂಥಗಳು ಹುಟ್ಟವೆಂಬ ಕಾರಣ, ಆ ಮುಂಚೆ ಕನ್ನಡದಲ್ಲಿ ನಿಶ್ಚಯವಾಗಿಯೂ ಸಾಹಿತ್ಯವಿದ್ದಿರಬೇಕು"—ಎಂದೂ, "ನೃಪತುಂಗನಿಂದ ಈಚೆಯ ಕನ್ನಡದಲ್ಲಿ ಹೇಗೋ ಹಾಗೆಯೇ ಆತನ ಹಿಂದೆಯೂ ಕವಿಗಳೇ ವೈಯಾಕರಣರಾಗಿದ್ದರೆಂಬುದು ಸಯುಕ್ತಿಕವೆನಿಸುವುದರಿಂದ, ಅವರಿಂದ ರಚಿಸಲ್ಪಟ್ಟ ಸಾಹಿತ್ಯವೂ ಆಗ್ಗೆ ಇದ್ದಿರಬೇಕು"—ಎಂದೂ ಅನುಮಾನಿಸಿದ್ದಾರೆ.[97] ಆದರೆ ಪೈಅವರು ಉದ್ಧರಿಸುವ ಪದ್ಯಗಳು ಅಂಥ ಅನುಮಾನಕ್ಕೆ ತಕ್ಕ ಆಧಾರಾಂಶಗಳನ್ನು ಒಳಕೊಂಡಿಲ್ಲವೆಂದೂ 'ಕವಿರಾಜಮಾರ್ಗ'ಕರ್ತೃವಿನ ಸ್ವಂತ ಆಶಯಗಳೇ ಅಲ್ಲಿ ವ್ಯಕ್ತವಾಗಿವೆಯೆಂದೂ ತೋರುತ್ತದೆ.

'ಕವಿರಾಜಮಾರ್ಗ'ವನ್ನು ಛಂದಸ್ಸಿನ ದೃಷ್ಟಿಯಿಂದ ಪರಿಶೀಲಿಸಿ ಕೆಲವು ಪ್ರಾಚೀನತೆಯ ಅಂಶಗಳನ್ನು ಗುರುತಿಸುವ ಪ್ರಯತ್ನ ಕೂಡ ನಡೆದಿದೆ. ಅಲ್ಲಿ ಉದಾಹೃತವಾದ "ಸಮಱುಗೆಯಿಲ್ಲದ [ಮುಱು]ಕಮು।ಮುಮರ್ದಿರೆ...." (೩-೧೬೯) ಎಂಬೊಂದು ಲಕ್ಷ್ಯ ಪದ್ಯದಲ್ಲಿ ಕಂಡುಬರುವ ಮ-ವ ಪ್ರಾಸಸಂಘಟನೆಯನ್ನು ಗಮನಿಸಿ, ಅದು ಹಳೆಯ ಕೃತಿಯಿಂದ ಉದ್ಧರಿಸಿರುವ ಪದ್ಯವಾಗಿರಬೇಕೆಂದು ಭಾವಿಸಿ, ಅಂಥ ಉದಾಹರಣೆಗಳು 'ಪಂಪಭಾರತ' (೧೪-೪೦), 'ಮಲ್ಲಿನಾಥಪುರಾಣ' (೮-೧೩ ; ೧೪-೫೫), 'ಅರ್ಧನೇಮಿಪುರಾಣ' (೩-೯೧ ; ೫-೭೪), ಟಿ. ನರಸೀಪುರದ ಶಾಸನ (ನಂ. ೬೯) ಇಂಥ ಕಡೆಗಳಲ್ಲೂ ಕಂಡು ಬಂದಿರುವುದನ್ನು ತೋರಿಸುತ್ತ ಗೋವಿಂದ ಪೈ ತಮ್ಮ ಅಭಿಪ್ರಾಯವನ್ನು ಹೀಗೆ ಹೇಳಿದ್ದಾರೆ. (i)"ಆತನು [=ಕವಿರಾಜಮಾರ್ಗಕಾರನು] ಕಂಡಿರುವ ಮಟ್ಟಿಗಾದರೂ

ಆತನ ಹಿಂದಣ ಕಾಲದ ಕನ್ನಡ ಕಾವ್ಯಗಳಲ್ಲೆಲ್ಲ ಪ್ರಾಸವಿದ್ದಿತೆಂದು ಮಾತ್ರವಲ್ಲ, ಅದು ಬರೀ ವಿಕಲ್ಪ (option)ವಾಗಿರದೆ ಅವಶ್ಯಂಭಾವಿಯಾಗಿದ್ದಿತೆಂದು ಕೂಡ ವ್ಯಕ್ತವಾಗುತ್ತದೆ. ಆದರೆ ಆತನೇಕೆ ಮ-ವ ಕಾರಗಳ ಪ್ರಾಸವನ್ನು ಕುರಿತು ಹೇಳಿಲ್ಲ? ಬಹುಶಃ ಆತನಿಂದ ಬಹಳ ಹಿಂದಣ ಕಾಲದಿಂದಲೆ ಈ ಬಗೆಯ ಪ್ರಾಸು ಕನ್ನಡ ಕಾವ್ಯಗಳಲ್ಲಿ ವಿರಲ ವಿರಲವಾಗುತ್ತ ಬಂದಿರಬೇಕು ಎಂಬುದರಿಂದಲೇನೋ, ತನ್ನ ಕಾಲಕ್ಕೆ ಮುಂಚೆಯೇ ಸಲುವಳಿಯಿಂದ ಸರಿದುಹೋಗಿ, ಭಗ್ನಾವಶೇಷದಂತೆ ಅಲ್ಲಿ ಒಂದು ಇಲ್ಲಿ ಒಂದು ಎಂಬಂತೆ ಅಪರೂಪವಾಗಿ ತಾನೆ ಕಾಣಸಿಗಬಹುದಾದ, ರೂಢಿಯಿಂದ ಕಳೆದುಹೋದ ಈ ಪ್ರಾಸವನ್ನು ಕುರಿತು ಆತನು ಹೇಳಲೂ ಇಲ್ಲ, ಅಥವಾ ಹೇಳಕಾರಣವೂ ಇಲ್ಲ ಎಂದು ನನಗೆ ತೋರುತ್ತದೆ" (ii) ಕೇಶಿರಾಜನಿಂದ ಹಿಂದಣಕಾಲದಲ್ಲಿ, ನೃಪತುಂಗನಿಂದ ಹಿಂದಣ ಕಾಲದಲ್ಲಿ, ಅಂದರೆ ಬಹಳ ಹಿಂದಣ ಒಂದಾನೊಂದು ಕಾಲದಲ್ಲಿ, 'ವ-ಮ' ಎಂಬವು ಕನ್ನಡದಲ್ಲಿ ಸಮಾನಸ್ವರಗಳಾಗಿದ್ದು, ಪರಸ್ಪರ ಪಲ್ಲಟಿಸುತ್ತಿದ್ದುವೆಂದು ಭಾವಿಸಲಾಗುತ್ತದೆ; ಹಾಗಲ್ಲದಿದ್ದರೆ ಇವೆಂದಿಗೂ ಪರಸ್ಪರ ಪ್ರಾಸಾಕ್ಷರಗಳಾಗಿ ಪ್ರಯೋಗಿಸಲ್ಪಡುತ್ತಿದ್ದಿಲ್ಲ."[೨೩]

ಈ ಅಭಿಪ್ರಾಯವನ್ನು ರಂ.ಶ್ರೀ. ಮುಗಳಿಯವರು ಕೆಲಮಟ್ಟಿಗೆ ವಿಮರ್ಶಿಸಿ ತಮ್ಮ ನಿರ್ಣಯವನ್ನು ಹೀಗೆ ತಿಳಿಸಿದ್ದಾರೆ: "ವ-ಮ ಇವುಗಳಲ್ಲಿ ರೂಪಸಾದೃಶ್ಯ ಅಲ್ಲದೆ ಉಚ್ಚಾರಸಾಮ್ಯ ಇಲ್ಲವೆ ಸಾಮೀಪ್ಯ ಕನ್ನಡದಲ್ಲಿ ಹಿಂದೆ ಇರಬೇಕು. ಇಂದಿಗೂ ಕೆಲಮಟ್ಟಿಗೆ ಇದೆ. ಯಾಕೆಂದರೆ 'ವ'ಕಾರವು ಅನುನಾಸಿಕವಿದ್ದಂತೆ ಅನನುನಾಸಿಕವೂ ಆಗಿ ಕೆಲವು ಶಬ್ದಗಳಲ್ಲಿದೆ. ಅನುನಾಸಿಕತೆಯ ಮೂಲಕ ಅದು ಪವರ್ಗದ ಅನುನಾಸಿಕವಾದ ಮಕಾರದ ಹತ್ತಿರಕ್ಕೆ ಹೋಗುತ್ತದೆ. ಈ ಕಾರಣದಿಂದ ವ-ಮ ಪ್ರಾಸಪ್ರಯೋಗಕ್ಕೆ ಅವಕಾಶ ದೊರೆತಿರಬೇಕು. ತೀರ ಹಳೆಯ ಜನಪದ ಸಾಹಿತ್ಯದಲ್ಲಿ ಅದು ಕಂಡುಬಂದಿರಬಹುದು. ಅಂತೇ ಅದರ ಪ್ರಭಾವದಿಂದ ಕ್ವಚಿತ್ತಾಗಿ ಕಾವ್ಯ, ಶಾಸನಗಳಲ್ಲಿ ಕವಿಗಳು ಅದನ್ನು ಬಳಸಿದರು. ಪ್ರಾಸನಿಯಮಗಳಲ್ಲಿ ಸ್ಥಾನ ದೊರೆಯುವಷ್ಟು ಅದು ಪ್ರಚುರವಾಗಿರಲಿಲ್ಲ. ಅಚ್ಚಗನ್ನಡದ ಯುಗವೊಂದು ತೀರ ಹಿಂದೆ ಇದ್ದಿತೆಂಬ ಅಭಿಪ್ರಾಯವು ವಾದಗ್ರಸ್ತವಾಗಿದೆ. ಈ ಅಭಿಪ್ರಾಯವು ನಮಗೆ ಸಂಮತವಿಲ್ಲವೆಂಬುದನ್ನು ಹಿಂದೆ ತಿಳಿಸಿದ್ದೇವೆ. ಆದ್ದರಿಂದ ಈ ಪ್ರಾಸವೈಶಿಷ್ಟ್ಯದ ಕಾರಣದಿಂದ ಸಾಹಿತ್ಯದ ಪ್ರಾಚೀನತೆಯನ್ನು ಹಿಂದೊತ್ತುವುದು ಸಾಹಸವಾದೀತು."[೨೨]

ವ-ಮ ಪ್ರಾಸಮಿಶ್ರಣದ ಪ್ರಯೋಗಗಳು ಧ್ವನಿಸಾಮ್ಯ ಕಾರಣವಾಗಿ 'ಕವಿರಾಜಮಾರ್ಗ' ಕಾಲಕ್ಕಿಂತ ಹಿಂದಿನಿಂದ ಬಳಕೆಯಲ್ಲಿ ಬಂದವಿರಬೇಕು ಎಂಬುದನ್ನೊಪ್ಪಬಹುದು. ಅದರ ರೂಢಿ ಪ್ರೈ ಅವರು ಭಾವಿಸುವಂತೆ ಬಹಳ ಹಳಗಾಲಕ್ಕೆ ಹೋಗುತ್ತದೆ ಎಂಬುದನ್ನು ಒಪ್ಪುವುದಕ್ಕೆ 'ಕವಿರಾಜಮಾರ್ಗ'ಕಾರ ಆ ಬಗೆಯ ಪ್ರಾಸವನ್ನು ಕುರಿತಿಲ್ಲದಿರುವುದು ದೃಢವಾದ ಕಾರಣವಾಗಲಾರದು. ಅಲ್ಲದೆ ಯಾವುದಾದರೊಂದು ವಿಷಯದ ಲಕ್ಷಣಾಂಶಗಳನ್ನೆಲ್ಲ ಸಾಕಲ್ಯದೃಷ್ಟಿಯಿಂದ ತನ್ನ ಲಕ್ಷಣಗ್ರಂಥದಲ್ಲಿ ವಿವರಿಸುವ ಭರವಸೆ

ಯನ್ನು ಯಾವ ಲಾಕ್ಷಣಿಕನೂ ಕೊಡುವುದಿಲ್ಲ. ಆತನಿಗೆ ತಿಳಿದೋ ತಿಳಿಯದೆಯೋ ಕೆಲವು ವಿಷಯಗಳು ಕೈಬಿಟ್ಟುಹೋಗುತ್ತವೆ. ಯವಲಗಳ ಅನುನಾಸಿಕ ನಿರನುನಾಸಿಕತ್ವಗಳನ್ನು "ಜನೋಕ್ತಿಯಿಂದಱಿವುದವಱ ವಿಷಯಾಂತರಮುಂ" ಎಂಬುದಾಗಿ ನಾಗವರ್ಮ (ಶಬ್ದಸ್ಮೃತಿ ೧೭) ಹೇಳಿರುವುದನ್ನು ಲಕ್ಷಿಸಿದರೆ ಜನರೂಢಿಯಲ್ಲಿದ್ದುದು, ಜನಪದ ಸಾಹಿತ್ಯದಲ್ಲಿದ್ದುದು, ಶಿಷ್ಟಕವಿಗಳ ಕೃತಿಪದ್ಧತಿಯನ್ನು ಸಹಜವಾಗಿ, ಆದರೆ ಕ್ವಚಿತ್ತಾಗಿ ಮಾತ್ರ ಹೊಕ್ಕಿರಬಹುದು; ಅದರ ಪ್ರಸಕ್ತಿಯನ್ನು ಕವಿರಾಜಮಾರ್ಗಕಾರ ಅಲಕ್ಷಿಸಿರಬಹುದು.

ಎರಡನೆಯ ಸಂಗತಿಯೆಂದರೆ ವೃತ್ತಗಳಿಗೆ ಸಂಬಂಧಿಸಿದ್ದು. "ಕ್ರಮಶಃ ಸಂಸ್ಕೃತ ಅಭಿಯೋಗವು ಕನ್ನಡದಲ್ಲಿ ಹೆಚ್ಚಿ ಹೆಚ್ಚಿ ಬರುತ್ತಲೆ, ಕನ್ನಡ ಸಾಹಿತ್ಯದಲ್ಲಿ ಸಂಸ್ಕೃತ ಶಬ್ದಗಳೇ ಹೆಚ್ಚಿ ಹೆಚ್ಚಿ ಬಂದುವು ಮಾತ್ರವಲ್ಲ, ಅಚ್ಚಗನ್ನಡ ಛಂದಸ್ಸುಗಳು ತೊರೆಯಲ್ಪಟ್ಟು, ಅವುಗಳೆಡೆಯಲ್ಲಿ ಸಂಸ್ಕೃತ ಛಂದಸ್ಸುಗಳೂ ಉಪಯೋಗದಲ್ಲಿ ಬಂದುವು"—ಎಂಬುದಾಗಿ ಅಭಿಪ್ರಾಯಪಡುವ ಪೈಯವರು[100] ಸಂಸ್ಕೃತ ಛಂದೋಗ್ರಂಥಗಳಲ್ಲಿ ದೊರೆಯದ, ಆದ್ದರಿಂದ ಸಂಸ್ಕೃತ ಸಾಹಿತ್ಯದಲ್ಲಿಯೂ ದೊರೆಯುವುದು ಸಂಭವನೀಯವಲ್ಲದ, ಕೆಲವು ಸಂಸ್ಕೃತ ಛಂದೋಜಾತಿಯ ವೃತ್ತಗಳು 'ಕವಿರಾಜಮಾರ್ಗ'ದಲ್ಲಿವೆಯೆಂದೂ ಆ ವೃತ್ತಗಳು ಆ ಮೊದಲಿನ ಕನ್ನಡ ಸಾಹಿತ್ಯದಲ್ಲಿ ವಿರಳವಾಗಿಯಾದರೂ ಇದ್ದ ಕಾರಣವೇ ಅಲ್ಲಿ ಅವನ್ನು ಬಳಸಿವೆಯೆಂದೂ ಹೇಳಿದ್ದಾರೆ. ಇವನ್ನೂ ಸಂಸ್ಕೃತ ಸಾಹಿತ್ಯದಲ್ಲಿರದೆ ಕನ್ನಡದಲ್ಲಿ ಬಹುಪ್ರಚುರವಾಗಿರುವ ಉತ್ಪಲಮಾಲೆ, ಚಂಪಕಮಾಲೆ, ಮತ್ತೇಭವಿಕ್ರೀಡಿತಗಳನ್ನೂ ಲಕ್ಷಿಸಿ ತಮ್ಮ ನಿರ್ಣಯವನ್ನು ಹೀಗೆ ಮಂಡಿಸಿದ್ದಾರೆ: "ಸಂಸ್ಕೃತವೃತ್ತಗಳನ್ನು ಕನ್ನಡದಲ್ಲಿ ಎರವಲು ಕೊಳ್ಳುವಲ್ಲಿ ಸಂಸ್ಕೃತದಲ್ಲಿ ತುಂಬ ಬಳಕೆಯಲ್ಲಿ ಉಳ್ಳವನ್ನೇ ಮೊತ್ತಮೊದಲು ಎರಕೊಂಡು ಬಳಸಿದ ಸಾಕಷ್ಟು ಕಾಲಾನಂತರ ತಾನೆ ಸಂಸ್ಕೃತ ವೃತ್ತಗಳೇ ಆದರೂ ಸಂಸ್ಕೃತದಲ್ಲಿ ವಾಡಿಕೆ ಇಲ್ಲದವನ್ನು ಕನ್ನಡದಲ್ಲಿ ಪ್ರಯೋಗಿಸಿರಬೇಕು ಎಂದು ಸ್ವಯಂವ್ಯಕ್ತವಿರುವ ಕಾರಣ, ಸಂಸ್ಕೃತದಲ್ಲಿ ವಾಡಿಕೆಯಾಗಿರುವ ವೃತ್ತಗಳನ್ನೇ ಕನ್ನಡ ಸಾಹಿತ್ಯದಲ್ಲಿ ಬಳಸಿದ ಯುಗವು ಕವಿರಾಜಮಾರ್ಗದ ಕಾಲಕ್ಕೆ ತಕ್ಕಷ್ಟು ಹಿಂದೆಯೇ ಮುಗಿದು, ಸಂಸ್ಕೃತ ಸಾಹಿತ್ಯದಲ್ಲಿ ಬಳಸದ ಸಂಸ್ಕೃತವೃತ್ತಗಳನ್ನು ಕನ್ನಡದಲ್ಲಿ ಬಳಸುತ್ತಿರುವ ಆ ಮೂರನೆಯ ಯುಗವು ಕನ್ನಡದಲ್ಲಿ ಆಗ್ಗೆ ನಿಯತವಾಗಿ ರೂಢಿಸಿರಬೇಕು ಎಂದು ಸಿದ್ಧವಾಗುವುದರಿಂದ ಕವಿರಾಜಮಾರ್ಗಕ್ಕಿಂತ ಕೆಲವು ಶತಮಾನಕ್ಕೆ ಹಿಂದಿನಿಂದಲೇ ಕನ್ನಡದಲ್ಲಿ ಸಾಹಿತ್ಯವಿದ್ದಿರಬೇಕು."[101]

ಪೈಯವರ ಗ್ರಹಿಕೆಯಲ್ಲಿ ಅತಾರ್ಕಿಕವಾದ್ದೇನೂ ಇಲ್ಲ. ಕ್ರಿ.ಶ. ೭ನೆಯ ಶತಮಾನದ ಶಾಸನಗಳಲ್ಲೇ ಸಂಸ್ಕೃತದಲ್ಲಿ ಕಾಣಬರದ ವೃತ್ತಗಳಿವೆ. ಆ ಕಾಲಕ್ಕೆ ಮುನ್ನ ನಡೆದ ಪ್ರಯೋಗ ಪರೀಕ್ಷೆಗಳಿಂದಷ್ಟೇ ಅವು ತಲೆದೋರಿರಬೇಕು. ಆ ಬಗೆಯ ಪ್ರಯೋಗ ಪರೀಕ್ಷೆಗಳಿಗೆ ಎಷ್ಟು ಅವಧಿ ಹಿಡಿಯಿತು ಎಂಬುದನ್ನು ಗೊತ್ತುಮಾಡಲು ಒದಗುವ ಮಾನದಂಡಗಳೇನೂ ಇರುವಂತೆ ತೋರುವುದಿಲ್ಲ. ನವೀನ ವೃತ್ತರಚನೆಗಳ ಅಳವಡಣೆಗಳು ಅಲ್ಪಾವಧಿಯಲ್ಲೇ ಆಗಿರಲೂ ಸಾಕು. ಈಚೆಯ ಕವಿಗಳು ಪೂರ್ವಪ್ರಸಿದ್ಧವೃತ್ತ

ಗಳ ಪ್ರಯೋಗ ಪರಂಪರೆಯನ್ನು ಮುಂದುವರಿಸುತ್ತ, ಜತೆಜತೆಗೇ ಸಂಸ್ಕೃತ ಛಂದೋವರ್ಗದ ಅಪ್ರಚುರ ವೃತ್ತಗಳನ್ನೂ ಕೆಲಮಟ್ಟಿಗೆ ಕಲ್ಪಿಸುತ್ತ ಹೋಗಿರುವುದಕ್ಕೆ ಅನೇಕ ಸಾಕ್ಷ್ಯಗಳಿರುವುದರಿಂದ ಅಂಥ ಪ್ರಯೋಗಪರೀಕ್ಷೆಗಳು ಹಿಂದಿನ ಕಾಲದಲ್ಲೂ ಜತೆಜತೆಗೇ ಆಗಿರಬಹುದೆಂದು ಊಹಿಸಿದರೆ ತಪ್ಪೇನಿಲ್ಲ.

ಇನ್ನು 'ಕವಿರಾಜಮಾರ್ಗ'ದಲ್ಲಿವೆಯೆನ್ನಲಾದ ಲಕ್ಷ್ಯಪದ್ಯಗಳ ವಿಚಾರ. 'ಕವಿರಾಜಮಾರ್ಗ' ಕರ್ತೃ ಲಕ್ಷಣಗಳಿಗೆ ಲಕ್ಷ್ಯಗಳಾಗಿ ಕೊಟ್ಟಿರುವ ಅನೇಕ ಪದ್ಯಗಳು ಅನ್ಯಕೃತವೆಂದೂ ಅವು ಪೂರ್ವಕವಿಗಳಿಂದ ಉದ್ಧೃತವಾದವೆಂದೂ ಆ ಪೂರ್ವಕವಿಗಳ ರಚನೆಯಲ್ಲಿ ರಾಮಾಯಣದಂಥ ಕಾವ್ಯಗ್ರಂಥಗಳು ಸೇರಿವೆಯೆಂದೂ ಮುಂತಾಗಿ ಕೆಲವು ಅಭಿಪ್ರಾಯಗಳು ವ್ಯಕ್ತವಾಗಿವೆ. ಆರ್. ನರಸಿಂಹಾಚಾರ್, ಇ.ಪಿ. ರೈಸ್, ನಾರಾಯಣಶಾಸ್ತ್ರಿ, ಬಿ. ಎಂ. ಶ್ರೀಕಂಠಯ್ಯ, ರಂ.ಶ್ರೀ ಮುಗಳಿ ಇವರ ಹೇಳಿಕೆಗಳಲ್ಲಿ ಇದನ್ನು ಗಮನಿಸಬಹುದು.[102] ಪ್ರತಿಯಾಗಿ ಎ. ವೆಂಕಟರಾವ್, ಎಚ್. ಶೇಷ ಅಯ್ಯಂಗಾರ್, ಎಂ. ವಿ. ಸೀತಾರಾಮಯ್ಯ ಈ ಕೆಲವರು ಅನ್ಯಕವಿಕೃತ ಉದ್ಧೃತ ಪದ್ಯಗಳಿಲ್ಲವೆಂದಿದ್ದಾರೆ.[103] ಆದರೆ ಬಿ. ಎಂ. ಶ್ರೀ. ಅವರು ಹೇಳುವಂತೆ ನಮ್ಮ ಪ್ರಾಚೀನ ಕನ್ನಡ ಲಕ್ಷಣಗ್ರಂಥಗಳ ರಚನಾವಿಧಾನದಲ್ಲಿ ಒಂದು ಸಾಮಾನ್ಯ ಹಾಗೂ ಸ್ವಾಗತಾರ್ಹವಾದ ಅಂಶವೆಂದರೆ ಪೂರ್ವಕವಿಗಳ ಪ್ರಯೋಗಗಳನ್ನು ಯಥೋಚಿತವಾಗಿ ಸ್ವೀಕರಿಸಿ ಲಕ್ಷಣಾಂಶಗಳನ್ನು ಪುಷ್ಟೀಕರಿಸುವುದು. 'ಕವಿರಾಜಮಾರ್ಗ'ಕಾರ ಕೂಡ ಇದಕ್ಕೆ ಹೊರತಾಗಿರಲಾರ. ಏಕೆಂದರೆ ಆತನೇ "ಬಗೆದು ನೋಡಿ ಪುರಾಣಕವಿಪ್ರಭು ಪ್ರಯೋಗಾ| ವಿಳಸದ್ಗುಣೋದಯಮನಾಯ್ದು ವಜಿಂ ಸಮೆದೊಂದು ಕಾವ್ಯದಿಂ" (೨-೧೫೫) ಎಂದು ಹೇಳಿರುವುದರಿಂದ ಗ್ರಂಥಶರೀರದಲ್ಲಿ ಅಂಥವು ಸೇರಿದೆಯೆಂದೂ 'ಕವಿರಾಜಮಾರ್ಗ' ಪೂರ್ವಕಾಲಿನ ಸಾಹಿತ್ಯ ಈಗ ಅಲಭ್ಯವಾಗಿರುವುದರಿಂದ ಅಂಥವನ್ನು ಈಗ ನಾವು ಗುರುತಿಸುವ ಸ್ಥಿತಿಯಲ್ಲಿಲ್ಲವೆಂದೂ ಹೇಳಬೇಕಾಗುತ್ತದೆ. ಹಾಗೆ ಗುಣದೋಷಗಳಿಗಾಗಿ ಆಯ್ದ ಪ್ರಯೋಗಗಳು ಅಖಂಡವಾದೊಂದು ಪದ್ಯವಿರಬಹುದು, ಬಿಡಿಯಾದೊಂದು ಪದವಿರಲೂಬಹುದು. ಪ್ರಥಮ ಪರಿಚ್ಛೇದದಲ್ಲಿ ಆತ ಹೆಸರಿಸಿರುವ ಗದ್ಯ ಮತ್ತು ಪದ್ಯಕವಿಗಳು ಬರೆದ ಕೃತಿಗಳಿಂದಲೋ ಕೃತಿಪ್ರಕಾರಗಳಿಂದಲೋ ಅವು ಸ್ವೀಕೃತವಾಗಿರುವುದು ಅಸಂಭವವೇನಲ್ಲ.

ಈ ಪರಿಶೀಲನೆಯಿಂದ ವಿಶದಪಡುವ ಸಂಗತಿಗಳನ್ನಿಲ್ಲಿ ಸಂಗ್ರಹಿಸಬಹುದು (i) 'ಕವಿರಾಜಮಾರ್ಗ' ಕನ್ನಡದ ಲಿಖಿತಸಾಹಿತ್ಯದ ಪ್ರಾಚೀನತೆಯ ಸಾಕ್ಷ್ಯಗಳನ್ನು ಒಳಕೊಂಡಿರುವ ಒಂದು ಒಳ್ಳೆಯ ಹಾಗೂ ಪ್ರಮುಖವಾದ ಆಕರ. (ii) ಅದು ಹುಟ್ಟುವುದಕ್ಕಿಂತ ಸು. ೫೦–೧೦೦ ವರ್ಷಗಳಷ್ಟು ಹಿಂದಿನಿಂದಲೂ ಕನ್ನಡದಲ್ಲಿ ಬಹುಶಃ ಪೂರ್ಣಪ್ರಮಾಣದ ಗದ್ಯ ಮತ್ತು ಪದ್ಯಗ್ರಂಥಗಳು ರಚಿತವಾಗುತ್ತಬಂದಿದ್ದುವು. (iii) ಕನ್ನಡದಲ್ಲಿ ಒಂದಕ್ಕಿಂತ ಹೆಚ್ಚು ಕಾವ್ಯಪ್ರಕಾರಗಳಿದ್ದು, ಅವುಗಳಲ್ಲಿ ಗದ್ಯಕಥೆ ಎಂಬ ಪ್ರಕಾರವನ್ನೂ ಪದ್ಯಕಾವ್ಯವನ್ನೂ ಹಿಂದಿನ ಕವಿಗಳು ರೂಢಿಸಿಕೊಂಡು ಬಂದಿದ್ದರು. (iv) ಚತ್ತಾಣ ಮತ್ತು ಬೆದಂಡೆಗಳೆಂಬ ಎರಡು ಬಗೆಯ ಪದ್ಯಕಾವ್ಯಗಳು

ಹಿಂದೆಯೂ 'ಕವಿರಾಜಮಾರ್ಗ' ಕಾಲದಲ್ಲಿಯೂ ಪ್ರಸಿದ್ಧವಾಗಿದ್ದುವು. (v) ಕನ್ನಡದಲ್ಲಿ ಶಿಷ್ಟಕವಿಗಳು ರೂಢಿಸಿದ ಕಾವ್ಯಮಾರ್ಗವೊಂದು 'ಕವಿರಾಜಮಾರ್ಗ' ಕಾಲಕ್ಕೆ ಹಿಂದೆಯೇ ಸಿದ್ಧವಾಗಿತ್ತು ; ಹಳಗನ್ನಡ ಭಾಷೆಯೂ ಅದರಲ್ಲಿ ಲಿಖಿತವಾದ ಸಾಹಿತ್ಯವೂ ಆ ಮಾರ್ಗದಲ್ಲಿ ದೃಢವಾಗಿ ಸಾಗಿದ್ದುವು. (vi) 'ಕವಿರಾಜಮಾರ್ಗ'ಕ್ಕಿಂತ ಹಿಂದೆ ಕನ್ನಡದಲ್ಲಿ ಲಕ್ಷಣ ಗ್ರಂಥಗಳು ಹುಟ್ಟಿದ್ದುವೆಂದು ಹೇಳಲು ಆ ಗ್ರಂಥದ ಆಧಾರಗಳು ಸರಿಯಾಗಿ ಒದಗುವುದಿಲ್ಲ. (vii) ಅಲ್ಲಿಯ ಛಂದೋಲಕ್ಷಣಗಳು, ಸಾಕ್ಷ್ಯಗಳು ಕನ್ನಡ ಸಾಹಿತ್ಯದ ಹಳಮೆಯ ವಿಷಯದಲ್ಲಿ ನಿಶ್ಚಿತವಾದ ಬೆಳಕನ್ನು ಬೀರಲಾರವು. (viii) ಆ ಗ್ರಂಥದಲ್ಲಿ ಉದ್ಧೃತವಾದ ಲಕ್ಷ್ಯಪದ್ಯಗಳಲ್ಲಿ ಕೆಲವಾದರೂ ಪ್ರಾಚೀನ ಕವಿಕೃತಿಗಳಿಂದ ಎತ್ತಿದವಾಗಿರುವುದು ಸಾಧ್ಯ.

## ಅನ್ಯಗ್ರಂಥಗಳಲ್ಲಿ ದೊರೆಯುವ ಸಾಕ್ಷ್ಯಗಳು

'ಕವಿರಾಜಮಾರ್ಗ'ದ ಹಾಗೆಯೇ ಅದರ ಈಚಿನ ಕೆಲವು ಕನ್ನಡ ಸಂಸ್ಕೃತ ಗ್ರಂಥಗಳೂ ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ಗುರುತಿಸಲು ಶಕ್ಯವಾಗಬಹುದಾದ ಕೆಲವು ಉಲ್ಲೇಖಗಳನ್ನು ಒಳಕೊಂಡಿರುವುದು ಕಂಡುಬರುತ್ತದೆ. ಅಂಥ ಉಲ್ಲೇಖಗಳು ಯಾವುವು, ಅವು ಎಷ್ಟರಮಟ್ಟಿಗೆ ಸಹಾಯಕಸಾಕ್ಷ್ಯಗಳಾಗಬಲ್ಲವು ಎಂಬುದನ್ನು ಈಗ ಗಮನಿಸಬಹುದು. ಸಾಹಿತ್ಯಗ್ರಂಥಗಳು, ಲಕ್ಷಣ ಮತ್ತು ಸಂಕಲನ ಗ್ರಂಥಗಳು ಮತ್ತು ಸಂಸ್ಕೃತ ಭಾಷೆಯ ಗ್ರಂಥಗಳು, ಅನ್ಯಭಾಷೆಯ ಗ್ರಂಥಗಳು—ಎಂಬ ನಾಲ್ಕು ವಿಭಾಗಗಳ ಕೆಳಗೆ ಸಂಬಂಧಪಟ್ಟ ಸಾಕ್ಷ್ಯಗಳನ್ನು ಮುಂದೆ ಕೂಡಿಸಿಕೊಟ್ಟಿದೆ.

(೧) ಸಾಹಿತ್ಯ ಗ್ರಂಥಗಳು : (i) ಪಂಪಕವಿಯ (೯೪೧) 'ವಿಕ್ರಮಾರ್ಜುನವಿಜಯ'ದಲ್ಲಿ "ಕತೆ ಪಿರಿದಾಪೊಡಂ ಕತೆಯ ಮೆಯ್ಗಿಡಲೀಯದೆ ಮುಂ ಸಮಸ್ತ ಭಾ। ರತಮನಪೂರ್ವಮಾಗೆ ಸಲೆ ಪೇೞ್ದ ಕವೀಶ್ವರರಿಲ್ಲ" ಎಂದಿರುವುದನ್ನು ಲಕ್ಷಿಸಿ, "ಪಂಪನಿಗಿಂತ ಮುಂಚೆ ಬೇರೆ ಬಗೆಯಲ್ಲಿ ಬರೆದ ಕನ್ನಡ ಭಾರತಗಳಿರಬಹುದೆಂಬ ಊಹೆಗೆ ಎಡೆ ದೊರೆಯುತ್ತದೆ" ಎನ್ನಲಾಗಿದೆ.[104] 'ಸಮಸ್ತ' ಎಂಬ ಶಬ್ದ 'ಸಮಗ್ರ' ಅಥವಾ 'ಸಮಾಸೀಕೃತ' ಈ ಯಾವುದೇ ಅರ್ಥವನ್ನು ಕೊಡಲಿ ಹಿಂದೆ ಭಾರತವೋ ಅದರ ಆಖ್ಯಾನಭಾಗಗಳೋ ರಚಿತವಾಗಿದ್ದುದರ ಸಾಧ್ಯತೆಯನ್ನು ಪಂಪನ ಮಾತು ಕೊಂಚ ಮಟ್ಟಿಗೆ ಸೂಚಿಸುವಂತೆ ತೋರುತ್ತದೆ. 'ಕವಿರಾಜಮಾರ್ಗ'ದ ಕಾಲದಲ್ಲಿ ಅಥವಾ ಅದರ ಮೊದಲು ಅಂಥ ಗ್ರಂಥಗಳು ಹುಟ್ಟಿರಬಹುದು, ೧ನೆಯ ಗುಣವರ್ಮನ 'ಹರಿವಂಶ' ಕೂಡ ಒಂದು ಬಗೆಯಲ್ಲಿ ಭಾರತವೇ ಆದ್ದರಿಂದ ಅದೂ ಪಂಪನ ಲಕ್ಷ್ಯದಲ್ಲಿರಬಹುದು ಎಂಬ ಸೂಚನೆ ಕೂಡ ಈಗಾಗಲೇ ಬಂದಿದೆ.[105] ಆದರೆ ಮೇಲಿನ ಉದ್ಧೃತಿ ಭಾರತೇತರ ಗ್ರಂಥರಚನೆಯ ಸಾಧ್ಯತೆಯನ್ನೂ ಸೂಚಿಸಬಲ್ಲದ್ದಾಗಿರುವುದರಿಂದ, ಈ ವಿಷಯದಲ್ಲಿ ಹೀಗೇ ಎಂದು ಧೈರ್ಯವಾಗಿ ಏನೂ ಹೇಳುವಂತಿಲ್ಲ.

ಪಂಪಭಾರತದಲ್ಲೇ ಬರುವ ಇನ್ನೊಂದು ಮಾತು ಹೆಚ್ಚು ಸ್ಪಷ್ಟವಾದ್ದು. "ಮುನ್ನಿನ

ಕಬ್ಬಮನೆಲ್ಲಮಿಕ್ಕಿ ಮೆಟ್ಟಿದುವು ಸಮಸ್ತಭಾರತಮುಮಾದಿಪುರಾಣಮಹಾಪ್ರಬಂಧಮುಂ" —ಎಂಬ ಆ ಮಾತು (೧೪-೫೯) ಪಂಪನಿಗೆ ಹಿಂದೆ ಕನ್ನಡದಲ್ಲಿ ಕಾವ್ಯಸಾಹಿತ್ಯವಿದ್ದು ದನ್ನು ನಿಸ್ಸಂದಿಗ್ಧವಾಗಿ ಹೇಳುತ್ತದೆ. ಆರ್. ನರಸಿಂಹಾಚಾರ್, ಟಿ. ಎಸ್. ವೆಂಕಣ್ಣಯ್ಯ, ಮುಳಿಯ ತಿಮ್ಮಪ್ಪಯ್ಯ, ತೀ.ನಂ. ಶ್ರೀಕಂಠಯ್ಯ, ರಂ. ಶ್ರೀ. ಮುಗಳಿ ಮೊದಲಾದವರು ಈಯಂಶವನ್ನು ಗಮನಿಸಿದ್ದಾರೆ, ಉಲ್ಲೇಖಿಸಿದ್ದಾರೆ. ಪಂಪನಿಗೆ ಹಿಂದೆ ಗುಣನಂದಿ, ಗುಣ ವರ್ಮ (I), ಅಸಗ ಇವರು ಇದ್ದರೆಂಬುದು ಈಗ ವಿದಿತವಾಗಿದೆ. ಕವಿರಾಜಮಾರ್ಗೋ ಕ್ತರೂ ಪೂರ್ವಕಾಲಿಕರೂ ಪಂಪನ ಅಭಿಮಾನದ ಉಕ್ತಿಯಲ್ಲಿ ವಿವಕ್ಷಿತರಾಗಿರಬಹುದು.

(ii) ನಾಗಚಂದ್ರನ (ಸು. ೧೧೪೦) 'ರಾಮಚಂದ್ರಚರಿತಪುರಾಣ'ದ ಪೀಠಿಕಾಭಾಗ ದಲ್ಲಿ "ಉಪದೇಶಂಗೆಯ್ದು ಕಾವ್ಯಚ್ಛಲದಿನಖಿಲಧರ್ಮಂಗಳಂ....ಪರಮಪುರಾಣಗಳಂ ಪೇೞ್ದು ಕಲ್ಪಾಂತಪರೀತ ಖ್ಯಾತಿಯಂ ತಾಳ್ದಿದ ಪರಮಕವಿಜ್ಯೇಷ್ಠರಾದರ್" (೧-೨೪) ಎಂಬ ಪ್ರಸ್ತಾಪವಿದೆ. ಈ ಮಾತು ಸಂಸ್ಕೃತ ಕನ್ನಡ ಜೈನಪುರಾಣಗಳನ್ನು ರಚಿಸಿದ ಪ್ರಾಚೀನರನ್ನು ಕುರಿತಿದೆಯೆಂಬುದು ಸ್ಪಷ್ಟ. ಕನ್ನಡದ ಮಟ್ಟಿಗೆ ಕವಿರತ್ನತ್ರಯರೂ ಆ ಪೂರ್ವದವರೂ ನಾಗಚಂದ್ರನ ಗಮನದಲ್ಲಿರಬಹುದು. ಆದರೆ ಈ ಸಾಧಾರಣೋಕ್ತಿ ಯಿಂದ ಹಳಮೆಯ ಹರಹನ್ನು ಊಹಿಸುವುದು ಸಾಧ್ಯವಿಲ್ಲ.

(iii) ನಾಗವರ್ಮನು (ಸು. ೧೧೪೫/೧೦೪೨) 'ವರ್ಧಮಾನಪುರಾಣ'ದಲ್ಲಿ ಕವಿರತ್ನ ತ್ರಯರನ್ನೂ ಅವರ ಕೃತಿಗಳನ್ನೂ ಅಲ್ಲದೆ, ಶ್ರೀವಿಜಯನು 'ರಘುವಂಶ ಮಹಾಪುರಾಣ' ವನ್ನೂ ಗುಣವರ್ಮನು 'ಹರಿವಂಶ'ವನ್ನೂ ನಾಗವರ್ಮನು 'ವತ್ಸರಾಜ ಚರಿತೆ'ಯನ್ನೂ ನಾಗದೇವನು 'ಸುಲೋಚನಾಚರಿತ'ವನ್ನೂ ರಚಿಸಿದ್ದರೆಂಬುದಾಗಿ ಉಲ್ಲೇಖಿಸಿದ್ದಾನೆ. ಈ ಭಾಗದಲ್ಲಿ ಪೂರ್ವಕವಿಗಳ ಉಲ್ಲೇಖ ಅವರ ಜೀವಿತಾವಧಿಯ ಆನುಪೂರ್ವಿಗೆ ಹೊಂದಿಬರುವಂತೆ ತೋರುತ್ತದೆ. ಕವಿರಾಜಮಾರ್ಗೋಕ್ತನೋ ಕೆಲವರು ಭಾವಿಸುವಂತೆ ಕವಿರಾಜಮಾರ್ಗಕರ್ತೃವೋ ಆಗಿರುವ ಶ್ರೀವಿಜಯನೂ ನಾಗವರ್ಮೋಕ್ತ ಶ್ರೀವಿಜಯನೂ ಅಭಿನ್ನರಾಗಿದ್ದ ಪಕ್ಷದಲ್ಲಿ ಸಾಹಿತ್ಯದ ಪ್ರಾಚೀನತೆಗೆ ಈ ಶೋಧದಿಂದ ಹೆಚ್ಚು ಸಹಾಯ ವಾಗದು; ಅನ್ಯಾನ್ಯರಾಗಿದ್ದ ಪಕ್ಷದಲ್ಲಿ ಅದು ವಿಚಾರಣೀಯವಾದೊಂದು ಸಾಕ್ಷ್ಯವಾಗ ಬಹುದು. ಇನ್ನು 'ವತ್ಸರಾಜ ಚರಿತ' 'ಸುಲೋಚನಾಚರಿತ'ಗಳ ಕವಿಗಳು ಕಾಲಾನು ಪೂರ್ವಿಯನ್ನು ಹಿಡಿದು ಉಲ್ಲೇಖಗೊಂಡಿರಬಹುದಾದವರಲ್ಲವಾದರೆ ಅವರು ಇಮ್ಮಡಿ ನಾಗವರ್ಮನಿಗೆ ಹಿಂದೆ ಯಾವಾಗಲೋ ಇದ್ದರೆಂದಾಗಿ, ಅದು ಪ್ರಾಚೀನತೆಯ ದೃಷ್ಟಿ ಯಿಂದ ವಿಚಾರಣೀಯ ಸಾಕ್ಷ್ಯವಾಗಬಹುದು.

(೨) ಲಕ್ಷಣ ಮತ್ತು ಸಂಕಲನ ಗ್ರಂಥಗಳು: (೧) ಹಿಂದೆಯೇ ಗಮನಿಸಿದ 'ಕವಿ ರಾಜಮಾರ್ಗ'ದ ಅನಂತರದಲ್ಲಿ ಗಮನಿಸಬೇಕಾದ್ದು ಇಮ್ಮಡಿ ನಾಗವರ್ಮನದೇ ಆದ 'ಕಾವ್ಯಾವಲೋಕನ.' ಇಲ್ಲಿ "ವಿಕ್ರಮವಹ್ನಿ ಮುನ್ನಳುರ್ದುಕೊಂಡುದು ತನ್ಮನಿಯಂ ಗಡಶ್ವಮೇಧಕ್ರತು ಧೂಮವಾದುದು ಗಡಂ....ವಿಕ್ರಮಯಜ್ಞವಿಧಾನಮುಂ ಧರಾಚಕ್ರಮೆ ಮೆಚ್ಚಿ ಬಣ್ಣಿಸೆ ಜಸಂಬಡೆದಂ ಪೊಲಕೇಶಿವಲ್ಲಭಂ" (ಪ. ೪೮೮) ಎಂಬೊಂದು ಪದ್ಯ

ವಿದೆ. ಇದು ದಲ್‌ಮೊದಲಾದ ಅವ್ಯಯಗಳ ಪ್ರಯೋಗೌಚಿತ್ಯವನ್ನು ನಿದರ್ಶಿಸುವುದಕ್ಕೆ ಬಂದಿರುವ ಲಕ್ಷ್ಯಪದ್ಯ. ಇದೊಂದು ಉತ್ಪಲಮಾಲಾವೃತ್ತ. ಈ ವೃತ್ತ ಈಗ ತಿಳಿದಿರುವ ಯಾವುದೇ ಶಾಸನದಲ್ಲಾಗಲಿ ಕಾವ್ಯದಲ್ಲಾಗಲಿ ಆಗಿರುವಂತೆ ತೋರುವುದಿಲ್ಲ. ಈ ಅಂಶವನ್ನು ಗಮನಕ್ಕೆ ತೆಗೆದುಕೊಂಡು ಗೋವಿಂದ ಪೈ ಅವರು ಬಾದಾಮಿ ಚಾಲುಕ್ಯರ ೧ನೆಯ ಪುಲಕೇಶಿಯ ಕಾಲದಿಂದ ಇಮ್ಮಡಿ ಕೀರ್ತಿವರ್ಮನ ಕಾಲದವರೆಗೆ ವ್ಯಾಪ್ತಿಯಿರುವ ಯಾವುದೋ ಒಂದು ಅವಧಿಯಲ್ಲಿ ರಚಿತವಾದ ಕನ್ನಡ ಕಾವ್ಯವೊಂದರಿಂದ ಆ ಪದ್ಯವನ್ನು ಆಯ್ದಿರಬೇಕು ಎಂಬುದಾಗಿ ಊಹಿಸಿದ್ದಾರೆ. ಐಹೊಳೆ ಶಾಸನ (ಪ. ೮) 'ಸಾಹಸಭೀಮವಿಜಯ' (೧–೭), ಮಹಾಕೂಟಸ್ತಂಭಶಾಸನ (೬೦೨) ಇವುಗಳಲ್ಲಿ ಅಶ್ವಮೇಧಯಾಗ ಮಾಡಿದವನೆಂಬುದಾಗಿ ವರ್ಣಿತನಾಗಿರುವ ೧ನೆಯ ಪುಲಕೇಶಿಯೇ ಪೂರ್ವೋಕ್ತ ಪದ್ಯದಲ್ಲಿ ಕೀರ್ತಿತನಾದವನೆಂದು ಅವರ ಗ್ರಹಿಕೆ. ಈ ಗ್ರಹಿಕೆಯಿಂದಾಗಿ ಅವರು "ಇಷ್ಟು ಮೇಲಾದ ಪದ್ಯವು ಕ್ರಿ.ಶ. ೭ನೆಯ ಅಥವಾ ೮ನೆಯ ಶತಮಾನದೊಳಗಣ ಕನ್ನಡ ಕಾವ್ಯದಲ್ಲಿರಬೇಕಾದರೆ, ಅದಕ್ಕೆ ಕೆಲವು ಶತಕಗಳ ಮುಂಚಿನಿಂದಲೇ ಉತ್ತಮವಾದ ಕನ್ನಡ ಸಾಹಿತ್ಯವೂ ಇದ್ದಿರಬೇಕು" ಎಂದೂ ಇಮ್ಮಡಿ ಪುಲಕೇಶಿಯ ವಿಜಯವರ್ಣನೆಯಿರುವ ೬೩೪ರ ಐಹೊಳೆ ಶಾಸನದ ಕವಿ ರವಿಕೀರ್ತಿಯೇ ಆ ಪದ್ಯವನ್ನು ರಚಿಸಿರಬಹುದು ಎಂದೂ ಊಹಿಸಿದ್ದಾರೆ. ಐಹೊಳೆ ಶಾಸನದಲ್ಲಿ ಸಂಸ್ಕೃತದಲ್ಲಿ ಪ್ರಯೋಗಿಸಲ್ಪಡದ, ಆ ಮಾರ್ಗದ ಮತ್ತೇಭವಿಕ್ರೀಡಿತ ಮತ್ತು ಸ್ಕಂಧಕ(ಕಂದ)ಗಳೆಂಬ ಪದ್ಯಜಾತಿಗಳಿರುವುದರಿಂದ ಶಾಸನಕರ್ತೃ ರವಿಕೀರ್ತಿ ಸ್ವಯಂ ಕನ್ನಡ ಕವಿಯೂ ಆಗಿದ್ದು ಕನ್ನಡದಲ್ಲಿ ತನಗಿರುವ ಅಭ್ಯಾಸಬಲದಿಂದ ಅವನ್ನು ಅಲ್ಲಿ ಬಳಸಿರುವುದಾಗಿ ಮೊದಲು ಹೇಳಿ, ಅನಂತರ ರವಿಕೀರ್ತಿಗಿಂತ ತಕ್ಕಷ್ಟು ಹಿಂದಿನಿಂದಲೇ ಕನ್ನಡದಲ್ಲಿ ಸಂಸ್ಕೃತ ಛಂದೋಬದ್ಧವಾದ ಕಾವ್ಯ ಸಾಹಿತ್ಯವಿದ್ದಿರಬೇಕೆಂದೂ ಪ್ರಾಯಶಃ ಆತನೇ 'ಕಾವ್ಯಾವಲೋಕನ'ದ ಪೂರ್ವೋಕ್ತ ಪದ್ಯವನ್ನೊಳಕೊಂಡ ಕಾವ್ಯವನ್ನು ರಚಿಸಿರಬಹುದೆಂದೂ ತಮ್ಮ ಊಹೆಯನ್ನು ವಿವರಿಸಿದ್ದಾರೆ.[107] ಆದರೆ ಪೈ ಅವರು ಆ ಪದ್ಯದ ಆಕರ, ಕಾಲ, ಕರ್ತೃತ್ವಗಳ ವಿಚಾರವಾಗಿ ಮಾಡಿರುವ ಊಹೆಗಳಿಗೆ ಸರಿಯಾದ ಆಧಾರಗಳಿಲ್ಲ. ಅಲ್ಲದೆ ಪದ್ಯದ ಭಾಷೆ ೭ನೆಯ ಶತಮಾನದ ಅವಧಿಯ ಪ್ರಾಚೀನ ಕನ್ನಡ ಭಾಷೆಯ ಶಾಸನಗಳಲ್ಲಿ ಕಂಡುಬರುವ ಪೂರ್ವದ ಹಳಗನ್ನಡದ ಯಾವ ಪ್ರತ್ಯೇಕ ಲಕ್ಷಣವನ್ನೂ ಒಳಕೊಂಡಿಲ್ಲವೆಂಬುದು ಗಮನಿಸತಕ್ಕದ್ದಾಗಿದೆ. ಆದ್ದರಿಂದ ಪ್ರಾಚೀನತೆಯ ಶೋಧದಲ್ಲಿ ಈ ಪದ್ಯ ಒಂದು ನಿಶ್ಚಿತ ಸಾಕ್ಷ್ಯವಾಗಲಾರದು ಎಂದೂ ಅದು 'ಕಾವ್ಯಾವಲೋಕನ' ರಚನಾಕಾಲದಿಂದೊಳಗೆ ೬ನೆಯ ಶತಮಾನದಿಂದೀಚೆಗೆ ಬರೆಯಲಾದ ಯಾವುದೋ ಒಂದು ಕಾವ್ಯದೊಳಗಿನದು ಎಂದೂ ಹೇಳಬೇಕಾಗಿದೆ.

'ಕಾವ್ಯಾವಲೋಕನ'ದಲ್ಲಿಯೇ ನಾಗವರ್ಮ, ಗುಣವರ್ಮ ಮತ್ತು ಶಂಖವರ್ಮರೆಂಬ ಮೂವರು ಮಾರ್ಗವಿದರ ಹೆಸರುಗಳನ್ನು ಹೇಳಿದ್ದು (ಪ. ೧೮೫), ಇವರಲ್ಲಿ 'ಶೂದ್ರಕ'ದ ಕರ್ತೃವಿರಬಹುದಾದ ಗುಣವರ್ಮನನ್ನು ಹೊರತುಪಡಿಸಿದರೆ ಉಳಿದಿಬ್ಬರು ಯಾರು,

ಯಾವ ಕಾಲಕ್ಕೆ ಸೇರಿದವರೆಂಬುದು ಗೊತ್ತಾಗಬೇಕಾಗಿದೆ. ನಾಗವರ್ಮನು 'ಛಂದೋಂಬುಧಿ'ಯ ಕರ್ತೃವೋ 'ವತ್ಸರಾಜಚರಿತೆ'ಯ ಕರ್ತೃವೋ ನಿಶ್ಚಿತವಾಗಿ ತಿಳಿಯದು. ಪದ್ಯ ೫೪೭೭ರಲ್ಲಿ ಉಕ್ತನಾದ ನಾಗವರ್ಮನ ವಿಚಾರವೂ ಸಂದಿಗ್ಧವಾದ್ದು. 'ವರ್ಧಮಾನ ಪುರಾಣ'ದ ರಚನಾಕಾಲ ೧೧೧೫ನೆಯ ಶತಮಾನದ ಪೂರ್ವಾರ್ಧವೆಂದು ಈಚೆಗೆ ತಿಳಿದಿರುವುದರಿಂದ ಶಂಖವರ್ಮನ ವಿಚಾರದಲ್ಲಿ ಆರ್. ನರಸಿಂಹಾಚಾರ್ಯರ ಸಮೀಕರಣ ಸರಿಯಿರಲಾರದು[೧೦೮]; ದಿಟವಾಗಿ ಆತ ಯಾರು, ಯಾವ ಕಾಲಕ್ಕೆ ಸೇರಿದವನು ಎಂಬುದನ್ನು ಹೇಳುವಂತಿಲ್ಲ.

'ಕವಿರಾಜಮಾರ್ಗ' 'ಕಾವ್ಯಾವಲೋಕನ'ಗಳಲ್ಲದೆ 'ಭಾಷಾಭೂಷಣ' 'ಶಬ್ದಾನುಶಾಸನ'ಗಳೆಂಬ ಸಂಸ್ಕೃತ ಭಾಷೆಯ ಕನ್ನಡ ವ್ಯಾಕರಣ ಗ್ರಂಥಗಳೂ ಕನ್ನಡ ಭಾಷೆಯಲ್ಲಿಯೇ ಇರುವ 'ಶಬ್ದಮಣಿದರ್ಪಣ'ವೆಂಬ ಪ್ರಸಿದ್ಧ ಹಳಗನ್ನಡ ವ್ಯಾಕರಣಗ್ರಂಥವೂ ಮಲ್ಲಿಕಾರ್ಜುನನ 'ಸೂಕ್ತಿಸುಧಾರ್ಣವ', ಮಲ್ಲಕವಿಯ (?) 'ಕಾವ್ಯಸಾರ', ಅಭಿನವ ವಾದಿವಿದ್ಯಾನಂದನ 'ಕಾವ್ಯಸಾರ' ಈ ಕೆಲವು ಸಂಕಲನ ಗ್ರಂಥಗಳೂ 'ವಡ್ಡಾರಾಧನೆ'ಯಂಥ ಪ್ರಾಚೀನ ಕಥಾಸಂಕಲನವೂ ತತ್ತತ್ಪೂರ್ವದ ಕನ್ನಡ ಗ್ರಂಥಗಳಿಂದ ಆಯ್ದ ಹಲವು ಪದ್ಯಗಳನ್ನೂ ಪದ್ಯಭಾಗಗಳನ್ನೂ ತಂತಮ್ಮ ಉದ್ದೇಶಗಳಿಗೆ ಅನುಗುಣವಾಗಿ ಒಳಕೊಂಡಿರುವುದು ಕಂಡುಬರುತ್ತದೆ. ಪೂರ್ವಕವಿಸ್ಮರಣೆಯ ಮೂಲಕ ಕವಿಗಳ ಹೆಸರುಗಳು ಮಾತ್ರ ಗೊತ್ತಾಗಿ ಕೃತಿಗಳೇನೂ ದೊರೆಯದಿರುವ, ಎರಡೂ ಗೊತ್ತಾದರೂ ಕೃತಿಗಳು ಈಗ ಸಿಕ್ಕದಿರುವ ಅನೇಕ ಕವಿಗಳ ಒಂದೋ ಹಲವೋ ಗ್ರಂಥಗಳಿಂದೆತ್ತಿಕೊಂಡವು ಆ ಪದ್ಯಗಳು ಅಥವಾ ಪದ್ಯಭಾಗಗಳು. ಕವಿಯೂ ಕೃತಿಯೂ ಎರಡೂ ತಿಳಿಯದ ಅಜ್ಞಾತವಾದ ಆಕರಗಳ ಉದ್ಧೃತಿಗಳೂ ವಿಪುಲವಾಗಿವೆ. ಅಸಗ, ಗಜಾಂಕುಶ, ಶ್ರೀವಿಜಯ, ಗುಣನಂದಿ, ಮನಸಿಜ, ಚಂದ್ರಭಟ್ಟ, ಹರಿಪಾಲ, ಹಂಸರಾಜ, ಸುಮನೋಬಾಣ ಹೀಗೆ ಹಲವಾರು ಪ್ರಾಚೀನ ಕನ್ನಡ ಕವಿಗಳಿದ್ದು, ಇವರಲ್ಲಿ ಹಲವರ ಕೃತಿಸಂಬಂಧವಾದ ವಿವರಗಳು ತಿಳಿಯವು. ಹೀಗೆಯೇ 'ವತ್ಸರಾಜಚರಿತೆ', 'ಸುಲೋಚನಾಚರಿತೆ', 'ಚೂಡಾಮಣಿ', 'ಕರ್ಣಾಟ ಕುಮಾರಸಂಭವ', 'ಕರ್ಣಾಟೇಶ್ವರಕಥಾ', 'ಕರ್ಣಾಟ ಮಾಲತೀಮಾಧವ', 'ರಘುವಂಶಮಹಾಪುರಾಣ' ಈ ಕೆಲವು ಕೃತಿಗಳ ಹೆಸರುಗಳು, ಕೆಲವಕ್ಕೆ ಕರ್ತೃಗಳ ಹೆಸರುಗಳು ಕೂಡ, ತಿಳಿದಿದ್ದರೂ ಕೃತಿಗಳಾವುವೂ ಇಂದು ದೊರೆಯುವುದಿಲ್ಲ. ಅಜ್ಞಾತಕಾಲಕರ್ತೃಕಗಳಾದ, ಸ್ಮರಣಯೋಗ್ಯವಾದ ಹಲವು ಸೂಕ್ತಿಗಳ ಆಕರಗಳ ವಿಷಯವಾದರೂ ಇಷ್ಟೇ. ಕಾಲಗತಿಯಲ್ಲಿ ಇಂಥ ಪರಿಸ್ಥಿತಿ ಸಹಜವಾಗಿ ಘಟಿಸುತ್ತದೆಂಬುದನ್ನು ಗಮನಿಸುತ್ತ, ತೀ. ನಂ. ಶ್ರೀಕಂಠಯ್ಯನವರು ತಮ್ಮ ಒಂದು ಉಪನ್ಯಾಸದಲ್ಲಿ "ಆದಿಕವಿಯೆನ್ನಿಸಿಕೊಂಡಿರುವ ಪಂಪನಿಗೆ ಮುಂಚೆ ಅನೇಕ ಕೃತಿಗಳು ರಚಿತವಾಗಿರಬಹುದೆಂದೂ, ಆದರೆ ಆನೆಯ ಹಿಂಡಿನಂತೆ ಸಾಗಿಹೋದ ಕೃತಿಗಳ ನೆನಪಿಗಾಗಿ ಅಲ್ಲಲ್ಲಿ ಕೆಲವು ಸೂಚನೆಗಳು ಮಾತ್ರ ಕಾಣುತ್ತಿವೆಯೆಂದೂ", "ಒಳ್ಳೆಯದೆಲ್ಲ ಉಳಿದೇ ತೀರುವುದೆಂಬ ನೆಚ್ಚಿಕೆ ಇಲ್ಲ, ಪ್ಲೇಗು ತಗುಲಿದಾಗ ಅಶಕ್ತರು ಮಾತ್ರವೇ

ಸಾಯುವುದಿಲ್ಲ ಶಕ್ತರೂ ಪಿಡುಗಿಗೆ ತುತ್ತಾಗುತ್ತಾರೆ, ಈ ಮಾತು ಕಾವ್ಯಲೋಕಕ್ಕೂ ಅನ್ವಯಿಸುತ್ತದೆ" ಎಂದೂ ತಿಳಿಸಿದರೆಂಬುದಾಗಿ ವರದಿಯಾಗಿದೆ.[109]

ಕನ್ನಡ ಕವಿಗಳು ಸಾಮಾನ್ಯವಾಗಿ ಪೂರ್ವಕವಿಗಳ ಹೆಸರುಗಳನ್ನು ಉಲ್ಲೇಖಿಸುವಾಗ ಕಾಲಾನುಕ್ರಮವನ್ನು ಅನುಸರಿಸುವುದಿಲ್ಲ. ಆದ್ದರಿಂದ ಬೇರೆ ಆಧಾರಗಳು ಸರಿಯಾಗಿ ಒದಗದಿರುವೆಡೆಗಳಲ್ಲಿ ಈ ನಾಮಾವಶೇಷರಾದ ಅಥವಾ ಕೃತಿನಾಮಾವಶೇಷರಾದ ಕವಿಗಳ ಕಾಲವನ್ನೂ ಆನುಪೂರ್ವಿಯನ್ನೂ ಗೊತ್ತುಮಾಡುವುದು ಅಶಕ್ಯವೆನ್ನಬಹುದು. ಇಂಥ ಸಂದರ್ಭವಿರುವಾಗ, ನಮ್ಮ ಪ್ರಾಚೀನರೂ ಅರ್ವಾಚೀನರೂ ಸ್ಮರಿಸುವ ಕೆಲವು ಕವಿಗಳಲ್ಲಿ ಒಬ್ಬರಿಬ್ಬರಾದರೂ ಕೃತಿಗಳಲ್ಲಿ ಒಂದೆರಡಾದರೂ 'ಕವಿರಾಜಮಾರ್ಗ' ಕಾಲಕ್ಕೆ ಹಿಂದಿನ ಅವಧಿಗೆ ಸೇರಿರಬಹುದಾಗಿ ಅನುಮಾನಿಸಲು ಎಡೆದೊರೆಯುತ್ತದೆ. ಆದರೆ ಈ ವಿಷಯದಲ್ಲಿ ಹೀಗೆಯೇ ಸರಿ ಎನ್ನುವಂತಿಲ್ಲ.

ಕನ್ನಡ ಭಾಷೆಯ ಕಾವ್ಯಗಳು, ಪುರಾಣಗಳು ಮತ್ತು ಇತರ ಗ್ರಂಥಗಳು ಈಗ ಎಷ್ಟು ಸಂಖ್ಯೆಯಲ್ಲಿ ದೊರೆತಿವೆಯೋ ಸರಿಸುಮಾರು ಅಷ್ಟೇ ಸಂಖ್ಯೆಯವು ನಷ್ಟವಾಗಿರಬಹುದು ಅಥವಾ ಇನ್ನೂ ಬೆಳಕಿಗೆ ಬರದೆ ಇರಬಹುದು–ಎನ್ನುವುದು ಕೆಲವರು ವಿದ್ವಾಂಸರ ಎಣಿಕೆಯಾಗಿದೆ. ಈ ನಷ್ಟವಾಗಿರುವ ಅಥವಾ ಅಜ್ಞಾತವಾಗಿರುವ ಗ್ರಂಥರಾಶಿಯು ಕಾಲಮಾನದ ದೃಷ್ಟಿಯಿಂದ ಪ್ರಾಚೀನವೂ ಇರಬಹುದು, ಅರ್ವಾಚೀನವೂ ಇರಬಹುದು. ಪ್ರಾಚೀನ ಅವಧಿಗೆ ಸೇರಿದ್ದು ಎಷ್ಟು ನಷ್ಟವಾಗಿದೆ ಅಥವಾ ಅಜ್ಞಾತವಾಗಿದೆ ಎಂಬುದು ಸರಿಯಾಗಿ ಗೊತ್ತಾಗುವುದಾದರೆ, ಕನ್ನಡ ಸಾಹಿತ್ಯದ ಉದಯ ಮತ್ತು ಆರಂಭಕಾಲಗಳ ಬಗೆಗೆ ಹೊಸ ದಿಗಂತಗಳು ತೋರಬಹುದು. ಆದರೆ ಈವರೆಗೆ ಅಂಥ ಪ್ರಯತ್ನಗಳು ವಿಶೇಷವಾಗಿ ಸಫಲವಾಗಿಲ್ಲ. ಸು. ೭ನೆಯ ಶತಮಾನಕ್ಕೆ ಸೇರಿದ್ದೆಂದು ಮೊದಲು ತಿಳಿಯಲಾಗಿದ್ದ ತುಂಬುಲೂರಾಚಾರ್ಯಕೃತ 'ಚೂಡಾಮಣಿ'ಯೆಂಬ ಹೆಸರಿನ ಕನ್ನಡ ವ್ಯಾಖ್ಯಾನಗ್ರಂಥವನ್ನು ಹೇಗಾದರೂ ಮಾಡಿ ಹುಡುಕಿ ತೆಗೆಯಬೇಕೆಂದು ಈ ಶತಮಾನದ ಆದಿಭಾಗದಲ್ಲಿ ಅಂದಿನ ಮೈಸೂರು ಸರ್ಕಾರದ ಪುರಾತತ್ತ್ವ ಇಲಾಖೆ ನಡಸಿದ ಪ್ರಯತ್ನಗಳನ್ನಿಲ್ಲಿ ನೆನೆಯಬಹುದು.[110]

ಈಗ ದೊರೆತು ಪ್ರಸಿದ್ಧವಾಗಿರುವ ಲಕ್ಷಣ ಮತ್ತು ಸಂಕಲನ ಗ್ರಂಥಗಳಲ್ಲಿ ಆಕರಗಳನ್ನು ಗುರುತಿಸಲು ಸಾಧ್ಯವಾಗದೆ ಉಳಿದುಕೊಂಡಿರುವ ಹಲವಾರು ಕಂದವೃತ್ತಗಳುಂಟು. ಚರಿತ್ರೆ, ಪೌರಾಣಿಕತೆ, ಭಾಷೆ ಶೈಲಿಗಳ ಆಧಾರದಿಂದ ಇವನ್ನು ವಿಂಗಡಿಸಿ, ಕ್ರೋಡೀಕರಿಸಿ ಅವು ಯಾವ ಕಾಲಕ್ಕೆ ಸೇರಿದ್ದಿರಬಹುದು, ಯಾವ ಕವಿಯ ಅಥವಾ ಕೃತಿಯ ರಚನೆಯಾಗಿರಬಹುದು–ಎಂಬುದನ್ನು ಗುರುತಿಸುವ ಪ್ರಯತ್ನ ಈಗಾಗಲೇ ಕೆಲಮಟ್ಟಿಗೆ ನಡೆದಿದೆ. ಕವಿ, ಕೃತಿ ಅಥವಾ ಆ ಕಾಲವನ್ನು ಕೆಲಮಟ್ಟಿಗಾದರೂ ಗುರುತಿಸುವ ಯಾವುದೇ ರೀತಿಯ ಸಾಕ್ಷ್ಯಗಳು ಆಯಾ ಪದ್ಯ ಅಥವಾ ಪದ್ಯಭಾಗದಲ್ಲಿ ಕಾಣಬರದೆ ಇದ್ದಾಗ, ಕೇವಲ ವರ್ಣನಾಂಶಗಳು, ನೈತಿಕ ತಾತ್ತ್ವಿಕಾಂಶಗಳು ಇವೇ ಅವುಗಳ ಆಶಯಗಳಾಗಿದ್ದಾಗ ಉದ್ಧೃತ ಸಾಹಿತ್ಯಭಾಗ ಯಾವ ಅವಧಿಯದು ಎಂದು ಗೊತ್ತು

ಮಾಡುವುದು ಕಷ್ಟ; ಆದರೆ ಪ್ರಾಚೀನವಾಗಿರುವುದರ ಸಂಭಾವ್ಯತೆಯಿದ್ದೇ ಇರುತ್ತದೆ.

(೩) ಕೆಲವು ಸಂಸ್ಕೃತ ಗ್ರಂಥಗಳು: (ಅ) ಇಂದ್ರನಂದಿಯ 'ಶ್ರುತಾವತಾರ'ದ ಸಾಕ್ಷ್ಯ: ಇಂದ್ರನಂದಿ ಜೈನಾಚಾರ್ಯನು 'ಶ್ರುತಾವತಾರ'ವೆಂಬ ಗ್ರಂಥದಲ್ಲಿ ಜೈನಧರ್ಮದ ಪ್ರಸಿದ್ಧ ಧಾರ್ಮಿಕ ಗ್ರಂಥವಾದ 'ಷಟ್ಖಂಡಾಗಮ'ದ ಮೇಲೆ ಹುಟ್ಟಿದ ವ್ಯಾಖ್ಯಾನಗಳ ಬಗೆಗೆ ಹೇಳುತ್ತ, ಶ್ಯಾಮಕುಂದಾಚಾರ್ಯನೆಂಬ ಒಬ್ಬ ಜೈನಕವಿ ಪ್ರಾಕೃತ ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ 'ಪದ್ಧತಿ'ಗಳನ್ನು ರಚಿಸಿದನೆಂಬುದಾಗಿ ಹೇಳಿದ್ದಾನೆ. ಸಂಬಂಧಪಟ್ಟ ಭಾಗ ಹೀಗಿದೆ:[111]

ಕಾಲೇ ತತಃ ಕಿಯತ್ಯಪಿ ಗತೇ ಪುನಃ ಶ್ಯಾಮಕುಣ್ಡ ಸಂಜ್ಞೇನ
ಆಚಾರ್ಯೇಣ ಜ್ಞಾತ್ವಾ ದ್ವಿಭೇದಮಪ್ಯಾಗಮಃ ಕಾತ್ಸ್ನ್ಯಾತ್ ‖ ೧೬೨
ದ್ವಾದಶಗುಣಿತ ಸಹಸ್ರಗ್ರಂಥಂ ಸಿದ್ಧಾನ್ತಯೋರುಭಯೋಃ
ಷಷ್ಠೇನ ವಿನಾ ಖಂಡೇನ ಪೃಥು ಮಹಾಬನ್ಧ ಸಂಜ್ಞೇನ ‖ ೧೬೩
ಪ್ರಾಕೃತ ಸಂಸ್ಕೃತ ಕರ್ಣಾಟ ಭಾಷಯಾ ಪದ್ಧತಿಃ ಪರಾ ರಚಿತಾ
ತಸ್ಮಾದಾರಾತ್ಪುನರಪಿ ಕಾಲೇ ಗತವತಿ ಕಿಯತ್ಯಪಿ ಚ ‖ ೧೬೪

ಪದ್ಮನಂದಿಯೆಂದು ಕೂಡ ಹೆಸರುಳ್ಳ ಕುಂದಕುಂದಾಚಾರ್ಯನ ತರುವಾಯದಲ್ಲಿ ಕರ್ಮ ಪ್ರಕೃತಿ ಪ್ರಾಭೃತ ಮತ್ತು ಕಷಾಯಪ್ರಾಭೃತಗಳೆಂಬ ಆಗಮದ್ವಯಗಳನ್ನು ಚೆನ್ನಾಗಿ ತಿಳಿದವನಾದ ಶ್ಯಾಮಕುಂದನು ಷಟ್ಖಂಡಾಗಮದಲ್ಲಿ ಮಹಾಬಂಧವೆಂಬ ಆರನೆಯ ಖಂಡವನ್ನು ಬಿಟ್ಟು ಉಳಿದ ಐದು ಖಂಡಗಳಿಗೂ ಕಷಾಯಪ್ರಾಭೃತಕ್ಕೂ ೧೨೦೦೦ ಶ್ಲೋಕಪ್ರಮಾಣದ ಪ್ರಾಕೃತ, ಸಂಸ್ಕೃತ ಮತ್ತು ಕನ್ನಡ ಭಾಷೆಯಲ್ಲಿ ಪದ್ಧತಿಯನ್ನು (=ವೃತ್ತಿ ಸೂತ್ರಗಳ ವಿಷಮಪದಗಳ ವಿವರಣೆ) ರಚಿಸಿದನೆಂಬುದಾಗಿ ಮೇಲಿನ ಹೇಳಿಕೆಯಿಂದ ವಿದಿತವಾಗುತ್ತದೆ. ಮುಂದುವರಿದು, 'ಶ್ರುತಾವತಾರ'ದಲ್ಲಿಯೇ ತುಂಬೂಲೂರಾಚಾರ್ಯ, ಸಮಂತಭದ್ರ, ಬಪ್ಪದೇವ ಮತ್ತು ವೀರಸೇನರೆಂಬ ಷಟ್ಖಂಡಾಗಮದ ಇತರ ವ್ಯಾಖ್ಯಾನಕಾರರ ಹೆಸರುಗಳು ಬಂದಿವೆ. ಹೀರಾಲಾಲ್ ಜೈನ್ ಮೊದಲಾದ ಜೈನ ಪಂಡಿತರು ಈ ಹೆಸರುಗಳನ್ನು ಇಂದ್ರನಂದಿ ಕಾಲಾನುಕ್ರಮವನ್ನು ಅನುಸರಿಸಿ ಕೊಟ್ಟಿರಬಹುದೆಂದು ತಿಳಿಯುತ್ತಾರೆ. ಇಂದ್ರನಂದಿ ಹೆಸರಿಸಿರುವ 'ಧವಲಾ'ಕರ್ತೃ ವೀರಸೇನನಿಗೆ ಪೂರ್ವದಲ್ಲಿ ಶ್ಯಾಮಕುಂದಾದ್ಯರು ಕ್ರಮವಾಗಿ ಸು. ೩, ೪, ೫ ಮತ್ತು ೬ನೆಯ ಶತಮಾನಗಳಲ್ಲಿದ್ದರೆಂದು ತಿಳಿಯುವುದು ಪ್ರಾಯಶಃ ತಪ್ಪಾಗದೆಂದು ಒಂದೆಡೆ, ಕುಂದಕುಂದನಿಂದ ಹಿಡಿದು 'ಬಪ್ಪದೇವನವರೆಗೆ 'ಷಟ್ಖಂಡಾಗಮ'ದ ಟೀಕಾಕರ್ತೃಗಳು ಸು. ೧೦೦ ರಿಂದ ೬೦೦ರೊಳಗೆ ಆಗಿಹೋದರೆಂದು ಇನ್ನೊಂದೆಡೆ ಹೀರಾಲಾಲ್ ಜೈನ್ ಅಭಿಪ್ರಾಯಪಟ್ಟಿದ್ದಾರೆ.[112] ಕುಂದಕುಂದನು ಸು. ಕ್ರಿ.ಶ.ದ ಆರಂಭಕಾಲದಲ್ಲಿಯೂ ಸಮಂತಭದ್ರನು ಸು. ೨ನೆಯ ಶತಮಾನದಲ್ಲಿಯೂ ಇದ್ದರೆಂದು ಆ. ನೇ. ಉಪಾಧ್ಯೆ ಗ್ರಹಿಸಿದ್ದಾರೆ.[113] ಹೀಗಾದರೆ ಶ್ಯಾಮಕುಂದನ ಕಾಲ ಕ್ರಿ.ಶ. ೧–೨ನೆಯ ಶತಮಾನಗಳ ನಡುವೆಯೆಂದು ಹೇಳಬೇಕಾಗುತ್ತದೆ; ಈ ಕಾಲದಲ್ಲಿ ಅಥವಾ ಸು. ೩ನೆಯ ಶತಮಾನ

ದಲ್ಲಿದ್ದು, ಪ್ರಾಕೃತ ಸಂಸ್ಕೃತ ಭಾಷೆಗಳಲ್ಲಿ ಹೇಗೋ ಹಾಗೆ ಕನ್ನಡದಲ್ಲಿಯೂ ಆತನು ಷಟ್ಖಂಡಾಗಮದ ಕೆಲವು ಭಾಗಗಳಿಗೆ ಪದ್ಧತಿಯೆಂಬ ಶಬ್ದಾರ್ಥವಿವರಣೆಯನ್ನು ಬರೆದನೆಂದು ಭಾವಿಸಬಹುದಾಗುತ್ತದೆ. ಆರ್. ನರಸಿಂಹಾಚಾರ್ಯರು ಮುಖ್ಯವಾಗಿ 'ಚಾವುಂಡರಾಯ ಪುರಾಣ'ದ (೯೭೮) ಅಂತ್ಯದಲ್ಲಿ ಕೊಟ್ಟಿರುವ ಗುರುಪರಂಪರೆಯ ಆಧಾರದ ಮೇಲೆ ಶ್ಯಾಮಕುಂದಾಚಾರ್ಯನ ಮತ್ತು ಆತನಾದ ಮೇಲೆ ಉಲ್ಲೇಖಗೊಂಡ ತುಂಬುಲೂರಾಚಾರ್ಯನ ಕಾಲವನ್ನು ಸು. ೭ನೆಯ ಶತಮಾನದ ಮಧ್ಯಭಾಗವೆಂಬುದಾಗಿ ಹೇಳಿದ್ದಾರೆ.[114] ಇಂದ್ರನಂದಿ ಚಾವುಂಡರಾಯರು ಉಲ್ಲೇಖಿಸಿರುವ ಆಚಾರ್ಯ ಪರಂಪರೆ ಕಾಲಾನುಕ್ರಮವನ್ನು ಅನುಸರಿಸಿದೆಯೆಂಬ ಗ್ರಹಿಕೆಯ ಮೇಲೆ ಸೂಚಿತವಾಗಿರುವ ಶ್ಯಾಮಕುಂದನ ಕಾಲ ನಿಜವಾಗಿ ಏನೆಂಬುದನ್ನು ಇನ್ನೂ ಗೊತ್ತುಮಾಡಬೇಕಾಗಿದೆ. ಈಗ ಸೂಚಿತವಾಗಿರುವ ಕೆಲವರು ಜೈನ ವಿದ್ವಾಂಸರ ವಾದವನ್ನು ಒಪ್ಪುವುದಾದರೆ ೨-೩ನೆಯ ಶತಮಾನದಲ್ಲೇ ಕನ್ನಡದಲ್ಲಿ ಬರೆವಣಿಗೆಯ ರೂಢಿ ಮೊದಲಾಗಿತ್ತು, ವ್ಯಾಖ್ಯಾನಗ್ರಂಥಗಳು ಉದಿಸಿದ್ದುವು ಎಂದು ತಿಳಿಯುವಂತಾಗಿ ಕನ್ನಡ ಸಾಹಿತ್ಯದ ಹಳಮೆ ಸಾಕಷ್ಟು ಹಿಂದೆ ಸರಿಯುತ್ತದೆ. ಆರ್. ನರಸಿಂಹಾಚಾರ್ಯರ ಮಾತನ್ನೊಪ್ಪಿದರೆ ಅದು ಶಾಸನೋದಯ ಕಾಲದೊಡನೆ ಕೂಡಿಬರುತ್ತದೆ. 'ವೃತ್ತಿ ಸೂತ್ರಗಳ ವಿಷಮಪದಗಳ ಅರ್ಥವನ್ನು ವಿವರಿಸುವುದೇ ಪದ್ಧತಿ' ಎಂಬ 'ಜಯಧವಲಾ'ದ ಅರ್ಥವನ್ನು ಗಮನಿಸಿದರೆ ಪ್ರಾಕೃತಗ್ರಂಥ ಒಂದಕ್ಕೆ ವಿಶೇಷ ಸಾಹಿತ್ಯಿಕ ರಚನೆಯ ಕೌಶಲವೇನನ್ನೂ ಕೇಳದ ಶಬ್ದಾರ್ಥವಿವರಣೆಗೆ ಕನ್ನಡ ಭಾಷೆಯನ್ನು ಅಷ್ಟು ಪೂರ್ವಕಾಲದಲ್ಲಿ ಬಳಸಿರುವುದು ತೀರ ಅಸಂಭವವಾದ್ದೇನಲ್ಲ. ಇದು ಹೇಗಿದ್ದರೂ ಸದ್ಯದಲ್ಲಿ ಶ್ಯಾಮಕುಂದನು 'ಚಾವುಂಡರಾಯ ಪುರಾಣ'ದ ರಚನಾಕಾಲಕ್ಕೆ, ಎಂದರೆ ೯೭೮ಕ್ಕೆ ಹಿಂದೆ ಇದ್ದು ಕನ್ನಡದಲ್ಲಿ ವ್ಯಾಖ್ಯಾನ ಗ್ರಂಥ ರಚಿಸಿದ್ದರಲ್ಲಿ ಸಂಶಯವಿಲ್ಲ.

ಇಂದ್ರನಂದಿಯ 'ಶ್ರುತಾವತಾರ'ದಲ್ಲಿಯೇ ಶ್ಯಾಮಕುಂದರ ಬಳಿಕ ಇನ್ನೊಬ್ಬ ವ್ಯಾಖ್ಯಾಕರ್ತೃವಿನ ಹೆಸರುಬಂದಿದೆ. ಆತ ತುಂಬುಲೂರಾಚಾರ್ಯ. ಕುಂದಕುಂದ ಮತ್ತು ಶ್ಯಾಮಕುಂದರ ತರುವಾಯ ಷಟ್ಖಂಡಾಗಮದ ಕೆಲವು ಭಾಗಗಳಿಗೆ ಕನ್ನಡ ಭಾಷೆಯಲ್ಲಿ 'ಚೂಡಾಮಣಿ' ಎಂಬ ವ್ಯಾಖ್ಯೆಯನ್ನು ಈತ ರಚಿಸಿದ್ದಾಗಿ ಅಲ್ಲಿ ಹೇಳಿದೆ. ಆ ಸಂಬಂಧದ ಭಾಗ ಹೀಗಿದೆ:

> ಅಥ ತುಮ್ಬುಲೂರ ನಾಮಾಚಾರ್ಯೋಽಭೂತ್ತುಮ್ಬುಲೂರ ಸದ್ಗ್ರಾಮೇ
> ಷಷ್ಠೇನ ವಿನಾ ಖಣ್ಡೇನ ಸೋಽಪಿ ಸಿದ್ಧಾನ್ತಯೋರುಭಯೋಃ ॥ ೧೬೫ ॥
> ಚತುರಧಿಕಾಶೀತಿ ಸಹಸ್ರಗ್ರನ್ಥರಚನಯಾ ಯುಕ್ತಮ್
> ಕರ್ಣಾಟಭಾಷಯಾಽಕೃತ ಮಹತೀಂ ಚೂಡಾಮಣಿಂ ವ್ಯಾಖ್ಯಾ ॥ ೧೬೬ ॥
> ಸಪ್ತಸಹಸ್ರಗ್ರನ್ಥಾಂ ಷಷ್ಠಸ್ಯ ಚ ಪಂಚಿಕಾಂ ಪುನರಕಾರ್ಷೀತ್

ತುಂಬುಲೂರು ಗ್ರಾಮದ ನಿವಾಸಿಯಾದ ತುಂಬುಲೂರಾಚಾರ್ಯನು ೬ನೆಯ ಖಂಡವನ್ನು ಬಿಟ್ಟು, ಕರ್ಮಪ್ರಕೃತಿಪ್ರಾಭೃತ(=ಷಟ್ಖಂಡಾಗಮ) ಮತ್ತು ಕಷಾಯಪ್ರಾಭೃತಗಳೆಂಬ

ಎರಡು ಸಿದ್ಧಾಂತ ಗ್ರಂಥಗಳ ಮೇಲೆ ೮೪೦೦೦ ಶ್ಲೋಕಪ್ರಮಾಣದ 'ಚೂಡಾಮಣಿ' ಎಂಬ ಮಹಾವ್ಯಾಖ್ಯೆಯನ್ನು ಕನ್ನಡ ಭಾಷೆಯಲ್ಲಿ ರಚಿಸಿದನೆಂದೂ ಅವನೇ ೬ನೆಯ ಖಂಡದಮೇಲೆ ೭೦೦೦ ಶ್ಲೋಕಪ್ರಮಾಣದ ಪಂಚಿಕಾ ಎಂಬ ಟೀಕೆಯನ್ನು ಕೂಡ ಬರೆದನೆಂದೂ ಮೇಲಿನ ಹೇಳಿಕೆಯಿಂದ ವ್ಯಕ್ತವಾಗುತ್ತದೆ. ಧವಲಾದಿ ಸಿದ್ಧಾಂತ ಗ್ರಂಥಗಳ ಪ್ರಶಸ್ತಿಸಂಗ್ರಹದಲ್ಲಿ ಈ ಪಂಚಿಕೆಯ ಉಲ್ಲೇಖವಿದ್ದು, ಅದರ ಭಾಷೆ ಪ್ರಾಕೃತವೆಂದು ತಿಳಿಯುತ್ತದೆ.

ಶ್ಯಾಮಕುಂದ ತುಂಬುಲೂರಾಚಾರ್ಯರನ್ನು ಇದೇ ಪೌರ್ವಾಪರ್ಯದಲ್ಲಿ 'ಚಾವುಂಡರಾಯ ಪುರಾಣ'ದ ಅಂತ್ಯಭಾಗದ ಯತಿಪರಂಪರೆಯಲ್ಲಿ ಕೂಡ ಉಲ್ಲೇಖಿಸಿದೆ. ಆ ಭಾಗ:

ಗುಣಮೂರ್ತಿ ನಾಗಹಸ್ತಿ
ಪ್ರಣೂತ ಯತಿವೃಷಭರೆಂಬಿರ್ವರುಮುಚ್ಚಾ
ರಣಪೂರ್ವಾಚಾರ್ಯರ್ಕಾ
ರಣಪುರುಷರ್ಬಳಿಕ ಮಾಘಣಂದ್ಯಾಚಾರ್ಯರ್ ॥

ಅಗಣಿತ ಜೈನಾಗಮ ಪಾ
ರಗರಿಳೆಯೊಳ್ ಶ್ಯಾಮಕುಂದನಾಮಾಚಾರ್ಯರ್
ನೆಗೞ್ದರವರಿಂದೆ ಬೞಿಯಂ
ನೆಗೞ್ದರ್ಧರೆ ಪೊಗೞೆ ತೆಂಬುಳೂರಾಚಾರ್ಯರ್ ॥

'ಶಬ್ದಾನುಶಾಸನ'ವೆಂಬ (೧೬೦೪) ಸಂಸ್ಕೃತಭಾಷಾನಿಬದ್ಧ ಕನ್ನಡ ವ್ಯಾಕರಣ ಗ್ರಂಥದಲ್ಲಿ ಭಟ್ಟಾಕಳಂಕನು ಕನ್ನಡ ಭಾಷೆಯ ಪ್ರಾಶಸ್ತ್ಯವನ್ನು ಹೇಳುವಾಗ ಹೀಗೆ ಬರೆದಿದ್ದಾನೆ :[116]

ನ ಚೈಷಾ ಭಾಷಾ ಶಾಸ್ತ್ರಾನುಪಯೋಗಿನೀ ತತ್ತ್ವಾರ್ಥಮಹಾಶಾಸ್ತ್ರವ್ಯಾಖ್ಯಾನಸ್ಯ ಷಣ್ಣವತಿ ಸಹಸ್ರ ಪ್ರಮಿತ ಗ್ರಂಥ ಸಂದರ್ಭರೂಪಸ್ಯ ಚೂಡಾಮಣ್ಯಭಿಧಾನಸ್ಯ ಮಹಾಶಾಸ್ತ್ರಸ್ಯಾನ್ಯೇಷಾಂ ಚ ಶಬ್ದಾಗಮ ಯುಕ್ತ್ಯಾಗಮ ಪರಮಾಗಮ ವಿಷಯಾಣಾಂ ತಥಾ ಕಾವ್ಯನಾಟಕಾಲಂಕಾರ ಕಲಾಶಾಸ್ತ್ರ ವಿಷಯಾಣಾಂ ಚ ಬಹೂನಾಂ ಗ್ರಂಥಾನಾಮಪಿ ಭಾಷಾಕೃತಾನಾಮುಪಲಭ್ಯಮಾನತ್ವಾತ್ ।

ಇಲ್ಲಿ ಉಲ್ಲೇಖವಾಗಿರುವ 'ಚೂಡಾಮಣಿ' ಎಂಬ ಮಹಾಶಾಸ್ತ್ರವು, ತತ್ತ್ವಾರ್ಥ ಮಹಾಶಾಸ್ತ್ರವ್ಯಾಖ್ಯಾನವಾಗಿ ೯೬೦೦೦ ಗ್ರಂಥಪ್ರಮಾಣವುಳ್ಳದ್ದು, ಕರ್ತೃವಿನ ಹೆಸರು ಹೇಳಿರದಿದ್ದರೂ ಪೂರ್ವೋಕ್ತ 'ಚೂಡಾಮಣಿ' ವ್ಯಾಖ್ಯೆಯೆಂದೇ ಕವಿಚರಿತೆಕಾರರು ಮೊದಲಾದವರ ಈವರೆಗಿನ ಸಾಮಾನ್ಯಗ್ರಹಿಕೆಯಾಗಿದೆ. ಆದರೆ ಈಚೆಗೆ ಕೆಲವರು ಇಲ್ಲಿ ಉಕ್ತವಾದ 'ಚೂಡಾಮಣಿ' ಪ್ರಾಯಃ ಉಮಾಸ್ವಾತಿಯ ತತ್ತ್ವಾರ್ಥಸೂತ್ರಕ್ಕೆ ಬರೆದ ಯಾವುದೋ ಬೇರೆಯೇ ಒಂದು ಟೀಕೆಯ ಗ್ರಂಥವಾಗಿರಬೇಕೆಂದೂ ಅದರ ಕರ್ತೃ ತಿಳಿಯದೆಂದೂ ಅಭಿಪ್ರಾಯಪಟ್ಟಿದ್ದಾರೆ.[117]

ಇಂದ್ರನಂದಿಯ 'ಶ್ರುತಾವತಾರ' ದೊಳಗಿನ ನಿರೂಪಣೆಗೆ ಹೊಂದಿಬರುವ ಇನ್ನೊಂದು

ಹೇಳಿಕೆ ದೇವಚಂದ್ರನೆಂಬ ಈಚಿನ ಒಬ್ಬ ಗ್ರಂಥಕರ್ತೃವಿನ 'ರಾಜಾವಳೀ ಕಥೆ'ಯಲ್ಲಿ (೧೮೩೮) ದೊರೆಯುತ್ತದೆ. ಒಂದು ಕಡೆ "ಮತ್ತಂ ತುಂಬುಲೂರಲ್ಲಿ ಪುಟ್ಟಿದ ತುಂಬುಲೂರುನಾಮಾಚಾರ್ಯರ್ ಪ್ರಾಕೃತ ಸಂಸ್ಕೃತ ಕರ್ಣಾಟಾದಿ ಭಾಷೆಗಳಿಂ ಸಿದ್ಧಾಂತಪ್ರಬಂಧಕರ್ತೃಗಳ್ ಚೂಡಾಮಣಿವ್ಯಾಖ್ಯಾನ ಚತುರಶೀತಿಸಹಸ್ರಗ್ರಂಥ ರಚನೆಯಂ ಮಾಡಿದರ್" ಎಂಬುದಾಗಿಯೂ ಇನ್ನೊಂದು ಕಡೆ "ತುಂಬುಲೂರು ನಾಮಾಚಾರ್ಯರ್ ಎಂಬತ್ತುನಾಲ್ಕು ಸಾಸಿರ ಗ್ರಂಥಕರ್ತೃಗಳಾಗಿ ಕರ್ಣಾಟಕ ಭಾಷೆಯಿಂ ಚೂಡಾಮಣಿವ್ಯಾಖ್ಯಾನಮಂ ಮಾಡಿದರ್" ಎಂಬುದಾಗಿಯೂ ಆತ ಹೇಳಿದ್ದಾನೆ.[118] ಈ ಹೇಳಿಕೆಗೆ ಬಹುಮಟ್ಟಿಗೆ ಇಂದ್ರನಂದಿಯ ಹೇಳಿಕೆಯೇ ನೇರ ಆಧಾರವಾಗಿರುವಂತೆ ತೋರುತ್ತದೆ.

ತುಂಬುಲೂರಾಚಾರ್ಯನ ಮತ್ತು ಆತನ ಷಟ್ಖಂಡಾಗಮಭಾಗಗಳ ಚೂಡಾಮಣಿ ವ್ಯಾಖ್ಯೆಯ ಅಸ್ತಿತ್ವ ಇಂದ್ರನಂದಿ ದೇವಚಂದ್ರರ ಉಲ್ಲೇಖಗಳಿಂದ ಸ್ಥಿರಪಟ್ಟರೂ, ಆ ವ್ಯಾಖ್ಯಾಕಾರ ಅಥವಾ ವ್ಯಾಖ್ಯೆಯ ಕಾಲದ ವಿಷಯದಲ್ಲಿ ನಿಶ್ಚಿತ ಪ್ರಮಾಣಗಳ ಅಭಾವ ಉಳಿದುಕೊಂಡಿದೆ. ಹಿಂದೆ ಗಮನಿಸಿದಂತೆ ಕುಂದಕುಂದನು ಮೊದಲುಗೊಂಡು ವೀರಸೇನನ ವರೆಗೆ ಷಟ್ಖಂಡಾಗಮದ ಟೀಕಾಕರ್ತರೆಂದು ಇಂದ್ರನಂದಿಯ 'ಶ್ರುತಾವತಾರ'ದಲ್ಲಿ ಉಕ್ತರಾದವರ ವಿಚಾರಗಳನ್ನು ವಿಮರ್ಶಿಸುವಾಗ ತುಂಬುಲೂರಾಚಾರ್ಯನ ಕಾಲವನ್ನು ಸು. ೪ನೆಯ ಶತಮಾನವೆಂದು ಹೀರಾಲಾಲ್ ಜೈನ್ ಅವರು ಸ್ಥೂಲವಾಗಿ ಸೂಚಿಸಿದ್ದುಂಟು.[119] ಹಾಗೆಯೇ ಆರ್. ನರಸಿಂಹಾಚಾರ್ಯರು ಚಾವುಂಡರಾಯ ಪುರಾಣದ ಅಂತ್ಯಭಾಗದ ಪ್ರಶಸ್ತಿಪದ್ಯಗಳ ಆಧಾರದ ಮೇಲೆ ಸು. ೬೫೦ ಎಂದು ಹೇಳಿರುವುದೂ ಕಾಣುತ್ತದೆ.[120] ಆದರೆ ಇದರ ನಿರ್ಣಯ ಮುಖ್ಯವಾಗಿ ಕುಂದ ಕುಂದಾದ್ಯರಾದ ಜೈನಯತಿಗಳಿಗೆ ಗೊತ್ತುಮಾಡುವ ಕಾಲದ ಆಧಾರದ ಮೇಲೆ ನಿಂತಿದೆ. 'ಶ್ರುತಾವತಾರ' 'ರಾಜಾವಳೀಕಥೆ'ಗಳ ಶ್ಯಾಮಕುಂದ ತುಂಬುಲೂರಾಚಾರ್ಯರೇ 'ಚಾವುಂಡರಾಯ ಪುರಾಣ'ದ ಶ್ಯಾಮಕುಂದ ತುಂಬುಲೂರಾಚಾರ್ಯರು ಎಂಬುದರಲ್ಲಿ ಸಂಶಯವಿರಲಾರದು ಎಂಬುದರಿಂದ, ಆಯಿಬ್ಬರೂ 'ಚಾವುಂಡರಾಯ ಪುರಾಣ'ದ ರಚನಾಕಾಲಕ್ಕೆ ಹಿಂದೆ ಇದ್ದರೆಂದು ನಿಶ್ಚಯವಾಗಿ ಹೇಳಬಹುದು.

(ಆ) ಭಟ್ಟಾಕಳಂಕನ 'ಶಬ್ದಾನುಶಾಸನ'ದ ಸಾಕ್ಷ್ಯ: ಶ್ರವಣಬೆಳ್ಗೊಳದ ಒಂದು ಶಾಸನದಲ್ಲಿ (ನಂ. ೫೪/೬೭/೭೭) 'ಚೂಳಾಮಣಿ' (=ಚೂಡಾಮಣಿ) ಎಂಬ ಕಾವ್ಯವನ್ನು ಶ್ರೀವರ್ಧದೇವನೆಂಬ ಕವಿ ರಚಿಸಿದನೆಂಬುದಾಗಿ ಹೇಳಿದ್ದು, ಅಲ್ಲಿಯೇ ಆ ಕವಿ ದಂಡಿ ಯಿಂದ ಕೀರ್ತಿತನಾಗಿದ್ದನೆಂದು ಮುಂದಿನ ಚೂರ್ಣಿ ಎಂಬ ಭಾಗದಲ್ಲಿ ಹೇಳಿದೆ. ದಂಡಿಯ ಕಾಲ ಕ್ರಿ.ಶ. ೬ನೆಯ ಶತಮಾನ ಎಂಬುದರಿಂದಾಗಿ, ಆ ಕಾಲದಲ್ಲಿಯೋ ಅದರ ಮೊದಲಲ್ಲಿಯೋ ಆ ಕವಿ ಇದ್ದನೆಂದು ಭಾವಿಸಲು ಸಾಧ್ಯವಾಗಿದೆ. ಈಯಂಶ ವನ್ನು ಗಮನಿಸಿದ ಬಿ. ಎಲ್. ರೈಸ್ ಅವರು ಪೂರ್ವೋಕ್ತ 'ಚೂಳಾಮಣಿ' (= ಚೂಡಾಮಣಿ) ಎಂಬ ಕಾವ್ಯವೇ ಭಟ್ಟಾಕಳಂಕನ 'ಶಬ್ದಾನುಶಾಸನ'ದಲ್ಲಿ ಉಕ್ತ

ಗೊಂಡಿರುವ 'ಚೂಡಾಮಣಿ' ಎಂಬ ಗ್ರಂಥವೆಂದೂ ಇಲ್ಲಿ ಅದು 'ತತ್ತ್ವಾರ್ಥಮಹಾಶಾಸ್ತ್ರ'ದ ವ್ಯಾಖ್ಯಾನವೆಂಬುದಾಗಿ ವಿವರಿಸಲ್ಪಟ್ಟಿದೆಯೆಂದೂ ಹೇಳಿದರು. ಅಲ್ಲದೆ ದೇವಚಂದ್ರನ 'ರಾಜಾವಳೀಕಥೆ'ಯಲ್ಲಿ ಶಾಸನೋಕ್ತ ಶ್ರೀವರ್ಧದೇವನೇ ತುಂಬುಲೂರಾಚಾರ್ಯನೆಂಬುದಾಗಿ ಕರೆಯಲ್ಪಟ್ಟಿರುವನೆಂದು ಮುಂತಾಗಿಯೂ ತಿಳಿಸಿದರು. ಈ ಗ್ರಹಿಕೆಯಿಂದ, ಸು. ೭ನೆಯ ಶತಮಾನದಲ್ಲಿಯೇ ಇಷ್ಟು ದೊಡ್ಡ ಪ್ರಮಾಣದ ಗ್ರಂಥವೊಂದು ಕನ್ನಡದಲ್ಲಿ ಹುಟ್ಟಿರಬೇಕಾದರೆ, ಅದಕ್ಕೆ ಮೊದಲಲ್ಲಿಯೇ ಕನ್ನಡ ಭಾಷೆ ಹದವಾಗಿ ಬೆಳೆದುಕೊಂಡು ಬಂದಿತ್ತೆಂದೂ ಅದರಲ್ಲಿ ಸಾಕಷ್ಟು ಸಾಹಿತ್ಯ ಕೂಡ ನಿರ್ಮಾಣವಾಗಿದ್ದಿತೆಂದೂ ನಿರ್ಣಯಿಸಿದರು.[121] ಆದರೆ ಈ ನಿರ್ಣಯವನ್ನು ಪ್ರೇರಿಸಿದ ಸಂಗತಿಗಳು ತರ್ಕಶುದ್ಧವಾಗಿರಲಿಲ್ಲ. ಶಾಸನೋಕ್ತ ಶ್ರೀವರ್ಧದೇವನು ತನ್ನ 'ಚೂಳಾಮಣಿ' (= ಚೂಡಾಮಣಿ) ಕಾವ್ಯವನ್ನು ಯಾವ ಭಾಷೆಯಲ್ಲಿ ರಚಿಸಿದನು, ಏನೆಂಬುದು ತಿಳಿಯುವುದಿಲ್ಲ. ಆದರೆ 'ಶಬ್ದಾನುಶಾಸನ'ದ 'ಚೂಡಾಮಣಿ'ವ್ಯಾಖ್ಯೆ ಕನ್ನಡದಲ್ಲಿದ್ದ ಗ್ರಂಥ ಎಂಬುದು ನಿಸ್ಸಂಶಯವಾದ ವಿಷಯವಾಗಿತ್ತು. ಇಲ್ಲಿ ಗ್ರಂಥದ ಹೆಸರನ್ನಷ್ಟೇ ಹೇಳಿ, ಕರ್ತೃವಿನ ಹೆಸರನ್ನು ಹೇಳಿರಲಿಲ್ಲ. ಗ್ರಂಥನಾಮಸಾಮ್ಯ ಉಂಟುಮಾಡಿದ ಒಂದು ಭ್ರಾಂತಿ ಕಾರಣವಾಗಿ, ಎಂದರೆ ಶಾಸನದ 'ಚೂಳಾಮಣಿ' (= ಚೂಡಾಮಣಿ) ಎಂಬ ಕಾವ್ಯವನ್ನೂ 'ಶಬ್ದಾನುಶಾಸನ'ದ 'ಚೂಡಾಮಣಿ' ವ್ಯಾಖ್ಯಾನವನ್ನೂ ಒಂದೇ ಆಗಿ ತಿಳಿದದ್ದು ಕಾರಣವಾಗಿ, ರೈಸ್ ವ್ಯಾಖ್ಯಾನಕರ್ತೃವನ್ನು ಶ್ರೀವರ್ಧದೇವನೆಂದೇ ಭಾವಿಸಿದರು. ತುಂಬುಲೂರಾಚಾರ್ಯನೆಂಬವನು ೯೬೦೦೦ ಗ್ರಂಥಪ್ರಮಾಣದ 'ಚೂಡಾಮಣಿ' ಎಂಬ ಹೆಸರಿನ ವ್ಯಾಖ್ಯಾನವನ್ನು ರಚಿಸಿದ್ದಾನೆಂಬ ದೇವಚಂದ್ರನ 'ರಾಜಾವಳೀಕಥೆ'ಯ ಇನ್ನೊಂದು ಉಲ್ಲೇಖವನ್ನು ಗಮನಿಸಬೇಕಾಗಿ ಬಂದಾಗ, ಇಲ್ಲಿಯೂ ಗ್ರಂಥನಾಮಸಾಮ್ಯ ಭ್ರಾಂತಿಯಿಂದಲೇ ಅವರು ಶಾಸನ, 'ಶಬ್ದಾನುಶಾಸನ' ಮತ್ತು 'ರಾಜಾವಳೀಕಥೆ'ಗಳ ಒಂದೇ ಹೆಸರಿನ ಬೇರೆಬೇರೆ ಗ್ರಂಥಗಳನ್ನು ಒಂದೇ ಗ್ರಂಥ ಎಂಬುದಾಗಿ ತಿಳಿದುಕೊಂಡದ್ದರ ಫಲವಾಗಿ ತುಂಬುಲೂರಾಚಾರ್ಯ ಎಂಬುದು ಶ್ರೀವರ್ಧದೇವನ ಒಂದು ಉಪನಾಮವೆಂಬುದಾಗಿ ಒಂದು ಅವಸರದ ಸಮೀಕರಣವನ್ನು ಮಾಡಿದರು.

ಆರ್. ನರಸಿಂಹಾಚಾರ್ಯರು ರೈಸ್ ಅವರು ಮಾಡಿದ ಶ್ರೀವರ್ಧದೇವ—ತುಂಬುಲೂರಾಚಾರ್ಯ ಸಮೀಕರಣವನ್ನು ತಮ್ಮ 'ಕವಿಚರಿತೆ'ಯಲ್ಲಿ ಮೊದಲು ಬಹುಮಟ್ಟಿಗೆ ಯಥಾವತ್ತಾಗಿ ಸ್ವೀಕರಿಸಿದರು. ಹೀಗೆ ಮಾಡುವಲ್ಲಿ, ಕವಿಕಾಲದ ಸೂಚನೆಯಲ್ಲಿ ಮಾರ್ಪಾಡುಮಾಡಿದರು. ರೈಸ್ ಅವರು ವೀಬರ್ ಅವರ ಭಾರತೀಯ ಸಾಹಿತ್ಯ ಚರಿತ್ರೆಯ ಸೂಚನೆಯಂತೆ ದಂಡಿಯ ಕಾಲವನ್ನು ಕ್ರಿ.ಶ. ಸು. ೬ನೆಯ ಶತಮಾನವೆಂದು ಒಪ್ಪಿ, ಅದಕ್ಕೆ ಅನುಗುಣವಾಗಿ ಶ್ರೀವರ್ಧದೇವ (= ತುಂಬುಲೂರಾಚಾರ್ಯ)ನ ಕಾಲವನ್ನು ಸು. ೫೫೦ ಎಂದು ಹೇಳಿದರೆ, ಆರ್. ನರಸಿಂಹಾಚಾರ್ಯರು ಇಂಡಿಯನ್ ಆಂಟಿಕ್ವೆರಿಯ ಲೇಖಾಧಾರದ ಮೇಲೆ (ಸಂ. xli, ಪು. ೯೨) ದಂಡಿಯ ಕಾಲವನ್ನು ಕ್ರಿ.ಶ.

೭ನೆಯ ಶತಮಾನದ ಅಂತ್ಯಭಾಗವೆಂದು ಗ್ರಹಿಸಿ ಅದಕ್ಕೆ ಅನುಗುಣವಾಗಿ ಶ್ರೀವರ್ಧದೇವ (=ತುಂಬುಲೂರಾಚಾರ್ಯ)ನ ಕಾಲವನ್ನು ಸು. ೬೫೦ ಎಂದು ನಿರ್ಧರಿಸಿದರು. ರೈಸ್ ಅವರು ಮಾಡಿದ ಈ ಗ್ರಂಥಕಾರ ಸಮೀಕರಣವನ್ನು ಒಪ್ಪಿಕೊಳ್ಳುವಲ್ಲಿಯೂ ಒಬ್ಬನ ಗ್ರಂಥ ಕಾವ್ಯ, ಇನ್ನೊಬ್ಬನದು ವ್ಯಾಖ್ಯಾನ ಎಂಬುದರಿಂದಾಗಿ ಆಯೆರಡು ಗ್ರಂಥಗಳೂ ಒಂದೇ ಆಗಿರಬಹುದೋ ಇಲ್ಲವೋ ಎಂಬ ಸಂಶಯಕ್ಕೆ ಅವಕಾಶವಿದೆ ಯೆಂದೂ ಕೇವಲ ವ್ಯಾಖ್ಯಾನವಲ್ಲದೆ ಸ್ವತಂತ್ರವಾಗಿದ್ದಲ್ಲಿ ಗ್ರಂಥಕ್ಕೆ ಕಾವ್ಯಶಬ್ದ ಅನುಚಿತವಲ್ಲವೆಂದೂ ಒಂದು ಬಗೆಯ ಸಂದಿಗ್ಧತೆಯನ್ನು ಆರಂಭದಲ್ಲಿ ವ್ಯಕ್ತಮಾಡಿದ್ದರು. ಕೆಲಕಾಲದ ಮೇಲೆ ಅವರೇ ಈ ಸಮೀಕರಣ ಸರಿಯಲ್ಲವೆಂದು ಒಪ್ಪಿದರು.[122] ಬೇರೆ ವಿದ್ವಾಂಸರೂ ಹಾಗೆಯೇ ಅಭಿಪ್ರಾಯಪಟ್ಟರು.

ಎ. ವೆಂಕಟಸುಬ್ಬಯ್ಯನವರು ಶ್ರವಣಬೆಳ್ಗೊಳದ ಪೂರ್ವೋಕ್ತ ಶಾಸನದಲ್ಲಿ ಉಕ್ತವಾದೆಲ್ಲ ಗ್ರಂಥಗಳೂ ಸಂಸ್ಕೃತವಾಗಿರುವುದರಿಂದ ಶ್ರೀವರ್ಧದೇವ ಕೃತ 'ಚೂಡಾಮಣಿ' ಕೂಡ ಸಂಸ್ಕೃತ ಭಾಷೆಯದಾಗಿರಬಹುದೆಂದೂ ಅದು ಒಂದು ಕಾವ್ಯವಾಗಿತ್ತೆಂದೂ ಅದರ ಕರ್ತೃ ಶ್ರೀವರ್ಧದೇವ ಸು. ೭೮೦ರಲ್ಲಿ ಜೀವಿಸಿದ್ದನೆಂದೂ ಹೇಳುವುದರ ಮೂಲಕ ಪೂರ್ವೋಕ್ತರಾದ ಗ್ರಂಥಕರ್ತೃಗಳಿಬ್ಬರ ಪೃಥಕ್ತ್ವವನ್ನು ವಾದಿಸಿದರು.[123] ಕಾರಣಗಳು: (i) ಗ್ರಂಥನಾಮಸಾಮ್ಯದಿಂದ ಭಿನ್ನವ್ಯಕ್ತಿಗಳಿಬ್ಬರನ್ನು ಒಂದೇ ಆಗಿ ತಿಳಿಯುವುದು ಯುಕ್ತಿಯುಕ್ತವಲ್ಲ. (ii) ಶ್ರವಣಬೆಳ್ಗೊಳದ ಶಾಸನದಲ್ಲಿ ಶ್ರೀವರ್ಧದೇವನ ಕೃತಿ 'ಚೂಡಾಮಣಿ'ಯ ಉಲ್ಲೇಖ ಬರುವ ಮೊದಲು 'ಚಿಂತಾಮಣಿ' ಎಂಬ ಗ್ರಂಥ ಕೀರ್ತಿಸಲ್ಪಟ್ಟಿರುವುದು ಸಾಧಾರವಾಗಿ ತಿಳಿಯುವುದರಿಂದ 'ಚೂಡಾಮಣಿ' ಕೂಡ ಒಂದು ಕಾವ್ಯಗ್ರಂಥವೇ. (iii) ಅದೇ ಶಾಸನದಲ್ಲಿ ಉಕ್ತವಾದ ಇತರ ಗ್ರಂಥಗಳು ಹಾಗೂ ಉಕ್ತರಾದ ಗುರುಗಳು ಬರೆದಂತೆ ತಿಳಿಯುವ ಗ್ರಂಥಗಳು ಸಂಸ್ಕೃತದಲ್ಲಿರುವುದರಿಂದ 'ಚೂಡಾಮಣಿ'ಕೂಡ ಸಂಸ್ಕೃತದಲ್ಲಿದ್ದಿರಬೇಕು, ಕನ್ನಡದಲ್ಲಿ ಅಲ್ಲ. (iv) ಶ್ರೀವರ್ಧನ ಪ್ರಶಿಷ್ಯ ಅಕಲಂಕನ ಕಾಲ ಕ್ರಿ.ಶ. ೮ನೆಯ ಶತಮಾನದ ಅಂತ್ಯಭಾಗವೆಂದು ಚಾರಿತ್ರಿಕ ಆಧಾರಗಳಿಂದ ಗೊತ್ತಾಗುವುದರಿಂದ ಶ್ರೀವರ್ಧದೇವನ ಕಾಲ ೭೮೦ ಎಂದು ಹೇಳಬಹುದು; ದಂಡಿಯ ಕಾಲಕ್ಕೂ ಇದು ಸಂಬರುತ್ತದೆ. ಆದ್ದರಿಂದ ಶ್ರೀವರ್ಧದೇವ—ತುಂಬುಲೂರಾಚಾರ್ಯರು ಅನ್ಯಾನ್ಯ ವ್ಯಕ್ತಿಗಳು.

ಕೆ. ಭುಜಬಲಿಶಾಸ್ತ್ರಿಯವರು ಕೂಡ ಶ್ರೀವರ್ಧದೇವ ತುಂಬಲೂರಾಚಾರ್ಯರ ಪೃಥಕ್ತ್ವವನ್ನೇ ವಾದಿಸಿರುವುದು ಕಾಣುತ್ತದೆ.[124] ರೈಸ್ ಮೊದಲಾದವರು ಗ್ರಂಥದ 'ಚೂಡಾಮಣಿ' ಎಂಬ ಹೆಸರಿನ ಸಾಮ್ಯವನ್ನು ನೋಡಿಯೇ ಆಯೆರಡು ಹೆಸರುಗಳೂ ಒಬ್ಬನಿಗೇ ಅನ್ವಯಿಸುತ್ತವೆಯೆಂದು ಅಭಿಪ್ರಾಯಪಟ್ಟಿರಬಹುದೆಂದು ಅವರು ಮೊದಲು ಊಹಿಸಿ, ಅನಂತರದಲ್ಲಿ ಹಾಗೆ ತಿಳಿಯುವುದಕ್ಕಿರುವ ಬಾಧಕಸಂಗತಿಗಳೇನೆಂಬುದನ್ನು ಹೀಗೆ ಮಂಡಿಸಿದ್ದಾರೆ: " 'ರಾಜಾವಳೀ ಕಥೆ' ಮತ್ತು 'ಕರ್ಣಾಟಕ ಶಬ್ದಾನುಶಾಸನ' ಇವುಗಳಲ್ಲಿ 'ಚೂಡಾಮಣಿ'ಯನ್ನು ಒಂದು ವ್ಯಾಖ್ಯಾನಗ್ರಂಥವನ್ನಾಗಿ ಪ್ರಕಟ

ಮಾಡಿರುವಂತೆ ಉಕ್ತ ಶಿಲಾಲೇಖದಲ್ಲಿ ಪ್ರಕಟಮಾಡಲಿಲ್ಲ. ಶಿಲಾಲೇಖದಲ್ಲಿ ಸ್ಪಷ್ಟವಾಗಿ ಅದನ್ನು ಒಂದು ಸೇವ್ಯಕಾವ್ಯವನ್ನಾಗಿ ಬರೆದಿದೆ. ಅದರಲ್ಲಿ ಈ ಕಾವ್ಯವನ್ನು ಕನ್ನಡ ಕಾವ್ಯವನ್ನಾಗಿಯೂ ಬರೆಯಲಿಲ್ಲ. ಅದೂ ಅಲ್ಲದೆ 'ರಾಜಾವಳೀ ಕಥೆ'ಯೆ ಮೊದಲಾದ ಗ್ರಂಥಗಳಲ್ಲಿ ಪೂರ್ವೋಕ್ತ ವ್ಯಾಖ್ಯಾನದೊಡನೆ ಶ್ರೀವರ್ಧದೇವರ ಹೆಸರೂ ಕಾಣುವುದಿಲ್ಲ. ಆದುದರಿಂದ, ಎರಡೂ ಗ್ರಂಥಗಳನ್ನು ಒಂದನ್ನಾಗಿ ಒಪ್ಪಿ ಆ ಆಧಾರದ ಮೇಲೆ ತುಂಬುಲೂರಾಚಾರ್ಯ ಮತ್ತು ಶ್ರೀವರ್ಧದೇವ–ಇವರಿಬ್ಬರನ್ನೂ ಒಬ್ಬ ವ್ಯಕ್ತಿಯನ್ನಾಗಿ ಹೇಳುವುದು ಸರಿಯಲ್ಲ. ಪ್ರಾಯಃ 'ಚೂಡಾಮಣಿ' ಒಂದು ಸ್ವತಂತ್ರ ಉಚ್ಚ ಸಂಸ್ಕೃತ ಕಾವ್ಯವಾಗಿದ್ದರೂ ಇರಬಹುದು. ಅದನ್ನು ಲಕ್ಷ್ಯಮಾಡಿಯೇ ಸ್ವಯಂ ಸಂಸ್ಕೃತ ಭಾಷೆಯ ಪ್ರೌಢಕವಿಯಾದ ದಂಡಿಯು ಶ್ರೀವರ್ಧದೇವರನ್ನು ಉಕ್ತ ಶ್ಲೋಕದಲ್ಲಿ ಹೊಗಳಿರಬಹುದು."

ಎಂ. ಗೋವಿಂದ ಪೈ ಶ್ರವಣಬೆಳ್ಗೊಳ ಶಾಸನೋಕ್ತ ಶ್ರೀವರ್ಧದೇವನೂ ಇಂದ್ರನಂದಿ ದೇವಚಂದ್ರರ ಗ್ರಂಥಗಳಲ್ಲಿ ಉಕ್ತನಾದ ತುಂಬಲೂರಾಚಾರ್ಯನೂ ಭಿನ್ನವ್ಯಕ್ತಿಗಳೆಂದೇ ತಿಳಿಯುತ್ತಾರೆ. ಆದರೆ ಶಾಸನೋಕ್ತ ಶ್ರೀವರ್ಧದೇವನ 'ಚೂಡಾಮಣಿ' ಕಾವ್ಯವೂ ಶಬ್ದಾನುಶಾಸನೋಕ್ತ 'ಚೂಡಾಮಣಿ'ವ್ಯಾಖ್ಯೆಯೂ ಒಂದೇ ಎಂಬುದಾಗಿ ತಿಳಿದು, ಭಟ್ಟಾಕಳಂಕ ಕೊಡುವ ಲೆಕ್ಕದಂತೆ ೯೬೦೦೦ ಗ್ರಂಥಪ್ರಮಾಣವಿರುವ ಆ ಕನ್ನಡ ಗ್ರಂಥದ ಕರ್ತೃ ಶ್ರೀವರ್ಧದೇವನು ತನ್ನನ್ನು ಸ್ತುತಿಸುವ ದಂಡಿಗೆ ಹಿಂದೆ ಇದ್ದವನೆಂದೂ ಅದಕ್ಕೆ ಕನ್ನಡದಲ್ಲಿಯೇ ೯೧೦೦೦ ಗ್ರಂಥಪ್ರಮಾಣವಿರುವ ವ್ಯಾಖ್ಯಾನವನ್ನೂ (೮೪ ಸಾವಿರ ಗ್ರಂಥ ಪ್ರಮಾಣ) ಪಂಚಿಕೆಯನ್ನೂ (೭ಸಾವಿರ ಗ್ರಂಥಪ್ರಮಾಣ) ಬರೆದ ತುಂಬುಲೂರಾಚಾರ್ಯನು ತನ್ನನ್ನು ಸ್ಮರಿಸುವ ಚಾವುಂಡರಾಯನಿಗೆ ಹಿಂದೆ ಇದ್ದವನೆಂದೂ ಅಭಿಪ್ರಾಯಪಟ್ಟಿರುವಂತೆ ತೋರುತ್ತದೆ.[125] ಕಾರಣಗಳು : (i) ತುಂಬುಲೂರಾಚಾರ್ಯನ ವ್ಯಾಖ್ಯಾನದ ಗ್ರಂಥಸಂಖ್ಯೆ ೮೪ ಸಾವಿರ; ಪಂಚಿಕೆ ಸೇರಿದರೆ ಗ್ರಂಥಸಂಖ್ಯೆ ೯೧ ಸಾವಿರ. ಭಟ್ಟಾಕಳಂಕನು ಹೇಳಿರುವ ವ್ಯಾಖ್ಯಾನದ ಗ್ರಂಥಸಂಖ್ಯೆ ೯೬೦೦೦. ಆದ್ದರಿಂದ ಈ ಎರಡು ವ್ಯಾಖ್ಯಾನಗ್ರಂಥಗಳೂ ಬೇರೆಬೇರೆ. (ii) ವಿಸ್ತಾರವಾದ ಮೂಲಗ್ರಂಥ 'ಚೂಡಾಮಣಿ' ಎಂಬುದಾಗಿದ್ದು, ಇದು ಶ್ರೀವರ್ಧದೇವ ಕೃತವಾದ್ದೆಂದು ಶ್ರವಣಬೆಳ್ಗೊಳದ ಶಾಸನದಿಂದ ತಿಳಿಯುತ್ತದೆ. ಇದೇ ಗ್ರಂಥವನ್ನೇ 'ಶಬ್ದಾನುಶಾಸನ'ದಲ್ಲಿ ಹೇಳಿರುವುದು. (iii) ಕಡಿಮೆ ಗ್ರಂಥಪ್ರಮಾಣದ ಅದರ ವ್ಯಾಖ್ಯಾನವನ್ನು ತುಂಬುಲೂರಾಚಾರ್ಯನು ರಚಿಸಿದನು. ಆದ್ದರಿಂದ ಇಲ್ಲಿ 'ಚೂಡಾಮಣಿಗೆ ಬರೆದ ವ್ಯಾಖ್ಯಾನ' ಎಂದು ಅರ್ಥಬರುವಂತೆ 'ಚೂಡಾಮಣಿ ವ್ಯಾಖ್ಯಾಂ' ಎಂದು ಪಾಠವಿರಬೇಕಲ್ಲದೆ, 'ಚೂಡಾಮಣಿ ಎಂಬ ವ್ಯಾಖ್ಯಾನ' ಎಂದು ಅರ್ಥಬರುವಂತೆ 'ಚೂಡಾಮಣಿಂ ವ್ಯಾಖ್ಯಾಮ್' ಎಂದು ಪಾಠವಿದ್ದಿರಲಾರದು.

ಎ. ವೆಂಕಟಸುಬ್ಬಯ್ಯನವರ ವಾದದಲ್ಲಿ ಮೊದಲು (೧೯೨೭) ಶ್ರೀವರ್ಧದೇವ–ತುಂಬುಲೂರಾಚಾರ್ಯರು ಅನ್ಯಾನ್ಯ ವ್ಯಕ್ತಿಗಳೆಂದು ಸೂಚಿತವಾಯಿತು. ಶಾಸನದಲ್ಲಿ

ಹೇಳಿರುವ 'ಚೂಡಾಮಣಿ' ಎಂಬ ಗ್ರಂಥ ಒಂದು ಸಂಸ್ಕೃತ ಕಾವ್ಯ, ಅದರ ಕರ್ತೃ ಶ್ರೀವರ್ಧದೇವ. ಇಂದ್ರನಂದಿ ದೇವಚಂದ್ರರು ಹೇಳುವ 'ಚೂಡಾಮಣಿ' ಎಂಬ ಗ್ರಂಥ ಒಂದು ಕನ್ನಡ ವ್ಯಾಖ್ಯಾನ, ಅದರ ಕರ್ತೃ ತುಂಬುಲೂರಾಚಾರ್ಯ ಎಂಬುದಾಗಿ ಅವರು ಸಂಬಂಧವನ್ನು ಬಿಡಿಸಿರುವುದು ಸಕಾರಣವಾಗಿದೆ. ಈ ವ್ಯಕ್ತಿಗಳು ಅನ್ಯಾನ್ಯರೆಂಬುದನ್ನು ಕವಿಚರಿತೆಕಾರರು ತಮ್ಮ 'ಕವಿಚರಿತೆ'ಯ ಮೂರನೆಯ ಸಂಪುಟದ (೧೯೨೯) 'ಗ್ರಂಥ ಶುದ್ಧಿ' ಭಾಗದಲ್ಲಿ ಒಪ್ಪಿಕೊಂಡು, ಮೊದಲನೆಯ ಸಂಪುಟದಲ್ಲಿ ಅವರು ಅಭಿನ್ನರೆಂದು ಹೇಳಿದ್ದು ಸರಿಯಲ್ಲವೆಂದು ಆ ಮೂಲಕ ಸೂಚಿಸಿದರು. ಕೆ. ಭುಜಬಲಿಶಾಸ್ತ್ರಿಯವರು (೧೯೩೩) ಪ್ರಾಯಃ ಸಂಸ್ಕೃತ ಭಾಷೆಯಲ್ಲಿ ಬರೆಯಲ್ಪಟ್ಟ ಕಾವ್ಯಗ್ರಂಥದ ಕರ್ತೃ ಶಾಸನೋಕ್ತ ಶ್ರೀವರ್ಧದೇವ, 'ಚೂಡಾಮಣಿ'ಯೆಂಬ ಕನ್ನಡ ವ್ಯಾಖ್ಯಾನ ಗ್ರಂಥದ ಕರ್ತೃ ಶ್ರುತಾವತಾರಾದಿಗಳಲ್ಲಿ ಉಕ್ತನಾದ ತುಂಬುಲೂರಾಚಾರ್ಯ ಇಬ್ಬರೂ ಬೇರೆ ಬೇರೆ ಎಂದು ತಾವೂ ವಿಶದಪಡಿಸಿದರು.

ಗೋವಿಂದ ಪೈ ಅವರು (೧೯೪೦) ಈ ಚರ್ಚೆಗಳನ್ನೂ ತಿದ್ದುಪಡಿಗಳನ್ನೂ ವಿಶೇಷ ವಾಗಿ ಲಕ್ಷ್ಯಕ್ಕೆ ತಂದುಕೊಂಡ ಹಾಗೆ ತೋರುವುದಿಲ್ಲ. ಅವರು ರೈಸ್ ಮತ್ತು ಆರ್. ನರಸಿಂಹಾಚಾರ್ ಅವರು ಆರಂಭದಲ್ಲಿ ಗ್ರಂಥನಾಮಸಾಮ್ಯಭ್ರಾಂತಿಯಿಂದ ಮಾಡಿದ ಕೆಲವು ಸಮೀಕರಣಗಳನ್ನೇ ಇಟ್ಟುಕೊಂಡು ಮುಂದುವರಿದದ್ದಲ್ಲದೆ, ಗ್ರಂಥಸಂಖ್ಯಾ ಪ್ರಮಾಣವನ್ನು ಹೇಳುವಲ್ಲಿ ಕಂಡುಬರುವ ವ್ಯತ್ಯಾಸಗಳನ್ನು ಆಧಾರವಾಗಿಟ್ಟುಕೊಂಡು ವಿಷಯವನ್ನು ಇನ್ನೂ ಕೊಂಚ ತೊಡಕುಮಾಡಿದಂತೆ ತೋರುತ್ತದೆ. ಮೂಲಗ್ರಂಥವೂ 'ಚೂಡಾಮಣಿ', ಅದರ ವ್ಯಾಖ್ಯಾನವೂ 'ಚೂಡಾಮಣಿ', ಮೂಲಗ್ರಂಥವೂ ಕನ್ನಡ ಭಾಷೆಯದು, ಅದರ ವ್ಯಾಖ್ಯಾನವೂ ಕನ್ನಡ ಭಾಷೆಯದು—ಎಂದು ಅವರು ತರ್ಕಿಸಿರು ವುದೂ, ಶಾಸನೋಕ್ತವಾದ ಗ್ರಂಥವನ್ನು ಕಾವ್ಯವೆಂದೂ ಶಬ್ದಾನುಶಾಸನೋಕ್ತವಾದ ಗ್ರಂಥವನ್ನು ವ್ಯಾಖ್ಯಾನವೆಂದೂ ಆಯಾ ಆಕರಗಳಲ್ಲಿ ಸ್ಪಷ್ಟವಾಗಿ ಹೇಳಿದ್ದರೂ ಆಯೆರ ಡನ್ನೂ ಅವರು ವ್ಯಾಖ್ಯಾನಕ್ಕೆ ವಿಷಯವಾದುದೊಂದು ಮೂಲಸಿದ್ಧಾಂತ ಗ್ರಂಥವೆಂದು ಗ್ರಹಿಸಿರುವುದೂ ಯುಕ್ತಿಯುಕ್ತವಾಗಿಲ್ಲ. ಹೀಗೆಯೇ ಇನ್ನೂ ಕೆಲವು ದೌರ್ಬಲ್ಯಗಳು ಅವರ ವಾದದಲ್ಲಿ ಕಂಡುಬರುತ್ತವೆ.

ಆರಂಭದಲ್ಲಿ ರೈಸ್ ಅವರು ಮಾಡಿದ ಕೆಲವು ಅವಸರದ ಸಮೀಕರಣಗಳು ಮುಂದಿನ ಘಟ್ಟದಲ್ಲಿ ಎಷ್ಟು ತೊಡಕುಗಳನ್ನು ಒಡ್ಡಿದುವು ಎಂಬುದನ್ನು ಸ್ವಲ್ಪಮಟ್ಟಿಗೆ ಮೇಲೆ ಸಂಗ್ರಹಿಸಿದೆ. ಪ್ರಸ್ತುತ, ಈ ವಿಷಯದಲ್ಲಿ ಹೇಳಬಹುದಾದ್ದು : (೧) ಶ್ರವಣಬೆಳ್ಗೊಳದ ಶಾಸನದಲ್ಲಿ (೫೪/೬೭/೭೭ ; ೧೧೨೯) ಉಕ್ತವಾಗಿರುವ 'ಚೂಡಾಮಣಿ' (='ಚೂಡಾಮಣಿ') ಎಂಬ ಗ್ರಂಥ ದಂಡಿಯಿಂದ ಕೀರ್ತಿತನಾದ ಶ್ರೀವರ್ಧದೇವನೆಂಬ ಕವಿ ಬರೆದ ಒಂದು ಕಾವ್ಯ. (೨) ಇಂದ್ರನಂದಿ ದೇವಚಂದ್ರರ ಗ್ರಂಥಗಳಲ್ಲಿ ಉಕ್ತ ವಾಗಿರುವ 'ಚೂಡಾಮಣಿ' ಎಂಬ ಗ್ರಂಥ ಚಾವುಂಡರಾಯನಿಂದ ಸ್ಮರಿಸಲ್ಪಟ್ಟ ತುಂಬು ಲೂರಾಚಾರ್ಯನೆಂಬವನು 'ಷಟ್ಖಂಡಾಗಮ'ದ ಕೆಲವು ಭಾಗಗಳಿಗೆ ಬರೆದ ಒಂದು ಕನ್ನಡ

ವ್ಯಾಖ್ಯಾನ. (೩) ಭಟ್ಟಾಕಳಂಕನ 'ಶಬ್ದಾನುಶಾಸನ'ದಲ್ಲಿ ಉಕ್ತವಾಗಿರುವ 'ಚೂಡಾಮಣಿ' ಎಂಬ ಗ್ರಂಥ 'ತತ್ತ್ವಾರ್ಥಮಹಾಶಾಸ್ತ್ರ'ವೆಂಬ ಶಾಸ್ತ್ರಗ್ರಂಥವೊಂದಕ್ಕೆ ೧೬೦೦ಳರ ಪೂರ್ವದಲ್ಲಿ ಬರೆಯಲಾದ, ಕರ್ತೃ ಯಾರೆಂದು ತಿಳಿಯದ ಒಂದು ಕನ್ನಡ ವ್ಯಾಖ್ಯಾನ. ಈ ಅನುಪಲಬ್ಧ ವ್ಯಾಖ್ಯಾನ ಪ್ರಾಚೀನತೆಯ ದೃಷ್ಟಿಯಿಂದ 'ಕವಿರಾಜಮಾರ್ಗ' ಪೂರ್ವಕಾಲೀನವೂ ಆಗಬಹುದು, ಉತ್ತರಕಾಲೀನವೂ ಇರಬಹುದು.

(ಇ) ಜಯಕೀರ್ತಿಯ 'ಛಂದೋನುಶಾಸನ'ದ ಸಾಕ್ಷ್ಯ : ಕ್ರಿ.ಶ. ಸು. ೧೧ನೆಯ ಶತಮಾನದಲ್ಲಿದ್ದನೆಂದು ಸಾಮಾನ್ಯವಾಗಿ ತಿಳಿಯುವ ಜಯಕೀರ್ತಿಯೆಂಬ ಸಂಸ್ಕೃತ ಛಂದಶ್ಶಾಸ್ತ್ರಕಾರನು 'ಛಂದೋನುಶಾಸನ'ವೆಂಬ ಒಂದು ಛಂದೋಗ್ರಂಥವನ್ನು ಬರೆದಿದ್ದಾನೆ. ಇದರಲ್ಲಿ ಕನ್ನಡ ಸಾಹಿತ್ಯದ ಕೆಲವು ಗ್ರಂಥಗಳ ಹಾಗೂ ಕೆಲವರು ಗ್ರಂಥಕಾರರ ಹೆಸರುಗಳು ಉಲ್ಲೇಖಗೊಂಡಿವೆ. ಈ ಉಲ್ಲೇಖಗಳು ಸ್ಪಷ್ಟವಾಗಿ ಗೋಚರವಾಗುವುದು ಗ್ರಂಥದ ೭ನೆಯ ಅಧಿಕಾರದಲ್ಲಿ. ಇಲ್ಲಿ ಅಕ್ಕರಭೇದಗಳು ಮುಂತಾದುವನ್ನು ವಿವರಿಸುವಾಗ 'ಶೃಂಗಾರಪಿಂಡ', 'ಕರ್ಣಾಟೇಶ್ವರಕಥಾ', 'ಕರ್ಣಾಟಮಾಲತೀಮಾಧವ,' ಅಸಗಕವಿ ವಿರಚಿತ 'ಕರ್ಣಾಟ ಕುಮಾರಸಂಭವ', 'ಚೂಡಾಮಣಿ,' ಪ್ರಭುಸೇನೀಯ 'ಅಲಂಕಾರ', ಈ ಕೆಲವು ಗ್ರಂಥಗಳ ಹೆಸರುಗಳು ಒಟ್ಟಿಗೆ ಗುಂಪುಗೂಡಿ ಬಂದಿವೆ. ಈ ಗ್ರಂಥಗಳು ಮಾತ್ರವಲ್ಲದೆ ಇನ್ನೂ ಕೆಲವು ಕನ್ನಡಗ್ರಂಥಗಳು, ಕರ್ಣಾಟವಿಷಯ ಜಾತಿಯ ಬೇರೆಬೇರೆ ಮಟ್ಟುಗಳನ್ನು ಬಳಸಿರುವಂಥವು, ಜಯಕೀರ್ತಿಯ 'ಛಂದೋನುಶಾಸನ' ರಚಿತವಾಗುವುದಕ್ಕಿಂತ ಹಿಂದೆ ರಚಿತವಾಗಿದ್ದವೆಂದು ತಿಳಿಯಲು 'ಶೃಂಗಾರಪಿಂಡಾದಿ', 'ಕರ್ಣಾಟೇಶ್ವರಕಥಾದೌ', 'ಕರ್ಣಾಟ ಮಾಲತೀಮಾಧವ ಪ್ರಭೃತಿಕಾವ್ಯೇ,' 'ಕುಮಾರಸಂಭವಾದೌ' ಎಂಬಂತಹ ಮಾತುಗಳು ಸ್ಪಷ್ಟವಾಗಿ ಅವಕಾಶಕೊಡುತ್ತವೆ. ಈ ಆದಿ ಶಬ್ದದ ಸೂಚನೆ ಪೂರ್ವಕಾಲಿಕ ಜ್ಞಾತಕವಿಗಳ ಕೃತಿಗಳಿಗೆ ಅನ್ವಯಿಸುವುದು ಸರಿಯೆ; ಆದರೆ ಆ ಮಾತಿನಲ್ಲಿ ಈಗಿನ ಮಟ್ಟಿಗೆ ಅಜ್ಞಾತಕವಿಗಳ ಕೆಲವು ಕೃತಿಗಳೂ ವಿವಕ್ಷಿತವಾಗಬಹುದು. ಅವುಗಳ ವಿಷಯದಲ್ಲಿ ಈಗ ಯಾವ ಊಹೆಯೂ ಸಾಧ್ಯವಿಲ್ಲ. ಜಯಕೀರ್ತಿ ಹೆಸರಿಸುವ ಶೃಂಗಾರಪಿಂಡಾದಿಯಾದ ಗ್ರಂಥಗಳಲ್ಲಿ ಯಾವುವು 'ಕವಿರಾಜಮಾರ್ಗ'ಕಾಲಕ್ಕೆ ಹಿಂದಿನವು ಎನ್ನುವುದನ್ನು ಕಂಡುಹಿಡಿಯಲು ದೃಢವಾದ ಪ್ರಮಾಣಗಳು ದೊರೆತಿಲ್ಲ. ಒಂದೆರಡು ಗ್ರಂಥಗಳನ್ನು ಈಚಿನವು ಎಂದು ತೋರಿಸಲು ಪ್ರಮಾಣಗಳಿವೆ.

'ಛಂದೋನುಶಾಸನ'ದ ೬ನೆಯ ಅಧಿಕಾರದಲ್ಲಿ ಹೆಸರುಗೊಂಡಿರುವ 'ಗೋಗ್ರಹ', ಮಹಾರ್ಹದ್ದೇವತಾಸ್ತವ' ಈ ಕೃತಿಗಳ ವಿಷಯದಲ್ಲಿ ಹೇಗೋ ಹಾಗೆಯೇ 'ಶೃಂಗಾರಪಿಂಡ'ದ ಕಾಲ ಕರ್ತೃತ್ವಗಳ ವಿಷಯದಲ್ಲಿಯೂ ನಮಗೆ ಈವರೆಗೆ ಏನೂ ತಿಳಿದಿಲ್ಲ. 'ಕರ್ಣಾಟೇಶ್ವರಕಥಾ' ಎಂಬುದರ ವಿಷಯದಲ್ಲಿಯೂ ಅಷ್ಟೇ. ಆದರೆ ಈಚೆಗೆ ಈ ಬಗ್ಗೆ ಒಂದು ಊಹೆಯನ್ನು ಹೀಗೆ ಮಂಡಿಸಿದೆ : "'ಕರ್ಣಾಟೇಶ್ವರ' ಎಂಬುದು ಸು. ೫೦೦ರಿಂದ ೭೫೭ರವರೆಗೆ ಆಳಿದ, ಬಾದಾಮಿ ಚಾಲುಕ್ಯರಲ್ಲಿ ಯಾವನೊ ರಾಜನನ್ನು ಸೂಚಿಸುವ

ವೆಂದು ಭಾವಿಸಬಹುದೆ? ಇದು ನಿಜವಾದರೆ, 'ಕರ್ಣಾಟೇಶ್ವರಕಥಾ' ಎಂಬುದು 'ಕವಿರಾಜಮಾರ್ಗ'ಕ್ಕಿಂತ ಹಿಂದೆ ಹುಟ್ಟಿದ ಕೃತಿಯಾಗುತ್ತದೆ. ಮತ್ತು ಕನ್ನಡದ ಮೊತ್ತ ಮೊದಲ ಐತಿಹಾಸಿಕ ಕಾವ್ಯವಾಗುತ್ತದೆ."[126]

ಇನ್ನು ಜಯಕೀರ್ತಿ ತಿಳಿಸುವ 'ಕರ್ಣಾಟ ಮಾಲತೀಮಾಧವಕಾವ್ಯ'ಎಂಬುದೂ ದುರ್ಗಸಿಂಹಕವಿ (೧೦೩೧) ಉಲ್ಲೇಖಿಸುವ ಕನ್ನಮಯ್ಯ ಕೃತ 'ಮಾಳವೀಮಾಧವ' ಎಂಬುದೂ ಒಂದೇ ಇರಬಹುದೋ ಬೇರೆಯೋ ತಿಳಿಯದು. ಒಂದೇ ಇರಲಿ, ಬೇರೆಯಿರಲಿ ಅವುಗಳ ಕಾಲ ೧೧ನೆಯ ಶತಮಾನದ ಮೊದಲು ಎಂಬುದು ಬಹುಮಟ್ಟಿಗೆ ನಿಶ್ಚಿತವಾದ ಸಂಗತಿ. ಎಷ್ಟು ಮೊದಲು ಎಂಬುದನ್ನು ಗುರುತಿಸುವುದಕ್ಕೆ ಹೆಚ್ಚಿನ ಆಧಾರಗಳು ಬೇಕು. 'ಕಾವ್ಯಾವಲೋಕನ'ದಲ್ಲಿ ಸಂಸ್ಕೃತ 'ಮಾಲತೀಮಾಧವ'ದ ಪಂಚಮಾಂಕದ ಪದ್ಯವೊಂದರ ಛಾಯಾನುವಾದವನ್ನು ಈಗಾಗಲೇ ಗುರುತಿಸಿದೆ (ಪ. ೬೯೫). ಈ ಪದ್ಯ ಹಾಗೂ ಗುರುತಿಸಲು ಸಾಧ್ಯವಾಗಿರದ ಇನ್ನೂ ಕೆಲವು ಪದ್ಯಗಳು ಯಾವುದಾದರೊಂದು ಕನ್ನಡ ಮಾಲತೀಮಾಧವದಿಂದೆತ್ತಿದವಾಗಿರಬಹುದು. ಅವು ಪೂರ್ವೋಕ್ತ ಆಕರಗಳಲ್ಲಿ ಒಂದಕ್ಕೆ ಸೇರಿದ್ದಾಗಿರಲೂಬಹುದು.

'ಕರ್ಣಾಟ ಕುಮಾರಸಂಭವ'ವು ಅಸಗ ಕವಿಯ ಕನ್ನಡ ಕಾವ್ಯವೆಂಬುದು ಜಯಕೀರ್ತಿಯ ಗ್ರಂಥದಿಂದಲೇ ತಿಳಿಯುವುದು. ಈ ಅಸಗಕವಿ ೮೫೩ರಲ್ಲಿ ಸಂಸ್ಕೃತ 'ವರ್ಧಮಾನಪುರಾಣ'ವನ್ನು ರಚಿಸಿದ ಕವಿಯೆಂದೇ ಸಾಮಾನ್ಯವಾಗಿ ವಿದ್ವಾಂಸರು ನಂಬಿದ್ದಾರೆ. ಹೀಗಿದ್ದ ಪಕ್ಷದಲ್ಲಿ ಪಂಪಕವಿಗೆ ಪೂರ್ವದಲ್ಲಿಯೇ ಕನ್ನಡ ಸಾಹಿತ್ಯದಲ್ಲಿ ಪೌರಾಣಿಕ ಕಥಾವಸ್ತುಗಳನ್ನು ವಿಸ್ತಾರವಾಗಿ ನಿರೂಪಿಸುವ ಪ್ರಥೆಯೊಂದು ಬೆಳೆದುಕೊಂಡುಬಂದಿತ್ತೆಂದೂ ಸಂಸ್ಕೃತ ಭಾಷೆಯ ಮಹಾಕವಿಗಳ ಪ್ರಖ್ಯಾತ ಕೃತಿಗಳ ಅನುಕರಣಗಳೋ ಅಳವಡಿಕೆಗಳೋ ಕನ್ನಡದಲ್ಲಿ ಇನ್ನೂ ಮೊದಲಿನಿಂದ ನಡೆಯುತ್ತಿದ್ದುದರ ಸಂಪ್ರದಾಯವೇ ಅಸಗಕವಿಯ ಕೈಯಲ್ಲಿ ಮುಂದುವರಿಯಿತೆಂದೂ ಭಾವಿಸಲು ಅವಕಾಶವಾಗುತ್ತದೆ. 'ಕಾವ್ಯಾವಲೋಕನ'ದಲ್ಲಿ ಕುಮಾರಸಂಭವ ಕಥಾಂಶದ ಕೆಲವು ಪದ್ಯಗಳನ್ನು ಗುರುತಿಸಲಾಗಿದೆ. ಇವು ಅಸಗಕವಿಯ 'ಕರ್ಣಾಟ ಕುಮಾರಸಂಭವ'ದಿಂದ ಆಯ್ದುಕೊಂಡವಿರಬಹುದು.

'ಚೂಡಾಮಣಿ' ಎಂಬ ಕೃತಿ ಸು. ೧೦೦೦ದಲ್ಲಿದ್ದ ಕಂದರ್ಪದೇವನೆಂಬ ಕನ್ನಡ ಕವಿಯ ಕೃತಿಯೆಂಬುದಾಗಿ ಈ ಮೊದಲು ಊಹಿಸಿತ್ತು. ಈಗ ಅದು ಅಲ್ಲವೆಂದು ಸಿದ್ಧಪಟ್ಟಿದೆ.[127] "ತುಂಬುಲೂರಾಚಾರ್ಯನ ಚೂಡಾಮಣಿ ವ್ಯಾಖ್ಯಾನದಲ್ಲಿ ಪದ್ಯಗಳೂ ಇದ್ದುವು ಎಂದು ಕಲ್ಪಿಸಿಕೊಳ್ಳುವುದಾದರೆ, ಅವೆರಡೂ ಒಂದು ಕೃತಿಯನ್ನು ನಿರ್ದೇಶಿಸುತ್ತವೆಯೆಂದು ಹೇಳಲು ಸಾಧ್ಯವಾಗುತ್ತದೆ" ಎಂಬ ಇನ್ನೊಂದು ಊಹೆ ಈಗ ವ್ಯಕ್ತಪಟ್ಟಿದೆ.[128] ಈ ಸಂಬಂಧಕಲ್ಪನೆಗೆ ಕೃತಿನಾಮಸಾಮ್ಯ ಒಂದರ ಹೊರತು ಬೇರಾವ ಆಧಾರವೂ ಇಲ್ಲ. 'ಚೂಡಾಮಣಿ' ಎಂಬ ಒಂದೇ ಹೆಸರಿನ ಬೇರೆಬೇರೆ ಗ್ರಂಥಗಳು, ಬೇರೆ ಬೇರೆ ಸಂದರ್ಭಗಳಲ್ಲಿ ಕಾಣಿಸಿಕೊಂಡವು, ನಾಮಸಾಮ್ಯಭ್ರಾಂತಿಯಿಂದ ಒಂದೇ ಗ್ರಂಥ

ವೆನ್ನುವಂತೆ ವ್ಯವಹರಿಸಲ್ಪಟ್ಟು ಉಂಟಾದ ಹಗರಣವನ್ನು ಈಗಾಗಲೇ ಮೇಲೆ ಗಮನಿಸಿದೆ. ಈ ಹಿನ್ನೆಲೆಯಲ್ಲಿ ನೋಡಿದರೆ, ತುಂಬುಲೂರಾಚಾರ್ಯನ 'ಚೂಡಾಮಣಿ' ವ್ಯಾಖ್ಯಾನವನ್ನೂ ಜಯಕೀರ್ತಿ ಸೂಚಿತವಾದ 'ಚೂಡಾಮಣಿ' ಗ್ರಂಥವನ್ನೂ ಸಮೀಕರಣಕ್ಕೆ ಗಟ್ಟಿಯಾದ ಆಧಾರಗಳು ದೊರೆಯುವವರೆಗೆ ಬೇರೆಬೇರೆಯ ಗ್ರಂಥಗಳೆಂದು ವ್ಯವಹರಿಸುವುದೇ ಕ್ಷೇಮವೆಂದು ತೋರುತ್ತದೆ.

ಪ್ರಭುಸೇನನ ಅನುಯಾಯಿಗಳ 'ಅಲಂಕಾರ' ಎಂಬ ಕಾವ್ಯವೋ ಶಾಸ್ತ್ರವೋ ಗೀತಿಕೆಯೆಂಬ ಛಂದಸ್ಸನ್ನು ಬಳಸಿದೆಯೆಂಬುದಾಗಿ ಜಯಕೀರ್ತಿಯ ಮಾತಿನಿಂದ ತಿಳಿಯುತ್ತದೆ. ಸಾಕಷ್ಟು ಸಂಖ್ಯೆಯಲ್ಲಿ ಗೀತಿಕೆಯ ಉದಾಹರಣೆಗಳನ್ನು ಕಾಣಬಹುದಾದ ಅಲಂಕಾರ ಗ್ರಂಥ 'ಕವಿರಾಜಮಾರ್ಗ'ವೇ ಜಯಕೀರ್ತಿ ಕುರಿತ 'ಅಲಂಕಾರ' ಆಗಿರಬಹುದೇ? ಈ ಊಹೆ ಸರಿಯಲ್ಲವಾದರೆ, ಬೇರೆ ಯಾವ ಹಾಗೂ ಯಾವ ಕಾಲದ ಗ್ರಂಥವನ್ನು 'ಛಂದೋನುಶಾಸನ'ವಲ್ಲಿ ಕುರಿತಿದೆಯೋ ಸದ್ಯದಲ್ಲಿ ಗೊತ್ತುಮಾಡುವುದು ಸಾಧ್ಯವಾಗುವುದಿಲ್ಲ.

ಅನ್ಯಭಾಷೆಯ ಗ್ರಂಥಗಳು: 'ಯಾಪ್ಪರುಂಗಲಕ್ಕಾರಿಹೈ' ಎಂಬ ತಮಿಳು ಲಕ್ಷಣ ಗ್ರಂಥದ ಸಾಕ್ಷ್ಯ: ಯಾಪ್ಪರುಂಗುಲಕ್ಕಾರಿಹೈ' ಎಂಬ ಛಂದೋಗ್ರಂಥವೊಂದು ತಮಿಳು ಭಾಷೆಯಲ್ಲಿದೆ. ಇದರ ಕರ್ತೃ ಅಮೃತಸಾಗರನೆಂಬ ಜೈನಲಾಕ್ಷಣಿಕ. ಈತ ಯಾವ ಕಾಲದಲ್ಲಿದ್ದು ತನ್ನ ಗ್ರಂಥವನ್ನು ರಚಿಸಿದನೆಂಬುದು ತಿಳಿಯದು. ಗ್ರಂಥರಚನೆ ಸು. ೧೧ನೆಯ ಶತಮಾನಕ್ಕೆ ಹಿಂದೆ ಆಗಿರಬಹುದೆಂದು ಭಾವಿಸಲಾಗಿದೆ. ಈ ಗ್ರಂಥಕ್ಕೆ ಜೈನನೇ ಆದ ಗುಣಸಾಗರನೆಂಬ ಇನ್ನೊಬ್ಬನ ವ್ಯಾಖ್ಯಾನವಿದೆ. ಈತನದೂ ಜೀವಿತ ಕಾಲವಾಗಲಿ ವ್ಯಾಖ್ಯಾನ ರಚಿಸಿದ ಕಾಲವಾಗಲಿ ತಿಳಿದಿಲ್ಲ. ಪ್ರಾಯಶಃ ೧೨ನೆಯ ಶತಮಾನದಿಂದೀಚೆಯೆಂದು ಕೆಲವರ ಊಹೆ. ಈ ವ್ಯಾಖ್ಯಾನದ ಪೀಠಿಕೆಯ ಭಾಗದಲ್ಲಿ "ಗುಣಗಾಂಕಿಯುಮೆನ್ನುಂ ಕರುನಾಡಗಚ್ಚುಂದಮೋ ಪೋಲ್ ಮಹಡೂಮುನ್ನಿಲೈಯುಡ್ಶೈತ್ತಾಯ್ ಅವ್ವೈಯಡಕ್ಕಮುಡ್ಶೈತ್ತಾಯ್" ಎಂಬುದಾಗಿ ಹೇಳಿದೆ. ಬೇರೆ ಕೆಲವು ಕೃತಿಗಳ ಜೊತೆಯಲ್ಲಿ 'ಗುಣಗಾಂಕಿಯುಂ' ಎಂಬ ಕನ್ನಡ ಭಾಷೆಯ ಛಂದೋಗ್ರಂಥವನ್ನೂ ಇಲ್ಲಿ ಹೆಸರಿಸಿದ್ದು, ಈ ಗ್ರಂಥವು ಸ್ತ್ರೀಯೊಬ್ಬಳನ್ನು ಉದ್ದೇಶಿಸಿ ಬರೆದಿರುವುದಾಗಿಯೂ ಗ್ರಂಥಕರ್ತೃ ತನ್ನ ವಿನಯವನ್ನು ಅದರಲ್ಲಿ ಸೂಚಿಸಿರುವುದಾಗಿಯೂ ಆ ಕೆಲವು ವೈಲಕ್ಷಣ್ಯಗಳನ್ನು ಅಮೃತಸಾಗರನ ಗ್ರಂಥ ಕೂಡ ಅನುಸರಿಸಿದೆಯೆಂಬುದಾಗಿಯೂ ಬರೆದಿದೆ. ಗ್ರಂಥದ ಹೆಸರನ್ನು ಹೇಳಿದೆಯಲ್ಲದೆ, ಅದರ ಕರ್ತೃ ಯಾರೆಂಬುದಾಗಲಿ ಅದರ ವಿಶೇಷಗಳೇನೆಂಬುದಾಗಲಿ ಅಲ್ಲಿ ಹೇಳಿಲ್ಲ. ಈವರೆಗೆ ಈ ಕನ್ನಡ ಛಂದೋಗ್ರಂಥ ದೊರೆತಿಲ್ಲ; ಈ ಗ್ರಂಥದ ಅಸ್ತಿತ್ವ, ಸ್ವರೂಪ ಈ ಸಂಬಂಧವಾದ ಬೇರಾವ ಆಧಾರವೂ ದೊರೆತಿಲ್ಲ.

ಗ್ರಂಥದ ಹೆಸರನ್ನು ಗಮನಿಸಿ, ಈ 'ಗುಣಗಾಂಕಿಯುಂ' ೮೪೪ರಿಂದ ೮೮೮ರವರೆಗೆ ರಾಜ್ಯವಾಳಿದ ಪೂರ್ವಚಾಲುಕ್ಯದೊರೆ ಗುಣಗಾಂಕ ವಿಜಯಾದಿತ್ಯನಿಗೆ ಅಂಕಿತವಾದೊಂದು ಗ್ರಂಥವಾಗಿರಬೇಕು ಎಂದು ಮೊದಲು ಮದ್ರಾಸು ಪ್ರಾಂತದ ಸಂಸ್ಕೃತ

ಮತ್ತು ತಮಿಳು ಹಸ್ತಪ್ರತಿಗಳ ಶೋಧಸಂಬಂಧವಾಗಿ ಪ್ರಕಟಿಸಿದ ಶೇಷಗಿರಿಶಾಸ್ತ್ರಿಯವರ ವರದಿಯಲ್ಲಿ (ನಂ. ೧, ಪು. ೩೪) ಊಹಿಸಲಾಗಿತ್ತು. ಈ ವಿಷಯವನ್ನು ತಿಳಿಸುತ್ತ, ಆರ್. ನರಸಿಂಹಾಚಾರ್ಯರು ಪೂರ್ವೋಕ್ತವಾದ ದೊರೆಯ ಕಾಲದಲ್ಲಿ ಅಂಥ ಕನ್ನಡ ಛಂದೋಗ್ರಂಥವೊಂದು ರಚಿತವಾಗಿರಬಹುದಾದ ಸಾಧ್ಯತೆಯನ್ನು ಒಪ್ಪಿದರು ; ಆದರೂ ನಮಗೆ ಈಗ ದೊರೆತಿರುವ ಪ್ರಾಚೀನತಮ ಛಂದೋಗ್ರಂಥ 'ಛಂದೋಂಬುಧಿ'ಯೇ ಗುಣಗಾಂಕಿಯಕ್ಕೆ ಹೇಳಿರುವ ಕೆಲವು ವಿವರಣೆಗಳನ್ನು ಪೂರೈಸುವುದರಿಂದಲೂ ಗುಣ ಗಂಗ ಅಥವಾ ಗುಣಗಾಂಗ ಎಂಬ ಬಿರುದು ೧ನೆಯ ನಾಗವರ್ಮನ ಆಶ್ರಯದಾತನಾದ ರಕ್ಕಸಗಂಗನಿಗೆ ಇದ್ದಿರಬಹುದಾದ್ದರಿಂದಲೂ 'ಛಂದೋಂಬುಧಿ'ಯನ್ನೇ ತಮಿಳು ಛಂದೋ ಗ್ರಂಥದ ವ್ಯಾಖ್ಯಾನಭಾಗದಲ್ಲಿ ಉದ್ದೇಶಿಸಿರಬೇಕು—ಎಂಬುದಾಗಿ ಮೊದಲು ಭಾವಿ ಸಿದರು.[129] ಆದರೆ ಕೆಲವು ಕಾಲದಮೇಲೆ ಈ 'ಗುಣಗಾಂಕಿಯ' ಮತ್ತು 'ಛಂದೋಂಬುಧಿ ಗಳ ಸಮೀಕರಣದ ಊಹೆಯನ್ನು ಕೈಬಿಟ್ಟು, ಶೇಷಗಿರಿಶಾಸ್ತ್ರಿಯವರ ವರದಿಯ ಊಹೆ ಯನ್ನೇ ಸ್ಪಷ್ಟೀಕರಿಸಿದರು ; 'ಗುಣಗ', 'ಗುಣಗಾಂಕ', 'ಗುಣಕೆ ನಲ್ಲ' ಎಂಬ ವಿಶೇಷಣ ಗಳನ್ನುಳ್ಳ ೩ನೆಯ ವಿಜಯಾದಿತ್ಯನೆಂಬ (೮೪೪-೮೮) ಮೂಡಣ ಚಾಳುಕ್ಯರಾಜನಿಗೆ ಗ್ರಂಥಕರ್ತೃ ತನ್ನ ಛಂದೋಗ್ರಂಥವನ್ನು ಅಂಕಿತಮಾಡಿರುವಂತೆ ತೋರುತ್ತದೆ ಎಂದೂ ಇಂದು ಉಪಲಬ್ಧವಿಲ್ಲದ ಆ ಗ್ರಂಥವೇ ಕನ್ನಡದ ಆದ್ಯ ಛಂದೋಗ್ರಂಥವೆಂದೂ ಅಭಿ ಪ್ರಾಯಪಟ್ಟರು.[130]

ಆರ್. ನರಸಿಂಹಾಚಾರ್ಯರು ತಮ್ಮ ಕನ್ನಡ ಇಂಗ್ಲಿಷ್ ಸಾಹಿತ್ಯಚರಿತ್ರೆಗಳ ಮೂಲಕ ರೂಢಿಸಿದ ಈ ಅಭಿಪ್ರಾಯವನ್ನೇ ಈಚೆಯ ಕನ್ನಡ ವಿದ್ವಾಂಸರೆಲ್ಲ ಚರ್ಚೆ ಯಿಲ್ಲದೆ ಬಹುಮಟ್ಟಿಗೆ ಒಪ್ಪಿಕೊಂಡು ಬಂದಿದ್ದಾರೆ. ಕೆಳಗೆ ಒಂದೆರಡು ಅವತರಣಿಕೆಗಳನ್ನು ನೋಡಬಹುದು :

(i) "ಕನ್ನಡದಲ್ಲಿ ಛಂದಸ್ಸಿನ ವಿಷಯವಾಗಿ ಮೊದಲು ಬರೆದವನು ಅಲ್ಲದೆ ಮಾರ್ಗ ದರ್ಶಿಯಾದವನು ಗುಣಗಾಂಕೀಯವೆಂಬ ಗ್ರಂಥವನ್ನು ಬರೆದ ಪಂಡಿತನೇ ಹೊರತು ನಾಗವರ್ಮನಲ್ಲ. ಆದ್ದರಿಂದ ೯ನೆಯ ಶತಮಾನವು ಸಂಪೂರ್ಣವಾಗುವುದರೊಳಗಾಗಿಯೆ ಲಕ್ಷ್ಯಗ್ರಂಥಗಳಲ್ಲದೆ ಲಕ್ಷಣಗ್ರಂಥಗಳೂ ಹುಟ್ಟಿದುವೆಂಬ ವಿಚಾರದಿಂದ ಕನ್ನಡ ನುಡಿಯು ೯ನೆಯ ಶತಮಾನಕ್ಕೆ ಹಿಂದೆಯೇ ಬಹಳ ಉಚ್ಛ್ರಾಯದಲ್ಲಿತ್ತೆಂದು ತೋರುವುದಷ್ಟೇ"[131] (ii) "'ಛಂದೋಂಬುಧಿ'ಯಲ್ಲಿ ನಾಗವರ್ಮನು ಇದನ್ನೇ (ಗುಣ ಗಾಂಕಿಯಂ) ಮೇಲ್ಪಂಕ್ತಿಯಾಗಿ ಇಟ್ಟುಕೊಂಡಿರಬೇಕೆಂದು ತೋರುತ್ತದೆ."[132] (iii) "ಈಗಿರುವ ಛಂದೋಂಬುಧಿ ಗ್ರಂಥದಲ್ಲೇ ಆ ಗುಣಗಾಂಕಿಯವೆಂಬ ಗ್ರಂಥ ಅದರ ಭಾಗ ಗಳು ಮಿಶ್ರವಾಗಿರಬಹುದೆಂದು ಊಹಿಸಿದರೆ ತಪ್ಪಾಗಲಾರದು".[133] (iv) "'ಗುಣ ಗಾಂಕಿಯ' ಎಂಬ ಪ್ರಥಮ ಕನ್ನಡ ಛಂದೋಗ್ರಂಥ ಅಲಭ್ಯ."[134]

ಶೇಷಗಿರಿಶಾಸ್ತ್ರಿಯವರ ವರದಿಯ ಸೂಚನೆಯನ್ನು ಗ್ರಹಿಸಿ, 'ಗುಣಗಾಂಕಿಯ'ದ ರಚನೆಯ ವಿಷಯದಲ್ಲಿ ೯ನೆಯ ಶತಮಾನದಲ್ಲಿ ರಾಜ್ಯವಾಳಿದ ಪೂರ್ವಚಾಲುಕ್ಯರಾಜ

ಗುಣಗ ವಿಜಯಾದಿತ್ಯನ ಹೆಸರನ್ನು ತಂದು ಜತೆಗೂಡಿಸಿದ್ದಕ್ಕೆ ಮುಖ್ಯ ಆಧಾರ ಎಂದರೆ, ಆ ದೊರೆಯ ಬಿರುದುಗಳು ಗುಣಗ, ಗುಣಗಾಂಕ ಮುಂತಾಗಿರುವುದು. ಇರುವುದರಲ್ಲಿ ಇದು ತಾಳಿಕೆಯಾದ ಒಂದು ಊಹೆ. ಆದರೆ ಇದು ಕೆಲವರಿಗೆ ಅಷ್ಟಾಗಿ ಸರಿ ಕಂಡಿಲ್ಲ. ಪ್ರತಿಯಾಗಿ ಅವರು, ಈ ಉಕ್ತಗ್ರಂಥದ ಕರ್ತೃ ಗುಣಗಾಂಕ ಎಂಬವನೆಂದೂ 'ಛಂದೋಂಬುಧಿ'ಯಲ್ಲಿ ರಗಳೆ ಛಂದಸ್ಸಿನ ಲಕ್ಷಣವನ್ನು ಹೇಳುವ ಪದ್ಯದಲ್ಲಿ ಬರುವ 'ಗುಣಾಗ್ರಣಿ' ಎಂಬ ಮಾತು (೩-೨೨) ಆ ವ್ಯಕ್ತಿಯ ಹೆಸರನ್ನು ಸೂಚಿಸುತ್ತಿರಬಹುದೆಂದೂ ಅದರಿಂದಾಗಿ 'ಗುಣಗಾಂಕಿಯ'ವೆಂಬ ಕೃತಿ "ನಾಗವರ್ಮನ ಪ್ರಕಾರ ರಗಳೆಯ ಲಕ್ಷಣವನ್ನೊಳಗೊಂಡ ಒಂದು ಪ್ರಾಚೀನಕೃತಿ"ಯಾಗಿದ್ದಿತೆಂದೂ ಭಾವಿಸಿರುವುದು ಕಂಡುಬರುತ್ತದೆ.[135] ಆದರೆ ಗುಣಾಗ್ರಣಿ = ಗುಣಗಾಂಕ ಎಂಬ ಗ್ರಹಿಕೆ ಸರಿಯಲ್ಲ, ಅದನ್ನು ಆಶ್ರಯಿಸಿ ನಿಂತ ನಿರ್ಣಯ ನಿಲ್ಲತಕ್ಕದ್ದಲ್ಲ.

ತಮಿಳು ವಿದ್ವಾಂಸರು ಊಹಿಸಿರುವ ಕಾಲನಿರ್ಣಯ ಸರಿಯಾಗಿದ್ದರೆ, ತಮಿಳು 'ಯಾಪ್ಪರುಂಗಲಕ್ಕಾರಿಹೈ'ಗೆ ವ್ಯಾಖ್ಯಾನ ರಚಿತವಾದ ಸು. ೧೧ನೆಯ ಶತಮಾನದಿಂದೊಳಗೆ ಯಾವಾಗಬೇಕಾದರೂ 'ಗುಣಗಾಂಕಿಯ'ವೆಂಬ ಕನ್ನಡ ಛಂದೋಗ್ರಂಥ ಹುಟ್ಟಿರಬಹುದು. ಅದು ನಾಗವರ್ಮನ 'ಛಂದೋಂಬುಧಿ'ಯಿಂದ ಬೇರೆಯೇ ಆದ ಒಂದು ಗ್ರಂಥವಾಗಿರಬಹುದು, ಇಲ್ಲವೆ 'ಛಂದೋಂಬುಧಿ'ಯೇ ಆಗಿರಬಹುದು. ಅದು 'ಕವಿರಾಜಮಾರ್ಗ'ಕ್ಕೆ ಹಿಂದೆಯೊ ಬಳಿಕವೋ ರಚಿತವಾಗಿರಬಹುದು. ಸದ್ಯದ ಸ್ಥಿತಿಯಲ್ಲಿ ಇದಕ್ಕಿಂತ ಹೆಚ್ಚಿಗೆ ಏನೂ ಹೇಳುವುದಕ್ಕಾಗದು. ಈ ಗ್ರಂಥ ಕನ್ನಡ ಸಾಹಿತ್ಯದ ಹಳಮೆಗೆ ತಕ್ಕ ಸಾಕ್ಷ್ಯವಾಗಿ ಒದಗುವುದು ಸದ್ಯಕ್ಕೆ ಸಾಧ್ಯವಿಲ್ಲ.

ಈ ಪರಿಶೀಲನೆಯಿಂದ ಹೊರಪಡುವ ಸಂಗತಿಗಳನ್ನು ಇಲ್ಲಿ ಕ್ರೋಡೀಕರಿಸಬಹುದು: (i) ಪಂಪ, ನಾಗಚಂದ್ರ, ನಾಗವರ್ಮರ ಗ್ರಂಥಗಳಲ್ಲಿ ದೊರೆಯುವ ಕೆಲವು ಹೇಳಿಕೆಗಳೂ ಕವಿಗಳ ಮತ್ತು ಕೃತಿಗಳ ಹೆಸರುಗಳೂ 'ಕವಿರಾಜಮಾರ್ಗ'ಕಾಲದ ಮತ್ತು ಆ ಪೂರ್ವದ ಕನ್ನಡ ಸಾಹಿತ್ಯದ ಸೃಷ್ಟಿಯನ್ನು ಸೂಚಿಸುವುದು ಸಾಧ್ಯ. (ii) ಕನ್ನಡ ಭಾಷೆಯ ಅಲಂಕಾರ, ವ್ಯಾಕರಣ ಮತ್ತು ಸಂಕಲನ ಗ್ರಂಥಗಳಲ್ಲಿಯೂ ಸಂಸ್ಕೃತದಲ್ಲಿ ಬರೆಯಲ್ಪಟ್ಟ ಕನ್ನಡ ವ್ಯಾಕರಣ ಗ್ರಂಥಗಳಲ್ಲಿಯೂ ಆಯಾ ಗ್ರಂಥ ರಚಿತವಾದ ಕಾಲಕ್ಕೆ ಪ್ರಾಚೀನವಾದ ಕನ್ನಡ ಗ್ರಂಥಗಳಿಂದ ಪದ್ಯಗಳನ್ನೂ ಅವುಗಳ ಭಾಗಗಳನ್ನೂ ಆಯ್ದುಕೊಂಡಿದ್ದು; ಅವುಗಳಿಗೆ ಮೂಲವಾದ ಹಲವು ಗ್ರಂಥಗಳಲ್ಲಿ ಕೆಲವು 'ಕವಿರಾಜಮಾರ್ಗ'ಕ್ಕೆ ಹಿಂದೆ ರಚಿತವಾಗಿರುವ ಸಂಭವವುಂಟು; ಅವು ನಷ್ಟವಾಗಿರಬಹುದು, ಇಲ್ಲವೆ ಇನ್ನೂ ದೊರೆಯದಿರಬಹುದು. (iii) ಇಂದ್ರನಂದಿಯ 'ಶ್ರುತಾವತಾರ' 'ಚಾವುಂಡರಾಯ ಪುರಾಣ'ಗಳಲ್ಲಿ ಉಕ್ತರಾದ ತುಂಬುಲೂರಾಚಾರ್ಯ ಮತ್ತು ಶ್ಯಾಮಕುಂದಾಚಾರ್ಯರ ಕಾಲ ಅನಿಶ್ಚಿತ; ಜೈನವಿದ್ವಾಂಸರು ಸೂಚಿಸುವ ಕಾಲವನ್ನು ವಿಚಾರ ವಿಮರ್ಶೆಗಳಿಂದ ಪರೀಕ್ಷಿಸಬೇಕಾಗಿದೆ. ಕನ್ನಡ ಸಾಹಿತ್ಯದ ಮೇಲೆ ಒಳ್ಳೆಯ ಬೆಳಕು ಬೀಳಲು, ಅವರ ಕಾಲನಿರ್ಣಯವು ಆಗತ್ಯವಾದೊಂದು ಶೋಧವಾಗಿದೆ. (iv) ಭಟ್ಟಾ

ಕಳಂಕನ 'ಶಬ್ದಾನುಶಾಸನ'ದಲ್ಲಿ ಉಕ್ತವಾದ 'ಚೂಡಾಮಣಿ' ಕವಿರಾಜಮಾರ್ಗ ಪೂರ್ವಕಾಲೀನ ರಚನೆಯೋ ಉತ್ತರಕಾಲೀನ ರಚನೆಯೋ ಹೇಳಲಾಗದು; ಜಯ ಕೀರ್ತಿಯ 'ಛಂದೋನುಶಾಸನ'ದಲ್ಲಿ ಉಕ್ತವಾದ ಕನ್ನಡ ಗ್ರಂಥಗಳ ವಿಷಯವೂ ಅಷ್ಟೇ. (v) ನಿಷ್ಕೃಷ್ಟವಾಗಿ ಯಾವ ವಿಚಾರವೂ ತಿಳಿಯದ 'ಗುಣಗಾಂಕಿಯ'ವೆಂಬ ಕನ್ನಡ ಛಂದೋಗ್ರಂಥ ಕನ್ನಡ ಸಾಹಿತ್ಯದ ಹಳಮೆಗೆ ತಕ್ಕ ಸಾಕ್ಷ್ಯವಾಗಲಾರದು.

## ಪ್ರಾಚೀನ ಕನ್ನಡಕವಿ ಸ್ಮೃತರಾದ ಮೂವರು ಜೈನಾಚಾರ್ಯರು

ಕೆಲವರು ಪ್ರಾಚೀನ ಕನ್ನಡ ಕವಿಗಳೂ ಪುರಾಣಕರ್ತರೂ ಜೈನಧರ್ಮದ ಹಾಗೂ ಸಾಹಿತ್ಯದ ಇತಿಹಾಸದಲ್ಲಿ ಖ್ಯಾತನಾಮರಾದ ಸಮಂತಭದ್ರ, ಪೂಜ್ಯಪಾದ, ಕವಿ ಪರಮೇಷ್ಠಿಗಳೆಂಬ ಮೂವರು ಆಚಾರ್ಯರನ್ನು ತಂತಮ್ಮ ಗ್ರಂಥದ ಆದಿಭಾಗದಲ್ಲಿ ಗೌರವಭಾವದಿಂದ ಸ್ಮರಿಸಿರುವುದೂ ಕೀರ್ತಿಸಿರುವುದೂ ಕಂಡುಬರುತ್ತದೆ. ಪಂಪ, ಚಾವುಂಡರಾಯ, ನಯಸೇನ, ನಾಗಚಂದ್ರ, ನೇಮಿಚಂದ್ರ, ಅಗ್ಗಳ, ಪಾರ್ಶ್ವಪಂಡಿತ, ಗುಣವರ್ಮ. ಈ ಕೆಲವರ ಕೃತಿಗಳ ಆದಿಭಾಗಗಳನ್ನು ಇದಕ್ಕಾಗಿ ಪರಿಶೀಲಿಸಬಹುದು. ಇಲ್ಲಿ ಆ ಆಚಾರ್ಯರ ಮಹಿಮೆ, ವಿದ್ವತ್ತು, ಕೃತಿಗಳ ಉಲ್ಲೇಖ ಮೊದಲಾದುವು ಬಂದಿವೆ. ಈ ಆಚಾರ್ಯರ ಉಕ್ತ ಕೃತಿಗಳು ಕನ್ನಡ ಭಾಷೆಯಲ್ಲಿ ಬರೆದವಲ್ಲ, ಹೆಚ್ಚಿನ ಮಟ್ಟಿಗೆ ಸಂಸ್ಕೃತದಲ್ಲಿ ಬರೆದವು. ಕನ್ನಡದಲ್ಲಿ ಇವರು ಏನನ್ನಾದರೂ ಬರೆದಿರುವುದುಂಟೇ ಎಂಬು ದಕ್ಕೆ ಕನ್ನಡ ಸಾಹಿತ್ಯದಲ್ಲಾಗಲಿ, ಸಂಸ್ಕೃತಪ್ರಾಕೃತ ಸಾಹಿತ್ಯಗಳಲ್ಲಾಗಲಿ ಯಾವ ಆಧಾರವೂ ನಮಗೆ ದೊರೆತಿಲ್ಲ. ಹಾಗಾದರೆ ಇವರನ್ನು ನಮ್ಮ ಕವಿಗಳು ಏಕೆ ಹೆಸರಿಸಿ ದ್ದಾರೆ? ಇವರು ಜೈನಧರ್ಮದ ಪರಮಾಚಾರ್ಯರೆಂದು ಪೂಜ್ಯರಾಗಿದ್ದುದೂ ಸಂಸ್ಕೃತ ಪ್ರಾಕೃತ ಜೈನ ಸಾಹಿತ್ಯದಲ್ಲಿ ಪುರಾಣ, ಸಿದ್ಧಾಂತ, ಶಾಸ್ತ್ರ ಮತ್ತು ಲಕ್ಷಣಗ್ರಂಥ ಗಳನ್ನು ಬರೆದು ಪ್ರಖ್ಯಾತರಾದ ಕವಿಗಳೆಂದೂ ಪಂಡಿತರೆಂದೂ ಖ್ಯಾತರಾಗಿದ್ದುದೂ ಆ ಉಲ್ಲೇಖದ ಕಾರಣವಿರಬಹುದು. ತಮ್ಮ ಪ್ರಾಚೀನತೆಯಿಂದಲೂ ಪ್ರಖ್ಯಾತಿಯಿಂದಲೂ ಅವರು ೯ನೆಯ ಶತಮಾನದ ಹೊತ್ತಿಗಾಗಲೇ ಸಂಸ್ಕೃತ ಕನ್ನಡ ಸಾಹಿತ್ಯದ ಹಿರಿಯ ಗ್ರಂಥಕರ್ತೃಗಳಿಗೆ ಸ್ಫೂರ್ತಿಸ್ಥಾನದಲ್ಲಿದ್ದುದು ಆಯಾ ಸಾಹಿತ್ಯೇತಿಹಾಸದಿಂದ ಸ್ಪಷ್ಟ ಪಟ್ಟಿರುವ ಸಂಗತಿಯೇ ಆಗಿದೆ. ಅವರ ಕೆಲವು ಗ್ರಂಥಗಳಿಗೆ ಅನುವಾದಗಳನ್ನೂ ವ್ಯಾಖ್ಯಾನ ಗಳನ್ನೂ ಮಾಡುವುದರ ಮೂಲಕ, ಗ್ರಂಥಭಾಗಗಳನ್ನು ಉದ್ಧರಿಸುವುದರ ಮೂಲಕ, ಕನ್ನಡ ಕವಿಗಳು ತಮ್ಮ ಪೂರ್ವಾಚಾರ್ಯ ಋಣವನ್ನು ಸಲ್ಲಿಸಿದ್ದಾರೆ.

ಸಮಂತಭದ್ರನ ಕಾಲ, ಕೆಲವರು ಜೈನ ಸಾಹಿತ್ಯಜ್ಞರ ಅಭಿಪ್ರಾಯದಂತೆಯೂ ಕವಿಚರಿತೆಕಾರರ ಅಭಿಪ್ರಾಯದಂತೆಯೂ ಸು. ೨ನೆಯ ಶತಮಾನ. ಕನ್ನಡನಾಡಿನಲ್ಲಿ ದೊರೆಯುವ ಹಲವು ಶತಮಾನಗಳೀಚೆಯ ಶಾಸನ (ಶ್ರ.ಬೆ. ೬೭; ೧೧೨೯) ಮತ್ತು ಗ್ರಂಥಾಂತರ ('ರಾಜಾವಳೀ ಕಥೆ') ಸಾಕ್ಷ್ಯಗಳಿಂದ ಈತನು ಭೀಮರಥಿ ಕೃಷ್ಣವೇಣೀ ನದಿಗಳ ನಡುವಣ ಉತ್ಕಲಿಕಾ ಗ್ರಾಮದಲ್ಲಿ ಹುಟ್ಟಿದನೆಂದೂ ಮಣುವಕನ ಹಳ್ಳಿಯಲ್ಲಿ

ಅನಶನಾದಿ ತಪಸ್ಸನ್ನು ಮಾಡಿದರೆಂದೂ ತಿಳಿಯತ್ತದೆ. ಇವುಗಳೊಡನೆ ಹೊಂದಿಬರದ ಇತಿವೃತ್ತದ ಅಂಶಗಳೂ ಉಂಟು. ಸಂಸ್ಕೃತದಲ್ಲಿ 'ಆಪ್ತಮೀಮಾಂಸಾ', 'ರತ್ನಕರಂಡಕ ಶ್ರಾವಕಾಚಾರ' ಮೊದಲಾದ ಗ್ರಂಥಗಳ ಕರ್ತೃವಾದ ಈತ ಕನ್ನಡದಲ್ಲಿ ಏನು ಬರೆದಿದ್ದಾನೆಯೋ ತಿಳಿಯದು. ಕನ್ನಡಕವಿಗಳು ಈತನನ್ನು ಸ್ಮರಿಸಿರುವುದಕ್ಕೆ ಈತ ಕನ್ನಡ ದೇಶದವನೆಂಬುದೂ ಕನ್ನಡದಲ್ಲಿ ಗ್ರಂಥರಚನೆ ಮಾಡಿದನೆಂಬುದೂ ಕಾರಣವಿರಬಹುದೆಂದು ರೈಸ್ ಊಹಿಸಿದ್ದಾರೆ.[136]

ಪೂಜ್ಯಪಾದನ ಕಾಲ, ಸು. ೬೦೦ ಅಥವಾ 'ದಿಗಂಬರದರ್ಶನ'ವೆಂಬ ಗ್ರಂಥದಲ್ಲಿ ದೊರೆಯುವ ಆಧಾರದಿಂದ ಪ್ರಾಯಃ ೪೭೦ರ ಮೊದಲು–ಎಂಬುದು ಕವಿಚರಿತೆಕಾರರ ಮತ. ಸಂಸ್ಕೃತದಲ್ಲಿ 'ಕಲ್ಯಾಣಕಾರಕ'ವೆಂಬ ವೈದ್ಯಗ್ರಂಥ, 'ಜೈನೇಂದ್ರವ್ಯಾಕರಣ' ಎಂಬ ವ್ಯಾಕರಣಗ್ರಂಥ, 'ತತ್ತ್ವಾರ್ಥವೃತ್ತಿ' ಎಂಬ ಆಗಮಗ್ರಂಥ ಇವನ್ನು ರಚಿಸಿದಂತೆ ಕನ್ನಡಕವಿ ಪಾರ್ಶ್ವಪಂಡಿತನ ಮಾತು. ಕನ್ನಡದಲ್ಲಿ ಬರೆದುದಕ್ಕೆ ಆಧಾರವಿಲ್ಲ. 'ರಾಜಾವಳೀ ಕಥೆ'ಯ ಪ್ರಕಾರ ಈ ಆಚಾರ್ಯನು ಕೊಳ್ಳೇಗಾಲದ ಮಾಧವಭಟ್ಟ ಶ್ರೀದೇವಿಯರೆಂಬ ಬ್ರಾಹ್ಮಣದಂಪತಿಗಳ ಪುತ್ರನಾಗಿ ಶಕ ೩೦೦ರಲ್ಲಿ ಹುಟ್ಟಿದನೆಂದು ತಿಳಿಯುವುದಾದರೂ, ಈ ಆಕರಗ್ರಂಥದ ಪ್ರಾಮಾಣಿಕತೆ ವಿಶ್ವಸನೀಯವಲ್ಲ.

ಕವಿಪರಮೇಷ್ಠಿ ಪಂಪ, ಚಾವುಂಡರಾಯ, ನಯಸೇನ, ಅಗ್ಗಳ, ಕಮಲಭವ, ನೇಮಿಚಂದ್ರ, ಪಾರ್ಶ್ವಪಂಡಿತ, ಇಮ್ಮಡಿ ನಾಗವರ್ಮ ಈ ಕನ್ನಡ ಕವಿಗಳಿಂದ ಕೀರ್ತಿತನಾಗಿದ್ದರೂ ಕನ್ನಡದಲ್ಲಿ ಏನಾದರೂ ಬರೆದಿದ್ದನೇ ಎನ್ನುವುದು ತಿಳಿದಿಲ್ಲ. ಈತನು 'ವಾಗರ್ಥಸಂಗ್ರಹ'ವೆಂಬ ತ್ರಿಷಷ್ಟಿಶಲಾಕಾಪುರುಷ ಚರಿತ್ರೆಯೊಂದನ್ನು ರಚಿಸಿದ್ದು ಜಿನಸೇನನ 'ಪೂರ್ವಪುರಾಣ'ದಿಂದಲೂ (೧–೬೦) ಅದು ಒಂದು ಗದ್ಯಕಥೆಯೆಂಬ ಕಾವ್ಯಪ್ರಕಾರಕ್ಕೆ ಸೇರಿದ ಗ್ರಂಥವಾಗಿದ್ದು, 'ಪೂರ್ವಪುರಾಣ'ದ ಮಾತೃಕೆಯಾಗಿದ್ದಿತೆಂದು ಗುಣಭದ್ರನ 'ಉತ್ತರಪುರಾಣ'ದ ಉಪಸಂಹಾರಭಾಗದಿಂದಲೂ ತಿಳಿದುಬರುತ್ತದೆ. ಇದರಿಂದ ಈ ಕವಿ 'ಪೂರ್ವಪುರಾಣ'ದ ಜಿನಸೇನನಿಗೆ ಹಿಂದೆ, ಎಂದರೆ ೮೫೦ರ ಮೊದಲು ಇದ್ದನೆಂಬುದು ಸ್ಪಷ್ಟವಾಗುತ್ತದೆ. ಕವಿಚರಿತೆಕಾರರು ಸಮಂತಭದ್ರ ಕವಿಪರಮೇಷ್ಠಿ ಪೂಜ್ಯಪಾದ ಎಂದು ಬಲುಮಟ್ಟಿಗೆ ಅನುಕ್ರಮತಪ್ಪದಂತೆ ಹೆಸರುಗಳು ಉಲ್ಲೇಖವಾಗುವುದನ್ನು ಕಂಡು ಕವಿಪರಮೇಷ್ಠಿಯ ಕಾಲವನ್ನು ಸು. ೫೫೦ ಎಂದು ಊಹಿಸಿದ್ದಾರೆ. ಇವನು ಅಷ್ಟು ಹಿಂದಿನವನೆಂದು ತಿಳಿಯಲು ಬೇರೆ ಆಧಾರಗಳು ಬೇಕು. 'ವಾಗರ್ಥಸಂಗ್ರಹ'ದ ಕೆಲವು ಭಾಗಗಳು ಕನ್ನಡಕವಿ ಚಾವುಂಡರಾಯನು ಬರೆದ 'ಚಾವುಂಡರಾಯ ಪುರಾಣ'ವೆಂಬ ಗ್ರಂಥದಲ್ಲಿ (೯೭೮) ಅಲ್ಲಲ್ಲಿ ಉದ್ಧೃತವಾಗಿರುವುದಕ್ಕೆ ಆಧಾರಗಳು ದೊರೆತಿವೆ. ಎಂದರೆ ಶಾಂತಿತೀರ್ಥಂಕರನ ಚರಿತೆ, ನೇಮಿತೀರ್ಥಂಕರನ ಚರಿತೆ ಮುಂತಾದ ಕಥಾಭಾಗಗಳಲ್ಲಿ ಆತನ ಹೆಸರಿನ ಜತೆಗೆ ಎತ್ತಿಬರೆದಿರುವ ಕೆಲವು ಸಂಸ್ಕೃತ ವೃತ್ತಗಳೂ ಶ್ಲೋಕಗಳೂ ('ಕವಿಪರಮೇಶ್ವರರ ವೃತ್ತ', 'ಕವಿಪರಮೇಶ್ವರರ ಶ್ಲೋಕ') ಆ ಗ್ರಂಥದ್ದೇ ಆಗಿರುವುದು ಬಲುಮಟ್ಟಿಗೆ ಸಾಧ್ಯ. ಇಂದು ಉಪಲಬ್ಧವಿಲ್ಲದ

ಈ ಗ್ರಂಥದ ಕೆಲವು ಭಾಗಗಳನ್ನಾದರೂ ಚಾವುಂಡರಾಯನು ಹೀಗೆ ಉಳಿಸಿಕೊಟ್ಟಿರುವುದು ಭಾರತೀಯ ಜೈನಸಾಹಿತ್ಯಕ್ಕೆ ಪ್ರಾಚೀನ ಕನ್ನಡ ಭಾಷೆ ಸಾಹಿತ್ಯಗಳು ನೀಡಿರುವ ದೊಡ್ಡ ಕೊಡುಗೆಯೆಂದೇ ವಿದ್ವಾಂಸರು ಭಾವಿಸಿದ್ದಾರೆ. ಈ ಗ್ರಂಥದ ಲಭ್ಯಭಾಗವಷ್ಟರಿಂದ ಇದು ಸಂಸ್ಕೃತ ಭಾಷೆಯಲ್ಲಿ ಪದ್ಯರೂಪವಾಗಿರಬಹುದೆಂದು ತೋರುತ್ತದೆಯಾದರೂ ಗುಣಭದ್ರನು ಅದನ್ನು ಗದ್ಯಕಥೆಯೆಂದು ಕರೆದಿರುವುದರಿಂದ, ಅದರಲ್ಲಿ ಗದ್ಯಭಾಗ ವಿಶೇಷವಾಗಿದ್ದು ಅಲ್ಲಲ್ಲಿ ಪದ್ಯಗಳನ್ನೂ ಬರೆದಿರಬಹುದೆಂದೂ ಚಾವುಂಡರಾಯನು ತನಗೆ ಬೇಕಾದ ಪದ್ಯಗಳನ್ನಷ್ಟೇ ಆಯ್ದುಕೊಂಡಿರಬಹುದೆಂದೂ ಊಹಿಸಲಾಗಿದೆ.[137] ಆದರೆ ಚಾವುಂಡರಾಯನಿಗೆ ಮುಖ್ಯವಾದ ಆಕರವಾಗಿರುವ ಜಿನಸೇನ ಗುಣಭದ್ರರ 'ಮಹಾಪುರಾಣ' (ಪೂರ್ವ ಮತ್ತು ಉತ್ತರಪುರಾಣಗಳು)ದಲ್ಲಿ ಕಂಡುಬರದಿರುವ ಒಂದೆರಡು ಕಥಾಖ್ಯಾಯಿಕೆಗಳು 'ಚಾವುಂಡರಾಯಪುರಾಣ'ದಲ್ಲಿವೆಯೆಂದು ತಿಳಿದುಬರುವುದರಿಂದ ಆ ಭಾಗಗಳು ಕವಿಪರಮೇಷ್ಠಿಯ 'ವಾಗರ್ಥಸಂಗ್ರಹ'ದಲ್ಲಿದ್ದಿರಬಹುದಾದ ಸದೃಶ ಭಾಗಗಳ ಅನುವಾದವೋ ಅನುಕರಣವೋ ಆಗಿರುವುದು ಸಾಧ್ಯ ಎಂದು ಊಹಿಸಲು ಕೂಡ ಅವಕಾಶವಿದೆ.[138]

ಈಚೆಗೆ 'ವಾಗರ್ಥಸಂಗ್ರಹ'ದ ಭಾಷೆಯ ವಿಚಾರದಲ್ಲಿ ಹೊಸದೊಂದು ಊಹೆಯನ್ನು ಮಾಡಿರುವುದು ಕಾಣುತ್ತದೆ.[139] ಈ ಊಹೆಯ ವಿವರಗಳ ಸಾರಾಂಶ (i) ಕವಿಪರಮೇಷ್ಠಿಯನ್ನು ವಿಶೇಷವಾಗಿ ಕನ್ನಡ ಕವಿಗಳೇ ಸ್ತುತಿಸಿದ್ದಾರೆ, ಜಿನಸೇನಗುಣಭದ್ರರ ಹೊರತು ಸಂಸ್ಕೃತದಲ್ಲಿ ಅಥವಾ ಪ್ರಾಕೃತದಲ್ಲಿ ಇತರ ಕವಿಗಳಾರೂ ಅವರನ್ನು ಸ್ತುತಿಸಿಲ್ಲ. ಆತ ಕನ್ನಡ ಕವಿಯಾಗಿದ್ದಿರಬಹುದೆಂಬುದನ್ನು ಇದು ಸೂಚಿಸುವಂತೆ ತೋರುತ್ತದೆ. (ii) 'ವಾಗರ್ಥಸಂಗ್ರಹ'ವನ್ನು 'ಗದ್ಯಕಥೆ' ಎಂದಿದೆಯಷ್ಟೆ. ಈ ಕಾವ್ಯಪ್ರಕಾರದ ಲಕ್ಷಣವನ್ನು ದಂಡಿ ಭಾಮಹ ಮುಂತಾದವರು ಸಂಸ್ಕೃತ ಲಕ್ಷಣಗ್ರಂಥಗಳಲ್ಲಿ ವಿವರಿಸಿಲ್ಲ. 'ಕವಿರಾಜಮಾರ್ಗ'ದಲ್ಲಿ ಅದನ್ನು ಕನ್ನಡ ಭಾಷೆಯಲ್ಲಿದ್ದ ಕಾವ್ಯಪ್ರಕಾರವೆಂದು ವರ್ಣಿಸಿದೆ. ಆದ್ದರಿಂದ 'ವಾಗರ್ಥಸಂಗ್ರಹ' ಕನ್ನಡ ಭಾಷೆಯ ಒಂದು ಗದ್ಯಗ್ರಂಥವಾಗಿರಬೇಕು. (iii) 'ಚಾವುಂಡರಾಯಪುರಾಣ'ದಲ್ಲಿ ಉದಾಹೃತವಾಗಿರುವ ಸಂಸ್ಕೃತ ಪದ್ಯಗಳು ಕವಿಪರಮೇಷ್ಠಿ ಬರೆದ ಆ ಭಾಷೆಯ ಬೇರೆ ಗ್ರಂಥದಿಂದ ಆಯ್ದುವಾಗಿರಬಹುದು, ಇಲ್ಲವೆ 'ವಡ್ಡಾರಾಧನೆ' 'ಚಾವುಂಡರಾಯ ಪುರಾಣ'ಗಳಲ್ಲಿ ಸಂಸ್ಕೃತಾದಿ ಭಾಷೆಯ ಹಲವು ಪದ್ಯಗಳು ಅಲ್ಲಲ್ಲಿ ಕಂಡುಬರುವಂತೆ ಕನ್ನಡದಲ್ಲಿದ್ದಿರಬಹುದಾದ 'ವಾಗರ್ಥಸಂಗ್ರಹ'ದಲ್ಲಿಯೂ ಕವಿಪರಮೇಷ್ಠಿಯೇ ಅನ್ಯಮೂಲಗಳಿಂದೆತ್ತಿದ ಸಂಸ್ಕೃತಪದ್ಯಗಳು ಸೇರಿದ್ದು, ಅವುಗಳಲ್ಲಿ ತನಗೆ ಬೇಕಾದವನ್ನು ಆಯ್ದುಕೊಂಡು ಚಾವುಂಡರಾಯನು ತನ್ನ ಪುರಾಣದಲ್ಲಿ ಸೇರಿಸಿರಬಹುದು.

ಒಟ್ಟಿನಲ್ಲಿ ಈ ವಾದದ ಸಾರಾಂಶವೆಂದರೆ, ಕವಿಪರಮೇಷ್ಠಿ ಕನ್ನಡ ಕವಿ, ಆತನ ಕೃತಿ 'ವಾಗರ್ಥಸಂಗ್ರಹ'ವೆಂಬ ಮಹಾಪುರಾಣ ಒಂದು ಕನ್ನಡ ಭಾಷೆಯ ಗ್ರಂಥ. ಇಲ್ಲಿ ವಿಚಾರಣೀಯವಾದ ಅಂಶಗಳಿರುವುದು ದಿಟ. ಆದರೆ ಇದಕ್ಕೆ ಪ್ರತಿಕೂಲವಾದ

ಕೆಲವು ಸಂದರ್ಭಗಳನ್ನು ಹೀಗೆ ಹೇಳಬಹುದು: (i) ಚಾವುಂಡರಾಯನು ಅನುಕ್ರಮವಾಗಿ ಕೊಟ್ಟಿರುವ ಮಹಾಪುರಾಣಕರ್ತೃಗಳ ಪರಂಪರೆಯನ್ನು ನೋಡಿದರೆ, ಆತ ಹೇಳುತ್ತಿರುವುದು ಸಂಸ್ಕೃತ ಭಾಷೆಯಲ್ಲಿ ಬರೆದಿರುವವರ ಹೆಸರುಗಳನ್ನು ಎಂದು ತೋರುತ್ತದೆ. (ii) ಜಿನಸೇನ ಗುಣಭದ್ರರ ಮಹಾಪುರಾಣದಂಥ ದೊಡ್ಡ ಗಾತ್ರದ ಒಂದು ರಚನೆಗೆ ಆಕರವಾಗಬಹುದಾದ ಜೈನಧಾರ್ಮಿಕ ಗ್ರಂಥ ಸಂಸ್ಕೃತದಲ್ಲಿಯೋ ಪ್ರಾಕೃತದಲ್ಲಿಯೋ ಇದ್ದಿರುವುದು ಸಂಭವನೀಯ. ಕನ್ನಡ-ಸಂಸ್ಕೃತ ಭಾಷೆಗಳ ಕೊಳುಕೊಡೆಯಲ್ಲಿ ಹಳಗನ್ನಡ ಜೈನಸಾಹಿತ್ಯ ಸಂಸ್ಕೃತಮೂಲವನ್ನು ಸಾಮಾನ್ಯವಾಗಿ ಅನುಸರಿಸಿರುವುದು ಕಂಡುಬಂದಿದೆಯಲ್ಲದೆ ಸಂಸ್ಕೃತ ಜೈನಸಾಹಿತ್ಯ ಕನ್ನಡಮೂಲವನ್ನು ಅಷ್ಟು ಅನುಸರಿಸಿರುವುದು ಕಂಡುಬಂದಿಲ್ಲ. (iii) ಸಂಸ್ಕೃತದ ಲಕ್ಷಣಗ್ರಂಥಗಳಲ್ಲಿ 'ಗದ್ಯಕಥೆ' ಎಂಬ ಹೆಸರನ್ನು ಹೇಳಿಲ್ಲವೆಂಬಷ್ಟರಿಂದಲೇ 'ವಾಗರ್ಥಸಂಗ್ರಹ'ದ ಭಾಷೆ ಸಂಸ್ಕೃತವಾಗಿರಲಾರದು, ಕನ್ನಡ ಎಂದು ಸಾಧಿಸುವುದು ಕಷ್ಟ. (iv) 'ವಾಗರ್ಥಸಂಗ್ರಹ' 'ವಡ್ಡಾರಾಧನೆ' 'ಚಾವುಂಡರಾಯಪುರಾಣ'ಗಳಂತಹ ಕನ್ನಡ ಗದ್ಯಕಾವ್ಯವೇ ಆಗಿದ್ದರೆ ಅದರಲ್ಲಿ ಕನ್ನಡ ಪದ್ಯಗಳೂ ಇರುತ್ತಿದ್ದಿರಬೇಕು; ಹಾಗಾದರೆ ಅಲ್ಲಿಯ ಸಂಸ್ಕೃತ ಪದ್ಯಗಳನ್ನು ಆಯ್ದುಕೊಂಡಂತೆ ಆ ಕನ್ನಡ ಪದ್ಯಗಳಲ್ಲಿ ಒಂದೆರಡನ್ನಾದರೂ ಚಾವುಂಡರಾಯನು ಆಯ್ದುಕೊಳ್ಳದೆ ಇರುತ್ತಿರಲಿಲ್ಲ. (v) ಚಾವುಂಡರಾಯ, ಪಾರ್ಶ್ವಪಂಡಿತ ಇಂಥವರು ಸಂಸ್ಕೃತ ಭಾಷೆಯ ಕವಿಗಳ, ಆಚಾರ್ಯರ ಪಟ್ಟಿಯಲ್ಲೇ ಕವಿಪರಮೇಷ್ಠಿಯನ್ನು ಹೆಸರಿಸಿದ್ದಾರೆ.

ಹೀಗೆ ಕೆಲವು ಆಕ್ಷೇಪಗಳನ್ನೆತ್ತಲು ಅವಕಾಶವಿರುವುದರಿಂದ ಕವಿಪರಮೇಷ್ಠಿಯ 'ವಾಗರ್ಥಸಂಗ್ರಹ' ಕನ್ನಡದಲ್ಲಿದ್ದಿತೆಂದು ಸಾಧಿಸುವುದು ಸುಲಭವಲ್ಲ ಎನ್ನಬಹುದು. ಹಾಗೂ ಪ್ರಾಚೀನ ಕನ್ನಡ ಕವಿಸ್ಮೃತರಾದ ಮೂವರು ಆಚಾರ್ಯರೂ ಕರ್ಣಾಟಕದ ಜೈನಧರ್ಮಾನುಯಾಯಿಗಳಿಗೆ ಕವಿಗಳಿಗೆ ಸ್ಫೂರ್ತಿಸ್ಥಾನದಲ್ಲಿರುವ ಪೂಜ್ಯರೆಂಬುದನ್ನೂ ಆತ್ಮೀಯರೆಂಬುದನ್ನೂ ಸದ್ಯದಲ್ಲಿ ಒಪ್ಪಿಕೊಂಡು, ಅವರು ಕನ್ನಡ ಕವಿಗಳಾಗಿದ್ದರೆಂದು ತಿಳಿಯಲು ಇನ್ನೂ ಖಚಿತವಾದ ಆಧಾರಗಳು ಬೇಕಾಗಿವೆಯೆಂದಿಟ್ಟುಕೊಳ್ಳಬೇಕಾಗುತ್ತದೆ.

ಈವರೆಗೆ ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ಗೊತ್ತುಮಾಡಲು ನಿಶ್ಚಿತವೂ ಅನಿಶ್ಚಿತವೂ ಆದ, ಆಂತರಿಕವೂ ಬಾಹ್ಯವೂ ಆದ ವಿವಿಧ ಸಾಕ್ಷ್ಯಗಳನ್ನು ಕೆಲಮಟ್ಟಿಗೆ ವಿವರವಾಗಿ ಪರಿಶೀಲಿಸಿ ವಿಮರ್ಶಿಸಿದ್ದಾಯಿತು; ಶಕ್ಯವಿದ್ದಮಟ್ಟಿಗೆ ಉಪಲಬ್ಧವಾದ ಪ್ರಮಾಣಗಳನ್ನೂ ಅವುಗಳ ಅಭಾವದಲ್ಲಿ ಗಟ್ಟಿಯಾದ ಊಹೆಗಳನ್ನೂ ಮಂಡಿಸಿ ಆಯಿತು. ಇನ್ನು ಈ ಪರಿಶೀಲನೆಯಲ್ಲಿಯೇ ಉಕ್ತವಾದ, 'ಕವಿರಾಜಮಾರ್ಗ' ಮತ್ತು ಇತರ ಆಕರಗಳಲ್ಲಿ ಉಲ್ಲೇಖಗೊಂಡ ಅತಿಪ್ರಾಚೀನ ಸಾಹಿತ್ಯರೂಪಗಳನ್ನು ಕುರಿತು ಪ್ರತ್ಯೇಕವಾಗಿಯೇ ಕೆಲವು ಸಂಗತಿಗಳನ್ನು ವಿಚಾರಮಾಡಲು ತೊಡಗಬಹುದು.

## ಸಾಹಿತ್ಯ ರೂಪಗಳು

ಕನ್ನಡ ಸಾಹಿತ್ಯದ ಉಷಃಕಾಲದಲ್ಲಿದ್ದ ಸಾಹಿತ್ಯಸ್ವರೂಪದ ಸ್ಪಷ್ಟಚಿತ್ರವೇ ಇನ್ನೂ ನಮಗೆ ಇಲ್ಲದಿರುವಾಗ ಅಂದಿನ ಸಾಹಿತ್ಯ ರೂಪಗಳ ಖಚಿತವಿವೇಚನೆ ಸ್ವಲ್ಪ ತೊಡಕಾದುದೆಂದೇ ಹೇಳಬೇಕು. ಆದರೂ 'ಕವಿರಾಜಮಾರ್ಗ' ಮೊದಲಾದ ಈಚಿನ ಲಕ್ಷಣಗ್ರಂಥಗಳ ಆಧಾರದಿಂದ ಕೆಲವು ಸಂಗತಿಗಳನ್ನು ಸಾಧ್ಯವಿದ್ದಮಟ್ಟಿಗೆ ಪರಿಚಯಮಾಡಿಕೊಳ್ಳಲು ಇಲ್ಲಿ ಯತ್ನಿಸಬಹುದು.

ಯಾವುದೇ ಸಾಹಿತ್ಯ ಕೃತಿಯಾದರೂ ಅನಿವಾರ್ಯವಾಗಿ ಯಾವುದೋ ಒಂದು ಸಾಹಿತ್ಯರೂಪದ ಮಡಿಲಲ್ಲಿ ಮಡುಗಟ್ಟಿ ನಿಲ್ಲಬೇಕಾಗುತ್ತದೆ. ಆದರೆ ಪರಂಪರೆ ಮತ್ತು ಪ್ರಗತಿಶೀಲತೆ ಆಯಾ ಯುಗಧರ್ಮಕ್ಕನುಗುಣವಾಗಿ ರೂಪಿಸುವ, ಜನಪ್ರಿಯಗೊಳಿಸಿ ಪ್ರಚುರಪಡಿಸುವ ಹೊಸ ಹೊಸ ಸಾಹಿತ್ಯರೂಪಗಳ ಬೀಸುಬಿತ್ತರಗಳಲ್ಲಿ ಆದಿಮ ಕಾಲದ ಸಾಹಿತ್ಯರೂಪಗಳು ಅಡಗಿಹೋಗಬಹುದು, ಇಲ್ಲವೆ ಅಳಿದುಹೋಗಬಹುದು. ವೈವಿಧ್ಯಮಯ ಜನಪದ ಕಾವ್ಯ ಪ್ರಕಾರಗಳು ಕನ್ನಡ ಸಾಹಿತ್ಯದ ಆರಂಭದೆಸೆಯಲ್ಲಿ ಹಲವಾರು ಇದ್ದಿರಬಹುದು. ಅವನ್ನು ಈಚಿನ ಸಾಹಿತ್ಯಾರಂಭಕಾಲದ ಕನ್ನಡ ಕವಿಗಳು ಎಷ್ಟರಮಟ್ಟಿಗೆ ಮಾನ್ಯಮಾಡಿದರೋ, ಬಳಸಿ ಬೆಳಸಿದರೋ ಗೊತ್ತುಮಾಡಲು ತಕ್ಕ ಆಧಾರಗಳಿಲ್ಲ. ಉತ್ತರಕಾಲೀನ ಕವಿಗಳು ಸಾಹಿತ್ಯರೂಪಗಳ ವಿಷಯದಲ್ಲಿ ಅನುಸರಿಸಿದ ಆಯ್ಕೆಯ ವಿಧಾನವನ್ನು ಗಮನಿಸಿದರೆ, ಹಿಂದೆಯೂ ಹೀಗೆಯೇ ಗತಕಾಲದ ರೂಪಗಳನ್ನು ಅನಂತರಕಾಲದ ಕವಿಗಳು ಉಚಿತವರಿತು ಪುರಸ್ಕರಿಸಿದರೆಂದೂ ಮಹತ್ತ್ವ ಕೊಟ್ಟು ಬೆಳಸಿದರೆಂದೂ ಹೇಳಬೇಕಾಗುತ್ತದೆ.

ಕನ್ನಡ ಲಾಕ್ಷಣಿಕರು ಪ್ರಾಚೀನ ಸಾಹಿತ್ಯರೂಪಗಳ ಬಗ್ಗೆ ಪ್ರಸ್ತಾಪಿಸಿದ್ದರೂ, ಅವುಗಳ ಸ್ವರೂಪ ಕಣ್ಣಿಗೆ ಕಟ್ಟುವಂತೆ ಸ್ಪಷ್ಟವಾಗುವ ವಿವರಣೆಗಳನ್ನು ನೀಡಿಲ್ಲ; ಅಲ್ಲದೆ ಆ ಮಾದರಿಯ ಕೃತಿಗಳಾವುವೂ ನಮಗೆ ದೊರೆಯದಿರುವುದರಿಂದ ಅವುಗಳ ವಿವೇಚನೆಯು ಬಹುಮಟ್ಟಿಗೆ ಲಾಕ್ಷಣಿಕರ ವಿವರಗಳನ್ನು ಅರ್ಥೈಸುವುದರ ಮೇಲೆ, ಸಾದೃಶ್ಯವುಳ್ಳ ಉತ್ತರಕಾಲೀನ ಕೃತಿಗಳ ಸ್ವರೂಪದ ಮೇಲೆ ನಿಂತಿರುತ್ತದೆ.

### ಶಾಸನಾದಿಗಳಲ್ಲಿ ಉಕ್ತವಾದ ರೂಪಗಳು

ಈ ಅವಧಿಯಲ್ಲಿ ನಮಗೆ ದೊರೆಯುವ ಕನ್ನಡ ಸಾಹಿತ್ಯದ ದಾಖಲೆಗಳಾದರೂ ಕನ್ನಡ ಶಾಸನಗಳೇ ಆಗಿವೆ. ಶಾಸನಗಳ ಸಂಖ್ಯೆ ಮಿತವಾಗಿದ್ದರೂ, ಅವು ಗದ್ಯ ಹಾಗೂ ಪದ್ಯಗಳೆರಡರ ಸ್ವರೂಪವನ್ನೂ ನಿದರ್ಶಿಸತಕ್ಕವಾಗಿವೆ. ಪದ್ಯದಲ್ಲಿ ವೈವಿಧ್ಯಮಯ ಛಂದಃಪ್ರಕಾರಗಳಿರುವುದು ಅಂದಿನ ಸಂವೇದನಾಶೀಲ ಕವಿಗಳು ಬಹುಶಃ ತಮ್ಮ ಆಶಯ ಮತ್ತು ಅನುಭವಗಳ ಅಭಿವ್ಯಕ್ತಿಗಾಗಿ ನಡಸಿರುವ ಆರಂಭದ ಪ್ರಯತ್ನಗಳನ್ನು ತೋರಿಸುವಂತಿವೆ.

ಕನ್ನಡದ ಮೊತ್ತಮೊದಲನೆಯ ಶಾಸನವಾದ ಹಲ್ಮಿಡಿಶಾಸನ ಗದ್ಯದ ಧಾಟಿಧೋರಣೆಗಳನ್ನು ಹೊಂದಿದ್ದು, ಅದೊಂದು ಗದ್ಯಶಾಸನವೆಂಬುದು ನಿಶ್ಚಿತವಿದೆ. ಆದರೆ ಈಚೆಗೆ ಇದರ ಸ್ವರೂಪವಿವೇಚನೆ ನಡಸುತ್ತ, "ಅಂಶಗಣದ ಸುಳುಹನ್ನು ಹೊಂದಿರುವ ಇದು ರಗಳೆಯಂತೆ ಹರಿಯುವ ಬಂಧ" ಎಂದು ಒಂದು ಅಭಿಪ್ರಾಯ ಇದರ ಬಗ್ಗೆ ವ್ಯಕ್ತಪಟ್ಟಿದೆ.[140] ಆದರೆ ಈ ವಿಷಯದಲ್ಲಿ "ಹಲ್ಮಿಡಿಶಾಸನ ಗದ್ಯಶಾಸನವೇ ಎನ್ನುವುದು ಅದರ ಪ್ರಾಸರಾಹಿತ್ಯ, ಲಯವಿರಹಿತತ್ವ ಮತ್ತು ಅನಿಯತ ಸಂಖ್ಯಾಕಪಾದತ್ವ ಇವುಗಳಿಂದ ಸಾಧಿತವಾಗುತ್ತದೆ" ಎಂಬ[141] ಹಳೆಯ ಹೇಳಿಕೆಯನ್ನು ಪೋಷಿಸುವ ಮಾತೇ ಹೆಚ್ಚು ಸಾಧುವಾದುದೆಂದು ತೋರುತ್ತದೆ. ಈ ಅವಧಿಯ ಇತರ ಗದ್ಯಶಾಸನಗಳು ಪ್ರಮಾಣದಲ್ಲಿ ಹೀಗೆಯೇ ಸಾಧಾರಣವಾಗಿ ಚಿಕ್ಕವು; ರೂಪದಲ್ಲಿ ಇಂಥವೇ ಗುಣಲಕ್ಷಣಗಳನ್ನುಳ್ಳವು. ಪ್ರಾಚೀನ ಕನ್ನಡ ಗದ್ಯಕಾವ್ಯಗಳ ಭಾಷಾರೂಪಗಳೊಡನೆ ಈ ಗದ್ಯಶಾಸನಗಳ ಭಾಷಾರೂಪಗಳ ಸಂಭವನೀಯವಾದ ಪ್ರಭಾವ ಸ್ವೀಕರಣಗಳನ್ನು ಈಗ ನಾವು ಗೊತ್ತುಮಾಡುವ ಸ್ಥಿತಿಯಲ್ಲಿಲ್ಲ.

ಕನ್ನಡಿಗರ ಬದುಕಿನ ಸಂವೇದನೆಯನ್ನು ಸಮರ್ಥವಾಗಿ ವ್ಯಕ್ತಗೊಳಿಸುತ್ತ, ಜನಪದ ಸಾಹಿತ್ಯ ಶಿಷ್ಟಸಾಹಿತ್ಯಗಳೆರಡರಲ್ಲೂ ವಿಶಿಷ್ಟಸ್ಥಾನವನ್ನು ಗಳಿಸಿಕೊಂಡಿರುವ ಅಚ್ಚ ಕನ್ನಡ ಛಂದಸ್ಸಿನ ತ್ರಿಪದಿ, ಶಾಸನಗಳಲ್ಲಿಯೂ ಅಲ್ಲಲ್ಲಿ ಗೋಚರಿಸಿದೆ. ಶಾಸನ ಸಾಹಿತ್ಯದ ಮೂಲಕವಾಗಿ ತ್ರಿಪದಿಯ ಪ್ರಾಚೀನತೆ ತಿಳಿದಂತಾಗಿದೆ. ಅದರಲ್ಲಿ ವ್ಯಕ್ತಿಚಿತ್ರದ ಕಂಡರಣೆ ನಡೆಯುತ್ತಿತ್ತು ಎಂಬುದು ಕಪ್ಪೆಅರಭಟ್ಟನೆಂಬುವನ ಶೌರ್ಯಾದಿ ಗುಣಗಳನ್ನು ಕೀರ್ತಿಸುವ ಬಾದಾಮಿ ಶಾಸನದಿಂದಲೂ, ಈಚಿನ ಅಂತಹ ಇತರ ಶಾಸನಗಳಿಂದಲೂ ಸ್ಪಷ್ಟಪಟ್ಟಿದೆ. ಈ ತ್ರಿಪದಿ ಶಾಸನಗಳನ್ನು ಸ್ವಯಂಪೂರ್ಣ ಕಿರುಕಾವ್ಯಗಳು ಎನ್ನಬಹುದೇನೋ! ಇವುಗಳಲ್ಲಿ ಹಿರಿಯ ಪ್ರಮಾಣದ ಕೃತಿರಚನೆಯೇನಿತ್ತು, ಅದು ಜನಪದರಲ್ಲೇ, ಶಿಷ್ಟಕವಿಗಳಲ್ಲೇ ಎಂಬುದನ್ನು ಈಗ ತಿಳಿಯುವಂತಿಲ್ಲ. ಜನಪದ ಕವಿಗಳು ವಿವಿಧ ವಿಷಯಗಳನ್ನು ಹೇಳುವ ಇನ್ನೂ ದೊಡ್ಡ ಪ್ರಮಾಣದ ರಚನೆಗಳನ್ನು ಆ ಛಂದಸ್ಸಿನಲ್ಲಿ ಮಾಡುತ್ತಿದ್ದಿರಬಹುದು. ತ್ರಿಪದಿ ಹೊರತಾದ ಬೇರೆ ಅಚ್ಚಕನ್ನಡ ಛಂದಸ್ಸುಗಳು ಯಾವುವು, ಅವು ಯಾವ ಪ್ರಮಾಣದಲ್ಲಿ ಕೃತಿರಚನೆಗೆ ಅಳವಡುತ್ತಿದ್ದವು ಎಂಬುದಕ್ಕೆ ಶಾಸನಗಳಲ್ಲಿ ತಕ್ಕ ಸಾಕ್ಷ್ಯಗಳಿರುವಂತೆ ತೋರುವುದಿಲ್ಲ.

'ಕವಿರಾಜಮಾರ್ಗ'ದಲ್ಲಿ ಕಂದದ ಪ್ರಚುರತೆಯಿದೆ; ಪ್ರಯೋಗಸಿದ್ಧಿಯಿದೆ. ಸರಳತೆ, ಸ್ವಾಭಾವಿಕತೆಗಳಿಂದ ಕೂಡಿದ ಅದರ ಛಂದೋಗತಿ ಇಲ್ಲಿ ಮನಮುಟ್ಟುವಂತೆ ಬಳಕೆಯಾಗಿರುವುದು ನಿಜ. ಆದರೆ ಇದಕ್ಕೂ ಹಿಂದೆ ಗಂಗ ಚಕ್ರವರ್ತಿ ಶ್ರೀಪುರುಷನ ತಾಮ್ರಶಾಸನೋಕ್ತ ಪದ್ಯಗಳು ಸದ್ಯಕ್ಕೆ ಕನ್ನಡದ ಪ್ರಥಮ ಕಂದಗಳೆನ್ನಲಾಗಿದೆ.[142] ಬರಿಯ ಕಂದಗಳಿಂದಲೇ ಕಟ್ಟಿದ ಕಾವ್ಯ ಕಟ್ಟಡಗಳು ಏನಾದರೂ ಈ ಅವಧಿಯಲ್ಲಿ ನಿರ್ಮಾಣವಾಗಿದ್ದುವೇ ಎನ್ನುವುದಕ್ಕೆ ದಾಖಲೆಗಳಿಲ್ಲ. ಅಂತಹ ತನಿಶಾಸನಗಳೂ ಇರುವಂತೆ ತೋರುವುದಿಲ್ಲ.

ಈ ಅವಧಿಯಲ್ಲಿ ಪ್ರಮುಖವಾಗಿ ಕಾಣಬರುವುದು ವರ್ಣವೃತ್ತಗಳು. ಐವತ್ತನ್ನೂ ಮೀರಿದ ಸಂಖ್ಯೆಯಲ್ಲಿ ವರ್ಣವೃತ್ತಗಳು ಇಲ್ಲಿ ಸೂಸಾಡಿವೆ. ದೇಶೀಯ ಬಂಧಗಳೊಡನೆ ಹೋಲಿಸಿದಾಗ ಇವುಗಳ ಪ್ರಭಾವ ಪ್ರಮಾಣಗಳು ಹೆಚ್ಚು ಎನಿಸುವಂತಿದ್ದರೂ, ಭಾವ ವಿಭಾವಗಳ ಬೀಸು, ನಾದಲಯಗಳ ಮೋಡಿ ಇವು ಅವುಗಳಲ್ಲಿ ಕೆಲವನ್ನು ಭಾವಗೀತೆಯ ಸ್ತರಕ್ಕೇರಿಸಿವೆ. ಮುಂದೆ ಕನ್ನಡ ಸಾಹಿತ್ಯದ ಚಂಪೂಕಾವ್ಯಗಳಲ್ಲಿ ಹೆಚ್ಚು ಪ್ರಾಮುಖ್ಯ ವನ್ನು ಗಳಿಸಿಕೊಳ್ಳುವ ಬಹುಪಾಲು ಖ್ಯಾತ ಕರ್ಣಾಟಕ ಛಂದಸ್ಸುಗಳು ಇಲ್ಲಿ ಗಣ ನೀಯ ಪ್ರಮಾಣದಲ್ಲಿ ಪ್ರಯೋಗಗೊಂಡಿವೆ. ಇವು ಅಂದಿನ ಶಾಸನಕವಿಗಳು ಭಾವ ಭಾಷೆಗಳ ಆತ್ಮೀಯ ಸಂಬಂಧವನ್ನು ಬೆಸೆಯಲು ನಡೆಸಿದ ಪ್ರಯತ್ನಗಳಂತೆ ತೋರುತ್ತವೆ.

ಇನ್ನು ಗ್ರಾಂಥಿಕ ಸಾಹಿತ್ಯದ ಕಡೆ ಹೊರಳುವುದಾದರೆ, ಈ ಅವಧಿಯಲ್ಲಿ ಕೆಲವು ವ್ಯಾಖ್ಯಾನ ಗ್ರಂಥಗಳು ರಚಿತವಾಗಿದ್ದಂತೆ ತಿಳಿದುಬರುತ್ತವೆ. ಇದರಿಂದ ಅಂದು ವ್ಯಾಖ್ಯಾನಗದ್ಯ ಅಥವಾ ಶಾಸ್ತ್ರಗದ್ಯ ಜೈನಧರ್ಮದ ಉಚ್ಛ್ರಾಯ ಸ್ಥಿತಿಗೆ ಹೊಂದಿ ಕೊಂಡು ಸಲುವಳಿಯಲ್ಲಿದ್ದಿರಬೇಕು ಎಂದು ಊಹಿಸಬಹುದು. ಇದಕ್ಕೆ ಇಂದ್ರನಂದಿ, ಭಟ್ಟಾಕಲಂಕ, ದೇವಚಂದ್ರರ ಹೇಳಿಕೆಗಳೇ ಆಧಾರಗಳಾಗಿವೆ. ವ್ಯಾಖ್ಯಾನಗಳಲ್ಲಿ ಟೀಕೆ, ಟಿಪ್ಪಣಿ, ವೃತ್ತಿ, ಪಂಚಿಕೆ ಇಂಥ ಕೆಲವು ಪ್ರಭೇದಗಳಿದ್ದು, ಪ್ರಾಯಃ ಈ ಅವಧಿಯ ವ್ಯಾಖ್ಯಾಕಾರರಾದ ಶ್ಯಾಮಕುಂದಾಚಾರ್ಯ, ತುಂಬುಲೂರಾಚಾರ್ಯ ಮುಂತಾದವರ ವ್ಯಾಖ್ಯಾನಗಳು ಇವುಗಳಲ್ಲಿ ಯಾವುದಾದರೂ ಒಂದು ಪ್ರಭೇದದಲ್ಲಿ ಬರೆಯಲ್ಪಟ್ಟಿರ ಬಹುದು. ಪೂರ್ಣ ಪ್ರಮಾಣದ ಸಾಹಿತ್ಯರಚನೆಗೆ ಪೂರ್ವದಲ್ಲಿ ಕನ್ನಡ ಭಾಷೆ ಈ ವ್ಯಾಖ್ಯಾನಗದ್ಯ ಅಥವಾ ಶಾಸ್ತ್ರಗದ್ಯದ ಮೂಲಕ ಹದಗೊಳ್ಳುತ್ತ ಸಾಗಿರಬೇಕೆಂದು ತೋರುತ್ತದೆ. ಕನ್ನಡ ಭಾಷೆಯ ಸಂಕೀರ್ಣ ವಾಕ್ಯಬಂಧಗಳಾಗಲಿ ಭಾವನಿರೂಪಣೆಯ ಸೂಕ್ಷ್ಮತೆಗಳಾಗಲಿ ಇಲ್ಲದೆ ಸರಳ ಇತಿವೃತ್ತಾತ್ಮಕವಾದ ತುಣುಕು ಮಾತುಗಳೇ ಇಲ್ಲಿ ಕೆಲಸವನ್ನು ನಿರ್ವಹಿಸುತ್ತವೆ ಎಂಬುದೇ ಈ ಗ್ರಹಿಕೆಗೆ ಕಾರಣ. ಅಲ್ಲದೆ ಕನ್ನಡ ಸಾಹಿತ್ಯದ ಇತಿಹಾಸದಿಂದಲೂ ವ್ಯಾಖ್ಯಾಸಾಹಿತ್ಯವೇ ಮೊದಲು ಹುಟ್ಟಿರಬಹುದೇನೋ ಎಂದೆನಿಸುತ್ತದೆ. ಒಟ್ಟಿನಲ್ಲಿ ಶಾಸನಗದ್ಯ, ಶಾಸ್ತ್ರಗದ್ಯ, ಕಾವ್ಯಗದ್ಯ ಎಂಬ ಗದ್ಯದ ಮೂರು ವೈವಿಧ್ಯವನ್ನು ಈ ಅವಧಿಯಲ್ಲಿ ಗುರುತಿಸಬಹುದಾಗಿದೆ.

ಅಷ್ಟಕ : ಕನ್ನಡ ಸಾಹಿತ್ಯದಲ್ಲಿ ಅಷ್ಟಕ ಹಾಗೂ ಶತಕಗಳು ಅನಂತರ ಕಾಲದಲ್ಲಿ ಸಾಕಷ್ಟು ಪ್ರಚಲಿತವಾದ ಜನಪ್ರಿಯ ಸಾಹಿತ್ಯ ಪ್ರಕಾರಗಳು. ಇವುಗಳಲ್ಲಿ ಅಷ್ಟಕವು ಕವಿರಾಜಮಾರ್ಗಕ್ಕಿಂತಲೂ ಹಿಂದಿನಿಂದ ಕನ್ನಡ ಭಾಷೆಯಲ್ಲಿ ರಚಿತವಾಗುತ್ತಿದ್ದಿರ ಬಹುದು ಎಂದು ನಗರದ ಶಾಸನದ ಮೂಲಕ ಊಹಿಸಬಹುದಾಗಿದೆ.[143] ಸೈಗೊಟ್ಟ ಶಿವಮಾರನು ಬರೆದ 'ಶಿವಮಾರಮತ'ವೆಂಬ ಗಜಾಷ್ಟಕ ಈಗ ದೊರೆಯದಿದ್ದರೂ, ಅದು ಕನ್ನಡದಲ್ಲಿ ಬರೆದಿರಬಹುದಾದ್ದ, ಆ ಕಾಲಕ್ಕೆ ಜನಪ್ರಿಯವಾಗಿದ್ದ ಒಂದು ಅಷ್ಟಕ ಕೃತಿ ಯಾಗಿತ್ತೆಂದು ಭಾವಿಸಲು ಅವಕಾಶವಿದೆ. ಈ ಗಜಾಷ್ಟಕವು ಓವನಿಗೆಯೂ ಒನಕೆ ವಾಡೂ ಆಗಿ ಪ್ರಸಿದ್ಧವಾಯಿತೆಂದು ಅದೇ ಶಾಸನದಲ್ಲಿ ಹೇಳಿರುವುದು ಕುತೂಹಲಕಾರಿ.

ಯಾಗಿದೆ. ಓವನಿಗೆ ಒನಕೆವಾಡುಗಳೆಂಬ ಸಾಹಿತ್ಯರೂಪಗಳ ಮೊದಲ ಉಲ್ಲೇಖವನ್ನಿಲ್ಲಿಯೇ ನಾವು ಕಾಣುವುದು. ಇದು ಕನ್ನಡ ಭಾಷೆಯಲ್ಲಿತ್ತೆಂದು ಅಲ್ಲಿ ವ್ಯಕ್ತವಾಗಿ ಹೇಳಿಲ್ಲವಾದರೂ, ಈಚಿನ ಸಾಕ್ಷ್ಯಗಳಿಂದ ಅವು ಕನ್ನಡ ಭಾಷೆಯವು ಎಂದೂಹಿಸುವುದು ಅಸಮಂಜಸವಾಗಲಾರದು. ಪ್ರಸ್ತುತ ಅಷ್ಟಕದ ಸ್ವರೂಪವನ್ನು ಇಲ್ಲಿ ಸ್ವಲ್ಪ ಪರಿಶೀಲಿಸಬಹುದು.

ಒನಕೆವಾಡೆಂದಿರುವುದರಿಂದ ಶಿವಮಾರನ ಗಜಾಷ್ಟಕ ಬಹುಮಟ್ಟಿಗೆ ತ್ರಿಪದಿ ಪದ್ಯಗಳನ್ನೊಳಗೊಂಡ ಎಂಟು ಪದ್ಯಗಳ ಒಂದು ಅಷ್ಟಕವಾಗಿರಬೇಕು ಎಂದು ಎಂ. ಚಿದಾನಂದ ಮೂರ್ತಿ, ಟಿ. ವಿ. ವೆಂಕಟಾಚಲಶಾಸ್ತ್ರೀ, ಎಂ. ಎಂ. ಕಲಬುರ್ಗಿ ಮುಂತಾದವರು ಗ್ರಹಿಸಿದ್ದಾರೆ. ಆದರೆ ಈಚೆಗೆ ಇದರ ಸ್ವರೂಪದ ಬಗ್ಗೆ ಹೊಸ ಅಭಿಪ್ರಾಯವೊಂದು ವ್ಯಕ್ತಪಟ್ಟಿದೆ. ಗಜಶಾಸ್ತ್ರದಂತಹ ವ್ಯಾಪಕವಿಷಯವನ್ನು ಕೇವಲ ಎಂಟು ಪದ್ಯಗಳ ಮಿತಿಯಲ್ಲಿ ಅಡಗಿಸಲು ಸಾಧ್ಯವಿಲ್ಲವಾದುದರಿಂದ, ಅದು ಎಂಟು ಪದ್ಯಗಳ ಕೃತಿಯಾಗಿರದೆ ಈ ಕೆಳಗಿನವುಗಳಲ್ಲಿ ಯಾವುದಾದರೂ ಒಂದು ರೂಪದ್ದಾಗಿರಬಹುದು ಎಂಬುದೇ ಆ ಅಭಿಪ್ರಾಯ. ಅದು ಹೀಗೆ: (i) "ಎಂಟು ಅಧ್ಯಾಯಗಳಿಂದ ಕೂಡಿರುವ ಗ್ರಂಥ. (ii) ಎಂಟು ಗಣಗಳಿರುವ ಅಥವಾ ಪಾದಗಳಿರುವ ಪದ್ಯಗಳಿಂದ (ಸೀಸಪದ್ಯಗಳಿಂದ) ಕೂಡಿದುದು (iii) ಎಂಟೆಂಟು ಪದ್ಯಗಳ ಘಟಕಗಳಿಂದ ಕೂಡಿದುದು."[144] ಆದರೆ ಸಂಸ್ಕೃತದಲ್ಲಾಗಲಿ ಕನ್ನಡದಲ್ಲಾಗಲಿ 'ಅಷ್ಟಕ'ವೆಂಬ ಹೆಸರಿನ ಕೃತಿಯಲ್ಲಿ ೮ ಅಥವಾ ೯ ಪದ್ಯಗಳಿರುವುದೇ ರೂಢಿಯಾದ್ದರಿಂದ, ಅಂತಹ ಕೃತಿಗಳು ಆಯೆರಡು ಭಾಷೆಗಳಲ್ಲೂ ಬೇರೆ ಬೇರೆ ಕಾಲಗಳಲ್ಲಿ ಸಾಕಷ್ಟು ಕಂಡುಬರುತ್ತಿರುವುದರಿಂದ, ಈ ಮೇಲಿನ ಊಹೆಗೆ ಆಧಾರಗಳು ಇಲ್ಲವೆಂದು ಹೇಳಬಹುದು. ಅಲ್ಲದೆ ಮೇಲೆ ಮಾಡಿರುವಂಥ ಊಹೆಯನ್ನು ಪೋಷಿಸುವ ಅಷ್ಟಕಗಳೆಂಬ ಹೆಸರಿನ ಕೃತಿಗಳು ಆ ಭಾಷೆಗಳ ಉತ್ತರಕಾಲೀನ ಸಾಹಿತ್ಯದಲ್ಲಿ ದೊರೆಯುವಂತೆ ತೋರುವುದಿಲ್ಲ ಎಂಬುದನ್ನೂ ಗಮನಿಸಬೇಕು. ಮುಗಳಿಯವರು ಹೇಳಿರುವಂತೆ ಅಷ್ಟಕವು "ಲಘುತಮ ಕಾವ್ಯವೇ" ಸರಿ.[145] ಈಗ ತಿಳಿದ ಮಟ್ಟಿಗೆ ಶಿವಮಾರನ ಗಜಾಷ್ಟಕ ಕನ್ನಡ ಸಾಹಿತ್ಯದ ಮೊದಲನೆಯ ಅಷ್ಟಕ ಎಂಬುದೂ "ಅಷ್ಟಕಗಳಲ್ಲಿ ಇದೊಂದೇ ಲೌಕಿಕ ಕೃತಿ"[146] ಎಂಬುದೂ ಗಮನಾರ್ಹವಾದ ಸಂಗತಿಯಾಗಿದೆ.

ಓವನಿಗೆ: ಇದರ ಉಲ್ಲೇಖ ನಗರ ಖಿಲರ ಶಾಸನ, ಆಚಣ್ಣನ 'ವರ್ಧಮಾನ ಪುರಾಣ'ವನ್ನುಳಿದು, ಉಳಿದ ಕಡೆಗಳಲ್ಲಿ ಕಂಡುಬರುವಂತೆ ತೋರುವುದಿಲ್ಲ. ಇದರ ಬಗ್ಗೆ ಸ್ವಲ್ಪ ವಿವರದಲ್ಲಿ ವಿವೇಚಿಸುತ್ತ ರಂ. ಶ್ರೀ. ಮುಗಳಿ ಹೀಗೆಂದಿದ್ದಾರೆ: "ಓವೀ ಎಂಬ ಪದ್ಯ ಪ್ರಕಾರವು ಮರಾಠಿಯಲ್ಲಿ ಪ್ರಸಿದ್ಧವಾಗಿದೆ. ೧೨ನೆಯ ಶತಮಾನದ ಚಾಲುಕ್ಯ ದೊರೆ ಸೋಮೇಶ್ವರನ 'ಮಾನಸೋಲ್ಲಾಸ'ದಲ್ಲಿ "ತಥಾ ಮಹಾರಾಷ್ಟ್ರೇಷು ಯೋಷಿದ್ಭಿರ್ ಓಂವೀ ಗೇಯಾ ತು ಕಂಡನೇ" (೪–೨೦೫೨) ಎಂದಿದೆ. 'ಕಂಡನ' ಎಂದರೆ ಕುಟ್ಟುವಿಕೆ. ಓಂವೀ ಇದು ಕುಟ್ಟುವ ಹಾಡು ಎಂದಾಯಿತು. ಹಾಗಿದ್ದರೆ ಓವನಿಗೆ ಅದೇ ಅರ್ಥವುಳ್ಳ

ದ್ದಾಗಿ ಒನಕೆವಾಡಿಗೆ ಸಮಾನಪದವಾಗುತ್ತದೆ. ಆದರೆ ಮರಾಠಿ ಗಾದೆಗಳಲ್ಲಿ "ಬೀಸುವಾಗ ಓಂವಿಯ ನೆನಪಾಗುತ್ತದೆ" ಎಂದಿದ್ದ ಕಾರಣ ಬೀಸುವ ಹಾಡು ಎಂಬರ್ಥವೂ ಅದಕ್ಕಿರಬಹುದು. ಓವನಿಗೆ ಬೀಸುವ ಹಾಡು, ಒನಕೆವಾಡು ಕುಟ್ಟುವ ಹಾಡು ಎರಡೂ ಸೇರಿ ಬೀಸುವ ಕುಟ್ಟುವ ಹಾಡು ಎಂದು ಅರ್ಥವಾಗುತ್ತಿರಬಹುದು. ಓಂವೀ, ಓವನಿಗೆ ಇವು ಬೀಸುವಾಗ ಕುಟ್ಟುವಾಗ ಹೊರಡುವ ಸಹಜ ಉದ್ಗಾರಗಳಿಂದ ಹುಟ್ಟಿದ ಶಬ್ದಗಳೆಂದು ತೋರುತ್ತದೆ."[147] ಆದರೆ ಈಚೆಗೆ ಅವರೇ ಮೂಲತಃ 'ಓವಿ' ಹಾಗೂ 'ಓವನಿಗೆ' 'ಬೀಸುವ ಹಾಡು' ಎಂಬರ್ಥ ಪಡೆದಿತ್ತು ಎಂದು ತೋರುತ್ತದೆ ಎಂದು ಹೇಳಿ, ಓವನಿಗೆ ಎಂಬುದಕ್ಕೆ ಕೇವಲ 'ಕುಟ್ಟುವ ಹಾಡು' ಎಂದು ಹೇಳಿದರೆ ನಗರದ ಶಾಸನದಲ್ಲಿ "ಓವನಿಗೆಯುಂ ಒನಕೆವಾಡುಮಾದುದೆ ಪೇಟ್ಟುಂ' ಎಂಬುದು ಅನಗತ್ಯ ದ್ವಿರುಕ್ತಿಯಾಗುತ್ತದೆ" ಎಂದಿದ್ದಾರೆ.[148] ಆದ್ದರಿಂದ ಓವನಿಗೆ = ಬೀಸುವ ಹಾಡು ಎಂಬುದು ಅವರು ಊಹಿಸಿರುವ ಅರ್ಥವೆಂದು ಹೇಳಬಹುದು.

ಪ್ರ. ಗೋ. ಕುಲಕರ್ಣಿಯವರು ಮುಗಳಿಯವರ ಅಭಿಪ್ರಾಯವನ್ನು ಪರಿಶೀಲಿಸುತ್ತ "ಕಂಡನ ಎಂದರೆ ಕುಟ್ಟುವಿಕೆಯಷ್ಟೇ ಅಲ್ಲ....ಕಾಳುಗಳನ್ನು ಮೇಲ್ಬದಿಯ ಹೊಟ್ಟಿನಿಂದ-ತೌಡಿನಿಂದ ಬೇರ್ಪಡಿಸುವುದು ಕಂಡನ. ಒನಕೆಯಿಂದ ತೊಳಸುವುದು, ತೊಳಲಿಯ ಕಲ್ಲಿನಲ್ಲಿ ಹಾಕಿ ತಿರುವುವುದು, ಮೊರದಲ್ಲಿ ಹಾಕಿ ಒನೆಯುವುದು ಇವೆಲ್ಲ ಕಂಡನದ ಪ್ರಕಾರಗಳು. ಸಂಸ್ಕೃತದ ಕಂಡ್ ಧಾತುವಿಗೆ ಸಮಾನಾರ್ಥಕವಾಗಿ ಕನ್ನಡದಲ್ಲಿ 'ಒನೆ' ಧಾತು ಇರುತ್ತದೆ. ಒನೆ ಎಂಬುದಕ್ಕೆ ಕೇಶಿರಾಜನು 'ಶೂರ್ಪಕರಣೇ' ಎಂಬರ್ಥ ಕೊಡುತ್ತಾನೆ. ....ಒನೆಯುವಾಗ ಎಂದರೆ, ಮೊರದಲ್ಲಿ ಕೇರಿ ಹೊಟ್ಟು ಜೊಳ್ಳುಗಳಿಂದ ಕಾಳನ್ನು ಬೇರೆ ಮಾಡುವಾಗ, ತೊಳಲಿಯ ಕಲ್ಲಿನಲ್ಲಿ ಹಾಕಿ ಒಡೆಯುವಾಗ—ಬೀಸುವಾಗ, ತೊಳಸುವಾಗ, ಕುಟ್ಟುವಾಗ ಹೇಳುವ ಹಾಡುಗಳು ಓವನಿಗೆಗಳು" ಎಂದು ಹೇಳುತ್ತಾರೆ.[149] ಆದ್ದರಿಂದ ಅವರ ಪ್ರಕಾರ ಓವನಿಗೆಕೇರುವ ಹಾಡು, ಬೀಸುವ ಹಾಡು ಮುಂತಾಗಿ ಅರ್ಥವಾಗುತ್ತದೆ.

ಎಂ. ಎಂ. ಕಲಬುರ್ಗಿಯವರು ಶಬ್ದನಿಷ್ಪತ್ತಿಯ ಆಧಾರದ ಮೇಲೆ ಇದು 'ಜೋಗುಳದ ಹಾಡು' ಆಗಿರಬಹುದು ಎಂದು ಸಂದೇಹಿಸಿದ್ದಾರೆ. ಈ ಸಂಬಂಧದಲ್ಲಿ ಅವರ ಮಾತು: "ಓವನಿಗೆಯ ಪ್ರಾಚೀನ ರೂಪ 'ಓವಣಿಗೆ' ಇರಬಹುದು. ಇದನ್ನು ಓ ( = ಪ್ರೀತಿ) + ಅಣಿಗೆ, ಓವು ( = ಪಾಲನೆ) + ಅಣಿಗೆ ಎಂದು ಬಿಡಿಸಲು ಬರುತ್ತದೆ. ಅಣಿಗೆ ಎಂಬುದನ್ನು ಡಿ. ಎಲ್. ಎನ್. ಅವರು ಸಂಸ್ಕೃತದ ಪಟಿಕಾ ( = ಬಟ್ಟೆ) ದಿಂದ ಸಾಧಿಸಿದ್ದಾರೆ. ಆದಕ್ಕಾಗಿ ಓವಣಿಗೆ ಎಂದರೆ ಪಾಲನೆಯ ಬಟ್ಟೆ ಎಂದರೆ ಜೋಳಿಗೆ (ಜೋವಳಿಗೆ > ಓವಳಿಗೆ > ಓವಣಿಗೆ > ಓವನಿಗೆ) ತೊಟ್ಟಿಲು ಎಂದು ಹೇಳಬಹುದೇನೊ. ಈ ಪ್ರಸಂಗದ 'ಓವನಿಗೆ ಹಾಡು' ಮುಂದೆ 'ಓವನಿಗೆ' ಎಂದೇ ನಿಂತಿರಬಹುದು. ಆದಕ್ಕಾಗಿ ಓವನಿಗೆ ಎಂದರೆ ಜೋಗುಳ ಹಾಡು ಎಂದು ಹೇಳಬಹುದೇನೋ."[150]

ಆದರೆ ಈ ನಿಷ್ಪತ್ತಿ ಭಾಷಾಶಾಸ್ತ್ರದ ದೃಷ್ಟಿಯಿಂದ ನಿರ್ದುಷ್ಟವಾಗಿಲ್ಲ; ಅಲ್ಲದೆ ಅರ್ಥ

ವನ್ನು ಬಹುದೂರಕ್ಕೆ ಎಳೆದಿರುವಂತೆ ಭಾಸವಾಗುತ್ತದೆ.

ಒಟ್ಟನಲ್ಲಿ 'ಓವನಿಗೆ'ಗೆ ಕುಟ್ಟುವ ಹಾಡು, ಬೀಸುವ ಹಾಡು, ಕೇರುವ ಹಾಡು, ಜೋಗುಳದ ಹಾಡು ಎಂದು ಮುಂತಾಗಿ ವಿದ್ವಾಂಸರು ವಿವಿಧ ರೀತಿಯಲ್ಲಿ ಅರ್ಥಗಳನ್ನು ಹೇಳಿದ್ದಾರೆ.[151] ಬಹುಶಃ 'ಕಂಡನ' ಶಬ್ದಕ್ಕಿರುವ ವಿವಿಧಾರ್ಥದಲ್ಲಿ, ಮುಖ್ಯವಾಗಿ ಧಾನ್ಯವನ್ನು ಬೀಸುವಕಲ್ಲಿನಲ್ಲಿ ಹಾಕಿ ಬೀಸುವಾಗ ಹಾಡುತ್ತಿದ್ದ ಹಾಡು ಎಂಬರ್ಥದಲ್ಲಿ, ನಗರದ ಶಾಸನ ಆ ಶಬ್ದವನ್ನು ಬಳಸಿರಬಹುದು. 'ಒನಕೆವಾಡು' ಎಂಬ ಹೆಸರಿನಲ್ಲಿ ರಚನೆಗಳು ಮುಂದೆ ಜನಪ್ರಿಯವಾದಂತೆ, 'ಓವನಿಗೆ' ಎಂಬ ಹೆಸರಿನಲ್ಲಿ ರಚನೆಗಳು ಜನಪ್ರಿಯವಾದ ಹಾಗೆ ಆಧಾರಗಳಿಲ್ಲ. ಆ ಶಬ್ದವೇ ಎರಡು ಕಡೆ ಬಿಟ್ಟು ಉಳಿದೆಡೆ ಕಾಣಿಸಿಕೊಳ್ಳದೇ ಹೋಗಿರುವುದು ವಿಚಾರಣೀಯ.

ಒನಕೆವಾಡು : ಒನಕೆವಾಡಿನ ಬಗೆಗೆ ಕನ್ನಡ ಶಾಸನಗಳಲ್ಲಿಯೂ, ಕನ್ನಡ ಕಾವ್ಯಗಳಲ್ಲಿಯೂ ವಿಪುಲವಾದ ಉಲ್ಲೇಖಗಳಿವೆ. ಒನಕೆವಾಡು ಎಂಬ ಹೆಸರಿನಿಂದಲೇ, ಒರಳಲ್ಲಿ ಧಾನ್ಯವನ್ನು ಸುರಿದು ಒನಕೆಯಿಂದ ಕುಟ್ಟುವಾಗ, ಕುಟ್ಟುವವರು ಹಾಡುತ್ತಿದ್ದ ಹಾಡು ಇದು—ಎಂದು ಸುಲಭವಾಗಿ ಅರ್ಥೈಸಬಹುದು. ತೆಲುಗಿನ 'ರೋಕಲಿ ಪಾಟಲು' ಅಥವಾ 'ದಂಪುಡು ಪಾಟಲು' ಇದಕ್ಕೆ ಸದೃಶವಾದುದು.

ಈ ಪ್ರಕಾರದ ಪ್ರಾಚೀನತೆಯ ಆಧಾರ ನಮಗೆ ಋಗ್ವೇದದಲ್ಲಿಯೇ ದೊರೆಯುತ್ತದೆ.[152] ಸೋಮೇಶ್ವರನ (೧೧೩೪) 'ಮಾನಸೋಲ್ಲಾಸ', ನೇಮಿಚಂದ್ರನ (ಸು. ೧೧೭೦) 'ಲೀಲಾವತಿ', ಸೋಮರಾಜನ (ಸು. ೧೫೨೨) 'ಉದ್ಭಟಕಾವ್ಯ' ಮೊದಲಾದ ಕಾವ್ಯೋಲ್ಲೇಖಗಳಿಂದ, ಅಲ್ಲಿಯ ನಿದರ್ಶನಗಳಿಂದ, ಒನಕೆವಾಡು ತ್ರಿಪದಿರೂಪದಲ್ಲಿರುತ್ತಿದ್ದುವು ಎಂದು ವಿದ್ವಾಂಸರು ನಿರ್ಣಯಿಸಿದ್ದಾರೆ. ಸಾಮಾನ್ಯವಾಗಿ ಶೃಂಗಾರಮಯ ಹಾಸ್ಯವಸ್ತು ಒನಕೆವಾಡುಗಳ ವಿಷಯವಾಗುತ್ತಿತ್ತು ಎಂದು ಹೇಳಬಹುದು. ಇಂದಿನ 'ಬತ್ತ ಕುಟ್ಟುವ ಹಾಡು'ಗಳಲ್ಲೂ ಶೃಂಗಾರವಿದೆ ಎಂಬುದು ಇದನ್ನು ಸಮರ್ಥಿಸುತ್ತದೆ.[153] ಒನಕೆವಾಡುಗಳಲ್ಲಿ ಬಹುತೇಕ ತ್ರಿಪದಿಯೇ ಛಂದಃಪ್ರಕಾರವಾಗಿ ಬಳಕೆಯಾಗಿರುವುದನ್ನು ಗಮನಿಸಿ "ಒನಕೆವಾಡು ಮತ್ತು ತ್ರಿಪದಿ ಎಂಬವೆರಡೂ ಲಾಕ್ಷಣಿಕವಾಗಿ ಅಭಿನ್ನ" ಎಂದು ಒಂದು ಅಭಿಪ್ರಾಯ ವ್ಯಕ್ತವಾಗಿದೆ[154] ಆದರೆ "ಎಲ್ಲ ತ್ರಿಪದಿಗಳನ್ನೂ ಒನಕೆವಾಡುಗಳೆಂದು ಕರೆಯುವುದು ಸರಿಯಲ್ಲ" ಎಂದು ಎದುರುಮಾತೂ ಹೊರಟಿದೆ.[155]

ಪ್ರಸ್ತುತ ಸೈಗೊಟ್ಟ ಶಿವಮಾರನ ಕೃತಿ 'ಗಜಾಷ್ಟಕ' ಒಂದು ಒನಕೆವಾಡಾಗಿದ್ದು, ಅದು ಶೃಂಗಾರ ಅಥವಾ ಹಾಸ್ಯಸ್ಪರ್ಶವಿಲ್ಲದ ಒಂದು ಸಣ್ಣ ಸೂತ್ರಗ್ರಂಥವೋ ಶಾಸ್ತ್ರಗ್ರಂಥವೋ ಆಗಿರುವುದು ಅಸಂಭವವಲ್ಲ. ಅದು ತ್ರಿಪದಿಯಲ್ಲಿತ್ತೇ, ಬೇರಾವುದಾದರೂ ಛಂದಸ್ಸಿನಲ್ಲಿತ್ತೇ ಖಚಿತವಾಗಿ ಹೇಳಲು ತಕ್ಕ ಆಧಾರಗಳಿಲ್ಲ. ಆದ್ದರಿಂದ 'ಒನಕೆವಾಡು' ಸಾಹಿತ್ಯರೂಪದ ವ್ಯಾಪ್ತಿ, ವಿಷಯ ಛಂದಸ್ಸುಗಳ ದೃಷ್ಟಿಯಿಂದ ಕಾಲಕಾಲಕ್ಕೆ ಕೆಲಮಟ್ಟಿಗಾದರೂ ವ್ಯತ್ಯಸ್ತಗೊಳ್ಳುತ್ತ ಹೋಗಿರಲು ಸಾಧ್ಯ ಎನ್ನಬಹುದು.

## ಲಾಕ್ಷಣಿಕೋಕ್ತ ರೂಪಗಳು

'ಕವಿರಾಜಮಾರ್ಗ' ಲಕ್ಷಣಗ್ರಂಥವಾಗಿರುವುದರಿಂದ, ಇದಕ್ಕಿಂತ ಹಿಂದೆ ಲಕ್ಷ್ಯ ಗಳಾಗಬಲ್ಲ ಕಾವ್ಯಾದಿ ಗ್ರಂಥಗಳು ರಚಿತವಾಗಿದ್ದಿರಬೇಕು ಎಂಬುದು ವಿದಿತವೇ ಆಗಿದೆ. ಮಾರ್ಗಕಾರನು ಗದ್ಯಕವಿಗಳ ಹಾಗೂ ಪದ್ಯಕವಿಗಳ ಒಂದೊಂದು ಪಟ್ಟಿಯನ್ನು ಕೊಡು ವುದಲ್ಲದೆ, ಆ ಕಾಲದಲ್ಲಿ ಇಲ್ಲವೆ ಆ ಮೊದಲು ಪ್ರಚಲಿತವಾಗಿದ್ದ 'ಗದ್ಯಕಥೆ', 'ಚತ್ತಾಣ', 'ಬೆದಂಡೆ' ಎಂಬ ಮೂರು ಬಗೆಯ ಸಾಹಿತ್ಯರೂಪಗಳನ್ನು ಉಲ್ಲೇಖಿಸಿದ್ದಾನೆ. ಈ ಮೂರರ ಸ್ವರೂಪಕಲ್ಪನೆ ನಿರ್ದಿಷ್ಟ ವಿವರಗಳ ಅರಕೆಯಿಂದಾಗಿ ಕೆಲಮಟ್ಟಿಗೆ ಅಸ್ಪಷ್ಟವಾಗಿದೆ. ಆದರೂ ಇರುವ ಸ್ವಲ್ಪ ಸಾಮಗ್ರಿಯಿಂದಲೇ ಅವುಗಳ ಶಿಲ್ಪವನ್ನು ರೂಪಿಸಲು ವಿದ್ವಾಂಸರು ಯತ್ನಿಸಿದ್ದಾರೆ. ಈಗ ಒಂದೊಂದಾಗಿ ಆ ಸಾಹಿತ್ಯರೂಪದ ವಿಚಾರವನ್ನು ಪರಿಶೀಲಿಸ ಬಹುದು.

ಗದ್ಯಕಥೆ: ಕವಿರಾಜಮಾರ್ಗಕಾರನು ದಂಡಿಯಂತೆ ಕಾವ್ಯಪ್ರಕಾರಗಳನ್ನು ಮೂರಾಗಿ ವಿಭಜಿಸದೆ ಗದ್ಯ ಹಾಗೂ ಪದ್ಯ ಎಂದು ಎರಡಾಗಿ ವಿಭಜಿಸಿದ್ದಾನೆ. ಮುಂದುವರಿದು, ಗದ್ಯದಲ್ಲಿ ಪದಪಾದ ನಿಯಮವಿಲ್ಲದಿದ್ದರೂ ಪದ್ಯಕಾವ್ಯಗಳಂತೆ ಗದ್ಯಕಾವ್ಯಗಳು ಕೂಡ ಅಲಂಕಾರಗಳಿಂದ ಕೂಡಿದುದು, ಇವುಗಳಿಗೆ 'ಹರ್ಷಚರಿತ', 'ಕಾದಂಬರಿ'ಗಳು ಸಂಸ್ಕೃತ ಭಾಷೆಯಲ್ಲಿ ಒಳ್ಳೆಯ ಉದಾಹರಣೆಗಳು ಎಂದು ಹೇಳಿ, ಕನ್ನಡ ಗದ್ಯಕಾವ್ಯದ ಬಗೆಗೆ ಈ ರೀತಿ ವಿವರಿಸುತ್ತಾನೆ:

ಮಿಗೆ ಕನ್ನಡಗಬ್ಬಂಗಳೊ
ಳಗಣಿತಗುಣಗದ್ಯಪದ್ಯಸಮ್ಮಿಶ್ರಿತಮಂ
ನಿಗದಿಸುವರ್ಗದ್ಯಕಥಾ
ಪ್ರಗೀತಿಯಿಂ ತಚ್ಚಿರಂತನಾಚಾರ್ಯರ್ಕಳ್॥ (೧-೨೭)

ಕನ್ನಡ ಕಾವ್ಯಗಳಲ್ಲಿ ಅಗಣಿತ ಗುಣವುಳ್ಳ ಗದ್ಯ ಪದ್ಯಗಳ ಸಮ್ಮಿಶ್ರರೂಪದ ಗದ್ಯಕಥೆ ಎಂಬ ಪ್ರಕಾರವನ್ನು ಚಿರಂತನಾಚಾರ್ಯರು ರಚಿಸುವರು—ಎಂದು ಸ್ಥೂಲವಾಗಿ ಈ ಪದ್ಯದ ತಾತ್ಪರ್ಯ. ಇಲ್ಲಿ ಗದ್ಯ ಹಾಗೂ ಪದ್ಯಗಳ ಬಳಕೆಯ ಪ್ರಮಾಣವನ್ನು ಹೇಳದೆ, ಅವೆರಡರ ಸಮ್ಮಿಶ್ರಣವೆಂದು ಮಾತ್ರ ಹೇಳಿರುವುದರಿಂದ, ಈ ಗದ್ಯಕಥಾ ಪ್ರಕಾರದ ಸ್ವರೂಪದ ಬಗ್ಗೆ ವಿದ್ವಾಂಸರಲ್ಲಿ ಚರ್ಚೆಗೆ ಅವಕಾಶವಾಗಿದೆ. ಕೆಲವರು ಇದನ್ನು 'ವಡ್ಡಾರಾಧನೆ' ಹಾಗೂ 'ಚಾವುಂಡರಾಯ ಪುರಾಣ'ಗಳ ಸ್ವರೂಪದ್ದು ಎಂದು ವಿವರಿಸಿದರೆ, ಇನ್ನು ಕೆಲವರು ಚಂಪೂವಿನೊಡನೆ ಸಮೀಕರಿಸಿದ್ದಾರೆ.

ಗೋವಿಂದ ಪೈಯವರು ಈ ರೂಪದ ಬಗೆಗೆ ಹೀಗೆ ವಿಶದಪಡಿಸಿದ್ದಾರೆ: "ಗದ್ಯ ಪದ್ಯ ಸಂಮಿಶ್ರಿತವಾದ ಕನ್ನಡ ಕಾವ್ಯಗಳಾದರೋ ಅವನ್ನು ಗದ್ಯಕಥೆಗಳೆಂದಿರುವುದರಿಂದಲೇ ಅವು ಆ ಬಳಿಕಣ ಪಂಪಭಾರತವೇ ಮೊದಲಾದ ಪದ್ಯಬಾಹುಳ್ಯವುಳ್ಳ ಕನ್ನಡ ಚಂಪೂ ಕಾವ್ಯಗಳಂಥವಲ್ಲ. ಅವಕ್ಕೆ ಮಾದರಿಯಾಗಿ ಹೇಳಿರುವ ಬಾಣನ ಸಂಸ್ಕೃತ ಹರ್ಷಚರಿತ

ದಂತೆ, ಕಾದಂಬರಿಯಂತೆ ಹಾಗೂ ಈ ಮುಂದೆ ಕಾಣಲಿಕ್ಕಿರುವ ಕನ್ನಡ ವೊಡ್ಡಾರಾಧಣದಂತೆ, ಅಲ್ಲಲ್ಲಿ ಕೆಲವಷ್ಟೇ ಪದ್ಯಗಳನ್ನು ಚಿಮುಕಿಸಿರುವ ಗದ್ಯಭೂಯಿಷ್ಠವಾದ, (ಸಂಸ್ಕೃತ ಕಾದಂಬರಿಯಂತೆ) ಉದ್ದುದ್ದವಾದ ಒಂದೊಂದೇ ಕಥೆಯುಳ್ಳವೋ ಇಲ್ಲವೋ (ವೊಡ್ಡಾರಾಧಣದಂತೆ) ಹಲವು ಸಣ್ಣಕತೆಗಳುಳ್ಳವೊ, ಗದ್ಯಕಾವ್ಯಗಳಿರಬೇಕು'[156] ಇದೇ ಅಭಿಪ್ರಾಯವನ್ನು ಬಹುಮಟ್ಟಿಗೆ ಪೋಷಿಸುವ ಡಿ. ಎಲ್. ನರಸಿಂಹಾಚಾರ್ 'ವಡ್ಡಾರಾಧನೆ'ಯ ಸ್ವರೂಪವನ್ನು ವಿವರಿಸುತ್ತ "ವೊಡ್ಡಾರಾಧಣವು ಗದ್ಯರೂಪದಲ್ಲಿರುವ ಕಥೆಗಳ ಗೊಂಚಲು. ಇದೊಂದು ಹೊಸ ಮಾದರಿಯ ಗ್ರಂಥ. ಇದನ್ನು 'ಗದ್ಯಕಥೆ' ಎಂದು ಕರೆಯಬಹುದು....ಈ ಲಕ್ಷಣವು [= ಕವಿರಾಜಮಾರ್ಗದ ಗದ್ಯಕಥಾ ಪದ್ಯದ ಲಕ್ಷಣ] ವೊಡ್ಡಾರಾಧಣಕ್ಕೆ ಬಲು ಚೆನ್ನಾಗಿ ಅನ್ವಯಿಸುತ್ತದೆ. ಇದರಲ್ಲಿ ಅಗಣಿತಗುಣವುಳ್ಳ ಗದ್ಯದ ನಡುನಡುವೆ ಪದ್ಯಗಳೂ ಹಲವು ಬಾರಿ ಬಂದಿವೆ....ಚಾವುಂಡರಾಯ ಪುರಾಣದಲ್ಲಿಯೂ ಈ ಲಕ್ಷಣಗಳು ಕಂಡುಬರುತ್ತವೆ. ಆದುದರಿಂದ ಇವೆರಡೂ "ಗದ್ಯಕಥೆ"ಗಳ ಜಾತಿಗೆ ಸೇರಿವೆ" ಎಂದಿದ್ದಾರೆ.[157]

ಗದ್ಯದಲ್ಲಿರುವ ಕಥೆ 'ಗದ್ಯಕಥೆ' ಎಂಬುದಾಗಿ ಅರ್ಥವಾಗುವ, ಗದ್ಯಪ್ರಾಶಸ್ತ್ಯವನ್ನು ಹೆಸರಿಂದಲೇ ಸೂಚಿಸುವ ಕಾರಣ ಈ ಅಭಿಪ್ರಾಯ ರೂಪುಗೊಂಡಿರುವಂತೆ ತೋರುತ್ತದೆ. ಇದರ ಸ್ವರೂಪವನ್ನು ಇನ್ನೊಂದು ರೀತಿಯಲ್ಲಿ ವಿವರಿಸುವ ಹೇಳಿಕೆಗಳನ್ನು ಈಗ ಪರಿಶೀಲಿಸಬಹುದು :

ಎಂ. ವಿ. ಸೀತಾರಾಮಯ್ಯನವರು ಈ ಪದ್ಯದ ಬಗ್ಗೆ ಟಿಪ್ಪಣಿ ಬರೆಯುತ್ತ "ಈಗ ನಾವು ಯಾವುದನ್ನು 'ಚಂಪೂಕಾವ್ಯ'ವೆಂದು ನಿರ್ದೇಶಿಸುತ್ತೇವೆಯೋ ಅದೇ ಈ ಗದ್ಯಕಥೆಯಾಗಿರಬಹುದು. ಸಂಸ್ಕೃತದಲ್ಲಿ ಕೂಡ ಚಂಪೂ ಎಂಬ ಮಾತು ದಂಡಿಗಿಂತ ಈಚೆಗೆ ಬಳಕೆಗೆ ಬಂದಿರಬೇಕು. ಈ ಗದ್ಯಕಥೆಯಲ್ಲಿ ಗದ್ಯದ ಪ್ರಾಚುರ್ಯ ಹೆಚ್ಚಾಗಿದ್ದಿರಬಹುದು" ಎಂದಿದ್ದಾರೆ.[158] ಮೇಲಿನ ಪದ್ಯದ ಅರ್ಥವನ್ನು ವಿವರಿಸುವಾಗ ಇದೇ ಅಭಿಪ್ರಾಯವನ್ನು ಎಲ್. ಬಸವರಾಜು ಅವರೂ ಪುಷ್ಟೀಕರಿಸಿದ್ದಾರೆ. ಅವರ ವಿವರಣೆ ಹೀಗಿದೆ : "ಕವಿರಾಜಮಾರ್ಗಕಾರನು ಕಾವ್ಯ ಶರೀರವನ್ನು ಗದ್ಯ-ಪದ್ಯವೆಂದು ಎರಡು ತೆರನಾಗಿ ವಿಭಾಗಿಸಿ, ಗದ್ಯಲಕ್ಷಣವನ್ನು ತಿಳಿಸಿ, ಆ ಪ್ರಕಾರಕ್ಕೆ ಲಕ್ಷ್ಯವಾಗಬಲ್ಲ ಸಂಸ್ಕೃತಕಾವ್ಯಗಳೆಂದರೆ ಹರ್ಷಚರಿತ ಕಾದಂಬರಿ ಮುಂತಾದವು ಪ್ರಸಿದ್ಧವೆಂದು ಹೇಳಿ, ಗದ್ಯಪದ್ಯ ಮಿಶ್ರಪ್ರಕಾರ (ಚಂಪೂ)ವನ್ನು ಕನ್ನಡಿಗರು 'ಗದ್ಯ'ವೆಂದೇ ವ್ಯವಹರಿಸುತ್ತಿದ್ದರೆಂಬ ಅಪೂರ್ವಾಂಶವೊಂದನ್ನು ಬಯಲಿಗೆಳೆದು, ಅದರ ಪ್ರಾಚೀನತೆಯನ್ನು ಸೂಚಿಸಿ ಅದರ ಕನ್ನಡ ಮೂಲವನ್ನು ಧ್ವನಿಸಿರುವನು.....ಕವಿರಾಜಮಾರ್ಗದ ಕಾಲಕ್ಕೆ ಹಿಂದೆ ಕನ್ನಡದಲ್ಲಿ ಗದ್ಯಗ್ರಂಥಗಳಿರಲಿಲ್ಲ ಮತ್ತು ಕನ್ನಡಿಗರು 'ಚಂಪೂ'ವನ್ನೇ 'ಗದ್ಯ'ವೆಂದು ವ್ಯವಹರಿಸುತ್ತಿದ್ದರು."[158]

ಈಗ ಈ ಎರಡು ಭಿನ್ನಮತಗಳನ್ನೂ ಪರಿಶೀಲಿಸಬಹುದು : ಗದ್ಯಕಥೆ = ಚಂಪು ಎಂದು ವಾದಿಸುವವರು ಮಾರ್ಗಕಾರ ಗದ್ಯ ಹಾಗೂ ಪದ್ಯ ಸಮ್ಮಿಶ್ರಣವನ್ನು ಹೇಳಿರು

ವುದನ್ನಷ್ಟೇ ಪ್ರಧಾನವಾಗಿರಿಸಿಕೊಂಡು ತಮ್ಮ ಅಭಿಪ್ರಾಯವನ್ನು ಮಂಡಿಸಿದ್ದಾರೆ. ಆದರೆ ಕೇವಲ ಗದ್ಯ ಹಾಗೂ ಪದ್ಯಗಳ ಸಮ್ಮಿಶ್ರಣವಷ್ಟೇ ಚಂಪೂ ಎನಿಸುವುದಿಲ್ಲ. 'ಗದ್ಯಕಥೆ ಮತ್ತು ಚಂಪೂಗಳು ಸ್ವರೂಪದಲ್ಲಿ ಬೇರೆಯೇ ಆದವಿರಬೇಕು. ಚಂಪೂವಿನಲ್ಲಿ ಕಥೆಯ ಎಳೆಗಳು ಗದ್ಯಪದ್ಯಗಳಲ್ಲಿ ಅನುಸ್ಯೂತವಾಗಿ ಹೆಣೆದುಕೊಂಡೇ ಬರುತ್ತವೆ; ಒಂದರಿಂದ ಒಂದನ್ನು ಬೇರೆ ಮಾಡಿದರೆ ಕಥೆ ಎಳೆಗಡಿದು ಹೋಗಿ ಆಭಾಸವಾಗುತ್ತದೆ. ಆದರೆ ಗದ್ಯಕಥೆಯಲ್ಲಿ ಕಥೆ ಬಹುತೇಕ ಗದ್ಯದಲ್ಲಿಯೇ ಸಾಗುತ್ತದೆ; ಪದ್ಯ ಆ ಭಾಷೆಯವೋ ಅನ್ಯಭಾಷೆಯವೋ ಆದ ಸುಭಾಷಿತಗಳನ್ನೂ ಇತರ ವಿಷಯಗಳನ್ನೂ ನಡುನಡುವೆ ಕಥೆಗೊಪ್ಪುವ ಕಡೆಗಳಲ್ಲಿ ಪ್ರಾಯಶಃ ಉದ್ಧರಿಸಿರುತ್ತದೆ. ಅಲ್ಲದೆ ಮಾರ್ಗಕಾರ ದಂಡಿ, ಭಾಮಹರನ್ನು ತೀರ ಹತ್ತಿರದಿಂದ ಅನುಸರಿಸುತ್ತಲಿದ್ದಾನೆ ಎಂಬುದು ಸ್ಪಷ್ಟ. ದಂಡಿಯಾದರೋ ಸ್ಪಷ್ಟವಾಗಿ ಕಾವ್ಯಪ್ರಕಾರಗಳನ್ನು ಮೂರು ಎಂದು ವಿಭಜಿಸಿಕೊಂಡಿರುವುದಲ್ಲದೆ, ಗದ್ಯ ಪದ್ಯ ಸಮ್ಮಿಶ್ರ ಪ್ರಕಾರವನ್ನು "ಮಿಶ್ರಾಣಿ ನಾಟಕಾದೀನಿ ತೇಷಾಮುನ್ಯತ್ರ ವಿಸ್ತರಃ। ಗದ್ಯ ಪದ್ಯಮಯೀ ಕಾಚಿತ್ ಚಂಪೂರಿತ್ಯಭಿಧೀಯತೇ" ಎಂದು ಹೇಳುವಲ್ಲಿ ಸ್ಫುಟವಾಗಿ ಚಂಪೂವಿನ ಉಲ್ಲೇಖ ಮಾಡಿದ್ದಾನೆ. ಆದ್ದರಿಂದ ಮಾರ್ಗಕಾರ ಗದ್ಯಕಥೆಯನ್ನು ಚಂಪೂ ಎಂದು ತಿಳಿದಿರಲಾರ. ಚಂಪೂವನ್ನು ಉಲ್ಲೇಖಿಸದಿರಲು ಕಾರಣಗಳೇನೇ ಇರಲಿ, ಆತನಿಗೆ ಇವೆರಡರ ಪ್ರತ್ಯೇಕತೆ, ಸ್ವರೂಪಗಳು ತಿಳಿದಿರಬೇಕು. ಅಲ್ಲದೆ 'ಕಾವ್ಯಾದರ್ಶ'ದ ಒಬ್ಬ ಟೀಕಾಕಾರನು 'ಚಂಪೂ'ವಿನ ಲಕ್ಷಣವಿವರಣೆ ನೀಡುವಾಗ "ಕಾಚಿದಿತಿ ನತು ಸರ್ವಾ ತೇನ ಗದ್ಯ ಪದ್ಯಮಯ್ಯಾ ರಾಜಸ್ತುತೇರ್ಬಿರುದಸಂಜ್ಞಾ ಅನ್ಯೈರುಕ್ತಾ ಜ್ಞಾತವ್ಯಾ" ಎಂದು ವ್ಯಾಖ್ಯಾನಿಸಿದ್ದಾನೆ. ಅಂದರೆ ಕಾಚಿತ್ ಎಂಬುದರಿಂದ ಗದ್ಯಪದ್ಯಮಿಶ್ರವಾದದ್ದೆಲ್ಲ ಚಂಪುವಲ್ಲ"[160] ಎಂದು ಹೇಳುವುದು ಗಮನಾರ್ಹವಾಗಿದೆ.

ಮತ್ತೊಂದಂಶವೆಂದರೆ ಮಾರ್ಗಕಾರ ಕನ್ನಡ ಕಾವ್ಯದ ಗದ್ಯ ಹಾಗೂ ಪದ್ಯಗಳ ಲಕ್ಷಣವನ್ನು ವಿವರಿಸುವ ಮುನ್ನ, ಸಂಸ್ಕೃತದ ಗದ್ಯ ಹಾಗೂ ಪದ್ಯ ಪ್ರಕಾರಗಳನ್ನೂ ಅದರಲ್ಲಿ ಕೃತಿ ರಚಿಸಿ ಪ್ರಸಿದ್ಧಿಹೊಂದಿದವರನ್ನೂ ಪರಿಚಯಿಸುವುದನ್ನು ಗಮನಿಸಬೇಕು. ಗದ್ಯಕಥೆ "ಚಂಪೂ" ಅಭಿನ್ನವೇ ಆಗಿದ್ದು, ಗದ್ಯಕಥೆಗೆ ಚಂಪೂ ಎಂಬ ಹೆಸರೇ ಇದ್ದ ಪಕ್ಷದಲ್ಲಿ ಅವನು ಸಂಸ್ಕೃತದ 'ಹರ್ಷಚರಿತ', 'ಕಾದಂಬರಿ'ಗಳನ್ನು ಏಕೆ ಮಾದರಿಯಾಗಿ ಕೊಡುತ್ತಿದ್ದ ಎಂಬ ಪ್ರಶ್ನೆಯೇಳುತ್ತದೆ. ಅಲ್ಲದೆ ಮುಂದೆ ಕನ್ನಡ ಕವಿಗಳಾದ ವಿಮಲೋದಯ, ನಾಗಾರ್ಜುನರನ್ನು 'ಹರ್ಷಚರಿತ', 'ಕಾದಂಬರಿ' ಮೊದಲಾದುವುಗಳ ಮಾದರಿಯಲ್ಲಿ ಬರೆದವರಾಗಿ ('ಈ ಕ್ರಮದೊಳ್ ನೆಗಚ್ಚಿ') "ಗದ್ಯಾಶ್ರಮ ಗುರುತಾ ಪ್ರತೀತಿಯಂ ಕೈಕೊಂಡರು" ಎಂದು ಹೇಳಿರುವುದು, ಗದ್ಯಕಥೆ ಸ್ಥೂಲವಾಗಿ ಹರ್ಷಚರಿತ, ಕಾದಂಬರಿಗಳ ಸ್ವರೂಪವನ್ನು ಹೋಲುವಂತಹುದು ಎಂಬುದನ್ನು ಮನವರಿಕೆ ಮಾಡಿಕೊಡುತ್ತದೆ. ಆದರೆ ವಿಮಲೋದಯಾದಿಗಳ ಗದ್ಯಕೃತಿಗಳಾವುವೂ ನಮ್ಮವರೆಗೆ ಉಳಿದುಬಂದಿಲ್ಲವಾದ್ದರಿಂದ, ಅವುಗಳಲ್ಲಿ ಯಾವುವು ಗದ್ಯಕಥೆಗಳಾಗಿದ್ದುವು, ಯಾವು

ಬೇರೆ ಬಗೆಯ ಗದ್ಯಕೃತಿಗಳಾಗಿದ್ದುವು — ಎಂಬುದನ್ನೀಗ ನಾವು ತಿಳಿಯುವ ಹಾಗಿಲ್ಲ.

ಸಂಸ್ಕೃತದ 'ಉತ್ತರಪುರಾಣ'ದ ಕರ್ತೃ ಗುಣಭದ್ರನು ಕವಿಪರಮೇಶ್ವರನ "ವಾಗರ್ಥಸಂಗ್ರಹ" ಒಂದು ಗದ್ಯಕಥೆಯಾಗಿತ್ತೆಂದೂ ಅದು "ಸಕಲಚ್ಛಂದೋಲಂಕೃತಿ ಲಕ್ಷ್ಯಂ ಸೂಕ್ಷ್ಮಾರ್ಥ ಗೂಢಪದರಚನಂ" ಎಂದೂ ಹೇಳಿದ್ದಾನೆ. ಇದರ ಕೆಲವು ಪದ್ಯಗಳು 'ಚಾವುಂಡರಾಯಪುರಾಣ'ದಲ್ಲಿ ಉದ್ಧೃತವಾಗಿರುವುದರಿಂದ ಅಲ್ಲಿಯ ಗದ್ಯಭಾಗಗಳ ಅನುವಾದಗಳೂ ಇಲ್ಲಿ ಸೇರಿರಬಹುದು. 'ವಾಗರ್ಥಸಂಗ್ರಹ'ವಾದರೂ ಈಗ ದೊರೆಯುತ್ತಿದ್ದಲ್ಲಿ, ಗದ್ಯಕಥೆಯ ಸ್ವರೂಪವನ್ನು ಗೊತ್ತುಮಾಡಲು, ತಕ್ಕಮಟ್ಟಿಗಾದರೂ ಸಹಾಯವಾಗುತ್ತಿದ್ದಿತು; ಆದರೆ ಈ ಗ್ರಂಥವೂ ದೊರೆತಿಲ್ಲ. ಭೀಮರಾವ್ ಚಿಟಗುಪ್ಪಿಯವರು "ಜಿನಸೇನ-ಗುಣಭದ್ರರು ಕವಿಪರಮೇಷ್ಠಿಯ ಕೃತಿಯನ್ನು ಗದ್ಯಕಥೆಯೆಂದು ಉಲ್ಲೇಖಿಸಿರುವುದು ಅದು ಕನ್ನಡ ಮಿಶ್ರಕೃತಿಯೆನ್ನುವುದನ್ನು ಸೂಚಿಸುವದೆಂದು ದೃಢವಾಗಿ ಹೇಳಬಹುದು"[161] ಎನ್ನುವುದಕ್ಕೆ ಸಂಸ್ಕೃತದ ಲಾಕ್ಷಣಿಕರು ಅದನ್ನು ಪ್ರಸ್ತಾಪಿಸಿಲ್ಲ ಎನ್ನುವುದು ಕಾರಣವಾಗಲಾರದು. ಸಂಸ್ಕೃತದ ಗದ್ಯಭೇದದಲ್ಲಿ 'ಕಥೆ'ಯೆಂದಿರುವುದೇ ಉತ್ತರಪುರಾಣದಲ್ಲಿಯೂ, 'ಕವಿರಾಜಮಾರ್ಗ'ದಲ್ಲಿಯೂ ಗದ್ಯಕಥೆಯೆಂದು ಹೇಳಲ್ಪಟ್ಟಿರಬೇಕು; ಆ ಸಾಹಿತ್ಯರೂಪ ಕನ್ನಡಕ್ಕೇ ವಿಶಿಷ್ಟವಾದ್ದೆಂದು ತಿಳಿಯುವುದಕ್ಕೆ ತಕ್ಕ ಪ್ರಮಾಣಗಳಿಲ್ಲ.

ಮಾರ್ಗಕಾರನು ಗದ್ಯವನ್ನು 'ಗದ್ಯಕಥಾ' ಎಂದು ಏಕೆ ಕರೆಯಬೇಕಾಯಿತು ಎನ್ನುವುದಕ್ಕೆ ಬಹುಶಃ ಇದು ಕಾರಣವಿದ್ದಿರಬೇಕು: ಸಂಸ್ಕೃತದಲ್ಲಿನ ಗದ್ಯಪ್ರಕಾರಗಳು ಎರಡು: ಆಖ್ಯಾಯಿಕಾ, ಕಥಾ. ಇದರಲ್ಲಿ ಆಖ್ಯಾಯಿಕೆ ಸಂಸ್ಕೃತದಲ್ಲಿ ಮಾತ್ರವೂ, ಕಥೆ ಪ್ರಾಕೃತಾದಿ ಭಾಷೆಗಳಲ್ಲೂ ಪ್ರಚುರವೆಂದು ಭಾಮಹ ಹೇಳುತ್ತಾನೆ.[162] ಇಲ್ಲಿ ಪ್ರಾಕೃತಾದಿ ಎಂದು ಭಾಮಹ ಕರೆಯುವಲ್ಲಿ ದೇಶಭಾಷೆಗಳೂ ವಿವಕ್ಷಿತವಾಗಿರಬಹುದು. ಆಖ್ಯಾಯಿಕೆಯಲ್ಲಿ ನಾಯಕನು ತನ್ನ ಇತಿವೃತ್ತವನ್ನೆಲ್ಲ ತಾನೇ ನಿರೂಪಿಸಿದರೆ, ಕಥೆಯಲ್ಲಿ ನಾಯಕನ ವೃತ್ತಾಂತವನ್ನು ಇತರರು (ಬಹುಪಟ್ಟಿಗೆ ಕವಿ) ಹೇಳುತ್ತಾರೆ. ನಾಯಕನಿಂದಲೇ ನಿರೂಪಿತಗೊಂಡಿರುವುದಿಲ್ಲ. ಅಲ್ಲದೆ ದಂಡಿ ಕಥಾಪ್ರಕಾರದ ಮಾದರಿ 'ಬೃಹತ್ಕಥೆ'ಯಂತಹ ಕಥಾಕೋಶ ಎಂದೂ ಹೇಳುತ್ತಾನೆ.[163] 'ವಡ್ಡಾರಾಧನೆ' 'ಚಾವುಂಡರಾಯ ಪುರಾಣ'ಗಳೆರಡೂ ಒಂದು ರೀತಿಯಲ್ಲಿ ವಿವಿಧ ಕಥೆಗಳ ಗೊಂಚಲೇ; ಬೃಹತ್ಕಥೆಗೆ ಸದೃಶವಾದುವೇ. ಅಲ್ಲಲ್ಲಿ ಕಥೆಗೆ ನೇರ ಸಂಬಂಧವಿರದ ಪದ್ಯಗಳು ನೀತಿಬೋಧೆ ಮುಂತಾದ ಉದ್ದೇಶಗಳಿಗಾಗಿ ಇಲ್ಲಿ ಬಂದಿವೆ. ಈ ಮಾದರಿಯ ಕಥಾಸಾಹಿತ್ಯ ಕವಿರಾಜಮಾರ್ಗದ ಕಾಲಕ್ಕೆ ಹಿಂದೆಯೂ ರಚಿತವಾಗಿದ್ದಿರಬೇಕು; ಇದನ್ನೇ ಮಾರ್ಗಕಾರ 'ಗದ್ಯಕಥೆ' (ಗದ್ಯದಲ್ಲಿರುವ ಕಥೆ) ಎಂದು ಕರೆದಿರಬೇಕು.

ಚತ್ತಾಣ-ಬೆದಂಡೆ: ಈ ಎರಡು ಪ್ರಾಚೀನ ಸಾಹಿತ್ಯರೂಪಗಳು ಕೂಡ ಮೊದಲು 'ಕವಿರಾಜಮಾರ್ಗ'ದಲ್ಲಿಯೇ ಉಲ್ಲೇಖಗೊಂಡಿವೆ. ಆಲಂಕಾರಿಕರ ಅನಿರ್ದಿಷ್ಟ ವಿವರಣೆ

ಗಳ ಫಲವಾಗಿ, ವಿದ್ವಾಂಸರಲ್ಲಿ ಇವುಗಳ ಸ್ವರೂಪದ ಬಗೆಗೆ ಭಿನ್ನಮತಗಳು ಉಂಟಾಗಿವೆ. ಮುಖ್ಯವಾಗಿ 'ಕವಿರಾಜಮಾರ್ಗ'ದ ಪದ್ಯಗಳನ್ನೇ ಆಧಾರಭೂಮಿಕೆಯಾಗಿಟ್ಟುಕೊಂಡು ವಿದ್ವಾಂಸರು ವಾದ ಪ್ರತಿವಾದಗಳನ್ನು ಮುಂಡಿಸಿದ್ದಾರೆ. ಸಂದರ್ಭೋಚಿತವಾಗಿ ಇತರ ಪುರಾವೆಗಳನ್ನೂ ಅವರು ಬಳಸಿಕೊಂಡಿದ್ದಾರೆ. ಅವನ್ನಿಲ್ಲಿ ಪರಿಶೀಲಿಸಬಹುದು.

ಕವಿರಾಜಮಾರ್ಗಕಾರ ಹೇಳುವ ಈ ಕೆಳಗಿನ ಪದ್ಯಗಳನ್ನು ಮೊದಲು ಇಲ್ಲಿ ಉದ್ಧರಿಸಬಹುದು:

ನುಡಿಗೆಲ್ಲಂ ಸಲ್ಲದ ಕ
ನ್ನಡದೊಳ್ ಚತ್ತಾಣಮುಂ ಬೆದಂಡೆಯುಮೆಂದೀ
ಗಡಿನ ನೆಗಱ್ತೆಯ ಕಬ್ಬದೊ
ಳೊಡಂಬಡಂ ಮಾಡಿದರ್ ಪುರಾತನ ಕವಿಗಳ್ ॥ (೧-೩೩)
ಪರಮ ಶ್ರೀವಿಜಯ ಕವೀ
ಶ್ವರ ಪಂಡಿತ ಚಂದ್ರ ಲೋಕಪಾಲಾದಿಗಳಾ
ನಿರತಿಶಯವಸ್ತುವಿಸ್ತರ
ವಿರಚನೆ ಲಕ್ಷ್ಯಂ ತದಾದ್ಯಕಾವ್ಯಕ್ಕೆಂದುಂ ॥ (೧-೩೨)[164]

ಮೊದಲನೆಯ ಪದ್ಯಧಲ್ಲಿ ಅನ್ವಯ ಹಾಗೂ ಅರ್ಥಕ್ಲಿಷ್ಟತೆ ಇದೆಯೆಂಬುದು ವಿದ್ವಾಂಸರು ಅದನ್ನು ಬಗೆಬಗೆಯಾಗಿ ಅರ್ಥಯಿಸಿರುವ ರೀತಿಯಿಂದ ತಿಳಿಯುತ್ತದೆ.

ತೀ.ನಂ. ಶ್ರೀಕಂಠಯ್ಯನವರು "ನುಡಿಗೆಲ್ಲಂ ಸಲ್ಲದ ಎಂಬ ಉಕ್ತಿಯನ್ನು ನೋಡಿದರೆ ಈ ಚತ್ತಾಣ-ಬೆದಂಡೆಗಳು ಬೇರೆ ಭಾಷೆಗಳಲ್ಲಿ ಇಲ್ಲ, ಕನ್ನಡದಲ್ಲಿ ಮಾತ್ರ ಪ್ರಚುರವಾಗಿವೆ ಎಂದು ಕವಿರಾಜಮಾರ್ಗಕಾರನು ತಿಳಿಸುವಂತೆ ತೋರುತ್ತದೆ...." ಎಂದೂ "'ಒಡಂಬಡಂ ಮಾಡಿದರ್ ಪುರಾತನ ಕವಿಗಳ್' ಎಂಬ ವಾಕ್ಯಕ್ಕೆ, ಇವು ಹೊಸದಾಗಿ ತಲೆಯೆತ್ತಿದ ಕಾವ್ಯಪ್ರಕಾರಗಳಲ್ಲ; ಹಿಂದಿನ ಕವಿಗಳು ಆಗಲೆ ಇದನ್ನು ಅಂಗೀಕರಿಸಿದ್ದರು, ಎಂದರೆ ಈ ಬಗೆಯ ಕಾವ್ಯಗಳನ್ನು ರಚಿಸಿದ್ದರು ಎಂದು ಅರ್ಥಮಾಡಬಹುದು" ಎಂದೂ ಹೇಳಿದ್ದಾರೆ.[165] ಮುಳಿಯ ತಿಮ್ಮಪ್ಪಯ್ಯನವರು "ನೃಪತುಂಗನ ಕಾಲದಲ್ಲಿ ಆ ಹಳೆಯ ನುಡಿಯ ಪ್ರಸಾರವು ಕಡಿಮೆಯಾಗಿದ್ದಿರಬೇಕು ಅಥವಾ ನುಡಿಗೆ ಎಲ್ಲಂ ಸಲ್ಲದೆ ಕೆಲವುಟ್ಟಿಗೆ ಮಾತ್ರ ಸಲ್ಲುತ್ತಿದ್ದಿರಬೇಕು" ಎಂದು ಸ್ವಲ್ಪ ಬೇರೆಯಾಗಿ ಅಭಿಪ್ರಾಯಿಸಿದ್ದಾರೆ.[166]

ಮುಂದಿನವರ ಅಭಿಪ್ರಾಯಗಳನ್ನು ಅವಲೋಕಿಸುವ ಮುನ್ನ ಇವೆರಡು ಅಭಿಪ್ರಾಯಗಳನ್ನು ತುಸುಮಟ್ಟಿಗೆ ವಿಶ್ಲೇಷಿಸಬಹುದು.

"ನುಡಿಗೆಲ್ಲಂ ಸಲ್ಲದ ಕನ್ನಡದೊಳ್" ಎಂದರೆ ನುಡಿಗೆಲ್ಲ ಸಲ್ಲದ ಅಥವಾ ಎಲ್ಲ ನುಡಿಗಳಿಗೂ ಸಲ್ಲದ ಕನ್ನಡದಲ್ಲಿ ಎಂದರ್ಥ. ಈ ಅರ್ಥವಿರಬೇಕಾದರೆ "ನುಡಿಗೆಲ್ಲಂ ಸಲ್ಲದ" ಎಂಬುದು ಕನ್ನಡದೊಳ್ ಎಂಬುದರ ವಿಶೇಷಣವಾಗಿಯೇ ಗ್ರಾಹ್ಯ. ಆದರೆ ಈ ಅರ್ಥದಿಂದ ಅಭಿಪ್ರಾಯ ವಿಶದವಾಗುವುದಿಲ್ಲ. ತೀ.ನಂ.ಶ್ರೀಯವರ ಎಲ್ಲ ನುಡಿಗಳಿಗೂ

ಸಲ್ಲದೆ, ಕನ್ನಡದಲ್ಲಿ ಮಾತ್ರ ಸಲ್ಲುತ್ತದೆ ಎಂಬಭಿಪ್ರಾಯದ್ದಿರಬೇಕಾದ್ದಲ್ಲಿ, "ನುಡಿಗೆಲ್ಲಂ ಸಲ್ಲದೆ, ಕನ್ನಡದೊಳ್....ಎಂದು ಮುಂತಾಗಿ ಪಾಠ ತಿದ್ದಬೇಕು ; ಇಲ್ಲವೆ 'ಕನ್ನಡದೊಳ್ ನುಡಿಗೆಲ್ಲಂ ಸಲ್ಲದ ಚತ್ತಾಣಮುಂ....' ಎಂದು ಮುಂತಾಗಿ ಅನ್ವಯ ಹೊಂದಿಸಿಕೊಳ್ಳ ಬೇಕು. ಆದರೆ ಪಾಠ ತಿದ್ದಲು ಆಧಾರವಿಲ್ಲ, ಅನ್ವಯ ಹೊಂದಿಸಲು ಹೋಗಿ 'ನುಡಿ ಗೆಲ್ಲಂ ಸಲ್ಲದ' ಮತ್ತು 'ಕನ್ನಡ' ಇವುಗಳ ವಿಶೇಷಣ-ವಿಶೇಷ್ಯ ಸಂಬಂಧವನ್ನು ತಪ್ಪಿಸು ವುದು ಉಚಿತವಲ್ಲ"[167] ಎಂದು ಹೇಳಿರುವ ಮಾತಿನಲ್ಲಿ ಆ ಕ್ಲೇಶ ಹೊಳಲುಗೊಡು ತ್ತದೆ.

ಮುಳಿಯ ತಿಮ್ಮಪ್ಪಯ್ಯನವರ ಅಭಿಪ್ರಾಯದಲ್ಲಿ ಕನ್ನಡ ನುಡಿಯಲ್ಲಿ ಎಲ್ಲಕ್ಕೂ (ಎಲ್ಲ ಭಾಷಾ ಪ್ರಭೇದಗಳಿಗೂ) ಇದು ಸಲ್ಲದೆ, ಕೆಲವಕ್ಕೆ ಮಾತ್ರ ಸಲ್ಲುತ್ತಿದ್ದಿರಬೇಕು, ಅಂದರೆ ಪೂರ್ವದ ಹಳಗನ್ನಡ (ಹಳೆಯ ನುಡಿಯ ಪ್ರಸಾರ) ಬಳಿಕೆ ಮಾರ್ಗಕಾರನ ಕಾಲದಲ್ಲಿ ಕಡಿಮೆಯಾಗಿದ್ದು, ತನ್ನ ಕಾಲಕ್ಕೆ ಹೊಂದದ ಆ ಹಳೆಯ ನುಡಿಗೆ (ಪೂರ್ವದ ಹಳ ಗನ್ನಡಕ್ಕೆ) ಇದು ಹೊಂದುವುದಿಲ್ಲ ಎಂಬಭಿಪ್ರಾಯ ಬರುತ್ತದೆ. ಆದರೆ ಇದು ಕೂಡ ಪದ್ಯದ ಆಶಯವನ್ನು ಸ್ಪಷ್ಟಪಡಿಸುವಂತೆ ತೋರುವುದಿಲ್ಲ.

ಈ ವಿವರಣೆಗಳ ಬಗ್ಗೆ ಆಕ್ಷೇಪವನ್ನೆತ್ತುವ ಕಲಬುರ್ಗಿಯವರ ಅಭಿಪ್ರಾಯ ಇನ್ನೊಂದು ರೀತಿಯಲ್ಲಿದೆ.

"ಸಾಮಾನ್ಯರ ಮಟ್ಟದಲ್ಲಿ ತಂತಮ್ಮ ಪ್ರಾಂತಗಳಿಗೆ ವಿಶಿಷ್ಟವಾದ ಆಡುಭಾಷೆಯೊಂದು ಇರುತ್ತದೆ. ಇದು ನುಡಿಗೆಲ್ಲಂ ಸಲ್ಲದ ಭಾಷೆ"—ಎಂದು ಮೊದಲು ಗ್ರಂಥಭಾಷೆಯಿಂದ ಭಿನ್ನವಾದ ಒಂದು ವಿವರಣೆಕೊಟ್ಟು, ಚತ್ತಾಣ-ಬೆದಂಡೆಗಬ್ಬಗಳು ಕವಿರಾಜಮಾರ್ಗ ಕಾರನಿಗೆ ಹಿಂದೆ ಆಡುಮಾತಿನಲ್ಲಿದ್ದು, ಜನಪದ ಕೃತಿಗಳಿಗೆ ಸಂಬಂಧಪಟ್ಟ ಕಾವ್ಯಜಾತಿ ಗಳಾಗಿದ್ದು, ಇವನ್ನು ಈಚಿನ ಕಾಲದಲ್ಲಿ ಪರಿಷ್ಕರಿಸಿ ಕಾವ್ಯದ ಅಂತಸ್ತಿಗೆ ಏರಿಸ ಲಾಯಿತು—ಎಂದು ಅವರು ನಿರೂಪಿಸಲು ಯತ್ನಿಸಿದ್ದಾರೆ. "ಈ ಕಾಲದ ಸುಪ್ರಸಿದ್ಧ ಕಾವ್ಯಗಳನ್ನು ಜನಪದ ಭಾಷೆಯ ಚತ್ತಾಣ-ಬೆದಂಡೆಗಬ್ಬಗಳ ಮೂಲಕ ರೂಪಿಸಿಕೊಂಡ ವರು ಪುರಾತನ ಕವಿಗಳು ಎಂಬ ಸುರಕ್ಷಿತ ಅರ್ಥ ಪ್ರಕಟಗೊಳ್ಳುತ್ತದೆ" ಎಂದು ತಮ್ಮ ಅಭಿಪ್ರಾಯಸಾರವನ್ನು ಕೊನೆಗೆ ಸೂಚಿಸಿದ್ದಾರೆ.[168]

ಆದರೆ ಚತ್ತಾಣ ಬೆದಂಡೆಗಳು ಕವಿರಾಜಮಾರ್ಗ ಪೂರ್ವಕಾಲದಲ್ಲಿ ಜನಪದ ಭಾಷೆ ಯಲ್ಲಿಯೇ ರಚಿತವಾಗುತ್ತಿದ್ದ ದೇಸಿಬಂಧಗಳೆಂದು ತಿಳಿಯಲು ಕೆಲವು ತೊಡಕುಗಳಿವೆ. ಕವಿರಾಜಮಾರ್ಗದಲ್ಲಿಯೇ ಬಂದಿರುವ ಚತ್ತಾಣ ಬೆದಂಡೆಗಳ ಲಕ್ಷಣನಿರ್ವಚನದಲ್ಲಿ ಹೇಳಿರುವ ವೃತ್ತವೈವಿಧ್ಯವನ್ನು ಗಮನಿಸಿದರೆ, ಅವು ಎಷ್ಟರಮಟ್ಟಿಗೆ ಜನಪದ ಕಾವ್ಯ ಪ್ರಕಾರಗಳಲ್ಲಿ ಸೇರಿದ್ದಿರಬಹುದೆಂಬ ಸಂಶಯ ಹುಟ್ಟುತ್ತದೆ. ಅಲ್ಲದೆ ಅವು ಯಾವುವು, ಏನು ಎಂದು ಈಗ ತಿಳಿಯದ ಯಾವುದೋ ಪ್ರಾಂತ ವಿಶಿಷ್ಟವಾದ ಆಡುಭಾಷೆಯಲ್ಲಿದ್ದಿ ತೆನ್ನುವುದೂ ಲಿಖಿತಕೃತಿಸಂಪ್ರದಾಯವಿಲ್ಲದ ದೇಶ್ಯಬಂಧಗಳನ್ನು ಸಂಸ್ಕೃತಪ್ರಾಶಸ್ತ್ಯದ ಮಾರ್ಗಯುಗದಲ್ಲಿ ಕಾವ್ಯದ ಅಂತಸ್ತಿಗೆ ಏರಿಸುವ ಪ್ರಯತ್ನಗಳು ನಡೆದುವೆಂದು ನಂಬು

ವುದೂ ಕಷ್ಟವಾಗುತ್ತದೆ. ಆದ್ದರಿಂದ ಅವರ ಅಭಿಪ್ರಾಯ ಸಂಭಾವ್ಯವಲ್ಲ. ಮುಂದು ವರಿದು ಅವರು "ನುಡಿಗೆಲ್ಲಂ ಸಲ್ಲದ...." ಪದ್ಯವನ್ನು ಆದರ ಮುಂದಿನ ಪದ್ಯ "ಪರಮ ಶ್ರೀವಿಜಯಕವೀಶ್ವರ...." ಎಂಬುದರೊಡನೆ ವ್ಯಾಕರಣ ದೃಷ್ಟಿಯಿಂದ ಸಂಬಂಧಿಸಿ ಅರ್ಥ ಮಾಡಲು ಯತ್ನಿಸಿರುವುದೂ ನಿಲ್ಲುವಂತೆ ತೋರುವುದಿಲ್ಲ. ಏಕೆಂದರೆ ಕೇಶಿರಾಜನ 'ಕೃಲ್ಲಿಂಗ' ವಿವೇಚನೆಗೆ ಒದಗಿರುವ ಪ್ರಯೋಗಗಳು ಅಸಮರ್ಪಕ. ಆದ್ದರಿಂದ, ಆ ಎರಡು ಪದ್ಯಗಳನ್ನೂ ಬೇರೆಬೇರೆಯಾಗಿಯೇ ಅರ್ಥಮಾಡುವುದು ಉಚಿತ ಎಂದೆನಿಸುತ್ತದೆ. ಆದರೆ ತೀ.ನಂ.ಶ್ರೀಯವರು "ಮುಂದಿನ ಪದ್ಯದಲ್ಲಿಯೇ ಕನ್ನಡದ 'ಆದ್ಯಕಾವ್ಯ' ಪ್ರವರ್ತಕರಾದ ಕವಿಗಳ ಹೆಸರುಗಳನ್ನು ಕೊಟ್ಟಿರುವುದರಿಂದ ಈ ಮೊದಲ ಕಾವ್ಯಗಳಲ್ಲಿ ಕೆಲವಾದರೂ ಚತ್ತಾಣ–ಬೆದಂಡೆ ಜಾತಿಗಳಿಗೆ ಸೇರಿದವಾಗಿರಬೇಕು, ಈ ಕವಿಗಳಲ್ಲಿ ಕೆಲವರಾದರೂ ಅವುಗಳ ಕರ್ತೃಗಳಾಗಿರಬೇಕು ಎಂದೂಹಿಸಿದರೆ ತಪ್ಪಾಗಲಾರದು" ಎಂದಿರುವುದು ಸಮಂಜಸವಾಗಿಯೇ ಇದೆ.[169]

ಕುಕ್ಕಿಲ ಕೃಷ್ಣಭಟ್ಟರು "'ನುಡಿಗೆಲ್ಲಂ ಸಲ್ಲದ ಕನ್ನಡದೊಳ್' ಎಂಬ ಮಾತಿಗೆ ಉದ್ದಿಷ್ಟಾರ್ಥವೇನೆಂಬುದು ನಿರ್ಣಯವಾಗುವುದಿಲ್ಲ. ಆದರೆ ಇದರ ಹಿಂದಿನ ಪದ್ಯದಲ್ಲಿ ಮೇಲೆ ಹೇಳಿದಂತೆ ಶ್ರೀವಿಜಯಾದಿಗಳ ಪದ್ಯಕಾವ್ಯಗಳು ಪುರಾತನ ಮಾರ್ಗಪದ್ಧತಿಗೆ ಲಕ್ಷ್ಯಗಳಾಗಿವೆ ಎಂದುಲ್ಲೇಖಿಸಿರುವುದರಿಂದ ಇಲ್ಲಿ ಈ ಮಾತಿಗೆ ಪ್ರಾಯಶಃ ಆ ಪ್ರಸಿದ್ಧ ಕಾವ್ಯಗಳ ಎಲ್ಲ ಲಕ್ಷಣಗಳನ್ನೂ ಒಳಕೊಳ್ಳದ ಕನ್ನಡ ಕಾವ್ಯಗಳು ಹೀಗೆ ಎರಡು ವಿಧ ವಾಗಿವೆ, ಎಂಬ ಅರ್ಥವಿರಬಹುದೆಂದು ತೋರುವುದು. ಆ ಪ್ರಕಾರ, ಅಸಂಪೂರ್ಣ ಲಕ್ಷಣದ ರಚನೆಗಳೆನ್ನಬಹುದಾದ ಚತ್ತಾಣ ಮತ್ತು ಬೆದಂಡೆ ಎಂಬವುಗಳನ್ನು ಆಧುನಿಕ ಪದ್ಧತಿಯ ಪದ್ಯಕಾವ್ಯಗಳೆಂದು ಹಿಂದಿನ ಲಾಕ್ಷಣಿಕರು ಅಂಗೀಕರಿಸಿರುತ್ತಾರೆ ಎಂದು ಈ ಪದ್ಯದ ತಾತ್ಪರ್ಯವಾಗುವುದು" ಎಂದಿದ್ದಾರೆ.[170]

ಇವರು "ನುಡಿಗೆಲ್ಲಂ ಸಲ್ಲದ...." ಎಂಬುದನ್ನು ಇಡಿಯಾಗಿ ಹಿಂದಿನ ಪದ್ಯಕ್ಕೆ ವಿಶೇಷಣವಾಗಿ ಸಂಭಾವಿಸಿ ಅರ್ಥಾನ್ವಯ ಮಾಡಿದ್ದಾರೆ ಎಂದು ತೋರುತ್ತದೆ. ಇಲ್ಲಿಯೂ ಅರ್ಥವಿಶದತೆಯಿಲ್ಲ. ಮುಗಳಿಯವರು ಹೇಳುವಂತೆ "ಇದು ದೂರಾನ್ವಯ ವೆಂದು ತೋರುತ್ತದೆ. ಯಾಕೆಂದರೆ 'ನುಡಿಗೆಲ್ಲಂ ಸಲ್ಲದ' ಇದು ಕನ್ನಡದೊಳ್ ಇದನ್ನು ವಿಶೇಷೀಕರಿಸುತ್ತದೆ, ಬೆದಂಡೆ ಚತ್ತಾಣಗಳನ್ನಲ್ಲ".[171] ಅಲ್ಲದೆ ಈ ಅರ್ಥ ಕವಿರಾಜ ಮಾರ್ಗದ ಬೆಂಗಳೂರು ಪರಿಷ್ಕರಣದ ಪದ್ಯಾನುಪೂರ್ವಿಯನ್ನು ಅನುಸರಿಸಿದ್ದು ; ಪಾಠಕ್ ಹಾಗೂ ಶೇಷಯ್ಯಂಗಾರ್ ಅವರ ಪರಿಷ್ಕರಣಗಳ ಪದ್ಯಾನುಪೂರ್ವಿಯನ್ನು ಅಂಗೀಕರಿಸಿ ದರೆ ಆಗ ಹೇಗೆ ಎಂಬ ಪ್ರಶ್ನೆ ಇಲ್ಲಿ ಹುಟ್ಟುತ್ತದೆ.

ನುಡಿಯ + ಗೆಲ್ಲಂ ಎಂದರೆ ಭಾವಪುಷ್ಟಿ, ಪದಸಿದ್ಧಿ, ಪದಸಮೃದ್ಧಿ ಎಂದು ಅರ್ಥಗ್ರಹಣ ಮಾಡಿ, "ಇಂದು ಪ್ರಸಿದ್ಧವಾಗಿರುವ ಚತ್ತಾಣ–ಬೆದಂಡೆಗಬ್ಬಗಳನ್ನು ಇನ್ನೂ ಪ್ರೌಢಾ ವಸ್ಥೆಗೆ ಬಾರದ ಕನ್ನಡದಲ್ಲಿ ಪುರಾತನ ಕವಿಗಳು ಒಡಂಬಡಂ ಮಾಡಿದರು. ಆಗ ಕನ್ನಡ ಭಾಷೆ ಇನ್ನೂ ಸಮೃದ್ಧಭಾಷೆಯಾಗಿ ಬೆಳೆದಿರಲಿಲ್ಲ. ಆದರೂ ಆಗ ಬರೆದ ಕೃತಿಗಳು

'ಈಗಡಿನ ನೆಗಟಿತ್ತಿಯ ಕಬ್ಬಗಳಾಗಿವೆ'" ಎಂದು ಒಟ್ಟು ಪದ್ಯದ ಭಾವವನ್ನು ವಿವರಿಸಿರುವುದು ಈಚೆಗೆ ಕಂಡುಬಂದಿದೆ.[172] 'ನುಡಿಗೆಲ್ಲಂ ಸಲ್ಲದ ಕನ್ನಡ' ಎಂದರೆ 'ಇನ್ನೂ ಪ್ರೌಢಿಮೆ ಪಡೆಯದ ಭಾಷೆ, ಸಾಹಿತ್ಯಸಮೃದ್ಧಿ ಇಲ್ಲದ ಭಾಷೆ' ಎಂದು ಅರ್ಥಮಾಡಿರುವುದು ಒಟ್ಟಿನಲ್ಲಿ ಆಧಾರವಿಲ್ಲದ ಒಂದು ವೈಯಕ್ತಿಕ ಊಹೆ. ಪ್ರೌಢವಲ್ಲದ ಅಥವಾ ಸಾಹಿತ್ಯಸಮೃದ್ಧಿ ಇಲ್ಲದ ಭಾಷೆಯಲ್ಲಿ ಪುರಾತನ ಕವಿಗಳು ಕೃತಿರಚನೆ ಮಾಡಿದರು ಎಂದು ಕವಿರಾಜಮಾರ್ಗಕಾರ ಹೇಳಿದನೆಂದು ಭಾವಿಸುವುದು ವಿಲಕ್ಷಣವಾಗಿ ಕಾಣುತ್ತದೆ.

ಸದ್ಯದಲ್ಲಿ ಇನ್ನೂ ಸಂದಿಗ್ಧವಾಗಿರುವ ಈ ವಿಷಯವನ್ನು ಇಲ್ಲಿಗೆ ಬಿಟ್ಟು, 'ಚತ್ತಾಣ'ದ ಚೌಕಟ್ಟನ್ನು ಮುಂದೆ ಗಮನಿಸಬಹುದು.

ಚತ್ತಾಣ : 'ಕವಿರಾಜಮಾರ್ಗ' 'ಉದಯಾದಿತ್ಯಾಲಂಕಾರ' 'ಅನಂತನಾಥಪುರಾಣ' 'ಶಬ್ದಮಣಿದರ್ಪಣ' ಮುಂತಾದ ಕಡೆಗಳಲ್ಲಿ ಈ ಸಾಹಿತ್ಯರೂಪದ ಉಲ್ಲೇಖವಿದೆ. 'ಕವಿರಾಜಮಾರ್ಗ'ದಲ್ಲಿ

ಕಂದಂಗಳ್ ಪಲವಾಗಿರೆ
ಸುಂದರವೃತ್ತಂಗಳಕ್ಕರಂ ಚೌಪದಿ ಮು
ತ್ತಂ ದಲ್ ಗೀತಿಕೆ ತಿವದಿಗ
ಳಂದಂಬೆತ್ತೆಸೆಯೆ ಪೇೞ್ದೊಡದು ಚತ್ತಾಣಂ ‖ (೧–೩೩)

ಎಂದಿದೆ. ಕಂದಗಳು ಹಲವಾಗಿದ್ದು, ಸುಂದರ ವೃತ್ತಗಳು, ಅಕ್ಕರ, ಚೌಪದಿ, ಗೀತಿಕೆ ಮತ್ತೆ ತ್ರಿಪದಿಗಳು ಸೊಗಸಾಗಿ ಶೋಭಿಸಿದ್ದರೆ ಅದು 'ಚತ್ತಾಣ' ಎಂದು ಈ ಪದ್ಯದ ಒಟ್ಟು ಅರ್ಥ. ನಾಗವರ್ಮನ 'ಕಾವ್ಯಾವಲೋಕನ'ದಲ್ಲಿ ಬಾಜನೆಗಬ್ಬದ ಲಕ್ಷಣ :

ಪಲತೆಱದ ಪದ್ಯದಿಂದಂ
ಲಲಿತ ವಚೋರಚನ ನಿಚಯ ಪದ್ಧತಿಕೆಗಳಂ
ಸಲೆ ನಿಲೆ ಸಮೆದುದು ಸರಸಾ
ಖಿಲ ವರ್ಣನಮಾದೊಡದುವೆ ಬಾಜನೆಗಬ್ಬಂ (೯೩೫)

ಹಲವು ತೆರದ ಪದ್ಯಗಳಿಂದಲೂ, ಸುಂದರವಾದ ವಚನಗಳ ಸಮೂಹದಿಂದಲೂ ಪದ್ಧತಿಕೆಗಳಿಂದಲೂ, ರಸಭರಿತವಾಗಿರುವ ಸಕಲವರ್ಣನೆಗಳಿಂದಲೂ ಕೂಡಿದ್ದಲ್ಲಿ ಅದು ಬಾಜನೆಗಬ್ಬ ಎಂಬುದಾಗಿ ನಿರೂಪಿಸಿರುವ ಬಾಜನೆಗಬ್ಬದ ಲಕ್ಷಣ 'ಕವಿರಾಜಮಾರ್ಗ'ದ ಚತ್ತಾಣದ ಲಕ್ಷಣದೊಡನೆ ಬಹುಮಟ್ಟಿಗೆ ಸರಿಬರುತ್ತದೆ ಎಂದೂ, ಆದ್ದರಿಂದ ಅವೆರಡೂ ಒಂದೇ ಕಾವ್ಯಪ್ರಕಾರವನ್ನು ಕುರಿತದ್ದು ಎಂದೂ ಆರ್. ನರಸಿಂಹಾಚಾರ್ ಅಭಿಪ್ರಾಯಪಡುತ್ತಾರೆ. ಅವರು ಕನ್ನಡಕ್ಕೆ ವಿಶಿಷ್ಟವಾದ ಮೆಲ್ವಾಡು, ಬೆದಂಡೆಗಬ್ಬ, ಬಾಜನೆಗಬ್ಬ ಎಂಬ ಕಾವ್ಯಪ್ರಕಾರಗಳನ್ನು ಯಾವುದಾದರೂ ವಾದ್ಯದ ಸಂಗಡ ಅಥವಾ ಅವಿಲ್ಲದೆಯೂ ಹಾಡುತ್ತಿದ್ದಂತೆ ತೋರುತ್ತದೆ ಎಂದೂ ಹೇಳಿದ್ದಾರೆ. 'ಪಾಡು' ಮತ್ತು 'ಬಾಜನೆ' (=ವಾದ್ಯವಾದನ) ಎಂಬ ಶಬ್ದಗಳಿಂದ ಹೀಗೆ ಭಾವಿಸುವುದಾಗಿ ಸೂಚನೆ ಕೊಡುವ, ಅವರು

'ಚತ್ತಾಣ' ಹಾಡುಗಬ್ಬ ಎನ್ನುತ್ತಾರೆ.[173]

ತೀ.ನಂ. ಶ್ರೀಕಂಠಯ್ಯನವರು "ಚತ್ತಾಣವನ್ನು ಹಾಡುತ್ತಿದ್ದರೆನ್ನಲು ಎಲ್ಲೂ ಸೂಚನೆಯಿಲ್ಲ. ಇಲ್ಲಿಯ ಬಾಜನೆಯು ಮೂಲ ಸಂಸ್ಕೃತದ 'ವಾದನ'ವಲ್ಲ. ಅದು ನಿಜವಾಗಿ ವಾಚನ (ವಾಚನಾ) ಆಗಿರಬೇಕೆಂದು ನಮಗೆ ತೋರುತ್ತದೆ" ಎಂದು ಭಿನ್ನ ರೀತಿಯಲ್ಲಿ ಆಲೋಚಿಸುತ್ತ "ಬಾಜನೆ" ಎಂದರೆ ವಾಚಿಸುವಿಕೆ (ಓದುವಿಕೆ) ಎಂದರ್ಥಯಿಸಿರುವ ಪ್ರಯೋಗಗಳ ಆಧಾರವನ್ನಿತ್ತು, "ಬಾಜನೆಗಬ್ಬ ಎಂದರೆ 'ವಾಚನ ಕಾವ್ಯ'ವಾಗುತ್ತದೆ, ಎಂದರೆ ಓದುಗಬ್ಬವಾಗುತ್ತದೆ; ಶ್ರುತಿ, ರಾಗವಿಸ್ತಾರ, ತಾಳ ಮೊದಲಾದವುಗಳ ನೆರವಿಲ್ಲದೆ ವಾಚಿಸತಕ್ಕ (to be recited and not sung) ಕಾವ್ಯವಾಗುತ್ತದೆ"[174] ಎನ್ನುವುದರ ಜೊತೆಗೆ "ಪದ್ಧತಿಕೆ, ವರ್ಣನೆಗಳು ಇವುಗಳ ವಿಷಯ 'ಕವಿರಾಜಮಾರ್ಗ'ದ ಚತ್ತಾಣದಲ್ಲಿ ಉಕ್ತವಾಗಿಲ್ಲದಿದ್ದರೂ, ಎರಡರಲ್ಲೂ ವೃತ್ತಗಳ ವೈವಿಧ್ಯವು ಮುಖ್ಯವಾದ ಸಮಾನಾಂಶವೆಂಬುದನ್ನು ನೆನೆದರೆ, ಚತ್ತಾಣವೇ ಕಾಲಾಂತರದಲ್ಲಿ ಬಾಜನೆಗಬ್ಬವೆನಿಸಿಕೊಂಡಿತು" ಎಂದು ಬೇರೆ ರೀತಿಯಲ್ಲಿ ಸಮೀಕರಣವನ್ನು ನಡಸಿದ್ದಾರೆ. ಜನ್ನನ 'ಯಶೋಧರಚರಿತೆ'ಯ ರಚನೆಯನ್ನು ಕುರಿತು ವಿಮರ್ಶಿಸುವಾಗ, ಪ್ರಾಸ್ತಾವಿಕವಾಗಿ, "ನಾಗವರ್ಮನು 'ಬಾಜನೆಗಬ್ಬ'ಕ್ಕೆ ಕೊಟ್ಟಿರುವ ಲಕ್ಷಣವನ್ನೂ ನೃಪತುಂಗನು 'ಚತ್ತಾಣ'ಕ್ಕೆ ಕೊಟ್ಟಿರುವ ಲಕ್ಷಣವನ್ನೂ ಹೋಲಿಸಿದರೆ ಇವೆರಡೂ ಒಂದೇ ಎಂದು ತೋರದಿರಲಾರದು"—ಎಂದು ಡಿ. ಎಲ್. ನರಸಿಂಹಾಚಾರ್ಯರೂ ಈ ಸಂಗತಿಯನ್ನೊಪ್ಪಿದ್ದಾರೆ[175]; "ಬಾಜನೆಗಬ್ಬವು ಚತ್ತಾಣದ ಮುಮ್ಮೆಟ್ಟಲಾಗಿರುವಂತೆ ಚಂಪೂವಿನ ಹಿಮ್ಮೆಟ್ಟಲಾಗಿದೆ" ಎಂದು, ತೀ.ನಂ.ಶ್ರೀ. ಅವರ ವಾದಸರಣಿಯನ್ನು ಗಮನಿಸಿ ಟಿ. ವಿ. ವೆಂಕಟಾಚಲಶಾಸ್ತ್ರಿಗಳು ಹೇಳಿದ್ದಾರೆ.[176]

ಮುಳಿಯ ತಿಮ್ಮಪ್ಪಯ್ಯನವರು ವಿವರಿಸುವ ಚತ್ತಾಣದ ಸ್ವರೂಪಕಲ್ಪನೆಯಲ್ಲಿ ಪರಸ್ಪರ ವಿರೋಧವಾದ ಎರಡು ಹೇಳಿಕೆಗಳು ಕಾಣುತ್ತವೆ. ಒಂದೆಡೆ ಅವರು ಬಾಜನೆಗಬ್ಬ ಹಾಗೂ ಚತ್ತಾಣ ಇವೆರಡರ ನಡುವೆ ಅಂತಹ ಸಂಬಂಧ, ಸಾದೃಶ್ಯ ಕಾಣಬರುವುದಿಲ್ಲ ಎಂದು ಅಸ್ಪಷ್ಟವಾಗಿ ಅಭಿಪ್ರಾಯಪಡುತ್ತ, ಹೀಗೆಂದಿದ್ದಾರೆ. "ನಾಗವರ್ಮನು ಈ 'ಚತ್ತಾಣ' ಎಂಬುದರ ಸುದ್ದಿಯನ್ನೇ ಎತ್ತಲಿಲ್ಲ. ಒಂದೋ ಅವನ ಕಾಲದಲ್ಲಿ 'ರೂಢಿಯ ಬೆದಂಡೆಗಬ್ಬಮುಂ' ಎಂಬ ಮಾತಿನಲ್ಲೇ ತೋರುವಷ್ಟು ಪ್ರಖ್ಯಾತಿ 'ಚತ್ತಾಣ'ಕ್ಕೆ ಇಲ್ಲದಾಗಿರಬೇಕು; ಅಥವಾ 'ಚತ್ತಾಣ'ವೆಂಬುದು ಅವನು ವಿವರಿಸಿದ ಮೇಲ್ವಾಡೆಂಬುದೇ ಆಗಿರಬೇಕು. ಈ ಎರಡನೆಯ ಅಭಿಪ್ರಾಯವೇ ಸರಿಯಾಗಿರಬೇಕೆಂದು ನನ್ನ ಭಾವನೆ. ಯಾಕೆಂದರೆ ನಾಗವರ್ಮನು ಇಲ್ಲಿ ನಿರೂಪಿಸಿದ 'ಪದ-ಮೇಲ್ವಾಡು' ಮೊದಲಾಗಿ 'ಬೆದಂಡೆಗಬ್ಬ'ದವರೆಗಿನವು, ಹಾಡಲಿಕ್ಕೂ ಆಟವಾಡಲಿಕ್ಕೂ ಯೋಗ್ಯವಾದುವುಗಳು. ಚತ್ತಾಣವು ದೇಸಿಗಬ್ಬವೇ ಆದರೂ ಮತ್ತಿನ ಸರ್ಗಬದ್ಧವಾದ ಮಾರ್ಗೀಯ ಕಾವ್ಯಗಳಂತೆ ಶ್ರವ್ಯವೇ ಹೊರತು ದೃಶ್ಯಕ್ಕೊಪ್ಪುವುದಲ್ಲ ಎಂದು ತೋರುತ್ತಿದೆ."[177]

ಇನ್ನೊಂದೆಡೆ ಇದಕ್ಕೆ ವಿರುದ್ಧವಾಗಿ ಹೀಗೆಂದಿದ್ದಾರೆ: "ಚತ್ತಾಣದ ಇನ್ನೊಂದು ಹೆಸರೇ ಈ 'ಬಾಜನೆಗಬ್ಬ'ವಾಗಿರಬಹುದೆಂದು ನನ್ನ ಭಾವನೆ. ಅಥವಾ ನಾಗವರ್ಮನ ಕಾಲದಲ್ಲಿ ಆ ಹೆಸರಿಗಿಂತಲೂ ಈ ಹೆಸರೇ ಹೆಚ್ಚು ರೂಢಿಗೊಂಡಿದ್ದಿರಲಿಕ್ಕೂ ಸಾಕು. 'ಬಾಜನೆಗಬ್ಬ' ಎಂದರೆ ವಾದನಕಾವ್ಯ ಎಂಬುದರ ತದ್ಭವರೂಪ. ತಾಳ-ಶ್ರುತಿ ಮೃದಂಗಾದಿಗಳ ವಾದನಾತ್ಮಕ ಮೇಳದಿಂದೊಡವರೆದು ಹಾಡುವ ಕಾವ್ಯ ಎಂದೇ ಇದರ ಅರ್ಥ.... ಬಾಜನೆಗಬ್ಬವೆಂದರೆ ದೇಸಿಗಬ್ಬದೊಳಗಿನ ಮಹಾಕಾವ್ಯವೇ ಎಂಬಲ್ಲಿ ಸಂಶಯ ವಿಲ್ಲ...."[178] "ಬಾಜನೆಗಬ್ಬವೇ ಮೊದಲಾದ ಪುರಾತನ ದೇಶೀ ಕಾವ್ಯವರ್ಗದ ಸಂತತಿ ಯಲ್ಲಿಯೇ ಇಂದಿನ 'ಯಕ್ಷಗಾನ ಪ್ರಬಂಧ' ಇಲ್ಲವೇ ಬಯಲಾಟದ ಪ್ರಬಂಧವು ತಲೆ ದೋರಿದುದಾಗಿ ನಮ್ಮ ನಂಬುಗೆ....ಯಕ್ಷಗಾನ ಪ್ರಬಂಧ ಅಥವಾ ದಶಾವತಾರ ಪ್ರಬಂಧ ಎಂದರೆ ದೇಸಿಯಾದ ನಾಟಕವೇ ಎಂಬುದನ್ನು ಮರೆಯಬಾರದು. ಅದರಿಂದಲೇ ನಾಗವರ್ಮನು ಮತ್ತಿನ-ಎಂದರೆ ತನ್ನ ಗ್ರಂಥಾಂತ್ಯದ ೨೪೬, ೨೪೭ನೆಯ ಎರಡು ಸೂತ್ರಗಳಲ್ಲಿ ನಾಟಕ ರಚನೆಗೆ ಜೀವಾಳವಾದ 'ಮುಖ' 'ಪ್ರತಿಮುಖ' 'ಅವಮರ್ಶ' 'ಗರ್ಭ' 'ನಿರ್ವಹಣ' ಎಂಬ ಐದು ಸಂಧಿಗಳನ್ನೂ 'ಬೀಜ', 'ಬಿಂದು' 'ಪತಾಕೆ' 'ಪ್ರಕರಿ' 'ಕಾರ್ಯ' ಎಂಬ ಐದು ಸಂಧ್ಯಂಗಗಳನ್ನೂ ನಿರೂಪಿಸಿದ್ದಾನೆ. ಈ ಬಾಜನೆಗಬ್ಬ ವನ್ನು ವಿಸ್ತರಿಸಿದ ಮೇಲೆ ಗ್ರಂಥಾಂತ್ಯದ ಎರಡು ಪದ್ಯಗಳಲ್ಲಿ ನಾಟಕದ ಈ ವಿಶಿಷ್ಟ ಲಕ್ಷಣಗಳನ್ನು ಸೂಚಿಸಿ ಕೊನೆಗೊಳಿಸಬೇಕಾದರೆ, ಆ ಹಿಂದಿನ ದೇಸಿಗಬ್ಬವು ದೇಶೀಯ ನಾಟಕ ಸ್ವರೂಪವಾಗಿ ಇರಬೇಕೆಂದಲ್ಲದೆ ಸೂಚಿತವಾಗುವುದು" ಎಂದಿದ್ದಾರೆ.[179]

ಈಚೆಗೆ ಸಂಗೀತಶಾಸ್ತ್ರದ ದೃಷ್ಟಿಯಿಂದ ಇದರ ವಿವೇಚನೆ ನಡಸಿರುವ ಕುಕ್ಕಿಲ ಕೃಷ್ಣಭಟ್ಟರು 'ಬಾಜನೆಗಬ್ಬ' ಎಂಬುದನ್ನು ಓದುಗಬ್ಬ, ವಾಚನಾತ್ಮಕವಾದ ಕಾವ್ಯ ಎಂದೊಪ್ಪಿದರೂ, ಚತ್ತಾಣವನ್ನು 'ಹಾಡುಗಬ್ಬ'ವೇ ಸರಿ ಎನ್ನುತ್ತಾರೆ; ಇದರಿಂದ ಬಾಜನೆಗಬ್ಬ=ಚತ್ತಾಣ ಎಂಬುದನ್ನು ಅವರು ಒಪ್ಪಿರುವಂತೆ ತೋರುವುದಿಲ್ಲ.[180]

ರಾ. ನರಸಿಂಹಾಚಾರ್ಯ, ತೀ.ನಂ. ಶ್ರೀಕಂಠಯ್ಯ, ಡಿ. ಎಲ್. ನರಸಿಂಹಾಚಾರ್ ಅವರು ಚತ್ತಾಣ ಬಾಜನೆಗಬ್ಬಗಳು ಅಭಿನ್ನ ಎಂದೊಪ್ಪಿಕೊಂಡರೂ, ಬಾಜನೆ ಶಬ್ದಾರ್ಥ ಕಾರಣವಾಗಿ ರಾ. ನರಸಿಂಹಾಚಾರ್ಯರು ಪಾಡುಗಬ್ಬ ಎಂತಲೂ, ತೀ.ನಂ. ಶ್ರೀಕಂಠಯ್ಯ ನವರು ಓದುಗಬ್ಬ ಎಂತಲೂ ಅದನ್ನು ವಿವರಿಸಿದ್ದಾರೆ. ಮುಳಿಯ ತಿಮ್ಮಪ್ಪಯ್ಯನವರು ಒಮ್ಮೆ ಚತ್ತಾಣ ಮೇಲ್ವಾಡು ಒಂದೇ ಎಂದೂ, ಇನ್ನೊಮ್ಮೆ ಬಾಜನೆಗಬ್ಬ ಚತ್ತಾಣ ಒಂದೇ ಎಂದೂ ವ್ಯವಹರಿಸುತ್ತಾರೆ. ಅವರಭಿಪ್ರಾಯದಲ್ಲಿ ವಿರೋಧಾಭಾಸ ಕಾಣಬರು ವುದರಿಂದ ಚತ್ತಾಣದ ಬಗ್ಗೆ ಅವರ ಒಟ್ಟು ನಿಲವು ಸ್ಪಷ್ಟವಾಗುವುದಿಲ್ಲ. ಅದು ದೇಸಿ ಯೊಳಗಿನ ದೃಶ್ಯಭೇದವಿರಬಹುದು ಎಂಬ ಅವರ ನಿಲವು, ಊಹೆಗೆ ಹೆಚ್ಚು ಇಂಬು ಕೊಟ್ಟದ್ದರ ಫಲ ಎನ್ನಬಹುದು.

ನಾಗವರ್ಮನು ಮೊದಲು ಪಾಡುಗಬ್ಬವನ್ನು ವಿವರಿಸಿ, ಆನಂತರ ಬಾಜನೆಗಬ್ಬವನ್ನು ಉದ್ದೇಶಿಸಿರುವುದರಿಂದ ಚತ್ತಾಣ=ಬಾಜನೆಗಬ್ಬ=ಓದುಗಬ್ಬ ಎಂಬುದು ಸ್ಪಷ್ಟವಾಗು

ತ್ತದೆ. "ಚತ್ತಾಣವನ್ನು ಹಾಡುತ್ತಿದ್ದರೆನ್ನಲು ಎಲ್ಲಿಯೂ ಸೂಚನೆಯಿಲ್ಲ."[181] ಅಲ್ಲದೆ ಪಾಡುಗಬ್ಬದಲ್ಲಿ ಪ್ರಭೇದಗಳನ್ನು ಹೇಳುವ ನಾಗವರ್ಮ ಬಾಜನೆಗಬ್ಬಕ್ಕೆ ಅಂಥವನ್ನೂ ಹೇಳಿಲ್ಲ. ಆದ್ದರಿಂದ ಸದ್ಯಕ್ಕೆ ತೀ.ನಂ.ಶ್ರೀಯವರು ಚತ್ತಾಣಕ್ಕೆ ಕೊಟ್ಟ ಈ ಸ್ವರೂಪ ವಿವರಣೆ ಸಲ್ಲುತ್ತದೆ: "ಚತ್ತಾಣ=೧. ಇದು ಬಾಜನೆಗಬ್ಬ; ವಾಚಿಸತಕ್ಕದ್ದು: ೨. ಇದರಲ್ಲಿ ಕಂದ, ಹಲವು ಬಗೆಯ ಸಂಸ್ಕೃತವೃತ್ತಗಳು, ದೇಶೀಯ ಪದ್ಯಜಾತಿಗಳು—ಇವೆಲ್ಲ ಬರುತ್ತವೆ (ಪದ್ದಳಿಯೂ ಬರಬಹುದು); ೩. ಇದು ಅಖಿಲವರ್ಣನೆಗಳಿಂದ ಕೂಡಿದ ಕಾವ್ಯ; ಆದ ಕಾರಣವೇ ಬಹುಶಃ ದೀರ್ಘವಾಗಿರುತ್ತದೆ."[182]

ಚತ್ತಾಣದ ನಿಷ್ಪತ್ತಿಯ ಬಗ್ಗೆ ಕೂಡ ಇದೇ ರೀತಿ ಭಿನ್ನಾಭಿಪ್ರಾಯಗಳಿವೆ. ತೀ.ನಂ. ಶ್ರೀಕಂಠಯ್ಯನವರು ಜನ್ನನ 'ಅನಂತನಾಥ ಪುರಾಣ'ದಲ್ಲಿ ಕಂಡುಬರುವ 'ಚಿತ್ರಾಯತನ' ಎಂಬುದನ್ನು ಆಧರಿಸಿ, ಅದರಿಂದ ಚತ್ತಾಣ ನಿಷ್ಪನ್ನವಾಗಿದೆಯೆಂದು ಹೇಳುತ್ತಾರೆ. ಮುಳಿಯ ತಿಮ್ಮಪ್ಪಯ್ಯನವರು, 'ಚತ್ತಾಣ' ಎಂಬುದು ಮೂಲದಲ್ಲಿ ಬಹುಶಃ 'ಜಕ್ಕತಾಣ' (ಯಕ್ಷತಾಣ) ಎಂದಿದ್ದಿರಬೇಕು, ಇದು ಉಚ್ಚಾರಣ ಪದ್ಧತಿಯಲ್ಲಿ 'ಕ್ಕ'ಕಾರವನ್ನು ಕಳೆದುಕೊಂಡು 'ಜತ್ತಾಣ' ಎಂದಾಗಿದ್ದಿರಬಹುದು, ಕಾಲಕ್ರಮೇಣ 'ಜತ್ತಾಣ' ಎಂಬುದು 'ಚತ್ತಾಣ' ಎಂದು ಧ್ವನಿಪರಿವರ್ತಿತ ರೂಪವನ್ನು ಹೊಂದಿದ್ದಿರಬಹುದು, ಕೆಲವೆಡೆ ಜತ್ತಾಣ ಎಂಬುದು ಕೂಡ ದೊರೆಯುತ್ತದೆ, ಈ ಭಾವನೆಯೇ ಸಾಧು ಎಂದಾದರೆ 'ಜತ್ತಾಣ'ವೇ ಮೂಲರೂಪವಾಗಿರಬೇಕು—ಎಂದಿದ್ದಾರೆ.[183]

ಅನಂತರ ಅವರು ಈ ವಾದ 'ಹುರುಳಿಲ್ಲದ್ದಾಗಬಹುದು' ಎಂಬ ಶಂಕೆ ತಾಳಿ ಹೀಗೆ ಚತ್ತಾಣ ಪದವನ್ನು ನಿಷ್ಪನ್ನಗೊಳಿಸಿದ್ದಾರೆ: ಚತ್ತಾಣ=ಚತ್ತ + ಆಣಂ .ಎಂದು ಎರಡು ಪದಗಳು ಇಲ್ಲಿ ಸೇರಿವೆ. ಚತ್ತ=ತಕ್ಕು (ತರ್ಕುಃ=ನೂಲೆಳೆವ ಕದಿರು ಅಥವಾ ಚರಕ) ಎಂದು ಹೇಮಚಂದ್ರನ ದೇಶೀನಾಮಮಾಲೆಯಲ್ಲಿ ಕೊಟ್ಟಿದೆ. ಆಣಂ=ಹಾಡು ಅಥವಾ ಹಾಡುಗಾರ. ಆದ್ದರಿಂದ ಚತ್ತಾಣ='ಚರಕದ ಹಾಡು' ಎನ್ನಬಹುದು.[184]

ಕುಕ್ಕಿಲ ಕೃಷ್ಣಭಟ್ಟರು ಕವಿರಾಜಮಾರ್ಗಕಾರ ಕೊಡುವ ಚತ್ತಾಣ ಲಕ್ಷಣ ವಿವರಣೆಯಲ್ಲಿ ಕಂದ, ವೃತ್ತ, ಅಕ್ಕರ, ಚೌಪದಿ, ಗೀತಿಕೆ, ತ್ರಿಪದಿ ಎಂಬ ಆರು ವಿಧದ ಛಂದಸ್ಸು ಮಾತ್ರ ಇದರಲ್ಲಿರುವುದರಿಂದ ಇದು 'ಷಟ್‌ಸ್ಥಾನ' (ತ್ಸ) > ಚತ್ತಾಣ (ಧ್ಭ) ಹೀಗೆ ಆಗಿರಬಹುದೆನ್ನುತ್ತಾರೆ.[185]

ತೀ.ನಂ.ಶ್ರೀ. 'ಚತ್ತಾಣ'ವನ್ನು 'ಚಿತ್ರಾಯತನ' ಎಂಬುದರಿಂದ ನಿಷ್ಪನ್ನಮಾಡುವುದು ವಿಚಾರಣೀಯ. ಸಂಸ್ಕೃತ ಸಾಹಿತ್ಯದಲ್ಲಿ ಈ ಕಾವ್ಯರೂಪವಾಗಲಿ, ಶಬ್ದವಾಗಲಿ ಬಹುಶಃ ಎಲ್ಲಿಯೂ ಕಂಡುಬಂದಿಲ್ಲ. ಆದ್ದರಿಂದ 'ಚತ್ತಾಣ'ವೇ ಸಂಸ್ಕೃತೀಕರಣಗೊಂಡು (Sanskritization) 'ಚಿತ್ರಾಯತನ' ಎಂದಾಗಿರುವುದು ಸಾಧ್ಯ ಎಂದು ಇದರಿಂದ ತೋರುತ್ತದೆ; 'ಅನಂತನಾಥ ಪುರಾಣ'ದಲ್ಲಿ ಕಾಣಬರುವವರೆಗೆ ಈ ಪ್ರಯೋಗ ಕನ್ನಡದಲ್ಲಿ ಎಲ್ಲೂ ಕಾಣಬರುವುದಿಲ್ಲ; ಬಹುಶಃ ಅನಂತರವೂ ಅಷ್ಟೆ. ಆದ್ದರಿಂದ ಜನ್ನನೇ ಇದನ್ನು ಸಂಸ್ಕೃತೀಕಂಸಿರಬಹುದು. ಮುಳಿಯ ತಿಮ್ಮಪ್ಪಯ್ಯನವರು 'ಜಕ್ಕತಾಣ > ಚತ್ತಾಣ

ಎಂದೂಹಿಸುವುದು ಯಕ್ಷಗಾನದೊಡನೆ ಈ ಕಾವ್ಯರೂಪವನ್ನು ಗಂಟುಹಾಕುವ ಒತ್ತಾಯದ ಪ್ರಯತ್ನವಾಗಿರುವಂತೆ ತೋರುತ್ತದೆ. ಇನ್ನು 'ಚರಕದ ಹಾಡು' ಚತ್ತಾಣ ಎನ್ನುವುದು ಅಸಮಂಜಸ ಕಲ್ಪನೆ. ಕುಕ್ಕಿಲ ಕೃಷ್ಣಭಟ್ಟರ ಷಟ್‌ಸ್ಥಾನ=ಚತ್ತಾಣ ಎಂಬ ಕಲ್ಪನೆಯನ್ನು ಬೆಂಬಲಿಸುವ ಯಾವುದೇ ಆಧಾರ ದೊರೆತಿಲ್ಲ. ಛಂದಸ್ಸುಗಳ ಹೆಸರುಗಳನ್ನು ಹಿಡಿದು ಸಾಹಿತ್ಯರೂಪಗಳ ಹೆಸರುಗಳು ಬಂದಿರುವ ನಿದರ್ಶನಗಳಿಲ್ಲ. ಕವಿರಾಜಮಾರ್ಗಕಾರ ಆರು ಛಂದಸ್ಸುಗಳನ್ನು ಸೂಚಿಸುವಂತೆ 'ಚತ್ತಾಣ'ವೆಂದು ಒಂದು ಸಾಹಿತ್ಯರೂಪಕ್ಕೆ ಹೆಸರಿಟ್ಟನೆಂದು ಸಾಧಿಸುವುದು ಕಷ್ಟ. ಆದ್ದರಿಂದ ಚತ್ತಾಣದ ಅರ್ಥನಿಷ್ಪತ್ತಿ ಇನ್ನೂ ತೆರೆದ ಪ್ರಶ್ನೆಯಾಗಿದೆ.

ಬೆದಂಡೆ : 'ಚತ್ತಾಣ'ಕ್ಕಿಂತ ಬೆದಂಡೆಗೆ ಹೆಚ್ಚು ವಿವರಗಳು ದೊರೆಯುವಂತಿದ್ದರೂ, ಇದರ ನಿಷ್ಪತ್ತಿ ಹಾಗೂ ಸ್ವರೂಪದ ಬಗ್ಗೆಯೂ ಭಿನ್ನಾಭಿಪ್ರಾಯಗಳು ಹೀಗೆಯೇ ಮೂಡಿವೆ. ಈ ಸಾಹಿತ್ಯರೂಪದ ಉಲ್ಲೇಖ ಹಲವಾರು ಕಾವ್ಯಗಳಲ್ಲಿ ಬಂದಿವೆ.

ಇದರ ಬಗ್ಗೆ ಕವಿರಾಜಮಾರ್ಗದಲ್ಲಿ ಹೀಗಿದೆ :

ಕಂದಮುಮಳಿನ ವೃತ್ತಮು
ಮೊಂದೊಂದೆಡೆಗೊಂದು(ಡು) ಜಾತಿಜಾಣೆಸೆಯೆ ಬೆಡಂ
ಗೊಂದಿವಱಿಕೂಳಪುರೆ ಪೇೞಿಲ್
ಸುಂದರರೂಪಿಂ ಬೆದಂಡೆಗಬ್ಬಪುದಕ್ಕುಂ ॥ (೧–೩೪)

ನಾಗವರ್ಮನು ತನ್ನ 'ಕಾವ್ಯಾವಲೋಕನ'ದಲ್ಲಿ ಪದ, ಪಾಡು, ಮೆಲ್ವಾಡು, ಪಾಡುಗಬ್ಬಗಳನ್ನು ಒಳಗೊಂಡಂತೆ ಬೆದಂಡೆಯ ಲಕ್ಷಣವನ್ನು ಹೀಗೆ ಹೇಳಿದ್ದಾನೆ :

ಸಂದಿಸಿರೆ ಕಂದಮುಂ ಪೆಱ
ತೊಂದಱಿಕೆಯ ವೃತ್ತಜಾತಿಯುಂ ಪದಮುವು ತ
ಱಿತ್ತೊಂದಿರೆ ಪನ್ನೆರಡುವರಂ
ಸಂಡುದು ಮೆಲ್ವಾಡೆನಿಕ್ಕುಮದು ಕನ್ನಡದೊಳ್ ॥ (೯೫೨)

ಪದಿನಯ್ದು ಮಿರ್ಪತಯ್ದುಂ
ಪದಂ ಯಥಾಸಂಭವಂ ಪ್ರಬಂಧದ ಮೆಯ್ಯೊಳ್
ಪುದಿದೊದವಿ ನೆಗೞ್ದೊಡಂತದು
ಸವಲಂಕಾರಂ ರಸಾಸ್ಪದಂ ಪಾಡಕ್ಕುಂ ॥ (೯೫೩)

ಪಾಡುಗಳಿಂದಂ ತಱಿಸಲೆ
ಮಾಡಿದುದಂ ಪಾಡುಗಬ್ಬಮೆಂದು ಬುಧರ್ ಕೊಂ
ಡಾಡುವರದಱಿಂ ದಲ್ ಮೆ
ಲ್ವಾಡುಂ ರೂಢಿಯ ಬೆದಂಡೆಗಬ್ಬಮುಮಕ್ಕುಂ ॥ (೯೫೪)

ಕವಿರಾಜಮಾರ್ಗದ ಪದ್ಯದಲ್ಲಿ ಹೇಳಿರುವ ವೃತ್ತಭೇದಗಳು ಎಷ್ಟು ಎಂಬುದರ ಬಗ್ಗೆ ಭಿನ್ನಾಭಿಪ್ರಾಯ ಮೂಡಿದೆ. ಇದರಲ್ಲಿ ಕಂದ, ವೃತ್ತ ಎಂಬ ಎರಡೇ ಮಟ್ಟುಗಳು

ಇದ್ದಿರಬೇಕು ಎಂದು ತೀ. ನಂ. ಶ್ರೀ[186], ಮುಳಿಯ ತಿಮ್ಮಪ್ಪಯ್ಯ[187], ಎಂ. ವಿ. ಸೀತಾರಾಮಯ್ಯನವರು[188] ಅಭಿಪ್ರಾಯಿಸಿದರೆ, ಕಂದ-ವೃತ್ತ-ಜಾತಿ ಎಂಬ ಮೂರು ಮಟ್ಟುಗಳಿರಬೇಕು ಎಂದು ಕೆ. ಕೃಷ್ಣಮೂರ್ತಿ[189], ಕುಕ್ಕಿಲ ಕೃಷ್ಣಭಟ್ಟ[190], ಎಲ್. ಬಸವರಾಜು[191] ಅಭಿಪ್ರಾಯಪಡುತ್ತಾರೆ.

ನಾಗವರ್ಮನ ಪದ್ಯಗಳನ್ನು ಅರ್ಥೈಸುವುದರಲ್ಲಿಯೂ ಇದೇ ರೀತಿ ಭಿನ್ನಾಭಿಪ್ರಾಯಗಳು ಹೊರಬಿದ್ದಿವೆ. ನಾಗವರ್ಮನು ಮೇಲಿನ ಕೊನೆಯ ಪದ್ಯದಲ್ಲಿ 'ಪಾಡುಗಬ್ಬ' 'ಮೆಲ್ವಾಡು' 'ಬೆದಂಡೆಗಬ್ಬ' ಮೂರನ್ನೂ ಪ್ರಸ್ತಾಪಿಸಿ ಅವುಗಳ ನಡುವಣ ಸಂಬಂಧವನ್ನು ವಿಶದೀಕರಿಸಲು ಪ್ರಯತ್ನಿಸಿದ್ದಾನೆ. ಇಲ್ಲಿ ರಾ. ನರಸಿಂಹಾಚಾರ್ಯರು ಬೆದಂಡೆ ಮೆಲ್ವಾಡಿಗೆ ಇನ್ನೊಂದು ಹೆಸರು ಎಂದಿರುವುದನ್ನು ಡಿ. ಎಲ್. ನರಸಿಂಹಾಚಾರ್ಯರು ಒಟ್ಟಿನಲ್ಲಿ ಅಂಗೀಕರಿಸಿದ್ದಾರೆ. "ನೃಪತುಂಗನ ಬೆದಂಡೆಯ ಲಕ್ಷಣವನ್ನೂ ನಾಗವರ್ಮನ ಮೆಲ್ವಾಡಿನ ಲಕ್ಷಣವನ್ನೂ ಹೋಲಿಸಿ ನೋಡಿದರೆ ಅವೆರಡೂ ಅಭಿನ್ನವೆಂದು ತೋರದಿರಲಾರದು"—ಎಂದು ಈ ಸಂದರ್ಭದಲ್ಲಿ ಅವರು ಹೇಳಿದ್ದಾರೆ.[192] ಹೀಗೆ ಹೇಳಿದ್ದರೂ ಆಯಿಬ್ಬರು ಕೊಡುವ ಲಕ್ಷಣಗಳಲ್ಲಿ ಸರ್ವಥಾ ಸಾಮ್ಯವಿದೆಯೆಂದು ಸಾಧಿಸುವಲ್ಲಿಯೂ ಕಷ್ಟವಿದೆ; ಏಕೆಂದರೆ ಬೆದಂಡೆಯಲ್ಲಿ ಕಂದ+ವೃತ್ತ+ಜಾತಿ ಹೀಗೆ ಬರತಕ್ಕದ್ದು, ಮೆಲ್ವಾಡಿನಲ್ಲಿ ಕಂದ+ವೃತ್ತ ಹೀಗೆ ಬರತಕ್ಕದ್ದು ಎಂದು ತಿಳಿಯಲು ಕೆಲಮಟ್ಟಿಗೆ ಅವಕಾಶವಿರುವುದೇ ಆ ಕಷ್ಟ. ಕೆಲವರು ಈ ಎರಡರಲ್ಲಿಯೂ ಮೂರು ಮೂರು ಬಗೆಯ ಛಂದಸ್ಸುಗಳನ್ನೇ ಹೇಳಿದೆಯೆಂದೂ, ಅವು ಪರಸ್ಪರ ಸಮಾನವೆಂದೂ ಹೇಳಿ ಆ ಸಾಮ್ಯವನ್ನು ಸಾಧಿಸಲು ಈಚೆಗೆ ಯತ್ನಿಸಿರುವುದುಂಟು. ಆದರೆ ಅಲ್ಲಿಯೂ ಅರ್ಥಾನ್ವಯಗಳು ನಿರ್ದುಷ್ಟವೆಂದು ಅಥವಾ ಇದಮಿತ್ಥಂ ಎಂದು ತೋರಿಸುವುದು ಸುಲಭವಲ್ಲ.

ಇನ್ನು ಮುಳಿಯ ತಿಮ್ಮಪ್ಪಯ್ಯನವರು ಸ್ಪಷ್ಟವಾಗಿ "ಪಾಡುಗಬ್ಬದೊಳಗೆ ಮೆಲ್ವಾಡು, ಬೆದಂಡೆಗಬ್ಬ ಎಂಬ ಭೇದಗಳಿರುವಂತೆ ತೋರುತ್ತದೆ" ಎಂದಿದ್ದು[193] ಅದನ್ನು ತೀ. ನಂ. ಶ್ರೀ, ಕುಕ್ಕಿಲ ಕೃಷ್ಣಭಟ್ಟರು ಕೂಡ ಒಪ್ಪಿದ್ದಾರೆ.

ತೀ. ನಂ. ಶ್ರೀಕಂಠಯ್ಯನವರು "ಈ ಜಾತಿಯ (ಬೆದಂಡೆಯ) ಕಾವ್ಯದಲ್ಲಿ ಸಂಖ್ಯಾವಿಭೇದಗಳನ್ನು ಬಿಟ್ಟರೆ ಒಂದು ಮುಖ್ಯಾಂಶ ಎದ್ದುಕಾಣುತ್ತದೆ. ಇದರಲ್ಲಿ ಬರುವ ಛಂದಸ್ಸು ಎರಡೇ ಬಗೆಯದು—ಕಂದ, ಜೊತೆಗೆ ಯಾವುದಾದರೂ ಒಂದು ಪ್ರಸಿದ್ಧ ವೃತ್ತ. ಹೆಚ್ಚಿನ ವೈವಿಧ್ಯಕ್ಕೆ ಇಲ್ಲಿ ಅವಕಾಶವಿಲ್ಲ....."ಕಂದಮುಂ ಅಮಳಿನ ವೃತ್ತಮುಂ ಒಂದೊಂದೆಡೆಗೆ ಒಂದು ಜಾತಿ...." ಎಂಬ ಉಕ್ತಿಯ ಖಚಿತವಾದ ಅರ್ಥವೇನು? ಕಂದದ ಜೊತೆಗೆ ಬರುವ ಅಮಳಿನ [=ಒಳ್ಳೆಯ=ಅಜಾಕೆಯ(?)] ವೃತ್ತವು ಒಂದೊಂದು ಜಾಗದಲ್ಲಿ ಒಂದೊಂದು ಜಾತಿಯದಾಗಿರಬೇಕೆಂದೆ? ಇಲ್ಲವೆ ಒಂದೊಂದು ಎಡೆಗೆ (=ಮಧ್ಯಮಧ್ಯದಲ್ಲಿ) ಒಂದೇ ಜಾತಿಯದು ಬರಬೇಕೆಂದೆ? ಎರಡನೆಯ ಅರ್ಥವೇ ಸಂಭಾವ್ಯವೆಂದು ತೋರುತ್ತದೆ. ಮೊದಲನೆಯದು ಸರಿಹೊಂದಬೇಕಾದರೆ "ಒಂದೊಂದೆಡೆಗೆ ಒಂದೊಂದು ಜಾತಿ ಎಂಬ ಮೂಲಪಾಠ ಇರಬೇಕಾಗಿತ್ತಲ್ಲವೆ? ನಾಗವರ್ಮನ ಮತಕ್ಕೂ

ನಮ್ಮ ಅರ್ಥ ಹೊಂದಿಕೆಯಾಗುತ್ತದೆ. ಬೆದಂಡೆಯೆಂಬ ಪಾಡುಗಬ್ಬದ ತಳಹದಿಯಾದ "ಪದ"ದಲ್ಲಿ ಮೇಲೆ ನೋಡಿದಂತೆ ಕಂದದೊಂದಿಗೆ ಒಂದೇ ವೃತ್ತಜಾತಿ ತಾನೆ ಸೇರಬೇಕಾದದ್ದು. ಅಂತೂ 'ಕವಿರಾಜಮಾರ್ಗ' 'ಕಾವ್ಯಾವಲೋಕನ' ಈ ಎರಡರ ಮತದಂತೆಯೂ ಬೆದಂಡೆಯಲ್ಲಿ ಕಂದಗಳೂ ನಡುನಡುವೆ ಒಂದೇ ಜಾತಿಯ ವೃತ್ತಗಳೂ ಸೇರಿ ಬಂದಿರಬೇಕೆಂದು ನಿರ್ಣಯಿಸಬಹುದು" ಎಂದು ತಮ್ಮ ನಿಲವು ಸೂಚಿಸಿದ್ದಾರೆ.[194]

ಈ ಪದ್ಯದ ಬಗ್ಗೆ ಟಿಪ್ಪಣಿ ಬರೆಯುತ್ತ ಎಂ. ವಿ. ಸೀತಾರಾಮಯ್ಯನವರು 'ಕವಿರಾಜಮಾರ್ಗ'ದ ತಮ್ಮ ಪರಿಷ್ಕರಣದಲ್ಲಿ ಮಾಡಿರುವ ಅಭಿಪ್ರಾಯ "ಕಂದಪದ್ಯವೂ ಅಮಳಿನ (ದೋಷರಹಿತವಾದ) ವೃತ್ತವೂ ಒಂದೊಂದು ಎಡೆಗೆ ಒಂದೊಂದರಂತೆ ಕೂಡಿ 'ಜಾತಿ ಜಾಣು' (ದೇಸಿಗೆ ವಿಶಿಷ್ಟವಾದ ಕೌಶಲ) ಇವುಗಳಲ್ಲಿ ಬೆಡಂಗಿನಿಂದ ಸೇರಿಕೊಂಡಿದ್ದರೆ ಅದು ಬೆದಂಡಗಬ್ಬ ಎನಿಸುವುದು" ಎಂದಾಗಿದ್ದರೆ[195], "ಒಂದು ಕಂದ ಒಂದು ವೃತ್ತ ಹೀಗೆ ಪರ್ಯಾಯದಿಂದ ಇದ್ದು ಒಂದೊಂದೆಡೆಗೆ ಒಂದು ದೇಸಿಛಂದಸ್ಸಿನ ಪದ್ಯ ಸೇರಿಕೊಂಡಿದ್ದರೆ ಅದು ಬೆದಂಡೆಗಬ್ಬವಾಗುತ್ತದೆ. ಅಂದರೆ ಕಂದವೃತ್ತಗಳ ಪರ್ಯಾಯ ಪ್ರಯೋಗ ಮತ್ತು ವಿರಳವಾದ ದೇಸಿಛಂದಸ್ಸು ಇದು ಬೆದಂಡೆಗಬ್ಬವೆಂದು ಕವಿರಾಜಮಾರ್ಗದ ಲಕ್ಷಣ ನಿರ್ದೇಶವಿರಬೇಕು" ಎಂಬುದು ಮುಗಳಿಯವರ ಅಭಿಪ್ರಾಯವಾಗಿದೆ.[196]

ತೀ. ನಂ. ಶ್ರೀಯವರು ಕವಿರಾಜಮಾರ್ಗದ ಪದ್ಯದಲ್ಲಿ 'ಜಾತಿ' ಎಂಬುದನ್ನು ವಿಧ, ನಮೂನೆ, ಎಂಬ ರೀತಿಯಲ್ಲಿ ಪರಿಗಣಿಸಿರುವುದನ್ನು ಕೆಲವರು ಒಪ್ಪಿಲ್ಲ. ತೀ. ನಂ. ಶ್ರೀಯವರು ನಾಗವರ್ಮನ ಪದ್ಯಗಳ ಆಶಯವನ್ನು ಬಿಡಿಸುವಾಗ ಕಂದವೂ, ಪ್ರಸಿದ್ಧವಾದ ಬೇರೊಂದು ವೃತ್ತಜಾತಿಯೂ ಜೊತೆಗೂಡಿ ಬಂದರೆ 'ಪದ' ಎಂದೂ, ಇಂಥ ಪದಗಳು ಹನ್ನೆರಡರವರೆಗೆ ಇದ್ದರೆ ಅದು ಮೆಲ್ವಾಡು ಎಂದೂ ಹೇಳಿದರೆ, ಕಂದ, ಪ್ರಸಿದ್ಧವಾದ ಒಂದು ವೃತ್ತಜಾತಿ ಮತ್ತು ಪದ ಎಂಬವು ಹನ್ನೆರಡರವರೆಗೆ ಸೇರಿದ್ದರೆ ಅದು ಮೆಲ್ವಾಡು ಎಂದು ಕೆಲವರು ವಿವರಿಸಿದ್ದಾರೆ. ಆದ್ದರಿಂದ "ಕಂದ ಮತ್ತು ಒಂದು ಪ್ರಸಿದ್ಧ ಜಾತಿಯ ವೃತ್ತ ಇವು ಕೂಡಿದರೆ 'ಪದ' ; ಈ ಪದವೇ ಇಲ್ಲಿನ ಶ್ರೇಣಿಯಲ್ಲಿ ಹೆಸರಿಸಿರುವ ಪದ್ಯಜಾತಿಗಳಿಗೆಲ್ಲ ಮೂಲಘಟಕ"[197] ಎಂಬ ತೀ. ನಂ. ಶ್ರೀಯವರ ವಿವರಣೆಯ ಪ್ರತಿಯಾಗಿ ಕವಿರಾಜಮಾರ್ಗದ ಪದ್ಯವನ್ನು ಲಕ್ಷಿಸಿ ಭಿನ್ನವಿವರಣೆ ಹೀಗೆ ಹೊರಟಿದೆ: "ಕವಿರಾಜಮಾರ್ಗಕಾರನ ಬೆದಂಡೆಯ ಲಕ್ಷಣದಲ್ಲಿರುವ ಆ 'ಜಾತಿ' ಎಂದರೆ ಹಾಡುಗಳೇ ಎಂಬುದರಲ್ಲಿ ಸಂದೇಹವಿಲ್ಲ. ಹಾಡು, ಪದ, ಜಾತಿ ಈ ಮೂರು ಸಂಜ್ಞೆಗಳಿಗೂ ಅರ್ಥ ಒಂದೇ....ಬೆದಂಡೆ ಎಂಬುದು ಎಡೆಎಡೆಯಲ್ಲಿ ಒಂದೊಂದು ಕಂದ ಮತ್ತು ಒಂದೊಂದು ವೃತ್ತಗಳನ್ನು ಒಳಗೊಂಡಿರುವ 'ಜಾತಿ'ಗಳ ರಚನೆ ಎಂದು ವ್ಯಕ್ತವಾಗುವುದು. 'ಜಾತಿ' ಎಂಬ ಛಂದಸ್ಸುಗಳಲ್ಲಿ ಅನೇಕ ವಿಧಗಳಿರುತ್ತಾ ಇಂಥ ಒಂದು ಜಾತಿ ಎಂಬ ವಿಶೇಷ ನಿರ್ದೇಶವಿಲ್ಲದೆ ಏಕವಚನದಲ್ಲಿ ಹೇಳಿರುವುದರಿಂದ ಅದು ಜಾತ್ಯೇಕವಚನ ಪ್ರಯೋಗವೆಂಬುದು ಸ್ಪಷ್ಟವೇ ಸರಿ. ಆದುದರಿಂದ ಬೆದಂಡೆ ಎಂಬುದು ಬಹ್ವಂಶ ಜಾತಿಛಂದಸ್ಸುಗಳಿಂದ ರಚಿಸಲ್ಪಡುವ ಕಾವ್ಯವೆಂದೂ, ಅಲ್ಲೊಂದು ಇಲ್ಲೊಂದರಂತೆ ದೂರದೂರಕ್ಕೆ

ಒಂದೊಂದು ಕಂದಗಳೂ ವೃತ್ತಗಳೂ ಅದರಲ್ಲಿರುತ್ತವೆ ಎಂದೂ ಊಹಿಸಬಹುದಾಗಿದೆ."[198]

ಎಲ್. ಬಸವರಾಜು ಅವರು ಕೂಡ ಇದೇ ನಿಲವನ್ನು ತಳೆದಿದ್ದು, ಜಾತಿ = ವಿಧ, ನಮೂನೆ ಎಂಬುದನ್ನು ಒಪ್ಪದೆ 'ಲೀಲಾವತಿ'ಯ ಒಂದು ಪದ್ಯದ ಆಧಾರದಿಂದ ಜಾತಿ= ಹಾಡು ಎಂಬುದನ್ನು ರುಜುವಾತು ಮಾಡುವುದರ ಜೊತೆಗೆ ಹಾಗೆಂದು ಸಂಸ್ಕೃತ ನಿಘಂಟಿನ ಅರ್ಥ ಕೂಡ ಇದೆ ಎಂದಿದ್ದಾರೆ. ನಾಗವರ್ಮನ ಪದ್ಯಗಳನ್ನು ವಿಶ್ಲೇಷಿಸುತ್ತ ಅವನು "ಪದ" ಎಂದು ಬಳಸಿರುವುದು 'ಹಾಡು' ಎಂಬರ್ಥದಲ್ಲೇ ಎಂದು ಅಭಿಪ್ರಾಯ ಪಡುತ್ತಾರೆ. ಶಿವದಾಸರ, ಹರಿದಾಸರ ಹಾಡುಗಳನ್ನು ಕೂಡ 'ಪದ' ಎಂದೇ ಕರೆಯುತ್ತಿದ್ದರು ಎಂಬಂಶವನ್ನು ನೆನಪರಿಸಿಕೊಟ್ಟು ಹೀಗೆ ನಿರ್ಣಯಮಾಡಿದ್ದಾರೆ: "ಬೆದಂಡೆಯೆನಿಸಬೇಕಾದರೆ ಕಂದವೃತ್ತಗಳ ಜೊತೆಗೆ 'ಜಾತಿ' ಕೂಡಿಕೊಂಡು ಬರಬೇಕೆಂದು ಕವಿರಾಜಮಾರ್ಗಕಾರನು ಹೇಳಿದ್ದರೆ 'ಪದ' ಕೂಡಿಕೊಂಡು ಬರಬೇಕೆಂದು ಕಾವ್ಯಾವಲೋಕನಕಾರನು ಹೇಳಿರುವನು. ಆದ್ದರಿಂದ 'ಜಾತಿ'ಗೆ ಪದವು ಪರ್ಯಾಯವಾಚಿ ಎಂಬುದು ಸ್ವತಸ್ಸಿದ್ಧವಾಗಿದೆ....ಬೆದಂಡೆಯಲ್ಲಿರುವುದೆಲ್ಲ ಕಂದವೃತ್ತಗಳೇ ಅಲ್ಲ. ಅದರಲ್ಲಿ ಹಾಡುಗಳೂ ವೃಂದವೃಂದವಾಗಿ ಬರುವುವು."[199]

ಆದರೆ ಕವಿರಾಜಮಾರ್ಗಕಾರನ ಬೆದಂಡೆಯ ಲಕ್ಷಣದಲ್ಲಿ ತಕ್ಕಮಟ್ಟಿಗೆ ಸೂತ್ರ ನಿರ್ದೇಶನವಿರುವಂತೆ ನಾಗವರ್ಮನ ಬೆದಂಡೆಗಬ್ಬದ ಲಕ್ಷಣದಲ್ಲಿ ಇದೆಯೆಂದು ಹೇಳಲಾಗದು. ಪದ, ಮೆಲ್ವಾಡು, ಪಾಡು ಇಲ್ಲಿಯವರೆಗೆ ಸ್ಪಷ್ಟವಾದ ನಿರ್ದೇಶನವಿದೆ; ಮುಂದೆ 'ಪಾಡು'ಗಳ ಪ್ರಮಾಣ ಪಾಡುಗಬ್ಬದಲ್ಲಿ ಎಷ್ಟಿರುತ್ತದೆ ಎಂಬುದು ತಿಳಿಯುವುದಿಲ್ಲ. ಅಲ್ಲದೆ "ಮೆಲ್ವಾಡುಂ ರೂಢಿಯ ಬೆದಂಡೆಗಬ್ಬಮುಮಕ್ಕುಂ" ಎಂಬ ಮಾತಿನಲ್ಲಿ ಮೆಲ್ವಾಡು, ಬೆದಂಡೆಗಬ್ಬಗಳ ಸ್ಪಷ್ಟವಾದ ಸಂಬಂಧವೇನು ಎಂಬುದು ತಿಳಿಯುವುದಿಲ್ಲ. ಅಲ್ಲದೆ ನಾಗವರ್ಮನ ನಿರೂಪಣೆಯಲ್ಲಿ ಪದ = ಕಂದ + ಅಱಿಕೆಯ ವೃತ್ತಜಾತಿ ಎಂಬ ವಿವರಣೆಗೆ ಹೆಚ್ಚು ಅವಕಾಶವಿದ್ದು, ಪದದ ಯಾವುದೋ ಪ್ರಮಾಣದಿಂದ ಬೆದಂಡೆಗಬ್ಬವಾಗುತ್ತದೆಂದು ಹೇಳಬಹುದಾದ್ದರಿಂದ, ಪದ = ಜಾತಿ ಎಂಬುದನ್ನು ಸಾಧಿಸುವುದು ಕಷ್ಟವಾಗುತ್ತದೆ. ಆದ್ದರಿಂದ ಪೂರ್ವೋಕ್ತ ವಿದ್ವಾಂಸರ ಅಭಿಪ್ರಾಯಗಳು ವಿಚಾರಣೀಯ.

ಬೆದಂಡೆ ಎಂಬುದು ಪಾಡುಗಬ್ಬ ಎಂಬುದರ ಬಗ್ಗೆ ವಿದ್ವಾಂಸರಲ್ಲಿ ಒಮ್ಮತವಿದ್ದರೂ, ಅದರ ವ್ಯಾಪ್ತಿಯ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. "ಇದು ಅತಿ ದೀರ್ಘವೂ, ಅತಿ ಹ್ರಸ್ವವೂ ಅಲ್ಲದ ಅಡಕವಾದ ಕಾವ್ಯ" ಎಂದೊಬ್ಬರು ಅಭಿಪ್ರಾಯಪಟ್ಟರೆ[200], ಮತ್ತೊಬ್ಬರು "ದೀರ್ಘಕಾವ್ಯ"ವೆಂದೂ[201], ಇನ್ನೊಬ್ಬರು "ಸಂಕ್ಷಿಪ್ತಕಾವ್ಯ"ವೆಂದೂ ಅಭಿಪ್ರಾಯಪಟ್ಟಿರುವುದು[202] ಕುತೂಹಲಕರವಾಗಿದೆ. ಇವುಗಳಲ್ಲಿ ಮೊದಲನೆಯ ಅಭಿಪ್ರಾಯ ಸಹೇತುಕವಾಗಿದೆ.

ಈಚೆಗೆ ಚಂದ್ರರಾಜನ 'ಮದನತಿಲಕ'ದ "ಕೊಬಿಲ ಬೆಡಂಬೆಯ...." (೮–೫೯) ಎಂಬ ಪದ್ಯ ಹಾಗೂ ಶಾಂತಿನಾಥನ 'ಸುಕುಮಾರಚರಿತೆ'ಯ "ಬೀಣೆಯ ಕೊಬಿಲ...."

(೨–೩೪) ಎಂಬ ಪದ್ಯ ಇವನ್ನಾಧರಿಸಿ ಈ ಎರಡು ಅಭಿಪ್ರಾಯಗಳು ಹೊಸದಾಗಿ ವ್ಯಕ್ತ ಪಟ್ಟಿವೆ : (೧) "ಇದು ಚಂಚಲ ಸ್ವಭಾವದ ಅಥವಾ ಲಘುಸ್ವಭಾವದ ಜನರಿಗೆ ಪ್ರಿಯ ವಾಗಿದ್ದಿತು. (ಆ ಕಾಲದವರು ಬೆದಂಡೆಯನ್ನು 'ಅಶ್ಲೀಲ ಸಾಹಿತ್ಯ'ಕ್ಕೆ ಸೇರಿಸಿದ್ದರೆಂದು ಕಾಣುತ್ತದೆ). (೨) ಬೆದಂಡೆಯನ್ನು ಹಾಡುವವರು ಗೌರವಸ್ಥ ಜನರಲ್ಲ. ಅದನ್ನು ಹಾಡುವುದು ಕೇಳುವುದು ಎರಡೂ ಮರ್ಯಾದೆ ತರತಕ್ಕುವಲ್ಲ."[203] ಇದಕ್ಕೆ ಎದುರು ಮಾತಾಗಿ ಬಂದಿರುವ : (೧) "ಇದು ಪಂಡಿತರ ಕಾವ್ಯಗೋಷ್ಠಿಯಿಂದ ವಂಚಿತರಾದ ಜನ ಸಾಮಾನ್ಯರಿಗೆ ಪ್ರಿಯವಾಗಿದ್ದಿತು. (ಆ ಕಾಲದ ಜನರು ಬೆದಂಡೆಯನ್ನು 'ಜನಪ್ರಿಯ ಸಾಹಿತ್ಯ'ಕ್ಕೆ ಸೇರಿಸಿದ್ದರೆಂದು ಕಾಣುತ್ತದೆ) (೨) ಕಲಾವಿದರು ಗೌರವಸ್ಥರಲ್ಲ ಎಂಬ ಅರ್ಥರಹಿತ ಭಾವನೆಯನ್ನು ಎಲ್ಲ ವಾದಕರ ಕೂಡ ಬೆದಂಡೆ ವಾದಕರಿಗೂ ಅನ್ವಯಿಸಿ ಹೇಳಿದುದನ್ನು ಬೆದಂಡೆಗಬ್ಬದ ವಸ್ತು, ಕವಿ, ಸಹೃದಯರಿಗೆ ಆರೋಪಿಸುವುದು ತೀರ ಎಳೆದುತಂದ ಅಭಿಪ್ರಾಯ. ಅದಕ್ಕಾಗಿ ಬೆದಂಡೆಯ ವಿಷಯವಾಗಿ ಶ್ರೀಯುತರು ನೀಡಿದ ಅಭಿಪ್ರಾಯ ಗ್ರಾಹ್ಯವಾದುದಲ್ಲ" ಎಂಬುದು ಗಮನಾರ್ಹವಾಗಿದೆ.[204] ಇವುಗಳಲ್ಲಿ ಮೊದಲನೆಯದು ಬೆದಂಡೆಯನ್ನು ಉಲ್ಲೇಖಿಸಿರುವ ಗ್ರಾಂಥಿಕಸಾಕ್ಷ್ಯಗಳ ಮೇಲೆ ಆಧಾರ ಪಟ್ಟು ಹೇಳಿದ್ದಾಗಿದೆ. ಎರಡನೆಯದು ವೈಯಕ್ತಿಕ ಅಭಿಪ್ರಾಯವೆನ್ನುವಂತಿದೆ.

ಕನ್ನಡದಲ್ಲಿ, ಕವಿರಾಜಮಾರ್ಗಕಾರನು ಹೇಳುವ ಪದ್ಯಕವಿಗಳಲ್ಲಿ, ಬೆದಂಡೆಗಬ್ಬವನ್ನು ಬರೆದವರು ಇದ್ದರೇ ಹೇಗೆಂದು ಈಗ ನಾವು ನಿಶ್ಚಯವಾಗಿ ಹೇಳುವ ಸ್ಥಿತಿಯಲ್ಲಿಲ್ಲ. ಮೆಲ್ವಾಡು ಬೆದಂಡೆಗಬ್ಬಗಳ ಅಭಿನ್ನತೆಯನ್ನು ಹೇಳುವ ಆರ್. ನರಸಿಂಹಾಚಾರ್ಯರು ಜನ್ನನ 'ಯಶೋಧರ ಚರಿತೆ'ಯೊಂದು ಮಾತ್ರ (೧೨೦೯) ಅಂಥ ಕಾವ್ಯವೆಂದು ತೋರು ತ್ತದೆ ಎಂಬುದಾಗಿ ಅಭಿಪ್ರಾಯಪಟ್ಟಿದ್ದಾರೆ. ಆದರೆ ಡಿ. ಎಲ್. ನರಸಿಂಹಾಚಾರ್ ಅವರು ಭಾವಿಸುವಂತೆ 'ಕವಿರಾಜಮಾರ್ಗ'ದ ಬೆದಂಡೆಗಬ್ಬ ಅಥವಾ ನಾಗವರ್ಮನ 'ಮೆಲ್ವಾಡು' ಇವುಗಳ ಲಕ್ಷಣಕ್ಕೆ ನಿಷ್ಕೃಷ್ಟವಾಗಿ ಅದು ಒಪ್ಪುವುದಿಲ್ಲ ಎಂದೇ ಹೇಳಬೇಕು.

ಬೆದಂಡೆಯ ನಿಷ್ಪತ್ತಿಯ ಬಗ್ಗೆಯೂ ಭಿನ್ನಾಭಿಪ್ರಾಯಗಳು ವ್ಯಕ್ತವಾಗಿರುವುದು ವಿಚಾರಾರ್ಹವಾಗಿದೆ.

ಕಿಟ್ಟೆಲ್ ನಿಘಂಟಿನಲ್ಲಿ 'ಬೆದಂಡೆ' ಎಂಬುದು ವೈದಂಡಿಕದ ತದ್ಭವ ಎಂದು ತೋರಿಸಿ, ಅದಕ್ಕೆ Criticism, Critical skill, Exactness ಎಂದು ಅರ್ಥ ಹೇಳಿದೆ. ಕಿಟ್ಟೆಲ್ 'ಬೆದಂಡೆಗಬ್ಬ'ವನ್ನು Skilful song, poetry ಎಂದು ಹೆಸರಿಸುತ್ತಾರೆ.[205] ಆದರೆ ಅವರೇ ವೈದಂಡಿಕ ಅಥವಾ ವೈತಂಡಿಕ ಎಂಬುದು "ವಿತಂಡ"ದಿಂದ ನಿಷ್ಪನ್ನವಾಗಿದೆ ಎಂದು ಹೇಳಿ, 'ವೈತಂಡಿಕ' ಎಂಬುದಕ್ಕೆ 'a disputatious or captious person' ಎಂದು ಕೊಡುತ್ತಾರೆ.[206] ಇದು ವಿತಂಡವಾದ ಮಾಡತಕ್ಕವನು ಎಂದಾಗುತ್ತದೆ. ಇದರಿಂದ ವಿತಂಡ>ವೈತಂಡಿಕ, ವೈದಂಡಿಕ>ಬೆದಂಡೆ>ಬೆದಂಡೆಗಬ್ಬ ಎಂಬವು ನಿಷ್ಪನ್ನರೂಪ ಗಳಾಗುತ್ತವೆ.

ತೀ. ನಂ. ಶ್ರೀಕಂಠಯ್ಯನವರು ಈ ವಾದವನ್ನು ಒಪ್ಪದೆ ಕನ್ನಡದಲ್ಲಿ 'ದಂಡಿಗೆ'

ಎಂಬುದಕ್ಕೆ ವೀಣೆ, ವೀಣಾದಂಡ ಎಂಬ ನಾನಾ ಅರ್ಥಗಳಿದ್ದು, 'ವಿದಂಡಿಕಾ' ಎಂಬುದು ವಾದ್ಯವಿಶೇಷ ಸೂಚಿಸುವ ಶಬ್ದವಾಗಿದ್ದಿರಬೇಕು, ಈ ವಾದ್ಯದ ಶ್ರುತಿಯೊಡನೆ ಹಾಡ ತಕ್ಕದ್ದು ವೈದಂಡಿಕ, ಇದರ ತದ್ಭವ 'ಬೆದಂಡೆ' ಎನ್ನುತ್ತಾರೆ.[207] ಆದ್ದರಿಂದ ಇಲ್ಲಿ ವಿದಂಡಿಕಾ > ವೈದಂಡಿಕ > ಬೆದಂಡೆ ಎಂಬುದು ಅವರ ಅನುಕ್ರಮ.

ಡಿ. ಎಲ್. ನರಸಿಂಹಾಚಾರ್ಯರು, ಜನ್ನನ 'ಯಶೋಧರ ಚರಿತೆ'ಯ ರಚನೆಯನ್ನು ವಾದಿರಾಜನ ಯಶೋಧರಚರಿತೆಯ ರಚನೆಯೊಡನೆ ತುಲನೆಮಾಡಿ ನೋಡುವಾಗ, ಸಂಸ್ಕೃತಜ್ಞರು ಕನ್ನಡದ 'ಬೆದಂಡೆ' ಎಂಬ ಪದವನ್ನೇ ತೆಗೆದುಕೊಂಡು 'ವೈದಂಡಿಕಾ' ಎಂದು ಹೇಳಿರುವ ಸಾಧ್ಯತೆಯಿದೆಯೆಂಬುದನ್ನು ಧ್ವನಿಸುತ್ತ, "ಬೆದಂಡೆಗಬ್ಬ ಶುದ್ಧವಾದ ಕನ್ನಡ ಸಂಸ್ಕೃತಿಯಿಂದ ಹುಟ್ಟಿರಬೇಕೆಂದು ಹೇಳಬೇಕಾಗುತ್ತದೆ" ಎಂದು ತಮ್ಮ ಅನುಮಾನವನ್ನು ನುಡಿಸಿದ್ದಾರೆ.[208]

ಮುಳಿಯ ತಿಮ್ಮಪ್ಪಯ್ಯನವರು, "ತಂತಿಗಳನ್ನು ಪೋಣಿಸಲು ಆಶ್ರಯವಾದ ವೀಣಾ ದಂಡಕ್ಕೆ 'ದಂಡ-ದಂಡಿಕಾ-ದಂಡಿಗೆ' ಎಂಬ ಹೆಸರಿದೆ. ಈ ಸಂಬಂಧದಿಂದ ವೀಣೆಗೆ ಆ ಹೆಸರು ಒದಗಿದುದನ್ನು ಕಿಟ್ಟೆಲ್ ನಿಘಂಟುವೇ ಮೊದಲಾದವುಗಳಿಂದ ನಿರ್ಧರಿಸಬಹುದು. 'ವಿದಂಡ' (ವಿಗತ + ದಂಡ) ಪದಕ್ಕೆ 'ವೀಣಾರಹಿತ' ಎಂಬರ್ಥವಾಗುವುದರಿಂದ 'ವೈದಂಡಿಕಂ' ಎಂಬುದಕ್ಕೆ ಹಿಮ್ಮೇಳವಾಗಿ ವೀಣಾವಾದನಕ್ಕೆ ಆಸ್ಪದವಾಗದ ದೇಸಿಯಾದ ಒಂದು ಬಾಜನೆಗಬ್ಬ ಎಂಬ ತಾತ್ಪರ್ಯಾರ್ಥವು ಸಾರ್ಥಕವಾಗಿದ್ದು ಲೋಕ ರೂಢಿಯಿಂದ ನೆಲೆಗೊಳ್ಳುವುದು ಅಸಂಗತವಲ್ಲ....'ವೈದಂಡಿಕಂ' ಅಥವಾ 'ಬೆದಂಡೆಗಬ್ಬಂ' ಎಂದರೆ ಮೇಲೆ ಸೂಚಿತವಾದ ಬಾಜನೆಗಬ್ಬದ ಭೇದವೆಂಬುದು ಸಾರ್ಥಕವಾಗಿಯೂ ಒಪ್ಪುತ್ತದೆ" ಎಂದರೆ[209], ಸಂಗೀತಶಾಸ್ತ್ರದ ದೃಷ್ಟಿಯಿಂದ ಕುಕ್ಕಿಲ ಕೃಷ್ಣಭಟ್ಟರು ಹೀಗೆ ಹೇಳುತ್ತಾರೆ. "ಹಿಂದಿನ ದೇಶೀಗಾನ ಸಂಪ್ರದಾಯದಲ್ಲಿ ವಿಶಿಷ್ಟವಾದ ಒಂದೊಂದು ಗೇಯ ಭಾಗಕ್ಕೂ 'ದಂಡೀ' ಎಂಬ ಹೆಸರೂ ರೂಢಿಯಲ್ಲಿದ್ದಂತೆ ತಿಳಿಯುವುದು. ಆ ಪ್ರಕಾರ ಠಾಯೆ, ಆಲಾಪ, ಗೀತ, ಪ್ರಬಂಧ ಇವು ನಾಲ್ಕು ಒಂದೊಂದು ದಂಡಿಗಳು. ಈ ನಾಲ್ಕು ದಂಡಿಗಳನ್ನು ಕ್ರಮದಂತೆ ವಿಸ್ತರಿಸುವ ಸಂಪೂರ್ಣಗಾನಕ್ಕೆ 'ಚತುರ್ದಂಡೀ' ಸಂಪ್ರದಾಯವೆಂದು ಹೆಸರು....ಗಾನದಲ್ಲಿ ಪ್ರಬಂಧಗಳನ್ನು ಹಾಡುವ ಕ್ರಮವೆಂಬುದು ವಿಶೇಷವಾದ ಒಂದು ದಂಡಿಯಾಗಿತ್ತು. ಈ ದಂಡೀ ವಿಷಯಕವಾದ ವಸ್ತುವೇ ಎಂದರೆ ಪ್ರಬಂಧವೇ ವಿದಂಡಿಕ. 'ವಿ' ಎಂಬ ಉಪಸರ್ಗವು ಇಲ್ಲಿ ವಿಶೇಷಾರ್ಥ ಸೂಚಕವಾಗಿ ಸೇರಿದ್ದೆಂದೆಣಿಸಬೇಕು. ಈ ವಿದಂಡಿಕವೇ ತದ್ಧಿತ ವೃತ್ತಿಯಲ್ಲಿ ಕಾವ್ಯಕ್ಕೆ ವಿಶೇಷಣವಾಗಿ 'ವೈದಂಡಿಕಂ' ಎಂದು ನಪುಂಸಕಲಿಂಗದ ಸ್ವರೂಪವನ್ನು ಪಡೆದಿದೆ ಎಂದು ನ್ಯಾಯವಾಗಿ ಅನುಮಾನಿಸಬಹುದು. ಆದುದರಿಂದ 'ವೈದಂಡಿಕಂ' ಪದದ ತದ್ಭವ ರೂಪವಾದ 'ಬೆದಂಡೆ' ಎಂಬ ಹೆಸರು."[210]

ಇವುಗಳನ್ನು ಸಂಕ್ಷಿಪ್ತವಾಗಿ ಸಮಾಲೋಚಿಸುವಲ್ಲಿ ಕಿಟ್ಟೆಲ್ ಅವರ ವೈದಂಡಿಕಂ= ವಿತಂಡವಾದ ಮಾಡತಕ್ಕವನು ಎಂಬುದಕ್ಕೂ ಬೆದಂಡೆಗೂ ಇರುವ ಸಂಬಂಧ ಕಲ್ಪನೆಯು

ಸರಿಯಲ್ಲ. ಮುಳಿಯ ತಿಮ್ಮಪ್ಪಯ್ಯನವರ ವಿದಂಡ = ವಿಗತ+ದಂಡ ಎಂದರೆ ವೀಣಾ ರಹಿತವಾದ, ಅಂದರೆ ಹಿಮ್ಮೇಳದಲ್ಲಿ ವೀಣಾವಾದನವಿಲ್ಲದ ಒಂದು ಹಾಡುಗಬ್ಬ ಎನ್ನು ವುದು ಕೂಡ ತೃಪ್ತಿಕರವಲ್ಲ. ಕುಕ್ಕಿಲ ಕೃಷ್ಣಭಟ್ಟರ ನಿಷ್ಪತ್ತಿಯಲ್ಲಿ ಸಂಗೀತದ ಒಂದು ಶಿಷ್ಟಕೃತಿಯಾಗಿ ಸಾಹಿತ್ಯರೂಪವನ್ನು ಪರಿಗಣಿಸಬಹುದೇ ಎಂಬ ಪ್ರಶ್ನೆಗೆ ಅವಕಾಶ ವುಂಟು. ತೀ. ನಂ. ಶ್ರೀಕಂಠಯ್ಯನವರ ನಿಷ್ಪತ್ತಿಕ್ರಮವೇ ಬಹುತೇಕ ಎಲ್ಲರಿಂದಲೂ ಒಪ್ಪಿತವಾಗಿದೆ. 'ಬೆದಂಡೆ' ಎಂಬುದು ಕಾವ್ಯಪ್ರಕಾರದ ಹೆಸರಾಗಿ ಕಾಣಬರುವಂತೆ ವಾದ್ಯದ ಹೆಸರಾಗಿರುವಂತೆಯೂ ಉಲ್ಲೇಖಗಳು ಗೋಚರವಾಗಿವೆ. ಶಾಂತಿನಾಥನ 'ಸುಕುಮಾರಚರಿತೆ'ಯಲ್ಲಿನ 'ಬೀಣೆಯ ಕೊಬಿಲ ಬೆದಂಡೆಯಗಾಣರ ಬಬಿವಿಡಿದು....' ಎಂಬ ಪದ್ಯದ ಪ್ರಕಾರ ಬೆದಂಡೆ ಎಂಬುದು ಮೂಲತಃ ಒಂದು ವಾದ್ಯವಿಶೇಷ. "ಇದರ ಜೊತೆ ಹಾಡುವ ಹಾಡು ಎಂದು ಬೆದಂಡೆಗಬ್ಬದ ಉಗಮವನ್ನು ಊಹಿಸಬಹುದು.... ಶಬ್ದಮಣಿದರ್ಪಣ ಮತ್ತು ಕರ್ಣಾಟಕ ನಿಘಂಟುಗಳು 'ಬೆದಂಡೆಯೆಂದು ವೈದಂಡಿಕಂ' 'ಬೆದಂಡೆ ವೈದಂಡಿಕ ನಾಮಧೇಯದೊಳೆ' ಎಂದು ವಾದ್ಯಕ್ಕೂ ಅರ್ಥಬರುವಂತೆ ಹೇಳಿ ದಾಟವೆ....ಇಷ್ಟು ಅನ್ಯೋನ್ಯವಾಗಿರುವ ಬೆದಂಡೆವಾದ್ಯ-ಬೆದಂಡೆಗಬ್ಬಗಳ ಸಂಬಂಧ ಇಂಗ್ಲೀಷಿನ Lyre-Lyricಗಳ ಸಂಬಂಧವನ್ನು ನೆನಪಿಗೆ ತರುತ್ತವೆ."[211] ಆದ್ದರಿಂದ ಅವರ ನಿಷ್ಪನ್ನಕ್ರಮವೇ ಸರಿಯೆನ್ನಬಹುದು.

ಪಗರಣ : ಕವಿರಾಜಮಾರ್ಗಕಾರನು ಭಾಮಹನ ಹೆಜ್ಜೆಗುರುತುಗಳನ್ನನುಸರಿಸಿ ಶ್ರುತಿ ದುಷ್ಟ, ಅರ್ಥದುಷ್ಟ, ಶ್ರುತಿಕಷ್ಟ, ಕಲ್ಪನೋಕ್ತಿ ಕಷ್ಟ ಎಂಬ ನಾಲ್ಕು ರೀತಿಯ ಕೃತಿ ದೋಷಗಳನ್ನು ವಿವರಿಸುತ್ತಾನೆ. ಮುಂದುವರಿದು

ಮಿಗೆ ದುಷ್ಕರಕಾವ್ಯಂಗಳೊ
ಳಗರ್ಹಿತ ಪ್ರಾಯಮುಕ್ಕುಮಾ ಶ್ರುತಿಕಷ್ಟಂ
ಪಗರಣದೊಳುಳಿದ ಮೂಱುಂ
ನಗಿಸುಗುಮುಪ್ಪುದಱಿನಲ್ಲಿಗಂತವದೋಷಂ ॥ (೧-೬೮)

ಎಂದು ಹೇಳುತ್ತಾನೆ. ಎಂದರೆ ದುಷ್ಕರಕಾವ್ಯಗಳಲ್ಲಿ ಶ್ರುತಿಕಷ್ಟದೋಷ ದೋಷವೆನಿಸು ವುದಿಲ್ಲ; ಉಳಿದ ಕಾವ್ಯಗಳಲ್ಲಿ ಪ್ರಮುಖ ದೋಷವೆನಿಸುವ ಇವು ಇಲ್ಲಿ ಹಾಸ್ಯೋತ್ಪನ್ನ ಗಳಾಗಿ ನಿಲ್ಲುವುದರಿಂದ ಅದೋಷವೆನಿಸಿಕೊಳ್ಳುತ್ತವೆ. ಇದರಿಂದ ಇದೊಂದು ಹಾಸ್ಯೋ ತ್ಪನ್ನ ಸಾಹಿತ್ಯ ಪ್ರಕಾರವಿರಬಹುದೆಂಬ ಊಹೆ ಮನಸ್ಸಿಗೆ ಬಂದರೂ ಇಡಿಯಾಗಿ, ಇದರ ಸ್ವರೂಪವನ್ನೇನೂ ಕಟ್ಟಿಕೊಳ್ಳಲಾಗುವುದಿಲ್ಲ.

'ಪಗರಣ'ದ ಉಲ್ಲೇಖಗಳು ಕಾವ್ಯಗಳಲ್ಲಿ ವಿಪುಲವಾಗಿ ದೊರೆತಿದ್ದು, ಇದು ಮೂಲತಃ ಒಂದು ದೃಶ್ಯಪ್ರಭೇದ ಎಂಬುದನ್ನು ಎಲ್ಲರೂ ಒಪ್ಪಿದ್ದಾರೆ. 'ವಡ್ಡಾರಾಧನೆ' (ಪು. ೧೧೮), 'ಆದಿಪುರಾಣ' (೧೩-೯೮), 'ಧರ್ಮಾಮೃತ' (೧೦-೬೭)ಗಳಲ್ಲಿ ಬಂದಿರುವ ಉಲ್ಲೇಖ ಗಳಿಂದ ಇದು ಹಾಸ್ಯಪ್ರಧಾನವಾದ, ವೇಷಗಳಿಂದ ಕೂಡಿದ ಒಂದು ದೇಶೀಯ ದೃಶ್ಯಭೇದ ಎಂಬುದು ತಿಳಿಯುತ್ತದೆ. ಆದರೆ ಇಂದು 'ಪಗರಣ' (ಹೆಗರಣ) ಎಂಬುದು ಜಗಳ,

ಗಲಾಟೆ ಎಂಬರ್ಥ ಪಡೆದು ನಿಂತಿರುವುದು ಕಾಣುತ್ತದೆ. ಮೂಲತಃ ದೃಶ್ಯಕಾವ್ಯ ಪ್ರಭೇದವಾಗಿದ್ದ, ಇದರ ಅರ್ಥ ಕಾಲಾನುಕ್ರಮದಲ್ಲಿ ಪರಿವರ್ತಿತವಾಗುತ್ತ ಬಂದುದನ್ನು ಒಂದು ಲೇಖನದಲ್ಲಿ ಎಂ. ಚಿದಾನಂದಮೂರ್ತಿಗಳು ಸ್ಥೂಲವಾದ ಕಾಲಮಿತಿ ಕೊಟ್ಟು ಈ ರೀತಿ ಗುರುತಿಸಿದ್ದಾರೆ:

| | | |
|---|---|---|
| ಆದಿಯಿಂದ (?) ಕ್ರಿ.ಶ. ಸು. ೧೦೦೦ದ ವರೆಗೆ | ಪಗರಣ — | ಲಘುನಾಟಕ, ವೇಷ, ಜನಪದ ನಾಟಕ |
| ಕ್ರಿ.ಶ. ಸು. ೧೦೦೦ದಿಂದ ಕ್ರಿ.ಶ. ಸು. ೧೬೦೦ರ ವರೆಗೆ | ಪಗರಣ (ಹಗರಣ) — | ೧. ಲಘುನಾಟಕ, ವೇಷ, ಜನಪದ ನಾಟಕ<br>೨. ತೋರಿಕೆ, ಆಡಂಬರ, ವ್ಯರ್ಥ ಪ್ರದರ್ಶನ, ಹಾಸ್ಯಾಸ್ಪದ |
| ಕ್ರಿ.ಶ. ಸು. ೧೬೦೦ರಿಂದ ಆಧುನಿಕ ಕಾಲದವರೆಗೆ | ಹಗರಣ — | ೧. ತೋರಿಕೆ, ಆಡಂಬರ, ವ್ಯರ್ಥ ಪ್ರದರ್ಶನ, ಹಾಸ್ಯಾಸ್ಪದ<br>೨. ಜಗಳ, ಗಲಾಟೆ; ಆದರಲ್ಲೂ ಹಾಸ್ಯಾಸ್ಪದವಾದ ಜಗಳ, ಗಲಾಟೆ; |
| ಈಗ | ಹಗರಣ — | ಜಗಳ, ಗಲಾಟೆ, ಅದರಲ್ಲೂ ಹಾಸ್ಯಾಸ್ಪದವಾದ ಜಗಳ, ಗಲಾಟೆ.[212] |

ಈ ರೀತಿ ಅದು ತನ್ನ ಅರ್ಥದ್ರವ್ಯವನ್ನು ಒಂದೆಡೆ ಬದಲಿಸಿಕೊಳ್ಳುತ್ತ ಬಂದರೂ ಮೂಲ ದೃಶ್ಯ ಲಕ್ಷಣವನ್ನು ಇಂದಿಗೂ ಹಾಲಕ್ಕಿ ಒಕ್ಕಲಿಗರಲ್ಲಿ ಚಕಿತಗೊಳಿಸುವಷ್ಟು ನೈಜವಾಗಿ ಉಳಿಸಿಕೊಂಡು ಬಂದಿದೆ ಎಂಬುದನ್ನು ಅವರು ಶೋಧಿಸಿದ್ದಾರೆ.

'ಪಗರಣ' ಎಂಬುದು ಸಂಸ್ಕೃತ ಸಾಹಿತ್ಯದ ದಶರೂಪಕಗಳಲ್ಲಿ ಒಂದಾದ 'ಪ್ರಕರಣ' ಎಂಬುದರ ತದ್ಭವವೆಂದು ಹೇಳಬಹುದು. ಸಂಸ್ಕೃತದ 'ಪ್ರಕರಣ'ದ ಲಕ್ಷಣವನ್ನು ಹೀಗೆ ನಿರೂಪಿಸಿದೆ: "ಇದರ ವಸ್ತು ಲೌಕಿಕ ಮತ್ತು ಕವಿಕಲ್ಪಿತ; ಪ್ರಧಾನರಸ ಶೃಂಗಾರ; ನಾಯಕನು ಬ್ರಾಹ್ಮಣ, ಮಂತ್ರಿ ಅಥವಾ ವರ್ತಕ; ಅವನು ಧೀರ ಪ್ರಶಾಂತ; ಧರ್ಮ ಕಾಮಾರ್ಥಪರ; ಅವನ ಆಸ್ತಿ ನಶಿಸಿಹೋಗುತ್ತದೆ; ನಾಯಿಕೆ ಸತ್ಕುಲಪ್ರಸೂತೆ ಅಥವಾ ವೇಶ್ಯೆ; ಕೆಲವು ವೇಳೆ ಇಬ್ಬರೂ ಇರುವುದುಂಟು; ಈ ಬಗೆಯದರಲ್ಲಿ ವಿಟ, ಚೇಟ, ಜೂಜುಗಾರ, ಮೋಸಗಾರ ಮುಂತಾದವರು ಬರುತ್ತಾರೆ. ಮಿಕ್ಕ ಅಂಶಗಳು ನಾಟಕದಲ್ಲಿ ಇರುವಂತೆಯೇ. ಉದಾ: ಮೃಚ್ಛಕಟಿಕ, ಮಾಲತೀ ಮಾಧವ, ಪುಷ್ಪಭೂಷಿತ."[213] ಸಂಸ್ಕೃತದ ಈ 'ಪ್ರಕರಣ' ಕನ್ನಡದ 'ಪಗರಣ'ವೆನಿಸಿದರೂ, ಮೃಚ್ಛಕಟಿಕವನ್ನು ಗಮನಿಸಿದರೆ, ಶಕಾರ ಹಾಸ್ಯದ ಧೂಪಧೂಮಗಳನ್ನೇ ದಟ್ಟವಾಗಿ ಆವರ್ತಿಸುತಲಿದ್ದರೂ, ಅದು ಹಾಸ್ಯಪ್ರಧಾನ ನಾಟಕವಲ್ಲವೆನಿಸುತ್ತದೆ. ಆದ್ದರಿಂದಲೇ ಎಂ. ವಿ. ಸೀತಾರಾಮಯ್ಯನವರು "ನಾಟ್ಯಶಾಸ್ತ್ರದ ಪ್ರಕಾರ 'ಪ್ರಕರಣ'ದಲ್ಲಿ ಹಾಸ್ಯ ಪ್ರಧಾನರಸವಲ್ಲ, ಅದು

ಶೃಂಗಾರ ವೀರಗಳಿಗೆ ಪೋಷಕವಾಗಿ ಬರಬಹುದು. 'ಮೃಚ್ಛಕಟಿಕ'ದಲ್ಲಿ ಶಕಾರ ಹಾಸ್ಯ ಪಾತ್ರ. ಸಂಸ್ಕೃತ 'ಪ್ರಕರಣ'ವು ಹಾಸ್ಯಪ್ರಧಾನವಾದ 'ಪಗರಣ'ವಾಗಿ ಪರಿಣಮಿಸಿ ಕನ್ನಡ ನಾಡಿನಲ್ಲಿ ಬಳಕೆಗೆ ಬಂದಿದ್ದಿತೇ ಎಂಬುದು ವಿಚಾರಣೀಯ ಅಂಶ" ಎಂದು ಸಂದೇಹಿಸಿದ್ದಾರೆ.[214]

ಈ ಕೆಳಗಿನ ಅಭಿಪ್ರಾಯ ಬಹುಶಃ ಇದಕ್ಕೆ ಸಮಾಧಾನವಾಗಿದೆ: ಕರ್ಣಾಟಕದ ಪಗರಣವು "ನೂರಕ್ಕೆ ನೂರರಷ್ಟು ಸಂಸ್ಕೃತದ ಪ್ರಕರಣವೇ ಆಗದಿದ್ದರೂ, ಎರಡಕ್ಕೂ ಸ್ವಲ್ಪವಾದರೂ ಸಾಮ್ಯವಿದೆಯೆಂಬುದರಲ್ಲಿ ಅನುಮಾನವಿಲ್ಲ. ಪ್ರಕರಣದ ವಸ್ತು ಜನ ಸಾಮಾನ್ಯಕ್ಕೆ ಸಂಬಂಧಿಸಿದ್ದು; ನಾಯಕ ಅನುದಾತ್ತನಾಗಿರಬಹುದು; ಶೃಂಗಾರ, ವೀರ ಹಾಸ್ಯಗಳಿಗೆ ಅಲ್ಲಿ ಪ್ರಾಧಾನ್ಯ ಉಂಟು. ಪಗರಣವು ಜನಸಾಮಾನ್ಯರು ಕೇವಲ ಮನರಂಜನೆಗಾಗಿ ಹಾಕುತ್ತಿದ್ದ ವೇಷವಾಗಿದ್ದಿತು. ಹಾಸ್ಯ, ಒರಟು ಶೃಂಗಾರಗಳಿಗೆ ಇಲ್ಲಿಯೂ ಪ್ರಾಧಾನ್ಯವಿದ್ದಿತು. 'ಪ್ರಕರಣ'ವು ನಾಟಕವಾದರೆ, ಪಗರಣವು ವೇಷಗಳ ಸರಣಿ; ಮತ್ತು ಪ್ರಾಚೀನ ನಾಟಕದ ಲಕ್ಷಣಗಳನ್ನು ಗರ್ಭೀಕರಿಸಿಕೊಂಡಿರುವ ಒಂದು ಕಲಾಪ್ರಕಾರ."[215]

ಪಗರಣದ ವೇಷಗಳನ್ನು ಬಾದುಬ್ಬೆಯ ಪರ್ವ ಹಾಗೂ ಕಾರಹುಣ್ಣಿಮೆಯ ಹಬ್ಬದ ದಿನಗಳಲ್ಲಿ ಧರಿಸುತ್ತಿದ್ದು, ಇದರಲ್ಲಿ ಆಟಪಾಟಗಳು ವಿನೋದನೃತ್ಯ ಅಥವಾ ಸ್ವಚ್ಛಂದ ಕುಣಿತ ಪ್ರಧಾನವಾಗಿದ್ದಿತು; ಹಗರಣದ ವೇಷಗಳು ಬಹುರೂಪ ವಿಕೃತವಾಗಿದ್ದು ಇದರಲ್ಲಿ ವೇಷದ ಆನೆಗಳು, ಹಾವಿನ ಬೊಂಬೆಗಳು ಕೂಡ ಇರುತ್ತಿದ್ದುವು; ಹಗರಣದ ವಾದ್ಯಗಳಾದರೂ ಒರಟು. ವಾದ್ಯಗಳಾಗಿದ್ದ ಸುಸಂಸ್ಕೃತರ ದೃಷ್ಟಿಯಲ್ಲಿ ಅವು ಕೂಡ ನಗೆಗೀಡಾಗಿದ್ದುವು; ಹಳ್ಳಿಗಳಲ್ಲಿ ಹಗರಣದ ಮನೆಗಳು ಕೂಡ ಇದ್ದುವು ಎಂದು ಕೆಲವು ಹೆಚ್ಚಿನ ವಿವರಗಳು ವ್ಯಕ್ತವಾಗಿವೆ.[216]

ಮುಳಿಯ ತಿಮ್ಮಪ್ಪಯ್ಯನವರು 'ಕವಿರಾಜಮಾರ್ಗ'ದ 'ಪಗರಣ' ಯಕ್ಷಗಾನಕ್ಕೆ ದೇಶೀಯವಾದ ಹೆಸರಾಗಿರುವುದಲ್ಲದೆ, ಅವೇ ದೇಸಿಯಾದ ಯಕ್ಷಗಾನ ಬಯಲಾಟವಾಗಿದ್ದಿರಬಹುದು ಎಂದು ಅಭಿಪ್ರಾಯಪಡುತ್ತ, "ನಾಪ್ಪಿಗರಣಂ (ನಾಡಿನ+ಪ್ರಕರಣ) ಎಂಬ ಪದವು ಹಿಂದಿನ ಕನ್ನಡ ಸಾಹಿತ್ಯದೊಳಗೆ ಅಲ್ಲಲ್ಲಿ ದೊರಕುತ್ತದೆ....'ನಾಡಿನ ಫಗರಣ' ಅಲ್ಲವೆ 'ನಾಪ್ಪಿಗರಣ' ಎಂಬುದರಿಂದ ದೇಶದೊಳಗೆ ಆಡಿತೋರಿಸಲು ಅರ್ಹವಾದ ಯಕ್ಷಗಾನ ಪ್ರಬಂಧವೇ ಸೂಚಿತವಾಗುತ್ತಿದೆ ಎನ್ನಬಹುದು. ಅಲ್ಲವಾದರೆ ನಾಡು ಎಂಬ ಪದವನ್ನು ಹಿಂದೆ ಕೂಡಿಸಬೇಕಾಗಿರಲಿಲ್ಲ. ಇದರಿಂದ ನಾಡಿನೊಳಗಿನ ದೃಶ್ಯ ಪ್ರಬಂಧವನ್ನು ಸೂಚಿಸಿದಂತಾಯಿತು....ಅದರೊಳಗಿನ ಹಾಸ್ಯಗಾರನ ನಾಲಗೆಗೆ ನಾಟಕದ ವಿದೂಷಕನದಕ್ಕಿಂತಲೂ ಹೆಚ್ಚಿನ ಸ್ವಾತಂತ್ರ್ಯವಿದೆಯಷ್ಟೆ. ಆದರಿಂದ ದೃಶ್ಯಭಾಗವಾದ ಆಟದಲ್ಲಿಯೂ ಅದಕ್ಕೊಪ್ಪುವ ಕವಿತೆಯಲ್ಲಿಯೂ ಬಲುಮಟ್ಟಿಗೆ ಆ ಶ್ರುತಿಕಷ್ಟಾದಿಗಳು ದೋಷಗಳಲ್ಲ ಎಂದು ಭಾವಿಸತಕ್ಕದ್ದು....ಒಂಬತ್ತನೇ ಶತಮಾನದ ಕವಿರಾಜಮಾರ್ಗಕಾರನಿಗಿಂತಲೂ ಹಿಂದಿನ ಕಾಲದಲ್ಲೆ ಕನ್ನಡ ನಾಡಿನ ನಾಪ್ಪಿಗರಣವು ಅಲ್ಲವೆ ಯಕ್ಷಗಾನ

ಪ್ರಬಂಧವು ಪ್ರಸಿದ್ಧವಾಗಿತ್ತು." ಎಂಬ ನಿಲವಿಗೆ ಬರುತ್ತಾರೆ.[217]

ಆದರೆ ಈಚೆಗೆ ಪಗರಣಕ್ಕೆ ಸಂಬಂಧಿಸಿದಂತೆ ವಿಸ್ತಾರವಾಗಿ ವಿವೇಚನೆ ನಡಸಿರುವ ಎಂ. ಚಿದಾನಂದಮೂರ್ತಿಗಳು ಇದನ್ನು ಒಪ್ಪುವುದಿಲ್ಲ. ಯಕ್ಷಗಾನ ಹಾಗೂ ಪಗರಣ ಎರಡೂ ಸ್ವರೂಪತಃ ಬೇರೆಯದು, ಭಿನ್ನವಿನ್ಯಾಸವುಳ್ಳದ್ದು ಎಂದೇ ಅವರ ಅಭಿಪ್ರಾಯ. ಅವರು ಯಕ್ಷಗಾನದ ಉಗಮ ಹಾಗೂ ಪಗರಣದ ಅವನತಿ ಸರಿಸುಮಾರು ೧೬ನೆಯ ಶತಮಾನದಲ್ಲಿ ಕಾಣಿಸಿಕೊಂಡಿರುವುದು, ಯಕ್ಷಗಾನ ಸಾಕಷ್ಟು ಶಿಕ್ಷಿತವರ್ಗದ ಕಲೆಯಾಗಿರುವ ಅಂಶಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಮೇಲಿನ ಅಭಿಪ್ರಾಯ ತಳೆದಿದ್ದಾರೆ. ಅವರು "ಯಕ್ಷಗಾನವು ಹಗರಣದಿಂದಲೋ ಹಗಣದಂತಹ ಜನಪದ ಕಲೆಯಿಂದಲೋ ಏಕೆ ಮೂಡಿ ಬಂದಿರಬಾರದು, ಎಂಬ ಊಹೆಯನ್ನು ಮಾಡುವ ಮನಸ್ಸಾಗುತ್ತದೆ" ಎಂದು ಮುಂದೆ ಹೇಳಿದರೂ[218] ಯಕ್ಷಗಾನದ ಉಗಮ ಪಗರಣದಿಂದಾಗಿರಬಹುದು ಎಂಬ ಊಹೆಗೆ ಬಂದಂತಾಗುತ್ತದೆಯೇ ಹೊರತು, ಪಗರಣ ಹಾಗೂ ಯಕ್ಷಗಾನಗಳ ಸ್ವರೂಪ ಅಭಿನ್ನ ಎಂಬ ನಿಲವಿಗೆ ಬಂದಂತಾಗುವುದಿಲ್ಲ. ಅಲ್ಲದೆ ಕರ್ನಾಟಕದ ಹಗಲು ವೇಷದವರು (ತೆಲುಗಿನ ಪಗಟಿವೇಷಾಲು), ತೆಲುಗಿನ ವೀಥಿನಾಟಕಮ್ (ತಮಿಳಿನ ತೆರುವಕ್ಕುತ್ತು), ಉತ್ತರ ಕರ್ನಾಟಕದ ದಾಸರಾಟ ಇವುಗಳೊಡನೆ ಹೋಲಿಸಿ ವಿವೇಚಿಸಿ "ಇವುಗಳಲ್ಲಿ ಯಾವುದಾದರೂ ಒಂದನ್ನು ಪಗರಣದ ಜೊತೆ ಸಮೀಕರಿಸಲು ಖಂಡಿತ ಸಾಧ್ಯವಿಲ್ಲ. ಆದರೂ ಈ ಎಲ್ಲ ಜನಪದ ನಾಟಕಗಳಲ್ಲಿರುವ ಕೆಲವು ಸಮಾನ ಅಂಶಗಳು ಪಗರಣದಲ್ಲಿಯೂ ಇವೆ. ಉದಾಹರಣೆಗೆ ಇವುಗಳಲ್ಲೆಲ್ಲ ಶೃಂಗಾರ ಮತ್ತು ಹಾಸ್ಯ ಅತಿಮುಖ್ಯ. ಪಗರಣದಲ್ಲಿ ಸಾಮಾಜಿಕ ವಿಡಂಬನೆ ಮಧ್ಯೆ ಕಾಣಿಸಿಕೊಳ್ಳುತ್ತಿತ್ತು, ಉಳಿದ ನಾಟಕಗಳಂತೆ. ಆದರೆ ಉಳಿದುವು ಬೆಳೆದುನಿಂತ ನಾಟಕಗಳು; ಪಗರಣವು ನಾಟಕಲಕ್ಷಣಗಳನ್ನು ಗರ್ಭೀಕರಿಸಿಕೊಂಡಿರುವ ಒಂದು ಕಲೆ" ಎಂದು ಹೇಳುವುದು ಗಮನಾರ್ಹವಾಗಿದೆ.[219]

ಪಗರಣದ ಸಾಹಿತ್ಯದ ಬಗ್ಗೆ ಟಿ. ವಿ. ವೆಂಕಟಾಚಲಶಾಸ್ತ್ರಿಗಳು ಹೀಗೆ ಅಭಿಪ್ರಾಯಪಟ್ಟಿದ್ದಾರೆ[220]: "ಕಾವ್ಯಮಯ ಸಾಹಿತ್ಯದ ಗಾಂಭೀರ್ಯವನ್ನು ಮೈಗೊಂಡ ದೃಶ್ಯಕಲ್ಪನೆ, ವಸ್ತುವಿನ್ಯಾಸಗಳು ಇವುಗಳಲ್ಲಿದ್ದಿರುವುದು ತೀರ ಅಸಂಭವ. 'ಪಗರಣ'ಗಳೆಂಬ ಈ ನಾಡು ನಾಟಕಗಳು ಲಿಖಿತ ಸಾಹಿತ್ಯವಿಲ್ಲದೆ, ಸಂಗತಾಸಂಗತ ವಿವೇಚನೆಯಿಲ್ಲದ ಸಮಯಸ್ಫೂರ್ತವಾದ ವಚನ ರಚನೆಯಿಂದ ಕೂಡಿದ್ದಿರಬೇಕು."

ಹೀಗೆ ಹಾಸ್ಯದ ಹೊನಲನ್ನು ಶೀಲಾಶ್ಲೀಲಗಳ, ಪರಿವೆಯಿಲ್ಲದೆ ಹರಿಯಿಸುವುದೇ ಪ್ರಧಾನವಾಗಿರಿಸಿಕೊಂಡಿದ್ದ 'ಪಗರಣ' ಉತ್ತರ ಕನ್ನಡ ಜಿಲ್ಲೆಯಲ್ಲಿ ಹಾಲಕ್ಕಿ ಒಕ್ಕಲಿಗರಲ್ಲಿ 'ಹಗಣ' (ಹಗರಣ > ಹಗಣ) ಎಂಬ ಹೆಸರಿನಿಂದ ಇನ್ನೂ ಈ ಕಾಲದಲ್ಲಿ ಉಳಿದುಕೊಂಡು ಬಂದಿರುವುದನ್ನು ಈಚೆಗೆ ಸಂಶೋಧಿಸಲಾಗಿದೆ.[221] ಈ ಹಾಲಕ್ಕಿ ಒಕ್ಕಲಿಗರಲ್ಲಿ ಜಾತ್ರೆ ಹಗಣ, ಸುಗ್ಗಿ ಹಗಣ, ಹಗಣ ಎಂಬ ಮೂರು ಭಿನ್ನ ಪ್ರಭೇದಗಳಿದ್ದು, ಅವು ಭಿನ್ನ ಪರಿಸರದಲ್ಲಿ ನಡೆಯುವಂತಹವಾಗಿವೆ. ಈ ಮೂರರ ಹೆಸರ

ನಲ್ಲಿ ತುಸು ವ್ಯತ್ಯಾಸವಿದ್ದರೂ ಸ್ವರೂಪತಃ ಇವು ಒಂದೇ ಹಾಗೂ ನಮ್ಮ ಪ್ರಾಚೀನ ಪ್ರಕಾರವಾದ ಪಗರಣವನ್ನು ಸ್ಪಷ್ಟವಾಗಿ ಹೋಲುತ್ತದೆ ಎಂಬುಧು ಕೂಡ ವಿಶದೀಕೃತ ವಾಗಿದೆ.[222]

ಒಟ್ಟಿನಲ್ಲಿ ಮೇಲಿನ ಸಮೀಕ್ಷೆಯಿಂದ ಈ ಅವಧಿಯ ಸಾಹಿತ್ಯರೂಪಗಳ ಸಂಬಂಧ ವಾಗಿ ಈ ಕೆಳಕಂಡ ಅಂಶಗಳನ್ನು ಗುರುತಿಸಬಹುದು.

(i) ಹನಿಹನಿಯಾಗಿ ಕಾಣಬರುವ ಖ್ಯಾತ ಕರ್ಣಾಟಕಗಳು ಕನ್ನಡಸಾಹಿತ್ಯದಲ್ಲಿ ಮುಂದೆ ಹೆದ್ದೊರೆಯಾಗಿ ಹರಿಯುವ ಕುರುಹುಗಳನ್ನು ತೋರಿವೆ.

(ii) ಸಾಹಿತ್ಯರೂಪಗಳ ಬಳಕೆಯಲ್ಲಿ ಸಂಸ್ಕೃತದ ಛಂದಸ್ಸು ಹಾಗೂ ಕಾವ್ಯಮಾರ್ಗ ಗಳೊಂದಿಗೆ ಜನಪದ ಸಾಹಿತ್ಯಪ್ರಕಾರಗಳು, ಪ್ರಭಾವಗಳು ಕೂಡ ಕೆಲಸ ಮಾಡಿವೆ.

(iii) ಚತ್ತಾಣ, ಬೆದಂಡೆ, ಗದ್ಯಕಥೆಯಂತಹ ಪ್ರಮುಖ ಕಾವ್ಯಪ್ರಕಾರಗಳ ಸ್ವರೂಪವನ್ನು ಖಚಿತವಾಗಿ ನಿರ್ದೇಶಿಸುವ ಆ ಶೀರ್ಷಿಕೆಯ ಯಾವುದೇ ಕೃತಿಗಳು ದೊರೆಯದಿದ್ದರೂ, ಗದ್ಯಕಥೆ ಗದ್ಯಪದ್ಯಾತ್ಮಕವಾದುದು, ಚತ್ತಾಣ ಬೆದಂಡೆ ಪದ್ಯಾತ್ಮಕ ವಾದುವು ಎಂಬಂಶ ತಿಳಿದುಬಂದಿದೆ.

(iv) ಪದ, ಮೆಲ್ವಾಡು, ಪಾಡು ಈ ರೀತಿಯ ಸಾಹಿತ್ಯರೂಪಗಳೂ ಇದ್ದಿರ ಬಹುದು ; ಆದರೆ ಆ ರೂಪಗಳಲ್ಲಿರುವ ಸಾಹಿತ್ಯ ಕೃತಿಗಳಾವುವೂ ದೊರೆತಿಲ್ಲ.

(v) ನಾಟಕ ಲಕ್ಷಣಗಳನ್ನು ಗರ್ಭೀಕರಿಸಿಕೊಂಡಿರುವ ಜನಪದಮೂಲದ ಪಗರಣ ವೆಂಬ ದೃಶ್ಯವಿಧಾನ ಪ್ರಾಚೀನ ಕಾಲದಿಂದ ದೇಶೀಯ ಸಂಸ್ಕೃತಿಯ ಪ್ರತೀಕವಾಗಿ ಅಭಿನಯಗೊಳ್ಳುತ್ತಿದ್ದಿರಬೇಕು.

(vi) ಮುಂದೆ ಪ್ರಾಮುಖ್ಯ ಪಡೆಯುವ ಚಂಪೂವಿನ ಉಗಮದ ಸುಳುಹುಹೊಳಹು ಗಳು ಈ ಗಡುವಿನಲ್ಲಿ ಕಾಣಬರುತ್ತದೆನ್ನಲು, ಚತ್ತಾಣ, ಗದ್ಯಕಥೆಗಳು ಕೆಲಮಟ್ಟಿಗೆ ಇಂಬುಕೊಟ್ಟಿವೆ.

## ಆರಂಭಕಾಲದ ಕವಿಗಳು

'ಕವಿರಾಜಮಾರ್ಗ'ದ ರಚನೆಗೆ ಹಿಂದೆ ಜೀವಿಸಿದ್ದು ಕೃತಿರಚನೆ ಮಾಡಿದಂತೆ ಅದೇ ಗ್ರಂಥದ ಆಧಾರದಿಂದ ತಿಳಿಯುವ ಕವಿಗಳನ್ನು ಆರಂಭಕಾಲದ ಕವಿಗಳೆಂದು ವ್ಯವಹರಿಸ ಬಹುದು. ಅದರ ಪ್ರಥಮ ಪರಿಚ್ಛೇದದಲ್ಲಿ ಗದ್ಯಲಕ್ಷಣ ಮತ್ತು ಅದಕ್ಕೆ ಮಾದರಿಯಾದ ಒಂದೆರಡು ಸಂಸ್ಕೃತ ಗದ್ಯಕೃತಿಗಳನ್ನು ಹೇಳಿ ಆದಮೇಲೆ, ಕನ್ನಡ ಭಾಷೆಯ ಕೆಲವು ಗದ್ಯ ಕವಿಗಳನ್ನೂ ಪದ್ಯಲಕ್ಷಣ ಮತ್ತು ಕೆಲವು ಸಂಸ್ಕೃತ ಪದ್ಯಕವಿಗಳನ್ನೂ ಹೇಳಿ ಆದ ಮೇಲೆ, ಕನ್ನಡ ಭಾಷೆಯ ಕೆಲವರು ಪದ್ಯಕವಿಗಳನ್ನೂ ಕ್ರಮವಾಗಿ ಹೆಸರಿಸಿರುವುದು ಕಾಣುತ್ತದೆ.

ವಿಮಳೋದಯ ನಾಗಾರ್ಜುನ
ಸಮೇತ ಜಯಬಂಧು ದುರ್ವಿನೀತಾದಿಗಳೀ
ಕ್ರಮದೊಳ್ ನೆಗಟ್ಚಿ ಗದ್ಯಾ
ಶ್ರಮಪದ ಗುರುತಾ ಪ್ರತೀತಿಯಂ ಕೆಯ್ಕೊಂಡರ್ ॥ (೧–೨೯)

—ಎಂದು ಮೊದಲು ಗದ್ಯಕವಿಗಳನ್ನು ಹೆಸರಿಸಿ, ಅನಂತರದಲ್ಲಿ

ಪರಮ ಶ್ರೀ ವಿಜಯ ಕವೀ
ಶ್ವರ ಪಂಡಿತ ಚಂದ್ರಲೋಕಪಾಲಾದಿಗಳಾ
ನಿರತಿಶಯ ವಸ್ತು ವಿಸ್ತರ
ವಿರಚನೆ ಲಕ್ಷ್ಯಂ ತದಾದ್ಯಕಾವ್ಯಕ್ಕೆಂದುಂ ॥ (೧–೩೨)

—ಎಂದು ಪದ್ಯಕವಿಗಳನ್ನು ಹೆಸರಿಸಲಾಗಿದೆ. ಈ ಎರಡು ಪದ್ಯಗಳಲ್ಲಿ ಹೇಳಿರುವ ಕವಿಗಳು ಕನ್ನಡ ಕವಿಗಳೆಂಬುದರಲ್ಲಿ ವಿದ್ವಾಂಸರಲ್ಲಿ ಒಮ್ಮತವಿದೆ. ಆದರೆ ಇಲ್ಲಿ ಹೇಳಿರುವ ಕವಿಗಳು ಯಾರು ಯಾರು ಮತ್ತು ಅವರು ಎಷ್ಟು ಜನ ಎನ್ನುವ ವಿಷಯದಲ್ಲಿ ಅವರ ನಡುವೆ ಭಿನ್ನಾಭಿಪ್ರಾಯಗಳಿವೆ.

ಬಿ. ಎಲ್. ರೈಸರ ಪ್ರಕಾರ,[223] ವಿಮಲ, ಉದಯ, ನಾಗಾರ್ಜುನ, ಜಯಬಂಧು ಮತ್ತು ದುರ್ವಿನೀತ ಇವರು ಗದ್ಯಕವಿಗಳು; ಶ್ರೀವಿಜಯ, ಕವೀಶ್ವರ, ಪಂಡಿತಚಂದ್ರ ಮತ್ತು ಲೋಕಪಾಲ ಇವರು ಪದ್ಯಕವಿಗಳು.

ಜೆ. ಎಫ್. ಫ್ಲೀಟರು,[224] ವಿಮಲ, ಉದಯ (ಅಥವಾ ವಿಮಲೋದಯ ಇರಬಹುದು), ಪರಮ ಶ್ರೀವಿಜಯ (ಅಥವಾ ಶ್ರೀವಿಜಯಕವೀಶ್ವರ ಇರಬಹುದು) ಎಂದು ತಿಳಿಸಿದ್ದಾರೆ, ಕವಿಯ ಹೆಸರನ್ನು 'ವಿಮಲೋದಯ' ಎಂದು ಫ್ಲೀಟರು ಸಸಂಶಯವಾಗಿ ಸೂಚಿಸಿದ್ದರೆ, ಕೆ. ಬಿ. ಪಾಠಕ್[225] ಸ್ಪಷ್ಟವಾಗಿ ವಿಮಲೋದಯ ಎಂದೇ ಬಿಡಿಸಿದ್ದಾರೆ. ಅಲ್ಲದೆ ಇವರು ಪಂಡಿತಚಂದ್ರ, ಒಂದೇ ಹೆಸರಾಗಿ ತೆಗೆದುಕೊಂಡಿದ್ದಾರೆ.

ಆರ್. ನರಸಿಂಹಾಚಾರ್ಯರು ತಮ್ಮ 'ಕರ್ಣಾಟಕ ಕವಿಚರಿತೆ'ಯಲ್ಲಿ[226] ರೈಸರು ವಿಂಗಡಿಸಿರುವ ಹಾಗೆಯೇ ಗ್ರಂಥಕರ್ತೃಗಳ ಹೆಸರುಗಳನ್ನು ವಿಂಗಡಿಸಿಕೊಟ್ಟಿದ್ದಾರೆ. ಗೋವಿಂದ ಪೈ ಅವರು[227]—ವಿಮಲೋದಯ, ನಾಗಾರ್ಜುನ, ಜಯಬಂಧು ಮತ್ತು ದುರ್ವಿನೀತ ಎಂಬ ಆಗ್ಗೆ ಶ್ರೇಷ್ಠರೆನಿಸಿದ್ದ ನಾಲ್ವರಾದರೂ ಗದ್ಯಕವಿಗಳೂ ಶ್ರೀವಿಜಯ, ಕವೀಶ್ವರ, ಪಂಡಿತಚಂದ್ರ, ಲೋಕಪಾಲ ಎಂದು ನಾಲ್ವರಾದರೂ ಪದ್ಯಕವಿಗಳು ಆಗಿ ಹೋಗಿದ್ದಾರೆ ಎಂಬುದಾಗಿ ಗ್ರಹಿಸುತ್ತಾರೆ. ವಿಮಲೋದಯ, ಶ್ರೀವಿಜಯಕವೀಶ್ವರ ಇವು ಇಡಿಯ ಹೆಸರುಗಳೆಂದೂ ಪಂಡಿತ ಎಂಬುದು ಬಿರುದೆಂದೂ ರಂ. ಶ್ರೀ. ಮುಗಳಿಯವರ ಗ್ರಹಿಕೆ.[228] ವಿಮಲೋದಯ ಒಬ್ಬ ಕವಿಯೇ ಆಗಿರಬೇಕೆಂದು ಅನುಮಾನಿಸಲು ಅವಕಾಶ ವಿದೆ—ಎನ್ನುತ್ತಾರೆ ಎಂ. ವಿ. ಸೀತಾರಾಮಯ್ಯನವರು.[229] ಹೀಗೆ ಈ ಕವಿಗಳ ಹೆಸರನ್ನು ಎಲ್ಲಿಗೆಲ್ಲಿಗೆ ಬಿಡಿಸಬೇಕೆಂಬ ವಿಷಯದಲ್ಲಿ ಭಿನ್ನಾಭಿಪ್ರಾಯಕ್ಕೆ ಆಸ್ಪದವಿರುವುದರಿಂದ ಕವಿಗಳ ಸಂಖ್ಯೆಯೂ ಅನಿರ್ದಿಷ್ಟವಾಗಿದೆ. ವಿಮಲೋದಯ, ಶ್ರೀವಿಜಯಕವೀಶ್ವರ

ಮತ್ತು ಪಂಡಿತಚಂದ್ರ ಎಂಬುವು ಕವಿನಾಮಧೇಯಗಳು, ಉದಯ, ಕವೀಶ್ವರ ಮತ್ತು ಪಂಡಿತ ಈ ಹೆಸರುಗಳಿಗೆ ಪ್ರತ್ಯೇಕ ಅಸ್ತಿತ್ವವಿಲ್ಲ—ಎನ್ನುವುದೇ ಬಹುಮಟ್ಟಿಗೆ ಹಲವರ ಅಭಿಪ್ರಾಯ. ಈ ಕವಿಗಳ ಇತಿವೃತ್ತವಿಚಾರದಲ್ಲೂ ಕೃತಿಗಳ ವಿಚಾರದಲ್ಲೂ ನಿರ್ದಿಷ್ಟವಾಗಿ ಯಾವ ವಿಷಯವೂ ತಿಳಿಯದ್ದು ಕೂಡ ಈ ಹೆಸರುಗಳ ಮತ್ತು ಅವರ ಸಂಖ್ಯೆಯ ಸಮಸ್ಯೆಗೆ ಒಂದು ಕಾರಣವಾಗಿ ಪರಿಣಮಿಸಿದೆ.

ಈಗ ಈ ಗದ್ಯಪದ್ಯಕವಿಗಳ ವೈಯಕ್ತಿಕ ಸಂಗತಿಗಳ ವಿಷಯದಲ್ಲಿ ವಿದ್ವಾಂಸರು ಅಲ್ಪಪ್ರಮಾಣದಲ್ಲಾದರೂ ಏನು ಮಾಹಿತಿಗಳನ್ನು ಸಂಗ್ರಹಿಸಿದ್ದಾರೆ, ಯಾವ ಊಹೆಗಳನ್ನು ಮಾಡಿದ್ದಾರೆ—ಎನ್ನುವುದನ್ನು ಕ್ರಮವಾಗಿ ಇಲ್ಲಿ ಸಂಗ್ರಹಿಸಿಕೊಡಬಹುದು. ಈ ನಿರೂಪಣೆಯು ಅನಿವಾರ್ಯವಾಗಿ ಊಹೆಗಳನ್ನೇ ವಿಶೇಷವಾಗಿ ಅವಲಂಬಿಸಬೇಕಾಗಿದೆ.

ವಿಮಲೋದಯ : ವಿಮಲ ಮತ್ತು ಉದಯ ಎಂದು ಎರಡು ಹೆಸರುಗಳೇ, ವಿಮಲೋದಯ ಎಂದು ಒಂದೇ ಹೆಸರೇ ಈ ಅಂಶ ಚರ್ಚೆಗೆ ಒಳಗಾಗಿದೆ. ಎರಡು ಪಕ್ಷಕ್ಕೂ ಸರಿಯಾದ ಆಧಾರಗಳಿಲ್ಲ. ವಿಮಲ ಮತ್ತು ಉದಯ ಬೇರೆ ಬೇರೆ ಎನ್ನುವ ಬಿ. ಎಲ್. ರೈಸ್, ವಿಮಲ ಎಂಬವನು ಶ್ರವಣಬೆಳ್ಗೊಳದ ೬೭ನೆಯ ಶಾಸನ (೧೧೨೯)ದಲ್ಲಿ ಉಕ್ತನಾಗಿರುವ ವಿಮಲಚಂದ್ರನಿರಬಹುದು ಎನ್ನುತ್ತಾರೆ. ಈ ಶಾಸನದಲ್ಲಿ ವಿಮಲಚಂದ್ರನನ್ನು ದಿಗಂಬರ ಪಂಥಕ್ಕೆ ಸೇರಿದ ಒಬ್ಬ ಜೈನಕವಿಯೆಂದೂ ವಾದಿಶ್ರೇಷ್ಠನೆಂದೂ ಹೇಳಿದೆ. ಆದರೆ ಈ ವಿಮಲಚಂದ್ರನು 'ಕವಿರಾಜಮಾರ್ಗ'ಕಾರನ ಕಾಲಕ್ಕೆ ಹಿಂದೆ ಇದ್ದವನಂತೆ ತೋರುವುದಿಲ್ಲ. ದುಂಡುನಿರ್ಗುಂದ ಯುವರಾಜನ ಗುರುವಾದ ಒಬ್ಬ ವಿಮಲಚಂದ್ರನು ೭೭೭ರಲ್ಲಿದ್ದಂತೆ ನಾಗಮಂಗಲದ ೮೫ನೆಯ ಶಾಸನದಿಂದ ತಿಳಿದುಬರುತ್ತದೆ. ಈ ವಿಮಲಚಂದ್ರನೇ ಕವಿರಾಜಮಾರ್ಗಕಾರ ಹೇಳಿರುವ ವಿಮಲನಿರಬಹುದೆಂದು ಕವಿಚರಿತೆಕಾರರು ಊಹಿಸಿರುತ್ತಾರೆ.[230] ಆದರೆ ಇಂಥ ಹೆಸರು ಬೇರೆ ಕಡೆಗಳಲ್ಲೂ ಬರಬಹುದು; ಅಲ್ಲದೆ ಈ ಸಮೀಕರಣಕ್ಕೆ ಪ್ರಬಲವಾದ ಆಧಾರಗಳ ಅಗತ್ಯವಿದೆ. ಆದ್ದರಿಂದ ಇಲ್ಲಿಯೂ ಅನಿಶ್ಚಿತ ಸ್ಥಿತಿ ಉಳಿಯುತ್ತದೆ.

೩೦ (೨೯) ಪದ್ಯಗಳ ಒಂದು ಚಿಕ್ಕ ಸಂಸ್ಕೃತ ಕೃತಿಯಾದ 'ಪ್ರಶ್ನೋತ್ತರಮಾಲಿಕಾ'ದ ಕರ್ತೃ ವಿಮಲನೆಂಬು ತಿಳಿದುಬರುತ್ತದೆ. ಇದರ ಕರ್ತೃ ಶಂಕರಾಚಾರ್ಯ, ಶಂಕರಗುರು ಎಂಬ ಬೇರೆ ಅಭಿಪ್ರಾಯವೂ ಇದೆ. ಶ್ವೇತಾಂಬರ ಜೈನರು ಈ ಕೃತಿ ವಿಮಲನದೆನ್ನುತ್ತಾರೆ. ಈ ಕೃತಿಯ ಕೊನೆಯ ಪದ್ಯದ ಕೆಲವು ಪಾಠಗಳಲ್ಲಿ ಇದರ ಕರ್ತೃ ಅಮೋಘವರ್ಷನೆನ್ನಲಾಗಿದೆ. ದಿಗಂಬರ ಜೈನರು 'ರತ್ನಮಾಲಿಕಾ' ಅಥವಾ 'ಪ್ರಶ್ನೋತ್ತರಮಾಲಿಕಾ' ಎಂಬ ಗ್ರಂಥದ ಕರ್ತೃ ರಾಷ್ಟ್ರಕೂಟದೊರೆ ಅಮೋಘವರ್ಷ(I) ಎಂದು ತಿಳಿಯುತ್ತಾರೆಂದು ಫ್ಲೀಟ್[231] ಅವರ ಮಾತಿನಿಂದ ತಿಳಿಯುತ್ತದೆ.

ಪೂರ್ವೋಕ್ತ ಕೃತಿಯ ಕರ್ತೃ ಬೌದ್ಧನಿರಬೇಕೆಂಬ ಮತ್ತು 'ಪದ್ಮಚರಿತ' ಎಂಬ ಗ್ರಂಥ ಕೂಡ ಈತನದೇ ಇರಬಹುದೆಂಬ ಪೀಟರ್‌ಸನ್ ಅವರ ಅಭಿಪ್ರಾಯವನ್ನು ಪ್ರಸ್ತಾಪಿಸುತ್ತ, ಅದರ ಹಲವು ಪ್ರತಿಗಳನ್ನು ಪರಿಶೀಲಿಸಿದ ಹಂದಾಸಶಾಸ್ತ್ರಿಯವರು

'ಪ್ರಶ್ನೋತ್ತರ ಮಾಲೆ'ಯ ('ಪ್ರಶ್ನೋತ್ತರ ರತ್ನಮಾಲಿಕೆ') ಕರ್ತೃ ಬೌದ್ಧನಿರಲಾರ ಎನ್ನುತ್ತಾರೆ.[232] ಆತನಿಗೂ ಸೂಚಿತ 'ಪದ್ಮಪುರಾಣ' ಅಥವಾ 'ಪದ್ಮಚರಿತ'ದ ರಚನೆಗೂ ಸಂಬಂಧವೇನೂ ಇಲ್ಲವೆಂದು ಹೇಳಲು ಕಾರಣಗಳಿವೆ. ಒಂದು ಪ್ರತಿಯ ಕೊನೆಯ ಪದ್ಯ, ಈ ಕೃತಿಯ ಕರ್ತೃ ವಿಮಲನೆಂದು ಸೂಚಿಸಿದರೆ, ಮತ್ತೊಂದು ಪ್ರತಿಯಲ್ಲಿ ಇದರ ಕರ್ತೃ ಅಮೋಘವರ್ಷನೆಂದು ಹೇಳಲಾಗಿದೆ. ವಿಮಲನೇ ಕೃತಿಯಕರ್ತೃ ಎಂದು ಸೂಚಿಸುವ ಶ್ಲೋಕ ಹೀಗಿದೆ :

ರಚಿತ ಸಿತಪಟಗುರುಣಾ ವಿಮಲೇನ ರತ್ನಮಾಲೇವ
ಪ್ರಶ್ನೋತ್ತರಮಾಲೇಯಂ ಕಂಠಗತಾ ಕಿಂ ನಭೂಷಯತಿ ||[233]

(ಕಂಠಕ್ಕೆ ಧರಿಸಿದ ರತ್ನಹಾರವು ಸೌಂದರ್ಯವನ್ನು ಹೇಗೆ ವರ್ಧಿಸುತ್ತದೋ ಹಾಗೆಯೇ ಶ್ವೇತವಸ್ತ್ರದಿಂದ ಆಚ್ಛಾದಿತನಾಗಿರುವ ವಿಮಲನಿಂದ ರಚಿತವಾಗಿರುವ ಈ ಅತ್ಯುತ್ತಮ 'ಪ್ರಶ್ನೋತ್ತರಮಾಲೆ' ಅದನ್ನು ಪಠಿಸುವವನಿಗೆ ಭೂಷಣವಲ್ಲವೆ?)

ಇನ್ನೊಂದು ಪ್ರತಿಯಲ್ಲಿ ಈ ಶ್ಲೋಕದ ಪ್ರತಿಯಾಗಿ ಇರುವ ಶ್ಲೋಕ :

ವಿವೇಕಾ ತ್ಯಕ್ತ ರಾಜ್ಯೇನ ರಾಜ್ಞೇಯಂ ರತ್ನಮಾಲಿಕಾ
ರಚಿತಾಮೋಘವರ್ಷೇಣ ಸುಧಿಯಾ ಸದಲಂಕೃತಿಃ ||[234]

(ತನ್ನ ವಿಶಿಷ್ಟ ಜ್ಞಾನದಿಂದ ರಾಜ್ಯವನ್ನು ತ್ಯಜಿಸಿದ ಅಮೋಘವರ್ಷನಿಂದ ವಿದ್ವಾಂಸರಿಗೆ ಅಲಂಕಾರಪ್ರಾಯವಾದ ಈ ರತ್ನಹಾರವು ರಚಿತವಾಯ್ತು.)

ಹೀಗೆ ಒಂದು ಪಾಠಸಂಪ್ರದಾಯದ ಪ್ರಕಾರ ಈತ ಶ್ವೇತಾಂಬರ ಪಂಥದ ಜೈನ ಸಾಧು. ಅಮೋಘವರ್ಷನೇ ಕೃತಿಯ ಕರ್ತೃವಾದರೆ ಈ ಕೃತಿ ದಿಗಂಬರಪಂಥದ್ದೆನ್ನ ಬೇಕಾಗುತ್ತದೆ. 'ಕವಿರಾಜಮಾರ್ಗ'ಕಾರ ಹೇಳಿದ ವಿಮಲೋದಯನೇ ಈತ ಎಂಬ ಊಹೆಗೆ ಅವಕಾಶಕೊಟ್ಟದ್ದು ಈ ಕೃತಿಯ ಟಿಬೆಟನ್ ಭಾಷಾರೂಪ. ಇಲ್ಲಿ ಎರಡು ಪಾಠ ಸಂಪ್ರದಾಯಗಳಿವೆ. ೧೮೫೮ರಲ್ಲಿ ಇದನ್ನು ಸಂಪಾದಿಸಿದ ಸಿಫ್ನರ್ ಕೊನೆಯ ಪದ್ಯದ ಅರ್ಥವನ್ನು ಹೀಗೆ ಬರೆದಿದ್ದಾರೆ :

This jewel wreath, made by Amoghodaya, of the king who abandoned his inly established soverignities, is the best ornament of the wise.

ಕರ್ತೃವಿನ ಹೆಸರನ್ನು ಇಲ್ಲಿ 'don-yod-hchar' ಎಂದು ಹೇಳಿದೆ. ಅಂದರೆ 'don-yod'—ಎಂಬುದು ಸಂಸ್ಕೃತದ 'ಅಮೋಘ' ಎಂಬುದಕ್ಕೂ 'hchar' ಎಂಬುದು ಉದಯ ಎಂಬುದಕ್ಕೂ ಪರ್ಯಾಯವಾದ್ದು; ಆದ್ದರಿಂದ ಕರ್ತೃವಿನ ಹೆಸರು ಅವರ ಪ್ರಕಾರ ಅಮೋಘೋದಯ ಆಗುತ್ತದೆ. ಎಫ್. ಡಬ್ಲ್ಯು. ಥಾಮಸ್ ಅವರು ಹೇಳುವಂತೆ, hchar=ಉದಯ ಎಂಬುದನ್ನು char=ವರ್ಷ ಎಂದು ಓದಲು ಸಾಧ್ಯವಿದೆಯಾದ್ದರಿಂದ ಕರ್ತೃವಿನ ಹೆಸರು ಆಗ ಅಮೋಘವರ್ಷ ಕೂಡ ಆಗುತ್ತದೆ. ಫ್ಲೀಟ್ ಅವರು

ಥಾಮಸ್ ಅವರ ಅಭಿಪ್ರಾಯವನ್ನು ಬೆಂಬಲಿಸುತ್ತ, ಸಿಪ್ನರ್ ಅವರ 'ಅಮೋಘೋದಯ'ವನ್ನು 'ಅಮೋಘವರ್ಷ' ಎಂದು ಕ್ಷೇಮವಾಗಿ ಮತ್ತು ಅಂತಿಮವಾಗಿ ಬದಲಾಯಿಸಿಕೊಳ್ಳಬಹುದು ಎನ್ನುತ್ತಾರೆ.[235] ದಿಗಂಬರ ಪಂಥದವರ ಪ್ರಕಾರ ಕರ್ತೃವಾದ ಈ ಅಮೋಘವರ್ಷ ಮೊದಲನೆಯ ಅಮೋಘವರ್ಷ. ಇವರ ಅಭಿಪ್ರಾಯವನ್ನು ಒಪ್ಪಿಕೊಳ್ಳಬಹುದು ಎನ್ನುತ್ತಾರೆ ಫ್ಲೀಟ್.

ಟಿಬೆಟನ್ ಭಾಷೆಯ ಅನುವಾದದಲ್ಲಿ 'ಪ್ರಶ್ನೋತ್ತರ ಮಾಲೆ'ಯ ಕರ್ತೃವನ್ನು 'ಅಮೋಘೋದಯ' ಎಂದಿರುವುದನ್ನು ಗಮನಿಸಿ, 'ಕವಿರಾಜಮಾರ್ಗ'ದಲ್ಲಿ ಉಕ್ತನಾದ 'ವಿಮಲೋದಯ'ನೇ ಈ ಕೃತಿಯ ಕರ್ತೃ ಎಂದಿದ್ದಾರೆ ಗೋವಿಂದ ಪೈ.[236] ಆದರೆ ಟಿಬೆಟನ್ ಅನುವಾದದ ಈ ಹೆಸರನ್ನು ಸಂಸ್ಕೃತಕ್ಕೆ ಎಳೆದುತಂದು, 'ಅಮೋಘೋದಯ' ಅಥವಾ 'ಅಮೋಘವರ್ಷ'ನಿಗೆ ಹೊಂದಿಸುವುದು ಅಸಹಜವೆನಿಸುತ್ತದೆ. ಈ ಅನುವಾದವನ್ನು ಆಧಾರವಾಗಿಟ್ಟುಕೊಂಡು ಅಮೋಘೋದಯ=ಅಮೋಘವರ್ಷ= ವಿಮಲೋದಯ ಎನ್ನಲು ನಮಗೆ ಆಧಾರಗಳಿಲ್ಲ.

ಗೋವಿಂದ ಪೈ ಮತ್ತು ಮುಳಿಯ ತಿಮ್ಮಪ್ಪಯ್ಯನವರ ಪ್ರಕಾರ[237] 'ಪ್ರಶ್ನೋತ್ತರ ಮಾಲೆ'ಯ ಕರ್ತೃ 'ವಿಮಲ'. 'ವಿವೇಕಾತ್ಯಕ್ತ ರಾಜ್ಯೇನ....' ಎಂಬ ಪೂರ್ವೋಕ್ತ ಶ್ಲೋಕದಲ್ಲಿ ಮಾತ್ರ ಈ ಕೃತಿಯ ಕರ್ತೃ 'ಅಮೋಘವರ್ಷ' ಎನ್ನಲಾಗಿದೆ. ಕೆಲವು ಪ್ರತಿಗಳಲ್ಲಿ ಮಾತ್ರ ಇರುವ ಈ ಶ್ಲೋಕ ಪ್ರಕ್ಷಿಪ್ತವಾಗಿರುವುದರಿಂದ ಅಮೋಘವರ್ಷ ಈ ಕೃತಿಯ ಕರ್ತೃವಲ್ಲ, ವಿಮಲನೇ ಕರ್ತೃ ಎನ್ನುವುದು ಇವರಿಬ್ಬರ ಅಭಿಪ್ರಾಯ. ಈ ಕೃತಿಯ ಮೊದಲಿನ ೨೯ ವೃತ್ತಗಳೂ ಆರ್ಯಾವೃತ್ತದಲ್ಲಿವೆ. ಆದರೆ ಅಮೋಘವರ್ಷನೇ ಇದರ ಕರ್ತೃ ಎಂದು ಹೇಳುವ ಈ ಶ್ಲೋಕ ಮಾತ್ರ ಅನುಷ್ಟುಪ್‌ನಲ್ಲಿದೆ. ಈ ಕಾರಣದಿಂದ ಈ ಶ್ಲೋಕ ಪ್ರಕ್ಷಿಪ್ತವೆನ್ನುವ ಗೋವಿಂದ ಪೈ ಅವರ ಅಭಿಪ್ರಾಯವನ್ನು ಇನ್ನೂ ಕೆಲವು ಆಧಾರಗಳಿಂದ ಮುಳಿಯ ತಿಮ್ಮಪ್ಪಯ್ಯನವರು ಸಮರ್ಥಿಸುತ್ತಾರೆ. ಈ ಶ್ಲೋಕ ಉಳಿದ ವೃತ್ತಗಳಷ್ಟು ಹೃದಯಂಗಮವಾಗಿಲ್ಲ ಹಾಗೂ ಈ ಕೃತಿಯ ಹೆಸರು 'ಪ್ರಶ್ನೋತ್ತರ ಮಾಲಿಕಾ' ಎಂದು ಆದಿವೃತ್ತದಲ್ಲಿದೆ. 'ರತ್ನಮಾಲೇವ ಪ್ರಶ್ನೋತ್ತರ ಮಾಲೇಯಂ' ಎಂಬಲ್ಲಿ ರತ್ನಮಾಲೆಯೊಡನೆ ಹೋಲಿಕೆಗೊಂಡಿದೆ. ಆದರೆ ಈ ಶ್ಲೋಕದಲ್ಲಿ ಮಾತ್ರ 'ರತ್ನಮಾಲಿಕಾ' ಎಂಬುದೇ ಕೃತಿಯ ಹೆಸರಾಗಿರುವಂತಿದೆ. ಆದ್ದರಿಂದ ಈ ಶ್ಲೋಕ ಪ್ರಕ್ಷಿಪ್ತವೆಂದು ತೀರ್ಮಾನಿಸಿ, ಈ ಕವಿತೆಯನ್ನು ಬರೆದಾತನು ಶ್ವೇತಾಂಬರ ಜೈನಗುರು ವಿಮಲ ಎಂಬಾತನಲ್ಲದೆ ಇನ್ನೊಬ್ಬನಾಗಿರಲಾರ; ಈ ವಿಮಲ ಸೂರಿ ಕನ್ನಡದಲ್ಲಿ ಕಾವ್ಯರಚನೆ ಮಾಡಿರಬಹುದೇ, ಕವಿರಾಜಮಾರ್ಗದಲ್ಲಿ ಹೇಳಿರುವ ವಿಮಲನೆಂಬಾತನು ಈತನೇ ಆಗಿರಬಹುದೇ? ಎಂಬುದು ವಿಚಾರಕ್ಕೆ ಅರ್ಹ"—ಎನ್ನುತ್ತಾರೆ ಅವರು.[238] ಆದ್ದರಿಂದ ವಿಮಲೋದಯ ಕವಿಯೆಂದು ಒಪ್ಪುವ ಸಾಧ್ಯತೆಯಿದ್ದು, ಆತನ ಕಾಲ, ಕೃತಿ ಇತ್ಯಾದಿಗಳ ವಿವರ ಸದ್ಯದಲ್ಲಿ ಏನೂ ತಿಳಿಯದಾಗಿದೆ.

ಈ ಕ್ರಮದಲ್ಲಿ ಗದ್ಯಗ್ರಂಥಗಳನ್ನು ಬರೆದರು ಎಂಬರ್ಥದ 'ಕವಿರಾಜಮಾರ್ಗ'ಕಾರನ

ಮಾತನ್ನು ಚಂಪೂಗ್ರಂಥಗಳನ್ನು ಬರೆದರು ಎಂದು ಅರ್ಥೈಸುವ ಎಲ್. ಬಸವರಾಜು ಅವರು 'ವಿಮಲ'ನ ಬಗೆಗೆ ಹೀಗೆ ಹೇಳುತ್ತಾರೆ:[239] "ಕ್ರಿ.ಶ. ೫ನೇ ಶತಮಾನದ ವೇಳೆಗಾಗಲೇ ಕನ್ನಡದಲ್ಲಿ ವಿಮಲನೆಂಬುವನು ಚಂಪೂಕಾವ್ಯವನ್ನು ಬರೆದು ಆ ಪ್ರಕಾರವನ್ನು ಪ್ರವರ್ತಕಗೊಳಿಸಿ ಅಲ್ಲಿಂದ ಮುಂದಕ್ಕೆ ಕನ್ನಡದಲ್ಲಿ ಚಂಪೂಪ್ರಕಾರದ ಒಂದು ಪರಂಪರೆಯ ಮೂಲಪುರುಷನಾದನು." ಆದರೆ ಅಷ್ಟು ಹಿಂದೆ ಕನ್ನಡ ಸಾಹಿತ್ಯದಲ್ಲಿ ಗ್ರಂಥಗಳು ಸೃಷ್ಟಿಯಾಗಿದ್ದುದಕ್ಕೆ ಅಥವಾ ಚಂಪೂಪ್ರಭೇದವು ಕನ್ನಡದಲ್ಲಿ ಇದ್ದುದಕ್ಕೆ ಬೇರೆ ಆಧಾರಗಳ ಆವಶ್ಯಕತೆಯಿದೆ.

ಈ ವಿಮಲೋದಯ ಎಂಬುದು ನಾಗಾರ್ಜುನನಿಗೆ ಹೇಳಿದ ವಿಶೇಷಣವಿರಬಹುದೇ ಎಂಬ ಅನುಮಾನವನ್ನು ಕೆ. ಬಿ. ಪಾಠಕರು ಸೂಚಿಸುತ್ತಾರೆ.[240] ಈ ಎರಡು ಹೆಸರುಗಳೂ ಬೇರೆಬೇರೆಯಾಗಿರುವ ಸಂಭವನವೇ ಹೆಚ್ಚು. ವಿಮಲೋದಯ ಎಂಬುದನ್ನು ವಿಶೇಷಣವಾಗಿ ಬಳಸಿರುವ ಸಾಧ್ಯತೆಗೆ ಪೋಷಕವಾದ ಉಲ್ಲೇಖಗಳೇನೂ ತೋರುವುದಿಲ್ಲ.

ರೈಸ್ ಮತ್ತು ಆರ್.ನರಸಿಂಹಾಚಾರ್ಯರ ಪ್ರಕಾರ ಉದಯ ಎಂಬುದು ಒಬ್ಬ ಕವಿಯ ಹೆಸರು. 'ಉದಯಾದಿತ್ಯಾಲಂಕಾರ'ವನ್ನು ಬರೆದ ಸೋಮನಾಥನೆಂಬ ಚೋಳರಾಜನ ಮಗನಾದ ಉದಯಾದಿತ್ಯ ಆ ಗ್ರಂಥದಲ್ಲಿ ತನ್ನ ಹೆಸರನ್ನು ಉದಯ ಎಂದು ಬರೆದುಕೊಂಡಿದ್ದಾನೆ. ಆದರೆ ಈತನು ೧೧೫೦ರಲ್ಲಿದ್ದಂತೆ ತಿಳಿಯುವುದರಿಂದ ಈತ ಕವಿರಾಜಮಾರ್ಗಕಾರ ಹೇಳುವ ಉದಯನಲ್ಲ—ಎನ್ನುತ್ತಾರೆ ಕವಿಚರಿತೆಕಾರರು.[241] ಇದು ಸ್ಪಷ್ಟವೇ.ಇದೆ.

ನಾಗಾರ್ಜುನ: ಬೇರೆ ಬೇರೆ ಕಾಲ ಮತ್ತು ಸ್ಥಳಗಳಲ್ಲಿ ಬೇರೆ ಬೇರೆ ವಿಷಯಗಳಿಗೆ ಸಂಬಂಧಿಸಿದಂತೆ ಹಲವರು ನಾಗಾರ್ಜುನರ ಹೆಸರುಗಳು ಕಂಡುಬರುತ್ತವೆ. ಇವರೆಲ್ಲರ ಪ್ರತ್ಯೇಕ ಅಸ್ತಿತ್ವದ ಬಗ್ಗೆಯಾಗಲಿ, ಪರಸ್ಪರ ಸಂಬಂಧದ ಬಗ್ಗೆಯಾಗಲಿ ವಿಚಾರ ಮಾಡಲು ಈಗಿರುವ ಆಧಾರಗಳಿಂದ ಅಶಕ್ಯ.

ಕ್ರಿ.ಶ. ೨ನೆಯ ಶತಮಾನದ ಉತ್ತರಾರ್ಧದಲ್ಲಿ ಪ್ರಸಿದ್ಧನಾಗಿದ್ದ ನಾಗಾರ್ಜುನನು ಬೌದ್ಧಮತೀಯನು. 'ಮಾಧ್ಯಮಿಕ ಸೂತ್ರ' ಮೊದಲಾದ ಗ್ರಂಥಗಳು ಈತನ ಹೆಸರಿನಲ್ಲಿವೆ. ದಕ್ಷಿಣದಲ್ಲಿ ಪಂಡಿತನಾದ ಐಂದ್ರಜಾಲಿಕನಾದ ನಾಗಾರ್ಜುನನ ಹೆಸರೊಂದು ಕೇಳಿಬರುತ್ತದೆ. ಇವನ ಸುತ್ತ ಅನೇಕ ಕಥೆಗಳು ಹೆಣೆದುಕೊಂಡಿವೆ. ಜ್ಯೋತಿಷ್ಯ, ವೈದ್ಯ, ರತ್ನಶಾಸ್ತ್ರ, ಮಂತ್ರತಂತ್ರಗಳಲ್ಲಿ ಈತ ನಿಪುಣನಾಗಿದ್ದಂತೆ ತಿಳಿದುಬರುತ್ತದೆ. ಬಾಣಕವಿ ತನ್ನ 'ಹರ್ಷಚರಿತೆ'ಯಲ್ಲಿ ಒಬ್ಬ ನಾಗಾರ್ಜುನನನ್ನು ಹೆಸರಿಸುತ್ತಾನೆ. ೭ನೆಯ ಶತಮಾನದಲ್ಲಿದ್ದಿರಬಹುದಾದ, ಧಾತುವಾದ ಪ್ರವೀಣನಾದ ನಾಗಾರ್ಜುನ 'ರಸರತ್ನಾಕರ' ಎಂಬ ಗ್ರಂಥವನ್ನು ಬರೆದಿದ್ದಾನೆ. ಇವರೆಲ್ಲರೂ ಬೇರೆ ಬೇರೆ ನಾಗಾರ್ಜುನರೆಂಬುದು ವಿದ್ವಾಂಸರ ಅಭಿಪ್ರಾಯ. ಬೌದ್ಧದಾರ್ಶನಿಕ, ತಂತ್ರಶಾಸ್ತ್ರಲೇಖಕ, ವೈದ್ಯಶಾಸ್ತ್ರಲೇಖಕ ಮತ್ತು ರಸವಾದಿ—ಇವರೆಲ್ಲ ಬೇರೆಬೇರೆಯವರು; ನಾಮಸಾಮ್ಯದಿಂದ ಇವರ ಚರಿತ್ರೆಯನ್ನು ತಿಳಿಯಲು ತೊಡಕುಂಟಾಗಿದೆ ಎಂದು ವಿಂಟರ್‌ನಿಟ್ಜ್ ತನ್ನ ಭಾರತೀಯ

ಚರಿತ್ರೆಯಲ್ಲಿ ಈ ಮೊದಲೇ ಭಾವಿಸಿದ್ದರು.[242] ನಂದಿ ಮತ್ತು ಆವಶ್ಯಕ ಸೂತ್ರಗಳ ಪ್ರಾರಂಭದಲ್ಲಿ ಒಬ್ಬ ನಾಗಾರ್ಜುನನನ್ನು ವಿಶೇಷ ಭಕ್ತಿಯಿಂದ ಸ್ತುತಿಸಿರುವಂತೆ ತಿಳಿದು ಬಂದಿದೆಯಾದರೂ, 'ನಾಗಾರ್ಜುನ ಕಕ್ಷಪುಟ'ವೆಂಬ ಒಂದು ವೈದ್ಯಗ್ರಂಥ ದೊರೆಯುತ್ತಿದೆಯಾದರೂ ಕವಿರಾಜಮಾರ್ಗಕಾರ ಹೇಳುವ ಗದ್ಯಕವಿಯಾದ ನಾಗಾರ್ಜುನ ಇವರಲ್ಲಿ ಒಬ್ಬನಾಗಿರಬಹುದೋ ತಿಳಿಯದು ಎಂದೂ ಆರ್. ನರಸಿಂಹಾಚಾರ್ಯರು ಸಂದೇಹಿಸಿದ್ದಾರೆ.[243]

'ಕವಿರಾಜಮಾರ್ಗ'ಕಾರನ ನಂತರವೂ ಅಲ್ಲಲ್ಲಿ ಕನ್ನಡ ಕಾವ್ಯಗಳಲ್ಲಿ, ಶಾಸನದಲ್ಲಿ ನಾಗಾರ್ಜುನನ್ನು ಹೆಸರಿಸಲಾಗಿದೆ. ೧೧೩೦ರ ಒಂದು ಶಾಸನದಲ್ಲಿ ರಟ್ಟರಾಜನಾದ ಕೃಷ್ಣನು 'ನಾಗಾರ್ಜುನಾದಿ ಪ್ರಸಿದ್ಧ ಸಿದ್ಧಸಮುದಯ ನಮಿತ ಪಾದಾರವಿಂದ'ನಾಗಿದ್ದನೆಂದು ತಿಳಿದುಬರುತ್ತದೆ.[244]

ಎಚ್. ಡಿ. ವೇಲಣಕರ್ ಅವರ 'ಜಿನರತ್ನಕೋಶ'ದಲ್ಲಿ 'ಕರ್ಣಾಟಕಮಣಿದರ್ಪಣ' ಎಂಬ ಗ್ರಂಥದ ಕರ್ತೃ ನಾಗಾರ್ಜುನ ಎಂದಿದೆ. ಅದಕ್ಕೆ ಆಧಾರವಾದುದು ಕೊಲ್ಲಾಪುರದ ಲಕ್ಷ್ಮೀಸೇನ ಭಟ್ಟಾರಕ ಜೈನ ಬಸದಿಯ ಹಸ್ತಪ್ರತಿಸೂಚಿ. ಆದರೆ ಈ ಗ್ರಂಥಭಂಡಾರದಲ್ಲಿ ಮೇಲಣ ಕೃತಿ ಈಗ ದೊರೆಯುವಂತೆ ತೋರುವುದಿಲ್ಲ.[245] ಕರ್ಣಾಟಕ ಎಂಬ ಪದ ಇದೊಂದು ಕನ್ನಡಕೃತಿ ಎಂಬ ಭಾವನೆ ಮೂಡಿಸುವಂತಿದೆ, ಆದರೆ "ಸೂಚಿಸಿದ್ಧಪಡಿಸಿದವನು 'ಕರ್ಣಾಟಕ ಭಾಷಾಭೂಷಣ' 'ಶಬ್ದಮಣಿದರ್ಪಣ' ಮತ್ತು ನಾಗವರ್ಮ ಈ ಹೆಸರುಗಳನ್ನು ಸುತ್ತುಹಾಕಿಕೊಂಡು ನಾಗಾರ್ಜುನನ 'ಕರ್ಣಾಟಕ ಮಣಿದರ್ಪಣ'ವನ್ನು ಸೃಷ್ಟಿಸಿಕೊಂಡಿರಬಹುದು" ಎಂದು ಆ. ನೇ. ಉಪಾಧ್ಯೆಯವರ ಅಭಿಪ್ರಾಯ.[246]

ಹರೀಶ್ವರ ಕವಿ (ಸು. ೧೨೦೦) "ದ್ವಿಜರನಾರಾಧಿಸಿದ ಬಲಿಯುಂ ಮಹಸುಹಿತ ನಾಗಾರ್ಜುನಂ ಖಚರನುಂ ಪರಶುರಾಮುಂ ವಂಶಕ್ಷಯವಾದರು[247] ಎಂದು ಹೇಳುವಲ್ಲಿ ನಾಗಾರ್ಜುನನ ವಿಷಯ ಹೇಳಿದ್ದಾನೆ. ರಾಘವಾಂಕ ತನ್ನ 'ಸಿದ್ಧರಾಮಚಾರಿತ್ರ'ದಲ್ಲಿ ಎರಡು ಕಡೆಗಳಲ್ಲಿ (೩-೯, ೯-೪೩) ನಾಗಾರ್ಜುನನನ್ನು ಹೆಸರಿಸುತ್ತಾನೆ; ಸಿದ್ಧರಾಮನು ಶ್ರೀಶೈಲದಲ್ಲಿ 'ನಾಗಾರ್ಜುನಂ ತಲೆಗೊಟ್ಟ ಠಾಣ'ವನ್ನು ನೋಡಿದನೆಂದು ಹೇಳುತ್ತಾನೆ. (೩-೯) ರಾಘವಾಂಕ ಹೇಳುವ ಈ ನಾಗಾರ್ಜುನ ಕುಟಿಲಸಿದ್ಧನಿರಬೇಕೆಂದು ಡಿ. ಎಲ್. ನರಸಿಂಹಾಚಾರ್ ಅವರ ಅಭಿಪ್ರಾಯ.[248] ಪೂಜ್ಯಪಾದನ ಸೋದರಳಿಯನಾದ ನಾಗಾರ್ಜುನ ಒಬ್ಬನಿದ್ದನೆಂದು 'ರಾಜಾವಳೀಕಥೆ'ಯಲ್ಲಿ ಹೇಳಲಾಗಿದೆ. ಆದರೆ ಬಿ. ಎಲ್. ರೈಸ್ ಹೇಳುವಂತೆ[249], ಈತ ಸಾಹಿತ್ಯಪ್ರಪಂಚಕ್ಕೆ ಸೇರಿದವನೆಂಬುದು ನಿಶ್ಚಯವಿಲ್ಲ. ಈಚಿನ ಕಾಲದ ಈ ಉಲ್ಲೇಖಗಳ ನಾಗಾರ್ಜುನರಿಗೂ ಕವಿರಾಜಮಾರ್ಗಕಾರ ಹೇಳುವ ಗದ್ಯಕವಿ ನಾಗಾರ್ಜುನನಿಗೂ ಯಾವ ಸಂಬಂಧವೂ ಇರುವಂತೆ ತೋರುವುದಿಲ್ಲ.

ಜಯಬಂಧು: ಒಂದು ಸೂಪಶಾಸ್ತ್ರ ಗ್ರಂಥದ ಕೆಲವು ಪದ್ಯಗಳ ಕೊನೆಯಲ್ಲಿ 'ಜಯಬಂಧುನಂದನ' ಎಂದಿರುವುದರಿಂದ, ಆ ಗ್ರಂಥದ ಶೈಲಿ ಪೂರ್ವಕಾಲದ ಜೈನಕವಿಗಳ

ಶೈಲಿಯನ್ನು ಅನುಕರಿಸಿದೆ ಎಂಬ ಕಾರಣದಿಂದ, 'ಕವಿರಾಜಮಾರ್ಗ'ದಲ್ಲಿ ಹೇಳಿರುವ "ಜಯಬಂಧುವಿನ ಮಗನೇ ಆ ಗ್ರಂಥವನ್ನು ಬರೆದಿರಬಹುದೋ ಏನೋ ತಿಳಿಯದು" ಎಂದು ಕವಿಚರಿತೆಕಾರರು ಮೊದಲು ಹೇಳಿದರು.[೨೫೦] ಆದರೆ ಈ ಸೂಪಶಾಸ್ತ್ರಗ್ರಂಥ ಚಾವುಂಡರಾಯನ (೧೦೨೫) 'ಲೋಕೋಪಕಾರ'ದ ೮ನೆಯ ಆಶ್ವಾಸವೆಂದೂ 'ಜಯ ಬಂಧುನಂದನ' ಎಂಬುದು ಚಾವುಂಡರಾಯನ ಬಿರುದುಗಳಲ್ಲಿ ಒಂದೆಂದೂ ಈಚೆಗೆ ತಿಳಿದುಬಂದುದರಿಂದ[೨೫೧] ೧೧ನೆಯ ಶತಮಾನದ ಈ ಜಯಬಂಧುವೂ ಕವಿರಾಜಮಾರ್ಗ ದಲ್ಲಿ ಉಕ್ತನಾದ ಈ ಪ್ರಾಚೀನ ಜಯಬಂಧುವೂ ಬೇರೆ ಬೇರೆಯೆಂಬುದು ಸ್ಪಷ್ಟಪಟ್ಟಿತು.

'ಅರ್ಹದ್ದಾಸ' (೧೩೦೦) ತನ್ನ 'ಅಟ್ಟಮತ'ವೆಂಬ ಗ್ರಂಥದಲ್ಲಿ "....ಕುಂಚತೇಜ ನಾಮವರಶುಭಾಕರಂ ಪ್ರಭುಗಳೊಳ್ ಪೊಗೞ್ಗುಂ ಜಯಬಂಧು ಸಜ್ಜನಂ" (೧-೧೯) ಎಂದು ತನ್ನ ಬಂಧುವಾದ ಒಬ್ಬ ಜಯಬಂಧುವಿನ ಹೆಸರನ್ನು ಹೇಳಿದ್ದಾನೆ. ಆದರೆ ಕವಿಚರಿತೆಕಾರರು ಹೇಳುವಂತೆ ಈತ ಅರ್ಹದ್ದಾಸನ ಸಮಕಾಲದವನಿರಬೇಕು. ಕವಿರಾಜ ಮಾರ್ಗೋಕ್ತನಿಗೂ ಈತನಿಗೂ ಏನೂ ಸಂಬಂಧವಿಲ್ಲ. ಅಂತೂ ಈ ಕವಿಯ ವಿಷಯ ವಾಗಿ ಏನೂ ತಿಳಿದಿಲ್ಲವೆಂದು ರೈಸ್ ೧೮೯೦ರಲ್ಲಿ ಹೇಳಿದ ಮಾತೇ ಇನ್ನೂ ನಿಲ್ಲುತ್ತದೆ.

ದುರ್ವಿನೀತ : ತಲಕಾಡಿನ ಗಂಗವಂಶದ ದೊರೆಗಳಲ್ಲಿ ಒಬ್ಬನಾಗಿ, ಕೆಲವರ ಮತದಂತೆ ಸು. ೪೮೨ರಿಂದ ೫೨೨ರವರೆಗೆ ಆಳುತ್ತಿದ್ದ ದುರ್ವಿನೀತನೇ 'ಕವಿರಾಜಮಾರ್ಗ'ದಲ್ಲಿ ಉಕ್ತ ನಾದ ಗದ್ಯಕವಿ ದುರ್ವಿನೀತನೆಂಬುದು ಈಗ ಸಾಮಾನ್ಯವಾಗಿ ತಿಳಿದಿರುವ ಅಭಿಪ್ರಾಯ ವಾಗಿದೆ. ದಂಡಿಯ 'ಅವಂತಿ ಸುಂದರಿ ಕಥಾಸಾರ'ದಲ್ಲಿ ಈತನ ಉಲ್ಲೇಖ ಹೀಗೆ ಬಂದಿದೆ:

"ದಕ್ಷಿಣಾಪಥದಲ್ಲಿ ಪ್ರಸದ್ಧವಾದ ಪಟ್ಟಣ ಕಾಂಚಿ, ಅದನ್ನು ಸಿಂಹವಿಷ್ಣುವೆಂಬ ಪಲ್ಲವರಾಜನು ಆಳುತ್ತಿದ್ದನು. ಆತನಿಗೆ ಕವಿಗಳೆಂದರೆ ಪ್ರಾಣ. ಒಂದು ದಿನ ಅಪರಿಚಿತ ನೊಬ್ಬನು ಅವನ ಆಸ್ಥಾನಕ್ಕೆ ಬಂದು ವಿಷ್ಣುವಿನ ನರಸಿಂಹಾವತಾರವನ್ನು ಬಣ್ಣಿಸುವ ಶ್ಲೋಕವೊಂದನ್ನು ಹೇಳಿದನು. ಶ್ಲೋಕದ ಭಾವದಿಂದ ಪರವಶನಾದ ರಾಜನು ಅದನ್ನು ಬರೆದವನ ಬಗೆಗೆ ಆಸಕ್ತಿಯಿಂದ ವಿಚಾರಿಸಲು, ಆ ಅಪರಿಚಿತನು, ವಸ್ತುತಃ ಅವನೊಬ್ಬ ಗಂಧರ್ವ, ಹೀಗೆಂದನಂತೆ: 'ಭಾರತವರ್ಷದ ಪಶ್ಚಿಮೋತ್ತರ ದಿಗ್ಭಾಗದಲ್ಲಿ ಆನಂದಪುರ ವೆಂಬ ನಗರ ಆರ್ಯಾವರ್ತಕ್ಕೆ ಶಿರೋರತ್ನದಂತೆ ರಾಜಿಸುತ್ತಿದೆ. ಅಲ್ಲಿ ಅನೇಕ ಪ್ರಸಿದ್ಧ ರಾಜರು ಆಗಿಹೋದರು. ಅಲ್ಲಿಯ ನಿವಾಸಿಗಳಲ್ಲಿ ಕೌಶಿಕ ಗೋತ್ರದ ಬ್ರಾಹ್ಮಣವಂಶ ವೊಂದು ದಕ್ಷಿಣಾಪಥದ ಅಚಲಪುರಕ್ಕೆ ವಲಸೆಬಂದಿತು. ಈ ವಂಶಕ್ಕೆ ಸೇರಿದ ನಾರಾ ಯಣಸ್ವಾಮಿಯೆಂಬಾತನಿಗೆ ದಾಮೋದರನೆಂಬ ಮಗನಾದನು. ಈತನು ತನ್ನ ನಿರುಪಮ ಪ್ರತಿಭೆಯಿಂದ 'ಭಾರವಿ' ಅಥವಾ ಬೆಳಗುವ ಸೂರ್ಯನೆಂಬ ಪ್ರಖ್ಯಾತಿಯನ್ನು ಪಡೆದನು. ಚಾಲುಕ್ಯ ರಾಜನಾದ ವಿಷ್ಣುವರ್ಧನನ ಗೆಳೆಯನಾದನು. ಒಮ್ಮೆ ವಿಷ್ಣುವರ್ಧನನೊಡನೆ ಭಾರವಿ ಬೇಟೆಗೆ ಹೋಗಿರುವಾಗ ಅವನ ಒತ್ತಾಯದಿಂದ ಅನಿವಾರ್ಯವಾಗಿ ಮಾಂಸ ವನ್ನು ತಿನ್ನಬೇಕಾಗಿ ಬಂದಿತು. ಆ ದೋಷದ ಪ್ರಾಯಶ್ಚಿತ್ತಕ್ಕಾಗಿ ಆತನು ತೀರ್ಥ ಯಾತ್ರೆ ಕೈಗೊಂಡು ದೇಶಾಟನೆ ಮಾಡಿ ಕಡೆಗೆ ದುರ್ವಿನೀತನೆಂಬ ರಾಜನ ಆಸ್ಥಾನವನ್ನು

ಸೇರಿದನು. ಆತನೇ, ಈಗ ನಾನು ಹೇಳಿದ ಶ್ಲೋಕವನ್ನು ರಚಿಸಿದ ಕವಿ."[252]

ಪೂರ್ವ ಚಾಲುಕ್ಯರಾಜ ವಿಷ್ಣುವರ್ಧನ, ಕಾಂಚಿಯ ಪಲ್ಲವ ರಾಜನಾದ ಸಿಂಹವಿಷ್ಣು, ದುರ್ವಿನೀತ ಮತ್ತು ಕವಿ ಭಾರವಿ ಸಮಕಾಲೀನರೆಂಬುದು ದಂಡಿಯ ಕೃತಿಯೊಳಗಿನ ಈ ಉಲ್ಲೇಖದಿಂದ ತಿಳಿಯುತ್ತದೆ. ಪಲ್ಲವ ದೊರೆ ಸಿಂಹವಿಷ್ಣು (ಸು. ೫೭೫–೬೦೦)ವಿನ ಸಮಕಾಲೀನನಾಗಿದ್ದನೆಂಬ ಸಂಗತಿ ಮತ್ತು ೬೩೪ರಲ್ಲಿ ರಚಿತವಾದ ಐಹೊಳೆ ಶಾಸನ ವೊಂದರಲ್ಲಿ[253] ಬರುವ ಭಾರವಿಯ ಉಲ್ಲೇಖ—ಇವನ್ನು ಗಮನಿಸಿ ಆರ್ ನರಸಿಂಹಾ ಚಾರ್ಯರು ದುರ್ವಿನೀತನ ಕಾಲ ಸು ೬೦೦ ಎನ್ನುತ್ತಾರೆ.[254]

ಗಂಗ ಮನೆತನ ಸಾಹಿತ್ಯಿಕ ಚಟುವಟಿಕೆಗಳಿಗೆ ಹೆಸರಾದ್ದು. ಈ ಮನೆತನದ ಮೂಲ ಪುರುಷ ಕೊಂಗುಣಿವರ್ಮ ಮಾಧವನ ಮಗನಾದ ಮೊದಲನೆಯ ಮಾಧವನ ಅಗಾಧ ಪಾಂಡಿತ್ಯದ ಬಗ್ಗೆ ಗುಮ್ಮರೆಡ್ಡಿಪುರದ ಶಾಸನದಲ್ಲಿ ಮಾಹಿತಿ ಸಿಕ್ಕುತ್ತದೆ. 'ದತ್ತಕ ಸೂತ್ರವೃತ್ತಿ' ಈತನದೆಂದು ತಿಳಿಯಲಾಗಿತ್ತು; ಆದರೆ ಈಗ ಅದು ಕನ್ನಡಕೃತಿಯಲ್ಲ ವೆಂದು ಭಾವಿಸಲಾಗಿದೆ. ಈ ಮಾಧವನ ಮಗ ಹರಿವರ್ಮ ಅನೇಕ ಶಾಸ್ತ್ರಗಳಲ್ಲಿ ಪ್ರಖ್ಯಾತನಾದವನು ಎಂದು ಪೆನುಗೊಂಡೆ ಶಾಸನ ತಿಳಿಸುತ್ತದೆ. ಈತನ ಮಗನಾದ ಎರಡನೆಯ ಮಾಧವನ ಶಾಸ್ತ್ರಾಭ್ಯಾಸದ ಬಗ್ಗೆಯೂ ಉಲ್ಲೇಖವಿದೆ. ಇಂಥ ವಂಶದಲ್ಲಿ ವಿದ್ಯೆ ವಿನಯಗಳಿಗೆ ಹೆಸರಾಗಿ ಹುಟ್ಟಿದವನು ಅವಿನೀತನ ಮಗ ದುರ್ವಿನೀತ.

ಪೂಜ್ಯಪಾದ, ಗಂಗರ ದೊರೆ ದುರ್ವಿನೀತನ ಗುರುವೆಂದು ಬಿ. ಎಲ್. ರೈಸ್ ೧೮೯೦ರಲ್ಲಿ ಹೇಳಿದರು.[255] ಅವರು ಹೆಬ್ಬೂರು ಶಾಸನವನ್ನು ಅದಕ್ಕೆ ಆಧಾರವಾಗಿಟ್ಟು ಕೊಂಡಿದ್ದರು. 'ಶಬ್ದಾವತಾರ ದೇವಭಾರತೀ ನಿಬದ್ಧ ಬೃಹತ್‌ಪಥಃ' ಎಂಬ ದುರ್ವಿ ನೀತನ ಗೌರವಪೂರ್ವಕ ವಿಶೇಷಣವನ್ನು "Restricting himself to the path of greatness through the instruction of the divine who was the author of Sabdavatara" ಎಂದು ಅರ್ಥೈಸಿದರು. ೧೯೦೯ರಲ್ಲೂ ರೈಸ್ ಇದೇ ಅಭಿಪ್ರಾಯವನ್ನು ತಳೆದಿದ್ದರು.[256]

೧೯೧೨ರಲ್ಲಿ ಆರ್. ನರಸಿಂಹಾಚಾರ್ಯರು[257] ಗುಮ್ಮರೆಡ್ಡಿಪುರದ ಶಾಸನದ 'ಶಬ್ದಾವತಾರಕಾರೇಣ ದೇವಭಾರತೀನಿಬದ್ಧ ವಡ್ಡಕಥೇನ' ಎಂಬ ವಾಕ್ಯದ ಆಧಾರ ದಿಂದ ಹೆಬ್ಬೂರು ಶಾಸನದ 'ದೇವಭಾರತೀನಿಬದ್ಧ ಬೃಹತ್ಪಥಃ' ಎಂಬುದನ್ನು 'ದೇವ ಭಾರತೀನಿಬದ್ಧ ಬೃಹತ್ಕಥಃ' ಎಂದು ಸರಿಯಾಗಿ ಓದಿದ್ದರಿಂದಾಗಿ 'ಶಬ್ದಾವತಾರ' ಮತ್ತು 'ಬೃಹತ್ಕಥೆ'ಗಳನ್ನು ದುರ್ವಿನೀತ ಬರೆದನೆಂಬ ಅಂಶವೂ ಪೂಜ್ಯಪಾದ ಮತ್ತು ದುರ್ವಿನೀತರ ಗುರುಶಿಷ್ಯ ಸಂಬಂಧವನ್ನು ಹೇಳಲು ತಕ್ಕ ಆಧಾರಗಳು ಇಲ್ಲವೆಂಬ ಅಂಶವೂ ಬೆಳಕಿಗೆ ಬಂದಿತು.

ನಲ್ಲಾಲ ತಾಮ್ರಪಟಗಳಲ್ಲಿ ಗಂಗದೊರೆ ದುರ್ವಿನೀತನ ಪಾಂಡಿತ್ಯ ಮತ್ತು ಸದ್ಗುಣ ಗಳನ್ನು ಹೀಗೆ ವರ್ಣಿಸಲಾಗಿದೆ:

"ಅನೇಕ ಕಾವ್ಯ ಕಥಾನಾಟಕ ಪ್ರಣಯನ ಪ್ರರೂಢ ಪಾಟವೇನ, ನೀತಿಶಾಸ್ತ್ರ

ಗ್ರಂಥಾರ್ಥಪ್ರಯೋಗಪ್ರತಿಪಾದನಂ ಪ್ರತಿಪ್ರತ್ಯಕ್ಷ ವಿಷ್ಣುಗುಪ್ತೇನ, ಗಾಂಧರ್ವನಾಟ್ಯ ಶಾಸ್ತ್ರವ್ಯಾಖ್ಯಾನ ವಿನಿಯೋಗಂ ಪ್ರತಿಸಮತಿಶಯಿತ ತುಂಬುರುನಾರದ ಭರತರೇವ ಕಂಬಳಾಚಾರ್ಯೇಣ, ಹಸ್ತಿಶಿಕ್ಷಾಶ್ವಶಿಕ್ಷಾವಿಜ್ಞಾನವಿನಿಯೋಜನಂ, ಪ್ರತಿಸಮತುಲಿತ ರಾಜಪುತ್ರ ಶಾಲಿಹೋತ್ರೇಣ, ಅಸ್ತ್ರೋಪಾಸ್ತ್ರಾದಿಪ್ರಹರಣ ವಿದ್ಯಾಭಿಯೋಗಂ ಪ್ರತಿ ಸಮುಕ್ಷೀಕೃತ ಪರುಶುರಾಮೇಣ, ಪುರುಷಲಕ್ಷಣ ಶಾಸ್ತ್ರವಿಧೀನ್ ಪ್ರತಿಸಾಕ್ಷಾತ್ಸಮುದ್ರ ಸೂರಿಣಾ, ಆಯುರ್ವೇದ ವಿಜ್ಞಾನಂ ಪ್ರತಿಸದೃಶಾತ್ರೇಯ ಧನ್ವಂತರೀಚರಕೇನ.... ಅರಿನರಪತಿ ಶ್ರೀ ದುರ್ವಿನೀತ ನಾಮಧೇಯೇನ."

ಗುಮ್ಮರೆಡ್ಡಿಪುರದ ಶಾಸನದಲ್ಲಿ ದುರ್ವಿನೀತನನ್ನು ಹೀಗೆ ಸ್ತುತಿಸಲಾಗಿದೆ :

"ಶಬ್ದಾವತಾರಕಾರೇಣ ದೇವಭಾರತೀನಿಬದ್ಧ ವಡ್ಡಕಥೇನ ಕಿರಾತಾರ್ಜುನೀಯೇ ಪಂಚದಶಸರ್ಗಟೀಕಾಕಾರೇಣ ದುರ್ವಿನೀತನಾಮಧೇಯೇನ."

ಇದರಿಂದ 'ಶಬ್ದಾವತಾರ' 'ವಡ್ಡಕಥೆ' ಮತ್ತು 'ಕಿರಾತಾರ್ಜುನೀಯ'ದ ಹದಿನೈದ ನೆಯ ಸರ್ಗಕ್ಕೆ ಟೀಕೆ—ಇವು ಈತನ ಕೃತಿಗಳೆಂದು ಸ್ಪಷ್ಟವಾಗುತ್ತದೆ. ಈ ಕೃತಿಗಳ ಭಾಷೆ, ವಿಷಯ ಮತ್ತು ವ್ಯಾಪ್ತಿಗಳ ಬಗೆಗೆ ಇರುವ ಭಿನ್ನಾಭಿಪ್ರಾಯಗಳ ಬಗೆಗೆ ಇನ್ನು ಸ್ವಲ್ಪ ವಿಮರ್ಶಿಸಬಹುದು.

ಪೂರ್ವೋಕ್ತ ಶಾಸನದ ಆಧಾರದಮೇಲೆ 'ಶಬ್ದಾವತಾರ'ದ ಕರ್ತೃ ಪೂಜ್ಯಪಾದ ನೆಂಬ ಸಂಗತಿಯನ್ನು ರೈಸ್ ಮೊದಲು ತಮ್ಮ ಬರೆಹಗಳಲ್ಲಿ ಮುಂದಿಟ್ಟರು. ಇದು ದುರ್ವಿನೀತನ ಕೃತಿ ಎಂದು ಗುಮ್ಮರೆಡ್ಡಿಪುರದ ಶಾಸನದಿಂದ ತಿಳಿದಿದೆ. ಗಂಗ ತಾಮ್ರ ಪಟಗಳ ಪ್ರಕಾರ ಪಾಣಿನೀಯ ವ್ಯಾಕರಣಕ್ಕೆ ವ್ಯಾಖ್ಯೆಯಾದ 'ಶಬ್ದಾವತಾರ'ವೆಂಬ ಒಂದು ವ್ಯಾಕರಣವನ್ನು ದುರ್ವಿನೀತ ಬರೆದನೆಂದು ಆರ್. ನರಸಿಂಹಾಚಾರ್ಯರು ಹೇಳಿದ್ದಾರೆ. ಪೂಜ್ಯಪಾದ ಪಾಣಿನೀಯಕ್ಕೆ ಟೀಕೆ ಬರೆದ ಎಂಬ ವೃತ್ತವಿಲಾಸನ 'ಧರ್ಮ ಪರೀಕ್ಷೆ'ಯ ಹೇಳಿಕೆ ಮತ್ತು ಹುಂಚದ ಶಾಸನದಲ್ಲಿ "ಸಕಲಬುಧನುತಂ ಪಾಣಿನೀಯಸ್ಯ ಭೂಯೋನಾಸ್ಯಂ ಶಬ್ದಾವತಾರಂ ಕೃತ್ವಾ" ಎಂದಿರುವ ಮಾತುಗಳಿಂದ ಪೂಜ್ಯಪಾದ ಪಾಣಿನೀಯಕ್ಕೆ 'ಶಬ್ದಾವತಾರ' ಎಂಬ ಹೆಸರಿನ ಟೀಕೆ ಬರೆದಿರುವುದು ತಿಳಿಯುತ್ತದೆ. ಆದರೆ ಈ ಹಿಂದೆ ಗಮನಿಸಿದ ಶಾಸನದಲ್ಲಿ ದುರ್ವಿನೀತನನ್ನು 'ಶಬ್ದಾವತಾರಕಾರಃ' ಎಂದು ಕರೆಯಲಾಗಿದೆಯಷ್ಟೆ. ಹೀಗಾಗಿ 'ಶಬ್ದಾವತಾರ' ಕರ್ತೃತ್ವದ ಬಗ್ಗೆ ಸಂದೇಹ ಉಂಟಾಗಿದೆ. ಪೂಜ್ಯಪಾದನ 'ಶಬ್ದಾವತಾರ'ವನ್ನು ದುರ್ವಿನೀತನು ಕನ್ನಡಕ್ಕೆ ತಂದಿರ ಬಹುದೆಂದು ಊಹಿಸುವ ಸಾಧ್ಯತೆಯಿದೆ ಎಂಬುದನ್ನು ಬಿ. ಎ. ಸಾಲೆತೊರೆಯವರು ಸೂಚಿಸುತ್ತಾರೆ.[೨೫೮] ಆದರೆ ಆರ್. ನರಸಿಂಹಾಚಾರ್ಯರ ಪ್ರಕಾರ[೨೫೯] ಆ ಕೃತಿ ಪಾಣಿ ನೀಯಕ್ಕೆ ಸಂಸ್ಕೃತದಲ್ಲಿ ಬರೆದ ಟೀಕೆ. 'ಶಬ್ದಾವತಾರ' ಸಂಸ್ಕೃತ ಕೃತಿಯಿರಬಹುದು, ಪೂಜ್ಯಪಾದ ಮತ್ತು ದುರ್ವಿನೀತರ ಈ ಕೃತಿಗಳು ಒಂದು ಮತ್ತೊಂದರ ಪರಿಷ್ಕರಣ ಇಲ್ಲವೆ ಕನ್ನಡ ಅನುವಾದವಿರಬಹುದು, ಈ ಅನುಪಲಬ್ಧಕೃತಿಯ ಬಗ್ಗೆ ಯಾವ ಸ್ಪಷ್ಟ ಉಲ್ಲೇಖಗಳೂ ಸಿಗದಿರುವುದರಿಂದ ಹೆಸರನ್ನು ಗಮನಿಸಿ ಇದರ ವಸ್ತು ವ್ಯಾಕರಣಕ್ಕೆ

ಸಂಬಂಧಿಸಿದ್ದಿರಬಹುದೆಂದು ಮಾತ್ರ ಊಹಿಸಬಹುದು—ಎಂಬ ಅಭಿಪ್ರಾಯ ಈಚೆಗೆ ವ್ಯಕ್ತವಾಗಿದೆ.[260]

ಭಾರವಿಯ ಸಂಸ್ಕೃತ 'ಕಿರಾತಾರ್ಜುನೀಯ'ಕ್ಕೆ ಮಲ್ಲಿನಾಥ, ವಿದ್ಯಾಮಾಧವ ಮುಂತಾದವರು ಬರೆದ ಟೀಕೆಗಳಿಗಿಂತ ದುರ್ವಿನೀತನ ಟೀಕೆ ಪ್ರಾಚೀನತಮವಾದ್ದು ಎಂಬುದೂ ದುರ್ವಿನೀತನ ಬೇರೆ ಕೃತಿಗಳಿಗಿಂತ ಈ ಕೃತಿ ಹೆಚ್ಚು ಬಾರಿ ಉಲ್ಲೇಖಗೊಂಡಿರುವುದೂ ಗಮನಾರ್ಹ. ಈ ಗ್ರಂಥದ ಭಾಷೆ ಕನ್ನಡವೆಂದು ರೈಸ್ ಹೇಳಿದ್ದಾರೆ.[261] ಆದರೆ ಅದು ಊಹೆ. ಪ್ರತಿಯಾಗಿ ಅದು "ಸಂಸ್ಕೃತದಲ್ಲಿ ಇದ್ದಿರಬಹುದೆಂಬ ಸಂಶಯಕ್ಕೆ ಹೆಚ್ಚು ಆಸ್ಪದವಿದೆ" ಎಂದು ರಂ.ಶ್ರೀ. ಮುಗಳಿಯವರು ಹೇಳಿರುವುದು ಹೆಚ್ಚು ಸಂಭಾವ್ಯವಾದ್ದು.[262] ಅಲ್ಲದೆ ಆ ಟೀಕೆ ಹದಿನೈದನೆಯ ಸರ್ಗಕ್ಕೆ ಬರದದ್ದೇ ಅಥವಾ ಹದಿನೈದು ಸರ್ಗಗಳಿಗೆ ಬರೆದದ್ದೇ ಎಂಬ ಬಗೆಗೆ ಕೂಡ ಭಿನ್ನಾಭಿಪ್ರಾಯಗಳಿವೆ. 'ಕಿರಾತಾರ್ಜುನೀಯ'ದ ಹದಿನೈದು ಸರ್ಗಗಳಿಗೆ ಬರೆದ ಟೀಕೆ ಇದಾಗಿರಬೇಕೆಂದು ಬಿ. ಎಲ್. ರೈಸರ ಅಭಿಪ್ರಾಯ.[263] ಆದರೆ ಹದಿನೈದು ಸರ್ಗಗಳಿಗೆ ಬರೆದು ಇನ್ನು ಮೂರನ್ನು ಹಾಗೆಯೇ ಬಿಟ್ಟನೆಂದು ತಿಳಿಯುವುದರಲ್ಲಿ ಅರ್ಥವಿಲ್ಲ. ಅದಕ್ಕೆ ಬದಲಾಗಿ ಚಿತ್ರಬಂಧ, ಚಮತ್ಕಾರಗಳಿಂದ ಕೂಡಿದ 'ಚಿತ್ರಯುದ್ಧವರ್ಣನಂ' ಎಂಬ ಹದಿನೈದನೆಯ ಸರ್ಗಕ್ಕೆ ಮಾತ್ರ ಆತ ಟೀಕೆ ಬರೆದಿರಬೇಕು ಎಂಬುದು ಫ್ಲೀಟರ ಅಭಿಪ್ರಾಯ.[264] ಇದು ಸಂಭಾವ್ಯ.

ದುರ್ವಿನೀತನ ಹೆಸರಿನಲ್ಲಿರುವ ಇನ್ನೊಂದು ಕೃತಿ 'ಬೃಹತ್ಕಥೆ'. ಹೆಬ್ಬೂರು ಶಾಸನದ 'ದೇವಭಾರತೀನಿಬದ್ಧ ಬೃಹತ್ಪಥಃ' ಎಂಬ ಪಾಠವನ್ನು 'ದೇವಭಾರತೀನಿಬದ್ಧ ಬೃಹತ್ಕಥಃ' ಎಂದು ಆರ್. ನರಸಿಂಹಾಚಾರ್ಯರು ಸರಿಗೊಳಿಸಿದ ಮೇಲೆ, ಇದು ದುರ್ವಿನೀತನ ಕೃತಿಯೆಂದು ಸ್ಪಷ್ಟಪಟ್ಟಿತು. ಆರ್. ನರಸಿಂಹಾಚಾರ್ಯರ ಪ್ರಕಾರ ಅದು 'ಬೃಹತ್ಕಥೆ'ಯ ಸಂಸ್ಕೃತ ಅನುವಾದವಾಗಿರಬಹುದು. ಗುಮ್ಮರೆಡ್ಡಿಪುರದ ಶಾಸನದಲ್ಲಿ 'ದೇವಭಾರತೀನಿಬದ್ಧ ವಡ್ಡಕಥೇನ' ಎಂಬ ಮಾತಿದೆ. ಮೂಲಕೃತಿಯಾದ ಪೈಶಾಚೀ ಭಾಷೆಯ ಗುಣಾಢ್ಯನ ಬೃಹತ್ಕಥೆ ಉಪಲಬ್ಧವಿಲ್ಲ. ಅದನ್ನು ಆಧರಿಸಿ ಬರೆದ ನಂತರದ ಸಂಸ್ಕೃತ ಗ್ರಂಥಗಳು 'ಕಥಾಸರಿತ್ಸಾಗರ', 'ಬೃಹತ್ಕಥಾಮಂಜರಿ' ಮತ್ತು 'ಬೃಹತ್ಕಥಾ ಶ್ಲೋಕ ಸಂಗ್ರಹ'. ಈ ಕೃತಿಗಳ ಪಾಠಸಂಪ್ರದಾಯದಿಂದ ಬೇರೆಯಾದ ದಾಕ್ಷಿಣಾತ್ಯ ಪಾಠ ಸಂಪ್ರದಾಯಕ್ಕೆ ಮೂಲವಾದ ಕೃತಿ ಇದಾಗಿದ್ದಿರಬೇಕೆಂಬ ಅಭಿಪ್ರಾಯವಿದೆ. ಈ ಅಭಿಪ್ರಾಯಕ್ಕೆ ಆಧಾರವಾಗಿ ಕೆಳಗಿನ ಮೂರು ಅಂಶಗಳನ್ನು ಗಮನಿಸುತ್ತಾರೆ.[265]

(೧) ತಮಿಳಿನ 'ಪೆರುಂಗತ್ತೈ'ನಲ್ಲಿ ಈ ದಾಕ್ಷಿಣಾತ್ಯ ಸಂಪ್ರದಾಯದ ಅಂಶಗಳಿವೆ. ಈ 'ಪೆರುಂಗತ್ತೈ'ಗೆ ಮೂಲ ದುರ್ವಿನೀತನ ಕೃತಿಯೇ ಇರಬೇಕು. ಉದಯನನಿಗೆ ದೊರಕಿರುವ ಪ್ರಾಮುಖ್ಯ ಮತ್ತು ಇಲ್ಲಿಯ ಜೈನಮತೀಯ ಅಂಶಗಳು ಪೆರುಂಗತ್ತೈನ ವೈಶಿಷ್ಟ್ಯಗಳು. ದುರ್ವಿನೀತನ ಕಾವ್ಯ 'ಪೆರುಂಗತ್ತೈ'ಗೆ ಮಾತೃಕೆಯಾಗಿದ್ದರೆ ಈ ಮಾತು ದುರ್ವಿನೀತನ 'ಬೃಹತ್ಕಥೆ'ಗೂ ಅನ್ವಯಿಸುತ್ತದೆ.

(೨) ಭಾಸನ 'ಸ್ವಪ್ನವಾಸವದತ್ತಾ', 'ಪ್ರತಿಜ್ಞಾಯೌಗಂಧರಾಯಣ'ಗಳ ವಸ್ತು

'ಪೆರುಂಗತೈ'ನಲ್ಲಿ ಕಂಡುಬರುವುದರಿಂದ ಭಾಸನಿಗೆ ಪರಿಚಯವಿದ್ದ ಪಾಠ ದುರ್ವಿನೀತನದೇ ಆಗಿರಬೇಕು. ಗುಣಾಢ್ಯನ ಕೃತಿ ಉಪಲಬ್ಧವಿಲ್ಲದಿರುವಾಗ ಅದರ ಸಂಸ್ಕೃತ ರೂಪಗಳಿನ್ನೂ ಬಂದಿರದ ಕಾಲದಲ್ಲಿ 'ವಡ್ಡಕಥೆ'ಯ ಪಾಠವೇ ಹೆಚ್ಚು ಜನಪ್ರಿಯವಾಗಿದ್ದಿರಬೇಕು.

(೩) ಭೋಜನ 'ಶೃಂಗಾರ ಪ್ರಕಾಶ'ದಲ್ಲಿ ಬರುವ 'ಬೃಹತ್ಕಥೆ'ಗೆ ಸಂಬಂಧಿಸಿದ ಏಳು ಉಲ್ಲೇಖಗಳನ್ನು ಗಮನಿಸಿ ವಿ. ರಾಘವನ್ ಈ ವಿಷಯಕ್ಕೆ ಕೆಲವು ಹೊಸ ಅಂಶಗಳನ್ನು ಸೇರಿಸುತ್ತಾರೆ. ಈ ಉಲ್ಲೇಖಗಳಲ್ಲಿ ಕಾಣುವ ಕಥಾಸಂದರ್ಭಗಳು ಈಗಿರುವ ಬೇರೆ ಪಾಠಸಂಪ್ರದಾಯಗಳಲ್ಲಿ ಕಾಣದಿರುವುದರಿಂದ ಅನುಷ್ಟುಪ್‌ನಲ್ಲಿದ್ದ ಬೇರೊಂದು ಪಾಠವನ್ನು ಭೋಜ ನೋಡಿದ್ದಿರಬೇಕು. ದುರ್ವಿನೀತನ 'ಬೃಹತ್ಕಥೆ'ಯನ್ನು ಬಿಟ್ಟರೆ ಇನ್ನಾವ ಪ್ರಾಚೀನ ಪಾಠವೂ ಈವರೆಗೆ ತಿಳಿದುಬಂದಿಲ್ಲ. ಆದ್ದರಿಂದ ಈ ಶ್ಲೋಕ ಮತ್ತು ಕಥೆಯ ಸಂದರ್ಭಗಳು ದುರ್ವಿನೀತನ ಸಂಸ್ಕೃತ 'ಬೃಹತ್ಕಥೆ'ಗೆ ಸಂಬಂಧಪಟ್ಟಿದ್ದಿರಬೇಕು. ಕಥಾಂಶದಲ್ಲಿ ಕಾಣಬರುವ ಅನೇಕ ವೈಶಿಷ್ಟ್ಯಗಳ ಆಧಾರಗಳಿಂದ " 'ಕಥಾಪೀಠ' ಮತ್ತು 'ಕಥಾಮುಖ' ಕಥೆಗಳು ವಿವರವಿವರವಾಗಿವುಳ್ಳಂತಹ ಬೇರೊಂದು ಸಂಸ್ಕೃತ ಬೃಹತ್ಕಥೆಯಿದ್ದಿತೆಂದು ತೀರ್ಮಾನಿಸಬಹುದು. ಈ ಬೇರೊಂದು 'ಬೃಹತ್ಕಥೆ' ೬ನೆಯ ಶತಮಾನದಲ್ಲಿದ್ದ ಗಂಗ ಅರಸು ದುರ್ವಿನೀತನದಾಗಿದ್ದು, ಸೋಮದೇವ, ಕ್ಷೇಮೇಂದ್ರ ಮತ್ತು ಬುಧಸ್ವಾಮಿಗಳಿಂದ ಭಿನ್ನ ಮತ್ತು ಪ್ರಾಚೀನವಾದ ಅದು ತಮಿಳು 'ಪೆರುಂಗತೈ'ಗೆ ನೇರ ಮಾತೃಕೆಯಾಗಿರಬಹುದು"[೨೬೬]—ಮುಂತಾಗಿ ಅಭಿಪ್ರಾಯಪಡಲಾಗಿದೆ.

'ದೇವಭಾರತೀನಿಬದ್ಧ' ಎಂಬ ಮಾತನ್ನು ಗಮನಿಸಿ ಈ ಕೃತಿಯ ಭಾಷೆ ಸಂಸ್ಕೃತವೆಂದೂ 'ದೇವಭಾರತಿ' ಎಂದರೆ ಸಂಸ್ಕೃತ ಎಂಬುದಕ್ಕೆ ಆಧಾರವಿಲ್ಲವಾದ್ದರಿಂದ ಅರ್ಧಮಾಗಧಿಯಾಗಿರುವ ಸಂಭವವಿದೆಯೆಂಬ ಅಭಿಪ್ರಾಯವೂ ಇದೆ.[೨೬೭] ಆದರೆ ಸಂಸ್ಕೃತ ದೇವವಾಣಿಯೆಂದು ಪ್ರಸಿದ್ಧವಾಗಿದೆ, ಆದ್ದರಿಂದ ದೇವಭಾರತಿ ಎಂದರೆ ಸಂಸ್ಕೃತವೆಂಬ ಆರ್. ನರಸಿಂಹಾಚಾರ್ಯರ ಮಾತು ಸರಿಯಾದುದು—ಎಂದು ಪ್ರಾಕೃತ ಭಾಷಾತಜ್ಞ ಉಪಾಧ್ಯೆ ಅವರು ಹೇಳುತ್ತಾರೆ.

ಪೂರ್ವೋಕ್ತ ಕೃತಿಗಳ ಕರ್ತೃ ದುರ್ವಿನೀತನೆಂಬ ವಿಷಯದಲ್ಲಿ ಕೆ. ವೆಂಕಟರಾಯಾಚಾರ್ ಸಂದೇಹವೆತ್ತುತ್ತಾರೆ.[೨೬೮] ನಲ್ಲಾಲ ತಾಮ್ರಪಟ ಮತ್ತು ಗುಮ್ಮರೆಡ್ಡಿಪುರದ ಶಾಸನ ಈ ಎರಡೂ ಒಂದೇ ಸಂವತ್ಸರದಲ್ಲಿ ಲಿಖಿತವಾಗಿದ್ದರೂ ನಲ್ಲಾಲ ತಾಮ್ರಪಟದಲ್ಲಿ ಈ ಕೃತಿಗಳ ಪ್ರಸ್ತಾಪವಿಲ್ಲ. ದುರ್ವಿನೀತನ ಮೊಮ್ಮಗನ ಮಗ ಭೂವಿಕ್ರಮನ ಬೆದಿರೂರ ತಾಮ್ರಪಟದಲ್ಲಿ ದುರ್ವಿನೀತನ ಬಗ್ಗೆ ಹೇಳುತ್ತ, 'ಕಾರಿತ ಕಿರಾತಾರ್ಜುನೀಯ ಟೀಕಾಕಾರೋ' ಎಂದು ಹೇಳಲಾಗಿದೆ. ಇಲ್ಲಿ ಕೃತ ಎನ್ನುವುದಕ್ಕೆ ಬದಲಾಗಿ 'ಕಾರಿತ' ಎಂದಿರುವುದನ್ನು ಗಮನಿಸಿ ಅನ್ಯರಿಂದ ಇದನ್ನು ಬರಸಿರಬಹುದು, ಈ ಮಾತು ಅವನ ಉಳಿದ ಎರಡು ಕೃತಿಗಳಿಗೂ ಅನ್ವಯಿಸುತ್ತದೆ ಎನ್ನುತ್ತಾರೆ. ಆದರೆ ಬೆದಿರೂರ ತಾಮ್ರಪಟದ ನೈಜತೆಯ ಬಗ್ಗೆ ಸಂದೇಹವಿದೆ.

ಗಂಗದೊರೆ ದುರ್ವಿನೀತನೇ 'ಕವಿರಾಜಮಾರ್ಗ'ಕಾರ ಹೇಳಿರುವ ದುರ್ವಿನೀತನೆಂಬ ಗ್ರಹಿಕೆಯ ಆಧಾರದ ಮೇಲೆ ಈತನ ವಿಷಯವಾಗಿ ತಿಳಿದುಬಂದ ಮಾಹಿತಿಗಳನ್ನು ಕೆಲ ಮಟ್ಟಿಗೆ ಈವರೆಗೆ ಗಮನಿಸಿದೆವು. ಆದರೆ ಈ ಸಮೀಕರಣದ ಬಗ್ಗೆ ಈಚೆಗೆ ಅನುಮಾನವೂ ವ್ಯಕ್ತಪಟ್ಟಿದೆ.

ಕವಿರಾಜಮಾರ್ಗೋಕ್ತ ಗದ್ಯಕಾರ ದುರ್ವಿನೀತ ಮತ್ತು ಗಂಗರಾಜ ದುರ್ವಿನೀತ ಇವರ ಅಭಿನ್ನತೆಯನ್ನು ಜೆ. ಎಫ್. ಫ್ಲೀಟ್ ಮೊದಲುಗೊಂಡು ಈವರೆಗೆ ಎಲ್ಲರೂ ಈ ಸಂಬಂಧದ ಉಲ್ಲೇಖಗಳಲ್ಲೆಲ್ಲ ಸಾಮಾನ್ಯವಾಗಿ ಒಪ್ಪಿಕೊಂಡು ಬರುತ್ತಿದ್ದಾರೆ.[269] ಆದರೆ ಈಚೆಗೆ "'ಕವಿರಾಜಮಾರ್ಗ'ದಲ್ಲಿ ಬಂದಿರುವ ದುರ್ವಿನೀತನು ಗಂಗರ ೬ನೆಯ ಶತಮಾನದ ದುರ್ವಿನೀತನೇ ಆಗಿರಬೇಕೆಂದೇನೂ ಇಲ್ಲ"[270] ಎಂದೂ "ಅವನ ಕಿರಾತಾರ್ಜುನೀಯದ ೧೫ನೇ ಸರ್ಗಕ್ಕೆ ಬರೆದಿರುವನೆಂದು ಹೇಳಲಾದ ಟೀಕೆಯು ಗದ್ಯಕಥೆಯಂತೂ ಅಲ್ಲ. ಕವಿರಾಜಮಾರ್ಗಕಾರ ಹೇಳುವ ದುರ್ವಿನೀತನೂ ಇವನೂ ಒಂದೇ ಆಗಿದ್ದರೆ ಇವನು ಬರೆದ ಕನ್ನಡಕೃತಿ ಬೇರೆಯೇ ಆಗಿರಬೇಕು. ಇವರಿಬ್ಬರೂ ಬೇರೆಯೇ ವ್ಯಕ್ತಿಗಳು"[271] ಎಂದೂ ಇನ್ನೊಂದು ಅಭಿಪ್ರಾಯ ವ್ಯಕ್ತಪಟ್ಟಿದೆ. ಈ ಗ್ರಹಿಕೆಗೆ ಕಾರಣಗಳು : ಗಂಗರ ದೊರೆ ದುರ್ವಿನೀತ ಬರೆದ ಕೃತಿಗಳು ಕನ್ನಡದಲ್ಲಿದ್ದುವೆಂಬ ಸಂಗತಿ ತರ್ಕಸಮ್ಮತವಲ್ಲ ; ಆ ಹೆಸರಿನ ಬೇರೆ ದೊರೆಗಳೂ ಇದ್ದರು. ಉದಾಹರಣೆಗೆ ಸು. ೮೦೦ರಲ್ಲಿದ್ದ ದುರ್ವಿನೀತ ಎಱತಿಅಪ್ಪೊನ್ ಎಂಬವನ ಹೆಸರು ದೇವರಹಳ್ಳಿಯ ಶಿಲಾಶಾಸನದಲ್ಲಿದೆ.[272] ಅಲ್ಲದೆ ಈಚಿನ ೯೫೦ ಮತ್ತು ೯೫೬ರ ಶಾಸನಗಳಲ್ಲಿ ಕೂಡ ಇನ್ನಿಬ್ಬರು ದುರ್ವಿನೀತರ ಹೆಸರುಗಳಿವೆ.

ದೇವರಹಳ್ಳಿ ಶಿಲಾಶಾಸನ (ಸು. ೮೦೦)ದಲ್ಲಿ ಉಕ್ತನಾದ ದುರ್ವಿನೀತ, 'ಕವಿರಾಜಮಾರ್ಗ'ದಲ್ಲಿ ಉಕ್ತನಾದ ದುರ್ವಿನೀತನಾಗಿರುವ ಸಂಭವ ತೀರಕಡಿಮೆ ; ಕವಿರಾಜಮಾರ್ಗಕಾರ ಹೇಳುವ ಗದ್ಯಕವಿ ಪ್ರಾಚೀನರ ಸಾಲಿಗೆ ಸೇರಿದವ ; ಶಾಸನೋಕ್ತನಾದ ವ್ಯಕ್ತಿ 'ಕವಿರಾಜಮಾರ್ಗ'ದ ರಚನೆಗೆ ಸ್ವಲ್ಪವೇ ಮೊದಲಿದ್ದವನು. ಗಂಗರ ದುರ್ವಿನೀತನು ಬರೆದ ಸಂಸ್ಕೃತ ಅಥವಾ ಕನ್ನಡ ಕೃತಿಗಳು ಈಗ ನಮ್ಮ ಮುಂದಿಲ್ಲದಿದ್ದರೂ ಆತ ಸಾಹಿತ್ಯಕ ಕ್ಷೇತ್ರದಲ್ಲಿ ಗಣ್ಯನಾಗಿದ್ದನೆಂಬುದನ್ನು ಶಾಸನಗಳು ನಿರ್ವಿವಾದವಾಗಿ ಸಾರುತ್ತಿವೆ. ಇತರ ದುರ್ವಿನೀತರ ಯಾವುದೇ ಭಾಷೆಯ ಸಾಹಿತ್ಯಾಸಕ್ತಿಯ ಬಗೆಗೆ ನಮಗೆ ಏನೂ ತಿಳಿದುಬಂದಿಲ್ಲ. ಹೀಗಾಗಿ ಪ್ರಬಲವಾದ ಕಾರಣಗಳು ದೊರೆಯುವವರೆಗೆ ಕವಿರಾಜಮಾರ್ಗಕಾರ ಹೇಳಿದ ಗದ್ಯಕವಿ ದುರ್ವಿನೀತ ಗಂಗದೊರೆ ದುರ್ವಿನೀತನೆಂದೇ ಪ್ರಾಚೀನವಿಮರ್ಶಕರನ್ನು ಅನುಸರಿಸಿ ವ್ಯವಹರಿಸುವುದು ಉತ್ತಮಪಕ್ಷ.

ಶ್ರೀವಿಜಯ : 'ಕವಿರಾಜಮಾರ್ಗ'ಕಾರ ಹೆಸರಿಸಿದ ಪದ್ಯಕವಿಗಳಲ್ಲಿ ಶ್ರೀವಿಜಯನ ಹೆಸರೂ ಒಂದು. 'ಕವಿರಾಜಮಾರ್ಗ'ಕಾರ ಕನ್ನಡದ ಆದ್ಯಕಾವ್ಯಕ್ಕೆ ಲಕ್ಷ್ಯವಾದ ಕವಿ ಕೃತಿಗಳನ್ನು ಹೇಳುವಲ್ಲಿ ಮೊದಲನೆಯದಾಗಿ ಶ್ರೀವಿಜಯನನ್ನು ಹೆಸರಿಸಿದ್ದಾನೆ. ಪರಮ ಶ್ರೀವಿಜಯ ಅಥವಾ ಪರಮ ಶ್ರೀವಿಜಯಕವೀಶ್ವರ ಎಂಬ ಪದಪ್ರಯೋಗದ ಔಚಿತ್ಯ

ವನ್ನು ಗಮನಿಸಿದರೆ, ಆದ್ಯಕವಿಗಳ ಸಾಲಿನಲ್ಲಿ ಶ್ರೀವಿಜಯನಿಗೆ ಒಳ್ಳೆಯ ಸ್ಥಾನವಿದ್ದಿರಬೇಕೆಂದು ಅಭಿಪ್ರಾಯವಾಗುತ್ತದೆ.

ಸು. ೯೧೫ರ ಕಡಪಾಜಿಲ್ಲೆಯ ದಾನವುಲಪಾಡು ಎಂಬ ಗ್ರಾಮದ ಶಾಸನವೊಂದರಲ್ಲಿ ಶ್ರೀವಿಜಯ ದಂಡನಾಥನೆಂಬುವನ ಉಲ್ಲೇಖವಿದೆ. ಈತನನ್ನು 'ಅನುಪಮಕವಿ', 'ಅಜಿನಿಂಗೋಜ' ಎಂದು ಅಲ್ಲಿ ಹೊಗಳಿದೆ. ಈತ ರಾಷ್ಟ್ರಕೂಟರಾಜನಾದ ಮುಮ್ಮಡಿ ಇಂದ್ರ (೯೧೫–೯೧೭)ನಲ್ಲಿ ದಂಡನಾಯಕನಾಗಿದ್ದಂತೆ ತಿಳಿದುಬರುತ್ತದೆ.[273] ಶ್ರವಣಬೆಳಗೊಳದ ೬೭ನೆಯ ಶಾಸನ (೧೧೨೯)ದಲ್ಲಿ ಒಬ್ಬ 'ಶ್ರೀವಿಜಯ'ನ ಉಲ್ಲೇಖವಿದೆ. ಈತನು ಒಬ್ಬ ಗಂಗರಾಜನಿಗೆ ಗುರುವಾಗಿದ್ದಂತೆ ತಿಳಿದುಬರುತ್ತದೆ.[274]

ಈಚಿನ ಕನ್ನಡ ಕಾವ್ಯಗಳಲ್ಲಿ ದುರ್ಗಸಿಂಹ (೧೦೩೧) ತನ್ನ 'ಪಂಚತಂತ್ರ'ದಲ್ಲಿ ಒಬ್ಬ ಶ್ರೀವಿಜಯನನ್ನು

ಶ್ರೀವಿಜಯರ ಕವಿಮಾರ್ಗಂ
ಭಾವಿಪ ಕವಿಜನದ ಮನಕೆ ಕನ್ನಡಿಯುಂ ಕೆ
ಯ್ದೀವಿಗೆಯುಮಪ್ಪುದದಱಿಂ
ಶ್ರೀವಿಜಯರ್ ದೇವರವರನೇವಣ್ಣಿಪುದೋ ॥ (೧–೨೧)

ಎಂಬ ಪದ್ಯದಲ್ಲಿಯೂ, ನಾಗವರ್ಮನ 'ವರ್ಧಮಾನಪುರಾಣ' (ಸು. ೧೧೪೫ ೧೦೪೨)ದಲ್ಲಿ ಒಬ್ಬ ಶ್ರೀವಿಜಯನನ್ನು

ಅಘವಿಘಟನಕಾರಣಮು
ಮ್ಮಘಟಿತ ಪದಬಂಧ ಬಂಧುರಾಳಂಕೃತಿಯಂ
ಲಘುವಾಗೆ ಪೊಗೞೆ ಪೇೞ್ದಂ
ರಘುವಂಶ ಮಹಾಪುರಾಣಮಂ ಶ್ರೀವಿಜಯಂ ॥ (೧–೨)

ಎಂಬ ಪದ್ಯದಲ್ಲಿಯೂ ಉಲ್ಲೇಖಮಾಡಿದೆ. ಕೇಶಿರಾಜನ (ಸು. ೧೨೬೦) 'ಶಬ್ದಮಣಿದರ್ಪಣ'ದಲ್ಲಿ '....ಶ್ರೀವಿಜಯರ ಪೊನ್ನನ ಪಂಪನ ಸುಜನೋತ್ತಂಸನ ಸುಮಾರ್ಗಮಿದಱೊಳೆ.ಲಕ್ಷ್ಯಂ' ಎಂದೂ ಮಂಗರಸನ (೧೫೦೮) 'ನೇಮಿಜಿನೇಶಸಂಗತಿ'ಯಲ್ಲಿ "ದೇವಚಂದ್ರಪ್ರಭರನು ಕೊಂಡಾಡಿದ ಶ್ರೀವಿಜಯರ...." ಎಂದೂ ಪಿರಿಯಾಪಟ್ಟಣದ ದೊಡ್ಡಯ್ಯನ 'ಚಂದ್ರಪ್ರಭಸಾಂಗತ್ಯ'ದಲ್ಲಿ "ಚಂದ್ರಪ್ರಭಪುರಾಣವ ಪೇೞ್ದ ವಿಜಯಕವೀಂದ್ರ" ಎಂದೂ ಬೇರೆ ಉಲ್ಲೇಖಗಳೂ ಕಾಣುತ್ತವೆ.

ಹೀಗೆ 'ಕವಿರಾಜಮಾರ್ಗ'ದ ನಂತರದಲ್ಲಿ ಶಾಸನಗಳಲ್ಲಿಯೂ ಕಾವ್ಯಗಳಲ್ಲಿಯೂ ಉಲ್ಲೇಖಿಸಿರುವ ಶ್ರೀವಿಜಯ ಎಂಬ ಹೆಸರು ಒಬ್ಬನೇ ವ್ಯಕ್ತಿಯನ್ನು ಕುರಿತದ್ದೇ ಅಥವಾ ಹಲವರನ್ನು ಕುರಿತದ್ದೇ—ಎನ್ನುವುದು ವಿಚಾರಣೀಯವಾದ ವಿಷಯವಾಗಿದೆ. 'ಕವಿರಾಜಮಾರ್ಗ'ದ ಕರ್ತೃ ಕೂಡ ಶ್ರೀವಿಜಯನೆಂಬ ಒಂದು ಸಮಸ್ಯೆಯೂ ಈ ವಿವೇಚನೆಯಲ್ಲಿ ಹೆಣೆದುಕೊಂಡಿದೆ. ಶಾಸನಗಳಲ್ಲಿ ಉಲ್ಲೇಖಗೊಂಡ ಶ್ರೀವಿಜಯರು ಕವಿರಾಜ

ಮಾರ್ಗದ ಕಾಲಕ್ಕೆ ಈಚೆಯವರೆಂದೂ 'ಚಂದ್ರಪ್ರಭಪುರಾಣ'ದ ಕರ್ತೃವಾದ ಶ್ರೀವಿಜಯನೇ ಕವಿರಾಜಮಾರ್ಗದಲ್ಲಿ ಹೇಳಿರುವ ಶ್ರೀವಿಜಯನಿರಬಹುದೆಂದೂ ಆರ್. ನರಸಿಂಹಾಚಾರ್ಯರ ಅಭಿಪ್ರಾಯ. "ಈತ ನೃಪತುಂಗನ ಆಸ್ಥಾನದಲ್ಲಿ ಸಭಾಸದನಾಗಿದ್ದಂತೆಯೂ ಕವಿರಾಜಮಾರ್ಗಾಲಂಕಾರವನ್ನು ನೃಪತುಂಗನ ಹೆಸರಿನಲ್ಲಿ ಬರೆದಂತೆಯೂ ಊಹಿಸುವುದಕ್ಕೆ ಕಾರಣಗಳಿವೆಯೆಂದು ತೋರುತ್ತದೆ"—ಎನ್ನುತ್ತಾರೆ.[275]

ಕೃತಕೃತ್ಯಮಲ್ಲವಲ್ಲಭ, ನೃಪತುಂಗದೇವ, ಶ್ರೀವಿಜಯ ಎಂಬಿವುಗಳು ಒಬ್ಬನಿಗೆ ಇದ್ದ ಪರ್ಯಾಯ ನಾಮಗಳು, ಶ್ರೀವಿಜಯನೇ ನೃಪತುಂಗದೇವನೆಂಬುದು ವ್ಯಾಖ್ಯಾನಕಾರರ ಬರವಣಿಗೆಯಿಂದ ಸ್ಪಷ್ಟವಾಗಿದೆ ಎನ್ನುತ್ತಾರೆ ಡಿ. ಕೆ. ಭೀಮಸೇನರಾವ್.[276] ಅವರ ಪ್ರಕಾರ 'ಕವಿರಾಜಮಾರ್ಗ'ದಲ್ಲಿ ಹೇಳಲಾದ ಈ ಶ್ರೀವಿಜಯ ಆ ಗ್ರಂಥದ ಕರ್ತೃವೂ ಆಗಿದ್ದಾನೆ. ತನ್ನ ಹೆಸರನ್ನು ತಾನೇ ಪದ್ಯಕವಿಗಳ ಸಾಲಿನಲ್ಲಿ ಹೇಳಿರುವುದು ಯುಕ್ತವಲ್ಲ ಎಂಬ ಆಕ್ಷೇಪಣೆ ಬಲವತ್ತರವಾಗಿಲ್ಲ ಎಂದು ತಳ್ಳಿಹಾಕಿ, ಆತ ಆಗಿನ ಕಾಲದಲ್ಲಿ ಸರ್ವಮಾನ್ಯವಾದ ಕವಿಯಾಗಿ ಎಲ್ಲರ ಮಾನ್ಯತೆ ಪಡೆದಿದ್ದ; ಆದ್ದರಿಂದ ಹೀಗೆ ಹೇಳಿಕೊಳ್ಳುವುದರಲ್ಲಿ ಯಾವ ನ್ಯೂನತೆಯೂ ಇಲ್ಲ; ಅನೇಕ ಕವಿಗಳ ಆತ್ಮಶ್ಲಾಘನೆಗಿಂತ ಇದು ಅಧಿಕವಾಗಿಲ್ಲ; ಆದ್ದರಿಂದ ಕೇಶಿರಾಜ, ದುರ್ಗಸಿಂಹ ಹೆಸರಿಸಿದ ಶ್ರೀವಿಜಯ ಈತನೇ ಎಂದು ಅವರು ಹೇಳುತ್ತಾರೆ.

ಕವಿರಾಜಮಾರ್ಗೋಕ್ತನೂ ಅದರ ಕರ್ತೃವೂ ಆಗಿರಬಹುದಾದ ಶ್ರೀವಿಜಯನೇ 'ಚಂದ್ರಪ್ರಭ ಪುರಾಣ'ದ ಕರ್ತೃವೂ ಆಗಿರಬಹುದೆಂಬ ಆರ್. ನರಸಿಂಹಾಚಾರ್ ಅವರ ಊಹೆಯನ್ನು ಕೆಲವರು ಒಪ್ಪಿದ್ದಾರೆ.[277] ಭಗವತೀ ಆರಾಧನೆಯ ಸಂಸ್ಕೃತ ವ್ಯಾಖ್ಯಾನಕಾರನಾದ ಶ್ರೀವಿಜಯನೇ ಕನ್ನಡದಲ್ಲಿ 'ವಡ್ಡಾರಾಧನೆ'ಯನ್ನು ರಚಿಸಿರಬಾರದೇಕೆ? ಎಂದೂ ಈತನೇ ನೃಪತುಂಗ, ದುರ್ಗಸಿಂಹ, ಕೇಶಿರಾಜ ಹೇಳಿದ ಶ್ರೀವಿಜಯನಿರಬಹುದೇ—ಎಂದು ಶಿ. ಚಿ. ನಂದೀಮಠ ಅವರು ಈಚೆಗೆ ಸಂದೇಹಿಸಿದ್ದಾರೆ.[278]

ಸಮಂತಭದ್ರ, ಕವಿಪರಮೇಷ್ಠಿ ಮತ್ತು ಪೂಜ್ಯಪಾದ ಈ ಮೂವರೂ ಕ್ರಮವಾಗಿ "ಕವಿರಾಜಮಾರ್ಗ'ದಲ್ಲಿ ಹೇಳಲಾದ ಪರಮಶ್ರೀವಿಜಯ, ಕವೀಶ್ವರ ಮತ್ತು ಪಂಡಿತ ನಿರಬೇಕೆಂಬುದಾಗಿ ಊಹಿಸುವ ದ. ರಾ. ಬೇಂದ್ರೆಯವರು, ಸಮಂತಭದ್ರ, ಕವಿಪರಮೇಷ್ಠಿ, ಪೂಜ್ಯಪಾದರು ತಮ್ಮ ಬಿರುದುಗಳಾದ ಶ್ರೀವಿಜಯ, ಕವೀಶ್ವರ, ಪಂಡಿತ ಎಂಬ ಉಪನಾಮಗಳಿಂದ ನೃಪತುಂಗನಿಂದ ಉಲ್ಲೇಖಿತರಾಗಿದ್ದಾರೆ ಎಂದು ತೋರುತ್ತದೆ" —ಎನ್ನುತ್ತಾರೆ.[279] ಈ ಸಮೀಕರಣಗಳನ್ನು ಪೋಷಿಸುವುದಕ್ಕೆ ಆಧಾರಗಳ ಅಗತ್ಯವಿದೆ.

ಚತ್ತಾಣ ಬೆದಂಡೆಗಬ್ಬಗಳ ಶ್ರೀವಿಜಯ, ಕವಿಮಾರ್ಗ-ಕವಿರಾಜಮಾರ್ಗಗಳ ಶ್ರೀವಿಜಯ ಮತ್ತು 'ಚಂದ್ರಪ್ರಭ ಚರಿತೆ'ಯ ಶ್ರೀವಿಜಯ—ಎಂದು ಮೂವರನ್ನು ವಿಂಗಡಿಸುವ ಎಂ. ಎಂ. ಕಲಬುರ್ಗಿಯವರ ವಾದಸರಣಿ ಹೀಗಿದೆ:[280] ಆದ್ಯಕಾವ್ಯಕ್ಕೆ ಲಕ್ಷಣ ಹೇಳುವಲ್ಲಿ ತನ್ನ ಹೆಸರನ್ನು ತಾನು ಹೇಳಿಕೊಂಡಿರಲಾರ. ಆದ್ದರಿಂದ 'ಕವಿರಾಜಮಾರ್ಗ'ಕಾರ ಹೇಳುವ ಈ ಶ್ರೀವಿಜಯ 'ಕವಿರಾಜಮಾರ್ಗ'ದ ಕರ್ತೃ ಶ್ರೀವಿಜಯನಿಗಿಂತ

ಪ್ರಾಚೀನ ಎಂಬುದು ಗಟ್ಟಿಸೂತು. ಆದ್ಯ ಕಾವ್ಯದಲ್ಲಿದ್ದ ಕಾವ್ಯಪ್ರಭೇದಗಳು ಚತ್ತಾಣ-ಬೆದಂಡೆ ಎಂಬ ಗ್ರಹಿಕೆಯ ಮೇಲೆ ಈ ಶ್ರೀವಿಜಯ ಚತ್ತಾಣಬೆದಂಡೆಗಬ್ಬಗಳ ಶ್ರೀವಿಜಯ. 'ಕವಿಮಾರ್ಗ', 'ಕವಿರಾಜಮಾರ್ಗ'ದ ಶ್ರೀವಿಜಯ ಆತನಿಗಿಂತ ಬೇರೆ. 'ನೇಮಿಜಿನೇಶ ಸಂಗತಿ' ಮತ್ತು 'ಚಂದ್ರಪ್ರಭ ಸಾಂಗತ್ಯ'ದ ಉಕ್ತಿಗಳಿಂದ 'ಚಂದ್ರಪ್ರಭ ಪುರಾಣ'ವೆಂಬ ಚಂಪೂಗ್ರಂಥವನ್ನು ಬರೆದ ಶ್ರೀವಿಜಯ ಚತ್ತಾಣ ಬೆದಂಡೆ ಗಬ್ಬಗಳ ಶ್ರೀವಿಜಯನಿಗಿಂತ ಈಚಿನವನಿರಬೇಕು. ಏಕೆಂದರೆ ಆ ಕಾಲಕ್ಕಾಗಲೇ ಚಂಪೂ ರೂಪುಗೊಂಡಿರಲಾರದು. ಆದ್ದರಿಂದ ಆತ 'ಕವಿರಾಜಮಾರ್ಗ'ದ ಶ್ರೀವಿಜಯನೋ ಅಥವಾ ಅನಂತರದವನೋ ಇರಬೇಕು. ಈ ಕೃತಿಯ ಉಲ್ಲೇಖ ಅಗ್ಗಳನ 'ಚಂದ್ರಪ್ರಭ ಪುರಾಣ'ದಲ್ಲಿ (೧೧೮೯) ಮತ್ತು ಇತರ ಕನ್ನಡ ಕೃತಿಗಳಲ್ಲಿ ಬಾರದಿರುವುದರಿಂದ, ೧೬ನೆಯ ಶತಮಾನದಿಂದ ಮಾತ್ರ ಈ ಕೃತಿಯ ಉಲ್ಲೇಖ ಇರುವುದರಿಂದ, ಅದರ ಕರ್ತೃ 'ಕವಿರಾಜಮಾರ್ಗ' ಕರ್ತೃವಾದ ಶ್ರೀವಿಜಯನಿಗೆ ಅರ್ವಾಚೀನನಾಗಿ, ಮಂಗರಸ (೧೫೦೮) ಅಥವಾ ದೊಡ್ಡಯ್ಯನ (೧೫೫೦) ಕಾಲದಲ್ಲಿ ಇದ್ದಿರಬೇಕು.

ಕವಿರಾಜಮಾರ್ಗೋಕ್ತ ಶ್ರೀವಿಜಯನೇ 'ಚಂದ್ರಪ್ರಭಪುರಾಣ'ದ ಕರ್ತೃ ಶ್ರೀವಿಜಯನೆಂಬ ಆರ್. ನರಸಿಂಹಾಚಾರ್ ಮತ್ತಿತರರ ಅಭಿಪ್ರಾಯವನ್ನು ಗಮನಿಸುವಾಗ 'ಚಂದ್ರಪ್ರಭ ಪುರಾಣ'ದ ಉಲ್ಲೇಖದ ಅರ್ವಾಚೀನತೆಯನ್ನೂ ಕವಿರಾಜಮಾರ್ಗೋಕ್ತ ಕವಿ ಶ್ರೀವಿಜಯನ ಪ್ರಾಚೀನತೆಯನ್ನು ನೆನಪಿಡಬೇಕು. ಡಿ. ಕೆ. ಭೀಮಸೇನರಾಯರು ಹೇಳುವಂತೆ ಪ್ರಾಚೀನ ಕನ್ನಡ ಕವಿಗಳಲ್ಲಿ ಆತ್ಮಶ್ಲಾಘನೆ ಅಪರೂಪವಲ್ಲವಾದರೂ ಪ್ರಾಚೀನ ಕವಿಗಳ ಸಾಲಿನಲ್ಲಿ ತನ್ನ ಹೆಸರನ್ನು 'ಕವಿರಾಜಮಾರ್ಗಕಾರ' ಮೊದಲಲ್ಲೇ ಹೇಳಿಕೊಂಡಿರಲಾರ. ಬೇಂದ್ರೆಯವರ ಮತ್ತು ನಂದೀಮತರ ಊಹೆಗಳಿಗೆ ಸರಿಯಾದ ಆಧಾರಗಳಿಲ್ಲ. ಕವಿರಾಜಮಾರ್ಗೋಕ್ತ ಶ್ರೀವಿಜಯ ಕವಿರಾಜಮಾರ್ಗಕಾರನಿಗಿಂತ ಪ್ರಾಚೀನನಾಗಿದ್ದಿರಬಹುದಾದರೂ ಆತ ಚತ್ತಾಣ-ಬೆದಂಡೆಗಬ್ಬಗಳನ್ನು ಬರೆದನೆಂದು ಸಾಧಿಸುವಂತಿಲ್ಲ. ಬೇರೆ ಬೇರೆ ಕೃತಿಗಳೊಡನೆ ಬೇರೆ ಬೇರೆ ಸಂದರ್ಭಗಳಲ್ಲಿ ಉಲ್ಲೇಖಿಸಲ್ಪಟ್ಟ ಶ್ರೀವಿಜಯರು ಹಲವರೆಂಬ ಒಂದು ಸಂಗತಿ ಈ ಚರ್ಚೆಗಳಿಂದ ಸ್ಪಷ್ಟವಾದರೂ, ಕವಿರಾಜಮಾರ್ಗೋಕ್ತ ಶ್ರೀವಿಜಯ ಯಾರು, ಆತನ ಇತಿವೃತ್ತವೇನು ಎಂಬುದು ಇನ್ನೂ ಸಮಸ್ಯೆಯೇ.

ಕವೀಶ್ವರ: ಇದು ಕವಿಯೊಬ್ಬನ ಬಿರುದೇ ಅಥವಾ ಹೆಸರೇ ಎನ್ನುವುದರ ಬಗ್ಗೆ ಸಂಶಯಗಳಿವೆ. ಈತ ಕವಿಪರಮೇಷ್ಠಿ ಇರಬಹುದು ಎಂಬುದು ಬೇಂದ್ರೆಯವರ ಊಹೆ. 'ಕವೀಶ್ವರ' ಎನ್ನುವುದು ನೃಪತುಂಗನ ವಿಶೇಷಣವೆಂದು ಹೇಳಿ, ಶ್ರೀವಿಜಯಕವೀಶ್ವರನ 'ಕವಿಮಾರ್ಗ'ವನ್ನಾಧರಿಸಿ ಈ ಕವೀಶ್ವರನೆಂಬುವನು 'ಕವಿರಾಜಮಾರ್ಗ'ವನ್ನು ರಚಿಸಿದುದಾಗಿ ಫ್ಲೀಟ್ ಊಹಿಸಿದ್ದಾರೆ.[281] 'ಕವಿರಾಜಮಾರ್ಗ' ಎಂಬ ಹೆಸರು 'ಕವೀಶ್ವರ ಮಾರ್ಗ' ಎಂಬುದಕ್ಕೆ ಸಂವಾದಿಯಾಗಿದ್ದು ಕವೀಶ್ವರನೇ ಬರೆದನೆಂಬುದನ್ನು ಅದು ಸೂಚಿಸುತ್ತದೆ ಎಂದು 'ಕವಿರಾಜಮಾರ್ಗ'ದ ಮದ್ರಾಸ್ ಪರಿಷ್ಕರಣದ ಸಂಪಾದಕರ

ಅಭಿಪ್ರಾಯ. 'ನೃಪತುಂಗಸಭಾಸದರ್' ಎಂಬ ಪದ್ಯದಲ್ಲಿ, 'ಉದಾರಕವೀಶ್ವರಂ' ಎಂದು ಬೇರೆ ಪಾಠ ದೊರಕಿರುವುದು, ಈ ಕವೀಶ್ವರನು ನೃಪತುಂಗನ ಸಭಾಸದನೆಂಬುದನ್ನು ಸೂಚಿಸುತ್ತದೆಯೆನ್ನುತ್ತಾರೆ. 'ಪರಮಕವೀಶ ಪ್ರಯೋಗ ಗತಮಾರ್ಗ' ಎಂದೂ ಹೇಳಿರುವುದರಿಂದ ಕವೀಶ್ವರನಾದ ತಾನು ಈ 'ಕವಿರಾಜಮಾರ್ಗ'ವನ್ನು ಬರೆದನೆಂಬ ಅಭಿಪ್ರಾಯ ಅಲ್ಲಲ್ಲಿ ಸೂಚಿತವಾಗಿದೆ ಎನ್ನುತ್ತಾರೆ. ಆದರೆ ಇವುಗಳು ದೃಢವಾದ ಸಾಕ್ಷ್ಯಗಳಲ್ಲ.

ಕವೀಶ್ವರ ಎಂಬುದು ಒಬ್ಬ ಕವಿಯ ಹೆಸರಿಗಿಂತ ಗೌರವಪೂರ್ವಕ ವಿಶೇಷಣವಾಗುವ ಸಂಭವ ಹೆಚ್ಚು. 'ವಿಜಯಕವೀಂದ್ರ' ಎಂಬ ಉಲ್ಲೇಖವನ್ನು ಗಮನಿಸಿದರೆ 'ಶ್ರೀವಿಜಯ ಕವೀಶ್ವರ' ಎಂಬುದು ಒಂದೇ ಪದವಾಗಿರುವ ಸಾಧ್ಯತೆಯಿದೆ, ಅಥವಾ ಮುಗಳಿಯವರು ಹೇಳುವಂತೆ "ಕವೀಶ್ವರ ಎಂಬ ಬಿರುದಿನ ಬೇರೊಬ್ಬ ಕವಿಯಿರಬೇಕು."[282]

ಪಂಡಿತ : ಪಂಡಿತ=ಪೂಜ್ಯಪಾದ ಎಂಬುದು ಬೇಂದ್ರೆಯವರ ಸಮೀಕರಣ. "ಪೂಜ್ಯಪಾದನು ವೈಯಾಕರಣಿಯೂ ವೈದ್ಯನೂ ಆಗಿದ್ದುದರಿಂದ ಅವನಿಗೆ 'ಪಂಡಿತ'ನೆಂಬ ಬಿರುದಿರುವುದು ತೀರ ಉಚಿತ"[283] ಎನ್ನುತ್ತಾರೆ ಅವರು. ಆಧಾರಗಳಿಲ್ಲದ ಈ ಊಹೆ ದುರ್ಬಲವಾಗಿದೆ. ರೈಸ್ ಹೇಳುವಂತೆ[284] ಗುರುತಿಸುವುದಕ್ಕೂ ಈ ಹೆಸರು ತೀರ ಅನಿರ್ದಿಷ್ಟವಾದ್ದು. ಬಿರುದಿನಂತೆ ಕಾಣುತ್ತದೆಂದೂ ಹೆಸರಾಗಿದ್ದರೂ ಇರಬಹುದೆಂದೂ ಸಂಶಯಗಳಿವೆ. ಇದು ವಿಶೇಷಣವಾಗಿದ್ದರೆ ಚಂದ್ರನ ಅಥವಾ ಶ್ರೀವಿಜಯಕವೀಶ್ವರನ ವಿಶೇಷಣವಾಗಿರಬೇಕು.

ಚಂದ್ರ : 'ಕವಿರಾಜಮಾರ್ಗ'ದ ನಂತರದ ಕೆಲವು ಕಾವ್ಯಗಳಲ್ಲಿ ಒಬ್ಬ ಚಂದ್ರಭಟ್ಟನನ್ನು ಸ್ತುತಿಸಲಾಗಿದೆ. ದುರ್ಗಸಿಂಹ (೧೦೩೧) ಸುಕವಿಗಳನ್ನು ನೆನೆಯುವಾಗ ಪ್ರಸಿದ್ಧನಾದ ಚಂದ್ರಭಟ್ಟನನ್ನೂ ನೆನೆದಿದ್ದಾನೆ. ಶ್ರೀಧರಾಚಾರ್ಯ ತನ್ನ 'ಜಾತಕತಿಲಕ'ದಲ್ಲಿ 'ಅಂಬುಜಾರಿ' ಎಂಬ ಪದದಿಂದ ಅವನನ್ನು ಸೂಚಿಸಿದಂತಿದೆ, ಚಾವುಂಡರಸ ಪೂರ್ವ ಕವಿಗಳನ್ನು ಹೊಗಳುವಲ್ಲಿ ಚಂದ್ರನನ್ನು ಹೊಗಳಿದ್ದಾನೆ. ಕೇಶಿರಾಜ ರುದ್ರಭಟ್ಟರು 'ಚಂದ್ರ'ನನ್ನು ಉಲ್ಲೇಖಿಸಿದ್ದಾರೆ. 'ಬಿಟ್ಟಮತ'ದಲ್ಲಿ "ಚಂದಿರಭಟ್ಟರ ದಯೆಯಿಂ ಸಂದೆಯಮಣಮಿಲ್ಲದಂತು ಕಲ್ಪುವುದು ಮಟಿಶಿಯುಂ" ಎಂದು ಹೇಳಲಾಗಿದೆ. ೧೪ನೆಯ ಶತಮಾನದ ಅಶ್ವಶಾಸ್ತ್ರದ ಕರ್ತೃ ತನ್ನನ್ನು 'ಅಭಿನವಚಂದ್ರ' ಎಂದು ಕರೆದುಕೊಂಡಿದ್ದಾನೆ. ಹೀಗೆ ಕಾವ್ಯ, ವೃಷ್ಟಿಶಾಸ್ತ್ರ ಮತ್ತು ಅಶ್ವವಿದ್ಯೆಗಳಿಗೆ ಸಂಬಂಧಿಸಿದಂತೆ ಚಂದ್ರ ಎಂಬ ಹೆಸರು ಕಂಡುಬಂದಿದೆ. ೧೦೬೭ರಲ್ಲಿದ್ದ ಚಂದ್ರಭಟ್ಟನೆಂಬ ಕವಿ ೧೪೮೦ರಲ್ಲಿದ್ದ 'ಮದನತಿಲಕ'ದ ಚಂದ್ರರಾಜ ಇವರು ಅನ್ಯಾನ್ಯ ಗ್ರಂಥಕಾರರು.[285] "ರುದ್ರಭಟ್ಟ ಕೇಶಿರಾಜರು ಹೇಳುವ ಚಂದ್ರಭಟ್ಟನೂ ಬಿಟ್ಟನು ಹೇಳುವ ಚಂದಿರಭಟ್ಟನೂ ಒಬ್ಬನೇ ಆಗಿದ್ದ ಪಕ್ಷದಲ್ಲಿ ಈತನು ಒಂದು ವೃಷ್ಟಿಶಾಸ್ತ್ರ ಗ್ರಂಥವನ್ನು ಬರೆದಿರಬೇಕು"—ಎಂಬುದು ಆರ್. ನರಸಿಂಹಾಚಾರ್ಯರ ಅಭಿಪ್ರಾಯ.[286] ಇಷ್ಟು ಜನ ಚಂದ್ರರಲ್ಲಿ ಕವಿರಾಜಮಾರ್ಗೋಕ್ತ ಚಂದ್ರ ಯಾರೆಂಬುದು ತಿಳಿಯದು.

೫–೬ನೆಯ ಶತಮಾನದಲ್ಲಿ ಬ್ರಾಹ್ಮಣ ಕಾವ್ಯ ಪ್ರಾರಂಭವಾಗಿರಬೇಕು. ಕವಿರಾಜಮಾರ್ಗೋಕ್ತ ಚಂದ್ರಕವಿ ಭಾಗವತ ಧರ್ಮದ ಬ್ರಾಹ್ಮಣಕಾವ್ಯವನ್ನು ಪ್ರಾರಂಭಿಸಿದ, ದುರ್ಗಸಿಂಹ ಮೊದಲಾದ ಶೈವ ವೈಷ್ಣವ ಕವಿಗಳು ಈತನನ್ನು ಸ್ಮರಿಸಿದ್ದಾರೆ, ಪ್ರಮುಖ ಜೈನಕವಿಗಳು ಈತನನ್ನು ಸ್ಮರಿಸಿಲ್ಲ—ಎಂದು ಮುಂತಾಗಿ ಬೇಂದ್ರೆಯವರು ಊಹಿಸಿದ್ದಾರೆ.[287] ಆದರೆ ಈ ಊಹೆ ಸಾಧಾರವಾದ್ದಲ್ಲ. ಜೈನಕವಿಗಳಾದ ಶ್ರೀಧರಾಚಾರ್ಯ, ಕೇಶಿರಾಜ ಇವರೆಲ್ಲ ಈತನನ್ನು ಸ್ಮರಿಸಿದ್ದಾರೆ. ಪ್ರಮುಖ ಜೈನಕವಿಗಳು ಕೆಲವು ಪ್ರಖ್ಯಾತ ಜೈನಕವಿಗಳನ್ನೇ ಸ್ಮರಿಸದಿರುವುದರಿಂದ, ಚಂದ್ರನನ್ನು ಸ್ಮರಿಸಿಲ್ಲದಿರುವುದು ಆಶ್ಚರ್ಯವೇನಲ್ಲ. ದುರ್ಗಸಿಂಹ ಮುಂತಾದ ಬ್ರಾಹ್ಮಣಕವಿಗಳು ಜೈನಕವಿಗಳ ಜೊತೆಗೆ ಚಂದ್ರನನ್ನು ಹೊಗಳಿದ್ದಾರೆ. ಆದರೆ ಆತ ವೈದಿಕ ಪರಂಪರೆಯವನೆಂಬುದನ್ನು ಎಲ್ಲಿಯೂ ಸೂಚಿಸಿಲ್ಲ. ಆದ್ದರಿಂದ ಚಂದ್ರ ಕವಿಯ ಬಗೆಗಿನ ಬೇಂದ್ರೆಯವರ ಈ ಮೇಲಿನ ಮಾತುಗಳು ನಿಲ್ಲುವಂಥವಲ್ಲ. ಹನ್ನೊಂದನೆಯ ಶತಮಾನದಿಂದೀಚೆಗೆ ಉಲ್ಲೇಖಿತವಾದ ಈ ಯಾವ ಚಂದ್ರನೂ 'ಕವಿರಾಜಮಾರ್ಗ'ಕಾರ ಹೇಳಿದ ಚಂದ್ರನಾಗಿರಲಾರ ಎಂಬ ಮಾತಿಗೂ ಆಸ್ಪದವಿದೆ.

ಲೋಕಪಾಲ : "ಚಂದ್ರ-ಲೋಕಪಾಲ ಇವರಿಬ್ಬರ ವಿಷಯವಾಗಿ ನಿಚ್ಚಳವಾಗಿ ಏನೂ ತಿಳಿದಿಲ್ಲ"[288] ಎಂಬ ಮಾತು ಲೋಕಪಾಲನಿಗೆ ಹೆಚ್ಚು ಸಮರ್ಪಕವಾಗಿ ಅನ್ವಯಿಸುತ್ತದೆ. ಚಂದ್ರನ ಬಗೆಗೆ ಅಲ್ಲಲ್ಲಿ ಉಲ್ಲೇಖಗಳಾದರೂ ಇವೆ. ಈತನ ಪಾಲಿಗೆ ಅದೂ ಇಲ್ಲವಾಗಿದೆ.

ಲೋಕಪಾಲನನ್ನು ಅಮೋಘವರ್ಷ ನೃಪತುಂಗನ ಸಮಕಾಲೀನ ಬಂಕರಸನ ಮಗ ಲೋಕಾದಿತ್ಯನೊಡನೆ ಸಮೀಕರಿಸಬಹುದೆಂದು—ಒಂದು ಕಡೆ ರೈಸ್ ಊಹಿಸಿದ್ದರೆ[289], ಇನ್ನೊಂದೆಡೆ ಈತನ ವಿಚಾರವಾಗಿ ಏನೂ ತಿಳಿಯದು ಎಂದಿದ್ದಾರೆ.[290] ಈ ಲೋಕಾದಿತ್ಯನನ್ನು ಲೋಕಪಾಲ ಎಂದು ಭಾವಿಸಿದರೆ ನೃಪತುಂಗನು ತನ್ನ ಸಾಮಂತನ ಮಗನನ್ನು ಪುರಾಣಕವಿಗಳ ಗುಂಪಿನಲ್ಲಿ ಸೇರಿಸಿಕೊಳ್ಳುವುದು ಅಸಂಭವವಾಗಿ ತೋರುತ್ತದೆಂದು ಆರ್. ನರಸಿಂಹಾಚಾರ್ಯ ಅವರು ಹೇಳುತ್ತಾರೆ.[291] ೯ನೆಯ ಶತಮಾನದ 'ಭುವನಪ್ರದೀಪಕಾ' ಎಂಬ ಸಂಸ್ಕೃತ ಗ್ರಂಥದಲ್ಲಿ ಬರುವ ತುಂಡೀರದೇಶದ ಅರಸರ ವಂಶಾವಳಿಯಲ್ಲಿ ಲೋಕಪಾಲನೆಂಬ ಹೆಸರಿದ್ದು ಈತನ ಕಾಲ ೮ನೆಯ ಶತಮಾನದ ಮಧ್ಯಭಾಗವೆಂದೂ ಈತ ಬೌದ್ಧನೆಂದೂ ಭಾವಿಸಲಾಗಿದೆ.[292] ಆದರೆ ಈತನೇ ಕವಿರಾಜಮಾರ್ಗೋಕ್ತ ಲೋಕಪಾಲನೆಂಬುದಕ್ಕೆ ಆಧಾರಗಳಿಲ್ಲ.

## ಅಡಿಟಿಪ್ಪಣಿಗಳು

1 ಡಿ. ಎಲ್. ನರಸಿಂಹಾಚಾರ್, 'ಕನ್ನಡ ಗ್ರಂಥಸಂಪಾದನೆ', ಮೈಸೂರು, ೧೯೬೪, ಪು. ೩೦.

2–3 D. L. Narasimhachar, Religion and Society of Karnataka under the Satavahanas, *KTA.*, Bangalore, 1968. p. 110; p. 109.

4-5 ಎಂ. ಗೋವಿಂದ ಪೈ, ಕನ್ನಡ ಸಾಹಿತ್ಯ ಹಾಗೂ ಭಾಷೆಯ ಹಳಮೆ, 'ಉಪಾಯನ', ಬೆಂಗಳೂರು, ೧೯೬೭, ಪು. ೧೦೩ ; ೧೦೦–೦೧.

6 ಡಿ. ಎಲ್. ನರಸಿಂಹಾಚಾರ್, ಪೂರ್ವೋಕ್ತ, ಪು. ೩೧-೩೨.

7 E. Hultsch, Remarks on a Papyrus from Oxyrhynchus, *JRAS.*, 1904, pp. 309–405.

8 ನೋಡಿ : ಅ.ಟಿ. ೧.

9 D. L. Narasimhachar, op. cit., p. 110.

10 T. N. Srikantiah, The Languages of Karnataka, *KTA.*, Bangalore, 1968, p. 77.

11 V. A. Smith, *The Early History of India*, Oxford, 1924, p. 231.

12 K. A. Nilakanta Sastri (ed) : *A Comprehensive History of India* II, 1956, p. 315.

13 ಪ್ತೊಲೆಮಿಯ ಹಿಪ್ಪೊಕೂರ, ಪ್ರಕ., ೨೩–೧, ಪು. ೮೪.

14 ನೋಡಿ : ಅ.ಟಿ., ೧೨. "...ಪುಲಿಮಾಯಿ, ವಿಳಿವಾಯಕುರ ಮೊದಲಾದ ಪದಗಳು ದ್ರಾವಿಡ ಪದಗಳೆಂದೇ ನಿರ್ಧರಿಸಲ್ಪಟ್ಟರೂ ಕನ್ನಡ ಪದಗಳೆಂದು ಖಂಡಿತವಾಗಿ ಹೇಳುವುದು ಸಾಧ್ಯವಾಗಿಲ್ಲ"—ಎಂಬುದು ಎಂ. ಎಚ್. ಕೃಷ್ಣರ ಅಭಿಪ್ರಾಯ. (ಪ್ರಕ., ೨೦–೩, ಪು. ೩೧).

15-17 ಎಂ. ಗೋವಿಂದ ಪೈ, ಕನ್ನಡ ಸಾಹಿತ್ಯದ ಪ್ರಾಚೀನತೆ, ಉದಯಭಾರತ, (ಸಂ.) ಶ್ರೀನಿವಾಸ ಪುರುಷೋತ್ತಮ ಭಟ್, ೨–೫, ಆಗಸ್ಟ್ ೧೯೨೮, ಪು. ೧೧೭ (ರಂ. ಶ್ರೀ. ಮುಗಳಿಯವರ ಸಂಗ್ರಹದಿಂದ).

18 'ಉಪಾಯನ', ೧೯೬೭, ಪು ೧೦೩.

19 ರಂ. ಶ್ರೀ. ಮುಗಳಿ, 'ಕನ್ನಡ ಸಾಹಿತ್ಯ ಚರಿತ್ರೆ', ಮೈಸೂರು, ೧೯೭೧, ಪು. ೬–೭.

20 R. S. Mugali, *The Heritage of Karnataka*, Bangalore, 1946, p. 13.

21 ಪ್ತೊಲೆಮಿಯ ಹಿಪ್ಪೊಕೂರ, ಪ್ರಕ., ೨೩–೧, ೧೯೪೧, ಪು. ೮೩–೧೦೪.

22 ಪ್ತೊಲೆಮಿಯ ಹಿಪ್ಪೊಕೂರ, (Hippokoura) (ತಿದ್ದುಪಡಿ), ಪ್ರಕ., ೨೩–೨, ೧೯೪೧, ಪು. ೮೯–೯೨.

23 'ಉಪಾಯನ', ಪು. ೧೦೦–೦೧.

24 S. Srikantha Sastri, *Sources of Karnataka History*, I, Mysore, 1940, p. 3.

25 ಕೆ. ಜಿ. ಕುಂದಣಗಾರ, ತಗರ, ಕಸಾಪ., ೧೯–೩, ೧೯೩೪, ಪು. ೨೩೧–೩೪.

26-7 'ಕನ್ನಡ ಗ್ರಂಥ ಸಂಪಾದನೆ', ೧೯೬೪, ಪು. ೩೧–೩೨ ; *KTA.*, p. 109.

28 Egypt Exploration Fund Graeco-Roman Branch : *The Oxyrhynchus Papyri, Part-III*, edited with translations and notes by B. P. Grenfell & A. S. Hunt, OUP., 1903.

29 Remarks on a Papyrus from Oxyrhynchus, *JRAS.*, 1904, pp. 399-405.

30 L. Rice, *MAR.*, 1904, p. 5.

31 G. A. Grierson, *LSI.*, IV, 1967, p. 365.

32 Sylvin Levi, *IA.*, Vol. 33, 1904, p. 12n.

33-35 ಕಕಜ., I, ಅವತರಣಿಕೆ, ಪು. ೭ ; II, ಅವತರಣಿಕೆ, ಪು. ೩೧ ; *HKL.*, 1934, p. 36.

36 E. P. Rice, *History of Kannada Literature*, 1915 (24), p. 13.

37 'ಕನ್ನಡ ಕೈಪಿಡಿ', I, ಭಾಗ IV, ೧೯೩೬ (೫೫), ಪು. ೨೦೯.
38 *MAR.*, 1926, pp. 11–21.
39–40 A Gk. Farce with Old Kannada Passages, 2nd century A.D., ಪ್ರಕ., ೯_೧ ಪು. ೧_೨೪ ; ಪು. ೧–೨.
41 L. D. Barnett, Journal of Egyptian Archaeology, April 1926 ; ನೋಡಿ : B. A. Saletore, *Ancient Karnataka*, I, Poona, 1936, pp. 585–86.
42 A. B. Keith, *A History of Sanskrit Literature*, Feb. 1928, Preface, p. x.
43 S. Srikantia, Kannada Passage in the Oxyrhynchus Papyri, No. 413, *QJMS.*, 18–4, April 1928, pp. 294–341.
44 ಎಂ. ಗೋವಿಂದ ಪೈ, ಗ್ರೀಕ್ ಪ್ರಹಸನದಲ್ಲಿ ಕನ್ನಡ ಮಾತುಗಳು, ಪ್ರಕ., ೧೧_೧, ೧೯೨೯.
45-6 'ಉಪಾಯನ', ಪು. ೯೫_೯೯ ; ಪು. ೯೯.
47 'ಕನ್ನಡ ಕೈಪಿಡಿ', ಸಂ. ೨, ೧೯೨೯ (೪೭), ೧೯೭೦, ಪು. ೨೬.
48 B. A. Saletore, op. cit., pp. 584–97.
49–50 S. Srikantha Sastri, op. cit., Intro. p. xx., pp. 5–9,
51 A. N. Narasimhia, *A Grammar of the Oldest Kanarese Inscriptions*, Mysore, 1941, Intro. p. xiii.
52 R. S. Mugali, op. cit., p. 14 ; ಪೂರ್ವೋಕ್ತ, ಪು. ೬.
53 K. A. Nilakanta Sastri, op. cit., p. 550.
54 *KTA.*, pp. 77–78.
55 *KTA.*, p. 184.
56 ಕೆ. ವೆಂಕಟರಾಮಪ್ಪ, 'ಕನ್ನಡ ಸಾಹಿತ್ಯ ಚರಿತ್ರೆ', ೧೯೭೪, ಪು. ೭. ಇ.,
57 'ಉಪಾಯನ', ೧೯೬೭, ಪು. ೯೬_೯೭.
58 'ಕನ್ನಡ ಗ್ರಂಥ ಸಂಪಾದನೆ', ೧೯೬೪, ಪು. ೩೨.
59 ಕನ್ನಡ ದೇಸಿ ಸಾಹಿತ್ಯದ ಸ್ವರೂಪ, 'ಕನ್ನಡ ನಾಡೂ ದೇಸಿ ಸಾಹಿತ್ಯವೂ', ಧಾರವಾಡ, ೧೯೫೪, ಪು. ೨೫_೪೫.
60 ಕನ್ನಡ ಸಾಹಿತ್ಯ ಚರಿತ್ರೆ (ಪ್ರಾಚೀನ ಕಾಲ), 'ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಇತರ ಲೇಖನಗಳು', ಮೈಸೂರು, ೧೯೫೮, ಪು. ೧೪–೧೮.
61 'ಕರ್ಣಾಟಕ ಕವಿಚರಿತೆ'ಯ ತೃತೀಯ ಸಂಪುಟದ ವಿಮರ್ಶೆ, ಪ್ರಕ., ೧೧–೪, ಪು. ೧೩.
62 ಕರ್ಣಾಟಕ ಸಾಹಿತ್ಯ, 'ಕರ್ಣಾಟಕದ ಕೈಪಿಡಿ', ಪು. ೨೦೫_೦೭.
63 'ಕನ್ನಡ ಕೈಪಿಡಿ', ಮೈಸೂರು, ಪು. ೨೭_೨೮.
64 *HKLit.*, Mysore, 1940, p. i.
64ಅ ಜೈನವಾಣಿ, 'ಸಂಶೋಧನ ಲೇಖನಗಳು', ಮೈಸೂರು, ೧೯೭೫, ಪು. ೫೦೦.
65 'ಕನ್ನಡ ಸಾಹಿತ್ಯ ಚರಿತ್ರೆ', ಪು. ೨೮–೨೯.
66 R. S. Mugali, op. cit., pp. 176–77.
67 ಉದಯಭಾರತ, ೨_೫, ಪು. ೧೧೫.
68-9 'ಮೂರು ಉಪನ್ಯಾಸಗಳು', ಧಾರವಾಡ, ೧೯೬೦, ಪು. ೧೨೫ ; ಪು. ೧೩೪.
70 ಕನ್ನಡ ಸಾಹಿತ್ಯದ ಹಳಮೆ, ಕುಂದವಾಣಿ, ಕರ್ಣಾಟಕ ಸಂಘ, ಕುಂದಾಪುರ, ೧೯೬೦, (ಕ. ವೆಂ. ರಾಜಗೋಪಾಲರ ಸಂಗ್ರಹದಿಂದ) ಪು. ೮.
71 'ಉಪಾಯನ', ೧೯೬೭, ಪು. ೯೫.

72-74 ‘ಮೂರು ಉಪನ್ಯಾಸಗಳು’, ಪು. ೧೨೭–೩೪ ; ಪು. ೧೨೬–೨೭ ; ಪು. ೧೩೪.
75 ಕುಂದಮಾಲೆ, ಪೂರ್ವೋಕ್ತ, ಪು. ೮.
76 ‘ಉಪಾಯನ’, ೧೯೬೭, ಪು. ೯೫.
77 ‘ಮೂರು ಉಪನ್ಯಾಸಗಳು’, ೧೯೭೦, ಪು. ೧೨೨–೨೭.
78–9 ಉದಯಭಾರತ, ೨–೫, ಪು. ೧೧೬–೧೭.
80 ‘ಕರ್ಣಾಟಕದ ಕೈಪಿಡಿ’, ಪು. ೨೦೭ ; ‘ಕನ್ನಡ ಕೈಪಿಡಿ’, ೨, ಪು. ೨೫ ; *GOKI.*, Intro. p. xiii.
81 D. C. Sircar, *Indian Epigraphy*, 1965, p. 48 ; *IHQ.*, XVII, p. 134 ; ದೇಸಾಯಿ ಪಾಂಡುರಂಗರಾಯ, ಶಾಸನ ಮತ್ತು ಸಾಹಿತ್ಯ, ಕಸಾಪ., ೩೧–೨, ೧೯೪೬, ಪು. ೩೧ ; N. Lakshminarayan Rao, The Chalukyas, *Karnataka Darshana*, Bombay, 1955, p. 30.
82 *GOKI.*, Intro. p. xiv.
83 *EC.*, III, 1974, ಪೀಠಿಕೆ, ಪು. ೬೯.
84 ದೇಸಾಯಿ ಪಾಂಡುರಂಗರಾಯ, ಪೂರ್ವೋಕ್ತ, ಪು. ೩೧.
85 ‘ಕನ್ನಡ ಕೈಪಿಡಿ’, ೨, ೧೯೭೦, ಪು. ೩೧.
86 ‘ಕನ್ನಡ ಸಾಹಿತ್ಯ ಚರಿತ್ರೆ’, ೧೯೭೦, ಪು. ೯.
87 ಎಂ. ಎಚ್. ಕೃಷ್ಣ, ಅತ್ಯಂತ ಪ್ರಾಚೀನ ಕನ್ನಡ ಶಾಸನ, ಪ್ರಕ., ೨೦–೩, ೧೯೩೯, ಪು. ೩೮.
88 ‘ಕನ್ನಡ ಸಾಹಿತ್ಯ ಚರಿತ್ರೆ’, ೧೯೭೧, ಪು. ೧೦.
89-90 ಎಂ. ಚಿದಾನಂದಮೂರ್ತಿ, ಕವಿರಾಜಮಾರ್ಗಕ್ಕೆ ಹಿಂದಿನ ಕನ್ನಡ ಸಾಹಿತ್ಯ, ‘ಕವಿರಾಜಮಾರ್ಗ’, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, ೧೯೭೩, ಪು. ೮-೧೦ ; ಶಾಸನಗಳು ಮತ್ತು ಸಾಹಿತ್ಯ, ‘ಸಂಶೋಧನ ತರಂಗ’, ೨, ಬೆಂಗಳೂರು, ೧೯೭೦, ಪು. ೧೯೭–೯೮.
91 ಮೇವುಂಡಿ ಮಲ್ಲಾರಿ, ‘ಕನ್ನಡ ನಾಡಿನ ಶಾಸನ ಕವಿಗಳು’, ೧೯೭೪, ಪು. ೪–೫ ; ಎ. ಎಂ. ಅಣ್ಣಿಗೇರಿ, ‘ಪಟ್ಟದಕಲ್ಲ ಗುಡಿಗಳು’, ಧಾರವಾಡ, ೧೯೬೦, ಪು. ೮೨.
91ಅ ಗೆಳೆಯರ ಗುಂಪಿನ ಮಧುರಚೆನ್ನ, ಪ್ರಾಚೀನ ಕರ್ನಾಟಕದ ಒಬ್ಬ ನಟಶ್ರೇಷ್ಠ ಹಾಗೂ ಒಬ್ಬ ಆದಿಕವಿ, ಜಕ., ೯–೫, ೬, ಪು ೪೩೧.
92 ನೋಡಿ : ಡಿ. ಎಲ್. ನರಸಿಂಹಾಚಾರ್, ‘ಪೀಠಿಕೆಗಳು ಲೇಖನಗಳು’, ಮೈಸೂರು, ೧೯೭೧; ಪು. ೩೩೩–೩೪.
93 ‘ಕವಿರಾಜಮಾರ್ಗ ವಿವೇಕ’, ಮೈಸೂರು, ೧೯೭೩, ಪು. ೧೧೫–೧೬.
94 ‘ಮೂರು ಉಪನ್ಯಾಸಗಳು’, ೧೯೬೦, ಪು. ೯೮.
95-96 ‘ಕನ್ನಡ ಸಾಹಿತ್ಯ ಚರಿತ್ರೆ’, ೧೯೭೧, ಪು. ೧೪ ; ಪು. ೨೩.
97 ‘ಮೂರು ಉಪನ್ಯಾಸಗಳು’, ೧೯೬೦, ಪು. ೯೯–೧೦೦.
98 ಉದಯಭಾರತ, ೨–೫, ಪು. ೧೧೨–೧೪.
99 ‘ಕನ್ನಡ ಸಾಹಿತ್ಯ ಚರಿತ್ರೆ’, ೧೯೭೧, ಪು. ೨೨–೨೩.
100 ಉದಯಭಾರತ, ೨–೫, ಪು. ೧೧೪.
101 ‘ಮೂರು ಉಪನ್ಯಾಸಗಳು’, ೧೯೬೦, ಪು. ೧೦೨.
102 *A History of Kanarese Literature*, 1921, p. 25, ಕಕಚ., I, ೧೯೬೧, ಪು. ೨೦ ; ಜಕ., ೨–೧೨, ಪು. ೯೧೯ ; ‘ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ’, ೧–೨–೩, ಪು. ೩೨೫–೨೬ ; ‘ಕನ್ನಡ ಸಾಹಿತ್ಯ ಚರಿತ್ರೆ’, ೧೯೭೧, ಪು. ೨೦–೨೨.

103 'ಕವಿರಾಜಮಾರ್ಗ', ಮದರಾಸು, ೧೯೩೦, ಅವತರಣಿಕೆ, ಪು. xxii–xxiii ; 'ಕವಿರಾಜಮಾರ್ಗ', ಬೆಂಗಳೂರು, ೧೯೬೮, ಪೀಠಿಕೆ, ಪು. lxi.

104-5 ರಂ. ಶ್ರೀ. ಮುಗಳಿ, 'ಕನ್ನಡ ಸಾಹಿತ್ಯ ಚರಿತ್ರೆ', ೧೯೭೧, ಪು. ೨೪.

106 ಕಕಚ., I, ೧೯೬೧, ಪು. ೩೩ ; 'ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಇತರ ಲೇಖನಗಳು', ೧೯೫೮, ಪು. ೫೭ ; 'ನಾಡೋಜ ಪಂಪ', ೧೯೩೮, ಪು. ೧೪೯_೫೦ ; 'ಪಂಪ', ೧೯೫೭, ಪು. ೬೩ ; 'ಕನ್ನಡ ಸಾಹಿತ್ಯ ಚರಿತ್ರೆ', ೧೯೭೧, ಪು. ೨೪.

107 'ಮೂರು ಉಪನ್ಯಾಸಗಳು', ೧೯೬೦, ಪು. ೧೦೪–೦೭.

108 'ಕಾವ್ಯಾವಲೋಕನ', ೧೯೩೯, ಇಂಗ್ಲಿಷ್ ಉಪೋದ್ಘಾತ, ಪು. lxxi.

109 ಈಗ ದೊರೆಯದ ಕೆಲವು ಹಳಗನ್ನಡ ಕಾವ್ಯಗಳು, ಕನ್ನಡ ನುಡಿ, ೪–೬, ಪು. ೪೧_೪೨.

110 ನೋಡಿ : *MAR.*, 1904_5.

112 'ಷಟ್ಖಂಡಾಗಮ', ಪ್ರಸ್ತಾವನಾ, I, 1-1, ಉಪೋದ್ಘಾತ, ಪು. ೧೧ ; I, 6—8, ಪು. ೫.

113 *Paramatma Prakasha and Yogasara*, Agas, Gujarath, 1973, Intro. p. 34, p. 80.

114 ಕಕಚ., I, p. 10 ; *HKLit.*, p. 5.

115 'ಚಾವುಂಡರಾಯ ಪುರಾಣ'ದ ಕಾಗದಪ್ರತಿ, ಕೆಎ. ೬೬, ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನ ವಿಭಾಗ, ಪು. ೪೭೧.

116 R. Narasimhachar (ed.), *Karnataka Sabdanusasanam*, Bangalore, 1890, pp. 10–11.

117 ಎಂ. ಎಂ. ಕಲಬುರ್ಗಿ, 'ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ', ಧಾರವಾಡ, ೧೯೭೩, ಪು. ೧೬೦_೬೨, ೧೬೭.

118 ಕಕಚ., I, ೧೯೬೧, ಪು. ೮.

119_20 ನೋಡಿ : ಅ.ಟಿ., ೧೧೨, ೧೧೪.

121 *Karnataka Sabdanusasanam*, Bangalore, 1890, (a) Intro. p. 8 ; (b) The Literature of Karnataka, p. 19 ; *Mysore and Coorg from the Inscriptions*, London, 1909, pp. 197–98.

122 ಕಕಚ., III, ಪು. ೪೭೭.

123 'ಕೆಲವು ಕನ್ನಡಕವಿಗಳ ಜೀವನಕಾಲವಿಚಾರ', ೧೯೨೭, ಪು. ೨೪೩–೪೫.

124 ತುಂಬುಲೂರಾಚಾರ್ಯ ಮತ್ತು ಶ್ರೀವರ್ಧದೇವ, ಕಸಾಪ., ೧೮_೩, ಅಕ್ಟೋಬರ್ ೧೯೩೩, ಪು. ೨೨೮_೨೯.

125 'ಮೂರು ಉಪನ್ಯಾಸಗಳು', ೧೯೬೦, ಪು. ೧೧೮_೨೧.

126 'ಕವಿರಾಜಮಾರ್ಗ', ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, ೧೯೭೩, ಪು. ೨೭.

127 'ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ', ಧಾರವಾಡ, ೧೯೭೩, ಪು. ೧೧೬, ಅ.ಟಿ.

128 ಎಂ. ಚಿದಾನಂದಮೂರ್ತಿ, ಪೂರ್ವೋಕ್ತ ಲೇಖನ, ಪು. ೨೮.

129 *Kavyavalokanam*, Bangalore, 1903, Intro. p. 5–6.

130 ಕಕಚ., I, ಇಂಗ್ಲಿಷ್ ಅವತರಣಿಕೆ, ಪು. ix ; ಕನ್ನಡ ಅವತರಣಿಕೆ, ಪು. ೧೨ ; *HKLit.* p. 29, 62.

131 ನಾರಾಯಣಶಾಸ್ತ್ರಿ, ೯ನೆಯ ಶತಮಾನಾಂತ್ಯದವರೆಗಿನ ಕರ್ಣಾಟಕ ವಾಙ್ಮಯದ ಸಂಕ್ಷಿಪ್ತ ಪರಿಗಣನೆ ; ಜಕೆ., ೨–೧೦, ಆಗಸ್ಟ್ ೧೯೨೪, ಪು. ೭೫೯.

132 ರಂ. ಶ್ರೀ. ಮುಗಳಿ, 'ಕನ್ನಡ ಸಾಹಿತ್ಯ ಚರಿತ್ರೆ', ಮೈಸೂರು, ೧೯೭೧, ಪು. ೨೬.

133 ಎಂ. ಮರಿಯಪ್ಪ ಭಟ್ಟ, 'ಕನ್ನಡ ಸಂಸ್ಕೃತಿ', ಬೆಂಗಳೂರು, ೧೯೬೭, ಪು. ೨೫೪.

134 ಡಿ. ಎಲ್. ನರಸಿಂಹಾಚಾರ್, 'ಪೀಠಿಕೆಗಳು ಲೇಖನಗಳು', ಮೈಸೂರು, ೧೯೭೧, ಪು. ೧೦೧೮.

135 ಎಂ. ಎಂ. ಕಲಬುರ್ಗಿ, ಪೂರ್ವೋಕ್ತ, ಪು. ೧೭೪–೭೫.

136 B. L. Rice, *Karnataka Sabdanusasanam*, The Literature of Karnataka, p. 17.

137 ಆ. ನೇ. ಉಪಾಧ್ಯೆ, ಕವಿಪರಮೇಶ್ವರ ಅಥವಾ ಕವಿಪರಮೇಷ್ಠಿ, ಪ್ರಕ., ೨೮–೩, ೧೯೪೭.

138 ಟಿ. ವಿ. ವೆಂಕಟಾಚಲಶಾಸ್ತ್ರೀ, 'ಕನ್ನಡ ನೇಮಿನಾಥ ಪುರಾಣಗಳ ತೌಲನಿಕ ಅಧ್ಯಯನ', ಮೈಸೂರು, ೧೯೭೩, ಪು. ೯೫.

139 ಭೀಮರಾವ್ ಚಿಟಗುಪ್ಪಿ, ಕವಿಪರಮೇಷ್ಠಿ ಕನ್ನಡದಲ್ಲಿ ಬರೆದಿದ್ದನೇ ?, 'ಸಂಶೋಧನ ಪಂಚದಶಿ', ಮೈಸೂರು, ೧೯೭೪, ಪು. ೧–೭.

140 ಕೆ. ಶಿವರಾಮ ಐತಾಳ್, ಪ್ರಾಚೀನ ಕನ್ನಡ ಛಂದಸ್ಸು, 'ಬೆಳ್ಳಿಶಾರದೆ', ಮೈಸೂರು, ೧೯೭೩, ಪು. ೩೫೮.

141 ಟಿ. ವಿ. ವೆಂಕಟಾಚಲಶಾಸ್ತ್ರೀ, 'ಛಂದಶ್ಶಾಸ್ತ್ರ ಕ್ಷೇತ್ರದ ಸಾಧನೆ', ಕನ್ನಡ ನುಡಿ, ೩೮–೯, ಪು. ೭

142 ಎಂ. ಎಂ. ಕಲಬುರ್ಗಿ, 'ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ', ಧಾರವಾಡ, ೧೯೭೩, ಪು. ೧೩೪.

143 *EC.*, VIII, Nr. 35.

144 ಟಿ. ಕೇಶವಭಟ್ಟ, 'ತೀರ ಪ್ರಾಚೀನ ಸಾಹಿತ್ಯರೂಪಗಳು', 'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ', I, ಬೆಂಗಳೂರು, ೧೯೭೪, ಪು. ೫೬.

145-46 ರಂ. ಶ್ರೀ. ಮುಗಳಿ, 'ಪ್ರಾಚೀನ ಕನ್ನಡ ಸಾಹಿತ್ಯರೂಪಗಳು', ಮೈಸೂರು, ೧೯೭೩, ಪು. ೮೮.

147 ರಂ. ಶ್ರೀ. ಮುಗಳಿ, 'ಕನ್ನಡ ಸಾಹಿತ್ಯ ಚರಿತ್ರೆ', ಮೈಸೂರು, ೧೯೬೮, ಪು. ೨೮.

148 ರಂ. ಶ್ರೀ. ಮುಗಳಿ, 'ಪ್ರಾಚೀನ ಕನ್ನಡ ಸಾಹಿತ್ಯರೂಪಗಳು', ಪು. ೪–೫.

149 ಪ್ರ. ಗೋ. ಕುಲಕರ್ಣಿ, 'ಕನ್ನಡ ಭಾಷೆಯ ಚರಿತ್ರೆ', ಬೆಳಗಾಂ, ೧೯೬೭, ಪು. ೮೩.

150 ಎಂ. ಎಂ. ಕಲಬುರ್ಗಿ, ಪೂರ್ವೋಕ್ತ, ಪು. ೧೭೦.

151 ಈಚೆಗೆ ಎಂ. ವಿ. ಸೀತಾರಾಮಯ್ಯನವರು ಹೇಮಚಂದ್ರನ ದೇಶೀನಾಮಮಾಲೆಯಲ್ಲಿ ಬಂದಿರುವ 'ಓವಂ' ಪದದ ಅರ್ಥವನ್ನು ಗಮನಿಸಿ ಓವ < (ಓವಂ) ಆನೆಯನ್ನು ಆಕರ್ಷಿಸಿ, ಕೆಡಹಿ, ಕಟ್ಟಿಹಾಕುವ ಸಾಧನ (=ಅಣಿಗೆ) ಎಂದಿದ್ದಾರೆ. ಕಭಾ. ೬–೪, ಪು. ೭. ಆದರೆ ಆನೆಯನ್ನು ಹಿಡಿಯುವಾಗ ಹಾಡುತ್ತಿದ್ದ ಈ ಹಾಡು ಒನಕೆವಾಡಿನ ಜೊತೆ ಸೇರಿ ಪ್ರಚುರಗೊಂಡಿತು ಎಂದು ನಂಬಲು ಕಷ್ಟವಾಗುತ್ತದೆ.

152-54 ಟಿ. ಕೇಶವಭಟ್ಟ, ಒನಕೆವಾಡು, 'ಸಂಶೋಧನ ರತ್ನಮಾಲಿಕೆ', ಬೆಂಗಳೂರು, ೧೯೬೯, ಪು. ೧೩೮, ೧೪೨, ೧೪೯.

155 ಎಂ. ಚಿದಾನಂದಮೂರ್ತಿ, 'ಸಂಶೋಧನ ತರಂಗ', ಬೆಂಗಳೂರು, ೧೯೭೦, ಪು. ೧೪೦.

156 ಎಂ. ಗೋವಿಂದ ಪೈ, 'ಮೂರು ಉಪನ್ಯಾಸಗಳು', ಧಾರವಾಡ, ೧೯೬೦, ಪು. ೧೦೩.

157 ಡಿ. ಎಲ್. ನರಸಿಂಹಾಚಾರ್, 'ಪೀಠಿಕೆಗಳು ಲೇಖನಗಳು', ಮೈಸೂರು, ೧೯೭೧, ಪು. ೩೩೪.

158 ಎಂ. ವಿ. ಸೀತಾರಾಮಯ್ಯ, 'ಕವಿರಾಜಮಾರ್ಗ', ಬೆಂಗಳೂರು, ೧೯೬೮, ಟಿಪ್ಪಣಿಗಳು, ಪು. ೧೩೮.

159 ಎಲ್. ಬಸವರಾಜು, 'ಶೃಂಗಾರ ನಿದರ್ಶನ', ಮೈಸೂರು, ೧೯೭೧, ಪೀಠಿಕೆ, ಪು. ೪–೫.

160 ರಂ. ಶ್ರೀ. ಮುಗಳಿ, ಪೂರ್ವೋಕ್ತ, ಪು. ೨೦.

161 ಕವಿಪರಮೇಷ್ಠಿ ಕನ್ನಡದಲ್ಲಿ ಬರೆದಿದ್ದನೆ? 'ಸಂಶೋಧನ ಪಂಚದಶಿ', ಮೈಸೂರು, ೧೯೭೪, ಪು. ೫.

162 ಕೆ. ಕೃಷ್ಣಮೂರ್ತಿ (ಸಂ.), 'ಕನ್ನಡ ಕಾವ್ಯಾಲಂಕಾರ', ಮೈಸೂರು, ೧೯೫೫, ಶ್ಲೋಕ ೩೮, ಪು. ೧೧೨.

163 ಕೆ. ಕೃಷ್ಣಮೂರ್ತಿ (ಸಂ.), 'ಕಾವ್ಯಾದರ್ಶ', ಮೈಸೂರು, ೧೯೭೫, ೧–೨೮.

164 ಈ ಎರಡು ಪದ್ಯಗಳ ಆನುಪೂರ್ವಿ ಎಂ. ವಿ. ಸೀತಾರಾಮಯ್ಯನವರ ಪರಿಷ್ಕರಣದಲ್ಲಿ ವ್ಯತ್ಯಾಸಗೊಂಡಿದೆ.

165 ತೀ. ನಂ. ಶ್ರೀಕಂಠಯ್ಯ, 'ಕಾವ್ಯಾನುಭವ', ಮೈಸೂರು, ೧೯೭೦, ಪು. ೬೧–೬೩.

166 ಮುಳಿಯ ತಿಮ್ಮಪ್ಪಯ್ಯ, ಜಕ., ೪–೮, ಪು. ೪೮೮.

167 ಎಂ. ಎಂ. ಕಲಬುರ್ಗಿ, ಪೂರ್ವೋಕ್ತ, ಪು. ೫೪.

168 ಎಂ. ಎಂ. ಕಲಬುರ್ಗಿ, ಪೂರ್ವೋಕ್ತ, ಪು. ೫೬.

169 'ಕಾವ್ಯಾನುಭವ', ಪು. ೬೩.

170 ಕುಕ್ಕಿಲ ಕೃಷ್ಣಭಟ್ಟ, ಬೆದಂಡೆ-ಚತ್ರಾಣ, ಪ್ರಕ., ೫೨–೨, ೧೯೭೧, ಪು. ೧೨೯.

171 ರಂ. ಶ್ರೀ. ಮುಗಳಿ, ಪೂರ್ವೋಕ್ತ, ಪು. ೧೦.

172 ಸಿ. ಓಂಕಾರಪ್ಪ, 'ಕವಿರಾಜಮಾರ್ಗದಲ್ಲಿ ಚರಿತ್ರೆ, ವ್ಯಾಕರಣ ಮುಂತಾದ ವಿಚಾರಗಳು', ಸಕಸಾಚ., I, ಪು. ೧೦೨.

173 ರಾ. ನರಸಿಂಹಾಚಾರ್ಯ, 'ಕಾವ್ಯಾವಲೋಕನ', ಮೈಸೂರು, ೧೯೬೭, ಪೀಠಿಕೆ, ಪು. lv.

174 ತೀ. ನಂ. ಶ್ರೀಕಂಠಯ್ಯ, ಪೂರ್ವೋಕ್ತ, ಪು. ೭೧, ೭೩.

175 ಡಿ. ಎಲ್. ನರಸಿಂಹಾಚಾರ್, ಪೂರ್ವೋಕ್ತ, ಪು. ೪೮೦ ಅ.ಟಿ.

176 ಟಿ. ವಿ. ವೆಂಕಟಾಚಲಶಾಸ್ತ್ರೀ, 'ಮಹಾಕಾವ್ಯಲಕ್ಷಣ', ಮೈಸೂರು, ೧೯೬೯, ಪು. ೬೩.

177 ಮುಳಿಯ ತಿಮ್ಮಪ್ಪಯ್ಯ, 'ಪಾರ್ತಿಸುಬ್ಬ', ಬಾಳಿಗ ಅಂಡ್ ಸನ್ಸ್, ಮಂಗಳೂರು, ೧೯೪೫, ಪು. ೨೮.

178 ಮುಳಿಯ ತಿಮ್ಮಪ್ಪಯ್ಯ, 'ಕನ್ನಡ ನಾಡೂ ದೇಸಿ ಸಾಹಿತ್ಯವೂ', ಧಾರವಾಡ, ೧೯೫೪, ಪು. ೪೭, ೪೮.

17೨ 'ಕವಿರಾಜಮಾರ್ಗ ವಿವೇಕ', ಮೈಸೂರು, ೧೯೭೨, ಪು. ೧೦೭.

180 ಕುಕ್ಕಿಲ ಕೃಷ್ಣಭಟ್ಟ, ಪೂರ್ವೋಕ್ತ, ಪು. ೧೪೦–೧೪೪.

181-82 ತೀ. ನಂ. ಶ್ರೀಕಂಠಯ್ಯ, ಪೂರ್ವೋಕ್ತ, ಪು. ೭೧, ೭೨.

183-84 'ಕನ್ನಡ ನಾಡೂ ದೇಸಿ ಸಾಹಿತ್ಯವೂ', ಪು. ೪೭, ೪೮.

185 ಪ್ರಕ., ೫೨–೨, ಪು. ೧೪೪.

186 'ಕಾವ್ಯಾನುಭವ', ಪು. ೬೬.

187 'ಕನ್ನಡ ನಾಡೂ ದೇಸಿ ಸಾಹಿತ್ಯವೂ', ಪು. ೨೧.

188 'ಕವಿರಾಜಮಾರ್ಗ', ಪು. ೧೨೨.

189 'ಕನ್ನಡದಲ್ಲಿ ಕಾವ್ಯತತ್ತ್ವ', ಮೈಸೂರು, ೧೯೬೪, ಪು. ೨೧.

190 ಪ್ರಕ., ೫೨–೨, ಪು. ೧೪೩.

191 'ಶೃಂಗಾರ ನಿದರ್ಶನ', ಪು. ೨೯.
192 ಡಿ. ಎಲ್. ನರಸಿಂಹಾಚಾರ್, ಪೂರ್ವೋಕ್ತ, ಪು. ೪೮೦.
193 'ಕವಿರಾಜಮಾರ್ಗ ವಿವೇಕ', ಪು. ೧೦೬.
194 'ಕಾವ್ಯಾನುಭವ', ಪು. ೬೬, ೬೭.
195 'ಕವಿರಾಜಮಾರ್ಗ', ಪು. ೧೩೩.
196 'ಪ್ರಾಚೀನ ಕನ್ನಡ ಸಾಹಿತ್ಯರೂಪಗಳು', ಪು. ೮.
197 'ಕಾವ್ಯಾನುಭವ', ಪು. ೬೬.
198 ಪ್ರಕ., ೫೩–೩, ಪು. ೧೪೨, ೧೩೯.
199 'ಶೃಂಗಾರ ನಿದರ್ಶನ', ಪು. ೩೦, ೩೧.
200 'ಕಾವ್ಯಾನುಭವ', ಪು. ೮೮.
201 ಎಂ. ಎಂ. ಕಲಬುರ್ಗಿ, ಪೂರ್ವೋಕ್ತ, ಪು. ೬೫.
202 ಎಂ. ಚಿದಾನಂದಮೂರ್ತಿ, ಕವಿರಾಜಮಾರ್ಗಕ್ಕೆ ಹಿಂದಿನ ಸಾಹಿತ್ಯ, 'ಕವಿರಾಜಮಾರ್ಗ', ಐಬಿಎಚ್. ಪ್ರಕಾಶನ, ಬೆಂಗಳೂರು, ೧೯೭೩, ಪು. ೨೨.
203 ಎಂ. ಚಿದಾನಂದಮೂರ್ತಿ, 'ಸಂಶೋಧನ ತರಂಗ', I, ಮೈಸೂರು, ೧೯೬೬, ಪು. ೨೪೫.
204 ಎಂ. ಎಂ. ಕಲಬುರ್ಗಿ, ಪೂರ್ವೋಕ್ತ, ಪು. ೬೭.
205–06 Kittel, *Kannada-English Dictionary*, Mangalore, 1894, p. 1138; p. 1433.
207 'ಕಾವ್ಯಾನುಭವ', ಪು. ೬೯.
208 'ಪೀಠಿಕೆಗಳು ಲೇಖನಗಳು', ಪು. ೪೮೧.
209 'ಪಾರ್ತಿಸುಬ್ಬ', ಪು. ೩೯.
210 ಪ್ರಕ., ೫೩–೩, ಪು. ೧೪೩.
211 ಎಂ. ಎಂ. ಕಲಬುರ್ಗಿ, ಪೂರ್ವೋಕ್ತ, ಪು. ೬೨, ೬೩.
212 ಎಂ. ಚಿದಾನಂದಮೂರ್ತಿ, ಪಗರಣ (ಹಗರಣ) ಇತಿಹಾಸದಲ್ಲಿ ಮತ್ತು ಸಮಕಾಲೀನದಲ್ಲಿ, ಪ್ರಕ., ೫೫–೪.
213 ಎ. ಆರ್. ಕೃಷ್ಣಶಾಸ್ತ್ರೀ, 'ಸಂಸ್ಕೃತ ನಾಟಕ', ಮೈಸೂರು, ೧೯೫೫, ಪು. ೩೦.
214 'ಕವಿರಾಜಮಾರ್ಗ', ಪು. ೧೪೮.
215-16 ಎಂ. ಚಿದಾನಂದಮೂರ್ತಿ, ಪೂರ್ವೋಕ್ತ, ಪ್ರಕ., ೫೫–೪.
217 'ಪಾರ್ತಿಸುಬ್ಬ', ಪು. ೨೯, ೩೦.
218-19 ಎಂ. ಚಿದಾನಂದಮೂರ್ತಿ, ಪೂರ್ವೋಕ್ತ, ಪ್ರಕ., ೫೫–೪.
220 ಪ್ರಾಚೀನ ಕನ್ನಡ ಕವಿಗಳು ಮತ್ತು ನಾಟಕ, (ಅಪ್ರಕಟಿತ ಲೇಖನ).
221 ಸುಬ್ರಹ್ಮಣ್ಯಶರ್ಮಾ ದೇವನೀಮಠ ಅವರು ಜಕ., ೧೩–೧೨ರಲ್ಲಿ 'ಹಗಣ'ದ ಬಗ್ಗೆ ಒಂದು ಲೇಖನ ಬರೆದಿದ್ದು, ಅದರ ಸ್ವರೂಪವನ್ನು ಹಿಂದೆಯೇ ಸ್ವಲ್ಪಮಟ್ಟಿಗೆ ಪ್ರಸ್ತಾಪಿಸಿದ್ದರು.
222 ಎಂ. ಚಿದಾನಂದಮೂರ್ತಿ, ಪೂರ್ವೋಕ್ತ, ಪ್ರಕ., ೫೫–೪.

223 Early History of Kannada Literature, *JRAS.*, XXII, 1890, pp. 254–60.
224 Kavisvara's Kavirajamarga, *IA.*, XXXIII, 1904, pp. 258–80.
225 'ಕವಿರಾಜಮಾರ್ಗ', ೧೮೯೮, ಪೀಠಿಕೆ, ಪು. ೧೧–೧೨.

226 ಕಕಚ., I, ೧೯೭೨, ಪು. ೧೦–೧೬.
227 ಕನ್ನಡ ಸಾಹಿತ್ಯದ ಹಳಮೆ, 'ಕುಂದಮಾಲೆ', ೧೯೬೦.
228 'ಕನ್ನಡ ಸಾಹಿತ್ಯ ಚರಿತ್ರೆ', ೧೯೬೦, ಪು. ೧೫–೧೯.
229 'ಕವಿರಾಜಮಾರ್ಗ', ೧೯೬೮, ಟಿಪ್ಪಣಿಗಳು, ಪು. ೧೨೯.
230 ಕಕಚ., I, ೧೯೭೨, ಪು. ೧೦.
231 Amoghavarsha I as a patron of Literature, *IA.*, XXXIII, 1904, pp. 197–200.
232–34 A Note on Vimala, *IA.*, XIX, pp. 378–80.
235 ನೋಡಿ: ಅ.ಟಿ. ೨೩೧.
236 ನೋಡಿ : ಅ.ಟಿ. ೨೨೭.
237–38 'ಕವಿರಾಜಮಾರ್ಗ ವಿವೇಕ', ಮೈಸೂರು, ೧೯೭೩, ಪು. ೬೦–೬೩.
239 'ಶೃಂಗಾರ ನಿದರ್ಶನ', ೧೯೭೧, ಪೀಠಿಕೆ, ಪು. ೩.
240 'ಕವಿರಾಜಮಾರ್ಗ', ೧೯೩೦, ಪೀಠಿಕೆ, ಪು. ೧೧–೧೨,
241 ಕಕಚ., I, ೧೯೭೨, ಪು. ೧೦–೧೬.
242 *A History of Indian Literature II*, pp. 341–44.
243 ನೋಡಿ: ಅ.ಟಿ. ೨೪೧.
244 K. G. Kundangar (ed), *Inscriptions in Northern Karnataka and the Kolhapur State*, pp. 100.
245–46 ಎಂ. ಎಂ. ಕಲಬುರ್ಗಿ, 'ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ', ೧೯೭೩, ಪು. ೭೫.
247 'ಪ್ರಭುದೇವರ ಪುರಾಣ', ೧೯೪೦, ೬–೯೧.
248 'ಸಿದ್ಧರಾಮಚಾರಿತ್ರ', ೧೯೪೧, ಟಿಪ್ಪಣಿ, ಪು. ೧೭೧.
249 *JRAS.*, XXII, pp. 254–60.
250 ನೋಡಿ : ಅ.ಟಿ. ೨೪೧.
251 ಕಕಚ., I, ೧೯೭೨, ಅನುಬಂಧ II, ಪು. ೪೯.
252 ಕೆ. ಕೃಷ್ಣಮೂರ್ತಿ, 'ಸಂಸ್ಕೃತ ಕಾವ್ಯ', ೧೯೫೮, ಪು. ೨೭೧–೭೨.
253 *EI.*, VI, 1–12.
254 *HKLit.*, 1940, p. 4.
255 ನೋಡಿ : ಅ.ಟಿ. ೨೨೩.
256 *Mysore and Coorg from the Inscriptions*, 1909, p. 196.
257 *MAR.*, 1912, p. 35.
258 *Mediaeval Jainism*, pp. 23.
259 *HKLit.*, 1940, pp. 2–4.
260 ಎಂ. ಎಂ. ಕಲಬುರ್ಗಿ, ಪೂರ್ವೋಕ್ತ, ಪು. ೮೧.
261 ನೋಡಿ : ಅ.ಟಿ. ೨೫೬.
262-63 'ಕನ್ನಡ ಸಾಹಿತ್ಯ ಚರಿತ್ರೆ', ೧೯೬೦, ಪು. ೧೭.
264 Remarks on Mr. R. Narasimhachar's note, *JRAS.*, 1911, pp. 186–88.
265 V. Raghavan, *Bhojas Srangara Prakasha*, The Sanskrit Version of the Brahatkatha known to Bhoja; 1963.

266 ಎಂ. ಎಂ. ಕಲಬುರ್ಗಿ, ದುರ್ವಿನೀತನ ಬೃಹತ್ಕಥೆ : ಸ್ವರೂಪ ವಿವೇಚನೆ, 'ಇಕ್ಷುಕಾವೇರಿ', ೧೯೭೪, ಪು. ೧೭೬.

267-68 ಎಂ. ಎಂ. ಕಲಬುರ್ಗಿ, ಪೂರ್ವೋಕ್ತ, ಪು. ೮೩–೮೪.

269 *JRAS.*, XXII, pp. 186–88.

270-71 ಎಂ. ಚಿದಾನಂದಮೂರ್ತಿ, 'ಕವಿರಾಜಮಾರ್ಗ', ಐಬಿಎಚ್. ಪ್ರಕಾಶನ, ೧೯೭೩, ಪು. ೧೨, ೧೭.

272 *MAR.*, 1930, No. 36.

273 *EI.*, X, pp. 150.

274-75 ಕಕಚ., I, ೧೯೭೨, ಪು. ೧೦–೧೬.

276 'ಶಬ್ದಮಣಿದರ್ಪಣದ ಪಾಠಾಂತರಗಳು', ೧೯೭೨, ಪು. ೪೬.

277 ಎಂ. ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೧೫–೧೮.

278 'ಕನ್ನಡ ಕುವಲಯಾನಂದ', ೧೯೭೦, ಮುನ್ನುಡಿ, ಪು. ೧೬೪.

279 ಸಮಂತಭದ್ರನೇ ಶ್ರೀವಿಜಯನಿರಬಹುದೇ? 'ಸಾಹಿತ್ಯದ ವಿರಾಟ್‌ಸ್ವರೂಪ', ೧೯೭೪, ಪು. ೩೫೫–೬೨.

280 ಎಂ. ಎಂ. ಕಲಬುರ್ಗಿ, ಪೂರ್ವೋಕ್ತ, ಪು. ೮೫.

281 *IA.*, XXXIII, 1904, pp. 258–80.

282 ರಂ. ಶ್ರೀ. ಮುಗಳಿ, 'ಕನ್ನಡ ಸಾಹಿತ್ಯ ಚರಿತ್ರೆ', ೧೯೬೦, ಪು. ೧೯.

283 ನೋಡಿ : ಅ.ಟಿ. ೨೭೯.

284 *Karnataka Sabdanusasanam*, 1890, Intro. p. 21.

285 ರಂ. ಶ್ರೀ. ಮುಗಳಿ, 'ಕನ್ನಡ ಸಾಹಿತ್ಯ ಚರಿತ್ರೆ', ೧೯೬೦, ಪು. ೩೦.

286 ಕಕಚ., I, ಪೂರ್ವೋಕ್ತ, ಪು. ೮೧.

287-88 ರಂ. ಶ್ರೀ. ಮುಗಳಿ, ಪೂರ್ವೋಕ್ತ, ಪು. ೨೧.

289 ಬಿ. ಎಲ್. ರೈಸ್, ಪೂರ್ವೋಕ್ತ, ಪು. ೨೩.

290 ನೋಡಿ : ಅ.ಟಿ. ೨೬೯.

291 ಕಕಚ., I, ೧೯೭೨, ಪು. ೧೬.

292 ಎಂ. ಎಂ. ಕಲಬುರ್ಗಿ, ಪೂರ್ವೋಕ್ತ, ಪು. ೮೭.

ಅಧ್ಯಾಯ ಏಳು

# 'ಕವಿರಾಜಮಾರ್ಗ'

## ಪೀಠಿಕೆ

ಕನ್ನಡ ಸಾಹಿತ್ಯದ ಉಪಲಬ್ಧಗ್ರಂಥಗಳಲ್ಲಿ 'ಕವಿರಾಜಮಾರ್ಗ' ಅತ್ಯಂತ ಪ್ರಾಚೀನವಾದ್ದು. ಈ ಗ್ರಂಥದಲ್ಲಿ ಅಲಂಕಾರಶಾಸ್ತ್ರ ವಿಷಯಗಳನ್ನು ಸಂಕ್ಷೇಪವಾಗಿ ಕನ್ನಡದಲ್ಲಿ ವಿವರಿಸಿದೆ. ಈ ಕಾರಣವಾಗಿ ಇದು ಕನ್ನಡ ಸಾಹಿತ್ಯದ ಉಪಲಬ್ಧಗ್ರಂಥಗಳಲ್ಲಿ ಪ್ರಾಚೀನತಮವಾಗಿರುವುದು ಮಾತ್ರವಲ್ಲದೆ, ಲಕ್ಷಣಗ್ರಂಥಗಳಲ್ಲಿಯೂ ಕಾವ್ಯಲಕ್ಷಣ ಗ್ರಂಥಗಳಲ್ಲಿಯೂ ಮೊತ್ತಮೊದಲನೆಯದು ಕೂಡ ಆಗಿದೆ. ಗ್ರಂಥಕರ್ತೃವಿನ ಹೆಸರು ನೇರವಾಗಿ ಎಲ್ಲಿಯೂ ಗ್ರಂಥದಲ್ಲಿ ಉಕ್ತವಾಗಿಲ್ಲ. ಆದ್ದರಿಂದ ಕರ್ತೃ ನೃಪತುಂಗನೆಂದು ಕೆಲವರೂ ಕವೀಶ್ವರನೆಂದು ಇನ್ನು ಕೆಲವರೂ ಶ್ರೀವಿಜಯನೆಂದು ಮತ್ತೆ ಕೆಲವರೂ ವಾದಿಸಿರುವುದರಿಂದ, ಕರ್ತೃ ಯಾರೆಂಬುದು ಒಂದು ಸಮಸ್ಯೆಯಾಗಿದೆ; ಆದರೆ ಗ್ರಂಥವು ಹುಟ್ಟಿದ ಕಾಲದ ವಿಷಯದಲ್ಲಿ ಇಂಥ ಸಮಸ್ಯೆಯೇನೂ ಇಲ್ಲ. ೮೧೪ರಿಂದ ೮೭೭ರವರೆಗೆ ರಾಷ್ಟ್ರಕೂಟ ಮನೆತನದ ದೊರೆಯಾಗಿ ರಾಜ್ಯವಾಳಿದ, 'ನರಲೋಕಚಂದ್ರ', 'ವೀರನಾರಾಯಣ', 'ಕೃತಕೃತ್ಯಮಲ್ಲವಲ್ಲಭ', 'ಅತಿಶಯಧವಳ' ಮುಂತಾದ ಬಿರುದುಗಳಿದ್ದಂತೆ ತಿಳಿಯುವ ಅಮೋಘವರ್ಷ ನೃಪತುಂಗನ ಕಾಲದಲ್ಲಿ ಈ ಗ್ರಂಥ ರಚಿತವಾಯಿತೆಂದು ನಿರ್ವಿವಾದವಾಗಿ ಹೇಳಬಹುದು. ಇದಕ್ಕೆ ಗ್ರಂಥದಲ್ಲಿಯೇ ಸ್ಪಷ್ಟ ಸಾಕ್ಷ್ಯಗಳು ದೊರೆಯುತ್ತವೆ.[1]

'ಕವಿರಾಜಮಾರ್ಗ'ದಲ್ಲಿ ೩ ಪರಿಚ್ಛೇದಗಳಿವೆ. ಅವು ದೋಷಾದೋಷಾನುವರ್ಣನ ವಿಷಯ, ಶಬ್ದಾಲಂಕಾರ ವರ್ಣನಾನಿರ್ಣಯ, ಅರ್ಥಾಲಂಕಾರ ಪ್ರಕರಣ ಎಂಬ ಹೆಸರಿನಲ್ಲಿವೆ. ವಸ್ತುನಿರೂಪಣೆಗೆ ಮುಖ್ಯವಾಗಿ ಕಂದಪದ್ಯಗಳನ್ನೂ ಅಲ್ಲಲ್ಲಿ ಕೆಲವು ಬಗೆಯ ವರ್ಣವೃತ್ತಗಳನ್ನೂ ಶ್ಲೋಕಗಳನ್ನೂ ದೇಶ್ಯಛಂದಸ್ಸಿನ ಗೀತಿಕೆಯನ್ನೂ ಬಳಸಿದೆ. ಪ್ರಥಮ ಪರಿಚ್ಛೇದದಲ್ಲಿ ಮುಖ್ಯವಾಗಿ ಕೃತಿಸಂಬಂಧವಾದ ದೋಷಗಳು ಮತ್ತು ಅವುಗಳ ಪರಿಹಾರವನ್ನು ನಿರೂಪಿಸಿದೆ. ದ್ವಿತೀಯ ಪರಿಚ್ಛೇದದಲ್ಲಿ ಕೆಲವು ವ್ಯಾಕರಣಾಂಶಗಳು, ದಕ್ಷಿಣೋತ್ತರಮಾರ್ಗಗಳು ಮತ್ತು ಕೆಲವು ಶಬ್ದಾಲಂಕಾರಗಳನ್ನು ಹೇಳಿದೆ. ತೃತೀಯ ಪರಿಚ್ಛೇದದಲ್ಲಿ ಉಪಮಾ ರೂಪಕಾದಿಯಾದ ಕೆಲವು ಅರ್ಥಾಲಂಕಾರಗಳನ್ನು ಸಾಕಷ್ಟು

ವಿವರವಾಗಿ ನಿರೂಪಿಸಿದೆ. ಈ ಮೂರೂ ಪರಿಚ್ಛೇದಗಳ ವಿಷಯಗಳ ನಿರೂಪಣೆಗೆ ವಿಶೇಷವಾಗಿ ಭಾಮಹನ 'ಕಾವ್ಯಾಲಂಕಾರ' ಮತ್ತು ದಂಡಿಯ 'ಕಾವ್ಯಾದರ್ಶ' ಈ ಪ್ರಾಚೀನ ಸಂಸ್ಕೃತ ಕಾವ್ಯಲಕ್ಷಣಗ್ರಂಥಗಳನ್ನು ಅಲ್ಲಲ್ಲಿ ಅನುಸರಿಸಿರುವುದು ಪರಸ್ಪರ ತುಲನೆಯಿಂದ ವಿಶದಪಡುತ್ತದೆ. ಸ್ವೋಪಜ್ಞವಾದ ಕೆಲವಂಶಗಳೂ ಇವೆ. ಇವು ಅಲಂಕಾರ ವಿಷಯಗಳಿಗಿಂತ, ಕನ್ನಡ ನಾಡು, ನುಡಿ ಹಾಗೂ ಸಾಹಿತ್ಯದ ಸ್ಥಿತಿಗತಿಗಳನ್ನೂ ಕನ್ನಡ ವ್ಯಾಕರಣ ಮತ್ತು ಛಂದಸ್ಸುಗಳಿಗೆ ಸಂಬಂಧಿಸಿದ ಸಾಮಾನ್ಯ ಸಂಗತಿಗಳನ್ನೂ ಹೇಳಿರುವ ಭಾಗಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಕನ್ನಡ ನಾಡು ನುಡಿಗಳ ಚರಿತ್ರೆಯ ದೃಷ್ಟಿಯಿಂದ ಈ ಕೆಲವಂಶಗಳು ತುಂಬ ಬೆಲೆಯುಳ್ಳವಾಗಿವೆ.

'ಕವಿರಾಜಮಾರ್ಗ'ದಲ್ಲಿ ಪ್ರಾಚೀನ ಸಂಸ್ಕೃತ ಕವಿಗಳಲ್ಲಿ 'ಕಾದಂಬರಿ' 'ಹರ್ಷಚರಿತ'ಗಳೆಂಬ ಗದ್ಯಕಾವ್ಯಗಳ ಕರ್ತೃವಾದ ಬಾಣನನ್ನೂ ಗುಣಸೂರಿ ನಾರಾಯಣ ಭಾರವಿ ಕಾಳಿದಾಸ ಮಾಘರೆಂಬ ಪದ್ಯಕವಿಗಳನ್ನೂ ಹೆಸರಿಸಿದೆ. ಹೀಗೆಯೇ ಪ್ರಾಚೀನ ಕನ್ನಡ ಕವಿಗಳಲ್ಲಿ ವಿಮಲ, ಉದಯ (ಅಥವಾ ವಿಮಲೋದಯ), ನಾಗಾರ್ಜುನ, ಜಯಬಂಧು, ದುರ್ವಿನೀತರೆಂಬ ಗದ್ಯಕವಿಗಳನ್ನೂ ಶ್ರೀವಿಜಯ, ಕವೀಶ್ವರ (ಅಥವಾ ಶ್ರೀವಿಜಯಕವೀಶ್ವರ), ಪಂಡಿತ, ಚಂದ್ರ (ಅಥವಾ ಪಂಡಿತಚಂದ್ರ), ಲೋಕಪಾಲರೆಂಬ ಪದ್ಯಕವಿಗಳನ್ನೂ ಹೆಸರಿಸಿದೆ. ಈ ಗ್ರಂಥದ ಕೆಲವು ಪದ್ಯಗಳು 'ಶಬ್ದಮಣಿದರ್ಪಣ' (ಸು. ೧೨೬೦) ಮುಂತಾದ ಈಚಿನ ಕೆಲವು ಕನ್ನಡ ಗ್ರಂಥಗಳಲ್ಲಿ ಉದಾಹೃತವಾಗಿವೆ; ದುರ್ಗಸಿಂಹ (೧೦೩೧) ಭಟ್ಟಾಕಳಂಕ (೧೬೦೪)ರೆಂಬ ಕನ್ನಡ ಕವಿಗಳು ತಮ್ಮ ಗ್ರಂಥಗಳಲ್ಲಿ ಈ ಗ್ರಂಥವನ್ನು ಉಲ್ಲೇಖಿಸಿರುವಂತೆ ತೋರುತ್ತದೆ.[2] ಪೂರ್ವಕವಿಗಳ ಉದಾಹರಣೆಗಳೇನಾದರೂ 'ಕವಿರಾಜಮಾರ್ಗ'ದಲ್ಲಿವೆಯೇ ಎನ್ನುವ ವಿಷಯದಲ್ಲಿ ಸ್ವಲ್ಪ ಸಂದಿಗ್ಧತೆಯಿದೆ.

ಕನ್ನಡ ಸಾಹಿತ್ಯದ ಒಂದು ಅಮೂಲ್ಯಗ್ರಂಥವಾದ 'ಕವಿರಾಜಮಾರ್ಗ'ವನ್ನು ಮೊತ್ತಮೊದಲು (೧೮೯೮) ಸಂಪಾದಿಸಿ ಪ್ರಕಟಿಸಿದವರು ಕೆ. ಬಿ. ಪಾಠಕ್ ಅವರು. ಆಗ ಇದು ಬಿ. ಎಲ್. ರೈಸ್ ಅವರ ಮಾರ್ಗದರ್ಶನದಲ್ಲಿ 'ಬಿಬ್ಲಿಯೋಥಿಕಾ ಕರ್ನಾಟಿಕಾ' ಗ್ರಂಥಮಾಲೆಯಲ್ಲಿ ಪ್ರಕಟವಾಯಿತು. ಬಳಿಕ ಎ. ವೆಂಕಟರಾವ್ ಮತ್ತು ಎಚ್. ಶೇಷ ಅಯ್ಯಂಗಾರ್ ಅವರಿಂದ ಸಂಪಾದಿತವಾಗಿ, ಮದ್ರಾಸು ವಿಶ್ವವಿದ್ಯಾನಿಲಯದ ವತಿಯಿಂದ ಎರಡನೆಯ ಸಲ (೧೯೩೦) ಹೊರಬಂದಿತು. ಈಚೆಗೆ ೧೯೬೮ರಲ್ಲಿ, ಎಂ. ವಿ. ಸೀತಾರಾಮಯ್ಯನವರು ಇನ್ನೊಮ್ಮೆ ಗ್ರಂಥವನ್ನು ಸಂಪಾದಿಸಿ, ಬೆಂಗಳೂರು ವಿಶ್ವವಿದ್ಯಾನಿಲಯದ ಕರ್ಣಾಟಕ ಸಂಘದ ಮೂಲಕ ಪ್ರಕಟಿಸಿದರು. ಈ ಮೂರೂ ಪರಿಷ್ಕರಣಗಳಿಗೆ ಉಪಯುಕ್ತವಾದ ಉಪೋದ್ಘಾತಗಳೂ ಇತರ ಸಹಾಯಕ ಸಾಮಗ್ರಿಗಳೂ ಸೇರಿವೆ. ಮೊದಮೊದಲ ಉಲ್ಲೇಖಗಳಿಂದ ಗ್ರಂಥಕ್ಕೆ ಒಂದು ಪ್ರಚಾರವನ್ನೂ ಮಹತ್ತ್ವವನ್ನೂ ತಂದುಕೊಟ್ಟವರು ಎಚ್. ಎಚ್. ವಿಲ್ಸನ್ (೧೮೨೮), ಬಿ. ಎಲ್. ರೈಸ್ (೧೮೯೦), ಕೆ. ಬಿ. ಪಾಠಕ್ (೧೮೯೮), ಜೆ. ಎಫ್. ಫ್ಲೀಟ್ (೧೯೦೪), ಆರ್. ನರಸಿಂಹಾಚಾರ್

(೧೯೦೭) ಈ ಕೆಲವರು. ಬಳಿಕ ಎನ್. ಎಸ್. ರಾಜಪುರೋಹಿತ, ಎ. ಆರ್. ಕೃಷ್ಣ ಶಾಸ್ತ್ರೀ, ಟಿ. ಎಸ್. ವೆಂಕಣ್ಣಯ್ಯ, ಎ. ವೆಂಕಟರಾವ್-ಎಚ್. ಶೇಷ ಅಯ್ಯಂಗಾರ್, ಬಿ. ಎಂ. ಶ್ರೀಕಂಠಯ್ಯ, ಮುಳಿಯ ತಿಮ್ಮಪ್ಪಯ್ಯ, ಎಂ. ಗೋವಿಂದ ಪೈ ಮೊದಲಾದವರು 'ಕವಿರಾಜಮಾರ್ಗ'ದ ಕರ್ತೃತ್ವ ವಿಚಾರ ಮತ್ತು ಇತರ ಅನೇಕ ವಿಚಾರಗಳನ್ನು ಹಿಡಿದು ವ್ಯಾಪಕವಾದ ಚರ್ಚೆ ನಡಸಿದರು. ಹೊಸ ಹೊಸ ಮುಖಗಳನ್ನು ಪಡೆದು ಇನ್ನೂ ಈ ಚರ್ಚೆ ಗ್ರಂಥಗಳಲ್ಲಿಯೂ ವಿದ್ವತ್ಪತ್ರಿಕೆಗಳಲ್ಲಿಯೂ ನಡೆಯುತ್ತಲೇ ಇದೆ. ಪ್ರತ್ಯೇಕ ಗ್ರಂಥಗಳೂ ಲೇಖನಗಳೂ ಹುಟ್ಟುತ್ತಲೇ ಇವೆ.

ಪ್ರಸ್ತುತ, ಈ ಅಧ್ಯಾಯದಲ್ಲಿ 'ಕವಿರಾಜಮಾರ್ಗ'ದ ಹಲವು ವಿಷಯಗಳಿಗೆ ಸಂಬಂಧಿಸಿ ಈವರೆಗೆ ವಿದ್ವತ್ಪ್ರಪಂಚದಲ್ಲಿ ನಡೆದಿರುವ ವಿಚಾರ ವಿಮರ್ಶೆಗಳನ್ನು ಲಕ್ಷ್ಯದಲ್ಲಿಟ್ಟು ಕೊಂಡು, ಅವುಗಳ ಸಾರಾಂಶವನ್ನು ಸಂಗ್ರಹಿಸುತ್ತಲೂ ವಿಮರ್ಶಿಸುತ್ತಲೂ ಕ್ರಮವಾಗಿ ಕರ್ತೃತ್ವವಿಚಾರ, ಕವಿರಾಜಮಾರ್ಗದೊಳಗೆ ಕಂಡುಬರುವ ಭಾಷೆ-ವ್ಯಾಕರಣ, ಛಂದಸ್ಸು, ಅಲಂಕಾರ, ಚಾರಿತ್ರಿಕ, ಸಾಮಾಜಿಕ ಮತ್ತು ಧಾರ್ಮಿಕ ಸಂಗತಿಗಳು, ಉತ್ತರಕಾಲೀನ ಸಾಹಿತ್ಯದ ಮೇಲೆ ಆ ಗ್ರಂಥದ ಪ್ರಭಾವ ಮತ್ತು ಅದರ ಕಾವ್ಯಮೌಲ್ಯ —ಈ ಕೆಲವು ವಿಷಯಗಳನ್ನು ಅಧಿಕರಿಸಿ ಪ್ರತ್ಯೇಕವಾಗಿ ಮುಂದೆ ವಿವೇಚಿಸಲಾಗುವುದು.

## ಕರ್ತೃತ್ವ ವಿಚಾರ

### ಪ್ರಥಮ ಘಟ್ಟ

#### ಕೆ. ಬಿ. ಪಾಠಕ್ ಅವರು : ನೃಪತುಂಗಕರ್ತೃತ್ವ ಸೂಚನೆ

'ಕವಿರಾಜಮಾರ್ಗ' ಗ್ರಂಥಕ್ಕೆ ಬರೆದಿರುವ ಪೀಠಿಕೆಯಲ್ಲಿ ಗ್ರಂಥಕರ್ತೃವಿನ ಬಗ್ಗೆ ಪಾಠಕ್ ಅವರು ಈ ಕೆಳಗೆ ಕಾಣಿಸಿರುವಂತೆ ತಮ್ಮ ಅಭಿಪ್ರಾಯಗಳನ್ನು ಸಕಾರಣವಾಗಿ ಮುಂದಿಟ್ಟಿರುವರು :[3]

(i) "ನೃಪತುಂಗದೇವಮತದಿಂ" (೩–೯೮), "ಅತಿಶಯಧವಳಧರಾಧಿಪಮತದಿಂದಂ" (೩–೧೧೧), "ಅಖಿಳಧರಾವಲ್ಲಭಂ ಅಮೋಘವರ್ಷನೃಪೇಂದ್ರಂ" (೩–೧)– ಈ ಹೇಳಿಕೆಗಳಿಂದ ಇದನ್ನು ಬರೆದವನು ನೃಪತುಂಗನೆಂದೂ ಈತನಿಗೆ ಅಮೋಘವರ್ಷ ಮತ್ತು ಅತಿಶಯಧವಳ ಎಂಬ ಬಿರುದುಗಳು ಇದ್ದವೆಂದೂ ಆತನು ರಾಜನಾಗಿದ್ದನೆಂದೂ ವ್ಯಕ್ತವಾಗುತ್ತವೆ.

(ii) ಆದರೆ ಇಲ್ಲಿ ಕಂಡುಬರುವ ಒಂದೆರಡು ಹೇಳಿಕೆಗಳು, ಈ ಗ್ರಂಥವನ್ನು ಬರೆದವನು ದಿಟವಾಗಿ ನೃಪತುಂಗನಲ್ಲವೆಂದು ಭಾವಿಸುವಂತೆಯೂ ಇವೆ. ಉದಾಹರಣೆಗೆ, ಮೂರು ಪರಿಚ್ಛೇದಗಳ ಕಡೆಯಲ್ಲಿಯೂ "ನೃಪತುಂಗದೇವಾನುಮತಮಪ್ಪ ಕವಿರಾಜಮಾರ್ಗದೊಳ್" ಎಂಬ ವಾಕ್ಯವಿದೆಯಷ್ಟೆ. ಇಲ್ಲಿ 'ಅನುಮತಂ' ಎಂದರೆ "ಗ್ರಂಥಕರ್ತೃವು

ಇಲ್ಲಿ ಸಂಗ್ರಹಿಸಿರುವ ಪ್ರಾಚೀನರ ಅಭಿಪ್ರಾಯಗಳು" ಎಂದು ಅರ್ಥವಾಗುತ್ತದೆ. ಆದರೆ, "ಸವಿಶೇಷಗುಣಂ ಅತಿಶಯಧವಳೋಕ್ತಿಕ್ರಮದಿಂ ಅಱಿಪುವೆಂ ತದ್ಭವದೊಳ್" (೨-೫೩) ಎಂಬ ಹೇಳಿಕೆಯನ್ನು ಸಮರ್ಪಕವಾಗಿ ವಿವರಿಸಲಾಗುವುದಿಲ್ಲ.

(iii) ಆದರೂ ಈ ಒಂದೇ ಒಂದು ನಿದರ್ಶನಕ್ಕೆ ಪ್ರತಿಯಾಗಿ, ನೃಪತುಂಗನೇ ಈ ಕೃತಿಯ ಕರ್ತೃವೆಂಬುದಕ್ಕೆ ಈ ಕೆಳಗೆ ಕಾಣುವ ಇತರ ಹೇಳಿಕೆಗಳನ್ನು ಉದಾಹರಿಸಬಹುದು: "ಭಾವಿಸಿ ಬೆಸಸಿದಂ ಅಖಿಲಧರಾವಲ್ಲಭನಿಂತಮೋಘವರ್ಷನೃಪೇಂದ್ರಂ" (೩-೨); "ಎಂದಂ ಅತಿಶಯಧವಳಂ" (೨-೨೭); "ಅತಿಶಯಧವಳೋರ್ವಿಪೋದಿತಾಲಂಕೃತಿ" (೧-೧೪೭); "ಅತಿಶಯಧವಳೋಕ್ತಕ್ರಮದೆ" (೧-೨೪).

(iv) 'ನೃಪತುಂಗದೇವಮಾರ್ಗ' ಅಥವಾ 'ಕವಿರಾಜಮಾರ್ಗ'ದಲ್ಲಿ ಅಡಕವಾಗಿರುವ ಜ್ಞಾನವು ಮಹಾತ್ಮನನ್ನು ಕಾವ್ಯರತ್ನಾಕರದ ತಟವನ್ನು ಮುಟ್ಟಿಸುವ ಯಾನಪಾತ್ರವೆಂದು ಹೇಳಿದೆ (೩-೨೩೦). "ನುತಸರಸ್ವತೀತೀರ್ಥಾವತಾರಮಾರ್ಗ" (೩-೩೨೫) ಎಂಬ ಮತ್ತೊಂದು ಉಕ್ತಿಯಲ್ಲಿ ನೃಪತುಂಗನನ್ನು ಪವಿತ್ರವಾದ ಸರಸ್ವತೀ ತೀರ್ಥಕ್ಕೆ ಕರೆದೊಯ್ಯುವ ಸೋಪಾನಗಳಿಗೆ ಹೋಲಿಸಿದೆ. ಈ ಅಭಿಪ್ರಾಯಗಳು ಈ ಗ್ರಂಥವನ್ನು ಬರೆದವನು ನೃಪತುಂಗನೇ ಎನ್ನುವುದನ್ನು ದೃಢಪಡಿಸುತ್ತವೆ.

(v) 'ಕವಿರಾಜಮಾರ್ಗ' ಎಂಬ ಹೆಸರೂ ಗ್ರಂಥಕರ್ತೃ ಆಗಿಂದಾಗ್ಗೆ ಬಳಸುವ 'ನೃಪತುಂಗದೇವಮಾರ್ಗ' ಎಂಬ ಹೆಸರಿಗೆ ಸಂವಾದಿಯಾಗಿರುತ್ತದೆ. 'ನೃಪತುಂಗದೇವಮಾರ್ಗ' ಎಂದರೆ, ಮಾನ್ಯ ನೃಪತುಂಗನಿಂದ ನಿರ್ದೇಶಿತವಾದ ಮಾರ್ಗ ಎಂದು ವೇದ್ಯವಾಗುತ್ತದೆ.("ಮಹಾನೃಪತುಂಗದೇವನಾದರದೊಳೆ ಪೇಳ್ದ ಮಾರ್ಗ" (೨-೧೦೫), "ಅತಿಶಯಧವಳೋಪದೇಶ ಮಾರ್ಗ" (೩-೧೦೬)–ಇವುಗಳನ್ನೂ ಇಲ್ಲಿ ಲಕ್ಷಿಸಬಹುದು.) ಆದ್ದರಿಂದ 'ಕವಿರಾಜಮಾರ್ಗ' ಎಂದರೆ, ಕವಿರಾಜನಿಂದ ನಿರ್ದೇಶಿತವಾದ ಮಾರ್ಗವೆಂದೂ ಆತನು ನೃಪತುಂಗನಲ್ಲದೆ ಬೇರೆ ಯಾರೂ ಅಲ್ಲವೆಂದೂ ವಿದಿತವಾಗುತ್ತದೆ.

(vi) ಮೇಲೆ ಹೇಳಿರುವ ಬಿರುದುಗಳಲ್ಲದೆ, ಗ್ರಂಥಕರ್ತೃ ತನ್ನನ್ನು ನರಲೋಕಚಂದ್ರ, ನೀತಿನಿರಂತರ, ನಿತ್ಯಮಲ್ಲವಲ್ಲಭ ಮತ್ತು ಕೃತಕೃತ್ಯಮಲ್ಲವಲ್ಲಭ ಎಂಬುದಾಗಿ ಕರೆದುಕೊಂಡಿರುತ್ತಾನೆ. ಮೊದಲನೆಯ ಅಮೋಘವರ್ಷನಿಗೆ ವಲ್ಲಭ ಎಂಬ ಬಿರುದು ಇತ್ತೆಂಬುದು ಶಾಸನಗಳಿಂದ ತಿಳಿದು ಬರುತ್ತದೆ. ಅಲ್ಲದೆ, ಕನ್ನಡ ಗ್ರಂಥಕರ್ತೃಗಳು ಕೆಲವು ವೇಳೆ ತಮ್ಮ ಪ್ರಶಸ್ತಿಗಳನ್ನು ತಮ್ಮ ಕೃತಿಗಳಲ್ಲಿ ಸ್ತುತಿಸುವ ದೇವರಿಗೂ ಅನ್ವಯಿಸುತ್ತಾರೆಂಬುದನ್ನು ನಾವು ಮರೆಯುವಂತಿಲ್ಲ. ಇದಕ್ಕೆ ಅಭಿನವಪಂಪನನ್ನು ಉದಾಹರಿಸಬಹುದು. ಆದ್ದರಿಂದ ಕವಿರಾಜಮಾರ್ಗದ ಪ್ರಾರಂಭದಲ್ಲಿ ದೇವರನ್ನು ನೃಪತುಂಗ, ನೀತಿನಿರಂತರ, ಕೃತಕೃತ್ಯಮಲ್ಲ ಮತ್ತು ವೀರನಾರಾಯಣ ಎಂದು ಹೊಗಳಿರುವುದು ಆಶ್ಚರ್ಯವೇನಲ್ಲ.

ಈ ಕೆಲವು ಆಂತರಿಕ ಕಾರಣಗಳನ್ನು ಅವಲಂಬಿಸಿ, ಕೆ. ಬಿ. ಪಾಠಕರು 'ಕವಿರಾಜಮಾರ್ಗ'ದ ಕರ್ತೃ ನೃಪತುಂಗನೆಂದು ನಿರ್ಣಯಿಸಿದರು.

## ಜೆ. ಎಫ್. ಫ್ಲೀಟ್ ಅವರು : ಕವೀಶ್ವರ ಕರ್ತೃತ್ವ ಸೂಚನೆ

ಕೇವಲ ಹಸ್ತಪ್ರತಿಗಳಲ್ಲಿಯೇ ಉಳಿದಿದ್ದ 'ಕವಿರಾಜಮಾರ್ಗ'ವು ಬೆಳಕಿಗೆ ಬಂದೊಡನೆಯೇ ಆದರತ್ತ ವಿಶೇಷವಾಗಿ ಗಮನ ಹರಿಸಿದವರಲ್ಲಿ ಜೆ. ಎಫ್. ಫ್ಲೀಟ್ ಅವರು ಪ್ರಮುಖರು. ಅವರು 'ಕವಿರಾಜಮಾರ್ಗ'ದ ಕರ್ತೃತ್ವ ವಿಚಾರವಾಗಿ ಮಂಡಿಸಿರುವ ಸಂಗತಿಗಳನ್ನು ಹೀಗೆ ಸಂಗ್ರಹಿಸಬಹುದು :[1]

(i) ಯಾವುದಾದರೂ ಕೃತಿಯ ಕರ್ತನನ್ನು ನಿರ್ಧರಿಸುವಲ್ಲಿ ಆ ಕೃತಿಯ ಸಮಾಪ್ತಿ ವಾಕ್ಯವನ್ನು ಲಕ್ಷಿಸಬೇಕಾದ್ದು ಆಗತ್ಯ. ಪ್ರಕೃತದಲ್ಲಿ, 'ಕವಿರಾಜಮಾರ್ಗ'ದ ಪ್ರತಿಯೊಂದು ಪರಿಚ್ಛೇದದ ಕಡೆಯಲ್ಲಿಯೂ ಇರುವ ವಾಕ್ಯ ಈ ದೃಷ್ಟಿಯಿಂದ ತುಂಬ ಪ್ರಮುಖವಾದ್ದು. ಪ್ರಥಮ ಪರಿಚ್ಛೇದದ ಕಡೆಯಲ್ಲಿ "ಇದು ಪರಮಶ್ರೀನೃಪತುಂಗದೇವಾನುಮತಮಪ್ಪ ಕವಿರಾಜಮಾರ್ಗದೊಳ್" ಎಂಬುದಾಗಿಯೂ ದ್ವಿತೀಯ ಪರಿಚ್ಛೇದದ ಕಡೆಯಲ್ಲಿ ಅದೇ ರೀತಿಯಾಗಿಯೂ ಮೂರನೆಯ ಪರಿಚ್ಛೇದದ ಕಡೆಯಲ್ಲಿ "ಇದು ಪರಮ ಸರಸ್ವತೀ ತೀರ್ಥಾವತಾರ ನೃಪತುಂಗದೇವಾನುಮತಮಪ್ಪ ಕವಿರಾಜಮಾರ್ಗದೊಳ್" ಎಂಬುದಾಗಿಯೂ ಉಕ್ತವಾಗಿದೆ. ಗ್ರಂಥಕರ್ತೃ ನೃಪತುಂಗನೇ ಆಗಿದ್ದಲ್ಲಿ ಇಲ್ಲಿ 'ಅನುಮತ' ಎಂಬ ಶಬ್ದಕ್ಕೆ ಬದಲಾಗಿ 'ರಚಿತ' ಇಲ್ಲವೇ 'ವಿರಚಿತ' ಎಂಬ ಮಾತನ್ನು ಬಳಸುತ್ತಿದ್ದ. ಸಂಪಾದಕರು (ಕೆ. ಬಿ. ಪಾಠಕ್) ಈ ಅಂಶವನ್ನು ಗಮನಿಸಿದ್ದರೂ 'ಅನುಮತ' ಎಂಬ ಮಾತಿನಲ್ಲಿ ನೃಪತುಂಗನು ತನಗಿಂತ ಪೂರ್ವದಲ್ಲಿ ಇದ್ದವರ ಅಭಿಪ್ರಾಯಗಳನ್ನು ಸಮ್ಮತಿಸಿದ್ದಾನೆಂಬ ಅಭಿಪ್ರಾಯವನ್ನು ಅದು ಒಳಗೊಂಡಿರಬಹುದೆಂದು ಅರ್ಥ ಕಲ್ಪಿಸಿರುತ್ತಾರೆ. ಇದಕ್ಕೆ ಇಲ್ಲಿ ಅವಕಾಶವಿಲ್ಲ. ನೇರವಾದ ಅರ್ಥವನ್ನೇ ಸ್ವೀಕರಿಸಿದಲ್ಲಿ, ಪ್ರಕೃತ ಕೃತಿ ಅನ್ಯಕೃತವಿರಬೇಕೆಂದು ನಿಶ್ಚಯವಾಗುತ್ತದೆ.

(ii) ಪ್ರಾರಂಭದಲ್ಲಿರುವ ನಾಲ್ಕು ಪ್ರಾರ್ಥನಾಪದ್ಯಗಳಲ್ಲಿ ಮೊದಲೆರಡರಲ್ಲಿ ಗ್ರಂಥಕರ್ತನು ನೀತಿನಿರಂತರ, ಉದಾರ ಮೊದಲಾದ ಬಿರುದುಗಳುಳ್ಳ ನೃಪತುಂಗನೆಂಬಾತನು ತನಗೆ 'ಅತರ್ಕಿತೋಪಸ್ಥಿತಪ್ರತಾಪೋದಯ'ವನ್ನು ನೀಡಲಿ ಎಂಬುದಾಗಿ ಕೋರಿರುವುದು ಸುವ್ಯಕ್ತವಾಗುತ್ತದೆ. ಪೂರ್ವೋಕ್ತ ಸಂಪಾದಕರು ಎಣಿಸಿರುವಂತೆ, ಇಲ್ಲಿ ನೃಪತುಂಗನೇ ತನ್ನ ಬಿರುದುಗಳನ್ನು ದೇವರಿಗೆ ಅನ್ವಯಿಸಿ ಪ್ರಾರ್ಥಿಸಿರುತ್ತಾನೆಂಬ ಹೇಳಿಕೆ ಸಮಂಜಸವಾಗಿಲ್ಲ. ಈ ಎರಡು ಪದ್ಯಗಳಿಂದಲೇ ಈ ಕೃತಿಯ ಕರ್ತನು ನೃಪತುಂಗನಲ್ಲದೆ ಬೇರೊಬ್ಬನಿರಬೇಕೆಂದು ಹೇಳಬಹುದಾಗಿದೆ.

(iii) ಗ್ರಂಥದ ಉದ್ದಕ್ಕೂ ನೃಪತುಂಗ ಇಲ್ಲವೆ ಅತಿಶಯಧವಳನ ಹೆಸರಿನಲ್ಲಿ ಬರುವ ಇತರ ಉಲ್ಲೇಖಗಳನ್ನು ಗಮನಿಸಿದಾಗಲೂ ಆತನ ಪ್ರಶಸ್ತಿಯೇ ಹೆಚ್ಚಾಗಿ ತಿಳಿದುಬರುವುದರಿಂದ ಇದರ ಕರ್ತೃ ಬೇರೊಬ್ಬನಿರಬೇಕೆಂದು ತೋರಿಬರುತ್ತದೆ. "ಅತಿಶಯಧವಳೋಕ್ತಿ ಕ್ರಮದಿನಱಿಪುವೆಂ ತದ್ಭವದೊಳ್" (೨-೫೩) ಎಂಬ ಉಕ್ತಿಯಂತೂ, ಪ್ರಕೃತ ಲೇಖಕನು ನೃಪತುಂಗನಲ್ಲದೆ ಬೇರೆ ಯಾರೋ ಆಗಿರಬೇಕೆಂಬುದನ್ನು ಸ್ಪಷ್ಟಪಡಿಸುತ್ತದೆ. ಈ ತೊಡಕನ್ನು ಕೆ. ಬಿ. ಪಾಠಕರು ಮನಗಂಡು, ತಮ್ಮ ನಿರ್ಧಾರದ ಬಗ್ಗೆ

ಸಂದೇಹ ಬಂದರೂ, ಇದು ಏಕೈಕ ಅಪವಾದವೆಂದು ಕೈಬಿಟ್ಟಿರುವುದು ಸಾಧುವೆನ್ನಿಸದು. ಮೇಲ್ಕಂಡ ಹಲವಾರು ಎಡೆಗಳಲ್ಲಿ ನೃಪತುಂಗ, ಅತಿಶಯಧವಳ ಮತ್ತು ಅಮೋಘವರ್ಷ ಎಂಬ ಮಾತುಗಳು ಒಬ್ಬನಿಗೇ ಅನ್ವಯಿಸುತ್ತವೆಯೆಂದಾಗಲಿ, ಕಾಲಸೂಚಕ ಪದ್ಯ ವಾಗಲಿ, ಕವಿಯು ಆಶ್ರಿತನ ವಂಶಾವಳಿಯಾಗಲಿ ಉಕ್ತವಾಗಿಲ್ಲದಿದ್ದರೂ, ಇಲ್ಲಿ ಪ್ರಸ್ತಾಪಿಸಿರುವ ವ್ಯಕ್ತಿ ರಾಷ್ಟ್ರಕೂಟ ರಾಜನಾದ ನೃಪತುಂಗನೆಂದೂ ಈ ಕೃತಿ ಆತನ ಆಳ್ವಿಕೆಯ ಅವಧಿಯಲ್ಲಿ (೮೧೪–೮೭೭ರಿಂದ ೮೭೭–೭೮) ರಚಿತವಾಗಿರಬೇಕೆಂದೂ ನಾವು ಗ್ರಹಿಸಲು ಹಿಂತೆಗೆಯಬೇಕಾಗಿಲ್ಲ.

(iv) ಗ್ರಂಥಕರ್ತೃ ನೃಪತುಂಗನಲ್ಲವೆಂದು ನಿರಾಕರಿಸಿದ ಬಳಿಕ, ಅನ್ಯಕರ್ತೃ ಯಾರಿರಬಹುದು ಮತ್ತು ಆತನಿಗೆ ಈ ಕೃತಿಯನ್ನು ರಚಿಸಲು ಆಧಾರವೇನಾದರೂ ಇರ ಬಹುದೇ—ಎಂಬುದನ್ನು ಹೇಳಬೇಕಾಗುತ್ತದೆ. ಕೆ. ಬಿ. ಪಾಠಕರು ಈ ಸಂಗತಿಯನ್ನು ಗಮನಿಸಿಲ್ಲವಾದ್ದರಿಂದ ಇಲ್ಲಿ ನಾವು ವಿಚಾರಿಸುವುದು ಸೂಕ್ತ. ಈ ಸಂದರ್ಭದಲ್ಲಿ ಪ್ರಕೃತ ಕೃತಿಯಲ್ಲಿಯೇ ಉಕ್ತವಾಗಿರುವ 'ಪರಮ ಶ್ರೀವಿಜಯ' ಎಂಬ ಮಾತೂ ದುರ್ಗ ಸಿಂಹನು ಹೇಳಿರುವ "ಶ್ರೀ ವಿಜಯರ ಕವಿಮಾರ್ಗಂ" ಎಂಬ ಮಾತೂ ತುಂಬ ಮುಖ್ಯ ವಾದುವು. ಕವಿರಾಜಮಾರ್ಗದಲ್ಲಿಯೇ ಕಂಡುಬರುವ "ಶ್ರೀವಿಜಯಪ್ರಭೂತಮನಿದಂ ಕೈಕೊಳ್ವುದೀ ಮಾಬ್ಬಿಯಿಂ", "ಶ್ರೀವಿಜಯಪ್ರಭೂತಮುದಮಂ ತನಗಾಗಿಸಿದೊಂ ಕವೀಶ್ವರಂ", "ಪರಮ ಶ್ರೀವಿಜಯಪ್ರಭೂತಿಜಯಶಂ ಸ್ತ್ರೀಬಾಲವೃದ್ಧಾಹಿತಂ ಪರಮಾನಂದಿತಲೋಕಮೊಪ್ಪೆ ನೆಲೆಗೊಳ್ಗಾ ಚಂದ್ರತಾರಂಬರಂ" ಎಂಬ ಮೂರು ಪರಿಚ್ಛೇದಾಂತ ಪದ್ಯಭಾಗಗಳನ್ನೂ ಒಟ್ಟಾಗಿ ಹೋಲಿಸಿ ನೋಡಿದಲ್ಲಿ ಪ್ರಕೃತಗ್ರಂಥವು ಶ್ರೀವಿಜಯ ವಿರಚಿತವಾದ 'ಕವಿಮಾರ್ಗ'ವೆಂಬ ಕೃತಿಯನ್ನು ಅವಲಂಬಿಸಿ ರಚನೆಯಾಗಿರ ಬಹುದೆಂಬುದಾಗಿ ತಿಳಿದುಬರುತ್ತದೆ. ದ್ವಿತೀಯ ಪರಿಚ್ಛೇದದ ಅಂತ್ಯದಲ್ಲಿರುವ "ಶ್ರೀವಿಜಯ ಪ್ರಭೂತಮುದಮಂ ತನಗಾಗಿಸಿದೊಂ ಕವೀಶ್ವರಂ" ಎಂಬ ವಾಕ್ಯವನ್ನು ಮತ್ತಷ್ಟು ಮನನಮಾಡಿದ್ದೇ ಆದರೆ, ಇಲ್ಲಿ ಹೇಳಿರುವ ಕವೀಶ್ವರನೆಂಬಾತನು "ಶ್ರೀವಿಜಯನಿಗಾದಷ್ಟು ಆನಂದವನ್ನು ತಾನೂ ಪಡೆದನು" ಎಂದು ಅರ್ಥವಾಗುವಂತಿದ್ದು, 'ಕವಿಮಾರ್ಗ'ವನ್ನು 'ಕವಿರಾಜಮಾರ್ಗ'ವನ್ನಾಗಿ ವಿಸ್ತರಿಸಿರಬಹುದೆಂದು ತೋರು ತ್ತದೆ. 'ಕವೀಶ್ವರ' ಎಂಬ ಮಾತು ಅಂಕಿತನಾಮವೆನ್ನಿಸದಿದ್ದರೂ ಕಾವ್ಯನಾಮವಾಗಿರ ಬಹುದು. ಇಲ್ಲವೇ 'ಕವಿರಾಜಮಾರ್ಗ'ದಲ್ಲಿನ ಕವಿಪಂಕ್ತಿಯಲ್ಲಿ ಬರುವ 'ಕವೀಶ್ವರ' ಎಂಬ ಹೆಸರಿನ ಅನುಕರಣೆಯಿರಬಹುದು. ಅಥವಾ ಶ್ರೀವಿಜಯನಿಗೇ ಈ ಉಪನಾಮ ವಿದ್ದು ಆತನ ಕೃತಿಯೇ ('ಕವಿಮಾರ್ಗ') ಈ ರೀತಿ ನೂತನಸ್ವರೂಪವನ್ನು ತಾಳಿರಲೂ ಬಹುದು.

(v) 'ಕವಿಮಾರ್ಗ' ಮತ್ತು 'ಕವಿರಾಜಮಾರ್ಗ'ಗಳಿಗಿರುವ ಅಂತರವನ್ನು ತಿಳಿಯಲು, ಪ್ರಕೃತ 'ಕವಿರಾಜಮಾರ್ಗ'ದಲ್ಲಿ ಕಂಡುಬರುವ ಕೆಲವು ಪದ್ಯಗಳಿಗೂ ಇತರ ಲಕ್ಷಣಗ್ರಂಥಗಳಲ್ಲಿ ಉದ್ಧೃತವಾಗಿರುವ ಅದೇ ಪದ್ಯಗಳ ಪಾಠಗಳಿಗೂ ಇರುವ ಭೇದ

ವನ್ನು ಗಮನಿಸಿದರೆ ವೇದ್ಯವಾಗುವುದು. 'ಕವಿರಾಜಮಾರ್ಗ' ಮತ್ತು 'ಛಂದೋಂಬುಧಿ'ಗಳಲ್ಲಿ ಕೆಲವು ಸಮಾನ ಪದ್ಯಗಳಿವೆ (೨-೨೮, ೫-೫೯; ೨-೪೨, ೫-೬೨; ೨-೪೩, ೫-೬೩).

ಈ ಪದ್ಯಗಳಲ್ಲಿ ಕಂಡುಬರುವ ಪಾಠಾಂತರಗಳನ್ನು ಗಮನಿಸಿದರೆ, ಈ ಗ್ರಂಥಕರ್ತರಿಬ್ಬರಿಗೂ ಬೇರೆ ಯಾವುದೋ ಒಂದು ಮೂಲಕೃತಿಯಿರಬೇಕೆಂದು ಭಾಸವಾಗುತ್ತದೆ. 'ಛಂದೋಂಬುಧಿ'ಕಾರನು ವಿಷಯನಿಷ್ಠೆಯಿಂದ ಈ ಪದ್ಯಗಳನ್ನು ಮಾರ್ಪಡಿಸದೆ ಉದ್ಧರಿಸಿರಬಹುದೆಂದೂ 'ಕವಿರಾಜಮಾರ್ಗ'ಕಾರನು ತನ್ನ ರಾಜನಿಷ್ಠೆಯಿಂದ ಈ ಪದ್ಯಗಳನ್ನು ತನಗೆ ಅನುಕೂಲವಾಗುವಂತೆ ತಿದ್ದುಪಡಿಮಾಡಿ ಬಳಸಿಕೊಂಡಿರಬೇಕೆಂದೂ ವ್ಯಕ್ತವಾಗುತ್ತದೆ. ಕವೀಶ್ವರನ ಹೇಳಿಕೆಯ ಮೇರೆಗೆ ಆ ಮೂಲಕೃತಿ ಶ್ರೀವಿಜಯನ 'ಕವಿಮಾರ್ಗ'ವೇ ಆಗಿರಬೇಕು.

(vi) ಇದೇ ರೀತಿ, 'ಕವಿರಾಜಮಾರ್ಗ' ಮತ್ತು 'ಶಬ್ದಮಣಿದರ್ಪಣ'ಗಳಲ್ಲಿಯೂ ಸಮಾನಪದ್ಯಗಳು ಕೆಲವಿವೆ (೧-೩೩, ೧೦೮-೮; ೧-೫೯, ೯೦-೧; ೨-೭, ೬೯-೧). ಇವುಗಳಲ್ಲಿ ಮೊದಲಿನ ಎರಡರಲ್ಲಿ ವಿಶೇಷವಾದ ಬದಲಾವಣೆಗಳೇನೂ ಇಲ್ಲ. ಆದರೆ ಮೂರನೆಯದರಲ್ಲಿದೆ. 'ಕವಿರಾಜಮಾರ್ಗ'ಕಾರನು ತನಗೆ ತಕ್ಕಂತೆ ಮೂಲಪದ್ಯವನ್ನು ಬದಲಾಯಿಸಿಕೊಂಡು, ದೋಷನಿವಾರಣೆಗೆ ಅದರ ಮುಂದಿನ ಪದ್ಯವನ್ನು (ಕ್ಷಿತಿಪತಿಯಂ ಬರಿಸಿ....) ರಚಿಸಿರಬಹುದೆಂದು ಕಾಣುತ್ತದೆ. ಈ ತೆರನಾದ ಹಂಗಿಲ್ಲದ ಕೇಶಿರಾಜನು ಶ್ರೀವಿಜಯನ 'ಕವಿಮಾರ್ಗ'ದಿಂದ ನೇರವಾಗಿ ಈ ಪದ್ಯವನ್ನು ಆರಿಸಿಕೊಂಡಿರಬೇಕೆಂಬುದರಲ್ಲಿ ಸಂದೇಹವಿಲ್ಲ.

ಈ ಎಲ್ಲ ಕಾರಣಗಳಿಂದ 'ಕವಿರಾಜಮಾರ್ಗ'ದ ಕರ್ತೃ ಮತ್ತು ಕಾಲವಿಚಾರಗಳು ಸ್ವಯಂವಿದಿತವಾಗುವುವು. ಗ್ರಂಥವು ೮೧೪-೧೫ರಿಂದ ೮೭೭-೭೮ರ ಅವಧಿಯಲ್ಲಿ ರಚಿತವಾಗಿರಬೇಕು. ಇದನ್ನು ಬರೆದವನು, ಗ್ರಂಥೋಕ್ತವಾದ ಕವೀಶ್ವರನೆಂಬ ಹೆಸರನ್ನು ಅನುಸರಿಸಿ ಉಪನಾಮವುಳ್ಳ ಕವೀಶ್ವರ. ಈತನು ರಾಷ್ಟ್ರಕೂಟ ರಾಜನಾದ ಮೊದಲನೆಯ ಅಮೋಘವರ್ಷ ನೃಪತುಂಗನ ಉತ್ತೇಜನದಿಂದ ಈ ಕೃತಿಯನ್ನು ಬರೆದದ್ದರಿಂದ ತನ್ನ ಪ್ರಭುವಿಗೆ ಸಾಕಷ್ಟು ಕೃತಜ್ಞತೆಯನ್ನು ಸೂಚಿಸುವ ಸಲುವಾಗಿ, ಅನೇಕ ಕಡೆಗಳಲ್ಲಿ ಆತನ ಹೆಸರನ್ನು ಉಲ್ಲೇಖಿಸಿರುವುದರಿಂದ ಕಾಲಕ್ರಮೇಣ ಇದು 'ನೃಪತುಂಗ ಗ್ರಂಥ'ವೆಂದೇ ಪ್ರಚಲಿತವಾದಂತಿದೆ. ಇದು ಶ್ರೀವಿಜಯನ 'ಕವಿಮಾರ್ಗ'ವನ್ನು ಅವಲಂಬಿಸಿ ಬರೆದ ಕೃತಿಯಾದ್ದರಿಂದ, ಒಂದು ವೇಳೆ ಆ ಗ್ರಂಥವು ಲಭಿಸಿದ್ದೇ ಆದರೆ ಪ್ರಕೃತ 'ಕವಿರಾಜಮಾರ್ಗ'ವು ಅದರ ರೂಪಾಂತರವೆಂದೂ, ಈ ಗ್ರಂಥದಲ್ಲಿ ಕಂಡುಬರುವ ದಂಡಿಯ ಕೃತಿಯ ಭಾಷಾಂತರಕಾರ್ಯವನ್ನು ಮಾಡಿದವನು ಶ್ರೀವಿಜಯನೇ ಹೊರತು ಕವೀಶ್ವರನಾಗಲಿ, ಮೊದಲನೆಯ ಅಮೋಘವರ್ಷನಾಗಲಿ ಅಲ್ಲವೆಂದೂ ಸ್ಪಷ್ಟವಾಗುವುದು.

ಜೆ. ಎಫ್. ಫ್ಲೀಟ್ ಅವರ ಈ ಲೇಖನವನ್ನು ಲಕ್ಷಿಸಿಯೂ ಕೆ. ಬಿ. ಪಾಠಕರು ಈ ಬಗ್ಗೆ ತಮ್ಮ ಮೊದಲಿನ ವಾದವನ್ನೇ ಸಮರ್ಥಿಸಿಕೊಳ್ಳಲು ಪ್ರಯತ್ನ ಮಾಡಿದರು.[5]

## ಕವಿಚರಿತೆಕಾರರು: ನೃಪತುಂಗಕರ್ತೃತ್ವ, ಶ್ರೀವಿಜಯ ಕರ್ತೃತ್ವ ಸಂಭಾವ್ಯತೆ

ರಾ. ನರಸಿಂಹಾಚಾರ್ಯರು 'ಕರ್ಣಾಟಕ ಕವಿಚರಿತೆ'ಯ ಪ್ರಥಮ ಸಂಪುಟದಲ್ಲಿ (೧೯೦೭) 'ಕವಿರಾಜಮಾರ್ಗ'ವನ್ನು ಪರಿಚಯ ಮಾಡಿಕೊಡುವಲ್ಲಿ ಅದರ ಕರ್ತೃ ನೃಪತುಂಗನೆಂದೇ ಗ್ರಹಿಸಿದ್ದರೂ, ಅದು ಶ್ರೀವಿಜಯಕೃತವೂ ಇರಬಹುದೆಂದಿದ್ದಾರೆ:

"ಯದ್ಯಪಿ ಈ ಗ್ರಂಥವು ನೃಪತುಂಗ ಕೃತವೆಂದು ಪ್ರತೀತಿಯಿದ್ದರೂ ಶ್ರೀವಿಜಯ ಕೃತವೋ ಎಂದು ಸಂದೇಹಪಡುವುದಕ್ಕೆ ಅವಕಾಶವಿದೆ. ಪ್ರಥಮ ಪರಿಚ್ಛೇದದ ಅಂತ್ಯ ಪದ್ಯದಲ್ಲಿ "ಶ್ರೀವಿಜಯ ಪ್ರಭೂತಮನಿದಂ ಕೆಯ್ಕೊಳ್ವುದೀ ಮಾಟಿಕ್ಕೆಯಿಂ" ಎಂದೂ ದ್ವಿತೀಯ ಪರಿಚ್ಛೇದದ ಕಡೆಯ ಪದ್ಯದಲ್ಲಿ "ಕಾವ್ಯದಿಂ ಶ್ರೀವಿಜಯಪ್ರಭೂತ ಮುದಮಂ ತನಗಾಗಿಸಿದೊಂ ಕವೀಶ್ವರಂ" ಎಂದೂ, ಮೂರನೆಯ ಪರಿಚ್ಛೇದದ ಕೊನೆಯ ಪದ್ಯದಲ್ಲಿ "ಪರಮ ಶ್ರೀವಿಜಯಪ್ರಭೂತಿಜಯಶಸ್ತ್ರೀಬಾಲವೃದ್ಧಾಹಿತಂ" ಎಂದೂ ದೊರೆಯುತ್ತದೆ. ಅಲ್ಲದೆ ಪ್ರತಿಪರಿಚ್ಛೇದದ ಕೊನೆಯ ಗದ್ಯದಲ್ಲಿಯೂ "ನೃಪತುಂಗದೇವ ಕೃತ" ಎನ್ನದೆ "ನೃಪತುಂಗದೇವಾನುಮತಮಪ್ಪ" ಎಂದಿದೆ. ಮೂರು ಪರಿಚ್ಛೇದಗಳ ಕೊನೆಯ ಪದ್ಯಗಳಲ್ಲಿಯೂ 'ಶ್ರೀವಿಜಯಪ್ರಭೂತ'ವೆಂದಿರುವುದರಿಂದಲೂ, ಮುಖ್ಯವಾಗಿ ಮೊದಲನೆಯ ಪರಿಚ್ಛೇದದ ಕಡೆಯ ಪದ್ಯದಲ್ಲಿ "ಶ್ರೀವಿಜಯನು ಇದನ್ನು ಮಾಡಿದನು" ಎಂಬರ್ಥವು ತೋರುವುದರಿಂದಲೂ ಗ್ರಂಥದ ಅಂತ್ಯಭಾಗದಲ್ಲಿ "ಆಶ್ರಿತ ಮಹಾನೃಪತುಂಗಸಭಾಸದಂ....ಕೂಡೆ ಪೇಟ್ದಿ ನುತಕಾವ್ಯಂ" ಎಂದಿರುವುದರಿಂದಲೂ "ನೃಪತುಂಗಾನುಮತಮಪ್ಪ" ಎಂಬುದರಿಂದಲೂ ಒಂದು ವೇಳೆ ನೃಪತುಂಗನು ಪೂರ್ವಕವಿಗಳ ಗೋಷ್ಠಿಯಲ್ಲಿ ಹೇಳಿರುವ ಶ್ರೀವಿಜಯನೇ, ಆತನ ಆಸ್ಥಾನ ಕವಿಯಾಗಿದ್ದು ಈ ಗ್ರಂಥವನ್ನು ರಚಿಸಿ ನೃಪತುಂಗನ ಅಂಕಿತದಿಂದ ಪ್ರಕಟಿಸಿದ್ದರೂ ಇರಬಹುದು. ಹಿಂದೆ ಅನುವಾದಿಸಿರುವ ಶ್ರೀವಿಜಯಸ್ತುತಿರೂಪವಾದ ದುರ್ಗಸಿಂಹನ "ಶ್ರೀವಿಜಯರ ಕವಿಮಾರ್ಗಂ" ಎಂಬ ಪದ್ಯದಲ್ಲಿಯ 'ಕವಿಮಾರ್ಗಂ' ಎಂಬುದು 'ಕವಿರಾಜಮಾರ್ಗ' ಎಂಬ ಈ ಗ್ರಂಥಕ್ಕೆ ಅನ್ವಯಿಸುವುದಾದರೆ ಇದು ಶ್ರೀವಿಜಯ ಕೃತವೆಂಬ ಊಹೆಗೆ ಸಹಾಯಕವಾಗುತ್ತದೆ. ಆದರೆ ಈ ವಿಷಯದಲ್ಲಿ ಹೀಗೆಯೇ ಸರಿ ಎಂದು ನಿಶ್ಚಯಿಸಲಾಗುವುದಿಲ್ಲ. ಒಂದು ವೇಳೆ ನೃಪತುಂಗನಿಗೆ ಶ್ರೀವಿಜಯ ಎಂಬ ಬಿರುದೂ ಇದ್ದಿರಬಹುದು ಎಂದರೆ, ಅದಕ್ಕೆ ಶಾಸನಗಳಲ್ಲಿಯಾಗಲಿ ಈ ಗ್ರಂಥದಲ್ಲಿಯಾಗಲಿ ಆವ ಆಧಾರವೂ ಸಿಕ್ಕುವುದಿಲ್ಲ. ಈ ಗ್ರಂಥವು ನೃಪತುಂಗನ ಆಶ್ರಿತನಾದ ಕವೀಶ್ವರನಿಂದ ರಚಿತವಾಯಿತು ಎಂಬ ಡಾಕ್ಟರ್ ಫ್ಲೀಟರ ಅಭಿಪ್ರಾಯವು ಹಿಂದೆಯೇ ಸೂಚಿಸಲ್ಪಟ್ಟಿದೆ."

## ದ್ವಿತೀಯ ಘಟ್ಟ

### ನಾ. ಶ್ರೀ. ರಾಜಪುರೋಹಿತರು : ನೃಪತುಂಗ ಕರ್ತೃತ್ವದ ಅನುಮೋದನೆ

ಪಾಠಕ್, ಫ್ಲೀಟ್ ಮತ್ತು ಕವಿಚರಿತೆಕಾರರು ‘ಕವಿರಾಜಮಾರ್ಗ’ದ ಕರ್ತೃತ್ವದ ಬಗ್ಗೆ ತಮ್ಮ ತಮ್ಮ ನಿಲವನ್ನು ಮೊದಲ ಘಟ್ಟದಲ್ಲಿ ವ್ಯಕ್ತಪಡಿಸಿದ ಬಳಿಕ ಇತರ ವಿದ್ವಾಂಸರು ಒಬ್ಬೊಬ್ಬರಾಗಿ ಈ ಬಗ್ಗೆ ತಮ್ಮ ವಾದ ಪ್ರತಿವಾದಗಳನ್ನು ಮುಂದಿನ ಘಟ್ಟದಲ್ಲಿ ಸಾಕಷ್ಟು ಪ್ರಬಲವಾಗಿಯೇ ನಡಸಿದರೆಂದು ಹೇಳಬಹುದು. ಈ ದ್ವಿತೀಯ ಘಟ್ಟದ ವಿದ್ವಾಂಸರ ವಾದಸರಣಿಯನ್ನು ಉಚಿತವರಿತು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ.

ರಾ. ನರಸಿಂಹಾಚಾರ್ಯರು ನೃಪತುಂಗನಿಗೆ ಶ್ರೀವಿಜಯನೆಂಬ ಬಿರುದು ಏನಾದರೂ ಇದ್ದಿದ್ದಲ್ಲಿ ಎಂದು ಶಂಕಿಸಿದ್ದನ್ನೇ ಸೂಚನೆಯನ್ನಾಗಿ ಸ್ವೀಕರಿಸಿ, ಅದನ್ನು ಸಮರ್ಥಿಸಲು ತೊಡಗಿದವರಲ್ಲಿ ನಾ. ಶ್ರೀ. ರಾಜಪುರೋಹಿತರು ಪ್ರಮುಖರು. ಈ ಮಧ್ಯೆ ಟಿ. ಎಸ್. ವೆಂಕಣ್ಣಯ್ಯನವರು ತಮ್ಮದೊಂದು ಲೇಖನದಲ್ಲಿ ಪ್ರಾಸಂಗಿಕವಾಗಿ ಶ್ರೀವಿಜಯನ ಪಕ್ಷವನ್ನು ಎತ್ತಿಹಿಡಿಯಲು, ಅದನ್ನು ನಿರಾಕರಿಸುವುದೂ ರಾಜಪುರೋಹಿತರ ಉದ್ದೇಶವಾಗಿತ್ತು. ಅವರು ನೃಪತುಂಗ ಕರ್ತೃತ್ವವನ್ನು ಸಾಧಿಸುವ ಸಲುವಾಗಿ ಈ ಕೆಲವು ಸಂಗತಿಗಳನ್ನು ಮುಂದಿಟ್ಟರು :[7]

(i) ಆರಂಭದ ಮಂಗಳ ಪದ್ಯಗಳು ಪ್ರಥಮ ಪುರುಷದಲ್ಲಿರುವುದರಿಂದ ಗ್ರಂಥಕರ್ತೃ ನೃಪತುಂಗನಾಗಿರಲಾರನೆಂದು ಫ್ಲೀಟರು ಅಭಿಪ್ರಾಯಪಡುವರಷ್ಟೆ. ಇದು ಸರಿಯಲ್ಲ. ಏಕೆಂದರೆ ಈ ಸಂಪ್ರದಾಯ ಕನ್ನಡ ಕವಿಗಳಲ್ಲುಂಟು. ಇದಕ್ಕೆ ‘ಛಂದೋಂಬುಧಿ’ಯ ಕರ್ತೃವಾದ ನಾಗವರ್ಮನೇ ಉದಾಹರಣೆ.

(ii) ಪ್ರತಿಯೊಂದು ಪರಿಚ್ಛೇದದ ಅಂತ್ಯದಲ್ಲಿಯೂ “ನೃಪತುಂಗದೇವಾನುಮತಮಪ್ಪ” ಎಂದಿದೆಯೇ ಹೊರತು ‘ನೃಪತುಂಗದೇವವಿರಚಿತ’ ಅಥವಾ ‘ರಚಿತ’ ಎಂದಿಲ್ಲ. ಇದರಿಂದ ಗ್ರಂಥಕರ್ತೃ ನೃಪತುಂಗದೇವನಲ್ಲ ಎಂದು ಫ್ಲೀಟರ ಸಿದ್ಧಾಂತ. ಆದರೆ ಇದು ಸಮರ್ಪಕವಾಗಿಲ್ಲ. ಇಲ್ಲಿ ‘ಅನುಮತ’ ಎಂಬ ಪದವು ತನಗೆ ಪ್ರಿಯವಾದುದು ಎಂಬ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. ಕಾರಣ, ‘ಕವಿರಾಜಮಾರ್ಗ’ದ ವಸ್ತು ವಿಷಯಗಳು ಭಿನ್ನಾಭಿಪ್ರಾಯವುಳ್ಳದ್ದು. ಇದಲ್ಲದೆ ನೃಪತುಂಗನು ಪೋಷಕನಾಗಿದ್ದು, ಕವೀಶ್ವರನೋ ಶ್ರೀವಿಜಯನೋ ಕವಿಯಾಗಿದ್ದಲ್ಲಿ ಸಂಪ್ರದಾಯಾನುಸಾರವಾಗಿ ಪೋಷಕ ಮತ್ತು ಕವಿಯ ಹೆಸರುಗಳೆರಡೂ ಇರುತ್ತಿದ್ದವು. ಇದಕ್ಕೆ ಪೊನ್ನ, ರನ್ನ, ನೇಮಿಚಂದ್ರ, ಮಹಾಬಲ ಕವಿಗಳೇ ಸಾಕ್ಷಿ. ಆದರೆ ಇಲ್ಲಿ ಹೀಗಿಲ್ಲ.

(iii) ಕವಿಚರಿತೆಕಾರರು ಮತ್ತು ಫ್ಲೀಟರು ‘ಕವಿರಾಜಮಾರ್ಗ’ದ ಪ್ರತಿಯೊಂದು ಆಶ್ವಾಸದ ಅಂತ್ಯ ಪದ್ಯಗಳಲ್ಲಿ ಬರುವ “ಶ್ರೀವಿಜಯ ಪ್ರಭೂತಮನಿದಂ ಕೈಕೊಳ್ವುದೀ ಮಾಚಿಕ್ಕಯಿಂ”, “ಶ್ರೀವಿಜಯ ಪ್ರಭೂತಮುದಮಂ ತನಗಾಗಿಸಿದೊಂ ಕವೀಶ್ವರಂ”, “ಪರಮ ಶ್ರೀವಿಜಯಪ್ರಭೂತಿಜ ಯಶಂ” ಎಂಬ ಪಂಕ್ತಿಗಳಿಂದ ಕರ್ತೃ ಶ್ರೀವಿಜಯನೆಂದೂ ಫ್ಲೀಟರು ಕರ್ತೃ ಕವೀಶ್ವರನೆಂದೂ ಹೇಳುವರು. ರಾ. ನರಸಿಂಹಾ

ಚಾರ್ಯರು 'ಪ್ರಭೂತ' ಎಂಬ ಪದಕ್ಕೆ 'ವಿರಚಿತ' ಎಂಬ ಅರ್ಥವನ್ನು ಕೊಡುತ್ತಾರೆ. ಇದರಿಂದ ಪುನರುಕ್ತಿ ದೋಷವುಂಟಾಗುವುದು. ಕಡೆಯ ಪದ್ಯದಲ್ಲಿ ಅರ್ಥಸಮನ್ವಯ ವಾಗುವುದಿಲ್ಲ. ಫ್ಲೀಟರು ಎರಡನೆಯ ಪದ್ಯದ ಆಧಾರದ ಮೇಲೆ ಕವೀಶ್ವರನು ಕವಿ ಎನ್ನು ವರು. ಆದರೆ ಕವೀಶ್ವರ ಶ್ರೀವಿಜಯನಿಗೆ ಆನಂದದಾಯಕವಾಗುವಂತೆ ಒಂದು ಕಾವ್ಯ ವನ್ನು ಬರೆದಂತೆ ಅರ್ಥವಾಗುವುದೇ ವಿನಾ ಕವಿರಾಜಮಾರ್ಗವನ್ನೇ ಬರೆದನೆಂದು ಅರ್ಥವಾಗುವುದಿಲ್ಲ. ಆದ್ದರಿಂದ 'ಶ್ರೀವಿಜಯ ಪ್ರಭೂತಮು' 'ಶ್ರೀವಿಜಯ ಪ್ರಭೂತ' 'ಶ್ರೀವಿಜಯ ಪ್ರಭೂತಿ' ಎಂಬುದು ನೃಪತುಂಗನ ಬಿರುದಾಗಿರಬೇಕು ಎನ್ನುತ್ತ 'ಭಗವದ್ಗೀತೆ'ಯಲ್ಲಿ ಉಕ್ತವಾಗಿರುವ ಈ ಕೆಳಗಿನ ಶ್ಲೋಕವನ್ನು ಅವಲಂಬಿಸಿ ತಮ್ಮ ಅಭಿಪ್ರಾಯವನ್ನು ಸಮರ್ಥಿಸಿರುವರು:

> ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ
> ತತ್ರ ಶ್ರೀರ್ವಿಜಯೋ ಭೂತಿ ಧ್ರುವಾನೀತಿರ್ಮತಿರ್ಮಮ ॥ (೧೮_೭೮)

ಇಲ್ಲಿ ಹೇಳಿದ ತತ್ತ್ವವು ನೃಪತುಂಗನಲ್ಲಿ ಚೆನ್ನಾಗಿ ವ್ಯಕ್ತವಾಗುತ್ತದೆ. ನೃಪತುಂಗನು ಯೋಗೇಶ್ವರ ಎಂದರೆ ಜ್ಞಾನಿ ಆಗಿದ್ದನೆಂಬುದನ್ನು "ಪರಮಸರಸ್ವತೀ ತೀರ್ಥಾವ ತಾರ" ಎಂಬ ಅವನ ಬಿರುದೂ "ಪ್ರಶ್ನೋತ್ತರರತ್ನಮಾಲೆ" ಎಂಬ ಆತನು ರಚಿಸಿದ ಗ್ರಂಥವೂ ಗರ್ಜಿಸಿ ಹೇಳುತ್ತವೆ; ಮತ್ತು ಅವನು ಧನುರ್ಧರನು ಎಂದರೆ ಶೂರನೂ ಆಗಿದ್ದ ನೆಂಬುದಕ್ಕೆ 'ವೀರನಾರಾಯಣ' ಎಂಬ ಆತನ ಬಿರುದೂ ಗ್ರಂಥದೊಳಗಿನ 'ಪ್ರಣತಾರಾ ತ್ರುಟಿತಮುಕ್ತಾ....' ಎಂಬ, 'ಪರಚಕ್ರಭೂಪರಟ್ಟಿದ....' ಎಂಬ ಎರಡು ಪದ್ಯಗಳೂ 'ಶಬ್ದಮಣಿದರ್ಪಣ'ದಲ್ಲಿ ೧೪೦ನೆಯ ಸೂತ್ರಕ್ಕೆ ಪ್ರಯೋಗಕ್ಕೆಂದು ತೆಗೆದುಕೊಂಡ "ವೀರ ನುದಾರಂ ಶುಚಿ ಗಂಭೀರಂ···ನೃಪತುಂಗಂ" ಎಂಬ ಪ್ರಯೋಗ ಭಾಗವೂ ಸಾಕ್ಷಿಯಾಗಿವೆ. ಅರ್ಥಾತ್ ನೃಪತುಂಗನಲ್ಲಿ ಯೋಗೇಶ್ವರತ್ವವೂ ಧನುರ್ಧರತ್ವವೂ ಇದ್ದುದರಿಂದ ಸಂಜಯನ ಅಭಿಪ್ರಾಯದ ಪ್ರಕಾರ ಈತನ ಬಳಿಯಲ್ಲಿ ಶ್ರೀ, ವಿಜಯ, ಭೂತಿ, ಧ್ರುವಾ ನೀತಿ—ಇವು ವಾಸವಾಗಿರುವುದು ಯಥಾನ್ಯಾಯವಾಗಿದೆ. ಇಷ್ಟಕ್ಕೂ ಈತನಿಗಿರುವ 'ಧ್ರುವಾನೀತಿ' ಎಂಬರ್ಥದ 'ನೀತಿನಿರಂತರ' ಎಂಬ ಬಿರುದು ಈ ಮಾತನ್ನು ಚೆನ್ನಾಗಿ ದೃಢಪಡಿಸುತ್ತದೆ. ಎಂದ ಬಳಿಕ ಇನ್ನು ಮಿಕ್ಕ ಶ್ರೀ, ವಿಜಯ, ಭೂತಿ—ಈ ಮೂರು ವೈಭವಗಳನ್ನು ಸೂಚಿಸುವ ಬಿರುದುಗಳೂ ನೃಪತುಂಗನಿಗೆ ಇದ್ದಿರಬೇಕಾದುದು ಕ್ರಮ ಪ್ರಾಪ್ತವೇ ಆಯಿತು. ಆದುದರಿಂದಲೇ ಈ ಕವಿರಾಜಮಾರ್ಗ ಗ್ರಂಥದ ಪರಿಚ್ಛೇದಗಳ ಕೊನೆಯಲ್ಲಿರುವ 'ಶ್ರೀವಿಜಯ ಪ್ರಭೂತಿ', 'ಶ್ರೀವಿಜಯ ಪ್ರಭೂತ', 'ಶ್ರೀವಿಜಯ ಪ್ರಭೂತಮು' ಎಂಬ ಈ ಮೂರು ಬಿರುದುಗಳೂ ನೃಪತುಂಗನಿಗೆ ಅನ್ವಯಿಸುತ್ತವೆಂಬುದು ನಿಸ್ಸಂದೇಹವಾಗಿದೆ. ಇದೂ ಅಲ್ಲದೆ, ನೃಪತುಂಗನ ತಂದೆಗೆ 'ಜಗತ್ತುಂಗ' 'ಪ್ರಭೂತ ವರ್ಷ' ಎಂಬ ಬಿರುದುಗಳಿವೆ. ಆದುದರಿಂದ ತಂದೆಯಂತೆ ಮಗನಿಗೆ 'ತುಂಗ' ಸೇರಿದ 'ನೃಪತುಂಗ' ಎಂಬ ಬಿರುದು ಹೇಗೆ ಇರುತ್ತದೆಯೋ ಹಾಗೆಯೇ 'ಪ್ರಭೂತ' ಸೇರಿದ

'ಶ್ರೀ ವಿಜಯ ಪ್ರಭೂತ' ಎಂಬ ಬಿರುದೂ (ತಂದೆ-ಪ್ರಭೂತವರ್ಷ, ಮಗ-ಶ್ರೀವಿಜಯ ಪ್ರಭೂತ) ಇದ್ದಿರಬೇಕೆಂದು ಹೇಳುವುದು ಸಯುಕ್ತಿಕವಾಗಿದೆ.

(iv) ನಾಗವರ್ಮನ ಮತ್ತು ಕೇಶಿರಾಜನ 'ಛಂದೋಂಬುಧಿ', 'ಶಬ್ದಮಣಿದರ್ಪಣ' ಗಳಲ್ಲಿ ಕ್ರಮವಾಗಿ "ಔಪಚ್ಛಂದಸಿಕಂ ಕವೀಶ್ವರೋಕ್ತಂ" ಮತ್ತು "ಕವೀಶ್ವರಮತದಿಂ" ಎಂದಿರುವುದರಿಂದ ಫ್ಲೀಟರು ಕವೀಶ್ವರನೇ ಕವಿರಾಜಮಾರ್ಗದ ಕರ್ತೃವೆನ್ನುವರು. ಆದರೆ ಇಲ್ಲಿ ಬರುವ ಪದ ಸಾಮಾನ್ಯಾರ್ಥಸೂಚಕವಾಗಿದೆಯೇ ವಿನಾ ಯಾವ ಕವಿಯ ಹೆಸರನ್ನೂ ಕುರಿತಿಲ್ಲ.

(v) ರಾ. ನರಸಿಂಹಾಚಾರ್ಯರು ದುರ್ಗಸಿಂಹನ 'ಪಂಚತಂತ್ರ'ದಲ್ಲಿ "ಶ್ರೀವಿಜಯರ ಕವಿಮಾರ್ಗಂ ಭಾವಿಪ ಕವಿಜನದ ಮನಕೆ ಕನ್ನಡಿ" ಎಂದಿರುವುದರಿಂದ 'ಕವಿರಾಜಮಾರ್ಗ'ದ ಕವಿ ಶ್ರೀವಿಜಯ ಎಂದು ಹೇಳಿ ಅದು ಸಂಕ್ಷಿಪ್ತರೂಪ ಎನ್ನು ವರು. ಆದರೆ ಇದು ನಿರಾಧಾರವಾದುದು. ಅದು "ಶ್ರೀವಿಜಯ ಪ್ರಭೂತರ ಕವಿರಾಜ ಮಾರ್ಗ"ದ ಸಂಕ್ಷಿಪ್ತವೇಕಾಗಬಾರದು?

(vi) ಇವಲ್ಲದೆ ನೃಪತುಂಗನ ಹಲವಾರು ಬಿರುದುಗಳು ಇಲ್ಲಿ ಕಂಡುಬರುತ್ತವೆ. 'ಶಬ್ದಾನುಶಾಸನ'ದ ಕರ್ತೃ ಭಟ್ಟಾಕಳಂಕನು ಮಾರ್ಗಭೇದಗಳನ್ನು ಹೇಳುವಾಗ 'ನೃಪ ತುಂಗ ಗ್ರಂಥ'ದ ಪ್ರಕಾರ ಎಂದು ಹೇಳುವನು. ಈ ವಿಷಯ ಕವಿರಾಜಮಾರ್ಗದಲ್ಲಿದೆ ಯಷ್ಟೆ.

ಈ ಕೆಲವು ಕಾರಣಗಳಿಂದ 'ಕವಿರಾಜಮಾರ್ಗ'ವು ನೃಪತುಂಗಕೃತವೆಂದು ರಾಜ ಪುರೋಹಿತರು ಖಚಿತವಾಗಿ ತಮ್ಮ ಅಭಿಪ್ರಾಯವನ್ನು ಹೇಳಿರುವರು.

### ಟಿ. ಎಸ್. ವೆಂಕಣ್ಣಯ್ಯನವರು : ಶ್ರೀವಿಜಯ ಕರ್ತೃತ್ವದ ಪ್ರತಿಪಾದನೆ

ರಾಜಪುರೋಹಿತರ ಅಭಿಪ್ರಾಯಗಳನ್ನು ಟಿ. ಎಸ್. ವೆಂಕಣ್ಣಯ್ಯ ಮತ್ತು ಎ. ಆರ್. ಕೃಷ್ಣಶಾಸ್ತ್ರಿಗಳು ಸಮ್ಮತಿಸದೆ, ಮೇಲಿಂದ ಮೇಲೆ ಲೇಖನಗಳನ್ನು ಬರೆದದ್ದುಂಟು. ಇವರಲ್ಲಿ ವೆಂಕಣ್ಣಯ್ಯನವರು ರಾಜಪುರೋಹಿತರ ಅಭಿಪ್ರಾಯವನ್ನು ಸಕಾರಣವಾಗಿ ವಿಮರ್ಶಿಸಿ, ತಮ್ಮ ನಿಲವನ್ನು ವ್ಯಕ್ತಪಡಿಸಿದ್ದಾರೆ. ಅವರ ಚರ್ಚೆಯನ್ನು ಇಲ್ಲಿ ಸಂಗ್ರಹ ವಾಗಿ ಸೂಚಿಸಲಾಗಿದೆ[೭]:

(i) ಭಗವದ್ಗೀತೆಯ ಶ್ಲೋಕವೆಲ್ಲಿ? 'ಕವಿರಾಜಮಾರ್ಗ'ಗ್ರಂಥಕರ್ತೃವಿನ ವಿಚಾರ ವೆಲ್ಲಿ? ಈಷನ್ಮಾತ್ರವೂ ಸಂಬಂಧವಿಲ್ಲದ ಈ ಎರಡಕ್ಕೂ ಯುಕ್ತಿಚಾತುರ್ಯದಿಂದ ಸಂಬಂಧವನ್ನು ಕಲ್ಪಿಸಿ ಆ ಮೂಲಕ ನೃಪತುಂಗನಿಗೆ 'ಶ್ರೀವಿಜಯ ಪ್ರಭೂತ' ಮುಂತಾದ ಬಿರುದುಗಳಿದ್ದುವೆಂದು ಸಾಧಿಸಿದರೆ ಅಂತಹ ಕಲ್ಪನಾತ್ಮಕ ಆಧಾರವನ್ನು ನಂಬಲಾದೀತೆ?

(ii) ಒಂದು ಅಕ್ಷರ ಮಾತ್ರ ಹೆಚ್ಚುಕಡಮೆಯಾಗಿರುವ ಅರ್ಥವ್ಯತ್ಯಾಸವಿಲ್ಲದ ಮೂರು ಬಿರುದುಗಳು ಒಬ್ಬ ಮನುಷ್ಯನಿಗೆ ಇರುವುದುಂಟೆ?

(iii) ಪರಿಚ್ಛೇದಾಂತ ಪದ್ಯಗಳಲ್ಲಿರುವ ಪದವು 'ಶ್ರೀವಿಜಯ' ಎಂಬುದಾದರೆ ಅರ್ಥ

ಸಮನ್ವಯವಾಗುವುದಿಲ್ಲ. 'ಶ್ರೀವಿಜಯ ಪ್ರಭೂತ' ಮುಂತಾದ ಪದಗಳಿರುವುದೆಂದು ಇಟ್ಟುಕೊಂಡರೆ ಅರ್ಥಸಾಮಂಜಸ್ಯವುಂಟಾಗುತ್ತದೆ ಎಂಬ ಕಾರಣಕ್ಕಾಗಿಯೇ 'ಶ್ರೀವಿಜಯ ಪ್ರಭೂತ' ಮುಂತಾದ ಬಿರುದುಗಳನ್ನು ಕಲ್ಪಿಸಬಹುದೆ? ಇಷ್ಟಕ್ಕೂ 'ಶ್ರೀವಿಜಯ' ಎಂಬುದೇ ಆ ಪದ್ಯಗಳಲ್ಲಿರುವ ಪದವೆಂದುಕೊಂಡರೂ ಸಮಂಜಸವಾಗುವಂತೆ ಅರ್ಥಮಾಡಬಹುದು.

(iv) ರಾಜಪುರೋಹಿತರಿಂದ ಮೇಲೆ ಉದ್ಧೃತವಾಗಿರುವ ಪದ್ಯಗಳಲ್ಲಿ ಮೊದಲನೆಯದರ "ಪೇಳ್ದಿ ಚಿತ್ರಕೃತಿಯಂ ವ್ಯಾವರ್ಣಿಸುತ್ತುಂ ಕವಿಪ್ರಕರಂ ಶ್ರೀವಿಜಯ ಪ್ರಭೂತಮನಿದಂ ಕೈಕೊಳ್ವುದೀ ಮಾಟಿಕ್ಕೆಯಿಂ" ಎಂಬ ಭಾಗವೇ ವಾದದ ಸ್ಥಳ. 'ಪ್ರಭೂತ' ಶಬ್ದಕ್ಕೆ 'ವಿರಚಿತ' ಎಂದು ಅರ್ಥಮಾಡಿದರೆ 'ಶ್ರೀವಿಜಯನು ವಿರಚಿಸಿದ ಈ ರೀತಿಯಿಂದ ಹೇಳಿದ ಈ ಚಿತ್ರಕೃತಿಯನ್ನು' ಎಂದು ಅರ್ಥವಾಗುವುದರಿಂದ ಪುನರುಕ್ತಿ ದೋಷವುಂಟಾಗುತ್ತದೆ. ಈ ಸ್ಥಳದಲ್ಲಿ ವಿರಚಿತಾರ್ಥವನ್ನು ಹೇಳುವುದು ಗ್ರಂಥಕರ್ತೃವಿನ ಉದ್ದೇಶವಿದ್ದಿದ್ದರೆ ಇಲ್ಲಿ 'ಪ್ರಭೂತ' ಶಬ್ದವನ್ನು ಪಯೋಗಿಸದೆ ವಿರಚಿತಾರ್ಥದಲ್ಲಿ ಪ್ರಸಿದ್ಧವಾದ 'ಪ್ರಣೀತ' ಶಬ್ದವನ್ನು ಪ್ರಯೋಗಿಸುತ್ತಿದ್ದನು. ಒಂದೇ ಅರ್ಥವುಳ್ಳ ಎರಡು ಶಬ್ದಗಳಿರುವಲ್ಲಿ ಅವುಗಳಲ್ಲಿ ಒಂದನ್ನು ಕವಿಯು ಏಕೆ ಉಪಯೋಗಿಸಿದನು ಅಥವಾ ಉಪಯೋಗಿಸಲಿಲ್ಲ ಎಂಬ ಪ್ರಶ್ನೆಯು ವಾದಕ್ಕೆ ಸಾಧಕವಾಗಬಹುದಾದರೂ ವಿಷಯ ನಿರ್ಧಾರಣೆಗೆ ಅಷ್ಟೇನೂ ಉಪಯೋಗಕಾರಿಯಾಗಲಾರದು. ಆದುದರಿಂದ ಆ ಅಭಿಪ್ರಾಯದ ವಿಚಾರವಾಗಿ ಚರ್ಚಿಸುವುದು ಅಷ್ಟೇನೂ ಫಲಕಾರಿಯಲ್ಲ. ಇನ್ನು; ಪುನರುಕ್ತಿ ದೋಷ ವಿಚಾರವನ್ನು ಪರಿಶೀಲಿಸೋಣ. ರಾಜಪುರೋಹಿತರು ಬರೆದಿರುವಂತೆ ಅನ್ವಯ ಮಾಡಿದರೆ ಚರ್ವಿತಚರ್ವಣ ದೋಷವು ಎದ್ದು ಕಾಣುತ್ತದೆಂಬುದೇನೋ ನಿಜ. ಆದರೆ ಬೇರೆ ವಿಧವಾಗಿ ಅನ್ವಯಮಾಡುವುದು ಅಸಾಧ್ಯವೆಂದು ತೋರುವುದಿಲ್ಲ; ಹೇಗೆಂದರೆ: "ಪರಭಾಗಭಾವವಿಲಸದ್ವರ್ಣಕ್ರಮಾವೃತ್ತಿಯಿಂ ಪ್ರಕಟಂಮಾಡಿರೆ ಪೇಳ್ದಿ, ಶ್ರೀವಿಜಯ ಪ್ರಭೂತಮಂ ಇದಂ ಚಿತ್ರಕೃತಿಯಂ ವ್ಯಾವರ್ಣಿಸುತ್ತುಂ ಕವಿಪ್ರಕರಂ ಈ ಮಾಟಿಕ್ಕೆಯಿಂ ಕೈಕೊಳ್ವುದು" ಎಂದು ಅನ್ವಯಮಾಡಿದರೆ, "ಪರಭಾಗಭಾವವಿಲಸದ್ವರ್ಣಕ್ರಮಾವೃತ್ತಿಯನ್ನು ಪ್ರಕಟವಾಗುವಂತೆ ಹೇಳುವ, ಎಂದರೆ ತಿಳಿಸುವ, ಶ್ರೀವಿಜಯ ಕೃತವಾದ ಈ ಚಿತ್ರಕೃತಿಯನ್ನು...." ಎಂಬುದಾಗಿ ಅರ್ಥವಾಗುತ್ತದೆ. ಇದರಲ್ಲಿ ಪುನರುಕ್ತಿದೋಷವೆಲ್ಲಿದೆ?

ಇನ್ನು ಎರಡನೆಯ ಪದ್ಯವನ್ನು ತೆಗೆದುಕೊಳ್ಳುವ. ಈ ಪದ್ಯದ "ಒಂದು ಕಾವ್ಯದಿಂ ಶ್ರೀವಿಜಯ ಪ್ರಭೂತಮುದಮಂ ತನಗಾಗಿಸಿದೊಂ ಕವೀಶ್ವರಂ" ಎಂಬ ಭಾಗವು ವಾದದ ಸ್ಥಳವೆಂದೂ ಇಲ್ಲಿ 'ಪ್ರಭೂತ' ಶಬ್ದಕ್ಕೆ ವಿರಚಿತಾರ್ಥವನ್ನು ಮಾಡಿದರೆ ಈ ವಾಕ್ಯಕ್ಕೆ ಅರ್ಥವೇ ಆಗುವುದಿಲ್ಲವೆಂಬುದು ಸ್ಪಷ್ಟವಾಗಿದೆಯೆಂದೂ ರಾಜಪುರೋಹಿತರು ಹೇಳುತ್ತಾರೆ. ಅವರು ಆಯ್ದಿರುವ ಪದ್ಯಭಾಗವನ್ನು ಮಾತ್ರ; ತೆಗೆದುಕೊಳ್ಳುವುದಾದರೆ, ಅವರ ಅಭಿಪ್ರಾಯವು ಯುಕ್ತವಾಗಿ ಕಾಣಬಹುದು. ಆದರೆ ಆ ಪದ್ಯವನ್ನು ಇಲ್ಲಿ ಇನ್ನೂ ಪೂರ್ತಿ

ಯಾಗಿ ತೆಗೆದುಕೊಂಡರೆ 'ಪ್ರಭೂತ' ಶಬ್ದಕ್ಕೆ ವಿರಚಿತಾರ್ಥವನ್ನು ಇಟ್ಟುಕೊಂಡು ಅರ್ಥ ಮಾಡುವುದು ಅಸಾಧ್ಯವಾಗುವಂತೆ ತೋರುವುದಿಲ್ಲ. ಹೇಗೆಂದರೆ : "....ಪುರಾಣ ಕವಿ ಪ್ರಭು ಪ್ರಯೋಗಾವಿಳಸದ್ಗುಣೋದಯಮನಾಯ್ದು ವಚಿಂ ಸಮೆದೊಂದು ಕಾವ್ಯದಿಂ ಶ್ರೀ ವಿಜಯಪ್ರಭೂತಮುದಮಂ ತನಗಾಗಿಸಿದೊಂ ಕವೀಶ್ವರಂ" ಎಂದು ಇಟ್ಟುಕೊಂಡರೆ ಇಲ್ಲಿ ಉಕ್ತವಾಗಿರುವ ರೀತಿಯಲ್ಲಿ ವಿರಚಿಸಿದ ಕಾವ್ಯದಿಂದ ಶ್ರೀವಿಜಯನಿಗೆ ಉಂಟಾದ ಸಂತೋಷವನ್ನು ಪಡೆದವನೇ, ಎಂದರೆ ಶ್ರೀ ವಿಜಯನನ್ನು ಸಂತೋಷಗೊಳಿಸಬಲ್ಲವನೇ ಕವೀಶ್ವರ, ಎಂದರೆ ಕವಿಶ್ರೇಷ್ಠ ಎಂದು ಸುಲಭವಾಗಿ ಅರ್ಥವಾಗುತ್ತದೆ ; ಹಾಗೆ ಅರ್ಥ ಮಾಡಿದರೇಯೇ ಪದ್ಯದಲ್ಲಿ ಹೆಚ್ಚು ಸ್ವಾರಸ್ಯವು ತೋರಿಬರುತ್ತದೆ. ಮೂರನೆಯ ಪದ್ಯದಲ್ಲಿ "ಪರಮ ಶ್ರೀವಿಜಯ ಪ್ರಭೂತಿಜಯಶಂ" ಎಂಬುದನ್ನು ವಿವಾದಸ್ಥಾನವಾಗಿ ಭಾವಿಸಿ ಇಲ್ಲಿಯೂ 'ಪ್ರಭೂತಿ' ಶಬ್ದಕ್ಕೆ ವಿರಚಿತಾರ್ಥ ಮಾಡಿದರೆ ಆ ಶಬ್ದದ ಮುಂದೆ ಅದೇ ಅರ್ಥದ 'ಜ' ವಿಶೇಷಣವಿರುವುದರಿಂದ ಪುನರುಕ್ತಿದೋಷವುಂಟಾಗುತ್ತದೆಂದು ರಾಜ ಪುರೋಹಿತರು ಅಭಿಪ್ರಾಯಪಟ್ಟಿರುತ್ತಾರೆ. 'ಪ್ರಭೂತಿ' ಮತ್ತು 'ಜ'—ಈ ಎರಡು ಶಬ್ದಗಳೂ ಒಂದೇ ಅರ್ಥವನ್ನು ಕೊಡುವುದಾದರೂ ಇಲ್ಲಿ ಪುನರುಕ್ತಿ ದೋಷವೇನೂ ಉಂಟಾಗುವುದಿಲ್ಲ. ಹೇಗೆಂದರೆ, ಶ್ರೀ ವಿಜಯ ಪ್ರಭೂತಿಯಿಂದ, ಎಂದರೆ ಶ್ರೀ ವಿಜಯ ವಿರಚಿತವಾದ ಈ ಕಾವ್ಯದಿಂದ 'ಜ' ಎಂದರೆ ಹುಟ್ಟಿದ ಅಥವಾ ಉಂಟಾದ, ಯಶಸ್ಸು ಎಂಬುದಾಗಿ ಅರ್ಥಮಾಡಬಹುದು. ಒಂದೇ ಅರ್ಥವನ್ನು ಕೊಡುವ ಎರಡು ಶಬ್ದಗಳು ಒಟ್ಟಿಗೆ ಬಂದ ಮಾತ್ರಕ್ಕೇ ಪುನರುಕ್ತಿದೋಷವುಂಟಾಗಲಾರದು. ಉದಾಹರಣೆಗೆ— 'ಜಡಜಜ' ಎಂದರೆ ನೀರಿನಲ್ಲಿ ಹುಟ್ಟಿದುದರಲ್ಲಿ ಹುಟ್ಟಿದವನು ಎಂದಾಗುತ್ತದೆ. ನೀರಿನಲ್ಲಿ ಹುಟ್ಟಿದುದರಲ್ಲಿ ಎಂಬುದಕ್ಕೆ 'ಕಮಲದಲ್ಲಿ' ಎಂದು ಇಟ್ಟುಕೊಳ್ಳುವಂತೆ ಪ್ರಕೃತ ಸಂದರ್ಭದಲ್ಲಿಯೂ ಶ್ರೀವಿಜಯನಿಂದ ಉಂಟಾದುದರಿಂದ, ಎಂದರೆ ಕವಿರಾಜಮಾರ್ಗ ದಿಂದ—ಎಂದು ಇಟ್ಟುಕೊಳ್ಳಬಾರದೇಕೆ ? ಹಾಗೆ ಇಟ್ಟುಕೊಂಡರೆ 'ಕವಿರಾಜಮಾರ್ಗ' ದಿಂದ ಉಂಟಾದ ಕೀರ್ತಿಯು ಶಾಶ್ವತವಾಗಿರಲಿ ಎಂದು ಅರ್ಥವಾಗುತ್ತದೆ ; ಪುನರುಕ್ತಿ ದೋಷವೇನೂ ಉಂಟಾಗುವುದಿಲ್ಲ.

(v) ಆಶ್ವಾಸಾಂತ್ಯದ ಮೂರು ಪದ್ಯಗಳೂ ಒಂದೇ ತೆರನಾದುವಾಗಿರುವಂತೆ ಕಾಣು ತ್ತದೆ. ರಾಜಪುರೋಹಿತರ ವ್ಯಾಖ್ಯಾನವನ್ನನುಸರಿಸಿದರೆ ಪ್ರಥಮ ತೃತೀಯ ಪರಿಚ್ಛೇದ ಗಳ ಕಡೆಯಲ್ಲಿರುವ ಪದ್ಯಗಳೇ ಒಂದು ಜಾತಿಯವಾಗುತ್ತವೆ. ಏಕೆಂದರೆ ಪ್ರಥಮ ಮತ್ತು ತೃತೀಯ ಪರಿಚ್ಛೇದಗಳ ಅಂತ್ಯದಲ್ಲಿರುವ ಪದ್ಯಗಳ ಅರ್ಥವು ರಾಜಪುರೋಹಿತರ ಮತದಂತೆ "ಶ್ರೀ ವಿಜಯ ಪ್ರಭೂತಮನು ಈ ರೀತಿಯಿಂದ ಹೇಳಿದ ಈ ಚಿತ್ರಕೃತಿಯನ್ನು ಕವಿಗಳ ಸಮುದಾಯವು ಸ್ತುತಿಸುತ್ತ ಸ್ವೀಕರಿಸುವುದು", "ಶ್ರೀವಿಜಯ ಪ್ರಭೂತಿಯಿಂದ ನಿರ್ಮಿತವಾದಂಥಾದ್ದರ (ಕವಿರಾಜಮಾರ್ಗ ಗ್ರಂಥದ) ಕೀರ್ತಿಯು ಆಚಂದ್ರಾರ್ಕವಾಗಿ ನೆಲೆಗೊಳ್ಳಲಿ" ಎಂದೂ ದ್ವಿತೀಯ ಪರಿಚ್ಛೇದಾಂತ ಪದ್ಯದ ಅರ್ಥವು "ಕವೀಶ್ವರನೆಂಬು ವನು ಒಂದು ಕಾವ್ಯದಿಂದ (ಅರ್ಥಾತ್ ಒಂದು ಕಾವ್ಯವನ್ನು ರಚಿಸಿ) ಶ್ರೀ ವಿಜಯ

ಪ್ರಭೂತನ ಎಂದರೆ ನೃಪತುಂಗನ ಸಂತೋಷವನ್ನು ಅಥವಾ ಪ್ರೀತಿಯನ್ನು ಸಂಪಾದಿಸಿ ಕೊಂಡನು" ಎಂದೂ ಆಗುತ್ತದೆ. ಅವರ ವ್ಯಾಖ್ಯಾನದ ಪ್ರಕಾರವಾಗಿ ಮೊದಲಿನ ಎರಡು ಪದ್ಯಗಳಲ್ಲಿ 'ಕವಿರಾಜಮಾರ್ಗ'ದ ವಿಷಯವು ಉಕ್ತವಾಗಿದೆ; ಕೊನೆಯ ಪದ್ಯ ದಲ್ಲಿ ಕವೀಶ್ವರನೆಂಬ ಒಬ್ಬ ಕವಿಯ ವಿಷಯವು ಹೇಳಲ್ಪಟ್ಟಿದೆ. ಆದುದರಿಂದ ರಾಜ ಪುರೋಹಿತರ ವ್ಯಾಖ್ಯಾನವು ಈ ದೃಷ್ಟಿಯಿಂದ ಸಮಂಜಸವಾಗಿದೆಯೆಂದು ಹೇಳಲಾಗು ವುದಿಲ್ಲ. ಈ ಕಾರಣಗಳಿಂದ ರಾಜಪುರೋಹಿತರ ಸಿದ್ಧಾಂತವು ಅವಿಶ್ವಸನೀಯವೆಂಬು ದಾಗಿ ತೋರಿಬರುತ್ತದೆ. ಪರಿಚ್ಛೇದಾಂತ ಪದ್ಯಗಳಲ್ಲಿ 'ಶ್ರೀ ವಿಜಯ' ಎಂಬ ಒಂದೇ ಪದವಿದೆಯೆಂದು ಇಟ್ಟುಕೊಂಡರೂ ಆ ಪದ್ಯಗಳಿಗೆ ಸಮಂಜಸವಾಗಿ ಅರ್ಥ ಮಾಡಬಹು ದೆಂಬುದಾಗಿ ತೋರಿಬರುವುದರಿಂದ ಶ್ರೀವಿಜಯನೆಂಬ ಪದವೇ ಆ ಮೂರು ಪದ್ಯ ಗಳಲ್ಲಿಯೂ ಇರುವುದೆಂದೂ ಶ್ರೀವಿಜಯನೆಂಬ ಬಿರುದು ನೃಪತುಂಗನಿಗಿತ್ತೆಂಬುದಕ್ಕೆ ಆಧಾರವಾವುದೂ ಇಲ್ಲದಿರುವುದರಿಂದ ನೃಪತುಂಗನ ಆಸ್ಥಾನಕವಿಯಾದ ಶ್ರೀ ವಿಜಯನು 'ಕವಿರಾಜಮಾರ್ಗ'ವನ್ನು ಬರೆದನೆಂದೂ ಊಹಿಸುವುದು ಅಹೇತುಕವಲ್ಲ ವೆಂಬುದಾಗಿಯೂ ನಿರ್ಧರಿಸಬಹುದಾಗಿದೆ.

ಟಿ. ಎಸ್. ವೆಂಕಣ್ಣಯ್ಯನವರು ಈ ಬಗ್ಗೆ ಪದ್ಯಭಾಗಗಳನ್ನು ಆರು ಪಂಗಡಗಳ ನ್ನಾಗಿ ವಿಂಗಡಿಸಿಕೊಂಡು ಕಡೆಗೆ ತಮ್ಮ ತೀರ್ಮಾನವನ್ನು ಮುಂದೆ ಕಾಣಿಸಿರುವಂತೆ ಹೇಳಿರುತ್ತಾರೆ.

ಅವರು ಮೊದಲು ಪ್ರಕೃತಗ್ರಂಥವು ನೃಪತುಂಗ ರಚಿತವಲ್ಲವೆಂದು ತಿಳಿಯ ಹೇಳುವ ಕೆಲವು ಪದ್ಯಗಳಲ್ಲಿರುವ ಹೇಳಿಕೆಯತ್ತ ನಮ್ಮ ಗಮನವನ್ನು ಸೆಳೆಯುವರು. "ಅತಿಶಯಧವಳೋಕ್ತಿಕ್ರಮದಿನಱಿಪುವೆಂ ತದ್ಭವದೊಳ್", "ಅತಿಶಯಧವಳಧರಾಧಿಪ ಮತದಿಂದಂ ಜಾತಿಯೆಂಬಳಂಕಾರಮನನಿಂತತಿನಿಪುಣರಱಿಗೆ ತೋರ್ಪೆಂ ಶ್ರುತಿಸುಭಗ ಮೆನಿಪ್ಪ ರೂಪಕಾಲಂಕೃತಿಯುಂ", "ಬೆಸಸಿದನಖಿಳ ಧರಾವಲ್ಲಭನಿಂತಮೋಘವರ್ಷ ನೃಪೇಂದ್ರಂ", "ತದನುಮತಲಕ್ಷ್ಯಲಕ್ಷಣ ನಿದರ್ಶನಂಗಳನನುಕ್ರಮೋಕ್ತಿಯೆ ಪೇೞ್ವೆಂ", ಚಾರುಶ್ರೀ ನೃಪತುಂಗವಿಚಾರಕ್ರಮಮಾರ್ಗಗಣನೆಯೊಳ್" "ಶಬ್ದಾಳಂಕಾರಂ ನಿಶ್ಚಿತಮಕ್ಕೆ ಪೇೞ್ವ ಮಾೞ್ಕೆಯೊಳಿನ್ನಾ"—ಈ ಹೇಳಿಕೆಗಳಲ್ಲಿ ತೋರಿಬರುವ ಪ್ರಥಮ ಪುರುಷದ ಪ್ರಯೋಗದಿಂದ ಇದು ನೃಪತುಂಗನ ನೇತೃತ್ವದಲ್ಲಿ ಮತ್ತೊಬ್ಬ ವ್ಯಕ್ತಿಯಿಂದ ರಚಿತವಾದ ಗ್ರಂಥವಿರಬೇಕೆಂದು ಎಣಿಸುವರು.

ಈ ಹಿನ್ನೆಲೆಯಲ್ಲಿ ಇದನ್ನು ಬರೆದವನು ನೃಪತುಂಗನ ಸಭಾಸದನೊಬ್ಬನಿರ ಬೇಕೆಂದು ಗ್ರಹಿಸಿ, ತಮ್ಮ ಅಭಿಪ್ರಾಯಕ್ಕೆ ಪೋಷಕವಾಗಿ ತೃತೀಯ ಪರಿಚ್ಛೇದದಲ್ಲಿರುವ ಈ ಕೆಳಗಿನ ಪದ್ಯಗಳನ್ನು ಉದಾಹರಿಸಿರುವರು: "ಇಂತು ಮಿಕ್ಕ ವರ್ಣನೆಗಳ್....", "ಸಕಲಲೌಕಿಕಸಾಮಯಿಕೋರುವೈದಿಕವಿಶೇಷವಿವೇಕಪರಾಯಣಂ....", "ಅತಿಶಯ ಪ್ರತಿಭಾ ವಿಭವಂ ಮಹಾಚತುರ ವ್ಯಕ್ತಿ....", ಭಾವಿಸಲ್ಬಗೆದವಂ ಮಿಗೆ ಜಾಣನ್....", "ಪರಮಕಾರುಣಿಕನಪ್ಪನಪಾಕೃತದೋಷನ್....", "ಬಗೆದು ಮೋಕ್ಷಪರಮಧರ್ಮ

ಮನರ್ತಿಯಿನ್....", "ಕೂಡೆ ಪೇೞ್ದಿ ನುತಕಾವ್ಯಮನಿಂತಭಿಮಾನಿ....", "ಅಂತು ಬಿೞ್ದಿ ತೆಱದಿಂ ವರಗೀತ ಗುಣೋದಯೈಕಕಾಂತ...."—ಈ ಪದ್ಯಗಳು ನೃಪತುಂಗನ ಸಭಾಸದನೊಬ್ಬನನ್ನು ಕುರಿತುದಾಗಿರಬೇಕೆಂದು ನರಸಿಂಹಾಚಾರ್ಯರು ವ್ಯಕ್ತಪಡಿಸಿದ ಅಭಿಪ್ರಾಯವನ್ನು ವೆಂಕಣ್ಣಯ್ಯನವರು ಅನುಮೋದಿಸಿರುವರು. ಅಷ್ಟೇ ಅಲ್ಲದೆ, ಈ ಪದ್ಯಗಳಿಗೆ ವಿಪರೀತಾರ್ಥವನ್ನು ಕಲ್ಪಿಸಿರುವ ರಾಜಪುರೋಹಿತರ ಕ್ರಮವನ್ನು ಪ್ರಾಸಂಗಿಕವಾಗಿ ಖಂಡಿಸಿಯೂ ಇರುವರು. ಇದೇ ಸಂದರ್ಭದಲ್ಲಿ ೨೬ರಿಂದ ೨೯ರ ವರೆಗಿರುವ ಪದ್ಯಗಳಲ್ಲಿ ಕವಿಯು ತನ್ನ ಆಶ್ರಯದಾತನಾದ ನೃಪತುಂಗನನ್ನು ಹೊಗಳಿರುವಂತೆಯೂ ತೋರಿಬರುವುದಾಗಿ ಭಾವಿಸುವರು. ಈ ರೀತಿಯಾಗಿ ಗೂಢವಾಗಿರುವ ಅನ್ಯಕರ್ತೃವು ಮೂರು ಪರಿಚ್ಛೇದಗಳ ಅಂತ್ಯದಲ್ಲಿಯೂ ನಿಯತವಾಗಿ ಬರುವ 'ಶ್ರೀವಿಜಯ'ನೇ ಇರಬೇಕೆಂದು ಎಣಿಸುವರು.

ನೃಪತುಂಗ ಪಕ್ಷದವರಿಗೂ, ಹಾಗೂ ಅನ್ಯಕರ್ತೃವಿನ ಪಕ್ಷದವರಿಗೂ ಬೆಂಬಲವಾಗಬಲ್ಲ ಕೆಲವು ಅಂಶಗಳನ್ನು ವೆಂಕಣ್ಣಯ್ಯನವರು ಗಮನಿಸದೆ ಇಲ್ಲ. ಅವು ಯಾವುವೆಂದರೆ : (ಅ) ಪ್ರತಿಯೊಂದು ಪರಿಚ್ಛೇದದ ಕೊನೆಯಲ್ಲಿರುವ ಗದ್ಯದ 'ನೃಪತುಂಗಾನುಮತಮಪ್ಪ ಕವಿರಾಜಮಾರ್ಗ' ಎಂಬ ಮಾತುಗಳು, (ಆ) ಗ್ರಂಥದ ಆದಿಯಲ್ಲಿರುವ ಮಂಗಳ ಪದ್ಯಗಳು, (ಇ) ನೃಪತುಂಗನನ್ನು ಹೊಗಳುವ ಪದ್ಯಗಳು.

ಈ ಒಂದೊಂದರ ಬಗ್ಗೆಯೂ ಇತರರು ಹೇಳಿರುವ ಅಂಶಗಳನ್ನೆಲ್ಲ ಕ್ರೋಢೀಕರಿಸಿ, ಅನುಚಿತವಾದುವನ್ನು ಖಂಡಿಸಿ, ತಮ್ಮ ನಿಲವನ್ನು ಸಮರ್ಥಿಸಿರುವರು. ಇವರು 'ಅನುಮತ' ಎಂಬ ಪದವು ನೃಪತುಂಗನ ಪ್ರತಿಪಕ್ಷದವರು ಎಣಿಸಿರುವಂತೆ (ಎಂದರೆ 'ಇಷ್ಟಾನುಸಾರವಾಗಿ'), ಬಳಕೆಯಾಗಿದೆಯೇ ಹೊರತು 'ಅಭಿಮತ' ಮತ್ತು 'ಸಮ್ಮತ' ಎಂಬ ಅರ್ಥದಲ್ಲಿ ಪ್ರಯೋಗವಾಗಿಲ್ಲ. ಮಂಗಳಪದ್ಯಗಳು ಸಹ ಅನ್ಯಕರ್ತೃವೊಬ್ಬನು ತನ್ನ ಆಶ್ರಯದಾತ ಮತ್ತು ತನ್ನ ಇಷ್ಟದೇವತೆಗಳೆರಡನ್ನೂ ಒಂದೇ ಬಿರುದಾವಳಿಗಳ ಮೂಲಕ ಸ್ತುತಿಸಿರುವಂತೆ ವಿದಿತವಾಗುವುದೇ ಹೊರತು, ಸ್ವತಃ ನೃಪತುಂಗನೇ ತನ್ನ ಬಿರುದಾವಳಿಗಳನ್ನು ದೇವತೆಗಳಿಗೆ ಆರೋಪಿಸಿ ಹೇಳಿದಂತಿಲ್ಲವೆಂದೂ ಈ ಬಗ್ಗೆ ಕನ್ನಡದ ಇತರ ಕವಿಗಳು ಅನುಸರಿಸಿರುವ ಉದಾಹರಣೆಗಳಿವೆಯೆಂದೂ ನೃಪತುಂಗ ಪ್ರಶಸ್ತಿಪರವಾದ ಪದ್ಯಗಳನ್ನು ಆತನೇ ಬರೆದುಕೊಂಡನೆಂಬುದಕ್ಕಿಂತ ಆತನ ಆಶ್ರಿತನೊಬ್ಬನು ಬರೆದನೆನ್ನುವುದು ಹೆಚ್ಚು ಸಹಜವಾದದ್ದೆಂದೂ, ಮುಂದುವರಿದು 'ಭಾವಿಸಿ ಬೆಸಸಿದನಖಿಳಧರಾವಲ್ಲಭನಿಂತಮೋಘವರ್ಷನೃಪೇಂದ್ರಂ', 'ಎಂದನತಿಶಯಧವಳಂ' 'ಅತಿಶಯಧವಳೋರ್ವಿಪೋದಿತಾಲಂಕೃತಿ' ಮುಂತಾದ ಕೆಲವು ವಾಕ್ಯಗಳು ನೃಪತುಂಗನ ಪರವಾಗಿವೆಯೆಂದು ತೋರಿಬಂದರೂ ಅವು ವಾಸ್ತವಿಕವಾಗಿ ಪ್ರತಿಪಕ್ಷದವರ ಅಭಿಪ್ರಾಯಕ್ಕೆ ಬಾಧಕವಾಗಿಲ್ಲವೆಂದೂ ಪ್ರತಿಪಾದಿಸಿರುವರು.

ಆಂತರಿಕ ಪ್ರಮಾಣಗಳನ್ನೇ ವಿಶೇಷವಾಗಿ ಅವಲಂಬಿಸಿದ ವೆಂಕಣ್ಣಯ್ಯನವರು ಕೆಲವು ಬಾಹ್ಯಪ್ರಮಾಣಗಳನ್ನೂ ಉದಾಹರಿಸಿ, ಅವುಗಳ ಇಂಗಿತವೂ ತಮ್ಮ ನಿಲವಿಗೇ

ಹೇಗೆ ನೆರವಾಗಿದೆಯೆಂಬುದನ್ನು ಪ್ರಸ್ತಾಪಿಸಿರುವರು. ದಕ್ಷಿಣೋತ್ತರ ಮಾರ್ಗಗಳನ್ನು ವಿಚಾರಿಸುವ ಸಂದರ್ಭದಲ್ಲಿ 'ಶಬ್ದಾನುಶಾಸನ'ದ ಕರ್ತೃವಾದ ಭಟ್ಟಾಕಳಂಕನು ಹೇಳಿರುವ 'ನೃಪತುಂಗ ಗ್ರಂಥೇ ದ್ರಷ್ಟವ್ಯ ಇತಿ' ಎನ್ನುವುದು ನೃಪತುಂಗನ ಪಕ್ಷವನ್ನು ಪುರಸ್ಕರಿಸಿದರೂ, ಆತನಿಗಿಂತಲೂ ಪ್ರಾಚೀನರಾದ ದುರ್ಗಸಿಂಹ ಮತ್ತು ಕೇಶಿರಾಜರು ಶ್ರೀವಿಜಯರ ಕವಿಮಾರ್ಗವನ್ನು ಆದರಿಸಿರುವುದರಿಂದ ಕಾಲದ ದೃಷ್ಟಿಯಿಂದ ಇದೇ ಹೆಚ್ಚು ವಿಶ್ವಸನೀಯವೆಂದು ಸ್ಪಷ್ಟಪಡಿಸಿರುವರು.

ಕಡೆಯದಾಗಿ "ನಿಷ್ಪಕ್ಷಪಾತ ದೃಷ್ಟಿಯಿಂದ ವಿಚಾರಮಾಡಿ ನೋಡುವಲ್ಲಿ 'ಕವಿರಾಜಮಾರ್ಗ' ನೃಪತುಂಗಕೃತವೆಂಬ ಸಿದ್ಧಾಂತವು ವಿಶ್ವಾಸಾರ್ಹವಾದುದಲ್ಲವೆಂದು ಗೊತ್ತಾಗುತ್ತದೆ....ಮೊದಲನೆಯ ಪದ್ಯದ ಪಂಗಡಗಳಿಂದ ಆ ಗ್ರಂಥವನ್ನು ಬರೆದವನು ನೃಪತುಂಗನಲ್ಲವೆಂದೂ ಎರಡನೆಯ ಮತ್ತು ಮೂರನೆಯ ಪಂಗಡಗಳ ಪದ್ಯಗಳಿಂದ ನೃಪತುಂಗನ ಆಸ್ಥಾನ ಕವಿಯಾದ ಶ್ರೀವಿಜಯನೇ ಆ ಗ್ರಂಥದ ಕರ್ತೃವೆಂದೂ ಸ್ಪಷ್ಟವಾಗಿ ಗೊತ್ತಾಗುತ್ತದೆ. ನಾಲ್ಕನೆಯ ಪಂಗಡದ ಪದ್ಯಗಳಾಗಲಿ, ಐದನೆಯ ಪಂಗಡದ ಪದ್ಯಗಳಾಗಲಿ, ಶ್ರೀವಿಜಯನು ಗ್ರಂಥಕರ್ತನೆಂಬ ಮತಕ್ಕೆ ವಿರೋಧವಾಗುವಂತಿಲ್ಲ. ಆರನೆಯ ಪಂಗಡದ ಪದ್ಯಗಳು ಶ್ರೀವಿಜಯನು ಗ್ರಂಥಕರ್ತನೆಂಬ ಮತಕ್ಕೆ ಒಟ್ಟಿನಲ್ಲಿ ಅನುಕೂಲವಾಗಿಯೇ ಇರುವಂತೆ ತೋರುತ್ತದೆ" ಎಂದು ತಮ್ಮ ತೀರ್ಮಾನವನ್ನು ಹೇಳಿರುವರು.[9]

ಕವಿರಾಜಮಾರ್ಗದ ಕರ್ತೃ ಕವೀಶ್ವರನಿರಲಾರನೆಂದು ರಾಜಪುರೋಹಿತರು ಮತ್ತು ವೆಂಕಣ್ಣಯ್ಯನವರಿಬ್ಬರೂ ಭಾವಿಸಿದ್ದರಿಂದ,[10] ಮೇಲ್ಕಂಡ ಲೇಖನದಲ್ಲಿ ಈ ಬಗ್ಗೆ ಲೇಖಕರು ಹೆಚ್ಚು ಪ್ರಸ್ತಾಪಿಸಿಲ್ಲವೆಂದು ಸ್ವವಿದಿತವಾಗುತ್ತದೆ.

## ಮದರಾಸು ಪರಿಷ್ಕರಣದ ಸಂಪಾದಕರು : ಕವೀಶ್ವರ ಕರ್ತೃತ್ವದ ಅನುಮೋದನೆ

ಫ್ಲೀಟರ ಲೇಖನದ ಸೂಚನೆಯನ್ನು ಸ್ವೀಕರಿಸಿ ಅದನ್ನು ವಿಶೇಷವಾಗಿ ಸಮರ್ಥಿಸಿದವರಲ್ಲಿ ಮದರಾಸು ವಿಶ್ವವಿದ್ಯಾನಿಲಯದವರು ಪ್ರಕಟಿಸಿರುವ(೧೯೩೦) 'ಕವಿರಾಜಮಾರ್ಗ'ದ ಸಂಪಾದಕರಾದ ಎ. ವೆಂಕಟರಾವ್ ಮತ್ತು ಎಚ್. ಶೇಷ ಅಯ್ಯಂಗಾರ್ ಅವರು ಪ್ರಮುಖರು. ಈ ಸಂಪಾದಕರು ಈ ಬಗ್ಗೆ ನೀಡಿರುವ ಕೆಲವು ಸಂಗತಿಗಳನ್ನು ಇಲ್ಲಿ ಗಮನಿಸಬಹುದು.[11]

ಶ್ರೀವಿಜಯಕೃತ 'ಕವಿಮಾರ್ಗ'ದ ಅಸ್ತಿತ್ವ ಪ್ರತಿಪಾದನೆ : (i) 'ಕವಿರಾಜಮಾರ್ಗ' ಗ್ರಂಥದಲ್ಲಿ ಹೇಳಿರುವ "ಪರಮಶ್ರೀ ವಿಜಯ....ತದಾದ್ಯ ಕಾವ್ಯಕ್ಕೆಂದುಂ" ಎಂಬ ವಾಕ್ಯದಿಂದ ಶ್ರೀ ವಿಜಯನು ಒಬ್ಬ ಕವಿಯೆಂಬುದು ಸ್ಪಷ್ಟವಾಗುವುದು. "ಶ್ರೀವಿಜಯರ ಕವಿಮಾರ್ಗಂ" ಎಂದು ದುರ್ಗಸಿಂಹನು ತನ್ನ ಪಂಚತಂತ್ರದ ಪೀಠಿಕಾ ಪ್ರಕರಣದಲ್ಲಿ ಹೇಳಿರುವುದರಿಂದ, ದುರ್ಗಸಿಂಹನು ಹೇಳುವ ಶ್ರೀವಿಜಯನೇ ಈತನಾಗಿರಬಹುದೆಂದೂ ಹೇಳಬಹುದು.

(ii) ಈ 'ಕವಿರಾಜಮಾರ್ಗ'ದ ಪರಿಚ್ಛೇದಾಂತ್ಯ ಪದ್ಯಗಳಲ್ಲಿ "ಶ್ರೀ ವಿಜಯ ಪ್ರಭೂತಮನಿದಂ" ಎಂಬ ಭಾಗಗಳಿಂದ ಶ್ರೀ ವಿಜಯನು ಒಂದು ಅಲಂಕಾರ ಗ್ರಂಥವನ್ನು ಬರೆದಿರಬಹುದೆಂದು ಸೂಚಿತವಾಗುವುದರಿಂದ, ಶ್ರೀ ವಿಜಯನು ಬರೆದ 'ಕವಿಮಾರ್ಗ'ವು ಒಂದು ಅಲಂಕಾರ ಗ್ರಂಥವಾಗಿಯೇ ಇರಬೇಕು.

(iii) ಈ 'ಕವಿಮಾರ್ಗ'ವನ್ನನುಸರಿಸಿ, ಎಂದರೆ, ಅದರ ಹಲವು ಭಾಗಗಳನ್ನೇ ಆರಿಸಿ ಕೊಂಡು 'ಕವಿರಾಜಮಾರ್ಗ' ವಿರಚಿತವಾಗಿರಬೇಕೆಂಬ ಅಂಶಕ್ಕೆ, ಈ ಗ್ರಂಥದ ೩ನೆಯ ಪದ್ಯವಾಗಿರುವ ಸರಸ್ವತೀಸ್ತುತಿಯನ್ನೊಳಗೊಂಡ ಮಂಗಳಪದ್ಯಗಳುಳ್ಳ ದಂಡಿಯ 'ಕಾವ್ಯಾದರ್ಶ'ವನ್ನನುಸರಿಸಿಯೇ ಈ 'ಕವಿಮಾರ್ಗ'ವು ಬರೆಯಲ್ಪಟ್ಟಿರುವುದೆಂದು ಊಹಿಸುವುದಕ್ಕೂ ಕಾರಣಗಳಿವೆ. ಕನ್ನಡ ಕವಿಗಳು ಸಾಧಾರಣವಾಗಿ ಗ್ರಂಥದ ಆದಿಯ ಮಂಗಳ ಪದ್ಯಗಳ ಪ್ರಾರಂಭದಲ್ಲಿ 'ಶ್ರೀ' ಶಬ್ದ ವಿರಬೇಕೆಂಬ ನಿಯಮವನ್ನನುಸರಿಸಿರುವುದರಿಂದ, 'ಕವಿರಾಜಮಾರ್ಗ'ದಲ್ಲಿರುವ 'ಶ್ರೀ' ಶಬ್ದವನ್ನು ಆದಿಯಲ್ಲಿ ಉಳ್ಳ ಸರಸ್ವತೀಸ್ತುತಿರೂಪವಾದ ಮೂರನೆಯ ಪದ್ಯವು ಒಂದು ಗ್ರಂಥದ ಮಂಗಳಪದ್ಯವೆಂಬುದರಲ್ಲಿ ಸಂದೇಹವಿಲ್ಲ. ಪರಿಶೇಷಾನುಮಾನದಿಂದ ಇದೇ 'ಕವಿಮಾರ್ಗ'ದ ಮಂಗಳಪದ್ಯವೆಂದೂ ತಿಳಿಯಬಹುದು. 'ಕವಿರಾಜಮಾರ್ಗ' ಗ್ರಂಥಕರ್ತನು 'ಕವಿಮಾರ್ಗ'ದ ಈ ಮಂಗಳಪದ್ಯವನ್ನು ತೆಗೆದು ಕೊಂಡು ತನ್ನ ಗ್ರಂಥದಲ್ಲಿ ಸೇರಿಸಿ, ತಾನೂ ತನ್ನ ಗ್ರಂಥಕ್ಕೆ ಹೊಸದಾಗಿ ಮತ್ತೆರಡು ಮಂಗಳಪದ್ಯಗಳನ್ನು ಮಾಡಿ ಸೇರಿಸಿರುವನು.

(iv) ಕೇಶಿರಾಜನು ಪೂರ್ವಕವಿಗಳ ಕಾವ್ಯಗಳು ತನ್ನ ಲಕ್ಷಣ ಗ್ರಂಥಕ್ಕೆ ಲಕ್ಷ್ಯಗಳೆಂದು ಹೇಳಲು ಹೊರಟು, ಪೂರ್ವಕವಿಗೋಷ್ಠಿಯಲ್ಲಿ ಮೊದಲು ಶ್ರೀವಿಜಯನ ಹೆಸರನ್ನು ಹೇಳುವನು. ಹೀಗೆ ಹೇಳುವ ಕೇಶಿರಾಜನು ಶ್ರೀ ವಿಜಯನ ಗ್ರಂಥದಿಂದ ಆವುದನ್ನಾದರೂ ಲಕ್ಷ್ಯವನ್ನು ತೆಗೆದುಕೊಂಡೇ ಇರಬೇಕು. ಅಲ್ಲದೆ, ಕೇಶಿರಾಜನು ತನ್ನ ವ್ಯಾಕರಣ ಗ್ರಂಥದಲ್ಲಿ ಅಲಂಕಾರಕ್ಕೆ ಸಂಬಂಧಪಡುವ ಒಂದೆರಡು ವಿಷಯಗಳನ್ನು ಹೇಳುವಾಗ ಲಘ್ವಕ್ಷರಾಂತವಾದ ಪದದ ಮುಂದೆ ಒತ್ತಕ್ಷರದ ಪದವನ್ನು ಹೇಳಕೂಡದೆಂಬ ಲಕ್ಷಣವನ್ನು ಹೇಳಿ, ಈ 'ಕವಿರಾಜಮಾರ್ಗ'ದಲ್ಲಿ ತೋರುವ ಪದ್ಯವನ್ನೇ ಉದಾಹರಿಸಿರುವನು ಮತ್ತು ಲಿಂಗಲಕ್ಷಣವನ್ನು ಹೇಳುವಾಗ ಸಮಸಂಸ್ಕೃತಕ್ಕೂ ದೇಶ್ಯಕ್ಕೂ ಸಮಾಸಮಾಡಕೂಡದೆಂಬ ಲಕ್ಷಣಕ್ಕೆ ಈ ಗ್ರಂಥದಲ್ಲಿನ ಲಕ್ಷ್ಯಪದ್ಯವನ್ನೇ (ಶಮದ. ಸೂ. ೯೦) ಉದಾಹರಿಸಿರುವನು. ಆಪಾತತಃ ನೃಪತುಂಗ ಕರ್ತೃಕವೆಂದು ಕಂಡುಬರುವ ಈ 'ಕವಿರಾಜಮಾರ್ಗ'ದಿಂದಲೇ ಆತನು ವಿಷಯವನ್ನೂ. ಲಕ್ಷ್ಯಪದ್ಯವನ್ನೂ ಆರಿಸಿಕೊಂಡಿದ್ದರೆ, ಪೂರ್ವಕವಿಗಳ ಗೋಷ್ಠಿಯಲ್ಲಿ ನೃಪತುಂಗನ ಹೆಸರನ್ನು ಎಂದಿಗೂ ಸೇರಿಸದೆ ಬಿಡುತ್ತಿರಲಿಲ್ಲ. ಹೀಗೆ ಲಕ್ಷ್ಯಗ್ರಂಥಕರ್ತೃಗಳ ಗೋಷ್ಠಿಯಲ್ಲಿ ನೃಪತುಂಗನ ಹೆಸರನ್ನೇ ಹೇಳದೆ, ಶ್ರೀವಿಜಯನ ಹೆಸರನ್ನೇ ಹೇಳಿರುವುದರಿಂದ 'ಶಬ್ದಮಣಿದರ್ಪಣ'ದಲ್ಲಿ ದೊರೆವ ಪದ್ಯಗಳು ಈ ಶ್ರೀ ವಿಜಯನ 'ಕವಿಮಾರ್ಗ'ದ ಪದ್ಯಗಳೆಂದೇ ಹೇಳಬೇಕಾಗುವುದು. 'ಕವಿರಾಜಮಾರ್ಗ'ದಲ್ಲಿ ತೋರುವ ಪಾಠಕ್ಕೂ 'ಶಬ್ದಮಣಿದರ್ಪಣ'ದಲ್ಲಿ ತೋರುವ ಪಾಠಕ್ಕೂ

ಸ್ವಲ್ಪ ಭೇದವಿರುವುದರಿಂದ, 'ಕವಿರಾಜಮಾರ್ಗ' ಕರ್ತೃವು 'ಕವಿಮಾರ್ಗ'ದಿಂದ ತಾನು ಆರಿಸಿಕೊಂಡ ಈ ಪದ್ಯಗಳಲ್ಲಿ ಸ್ವಲ್ಪ ಮಾರ್ಪಾಡು ಮಾಡಿರುವನೆಂದು ಹೇಳ ಬಹುದು. ಅಲ್ಲದೆ, ಈ 'ಕವಿರಾಜಮಾರ್ಗ'ದಲ್ಲಿರುವ 'ನುಡಿಗೆಲ್ಲಂ ಸಲ್ಲದ...." ಎಂಬ ಪದ್ಯವು ಒಂದು ಹಸ್ತಲಿಖಿತ ಪ್ರತಿಯಲ್ಲಿಲ್ಲ. ಆದರೆ 'ಶಬ್ದಮಣಿದರ್ಪಣ'ದಲ್ಲಿ ಉದಾಹೃತ ವಾಗಿದೆ. ಆದುದರಿಂದ ಈ 'ಕವಿರಾಜಮಾರ್ಗ'ವನ್ನು ಬರೆದವನು ತನ್ನ ಕಾಲಕ್ಕೆ ಅಪ್ರಸಿದ್ಧವಾಗಿದ್ದ ಚತ್ತಾಣ, ಬೆದಂಡೆ ಎಂಬ ಕಾವ್ಯಗಳಿಗೆ ಉದಾಹರಣೆಗಳನ್ನು ಕೊಡಲು ಸಮರ್ಥನಾಗದೆ 'ಕವಿಮಾರ್ಗ'ದ ಚತ್ತಾಣ, ಬೆದಂಡೆ ಎಂಬ ಕನ್ನಡ ಕಾವ್ಯ ಭೇದಗಳ ಹೆಸರನ್ನು ಉಪಪಾದಿಸುವ ಆ ಪದ್ಯವನ್ನು ಬಿಟ್ಟಿದ್ದರೂ ಇರಬಹುದು. ಈ ಕೇಶಿರಾಜನಿಗೆ ಸ್ವಲ್ಪ ಕಾಲ ಹಿಂದೆ ಇದ್ದ ನಾಗವರ್ಮನೂ ಚತ್ತಾಣ, ಬೆದಂಡೆ ಕಾವ್ಯ ಗಳ ಲಕ್ಷಣವನ್ನು ಹೇಳಿರುವನು; ಉದಾಹರಣೆಗಳನ್ನು ಮಾತ್ರ ಕೊಡಲಿಲ್ಲ. ಕೇಶಿ ರಾಜನು ಮಾತ್ರ 'ಕವಿಮಾರ್ಗ'ದಿಂದಲೇ 'ಕವಿರಾಜಮಾರ್ಗ'ದಲ್ಲಿಲ್ಲದ ಈ ಪದ್ಯವನ್ನು[12] ಆರಿಸಿಕೊಂಡನೆಂಬುದಕ್ಕೆ ಇದೂ ಒಂದು ರೀತಿಯಿಂದ ಸಹಕಾರಿಯಾಗುವುದು.

(v) ಈ ಶ್ರೀವಿಜಯನು ಈ 'ಕವಿಮಾರ್ಗ'ವಲ್ಲದೆ ಬೇರೆ ಗ್ರಂಥಗಳನ್ನೂ ಬರೆದಿರು ವಂತೆ ಊಹಿಸಲು ಅವಕಾಶವಿದೆ. ಮಂಗರಸನು ತನ್ನ 'ನೇಮಿಜಿನೇಶ ಸಂಗತಿ'ಯಲ್ಲಿ "ಕನ್ನಡದೊಳು ಚಂಪೂಕಾವ್ಯವಂ ನೆಱೆ ಪೇೞ್ದ" ಎಂದು ಆರಂಭಿಸಿ "ದೇವ ಚಂದ್ರಪ್ರಭ ರನು ಕೊಂಡಾಡಿದ ಶ್ರೀವಿಜಯರ" ಎಂದು ಹೇಳಿರುವುದನ್ನು ಪಿರಿಯಾಪಟ್ಟಣದ ದೊಡ್ಡಯ್ಯನ "ಚಂದ್ರಪ್ರಭಪುರಾಣವ ಪೇೞ್ದ ವಿಜಯಕವೀಂದ್ರ" ಎಂಬ ಹೇಳಿಕೆಯು ದೃಢಪಡಿಸುತ್ತದೆ. ಆದುದರಿಂದ ಶ್ರೀವಿಜಯನು ಕನ್ನಡದಲ್ಲಿ 'ಚಂದ್ರಪ್ರಭಪುರಾಣ'ವೆಂಬ ಚಂಪೂ ಕಾವ್ಯವೊಂದನ್ನು ಬರೆದನೆಂದು ವ್ಯಕ್ತವಾಗುವುದು. ದೊರೆತಿರುವ 'ಚಂದ್ರ ಪ್ರಭಪುರಾಣ'ವು ಅಗ್ಗಳಕೃತವಾದ್ದು. ಶ್ರೀವಿಜಯಕೃತವಾದ್ದು ಇನ್ನೂ ದೊರೆತಿಲ್ಲ.

(vi) 'ಶಬ್ದಮಣಿದರ್ಪಣ'ದಲ್ಲೂ 'ಕಾವ್ಯಾವಲೋಕನ'ದಲ್ಲೂ ನೃಪತುಂಗನನ್ನು ಸ್ತುತಿ ಸುವ ನಾಲ್ಕಾರು ಪದ್ಯಗಳು ದೊರಕುವುವು. ಇದರಿಂದ ಶ್ರೀವಿಜಯನು ನೃಪತುಂಗನನ್ನು ದ್ದೇಶಿಸಿ ಒಂದು ಕಾವ್ಯವನ್ನು ಬರೆದಿರಬಹುದೆಂದು ಊಹಿಸಲು ಅವಕಾಶವುಂಟು.

(vii) ಕೇಶಿರಾಜನು ಈತನನ್ನು ಪ್ರಾಚೀನ ಕವಿಗಳಲ್ಲಿ ಸೇರಿಸುವುದರಿಂದಲೂ ಈ 'ಕವಿರಾಜಮಾರ್ಗ'ದಲ್ಲಿ 'ಪರಮ ಶ್ರೀವಿಜಯ' ಎಂಬಲ್ಲಿ 'ಪರಮ' (ಶ್ರೇಷ್ಠವಾದ) ಎಂಬ ವಿಶೇಷಣವು ಇರುವುದರಿಂದಲೂ ದುರ್ಗಸಿಂಹನ "ಶ್ರೀವಿಜಯರ ಕವಿಮಾರ್ಗಂ" ಎಂಬ ಬಹುವಚನ ಪ್ರಯೋಗದಿಂದಲೂ ಈತನು ಪ್ರಸಿದ್ಧನಾದ ಒಬ್ಬ ಆಚಾರ್ಯನಾಗಿದ್ದ ನೆಂದು ನಾವು ಹೇಳಬಹುದು.

(viii) ಈ 'ಕವಿರಾಜಮಾರ್ಗ'ದಲ್ಲಿ ಪರಮಕವೀಶ್ವರರ್, ಪರಮಕವಿವೃಷಭರ್ಕಳ್, ಪರಮಕವಿಪ್ರಧಾನರಾ ಕಾವ್ಯಂಗಳ್—ಮುಂತಾದ ಪದಗಳು ದೊರಕುವುದರಿಂದ ಈ 'ಕವಿರಾಜಮಾರ್ಗ' ಕರ್ತೃವು ತನ್ನ ಗ್ರಂಥಕ್ಕೆ ಆಧಾರಭೂತವಾದ 'ಕವಿಮಾರ್ಗ' ಗ್ರಂಥವನ್ನು ಬರೆದಿದ್ದ ಶ್ರೀವಿಜಯನನ್ನೇ ಈ ಪದಗಳಿಂದ ಸೂಚಿಸಿರುವನೆಂದೂ ತಿಳಿದು

ಬರುವುದರಿಂದ, ಈ ಶ್ರೀವಿಜಯನು 'ಕವಿರಾಜಮಾರ್ಗ' ಗ್ರಂಥಕರ್ತೃವಿಗೆ ಒಂದು ವೇಳೆ ಗುರುವಾಗಿದ್ದರೂ ಇರಬಹುದು.

(ix) "ಅಱಿಪುವೆಂ ತದ್ಭವದೊಳ್" ಎಂದು ಬರುವ ಸದ್ಯದಲ್ಲಿ (೨-೫೫) ತದ್ಭವ ಶಬ್ದಕ್ಕೆ ತತ್ಸಮ ತದ್ಭವ ಶಬ್ದವೆಂದು. ಅರ್ಥಮಾಡುವುದು ಅಪ್ರಾಕರಣಿಕ. ಹಿಂದೆ ದಕ್ಷಿಣೋತ್ತರಮಾರ್ಗಗಳ ಲಕ್ಷಣವನ್ನು ಹೇಳಿರುವುದರಿಂದ ಈ ಪದ್ಯದ ಉತ್ತರಾರ್ಧದಲ್ಲಿ "ಅತಿಶಯಧವಳೋಕ್ತಿಕ್ರಮದಿಂ ಅಱಿಪುವೆಂ" ಎಂದು ಇಷ್ಟನ್ನೇ ಹೇಳಬೇಕಾಗಿರುವಾಗ 'ಅದನ್ನು' ಎಂಬುದಕ್ಕೆ ಬದಲಾಗಿ, ಅದರಲ್ಲಿ ಹುಟ್ಟಿದ (ತದ್ಭವದೊಳ್) ಎಂಬ ಕ್ಲಿಷ್ಟಾನ್ವಯವುಳ್ಳ ಶಬ್ದವನ್ನು ಪ್ರಯೋಗಿಸಿರುವ ಈ ಕವಿಯು ಆ ಮಾರ್ಗದ್ವಯ ಲಕ್ಷಣವನ್ನು ಅತಿಶಯಧವಳೋಕ್ತಿ ಕ್ರಮದಲ್ಲಿ, ಆ ಕವಿಮಾರ್ಗದಿಂದ ಹುಟ್ಟಿದ ಈ ಗ್ರಂಥದಲ್ಲಿ ಹೇಳುವೆನು ಎಂಬ ನಿಜತತ್ತ್ವಾಂಶವನ್ನು ಇಲ್ಲಿ ಸೂಚಿಸುವನೆಂದು ತಾತ್ಪರ್ಯವನ್ನು ಹೇಳಬಹುದು. ಈ ಗ್ರಂಥಕ್ಕೆ ಮೂಲಗ್ರಂಥವು ಮತ್ತೊಂದಿತ್ತೆಂದು ಸೂಚಿಸುವ ಇದು ಕೂಡ ಶ್ರೀವಿಜಯನ 'ಕವಿಮಾರ್ಗ'ವೆಂಬ ಗ್ರಂಥವನ್ನು ಈ 'ಕವಿರಾಜಮಾರ್ಗ' ಗ್ರಂಥವು ಅನುಸರಿಸಿದೆ ಎಂಬುದನ್ನು ತಿಳಿಸುವುದರ ಮೂಲಕ 'ಕವಿಮಾರ್ಗ'ದ ಅಸ್ತಿತ್ವಕ್ಕೆ ಸಹಕಾರಿಯಾಗುವುದು.

(x) ಒಟ್ಟಿನಲ್ಲಿ, ಈ 'ಕವಿರಾಜಮಾರ್ಗ' ಗ್ರಂಥದಲ್ಲಿ ದೊರೆವ "ಶ್ರೀವಿಶದವರ್ಣೆ" "ಪರಮಶ್ರೀವಿಜಯಕವೀಶ್ವರ", "ಪರಮಾಲಂಕಾರೋಚಿತ" ಎಂಬ ಪದ್ಯಗಳೂ ಅಲ್ಲಲ್ಲಿ ದೊರಕುವ ಪರಮಾಚಾರ್ಯ, ಪರಮಕವೀಶ್ವರ ಮೊದಲಾದ ಪದಗಳೂ ಪರಿಚ್ಛೇದಾಂತ್ಯಗಳ "ಶ್ರೀವಿಜಯಪ್ರಭೂತ" ಎಂಬ ಪದ್ಯಗಳೂ ಗ್ರಂಥೋಪಸಂಹಾರದಲ್ಲಿರುವ "ಅನ್ಯಮಾರ್ಗಲಕ್ಷಣಂ" ಎಂಬ ವಚನವೂ ಕೇಶಿರಾಜನ ಪೂರ್ವಕವಿಸ್ತುತಿರೂಪವಾದ "ಗಜಗನ ಗುಣನಂದಿಯ...." ಎಂಬ ಪದ್ಯವೂ ಆತನೇ ಲಕ್ಷ್ಯದಲ್ಲಿ ಉದಾಹರಿಸಿರುವ "ಬರಿಸಿ ಪ್ರಧಾನರಂ" "ಅರಸುಕುಮಾರನಂ" "ನುಡಿಗೆಲ್ಲಂ ಸಲ್ಲದ" ಈ ಪದ್ಯಗಳೂ "ಶ್ರೀವಿಜಯರ ಕವಿಮಾರ್ಗಂ" ಎಂಬ ದುರ್ಗಸಿಂಹನ ಉಕ್ತಿಯೂ ಶ್ರೀವಿಜಯನು 'ಕವಿಮಾರ್ಗ'ವೆಂಬ ಲಕ್ಷಣ ಗ್ರಂಥವೊಂದನ್ನು ಬರೆದಿರುವನೆಂದು ವ್ಯಕ್ತಪಡಿಸುವುವು. ದೊಡ್ಡಯ್ಯ ಮತ್ತು ಮಂಗರಸರು ಹೇಳುವಂತೆ, ಈ ಶ್ರೀವಿಜಯನೇ 'ಚಂದ್ರಪ್ರಭ ಪುರಾಣ'ವೆಂಬ ಮತ್ತೊಂದು ಕಾವ್ಯವನ್ನು ಬರೆದಿರುವನೆಂದೂ ಈತನು ಜೈನನೆಂದೂ 'ಕವಿರಾಜಮಾರ್ಗ' ಕರ್ತೃವಿಗೆ ಒಂದು ವೇಳೆ ಗುರುವಾಗಿದ್ದರೂ ಇರಬಹುದೆಂದೂ ತಿಳಿದುಬರುವುದು.

ಈ ರೀತಿಯಾಗಿ ಸಂಪಾದಕರು ಶ್ರೀವಿಜಯಕವಿಯ ಅಸ್ತಿತ್ವ ಮತ್ತು 'ಕವಿಮಾರ್ಗ'ದ ಕರ್ತೃತ್ವವನ್ನು ಇತ್ಯರ್ಥಮಾಡಿದ ಬಳಿಕ, 'ಕವಿರಾಜಮಾರ್ಗ'ವನ್ನು ರಚಿಸಿದವನು ಕವೀಶ್ವರನೆಂಬುವನೆಂದು ಹೇಳಲು ಈ ಕೆಳಗೆ ಕಂಡಂತೆ ವಾದಿಸಿರುವರು.[13]

ಕವೀಶ್ವರನ 'ಕವಿರಾಜಮಾರ್ಗ' : (i) ಈ 'ಕವಿರಾಜಮಾರ್ಗ'ದಲ್ಲಿ ಪದ್ಯಗ್ರಂಥಕರ್ತೃಗಳ ಹೆಸರನ್ನು ಹೇಳುವ "ಪರಮ ಶ್ರೀವಿಜಯ ಕವೀಶ್ವರ ಪಂಡಿತ...." ಎಂಬ

ಪದ್ಯದಿಂದ ಕವೀಶ್ವರ ಎಂಬ ಒಬ್ಬ ಕವಿಯು ಇದ್ದನೆಂದು ಗೊತ್ತಾಗುವುದು.

(ii) ಇದೇ ಗ್ರಂಥದ ಎರಡನೆಯ ಪರಿಚ್ಛೇದದ ಕೊನೆಯಲ್ಲಿಯ "ಶ್ರೀವಿಜಯ ಪ್ರಭೂತಮನಿದಂ ತನಗಾಗಿಸಿದೊಂ ಕವೀಶ್ವರಂ" ಎಂಬ ಪದ್ಯಭಾಗದಿಂದ ಕವೀಶ್ವರನೆಂಬುವನು ಶ್ರೀವಿಜಯಕರ್ತೃಕವಾದ ಈ ಗ್ರಂಥವನ್ನು ತನ್ನ ಪ್ರಯೋಜನಕ್ಕಾಗಿ ಉಪಯೋಗಿಸಿಕೊಂಡನು ಎಂಬ ಅರ್ಥವು ತೋರಿಬರುವುದರಿಂದ, ಕವೀಶ್ವರನೆಂಬ ಕವಿಯೊಬ್ಬನು ಶ್ರೀವಿಜಯಕೃತ 'ಕವಿಮಾರ್ಗ'ವನ್ನು, ಅರಸನಾದ ನೃಪತುಂಗನಿಂದ ಪ್ರಯೋಜನ ಪಡೆವುದಕ್ಕಾಗಿ ಉಪಯೋಗಿಸಿಕೊಂಡನೆಂದು ಹೇಳಬಹುದಾದುದಾಗಿ 'ಕವಿರಾಜಮಾರ್ಗ'ವು ಕವೀಶ್ವರಕೃತವೆಂದು ಹೇಳಿದಂತಾಗುವುದು.

(iii) ಈ ಗ್ರಂಥದ 'ಕವಿರಾಜಮಾರ್ಗ' ಎಂಬ ಹೆಸರು ಕೂಡ 'ಕವೀಶ್ವರ ಮಾರ್ಗ' ಎಂಬುದಕ್ಕೆ ಸಂವಾದಿಯಾಗುವುದರಿಂದ, ಈ ಗ್ರಂಥವನ್ನು ಕವೀಶ್ವರನೇ ಬರೆದನೆಂದು ಸೂಚಿತವಾಗುವುದು. 'ಕವಿರಾಜಮಾರ್ಗ' ಶಬ್ದಕ್ಕೆ 'ಕವಿಗಳ ರಾಜಮಾರ್ಗ' ಅಥವಾ 'ಕವಿಶ್ರೇಷ್ಠರ ಮಾರ್ಗ' ಎಂಬ ಎರಡು ಅರ್ಥಗಳೂ ಇರುವುವಾದರೂ, ಕವಿಯು ತನ್ನ ಹೆಸರನ್ನು ಕವಿರಾಜ (ಕವೀಶ್ವರ) ಎಂಬ ಈ ಶಬ್ದದಿಂದ ಸೂಚಿಸಿರುವನೆಂದೇ ಹೇಳಬಹುದು.

(iv) ಮಂಗಳ ಪದ್ಯಗಳ ತರುವಾಯ ನೃಪತುಂಗನ ಸಭಾಸದರನ್ನು ಎರಡು ಪದ್ಯಗಳಿಂದ ವರ್ಣಿಸಿರುವುದೂ ಗ್ರಂಥದ ಉಪಸಂಹಾರಸ್ಥಳಗಳಲ್ಲಿ 'ನೃಪತುಂಗಸಭಾಸದಂ' ಎಂದು ಏಕವಚನದಲ್ಲಿ ನೃಪತುಂಗನ ಸಭಾಸದನೊಬ್ಬನನ್ನು ವರ್ಣಿಸಿರುವುದೂ 'ನೃಪತುಂಗ ಸಭಾಸದರ್' ಎಂಬ ಪದ್ಯದಲ್ಲಿ 'ಉದಾರಕವೀಶ್ವರಂ' ಎಂಬ ಬೇರೆಯ ಪಾಠ ದೊರಕುವುದೂ ಈ ಕವೀಶ್ವರನು ನೃಪತುಂಗ ಸಭಾಸದನೆಂಬುದನ್ನು ಸೂಚಿಸುತ್ತದೆ.

(v) ಈ ಕವಿಯು ಅಲ್ಲಲ್ಲಿ "ನೃಪತುಂಗಮಾರ್ಗ" ಎಂದು ಹೇಳಿರುವಂತೆ "ಪರಮ ಕವೀಶ ಪ್ರಯೋಗಗತಮಾರ್ಗ" (೨–೪೬) ಎಂದೂ ಹೇಳಿರುವುದರಿಂದ ಕವೀಶ್ವರನಾದ ತಾನು ಈ ಕವಿರಾಜಮಾರ್ಗವನ್ನು ಬರೆದವನೆಂಬ ಅಭಿಪ್ರಾಯವನ್ನೇ ಅಲ್ಲಲ್ಲಿ ಸೂಚಿಸಿರುವನೆಂದು ಹೇಳುವುದೂ ಅನುಚಿತವಾಗಲಾರದು.

(vi) ಈ ಗ್ರಂಥದ "ಪರಮ ಶ್ರೀವಿಜಯಕವೀಶ್ವರ...," ಎಂಬ ಪದ್ಯದಲ್ಲಿ ಹೇಳಿರುವ 'ತದಾದ್ಯಕಾವ್ಯಕ್ಕೆಂದುಂ ಲಕ್ಷ್ಯಂ' ಎಂಬ ಭಾಗಕ್ಕೆ ಪ್ರಾಚೀನ ಗ್ರಂಥಕಾರರೆಂದು ಅರ್ಥವಾಗುವ ಕಾರಣ, ಪ್ರಕೃತ ಕವೀಶ್ವರನು ತನ್ನ ಹೆಸರನ್ನೂ ಶ್ರೀವಿಜಯನ ಹೆಸರನ್ನೂ ಈ ಪ್ರಾಚೀನ ಕವಿಗಳಲ್ಲಿ ಸೇರಿಸಿರುವುದು ಅನುಚಿತವಾದುದೆಂದು ಪೂರ್ವಪಕ್ಷಮಾಡಬಹುದು. ಆದರೆ 'ತದಾದ್ಯ' ಶಬ್ದಕ್ಕೆ ಅರ್ಥವನ್ನು ಮಾಡುವಾಗ ಈ ಪದ್ಯದ ಸಂಪೂರ್ಣವಾದ ಅರ್ಥವನ್ನೂ ಪ್ರಕರಣವನ್ನೂ ವಿಚಾರಮಾಡಬೇಕಾಗಿದೆ. ಈ ಪದ್ಯವು ಪದ್ಯಕಾವ್ಯಗಳ ಲಕ್ಷಣವನ್ನೂ ಸಂಸ್ಕೃತ ಪದ್ಯಕಾವ್ಯಕರ್ತೃಗಳ ಹೆಸರುಗಳನ್ನೂ ಕನ್ನಡದ ಚತ್ತಾಣ ಬೆದಂಡೆ ಎಂಬ ಕಾವ್ಯಭೇದಗಳ ಹೆಸರನ್ನೂ ಹೇಳಿದ ಮೇಲೆ

ಬಂದಿದೆ. ಪದ್ಯಲಕ್ಷಣವನ್ನು ಹೇಳುವ "ಪದ್ಯಂ ಪಾರಾಯಣಮಾದ್ಯಂ...." ಎಂಬ ಪದ್ಯದಲ್ಲಿ ಪದ್ಯಶಬ್ದಕ್ಕೆ 'ಆದ್ಯ' ಎಂಬ ವಿಶೇಷಣವು ಇರುವುದು. ಪದ್ಯಕಾವ್ಯಕ್ಕೆ ಲಕ್ಷ್ಯವನ್ನು ಹೇಳುವ ಈ ಪದ್ಯದಲ್ಲಿ ಕೂಡ 'ಆದ್ಯ' ಶಬ್ದಕ್ಕೆ ಹಿಂದಣ ಲಕ್ಷಣ ಪದ್ಯದ 'ಆದ್ಯ' ಶಬ್ದದೊಡನೆ ಹೋಲಿಸಿ ಅರ್ಥಹೇಳುವುದು ಯುಕ್ತವೇ ಹೊರತು ಅದಕ್ಕೆ ವಿರುದ್ಧವಾಗಿ ಅರ್ಥ ಹೇಳುವುದು ಸಮಂಜಸವಲ್ಲ. 'ತದಾದ್ಯ' ಶಬ್ದದಲ್ಲಿರುವ 'ತತ್' ಶಬ್ದಕ್ಕೆ ಪ್ರಸಿದ್ಧಾರ್ಥಕ್ಕಿಂತಲೂ, ಪೂರ್ವಪರಾಮರ್ಶಕಾರ್ಥವನ್ನು ಹೇಳುವುದೇ ಪ್ರಕರಣೋಚಿತವಾದುದು. ಆದುದರಿಂದ 'ತದಾದ್ಯಕಾವ್ಯ' ಶಬ್ದಕ್ಕೆ ಹಿಂದೆ ಹೇಳಿದ ಪದ್ಯಗಳಿಂದ ಕೂಡಿದ ಕಾವ್ಯವೆಂದು ಅರ್ಥಮಾಡಬೇಕಲ್ಲದೆ 'ತದಾದ್ಯ ಕಾವ್ಯಕ್ಕೆ' ಆ ಪ್ರಾಚೀನರ ಕಾವ್ಯಕ್ಕೆ ಎಂದು ಅರ್ಥವನ್ನು ಮಾಡುವುದು ಉಚಿತವಾಗುವುದಿಲ್ಲ. ಪ್ರಕೃತದಲ್ಲಿ ಪ್ರಾಚೀನ, ಅರ್ವಾಚೀನ ಎಂಬ ಪ್ರಸಕ್ತಿಯೇ ಬಂದಿರುವುದಿಲ್ಲ. "ಪರಮ ಶ್ರೀವಿಜಯ....ಲೋಕಪಾಲಾದಿಗಳ ಆ ನಿರತಿಶಯವಸ್ತು ವಿಸ್ತರ ರಚನೆ ತದಾದ್ಯ ಕಾವ್ಯಕ್ಕೆ ಲಕ್ಷ್ಯಂ" ಎಂಬ ಅನ್ವಯದಲ್ಲಿ "ಪರಮ ಶ್ರೀವಿಜಯ ಮೊದಲಾದವರುಗಳ ನಿರತಿಶಯವಾದ ವಸ್ತುವಿಸ್ತರ ರಚನೆಯು ಆ ಪೂರ್ವಿಕರ ಕಾವ್ಯಕ್ಕೆ ಲಕ್ಷ್ಯವಾಗಿರುವುದು" ಎಂದು ಅರ್ಥ ಮಾಡುವುದು ಅಪ್ರಸ್ತುತವೂ ಅನನ್ವಿತವೂ ಆಗುವುದು. ಮೇಲೆ ಹೇಳಿದ ಈ ವಿಚಾರಗಳಿಂದ ಪರಮಶ್ರೀವಿಜಯ ಕವೀಶ್ವರರು ಪದ್ಯಗ್ರಂಥಕರ್ತರೆಂದು ಅರ್ಥಮಾಡಬೇಕಲ್ಲದೆ, ಪ್ರಾಚೀನ ಗ್ರಂಥಕರ್ತರೆಂದು ಅರ್ಥಮಾಡಕೂಡದು. ಕವೀಶ್ವರನೆಂಬ ಕವಿಯು ತನ್ನ ಗುರುವಾದ ಶ್ರೀವಿಜಯನನ್ನೂ ತನ್ನನ್ನೂ ಇತರ ಪದ್ಯಗ್ರಂಥ ಕರ್ತೃಗಳ ಗೋಷ್ಠಿಯಲ್ಲಿ ಸೇರಿಸಿ ಪ್ರಕೃತ ಗ್ರಂಥದಲ್ಲಿ ಹೇಳಿಕೊಂಡಿರುವನೆಂದು ಹೇಳುವುದರಲ್ಲಿ ಯಾವ ಅನುಪಪತ್ತಿಯೂ ಇರಲಾರದು.

(vii) 'ಕಾವ್ಯಾವಲೋಕನ'ದಲ್ಲಿಯೂ 'ಶಬ್ದಮಣಿದರ್ಪಣ'ದಲ್ಲಿಯೂ ನೃಪತುಂಗನ ಶೌರ್ಯೌದಾರ್ಯಾದಿ ಗುಣಗಳನ್ನು ವರ್ಣಿಸಿರುವ ಕೆಲವು ಪದ್ಯಗಳು ದೊರಕುವುವು. ಪ್ರಾಯಃ ಈ ಕವಿಯೇ ತನ್ನ ಆಶ್ರಯದಾತನಾದ ನೃಪತುಂಗನ ಹೆಸರಿನಲ್ಲಿ ಈ 'ಕವಿರಾಜಮಾರ್ಗ'ವನ್ನು ಬರೆದುದೂ ಅಲ್ಲದೆ, ಅವನನ್ನೇ ಉದ್ದೇಶಿಸಿ ಬರೆದಿದ್ದ ಮತ್ತೊಂದು ಪದ್ಯಗ್ರಂಥದಿಂದಲೇ ಆ ಪದ್ಯಗಳು ಉದ್ಧೃತವಾಗಿದ್ದರೂ ಇರಬಹುದೆಂದು ನಾವು ಊಹಿಸಬಹುದು. ಈ ಕಾರಣದಿಂದಲೇ ಕವೀಶ್ವರನು ತನ್ನನ್ನು ಪದ್ಯಗ್ರಂಥಕರ್ತೃಗಳ ಗುಂಪಿನಲ್ಲಿ ಸೇರಿಸಿ ಹೇಳಿಕೊಂಡಿರುವನೆಂದು ಊಹಿಸಲೂ ಹೆಚ್ಚಿನ ಅವಕಾಶವುಂಟು.

(viii) ಜೈನಮತದವನಾದ ಈ ಕವಿಯು ಪಂಪ ರನ್ನರಂತೆ ಮಂಗಳಪದ್ಯದಲ್ಲಿ ತನ್ನ ಆಶ್ರಯದಾತನನ್ನು ವಿಷ್ಣುವಿಗೆ ಹೋಲಿಸಿ ವರ್ಣಿಸಿರುವನೆಂದು ಹೇಳುವುದೂ ಅಸಮಂಜಸವಾಗಲಾರದು.

(ix) ನಾವು ಹಿಂದೆ ಹೇಳಿದಂತೆ ಮೊದಲು ದಂಡಿಯ 'ಕಾವ್ಯಾದರ್ಶ'ವನ್ನು ಸಂಪೂರ್ಣವಾಗಿ ಅನುಸರಿಸಿ ಬರೆದಿದ್ದ 'ಕವಿಮಾರ್ಗ'ದ ಸಂಸ್ಕೃತಾನುಗುಣವಾಗಿದ್ದ ದಕ್ಷಿಣೋತ್ತರ ಮಾರ್ಗಲಕ್ಷಣಗಳ ಜತೆಗೆ ಕವೀಶ್ವರನು ಕನ್ನಡಭಾಷೆಗೆ ಸಂಬಂಧಪಟ್ಟ

ಕೆಲವು ಭಾಗಗಳನ್ನು ಸೇರಿಸಿಯೂ ದೋಷಪ್ರಕರಣದಲ್ಲಿ ಭಾಮಹನ ಅಲಂಕಾರ ಗ್ರಂಥದಿಂದ ಕೆಲವು ಭಾಗಗಳನ್ನು ತೆಗೆದು ಸೇರಿಸಿಯೂ ಪ್ರಾಸಾದಿಗಳ ವಿಷಯದಲ್ಲಿ ಕೆಲವನ್ನು ಬಿಟ್ಟು, ಕೆಲವನ್ನು 'ಅನ್ಯಮಾರ್ಗಲಕ್ಷಣಂ' ಎಂದು ಹೇಳಿಯೂ ಅಲಂಕಾರ ಪ್ರಕರಣದಲ್ಲಿ ಅಲಂಕಾರಗಳ ಆಂತರಾಳಿಕ ಭೇದಗಳಲ್ಲಿ ಕೆಲವನ್ನು ಬಿಟ್ಟು, ಒಂದೆರಡನ್ನು ಹೆಚ್ಚಾಗಿ ಸೇರಿಸಿಯೂ ಈ 'ಕವಿರಾಜಮಾರ್ಗ'ವನ್ನು ಬರೆದಿರುವನೆಂದು ಹೇಳಬಹುದು.

(x) ಈ ಗ್ರಂಥದ ಕೆಲವು ಲಕ್ಷ್ಯಪದ್ಯಗಳಲ್ಲಿ ಒಬ್ಬ ರಾಜನನ್ನು ಕುರಿತು 'ನೀನ್' 'ನಿನ್ನ' ಎಂದು ಮೊದಲಾಗಿ ಸಂಬೋಧಿಸಿ, ಆತನ ಶೌರ್ಯೌದಾರ್ಯಾದಿ ಗುಣಗಳ ವರ್ಣನೆಯೂ ಮತ್ತೆ ಕೆಲವು ಪದ್ಯಗಳಲ್ಲಿ ನೃಪತುಂಗ, ಅತಿಶಯಧವಳ, ವೀರನಾರಾಯಣ ಎಂಬ ಬಿರುದುಳ್ಳ ಅಮೋಘವರ್ಷನ ಸ್ತುತಿಯೂ ಇರುವುದರಿಂದ, ಆಸ್ಥಾನ ಕವಿಯಾದ ಈ ಕವೀಶ್ವರನು ತನ್ನ ಆಶ್ರಯದಾತನಾದ, ನೃಪತುಂಗನ ಸ್ತುತಿಪದ್ಯಗಳನ್ನೂ ತಾನು ಬರೆದ ಅಲಂಕಾರ ಗ್ರಂಥದೊಳಗೆ ಅಲ್ಲಲ್ಲಿ ಲಕ್ಷ್ಯವಾಗಿ ಉದಾಹರಿಸಿರುವನೆಂದು ಹೇಳುವುದೂ ಸಮಂಜಸವಾಗುವುದು.

### ಬಿ. ಎಂ. ಶ್ರೀಕಂಠಯ್ಯನವರು : ನೃಪತುಂಗ ಕರ್ತೃತ್ವದ ಪಕ್ಷಪಾತ

ಮದರಾಸು ವಿಶ್ವವಿದ್ಯಾನಿಲಯದವರು ಪ್ರಕಟಿಸಿದ 'ಕವಿರಾಜಮಾರ್ಗ'ದ ಸಂಪಾದಕರು ಜೆ. ಎಫ್. ಫ್ಲೀಟರ ವಾದವನ್ನು ಮುಂದುವರಿಸಿ, 'ಕವಿರಾಜಮಾರ್ಗ'ದ ಕರ್ತೃ ಕವೀಶ್ವರನೆಂದು ಸಾಧಿಸಲು ಎಷ್ಟು ಪ್ರಯತ್ನಪಟ್ಟಿರುವರೆಂಬುದನ್ನು ಈ ಮೇಲೆ ವಿವರಿಸಿದೆಯಷ್ಟೆ. ಪ್ರಕೃತ ಗ್ರಂಥವನ್ನು ವಿಮರ್ಶಿಸುವಲ್ಲಿ ಬಿ. ಎಂ. ಶ್ರೀಕಂಠಯ್ಯನವರು ಕವೀಶ್ವರಪಕ್ಷವನ್ನು ನಿರಾಕರಿಸಿ ಶ್ರೀವಿಜಯನ ಪಕ್ಷವನ್ನು ಪುರಸ್ಕರಿಸಿದರೂ, ಕನ್ನಡ ಸಾಹಿತ್ಯ ಚರಿತ್ರೆಯನ್ನು ಬರೆಯುವಲ್ಲಿ ನೃಪತುಂಗನ ಪಕ್ಷವನ್ನೇ ಹೀಗೆ ಎತ್ತಿ ಹಿಡಿದಿರುವುದು ಕಂಡುಬರುತ್ತದೆ.[14]

ಪರಿಚ್ಛೇದಗಳ ಕೊನೆಯಲ್ಲಿ "ನೃಪತುಂಗದೇವಾನುಮತಮಪ್ಪ ಕವಿರಾಜಮಾರ್ಗದೊಳ್" ಎಂದಿದೆ. ಇಲ್ಲಿ 'ಕೃತಂ' ಎಂದು ಹೇಳದೆ 'ಅನುಮತಂ' ಎಂದು ಹೇಳುವುದರಿಂದಲೂ ಪರಿಚ್ಛೇದಗಳ ಕಡೆಯ ಪದ್ಯಗಳಲ್ಲಿ 'ಶ್ರೀವಿಜಯ ಪ್ರಭೂತಂ' ಎಂಬ ಶಬ್ದವೋ ಅರ್ಥವೋ ಬರುವಂತೆ ಇರುವುದರಿಂದಲೂ "ನೃಪತುಂಗ ಸಭಾಸದಂ.... ಪೇಟ್ದಿನುತ ಕಾವ್ಯಂ" ಎಂದು ಗ್ರಂಥದ ಕಡೆಯಲ್ಲಿ ಇರುವುದರಿಂದಲೂ ದುರ್ಗಸಿಂಹನ "ಶ್ರೀವಿಜಯರ ಕವಿಮಾರ್ಗಂ" ಎಂಬ ವಾಕ್ಯಭಾಗದಿಂದಲೂ ಶ್ರೀ ವಿಜಯನೇ ನೃಪತುಂಗನ ಸಭಾಸದನಾಗಿದ್ದು ಆತನ ಅಂಕಿತದಿಂದ ಗ್ರಂಥವನ್ನು ಬರೆದಿರಬೇಕು ಎಂದು ಊಹಿಸಿರುತ್ತಾರೆ. ಕೆಲವರು ಕವಿ ಶ್ರೀವಿಜಯನಲ್ಲ, ಕವೀಶ್ವರ ಎಂದು ಅಭಿಪ್ರಾಯಪಡುತ್ತಾರೆ. ಆದರೆ ನಾಗವರ್ಮ ಭಟ್ಟಾಕಳಂಕರು ನೃಪತುಂಗನೇ ಗ್ರಂಥಕರ್ತೃವೆಂದು ತಿಳಿದಿದ್ದ ಹಾಗೆ ಕಾಣುತ್ತದೆ. ಶ್ರೀವಿಜಯನಾಗಲಿ ಕವೀಶ್ವರನಾಗಲಿ ಬರೆದಿದ್ದರೆ ತಮ್ಮ ಹೆಸರನ್ನೇ ಪ್ರಧಾನಮಾಡಿ 'ಪರಮಶ್ರೀವಿಜಯಕವೀಶ್ವರ' ಎಂದು ಪೂರ್ವಕವಿ

ಗಳ ಪಂಕ್ತಿಯಲ್ಲಿ ಹೇಳಲಾರರಾದ್ದರಿಂದಲೂ ನೃಪತುಂಗನು ಸಂಸ್ಕೃತದಲ್ಲಿ ಒಂದು ಗ್ರಂಥವನ್ನು ಬರೆದಿರುವುದರಿಂದಲೂ ಸ್ವತಂತ್ರಗ್ರಂಥವಲ್ಲದೆ ದಂಡಿಯ ಗ್ರಂಥದ ಪರಿವರ್ತನೆಯಾದದ್ದರಿಂದ ತಾನೂ ಆತನ ಶಾಸ್ತ್ರವನ್ನು ಒಪ್ಪಿರುವುದಾಗಿ 'ಅನುಮತಂ' ಎಂದು ಹೇಳಿರುವನೆಂದು ಸಮಾಧಾನ ಹೇಳಬಹುದು."

ಬಿ. ಎಂ. ಶ್ರೀಕಂಠಯ್ಯನವರ ಈ ಸಮಾಧಾನೋಕ್ತಿ ಕೇವಲ ಔಪಚಾರಿಕವಾದುದು ಎನ್ನದೆ ವಿಧಿಯಿಲ್ಲ.

## ಮುಳಿಯ ತಿಮ್ಮಪ್ಪಯ್ಯನವರು : ಶ್ರೀವಿಜಯಕರ್ತೃತ್ವದ ಸಮರ್ಥನೆ

ವೆಂಕಣ್ಣಯ್ಯನವರ ಸುದೀರ್ಘ ಲೇಖನದ ತರುವಾಯ, ೧೯೪೪ರಲ್ಲಿ ಪ್ರಕಟವಾದ ಮುಳಿಯ ತಿಮ್ಮಪ್ಪಯ್ಯನವರ 'ಕವಿರಾಜಮಾರ್ಗ ವಿವೇಕ'–ಭಾಗ ೧"ದಲ್ಲಿ ಶ್ರೀವಿಜಯರ ಪಕ್ಷಕ್ಕೇ ಬೆಂಬಲ ದೊರೆತಿರುವುದನ್ನು ಕಾಣುತ್ತೇವೆ.[15] ಮೊದಲನೆಯ ಭಾಗದಲ್ಲಿ ನೃಪತುಂಗ ಮತ್ತು ಶ್ರೀವಿಜಯರಿಗೆ ಸಂಬಂಧಿಸಿದಂತೆ ಎಲ್ಲ ವಿವರಗಳನ್ನೂ ಇವರು ಸಂಗ್ರಹಿಸಿರುವರು. ಎರಡನೆಯ ಭಾಗದಲ್ಲಿ ಗ್ರಂಥದ ಸಮಗ್ರ ವಿಮರ್ಶೆಯಿದೆ. 'ಕವಿರಾಜಮಾರ್ಗಕಾರನಾರು ?' ಎಂಬ ವಿಭಾಗದಲ್ಲಿ ಕಂಡುಬರುವ ಅವರ ವಾದಸರಣಿಯ ಮುಖ್ಯಾಂಶಗಳನ್ನು ಮಾತ್ರ ಇಲ್ಲಿ ಸಂಗ್ರಹಿಸಿಕೊಡಲಾಗಿದೆ.[16]

(i) 'ನರಲೋಕಚಂದ್ರ' 'ಅತಿಶಯಧವಳ' ಮುಂತಾದವು ನೃಪತುಂಗನ ಬಿರುದುಗಳು. ಅವನ ಹುಟ್ಟು ಹೆಸರು 'ಶರ್ವ' ಅನಂತರ ಕವಿರಾಜಮಾರ್ಗವನ್ನೇ ಅವಲಂಬಿಸಿ 'ನೃಪತುಂಗನ ಆಸ್ಥಾನವನ್ನೊಂದಿ ಒಂದು ಮಹಾವಿದ್ವಾಂಸರ ಸಭೆ ಇತ್ತು. ಅದಕ್ಕೆ ಬಹುಶಃ 'ನೃಪತುಂಗಸಭೆ' ಎಂದು ಹೆಸರಾಗಿತ್ತು. 'ಆಶ್ರಿತ ಮಹಾನೃಪತುಂಗ ಸಭಾಸದಂ (೩–೨೧೯) ಎಂಬ 'ಕವಿರಾಜಮಾರ್ಗ'ದ ಪದ್ಯದಿಂದ ಈ ಸಂಗತಿ ತಿಳಿದು ಬರುತ್ತಿದೆ. ಮಾತ್ರವಲ್ಲ ಕನ್ನಡ ಸಾಹಿತ್ಯಕ್ಕೆ ಅವರೆಗೆ ಈ ಬಗೆಯ ಲಕ್ಷಣ ಗ್ರಂಥವು ಅಪೂರ್ವವಾಗಿದ್ದುದರಿಂದ, ಮುಂದಿನ ಸಾಹಿತ್ಯಕ್ಕಿದು ಆದರ್ಶವಾಗಿರಬೇಕು ಎಂಬ ಉದ್ದೇಶದಿಂದ, ಸ್ವತಃ ಸುಸಂಸ್ಕೃತನಾದ ನೃಪತುಂಗನ ನಾಯಕತ್ವದಲ್ಲಿ ಸಭಾಸದರಾದ ವಿದ್ವಾಂಸರೆಲ್ಲರೂ ಈ ಗ್ರಂಥ ರಚನೆಯಲ್ಲಿ ನೆರವಾಗಿದ್ದರೆಂಬುದೂ 'ಕವಿರಾಜಮಾರ್ಗ'ದ ಆದ್ಯಂತ ಪದ್ಯಗಳಲ್ಲಿ ಹೊಳೆಯುತ್ತದೆ. ಪರಿಚ್ಛೇದಾಂತ ಗದ್ಯದಲ್ಲಿರುವ 'ಅನುಮತ' ಎಂಬ ಶಬ್ದವು 'ವಿರಚಿತ' ಎಂಬ ಅರ್ಥವನ್ನು ಒಳಗೊಂಡಿಲ್ಲ. ಅನೇಕ ಪದ್ಯಭಾಗಗಳಲ್ಲಿ ತೋರುವ ಪ್ರಥಮ ಪುರುಷ ಕ್ರಿಯಾಪದ ನಾಮಪದಗಳಿಂದ ವಿದಿತವಾಗುವ ನೃಪತುಂಗನು ಗ್ರಂಥಕಾರನಲ್ಲವೆಂಬುದಕ್ಕೆ ಪೋಷಕವಾಗುವಂತಿವೆ.

(ii) ನೃಪತುಂಗವಾದಿಗಳು ಪ್ರಮಾಣವೆಂದು ಭಾವಿಸಿರುವ ಭಟ್ಟಾಕಳಂಕನ 'ನೃಪತುಂಗ ಗ್ರಂಥ' ಎಂಬ ಹೇಳಿಕೆ, ಆತನು ಅರ್ವಾಚೀನನಾಗುವುದರಿಂದ ಅಷ್ಟು ವಿಶ್ವಸನೀಯವಲ್ಲ. ಅಲ್ಲದೆ 'ನೃಪತುಂಗ ಗ್ರಂಥ' ಎಂದು 'ನೃಪತುಂಗದೇವಾನುಮತ ಗ್ರಂಥ'ವನ್ನು ಕರೆದಲ್ಲಿ ದೋಷವೇನೂ ಭಾವನಾದೃಷ್ಟಿಗೆ ತೋರಲಾರದು. ಚಿಕ್ಕದೇವರಾಯ, ಮುಮ್ಮಡಿ

ಕೃಷ್ಣರಾಜರ ಆಶ್ರಯದಲ್ಲಿಯೂ ಆಯಾ ರಾಜಕರ್ತೃಕಗಳೆಂದು ತೋರುವ ಹಲವು ಗ್ರಂಥಗಳನ್ನು ಆಯಾ ಆಸ್ಥಾನದ ವಿದ್ವಾಂಸರು ಬರೆದುದೆಂದು ನಿರ್ಧಾರವಾಗಿದೆ. ಆದರಿಂದ ಇಲ್ಲಿ 'ನೃಪತುಂಗದೇವಾನುಮತ' ಗ್ರಂಥವನ್ನೇ ಈ ವ್ಯಾಖ್ಯಾನುಕಾರನು 'ನೃಪತುಂಗ ಗ್ರಂಥ' ಎಂದುದರಲ್ಲಿ ಆಶ್ಚರ್ಯವೇನೂ ಇಲ್ಲ.

(iii) "ಅತಿಶಯಧವಳೋಕ್ತಿ ಕ್ರಮದಿಂ ತದ್ಭವದೊಳ್ ಅಱಿಪುವೆಂ" (೩–೫೩) ಎಂಬ ವಾಕ್ಯವನ್ನು ಉಲ್ಲೇಖಿಸಿ, ಇಲ್ಲಿ ತೋರುವ 'ತದ್ಭವದೊಳ್' ಎಂಬ ಪದಕ್ಕೆ ಅವನ ಆಶ್ರಯದಿಂದ ಸಂಭವಿಸಿದ ಗ್ರಂಥವೆಂದೇ ಅರ್ಥ. ಹಾಗಲ್ಲದೆ "ಅವನಿಂದ ರಚಿತವಾದ ಗ್ರಂಥದಲ್ಲಿ" ಎಂದು ಅರ್ಥವಾಗುತ್ತಿದ್ದರೆ, ಮುಂದೆಯೇ 'ಅಱಿಪುವೆಂ' ಎಂದು ಗ್ರಂಥಕಾರನು ತನ್ನನ್ನೇ ಸೂಚಿಸುವುದು ಹೇಗೆ? ಗ್ರಂಥಕ್ಕಾಶ್ರಯವಿತ್ತುದಲ್ಲದೆ ಅಲ್ಲಲ್ಲಿ ತನ್ನ ಸುಸಂಸ್ಕೃತ ಸಾಹಿತ್ಯವಿಚಾರಗಳನ್ನು ಸೂಚಿಸಿದ ನೃಪತುಂಗನನ್ನು ಪ್ರಥಮ ಪುರುಷನಾಮಪದದಿಂದಲೂ ತನ್ನನ್ನು ಉತ್ತಮಪುರುಷ ಕ್ರಿಯಾಪದದಿಂದಲೂ ಕವಿ ಈ ಒಂದೇ ಪದ್ಯದಲ್ಲಿ ಕಾಣಿಸಿದುದರಿಂದ, ನೃಪತುಂಗನು ಗ್ರಂಥಕಾರನಲ್ಲ ಎಂಬಲ್ಲಿ ಸಂದೇಹವೇ ಇಲ್ಲವಾಗುತ್ತಿದೆ.

(iv) ಮೂರು ಪರಿಚ್ಛೇದಗಳಲ್ಲಿಯೂ ಉಕ್ತವಾಗಿರುವ ಉತ್ತಮಪುರುಷ ಸರ್ವನಾಮ ಕ್ರಿಯಾಪದಗಳುಳ್ಳ ಕೆಲವು ವಾಕ್ಯಗಳನ್ನು ನೋಡಿದರೂ ಪ್ರಕೃತ ಗ್ರಂಥದ ಕರ್ತೃ ನೃಪತುಂಗಸಭಾಸದನೊಬ್ಬನಿರಬೇಕೆಂದು ತಿಳಿಯಬಹುದು. 'ನೀತಿನಿರಂತರ' ಎಂಬ ಬಿರುದು (೧–೧೪೭) ಗ್ರಂಥಕರ್ತೃವಿಗೆ ಅನ್ವಯಿಸತಕ್ಕದ್ದು.

(v) ಪರಿಚ್ಛೇದಾಂತ ಪದ್ಯಗಳಲ್ಲಿ ಗ್ರಂಥಕಾರ ಶ್ರೀವಿಜಯನೆಂದು ಉಕ್ತವಾಗಿದ್ದರೂ 'ಕವಿರಾಜಮಾರ್ಗ'ದ ದ್ವಿತೀಯ ಪರಿಚ್ಛೇದದೊಳಗೆ ಸೂಚಿತವಾಗಿರುವ ಚಕ್ರಬಂಧ ಶ್ಲೋಕಾನುಸಾರ ಜಯಾಬ್ಧಿ ಅಥವಾ ಜಯ ಎಂಬುದು ಗ್ರಂಥಕಾರನ ಮೂಲನಾಮವೆಂಬುದನ್ನು ತೋರಿಸುತ್ತದೆ. ಈತನು ರಾಜಾನುಗ್ರಹಕ್ಕೆ ಪಾತ್ರನಾಗಿ 'ಶ್ರೀವಿಜಯ' ಎಂಬ ಹೆಸರಿನಿಂದ ಪ್ರಸಿದ್ಧನಾಗಿರಬಹುದು.

(vi) ತೃತೀಯ ಪರಿಚ್ಛೇದಾಂತ್ಯದ ಸ್ತುತಿಪದ್ಯಗಳನ್ನು ನೋಡಿದರೆ, ಗ್ರಂಥಕಾರನೆಂದರೆ ಬರಿಯ ವಿದ್ವತ್ಕವಿಮಾತ್ರವಲ್ಲ, ರಾಜಕಾರ್ಯಧುರಂಧರರೊಳಗೆ ಗಣನೀಯನಾಗಿ ನೃಪತುಂಗನ ಮಂತ್ರಿಗಳೊಳಗೆ ಒಬ್ಬನಾಗಿದ್ದವನೆಂದೂ ಬಲುವಟ್ಟಿಗೆ ವಿದಿತವಾಗುತ್ತದೆ.

(vii) ನೃಪತುಂಗನಿಗೂ ಗ್ರಂಥಕರ್ತೃವಿಗೂ ಇದ್ದ ಸಂಬಂಧವನ್ನು ವಿವರಿಸಿ ಹೇಳುವಲ್ಲಿ ಗ್ರಂಥಕರ್ತೃವಿನ ಆಗಮನದಿಂದ ಕೃತಾರ್ಥನಾದ ರಾಜನು ತನ್ನ ಕೃತಜ್ಞತೆಯನ್ನು ಕವಿಗೆ ಸಮರ್ಪಿಸಲು, ಆತನು ಅದಕ್ಕೆ ಪ್ರತಿಯಾಗಿ ಆಶ್ರಯದಾತನನ್ನು ಮುಕ್ತಕಂಠದಿಂದ ಹೇಗೆ ಮನ್ನಿಸಿದನೆಂಬುದನ್ನು "ಗುರುಜನದ ಪರಕೆಯುಂ...." (೩–೨೦೪) "ಆಯುಂ ಶ್ರೀಯುಂ...."(೩–೨೦೭) ಎಂಬ ಎರಡು ಪದ್ಯಗಳು ಮನವರಿಕೆಮಾಡಿಕೊಡುತ್ತವೆ.

ಮೊದಲನೆಯ ಪದ್ಯದಲ್ಲಿ ರಾಜನು 'ಆ ವಿದ್ವತ್ಕವೀಶ್ವರನು ರಾಜಧಾನಿಗೆ ದಯಮಾಡಿಸಿ, ತನ್ನ ರಾಜಧಾನಿಗೆ ಒದಗಿಸಿದ ಅಗಣಿತ ಪ್ರಿಯಕಾರ್ಯಗಳನ್ನು ಮಾತ್ರವಲ್ಲ, ಅವುಗಳಿಗಿಂತಲೂ ಪ್ರಿಯತರವಾದ ಈ ಗ್ರಂಥರಚನೆಯನ್ನು ಎಸಗಿದುದಕ್ಕಾಗಿ ನೃಪತುಂಗನು ಆ ಗುರು ಸನ್ನಿಧನಿಗೆಸಗಿದ ವಂದನೆ ಹೊಳೆಯುತ್ತದೆ. ಮತ್ತಿನದರಲ್ಲಿ ಆ 'ವಾಗಧಿಪ'ನು ಅರಸನನ್ನು ಆಶೀರ್ವದಿಸಿದುದು ವ್ಯಕ್ತವಾಗುತ್ತಿದೆ. ಇಲ್ಲಿ ತೋರುವ 'ಶ್ರೀಯುಂ ವಿಜಯಮುಂ' ಅಂದಿನಿಂದ ನಿರ್ಬಾಧಿತವಾಗಿ ನೃಪತುಂಗನಲ್ಲಿ ನೆಲಸಿದಂತೆ ಭಾವಿಸಬೇಕು. ಮಾತ್ರವಲ್ಲ, ಆ ಪದಗಳಲ್ಲಿ ಅಡಕವಾಗಿ ಹೊಳೆಯುವ "ಶ್ರೀವಿಜಯ ನಾಮಕನಾದ ಈ ಕವಿವ್ಯಕ್ತಿಯೂ ನಿನಗೇ ಸಂಬಂಧಿಸಿದುದು" ಎಂಬುದೂ ಪದಶಕ್ತಿಯಿಂದ ಧ್ವನಿತವಾಗುತ್ತಿದೆಯಲ್ಲವೆ?

(viii) ಈತನ ಮತವಿಚಾರವಾಗಿ ಪ್ರಕೃತ ಯಾವ ಸಿದ್ಧಾಂತವನ್ನೂ ಸೂಚಿಸುವಂತಿಲ್ಲ. ಆದ್ಯಂತ ಭಾಗಗಳ ಮಂಗಲಾದಿ ಪದ್ಯಗಳಿಂದ ಇವನು ಜೈನನಾಗಿರಬಹುದೇ ಎಂದು ಭಾವಿಸಲಿಕ್ಕೆ ಸ್ವಲ್ಪವಾದರೂ ಆಸ್ಪದವಿಲ್ಲ. ಆದರೆ, ಕೆಲವು ದೃಷ್ಟಾಂತ ಪದ್ಯಗಳಲ್ಲಿ ಜೈನ ಗುರುಗಳ ವರ್ಣನೆಯೂ ಯಾವುದೋ ಒಂದು ರಾಮಾಯಣದಿಂದ ಎತ್ತಿಕೊಂಡ ಹಲವು ದೃಷ್ಟಾಂತಗಳಲ್ಲಿ ಜೈನ ರಾಮಾಯಣದ ಕಥಾಪದ್ಧತಿಯೂ ಹೊಳೆಯುತ್ತಿವೆ. ಅವು ಇತರ ಗ್ರಂಥಗಳಿಂದ ಎತ್ತಿಕೊಂಡವುಗಳಿರಲಿಕ್ಕಿಲ್ಲವೇ? ಎನ್ನಬಹುದು. ಆದರೆ, ಹಿಂದೆ ತನ್ನ ಸ್ವಭಾವವನ್ನು ಸೂಚಿಸುವ "ಮದ ಮಾನ ಮಾಯ...." ಎಂಬ ಪದ್ಯದಲ್ಲಿ (೩–೨೨೭) ಉಕ್ತವಾದ 'ಅಂತರಂಗ ರಿಪುವರ್ಗ'ದ ನಾಮಗಳು ಜೈನಾತ್ಮಕವೆಂಬಲ್ಲಿ ಸಂಶಯವಿಲ್ಲ. ಅದು ಹೇಗೂ ಇರಲಿ. ನೃಪತುಂಗ ಸಭೆಯ 'ವಾಗಧಿಪ'ನಾಗಿದ್ದ ಈ ಶ್ರೀವಿಜಯನು ಮತದಲ್ಲಿ ಜೈನನಾಗಿದ್ದರೂ, ಸಾಮಾನ್ಯವಾಗಿ ನೃಪತುಂಗನಂತೆ 'ಉದಾರಮತ'ನೇ ಆಗಿದ್ದನೆಂದು ಭಾವಿಸಿದಲ್ಲಿ ತಪ್ಪಾಗದು.[17]

## ಇತರರ ನಿಲವು

ದ.ರಾ. ಬೇಂದ್ರೆಯವರ ಸಲಹೆ : 'ಕವಿರಾಜಮಾರ್ಗ'ದ ಕರ್ತೃತ್ವವು ಈ ನೃಪತುಂಗನ ಕಡೆಯಿಂದ ಶ್ರೀವಿಜಯನತ್ತ ಹೊರಳುತ್ತಿರುವ ಈ ಅವಧಿಯಲ್ಲಿ,ಬೇಂದ್ರೆಯವರು "ಸಮಂತಭದ್ರನೇ ಶ್ರೀವಿಜಯನಿರಬಹುದೆ?" ಎಂದು ಒಂದು ಪ್ರಶ್ನೆಯನ್ನು ಎತ್ತಿ, ಕೆಲವು ಅಭಿಪ್ರಾಯಗಳನ್ನು ಮಂಡಿಸಿದ್ದುಂಟು. ಕನ್ನಡ ಜೈನಕವಿಗಳು ಸಮಂತಭದ್ರ, ಕವಿಪರಮೇಷ್ಠಿ ಮತ್ತು ಪೂಜ್ಯಪಾದರನ್ನು ತಮ್ಮ ಪೂರ್ವಕವಿ ಸ್ತುತಿಯಲ್ಲಿ ಹೇಳಿರುವರಷ್ಟೆ. ಈ ಮೂವರು ರಚಿಸಿರುವ ಕನ್ನಡ ಕೃತಿಗಳಾವುವೂ ದೊರೆಯದಿದ್ದರೂ, ಸಂಸ್ಕೃತ ಪ್ರಾಕೃತ ಗ್ರಂಥಗಳನ್ನು ರಚಿಸಿರುವುದಾಗಿ ತಿಳಿದುಬರುತ್ತದೆ. 'ಕವಿರಾಜಮಾರ್ಗ'ದಲ್ಲಿ "ಪರಮಶ್ರೀವಿಜಯ, ಕವೀಶ್ವರ, ಪಂಡಿತ...." ಎಂದು ಹೇಳಿರುವ ಕ್ರಮವನ್ನು ಮನಗಂಡು ಕವಿಚರಿತೆಕಾರರು 'ಕವಿರಾಜಮಾರ್ಗ'ದಲ್ಲಿ ಉಕ್ತವಾಗಿರುವ ಕವೀಶ್ವರನೂ ಕವಿಪರಮೇಷ್ಠಿಯೂ ಒಬ್ಬರೇ ಇರಬಹುದೇ ಎಂದು ಸಂದೇಹವನ್ನು ವ್ಯಕ್ತಪಡಿಸುವುದನ್ನೇ

ಅವಲಂಬಿಸಿ ಹೀಗೆ ತರ್ಕಿಸಿದೆ. ಸಮಂತಭದ್ರನಂತೆಯೇ ಶ್ರೀವಿಜಯನ ಸ್ಥಾನಮಾನಗಳೂ ಹಿರಿದಾಗಿ ತೋರಿಬಂದುದರಿಂದ ಈ ಇಬ್ಬರಲ್ಲಿಯೂ ಅಭೇದವನ್ನು ಕಲ್ಪಿಸಲು ಈ ಕೆಳಗೆ ಕಂಡಂತೆ ಕೆಲವು ಕಾರಣಗಳನ್ನು ಅವರು ಕೊಟ್ಟಿರುವರು.[18]

(i) ಇಬ್ಬರೂ ಚಂದ್ರಗುಪ್ತ (ಚಂದ್ರಪ್ರಭ?)ನ ಬಗ್ಗೆಯೇ ಬರೆದಿದ್ದಾರೆ; (ii) ಇಬ್ಬರೂ ಬಹುವಚನದಿಂದಲೂ ಮೊದಲ ಮನ್ನಣೆ ಹೊಂದಿಯೂ 'ದೇವರ್' ಎಂದು ಗೌರವದಿಂದ ಉಲ್ಲೇಖಿಸಲ್ಪಟ್ಟಿದ್ದಾರೆ; (iii) ಕಾವ್ಯ, ವ್ಯಾಕರಣ, ಅಲಂಕಾರ ಗ್ರಂಥಗಳಿಗೆ ಇಬ್ಬರ ಸಂಬಂಧವೂ ಇದೆ; (iv) ಸಮಂತಭದ್ರನು ಕವಿಪರಮೇಷ್ಠಿಗೆ ಹಿರಿಯನು, ಶ್ರೀವಿಜಯನು ಕವೀಶ್ವರನಿಗೆ ಗುರುವು; (v) ಶ್ರೀವಿಜಯನ ಉಲ್ಲೇಖವು ಕವೀಶ್ವರ ಪಂಡಿತನೊಡನಿದೆ; ಸಮಂತಭದ್ರನ ಉಲ್ಲೇಖವು ಕವಿಪರಮೇಷ್ಠಿ, ಪೂಜ್ಯಪಾದರೊಡನಿದೆ; (vi) ಸಮಂತಭದ್ರನು ತನ್ನ ನಾಡಿನಲ್ಲಿ ಹುಟ್ಟಿ ಬೆಳೆದು ಕನ್ನಡ ಕವಿಗಳಿಗೆ ಕಾವ್ಯದಾದಿಯಲ್ಲಿ ವಂದನೀಯನಾದನು; ಶ್ರೀವಿಜಯನ 'ಕವಿಮಾರ್ಗ' ಕವಿಜನಮನದ ಕನ್ನಡಿ. ಶ್ರೀವಿಜಯನು ದೇವರು, ಅವನ 'ಸುಮಾರ್ಗ'ವು ವೈಯಾಕರಣರಿಗೆ ಲಕ್ಷ್ಯ. ಅವನು ಕನ್ನಡದಲ್ಲಿ ಕವನ ಮಾಡಿದ್ದಾನೆ.

ಇದರಿಂದ ದ. ರಾ. ಬೇಂದ್ರೆಯವರು ಪ್ರಾಚೀನ ವಿದ್ವಾಂಸರಿಬ್ಬರ ಮನೋಧರ್ಮದಲ್ಲಿರುವ ಸಾಮ್ಯವನ್ನು ಗುರುತಿಸಿದಂತಾಯಿತೇ ವಿನಾ, ಇಬ್ಬರೂ ಒಬ್ಬರೇ ಎಂದು ಹೇಳಲು ತಕ್ಕ ಪ್ರಮಾಣಗಳನ್ನು ಸೂಚಿಸಿಲ್ಲ. ಮುಗಳಿಯವರು "ಈ ಚಮತ್ಕಾರದ ಜೋಡಣೆಯಲ್ಲಿ ಸತ್ಯತೆ ಎಷ್ಟಿದೆ ಎಂಬುದನ್ನು ಬಲ್ಲವರು ಪರೀಕ್ಷಿಸಬೇಕು. ಆ ಮೂವರು ಕನ್ನಡದಲ್ಲಿ ಗ್ರಂಥಗಳನ್ನು ರಚಿಸಿದರೇ ಎಂಬುದನ್ನು ಸಂಶೋಧಿಸಬೇಕು" ಎಂದು ಸಂದೇಹ ವ್ಯಕ್ತಪಡಿಸಿ ಈ ಅಭಿಪ್ರಾಯವನ್ನು ಕೈಬಿಟ್ಟಿರುವುದು ಸೂಕ್ತವೆನಿಸುತ್ತದೆ.[19]

ಡಿ. ಕೆ. ಭೀಮಸೇನರಾಯರು ಉಸ್ಮಾನಿಯ ವಿಶ್ವವಿದ್ಯಾನಿಲಯದಲ್ಲಿನ ಗ್ರಂಥ ಭಂಡಾರದ 'ಶಬ್ದಮಣಿದರ್ಪಣ'ದ ಪ್ರಾಚೀನ ಪ್ರತಿಯೊಂದನ್ನು ಪರಿಚಯ ಮಾಡಿಕೊಡುತ್ತ, ಅದಕ್ಕೆ ವ್ಯಾಖ್ಯಾನ ಬರೆದಾತನು "ನುತ ಶಬ್ದಾಳಂಕಾರದೊಳ್...." ಎಂಬ ಪದ್ಯಕ್ಕೆ (೨-೩೧) ವೃತ್ತಿಯನ್ನು ಬರೆಯುವಲ್ಲಿ, 'ಕನ್ನಡ ಕವಿತೆಯೆಂಬ ಪೆಣ್ಗೆ ಪ್ರಾಸಮೆ ಪ್ರಾಣಮಾ ಪ್ರಾಸಂ ಶಬ್ದಾಳಂಕಾರದೊಳತಿಶಯಮುಮವಱ ಪ್ರಪಂಚಮಂ ನೃಪತುಂಗದೇವನ ಮತದಿಂ ಪೇೞ್ದಪ್ಪೆಂ" ಎಂದೂ[20] "ಗೞಿಯಿಸಿದರ್ಥಮಂ...." ಎಂಬ 'ಕವಿರಾಜಮಾರ್ಗ'ದ ಮತ್ತೊಂದು ಪದ್ಯವನ್ನು (೨-೫) ಉದಾಹರಿಸಿದ ಬಳಿಕ 'ಶ್ರೀವಿಜಯನ ಪ್ರಯೋಗ' ಎಂದೂ ಹೇಳಿರುವುದರಿಂದ, ಕೃತಕೃತ್ಯಮಲ್ಲವಲ್ಲಭ, ನೃಪತುಂಗದೇವ, ಶ್ರೀವಿಜಯ ಎಂಬಿವುಗಳು ಒಬ್ಬನಿಗೇ ಇದ್ದ ಪರ್ಯಾಯನಾಮಗಳೆಂದೂ ನೃಪತುಂಗನು ಬೇರೆ, ಶ್ರೀವಿಜಯನು ಬೇರೆ ಎಂಬ ತಿಳಿವಳಿಕೆಯನ್ನು ಇದು ನಿರಸನ ಮಾಡುವುದೆಂದೂ ತಮ್ಮ ಅಭಿಪ್ರಾಯವನ್ನು ಸೂಚಿಸಿದರು.[21] ಇದು ಬಿಡಿಸಿದ್ದ ಗಂಟಿಗೆ ಒಂದು ಹೊಸ ತೊಡಕನ್ನು ತಂದೊಡ್ಡಿದಂತಾಯಿತು.

'ಶಬ್ದಮಣಿದರ್ಪಣ'ದ ಪ್ರಕೃತ ಪ್ರತಿ ಕೆಲವಂಶಗಳಲ್ಲಿ ಇತರ ಪ್ರತಿಗಳಿಗಿಂತ ಭಿನ್ನವಾಗಿದ್ದ ಮಾತ್ರಕ್ಕೆ ಅದು ಪ್ರಾಚೀನವೆಂದು ಭಾವಿಸುವುದು ಉಚಿತವೇ? ಐಕಾರ, ಐಬಿಗಳನ್ನು ಬಳಸಿದ ಮಾತ್ರಕ್ಕೆ ಅದನ್ನು ಪ್ರಾಚೀನತಮವೆನ್ನಲು ಆದೀತೇ? ಈ ಹೊಸಪ್ರತಿಯ ಹಲವಾರು ಪಾಠಭೇದಗಳಿಗೆ ಮತ್ತು ಲಿಪಿಶುದ್ಧಿಗೆ ಅದರ ವ್ಯಾಖ್ಯಾನಕಾರನೇ ಕಾರಣವಿರಬಹುದಲ್ಲವೆ? ಇಷ್ಟಕ್ಕೂ ಕೇಶಿರಾಜನ ಮೂಲಪ್ರತಿಯ ಸ್ವರೂಪ ಇನ್ನೂ ಅನಿರ್ದಿಷ್ಟ. ಒಂದು ಹಸ್ತಪ್ರತಿಯಲ್ಲಿ ಕಂಡುಬರುವ ಕೆಲವು ಮಾರ್ಪಾಟುಗಳನ್ನೇ ಅವಲಂಬಿಸಿ ಉಳಿದೆಲ್ಲ ಪ್ರತಿಗಳಿಗಿಂತಲೂ ಅದು ಹಿಂದಿನದು ಎಂದು ಭಾವಿಸಬಹುದೇ? ಹಸ್ತಪ್ರತಿಯಲ್ಲಿ ಖಚಿತವಾದ ಕಾಲವನ್ನು ನಿರ್ದೇಶಿಸಿಲ್ಲ, ವ್ಯಾಖ್ಯಾನ ಬರೆದವನ ವಿವರಗಳಾವುವೂ ವ್ಯಕ್ತವಾಗಿಲ್ಲ. ಆದ್ದರಿಂದ ಈ ಪ್ರಾಚೀನತೆಯ ಲಕ್ಷಣವನ್ನು ನೆಚ್ಚಿ ಅಭಿಪ್ರಾಯವನ್ನು ಸಮರ್ಥಿಸದಿರುವುದು ಲೇಸು. ಇಷ್ಟಕ್ಕೂ ಇಲ್ಲಿ ನೃಪತುಂಗನ ಬಗ್ಗೆ ಹೇಳಿರುವ ಮಾತುಗಳು ವ್ಯಾಖ್ಯಾನಕಾರನ ಅಭಿಪ್ರಾಯ. ಹೀಗೆ ಆತನೂ ತಕ್ಕಮಟ್ಟಿಗೆ ಅರ್ವಾಚೀನನೇ. ಕಡೆಗೆ ಈ ಟಿಪ್ಪಣಿಯ ಮೂಲಕ ಎಂ. ಎಂ. ಕಲಬುರ್ಗಿ ಅವರು ನಿರ್ದೇಶಿಸಿರುವಂತೆ, 'ಕೃತಕೃತ್ಯಮಲ್ಲವಲ್ಲಭ'ನೆಂದರೆ ನೃಪತುಂಗನೆಂದೂ 'ಕವಿರಾಜಮಾರ್ಗ'ದ ಪ್ರಯೋಗಗಳು ಶ್ರೀವಿಜಯಕೃತವೆಂದೂ ಅರ್ಥವಾಗುವುದಲ್ಲದೆ ಇವರಿಬ್ಬರೂ ಒಬ್ಬರೇ ಎಂದು ಧ್ವನಿತವಾಗುವುದಿಲ್ಲ.

ಮುಳಿಯ ತಿಮ್ಮಪ್ಪಯ್ಯನವರ ವಾದಕ್ರಮವನ್ನು ಒಪ್ಪಿ ಕೆ. ವೆಂಕಟರಾಯಾಚಾರ್ಯರು ಶ್ರೀವಿಜಯನನ್ನು ಕುರಿತು ಸ್ತುತಿಗಳಲ್ಲಿ ತೋರಿಬರುವ 'ಶ್ರೀವಿಜಯರ' ಎಂಬ ಬಹುವಚನ ಪ್ರಯೋಗದಲ್ಲಿ ವಿಶೇಷಾರ್ಥವಿರಬೇಕೆಂದು ಎಣಿಸಿ, 'ಶ್ರೀ ಮತ್ತು ವಿಜಯ' ಎಂಬ ದ್ವಂದ್ವಸಮಾಸವನ್ನು ಹೊಂದಿದ ಎರಡು ನುಡಿಗಳಿರಬೇಕೆಂದೂ ಕವಿರಾಜಮಾರ್ಗೋಕ್ತವಾದ "ಶ್ರೀವನಿತಾಪ್ರಸವದಿನಾ...." ಎಂಬ ಪದ್ಯವನ್ನು (೩–೪೦) ವಿಶ್ಲೇಷಿಸುತ್ತ ನೃಪತುಂಗನಿಗೆ 'ಶ್ರೀ' ಎಂಬ ಪುತ್ರಿಯೊಬ್ಬಳಿದ್ದಿರಬೇಕೆಂದು ಊಹಿಸಿರುತ್ತಾರೆ. ಅವಳನ್ನು 'ವಿಜಯ'ನು ಮದುವೆಯಾಗಿದ್ದು, ಅವರಿಬ್ಬರೂ 'ಶ್ರೀವಿಜಯರ್' ಎಂಬ ಅಂಕಿತದಲ್ಲಿ ಸೂಚಿತವಾಗಿರಬೇಕೆಂಬುದು ಅವರ ಅಭಿಪ್ರಾಯ.[22] ಅವರ ಈ ಹೇಳಿಕೆಗೆ ಐತಿಹಾಸಿಕ ಆಧಾರವಿಲ್ಲ.

### ರಂ. ಶ್ರೀ. ಮುಗಳಿಯವರು : ಶ್ರೀವಿಜಯಕರ್ತೃತ್ವ ಸ್ಪಷ್ಟೀಕರಣ

ಪ್ರಥಮ ಮತ್ತು ದ್ವಿತೀಯ ಘಟ್ಟದ ಈ ವಿದ್ವಾಂಸರ ವಾದಗಳನ್ನೆಲ್ಲ ರಂ. ಶ್ರೀ. ಮುಗಳಿಯವರು ತಮ್ಮ 'ಕನ್ನಡ ಸಾಹಿತ್ಯ ಚರಿತ್ರೆ'ಯಲ್ಲಿ ಸಾಕಷ್ಟು ಸಂಗ್ರಹವಾಗಿ ಸಮೀಕ್ಷಿಸಿ, ಕೊನೆಗೆ ಕೆಲವು ಸ್ಪಷ್ಟವಾದ ಅಭಿಪ್ರಾಯಗಳನ್ನು ಹೀಗೆ ವ್ಯಕ್ತಪಡಿಸಿರುವರು :[23]

"ಗ್ರಂಥಕರ್ತನು ಯಾರು? ಅವನ ಹೆಸರೇನು? ಈ ಪ್ರಶ್ನೆಗೆ ಉತ್ತರವು ಬಹುವಾಗಿ ಊಹೆಯನ್ನು ಅವಲಂಬಿಸಿದೆ. ಎಲ್ಲ ಪ್ರಮಾಣಗಳನ್ನು ಮನದಂದು ತೂಗಿದರೆ,

ಶ್ರೀ ವಿಜಯನು ಕವಿರಾಜಮಾರ್ಗಕಾರನಾಗಿರಬಹುದೆಂದು ನಮ್ಮ ತೋರಿಕೆ. ಪ್ರತಿ ಪರಿಚ್ಛೇದದ ಕೊನೆಯ ಪದ್ಯದಲ್ಲಿ ತಪ್ಪದೆ 'ಶ್ರೀ ವಿಜಯ' ಎಂಬುದು ಗ್ರಂಥಕರ್ತೃತ್ವ ವನ್ನು ಸೂಚಿಸುವ ರೀತಿಯಲ್ಲಿ ಬಂದಿದೆ....ಇದರೊಡನೆ 'ಶ್ರೀವಿಜಯರ ಕವಿಮಾರ್ಗಂ' (ಪಂಚತಂತ್ರ ೧-೨೧) ಎಂದು ೧೦೩೧ರ ದುರ್ಗಸಿಂಹನು ಮೊತ್ತಮೊದಲು ಅತಿಗೌರವ ದಿಂದ ಮಾಡಿದ ಉಲ್ಲೇಖ, ತನ್ನ ಪ್ರಮಾಣ ಪುರುಷರಲ್ಲಿ 'ಶ್ರೀವಿಜಯ' ಎಂಬ ಹೆಸರನ್ನು ಹೇಳಿ ಕೇಶಿರಾಜನು (ಸು. ೧೨೬೦) 'ಕವಿರಾಜಮಾರ್ಗ'ದಿಂದ ಲಕ್ಷ್ಯ ಗಳನ್ನು ಎತ್ತಿಕೊಂಡಿದ್ದು ಇವನ್ನು ಗಮನಿಸಬೇಕು. ೧೬೦೦ರಲ್ಲಿದ್ದ ಭಟ್ಟಾಕಳಂಕನು 'ನೃಪತುಂಗಗ್ರಂಥ' ಎಂಬುದು ಇವುಗಳ ಮುಂದೆ ಅತಿ ಅರ್ವಾಚೀನವಾಗುತ್ತದೆ.... 'ಶ್ರೀ ವಿಜಯ ಪ್ರಭೂತ(ತಿ)' ಇದು ನೃಪತುಂಗನ ಬಿರುದಾಗಿತ್ತೆಂದೂ ಕೊನೆಯ ಪದ್ಯ ಗಳು ನೃಪತುಂಗನೇ ಗ್ರಂಥಕರ್ತನೆಂದು ಸಾರುತ್ತಿವೆಯೆಂದೂ ಅಭಿಪ್ರಾಯವೊಂದಿದೆ. ನೃಪತುಂಗನು ಗ್ರಂಥಕರ್ತನಲ್ಲವೆಂಬುದಕ್ಕೆ ಬೇರೆ ಕಾರಣಗಳಿವೆ. 'ಶ್ರೀವಿಜಯ' ಇದು ನೃಪತುಂಗನ ಬಿರುದೆನ್ನಲು ಬೇರೆ ಆಧಾರಗಳಿಲ್ಲ. ಆದ್ದರಿಂದ ಈ ಅಭಿಪ್ರಾಯವು ಯುಕ್ತಿ ಸಮ್ಮತವಾಗಿಲ್ಲ. ಎರಡನೆಯ ಪರಿಚ್ಛೇದದ ಅಂತ್ಯದ 'ಶ್ರೀ ವಿಜಯ ಪ್ರಭೂತಮುದಮಂ ತನಗಾಗಿಸಿದೊಂ ಕವೀಶ್ವರಂ' ಎಂಬ ಮಾತೂ ಕವೀಶ್ವರ ಎಂಬ ಅಲ್ಲಲ್ಲಿಯ ನಿರ್ದೇಶವೂ ಕವೀಶ್ವರನು ಗ್ರಂಥಕಾರನೆಂಬ ಅಭಿಪ್ರಾಯಕ್ಕೆ ಎಡೆಮಾಡಿಕೊಟ್ಟಿದೆ. ಇಡಿಯ ಪದ್ಯ ವನ್ನು ನಿರುಕಿಸಿದರೆ, ಕವೀಶ್ವರನೆಂಬ ಹೆಸರು ಅಲ್ಲಿ ಸೂಚಿತವಾಗಿರದೆ ಕವೀಶ್ವರ ಎಂದರೆ ಕವಿಶ್ರೇಷ್ಠನು ಎಂಥವನು ಎಂಬುದನ್ನು ಹೇಳಲಾಗಿದೆ....ಶ್ರೀ ವಿಜಯರ 'ಕವಿಮಾರ್ಗ' ವೆಂಬ ಗ್ರಂಥಾಧಾರದಿಂದ ಕವೀಶ್ವರನೆಂಬ ನೃಪತುಂಗ ಸಭಾಸದನು ವಿಸ್ತಾರವಾದ 'ಕವಿರಾಜಮಾರ್ಗ'ವನ್ನು ರಚಿಸಿದನೆಂಬ ಅಭಿಪ್ರಾಯಕ್ಕೆ ಪುಷ್ಟಿಕೊಡುವ ಅಂಶಗಳು ಕೆಲವಿವೆ. ಅದರಲ್ಲಿ ಮೇಲಣ ಪದ್ಯವು ಮುಖ್ಯವಾಗಿದೆ. ಆದರೆ ನಾವು ಅರ್ಥವಿಸಿದಂತೆ ಅದಿದ್ದರೆ ಸಾಧಕವಾಗದು. 'ಶ್ರೀವಿಜಯರ ಕವಿಮಾರ್ಗಂ' ಎಂಬಲ್ಲಿ ಕಂದಪದ್ಯದ ಮಾತ್ರಾನುಕೂಲಕ್ಕಾಗಿ ದುರ್ಗಸಿಂಹನು 'ಕವಿರಾಜಮಾರ್ಗ'ವನ್ನು 'ಕವಿಮಾರ್ಗ'ವಾಗಿ ಮೊಟಕಿಸಿರಬಹುದು. 'ಕವಿಮಾರ್ಗ'ವೆಂಬ ಪೂರ್ವಗ್ರಂಥದ ಅಸ್ತಿತ್ವದ ಬಗ್ಗೆ ಬೇರೆ ಪ್ರಬಲ ಆಧಾರಗಳಿಲ್ಲ. ೨-೫೫ರ 'ಅತಿಶಯಧವಳೋಕ್ತಿ ಕ್ರಮದಿನಱಿಪುವೆಂ ತದ್ಭವ ದೊಳ್' ಎಂದರೆ 'ಅತಿಶಯಧವಳನಾದ ನೃಪತುಂಗನ (ತತ್) ಆ ಕವಿಮಾರ್ಗದಿಂದ (ಭವದೊಳ್) ಹುಟ್ಟಿದ ಈ ಗ್ರಂಥದಲ್ಲಿ ಹೇಳುವೆನು' ಎಂಬ ಅರ್ಥಕಲ್ಪನೆಯಾಗಿದೆ. ಇದರಿಂದ 'ಕವಿಮಾರ್ಗ' ಎಂಬ ಗ್ರಂಥವು 'ಕವಿರಾಜಮಾರ್ಗ'ಕ್ಕೆ ಆಕರವಾಗಿತ್ತೆಂದು ಊಹೆ. 'ಕವಿಮಾರ್ಗ'ವೆಂಬ ಗ್ರಂಥದ ಉಲ್ಲೇಖವನ್ನು ಎಲ್ಲಿಯೂ ಒಮ್ಮೆಯೂ ಮಾಡದ ಕವೀಶ್ವರನು 'ತದ್ಭವದೊಳ್' ಎಂದು ಇಲ್ಲಿ ಹೇಳಿದ್ದು ನಿಜವಾಗಿದ್ದರೆ ತತ್ಸಮವಿಲ್ಲದೆ ತದ್ಭವ ಜನಿಸಿದಂತಾಗುವುದಿಲ್ಲವೆ? 'ತದ್ಭವದೊಳ್' ಎಂಬುದರ ಅರ್ಥವೇನೋ ಅಸ್ಫುಟ ವಾಗಿದೆ. ಏನಿದ್ದರೂ ಮೇಲಿನ ಅರ್ಥವಿರಲಿಕ್ಕಿಲ್ಲ ಎಂದು ನಮ್ಮ ಮತ. 'ಅವನಿಂದ ಉಂಟಾದ ಗ್ರಂಥದಲ್ಲಿ' ಎಂದರೆ 'ಅವನ ಅನುಮತಿಯಿಂದ ನಾನು ಬರೆಯುತ್ತಿರುವ

ಗ್ರಂಥದಲ್ಲಿ' ಎಂದು ಅದರಲ್ಲಿ ಅಭಿಪ್ರೇತವಾಗಿರಬಹುದು. ಪದ್ಯಕಾರರಲ್ಲಿ ಶ್ರೀವಿಜಯನನ್ನು ಹೆಸರಿಸಿ ತನ್ನನ್ನೆ ಕವಿರಾಜಮಾರ್ಗಕಾರನು ಸೂಚಿಸಿದಂತಿದೆ. ಸಂಬಂಧಿ ಪದ್ಯದಲ್ಲಿ (೧–೩೩) ತದಾದ್ಯ ಕಾವ್ಯ ಎಂದರೆ 'ಅವರ ಶ್ರೇಷ್ಠ ಇಲ್ಲವೆ ಉತ್ತಮ ಕಾವ್ಯ' ಎಂದರ್ಥ. ೧–೩೨ರಲ್ಲಿಯ 'ಆದ್ಯ'ಕ್ಕೂ ಇದೇ ಅರ್ಥವಿದೆ. ಇದು ಒಪ್ಪಿತವಾದರೆ ಪದ್ಯಕಾರರಲ್ಲಿ ಸಮಕಾಲೀನರನ್ನೂ ಪೂರ್ವಿಕರನ್ನೂ ಒಟ್ಟು ಸೇರಿಸಲು ಆತಂಕವಿಲ್ಲ. ಬಹುಶಃ ಸಮಕಾಲೀನರಿಂದ ಮೊದಲುಮಾಡಿ ಪ್ರಾಚೀನರವರೆಗೆ ಹೆಸರುಗಳನ್ನು ಹೇಳಿರಬೇಕು. ಗದ್ಯಕಾರರಲ್ಲಿಯೂ ವಿಮಲೋದಯನಿಂದ ದುರ್ವಿನೀತನವರೆಗೆ ಇದೇ ಕ್ರಮವನ್ನು ಅನುಸರಿಸಿದಂತಿದೆ. ಇಲ್ಲಿ ಉಲ್ಲೇಖಿತನಾದ ಶ್ರೀವಿಜಯನು ಬೇರೆಯವನೆಂದು ಸಿದ್ಧಮಾಡಲು ಪ್ರಮಾಣ ದೊರೆತರೆ ಕವಿರಾಜಮಾರ್ಗಕಾರನು ಇನ್ನೊಬ್ಬ ಶ್ರೀವಿಜಯನೆನ್ನಬೇಕಾಗುತ್ತದೆ. ಸ್ವನಿರ್ದೇಶ ಹಾಗೂ ಆತ್ಮಸ್ತುತಿ ಮಾಡಲಾರನೆಂಬ ಯುಕ್ತಿಪ್ರಮಾಣವು ಸಾಲದು."

ಮುಗಳಿಯವರ ಸಮಗ್ರ ಸಮೀಕ್ಷೆಯಲ್ಲಿ ನೃಪತುಂಗಕರ್ತೃತ್ವದ ಬಗ್ಗೆ ಇದ್ದ ಅಭಿಪ್ರಾಯಗಳ ನಿರಾಕರಣೆಯೂ ಶ್ರೀ ವಿಜಯನ ಪರವಾಗಿ ಈವರೆಗೆ ತಿಳಿದುಬಂದಿರುವ ಪೋಷಕ ಸಾಮಗ್ರಿಯೂ ಸ್ಪಷ್ಟವಾಗಿದೆ. ಈ ಘಟ್ಟದಲ್ಲಿ ವೆಂಕಣ್ಣಯ್ಯನವರು ಮೊದಲ್ಗೊಂಡು ಮುಗಳಿಯವರವರೆಗೆ ಶ್ರೀ ವಿಜಯನ ಬಗ್ಗೆ ಹೆಚ್ಚು ಒಲವಿರುವುದನ್ನು ಗಮನಿಸಬಹುದು. ಮುಳಿಯ ತಿಮ್ಮಪ್ಪಯ್ಯನವರು ಶ್ರೀವಿಜಯನ ಕರ್ತೃತ್ವದ ಬಗ್ಗೆ ಅನುಸರಿಸಿರುವ ವಿಧಾನವು ಚಮತ್ಕಾರ ಪ್ರಧಾನವಾಗಿ ತೋರಿಬಂದರೂ, ಅವರು ನೃಪತುಂಗನ ಪಕ್ಷವನ್ನೂ ಕವೀಶ್ವರನ ಪಕ್ಷವನ್ನೂ ಆಂತರಿಕ ಮತ್ತು ಬಾಹ್ಯ ಪ್ರಮಾಣಗಳಿಂದ ಸಾರ್ಥಕವಾಗಿ ನಿರಾಕರಿಸಿರುವರೆಂಬುದನ್ನು ಅಲ್ಲಗಳೆಯುವಂತಿಲ್ಲ.

## ತೃತೀಯ ಘಟ್ಟ

### ಎಂ. ವಿ. ಸೀತಾರಾಮಯ್ಯನವರು: ಶ್ರೀವಿಜಯ ಕರ್ತೃತ್ವ ಸ್ಥಾಪನೆ

'ಕವಿರಾಜಮಾರ್ಗ'ದ ಮೂರನೆಯ ಪರಿಷ್ಕರಣ (೧೯೬೮) ಅದರ ಸಂಪಾದಕರಾದ ಎಂ. ವಿ. ಸೀತಾರಾಮಯ್ಯ ಅವರು, ಕರ್ತೃವಿನ ವಿಚಾರವಾಗಿ ವಿವರವಾಗಿ ವಿಮರ್ಶಿಸಿ, 'ಕವಿರಾಜಮಾರ್ಗ'ವು ಶ್ರೀವಿಜಯಕೃತವೆಂದೇ ನಿರ್ಧರಿಸಿ, "ಶ್ರೀ ನೃಪತುಂಗ ದೇವಾನುಮತಮಪ್ಪ ಶ್ರೀವಿಜಯಕೃತ ಕವಿರಾಜಮಾರ್ಗಂ" ಎಂದು ತಮ್ಮ ಪರಿಷ್ಕರಣವನ್ನು ಕರೆದರು. ಅವರ ನಿಲವಿನ ಮುಖ್ಯಾಂಶಗಳನ್ನು ಇಲ್ಲಿ ಗಮನಿಸಬಹುದು.[೨೪]

(೧) ಶ್ರೀವಿಜಯನೆಂಬ ಒಬ್ಬ ಕವಿ ಇದ್ದುದಕ್ಕೂ ಆತನ ಕೆಲಸವನ್ನು ಇತರರು ಮೆಚ್ಚಿಕೊಂಡಿದ್ದರೆಂಬುದಕ್ಕೂ ಅನ್ಯಕವಿಗಳ ಹೇಳಿಕೆಗಳು ಶ್ರೇಷ್ಠ ಪ್ರಮಾಣಗಳೆಂಬುದರಲ್ಲಿ ಸಂದೇಹವಿಲ್ಲ. ಮಂಗರಸನು (ಸು. ೧೫೦೦) ತನ್ನ 'ನೇಮಿಜಿನೇಶಸಂಗತಿ'ಯಲ್ಲಿ 'ದೇವ ಚಂದ್ರಪ್ರಭರನು ಕೊಂಡಾಡಿದ ಶ್ರೀ ವಿಜಯರ...." ಎಂದು ಚಂಪೂ ಕಾವ್ಯಕರ್ತರ

ವೃಂದದಲ್ಲಿ ಶ್ರೀವಿಜಯನ ಹೆಸರನ್ನು ಸೇರಿಸಿ ಸ್ಮರಿಸಿದ್ದಾನೆ. ಪಿರಿಯಪಟ್ಟಣದ ದೊಡ್ಡಯ್ಯನು (ಸು. ೧೫೫೦) ತನ್ನ 'ಚಂದ್ರಪ್ರಭಸಾಂಗತ್ಯ'ದಲ್ಲಿ "ಚಂದ್ರಪ್ರಭ ಪುರಾಣವ ಪೇಳ್ದ ವಿಜಯಕವೀಂದ್ರ" ಎಂದು ಉಲ್ಲೇಖಿಸಿದ್ದಾನೆ. ದುರ್ಗಸಿಂಹನು (೧೦೩೧) ತನ್ನ ಪಂಚತಂತ್ರದಲ್ಲಿ 'ಶ್ರೀವಿಜಯರ ಕವಿಮಾರ್ಗಂ....'ಮುಂತಾಗಿ ಹೊಗಳಿದ್ದಾನೆ. ಕೇಶಿರಾಜನು (ಸು. ೧೨೬೦) 'ಶಬ್ದಮಣಿದರ್ಪಣ'ದಲ್ಲಿ "....ಶ್ರೀವಿಜಯರ ಪೊನ್ನನ ಪಂಪನ ಸುಜನೋತ್ತಂಸನ ಸುಮಾರ್ಗಮಿದಱೊಳೆ ಲಕ್ಷ್ಯಂ" ಎಂದು ಹೇಳಿದ್ದಾನೆ.

ಮಂಗರಸ ದೊಡ್ಡಯ್ಯರ ಹೇಳಿಕೆಗಳಿಂದ ಶ್ರೀವಿಜಯನೆಂಬ ಕವಿ 'ಚಂದ್ರಪ್ರಭಪುರಾಣ'ವೆಂಬ ಚಂಪೂಕಾವ್ಯದ ಕರ್ತೃ ಎಂದು ಗೊತ್ತಾಗುತ್ತದೆ. ಕವಿರಾಜಮಾರ್ಗದ ಕರ್ತೃ ಶ್ರೀವಿಜಯನೆಂಬುದಕ್ಕೆ ಅವು ಸಾಧಕವಾಗವು. ದುರ್ಗಸಿಂಹನ ಹೇಳಿಕೆಯಿಂದ ಶ್ರೀವಿಜಯನು 'ಕವಿರಾಜಮಾರ್ಗ'ದ ಕರ್ತೃ ಎಂದು ಅನುಮಾನಿಸಲು ಅವಕಾಶವಿದೆ. 'ಕವಿಮಾರ್ಗ' ಎನ್ನುವ ಪದಕ್ಕೆ 'ಕಾವ್ಯರಚನಾಪದ್ಧತಿ' ಎಂಬ ಸಾಮಾನ್ಯಾರ್ಥವನ್ನು ಹೇಳುವುದಕ್ಕಿಂತ 'ಕವಿಮಾರ್ಗವೆಂಬ ಗ್ರಂಥ'ವೆಂಬ ವಿಶಿಷ್ಟಾರ್ಥವನ್ನು ಹೇಳುವುದೇ ಸೂಕ್ತ. ಒಂದು ಗ್ರಂಥವನ್ನು ಕೈಗನ್ನಡಿ, ಕೈದೀವಿಗೆ ಎಂದು ನಿರ್ದೇಶಿಸುವುದು ಉಚಿತ; ಕಾವ್ಯಮಾರ್ಗವನ್ನು ಹಾಗೆ ನಿರ್ದೇಶಿಸುವುದು ಸಮಂಜಸವೆನ್ನಿಸದು. ನಾಗವರ್ಮನು ತನ್ನ 'ಕಾವ್ಯಾವಲೋಕನ'ವನ್ನು 'ಕವಿಗಳ್ಗಿದು ಕೈಗನ್ನಡಿ' ಎಂದು ವರ್ಣಿಸಿರುವುದನ್ನು ಈ ಸಂದರ್ಭದಲ್ಲಿ ನೆನೆಯಬಹುದು. ಆದ್ದರಿಂದ,'ಕವಿಮಾರ್ಗ' ಎಂದರೆ ದುರ್ಗಸಿಂಹನು ಒಂದು ಲಕ್ಷಣಗ್ರಂಥವನ್ನೇ ಹೆಸರಿಸಿದ್ದಾನೆ ಎಂದು ತಿಳಿಯುವುದು ಹೆಚ್ಚು ಸಮಂಜಸ. 'ಕವಿರಾಜಮಾರ್ಗ' ಎಂಬ ಸಮಸ್ತ ಪದವನ್ನು ಮುಖ್ಯವಾಗಿ 'ಕವಿಗಳ + ರಾಜಮಾರ್ಗ', 'ಕವಿರಾಜರ (ಕವಿಶ್ರೇಷ್ಠರ) + ಮಾರ್ಗ' ಎಂದು ಇಬ್ಬಗೆಯಾಗಿ ಬಿಡಿಸಬಹುದು. ಪದ್ಯ ರಚನೆಯ ಸೌಕರ್ಯಕ್ಕಾಗಿ ಶ್ರೇಷ್ಠಾರ್ಥವಾಚಿಯಾದ 'ರಾಜ' ಶಬ್ದವನ್ನು ಕವಿ ಲೋಪಿಸಿದ್ದಾನೆ. ಇದರಿಂದ ಗ್ರಂಥನಾಮದ ಮುಖ್ಯಾರ್ಥಕ್ಕೆ ಬಾಧೆಯೇನೂ ತಟ್ಟುವುದಿಲ್ಲ. ಕೇಶಿರಾಜನೂ ಶ್ರೀವಿಜಯನ ಹೆಸರನ್ನು ಹೇಳಿ 'ಕವಿರಾಜಮಾರ್ಗ'ದ ಪದ್ಯಗಳನ್ನು ಉದಾಹರಿಸಿರುವುದರಿಂದಲೂ ಆಂತರಿಕ ಪ್ರಮಾಣಗಳಿಂದಲೂ 'ಕವಿರಾಜಮಾರ್ಗ'ವು ಶ್ರೀವಿಜಯಕೃತ ಎಂದು ಸ್ಥಿರಪಡುವುದರಿಂದಲೂ ದುರ್ಗಸಿಂಹನು ಹೇಳುವ ಶ್ರೀವಿಜಯನ 'ಕವಿಮಾರ್ಗ'ವು 'ಕವಿರಾಜಮಾರ್ಗ'ವೇ ಎಂಬಲ್ಲಿ ಸಂದೇಹವಿಲ್ಲ. ಆಂತರಿಕ ಪ್ರಮಾಣಗಳಲ್ಲಿ ಪರಿಚ್ಛೇದಾಂತ ಪದ್ಯಗಳಲ್ಲಿ ಪ್ರಯುಕ್ತಗಳಾದ 'ಶ್ರೀವಿಜಯನಿಂದ ಉಂಟಾದ್ದು, ಉತ್ಪನ್ನವಾದ್ದು—ಜನಿಸಿದ್ದು—ನಿರ್ಮಾಣವಾದ್ದು', 'ಶ್ರೀವಿಜಯ ಮೂಲವಾದ್ದು' ಎಂದು ಅರ್ಥಕೊಡುವ 'ಶ್ರೀವಿಜಯಪ್ರಭೂತ' 'ಶ್ರೀವಿಜಯಪ್ರಭೂತಿ' ಎಂಬ ಪದಗಳು ಬಹು ಮುಖ್ಯವಾದುವು.

ಆಂತರಿಕ ಪ್ರಮಾಣದ ಸಲುವಾಗಿ ಗ್ರಂಥಾದಿಯಲ್ಲಿ ಮತ್ತು ಅಂತ್ಯದಲ್ಲಿ ಬರುವ 'ಪರಮಶ್ರೀವಿಜಯ' ಎಂಬ ಪ್ರಯೋಗಗಳ ಔಚಿತ್ಯವನ್ನು ಪರಿಶೀಲಿಸುತ್ತ ಎಂ. ವಿ. ಸೀ.

ಅವರು, ಇಲ್ಲಿ ನಿರ್ದೇಶಿಸಲಾಗಿರುವ 'ಆದ್ಯ' ಎಂಬ ಶಬ್ದಕ್ಕೆ 'ಶ್ರೇಷ್ಠ' ಎಂದು ಇಟ್ಟು ಕೊಂಡಲ್ಲಿ ಅದು ಶ್ರೀವಿಜಯನಿಗೇ ಅನ್ವಯಿಸುವುದರಲ್ಲಿ ಬಾಧಕವಿಲ್ಲ ಎಂದು ಅಭಿಪ್ರಾಯ ಪಡುವರು. ಗ್ರಂಥಾಂತ್ಯದಲ್ಲಿ ಸ್ವವಿಷಯವನ್ನು ಹೇಳುವಲ್ಲಿ 'ಲಕ್ಷಣಲಕ್ಷ್ಯನಾಶ್ರಿತಮಹಾ ನೃಪತುಂಗಸಭಾಸದ' ಎಂದು ತಿಳಿಸಿರುವುದರಿಂದ ಇದು ಪ್ರಕೃತಕವಿ ಬರೆದ ಯಾವುದೋ ಒಂದು 'ಮಾರ್ಗ'ವನ್ನು ಕುರಿತುದಾಗಿರಬೇಕೆಂದು ಅದು ಪೂರ್ವೋಕ್ತವಾದ 'ಚಂದ್ರಪ್ರಭ ಪುರಾಣ'ವೇ ಆಗಿರಬಹುದೆಂದು ತಾತ್ಕಾಲಿಕವಾಗಿ ಗ್ರಹಿಸಬಹುದೆಂದೂ ಎಣಿಸಿರುವರು.

ಕಡೆಯಲ್ಲಿ ಎಂ. ವಿ. ಸೀತಾರಾಮಯ್ಯನವರು 'ಕವಿರಾಜಮಾರ್ಗ'ದಲ್ಲಿಯೇ ಉಕ್ತ ವಾಗಿರುವ ಸಭಾಸದನ ಗುಣಾವಳಿಗಳನ್ನು ಅವಲಂಬಿಸಿ, ಆತನು ನೃಪತುಂಗನ ಸಭೆಗೆ ಆಗಮಿಸಿದ್ದು ಮೊದಲ್ಗೊಂಡು ಅಲ್ಲಿ ಹೇಗೆ ರಾಜಾನುಗ್ರಹಕ್ಕೆ ಪಾತ್ರನಾದನೆಂಬುದನ್ನೂ ಆತನ ಹಿರಿಮೆಗರಿಮೆಗಳನ್ನೂ ವಿವರವಾಗಿ ನಿರೂಪಿಸಿ, ಶ್ರೀವಿಜಯನ ಅಸ್ತಿತ್ವವನ್ನು ಸಪ್ರಮಾಣವಾಗಿ ಸ್ಥಾಪಿಸಿರುವರು.[25]

ಎಂ. ವಿ. ಸೀತಾರಾಮಯ್ಯನವರು ಇತರ ಕಡೆಗಳಲ್ಲಿಯೂ ವ್ಯಕ್ತಪಡಿಸಿರುವ ಒಂದೆರಡು ಅಂಶಗಳನ್ನು ಇಲ್ಲಿ ಉದಾಹರಿಸಬಹುದು. 'ಕವಿರಾಜಮಾರ್ಗ'ದಲ್ಲಿ ಬರುವ ರಾಮಾಯ ಣದ ಪದ್ಯಗಳು ಕವಿಕೃತವೋ ಅನ್ಯಕೃತವೋ ಎಂಬ ಸಂದೇಹವಿದೆಯಷ್ಟೆ. ಈ ಬಗ್ಗೆ ಅವರು ದಂಡಿಯು ತನ್ನ ಲಕ್ಷಣಗ್ರಂಥದಲ್ಲಿ ಹೇಗೆ ರಾಮಾಯಣ, ಭಾರತ ಕಥಾಂಶಗಳನ್ನು ಒಳಗೊಂಡ ಲಕ್ಷ್ಯಪದ್ಯಗಳನ್ನು ರಚಿಸಿರುವನೋ, ಹಾಗೆಯೇ ಕವಿರಾಜಮಾರ್ಗಕಾರನು ತನ್ನ ಜೈನಮತಕ್ಕನುಸಾರವಾಗಿ ಈ ರಾಮಾಯಣದ ಪದ್ಯಗಳನ್ನು ರಚಿಸಿರುವನೆಂದು ತಿಳಿಸಿದ್ದಾರೆ.[26] ಹೀಗೆಯೇ 'ಕವಿರಾಜಮಾರ್ಗ'ದಲ್ಲಿನ ಸಭಾಸದನು ತನ್ನನ್ನು ಕುರಿತು ಹೇಳುವಲ್ಲಿ ಬಳಸಿರುವ 'ಮಹಾಪುರುಷವ್ರತ' ಎಂಬ ಪದವು ಜೈನಧರ್ಮ ಪಾರಿಭಾಷಿ ಕಾರ್ಥವುಳ್ಳುದೆಂದೂ ಬ್ರಹ್ಮಚರ್ಯವ್ರತನಿಷ್ಠಿತ ಎಂಬ ಶಬ್ದಕ್ಕೆ ಅದು ಪರ್ಯಾಯ ಶಬ್ದವೆಂದೂ ತಿಳಿಸಿದ್ದಾರೆ.[27] ಈ ಮೂಲಕ 'ಕವಿರಾಜಮಾರ್ಗ'ಕರ್ತೃ ವಾಗಧಿಪನೂ ಆಜನ್ಮ ಬ್ರಹ್ಮಚರ್ಯವ್ರತನಿಷ್ಠನೂ ಆಗಿದ್ದ ಮಹಿಮನೆಂದು ವ್ಯಕ್ತವಾಗುತ್ತದೆ. ರಾಷ್ಟ್ರ ಕೂಟರ ೩ನೆಯ ಇಂದ್ರನ ಕಾಲಕ್ಕೆ (೯೧೪-೯೨೭) ಸೇರಿದ, ಕಡಪ ಜಿಲ್ಲೆಯ ದಾನ ವುಲು ಪಾಡು ಎಂಬಲ್ಲಿ ದೊರೆತ ಶಾಸನವೊಂದರಲ್ಲಿ ಸ್ತುತನಾಗಿರುವ ಶ್ರೀವಿಜಯನ ಪ್ರಶಂಸೆಯು 'ಕವಿರಾಜಮಾರ್ಗ'ದಲ್ಲಿನ ಸಭಾಸದನ ಪ್ರಶಂಸೆಯನ್ನೇ ಹೋಲುವುದರಿಂದ, ಇವೆರಡೂ ಒಂದೇ ವ್ಯಕ್ತಿಯನ್ನು ಕುರಿತುದಾದಲ್ಲಿ, ಆಗ ಶ್ರೀವಿಜಯನು ಅತ್ಯಂತ ದೀರ್ಘ ಕಾಲ ಬದುಕಿದ್ದನೆಂಬುದು ಮಾತ್ರವಲ್ಲದೆ, ಶಾಸನೋಕ್ತವಾಗಿರುವಂತೆ ಕಡೆಯಲ್ಲಿ ಸಂನ್ಯಾಸವನ್ನು ಕೈಕೊಂಡು ಗತಿಸಿರಬೇಕೆಂದೂ ಹೇಳಬೇಕಾಗುತ್ತದೆ. ಇದು ಮತ್ತಷ್ಟು ಪ್ರಮಾಣಗಳಿಂದ ದೃಢವಾದಲ್ಲಿ ದುರ್ಗಸಿಂಹ, ಮಂಗರಸ, ದೊಡ್ಡಯ್ಯ ಮೊದಲಾದ ಕವಿಗಳು ಪ್ರಕೃತ ಕರ್ತೃವನ್ನು ಸ್ತುತಿಸುವಲ್ಲಿ 'ಶ್ರೀವಿಜಯರ್', ಎಂಬುದಾಗಿ ಗೌರ ವಾರ್ಥಕದಲ್ಲಿ ಏಕೆ ಸಂಬೋಧಿಸಿದ್ದಾರೆ ಎಂಬ ಸಂಗತಿ ಸ್ವವಿದಿತವಾಗುತ್ತದೆಯೆಂಬ ಲೇಖಕರ ಸೂಚನೆ ಗ್ರಾಹ್ಯವಾಗಿದೆ.[28]

## ನೃಪತುಂಗ ಕರ್ತೃತ್ವದ ಪುನಃಪ್ರತಿಪಾದನೆಯ ಯತ್ನ

ಈಚೆಗೆ ಭೀಮರಾವ ಚಿಟಗುಪ್ಪಿ ಅವರು 'ಕವಿರಾಜಮಾರ್ಗ ಪ್ರಶಸ್ತಿ' ಎಂಬ ಒಂದು ಗ್ರಂಥವನ್ನು ಬರೆದು ಅದರಲ್ಲಿ ಕೃತಿವಿಚಾರ ಮತ್ತು ಕರ್ತೃವಿಚಾರಗಳನ್ನು ಮತ್ತೆ ವಿವರವಾಗಿ ಪರಿಶೀಲಿಸಿರುತ್ತಾರೆ.[29] ಅವರ ಪ್ರತಿಪಾದನೆಯ ಕೆಲವು ಮುಖ್ಯಾಂಶಗಳನ್ನು ಮಾತ್ರ ಇಲ್ಲಿ ಉಲ್ಲೇಖಿಸಿದೆ.[30] ಪ್ರಕೃತ ವಿದ್ವಾಂಸರು 'ಕವಿರಾಜಮಾರ್ಗ'ದ ಕರ್ತೃ ನೃಪತುಂಗನೆಂದೇ ಎಣಿಸುವುದರಿಂದ, ಶ್ರೀವಿಜಯ ಹಾಗೂ ಕವೀಶ್ವರವಾದಿಗಳ ಅಭಿಪ್ರಾಯಗಳನ್ನೆಲ್ಲ ಕ್ರಮವಾಗಿ ಖಂಡಿಸಿರುವರು. ಆಯಾ ಪಕ್ಷದವರು ಉದಾಹರಿಸಿರುವ ಆಧಾರಗಳನ್ನೇ ಪ್ರಸ್ತಾವಿಸಿ ಆ ಬಗ್ಗೆ ತಮ್ಮ ಅಭಿಪ್ರಾಯವನ್ನೋ ಪರಿಹಾರವನ್ನೋ ನೀಡಿರುವರು. ಅವರ ವಾದದ ಸಂಗ್ರಹ :

(i) ಕವಿರಾಜಮಾರ್ಗದ ಮಂಗಲಪದ್ಯಗಳ ಬಗ್ಗೆ ಕವೀಶ್ವರ ಶ್ರೀವಿಜಯ ಮತ್ತು ನೃಪತುಂಗ ಪಕ್ಷದವರು ಈ ಮೊದಲೆ ಒಂದೊಂದು ಬಗೆಯಾಗಿ ವ್ಯಾಖ್ಯಾನ ಮಾಡಿರುವರಷ್ಟೆ. ಈ ಸಂದರ್ಭದಲ್ಲಿ ಶ್ರೀವಿಜಯವಾದಿಗಳು (ಮತ್ತು ಕವೀಶ್ವರ ಪಕ್ಷದವರು) 'ಅತಿಶಯಧವಳಂ ನವಮಗೀಗತರ್ಕಿತೋರ್ಜಿತಪಸ್ಥಿತಪ್ರತಾಪೋದಯಂ' ಎಂಬಲ್ಲಿನ ಪ್ರತಾಪಕ್ಕೆ ಕವಿತ್ವಶಕ್ತಿಯೂ ಆಗಬಹುದೆಂದು ಹೇಳಿರುವುದನ್ನು ಒಪ್ಪಲಾಗದು. "ಯಾರಾದರೂ ಪ್ರತಿಭಾವಂತ ಕವಿ ಎನ್ನುವ ಬದಲು ಪ್ರತಾಪಶಾಲಿ ಕವಿ ಅಥವಾ ಪ್ರತಾಪಶಾಲಿ ವೀರ ಎನ್ನುವ ಬದಲು ಪ್ರತಿಭಾವಂತ ವೀರ ಎಂದಿರುವ ಒಂದು ಉದಾಹರಣೆಯನ್ನಾದರೂ ಕೊಟ್ಟಿದ್ದರೆ ಅವರ ವಾದಕ್ಕೆ ಪುಷ್ಟಿ ದೊರೆಯುತ್ತಿತ್ತು." ಗ್ರಂಥಾರಂಭದ ೩ನೆಯ ಪದ್ಯದಲ್ಲಿ ಜೈನನಾದ ಶ್ರೀವಿಜಯನು ದಂಡಿಯ ಸರಸ್ವತೀ ಪ್ರಾರ್ಥನೆಯನ್ನು ತನ್ನ ಮತಕ್ಕೆ ಅನುಗುಣವಾಗಿ ಮಾರ್ಪಡಿಸಿರುವನೆಂಬ ಪೂರ್ವಿಕರ ಹೇಳಿಕೆಯನ್ನು ಬದಿಗೊತ್ತಿ ಅದು ದಂಡಿಯ ಭಾವಾನುವಾದವಿದ್ದರೂ ಅದರಲ್ಲಿ ದಂಡಿಯ ಮೇರೆಗೆ ಚತುರ್ಮುಖ, ಬ್ರಹ್ಮ ಇಲ್ಲವೆ ಬ್ರಹ್ಮನ ಬೇರೊಂದು ಹೆಸರನ್ನು ಆ ಮೂಲಕ ಸಹ ಅದನ್ನೇ ಪುನರುಚ್ಚರಿಸುವ ಅಗತ್ಯವೇನಿದೆ? ಬದಲಾಗಿ ಆತ ಮನಸ್ಸು, ಮಾನಸ ಸರೋವರ, ಇತ್ಯಾದಿಗಳಲ್ಲಿ ಕಂಡುಬರುವ ಗುಣಾದಿಗಳ ಸಾಮ್ಯವನ್ನು ಮನದಂದು ಆ ಮೂಲಕ ಆಲಂಕಾರಿಕವಾಗಿ ಅವಳನ್ನು ಸ್ತುತಿಸಿರುವನು. ಇಲ್ಲಿ ಮತದ ಪ್ರಶ್ನೆ ಎಲ್ಲಿದೆ? ಈ ಪದ್ಯದ ಬಗ್ಗೆ ಯಾವ ವಾದವೂ ಅನಗತ್ಯ. ಮತದ ಪ್ರಶ್ನೆಯನ್ನೆಬ್ಬಿಸಿ ಗ್ರಂಥಕರ್ತ ನೃಪತುಂಗನಲ್ಲವೆಂದು ಸಾಧಿಸಲು ಈ ಮಂಗಲಪದ್ಯಗಳಿಂದ ಸಹಾಯವಾಗದು.

'ಕವಿರಾಜಮಾರ್ಗ'ದಲ್ಲಿ ಉಕ್ತವಾಗಿರುವ ಪದ್ಯಕವಿ ಸ್ತುತಿಯ ಬಗ್ಗೆ (೧-೩೩), "ಶ್ರೀವಿಜಯವಾದಿಗಳು ಕವಿರಾಜಮಾರ್ಗದ ಈ ಪದ್ಯದಲ್ಲಿರುವ ಬಗೆಯಲ್ಲಿ ಗ್ರಂಥಕರ್ತನ ಸ್ವನಿರ್ದೇಶವಿರುವ ಆತ್ಮಸ್ತುತಿಗೆ ಪಕ್ಕಾದ ಬಹುಸಂಖ್ಯಾತ ಕವಿಗಳಲ್ಲಿ ಒಬ್ಬನ ಉದಾಹರಣೆಯನ್ನಾದರೂ ಕೊಟ್ಟಿದ್ದರೆ ವಾದಕ್ಕೆ ಇಂಬಿರುತ್ತಿರಲಿಲ್ಲ....ವ್ಯಾವಹಾರಿಕ ದೃಷ್ಟಿಯಿಂದ ನೋಡಿದರೆ ಇಲ್ಲಿರುವ ನಿಜವಾದ ಪ್ರಶ್ನೆ ಶಿಷ್ಟಾಚಾರಕ್ಕೆ ಸಂಬಂಧಿಸಿದೆ ಎಂಬುದು

ಸ್ಪಷ್ಟವಾಗದಿರದು. ನಾಲ್ಕು ಗಣ್ಯರನ್ನು ಹೊಗಳುವಾಗ ಅವರಿಗಿಂತ ತಾನು ಶ್ರೇಷ್ಠ ನಿದ್ದರೂ ಒಬ್ಬನು ಸಹ ಮೊದಲು ತನ್ನನ್ನು, ಅದೂ ಪರಮ ಎಂಬ ವಿಶೇಷಣದೊಂದಿಗೆ ಹೊಗಳಿಕೊಂಡು ನಂತರ ಉಳಿದವರನ್ನು ಹೊಗಳಲಾರನೆಂದು ಬೇರೆ ಹೇಳಬೇಕಿಲ್ಲ. ಹೆಚ್ಚೆಂದರೆ ಶ್ರೀವಿಜಯ ಒಬ್ಬ ಶ್ರೇಷ್ಠ ಕವಿ, ಆತ ಕವೀಶ್ವರನೂ ಇರಬಹುದು. ದುರ್ಗ ಸಿಂಹಾದಿಗಳು 'ಶ್ರೀವಿಜಯರು' ಎಂದು ಒಳ್ಳೇ ಗೌರವದಿಂದ ಉಲ್ಲೇಖಿಸಿರುವುದರಿಂದ ಅವನೊಬ್ಬ ಪೂಜ್ಯವ್ಯಕ್ತಿ. ಮಂಗರಸಾದಿಗಳು 'ಚಂದ್ರಪ್ರಭ ಪುರಾಣ'ಕಾರ ಎಂದಿರು ವುದರಿಂದ ಜೈನ. 'ಕವಿರಾಜಮಾರ್ಗ' ಅಥವಾ ಬೇರೊಂದು ಹೆಸರಿನ ಒಂದು ಲಕ್ಷಣ ಗ್ರಂಥವಿದ್ದು ಅದು ಆತನದಿರಬಹುದು. ಆತ ನೃಪತುಂಗನ ಸಮಕಾಲೀನ, ಆಶ್ರಿತ ಸಹ ಇರುವುದು ಅಸಂಭವವಲ್ಲ—ಇಷ್ಟು ಮಾತ್ರ ಈ ಪದ್ಯ ಮತ್ತು ಇನ್ನಿತರ ಪೂರಕ ಆಧಾರಗಳಿಂದ ಗ್ರಹಿಸಬಹುದಾಗಿದೆ."

ಶ್ರೀವಿಜಯವಾದಿಗಳ ಪ್ರಬಲ ಆಧಾರವೆನ್ನಿಸಿರುವ ಪರಿಚ್ಛೇದಾಂತ್ಯ ಪದ್ಯಗಳಲ್ಲಿ ಉಕ್ತವಾಗಿರುವ 'ಶ್ರೀವಿಜಯ' ಎಂಬುದು ನೃಪತುಂಗನ ಬಿರುದೆನ್ನಿಸದಿದ್ದರೂ "ಅದು ಆತನ ಅಂಕಿತವೇಕಾಗಬಾರದು ?" ಎಂದು ಪ್ರಶ್ನೆಯೆತ್ತಿ, ಅಂಕಿತವಿರುವುದು ಸಾಮಾನ್ಯ ವಾಗಿ ಗ್ರಂಥದ ಕೊನೆಯಲ್ಲಿ, 'ಕವಿರಾಜಮಾರ್ಗ'ದಲ್ಲಿ 'ಶ್ರೀವಿಜಯ' ಪದವು ಅಂಕಿತವಿರ ತಕ್ಕ ಸ್ಥಳದಲ್ಲಿ, ಅಂದರೆ ಪರಿಚ್ಛೇದಾಂತ ಪದ್ಯಗಳಲ್ಲಿದೆ. ಆದ್ದರಿಂದ ಇದು ನೃಪತುಂಗನ ಬಿರುದಿರದಿದ್ದರೂ, ಆತನ ಅಂಕಿತವಿರುವುದು ಅಸಂಭವವಲ್ಲ" ಎಂದಿದ್ದಾರೆ.

ಈ ಅಭಿಪ್ರಾಯವೇನೂ ಹೊಸತಲ್ಲ. ಈ ಮೊದಲೇ ಕೆ. ಕೃಷ್ಣಮೂರ್ತಿಯವರೂ ಇದೇ ಅಭಿಪ್ರಾಯವನ್ನಿಟ್ಟುಕೊಂಡು 'ಕವಿರಾಜಮಾರ್ಗ'ಕಾರನು ನೃಪತುಂಗನೆಂದೇ ವ್ಯವಹರಿ ಸಿರುವುದುಂಟು.[31] ಆದರೆ ಈ ಬಗ್ಗೆ ಎಂ. ವಿ. ಸೀತಾರಾಮಯ್ಯನವರು ಹೇಳುವಂತೆ[32] ಗ್ರಂಥದ ಉದ್ದಕ್ಕೂ ಮತ್ತು ಪರಿಚ್ಛೇದಾಂತ ಗದ್ಯದಲ್ಲಿ 'ನೃಪತುಂಗ'ನೆಂಬ ನಾಮ ನಿರ್ದೇಶನವನ್ನು ಸ್ಪಷ್ಟಪಡಿಸಿ, ಕೇವಲ ಮೂರು ಪದ್ಯಗಳಲ್ಲಿ ತನ್ನ 'ಅಂಕಿತ'ವನ್ನು ಬಳಸುವುದು ಸಾಧುವೆನ್ನಿಸುವುದಿಲ್ಲ. ಹಾಗೆ ಮಾಡಿದಲ್ಲಿ 'ಮುದ್ರಿಕೆ'ಯ ಉದ್ದೇಶ ನೆರ ವೇರಿದಂತಾಗುವುದಿಲ್ಲ.

ಉಪಲಬ್ಧ 'ಕವಿರಾಜಮಾರ್ಗ'ದಲ್ಲಿರುವ ಕೆಲವು ಪದ್ಯಗಳು ಪಾಠಾಂತರಸಮೇತ ವಾಗಿ ನಾಗವರ್ಮನ 'ಛಂದೋಂಬುಧಿ' ಮತ್ತು ಕೇಶಿರಾಜನ 'ಶಬ್ದಮಣಿದರ್ಪಣ'ಗಳಲ್ಲಿ ದೊರೆಯುವುದಷ್ಟೆ. ಅವುಗಳಲ್ಲಿ ಕೇಶಿರಾಜನು ಸಂಧಿದೋಷಕ್ಕಾಗಿ ಕೊಟ್ಟಿರುವ "ಬರಿಸಿ ಪ್ರಧಾನರಂ...." ಎಂಬ ಪದ್ಯಕ್ಕೂ 'ಕವಿರಾಜಮಾರ್ಗ'ದಲ್ಲಿ ಉಕ್ತವಾಗಿರುವ "ಬರಿಸಿ ಕ್ಷಿತಿಪತಿಯಂ...."(೨-೭)ಎಂಬ ಪದ್ಯಕ್ಕೂ ಇರುವ ಪಾಠವ್ಯತ್ಯಾಸಗಳನ್ನು ಕುರಿತು ಜಿಜ್ಞಾಸೆ ಮಾಡಿರುವರು.[33] ಕೇಶಿರಾಜನ ಉದಾಹರಣೆಗಳು ಶ್ರೀವಿಜಯನ ಮೂಲ ಗ್ರಂಥದಲ್ಲಿಯದೆಂದೂ 'ಕವಿರಾಜಮಾರ್ಗ'ದಲ್ಲಿರುವುದು ಮಾರ್ಪಾಟಾಗಿ ಬಂದಿದೆ ಯೆಂದೂ ಭಾವಿಸಿರುವರು. ಜೆ. ಎಫ್. ಫ್ಲೀಟರು 'ಕವೀಶ್ವರ'ವಾದವನ್ನು ಮಂಡಿಸುವಲ್ಲಿ ಉಪಲಬ್ಧವಿರುವ 'ಕವಿರಾಜಮಾರ್ಗ'ದ ಕೆಲವು ಪದ್ಯಗಳಿಗೂ

'ಛಂದೋಂಬುಧಿ' ಮತ್ತು 'ಶಬ್ದಮಣಿದರ್ಪಣ'ಗಳಲ್ಲಿ ಕಂಡುಬರುವ ಸದೃಶ ಪದ್ಯಗಳಿಗೂ ಇರುವ ಅಂತರವನ್ನು ಗಮನಿಸಿ ಪ್ರಕೃತ 'ಕವಿರಾಜಮಾರ್ಗ'ವು, ಲಕ್ಷಣಕಾರರಿಬ್ಬರ ಗಮನಕ್ಕೂ ಬಂದಿರಬಹುದಾದ 'ಕವಿರಾಜಮಾರ್ಗ' (ಶ್ರೀವಿಜಯರ 'ಕವಿಮಾರ್ಗ') ದಿಂದ ಭಿನ್ನವೆಂದು ಸಾಧಿಸಿರುವರಷ್ಟೆ. ಆ ದಿಸೆಯಲ್ಲಿಯೇ ಸಾಗಿದ ಪ್ರಕೃತ ವಿದ್ವಾಂಸರು ಈ ಸಂದರ್ಭದಲ್ಲಿ ಇಲ್ಲಿನ ಎಲ್ಲ ಪದ್ಯಗಳನ್ನೂ ಲಕ್ಷಿಸಿ ತಮ್ಮ ತೀರ್ಮಾನವನ್ನು ಸಕಾರಣ ವಾಗಿ ತಿಳಿಸಿದ್ದರೆ ಉಪಯುಕ್ತವಾಗುತ್ತಿತ್ತು. ಪ್ರಕೃತದಲ್ಲಿ 'ಶಬ್ದಮಣಿದರ್ಪಣ' ವೊಂದನ್ನೇ ಆರಿಸಿಕೊಂಡಿರುವುದು ತೃಪ್ತಿಕರವೆನ್ನಿಸುವುದಿಲ್ಲ. ಇದಲ್ಲದೆ, ಈ ಎರಡು ಪದ್ಯಗಳ ಜನಕ-ಜನ್ಯ ಸಂಬಂಧವನ್ನು ನಿರ್ಣಯಿಸುವುದರಲ್ಲಿ ಅವುಗಳು ಬಳಕೆಯಾಗಿ ರುವ ಪರಿಸರವನ್ನೂ ಲಕ್ಷಿಸುವುದು ಅಗತ್ಯ. ವಾಸ್ತವವಾಗಿ ಈ ಎರಡು ಪದ್ಯಗಳನ್ನೇ ಹೋಲಿಸಿ ನೋಡಿದಲ್ಲಿ ಅವುಗಳ ಪೂರ್ವಾರ್ಧದಲ್ಲಿ ಮಾತ್ರ ವಿಶೇಷ ವ್ಯತ್ಯಾಸ ಗಳಿವೆಯೇ ವಿನಾ ಉತ್ತರಾರ್ಧದಲ್ಲಿ ಅಷ್ಟಾಗಿ ಇಲ್ಲ. 'ಕವಿರಾಜಮಾರ್ಗ'ದಲ್ಲಿ ಈ ಪದ್ಯವನ್ನು ದೂಷ್ಯಕ್ಕಾಗಿ ಉದಾಹರಿಸಿ ಅನಂತರ ಆ ದೋಷಪರಿಹಾರವನ್ನು ಮಾಡಿದ ಪಾಠವನ್ನೂ ಕೊಡಲಾಗಿದೆ. ಈ ಎರಡು ಪದ್ಯಗಳೂ ಪರಸ್ಪರ ಪೂರಕವಾಗಿರುವುದರಿಂದ ಇಲ್ಲಿ ಯಾವುದಾದರೂ ಒಂದನ್ನು ಮಾರ್ಪಡಿಸುವಂತಿಲ್ಲ. ಕೇಶಿರಾಜನಾದರೋ ತನ್ನ ಸೂತ್ರದಲ್ಲಿ ಎರಡು ಉದ್ದೇಶಗಳನ್ನು ಅಡಗಿಸಿಟ್ಟಿದ್ದಾನೆ. ರೇಫವಿದ್ದೂ ದ್ವಿತ್ವವಿದ್ದರೆ ಸಂಧಿದೋಷವಾಗುವುದೆಂದೂ ರೇಫಶಿಥಿಲವಾಗಿದ್ದಲ್ಲಿ ಸಂಧಿದೋಷವಾಗದೆಂದೂ ಹೇಳುವ ಸಲುವಾಗಿ ಕೇಶಿರಾಜನೇ ಕವಿರಾಜಮಾರ್ಗದಲ್ಲಿನ ಪದ್ಯವನ್ನು ಮಾರ್ಪಡಿಸಿಕೊಂಡಿರು ವುದು ಸಂಭವ. ಅವನ ಉದಾಹರಣೆಗೆ ಪೂರಕವಾಗುವಂತೆ ಬೇರೆ ಪದ್ಯವೇ ಇರುವುದ ರಿಂದ ಅವನು ಈ ರೀತಿ ಬದಲಾಯಿಸಿಕೊಂಡಿರಬಹುದೆಂದೂ ಊಹಿಸಲು ಅವಕಾಶವಿದೆ. ಆದ್ದರಿಂದ ಈ ಏಕೈಕ ಉದಾಹರಣೆಯಿಂದ ಯಾವುದನ್ನೂ ತೀರ್ಮಾನಿಸುವುದೂ ಕಷ್ಟ ವಾದೀತು.

"ಶ್ರೀವಿಜಯ ಪ್ರಭೂತಮುದನುಂ ತನಗಾಗಿಸಿದೊಂ ಕವೀಶ್ವರಂ' ಎಂಬ ದ್ವಿತೀಯ ಪರಿಚ್ಛೇದಾಂತ ಪದ್ಯದಲ್ಲಿರುವ ಪಂಕ್ತಿಗಳಿಗೆ, ಶ್ರೀವಿಜಯವಾದಿಗಳು ಮತ್ತು ಕವೀಶ್ವರ ವಾದಿಗಳು ಮಾಡಿರುವ ಭಿನ್ನ ತೆರನಾದ ವ್ಯಾಖ್ಯಾನವನ್ನು ಮತ್ತೊಮ್ಮೆ ವಿಶ್ಲೇಷಿಸಿ ತಮ್ಮ ಆಕ್ಷೇಪವನ್ನೂ ಪರಿಹಾರವನ್ನೂ ಚಿಟಗುಪ್ಪಿಯವರು ವ್ಯಕ್ತಪಡಿಸಿರುವರು.[34]

ಇಲ್ಲಿ ಲೇಖಕರ ವಿಚಾರಸರಣಿ ತೊಡಕಿನದು. ಅವರು ನೃಪತುಂಗ ಪಕ್ಷ ಮತ್ತು ಕವೀಶ್ವರ ಪಕ್ಷಗಳ ಸಮನ್ವಯವನ್ನೂ ಶ್ರೀವಿಜಯನ ಸ್ಥಾನಮಹತ್ವವನ್ನೂ ಏಕಕಾಲ ದಲ್ಲಿ ಸಮರ್ಥಿಸತೊಡಗಿರುವುದನ್ನು ಕಂಡರೆ ಆಶ್ಚರ್ಯವಾಗದಿರದು! ಕೃಲ್ಲಿಂಗಕ್ಕೂ ಕ್ರಿಯಾಪದಕ್ಕೂ ಇರುವ ಅಂತರವನ್ನು ಅವರು ಸುಲಭವಾಗಿ ಬಿಡಿಸಿ ಹೇಳಬಹು ದಾಗಿತ್ತು. ಕವಿರಾಜಮಾರ್ಗ ಗ್ರಂಥೋಕ್ತವಾದ ವಾಕ್ಯದಲ್ಲಿ 'ತನಗಾಗಿಸಿದಂ, ತನಗಾಗಿಸಿದೊಂ' ಎಂಬುದನ್ನು ಕೃಲ್ಲಿಂಗವಾಗಿ ಗ್ರಹಿಸಿದರೆ ಕವೀಶ್ವರ ಎಂಬ ಶಬ್ದ ಸಾರ್ಥಕವಾಗುತ್ತದೆ. ಇಲ್ಲಿ ವ್ಯಾಕರಣ ವಿರುದ್ಧವಾದುದೇನೂ ಇಲ್ಲ.[35] 'ತನಗಾಗಿ

ಸಿದಂ' ಎನ್ನುವುದು ಕೃಲ್ಲಿಂಗವಾದರೆ 'ತನಗಾಗಿಸಿದವನು', 'ತನಗಾಗಿಸಿದಂಥವನು' ಎಂದು ಅರ್ಥವಾಗುತ್ತದೆ. ಪ್ರಕೃತದಲ್ಲಿ ಇದನ್ನು ಕೇವಲ ಕ್ರಿಯಾಪದವೆಂದು ಭಾವಿಸಿದರೆ ಕವೀಶ್ವರ ಪದದ ಸಾರ್ಥಕ್ಯವುಂಟಾಗುವುದಿಲ್ಲ. ಹಿಂದಿನ ವಿದ್ವಾಂಸರು ಅರ್ಥೈಸಿರುವಂತೆ 'ಶ್ರೀವಿಜಯನಿಂದ ಉಂಟಾದ ಸಂತೋಷವನ್ನು ತನ್ನದಾಗಿಸಿಕೊಂಡಂಥವನು ಯಾರೋ ಅವನು ಕವಿಶ್ರೇಷ್ಠನು' ಎನ್ನುವುದು, 'ಶ್ರೀವಿಜಯನಿಂದ ಉಂಟಾದ ಸಂತೋಷವನ್ನು ಪಡೆದವನು ಕವಿಶ್ರೇಷ್ಠನು' ಎಂಬ ನಿರೂಪಣೆಗಿಂತ ಉತ್ತಮವಾಗಿದೆ. ಇನ್ನು ಅವರು ಹೇಳುವ ಸಮನ್ವಯದ ವಿಚಾರ ಅಷ್ಟು ಸುಲಭವೆನ್ನಿಸದು.[36] 'ಕವಿರಾಜಮಾರ್ಗ'ದ ಕರ್ತೃತ್ವದ ಬಗ್ಗೆ ಯಾವುದಾದರೂ ಒಂದು ನಿಲವನ್ನು ತಾಳಿ ಚರ್ಚಿಸುವುದು ಸಾಧುವೇ ವಿನಾ ಮೂರು ಪಕ್ಷಗಳನ್ನೂ ಎತ್ತಿ ಹಿಡಿಯುವ ಪ್ರಯತ್ನ ಸಮಂಜಸವೆನ್ನಿಸುವುದಿಲ್ಲ.

ಮುಂದೆ ಚಿಟಗುಪ್ಪಿಯವರು 'ಶ್ರೀವಿಜಯ' ಎಂಬುದು ನೃಪತುಂಗನ ಅಂಕಿತವಿರಬೇಕೆಂದು ಸ್ವೀಕರಿಸಿ, ಆ ಮೂಲಕ 'ಪರಮ ಶ್ರೀವಿಜಯ' ಪ್ರಯೋಗದ ಬಗ್ಗೆ ಇತರ ವಿದ್ವಾಂಸರ ಆಕ್ಷೇಪಣೆಗಳನ್ನು ನಿರಾಕರಿಸಲು ತೊಡಗಿ ತಮ್ಮ ದೃಷ್ಟಿಕೋನವೇನೆಂಬುದನ್ನು ಸೂಚಿಸಿರುವರು.[37] ಆದರೆ 'ಪರಮ ಶ್ರೀವಿಜಯ' ಪ್ರಯೋಗದ ಮಹತ್ವವನ್ನೂ ಔಚಿತ್ಯವನ್ನೂ ಸಾಧಿಸುವ ಪ್ರಯತ್ನದಲ್ಲಿ ಪ್ರಕೃತ ಲೇಖಕರು ನಿರ್ಣಯಿಸಿರುವ ತೀರ್ಮಾನವು ತುಂಬ ದುರ್ಬಲವಾಗಿದೆ. ಅಲ್ಲದೆ, ಅನುಸರಿಸಿರುವ ಕ್ರಮವೂ ವೈಜ್ಞಾನಿಕವೆನ್ನಿಸುವುದಿಲ್ಲ.

ನೃಪತುಂಗನನ್ನು ಕುರಿತು 'ಕವಿರಾಜಮಾರ್ಗ'ದಲ್ಲಿ ಪ್ರಥಮ ಪುರುಷದಲ್ಲಿ ಅಲ್ಲಲ್ಲಿಯೇ ಬರುವ ಕೆಲವು ಉಕ್ತಿಗಳನ್ನು ಉದಾಹರಿಸಿ, ಲೇಖಕರು ಆ ತೆರನಾದ ಸಂಪ್ರದಾಯದಲ್ಲಿ ಸಂಸ್ಕೃತದಲ್ಲಿ ಪ್ರಚಲಿತವಾಗಿರುವ ಮನು, ಜೈಮಿನ್ಯಾದಿಗಳ ನಿದರ್ಶನಗಳನ್ನಿತ್ತು ಆ ಮೂಲಕ ನೃಪತುಂಗ ಕರ್ತೃತ್ವವನ್ನು ನಿರಾಕರಿಸುವಂತಿಲ್ಲವೆಂದು ತಿಳಿಸಿ, ಆ ರೀತಿ ನೃಪತುಂಗನು ಹೇಳಿರುವುದರ ಔಚಿತ್ಯವೇನೆಂದು ಮುಂದೆ ವಿವರಿಸಿರುವರು.[38] ಆದರೆ ಉತ್ತಮಪುರುಷಾರ್ಥದಲ್ಲಿ ನಮ್ಮ ಪ್ರಾಚೀನ ಕವಿಗಳು ಪ್ರಥಮ ಪುರುಷವನ್ನು ಬಳಸುವುದೇನೂ ಹೊಸತಲ್ಲ. ಇಂಥ ಪ್ರಯೋಗ ವಿರಳವಾಗಿ ಬರುವುದಕ್ಕೂ ಮೇಲಿಂದ ಮೇಲೆ ಬರುವುದಕ್ಕೂ ತುಂಬ ವ್ಯತ್ಯಾಸವಿದೆ. ಒಂದೇ ವಾಕ್ಯದಲ್ಲಿ ಪ್ರಥಮ ಮತ್ತು ಉತ್ತಮಪುರುಷಗಳ ಮಿಶ್ರಣವಿರುವ ನಿದರ್ಶನವೂ ಕಂಡುಬರುತ್ತಿರಬೇಕಾದರೆ ಇದು ಕೇವಲ ನೃಪತುಂಗನು ತಾನು ಅನುಸರಿಸುತ್ತಿರುವ ಆಲಂಕಾರಿಕರಿಂದ ಭಿನ್ನವಾಗಿ ಅಭಿಪ್ರಾಯಪಡುವುದಕ್ಕೆ ಅನ್ವಯಿಸುತ್ತವೆಯೆಂಬುದು ತೃಪ್ತಿಕರವೆನ್ನಿಸುವುದಿಲ್ಲ. ಒಂದು ವೇಳೆ ಹಾಗೆ ನೃಪತುಂಗನು ತನ್ನ ಅಭಿಪ್ರಾಯವನ್ನು ಅನ್ಯಕರ್ತೃವೊಂದಿಗೆ, ಇಲ್ಲವೆ ವಿದ್ವತ್ಸಭೆಯಲ್ಲಿ ವಿಚಾರಮಾಡಿ ತಿಳಿಸಿದನೆಂಬುದಾಗಿ ಗ್ರಹಿಸಿದರೆ ಈ ವಿಲಕ್ಷಣ ಪ್ರಯೋಗಗಳ ಬೆಲೆ ಹೆಚ್ಚಾಗಿ ಅದು ವಿಶಿಷ್ಟವೆನ್ನಿಸುವುದೆನ್ನುವುದರಲ್ಲಿ ಸಂದೇಹವಿಲ್ಲ. ಕನ್ನಡದ ಜಾಯಮಾನಕ್ಕೆ ಅನುಗುಣವಾದ ವಾಕ್ಯಸರಣಿ ಯಾವುದೆಂಬುದನ್ನೂ ಇಲ್ಲಿ ಲಕ್ಷಿಸಬೇಕಾದ ವಿಷಯ.

ಪರಿಚ್ಛೇದಾಂತ ಗದ್ಯದಲ್ಲಿರುವ 'ಅನುಮತ' ಎಂಬ ಪದದ ಅರ್ಥದ ಬಗ್ಗೆ ಇತರ

ವಿದ್ವಾಂಸರು ಎತ್ತಿರುವ ಆಕ್ಷೇಪವನ್ನು ಖಂಡಿಸಿ, ಅದು ನೃಪತುಂಗ ಪರವಾಗಿದೆಯೆಂಬುದಾಗಿ ಲೇಖಕರು ಬಳಿಕ ಸಮರ್ಥಿಸಿರುತ್ತಾರೆ:[೩೭] ಲೇಖಕರ ಈ ವಾದಸರಣಿಯೇನೋ ಮೆಚ್ಚಬಹುದಾದರೂ, ಇದನ್ನು ವಿವೇಚಿಸುವಲ್ಲಿ ಪರಿಚ್ಛೇದಾಂತ ಪದ್ಯ ಮತ್ತು ಗದ್ಯಗಳೆರಡನ್ನೂ ಒಟ್ಟಿಗೆ ಪರಿಗಣಿಸಬೇಕಾದುದು ಅಗತ್ಯ. ಪದ್ಯದಲ್ಲಿ ಶ್ರೀ ವಿಜಯನ ಹೆಸರು ಉಕ್ತವಾಗಿರುವುದರಿಂದ ಗದ್ಯದಲ್ಲಿ ಅದರ ಪುನರಾವೃತ್ತಿಯಿಲ್ಲದಿದ್ದರೂ ಬಾಧಕವಿಲ್ಲ. ಕವಿಯು ತನ್ನ ಆಶ್ರಯದಾತನ ಒಪ್ಪಿಗೆಯಂತೆ ಈ ಕೆಲಸವನ್ನು ಕೈಕೊಂಡಿರುವುದರಿಂದ ಅದಕ್ಕೆ ತಕ್ಕಂತೆ 'ಅನುಮತ' ಎಂಬ ಶಬ್ದ ಉಚಿತವಾಗಿದೆ. ವಿರಚಿತ, ಪ್ರಣೀತ ಮೊದಲಾದ ಅರ್ಥಗಳಿಗೆ ಹೊರತಾದ 'ಅನುಮತ' ಎಂಬ ವಿಶಿಷ್ಟ ಶಬ್ದದ ಬಳಕೆಯಿಂದಲೇ ಕವಿಯ ಇಂಗಿತ ಸ್ಪಷ್ಟವಾಗುತ್ತದೆ. ಒಂದು ವೇಳೆ ಲೇಖಕರು ಮುಂದುವರಿದು ತಿಳಿಸಿರುವಂತೆ, ಪ್ರಕೃತದಲ್ಲಿ ನೃಪತುಂಗನು ದಂಡಿಭಾಮಹ ಮೊದಲಾದವರ ಅಭಿಪ್ರಾಯವನ್ನು ಸ್ವೀಕರಿಸಿ, ಅವರಿಗೆ ಒಪ್ಪಿಗೆಯಾಗುವಂತೆ ಇಲ್ಲಿ ಬರೆದಿದ್ದೇನೆಂದು ಹೇಳಬಯಸಿದರೂ 'ಅನುಮತ' ಶಬ್ದ 'ರಚಿತ' ಎಂಬ ಅರ್ಥವನ್ನು ಕೊಡಲಾರದೆಂಬುದು ಖಚಿತ. ಪ್ರಕೃತದಲ್ಲಿಯಾದರೋ ನೃಪತುಂಗನಿಗೆ ಒಪ್ಪಿಗೆಯಾದಂತೆ ಅನ್ಯಕರ್ತೃವೊಬ್ಬನು ಈ ಕೆಲಸವನ್ನು ನಿರ್ವಹಿಸಿರುವನೆಂದು ವಿರೋಧಪಕ್ಷಗಳವರು ಎಣಿಸಿರುವುದರಲ್ಲಿ ಅಂತಹ ಅಪಚಾರವೇನೂ ಕಂಡುಬರುವುದಿಲ್ಲ.

ಇಂತೆಯೇ ಲೇಖಕರು 'ಉದಿತ' 'ಮಹಾತ್ಮ' ಮೊದಲಾದ ಪ್ರಯೋಗಗಳಲ್ಲಿ ತನುಗೂ ಇತರ ವಿದ್ವಾಂಸರಿಗೂ ಇರುವ ಭಿನ್ನಾಭಿಪ್ರಾಯವನ್ನು ವಿವರಿಸಿರುವರು. ಒಂದೊಂದು ಶಬ್ದಕ್ಕೂ ಅನೇಕ ತೆರನಾದ ಅರ್ಥವ್ಯಾಪ್ತಿಯಿರುವುದರಿಂದ ಆಯಾ ಪ್ರಯೋಗದ ಹಿನ್ನೆಲೆಯಲ್ಲಿ ಅದನ್ನು ಗ್ರಹಿಸಬೇಕಾಗುತ್ತದೆ. 'ಉದಿತ' ಎನ್ನುವುದಕ್ಕೆ 'ರಚಿತ' ಎಂಬ ಅರ್ಥ ಸಂದರ್ಭಾನುಸಾರವಾಗಿ ಹೇಗೆ ಸೂಕ್ತವಾಗಿ ಕಂಡುಬರಬಹುದೋ ಹಾಗೆಯೇ 'ಉಂಟಾದ' ಎಂಬ ಅರ್ಥವೂ ಸಮಂಜಸವಾಗಬಹುದು. ಆದ್ದರಿಂದ, ಈ ಸೂಕ್ಷ್ಮ ವಿಚಾರಗಳಲ್ಲಿ ವಿದ್ವಾಂಸರಿಗೆ ಭಿನ್ನಾಭಿಪ್ರಾಯ ಬರುವುದು ಸಹಜ. 'ಅತಿಶಯಧವಳೋರ್ವಿಪ ಉದಿತ ಅಳಂಕೃತಮತಿ' ಎಂಬಲ್ಲಿ 'ಅತಿಶಯಧವಳೋರ್ವಿಪನಾದ ನೃಪತುಂಗನಿಂದ ಉದಿಸಿದ ಅಲಂಕಾರಶಾಸ್ತ್ರದ ಜ್ಞಾನ' ಎಂಬ ಎಂ. ವಿ. ಸೀತಾರಾಮಯ್ಯನವರ ವ್ಯಾಖ್ಯಾನದಿಂದ ನೃಪತುಂಗನ ಹಿರಿಮೆಗೇನೂ ಕಡಮೆಯಾದಂತಿಲ್ಲ. ನೃಪತುಂಗನ ಕರ್ತೃತ್ವದ ಬಗ್ಗೆ ನಾನಾ ತೆರನಾಗಿ ಶಂಕೆಯಿರುವಲ್ಲಿ 'ಉದಿತ' ಎಂದರೆ 'ರಚಿತ' ಎಂಬುದಾಗಿ ಗ್ರಹಿಸುವುದು ಕಷ್ಟ. ಪರ್ಯಾಯವಾಗಿ 'ಉಂಟಾದ' ಇಲ್ಲವೆ 'ಹುಟ್ಟಿದ' ಎಂಬ ಅರ್ಥವನ್ನು ನಿರಾಕರಿಸುವಂತಿಲ್ಲ.

ಭಟ್ಟಾಕಳಂಕ ಮತ್ತು 'ಶಬ್ದಮಣಿದರ್ಪಣ'ದ ವ್ಯಾಖ್ಯಾನಕಾರರ ಅಭಿಪ್ರಾಯಗಳನ್ನು ಅರ್ವಾಚೀನರೆಂದು ತಿರಸ್ಕರಿಸುವುದು ಸಹ ಸಾಧುವಲ್ಲವೆಂದು ಲೇಖಕರು ಅಭಿಪ್ರಾಯಪಡುವರು. ಅವರಿಗಿಂತಲೂ ಪ್ರಾಚೀನರಾದ ದುರ್ಗಸಿಂಹ ಮತ್ತು ಕೇಶಿರಾಜರ ಅಭಿಪ್ರಾಯಗಳು ಹೆಚ್ಚು ಖಚಿತವಾಗಿಯೂ ನಿರ್ದುಷ್ಟವಾಗಿಯೂ ಕಂಡುಬರುತ್ತಿರುವಲ್ಲಿ

ಇತ್ತೀಚಿನವರ ಅಭಿಪ್ರಾಯವನ್ನು ಕೈಬಿಡುವುದು ತಪ್ಪೇನಲ್ಲ. ಶ್ರೀವಿಜಯವಾದಿಗಳು ಈ ಬಗ್ಗೆ ಇರುವ ಪ್ರಕೃತ ಹೇಳಿಕೆಗಳ ಕರ್ತೃಸಂದೇಹವನ್ನೂ ವ್ಯಕ್ತಪಡಿಸಿರುವಲ್ಲಿ ಕೇವಲ ರೂಢಿಗೋಸ್ಕರವಾಗಿ ಅವುಗಳನ್ನು ಹಾಗೆಯೇ ಒಪ್ಪಿಕೊಳ್ಳುವುದೂ ಶಾಸ್ತ್ರ ಧರ್ಮಕ್ಕೆ ತಕ್ಕುದೆನ್ನಿಸುವುದಿಲ್ಲ.

ಮುಳಿಯ ತಿಮ್ಮಪ್ಪಯ್ಯನವರ ಚಕ್ರಬಂಧವಾದವನ್ನು ಕುರಿತು ಪ್ರಕೃತ ಲೇಖಕರು "ಇಲ್ಲಿಯ ಅಕ್ಷರಗಳ ಆಯ್ಕೆ, ಪದಗಳ ಜೋಡಣೆ, ಅರ್ಥಗಾರಿಕೆ ಎಲ್ಲವೂ ಸರಿಯೆಂದು ಇಟ್ಟುಕೊಂಡರೂ ವ್ಯವಹಾರದ ದೃಷ್ಟಿಯಿಂದ ಈ ಪಕ್ಷದ ಭೂಮಿಕೆ ಗ್ರಾಹ್ಯವಾಗದು" ಎಂದು ಅದನ್ನು ಅತ್ತ ಒತ್ತರಿಸಿ, ಪ್ರಕೃತ ಗ್ರಂಥವು ನೃಪತುಂಗನದೆಂದು ಭಾವಿಸುವಲ್ಲಿ ಅಡ್ಡಬರುವ ಆತ್ಮಸ್ತುತಿಯ ಸಮಸ್ಯೆಯನ್ನು ಬಿಡಿಸಲೆಳಸಿ ಕವೀಶ್ವರವಾದಿಗಳು ನಿರ್ದೇಶಿಸುವ ಕವೀಶ್ವರನೂ ನೃಪತುಂಗನೂ ಒಬ್ಬನೇ ವ್ಯಕ್ತಿಯಿರಬೇಕೆಂದು ಹೊಸತಾದ ಒಂದು ಸಂಬಂಧವನ್ನು ಸೋಜಿಗವಾದ ರೀತಿಯಲ್ಲಿ ಕಲ್ಪಿಸುವರು. ದ್ವಿತೀಯ ಪರಿಚ್ಛೇದಾಂತ ಪದ್ಯದಲ್ಲಿ ಉಕ್ತವಾದ ಕವೀಶ್ವರನಿಗೂ ಮದರಾಸು ಸಂಸ್ಕರಣದಲ್ಲಿನ ಮೂರನೆಯ ಪರಿಚ್ಛೇದದ ೨೩೩ನೆಯ ಪದ್ಯದಲ್ಲಿ ೪ನೆಯ ಪಾದದಲ್ಲಿ ಕಂಡುಬರುವ 'ಉದಾರ ಕವೀಶ್ವರ' ಎಂಬುದಕ್ಕೂ ಅಭೇದವನ್ನು ಕಲ್ಪಿಸಿ, ಇಲ್ಲಿನ ವಿಶೇಷಣ ನೃಪತುಂಗನಿಗೆ ಅನ್ವಯಿಸುವುದರಿಂದ ಶ್ರೀವಿಜಯ ಪ್ರಣೀತವಾದ 'ಕವಿಮಾರ್ಗ'ವನ್ನು 'ಕವಿರಾಜಮಾರ್ಗ'ವನ್ನಾಗಿ ಪರಿವರ್ತಿಸಿದವನು ನೃಪತುಂಗನಿರಬೇಕೆಂದು ಭಾವಿಸುವರು. ದ್ವಿತೀಯ ಪರಿಚ್ಛೇದಾಂತ ಪದ್ಯದಲ್ಲಿ 'ಒಂದೆ ಕಾವ್ಯದಿಂ' ಎಂದು ಹೇಳಿರುವುದರಿಂದ ನೃಪತುಂಗನು ಈ ಒಂದೇ ಕೃತಿಯ ನಿರ್ಮಾಪಕನೆಂಬುದು ಸರಿಹೊಂದುವುದೆಂದು ಲೇಖಕರ ವಾದ. 'ಶ್ರೀವಿಜಯ' ಎನ್ನುವುದು ನೃಪತುಂಗನ ಅಂಕಿತ ಮಾತ್ರವಲ್ಲದೆ ಅದು ಆತನ ಗುರುವಾದ ಜಿನಸೇನನ ಹೆಸರೂ ಹೌದೆಂದು ಭಾವಿಸಿ, ತಮ್ಮ ಇತ್ಯರ್ಥವನ್ನು ಈ ರೀತಿಯಾಗಿ ಸಂಗ್ರಹಿಸಿ ಹೇಳಿರುವರು :

" 'ಶ್ರೀವಿಜಯ' ನೃಪತುಂಗನ ಅಂಕಿತ (ಆಚಾರ್ಯನಾಮಾಂಕ) 'ಶ್ರೀ ವಿಜಯ ಪ್ರಭೂತಮ' ನೃಪತುಂಗ–ಸೂಚಕ–ಪದ ಮತ್ತು ಕವೀಶ್ವರ ನೃಪತುಂಗ ಏಕವ್ಯಕ್ತಿ ಇರುವ ಸಂಭಾವ್ಯತೆ ಇವುಗಳನ್ನು ಗಮನಿಸಿ, ಮೊದಲನೆಯ ಪರಿಚ್ಛೇದಾಂತ ಪದ್ಯದಲ್ಲಿರುವ 'ಶ್ರೀ ವಿಜಯ ಪ್ರಭೂತಮನಿದಂ' ಪದಗಳನ್ನು ರಾಜಪುರೋಹಿತರು ಅರ್ಥವಿಸಿದ ಮೇರೆಗೆ ನೃಪತುಂಗನಿಗೆ ಅನ್ವಯಿಸಿಕೊಂಡು, ಶ್ರೀವಿಜಯನ ಅಂದರೆ ತನ್ನ ಗುರುವಿನ ಮೂಲಕೃತಿಯನ್ನು (ಕವಿಮಾರ್ಗವನ್ನು ?) ಶ್ರೀವಿಜಯಪ್ರಭೂತಮನು ಅಂದರೆ ನೃಪತುಂಗನು ಪರಿಷ್ಕರಿಸಿ ಕವಿರಾಜಮಾರ್ಗದ ರೂಪದಲ್ಲಿ (ಈ ಮಾಟಿಕ್ಕೆಯಿಂ) ಕವಿವೃಂದಕ್ಕೆ ಸಾದರಪಡಿಸಿದನೆಂದೂ, ಎರಡನೆಯದರಲ್ಲಿ ಶ್ರೀ ವಿಜಯನ ಮೂಲಕೃತಿಯಿಂದ ಒದಗುವ ಆನಂದದ ಬಗೆಯ ಆನಂದವನ್ನು ಕವೀಶ್ವರ ಅಂದರೆ ನೃಪತುಂಗನು ತನ್ನ ಈ ಕೃತಿಯಿಂದ, ಕವಿರಾಜಮಾರ್ಗದಿಂದ, ಅನುಭವಿಸಿದನೆಂದೂ ಮೂರನೆಯದರಲ್ಲಿ 'ಪರಮಶ್ರೀವಿಜಯ ಪ್ರಭೂತಿಜಯಶಂ' ಅಂದರೆ ತನ್ನ ಗುರು ಪರಮ

ಶ್ರೀವಿಜಯನ ಪ್ರಭೂತಿಯಿಂದ (ಕೃತಿಯಿಂದ) 'ಜ' ಅಂದರೆ ರೂಪಗೊಂಡಿರುವುದರ (ಕವಿ ರಾಜಮಾರ್ಗದ) ಯಶಂ, ಯಶಸ್ಸು ಆಚಂದ್ರಾರ್ಕವಾಗಿ ನೆಲೆಗೊಳ್ಳಲಿ ('ನೆಲೆಗೊಳ್ಗಾ ಚಂದ್ರತಾರಂಬರಂ') ಎಂದೂ ಬಗೆಯುವಲ್ಲಿ ಮೂರೂ ಪರಿಚ್ಛೇದಾಂತ–ಪದ್ಯಗಳಲ್ಲಿಯ ಈ ಉಕ್ತಿಗಳನ್ನು ನೃಪತುಂಗ ಪರವಾಗಿ ಸಮನ್ವಯಿಸಬಹುದಾಗಿದೆ."

ಚಿಟಗುಪ್ಪಿಯವರು ನೃಪತುಂಗನ ಪಕ್ಷವನ್ನು ಎತ್ತಿಹಿಡಿಯುವ ಭರದಲ್ಲಿ ಮೂರೂ ಪಕ್ಷಗಳ ಅಭಿಪ್ರಾಯಗಳನ್ನು ತಮಗೆ ತೋರಿದಂತೆ ಸಮನ್ವಯಗೊಳಿಸಲು ಯತ್ನಿಸಿ ತಮ್ಮ ಇತ್ಯರ್ಥವನ್ನು ವ್ಯಕ್ತಪಡಿಸಿದ್ದಾರೆ.

ಕೊನೆಗೆ 'ಶ್ರೀವಿಜಯನಾರು ?' ಎಂಬ ಪ್ರಶ್ನೆಯನ್ನೆತ್ತಿ, ಈ ಮೊದಲು ದ. ರಾ. ಬೇಂದ್ರೆಯವರು 'ಸಮಂತಭದ್ರನೇ ಶ್ರೀವಿಜಯನಿರಬಹುದೆ ?' ಎಂದು ಮಾಡಿದ ಊಹೆಯನ್ನು ನಿರಾಧಾರವಾದುದೆಂದು ತಿರಸ್ಕರಿಸಿ, ನೃಪತುಂಗನ ಗುರುವಾದ ಜಿನಸೇನನೇ ಶ್ರೀವಿಜಯನೆಂದು ಗುರುತಿಸುವ ಸಾಹಸವನ್ನು ಮಾಡುವರು. ಜಿನಸೇನನ 'ಆದಿಪುರಾಣ'ದ ಭಾಗದಲ್ಲಿಯ ಕೆಲವು ಪದ್ಯಗಳಿಗೂ 'ಕವಿರಾಜಮಾರ್ಗ'ದಲ್ಲಿನ ಕೆಲವು ಪದ್ಯಗಳಿಗೂ ಇರುವ ಸಾದೃಶ್ಯವನ್ನು ತೋರಿ, ತಮ್ಮ ಈ ನಿಲವನ್ನು ದೃಢಪಡಿಸಿಕೊಳ್ಳು ವರು. ಆದಾಗ್ಗೂ 'ಜಿನಸೇನನು ಕನ್ನಡದಲ್ಲಿ ಬರೆದಿದ್ದನೆ ?' ಎಂಬ ಸಂದೇಹ ಅವರನ್ನು ಕಾಡದೆ ಇಲ್ಲ. "ಇದಕ್ಕೆ ಪ್ರತ್ಯಕ್ಷ ಆಧಾರಗಳಿಲ್ಲ" ಎಂದು ಉತ್ತರವನ್ನು ಕಂಡುಕೊಂಡಿದ್ದರೂ, ತಮ್ಮ ಪೂರ್ವನಿರ್ಧಾರಿತ ಅಭಿಪ್ರಾಯವನ್ನು ಬಿಟ್ಟುಕೊಟ್ಟಿಲ್ಲ. ಅಸಮಂಜಸ ವೆಂದು ತೋರಿಬರುವ ಈ ತೀರ್ಮಾನದ ಬಗೆಗೆ, ಎಂ. ವಿ. ಸೀತಾರಾಮಯ್ಯನವರು, "ಶ್ರೀ ಜಿನಸೇನಾಚಾರ್ಯರ ಕಾಲ ಕ್ರಿ.ಶ. ೭೭೩–೮೪೩. ಕವಿರಾಜಮಾರ್ಗ ರಚನೆಯ ಕಾಲ ಎಷ್ಟು ಹಿಂದಕ್ಕೆ ಒಯ್ದರೂ ೮೫೦ಕ್ಕಿಂತ ಮುಂಚಿನದಾಗಲಾರದು" ಎಂದು ಹೇಳಿರುವ ಮಾತನ್ನೇ ನಾವೂ ಪುನರುಚ್ಚರಿಸಬಹುದು. ಮುಖ್ಯವಾಗಿ ಚಿಟಗುಪ್ಪಿ ಅವರು 'ಶ್ರೀವಿಜಯ' ಎನ್ನುವುದನ್ನು ನೃಪತುಂಗನ ಅಂಕಿತವೆಂದು ಸಾಕಷ್ಟು ಪ್ರಮಾಣ ಗಳಿಂದ ಇತ್ಯರ್ಥ ಮಾಡಿದ್ದಲ್ಲಿ, ಅವರ ಈ ಕಾರ್ಯ ಸಫಲವಾಗುತ್ತಿತ್ತು.

'ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ' ಎಂಬ ಈಚಿನ ತಮ್ಮ ಗ್ರಂಥದಲ್ಲಿ ಎಂ. ಎಂ. ಕಲಬುರ್ಗಿ ಅವರು 'ಕವಿರಾಜಮಾರ್ಗ'ದ ಹಸ್ತಪ್ರತಿಗಳಲ್ಲಿರುವ ಪಾಠಾಂತರ ಗಳು, ಅಲ್ಲಿಯ ಕೆಲವು ಪದ್ಯಗಳು 'ಛಂದೋಂಬುಧಿ', 'ಶಬ್ದಮಣಿದರ್ಪಣ' ಮೊದಲಾದ ಗ್ರಂಥಗಳಲ್ಲಿ ತುಸು ಮಾರ್ಪಾಡಾಗಿ ಕಂಡುಬರುವುದು, ಜೈನ ಮತ್ತು ವೈದಿಕ ಧಾರ್ಮಿಕ ಕಲ್ಪನೆಗಳ ಮಿಶ್ರಣ—ಇವೇ ಮೊದಲಾದುವನ್ನು ಗಮನಿಸಿ, ಇದು ದುರ್ಗಸಿಂಹನು ಸೂಚಿಸುವಂತೆ ಒಮ್ಮೆ 'ಕವಿಮಾರ್ಗ'ವೆಂಬ ಗ್ರಂಥವೇ ಆಗಿದ್ದು, ಆ ತರುವಾಯ 'ಕವಿ ರಾಜಮಾರ್ಗ'ವಾಗಿ ಪರಿವರ್ತಿತವಾಯಿತು ಎಂದು ಅಭಿಪ್ರಾಯಪಡುವರು. ಈ ಪರಿ ವರ್ತನೆಯಲ್ಲಿ ಶ್ರೀವಿಜಯ ಮತ್ತು ನೃಪತುಂಗರಿಬ್ಬರ ಪಾತ್ರವೂ ಇರಬಹುದೆಂದು ಅವರ ಎಣಿಕೆ. ಈ ಸಂದರ್ಭದಲ್ಲಿ ಒಂದು ಸಂದೇಹವು ನಮ್ಮನ್ನು ಬಾಧಿಸದೆ ಇರುವುದಿಲ್ಲ. ದುರ್ಗಸಿಂಹನ ಕಾಲ ೧೦೩೧ ಎಂದು ಇಟ್ಟುಕೊಂಡಲ್ಲಿ, ಆ ಕಾಲದಲ್ಲಿ

ಶ್ರೀವಿಜಯಕೃತ ಗ್ರಂಥವು ಇನ್ನೂ 'ಕವಿಮಾರ್ಗ'ವಾಗಿಯೇ ಉಳಿದಿತ್ತು ಎನ್ನಬೇಕಾಗುತ್ತದೆ. ಆದರೆ ನೃಪತುಂಗನ ಕಾಲವನ್ನು ಪರಿಗಣಿಸಿ ಕವಿರಾಜಮಾರ್ಗ ಕ್ರಿ.ಶ. ಸು. ೮೭೦ರ ವೇಳೆಗಾಗಲೇ ರಚಿತವಾಗಿರಬಹುದೆಂದು ಎಂ. ವಿ. ಸೀತಾರಾಮಯ್ಯನವರು ಸಕಾರಣವಾಗಿ ಸೂಚಿಸಿರುವುದರಿಂದ, ದುರ್ಗಸಿಂಹನ ಕಾಲಕ್ಕೆ ಅದು 'ಕವಿರಾಜಮಾರ್ಗ'ವಾಗಿ ಪರಿವರ್ತನೆಯಾಗಿರಬೇಕಾದ್ದು ಅನಿವಾರ್ಯವೆನ್ನಿಸುತ್ತದೆ. ಈ ಕ್ಲೇಶವನ್ನು ಪರಿಹರಿಸುವ ಸಲುವಾಗಿ, ಶ್ರೀವಿಜಯ ಕೃತ ಎರಡು ಗ್ರಂಥಪಾಠಗಳು ಇದ್ದುವು ಎನ್ನುವುದಕ್ಕೆ ಬದಲಾಗಿ, ಶ್ರೀವಿಜಯನು ನೃಪತುಂಗನ ಆಶ್ರಯವನ್ನು ಪಡೆದು, ರಾಜನ ಅನುಮತಿಯಂತೆ ಪ್ರಕೃತ ಗ್ರಂಥವನ್ನು ರಚಿಸಿದನೆಂದೂ ಹಾಗೆ ರಚಿಸುವಲ್ಲಿ ತನ್ನ ಸ್ವಾಮಿಯ ಸೂಚನೆಗಳನ್ನೂ ಸ್ವಾಭಿಪ್ರಾಯಗಳನ್ನೂ ಸಂದರ್ಭೋಚಿತವಾಗಿ ಗ್ರಂಥವಿಷಯದಲ್ಲಿ ಹಾಸುಹೊಕ್ಕಿನಂತೆ ಬೆರಸಿ ಹೇಳಿದನೆಂದೂ ತಿಳಿಯುವುದು ಗ್ರಾಹ್ಯವೆನ್ನಿಸುತ್ತದೆ. ಎಂ. ಎಂ. ಕಲಬುರ್ಗಿ ಅವರು ಈ ಸಂದರ್ಭದಲ್ಲಿ ಶ್ರೀವಿಜಯನನ್ನು ಕುರಿತಂತೆ ಮಧುರನ 'ಧರ್ಮನಾಥ ಪುರಾಣದಲ್ಲಿ' ಉಕ್ತವಾಗಿರುವ 'ಸಭಾಮಧ್ಯ ಲಬ್ಧವರಂ ಶ್ರೀವಿಜಯಂ' ಎಂಬ ಮಾತನ್ನು ಬೆಳಕಿಗೆ ತಂದಿದ್ದಾರೆ. ಇಂತೆಯೇ ಶ್ರೀವಿಜಯನ ಅಸ್ತಿತ್ವದ ಮೇಲೆ ಬೆಳಕನ್ನು ಬೀರಬಲ್ಲ ಮಣ್ಣೆ ತಾಮ್ರಶಾಸನವೊಂದರತ್ತ ನಮ್ಮ ಗಮನ ಸೆಳೆದಿದ್ದಾರೆ.[40]

ಕವಿರಾಜಮಾರ್ಗದ ಕರ್ತೃತ್ವವನ್ನು ಪ್ರಸ್ತಾಪಿಸುತ್ತ, ಜಿ. ವೆಂಕಟಸುಬ್ಬಯ್ಯನವರು ಇತ್ತೀಚೆಗೆ ಬೆಳಕಿಗೆ ಬಂದ ಎರಡನೆಯ ನಾಗವರ್ಮನ 'ವರ್ಧಮಾನಪುರಾಣ'ದಲ್ಲಿರುವ "....ಪೇಳ್ದಿಂ ರಘುವಂಶ ಮಹಾಪುರಾಣಮಂ ಶ್ರೀವಿಜಯಂ" ಎಂಬುದನ್ನು ಉಲ್ಲೇಖಿಸಿ, ಈ ಮೂಲಕ ಶ್ರೀವಿಜಯನು 'ರಘುವಂಶ ಮಹಾಪುರಾಣ' ಎಂಬ ಕೃತಿಯನ್ನು ಬರೆದಿದ್ದನೆಂಬ ಹೊಸ ಅಂಶವನ್ನು ತಿಳಿಸಿರುತ್ತಾರೆ.[40ಅ] ಕವಿರಾಜಮಾರ್ಗದಲ್ಲಿ ಪ್ರಾಸಂಗಿಕವಾಗಿ ಬಂದಿರುವ ರಾಮಾಯಣ ಸಂಬಂಧವಾದ ಪದ್ಯಗಳನ್ನು ಗ್ರಂಥಕರ್ತೃವೇ ಬರೆದಿರಬೇಕೆಂಬ ವಿದ್ವಾಂಸರ ಊಹೆಗೆ ಇದು ನೆರವಾದೀತು, ಅಭಿನ್ನರಾಗಿದ್ದ ಪಕ್ಷದಲ್ಲಿ.

## ಸದ್ಯದ ನಿಲವು : 'ಕವಿರಾಜಮಾರ್ಗ'ದ ಕರ್ತೃ ಶ್ರೀವಿಜಯ

ಈವರೆಗೆ ಆದ್ಯವೂ, ವಿಶಿಷ್ಟವೂ ಆದ 'ಕವಿರಾಜಮಾರ್ಗ'ವನ್ನು ಕುರಿತ ಆಯಾ ವಿದ್ವಾಂಸರ ಅಭಿಪ್ರಾಯಗಳ ಬಲಾಬಲಗಳನ್ನು ವಿಶೇಷವಾಗಿ ವಿಮರ್ಶಿಸುವ ಗೊಡವೆಗೆ ಹೋಗದೆ, ಈ ಸಮಸ್ಯೆಯನ್ನು ಪರಿಹರಿಸುವುದರಲ್ಲಿ ಇವರ ಮುಖ್ಯ ನಿಲವೇನೆಂಬುದನ್ನು ಗಮನಿಸಿ ಸಮೀಕ್ಷಿಸಲಾಯಿತು. ಈಗ ಸದ್ಯದ ನಿಲವೇನೆಂಬುದನ್ನು ಸೂಚಿಸಬಹುದಾಗಿದೆ.

ಕೆ. ಬಿ. ಪಾಠಕ್ ಈ ಗ್ರಂಥದ ಪ್ರಥಮ ಸಂಪಾದಕರಾದುದರಿಂದ ಅವರು ನೃಪತುಂಗನ ಪಕ್ಷವನ್ನು ವಹಿಸಿ, ಮುಂದಿಟ್ಟ ಅಭಿಪ್ರಾಯಗಳೇ ಈ ಎಲ್ಲ ವಿಚಾರವಿಮರ್ಶೆಗಳ ಅಡಿಗಲ್ಲು. ಅವರ ಈ ಗ್ರಂಥವನ್ನು ಅವಲೋಕಿಸುವ ನಿಮಿತ್ತದಲ್ಲಿ, ಫ್ಲೀಟ್

ಅವರು ಬರೆದ ವಿದ್ವತ್ಪೂರ್ಣವಾದ ಲೇಖನವೇ ಈ ಸಮಸ್ಯೆಗೆ ಅಂಕುರಾರ್ಪಣ. ಇವರು ಕವೀಶ್ವರನ ಬಗ್ಗೆ ಮಾಡಿದ ಸಮರ್ಥನೆ ಎಷ್ಟೇ ದುರ್ಬಲವಾಗಿದ್ದರೂ ಶ್ರೀವಿಜಯನ ಪಕ್ಷದತ್ತ ವಿದ್ವಾಂಸರ ಗಮನ ಹರಿಯಲು ಅದು ಕಾರಣವಾಯಿತೆನ್ನುವುದನ್ನು ಅಲ್ಲ ಗಳೆಯುವಂತಿಲ್ಲ 'ಶ್ರೀವಿಜಯರ ಕವಿಮಾರ್ಗ'ದ ಕಲ್ಪನೆಗೆ ಇವರೇ ಕಾರಣಕರ್ತರು. ಈ ಸಿದ್ಧಾಂತವನ್ನೇ ಮುಂದುವರಿಸಿದ ಮದರಾಸ್ ಸಂಸ್ಕರಣದ ಸಂಪಾದಕದ್ವಯರು ಹೆಚ್ಚಾಗಿ ಏನನ್ನೂ ಹೇಳಿಲ್ಲವೆನ್ನಬಹುದು. ಕವಿಚರಿತೆಕಾರರು ಪ್ರಕೃತಕೃತಿ ಶ್ರೀವಿಜಯ ಕೃತವೇಕಿರಬಾರದೆಂಬ ಜಿಜ್ಞಾಸೆಗೆ ಕುತೂಹಲ ಹುಟ್ಟುವಂತೆ ಮಾಡಿದರು. ಟಿ. ಎಸ್. ವೆಂಕಣ್ಣಯ್ಯನವರ ಶ್ರೀವಿಜಯ ಪಕ್ಷಪಾತದ ಒಂದು ಪ್ರಾಸಂಗಿಕ ಹೇಳಿಕೆಯ ಬಗ್ಗೆ ತಮ್ಮ ಆಕ್ಷೇಪವನ್ನೆತ್ತಿ 'ಕವಿರಾಜಮಾರ್ಗ'ವು ನೃಪತುಂಗ ಕೃತವೆಂದು ಸಾಧಿಸಲು ರಾಜಪುರೋಹಿತರು ತುಂಬ ಸಾಹಸಪಟ್ಟರು. ಅವರ ಇತ್ಯರ್ಥ ದೂರಾನ್ವಯ ದೋಷದಿಂದಾಗಿ, ತನ್ನ ಗುರಿಯನ್ನು ಸಾಧಿಸದೆ ವಿಫಲವಾಯಿತು. ಆದರೆ ಈ ವಿದ್ವಾಂಸರ ಪ್ರಚೋದನೆಯ ಪರಿಣಾಮವಾಗಿ 'ಕವಿರಾಜಮಾರ್ಗ'ದ ಕರ್ತೃತ್ವವನ್ನು ಕುರಿತಂತೆ, ಟಿ. ಎಸ್. ವೆಂಕಣ್ಣಯ್ಯನವರು ಈ ವಿಚಾರಕ್ಕೆ ಸಂಬಂಧಿಸಿದ ಎಲ್ಲ ಮುಖಗಳನ್ನೂ ವಿದ್ವತ್ಪಕ್ಷಪಾತದಿಂದ ವಿವೇಚಿಸಿದರು. ಮುಂದೆ ಮುಳಿಯ ತಿಮ್ಮಪ್ಪಯ್ಯನವರು ಅನು ಸರಿಸಿದ ಕ್ರಮ ಸರ್ವಮಾನ್ಯವೆನ್ನಿಸದಿದ್ದರೂ, ನಮ್ಮ ಪುರಾತನ ಪದ್ಧತಿಯಲ್ಲಿ ಅಂತಹ ಒಂದು ಜಾಡೂ ಇದೆ ಎನ್ನುವುದನ್ನು ನಾವು ನಿರಾಕರಿಸುವಂತಿಲ್ಲ. ಶ್ರೀವಿಜಯನ ಪಾಂಡಿತ್ಯಪೂರ್ಣವಾದ ವ್ಯಕ್ತಿತ್ವವನ್ನು ಗ್ರಂಥಸ್ಥ ಪದ್ಯಗಳಿಂದಲೇ ತಕ್ಕಷ್ಟು ವಿವರ ವಾಗಿ ಅವರು ತೋರಿಸಿಕೊಟ್ಟರು. ಈ ಚರ್ಚೆಗಳ ಫಲವಾಗಿ, ರಂ. ಶ್ರೀ ಮುಗಳಿಯವ ರಿಗೆ ಈ ವಿಚಾರದ ಗ್ಗೆಬ ಶ್ರೀವಿಜಯ ಪರವಾಗಿ ಕೆಲವು ಗಟ್ಟಿ ಮಾತುಗಳನ್ನು ಹೇಳು ವುದು ಸಾಧ್ಯವಾಯಿತು ಎನ್ನಬಹುದು. ಈಚೆಗೆ ಎಂ. ವಿ. ಸೀತಾರಾಮಯ್ಯನವರು ಈ ಲಕ್ಷಣ ಗ್ರಂಥದ ಮೂರನೆಯ ಸಂಸ್ಕರಣವನ್ನು ಶ್ರೀವಿಜಯನ ನಾಮಾಂಕಿತದಲ್ಲಿಯೇ ತಂದಿರುವುದಲ್ಲದೆ, ಈ ವಿಚಾರದ ಬಗ್ಗೆ ಆಗಿಂದಾಗ್ಗೆ ಹೊಸ ಹೊಸ ಸಂಗತಿಗಳನ್ನು ತಿಳಿಸುತ್ತಿದ್ದಾರೆ. ಒಮ್ಮೆ ಶ್ರೀವಿಜಯವಾದಿಗಳ ಪಕ್ಷ ತಲೆಯೆತ್ತಿದೊಡನೆಯೇ ಕವೀಶ್ವರ ಪಕ್ಷದ ಬಲ ಕುಗ್ಗಿತೆನ್ನಬಹುದು. ಆದರೆ ಆಗಾಗ್ಗೆ ನೃಪತುಂಗ ಕರ್ತೃತ್ವದ ಮಾತು ಇನ್ನೂ ಕೇಳಿಬರುತ್ತಿರುವುದುಂಟು. ಇದು 'ಕವಿರಾಜಮಾರ್ಗ'ದ ಕರ್ತೃತ್ವದ ವಿಚಾರ ಧಾರೆಯ ಒಂದು ವಿಹಂಗಮದೃಷ್ಟಿ.

ನೃಪತುಂಗನ ಪರವಾಗಿ ಗ್ರಂಥದಲ್ಲಿಯೇ ಕಂಡುಬರುವ ಒಂದೊಂದು ನಿದರ್ಶನವೂ ಆತನು ಈ ಕೃತಿಯ ಪ್ರೇರಕ ಹಾಗೂ ಪೋಷಕನೆಂಬುದಕ್ಕೆ ಸಹಾಯಕವಾಗಿದೆಯೇ ವಿನಾ ಲೇಖಕನೆಂಬುದಕ್ಕಿಲ್ಲ. ಅವನ ಹೆಸರೋ ಇಲ್ಲವೆ ಬಿರುದೋ ಬರುವ ಎಡೆಗಳಲ್ಲೆಲ್ಲ ಬಹು ಮಟ್ಟಿಗೆ ಪ್ರಥಮಪುರುಷ ಪ್ರಯೋಗವಿರುವುದು ಆತನು ಕರ್ತೃವಲ್ಲವೆನ್ನುವುದಕ್ಕೆ ಪ್ರಬಲ ಪ್ರಮಾಣ. ಉತ್ತಮಪುರುಷಾರ್ಥದಲ್ಲಿ ಪ್ರಥಮ ಪುರುಷದ ಪ್ರಯೋಗ ಕ್ವಚಿತ್ತಾಗಿ ಬಂದಿದ್ದರೆ ಅದರ ಸಂಗತಿಯೇ ಬೇರೆ. ಆಶ್ರಿತನೊಬ್ಬನು ತನ್ನ ಆಶ್ರಯದಾತನನ್ನು

ಹೊಗಳುವ ಸಂದರ್ಭದಲ್ಲಿ ಈ ರೀತಿ ಮೇಲಿಂದ ಮೇಲೆ ಪ್ರಥಮಪುರುಷ ಪ್ರಯೋಗ ಬರಬಹುದೇ ಹೊರತು, ಎಂತಹ ಆತ್ಮಪ್ರತ್ಯಯವುಳ್ಳವನೂ ಈ ರೀತಿ ಮೇಲಿಂದ ಮೇಲೆ ತನ್ನ ಬೆನ್ನನ್ನು ತಾನೇ ತಟ್ಟಿಕೊಳ್ಳಲಾರ. ಪರಿಚ್ಛೇದಾಂತ ಸಮಾಪ್ತಿವಾಕ್ಯದಲ್ಲಿನ 'ಅನುಮತ' ಶಬ್ದವಂತೂ ಅವನ ಕರ್ತೃತ್ವಕ್ಕೆ ಕತ್ತರಿಯಂತಿದೆ.

ನೃಪತುಂಗನ ಪರವಾಗಿ ದೊರೆಯುವ ಬಾಹ್ಯಪ್ರಮಾಣಗಳೂ ದುರ್ಬಲವಾದುವು. ಭಟ್ಟಾಕಳಂಕನ 'ಶಬ್ದಾನುಶಾಸನ'ದಲ್ಲಿ ಕೇಳಿಬರುವ 'ನೃಪತುಂಗ ಗ್ರಂಥ'ವೆಂಬ ಮಾತು ಕಾಲದ ದೃಷ್ಟಿಯಿಂದ ಅಷ್ಟಾಗಿ ಮನ್ನಣೆ ಪಡೆಯಲಾರದು. ಇನ್ನು ಅದು ಬೇರೊಬ್ಬ ವ್ಯಾಖ್ಯಾನಕಾರನ ಮಾತೆಂದು ನಿರ್ಧಾರವಾದ್ದೇ ಆದರೆ ಈಗಿನ ಬೆಲೆಯೂ ಅದಕ್ಕೆ ಉಳಿಯಲಾರದು. ಡಿ. ಕೆ. ಭೀಮಸೇನರಾಯರಿಂದ ಉಕ್ತವಾಗಿರುವ ಹೇಳಿಕೆಯಂತೂ ವ್ಯಾಖ್ಯಾನಕಾರನೊಬ್ಬನ ಮಾತು. ನೃಪತುಂಗನೇ ಇದರ ಕರ್ತೃವಿದ್ದಲ್ಲಿ ಅವನನ್ನು ಇತರ ಕನ್ನಡ ಕವಿಗಳಲ್ಲಿ ಯಾರಾದರೂ ಒಮ್ಮೆಯಾದರೂ ನೆನೆಯಬೇಕಲ್ಲವೆ ? ಪ್ರಕೃತದಲ್ಲಿ ಅವನನ್ನು ಕುರಿತ ಕೆಲವು ಸ್ತುತಿಗಳು 'ಕಾವ್ಯಾವಲೋಕನ', 'ಶಬ್ದಮಣಿದರ್ಪಣ' ಮತ್ತು 'ಶಬ್ದಾನುಶಾಸನ'ಗಳಲ್ಲಿ ದೊರೆಯುತ್ತವೆ. ಅನ್ಯಕೃತಿಗಳಲ್ಲಿ ದೊರೆಯುವ ಈ ಸ್ತುತಿಗಳಲ್ಲಿ ಒಂದರಲ್ಲಿಯಾದರೂ ನೃಪತುಂಗನ ಕವಿತ್ವಶಕ್ತಿಯನ್ನು ಕುರಿತು ಒಂದು ಮಾತೂ ಇಲ್ಲದಿರುವುದು ಗಮನಾರ್ಹವಾದ್ದು. ರಾಜೋಚಿತವಾದ ಗುಣಗಳ ಪ್ರಸ್ತಾಪ ಮಾತ್ರ ಬರುತ್ತದೆ. ಈ ಪದ್ಯಭಾಗಗಳು ನೃಪತುಂಗನನ್ನೇ ಕುರಿತ ಯಾವುದೋ ಕಾವ್ಯದ್ದಿರಬೇಕು ಎನ್ನಿಸುತ್ತವೆ. ಒಂದು ವೇಳೆ 'ಕವಿರಾಜಮಾರ್ಗ'ದಂತಹ ಕೃತಿಯ ಕರ್ತನು ನೃಪತುಂಗನಾಗಿದ್ದರೆ ಅವನಿಗೆ ಇಂಥ ಪ್ರಶಸ್ತಿಪದ್ಯಗಳಲ್ಲಿ ಕವಿಪಟ್ಟವು ದೊರೆಯದೆ ಇರುತ್ತಿತ್ತೇ? ಈಗಲಾದರೂ ನೃಪತುಂಗರಚಿತ ಇತರ ಕೃತಿಗಳಾದರೂ ಎಷ್ಟಿವೆ ? ಸಂಸ್ಕೃತದಲ್ಲಿರುವ 'ಪ್ರಶ್ನೋತ್ತರರತ್ನಮಾಲಿಕೆ'ಯೂ ಆತನದು ಹೌದೋ ಅಲ್ಲವೋ ಎಂದು ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ.

ಶ್ರೀವಿಜಯನ ಪರವಾಗಿ ಹೇಳಬೇಕಾದುದಾದರೋ ಸಾಕಷ್ಟಿದೆ. 'ಕವಿರಾಜಮಾರ್ಗ'ದಲ್ಲಿಯೇ ಅವನ ವ್ಯಕ್ತಿತ್ವವು ಹೇಗೆ ಪರೋಕ್ಷವಾಗಿ ವ್ಯಾಪಿಸಿದೆಯೆನ್ನುವುದನ್ನು ಈಗಾಗಲೇ ವಿದ್ವಾಂಸರ ಉಲ್ಲೇಖಗಳ ಮೂಲಕ ಪರಿಚಯ ಮಾಡಿಕೊಡಲಾಗಿದೆ. ಆತನು ಕವಿಮಾತ್ರವೇ ಅಲ್ಲ; ಕ್ಷತ್ರಿಯವಂಶೋತ್ಪನ್ನನಾದ ಶೂರನೂ ಆಗಿದ್ದನು ಎಂದು ತೋರಿಬರುವುದು ಮೆಚ್ಚಬೇಕಾದ ಸಂಗತಿ. ಆತನು ಒಬ್ಬ ಆಜನ್ಮ ಬ್ರಹ್ಮಚಾರಿಯೂ ಆಗಿದ್ದನೆಂಬುದು ಈಚಿನ ಸಂಶೋಧನೆಯಿಂದ ತಿಳಿದ ವಿಚಾರ. ವಾಗಧಿಪನಾದ ಪ್ರಕೃತ ಕವಿ 'ವಿವೇಕಬೃಹಸ್ಪತಿ'ಯಾದ ನೃಪತುಂಗನ ಆಸ್ಥಾನಕ್ಕೆ ಆಗಮಿಸಿ, ಇಲ್ಲಿನ ವಿದ್ವಾಂಸರ ಸಭಾಸದರಲ್ಲಿ ಒಬ್ಬನಾಗಿ ಪ್ರಕೃತ ಗ್ರಂಥವನ್ನು ರಾಜನ ಅನುಮತದಿಂದ ಬರೆದಿರುವನೆಂಬ ಚಿತ್ರ ಕಣ್ಣಿಗೆ ಕಟ್ಟುವಂತಿದೆ; ಮನಸ್ಸಿಗೆ ಒಪ್ಪುವಂತಿದೆ. ಆಶ್ರಯದಾತನಿಗೂ ಆಶ್ರಿತನಿಗೂ ಇರುವ ಆಪ್ತತ್ವವೆಂತಹುದೆನ್ನುವುದನ್ನು ಕೃತಿಯ ಮೂಲಕವೇ ತಿಳಿಯಬಹುದಾಗಿದೆ. ಶ್ರೀವಿಜಯನ ಅಸ್ತಿತ್ವದ ಬಗ್ಗೆ ಒಂದೆರಡು ಶಾಸನಗಳೂ ತಕ್ಕಮಟ್ಟಿಗೆ

ಬೆಳಕನ್ನು ಬೀರಬಲ್ಲವೆಂಬ ವಿದ್ವಾಂಸರ ಸೂಚನೆಯನ್ನು ಗಮನಿಸಿದರೆ, ಈತನದು ಎಷ್ಟು ಪ್ರಭಾವಶಾಲಿಯಾದ ವ್ಯಕ್ತಿತ್ವವಿರಬೇಕು ಎನ್ನಿಸುತ್ತದೆ. ಈತನ ಪ್ರಶಸ್ತವಾದ ಕನ್ನಡ ಲಕ್ಷಣ ಗ್ರಂಥವೊಂದು ಇಂದು ಹೇಗೆ ವಿದ್ವಾಂಸರೆಲ್ಲರ ಆದರಕ್ಕೆ ಪಾತ್ರವಾಗಿದೆಯೋ ಅಂತೆಯೇ ಈಗ್ಗೆ ೮೦೦ ಇಲ್ಲವೆ ೯೦೦ ವರ್ಷಗಳ ಹಿಂದೆಯೇ ದುರ್ಗಸಿಂಹಾದ್ಯರಿಂದಲೂ ಆದರಿಸಲ್ಪಟ್ಟಿತ್ತು.

## ಭಾಷೆ ಮತ್ತು ವ್ಯಾಕರಣಾಂಶಗಳು

'ಕವಿರಾಜಮಾರ್ಗ' ಕನ್ನಡ ಭಾಷೆ ಹಾಗೂ ವ್ಯಾಕರಣ ಸಂಬಂಧವಾದ ಅನೇಕ ಪ್ರಮಾಣಭೂತ ಆಧಾರಗಳನ್ನು ಒದಗಿಸಿಕೊಡುವ ಆದ್ಯ ಕನ್ನಡ ಗ್ರಂಥವೂ ಆಗಿದೆ. ಕವಿರಾಜಮಾರ್ಗಕಾರನಿಗೆ ಕನ್ನಡ ನುಡಿಯ ಬಗ್ಗೆ ಮಮತೆ, ಶ್ರದ್ಧೆ, ಉತ್ಸಾಹಗಳು ಮಾತ್ರವಲ್ಲದೆ ಭಾಷೆಯ ಇತಿಹಾಸಕಾರನ ಪ್ರಜ್ಞೆಯೂ ವಿವೇಕವೂ ಇತ್ತು ಎಂಬುದಕ್ಕೆ ಆತನ ಉಲ್ಲೇಖಗಳೇ ಸಾಕ್ಷಿಯಾಗಿವೆ. ಕನ್ನಡಿಗರನ್ನು ಕುರಿತು ಹೇಳುವಾಗ ಉತ್ಪ್ರೇಕ್ಷೆ ಎನ್ನಬಹುದಾದಂಥ ಕೆಲವು ಮಾತುಗಳು ಸೇರಿಕೊಳ್ಳುತ್ತವೆಯಾದರೂ, ಇತರ ವಿಷಯಗಳ ಬಗ್ಗೆ ಹೇಳುವಾಗ ಆತನ ಐತಿಹಾಸಿಕ ಪ್ರಜ್ಞೆ ಮತ್ತು ವಿವೇಕಗಳೇ ಮೇಲುಗೈಯಾಗುತ್ತವೆ. ಹೀಗಾಗಿ, ಈ ದೃಷ್ಟಿಯಿಂದಲೂ 'ಕವಿರಾಜಮಾರ್ಗ' ಒಂದು ಉಪಾದೇಯವಾದ ಗ್ರಂಥವಾಗಿದೆ.

### ಭಾಷಾಸಂಬಂಧವಾದ ಉಲ್ಲೇಖಗಳು

ಭಾಷಾಪ್ರದೇಶ : ಕನ್ನಡ ಭಾಷಾಪ್ರದೇಶದ ಬಗ್ಗೆ 'ಕವಿರಾಜಮಾರ್ಗ'ದಲ್ಲಿ ಕಾಣಬರುವ ಉಲ್ಲೇಖ ಹೀಗಿದೆ :

ಕಾವೇರಿಯಿಂದಮಾ ಗೋ
ದಾವರಿವರಮಿರ್ಪ ನಾಡದಾ ಕನ್ನಡದೊಳ್
ಭಾವಿಸಿದ ಜನಪದಂ ವಸು
ಧಾವಳಯವಿಲೀನವಿಶದವಿಷಯವಿಶೇಷಂ ॥ (೧-೧೬)[41]

ಕನ್ನಡನಾಡು ಕಾವೇರಿಯಿಂದ ಹಿಡಿದು ಗೋದಾವರಿ ನದಿಯ ವರೆಗಿನ ಭೂಪ್ರದೇಶದಲ್ಲಿ ವ್ಯಾಪಿಸಿಕೊಂಡಿತ್ತು ಎಂಬುದು ಈ ಕಂದದ ಆಶಯ. ಭೌಗೋಳಿಕ ವಿಭಜನೆಯ ಸಹಜ ಸಾಧನಗಳಲ್ಲೊಂದೆಂದು ಪರಿಗಣಿತವಾಗಿರುವ ನದೀರೇಖೆಗಳನ್ನು ಆಧಾರವಾಗಿಟ್ಟುಕೊಂಡು ಕವಿರಾಜಮಾರ್ಗಕಾರನು ಗೊತ್ತುಪಡಿಸಿರುವ ಈ ಭೌಗೋಳಿಕ ಮೇರೆಗಳ ನಿರ್ದಿಷ್ಟತೆಯ ವಿಚಾರವನ್ನು ಮೊದಲಿಗೇ ಪರಿಶೀಲಿಸುವುದು ಉತ್ತಮ.

ಕರ್ಣಾಟಕವನ್ನು ಆಳಿದ ಅರಸುಮನೆತನಗಳಲ್ಲಿ ಒಂದಾದ ರಾಷ್ಟ್ರಕೂಟ ವಂಶವು ಕರ್ಣಾಟಕ ಮತ್ತು ಮಹಾರಾಷ್ಟ್ರ ಪ್ರದೇಶಗಳನ್ನು ಸುಮಾರು ಎರಡು ಶತಮಾನಗಳ

ಗಿಂತಲೂ ಹೆಚ್ಚು ಕಾಲ ತನ್ನ ಆಳ್ವಿಕೆಯಲ್ಲಿ ಇಟ್ಟುಕೊಂಡಿದ್ದಿತು."[42] ಈ ಪರಂಪರೆಗೆ ಸೇರಿದ "ಮೂರನೆಯ ಗೋವಿಂದನು ಅಖಂಡ ಭಾರತದ ಮೇಲೆ ತನ್ನ ಪ್ರತಾಪಾಂಕಿತ ವನ್ನು ಒತ್ತಿ, ಬಹುಮಟ್ಟಿಗೆ ಸಮಗ್ರಭಾರತದ ಪ್ರಥಮ ಸಮ್ರಾಟನೆನಿಸಿಕೊಂಡು ಜಗತ್ತುಂಗ, ಪ್ರಭೂತವರ್ಷ ಶ್ರೀವಲ್ಲಭ, ಪೃಥ್ವೀವಲ್ಲಭ, ಕೀರ್ತಿನಾರಾಯಣ ಎಂಬ ಬಿರುದುಗಳಿಂದ ಮೆರೆದನು. ಇವನ ಆಳ್ವಿಕೆಯಲ್ಲಿ ರಾಷ್ಟ್ರಕೂಟ ಸಾಮ್ರಾಜ್ಯ ರಾಜಕೀಯ ದೃಷ್ಟಿಯಿಂದ ತನ್ನ ವೈಭವದ ಶಿಖರವನ್ನು ಮುಟ್ಟಿತು.[43] ರಾಷ್ಟ್ರಕೂಟ ವಂಶಕ್ಕೆ ಸೇರಿದ ನೃಪತುಂಗನ ಆಸ್ಥಾನದಲ್ಲಿಯೇ ಇದ್ದ ಕವಿರಾಜಮಾರ್ಗಕಾರನಿಗೆ ಈ ಇತಿಹಾಸ ಅಪರಿಚಿತವಾಗಿ ಉಳಿದಿದ್ದಿರಲಾರದು. ಅಖಂಡ ಭರತಖಂಡವೇ ಒಮ್ಮೆ ಕರ್ಣಾಟಕದ ಸಾಮ್ರಾಜ್ಯವಾಗಿತ್ತೆಂಬ ಈ ಐತಿಹಾಸಿಕ ವಿಕ್ರಮದ ಆಧಾರದ ಮೇಲೆ, ಕನ್ನಡದ ಮೇರೆಯನ್ನು ದಕ್ಷಿಣದ ತುದಿಯಿಂದ (ಸಿಂಹಳವೂ ಸೇರಿದಂತೆ) ಉತ್ತರದ ತುದಿಯ ವರೆಗೆ ವಿಸ್ತರಿಸುವ ಅಂಧಾಭಿಮಾನವನ್ನು ಕವಿರಾಜಮಾರ್ಗಕಾರ ಮೆರೆದಿಲ್ಲವೆಂಬುದನ್ನು ನಾವು ವಿಶೇಷವಾಗಿ ಗಮನಿಸಬೇಕು. ಹೀಗಾಗಿ, ಉತ್ತರದ ಮೇರೆಯನ್ನು ಗೋದಾವರಿಯ ವರೆಗೆ ಹಾಗೂ ದಕ್ಷಿಣದ ಮೇರೆಯನ್ನು ಕಾವೇರಿಯವರೆಗೆ ಸೀಮಿತಗೊಳಿಸಿರುವುದಕ್ಕೆ ಕವಿರಾಜಮಾರ್ಗಕಾರನ ಐತಿಹಾಸಿಕ ಪ್ರಜ್ಞೆ ಹಾಗೂ ವಿವೇಕಗಳೇ ಕಾರಣವೆಂದು ಹೇಳಬೇಕಾಗುತ್ತದೆ.

ಮೊದಲಿಗೆ ಉತ್ತರದ ಗಡಿಯ ವಿಚಾರವನ್ನು ಎತ್ತಿಕೊಳ್ಳಬಹುದು. ಆರ್. ನರಸಿಂಹಾಚಾರ್ ಅವರೆಂದಿರುವಂತೆ, "ಇಂದು ಶುದ್ಧಾಂಗವಾಗಿ ಮಹಾರಾಷ್ಟ್ರವೆಂದು ಪರಿಗಣಿತವಾಗಿರುವ ಭೂಪ್ರದೇಶದ ಗಮನಾರ್ಹ ಭಾಗ ಈ ವ್ಯಾಪ್ತಿಗೆ ಒಳಪಡುತ್ತಿ ಯಾದರೂ, ಉತ್ತರದ ಮೇರೆಯ ಬಗೆಗಿನ ಕವಿರಾಜಮಾರ್ಗಕಾರನ ಹೇಳಿಕೆಯ ನಿರ್ದಿಷ್ಟತೆಯನ್ನು ಶಂಕಿಸುವ ಅಗತ್ಯವಿಲ್ಲ."[44] ಇದಕ್ಕೆ ಸಮರ್ಥನೆಯಾಗಿ ಅವರು ಕೊಟ್ಟಿರುವ ಆಧಾರಗಳ ವಿಚಾರವನ್ನು 'ಕರ್ಣಾಟಕ ಕವಿಚರಿತೆ'ಯ ಮೂರನೆಯ ಸಂಪುಟದ ಅವತರಣಿಕೆಯಲ್ಲಿ ಗಮನಿಸಬಹುದಾಗಿದೆ.

ಪಂಪನ ಪೂರ್ವಜರು ವೆಂಗಿನಾಡಿನಿಂದ ಬಂದವರೆಂಬುದು ನಿಶ್ಚಿತವಾಗಿರುವುದ ರಿಂದ 'ಕವಿರಾಜಮಾರ್ಗ'ಕಾರ ಸೂಚಿಸಿರುವ ಉತ್ತರದ ಮೇರೆ ಕಾಲ್ಪನಿಕವಲ್ಲವೆಂಬುದು ದೃಢಪಡುತ್ತದೆಂದು ಕೆ. ವೆಂಕಟರಾಮಪ್ಪನವರು ಸೂಚಿಸಿದ್ದಾರೆ.[45] ಈಚೆಗೆ ಬೆಳಕಿಗೆ ಬಂದ ನಾಂದೇಡ್ ಶಿಲಾಶಾಸನಗಳು ಈ ವಾದಕ್ಕೆ ಮತ್ತೊಂದು ವಿವಾದಾತೀತವಾದ ಪ್ರಮಾಣವನ್ನು ಒದಗಿಸುತ್ತವೆ. ಈಗ ಮಹಾರಾಷ್ಟ್ರದ ಒಂದು ಜಿಲ್ಲೆಯಾಗಿರುವ ನಾಂದೇಡ್ ಒಮ್ಮೆ ಕರ್ಣಾಟಕದ ಒಂದು ಭಾಗವಾಗಿದ್ದಿರಬಹುದೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಇದರ ಬಗ್ಗೆ ಎಂ. ಚಿದಾನಂದಮೂರ್ತಿಯವರು ಹೀಗೆ ಹೇಳಿದ್ದಾರೆ: "ಈ ಜಿಲ್ಲೆಯಲ್ಲಿ ದೊರಕಿರುವ ಐವತ್ತು ಶಾಸನಗಳಲ್ಲಿ ಮೂವತ್ತಾರು ಶಾಸನಗಳು ಕನ್ನಡದಲ್ಲಿವೆ. ಒಂಬತ್ತು ಮರಾಠಿಯಲ್ಲಿವೆ. ಉಳಿದವು ಸಂಸ್ಕೃತದಲ್ಲಿವೆ; ಮರಾಠಿ ಶಾಸನಗಳೆಲ್ಲ ಹದಿಮೂರನೇ ಶತಕಕ್ಕಿಂತ ಈಚಿನವು ಮತ್ತು ಅವೆಲ್ಲ, ಒಂದು ಅಪವಾದ

ವನ್ನು ಬಿಟ್ಟರೆ, ಗೋದಾವರಿಯ ಉತ್ತರಕ್ಕಿವೆ. ಕನ್ನಡ ಶಾಸನಗಳು, ಒಂದು ಅಪವಾದ ವನ್ನು ಬಿಟ್ಟರೆ, ಎಲ್ಲವೂ ಗೋದಾವರಿಯ ದಕ್ಷಿಣಕ್ಕಿವೆ. ಇದರಿಂದ ಗೋದಾವರಿ ನದಿ ಸ್ಥೂಲವಾಗಿ ಕನ್ನಡ ಭಾಷೆಯ ಗಡಿಯಾಗಿದ್ದಿತ್ತೆಂಬುದು ಸ್ಪಷ್ಟವಾಗುತ್ತದೆ....ಇವೆಲ್ಲ ಹನ್ನೊಂದು ಹನ್ನೆರಡನೇ ಶತಮಾನಗಳಿಗೆ ಸೇರಿದ ಕಲ್ಯಾಣ ಚಾಳುಕ್ಯರ ಶಾಸನಗಳು. ಶೈಲಿಯಲ್ಲಿ, ರೀತಿಯಲ್ಲಿ, ಭಾಷೆಯಲ್ಲಿ ಕರ್ಣಾಟಕದ ಉಳಿದ ಭಾಗಗಳ ಶಾಸನಗಳಿಗೂ ಇವುಗಳಿಗೂ ಯಾವ ಭೇದವೂ ಕಾಣಿಸುವುದಿಲ್ಲ. ಕಲ್ಯಾಣ ಚಾಳುಕ್ಯರ ಮನೆಮಾತು ಕನ್ನಡವಾಗಿದ್ದುದರಿಂದ ಈ ಶಾಸನಗಳ ಭಾಷೆಯೂ ಕನ್ನಡವಾಗಿದೆಯೆಂದು ಯಾರಾ ದರೂ ವಾದಿಸಲು ಅವಕಾಶವಿದೆ. ಆದರೆ ಶಾಸನಗಳಲ್ಲಿ ಬರುವ ವ್ಯಕ್ತಿಗಳು, ಊರಿನ ಹೆಸರುಗಳು, ತೆರಿಗೆಗಳ ಹೆಸರುಗಳು, ಅಧಿಕಾರಿಗಳ ಹೆಸರುಗಳು, ಇನ್ನೂ ಕೆಲವು ವಿಶೇಷ ಉಕ್ತಿಗಳು ಇವುಗಳನ್ನೆಲ್ಲ ಗಮನಿಸಿದರೆ ಆ ಪ್ರಾಂತದಲ್ಲೆಲ್ಲ ಆ ಕಾಲಕ್ಕೆ ಬಳಕೆಯಾಗುತ್ತಿದ್ದ ಭಾಷೆ ಕನ್ನಡವೆಂಬುದು ಸ್ಪಷ್ಟವಾಗುತ್ತದೆ."[46]

ಕವಿರಾಜಮಾರ್ಗ ರಚನಾಕಾಲದಲ್ಲಿಯೂ ಗೋದಾವರೀನದೀಪ್ರಾಂತದಲ್ಲಿ ಕನ್ನಡ ಭಾಷೆ ವ್ಯಾಪಿಸಿತ್ತು ಎನ್ನುವುದು ಈ ಶೋಧನೆಗಳಿಂದ ಸಂಭಾವ್ಯವಾಗಿ ತೋರು ತ್ತದೆ. ಆಗ್ಗೆ ಪೂರ್ವೋಕ್ತ ಪದ್ಯದಲ್ಲಿ 'ಗೋದಾವರಿವರಮಿರ್ಪ' ಎಂಬುದಾಗಿ ಪಾಠ ವಿದ್ದಿರುವುದು ಅಂಗೀಕಾರಯೋಗ್ಯವಾಗುತ್ತದೆ; ಕನ್ನಡದ ತಿರುಳೆಂದು ಕೆಲವು ಪ್ರದೇಶ ಗಳನ್ನ ಹೇಳುವ ಮುಂದಿನ ಪದ್ಯದೊಡನೆಯೂ ಇದು ಹೊಂದಿಕೊಳ್ಳುತ್ತದೆ.

ದಕ್ಷಿಣದ ಮೇರೆ ಎಂಬುದಾಗಿ ಸೂಚಿಸಲಾಗಿರುವ ಕಾವೇರಿಯ ವಿಚಾರವನ್ನು ಈಗ ಪರಿಶೀಲನೆಗೆ ತೆಗೆದುಕೊಳ್ಳಬಹುದು. "ಧ್ರುವನ ಕಾಲದಲ್ಲಿ (ಕ್ರಿ.ಶ. ೭೭೯–೭೩೩) ರಾಷ್ಟ್ರಕೂಟ ಸಾಮ್ರಾಜ್ಯವು ದಕ್ಷಿಣದಲ್ಲಿ ಕಾವೇರಿಯ ವರೆಗೂ ಹಬ್ಬಿತು"[47] ಎಂಬುದು ನಿರ್ವಿವಾದಿತವಾಗಿದೆ. ಆದರೆ, ಈ ಸಂದರ್ಭದಲ್ಲಿ ಧ್ರುವನು ಗಂಗರಸರನ್ನೂ ಸೋಲಿಸಿ, ಗಂಗರಾಜ್ಯವನ್ನೆಲ್ಲ ಸ್ವಾಧೀನಪಡಿಸಿಕೊಂಡಿದ್ದುದರಿಂದಲೂ ಗಂಗರು ಸ್ವತಃ ಕನ್ನಡಿಗ ರಾಗಿದ್ದುದರಿಂದಲೂ "ಕರ್ಣಾಟಕದ ದಕ್ಷಿಣ ಮೇರೆ ಕಾವೇರಿಯನ್ನು ದಾಟಿರಲಿಲ್ಲವೆಂದು ಒಪ್ಪಲು ಸಾಧ್ಯವಿಲ್ಲ"[48]ವೆಂದೂ, "ಕಾವೇರಿಯ ನೀರ್ವೊಲಿತ್ತ ಬರೆ ನಿಮ್ಮ ಬಲಂ ಶತಖಂಡಮಾಗದೆ"[49] ಎಂಬ ಗಂಗರ ಆಸ್ಥಾನ ಕವಿಯಾದ ಗುಣವರ್ಮನ 'ಶೂದ್ರಕ' ಕಾವ್ಯದ (ಅನುಪಲಬ್ಧ) ಉಲ್ಲೇಖದ ಆಧಾರದ ಮೇಲೆ ಕಾವೇರಿ ನದಿ ಗಂಗರ ಉತ್ತರ ಮೇರೆಯಾಗಿದ್ದಿರಬೇಕೆಂದೂ ಹೀಗಾಗಿ, ಕನ್ನಡದ ಮೇರೆ ಕಾವೇರಿಯಿಂದಲೂ ಕೆಳಕ್ಕೆ ಸಾಕಷ್ಟು ದೂರದವರೆಗೆ ವಿಸ್ತರಿಸಿಕೊಂಡಿತ್ತೆಂಬುದಾಗಿ ಹೇಳಬೇಕಾಗಿ ಬರುತ್ತದೆಂದೂ ವಾದಿಸಲಾಗಿದೆ.[50]

ರಾಜಕೀಯ ಮೇರೆಗಳು ಆಗಿಂದಾಗ್ಗೆ ಬದಲಾಗುತ್ತಿದ್ದರೂ ಭಾಷಾಸಾಮ್ರಾಜ್ಯ ಒಮ್ಮಿಂದೊಮ್ಮೆಗೇ ಅಸ್ತಂಗತವಾಗುವುದು ಸಾಧ್ಯವಿಲ್ಲವೆಂಬ ಮಾತನ್ನು ಒಪ್ಪುವುದಾದರೆ, ಒಮ್ಮೆಯಾದರೂ ಕಾವೇರಿಯಿಂದ ಗೋದಾವರಿಯವರೆಗೆ ಕನ್ನಡದ ಏಕಛತ್ರಾಧಿಪತ್ಯ ವಿದ್ದಿತೆಂಬ ಮಾತನ್ನು ಒಪ್ಪಲೇಬೇಕಾಗುತ್ತದೆ. 'ಕೊಟ್ಟೂರ ಬಸವೇಶ್ವರ ಚಾರಿತ್ರ'

ದಂಥ ಈಚಿನ ಕೃತಿಯಲ್ಲೂ, "ಕರ್ಣಾಟ ಸುವಿಶಾಲ ದೇಶಮಾ ಗೋದಾವರಿ ತೀರದಿಂದೆ ಕಾವೇರಿ ವರೆಗಂ"[51] ಎಂದು ಕಾಣಿಸಿಕೊಳ್ಳುತ್ತದೆಂಬುದು ಕುತೂಹಲಕರವಾಗಿರುವ ಸಂಗತಿ. ಇಂದು ಈ ಮೇರೆಗಳೆಲ್ಲ ಅಧಿಕೃತವಾಗಿ ಹಾಗೂ ಬಹುಮಟ್ಟಿಗೆ ಶಾಶ್ವತವಾಗಿ ಬದಲಾಗಿದ್ದರೂ, "ಗೋದಾವರಿ ಎಂಬ ಹೆಸರಿಗೆ ಪ್ರತಿಯಾಗಿ ಅದರ ಶಾಖೆಯೇ ಆದ ಮಾಂಜ್ರಾನದಿಯನ್ನು ಹೇಳಿಕೊಂಡರೆ" ಈ ಮೇರೆ ಇವತ್ತಿಗೂ ಒಪ್ಪುತ್ತದೆ.[52]

ಈ ವಿಷಯಕವಾದ ವರ್ಣನೆಯನ್ನು ಮುಂದುವರಿಸಿ, ಕನ್ನಡ ಭಾಷಾ ಪ್ರದೇಶಗಳ ಬಗೆಗೆ ಕವಿರಾಜಮಾರ್ಗಕಾರ ಹೀಗೆ ಹೇಳಿದ್ದಾನೆ:

ಅದರೊಳಗಂ ಕಿಸುವೊಳಲಾ
ವಿದಿತ ಮಹಾಕೊಪಣನಗರದಾ ಪುಲಿಗೆಱೆಯಾ ।
ಸದಭಿಸ್ತುತಮಪ್ಪೊಂಕುಂ
ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ ॥ (೧–೩೭)

ಕಿಸುವೊಳಲ್ (ಇಂದಿನ ಪಟ್ಟದ ಕಲ್ಲು, ಬಿಜಾಪುರ ಜಿಲ್ಲೆ), ಕೊಪಣನಗರ (ಇಂದಿನ ಕೊಪ್ಪಳ, ರಾಯಚೂರು ಜಿಲ್ಲೆ), ಪುಲಿಗೆಱೆ (ಇಂದಿನ ಲಕ್ಷ್ಮೇಶ್ವರ, ಧಾರವಾಡ ಜಿಲ್ಲೆ), ಒಂಕುಂದ (ಇಂದಿನ ಒಕ್ಕುಂದ, ಬೆಳಗಾಂ ಜಿಲ್ಲೆ)—ಈ ನಗರಗಳನ್ನು ಮೇರೆಯಾಗುಳ್ಳ ಭೂಭಾಗದಲ್ಲಿ ತಿರುಳುಗನ್ನಡದ ನಾಡು ಶೋಭಿಸುತ್ತಿತ್ತೆಂಬುದು ಇದರ ಆಶಯ. ಈ ನಾಲ್ಕು ನಗರಗಳೂ ತ. ಸು. ಶಾಮರಾಯ ಮತ್ತು ಮೇ. ರಾಜೇಶ್ವರಯ್ಯ ಅವರೆಂದಿರುವಂತೆ, "ಕನ್ನಡ ನುಡಿ ದೇವಿಯ ಚಿತ್ರಕ್ಕೆ ನಾಲ್ಕು ದಿಕ್ಕುಗಳಲ್ಲಿಯೂ ಹಚ್ಚಿಟ್ಟ ದೀಪದ ಕಂಭಗಳಂತೆ" ಭಾಸವಾಗುತ್ತವೆ.[53]

ಇಂಥ ನಾಡಿನಲ್ಲಿದ್ದ ಕನ್ನಡಿಗರು ಸಹಜವಾಗಿಯೇ "ಹದವರಿತು ನುಡಿಯಲೂ ನುಡಿದುದನ್ನು ಅರ್ಥಮಾಡಿಕೊಂಡು ವಿಚಾರಮಾಡಲೂ ಸಮರ್ಥರಾಗಿದ್ದಾರೆ; ಸ್ವಾಭಾವಿಕವಾಗಿ ಬುದ್ಧಿಶಾಲಿಗಳು; ಕುರಿತು ಓದದಿದ್ದರೂ ಕಾವ್ಯಪ್ರಯೋಗ ಪರಿಣತಮತಿಗಳು" ಎಂದೂ "ಕುರಿತವರಲ್ಲದೆ ಇತರರೂ ತಂತಮ್ಮ ನುಡಿಯಲ್ಲಿ ಜಾಣರಾಗಿದ್ದಾರೆ" ಎಂದೂ ಮುಂತಾಗಿ ಕವಿರಾಜಮಾರ್ಗಕಾರನು ಕೊಂಡಾಡಿದ್ದಾನೆ.

ಅಷ್ಟೇ ಅಲ್ಲ, ಇಂಥ ವೈಶಿಷ್ಟ್ಯದ ಕನ್ನಡಿಗರ ಭಾಷೆಯಾದ ಕನ್ನಡದಲ್ಲಿ 'ಗದ್ಯಾಶ್ರಮ ಗುರುತಾಪ್ರತೀಯಂ ಕೆಯ್ಕೊಂಡ' ಗದ್ಯಕವಿಗಳೂ, 'ಲಕ್ಷ್ಯಂ ತದಾದ್ಯಕಾವ್ಯಕ್ಕೆಂದುಂ' ಎಂಬಂಥ ಕೃತಿಗಳನ್ನು ರಚಿಸಿದ ಪದ್ಯಕವಿಗಳೂ ಇದ್ದರೆಂದು ಕವಿರಾಜಮಾರ್ಗಕಾರ ಕೀರ್ತಿಸಿದ್ದಾನೆ.

**ದಕ್ಷಿಣೋತ್ತರ ಮಾರ್ಗಗಳು :** ಕವಿರಾಜಮಾರ್ಗಕಾರ ಕನ್ನಡ ಭಾಷೆಯ ಬಗೆಗೆ ಇನ್ನೂ ಅನೇಕ ವಿಷಯಗಳನ್ನು ನಮಗೆ ತಿಳಿಸಿಕೊಟ್ಟಿದ್ದಾನೆ. ಇವುಗಳಲ್ಲಿ ಮುಖ್ಯವಾಗಿರುವುದು ಕನ್ನಡದ ಪ್ರಾದೇಶಿಕ ಬಗೆಗಳಿಗೆ ಸಂಬಂಧಿಸಿದ ವಿವರಣೆ. ಇದು ತೊಡಕಿನ ಪ್ರಶ್ನೆಯಾಗಿದೆ ಹಾಗೂ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿಗೆ ಎಡೆಗೊಟ್ಟಿದೆ. ಭೌಗೋಳಿಕ ಹಾಗೂ ಪ್ರಾಕೃತಿಕ ಕಾರಣಗಳಿಂದಾಗಿ ಬಹುಮಟ್ಟಿಗೆ ಪರಸ್ಪರ ಬೇರ್ಪಟ್ಟಿದ್ದ ವಿಶಾಲ

ವಾದ ಕನ್ನಡ ನಾಡಿನಲ್ಲಿ ಪ್ರಾದೇಶಿಕ ಭೇದಗಳು ಇಂದಿನಂತೆ ಅಂದೂ ಇದ್ದಿರುವುದೂ ಸಹಜವೇ ಆಗಿದೆಯಾದರೂ, ಈ ಸಂಬಂಧವಾದ ಕವಿರಾಜಮಾರ್ಗದ ವಿವರಣೆ ಹಾಗೂ ವಿಶ್ಲೇಷಣೆ ಅಸಂದಿಗ್ಧವಾಗಿ, ಸುಸಂಗತವಾಗಿ ಬಂದಿಲ್ಲ. ಅಷ್ಟೇ ಅಲ್ಲ, ಮುಂದೆ ಬಂದ ನಾಗವರ್ಮ ಹಾಗೂ ಭಟ್ಟಾಕಳಂಕರ ವಿವರಣೆಗಳಿಂದಲೂ ಈ ಸಮಸ್ಯೆ ಸ್ಪಷ್ಟವಾಗುವುದಿಲ್ಲ. ಕೆಲವೊಂದು ಪೂರ್ವಾಗ್ರಹಗಳೂ ಸಂಸ್ಕೃತ ಲಾಕ್ಷಣಿಕರ ಅತಿಯಾದ ಪ್ರಭಾವವೂ ಕವಿರಾಜಮಾರ್ಗಕಾರನ ವಿವರಣೆಯ ಅಸಮರ್ಪಕತೆಗೆ ಕಾರಣವಾಗಿರುವಂತೆ ತೋರುತ್ತದೆ. ಈ ವಿವರಗಳ ಪ್ರಸ್ತಾವಕ್ಕೆ ಕಾರಣವಾಗಿರುವ ದಂಡಿಯ ಕೃತಿಯ ತತ್ಸಂಬಂಧ ಭಾಗವನ್ನು ಯಥಾವತ್ತಾಗಿ ಅನುವಾದಿಸಿ ಕೊಟ್ಟು ಬಿಟ್ಟಿದ್ದರೆ, ಈ ಸಂಬಂಧವಾದ ಬಹುಪಾಲು ಪ್ರಶ್ನೆಗಳಿಗೆ ಅವಕಾಶವೇ ಇರುತ್ತಿರಲಿಲ್ಲ. ಆದರೆ ಹಾಗೆ ಮಾಡದೆ, ದಂಡಿಯ ಮಾರ್ಗದ್ವಯ ಲಕ್ಷಣ ನಿರೂಪಣೆಯನ್ನು ಅನುವಾದಿಸುವ ಸಂದರ್ಭದಲ್ಲಿ ಭಾಮಹನು ಹೇಳುವ ಉಕ್ತಿರೀತಿಗಳನ್ನೂ ಸಮನ್ವಯಿಸಿ ಎಂ. ವಿ. ಸೀತಾರಾಮಯ್ಯನವರು ಉಚಿತವಾಗಿಯೇ ಎಂದಿರುವಂತೆ, ವಿಷಯವನ್ನೇ ಜಟಿಲಗೊಳಿಸಿದ್ದಾನೆ.[54] ಹೀಗಾಗಿ, ಈ ವಿಚಾರವಾಗಿ ಕವಿರಾಜಮಾರ್ಗಕಾರನು ನೀಡಿರುವ ವಿವರಣೆಯ ಕೆಲವಂಶಗಳನ್ನು ಇಲ್ಲಿ ಗಮನಿಸಬಹುದು.

'ಮಾರ್ಗ'ಶಬ್ದ 'ಕವಿರಾಜಮಾರ್ಗ'ದಲ್ಲಿಯೇ ವಿವಿಧ ಅರ್ಥಗಳಲ್ಲಿ ಬಳಕೆಗೆ ಬಂದಿದೆಯಾದರೂ, ಈ ವಿವೇಚನೆಯಲ್ಲಿ ಭಾಷಾಸಂಪ್ರದಾಯ ಎಂಬ ಅರ್ಥದಲ್ಲಿಯೇ ಈ ಶಬ್ದವನ್ನು ಬಳಸಲಾಗುತ್ತದೆ. 'ಮಾರ್ಗಾನುರೂಪ ಪದಪ್ರಯೋಗ'ದ ವಿಶದೀಕರಣ ಸಂದರ್ಭದಲ್ಲಿನ ಒಂದೇ ಒಂದು ಪ್ರಸಂಗದಲ್ಲಿ ಉತ್ತರ ಮಾರ್ಗದ ಒಂದು ಪ್ರಭೇದವೆಂದೇ ಪರಿಗಣಿಸಬೇಕಾಗಿರುವ 'ಉತ್ತರೋತ್ತರ ಮಾರ್ಗ'ದ ಉಲ್ಲೇಖ ಬಂದಿರುವುದನ್ನು ಬಿಟ್ಟರೆ, ಉಳಿದಂತೆ ಕೃತಿಯ ಉದ್ದಕ್ಕೂ 'ದಕ್ಷಿಣ' ಮತ್ತು 'ಉತ್ತರ' ಎಂಬ ಎರಡು ಮಾರ್ಗಗಳ ಹೆಸರೇ ಕಾಣದೊರೆಯುತ್ತದೆ. ಪರ್ಯಾಯವಾಗಿ ಉಭಯಮಾರ್ಗ, ಮಾರ್ಗದ್ವಿತಯ ಇತ್ಯಾದಿ ಮಾತುಗಳನ್ನು ಬಳಸಿರುವಾಗಲೂ, ಈ ಎರಡು ಮಾರ್ಗಗಳೇ ಲಕ್ಷಿತವಾಗಿರುತ್ತವೆ.

ಕವಿರಾಜಮಾರ್ಗಕಾರನು "ಪುರಾತನ ಕವಿಗಳಿಗೆ ವಿದಿತವಾಗಿರುವ ಉತ್ತರ ಮತ್ತು ದಕ್ಷಿಣ ಮಾರ್ಗಗಳನ್ನು ನಾನು ತಿಳಿದಿರುವ ಮಟ್ಟಿಗೆ ಹೇಳುತ್ತೇನೆ" ಎಂಬುದಾಗಿಯೂ, "ಈ ಮಾರ್ಗ ವಿಶದೀಕರಣದಲ್ಲಿ ಪೂರ್ವಶಾಸ್ತ್ರ ಪದವಿಧಿಯನ್ನು ಆಶ್ರಯಿಸುತ್ತೇನೆ" ಎಂಬುದಾಗಿಯೂ ಹೇಳಿಕೊಂಡಿದ್ದಾನೆ. ಇದರ ದುಷ್ಕರತೆಯನ್ನು 'ಮಾರ್ಗಗತಿಯಂ ತಱಿಸಲಾಗದಾರ್ಗಂ' ಎಂಬ ಮಾತಿನ ಮೂಲಕ ಸೂಚಿಸಿಯೂ ಇದ್ದಾನೆ. ಆದರೆ, ಕವಿರಾಜಮಾರ್ಗಕ್ಕೂ ಹಿಂದಿನ ಲಕ್ಷಣ ಗ್ರಂಥವಾವುದೂ ಉಪಲಬ್ಧವಾಗಿಲ್ಲದೆ ಇರುವುದರಿಂದಲೂ ಅಂಥ ಗ್ರಂಥವೊಂದು ಲಭ್ಯವಾಗುವ ಸಂಭವವೂ ಬಹುಮಟ್ಟಿಗೆ ಇಲ್ಲವಾಗಿರುವುದರಿಂದಲೂ, 'ಪೂರ್ವಶಾಸ್ತ್ರ'ವೆಂಬ ಪದ ಸಂಸ್ಕೃತದ ಲಕ್ಷಣಗ್ರಂಥಗಳನ್ನೇ ಸೂಚಿಸುತ್ತದೆಂದು ಹೇಳಬೇಕಾಗುತ್ತದೆ. ದಂಡಿಯ 'ಕಾವ್ಯಾದರ್ಶ'ವನ್ನು ಅನುಸರಿಸಿರುವುದು ಹಾಗೂ

ಭಾಮಹನ 'ಕಾವ್ಯಾಲಂಕಾರ'ದ ಕೆಲವೊಂದು ಅಂಶಗಳನ್ನು ಆತ್ಮೀಕರಿಸಿಕೊಳ್ಳಲು ಯತ್ನಿಸಿರುವುದು ಈ ಮಾತಿಗೆ ಸಮರ್ಥನೆಯನ್ನು ಒದಗಿಸುತ್ತವೆ.

ಸಂಸ್ಕೃತ ಲಾಕ್ಷಣಿಕರನ್ನು ಕಣ್ಣುಮುಚ್ಚಿ ಅನುಸರಿಸದೆ ಕವಿರಾಜಮಾರ್ಗಕಾರ ಸ್ವಂತಿಕೆಯನ್ನು ಮೆರೆಯಬಲ್ಲನೆಂಬುದಕ್ಕೂ ಕನ್ನಡ ಭಾಷೆಯ ಬಗೆಗಿನ ಆತನ ಸಂವೇದನೆ ಎಷ್ಟು ಸೂಕ್ಷ್ಮವಾಗಿದೆ ಎಂಬುದಕ್ಕೂ ಈ ಸಂಬಂಧವಾದ ವಿವರಣೆಗಳೂ ಲಕ್ಷ್ಯ ಪದ್ಯಗಳೂ ಸಾಕ್ಷಿಯಾಗಿವೆ. ಒಂದು ಘಟ್ಟದವರೆಗೆ ಕವಿರಾಜಮಾರ್ಗಕಾರನ ವಿವರಣೆ ಸಂಬದ್ಧವಾಗಿರುವಂತೆಯೂ ತೋರುತ್ತದೆ. ಆದರೆ, 'ಮಾರ್ಗಾನುರೂಪ ಪದಪ್ರಯೋಗ'ಗಳ ವಿಚಾರ ಅಸ್ಪಷ್ಟತೆಗೆ, ಸಂದೇಹಗಳಿಗೆ ಹಾಗೂ ವಾದವಿವಾದಗಳಿಗೆ ಎಡೆಮಾಡಿಕೊಟ್ಟಿದೆ. ಈ ಸಂಬಂಧವಾದ ಆರು ಪದ್ಯಗಳು ಇವು: ೨–೧೧೨–೭.

ಆ ಉಲ್ಲೇಖಗಳ ಆಧಾರದಮೇಲೆ ದಕ್ಷಿಣೋತ್ತರ ಮಾರ್ಗಗಳಿಗೆ ವಿಶಿಷ್ಟವಾದ, ಉಭಯಮಾನ್ಯವಾದ ಹಾಗೂ ಉಭಯಮಾರ್ಗಗಳಲ್ಲಿ ನಿಂದ್ಯವಾದ ರೂಪಗಳನ್ನು ಈ ರೀತಿ ಪಟ್ಟಿಮಾಡಬಹುದು:

| ದಕ್ಷಿಣ ಮಾರ್ಗಕ್ಕೆ ವಿಶಿಷ್ಟ | ಉತ್ತರ ಮಾರ್ಗಕ್ಕೆ ವಿಶಿಷ್ಟ | ಉತ್ತರೋತ್ತರ ಮಾರ್ಗ | ಉಭಯಮಾನ್ಯ | ಉಭಯನಿಂದ್ಯ |
|---|---|---|---|---|
| ನೋೞ್ಪೆನ್ | ನೋಡುವೆನ್ | ಬರಿಪ್ಪೆನ್ | ಸೂಡುವೆನ್ | ಸೂೞ್ಪೆನ್ |
| ಬೇೞ್ಪೆನ್ | ಬೇಡುವೆನ್ | ಇರಿಪ್ಪೆನ್ | ಕೂಡುವೆನ್ | ಕೂೞ್ಪೆನ್ |
| ಬರಿಸುವೆನ್ | ಬರಿಪೆನ್ | ತರಿಪ್ಪೆನ್ | ಕಾಡುವೆನ್ | ಕಾೞ್ಪೆನ್ |
| ಇರಿಸುವೆನ್ | ಇರಿಪೆನ್ | | ತೋಡುವೆನ್ | ತೋೞ್ಪೆನ್ |
| ತರಿಸುವೆನ್ | ತರಿಪೆನ್ | | ಪರಸುವೆನ್ | ಪರಪೆನ್ |
| | | | ಬೆರಸುವೆನ್ | ಬೆರಪೆನ್ |

ಪ್ರಾದೇಶಿಕ ಭೇದಗಳ ರೂಪದಲ್ಲಿ ಅಥವಾ ವ್ಯಾಕರಣ ದೋಷಗಳ ರೂಪದಲ್ಲಿ ಕವಿರಾಜಮಾರ್ಗಕಾರ ಗುರುತಿಸಿದ ಈ ಪದಪ್ರಯೋಗಗಳ ಪಟ್ಟಿ ಬೇರಾವುದೇ ರೀತಿಯಲ್ಲಿ ದಕ್ಷಿಣೋತ್ತರ ಮಾರ್ಗಗಳ ಅಸ್ತಿತ್ವವನ್ನು ಸಮರ್ಥಿಸುವಂಥ ಅಥವಾ ಇತರ ಮೂಲಗಳಿಂದ ಸಮರ್ಥಕ ಅಂಶಗಳನ್ನು ಪಡೆದುಕೊಳ್ಳುವಂಥ ಸ್ಥಿತಿಯಲ್ಲಿಲ್ಲ. ಈ ಮಾರ್ಗಭೇದಗಳ ವಿಶದೀಕರಣಕ್ಕಾಗಿ ಉದಾಹರಿಸಲಾಗಿರುವ ಮೂರು ಲಕ್ಷ್ಯ ಪದಗಳಲ್ಲಿ ಯಾವುದೂ ಯಾವುದೇ ನೆರವನ್ನು ನೀಡುವಂತಿಲ್ಲ. ಉದಾಹರಣೆಗೆ:

ಮನದೊಳಗಾಗಳುಂ ನಿಱಿಸದಾ ಮುಳಿಸಂ ಗತರಾಗ ಮೋಹನೊ
ಯ್ಯನೆ ಮುನಿನಾಥನೆಂಬ ವಚನಾಂತರಮಿಂತಿದು ದಾಕ್ಷಿಣಾತ್ಯಕಂ।
ಮನದೊಳಗಾಗಳುಂ ನಿಱಿಸದೊಯ್ಯನೆ ಮೋಹಮನಂತೆ ರಾಗಮುಂ
ಮುನಿಸುಮನೊಲ್ಲದಂ ಮುನಿಪನೆಂಬುದಿದಕ್ಕುಮುದೀಚ್ಯವಾಚಕಂ॥ (೨–೧೦೮)

'ಒಯ್ಯನೆ' ಎಂಬ ಅವ್ಯಯವನ್ನು ಹಾಗೂ 'ಮುಳಿಸು' 'ರಾಗ' ಮತ್ತು 'ಮೋಹ' ಗಳೆಂಬ ನಾಮಪದಗಳನ್ನು ಸ್ಥಳಾಂತರಿಸುವುದು, 'ಗತ' ಎಂಬ ನೇತ್ಯಾತ್ಮಕ ವಿಶೇಷಣಕ್ಕೆ ಬದಲಾಗಿ 'ಒಲ್ಲದ' ಎಂಬ ಅಚ್ಚಕನ್ನಡ ಶಬ್ದವನ್ನು ಬಳಸಿರುವುದನ್ನು ಬಿಟ್ಟರೆ, ವರ್ಣನ ಭಾಗದಲ್ಲಿ ಯಾವುದೇ ವೈಶಿಷ್ಟ್ಯವಾಗಲಿ, ವೈಷಮ್ಯವಾಗಲಿ ಕಾಣಬರುವುದಿಲ್ಲ. ಬಂಧಾನುಗತ ಗುಣಗಳ ವರ್ಣನೆಯಲ್ಲಿ ಹೇಳಿರುವ ಅಂಶಗಳ ದೃಷ್ಟಿಯಿಂದಲೂ ಈ ಎರಡು ಮಾರ್ಗಗಳ ಭೇದಕ ಗುಣವನ್ನೇ ಕಂಡುಕೊಳ್ಳುವುದು ಸಾಧ್ಯವಿಲ್ಲವಾಗಿದೆ. ಜೊತೆಗೆ, ಈ ನ್ಯೂನತಮ ವ್ಯತ್ಯಾಸಗಳನ್ನು ಯಾವುದೇ ಮಾರ್ಗದ ಅಳಿಗವಿಯೂ ವಿಶೇಷ ಪ್ರಯಾಸವಿಲ್ಲದೆ ಅಳವಡಿಸಿಕೊಳ್ಳಬಹುದಾಗಿದೆ ಎಂಬುದನ್ನು ಗಮನಿಸಬಹುದಾಗಿದೆ. ಆರ್. ನರಸಿಂಹಾಚಾರ್ ಅವರು ಹೇಳಿರುವಂತೆ, "ಇವು ಹೇಗೆ ಪರಸ್ಪರ ಭಿನ್ನವಾಗಿವೆ ಎಂಬುದು ಎಷ್ಟು ಮಾತ್ರವೂ ಸ್ಪಷ್ಟವಾಗಿಲ್ಲ."[55] ಅಷ್ಟೇ ಅಲ್ಲ, "ಈತನ ತರುವಾಯ ಬಂದ ಲೇಖಕರಾರೂ ಇಂಥ ಭೇದಗಳನ್ನು ಅನುಸರಿಸಿದಂತೆಯೂ ಕಾಣುವುದಿಲ್ಲ."[56]

ಹೀಗಾಗಿ, ಈ ಮಾರ್ಗಭೇದಗಳ ಬಗೆಗೆ, ಕವಿರಾಜಮಾರ್ಗಕಾರನನ್ನು ಕೈಬಿಟ್ಟು, ಇತರ ಮೂಲಗಳತ್ತ ದೃಷ್ಟಿ ಹರಿಸಬೇಕಾಗಿ ಬರುತ್ತದೆ. ಅಂಥ ಎರಡು ಮೂಲಗಳೆಂದರೆ ನಾಗವರ್ಮನ 'ಕಾವ್ಯಾವಲೋಕನ' ಹಾಗೂ ಭಟ್ಟಾಕಳಂಕನ 'ಶಬ್ದಾನುಶಾಸನ.' ಆದರೆ ಈ ಆಕರಗಳೂ ನಮಗೆ ನಿರಾಶೆಯನ್ನುಂಟುಮಾಡುತ್ತವೆ.

'ಕಾವ್ಯಾವಲೋಕನ'ದ ಮೂರನೆಯ ಅಧ್ಯಾಯದಲ್ಲಿ ನಾಗವರ್ಮ ಹೆಸರಿಸಿರುವ ದಕ್ಷಿಣೋತ್ತರ ಮಾರ್ಗಗಳು ವಾಸ್ತವವಾಗಿ ದಂಡಿಯ ಗೌಡ ಮತ್ತು ವೈದರ್ಭ ಮಾರ್ಗಗಳಿಗೆ ಸಂವಾದಿಯಾಗಿರುವುವೆಂಬುದನ್ನೂ 'ಕಾವ್ಯಾವಲೋಕನ'ದ ೫೦೦ ರಿಂದ ೫೨೧ರ ವರೆಗಿನ ಪದ್ಯಗಳು 'ಕಾವ್ಯಾದರ್ಶ'ದ ೪೧ ಮತ್ತು ೪೨ನೆಯ ಪದ್ಯಗಳ ಅನುವಾದ ಮಾತ್ರವೆಂಬುದನ್ನೂ ಅವು ಕನ್ನಡದಲ್ಲಿ ಪ್ರಚಲಿತವಾಗಿದ್ದ ಯಾವುದೇ ಮಾರ್ಗಗಳನ್ನೂ ಸೂಚಿಸುವುದಿಲ್ಲವೆಂಬುದನ್ನೂ ಆರ್. ನರಸಿಂಹಾಚಾರ್ಯರು ತೋರಿಸಿಕೊಟ್ಟಿದ್ದಾರೆ.[57] ಹೀಗಾಗಿ ಈ ಸಂಬಂಧವಾದ ವಿಶೇಷ ಚರ್ಚೆ ಇಲ್ಲಿ ಅಗತ್ಯವಾಗುವುದಿಲ್ಲ.

ಭಟ್ಟಾಕಳಂಕನೇನೋ 'ಶಬ್ದಾನುಶಾಸನ'ದ ೨೮೮ನೆಯ 'ಆದೆನಃ' ಸೂತ್ರದ ಬಗೆಗಿನ ವ್ಯಾಖ್ಯಾನದಲ್ಲಿ ಕನ್ನಡದ ದಕ್ಷಿಣೋತ್ತರ ಮಾರ್ಗಗಳನ್ನು ಹೆಸರಿಸುವುದರ ಜೊತೆಗೆ, ಉತ್ತಮಪುರುಷ ಸರ್ವನಾಮರೂಪಗಳಲ್ಲಿ 'ನಾನ್' ಎಂಬುದನ್ನು ಉತ್ತರದ ಕವಿಗಳೂ, 'ಆನ್' ಎಂಬುದನ್ನು ದಕ್ಷಿಣದ ಕವಿಗಳೂ ಬಳಸುತ್ತಾರೆಂದು ಹೇಳಿದ್ದಾನೆ. ಆ ಉಲ್ಲೇಖ ಈ ರೀತಿ ಇದೆ: "....ಅತೋತ್ರಾಸ್ಮದರ್ಥವಾಚಕೋ ನನ್ಶಬ್ದ ಏವಾಭಿಮನ್ತವ್ಯ ಇತಿ॥ ತಥಾಪಿ ಸಕೈಶ್ಚಿದೇವಾಙ್ಗೀಕ್ರಿಯತೇ। ಉತ್ತರಮಾರ್ಗಾನುಗಾಮಿಭಿಃ ಕವೀಶ್ವರೈರ್ನ ಸರ್ವೈಃ। ದಕ್ಷಿಣಮಾರ್ಗಾನುಯಾಯಿಭಿಸ್ತ್ವೆರನಙ್ಗೀಕಾರಾತ್। ಎನ್ಪಕ್ಷಪಾತಿನೋ ಹಿ ದಾಕ್ಷಿಣಾತ್ಯಾಃ ಕವಿಜನಾ ಇತಿ॥ ದಕ್ಷಿಣೋತ್ತರಮಾರ್ಗಭೇದಭಿನ್ನಪ್ರಯೋಗಚಾತುರೀ ಪ್ರಪಞ್ಚೋ ನೃಪತುಂಗಗ್ರನ್ಥೇ ದ್ರಷ್ಟವ್ಯ ಇತಿ॥"[58]

ಆದರೆ, ಇಂಥ ಹೇಳಿಕೆಗೆ ಉಪಲಬ್ಧ ಸಾಹಿತ್ಯದಿಂದ ಯಾವುದೇ ಪುಷ್ಟಿ ದೊರೆಯುವುದಿಲ್ಲ ಎಂಬುದನ್ನೂ ದಕ್ಷಿಣೋತ್ತರ ಕವಿಗಳೆಲ್ಲ ಭೇದವಿವಕ್ಷೆಯಿಲ್ಲದೆ 'ನಾನ್', 'ಆನ್' ಶಬ್ದಗಳನ್ನು ಬಳಸಿದ್ದಾರೆಂಬುದನ್ನೂ ಗಮನಿಸಿದರೆ ಭಟ್ಟಾಕಳಂಕನಿಂದಲೂ ಈ ಸಂಬಂಧವಾದ ಚರ್ಚೆಗೆ ಯಾವುದೇ ನೆರವು ದೊರೆಯುವುದಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಜೊತೆಗೆ, ಇನ್ನೂ ಮುಖ್ಯವಾದ ವಿಚಾರವೆಂದರೆ, 'ಕವಿರಾಜಮಾರ್ಗ'ದ ದಕ್ಷಿಣೋತ್ತರ ಮಾರ್ಗಗಳ ವಿವೇಚನೆಯಲ್ಲಿ 'ಆನ್', 'ನಾನ್' ಶಬ್ದಗಳ ವಿಚಾರವೇ ಎಲ್ಲಿಯೂ ಕಾಣಿಸಿಕೊಳ್ಳದಿರುವುದು ಹಾಗೂ ಅವೆರಡನ್ನೂ ಸ್ವೇಚ್ಛೆಯಾಗಿ—ಉದಾಹರಣೆ: (i) "ಅತಿಶಯಧವಳಂ ನಮಗೀಗತರ್ಕಿತೋಪಸ್ಥಿತ ಪ್ರತಾಪೋದಯಮಂ"; (ii) "ನೆರಮಕ್ಕಾ ಪರಮುಕವೀಶ್ವರೆಮಗೀ ಕೃತಿಯೊಳ್"—ಬಳಸಿರುವುದು.

ಮಾರ್ಗಭೇದ ವಿಷಯಕವಾದ ಚರ್ಚೆಗೆ ಹೊರಗಿನ ಆಕರಗಳಿಂದಲೂ ಯಾವುದೇ ಉಪಯುಕ್ತ ಕಾಣಿಕೆ ಸಲ್ಲದೆ ಇರುವುದರಿಂದ, ಇಂಥ ಮಾರ್ಗಗಳು ವಾಸ್ತವವಾಗಿ ಎಂದಾದರೂ ಅಸ್ತಿತ್ವದಲ್ಲಿದ್ದುವೇ, ಹಾಗೇನಾದರೂ ಇದ್ದಲ್ಲಿ ಅದಕ್ಕೆ ಕಾರಣಗಳಾವುವು ಎಂಬ ಪ್ರಶ್ನೆಗಳು ಸಹಜವಾಗಿಯೇ ಏಳುತ್ತವೆ. ಹೀಗಾಗಿ ಈ ವಿಷಯ ವಿದ್ವಾಂಸರಲ್ಲಿ ತೀವ್ರ ಭಿನ್ನಾಭಿಪ್ರಾಯಗಳಿಗೆ ಎಡೆಮಾಡಿಕೊಟ್ಟಿದೆ.

ವಾಸ್ತವವಾಗಿ ದಕ್ಷಿಣೋತ್ತರ ಮಾರ್ಗಗಳ ನಡುವಣ ಭೇದ ಅತ್ಯಲ್ಪವೂ ಅಮುಖ್ಯವೂ ಆಗಿರುವುದೇ ಇಂಥ ಭೇದಗಳು ಕಾರ್ಯತಃ ಅಥವಾ ವ್ಯವಹಾರತಃ ಅಸ್ತಿತ್ವದಲ್ಲಿರಲಿಲ್ಲವೆಂದು ವಾದಿಸುವ ವಿದ್ವಾಂಸರಿಗೆ ಪ್ರಬಲ ಆಧಾರವನ್ನು ಒದಗಿಸುತ್ತದೆ. ಅಭೇದವಾದಿ ವಿದ್ವಾಂಸರ ವಾದವನ್ನು 'ಕನ್ನಡ ಕೈಪಿಡಿ'ಯಲ್ಲಿ ಹೀಗೆ ಸಂಗ್ರಹಿಸಲಾಗಿದೆ: "ಕವಿರಾಜಮಾರ್ಗದಲ್ಲಿ ಉಕ್ತವಾಗಿರುವ ಮಾರ್ಗ ಭೇದಗಳು ಎಷ್ಟು ಕಾಲದವರೆಗೆ ನಿಂತಿದ್ದುವು? ಹತ್ತನೆಯ ಶತಮಾನದಲ್ಲಿ ಹುಟ್ಟಿದ ಪಂಪಭಾರತದಲ್ಲಿ ನೋಟ್ಪಿ, ಮಾಟ್ಪಿ, ಬೇಟ್ಪಿ ಎಂಬ ರೂಪಗಳು ದೊರೆಯುತ್ತವೆ. ಹಾಗಾದರೆ 'ಉತ್ತರ ಕರ್ಣಾಟಕದ ಪಂಪನ ತಿರುಳ್ಗನ್ನಡವು ದಕ್ಷಿಣಮಾರ್ಗಕ್ಕೆ ಸೇರಿದುದಾಯಿತು. ಆದಿಪುರಾಣದಲ್ಲಿ ಕೊಲಿಪ, ಲಲ್ಲಯಿಪ–ರೂಪಗಳಲ್ಲದೆ ಶೋಕಿಪ್ಪ ಎಂಬ ರೂಪವು ದೊರೆಯುತ್ತದೆ. ಅಷ್ಟೇ ಅಲ್ಲ, ಶಿವಮೊಗ್ಗೆಯ ಶಾಸನ ಒಂದರಲ್ಲಿ ಪುರುಡಿಪ್ಪ ಎಂಬ ರೂಪವು ಹೇಗೆ ಬಂದಿತು, 'ನಮಗೆ', 'ಎಮ್ಮೊಳ್' ಎಂಬ ಎರಡು ರೂಪಗಳೂ ಪಂಪರಾಮಾಯಣದ ಮೊದಲನೆಯ ಎರಡು ಪದ್ಯಗಳಲ್ಲಿಯೇ ಇವೆಯಲ್ಲ!"[೬೯] ಅಂದರೆ, 'ಕವಿರಾಜಮಾರ್ಗೋಕ್ತ'ವಾಗಿರುವ ಭೇದಕ ಗುಣಗಳು ವಾಸ್ತವವಾಗಿ ಸಾಹಿತ್ಯಕ್ಷೇತ್ರದಲ್ಲಿ ಅಮಾನ್ಯವೇ ಆಗಿದ್ದು, ಇಂಥ ಮಾರ್ಗಗಳ ಅಸ್ತಿತ್ವದ ಬಗೆಗೇ ಸಂದೇಹ ಉಂಟಾಗುತ್ತದೆ.

ಒಟ್ಟಿನಲ್ಲಿ, ಈ ಮಾರ್ಗಭೇದಗಳ ಬಗೆಗೆ ಇಷ್ಟು ಮಾತನ್ನು ಹೇಳಬಹುದೆಂದು ತೋರುತ್ತದೆ: 'ಕವಿರಾಜಮಾರ್ಗ'ಕ್ಕೆ ಹಿಂದಿನ ಅಥವಾ ಆ ಕಾಲದ ಭಾಷಿಕ ವಿಶ್ಲೇಷಣೆಗೆ ಅಗತ್ಯವಾದಷ್ಟು ಸಾಮಗ್ರಿ ಲಭ್ಯವಾಗಿಲ್ಲದೆ ಇರುವುದರಿಂದ ಈ ಮಾರ್ಗಗಳ

ಸಮರ್ಥನೆ ಅಥವಾ ಆತ್ಯಂತಿಕ. ಅಸಮರ್ಥನೆ ಅಸಾಧ್ಯವಾಗಿದೆ. ಕೃತಿಯಲ್ಲೇ ಉಕ್ತವಾಗಿರುವ ಬೆರಳೆಣಿಕೆಯ ಪ್ರಯೋಗೋದಾಹರಣೆಗಳು ಮಾರ್ಗಭೇದಗಳನ್ನು ಸ್ಪಷ್ಟವಾಗಿ ಗುರುತಿಸಿ, ವಿವರಿಸಲು ಸಹಾಯಕವಾಗುವಂತಿಲ್ಲ. ಜೊತೆಗೆ, ಕೈಪಿಡಿಕಾರರು ಹೇಳಿರುವಂತೆ, "ಎರಡು ಮಾರ್ಗದ ಪ್ರಯೋಗಗಳೂ ಎಲ್ಲ ಪ್ರಾಂತಗಳಲ್ಲಿಯೂ ರೂಢಿಯಲ್ಲಿದ್ದುವೆಂಬುದಕ್ಕೆ ದಕ್ಷಿಣೋತ್ತರ ಮಾರ್ಗಭೇದವನ್ನು ಸೂಚಿಸುವ ಕವಿರಾಜ-ಮಾರ್ಗದ ಭಾಗವೇ ಆಧಾರವಾಗಿದೆ. ಅದರಲ್ಲಿ ಕಾಡುವೆನ್, ತೋಡುವೆನ್ ಎಂಬವನ್ನು ಕಾಟ್ಟಿಪೆನ್, ತೋಟ್ಟಿಪೆನ್ ಎಂದೂ, ಪರಸುವೆನ್ ಬೆರಸುವೆನ್ ಎಂಬಿವನ್ನು ಪರಪೆನ್ ಬೆರಪೆನ್ ಎಂದು ಪ್ರಯೋಗ ಮಾಡಕೂಡದೆಂದು ಹೇಳಿದೆ. ಉತ್ತರಮಾರ್ಗದ ಪ್ರಯೋಗಗಳಲ್ಲಿ ಕೆಲವನ್ನಾದರೂ ದಕ್ಷಿಣಮಾರ್ಗದವರೂ ದಕ್ಷಿಣಮಾರ್ಗದ ಪ್ರಯೋಗಗಳಲ್ಲಿ ಕೆಲವನ್ನಾದರೂ ಉತ್ತರಮಾರ್ಗದವರೂ ಆಗ ಪ್ರಯೋಗ ಮಾಡುತ್ತಿದ್ದರೆಂದು ಇದರಿಂದ ಸಿದ್ಧವಾಗುವುದಿಲ್ಲವೆ?"[60] ಅಷ್ಟೇ ಅಲ್ಲ, ಕವಿರಾಜಮಾರ್ಗವೇ ದಕ್ಷಿಣಮಾರ್ಗ ವಾಚಕಕ್ಕೂ—ಉದಾ: 'ಎಮಗೆ' (೧–೪), 'ನೋಟ್ಟಿಪ್ಪ' (೧–೮೯)—, ಉತ್ತರ ಮಾರ್ಗ ವಾಚಕಕ್ಕೂ—ಉದಾ: 'ನಮಗೆ' (೧–೨)—, ಹಾಗೂ ಉತ್ತರೋತ್ತರ ಮಾರ್ಗ ವಾಚಕಕ್ಕೂ—ಉದಾ: 'ಸೊಗಯಿಪ್ಪುದಾಯ್ತು' (೨–೨೧೦)–ಉದಾಹರಣೆಗಳನ್ನು ಒದಗಿಸುವಾಗ ಈ ಭೇದವಾದ ಸ್ವತಃ ಅಸಮರ್ಥಿತವಾಗಿ, ಕುಸಿಯುತ್ತದೆ. ಎಂ. ಎಂ. ಕಲಬುರ್ಗಿಯವರೆಂದಿರುವಂತೆ "'ದಕ್ಷಿಣೋತ್ತರ ಮಾರ್ಗ' ಎಂಬುದು ಪ್ರಾಂತ ಭೇದ ಸೂಚಿಯಲ್ಲವೆನ್ನಬೇಕಾಗುತ್ತದೆ."[61] ಹೀಗಾಗಿ, ಈ ಮಾರ್ಗಗಳ ಅಸ್ತಿತ್ವಕ್ಕೆ ಕಾರಣಭೂತವಾಗಿರುವಂಥ ಪ್ರಭಾವಗಳನ್ನು ಇತರತ್ರ ಅರಸುವುದು ಹಾಗೂ "ಅತ್ಯಲ್ಪವಾಗಿಯೂ ಅಮುಖ್ಯವಾಗಿಯೂ ಇರುವ ಭೇದವನ್ನು ಆಧಾರವಾಗಿಟ್ಟುಕೊಂಡು ದಕ್ಷಿಣೋತ್ತರ ಮಾರ್ಗಗಳಿಗಾಗಿ ಈಗ ಹೋರಾಡುವುದು ಅಷ್ಟು ಪ್ರಯೋಜನಕಾರಿಯಲ್ಲ."[62] ಪರಿಸ್ಥಿತಿ ಹೀಗಿರುವಾಗ, ಎಂ. ವಿ. ಸೀತಾರಾಮಯ್ಯನವರೆಂದಿರುವಂತೆ, ಪ್ರಚಲಿತ ಮಾರ್ಗಭೇದದ ನಿರೂಪಣೆ ಕವಿರಾಜಮಾರ್ಗದಲ್ಲಿ ಕಾಣದೊರೆಯುತ್ತದೆಂಬುದಕ್ಕಿಂತ ಇಂಥ ಮಾರ್ಗಗಳನ್ನು ಹಾಕಿಕೊಡುವ ಪ್ರಯತ್ನವೊಂದು ನಡೆದಿದೆ ಎಂದು ಭಾವಿಸುವುದೇ ಉಚಿತವಾಗುತ್ತದೆ" ಹಾಗೂ "ಈ ಮಾರ್ಗದ್ವಯದ ಕಲ್ಪನೆ ದಂಡಿಯ ಅನುಸರಣೆಯಿಂದ ಸಂಭವಿಸಿರುವ ಒಂದು ಅನೌಚಿತ್ಯ"[63] ಎಂಬುದೇ ಈ ವಿಷಯಕವಾದ ಕೊನೆಯ ಮಾತಾಗಿ ತೋರುತ್ತದೆ.

'ಪಟಿಗನ್ನಡ': 'ಕವಿರಾಜಮಾರ್ಗ'ದಲ್ಲಿ ಕಾಣದೊರೆಯುವ ಮತ್ತೊಂದು ಭಾಷಾ ಸಂಬಂಧವಾದ ಉಲ್ಲೇಖ 'ಪಟಿಗನ್ನಡ'ಕ್ಕೆ ಸಂಬಂಧಿಸಿರುವುದು. ಆ ಉಲ್ಲೇಖ ಹೀಗಿದೆ: "....ಪಟಿಗನ್ನಡಮಂ। ಪೊಲಗೆಡಿಸಿ ನುಡಿವರಾಗಮ। ಬಲಹೀನರ್ ದೇಸಿಯಲ್ಲದೆಂದಱಿದಿರ್ದುಂ (೧–೪೮)

ಕಾವ್ಯಶಾಸ್ತ್ರಗಳಲ್ಲಿ ಪರಿಶ್ರಮವಿಲ್ಲದಿರುವಂಥ ವ್ಯಕ್ತಿಗಳು 'ಪಟಿಗನ್ನಡ' ಪ್ರಚಲಿತ ಭಾಷೆಯಲ್ಲವೆಂಬುದನ್ನು ಅರಿತಿದ್ದೂ, ಅದನ್ನು ಹೊಲಗೆಡಿಸಿ ನುಡಿಯುತ್ತಿದ್ದರೆಂಬುದು

'ಕವಿರಾಜಮಾರ್ಗ'ಕಾರನ ಅಭಿಪ್ರಾಯವಾಗಿದೆ. ಈ ಅಭಿಪ್ರಾಯವನ್ನು ಮುಂದುವರಿಸಿ ಆತನು ಕೊಡುವ ಒಂದು ಸೂಚನೆ ಆತನ ಸಾಮಯಿಕ ಪ್ರಜ್ಞೆಗೂ ಕ್ರಾಂತದರ್ಶಿತ್ವಕ್ಕೂ ಸಾಕ್ಷಿಯಾಗಿದೆ. ಕಾಲಪ್ರವಾಹದೊಂದಿಗೆ ಭಾಷೆಯ ಸ್ವರೂಪ, ಪ್ರಯೋಗ ವಿಧಾನಗಳೆಲ್ಲ ಬದಲಾಗುತ್ತ ಹೋಗುವುದರಿಂದ ತನ್ನ ಕಾಲದ ಓದುಗರನ್ನು ದೃಷ್ಟಿಯಲ್ಲಿರಿಸಿಕೊಂಡು ಬರೆಯುವ ಲೇಖಕ ತನ್ನ ಕಾಲದ ಭಾಷೆಯಲ್ಲಿಯೇ ವ್ಯವಹರಿಸಬೇಕೆಂಬುದನ್ನು ಆತನು ಗಮನಿಸಿದ್ದಾನೆ. ಪ್ರಾಚೀನ ಭಾಷಾರೂಢಿ ಹಾಗೂ ಪ್ರಯೋಗಗಳು ಹಿಂದಿನ ಕಾವ್ಯಗಳಲ್ಲಿ ಶೋಭಿಸುವುದಕ್ಕೆ ಕಾರಣ ಅವು ಆ ಕಾಲಕ್ಕೆ ಸಂಗತವಾಗಿದ್ದುದು ಎಂಬುದನ್ನು ಆತನು ಕಂಠೋಕ್ತವಾಗಿ ಹೇಳಿದ್ದಾನೆ. ಆದರೆ, ಇಂದಿನ ಕಾವ್ಯಗಳಲ್ಲಿಯೂ ಹಿಂದಿನ ರೂಢಿಗಳಿಗೆ ಲೇಖಕ ಶರಣಾಗುವುದಾದರೆ, ಅದು ಯುಗಧರ್ಮಕ್ಕೂ ಭಾಷಾಧರ್ಮಕ್ಕೂ ವಿರುದ್ಧವಾಗುತ್ತದೆ. ತನ್ನ ಈ ಅಭಿಪ್ರಾಯವನ್ನು, "ದೊರೆಕೊಂಡಿರೆ ಸೊಗಯಿಸುಗುಂ। ಪುರಾಣ ಕಾವ್ಯಪ್ರಯೋಗದೊಳ್" ಎಂಬ ಉಕ್ತಿಯಲ್ಲಿ ಅಭಿವ್ಯಕ್ತಿಸಿರುವುದೇ ಅಲ್ಲದೆ, "ತತ್ಕಾಲಂ। ವಿರಸಂ ಕರಮವು ದೇಸಿಗೆ" ಅಂದರೆ, ಸಮಕಾಲೀನ ಭಾಷೆಯ ಸಂದರ್ಭದಲ್ಲಿ ಅಂಥವು ವಿರಸಕಾರಕವೂ ಆಗುತ್ತವೆ ಎಂದೂ ಸೂಚಿಸಿಯೂ ಇದ್ದಾನೆ. ಅಷ್ಟಕ್ಕೇ ನಿಲ್ಲದೆ, ಇಂಥ ಕಾಲಾತೀತ ಸಾಹಸ, ಅವಿವೇಕದ ಕಾರ್ಯವಾಗುತ್ತದೆಂದೂ ಅಪಹಾಸ್ಯಕ್ಕೆಡೆಗೊಡುತ್ತದೆಂದೂ ಎಚ್ಚರಿಸಿದ್ದಾನೆ.

ಈ ಅಭಿಪ್ರಾಯಗಳು 'ಕವಿರಾಜಮಾರ್ಗ'ಕಾರನ ಕಾಲದ ಭಾಷೆಗಿಂತಲೂ ಭಿನ್ನವಾದ ಸ್ವರೂಪವನ್ನುಳ್ಳ ಕನ್ನಡ ಭಾಷೆಯ ಪೂರ್ವಸ್ಥಿತಿಯೊಂದನ್ನು ಓದುಗರು ಸಹಜವಾಗಿಯೇ ಕಲ್ಪಿಸಿಕೊಳ್ಳುವಂತೆ ಮಾಡುತ್ತದೆ. 'ಕವಿರಾಜಮಾರ್ಗ'ಕ್ಕೆ ಹಿಂದಿನ ಶಾಸನಗಳ ಭಾಷೆಯ ಹಾಗೂ ಇತರ ಲಭ್ಯಸಾಕ್ಷ್ಯಗಳ ಆಧಾರದ ಮೇಲೆ ವಿದ್ವಾಂಸರು 'ಪೂರ್ವದ ಹಳಗನ್ನಡ'ವೆಂದು ವರ್ಗೀಕರಿಸುವ ಭಾಷಾವಸ್ಥೆಯೇ ಇದು ಆಗಿರಬಹುದಾದರೂ, ಕವಿರಾಜಮಾರ್ಗಕಾರನ ಕಾಲಕ್ಕೇ ಗುರುತಿಸಲು ಅಸಾಧ್ಯವಾದಷ್ಟರ ಮಟ್ಟಿಗೆ ಆ ಭಾಷೆಯ ಸ್ವರೂಪ ಮಾರ್ಪಟ್ಟಿತ್ತೇ ಎಂಬ ಪ್ರಶ್ನೆ ಏಳುತ್ತದೆ. "ಎಲ್ಲ ಕಾಲದ ಕನ್ನಡವೂ ತನ್ನ ಹಿಂದಿನ ಕನ್ನಡವನ್ನು ಹಳಗನ್ನಡ ಎನ್ನುತ್ತಾ ಬಂದಿದೆ"[೬೪] ಎಂಬುದು ಗಮನಾರ್ಹವಾದ ಸಂಗತಿ. ಆದರೆ ಈ ವಿಚಾರದಲ್ಲಿ 'ಇದಮಿತ್ಥಂ' ಎಂದು ಹೇಳಲು ಸಾಧ್ಯವಾಗುವಂಥ ಲಕ್ಷ್ಯಪದ್ಯಗಳನ್ನೇನೂ ಆತನು ಉದಾಹರಿಸಿಲ್ಲ. ಪರಿಶ್ರಮವಿಲ್ಲದವರೂ ಅನಭ್ಯಸ್ತರೂ ಅನುಕರಣಶೀಲರೂ ಆದ ವ್ಯಕ್ತಿಗಳ ರಚನೆ ಎಷ್ಟು ದುಷ್ಕರವೂ ದುರ್ಗ್ರಾಹ್ಯವೂ ಆಗಿರಬಹುದೆಂಬುದಕ್ಕೆ ಆತನ ಈ ಲಕ್ಷ್ಯಪದ್ಯ ಸಾಕ್ಷಿ ನುಡಿಯುತ್ತದೆ :

"ಪೊಡವಿಪತಿ ಗೊರವನೆನೆ ಪೆ
ಟ್ಟಿಡೆಯದುವದೆಕರಿಸಿ ಕಬ್ಬಿಗದೂರ್ಜಱನೆಯುಂ
ಹಡುವಸುಮಱಸೆಟ್ಟಸು ಗೆಂ
ಮುಡಿಯೊಳಮಾರ್ಗೆಂದು ನುಡಿವ ಪಱಗನ್ನಡವಮಂ ॥ (?) (೧-೪೯).

ಅರ್ಥವಾದರೂ ಸ್ಪಷ್ಟವಾಗುವಷ್ಟರಮಟ್ಟಿಗೆ ಈ ಲಕ್ಷ್ಯಪದ್ಯ ಇದ್ದಿದ್ದರೆ, ಇತರ ಅಂಶಗಳನ್ನು ಹೊರಡಿಸಲು ಸಾಧ್ಯವಾಗುತ್ತಿತ್ತೋ ಏನೋ. ಕನ್ನಡ ಶಬ್ದಗಳ ಆಧಿಕ್ಯ ಮತ್ತು 'ಪ'ಕಾರ 'ಹ'ಕಾರವಾಗಿ ಮಾರ್ಪಡುತ್ತಿರುವುದರ ಸೂಚನೆ—ಇಷ್ಟೇ ಇದರಿಂದ ನಾವು ಗ್ರಹಿಸಬಹುದಾಗಿರುವ ಸಂಗತಿಗಳು. ಈ ಪದ್ಯ 'ಅರ್ಥವಾಗಬಾರದು' ಎಂದೇ ಆತನ ಗುರಿಯಿರಬೇಕು"[65] ಎಂದು ಹೇಳಲಾಗಿದೆ. ಇಷ್ಟಾಗಿಯೂ, ಈ ಉದಾಹರಣೆಯನ್ನು ಗಮನಿಸಿದಾಗ, "ಕನ್ನಡ ದೇಶಿಪದಗಳು ವಿಶಿಷ್ಟ ಮಾರ್ಗದಲ್ಲಿ ಉಪಯೋಗಿಸಲ್ಪಡುತ್ತ ಬಂದಿರುವ....ಪ್ರಾಚೀನ ಪದ್ಧತಿಯೇ ಪೞಗನ್ನಡ"[66] ಎಂಬ ಹಾಗೂ "ಮಾರ್ಗಕಾರನಿಗೆ ಭಾಷೆಯಲ್ಲಿ ತೋರಿದ ಅವಸ್ಥಾವ್ಯತ್ಯಾಸಕ್ಕಿಂತ ಕಾವ್ಯಭಾಷೆಯಲ್ಲಿ ತೋರಿದ ಶೈಲಿ ವ್ಯತ್ಯಾಸವೇ ಕಣ್ಣಿಗೆ ಹೊಡೆದು ತೋರಿರಬೇಕು. ಹೊಸ ಶೈಲಿಗೆ ಬೆನ್ನು ತೋರಿದ ಕನ್ನಡದ ಒಂದು ಹಳೆಯ ಶೈಲಿಯನ್ನೇ ಮಾರ್ಗಕಾರನು 'ಪೞಗನ್ನಡ' ಎಂದು ಕರೆದಿರಬೇಕು"[67] ಎಂಬ ಭಾವನೆಯೂ ಮೂಡಿದೆ. ಇಷ್ಟಾಗಿಯೂ, ಇದು ಪ್ರಾಂತಭೇದ ಅಥವಾ ಅವಸ್ಥಾಭೇದವಲ್ಲವೆಂಬುದು ಗಮನಾರ್ಹವಾಗಿರುವ ಸಂಗತಿ. ಈ ದೃಷ್ಟಿಯಲ್ಲಿ, ದಕ್ಷಿಣೋತ್ತರ ಮಾರ್ಗಗಳ ಬಗೆಗಿನ ಚರ್ಚೆಗಿಂತ ಈ ವಿಷಯದ ಚರ್ಚೆ ಬೇರೆಯಾಗಿ ನಿಲ್ಲುತ್ತದೆ.

'ಕವಿರಾಜಮಾರ್ಗ' 'ಕಾವ್ಯಾವಲೋಕನ' ಮುಂತಾದ ಗ್ರಂಥಗಳಲ್ಲಿ 'ಪೞಗನ್ನಡ'ವೆಂದು ಹೆಸರಿಸಲಾಗಿರುವ ಭಾಷಾವಸ್ಥೆ, ನಾವು ಇಂದು 'ಹಳಗನ್ನಡ'ವೆಂದು ಗುರುತಿಸುವ ಭಾಷಾವಸ್ಥೆಗಿಂತಲೂ ಹಿಂದಿನದೆಂಬುದು ಸ್ಪಷ್ಟವಾಗಿಯೇ ಇದೆ. ರೈಸ್ ಅವರು ಭಾಷೆಯ ಈ ಹಂತವನ್ನು 'ಪೂರ್ವದ ಹಳಗನ್ನಡ'ವೆಂದು ಹೆಸರಿಸಿದರು. ಕವಿರಾಜಮಾರ್ಗ ಇದಕ್ಕೆ ಅಗತ್ಯವಾದಂಥ ಉದಾಹರಣೆಗಳನ್ನು ಒದಗಿಸಿಲ್ಲವಾದರೂ, ಹಲ್ಮಿಡಿ ಶಾಸನದಿಂದ ಮೊದಲಾಗಿ (ಸು. ೪೫೦) ಎಂಟನೆಯ ಶತಮಾನದ ವರೆಗಿನ ಶಾಸನಗಳಲ್ಲಿ ಕಂಡುಬರುವ ಕೆಲವೊಂದು ಪ್ರಯೋಗಗಳನ್ನು—ಉದಾಹರಣೆಗೆ, ದ್ವಿತೀಯಾ ವಿಭಕ್ತಿ ಪ್ರತ್ಯಯವಾದ 'ಅನ್' ("ಅದಾನಳಿವೊನ್ಗೆ ಮಹಾಪಾತಕಮ್"—ಹಲ್ಮಿಡಿ ಶಾಸನ); ಷಷ್ಠೀ ವಿಭಕ್ತಿ ಪ್ರತ್ಯಯವಾದ 'ಆ' ("ಏೞನೆಯಾ ನರಕದಾ ಪುೞುಅಕ್ಕುಮ್"—ಬಾದಾಮಿ ಶಾಸನ; ಸು. ೫೭೮); ಸಪ್ತಮೀ ವಿಭಕ್ತಿ ಪ್ರತ್ಯಯವಾದ 'ಉಳ್' ("ಭಟ್ಟೋರನಾಳೆ ನರಿದಾವಿಳೆನಾಡುಳ್"—ಹಲ್ಮಿಡಿ ಶಾಸನ); ಆಖ್ಯಾತ ಪ್ರತ್ಯಯವಾದ 'ಅರ್' ಇತ್ಯಾದಿ ("ಮೂೞುವಳ್ಳಿಉಂ ಕೊಟ್ಟಾರ್"; ಶೌರ್ಯೋದ್ಯಮ ಭರಿತೋನ್"—ಹಲ್ಮಿಡಿ ಶಾಸನ); ನಿಷೇಧಾತ್ಮಕ ಪ್ರತ್ಯಯವಾದ 'ಆ' ("ವಿತ್ತಿದಲ್ಲಿ ವೆಳೆಯಾದೆ ಕೆಡುಗೆ"—ಶಿಕಾರಿಪುರದ ಶಾಸನ; ಸು. ೬೮೫)—ಹಳಗನ್ನಡ ವ್ಯಾಕರಣದ ತತ್ಸಂಬಂಧಿ ನಿಯಮಗಳನ್ನು ಅನ್ವಯಿಸಿ ವಿವರಿಸಲು ಸಾಧ್ಯವಾಗದೆ ಹೋಗುವುದು ಇದಕ್ಕೆ ಸಮರ್ಥನೆಯನ್ನು ಒದಗಿಸುತ್ತದೆ. ಆದರೆ, ಈ ಬಗೆಯ ಭಿನ್ನ ರೂಪಗಳು ಕನ್ನಡವು ಹಳಗನ್ನಡಕ್ಕಿಂತ ಭಿನ್ನವಾದ ಅವಸ್ಥೆಯೊಂದನ್ನು ಪಡೆದಿತ್ತೆಂಬುದನ್ನು ಸ್ಥಾಪಿಸಲು ಅಗತ್ಯವಾದ ಪ್ರಮಾಣದಲ್ಲಿಲ್ಲವೆಂದು ಕಿಟ್ಟೆಲ್ ಅವರು ಅಭಿಪ್ರಾಯ

ಪಟ್ಟಿದ್ದಾರೆ. ಜೊತೆಗೆ, ಭಾಷಾತ್ಮಕ ಪುನರ್‌ರಚನೆಯ ನಿಯಮಗಳಿಗನುಗುಣವಾಗಿ ಇವುಗಳಲ್ಲಿ ಕೆಲವೊಂದು ರೂಪಗಳನ್ನು—ಉದಾಹರಣೆಗೆ, 'ಆನ್', 'ಆರ್' ಪ್ರತ್ಯಯಗಳನ್ನು—ಹಳಗನ್ನಡದ ಪೂರ್ವರೂಪಗಳೆಂದು ಸಾಧಿಸಲು ಸಾಧ್ಯವಾಗುವುದಿಲ್ಲ. ಆದರೆ, ಇವಿಷ್ಟೇ ಕಾರಣಗಳ ಮೇಲೆ, 'ಪೂರ್ವದ ಹಳಗನ್ನಡ'ವೆಂಬ ಭಾಷಾವಸ್ಥೆ ಇದ್ದಿರಲೇ ಇಲ್ಲವೆಂದು ಹೇಳುವುದು ಸಾಧುವಲ್ಲ. ತಮಿಳು-ಕನ್ನಡ ಭಾಷೆಗಳು ವಿಭಿನ್ನ ಭಾಷೆಗಳಾಗಿ ಕವಲೊಡೆಯುವುದಕ್ಕೆ ಮೊದಲು ಕೆಲಕಾಲದವರೆಗೆ ಸಹ-ಅಸ್ತಿತ್ವವನ್ನು ಹೊಂದಿದ್ದುದರಿಂದಲೂ, ಹಳಗನ್ನಡ ವ್ಯಾಕರಣೋಕ್ತ ನಿಯಮಗಳಿಂದ ವಿವರಿಸಲು ಸಾಧ್ಯವಾಗದ ರೂಪಗಳಲ್ಲಿ ಕೆಲವು ತಮಿಳಿನ ರೂಪಗಳನ್ನು ಹೋಲುವುದರಿಂದಲೂ 'ಪೂರ್ವದ ಹಳಗನ್ನಡ'ವೆಂಬ ಭಾಷಾವಸ್ಥೆ ಇತ್ತೆಂದು ಒಪ್ಪಲೇಬೇಕಾಗುತ್ತದೆ. ಆದರೆ, ಕೈಪಿಡಿಕಾರರೆಂದಿರುವಂತೆ, "ರೈಸರು ಪೂರ್ವದ ಹಳಗನ್ನಡದ್ದೆಂದು ಕರೆಯುವ ಕಾಲವನ್ನು ಪೂರ್ವದ ಹಳಗನ್ನಡ ಹಳಗನ್ನಡವಾಗಿ ರೂಪಾಂತರವಾಗುತ್ತಿದ್ದ ಕಾಲವೆಂದು ಕರೆಯಬಹುದು."[೬೪] ಈ ಅವಸ್ಥಾಂತರದ ಅವಧಿಯಲ್ಲಿನ ಕೆಲವೊಂದು ವಿಶಿಷ್ಟ ಪ್ರಯೋಗಗಳನ್ನು ಅಸ್ಪಷ್ಟವಾಗಿಯಾದರೂ ಕಂಡುಕೊಳ್ಳಲು ಕವಿರಾಜಮಾರ್ಗಕಾರನಿಗೆ ಸಾಧ್ಯವಾದ್ದೇ ಆತನ ಈ ಸಂಬಂಧವಾದ ಹೇಳಿಕೆಗಳಿಗೆ ಕಾರಣವೆಂದು ಹೇಳಬೇಕಾಗುತ್ತದೆ.

'ಕನ್ನಡಂಗಳ್' : 'ಕವಿರಾಜಮಾರ್ಗ'ದಲ್ಲಿ 'ಕನ್ನಡ' ಶಬ್ದ ದೇಶವಾಚಿಯಾಗಿಯೂ —ಉದಾಹರಣೆಗೆ, "ಕಾವೇರಿಯಿಂದಮಾ ಗೋದಾವರಿವರಮಿರ್ಪ ನಾಡದಾ ಕನ್ನಡದೊಳ್"—ಭಾಷಾವಾಚಿಯಾಗಿಯೂ—ಉದಾಹರಣೆಗೆ, "ನುಡಿಗೆಲ್ಲಂ ಸಲ್ಲದ ಕನ್ನಡದೊಳ್", "ಮಿಗೆ ಕನ್ನಡಗಬ್ಬಂಗಳೊಳ್"; "ಅರಿದಾದಂ ಕನ್ನಡದೊಳ್" ಕನ್ನಡಕ್ಕೆ ನಾಡವರೋಜರ್" ಇತ್ಯಾದಿ ಬಳಕೆಯಾಗಿರುವುದು ಸರಿಯಷ್ಟೆ. ಇಂಥ ಏಕವಚನ ಪ್ರಯೋಗಗಳು ಮಾತ್ರವಲ್ಲದೆ 'ಕನ್ನಡಂಗಳ್' ಎಂಬ ಬಹುವಚನ ಪ್ರಯೋಗವೂ 'ಕವಿರಾಜಮಾರ್ಗ'ದಲ್ಲಿ ಕಾಣದೊರೆಯುತ್ತದೆ. ಈ ಪ್ರಯೋಗಗಳು ಕೇವಲ ಬಹುವಚನವೇ ಅಥವಾ ಕನ್ನಡದ ಪ್ರಾದೇಶಿಕ ಭೇದಗಳನ್ನೇನಾದರೂ ಸೂಚಿಸುತ್ತವೆಯೋ ಎಂಬ ಪ್ರಶ್ನೆಯನ್ನೂ ಇಲ್ಲಿ ಪರಿಶೀಲಿಸಬಹುದು.

'ಕನ್ನಡಂಗಳ್' ಶಬ್ದದ ಪ್ರಯೋಗವಿರುವ "ದೋಸಮಿನಿತೆಂದು ಬಗೆದು—" ಎಂಬ ಪದ್ಯಕ್ಕೆ (೧—೪೬) ವಿದ್ವಾಂಸರು ಬೇರೆ ಬೇರೆ ವ್ಯಾಖ್ಯಾನಗಳನ್ನು ನೀಡಿದ್ದಾರೆ. ಎಂ. ವಿ. ಸೀತಾರಾಮಯ್ಯನವರು, "ಈಗ ಮೈಸೂರು ಕನ್ನಡ, ಮಂಗಳೂರು ಕನ್ನಡ, ಧಾರ್ವಾಡದ ಕನ್ನಡ ಎಂದು ಸ್ಥೂಲವಾಗಿ (ವಿಶೇಷವಾಗಿ ಆಡುಮಾತಿನಲ್ಲಿ) ಮೂರು ಬಗೆಯ 'ಕನ್ನಡಂಗಳು' ಇರುವಂತೆ ಆಗಲೂ ಕೆಲಕೆಲವು ಪ್ರಾದೇಶಿಕ ಲಕ್ಷಣಗಳುಳ್ಳ 'ಕನ್ನಡಂಗಳ್' ಇದ್ದಿರಬೇಕು; ಅವುಗಳ 'ದೇಶಿ' ಎಂದರೆ ಪ್ರಾದೇಶಿಕ ವೈಲಕ್ಷಣ್ಯ ಬೇರೆ ಬೇರೆಯಾಗಿದ್ದಿರಬೇಕು. ಒಂದು ಪ್ರಾಂತದಲ್ಲಿ ನಿರ್ದುಷ್ಟವೆನಿಸಿದ ಭಾಷಾಪ್ರಯೋಗ ಇನ್ನೊಂದರಲ್ಲಿ ದೋಷವಾಗಿ ಕಾಣುತ್ತಿದ್ದಿರಬೇಕು. ಹೀಗೆ ಸರ್ವಸಾಮಾನ್ಯವಾದ ದೋಷಗಳು ಹಾಗೂ ಪ್ರಾಂತಭೇದಗಳಿಂದ ಸಂಜನಿಸುತ್ತಿದ್ದ ದೋಷಗಳು—

ಇವು ಕೂಡಿ, ದೋಷಪ್ರಮಾಣ ಅಪರಿಮಿತವಾಗಿದ್ದಿರಬೇಕು. ಸಾವಿರ ನಾಲಗೆಯುಳ್ಳ ಆದಿಶೇಷನೂ ಅವನ್ನು ತಿಳಿಯಲು ಹೇಳಲಾರದಷ್ಟು ಅಗಣಿತವಾಗಿದ್ದುವು ಎಂದು ಮಾರ್ಗಕಾರ ಉತ್ಪ್ರೇಕ್ಷಿಸಿ ಹೇಳುವವುಟ್ಟಿಗೆ ಕನ್ನಡದ ಪರಿಸ್ಥಿತಿ ಶೋಚನೀಯ ವಾಗಿತ್ತು."[69] ಅಂದರೆ, ಅವರ ಅಭಿಪ್ರಾಯದಲ್ಲಿ, ಇಲ್ಲಿಯ 'ಕನ್ನಡಂಗಳ್' ಎಂಬ ಶಬ್ದ ಪ್ರಾಂತಭೇದದ ಸಂಕೇತವಾಗಿದೆ. ಇತ್ತ ಎಂ. ಎಂ. ಕಲಬುರ್ಗಿಯವರು ಇಲ್ಲಿಯ "ಕನ್ನಡಂಗಳೊಳ್ ದೇಶಿ ಬೇಱಬೇಱಪ್ಪುದರಿಂ' ಎಂಬುದಕ್ಕೆ ಕನ್ನಡ ಪದಗಳಲ್ಲಿ ದೇಸಿ ಬೇರೆ ಬೇರೆಯಾಗಿರುತ್ತದೆ (ಒಂದೇ ಪದವು ವಿಕಲ್ಪರೂಪಗಳಲ್ಲಿ ಬಳಕೆಯಾಗುತ್ತದೆ) ಎಂದು ಅರ್ಥ."[70] ಎಂದೂ, "ಒಂದು ಪ್ರದೇಶದಲ್ಲಿಯೇ ಪದಗಳ ವಿವಿಧ ರೂಪಗಳನ್ನು ಬಳಸುತ್ತಿದ್ದರೆ ಅದು 'ಶಾಬ್ದಿಕ ವಿಕಲ್ಪ', ಒಂದು ಪ್ರದೇಶದ ಜನರು ಒಂದು, ಇನ್ನೊಂದು ಪ್ರದೇಶದ ಜನರು ಇನ್ನೊಂದು ರೂಪವನ್ನು ಬಳಸುತ್ತಿದ್ದರೆ ಅದು 'ಪ್ರಾಂತಭೇದ'. ಭಾಷಾಗ್ರಂಥಸ್ಥವಾದಷ್ಟು ಅದರ ಪ್ರಕೃತಿ, ಪ್ರತ್ಯಯ, ಪದಗಳ ರೂಪ ವ್ಯತ್ಯಾಸ ಕಡಿಮೆಯಾಗುತ್ತದೆ; ಪಾಣಿನೀಯದಂತಹ ವ್ಯಾಕರಣ ಹುಟ್ಟಿದರೆ ಆ ರೂಪ ಗಳಿಗೆ ಇನ್ನೂ ಸ್ಥಿರತೆ ಬರುತ್ತದೆ. ಕವಿರಾಜಮಾರ್ಗ ಪೂರ್ವದಲ್ಲಿ ಕನ್ನಡ ಗ್ರಂಥಸ್ಥ ವಾಗಿತ್ತು, ಬಹುಶಃ ವ್ಯಾಕರಣ ಪಡೆದಿರಲಿಲ್ಲ. ಮೇಲಾಗಿ ಸಾಹಿತ್ಯ ಪ್ರಸಾರ ಅಷ್ಟು ಪ್ರಗಾಢವಾಗಿರಲಿಲ್ಲ. ಆದಕ್ಕಾಗಿ ಗ್ರಂಥಗಳಲ್ಲಿ ವಿಕಲ್ಪ ರೂಪಗಳನ್ನು ಕೈಗೆ ಬಂದಂತೆ ಬಳಸುತ್ತಿರಬಹುದು. ಕವಿರಾಜಮಾರ್ಗದಲ್ಲಿಯ 'ನಮುಗೆ', 'ಎಮುಗೆ' ಎಂಬ ಭಿನ್ನರೂಪ ಗಳೇ ಇದಕ್ಕೆ ನಿದರ್ಶನ. ಇದನ್ನು ಮನಗಂಡರೆ ಮಾರ್ಗಕಾರನು ಪ್ರಾಂತಭೇದವನ್ನು ದೃಷ್ಟಿಯಲ್ಲಿಟ್ಟುಕೊಂಡು 'ದೇಶಿ ಬೇಱಬೇಱ' ಎಂದಿರದೆ, ಗ್ರಂಥಗಳಲ್ಲಿ ಬಳಕೆಯಾಗುವ ಒಂದೇ ಪದದ ವಿಕಲ್ಪ ರೂಪಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಹೇಳಿರಬೇಕೆನಿಸು ತ್ತದೆ."[71] ಎಂದೂ ಹೇಳಿದ್ದಾರೆ.

ಒಂದೇ ಪದ ವಿಕಲ್ಪ ರೂಪಗಳಲ್ಲಿ ಬಳಕೆಯಾಗುವುದನ್ನು ಸೂಚಿಸುವುದೇ 'ಕವಿರಾಜ ಮಾರ್ಗ'ಕಾರನ ಉದ್ದೇಶವಾಗಿದ್ದಿದ್ದರೆ, ದಕ್ಷಿಣೋತ್ತರ ಮಾರ್ಗಗಳ ವಿಚಾರದಲ್ಲಿ ಮಾಡಿ ದಂತೆ ವಿಪರ್ಯಯ ರೂಪದಲ್ಲಿ ಸಲ್ಲುವ ಶಬ್ದ ರೂಪಗಳನ್ನು ನಿದರ್ಶಿಸುವ ಯತ್ನವನ್ನೇಕೆ ಮಾಡಿಲ್ಲವೆಂಬ ಪ್ರಶ್ನೆ ಸಹಜವಾಗಿಯೇ ಏಳುತ್ತದೆ. ಅಂಥ ಯಾವುದೇ ನಿದರ್ಶನ 'ಕವಿ-ರಾಜಮಾರ್ಗ'ದಲ್ಲಿ ದೊರೆಯದಿರುವುದೇ ಈ ವಾದ ಅಷ್ಟಾಗಿ ಸಮರ್ಥನೀಯವಾಗಿಲ್ಲವೆಂಬು ದನ್ನು ಸೂಚಿಸುತ್ತದೆ. ವಾಸ್ತವವಾಗಿ, 'ದೇಶಿ ಬೇಱಬೇಱಪ್ಪುದಱಿಂ' ಎಂಬ ಮಾತು, ಕವಿರಾಜಮಾರ್ಗಕಾರನ ಕಾಲದ ಕನ್ನಡ ನಾಡಿನ ವಿವಿಧ ಭಾಗಗಲ್ಲಿ ಪ್ರಚಲಿತವಾಗಿದ್ದ ಭಾಷಾಭೇದಗಳನ್ನೇ ಸೂಚಿಸುತ್ತದೆಂದು ಭಾವಿಸುವುದೇ ತರ್ಕಸಮ್ಮತವಾಗುತ್ತದೆ. ಬಹುಶಃ ಆಗಿನ್ನೂ ವಿಶ್ಲೇಷಣೆಗೆ ಒಳಪಡುವಷ್ಟು ವ್ಯವಸ್ಥಿತರೂಪದಲ್ಲಿ ಅವುಗಳ ಸ್ವರೂಪ ನಿಶ್ಚಿತವಾಗಿರದೆ, ಆದಿಶೇಷನೂ ಬೇಸರಿಸುವಷ್ಟು ದೋಷಯುಕ್ತವೂ ಅವ್ಯವ ಸ್ಥಿತವೂ ಆಗಿದ್ದುದು ಕವಿರಾಜಮಾರ್ಗಕಾರ ಈ ಸಂಬಂಧವಾದ ವಿಶ್ಲೇಷಣೆಗೆ ತೊಡಗ ದಿರುವುದಕ್ಕೆ ಕಾರಣವಾಗಿದ್ದಿರಬೇಕೆಂದು ಭಾವಿಸಬಹುದಾಗಿದೆ.

ಇದೇ ಮಾತನ್ನು 'ಕನ್ನಡಂಗಳ್' ಶಬ್ದ ಪ್ರಯುಕ್ತವಾಗಿರುವ "ನೆಗಟ್ದಿರ್ದ ಕನ್ನಡಂಗಳೊಳ್...." (೧-೩೭) ಎಂಬ ಪದ್ಯದ ಬಗೆಗೆ ಹೇಳಲು ಬರುವುದಿಲ್ಲ. "೩೭ ನೆಯ ಪದ್ಯದಲ್ಲಿ ಪ್ರಯೋಗಿಸಿರುವ 'ಕನ್ನಡಂಗಳ್' ಎಂಬ ಬಹುವಚನ ಪ್ರಯೋಗದ ಅರ್ಥವೇ ಬೇರೆ, ಇಲ್ಲಿನದೇ ಬೇರೆ ಎಂಬುದು ಸ್ಪಷ್ಟ"[72] ಎಂದು ಎಂ. ವಿ. ಸೀತಾರಾಮಯ್ಯನವರೂ, "'ಕನ್ನಡಂಗಳ್' ಎಂಬುದಕ್ಕೆ 'ಕನ್ನಡ ಪದಗಳು' ಎಂದು ಅರ್ಥ ಹೇಳಬೇಕಲ್ಲದೆ ಬಹುವಚನವನ್ನು ಗಮನಿಸಿ ಪ್ರಾಂತಭೇದಗಳು ಎಂದು ಅರ್ಥಮಾಡಬಾರದು"[73] ಎಂದು ಎಂ. ಎಂ. ಕಲಬುರ್ಗಿಯವರೂ ಅಭಿಪ್ರಾಯಪಟ್ಟಿದ್ದಾರೆ. ಅಂದರೆ, ಇಲ್ಲಿಯ ಈ ಶಬ್ದದ ಬಳಕೆ ಪ್ರಾಂತಭೇದಗಳನ್ನು ಕುರಿತುದಲ್ಲವೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಆದರೆ 'ಕನ್ನಡಂಗಳ್' ಎಂಬುದಕ್ಕೆ 'ಕನ್ನಡ ಪದಗಳು' ಎಂದೇ ಅರ್ಥಮಾಡೋಣವೆಂದರೂ, ಯಾವ ಬಗೆಯ ಕನ್ನಡ ಪದಗಳನ್ನು ಕವಿರಾಜಮಾರ್ಗಕಾರ ಇಲ್ಲಿ ಸೂಚಿಸಿದ್ದಾನೆ ಎಂಬುದನ್ನು ವಿಚಾರಮಾಡುವುದು ಅಗತ್ಯವಾಗುತ್ತದೆ. ಈ ದಿಕ್ಕಿನಲ್ಲಿ ನಮಗೆ ನೆರವಾಗಬಹುದಾಗಿರುವ ಪದಪುಂಜವೆಂದರೆ, 'ಅಗಣಿತಗುಣವಿದಿತ ಸಂಸ್ಕೃತೋಕ್ತ ಕ್ರಮ' ಎಂಬುದು. ಈ ಪದಪೂಜದಿಂದ ಸೂಚಿತವಾಗಬಹುದಾಗಿರುವ ಅಂಶವೇನೆಂಬುದನ್ನು ಮುಳಿಯ ತಿಮ್ಮಪ್ಪಯ್ಯನವರ ಈ ಕೆಳಗಿನ ವ್ಯಾಖ್ಯಾನ ಸ್ಪಷ್ಟಪಡಿಸುತ್ತದೆ: "ನೆಗಟ್ದಿರ್ದ ಕನ್ನಡಂಗಳೊಳ್' ಎಂದರೆ 'ಪ್ರಸಿದ್ಧವಾದ ಸಮಸಂಸ್ಕೃತಗಳೆನ್ನಿಸಿದ ಕನ್ನಡ ಮಾರ್ಗೀಯ ಪದಗಳಲ್ಲಿ' ಎಂಬ ಅರ್ಥ. ಅಂಥ ಪದಗಳು ಅನೇಕವಾಗಿರುವುದರಿಂದಲೇ 'ಕನ್ನಡಂಗಳೊಳ್' ಎಂದು ಬಹುವಚನ ಪ್ರಯೋಗವನ್ನೆಸಗಿರಬೇಕು. ಹಾಗಿಲ್ಲದೆ, 'ದೇಸಿಗನ್ನಡಂಗಳೊಳ್' ಎಂದಾಗುತ್ತಿದ್ದರೆ ಅವುಗಳ ವಿವೇಚನೆಗೆ 'ಅಗಣಿತ ಗುಣವಿದಿತಸಂಸ್ಕೃತೋಕ್ತಕ್ರಮಮುಮಂ' ಬಗೆವುದಾದರೂ ಯಾಕೆ?"[74] ಮೇಲೆ ಕಾಣಿಸಿರುವ ವಿವರಣೆಯ ಬೆಳಕಿನಲ್ಲಿ ಈ ವ್ಯಾಖ್ಯಾನವನ್ನು ಒಪ್ಪಬಹುದಾಗಿದೆ.

ಕನ್ನಡದ ತಿರುಳು: ಸುವಿಶಾಲವಾಗಿದ್ದ ಕರ್ನಾಟಕ ಪ್ರಾಂತ್ಯದಲ್ಲಿ ಕಿಸುವೊಟಲ್, ಕೊಪಣನಗರ, ಪುಲಿಗೆಱೆ ಹಾಗೂ ಒಂಕುಂದಗಳ ನಡುವಣ ನಾಡು 'ಕನ್ನಡದ ತಿರುಳ್' ಅಂದರೆ ಶಿಷ್ಟ ಕನ್ನಡ ಅಥವಾ ಅಚ್ಚ ಕನ್ನಡದ ಪ್ರದೇಶವಾಗಿತ್ತು ಎಂಬುದು 'ಕವಿರಾಜಮಾರ್ಗ'ಕಾರನ ಹೇಳಿಕೆಯಾಗಿದೆ. ಪಂಪನೂ, "ಸಾಜದ ಪುಲಿಗೆಱೆಯ ತಿರುಳ ಕನ್ನಡದೊಳ್" ತನ್ನ ಗ್ರಂಥವನ್ನು ರಚಿಸಿರುವುದಾಗಿ ಹೇಳಿಕೊಂಡಿರುವುದು ಕವಿರಾಜಮಾರ್ಗಕಾರನ ಅಭಿಪ್ರಾಯಕ್ಕೆ ಪುಷ್ಟಿಯನ್ನೀಯುವಂತಿದೆ. ಭಾಷೆಯ ಶಿಷ್ಟ ರೂಪವನ್ನು ಕಾಯ್ದುಕೊಂಡು ಬರುವ ಕೇಂದ್ರದ ರೂಪದಲ್ಲಿ ಈ 'ನಡುವಣ ನಾಡು' ಹಾಗೂ ಇತರ ಭಾಗಗಳು ಪ್ರಾಂತೀಯ ವೈಲಕ್ಷಣ್ಯಯುಕ್ತವಾದ ನುಡಿಗಳನ್ನೊಳಗೊಂಡು ಮೆರೆದಿದ್ದಲ್ಲಿ ಆಶ್ಚರ್ಯವೇನೂ ಇಲ್ಲ.

ಹೀಗೆ, 'ಕನ್ನಡಂಗಳ್' ಹಾಗೂ 'ತಿರುಳ್ ಕನ್ನಡ'ದ ಪ್ರಸಂಗಗಳಲ್ಲಿ ಪರ್ಯಾಯವಾಗಿಯಾದರೂ 'ಕವಿರಾಜಮಾರ್ಗ'ಕಾರ ತನ್ನ ಕಾಲದಲ್ಲಿ ಪ್ರಚಲಿತವಾಗಿದ್ದ ಅಥವಾ ಆಗ ತಾನೆ ರೂಹುದಳೆಯತೊಡಗಿದ್ದ ಪ್ರಾಂತಭೇದಗಳನ್ನು ಸ್ಥೂಲವಾಗಿಯಾದರೂ ನಿರೂಪಿ

ಸಲು ಪ್ರಯತ್ನಿಸಿದ್ದಾನೆಂದು ಹೇಳಬಹುದಾಗಿದೆ. ಭಾಷಾ ವಿಷಯಕವಾದ ವಿವಿಧ ಅಂಶಗಳನ್ನು ಕುರಿತ ಚರ್ಚೆ ಅವನ ನೇರವಾದ ಉದ್ದೇಶವಾಗಿಲ್ಲವೆಂಬುದನ್ನು ಗಮನಿಸಿದರೆ, ಆನುಷಂಗಿಕ ರೂಪದಲ್ಲಿ ಅವನು ಕೊಟ್ಟಿರುವ ಈ ವಿವರಗಳು ಅಮೂಲ್ಯವೂ ಮಹತ್ತ್ವದವೂ ಆಗಿವೆ ಎಂಬುದರಲ್ಲಿ ಅನುಮಾನವಿಲ್ಲ. ಭಾಷಾ ವಿಶ್ಲೇಷಣೆಗೆ ಇಂದು ದೊರೆತಿರುವ ಸೌಲಭ್ಯ ಸೌಕರ್ಯ ಮಾರ್ಗೋಪಾಯಗಳೇನೊಂದೂ ಇರದಿದ್ದ ಕಾಲದಲ್ಲಿ ಅವನು ಇಂಥ ವಿಷಯದಲ್ಲಿ ಆಸಕ್ತಿವಹಿಸಿ, ಸಾಧ್ಯವಾದಷ್ಟು ವಿವರಗಳನ್ನು ಸಂಗ್ರಹಿಸಿ, ವಿಶ್ಲೇಷಿಸಿರುವುದು ನಿಜಕ್ಕೂ ಮನ್ನಣೆಗೆ ಅರ್ಹವಾಗಿರುವಂಥದು.

## ವ್ಯಾಕರಣ ಸಂಬಂಧವಾದ ಉಲ್ಲೇಖಗಳು

ಆಧುನಿಕ ವಿಚಾರದೃಷ್ಟಿಯ ಮೇರೆಗೆ, ಕಾವ್ಯಮೀಮಾಂಸಾ ಗ್ರಂಥಗಳಲ್ಲಿ ಅಥವಾ ಅಲಂಕಾರ ಗ್ರಂಥಗಳಲ್ಲಿ ವ್ಯಾಕರಣ ವಿಚಾರಗಳ ಪ್ರಸಕ್ತಿ ಅಪ್ರಾಸಂಗಿಕವೆನ್ನಬಹುದಾದರೂ, ಪ್ರಾಚೀನ ಅಲಂಕಾರ ಗ್ರಂಥಗಳಲ್ಲಿ ವ್ಯಾಕರಣ, ಛಂದಸ್ಸು, ಅಲಂಕಾರಗಳು ಉದ್ದಿಷ್ಟವಾಗಿಯೊ ಅನುದ್ದಿಷ್ಟವಾಗಿಯೋ ಒಂದು ಇನ್ನೊಂದರ ಕ್ಷೇತ್ರದಲ್ಲಿ ಪದಾರ್ಪಣ ಮಾಡುತ್ತಿರುತ್ತವೆ. ಅನೇಕ ವೇಳೆ ಇಂಥ ಶಾಸ್ತ್ರಗಳು ಹಲವು ವಿಷಯಗಳ ಕೂಡುನೆಲವಾಗಿರುತ್ತಿದ್ದುವು. 'ಕವಿರಾಜಮಾರ್ಗ'ವೂ ಇಂಥ ಸಂಪ್ರದಾಯಕ್ಕೆ ಅಪವಾದವೇನೂ ಆಗಿ ಉಳಿದಿಲ್ಲ. 'ಕವಿರಾಜಮಾರ್ಗ' ಪ್ರಧಾನವಾಗಿ ಆಲಂಕಾರಿಕ ಗ್ರಂಥವಾಗಿದ್ದರೂ, ಕವಿಗಳಿಗೆ ರಾಜಮಾರ್ಗವನ್ನು ಹಾಕಿಕೊಡುವ ಆತನ ಉದ್ದೇಶ ವ್ಯಾಕರಣ ಸಂಬಂಧವಾದ ಅನೇಕ ವಿಷಯಗಳನ್ನು ಆನುಷಂಗಿಕ ರೂಪದಲ್ಲಿಯಾದರೂ ಚರ್ಚಿಸುವಂತೆ ಮಾಡಿದೆ. ಭಾಷಾಶುದ್ಧಿ ಸಾಹಿತಿಗಳಿಗೆ ಭೂಷಣಪ್ರಾಯವೇ ಆಗುವಂಥ ವಿಚಾರವಾದ್ದರಿಂದ 'ಕವಿರಾಜಮಾರ್ಗ'ಕಾರ ಅವುಗಳನ್ನು ಸಾಕಷ್ಟು ವಿಶದವಾಗಿಯೇ ಚರ್ಚಿಸಿದ್ದಾನೆ. ಭಾಷೆಯ ಸಮರ್ಪಕವಾದ ಬಳಕೆಯ ಬಗೆಗೆ ಆತನಿಗೆ ಇದ್ದ ಕಾಳಜಿ ಎಷ್ಟೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಹಾಗೆ ನೋಡಿದರೆ, ವಿಚಾರ ವೈಪುಲ್ಯದ ದೃಷ್ಟಿಯಿಂದ ಕವಿರಾಜಮಾರ್ಗೋಕ್ತವಾಗಿರುವ ವಿಷಯಗಳಲ್ಲಿ ವ್ಯಾಕರಣ ವಿಷಯಕವಾದ ಚರ್ಚೆ ಅಲಂಕಾರ ವಿಷಯಕವಾದ ಚರ್ಚೆಗೆ ಮಾತ್ರ ಎರಡನೆಯದಾಗಿದೆ. ವ್ಯಾಕರಣ ವಿಷಯಕವಾದ 'ಕವಿರಾಜಮಾರ್ಗ'ಕಾರನ ಒಲವು ಹಾಗೂ ದೇಶಕಾಲಗಳ ತತ್ಕಾಲೀನ ಪರಿಸ್ಥಿತಿ ಇಂಥ ಚರ್ಚೆಯನ್ನು ಅನಿವಾರ್ಯವಾಗಿಸಿರುವಂತಿದೆ.

ಅನ್ಯಾನ್ಯ ವಿಷಯಗಳ ವಿಶದೀಕರಣದ ಸಂದರ್ಭದಲ್ಲಿ, ವಿದ್ವಾಂಸರು ಪೂರ್ವದ ಹಳಗನ್ನಡವೆಂದು ವರ್ಗೀಕರಿಸಿರುವ ಭಾಷಾವಸ್ಥೆಗೆ ನಿದರ್ಶನವೆಂಬಂತಿರುವ ಶಬ್ದರೂಪಗಳೂ ವ್ಯಾಕರಣ ಪ್ರಕ್ರಿಯೆಗಳೂ ಅಪೂರ್ವ ಶಬ್ದಗಳೂ ಅಲ್ಲಿ ಕಾಣದೊರೆಯುತ್ತವೆ. ಹೀಗಾಗಿ, ಭಾಷಾಚರಿತ್ರೆಯ ದೃಷ್ಟಿಯಿಂದಲೂ ಈ ವಿವರಗಳು ಬಹುಮೂಲ್ಯವಾಗಿವೆ.

ವಾಸ್ತವವಾಗಿ, ಗ್ರಂಥದ ಆರಂಭದಲ್ಲಿಯೇ, ವ್ಯಾಕರಣಾದಿ ವಿಷಯಗಳಲ್ಲಿ ಪರಿಣತನಲ್ಲದವನು 'ವಿವೇಕ ಬೃಹಸ್ಪತಿ'ಯಾಗಿದ್ದ ನೃಪತುಂಗನಂಥ ರಾಜನ ನಗರವನ್ನು

ಪ್ರವೇಶಿಸುತ್ತಲೇ ಇರಲಿಲ್ಲವೆಂದು ಹೇಳಿದ್ದಾನೆಂಬ ಸಂಗತಿ (೧–೬) ತುಂಬ ಗಮನಾರ್ಹ ವಾಗಿದೆ.

ಈ ವಿಷಯದ ಸಾಕಷ್ಟು ವಿವರಪೂರ್ಣವಾದ ಚರ್ಚೆಗೆ ಕೃತಿಕಾರನ ವ್ಯಾಕರಣ ಪಾಂಡಿತ್ಯ ಹಾಗೂ ಸಂಪ್ರದಾಯಶೀಲತೆಗಳಿಗಿಂತ ಹೆಚ್ಚಾಗಿ 'ವ್ಯಾಕರಣ ವ್ಯಾಕುಲತೆ'ಯೇ ಕಾರಣವಾಗಿದ್ದಿರಬೇಕೆಂದು ತೋರುತ್ತದೆ. ಏಕೆಂದರೆ, (i) ದೇಶಿಗಳು ಬೇರೆಬೇರೆಯಾಗಿದ್ದುದರಿಂದ ದೋಷಗಳು ಅಪರಿಮಿತವಾಗಿ ಪರಿಣಮಿಸಿ, ಕನ್ನಡದ ಪರಿಸ್ಥಿತಿ ಶೋಚನೀಯವಾಗಿತ್ತು ; (ii) ದೇಸಿಯಲ್ಲವೆಂದು ತಿಳಿದಿದ್ದರೂ, ಆಗಮಬಲ ಹೀನರು 'ಪಟಿಗನ್ನಡಮಂ ಪೊಲಗೆಡಿಸಿ' ನುಡಿಯುತ್ತಿದ್ದರು ; ಮತ್ತು (iii) "ಪುರಾಣ ಕವಿಗಳ ಸಂತತಗತ ಮಾರ್ಗದಿತ"—ಅಂದರೆ, ಹಿಂದಿನ ಕವಿಗಳು ಲಕ್ಷಣಬದ್ಧವಾಗಿ ರಚಿಸಿದ—'ಮಾರ್ಗಕಾವ್ಯ'ಗಳಲ್ಲಿಯೂ ದೋಷಗಳು ಕಂಡುಬರುತ್ತಿದ್ದವು. ಹೀಗಾಗಿ ತಾನು ಗುರುತಿಸಿದಂಥ ದೋಷಗಳನ್ನು ಹಾಗೂ ಕಾವ್ಯರಚನೆಯ ಸಂದರ್ಭದಲ್ಲಿ ಸಂಭವಿಸ ಬಹುದೆಂದು ತಾನು ಚಿಂತನ-ಮಂಥನಗಳಿಂದ ಕಂಡುಕೊಂಡಂಥ ದೋಷಗಳನ್ನು ಕುರಿತು ಚರ್ಚಿಸುವುದಾಗಿ ತಿಳಿಸಿದ್ದಾನೆ.

ದೋಷಗಳ ಬಗ್ಗೆ ಅಷ್ಟೊಂದು ಎಚ್ಚರಿಕೆಯಿಂದ ಇರಬೇಕಾದ ಅಗತ್ಯವೇನೆಂಬುದನ್ನು, ತಾನು ಆದರ್ಶವಾಗಿರಿಸಿಕೊಂಡಿರುವ . ದಂಡಿಯ 'ಕಾವ್ಯಾದರ್ಶ'ದ "ತದಲ್ಪಮಪಿ ನೋಪೇಕ್ಷ್ಯಂ...." ಎಂಬ ಶ್ಲೋಕವನ್ನು ಸ್ವಲ್ಪಮಟ್ಟಿಗೆ ರೂಪಾಂತರಿಸಿಕೊಂಡು, 'ಕವಿರಾಜಮಾರ್ಗ'ಕಾರ ತುಂಬ ಸುಂದರವಾಗಿಯೇ ತಿಳಿಯ ಹೇಳಿದ್ದಾನೆ :

> ದೋಸಮೇನಾನುಂ ಸ್ವಲ್ಪಮಾದೊಡಂ
> ಮಾಸಿಸಿಕ್ಕುಗಮಣಂ ಕೃತಿವಧುವಂ
> ಪೇಸದೆ ದುರ್ಜನದೊಳಾದ ಪರಿಚಯಂ
> ಮಾಸಿಸಿ ಕಿಡಿಸುವವೊಲೊಪ್ಪುವ ಕುಲವಧುವಂ ॥ (೧–೧೧)

ಈ ದೋಷ ಪ್ರಕರಣದ ವೈಶಿಷ್ಟ್ಯವೇನೆಂಬುದನ್ನು ಎಂ. ವಿ. ಸೀತಾರಾಮಯ್ಯ ನವರು ಈ ರೀತಿ ನಿರೂಪಿಸಿದ್ದಾರೆ : "ದೋಷಪ್ರಕರಣಕ್ಕೆ ಆದ್ಯತೆಯನ್ನೂ ಅಗ್ರ ಮಾನ್ಯತೆಯನ್ನೂ ಕೊಟ್ಟು ಅದನ್ನು ವಿಸ್ತಾರವಾಗಿ ಪ್ರತಿಪಾದಿಸಿರುವುದು....ಕನ್ನಡ ವ್ಯಾಕರಣ ನಿರ್ಮಾಣಕ್ಕೆ ಅವನು ಹಾಕಿದ ಭದ್ರವಾದ ಅಡಿಪಾಯ ವ್ಯಾಕರಣಕ್ಕೂ ಕಾವ್ಯಮೀಮಾಂಸೆಗೂ ಸಂಬಂಧವಿಲ್ಲದೆ ಇಲ್ಲ ಎಂಬ ಅಂಶ ವಿಶದಪಡುವುದು ಈ ಪ್ರಕರಣದಲ್ಲಿ....ನಮ್ಮ ಅಭಿಪ್ರಾಯದಲ್ಲಿ, ಕವಿರಾಜಮಾರ್ಗದಲ್ಲಿ ಶ್ರೀವಿಜಯನ ಪ್ರತಿಭೆ ಬೆಳಗಿರುವುದು ಪ್ರಥಮ ಪರಿಚ್ಛೇದದಲ್ಲಿ—ಅದರಲ್ಲಿ ವಿಶೇಷವಾಗಿ ಈ ದೋಷಾದೋಷ ವಿಚಾರವಿಮರ್ಶೆಯಲ್ಲಿ ; ಅವನ ಸ್ವೋಪಜ್ಞತೆ, ಸ್ವತಂತ್ರ ವಿಚಾರಧಾರೆ ಮೆರೆದಿರುವುದು ಇಲ್ಲಿ ; ಕನ್ನಡದ ಜೀವನಾಡಿಯನ್ನು ಹಿಡಿದು, ತನ್ನ ಭಾಷಾಭೈಷಜವನ್ನು ಪ್ರಯೋಗಿ ಸಿರುವುದು ಇಲ್ಲಿ.[75]

ಹೀಗೆ, ಕನ್ನಡ ವ್ಯಾಕರಣ ಪರಂಪರೆಗೆ ಒಂದು ಅಗ್ರಮಾರ್ಗವನ್ನೇ ಹಾಕಿಕೊಟ್ಟಿರುವ

ಕವಿರಾಜಮಾರ್ಗಕಾರ, ತಾನು ಚರ್ಚಿಸಿರುವ ವ್ಯಾಕರಣ ವಿಷಯಗಳು ಯಾವುವೆಂಬುದನ್ನು ಈ ರೀತಿ ತಿಳಿಸಿದ್ದಾನೆ:

> ಕಾರಕದೋಷಮುಂ ವಚನದೋಷಮುಮಾ ಗುರುದೋಷಮುಂ ಲಘೂ
> ಚ್ಚಾರಿತ ಶಬ್ದದೋಷಮುಮದಂತೆ ಸಮುಚ್ಚಯಜಾತದೋಷಮುಂ
> ಭೂರಿ ವಿಕಲ್ಪದೋಷಮುಮದಿನ್ನವಧಾರಣದೋಷಮುಂ ವಿಶಂ
> ಕಾರಚಿತೋರು ದೋಷಮುಮನೀ ತೆಱದಿಂ ತಱಿಸಲ್ಗೆ ಪಂಡಿತರ್ ॥ (೧–೧೧೩)

ಈ ಪಟ್ಟಿಯಲ್ಲಿ ಕಂಠೋಕ್ತವಾಗಿ ಸೇರದಿರುವ, ಆದರೆ ತನ್ನ ವಿವೇಚನೆಯ ಅಂಗವಾಗಿ ಆತನು ಸೇರಿಸಿಕೊಂಡಿರುವ ಪ್ರಕರಣಗಳನ್ನೂ ಸೇರಿಸಿಕೊಂಡರೆ ಹಾಗೂ ವ್ಯಾಕರಣಕ್ಕೆ ನೇರವಾಗಿ ಸಂಬಂಧಿಸದಂತಿರುವ—ಅಂದರೆ, ಛಂದಸ್ಸಿಗೆ ಸಂಬಂಧಪಟ್ಟಿರುವ—ವಿವರಗಳನ್ನು ಕೈಬಿಟ್ಟರೆ ಈ ಪಟ್ಟಿ ಈ ರೀತಿಯಾಗುತ್ತದೆ: (೧) ಕಾರಕ-ವಿಭಕ್ತಿ ಪ್ರತ್ಯಯ, (೨) ಸಮಸಂಸ್ಕೃತ, (೩) ಅವ್ಯಯಗಳು, (೪) ಅರಿಸಮಾಸ, (೫) ಶ್ರುತದುಷ್ಟಾದಿ ದೋಷಗಳು, (೬) ವಿಸಂಧಿ ಹಾಗೂ ವಿರೂಪ ಸಂಧಿಗಳು, (೭) ವಚನ, (೮) ಸಮುಚ್ಚಯ, (೯) ವಿಕಲ್ಪಾದಿ ದೋಷಗಳು, (೧೦) ಕ್ರಿಯಾವಿಶೇಷಣ, ಮತ್ತು (೧೧) ವಿಶೇಷಣ-ವಿಶೇಷ್ಯಗಳು.

ಕನ್ನಡಕ್ಕೆ ವಿಶಿಷ್ಟವಾಗಿರುವ ಈ ವ್ಯಾಕರಣ ಪ್ರಕ್ರಿಯೆಗಳ ಬಗ್ಗೆ 'ಕವಿರಾಜಮಾರ್ಗ'ಕಾರನ ಅಭಿಪ್ರಾಯಗಳೇನೆಂಬುದನ್ನು, ಇದೇ ಕ್ರಮದಲ್ಲಿ ಸಂಗ್ರಹಿಸಬಹುದು.

ಕಾರಕ ಹಾಗೂ ವಿಭಕ್ತಿ ಪ್ರತ್ಯಯಗಳು (ಅ) ಸಂಖ್ಯೆ : ಕಾರಕ ಹಾಗೂ ವಿಭಕ್ತಿ ಪ್ರತ್ಯಯಗಳ ಬಗೆಗಿನ 'ಕವಿರಾಜಮಾರ್ಗ'ಕಾರನ ಅಭಿಪ್ರಾಯಗಳನ್ನು ಒಳಗೊಂಡಿರುವ ಒಂದು ವೃತ್ತದಲ್ಲಿ (೧–೧೧೪) ಕಾರಕಗಳು ಆರು, ವಿಭಕ್ತಿಗಳು ಏಳು ಎಂದಿದೆ.

ಈಗ 'ಕವಿರಾಜಮಾರ್ಗ'ದ ಲಕ್ಷ್ಯಪದ್ಯವನ್ನು ಪರಿಶೀಲಿಸಬಹುದು :

> ನರಪತಿ ಬಂದನಾ ನೃಪನನೞ್ತಿಯೆ ಕಾಣ್ಬುದು ತನ್ನರೇಂದ್ರನಿಂ
> ಧರಣಿ ಸನಾಥೆ ಭೂಪತಿಗೆ ಕಪ್ಪವನಿತ್ತವನೀಶನತ್ತಣಿಂ
> ಪರಿಭವಮಂ ಕಟಿಲ್ವುವುದಧೀಶ್ವರನಾ ದಯೆ ಸಾಲ್ಗುಮಾ ಮಹೀ
> ಶ್ವರನೊಳಿದಪ್ಪುದೆಂಬುದಿದು ಕಾರಕಯುಕ್ತವಿಭಕ್ತ್ಯನುಕ್ರಮಂ ॥ (೧–೧೧೫)

'ಕಾರಕಯುಕ್ತ ವಿಭಕ್ತ್ಯನುಕ್ರಮ'ವನ್ನು ಹೇಳುವಾಗ ಪ್ರಥಮೆಯಲ್ಲಿ ಯಾವುದೇ ವಿಭಕ್ತಿಪ್ರತ್ಯಯವನ್ನು ಬಳಸದೇ ಇರುವುದು ಈ ಲಕ್ಷ್ಯಪದ್ಯದಲ್ಲಿ ಎದ್ದು ಕಾಣುವ ಸಂಗತಿ. ಅಂತೆಯೇ, ಸಂಬಂಧಕಾರಕವನ್ನು ವಿಭಕ್ತಿಪ್ರತ್ಯಯ ಸಹಿತವಾಗಿ–'ಅಧೀಶ್ವರನಾ ದಯೆ'—ಬಳಸಿರುವುದನ್ನೂ ಕಾಣಬಹುದು. ಈ ಅಂಶಗಳು ಈ ಪ್ರಕರಣದ ವಿವೇಚನೆಯಲ್ಲಿ 'ಕವಿರಾಜಮಾರ್ಗ'ಕಾರನ ನಿಲವು 'ಶಬ್ದಸ್ಮೃತಿ' ಹಾಗೂ 'ಶಬ್ದಮಣಿದರ್ಪಣ'ಕಾರರ ನಿಲುವಿಗಿಂತ ಭಿನ್ನವಾಗುತ್ತದೆಂಬುದನ್ನು ಸ್ಪಷ್ಟಪಡಿಸುತ್ತವೆ. 'ಕವಿರಾಜಮಾರ್ಗ'ಕಾರ ಲಕ್ಷಣಪದ್ಯದಲ್ಲಿಯೂ 'ಕರ್ತೃ'ಕಾರಕದ ಹೆಸರನ್ನು ಎತ್ತದೆ 'ಕರ್ಮಕರಣಾದಿಕಂ'

ಎಂದೇ ಹೇಳಿದ್ದಾನೆ; ಲಕ್ಷ್ಯದಲ್ಲಿಯೂ ವಿಭಕ್ತಿ ಪ್ರತ್ಯಯ ರಹಿತವಾಗಿಯೇ—'ನರಪತಿ ಬಂದಂ'—ಬಳಸಿದ್ದಾನೆ; ಷಷ್ಠಿಗೆ ಕಾರಕತ್ವವನ್ನು ಆರೋಪಿಸಿದ್ದಾನೆ. ಆದರೆ, ನಾಗವರ್ಮ ಮತ್ತು ಕೇಶಿರಾಜರು ಕಾರಕಗಳು ಆರೇ ಎಂದು ಒಪ್ಪಿದ್ದರೂ, ಷಷ್ಠಿಗೆ ಬದಲಾಗಿ ಕರ್ತೃವಿಗೆ ಕಾರಕತ್ವವನ್ನು ಆರೋಪಿಸಿದ್ದಾರೆ; ಷಷ್ಠಿಗೆ, ಅದು ಸಂಬಂಧಾರ್ಥಕವಾಗಿರುವುದರಿಂದ, ಕಾರಕತ್ವವಿಲ್ಲವೆಂದು ಭಾವಿಸಿದ್ದಾರೆ.

ಬಹುಶಃ ಪರವರ್ತೀ ವ್ಯಾಕರಣಕಾರರ ಹೇಳಿಕೆಗಳನ್ನು ಆಧಾರವಾಗಿಟ್ಟುಕೊಂಡು, ಮದ್ರಾಸ್ ಆವೃತ್ತಿಯ ಸಂಪಾದಕರು "ಷಷ್ಠಿಗೆ ಕಾರಕತ್ವವಿಲ್ಲವಾಗಿ ಕಾರಕಗಳು ಆರಾದುದರಿಂದ ಇಲ್ಲಿ 'ವಿಭಕ್ತಿಗಳಾಱುನಿಕ್ಕುಂ' ಎಂದಿರಬಹುದೆಂದು ತೋರುವುದು" ಎಂದು ಮೂಲ ಪಾಠವನ್ನೇ ಪರಿಷ್ಕರಿಸಬೇಕಾಗುತ್ತದೆಂದು ಸೂಚಿಸಿದ್ದಾರೆ. ಇಂಥ ಸೂಚನೆ ಸೋಪಪತ್ತಿಕವಾಗಿಲ್ಲವೆಂಬುದನ್ನು ಮುಳಿಯ ತಿಮ್ಮಪ್ಪಯ್ಯನವರು ತಮ್ಮ ಈ ವಿವೇಚನೆಯಲ್ಲಿ ತೋರಿಸಿಕೊಟ್ಟಿದ್ದಾರೆ:

"ಷಷ್ಠಿಗೆ ಕಾರಕತ್ವವಿಲ್ಲದಿರುವುದು ಸಂಸ್ಕೃತ ವ್ಯಾಕರಣ ಪದ್ಧತಿಗನುಗುಣವಾಗಿ. ಅದನ್ನು ಅನುಸರಿಸಿದಲ್ಲಿ 'ವಿಭಕ್ತಿಗಳಾಱು' ಎನ್ನುವುದು ಹೇಗೆ? ಸಂಸ್ಕೃತದಲ್ಲಿ ನಾಮ ವಿಭಕ್ತಿಗಳು ಆರಲ್ಲ, ಏಳು. ಅವರು ತಮ್ಮ ಆ ಸಂದೇಹ ನಿವೃತ್ತಿಯನ್ನು 'ಆದರೆ ಲಕ್ಷ್ಯ ಪದ್ಯದಲ್ಲಿ ಷಷ್ಠಿಯ ವಿಭಕ್ತಿಯನ್ನೂ ಕಾರಕಕ್ಕೆ ಉದಾಹರಣೆಯಾಗಿ ಕವಿಯು ಕೊಟ್ಟಿರುವನು' ಎಂಬುದರಿಂದ ಮಾಡಿಕೊಳ್ಳುತ್ತಾರೆ. ಷಷ್ಠೀ ವಿಭಕ್ತಿಯನ್ನು ಕ್ರಮವಾಗಿ ಕಾರಕಾಧಾರವೆನ್ನಿಸಿದ ವಿಭಕ್ತಿನಿರೂಪಣೆಯಲ್ಲಿ ಒಟ್ಟಿಗೆ ಸೇರಿಸಿದುದು ಮಾತ್ರ—ಎಂದೇಕೆ ಭಾವಿಸಬಾರದು? ಸಂಬಂಧದ ಷಷ್ಠಿಗೆ ಕಾರಕತ್ವವಿಲ್ಲವಾದರೂ ಕಾರಕಗಳ ಸಾಲಿನಲ್ಲಿರುವುದರಿಂದ ಅದನ್ನು ಅವುಗಳೊಡನೆ ನಿರೂಪಿಸಿದ್ದಾನೆ ಎಂದೇ ಭಾವಿಸತಕ್ಕುದು. ಷಷ್ಠಿಗೆ ಸಂಬಂಧವಾಚಕತೆ ಮಾತ್ರವೇ ಇರುವುದು, ಕಾರಕತ್ವವಿಲ್ಲ ಎಂಬ ಸಂಸ್ಕೃತ ವೈಯಾಕರಣ ಮಾರ್ಗವನ್ನೊಂದಿದರೆ 'ವಿಭಕ್ತಿಗಳಾಱು' ಎನ್ನುವುದಾದರೂ ಹೇಗೆ? ಷಷ್ಠಿಗೆ ವಿಭಕ್ತಿ ಪ್ರತ್ಯಯವೂ ಇಲ್ಲದಾಗುವುದು. ಆ ವಿಭಕ್ತಿಯ ಸ್ವರೂಪವನ್ನು ತಿಳಿಸಲಿಕ್ಕಾಗಿ ಷಷ್ಠಿಯನ್ನೂ ಅಲ್ಲಿ ಸೂಚಿಸಿರಬೇಕು, ಎನ್ನುವ.

"ಇಲ್ಲಿ ನಮಗೆ ತೋರಿದ ಕವಲೆಣಿಕೆ ಅದಲ್ಲ, ಬೇರೊಂದು. ಗ್ರಂಥಕಾರನು 'ಕಾರಕಮಾಱು' ಎಂದೂ 'ಪ್ರಥಮಾದಿ ಭೇದನಿರ್ಧಾರಣದಿಂದದಂ ಪಿಡಿದು ನಿಲ್ವ ವಿಭಕ್ತಿಗಳೇೞುನಿಕ್ಕುಂ' ಎಂದಿದ್ದಾನಷ್ಟೆ. ಇದನ್ನು ಅವಗಾಹಿಸಿ ನೋಡಿದಲ್ಲಿ ಅವನೆಣಿಕೆಯಂತೆ 'ಕರ್ಮ'ವನ್ನು ಹಿಡಿದು ಮೊದಲ್ಗೊಂಡು 'ಅಧಿಕರಣದ'ವರೆಗಿನವೆಲ್ಲ—ಎಂದರೆ 'ಸಂಬಂಧ' (ಷಷ್ಠಿ) ಸಹಿತವಾಗಿ—ಕಾರಕಗಳು ಎಂಬ ಭಾವನೆ ಹೊಳೆಯುತ್ತಿದೆ. ಅಲ್ಲವಾಗಿದ್ದರೆ 'ಕಾರಕಮಾಱು ಕರ್ತೃಕರ್ಮಾದಿಕಂ' ಎನ್ನಬೇಕಾಗಿತ್ತು. ಹಾಗೆಂದರೆ, ಛಂದೋಭಂಗವಾಗುತ್ತಿತ್ತು ಎಂದೆನ್ನಬಾರದು. 'ಇಲ್ಲಿಗಿದು ತಕ್ಕುದಿಲ್ಲಿಗೆ ಪೊಲ್ಲದಿದೆಂದಱುದು' ಪದಗಳನ್ನು ಬಳಸಬೇಕು ಎಂದು ಬೋಧಿಸಿದ 'ವಾಗಧಿಪ'ನಿಗೆ ತಕ್ಕಂತೆ ಪದಗಳನ್ನು ಪ್ರಯೋಗಿಸಲು ತಿಳಿಯುತ್ತಿದ್ದಿಲ್ಲವೆ? ನಾವು ಮೇಲೆ ಸೂಚಿಸಿದುದು ಅರ್ಥಾನುಸಾರ

ವಾಗಿ ಮಾತ್ರವಲ್ಲದೆ ಛಂದೋಭಂಗವನ್ನು ಅಲ್ಲಗಳೆದಿಲ್ಲ. ಅದರಿಂದ, ಪ್ರಥಮಾವಿಭಕ್ತಿ ಪ್ರತ್ಯಯಯುತ 'ಕರ್ತೃ'ಪದವೊಂದು ಮಾತ್ರ 'ಕಾರಕ'ವಲ್ಲ—ಉಳಿದುವೆಲ್ಲ ಕಾರಕಗಳು ಎಂಬ ಭಾವನೆ ಅವನಿಗೆ ಇದ್ದಂತೆ ತೋರುತ್ತದೆ. ಮತ್ತಿನ ಕನ್ನಡ ವೈಯಾಕರಣರು ಈ ಭಾವನೆಯನ್ನು ಸಂಸ್ಕೃತಾನುಸಾರವಾಗಿ ಒಪ್ಪದಿದ್ದರೂ ಅಭಿನ್ನವಾದ ದೇಸಿಯಲ್ಲಿ ಯತಿಭಂಗವನ್ನು ಗುಣವನ್ನಾಗಿ ಭಾವಿಸಿದ ಪೂರ್ವಾಚಾರ್ಯರನ್ನು ಅನುಸರಿಸಿದಂತೆ, ಅಭಿನ್ನವಾದ ದೇಸಿಯೆಂದೇ ಕಾರಕ ನಿರ್ಣಯವನ್ನು ಹೀಗೆ ಮಾಡಿದುದಾಗಿರಬೇಕು. ಈ ನಿರ್ಧಾರದಲ್ಲಿ ಸಕಾರಣತೆಯೂ ಇಲ್ಲವೆಂದಲ್ಲ. 'ಕಾರಕಂ' ಎಂಬ ಪದವು ಸಂಸ್ಕೃತ ವ್ಯಾಕರಣಾನುಸಾರವಾದ ವ್ಯುತ್ಪತ್ತಿಯಂತೆ 'ಮಾಡಿಸುವ ವ್ಯಕ್ತಿ'ಯನ್ನು ಸೂಚಿಸುವುದಲ್ಲದೆ 'ಮಾಡುವ ವ್ಯಕ್ತಿ'ಯನ್ನಲ್ಲ. 'ಕಾರಯತಿ ಇತಿ ಕಾರಕಂ' ಎಂದು ಕಾರಕಪದ ವಿವೇಚನೆಯನ್ನು ಹಿಂದೆಯೇ ಮಾಡಿದ್ದೇವಷ್ಟೆ. 'ಕರೋತಿ ಇತಿ ಕರ್ತಾ' ಎಂದು 'ಕರ್ತೃ' ಪದವು ರೂಪಿತವಾಗಿದೆ. ಇಂಥ 'ಕರ್ತೃ' ಎಂಬ ಪದವು ಕಾರಕವೆನ್ನಿಸುವುದು ಹೇಗೆ? 'ನರಪತಿ ಬಂದಂ' ಎಂಬ ದೃಷ್ಟಾಂತವನ್ನು ನೋಡಿರಿ. ಅದಕ್ಕೆ "ನರಪತಿಯು ಬರುವಿಕೆ ಎಂಬ ಕಾರ್ಯವನ್ನು 'ಮಾಡಿದನು' ಎಂದಲ್ಲದೆ 'ಮಾಡಿಸಿದನು' ಎಂದು ಅರ್ಥವಲ್ಲ. ಹಾಗಾದರೆ, 'ನರಪತಿ ಮಂತ್ರಿಯಂ ಬರಿಸಿದಂ' ಎಂದಿದ್ದಲ್ಲಿ ಹೇಗೆ? ಎಂಬ ಪ್ರಶ್ನವು ತಲೆದೋರುವುದೋ ಏನೋ. ಅಲ್ಲಿಯೂ 'ನರಪತಿ'ಯು ಬರಿಸುವುದು ಎಂಬ ಕ್ರಿಯೆಯ 'ಕರ್ತೃ'ವಲ್ಲದೆ 'ಕಾರಕ'ನಲ್ಲ; ಎಂದರೆ, ಬರಿಸುವಿಕೆಯನ್ನು ಮಾಡುವವನಲ್ಲದೆ ಮಾಡಿಸುವವನಲ್ಲ....

"ಈಗ, ಬೇರೆಯವುಗಳನ್ನು ಬಿಟ್ಟು 'ಅಧೀಶ್ವರನಾ ದಯೆಸಾಲ್ಗುಂ' ಎಂಬುದನ್ನು ಮನನವೆಸಗುವ. ಇಲ್ಲಿ 'ಅಧೀಶ್ವರನಾ' ಎಂಬ ಷಷ್ಠೀವಿಭಕ್ತಿಯುತವಾದ ಪದವು 'ಸಾಲ್ಗುಂ' ಎಂಬ ಕ್ರಿಯೆಯ ಕಾರಕವಲ್ಲವೆಂಬುದೇನೋ ಸರಿ. ಆ ಕ್ರಿಯೆಗೆ ಕರ್ತೃ 'ದಯೆ.' ಅಂತಹ ಕರ್ತೃ ರೂಪದ ದಯೆ 'ಅಧೀಶ್ವರನ ಸಂಬಂಧವಾದುದು.' ಮೇಲಿನ ವಿವೇಚನೆಗನುಗುಣವಾಗಿ ಕರ್ತೃಕಾರಕವಾಗದು ಎಂಬುದು ಸರಿಯಾದರೆ; ಈ ವಾಕ್ಯದಲ್ಲಿ ಕಾರಕವೇ ಇಲ್ಲವೆನಿಸುತ್ತದೆ. ಅದರಿಂದ, ಮುಂದಿನ ನಾಮಪದಕ್ಕೆ ತನ್ನ ಸಂಬಂಧವನ್ನು ಮಾತ್ರ ಕೊಡುವ 'ಅಧೀಶ್ವರನಾ' ಎಂಬ ಪದವು ಆ ಸ್ವಸಂಬಂಧಿಯಾದ 'ದಯೆ' ಎಂಬ ಕರ್ತೃವಿನ ಮೂಲಕವಾಗಿ 'ಸಾಲ್ಗುಂ' ಎಂಬ ಭಾವನಾತ್ಮಕ ಕ್ರಿಯೆಯನ್ನು ಮೂಡಿಸುವುದಲ್ಲವೆ? ಇನ್ನೊಬ್ಬನ 'ದಯೆ'ಯಾದರೆ, ಅದು 'ಸಾಲ್ಗುಂ' ಎಂಬುದಕ್ಕೆ ಕರ್ತೃವಾಗಲಾರದು. ಅದರಿಂದಲೇ ಷಷ್ಠೀ ವಿಭಕ್ತಿಯುಕ್ತ ಪದವು ಮುಂದಿನ ನಾಮಪದಕ್ಕೆ ತನ್ನ ಸಂಬಂಧವನ್ನಿತ್ತು ಆ ಮೂಲಕವಾಗಿ ಕ್ರಿಯೆಗೆ ಕಾರಕವಾಗುವುದು. ಅದನ್ನು ಬೇಕಾದರೆ 'ಸಂಬದ್ಧ ಕಾರಕ' ಎಂದು ಕರೆಯಬಹುದು.

"ಇಷ್ಟು ಮಾತ್ರವಲ್ಲ. ಪ್ರಾಕೃತ ದೇಶಿಗಳಲ್ಲಿ ಷಷ್ಠೀವಿಭಕ್ತಿಕ ಪದಕ್ಕೆ ಕರ್ಮಾದಿಯಾದ ಕೆಲವು ಕಾರಕಗಳ ಅಧಿಕಾರವೂ ಇದ್ದಂತೆ ಗೊತ್ತಾಗುತ್ತಿದೆ.... ಕನ್ನಡ ವೈಯಾಕರಣರೂ ಈ ವಿಚಾರವನ್ನು 'ವಿಭಕ್ತಿಪಲ್ಲಟ' ಎಂಬ ಹೆಸರಿನಿಂದ ವಿಸ್ತರಿಸಿದ್ದಾರಷ್ಟೆ. ಇದು ದೇಸಿ

ಯಲ್ಲಿ ಪುರಾತನ ಕಾಲದಿಂದಲೂ ನಡೆದುಬಂದು ಈಗಲೂ ನೆಲೆಗೊಂಡಿರುವ ಪದ್ಧತಿ ಎಂಬುದನ್ನು ಮರೆಯಬಾರದು. ಮಾತ್ರವೇ ಅಲ್ಲ; ಈ ವಿಚಾರವನ್ನೆಲ್ಲ ಮಥನವೆಸಗಿಯೇ ಆಗಿರಬೇಕು—ನಾಗವರ್ಮನು ತನ್ನ 'ಭಾಷಾಭೂಷಣ'ದಲ್ಲಿ 'ಕಾರಕ'ವನ್ನು ಲಕ್ಷಿಸುವ ರೀತಿಯನ್ನೀಕ್ಷಿಸಿರಿ: ಸೂತ್ರ: ಅಥ ಕಾರಕಂ ನಿರೂಪ್ಯತೇ; ವೃತ್ತಿ: ಸಂಜ್ಞಾ ಸಂಧಿ ವಿಭಕ್ತಿ ವ್ಯಾಖ್ಯಾನಾನಂತರಂ ಕರ್ತೃಕರ್ಮ ಸಂಪ್ರದಾನಾಪಾದಾನ ಸ್ವಾಮ್ಯಾಧಿಕರಣಾಖ್ಯಂ ಕಾರಕಂ ಯಥಾಕ್ರಮಂ ನಿರೂಪ್ಯತೇ.

ಈ ಸೂತ್ರವೃತ್ತಿಗಳಿಂದ ಸ್ವಾಮಿ ಸಂಬಂಧದ ಷಷ್ಠಿಯೂ ಕಾರಕವೆಂದು ಸೂಚಿಸಿ ದಂತಾಗುತ್ತದೆ. ಆದರೆ, ಅದರೊಡನೆ ಕರ್ತೃವೂ ಕಾರಕವೆಂಬುದನ್ನು ಸಂಸ್ಕೃತ ವೈಯಾ ಕರಣ ಮಾರ್ಗದಲ್ಲಿ ಅವನೇ ಸೂಚಿಸಿದ್ದಾನೆ. ಇಲ್ಲಿ 'ಕರ್ಮಕರಣಾದಿಕದಿಂ' ಎಂಬ ಗ್ರಂಥ ಕಾರನ ಹೇಳಿಕೆಯನ್ನಾಧರಿಸಿ ಕಾರಕ ಕರ್ತೃಗಳ ವ್ಯುತ್ಪತ್ತಿ ಕ್ರಮವನ್ನು ಬಿಡಿಸಿ, ಕರ್ತೃ ಕಾರಕವಾಗದೆಂದೂ, ಕರ್ಮಾದಿಗಳು ಮಾತ್ರವೇ ಕಾರಕಗಳೆಂದೂ ನಿರ್ಧರಿಸಿಕೊಂಡುದು ನಾವೆ."[76]

'ಕಾರಕ' ಎಂಬ ಶಬ್ದವನ್ನು 'ಕವಿರಾಜಮಾರ್ಗ'ಕಾರ ವಿವರಿಸಿಲ್ಲ. ಹೀಗಾಗಿ, ಸಾಮಾನ್ಯ ಸಂಪ್ರದಾಯದ ಅರ್ಥವೇ ಇಲ್ಲಿಯೂ ಸಂಗತವಾಗುತ್ತದೆಂದು ಭಾವಿಸ ಬೇಕಾಗುತ್ತದೆ. ಕೇಶಿರಾಜನಲ್ಲಿ "ಕಾರಕವೆಂಬುದು ಕ್ರಿಯಾನಿಮಿತ್ತಂ" ಎಂಬ ಮಾತು ಕಾಣದೊರೆಯುತ್ತದೆ. ಈ ದೃಷ್ಟಿಯಿಂದ ಪರಿಶೀಲಿಸಿದರೆ ಕ್ರಿಯಾಪದಕ್ಕೂ ಷಷ್ಠೀ ವಿಭಕ್ತಿಗೂ ಯಾವುದೇ ನೇರವಾದ ಸಂಬಂಧವೂ ಇರುವುದಿಲ್ಲ. ಆದರೆ, 'ಅಧೀಶ್ವರನಾ ದಯೆ ಸಾಲ್ಗುಂ' ಎಂದು ಹೇಳುವುದರ ಮೂಲಕ 'ಕವಿರಾಜಮಾರ್ಗ'ಕಾರನು, "ಷಷ್ಠಿಗೆ ಕ್ರಿಯಾಸಂಬಂಧವನ್ನು ಸ್ಪಷ್ಟವಾಗಿ ತಗುಳ್ಚಿ"ದ್ದಾನೆಂದೂ, ಹೀಗಾಗಿ ಷಷ್ಠಿಯೆಂಬುದು ಸಂಬಂಧಾರ್ಥಕವಾಗಿ ಮಾತ್ರ ಉಳಿಯದೆ ಕ್ರಿಯಾನಿಮಿತ್ತವೂ ಆಗಿ ಪರಿಣಮಿಸುವುದ ರಿಂದ, ಷಷ್ಠಿಯನ್ನು ಕಾರಕವೆಂದು ಕವಿರಾಜಮಾರ್ಗಕಾರ ನಿಚ್ಚಳವಾಗಿ ಭಾವಿಸಿದ್ದ ನೆಂದೂ ಹೇಳಬೇಕಾಗುತ್ತದೆ. ಇದಕ್ಕೆ ದೊರೆಯುವ ಮತ್ತೊಂದು ಪರೋಕ್ಷ ಸಮರ್ಥನೆ ಎಂದರೆ 'ಶಬ್ದಮಣಿದರ್ಪಣ'ದಲ್ಲಿ ಷಷ್ಠೀವಿಭಕ್ತಿಕೊಡಲಾಗಿರುವ 'ಮರದದು ಪಣ್' ಎಂಬ ಉದಾಹರಣೆ ಕೇವಲ ಸಂಬಂಧಾರ್ಥಸೂಚಕವಾಗಿದ್ದು, ಕೇಶಿರಾಜನ ಮಾರ್ಗ 'ಕವಿರಾಜಮಾರ್ಗ'ಕಾರನ ಮಾರ್ಗಕ್ಕಿಂತ ಭಿನ್ನವಾಗಿದೆ ಎಂಬುದರತ್ತ ಕೈದೋರುತ್ತಿರುವುದು.

ಒಟ್ಟಿನಲ್ಲಿ, ಕವಿರಾಜಮಾರ್ಗಕಾರನೂ ಸೇರಿದಂತೆ ಎಲ್ಲ ಹಳಗನ್ನಡ ವ್ಯಾಕರಣ ಕಾರರೂ ಸಂಸ್ಕೃತ ವ್ಯಾಕರಣದ ಚೌಕಟ್ಟಿಗೆ ಅನುಗುಣವಾಗಿ ಕನ್ನಡ ವ್ಯಾಕರಣ ಪ್ರಕ್ರಿಯೆಗಳನ್ನು ಹೊಂದಿಸುವ ಕೃತಕ ಪ್ರಯತ್ನ ನಡಸಿರುವುದೇ ಈ ಮೂಲಭೂತವಾದ ಗೊಂದಲಕ್ಕೆ ಕಾರಣವಾಗಿದೆ. ಇದ್ದುದರಲ್ಲಿ ಕವಿರಾಜಮಾರ್ಗಕಾರನೇ ಈ ವಿಷಯದಲ್ಲಿ ಕೊಂಚ ಸ್ವೋಪಜ್ಞತೆಯನ್ನು ಮೆರೆದಿದ್ದಾನೆಂಬುದಕ್ಕೆ ಈ ಪ್ರಕರಣ ಸಾಕ್ಷಿಯಾಗಿದೆ. ಲಕ್ಷಣ ಪದ್ಯದಲ್ಲಿ 'ಕರ್ತೃಕಾರಕ'ದ ಹೆಸರನ್ನೇ ಎತ್ತದೆ 'ಕರ್ಮಕರಣಾದಿಕಂ' ಎಂದೇ

ಹೇಳಿರುವುದನ್ನೂ ಲಕ್ಷ್ಯಪದ್ಯದಲ್ಲಿ ಪ್ರಥಮಾವಿಭಕ್ತಿಗೆ ಯಾವುದೇ ಪ್ರತ್ಯಯವನ್ನು ಸೂಚಿಸದೆ ಇರುವುದನ್ನೂ ಗಮನಿಸಿದರೆ, ಕರ್ತೃಕಾರಕವೆಂಬ ಪ್ರಕಾರವನ್ನು ಹಾಗೂ ಅದರ ವಿಭಕ್ತಿ ಪ್ರತ್ಯಯವನ್ನು ಕಲ್ಪಿಸಿಕೊಳ್ಳುವ ಪ್ರಯತ್ನ ಅನಪೇಕ್ಷಣೀಯವೂ ಅನಗತ್ಯವೂ ಆಗಿದೆಯೆಂದು ಕವಿರಾಜಮಾರ್ಗಕಾರ ಭಾವಿಸಿದ್ದಂತೆ ತೋರುತ್ತದೆ. ವಾಸ್ತವವಾಗಿ ನಾಮಪ್ರಕೃತಿಯೇ ಪ್ರಥಮಾರ್ಥದಲ್ಲಿ ಬಳಕೆಗೆ ಬರುತ್ತದೆಯಾದ್ದರಿಂದ ಅದಕ್ಕೆ ತನ್ನದೇ ಆದ ಪ್ರತ್ಯಯವಿಲ್ಲ. ಹಾಗೂ ಅಂಥ ಪ್ರತ್ಯಯದ ಅಗತ್ಯವೂ ಇಲ್ಲ ಎಂಬುದು ಆಧುನಿಕ ಭಾಷಾವಿಜ್ಞಾನಿಗಳ ಅಭಿಮತ. 'ಕವಿರಾಜಮಾರ್ಗ' ಆ ಕಾಲಕ್ಕೇ ಇಂಥ ಸಮೀಚೀನ ದೃಷ್ಟಿಯನ್ನು ಮೆರೆದಿರುವುದು ಕರ್ತೃವಿನ ಕ್ರಾಂತದರ್ಶಿತ್ವಕ್ಕೆ, ಭಾಷೆಯ ಜಾಯಮಾನದ ಬಗೆಗಿನ ಸೂಕ್ಷ್ಮ ಸಂವೇದನೆಗೆ ಸಾಕ್ಷಿಯಾಗಿದೆ ಎಂದು ಹೇಳಬಹುದು.

ದ್ವಿತೀಯಾದಿ ವಿಭಕ್ತಿ ಪ್ರತ್ಯಯಗಳ ವಿಚಾರದಲ್ಲಿ—ಷಷ್ಠೀ ವಿಭಕ್ತಿ ಪ್ರತ್ಯಯವೊಂದನ್ನು ಬಿಟ್ಟು—ಕವಿರಾಜಮಾರ್ಗಕಾರನಿಗೂ ಆತನ ಪರವರ್ತೀ ವ್ಯಾಕರಣಕಾರರಿಗೂ ಹೆಚ್ಚಿನ ವ್ಯತ್ಯಾಸಗಳೇನೂ ಇಲ್ಲ. ಅಮ್, ಇಮ್, ಗೆ, ಅತ್ತಣಿಂ, ಒಳ್ ಎಂಬುವನ್ನು ಕ್ರಮಶಃ ದ್ವಿತೀಯಾ, ತೃತೀಯಾ, ಚತುರ್ಥೀ, ಪಂಚಮೀ ಮತ್ತು ಸಪ್ತಮೀ ವಿಭಕ್ತಿಪ್ರತ್ಯಯಗಳೆಂದು 'ಕವಿರಾಜಮಾರ್ಗ'ಕಾರ ಸೂಚಿಸಿದ್ದಾನೆ. 'ಮಮಿಂಕೆಯದದೊಳ್' ಎಂಬ ಸೂತ್ರದಲ್ಲಿ ನಾಗವರ್ಮನೂ ಕೇಶಿರಾಜನೂ ಇದೇ ಅಭಿಪ್ರಾಯವನ್ನು ಕಂಡರಿಸಿದ್ದಾರೆ.

ಷಷ್ಠೀ ವಿಭಕ್ತಿಗೆ ಸಂಬಂಧಿಸಿದಂತೆ ಪೂರ್ವದ ಹಳಗನ್ನಡದ ರೂಪವನ್ನೂ 'ಕವಿರಾಜಮಾರ್ಗ'ಕಾರ ಗುರುತಿಸಿದ್ದಾನೆಂಬುದು ಗಮನಾರ್ಹವಾಗಿರುವ ಸಂಗತಿ. 'ಅ' ಎಂಬುದನ್ನು ಷಷ್ಠೀ ವಿಭಕ್ತಿ ಪ್ರತ್ಯಯವಾಗಿ ಸೂಚಿಸಿರುವ ಕೇಶಿರಾಜನೂ ವಿಶಿಷ್ಟ ಸಂದರ್ಭಗಳಲ್ಲಿ ಷಷ್ಠಿಗೆ ದೀರ್ಘತ್ವ ದೊರೆಕೊಳ್ಳುತ್ತದೆಂದೂ, ಪೂರ್ವಕವಿ ಪ್ರಯೋಗಗಳಲ್ಲಿ ಇಂಥ ಉದಾಹರಣೆಗಳು ಲಭ್ಯವಾಗುತ್ತವೆಂದೂ—ಉದಾ : 'ಈಂದ ಪುಲಿಯಾವೊಲಿರ್ದಳ್' ಎಂಬ ಗುಣವರ್ಮನ 'ಹರಿವಂಶ' ಪ್ರಯೋಗ—ತಿಳಿಸಿದ್ದಾನೆಂಬುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

(ಅ) ಕಾರಕದೋಷ : ಕಾರಕಗಳ ಪ್ರಯೋಗದಲ್ಲಿ ದೋಷಗಳಿಗೆ ಹೇಗೆ ಎಡೆ ದೊರೆಯಬಹುದೆಂಬುದನ್ನೂ ಆ ದೋಷಗಳನ್ನು ಹೇಗೆ ದೂರ ಮಾಡಬಹುದೆಂಬುದನ್ನೂ ಕವಿರಾಜಮಾರ್ಗಕಾರ ತೋರಿಸಿಕೊಟ್ಟಿದ್ದಾನೆ. ಇದಕ್ಕೆ ನಿದರ್ಶನಾರ್ಥವಾಗಿ ಕರ್ಮಕಾರಕವನ್ನು ಮಾತ್ರ ಆಯ್ದುಕೊಂಡಿದ್ದಾನೆ. ಆ ನಿದರ್ಶನ ಹೀಗಿದೆ :

> ಬರಮೆಮಗೀಗೆ ದೇವತೆಗಳಾದರದಿಂ ಕರುಣಿಪ್ಪುದಕ್ಕೆ ಬಂ
> ಧುರಗುಣ ಬಂಧುಸಂತತಿಯ ನೆಂಬುದು ಕಾರಕದೋಷಮಾಗಳುಂ

ಈ ಸಂದರ್ಭದಲ್ಲಿ 'ದೇವತೆಗಳ್' ಎಂಬುದು ಕರ್ತೃವಾಗಿರುವುದರಿಂದ 'ಬರಂ' ಎಂಬುದು

ಕರ್ಮಕಾರಕವಾಗಿ ಪ್ರಯುಕ್ತವಾಗಬೇಕು—ಅಂದರೆ 'ಬರಮಂ' ಎಂದಾಗಬೇಕು; ಅಂತೆಯೇ ಸಂಪ್ರದಾನಕಾರಕಕ್ಕೆ—'ಗೆ'—ಬದಲಾಗಿ ಕರ್ಮಕಾರಕ—'ಅಮ್'—ಬಳಕೆಯಾಗಿರುವ 'ಸಂತತಿಯಮ್' ಎಂಬುದೂ ದೋಷಯುಕ್ತವಾಗಿದೆ—ಅಂದರೆ, 'ಸಂತತಿಗೆ' ಎಂದಾಗಬೇಕು. ಉತ್ತರಾರ್ಧದಲ್ಲಿ 'ಕವಿರಾಜಮಾರ್ಗಕಾರ' ಈ ಪರಿಷ್ಕಾರವನ್ನು ನಿದರ್ಶಿಸಿದ್ದಾನೆ:

ಬರವನಮೋಘಮೀಗೆಮಗೆ ದೇವತೆಗಳ್ ಕರುಣಿಪ್ಪುದಕ್ಕೆ ಬಂ
ಧುರ ಗುಣಬಂಧು ಸಂತತಿಗೆ ನಿಕ್ಕುವಮೆಂಬುದದುಷ್ಟಕಾರಕಂ ॥ (೧–೧೧೬)

ಇಲ್ಲಿ 'ಬರವಂ' ಮತ್ತು 'ಸಂತತಿಗೆ' ಎಂಬ ಉಚಿತ ವಿಭಕ್ತಿಪ್ರತ್ಯಯಗಳ ಪ್ರಯೋಗವಾಗಿರುವುದರಿಂದ ಅವು 'ಅದುಷ್ಟಕಾರಕ'ಗಳಾಗಿವೆ.

ಈ ಕಾರಕದೋಷವನ್ನು ದೂರಮಾಡುವ ಮತ್ತೊಂದು ವಿಧಾನವನ್ನು 'ಕವಿರಾಜಮಾರ್ಗ'ಕಾರ "ನಿಕ್ಕುವಮಿಂತುಮಲ್ಲದದ(ಖಾ) ಕ್ರಿಯೆ ಸಾರ್ದಿರೆ...." ಎಂಬ ಇನ್ನೊಂದು ವೃತ್ತದಲ್ಲಿ ನಿದರ್ಶಿಸಿದ್ದಾನೆ (೧–೧೧೭). ಇಲ್ಲಿ 'ಬರಂ' ಎಂಬ ಶಬ್ದದ ಮುಂದೆ ಕ್ರಿಯಾಪದವನ್ನು ಹಾಕಿಕೊಂಡರೆ—ಅಂದರೆ, 'ಬರಮಂ + ಈಗೆ' ಎಂದು ಕ್ರಿಯಾಸಮಾಸ ಮಾಡಿಕೊಂಡರೆ—ದೋಷವಾಗುವುದಿಲ್ಲ; ಆಗ 'ಬರಮಂ ಈಗೆ ಎಮಗೆ' ಅಥವಾ 'ಬರಮೀಗೆ ಎಮಗೆ' ಎಂದರೆ, 'ವರವನ್ನು ನಮಗೆ ಕೊಡಲಿ' ಅಥವಾ 'ನಮಗೆ ವರ ಕೊಡಲಿ'—ಎಂಬ ಸಾಧುಪ್ರಯೋಗಗಳು ಲಭ್ಯವಾಗುತ್ತವೆ ಎಂದು ತೋರಿಸಿದೆ.

(ಇ) ಕಾರಕದ ಬಳಕೆಯಲ್ಲಿ ದಕ್ಷಿಣೋತ್ತರಮಾರ್ಗಗಳ ವೈಶಿಷ್ಟ್ಯ: ದಕ್ಷಿಣೋತ್ತರ ಮಾರ್ಗಗಳ ಭೇದಕಗುಣವನ್ನಾಗಿ ಕಾರಕವನ್ನು 'ಕವಿರಾಜಮಾರ್ಗ'ಕಾರ ಬಳಸಿಕೊಂಡಿದ್ದಾನೆ. ಆತನ ಅಭಿಪ್ರಾಯದಲ್ಲಿ, ಕಾರಕ ಮತ್ತು ಕ್ರಿಯಾಪದಗಳೆರಡೂ ಒಂದೇ ಲಿಂಗದಲ್ಲಿದ್ದರೆ ಅದು ದಕ್ಷಿಣಮಾರ್ಗಸೂಚಕವೆಂದೂ, ಅವು ಭಿನ್ನ ಲಿಂಗದಲ್ಲಿದ್ದರೆ ಅದು ಉತ್ತರಮಾರ್ಗಸೂಚಕವೆಂದೂ ಗ್ರಹಿಸಬೇಕಾಗಿದೆ. ಆ ನಿದರ್ಶನ ಇಂತಿದೆ:

ವಿಳಸಿತ ಸಸ್ಯ ಸಂಪದಭಿರಾಮ ಗುಣೋದಯೆ ತಾಳ್ದಿದಳ್ ಧರಾ-
ಲಳನೆ ವಿಶಾಲಲಕ್ಷ್ಮಿಯನನಾರತಮೆಂಬುದು ದಕ್ಷಿಣಾಪಥಂ ।
ಜಳನಿಧಿ ಮೇಖಲಾವಲಯಿತಾಂಗಿ ಕರಂ ಸೊಗಯಿಪ್ಪುದಾಯ್ತು ಭೂ-
ಲಳನೆ ವಿಶಾಲಲಕ್ಷ್ಮಿಯನನಾಕುಳಮೆಂಬುದಿದುತ್ತರಾಪಥಂ ॥ (೨–೧೧೦)

ಈ ನಿದರ್ಶನವೃತ್ತದ ಪೂರ್ವಾರ್ಧದಲ್ಲಿ 'ವಿಳಸಿತ ಸಸ್ಯ ಸಂಪದಭಿರಾಮಗುಣೋದಯೆ' ಎಂಬುದೂ 'ತಾಳ್ದಿದಳ್' ಎಂಬುದೂ ಒಂದೇ ಲಿಂಗದಲ್ಲಿ (ಸ್ತ್ರೀಲಿಂಗದಲ್ಲಿ) ಇವೆ; ಅದೇ ಉತ್ತರಾರ್ಧದಲ್ಲಿ 'ಜಳನಿಧಿಮೇಖಲಾವಲಯಿತಾಂಗಿ' ಎಂಬುದು ಸ್ತ್ರೀಲಿಂಗದಲ್ಲಿದ್ದರೆ, 'ಸೊಗಯಿಪ್ಪುದಾಯ್ತು' ಎಂಬ ಕ್ರಿಯಾಪದ ನಪುಂಸಕಲಿಂಗದಲ್ಲಿದೆ.

(ಈ) ವಿಭಕ್ತಿ ಪ್ರತ್ಯಯಗಳ ವಿಕಲ್ಪ ಪ್ರಯೋಗ: 'ಕವಿರಾಜಮಾರ್ಗ'ದ ದ್ವಿತೀಯ

ಪರಿಚ್ಛೇದದಲ್ಲಿ ದ್ವಿತೀಯಾ, ಷಷ್ಠೀ ಮತ್ತು ಸಂಬೋಧನಾ ವಿಭಕ್ತಿ ಪ್ರತ್ಯಯಗಳನ್ನು ವಿಕಲ್ಪರೂಪದಲ್ಲಿ—ಅಂದರೆ, ಹ್ರಸ್ವಸ್ವರಗಳಿಗೆ ಬದಲಾಗಿ ದೀರ್ಘಸ್ವರಗಳನ್ನು ಬಳಸುವುದು—ಪ್ರಯೋಗಿಸುವ ವಿಚಾರವನ್ನು ಚರ್ಚಿಸಲಾಗಿದೆ. ಆ ವಿವರಗಳನ್ನು ಹೀಗೆ ಸಂಗ್ರಹಿಸಬಹುದು :

(i) ದ್ವಿತೀಯಾ ವಿಭಕ್ತಿ ಮತ್ತು ಷಷ್ಠೀ ವಿಭಕ್ತಿಗಳಲ್ಲಿ ಗುರು ಲಘು ವಿಕಲ್ಪ ಉಂಟು. ಅಂದರೆ, 'ಅನ್' (ಅಥವಾ 'ಅಮ್') ಎಂಬುದು 'ಆನ್' (ಅಥವಾ 'ಆಮ್') ಎಂದೂ, 'ಅ' ಎಂಬುದು 'ಆ' ಎಂದೂ ಬದಲಾಗಬಹುದು.

(ii) ಆದಿಸ್ವರಯುಕ್ತವಾದ ಶಬ್ದ ದ್ವಿತೀಯಾವಿಭಕ್ತಿಸಹಿತವಾದ ಶಬ್ದದ ಮುಂದೆ ಬಂದಾಗ ಹಾಗೂ ಪಾದಾಂತ್ಯದಲ್ಲಿ ದ್ವಿತೀಯಾ ವಿಭಕ್ತಿ ಪ್ರತ್ಯಯ ದೀರ್ಘವಾಗಬಹುದು. ಉಳಿದಂತೆ ಸ್ವಚ್ಛಂದವಾಗಿ ಬಳಸಬಹುದು. ಉದಾ : 'ನೃಪನನ್' ಹಾಗೂ 'ನೃಪನಾನ್', 'ಕೀರ್ತಿಧ್ವಜನಂ' ಹಾಗೂ 'ಕೀರ್ತಿಧ್ವಜನಾನ್' (೧೬ ಮತ್ತು ೧೭ನೆಯ ಪದ್ಯಗಳು).

(iii) ಷಷ್ಠೀ ವಿಭಕ್ತಿಯುಕ್ತವಾದ ಶಬ್ದಗಳನ್ನು ಒಂದುಗೂಡಿಸಿ ಹೇಳುವಂಥ ಸಂದರ್ಭಗಳಲ್ಲಿ ಹಾಗೂ ಪಾದಾಂತ್ಯದಲ್ಲಿ ಷಷ್ಠೀ ವಿಭಕ್ತಿ ಪ್ರತ್ಯಯ ದೀರ್ಘವಾಗಬಹುದು. ಉಳಿದಂತೆ ಸ್ವಚ್ಛಂದವಾಗಿ ಬಳಸಬಹುದು. ಉದಾ : 'ನೃಪನಾ ನೃಪನಂದನನಾ। ನೃಪವಧುವರ್ ನೆರೆದು ಸುಖದೊಳಿರೆ'; 'ಕೈಕೊಂಡತ್ತಪರಿಮಿತರಾಗಮೆರ್ದೆಯಂ। ನೃಪಬಾಂಧವರಾ ಸುಮಿತ್ರರಾ ಪರಿಜನದಾ' ಹಾಗೂ 'ನೃಪನ ನರಪಾಲತನಯನ। ನೃಪವಧುವರ್ ನೆರೆದು ಸುಖದೊಳಿರೆ'; 'ಕೈಕೊಂಡತ್ತಪರಿಮಿತರಾಗಮೆರ್ದೆಯಂ। ನೃಪತಿಸನಾಭಿಗಳ ಬಂಧುಜನದಾ ಕೆಳೆಯಾ.'

(iv) ಸಂಬೋಧನೆಯಲ್ಲಿಯೂ ಔಚಿತ್ಯವನ್ನರಿತು ದೀರ್ಘಸ್ವರವನ್ನು ಪ್ರಯೋಗಿಸಬಹುದು. ಇಲ್ಲವಾದಲ್ಲಿ 'ಬಾಯಟಿಇದೊಳ್ವವೋಲ್'—ಎಂದರೆ, ಅಳುತ್ತಾ ಕರೆಯುವಂತೆ—ವಿರಸವಾಗುತ್ತದೆ. ಉದಾ :

ನೃಪತೀ ಪರೋಪಕಾರೀ
ವಿಪುಳಗುಣೀ ವಿಶದ ಶಶಧರಾಯತಕೀರ್ತೀ
ನೃಪಗತಭಯಾ ದಯಾಲೂ
ರಿಪುವರ್ಗಮನಳೆದು ಗೆಲ್ವೆಯಾಗಾಹವದೊಳ್ ॥ (೨–೨೪)

ಇಲ್ಲಿ ಇದು ಪ್ರಶಂಸೆಯೆಂದು ಭಾಸವಾಗುವುದಕ್ಕಿಂತ, ದುಃಖದ ಸಂದರ್ಭವೆಂಬ ಕಲ್ಪನೆಯೇ ಸಹಜವಾಗಿ ಮೂಡುವ ಸಂಭವ ಹೆಚ್ಚಾಗಿರುವುದರಿಂದ ಇದು ಅಪೇಕ್ಷಣೀಯವಲ್ಲವೆಂಬುದು 'ಕವಿರಾಜಮಾರ್ಗ'ಕಾರನ ಅಭಿಮತವಾಗಿದೆ.

(2) ಸಮಸಂಸ್ಕೃತ : 'ಸಮಸಂಸ್ಕೃತ' ಎಂಬ ಶಬ್ದವನ್ನು ಯಾವ ಅರ್ಥದಲ್ಲಿ ಬಳಸಲಾಗಿದೆ ಎಂಬುದನ್ನು 'ಕವಿರಾಜಮಾರ್ಗ'ಕಾರ ಸ್ಪಷ್ಟಪಡಿಸಿಲ್ಲ. ಸಮಸಂಸ್ಕೃತ

ಪದಗಳು ಎಂದರೆ ಕನ್ನಡ ವಿಭಕ್ತಿ ಪ್ರತ್ಯಯಗಳನ್ನು ಹತ್ತಿಸಲು ಯೋಗ್ಯವೆನಿಸುವ ಮಟ್ಟಿಗೆ ಮಾರ್ಪಟ್ಟ ಸಂಸ್ಕೃತದ ನಾಮಪ್ರಕೃತಿಗಳೆಂದರ್ಥ. ಇವುಗಳ ಬಳಕೆ ಕನ್ನಡ ದಲ್ಲಿ ಹೇಗೆ?

ಸಮಸಂಸ್ಕೃತಂಗಳೊಳ್ ಸ
ಯ್ತುಮರ್ದಿರೆ ಕನ್ನಡಮನಱಿದು ಪೇೞ್ಗಿಂಬುದಿದಾ
ಗಮಕೋವಿದ ನಿಗದಿತ ಮಾ
ರ್ಗಮಿದಂ ಬೆರಸಲ್ಕಮಾಗದೀ ಸಕ್ಕದದೊಳ್ ॥ (೧–೫೧)

ಇಲ್ಲಿ ಕನ್ನಡ ಪದಗಳನ್ನು ಸಮಸಂಸ್ಕೃತಪದಗಳೊಂದಿಗೆ ಹೊಂದಿಕೆಯಾಗುವಂತೆ ಬೆರಸಿ ಬಳಸಬಹುದು, ಇದು ಶಾಸ್ತ್ರಜ್ಞರಿಗೆ ಸಮ್ಮತವಾದ್ದು—ಎಂಬ ಮಾತಿದೆ; ಕನ್ನಡ ಪದಗಳೊಂದಿಗೆ ವ್ಯಸ್ತಪದಗಳಾಗಿ ಎಂದರೆ ಬಿಡಿಯಾಗಿ ಸಂಸ್ಕೃತ ಪದಗಳು ಬಳಕೆ ಯಾಗುವುದರ ಔಚಿತ್ಯ ಇಲ್ಲಿ ವಿವಕ್ಷಿತವಾಗಿರಬಹುದು; ಮುಂದಿನ 'ಇದಂ ಬೆರಸಲ್ಕ ಮಾಗದೀ ಸಕ್ಕದದೊಳ್' ಎಂಬ ಮಾತು, ಇದರ ಮುಂದಿನ ಪದ್ಯದಲ್ಲಿ ಪ್ರಸ್ತಾವ ಗೊಂಡಿರುವ ಸಂಸ್ಕೃತಾವ್ಯಯಗಳು ಕನ್ನಡದೊಡನೆ ಕೂಡುವ ಸಂಗತಿಗೆ ಸಂಬಂಧಿಸಿ ಹೇಳಿದ್ದಿರಬೇಕು. ಇದರ ವಿಚಾರ ಮುಂದೆ ಗಮನಿಸಬಹುದು. ಪ್ರಸ್ತುತ, ಆತನ ದೃಷ್ಟಿ ಯಲ್ಲಿದ್ದುದು: ಸಂಸ್ಕೃತ-ಕನ್ನಡ ಪದಗಳ ಸಮಾಸ "ಮಱುಗುವ ಪಾಲ್ಗಳಿಯ ಪನಿಗಳಂ ಬೆರಸಿದವೋಲ್" ವಿರಸವನ್ನುಂಟುಮಾಡುತ್ತವೆ; ಅಂದರೆ ಅಚ್ಚಕನ್ನಡ ಪದವನ್ನು, ಸಮಸಂಸ್ಕೃತವೇ ಆದರೂ ಸಂಸ್ಕೃತ ಪದದೊಡನೆ ಸೇರಿಸಿ ಸಮಾಸ ಮಾಡಲಾಗದು (ಉದಾ: ಅರಸುಕುಮಾರನ್ ಇತ್ಯಾದಿ); ಎರಡೂ ಕನ್ನಡ ಪದಗಳಾಗಿರಲಿ, ಇಲ್ಲವೆ ಸಂಸ್ಕೃತ ಪದಗಳಾಗಿರಲಿ ಎಂಬುದು ಸರಿಯಾದ ಕ್ರಮ. ಇಂತಹ ಸಂಯೋಜನ "ಕನಕ ರಚನೆಯೊಳ್ ಮಣಿನಿಕರಂ ಒಂದಿದವೋಲ್ ಸುಂದರನುಕ್ಕುಂ".

(3) ಅವ್ಯಯ: ಅವ್ಯಯಗಳ ಬಗ್ಗೆ 'ಕವಿರಾಜಮಾರ್ಗ'ಕಾರನ ಅಭಿಪ್ರಾಯ ಇಂತಿದೆ:

ಅಹರಹರುಚ್ಚೈರ್ನೀಚೈ
ರ್ಮುಹುರ್ಮುಹುರಿತಸ್ತತಃ ಪುನಃಪುನರಂತ
ರ್ಬಹಿರಾದಿಹ ಪ್ರಾದುರಹೋ
ಸಹಸಾದಿಗಳವ್ಯಯಂಗಳಸಹಾಯಂಗಳ್ ॥ (೧–೫೨)

ಈ ಕಂದದಲ್ಲಿ ಪ್ರಯುಕ್ತವಾಗಿರುವ ಅಹರಹಃ ಮೊದಲಾದ ಅವ್ಯಯಗಳು 'ಅಸಹಾಯ'ಗಳು ಎಂಬುದು ಇಲ್ಲಿ ಗ್ರಹಣೀಯವಾಗಿರುವ ಅರ್ಥ. ಆದರೆ 'ಅಸಹಾಯಂ ಗಳ್' ಎಂಬ ಮಾತನ್ನು ಅರ್ಥೈಸಬೇಕಾದಲ್ಲಿ, ಕೇಶಿರಾಜನ "ಅಂತರ್ ಬಹಿರ್.... ಪೃಥಕ್—ಇವು ಮೊದಲಾದ ಸಹಜಾವ್ಯಯಂಗಳನಿರಿಸಿ ವಿಭಕ್ತಿಯಂ ಪತ್ತಿಸಲಾಗದು" ಎಂಬ ಉಲ್ಲೇಖದ ಮರೆಹೊಗಬೇಕಾಗುತ್ತದೆ. ಏಕೆಂದರೆ, ಎಂ. ವಿ. ಸೀತಾರಾಮಯ್ಯ

ನವರೆಂದಿರುವಂತೆ, "ಕವಿರಾಜಮಾರ್ಗಕಾರನ 'ಅಸಹಾಯಂಗಳ್' ಎಂಬುದರ ವಿವರಣೆ ಯಂತಿದೆ ಇದು."[77] ಮುಳಿಯ ತಿಮ್ಮಪ್ಪಯ್ಯನವರೂ ಇದೇ ಅಭಿಪ್ರಾಯವನ್ನು ಸೂಚಿಸಿ ದ್ದಾರೆ: "ಕನ್ನಡ ಪ್ರತ್ಯಯಗಳನ್ನು ಸಂಸ್ಕೃತಾವ್ಯಯಗಳಿಗೆ ಸೇರಿಸಲಾಗದು ಎಂಬ ಭಾವನೆಯನ್ನೇ ಗ್ರಂಥಕಾರನು 'ಅವ್ಯಯಂಗಳ್ ಅಸಹಾಯಂಗಳ್' ಎಂದು ಸೂಚಿಸಿರು ವುದು. ಅವುಗಳು, ಹಿಂದೆ ನಿರೂಪಿಸಿದಂತೆ, ಸಮಸ್ತಗಳಾಗಿ ಸಮಸಂಸ್ಕೃತಗಳಿಗೆ ಸಹಾಯಕಗಳಾಗಬಹುದಲ್ಲದೆ, ಅವುಗಳಿಗೆ ಈ ಬಗೆಯ ಕನ್ನಡ ಪ್ರತ್ಯಯಗಳ ಸಹಾಯ ವನ್ನಿತ್ತರೆ ದೋಷವೇ ಸರಿ."[78]

ಅವ್ಯಯ ವಿಷಯಕವಾದ ವಿವರಣೆಯನ್ನು ಮುಂದುವರಿಸಿ, ಅವುಗಳನ್ನು ಅವುಗಳ ಸಹಜ, ವ್ಯಸ್ತರೂಪದಲ್ಲಿ—ಅಂದರೆ ಬಿಡಿಬಿಡಿಯಾಗಿಯೇ–ಕನ್ನಡ ಪದಗಳೊಂದಿಗೆ ಬೆರೆಸಿ ಹೇಳಿದರೆ ಅಂಥ ಕಾವ್ಯರಚನೆ ಬಂಧುರವಾಗಿರುವುದಿಲ್ಲವೆಂದು ಅಭಿಪ್ರಾಯಪಟ್ಟಿದ್ದಾನೆ. ಇದಕ್ಕೆ ನಿದರ್ಶನಾರ್ಥವಾಗಿ ಕೊಟ್ಟಿರುವ ಪದ್ಯ ಇಂತಿದೆ:

ಬಹಿರಂತರುಪವನಂಗಳೊ
ಳಹರಹಮಾ ಪರಭೃತಂಗಳುಲಿವ ರವಂಗಳ್ ।
ಸಹಸಾ ತಳಮಳಗೊಳಿಸಿದ
ವಹೋ ಮನಂಗಳನಿತಸ್ತತಂ ವಿರಹಿಗಳಾ ॥ (೧–೫೪)

ಈ ಲಕ್ಷ್ಯಪದ್ಯದಲ್ಲಿ 'ಬಹಿರ್', 'ಅಂತರ್', 'ಅಹರಹಮ್', 'ಸಹಸಾ', 'ಅಹೋ', 'ಇತಸ್ತತಂ' ಎಂಬ ಅವ್ಯಯಗಳೆಲ್ಲ ಬಿಡಿಬಿಡಿಯಾಗಿ ಬಳಸಲ್ಪಟ್ಟಿವೆ. ಅಷ್ಟೇ ಅಲ್ಲ, 'ಅಹರಹಂ' ಮತ್ತು 'ಇತಸ್ತತಂ' ಎಂಬಲ್ಲಿ ಕನ್ನಡ ಪ್ರತ್ಯಯಗಳೂ ಅವುಗಳ ಜೊತೆ ಸೇರಿಕೊಂಡುಬಿಟ್ಟಿವೆ. ಒಟ್ಟನಲ್ಲಿ ಇವೆಲ್ಲವುಗಳ ಪರಿಣಾಮವೆಂಬಂತೆ ರಚನೆ 'ಅಬಂಧುರ' ವಾಗಿದೆ.

ಮುಂದಿನ ಪದ್ಯದಲ್ಲಿ "ವಿದಿತ ಸಮಸಂಸ್ಕೃತೋದಿತ ಪದಂಗಳೊಳ್ ಪುದಿದು ಬೆರಸಿ ಬರೆ ಕನ್ನಡದೊಳ್ ಮುದಮನವು ತರ್ಕುಂ"—ಅಂದರೆ, ಕನ್ನಡ ಮತ್ತು ಸಮಸಂಸ್ಕೃತ ಗಳು ಸಮಾಸರೂಪದಲ್ಲಿ ಬೆರತು ಬಂದರೆ ಅವು ಮುದವನ್ನುಂಟುಮಾಡುತ್ತವೆ—ಎಂದು ಹೇಳಿ, ನಿದರ್ಶನಾರ್ಥವಾಗಿ ಹಿಂದೆ ಕಾಣಿಸಿದ್ದ ಪದ್ಯವನ್ನೇ ತಿದ್ದಿ, ಸಮರ್ಪಕವಾಗಿಸಿ ದ್ದಾನೆ:

ಬಹಿರುದ್ಯಾನಾಂತರದೊಳ್
ಸಹಸೋದಿತ ಮತ್ತಕೋಕಿಲೋಚ್ಚೈರ್ಧ್ವಾನಂ
ಮುಹುರಾಕರ್ಣಿಸೆ ಪಡೆದ
ತ್ತಹರ್ನಿಶಂ ಪೆರ್ಚನಂತರಂಗಕ್ಕೆನ್ನಾ ॥ (೧–೫೬)

ಇಲ್ಲಿ ಅವ್ಯಯಗಳೆಲ್ಲ ಸಮಾಸರೂಪದಲ್ಲಿ ಪ್ರಯುಕ್ತವಾಗಿ ಕನ್ನಡದೊಡನೆ ಹೊಂದಿ ಕೊಂಡು ಬಂದಿವೆ ಎಂಬುದನ್ನು ಗಮನಿಸಬಹುದಾಗಿದೆ. ಸಮಾಸರೂಪದಲ್ಲಿ ಅಳವಡಿಸಿ

ಕೊಳ್ಳಲಾಗಿರುವುದರಿಂದ ಆ ಅವ್ಯಯಗಳಾವುವೂ—'ಅಂತಃ' ಎಂಬ ಅವ್ಯಯಕ್ಕೆ ಬದಲಾಗಿ 'ಅಂತರ್' ಎಂಬ ಸ್ಥಾನವಾಚಕವನ್ನು ಬಳಸಿರುವುದರಿಂದ, ಅದನ್ನು ಬಿಟ್ಟು —ಈಗ 'ಅಸಹಾಯಂಗಳ್' ಆಗಿಲ್ಲವೆಂಬುದು 'ಕವಿರಾಜಮಾರ್ಗ'ಕಾರನ ಅಭಿಪ್ರಾಯ. ಏಕೆಂದರೆ, ಅವು "ಸಮಸಂಸ್ಕೃತಗಳ ಸಹಾಯವನ್ನು ಪಡೆದಿವೆ; ಅವುಗಳ ಬೆಂಬಳಿಯಲ್ಲಿ ಪ್ರಯೋಗಾರ್ಹತೆಯನ್ನು ಪಡೆದಿವೆ." ಉಳಿದ ಅವ್ಯಯಗಳ ವಿಚಾರವೇನೋ ಸರಿ ಹೋಯಿತು. ಆದರೆ 'ಅಹರ್ನಿಶಂ' ಎಂಬ ರೂಪ 'ಇತಸ್ತತಂ' ಎಂಬುದಕ್ಕಿಂತ ಹೇಗೆ ಭಿನ್ನವಾಗಿದೆ ಎಂಬ ಪ್ರಶ್ನೆ ಏಳಬಹುದು. ಇದಕ್ಕೆ ಮುಳಿಯ ತಿಮ್ಮಪ್ಪಯ್ಯನವರು ಹೀಗೆ ವಿವರಣೆ ಕೊಟ್ಟಿದ್ದಾರೆ: "ಇದು ಸಂಸ್ಕೃತದಲ್ಲಿ ಇದೇ ರೂಪದಲ್ಲಿದೆ. ಆದರಿಂದ ಸಮ ಸಂಸ್ಕೃತತ್ವಕ್ಕೆ ಭಂಗವಾಯಿತು ಎನ್ನಬಾರದು. 'ಜ್ಞಾನಂ, ದಾನಂ, ಮುಖಂ' ಇತ್ಯಾದಿ ನಪುಂಸಕಲಿಂಗವಾಚಕಗಳೂ ಸಂಸ್ಕೃತ ಕನ್ನಡಗಳ ಏಕವಚನದಲ್ಲಿ ಏಕರೂಪವಾಗಿಯೇ ಇಲ್ಲವೆ? ಆದರೆ ಆಯಾ ಭಾಷೆಗಳನ್ನೊಂದಿಬರುವಲ್ಲಿ ತೋರುವ ಪ್ರತ್ಯಯಗಳು ಆಯಾ ಭಾಷೆಗಳವು ಎಂಬುದನ್ನಿಲ್ಲಿ ಮರೆಯಲಾಗದು. ಹಾಗಾದರೆ 'ಅಹರಹಂ', 'ಇತಸ್ತತಂ' ಎಂದಿರುವಲ್ಲಿ ಹೇಗೆ ತಪ್ಪು? ಎನ್ನಬಹುದು. ಅಲ್ಲಿ ವಿಸರ್ಗವನ್ನು ತೆಗೆದು ಕನ್ನಡದ ಬಿಂದುವನ್ನು ಸೇರಿಸಿದೆ. ಇಲ್ಲಿ ಹಾಗಲ್ಲ; ಸಂಸ್ಕೃತದಲ್ಲಿಯೇ ಬಿಂದುವಿದ್ದು ಕನ್ನಡದ ಬಿಂದುವೋ ಎಂಬ ಭ್ರಮೆಯನ್ನುಂಟುಮಾಡುತ್ತಿದೆ. ಇಂಥ ದೃಷ್ಟಾಂತವು ಗ್ರಾಹ್ಯ ವೆಂದು ಗ್ರಂಥಾದಿಯಲ್ಲಿ ಸರಸ್ವತಿಯನ್ನು ಸ್ತುತಿಸುವ ಪದ್ಯದೊಳಗಿನ 'ಚಿರಂ ದೇವಿ ಸರಸ್ವತಿ....' (i. 3) ಎಂಬ ಭಾಗದಲ್ಲಿರುವ 'ಚಿರಂ' ಪದದಿಂದಲೂ ಸಿದ್ಧವಾಗು ತ್ತಿದೆ."

ಈ ಎಲ್ಲ ಕಾರಣಗಳಿಂದಾಗಿಯೇ, ಮೊದಲಿನಂತೆ ಅವ್ಯಯಗಳು ವ್ಯಸ್ತವಾಗಿ ಬಂದಿದ್ದಾಗ ಕಾವ್ಯರಚನೆ "ಒತ್ತುಂಗರಡೆಯ ಮದ್ದಳೆಯ ಜರ್ಝರಧ್ವನಿಗಳವೋಲ್ ಪರುಷ ತರಮಕ್ಕುಂ" ಎಂದೂ, ಸಮಾಸರೂಪದಲ್ಲಿ ಹೊಂದಿಬಂದಾಗ "ಅತಿಶಯ ಮೃದಂಗ ಸಂಗೀತಕಾದಿ ಮಧುರರವ"ದಂತೆ ಮುದವನ್ನುಂಟುಮಾಡುತ್ತವೆಂದೂ ಹೇಳಿ ದ್ದಾನೆ.

(4) ಅರಿಸಮಾಸ: 'ಅರಿಸಮಾಸ' ಎಂಬ ಪದವನ್ನು 'ಕವಿರಾಜಮಾರ್ಗ'ಕಾರನು ಬಳಸಿಲ್ಲವಾದರೂ ಸಂಸ್ಕೃತ ಪದಗಳನ್ನೂ ಕನ್ನಡ ಪದಗಳನ್ನೂ ಬೆರಸಿ ಸಮಾಸಗಳನ್ನೆ ಸಗಬಾರದೆಂದು ಆತನು ಎಚ್ಚರಿಕೆ ನೀಡಿರುವುದರಿಂದಲೂ, ಇದಕ್ಕೆ ಲಕ್ಷ್ಯವಾಗಿ ಉದಾಹರಿಸಿರುವ ಪದ್ಯವನ್ನೇ ಕೇಶಿರಾಜನು 'ಅರಿಸಮಾಸ'ಕ್ಕೆ ಲಕ್ಷ್ಯವಾಗಿ ಕಾಣಿಸಿರು ವುದರಿಂದಲೂ ಇಲ್ಲಿ ಈ ಶೀರ್ಷಿಕೆಯನ್ನೇ ಬಳಸಲಾಗಿದೆ. ಹೀಗೆ ಕನ್ನಡ ಮತ್ತು ಸಂಸ್ಕೃತ ಶಬ್ದಗಳನ್ನು ಸಮಾಸದಲ್ಲಿ ಬೆರಸಿದರೆ ಕುದಿಯುತ್ತಿರುವ ಹಾಲಿಗೆ ಮಜ್ಜಿಗೆಯ ಹನಿ ಗಳನ್ನು ಬೆರಸಿದ ಹಾಗೆ—ಆಗುತ್ತದೆ ಎಂದು 'ಕವಿರಾಜಮಾರ್ಗ'ಕಾರ ಎಚ್ಚರಿಸಿದ್ದಾನೆ. ಇದಕ್ಕೆ ನಿದರ್ಶನ: ೧–೫೮ರ ಪದ್ಯ.

ಇಲ್ಲಿನ 'ಅರಸುಕುಮಾರ', 'ಆಯತತರ ಕಡೆಗಣ್', 'ಕೆಳದಿಸಮೇತ', 'ಸಂಗತ

ನಗೆ', 'ಗುರುನಾಣ್', 'ಮುಖತಾವರೆ' ಶಬ್ದಗಳಲ್ಲಿ ಒಂದು ಸಂಸ್ಕೃತವಾದರೆ ಇನ್ನೊಂದು ಕನ್ನಡವಾಗಿದೆ. ಹೀಗೆ ಸಮಾಸಗಳನ್ನೆಸಗುವುದು ಹಿತವಲ್ಲವೆಂಬುದು 'ಕವಿರಾಜಮಾರ್ಗ'ಕಾರನ ಅಭಿಪ್ರಾಯ. ಜೊತೆಗೆ ಇಂಥ ರಚನೆ ಅಗತ್ಯವೂ ಅಲ್ಲ, ಅಪೇಕ್ಷಣೀಯವೂ ಅಲ್ಲವೆಂಬುದು ಆತನ ಅಭಿಮತ. ಹೀಗಾಗಿ, ಇವುಗಳನ್ನು, ಸ್ವಲ್ಪ ಎಚ್ಚರದಿಂದ ಇದ್ದಲ್ಲಿ, ಹೇಗೆ ಸರಿಪಡಿಸಬಹುದೆಂಬುದನ್ನೂ ಮುಂದಿನ "ನರಪತಿತನಯ ನನಾಯತ...." (೧-೬೦) ಎಂಬ ಲಕ್ಷ್ಯಪದ್ಯದಲ್ಲಿ ಸ್ಪಷ್ಟಪಡಿಸಿದ್ದಾನೆ.

ಇಲ್ಲಿಯ 'ನರಪತಿತನಯ' ಮೊದಲಾದ ಸಂಸ್ಕೃತ ಸಮಾಸಗಳಲ್ಲಿ ಸಂಸ್ಕೃತ ಶಬ್ದಗಳೂ, 'ಕೆಳದಿಯರೊಡನೆ' ಎಂಬಲ್ಲಿ ಕನ್ನಡ ಶಬ್ದಗಳೂ ಆಯಾ ಭಾಷೆಗಳ ವ್ಯಾಕರಣ ಮರ್ಯಾದೆಗೆ ಅನುಗುಣವಾಗಿ ಹಿತವಾದ ರೂಪದಲ್ಲಿ ಅಳವಟ್ಟಿವೆ ಎಂಬುದನ್ನು ಗುರುತಿಸ ಬಹುದಾಗಿದೆ.

(5) ಶ್ರುತದುಷ್ಟಾದಿ ದೋಷಗಳು: ಶಬ್ದಗಳು ಕಿವಿಗೆ ಬೀಳುವ ರೀತಿಯಲ್ಲಿ ಅಸಭ್ಯಾರ್ಥ ಪ್ರತೀತಿಯಾದರೆ, ಸಹಜಾರ್ಥದ ಜೊತೆಗೇ ಅಸಭ್ಯಾರ್ಥವೂ ಬೋಧೆ ಯಾದರೆ, ಶ್ರುತಿ ಕರ್ಕಶವಾಗಿದ್ದರೆ ಹಾಗೂ ಅಭಿವ್ಯಕ್ತಿಯ ಆಶಯವೇನೆಂಬುದನ್ನು ಅರ್ಥಮಾಡಿಕೊಳ್ಳುವುದೂ ಕಷ್ಟವಾದರೆ ಅಂಥವನ್ನು ಕಾವ್ಯದೋಷಗಳೆಂದು ಹೇಳು ತ್ತಾರೆ. ಇವುಗಳನ್ನು ಕ್ರಮಶಃ 'ಶ್ರುತದುಷ್ಟ', 'ಅರ್ಥದುಷ್ಟ', 'ಶ್ರುತಿಕಷ್ಟ' ಹಾಗೂ 'ಕಲ್ಪನೋಕ್ತಿಕಷ್ಟ'ವೆಂದು ಕವಿರಾಜಮಾರ್ಗಕಾರ ಹೆಸರಿಸಿದ್ದಾನೆ. ಕೇಶಿರಾಜನೂ ಇಂಥ ಪ್ರಸಂಗಗಳನ್ನು ಚರ್ಚಿಸಿದ್ದಾನೆ. ಮಾರ್ಗಕಾರ ಇವುಗಳಿಗೆ ಕೊಟ್ಟಿರುವ ಲಕ್ಷ್ಯಪದ್ಯ ಗಳಿಂದ (೧-೬೩ರಿಂದ ೬೬ರವರೆಗೆ) ಇದರ ಸ್ವರೂಪವನ್ನು ತಿಳಿಯಬಹುದಾಗಿದೆ.

ಸಂಧಿಸ್ಥ ಪದಗಳಿಂದ ಅಸಭ್ಯಾರ್ಥವೂ ಪ್ರತೀತವಾಗುವುದು 'ಶ್ರುತದುಷ್ಟ'ವಾಗು ತ್ತದೆ (೬೩); ಪ್ರತ್ಯೇಕ ಪದಗಳೇ ಅಸಭ್ಯಾರ್ಥಸೂಚಕವಾಗಿರುವುದು 'ಅರ್ಥದುಷ್ಟ' ವಾಗುತ್ತದೆ (೬೪), ರೇಫ ಹಾಗೂ ಪರುಷವರ್ಣಯುಕ್ತವಾದ ಶಬ್ದಗಳೇ ಇಡಿಕಿರಿದಿದ್ದು ಶ್ರುತಿಕರ್ಕಶವಾಗುವುದು 'ಶ್ರುತಿಕಷ್ಟ'ವಾಗುತ್ತದೆ (೬೫); ಅರ್ಥ ಆಶಯಗಳು ವಿಶದ ವಾಗದೆ ಹೋಗುವುದು 'ಕಲ್ಪನೋಕ್ತಿ ಕಷ್ಟ'ವೆನಿಸುತ್ತದೆ (ಪ. ೬೬)—ಎಂಬುದನ್ನು ಈ ಪದ್ಯಗಳ ಪರಿಶೀಲನೆಯಿಂದ ತಿಳಿಯಬಹುದು.

ಇಲ್ಲಿ ವ್ಯಾಕರಣಸಂಬಂಧವಾದ ಅಂಶಗಳ ಬಗೆಗಿನ ಚರ್ಚೆಗಿಂತಲೂ ಶೈಲಿಯ ಚರ್ಚೆಯೇ ಹೆಚ್ಚಾಗಿದೆಯೆಂಬುದು ನಾವು ಗಮನಿಸಬೇಕಾಗಿರುವ ಸಂಗತಿ. ಶೈಲಿ ಶಾಸ್ತ್ರದ ಅಂಗವಾಗಿ ಇಂಥ ಅಂಶಗಳನ್ನು ಅಳವಡಿಸುವುದು ಆಧುನಿಕ ವಿಚಾರ ಪದ್ಧತಿಯ ರೂಢಿ. ಆದರೆ ನಮ್ಮಲ್ಲಿ ಅಲಂಕಾರಶಾಸ್ತ್ರದ ಅಂಗವಾಗಿ ಇಂಥ ವಿಚಾರಗಳನ್ನು ಅಳವಡಿಸಿ ಕೊಂಡಿರುವುದು ಕಾಣಬರುತ್ತದೆ. ವಾಸ್ತವವಾಗಿ, ಈ ನಾಲ್ಕು ಬಗೆಯ ದೋಷಗಳ ಚರ್ಚೆಗೆ ಸ್ಫೂರ್ತಿಯನ್ನೊದಗಿಸಿರುವ ಗ್ರಂಥವೆಂದರೆ ಭಾಮಹನ 'ಕಾವ್ಯಾಲಂಕಾರ.' ಅಲ್ಲಿಯ "ಶ್ರುತದುಷ್ಟಾರ್ಥದುಷ್ಟೇ ಚ...." (೧-೪೭) ಎಂಬ ಶ್ಲೋಕವನ್ನೇ ಆಧಾರ ವಾಗಿಟ್ಟುಕೊಂಡು, 'ಕವಿರಾಜಮಾರ್ಗ'ಕಾರ ಈ ದೋಷಗಳಿಗೆ ಲಕ್ಷ್ಯಪದ್ಯಗಳನ್ನು

ಕಲ್ಪಿಸಿದ್ದಾನೆಂಬುದು ಸ್ಪಷ್ಟವಾಗುತ್ತದೆ. ಕಾವ್ಯದಲ್ಲಿ ಸಾಮಾನ್ಯವಾಗಿ ನಿಂದ್ಯವಾಗುವ ಈ ದೋಷಗಳು ಒಂದು ಅರ್ಥದಲ್ಲಿ ಭಾಷಾದೋಷಗಳೂ ಆಗಿರುವುದರಿಂದ, ಮಾರ್ಗ ಕಾರ ಹಾಗೂ ಅಲ್ಲಿಂದ ಮುಂದೆ ಬಂದ ವ್ಯಾಕರಣಕಾರರು ಇಂಥ ದೋಷಗಳನ್ನು ಚರ್ಚಿಸಿದ್ದಾರೆಂದು ಭಾವಿಸಬೇಕಾಗುತ್ತದೆ.

ಮಾರ್ಗಕಾರ ಇಷ್ಟಕ್ಕೇ ನಿಲ್ಲದೆ, ಸಾಮಾನ್ಯವಾಗಿ ಇವು ದೋಷಗಳಾಗಬಹು ದಾದರೂ, ವಿಶೇಷ ಸಂದರ್ಭಗಳಲ್ಲಿ—ಅಂದರೆ, 'ಚಕ್ರಬಂಧ', 'ಮುರಜಬಂಧ', 'ಗೋಮೂತ್ರಿಕಾ' ಮುಂತಾದ 'ಚಿತ್ರಕಾವ್ಯ' ಅಥವಾ 'ದುಷ್ಕರಕಾವ್ಯ'ಗಳಲ್ಲಿ ಹಾಗೂ 'ಪ್ರಕರಣ'ದಂಥ ಕಾವ್ಯಪ್ರಭೇದದಲ್ಲಿ—ಗುಣವೂ ಅನಿವಾರ್ಯಾಂಶಗಳೂ ಆಗುತ್ತವೆಂಬು ದನ್ನು ಸ್ಪಷ್ಟಪಡಿಸಿದ್ದಾನೆಂಬುದು ಗಮನಾರ್ಹವಾಗಿರುವ ಸಂಗತಿ.

(6) **ವಿಸಂಧಿ ಹಾಗೂ ವಿರೂಪ ಸಂಧಿಗಳು :** ಈ ನಾಲ್ಕು ದೋಷಗಳಿಗಿಂತ ಸ್ವರೂಪ ದಲ್ಲಿ ಭಿನ್ನವಾದ ಇತರ ಹದಿನಾರು ದೋಷಗಳನ್ನು ಕವಿರಾಜಮಾರ್ಗಕಾರ ದೋಷ ವರ್ಣನ ವಿಭಾಗದಲ್ಲಿ ವಿವರಿಸಿದ್ದಾನೆ. ಆದರೆ ಇವುಗಳಲ್ಲಿ ಅನೇಕವು ಛಂದಸ್ಸು ಹಾಗೂ ಕಾವ್ಯಮೀಮಾಂಸೆಗೆ ಸಂಬಂಧಪಟ್ಟಿರುವ ದೋಷಗಳು. ಇಲ್ಲಿಯೂ ಈತನಿಗೆ ಮಾರ್ಗ ದರ್ಶಕವಾಗಿರುವುದು ಭಾಮಹನ 'ಕಾವ್ಯಾಲಂಕಾರ'ವೇ. ಕೆಲವೊಂದು ದೋಷಗಳ ಹೆಸರು ಗಳು ಬೇರೆಯಾಗಿವೆ ಎಂಬುದನ್ನು ಬಿಟ್ಟರೆ, ಮೂಲಭೂತವಾಗಿ ಹೆಚ್ಚಿನ ವ್ಯತ್ಯಾಸ ಗಳೇನೂ ಕಂಡುಬರುವುದಿಲ್ಲ. ಇವುಗಳಲ್ಲಿ ವ್ಯಾಕರಣಸಂಬಂಧವಾದ ದೋಷಗಳೆಂದರೆ ವಿಸಂಧಿ ಹಾಗೂ ವಿರೂಪಸಂಧಿಗಳು. ಅವುಗಳನ್ನು ಇಲ್ಲಿ ಚರ್ಚಿಸಿದೆ.

ವಿಸಂಧಿ ದೋಷ : ಛಂದಸ್ಸಿನ ಅಗತ್ಯಕ್ಕಾಗಿ, ಸಂಧಿಯಾಗಬೇಕಾದ ಎಡೆಯಲ್ಲಿ ಸಂಧಿ ಯನ್ನು ಎಸಗದೆ, ಬಿಡಿಸಿ ಹೇಳುವುದು ವಿಸಂಧಿದೋಷವಾಗುತ್ತದೆ. ಇದಕ್ಕೆ ನಿದರ್ಶನ ವಾಗಿ ಕೊಟ್ಟಿರುವ "ಜನಪತಿಗೆ ಒಸಗೆಯಂ ಪುರ । ಜನಮೆಲ್ಲಂ ಬೀಱುತಿರ್ಪ್ಪರಾಗಳ್" ಎಂಬಲ್ಲಿ ಸಹಜವಾಗಿ ಸಂಧಿ ಏರ್ಪಟ್ಟು 'ಜನಪತಿಗೊಸಗೆಯಂ' ಎಂಬ ರೂಪ ಕಾಣಿಸಿ ಕೊಳ್ಳಬೇಕಾಗಿತ್ತು. ಆದರೆ, ಹಾಗೆ ಮಾಡದೆ ಇರುವುದರಿಂದ ಎಂ. ವಿ. ಸೀತಾ ರಾಮಯ್ಯನವರೆಂದಿರುವಂತೆ "ದೃಷ್ಟಾಂತಿಸಿದ ಪದ್ಯವನ್ನು ಬರೆದ ಆ ದೇಸಿಕವಿ ಛಂದೋ ಭಂಗಕ್ಕೆ ಹಿಂಜರಿದು 'ವಿಸಂಧಿ' ದೋಷವನ್ನೆಸಗಿದನು ಎಂದು ಭಾವಿಸಬೇಕು."

ವಿರೂಪಸಂಧಿ : ಸಹಜಸಂಧಿಯನ್ನು ಏರ್ಪಡಿಸದಿರುವುದು ದೋಷವಾಗುವಂತೆಯೇ, ಕೆಲವು ಎಡೆಗಳಲ್ಲಿ ಅನಪೇಕ್ಷಣೀಯವಾದ ಸಂಧಿಯನ್ನು ಎಸಗುವುದರಿಂದ ವಿರೂಪಗಳು ಕೇಳಿಬರುವಂತಾಗುತ್ತದೆ. ಇಂಥ ದೋಷವನ್ನು 'ಕವಿರಾಜಮಾರ್ಗ'ಕಾರ ವಿರೂಪಸಂಧಿ ಯೆಂದು ಹೆಸರಿಸಿದ್ದಾನೆ. ಆದರೆ "'ವಿರೂಪ'ಸಂಧಿ ಎಂಬುದನ್ನು ಗ್ರಂಥದೊಳಗಿನ ದೋಷಭೇದಗಳಲ್ಲಿ ಬೇರೆಯಾಗಿ ಕಾಣಿಸಲಿಲ್ಲ. ಆದರೆ ಅದಕ್ಕೆ ಉದಾಹರಣೆಯಾಗಿ ಬೇರೊಂದು ಪದ್ಯವನ್ನು ಕೊಟ್ಟಿದ್ದಾನೆ. ಆದ್ದರಿಂದ ವಿಸಂಧಿ, ವಿರೂಪಸಂಧಿಗಳೆಂಬ ಎರಡೂ 'ವಿಸಂಧಿಕ' ಎಂಬ ಒಂದೇ ದೋಷದೊಳಗಿನ ಭೇದಗಳೆಂದು ಭಾವಿಸಬೇಕು" ಎಂಬುದನ್ನು ಗಮನಿಸಬಹುದಾಗಿದೆ. ಕೆಲವೆಡೆಗಳಲ್ಲಿ ವಿರೂಪವಾಗಿ ಸಮನಿಸಿ ಬರುವ

ಈ ದೋಷಗಳು "ಶಶಲಕ್ಷ್ಮದಂತೆ ಕಲಿಕೆಯಂ ತಕ್ಕುರ್ಗಂ" ಎಂದೂ, "ಸಕಲ ವಿದ್ವತ್ಸಭೆ ಯೊಳ್ ದೂಷಿಸುಗುಂ ಕೃತಿವಧುವಂ" ಎಂದೂ ಮಾರ್ಗಕಾರ ಎಚ್ಚರಿಸಿದ್ದಾನೆ. ಇದಕ್ಕೆ ನಿದರ್ಶನವಾಗಿ ಕೊಟ್ಟಿರುವ "ಅರಮರಸಂ ಕೃತಕಾದ್ರಿಯೊಳ್...." (೧-೯೯) ಎಂಬ ಲಕ್ಷ್ಯಪದ್ಯದಲ್ಲಿ 'ಅರಂ' ಎಂಬ ಅವ್ಯಯ ಅರಸ, ಅರಮನೆ, ಉದ್ಯಾನ, ಅಂತಃಪುರ ಶಬ್ದಗಳೊಂದಿಗೆ ಸಂಧಿಗೊಂಡಿರುವುದರಿಂದ ಮರಸಂ, ಮರಮನೆ, ಮುದ್ಯಾನ, ಮಂತಃ ಪುರ ಎಂಬಂಥ ವಿರೂಪಗಳು ಕಿವಿಗೆ ಬೀಳುವಂತಾಗಿದೆ. ಹೀಗಾಗಿ, ಇದು ವಿರೂಪ ಸಂಧಿಯಾಗಿದೆ.

(7) ವಚನ : ಕಾರಕಸಂಬಂಧವಾದ ಉಲ್ಲೇಖವನ್ನೊಳಗೊಂಡಿರುವ ವೃತ್ತದಲ್ಲಿಯೇ (೧.೧೧೪) "ವಚನಮೇಕಬಹುಕ್ರಮದಿಂದೆರಟಿತ್ತಕ್ಕೆ"—ಅಂದರೆ, ಏಕವಚನ ಮತ್ತು ಬಹುವಚನ ಎಂದು ವಚನ ಎರಡು ರೀತಿಯಾಗಿರುತ್ತದೆ—ಎಂದು ಹೇಳಲಾಗಿದೆ. ಈ ಸಂಬಂಧವಾದ ಅನಗತ್ಯವಾದ ವಿವರಣೆಗೆ ತೊಡಗದೆ, 'ಕವಿರಾಜಮಾರ್ಗ'ಕಾರ ಕರ್ತೃ ಕ್ರಿಯಾಸಂಬಂಧ ಸಾಮರಸ್ಯದಲ್ಲಿ ವಚನಗಳ ಪಾತ್ರವೇನೆಂಬುದನ್ನು ನಿದರ್ಶನಪೂರ್ವಕ ವಾಗಿ ತೋರಿಸಿಕೊಟ್ಟಿದ್ದಾನೆ.

ಬಂದುವು ಪಾವುಡಂ ನೃಪತಿಗೆಂಬುದುಮಾನೆಗಳೀ ಪ್ರದೇಶದೊಳ್
ನಿಂದುದಿದೆಂಬುದು ವಚನದೋಷ ವಿಶೇಷಮನೈಪುಣೋಕ್ತಿಯಿಂ
ಬಂದುದು ಪಾವುಡಂ ನೃಪತಿಗೆಂಬುದುಮಾನೆಗಳೀ ಪ್ರದೇಶದೊಳ್
ನಿಂದುವಿವೆಂಬುದು ಬಗೆದು ನೋಡೆ ಗುಣಂ ವಚನಕ್ಕೆ ನಿಕ್ಕುವಂ ॥ (೧-೧೧೮)

ಬಹುವಚನದ ಕ್ರಿಯೆ ಹಾಗೂ ಏಕವಚನದ ಕರ್ತೃ ಮತ್ತು ಬಹುವಚನದ ಕರ್ತೃ ಮತ್ತು ಏಕವಚನದ ಕ್ರಿಯೆ—ಈ ಅಸಾಂಗತ್ಯವನ್ನು ವೃತ್ತದ ಉತ್ತರಾರ್ಧದಲ್ಲಿ ಸರಿ ಪಡಿಸಿ ತೋರಿಸಿದ್ದಾನೆ. ಉಕ್ತಿಯಲ್ಲಿ ನಿಪುಣತೆ ಇಲ್ಲದ್ದರಿಂದ ಇಂಥ ದೋಷಗಳು ಸಂಭವಿಸುತ್ತವೆಂದೂ, ಹೀಗಾಗಿ ಎಚ್ಚರಿಕೆಯಿಂದ ಇರಬೇಕೆಂದೂ ಸೂಚಿಸಿದ್ದಾನೆ.

ಜಾತ್ಯೇಕ ವಚನ : ಇಂಗ್ಲಿಷ್ ಭಾಷೆಯಲ್ಲಿ ಸಮೂಹವಾಚಕ ಏಕವಚನ ಎಂದು ಕರೆಯಲಾಗಿರುವ ವ್ಯಾಕರಣ ಪ್ರಕ್ರಿಯೆಗೆ ಸಂವಾದಿಯಾಗಿರುವ ಕನ್ನಡ ವ್ಯಾಕರಣ ಪ್ರಕ್ರಿಯೆ 'ಜಾತ್ಯೇಕ ವಚನ' ಎಂಬ ಹೆಸರಿನಲ್ಲಿ ಕನ್ನಡ ವ್ಯಾಕರಣಗಳಲ್ಲಿ ಕಾಣಿಸಿಕೊಳ್ಳು ತ್ತದೆ. ಸಂಸ್ಕೃತದಲ್ಲಿಯೂ 'ಜಾತಾವೇಕವಚನಂ' ಎಂಬುದು ಇಂಥ ಸಂದರ್ಭದಲ್ಲಿ ರೂಢ ವಾಗಿದೆಯೆಂದೂ ಉತ್ತಮವಾದ ದೇಸಿಯಲ್ಲಿ ನೆಲೆಗೊಂಡ ಈ ಪದ್ಧತಿಯನ್ನು ಮಾರ್ಗವು ಮನ್ನಿಸುತ್ತಿದೆಯೆಂದೂ ಹೇಳಲಾಗಿದೆ.

ಈ ಸಂಬಂಧವಾದ ಚರ್ಚೆಗೆ ತೊಡಗುವ ಮೊದಲು, 'ಜಾತಿ' ಎಂಬ ಶಬ್ದವನ್ನು ಯಾವ ಅರ್ಥದಲ್ಲಿ ಬಳಸಲಾಗುತ್ತದೆಂಬುದನ್ನು ಗಮನಿಸಬಹುದು. ಮುಳಿಯ ತಿಮ್ಮಪ್ಪಯ್ಯನವರು ಅದನ್ನು ಹೀಗೆ ವಿವರಿಸಿದ್ದಾರೆ : "ಸಮಾನ ಸ್ವರೂಪ ಗುಣಾದಿ ಗಳಿಂದ ಕೂಡಿದ ಪದಾರ್ಥವರ್ಗಕ್ಕೆ 'ಜಾತಿ' ಎಂಬ ಹೆಸರು. ಉದಾ : 'ಇದು ಮನುಷ್ಯ ನಿಗೆ' ಸಲ್ಲದ ಕಾರ್ಯ.' ಇಲ್ಲಿ 'ಮನುಷ್ಯನಿಗೆ' ಎಂಬುದು ಏಕವಚನವಾಗಿದ್ದರೂ,

"ಮನುಷ್ಯ ಜಾತಿಯಲ್ಲಿ ಜನಿಸಿದವಂಗೆ' ಎಂದು ಮನುಷ್ಯ ಸಾಮಾನ್ಯವಾಚಕವಾಗಿದೆ." ಇಂಥ ಸಂದರ್ಭಗಳಲ್ಲಿ ಬಹುವಚನದ ಬಳಕೆಗಿಂತ ಏಕವಚನದ ಬಳಕೆಯೆ ಹೆಚ್ಚು ಉಚಿತವಾಗಿ ತೋರುವುದರಿಂದ ಇದನ್ನು 'ಜಾತ್ಯೇಕ ವಚನ' ಎಂದು ಹೆಸರಿಸಲಾಗಿದೆ.

ಈ ವಿಷಯವಾಗಿ 'ಕವಿರಾಜಮಾರ್ಗ'ದ ೧–೧೯೯ರ ಪೂರ್ವಾರ್ಧದಲ್ಲಿ ಜಾತಿ ವಿಭಾಗವನ್ನು ದೃಷ್ಟಿಯಲ್ಲಿರಿಸಿಕೊಂಡು ಹೇಳುವಾಗ ಅನೇಕ ವಾಕ್ಯಗಳಲ್ಲಿ ಅಥವಾ ಉಕ್ತಿಗಳಲ್ಲಿ ಹೇಳಿದಾಗ ಮಾತ್ರ 'ಗುಣ'ವೆನ್ನಬಹುದಾದ ಬಹುತ್ವ ಅಥವಾ ಬಹುವಚನ ಏಕವಚನದಲ್ಲಿಯೂ ಚೆನ್ನಾಗಿ ಹೊಂದಿಕೊಳ್ಳುತ್ತದೆ ಎಂಬುದಾಗಿ ಹೇಳಿದೆ. ಅಂದರೆ, ಇಂಥ ಸಂದರ್ಭಗಳಲ್ಲಿ "ಬಹುವಚನ ಏಕವಚನಗಳಲ್ಲಿ ಕವಿಭಾವನೆಗನುಸಾರವಾಗಿ ವಿಕಲ್ಪಿಸಬಹುದು." ಇದಕ್ಕೆ ನಿದರ್ಶನವಾಗಿ ಈ ವೃತ್ತಾರ್ಧವನ್ನು ಕೊಡಲಾಗಿದೆ :

ಕುದುರೆ ತಗುಳ್ದುವಾ ದೆಸೆಯ ಬಿಲ್ಲವರಂ ಸುಱಿದಾನೆ ನಿಂದು ಮೆ
ಟ್ಟಿದುವೆಲೆ ನೋಡಿವೆಂಬುದಿದು ಜಾತಿಕೃತೈಕಬಹುತ್ವಮೊಂದುಗುಂ ॥ (೧–೧೨೦)

ಇಲ್ಲಿ ಕುದುರೆ, ಆನೆ ಎಂಬ ಕರ್ತೃಪದಗಳನ್ನು ಏಕವಚನದಲ್ಲಿ ಬಳಸದೆ ಜಾತ್ಯೇಕ ಬಹುವಚನದಲ್ಲಿ ಬಳಸಿರುವುದರಿಂದ ಬಹುವಚನ ಕ್ರಿಯಾರೂಪಗಳಾದ ತಗುಳ್ದುವು, ಮೆಟ್ಟಿದುವು ಎಂಬುವು ಸಂಗತವಾಗುವುದಷ್ಟೇ ಅಲ್ಲ, ಅರ್ಥಪೂರ್ಣವೂ ಆಗುತ್ತವೆ. ಏಕೆಂದರೆ ಸಾಮಾನ್ಯ ಏಕ ಅಥವಾ ಬಹುವಚನವನ್ನು ಬಳಸಿದಲ್ಲಿ ಒಂದು ಅಥವಾ ಹಲವು ಕುದುರೆಗಳು ಎಂದು ಸೀಮಿತ ಅರ್ಥ ಸೂಚಿತವಾಗುತ್ತದೆಯೇ ಹೊರತು 'ಎಲ್ಲ ಕುದುರೆಗಳು' ಎಂಬ ವ್ಯಾಪಕ ಅರ್ಥ ಪ್ರತೀತವಾಗುವುದಿಲ್ಲ.

೧.೧೯೯ರ ಉತ್ತರಾರ್ಧದ ಆಶಯ ಇಷ್ಟು : "ಸಂಖ್ಯಾವಾಚಕ ಪದಗಳಲ್ಲಿಯೂ ಈ ವಿಕಲ್ಪವು ಗುಣವಾಗಬಹುದು." ಇದಕ್ಕೆ ನಿದರ್ಶನಾರ್ಥವಾಗಿ ಕೊಡಲಾಗಿರುವ ವೃತ್ತಾರ್ಧ (ಉತ್ತರಾರ್ಧ) ಇಂತಿದೆ :

ಕುದಿಕುದಿದತ್ತಣಿಂ ಕುದುರೆ ನೂಱಱೊಳಾ ಬಲದಾನೆ ಪತ್ತು ತಾ
ಗಿದುವೆನೆ ದೋಷಮಾ ಪಿರಿದು ಸಂಖ್ಯೆಯೊಳೇಕ ಬಹುತ್ವ ಸಂಗದಿಂ ॥ (೧–೧೨೦)

ಇದಕ್ಕೆ ಸಂಬಂಧಿಸಿರುವ ಮುಳಿಯ ತಿಮ್ಮಪ್ಪಯ್ಯನವರ ವಿವರಣೆ ಹೀಗಿದೆ : "'....ಕುದುರೆ ನೂಱಱೊಳ್ ಆ ಬಲದಾನೆ ಪತ್ತು ತಾಗಿದುದು ಎನೆ ದೋಷಂ' ಎನ್ನುತ್ತಾನೆ. ಇದು ದೋಷವೆಂಬುದು ಹೇಗೆ ? 'ಕುದುರೆ ತಗುಳ್ದುವು' ಎಂಬಂತೆಯೇ ಅಲ್ಲವೆ —ಈ 'ಆನೆಪತ್ತು ತಾಗಿದುವು' ಎಂಬುದು ? ಎಂಬ ಆಕ್ಷೇಪಣೆ ತಲೆದೋರಲೂಬಹುದು. ಆದರೆ ಗ್ರಂಥಕಾರನು ಹಿಂದೆಯೇ ಕೊಟ್ಟ ಸೂಚನಾತ್ಮಕ ಲಕ್ಷಣವನ್ನೂ ದೋಷಕಾರಣ ನಿರೂಪಣವನ್ನೂ ಅವಧರಿಸಬೇಕು. ಇಲ್ಲಿ 'ಪಿರಿದು ಸಂಖ್ಯೆಯೊಳ್ ಏಕಬಹುತ್ವ ಸಂಗವಾದುದೇ ದೋಷಕಾರಣ.' 'ಕುದುರೆನೂಱು, ಆನೆಪತ್ತು' ಎಂಬಲ್ಲಿಯ ಮುಂದಿನ ಪದಗಳೆರಡೂ 'ಪಿರಿದು ಸಂಖ್ಯೆ'ಗಳನ್ನು ಸೂಚಿಸುತ್ತವೆ. ಅವುಗಳೆರಡೂ ಹಿಂದಿನ ಜಾತಿವಾಚಕೈಕ ವಚನ ಪದಗಳ ಕೂಟದಿಂದಾಗಿ ಏಕವಚನ ಸಂಗವನ್ನೊಂದಿವೆ. ಆ ಪದ್ಧತಿ

ದೋಷವಲ್ಲ. ಗ್ರಂಥಕಾರನು ಹಾಗೆ ಹೇಳುವುದಿಲ್ಲ. ಆದರೆ, 'ಆನೆಪತ್ತು ತಾಗಿದುವು' ಎಂಬಲ್ಲಿಯ 'ಪತ್ತು' ಸಂಖ್ಯೆಯೊಡನೆ ಹಿಂದಿನ 'ಆನೆ'ಯಿಂದ ಏಕತೆಯೂ ಮುಂದಿನ ಕ್ರಿಯಾಪದದಿಂದ ಬಹುತೆಯೂ ಒಂದೇ ಸಮಯದಲ್ಲಿ ತಾಗುತ್ತಿವೆ. ಇಂಥ ದೇಸಿಯನ್ನು ಮಾರ್ಗವು ಗುಣವೆನ್ನದೆ ದೋಷವೆಂದೇ ಸಾರುತ್ತದೆ. ಈ ಅಭಿಪ್ರಾಯವನ್ನೇ ಅವನು 'ಎನೆ ದೋಷಮೂ ಪಿರಿದು ಸಂಖ್ಯೆಯೊಳೇಕ ಬಹುತ್ವ ಸಂಗದಿಂ' ಎನ್ನುತ್ತಾನೆ" ಅಂದರೆ, ಒಟ್ಟನಲ್ಲಿ 'ಆನೆ ಪತ್ತು' ಎಂಬ ಸೂಕ್ತಿಭಾಗದಲ್ಲೇನೂ ದೋಷವಿಲ್ಲ. 'ತಾಗಿದುವು' ಎಂಬ ಕ್ರಿಯಾಪದವನ್ನು ಅದರೊಡನೆ ಬಳಸಿದಾಗ ದೋಷ ಸಮನಿಸುತ್ತದೆ. ಈ ದೋಷ ಪರಿಹಾರದ ವಿಧಾನವನ್ನು ಹಿಂದೆಯೇ ಸೂಚಿಸಲಾಗಿದೆ. 'ಶಬ್ದಮಣಿದರ್ಪಣ'ದಲ್ಲೂ ಜಾತ್ಯೇಕ ವಚನದ ವಿಚಾರವನ್ನು ಚರ್ಚಿಸಲಾಗಿದೆ (ಸೂ. ೧೩೮-೩೯). ಎಂಬುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

(8) ಸಮುಚ್ಚಯ: ಸಮುಚ್ಚಯದ ವಿಷಯ 'ಕವಿರಾಜಮಾರ್ಗ'ದಲ್ಲಿ ಬೇರೆ ಬೇರೆ ಸಂದರ್ಭಗಳಲ್ಲಿ ಪ್ರಸಂಗಾಂತರದಿಂದ ನಿರೂಪಿತವಾಗಿದೆ ಎಂಬುದು ಮೊದಲಿಗೇ ಗಮನಿಸಬೇಕಾಗಿರುವ ಸಂಗತಿ. ಮೊದಲಿಗೆ ಅದು ಕಾಣಿಸಿಕೊಳ್ಳುವುದು ವಚನದೋಷದ ಅಂಗವಾಗಿ. ಆ ಪ್ರಸಂಗ ಇಂತಿದೆ: ಎರಡು ಸಮುಚ್ಚಯಯುಕ್ತ ಪದಗಳು ಕೂಡಿ ಬಂದಿದ್ದು, ಆ ಎರಡು ಪದಗಳಲ್ಲಿ ಒಂದೇ ವಿಭಕ್ತಿ ಕಾಣಬರದಿದ್ದರೂ, ಅವು ಒಂದೇ ವಾಕ್ಯದಲ್ಲಿ ಕಾರಕಸಂಪದವನ್ನು ಪಡೆಯುತ್ತವೆ ಎಂಬುದು ೧-೧೨೧ರ ವೃತ್ತಾರ್ಥದ ಆಶಯ. ಈ ಆಶಯವನ್ನು ವೃತ್ತದ ಉತ್ತರಾರ್ಧದಲ್ಲಿ ವಿವರಿಸಲಾಗಿದೆ:

> ನರಪತಿಯುಂ ನೃಪಾಂಗನೆಯರುಂ ನೆರೆದಟ್ಟಿಯಿನಾಡಿಪೋದರಾ
> ಪರಿಜನಮುಂ ಮಹೋತ್ಸವದೊಳೊಂದಿದುದೆಂಬುದಿದಲ್ಪದೂಷಿತಂ ॥ (೧-೧೨೧)

ಈ ಪ್ರಸಂಗದಲ್ಲಿ 'ನರಪತಿ' ಎಂಬುದು ಏಕವಚನದಲ್ಲಿದೆ; 'ನೃಪಾಂಗನೆಯರ್' ಎಂಬುದು ಬಹುವಚನದಲ್ಲಿದೆ. ಇವೆರಡೂ ಬಂಧಿತವಾಗಿರುವುದು 'ಉಂ' ಎಂಬ ಸಮುಚ್ಚಯ ದಿಂದ. ಹೀಗೆ ಸಮುಚ್ಚಯವಶದಿಂದ ಬಿಡಿಬಿಡಿಯಾಗಿ, ಕರ್ತೃಕ್ರಿಯಾಸಂಗತವಾಗಿ— ಅಂದರೆ, 'ನರಪತಿ ಆಡಿಹೋದ', 'ನೃಪಾಂಗನೆಯರು ಆಡಿಹೋದರು'—ಬರಬಹುದಾ ಗಿದ್ದ ವಾಕ್ಯಗಳು ಏಕವಾಕ್ಯವಾಗಿ ಪರಿಣಮಿಸಿದಾಗ ಕ್ರಿಯಾಪದ ಯಾವ ವಚನದಲ್ಲಿರ ಬೇಕು ಎಂಬುದೇ ಇಲ್ಲಿಯ ಪ್ರಶ್ನೆ. ಸ್ವಲ್ಪ ದೂಷಿತವಾಗಬಹುದಾದರೂ, ಕ್ರಿಯಾಪದ ಬಹುವಚನದಲ್ಲಿಯೇ ಇರಬೇಕಾಗುತ್ತದೆ ಎಂಬುದು 'ಕವಿರಾಜಮಾರ್ಗ'ಕಾರನ ಅಭಿ ಮತ. ಏಕೆಂದರೆ, ವ್ಯಾಕರಣ ಸಾಂಗತ್ಯಕ್ಕಾಗಿ ಈ ಎರಡು ವಾಕ್ಯಗಳನ್ನೂ ಮೇಲೆ ಸೂಚಿಸಿರುವಂತೆ, ಬಿಡಿಬಿಡಿ ವಾಕ್ಯಗಳಾಗಿ ಹೇಳಿದರೆ, ಸಂದರ್ಭ ಸ್ವಾರಸ್ಯವೇ—'ನರ ಪತಿಯೂ ನೃಪಾಂಗನೆಯರೂ ಒಟ್ಟಿಗೆ ಕೂಡಿ ಆಡಿಹೋದರು'—ಮಾಯವಾಗುತ್ತದೆ. ಹೀಗಾಗಿ ಇಲ್ಲಿಯ ವಚನಸಂಬಂಧವಾದ ದೋಷವನ್ನು ನಿರ್ಲಕ್ಷಿಸಬಹುದು ಎಂಬುದು 'ಕವಿರಾಜಮಾರ್ಗ'ಕಾರನ ಅಭಿಮತ.

ವಾಸ್ತವವಾಗಿ, ಇದೊಂದು ವ್ಯಾಕರಣ ಸಮಸ್ಯೆ. ಸಮುಚ್ಚಯಬಂಧಿತವಾಗಿ ಒಂದಕ್ಕಿಂತ ಹೆಚ್ಚು ಕರ್ತೃಪದಗಳು ವಾಕ್ಯದಲ್ಲಿ ಬಂದಾಗ ಅವನ್ನು ಸಮಷ್ಟಿ ಬಹುವಚನವೆಂದು ಭಾವಿಸಿ ಕ್ರಿಯಾಪದವನ್ನು ಬಹುವಚನದಲ್ಲಿಯೇ ಇರಿಸುವ ಸಂಪ್ರದಾಯದ ಮೂಲಕ ಭಾಷೆ ಈ ಸಮಸ್ಯೆಯನ್ನು ಪರಿಹರಿಸಿಕೊಂಡಿದೆ. ಉದಾಹರಣೆಗೆ: 'ಅವನೂ ಇವನೂ ಬಂದರು' ಎಂಬುದೇ ಸರಿ; 'ಅವನೂ ಇವನೂ ಬಂದನು' ಎಂಬುದಲ್ಲ. ಇದನ್ನೇ ಕವಿರಾಜಮಾರ್ಗಕಾರ ಬಳಸಿ ಹೇಳಿದ್ದಾನೆ.

ಈ ಸಂದರ್ಭ ಕರ್ತೃಕಾರಕದ ಪ್ರಶ್ನೆಯನ್ನು ಮತ್ತೆ ಎತ್ತುತ್ತದೆ. ಈ ಪ್ರಶ್ನೆಗೆ "ಸಮುಚ್ಚಯ ಪದಗಳ ಕೂಟದಿಂದ ಪದಗಳು ಏಕವಾಕ್ಯದಲ್ಲಿ ತಂತಮ್ಮ ಕರ್ತೃತ್ವವನ್ನುಳಿದು ಕಾರಕಗಳೇ ಆಗಿ ಪರಿಣಮಿಸುವುದು ನ್ಯಾಯವಿದೆ. ಎಂದರೆ ಕ್ರಿಯೆಯನ್ನು ಒಂದೊಂದಾಗಿ ಮಾಡಲಾರದೆ ಎರಡೂ ಕೂಡಿ ಮಾಡಿಸುವ ಕಾರಕತ್ವವನ್ನೊಂದಿದುವು ಎನ್ನಬೇಕು. ಆದುದರಿಂದಲೇ ಆಗಿರಬೇಕು—ಗ್ರಂಥಕಾರನು 'ಏಕವಾಕ್ಯದೊಳ್ ಕಾರಕಮುಂ ನೆಲೆಗೆಯ್ಯುಗ್ಗಂ' ಇತ್ಯಾದಿ ರೀತಿಯಲ್ಲಾಡದೆ 'ಕಾರಕಸಂಪದಮುಂ ತಗುಳ್ಗುಗುಂ' ಎಂದು ಬಾಗಿಸಿ ಹೇಳಿರುವುದನ್ನು ಅವಧರಿಸಿರಿ" ಎಂದು ಉತ್ತರಿಸಲು ಮುಳಿಯ ತಿಮ್ಮಪ್ಪಯ್ಯನವರು ಯತ್ನಿಸಿದ್ದಾರೆ.[79] ಆದರೆ, ಇದಕ್ಕೆ ತರ್ಕಸಂಗತವಾದ ಉತ್ತರವನ್ನು ಎಂ. ವಿ. ಸೀತಾರಾಮಯ್ಯ ಕೊಟ್ಟಿದ್ದಾರೆ: "ಕ್ರಿಯಾಪದದ 'ಅರ್' ಎಂಬ ಪ್ರತ್ಯಯ 'ನರಪತಿ' ಎಂಬ ಕರ್ತೃವನ್ನು ಎಷ್ಟು ಮಾತ್ರಕ್ಕೂ ಸೂಚಿಸುವುದಿಲ್ಲ. ಇಲ್ಲಿ, ಸಮುಚ್ಚಯ ಬಲದಿಂದ 'ನರಪತಿ' ಎಂಬ ಕರ್ತೃವಿಗೂ 'ಆಡಿಪೋಗು' ಎಂಬ ಕ್ರಿಯೆಗೂ ನ್ಯಾಯವಾಗಿ ಇಲ್ಲದ ಸಂಬಂಧವೊಂದು ಏರ್ಪಟ್ಟಿದೆ. ಇದೇ ಇಲ್ಲಿನ 'ಕಾರಕ ಸಂಪದ.'"

ಸಮುಚ್ಚಯ ದೋಷ ಸಂಘಟಿಸುವ ಮತ್ತೊಂದು ರೀತಿಯನ್ನು ಮಾರ್ಗಕಾರ ಹೀಗೆ ನಿದರ್ಶಿಸಿದ್ದಾನೆ.

ದೇವರುಂ ಗೊರವರುಂ ಗುಣವೃದ್ಧರನಾರತಂ
ಕಾವರಕ್ಕರಸನಂ ಪ್ರಜೆಯಂ ಪರಿವಾರಮಂ
ಏವಮುಂ ಬಗೆಯದಂತಿರೆ ಪೇಳ್ದ ಸಮುಚ್ಚಯೋ
ದ್ಭಾವಕಕ್ರಮವಿಚಾರದೆ ದೋಷಮಿದಗ್ಗಳಂ ॥ (೧–೧೩೩)

ಅಂದರೆ, ಸಮುಚ್ಚಯ ವಿಕಲ್ಪ ಮಾಡುವುದರಿಂದ ಹಾಗೂ ಸಮುಚ್ಚಯ ಯುಗ್ಮಗಳಲ್ಲಿ ಕ್ರಮಭಂಗಕ್ಕೆಡೆಗೊಡುವುದರಿಂದ 'ಸಮುಚ್ಚಯ ದೋಷ' ಸಮನಿಸುತ್ತದೆ ಎಂಬುದನ್ನು ಈ ಪದ್ಯದಲ್ಲಿ ತೋರಿಸಿಕೊಟ್ಟಿದ್ದಾನೆ:

ಈ ಪದ್ಯವನ್ನು ಗಮನಿಸಿದರೆ, "ದೇವರು ಅರಸನನ್ನೂ, ಗೊರವರು ಪ್ರಜೆಗಳನ್ನೂ, ಗುಣವೃದ್ಧರು ಪರಿವಾರವನ್ನೂ ಕಾಪಾಡುವವರಾಗಲಿ" ಎಂಬ ಅರ್ಥವನ್ನು ಕಲ್ಪಿಸಿಕೊಳ್ಳಲು ಸಾಧ್ಯವಾಗುತ್ತದೆ. ಆದರೆ, ನಿಜವಾದ ಅರ್ಥವೇನೆಂಬುದನ್ನು 'ಕವಿರಾಜಮಾರ್ಗ'ಕಾರ ತಿದ್ದಿದ ಪದ್ಯದಲ್ಲಿ ತೋರಿಸಿಕೊಟ್ಟಿದ್ದಾನೆ:

ನೃಪನುಮಂ ಪ್ರಜೆಯುಮಂ ಪರಿವಾರಮುಮಂ ಮಹಾ
ಕೃಪೆಯಿನಾ ಗೊರವರುಂ ಸುರರುಂ ಗುಣವೃದ್ಧರುಂ
ವಿಪುಳರಾಗಪರರಾಗಿಸುಗೆಂದು ಸಮುಚ್ಚಯ
ಕ್ಕುಪಚಿತೋರುಗುಣಮಂ ಮಿಗೆ ಪೇೞ್ಗೆ ಕವೀಶ್ವರರ್ ॥ (೧-೧೩೩)

ಅಂದರೆ, "ನೃಪನನ್ನು ಗೊರವರೂ, ಪ್ರಜೆಗಳನ್ನು ಸುರರೂ, ಪರಿವಾರವನ್ನು ಗುಣವೃದ್ಧರೂ ವಿಪುಳರಾಗಪರರಾಗಿಸಲಿ" ಎಂಬುದು ಅಭಿಪ್ರೇತ ಅರ್ಥ. ಈ ಅರ್ಥ ಮೂಢದಿರುವುದಕ್ಕೆ ಕಾರಣವೇನೆಂಬುದನ್ನು ಪರಿಶೀಲಿಸಿದರೆ ಸಮುಚ್ಚಯ ವಿಕಲ್ಪ ಮತ್ತು ಕ್ರಮಭಂಗಗಳಿಗೆ ಎಡೆದೊರೆತಿದೆ ಎಂಬುದು ಸ್ಪಷ್ಟವಾಗುತ್ತದೆ. "ದೇವರುಂ ಗೊರವರುಂ ಗುಣವೃದ್ಧರುಂ' ಎಂದಿರಿಸದೆ, 'ಗುಣವೃದ್ಧರ್' ಎಂದಿರಿಸಿ 'ಉಂ' ಸಮುಚ್ಚಯವನ್ನು ಕೈಬಿಟ್ಟಿದ್ದುದು ಸಮುಚ್ಚಯ ವಿಕಲ್ಪ ದೋಷ; 'ಅರಸನಂ, ಪ್ರಜೆಯುಂ, ಪರಿವಾರಮುಂ' ಎಂಬ ಈ ಮೂರು ಕರ್ಮಪದಗಳಿಗೂ 'ಉಂ' ಸಮುಚ್ಚಯವನ್ನು ಸೇರಿಸದಿದ್ದುದು ಇನ್ನೊಂದು ವಿಕಲ್ಪ ದೋಷ. ಜೊತೆಗೆ, "ಗೊರವರುಂ ಸುರರುಂ ಗುಣವೃದ್ಧರುಂ" ಎಂಬ ಕ್ರಮಕ್ಕೆ ಬದಲಾಗಿ ಈ ಸಮುಚ್ಚಯ ಯುಗ್ಮದಲ್ಲಿನ 'ಸುರರುಂ' ಎಂಬುದನ್ನು ಮೊದಲಿಗೆ ತಂದುಕೊಂಡು "ದೇವರುಂ ಗೊರವರುಂ...." ಎಂದು ಮಾಡಿದ್ದರಿಂದ ಕ್ರಮಭಂಗಕ್ಕೆ ಎಡೆ ದೊರೆತಿತ್ತು. ಹೀಗಾಗಿ, ಮೂಲ ಪದ್ಯ ಅಭಿಪ್ರೇತ ಅರ್ಥಕ್ಕಿಂತ ಭಿನ್ನವಾದ ಅರ್ಥವನ್ನು ಮೂಡಿಸುವಂತಾಗಿತ್ತು.

ಮುಂದಿನ ಪದ್ಯದಲ್ಲಿ, ಸಮುಚ್ಚಯ ಅಭಾವದ ದೋಷವೇ ಹೇಗೆ ಗುಣವಾಗಿ ಮಾರ್ಪಡಬಹುದೆಂಬುದನ್ನು ನಿದರ್ಶಿಸಿದ್ದಾನೆ. ಅಂದರೆ, ವಾಕ್ಯರಚನಾವೈಶಿಷ್ಟ್ಯ ಹೇಗೆ ದೋಷವನ್ನೂ ಗುಣವನ್ನಾಗಿಸಿಕೊಳ್ಳಬಹುದೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಸಾಱುಗಾನೆಯವರೆಲ್ಲರುಮಂ ನೃಪ [ತಾ]ನೆ ಮ
ತ್ತೇಱು[ವಂ] ಪಣಿದೊಡಾನೆಯನೆಂಬು[ದ]ದೂಷಿತಂ ॥ (೧-೧೩೪)

—"ಆನೆಯವರೆಲ್ಲರಿಗೂ ಘೋಷಿಸಲಿ; ಆನೆಯನ್ನು ಸಿದ್ಧಪಡಿಸಿದರೆ, ಅದನ್ನು ನೃಪ ತಾನೇ ಮತ್ತೆ ಏರುವನು" ಎಂಬಲ್ಲಿ ಕ್ರಿಯೆ ಬೇರೆ ಬೇರೆ ಕಾರಕಗಳನ್ನು ಹೊಂದಿರುವುದರಿಂದ ಹಾಗೂ ಇವುಗಳನ್ನು ಒಂದುಗೂಡಿಸುವ ಸಮುಚ್ಚಯ ಇಲ್ಲದಿರುವುದರಿಂದ, ಇವು ಬಹುಮಟ್ಟಿಗೆ ಬೇರೆ ಬೇರೆ ವಾಕ್ಯಗಳಾಗಿಯೇ ನಿಲ್ಲುತ್ತವೆ. ಆದರೆ, ಆನೆಯನ್ನು ಸಿದ್ಧಪಡಿಸಿದರೆ ನೃಪ ತಾನೇ ಅದನ್ನು ಏರುತ್ತಾನೆಂಬುದನ್ನು ಆನೆಯವರೆಲ್ಲರಿಗೂ 'ತಿಳಿಸಲಿ' ಎಂಬ ಅಖಂಡ ಅರ್ಥಪ್ರತೀತಿಯನ್ನು ಈ ರಚನೆ ಉಂಟುಮಾಡಿಕೊಡುತ್ತದೆ. ಹೀಗಾಗಿ, ಇಂಥಲ್ಲಿ ಸಮುಚ್ಚಯದ ಅಭಾವ ರಚನೆಯನ್ನು ಕಾಡುವುದಿಲ್ಲ. ಅಂದರೆ, ಸಂಕೀರ್ಣ (Complex) ವಾಕ್ಯರಚನೆಗಳಲ್ಲಿ ಹೇಗೆ ಕೆಲವೊಂದು ವ್ಯಾಕರಣ ಪ್ರಕ್ರಿಯೆಗಳು ಅನಗತ್ಯವಾಗಿ ಪರಿಣಮಿಸುತ್ತವೆಂಬುದನ್ನು 'ಕವಿರಾಜಮಾರ್ಗ'ಕಾರ ಲಕ್ಷಿಸಿದ್ದಾನೆ.

(೯) **ವಿಕಲ್ಪಾದಿ ದೋಷಗಳು :** ಸ್ವಲ್ಪ ಎಚ್ಚರದಪ್ಪಿದರೂ ವಾಕ್ಯದ ಅಭಿಪ್ರೇತ

ಅರ್ಥ ಹೇಗೆ ಬದಲಾಗಬಹುದೆಂಬುದನ್ನು 'ಕವಿರಾಜಮಾರ್ಗ'ಕಾರ ವಿಕಲ್ಪಾದಿ ದೋಷಗಳ ಅಂಗವಾಗಿ ವಿವರಿಸಿದ್ದಾನೆ.

(i) ವಿಕಲ್ಪ ದೋಷಕ್ಕೆ :

ಒಸಗೆ ಮೇಣ್ ಮುನಿಗೆ ಮೇಣವರೆಲ್ಲರುಮಂತೆ ಬ
ಗ್ಗಿಸುಗೆ ಮತ್ತುಱಿಯಲಾಗದು ನೆಟ್ಟನೆ ಪೊಣ್ದುದಂ ॥ (೧-೧೩೫)

ವಿಕಲ್ಪ ದೋಷರಾಹಿತ್ಯಕ್ಕೆ :

ಪಱಿಗೆ ಮೇಣ್ ಪೊಗೞ್ಗೆ ಮೇಣ್ ನೆವಮಿಲ್ಲದೊಡಿಂತು ಕೈ
ಗಱಿಯೆ ಬಗ್ಗಿಸುಗೆ ಮೇಣವರೆಲ್ಲರುಮಂತುಂ ॥ (೧-೧೩೬)

ಮೊದಲಿನದರಲ್ಲಿ 'ಅಥವಾ', 'ಇಲ್ಲವೆ' ಎಂಬ ಅರ್ಥದ 'ಮೇಣ್' ಶಬ್ದವನ್ನು ಉದ್ದಕ್ಕೂ ಬಳಸದೆ 'ಮತ್ತು' ಎಂಬುದನ್ನು ಬಳಸಿರುವುದು ದೋಷಕ್ಕೆ ಎಡೆಗೊಟ್ಟದೆ ಎಂಬುದು ಸ್ಪಷ್ಟವಾಗುತ್ತದೆ.

(ii) ಅವಧಾರಣ ದೋಷಕ್ಕೆ :

ಕುಲಜನೀತನೆ ಪಂಡಿತನೀತನು
ಜ್ವಲಯಶೋಧಿಕನೀತನೆ... ॥ (೧-೧೩೯)

ಅವಧಾರಣ ದೋಷರಾಹಿತ್ಯಕ್ಕೆ :

ಶೂರನೀತನೆ ಪಂಡಿತನೀತನೇ
ಕ್ಷೀರಗೌರಯಶೋಧಿಕನೀತನೇ ॥ (೧-೧೪೦)

ವ್ಯಕ್ತಿಯೊಬ್ಬನ ವಂಶ ಜಾತಿ ಗುಣಗಳನ್ನು ಒತ್ತಿ ಹೇಳುವಾಗ ಒಂದನ್ನು ಮಾತ್ರ –'ಪಂಡಿತನೀತಂ'—ಒತ್ತಿ ಹೇಳದೆ, ಉಳಿದ ಎರಡನ್ನು ಒತ್ತಿ ಹೇಳಿದೆ. ಹೀಗಾಗಿ, 'ಪಂಡಿತನೀತಂ' ಎಂಬಲ್ಲಿಯ ಅವಧಾರಣಾಭಾವ ದೋಷವೆನ್ನಿಸುತ್ತದೆ. ಹೀಗೆ ಮಾಡುವುದರಿಂದ ವಾಕ್ಯರಚನೆಯಲ್ಲಿಯೂ ಶಿಥಿಲತೆಗೆ ಎಡೆದೊರೆಯುತ್ತದಾಗಿ ಇಂಥ ಕ್ರಮ ಅಪೇಕ್ಷಣೀಯವಲ್ಲವೆಂಬುದು ಮಾರ್ಗಕಾರನ ಅಭಿಪ್ರಾಯ. ಆದ್ದರಿಂದಲೇ ಇದನ್ನು 'ಅಲಸಿ ಪೇಳ್ವಿ ಅವಧಾರಣದೋಷ'ವೆಂದಿದ್ದಾನೆ.

(iii) ವಿಶಂಕಾ ದೋಷಕ್ಕೆ :

ದಿವಿಜನೋ ಫಣಿನಾಯಕನೋ ಮನೋ-
ಭವನಿವಂ ಕರವೊಪ್ಪಿದಂ... ॥ (೧-೧೪೧)

ವಿಶಂಕಾದೋಷರಾಹಿತ್ಯಕ್ಕೆ :

ಸುರಗಣಾಧಿಪನೋ ಫಣಿನಾಥನೋ
ನಿರುತಮಾ ಸ್ಮರನೋ ಸೊಗಯಿಪ್ಪರೀ
ದೊರೆಯರಿಲ್ಲ ನರರ್ ಪೆಱರೆಂಬುದಾ
ದರದಿನಕ್ಕೆ ಗುಣೋದಯಕಾರಣಂ ॥ (೧-೧೪೩)

ವಿಶಂಕೆಯನ್ನು ವ್ಯಕ್ತಪಡಿಸುವ 'ಓ' ಪ್ರತ್ಯಯವನ್ನು ಎಲ್ಲ ಪದಗಳಿಗೂ ಹೆತ್ತಿಸದೆ ಇರುವುದು ಹಾಗೂ ಮುಂದುವರಿದು ವಿಶಂಕೆಯನ್ನು ಪರಿಹರಿಸದಿರುವುದು ಮೊದಲಿನದರಲ್ಲಿ ಎದ್ದು ಕಾಣುವ ದೋಷಗಳು. ಉದ್ದಿಷ್ಟ ವ್ಯಕ್ತಿ ಮನ್ಮಥನಂತೂ ಅಲ್ಲ; ಮನ್ಮಥನಿರಬಹುದೇ ಎಂಬ ಅನುಮಾನಕ್ಕೆಡೆಗೊಡುವಂಥವನು ಎಂಬುದನ್ನು ಸೂಚಿಸುವುದಕ್ಕೆ ಬದಲಾಗಿ 'ಮನೋಭವನಿವಂ ಕರಮೊಪ್ಪಿದಂ' ಎಂದು ಸಂದೇಹಕ್ಕೆಡೆಯಿಲ್ಲದಂತೆ ಸಾರಿಬಿಡುತ್ತದೆ, ಮೊದಲ ರೀತಿಯ ರಚನೆ. ಆದ್ದರಿಂದ ಇದು ಆಕ್ಷೇಪಾರ್ಹವಾಗುತ್ತದೆ.

ವಾಸ್ತವವಾಗಿ, ಈ ಅಂಶಗಳೂ ಶೈಲಿವಿಜ್ಞಾನದ ಅಂಗವಾಗಿ ಬರುವಂಥವೇ. 'ಕವಿರಾಜಮಾರ್ಗ'ಕಾರನ ಸೂಕ್ಷ್ಮಸಂವೇದನೆ ಭಾಷಾವಿಷಯಕವಾದ ಇಂಥ ವಿಚಾರದ ಚರ್ಚೆಗೆ ಇಲ್ಲಿ ಎಡೆಮಾಡಿಕೊಟ್ಟಿದೆ. ವಾಕ್ಯರಚನೆಯ ನಿರ್ದುಷ್ಟತೆಯ ವಿಚಾರವನ್ನು ಪರಿಶೀಲಿಸುವುದು ವ್ಯಾಕರಣದ ವ್ಯಾಪ್ತಿಗೆ ಹೊರತಾದುದಲ್ಲವಾದುದರಿಂದ, ಇದರ ಚರ್ಚೆ ಅಪ್ರಾಸಂಗಿಕವೇನೂ ಅಲ್ಲ.

(೧೦) ಕ್ರಿಯಾವಿಶೇಷಣ: ದ್ವಿತೀಯ ಪರಿಚ್ಛೇದದ ನಾಲ್ಕು ಪದ್ಯಗಳಲ್ಲಿ 'ಕವಿರಾಜಮಾರ್ಗ'ಕಾರ ಕ್ರಿಯಾವಿಶೇಷಣದ ಬಳಕೆಯ ವಿಚಾರವನ್ನು ಚರ್ಚಿಸಿದ್ದಾನೆ. ಒಟ್ಟಿನಲ್ಲಿ, ಒಂದು ಕ್ರಿಯೆಯೊಂದಿಗೆ ಎರಡು ಕ್ರಿಯಾವಿಶೇಷಣಗಳನ್ನು ಬಳಸುವುದು ಸಲ್ಲದು ಎಂಬುದು ಆತನ ಅಭಿಪ್ರಾಯ. ಇಂಥ ಸಂದರ್ಭಗಳಲ್ಲಿ ದೋಷಗಳನ್ನು ಹೇಗೆ ದೂರ ಮಾಡಬಹುದೆಂಬುದನ್ನೂ ಎಂದಿನಂತೆ ಸೂಚಿಸಿದ್ದಾನೆ. ಆ ಲಕ್ಷ್ಯಪದ್ಯ ಇಂತಿದೆ:

ಪರಿವಾರವಾರ ವನಿತಾ
ಪರಿವೃತನರವು ನೆಯೊಳರಸನಂಬರತಳದೊಳ್
ವರತಾರಾಪರಿಗತ ಶಶ।
ಧರನಂತೊಪ್ಪಿರೆ ವಿನೋದದಿಂದುರುಮುದದಿಂ ॥ (೨-೧೦)

ಇಲ್ಲಿಯ ಸಮಸ್ಯೆಯೇನೆಂಬುದನ್ನು ಮುಳಿಯ ತಿಮ್ಮಪ್ಪಯ್ಯನವರು ಹೀಗೆ ವಿವರಿಸಿದ್ದಾರೆ: "'ವಿನೋದದಿಂದೆ' ಮತ್ತು 'ಉರುಮುದದಿಂ' ಎಂಬ ಕರಣಕಾರಕ ನಿಬದ್ಧಗಳಾದ ಪದಗಳೆರಡೂ 'ಒಪ್ಪಿರೆ' ಎಂಬ ಕ್ರಿಯೆಯನ್ನೇ ವಿಶೇಷಿಸುತ್ತಿವೆ ಎಂಬುದು ಸ್ಪಷ್ಟವಿದೆ. ಆದರೆ ಆ ಕರಣ ಕಾರಕಗಳೆರಡನ್ನೂ ಭಾವಿಸಿರಿ. 'ವಿನೋದದಿಂ' ಎಂಬುದು ಮೇಲೆ ತೋರುವ 'ಒಪ್ಪಿರೆ' ಎಂಬ ಕ್ರಿಯೆಗೂ ವಿಶೇಷಣವಾಗುವಂತಿದ್ದರೆ, 'ಅತಿ (?) ಮುದದಿಂ' ಎಂಬುದು ವಿಶೇಷ್ಯವಾದ 'ಅರಸಂ' ಎಂಬುದರ ಗುಣವಾಗಿ ಅದನ್ನೇ ಹೊದ್ದಿಕೆಗೊಳ್ಳುವಂತಿದೆ. ಅದರಿಂದಲೇ, ಅವೆರಡು ಪದಗಳು ಒಂದು ಕ್ರಿಯಾಪದ ರೂಪದ ಗೋವಿಗೆ ಬಿಟ್ಟ ಕಾರಕ ರೂಪದ ಕರಣವಿಭಕ್ತಿಕ ಪದಗಳೆಂಬ ಎರಡು ಕರುಗಳನ್ನು ಹೋಲುವುವು."[೮೦] ಹೀಗಾಗಿ, ಇದನ್ನು "ಪರಿವಾರವಾರವನಿತಾ....ವಿನೋದದಿಂ ಜನಿತಮುದಂ" (೨-೧೨) ಎಂದು ತಿದ್ದಬೇಕಾಗುತ್ತದೆಂದು ಸೂಚಿಸಿದ್ದಾನೆ. ಏಕೆಂದರೆ ಹೀಗೆ ಮಾಡಿದಾಗ 'ಜನಿತಮುದಂ' ಎಂಬುದು ನಾಮವಿಶೇಷಣವಾಗಿ 'ಅರಸಂ' ಎಂಬುದಕ್ಕೆ ಮಾತ್ರ ಅನ್ವಯವಾಗುವುದರಿಂದ ದೋಷ ದೂರವಾಗುತ್ತದೆ.

ಒಂದು ಕ್ರಿಯೆ ಒಂದೇ ಒಂದು ಕ್ರಿಯಾವಿಶೇಷಣವನ್ನು ಹೊಂದುವುದು ಉಚಿತ ವೆಂಬುದು ಮಾರ್ಗಕಾರನ ಅಭಿಪ್ರಾಯ. ಈ ಅಭಿಪ್ರಾಯವನ್ನು ಮಾನ್ಯಮಾಡದಿದ್ದಲ್ಲಿ, ಸಮುಚ್ಚಯಗಳ ಬಳಕೆಯಿಂದಲೂ ಇದನ್ನು ಸರಿಪಡಿಸಬಹುದು. ವಾಸ್ತವವಾಗಿ, ಕನ್ನಡ ವಾಕ್ಯರಚನೆಯ ಈ ಪ್ರಕಾರ ಮಾರ್ಗಕಾರನ ನಿಯಮವನ್ನು ಮೀರಿ ಬೆಳೆದಿದೆ. ಹೀಗಾಗಿ, ಒಂದೇ ಕ್ರಿಯೆ ಹಲವು ಕ್ರಿಯಾವಿಶೇಷಣಗಳನ್ನು ಹೊಂದಬಹುದಾಗಿದೆ.

(೧೧) ವಿಶೇಷಣ-ವಿಶೇಷ್ಯಗಳು : ದಕ್ಷಿಣೋತ್ತರ ಮಾರ್ಗಗಳ ಸಂದರ್ಭದಲ್ಲಿ, ಜೊತೆಗೆ 'ಬಹುವಿಶೇಷಣಗಣ'ದ ಪ್ರಯೋಗದ ಗುಣಾವಗುಣಗಳನ್ನೂ ಮಾರ್ಗಕಾರ ಉಲ್ಲೇಖಿಸಿ ದ್ದಾನೆ. ವಿಶಿಷ್ಟ ಉದ್ದೇಶದ ಹಾಗೂ 'ಅಂಕಚಾರಣೆ'ಯ–ಅಂದರೆ ವಿಶಿಷ್ಟ ಕುರುಹುಗಳ ಅಥವಾ ಲಕ್ಷಣಗಳ ಪಟ್ಟಿಯನ್ನು ಕೊಡುವಲ್ಲಿ–ಸಂದರ್ಭಗಳ ಹೊರತು, ಉಳಿದಂತೆ ಬಹು ವಿಶೇಷಣಗಣವನ್ನು ಬಳಸಬಾರದೆಂಬುದು ಆತನ ಅಭಿಪ್ರಾಯ. ಅಂಕಚಾರಣೆಗೆ ನಿದರ್ಶನ ವನ್ನು ಒದಗಿಸಿಲ್ಲವಾದರೂ, ವಿಶಿಷ್ಟ ಉದ್ದೇಶದ ಸಂದರ್ಭವನ್ನು ಹೀಗೆ ನಿದರ್ಶಿಸಿದ್ದಾನೆ :

ಸುಭಟರ್ಕಳ್ ಕವಿಗಳ್ ಸು
ಪ್ರಭುಗಳ್ ಚೆಲ್ವರ್ಕಳಭಿಜನರ್ಕಳ್ ಗುಣಿಗಳ್
ಅಭಿಮಾನಿಗಳತ್ಯುಗ್ರರ್
ಗಭೀರಚಿತ್ತರ್ ವಿವೇಕಿಗಳ್ ನಾಡವರ್ಗಳ್ ॥ (೨–೨೮)

ಇಂಥಲ್ಲಿ ಇದು ಗ್ರಾಹ್ಯವೆಂಬುದು ಆತನ ಅಭಿಪ್ರಾಯ.

ವಿಶೇಷ್ಯ ವಿಶೇಷ್ಯಗಳ ನಡುವೆ ಪದವೊಂದು ಉಚಿತವಾಗಿ ಎಡೆಗೊಂಡು ಬಂದಿದ್ದಲ್ಲಿ, ಅಂಥ ಪದದಿಂದ ಅವುಗಳ ಹೊಂದಿಕೆ ತಪ್ಪಿದರೂ, ಅದು ದೋಷವೇನೂ ಆಗುವುದಿಲ್ಲ ವೆಂದು ಹೇಳಿದ್ದಾನೆ. ಇದನ್ನು ಹೀಗೆ ನಿದರ್ಶಿಸಿದ್ದಾನೆ :

ಗುಣಯುತನಪ್ಪನಂ ಸುಭಟನಪ್ಪನನಾಯುಧಯುಕ್ತನಪ್ಪನಂ
ಪ್ರಣುತಸಮಸ್ತವೈರಿಗಣನಪ್ಪನನುಜ್ಜ್ವಲಕೀರ್ತಿಯಪ್ಪನಂ
ಗಣೆದಮನೇನುಮಂ ಬಗೆಯದಾಗಡುಮಂತೆ ಪರೋಪಕಾರಕಾ
ರಣಪರನಪ್ಪನಂ ಮನದೆ ಮೆಚ್ಚದರಾರಭಿಮಾನಿಯಪ್ಪನಂ ॥ (೧–೧೨೪)

—ಈ ವಿಶೇಷಣಮಾಲೆಯಲ್ಲಿ 'ಅಪ್ಪನಂ' ಎಂಬುದು ಉಚಿತವಾಗಿ ಎಡೆಗೊಂಡು ಬಂದಿದೆ ಎಂಬುದು ಮಾರ್ಗಕಾರನ ಅಭಿಮತ. ವಿಶೇಷ್ಯ ಅಧ್ಯಾಹಾರವಾಗಿಯೇ ಉಳಿಯುವ ಇಂಥ ಸಂದರ್ಭದಲ್ಲಿನ ವಿಶೇಷ್ಯ-ವಿಶೇಷಣ ಸಂಬಂಧವನ್ನು 'ಪದಾಂತರೀ ಕರಣ'ವೆಂಬ ಪಾರಿಭಾಷಿಕ ಪದದಿಂದ ನಿರ್ದೇಶಿಸಿದ್ದಾನೆಂಬುದು ಗಮನಾರ್ಹವಾದ ಸಂಗತಿಯಾಗಿದೆ.

ಕ್ರಿಯಾಪದ, ವಾಕ್ಯರಚನಾ ವೈಶಿಷ್ಟ್ಯಗಳು—ಇದೇ ಮೊದಲಾದ ಇತರ ಅಂಶ ಗಳನ್ನು ದಕ್ಷಿಣೋತ್ತರಮಾರ್ಗಗಳನ್ನು ಕುರಿತು ವಿವೇಚನೆಯ ಅಂಗವಾಗಿ ಮಾರ್ಗ ಕಾರ ಕಾಣಿಸಿದ್ದಾನೆ. ಈ ಅಂಶಗಳನ್ನು ಇಲ್ಲಿ ಪ್ರಸ್ತಾವಿಸಿಲ್ಲ.

ಒಟ್ಟಿನಲ್ಲಿ, ವ್ಯಾಕರಣ ನಿರೂಪಣೆ ತನ್ನ ಪ್ರಧಾನವಾದ ಉದ್ದೇಶವಲ್ಲವಾದರೂ, ಕನ್ನಡ ಭಾಷೆಯ ವ್ಯಾಕರಣದ ವಿಶಿಷ್ಟ ಅಂಶಗಳನ್ನು ತನ್ನ ಸೀಮಿತ ಪರಿಧಿಯಲ್ಲಿಯೇ ಸೆರೆಹಿಡಿದು ಕನ್ನಡ ವ್ಯಾಕರಣ ಮುಂದುವರಿಯುವುದಕ್ಕೆ ಅಗತ್ಯವಾದಂಥ ಮಾರ್ಗದರ್ಶಿ ಸೂತ್ರಗಳನ್ನು ಹಾಕಿಕೊಟ್ಟು, ಮುಂದೆ ಬಂದ ನಾಗವರ್ಮ ಕೇಶಿರಾಜಾದಿಗಳೂ ಕೆಲ ವಂಶಗಳಲ್ಲಿಯಾದರೂ ತನ್ನನ್ನು ಅನುಸರಿಸುವಷ್ಟರ ಮಟ್ಟಿನ ಪ್ರಭಾವವನ್ನು ಬೀರಿದ್ದು 'ಕವಿರಾಜಮಾರ್ಗ'ಕಾರನ ವೈಶಿಷ್ಟ್ಯ. ಹೊಸದಾಗಿ ಮಾರ್ಗವನ್ನು ಹಾಕಿಕೊಡುವ ತನ್ನ ಸಾಹಸದಲ್ಲಿ ಅವನು ಕೆಲವೆಡೆಗಳಲ್ಲಿ ಎಡವಿರುವುದೂ ಉಂಟು; ತನ್ನ ಕಾಲಕ್ಕೆ ಲಭ್ಯವಿದ್ದ ಮಾಹಿತಿಯ ಬೆಳಕಿನಲ್ಲಿ ಅವನು ನೀಡಿದ ನಿರ್ಧಾರಗಳು ಅಸ್ಪಷ್ಟವಾಗಿರುವುದೂ ಉಂಟು. ಅದರ ಭಾಷೆಯ ಜೀವನಾಡಿಯನ್ನು ಹಿಡಿದು, ಅದರ ಕೆಲವು ಪ್ರಮುಖ ಸೂತ್ರಗಳನ್ನು ಸ್ಪಷ್ಟಪಡಿಸಿರುವುದು ಅವನ ಹಿರಿಮೆ. ಈ ದೃಷ್ಟಿಯಲ್ಲಿ 'ಕನ್ನಡದ ಆದಿ ವ್ಯಾಕರಣ'ವೆಂಬ ಮಾತು ಅಷ್ಟೇನೂ ಅತ್ಯುಕ್ತಿಯಲ್ಲ.

## ಛಂದೋ ವಿಚಾರಗಳು

'ಕವಿರಾಜಮಾರ್ಗ' ಪದ್ಯನಿಬದ್ಧವಾದೊಂದು ಲಕ್ಷಣಗ್ರಂಥ. "ಲಕ್ಷಣಗ್ರಂಥವಾಗದೆ ಒಂದು ಕಾವ್ಯವಾಗಿದ್ದಿದ್ದರೆ, ಅಲ್ಲಿಯ ಪದ್ಯಜಾತಿ ವೈವಿಧ್ಯದ ದೃಷ್ಟಿಯಿಂದ ಅದು ಚತ್ತಾಣಕ್ಕೆ ಒಳ್ಳೆಯ ನಿದರ್ಶನವಾಗಬಹುದಾಗಿತ್ತು"—ಎಂಬುದು ತೀ. ನಂ. ಶ್ರೀಕಂಠಯ್ಯನವರ ಅಭಿಪ್ರಾಯ. ಕವಿರಾಜಮಾರ್ಗಕಾರನ ಆಶಯದಂತಲ್ಲದೆ, ದೇಶ್ಯ ಛಂದಸ್ಸುಗಳಲ್ಲಿ ಗೀತಿಕೆಯೊಂದೇ ಇದ್ದು, ಉಳಿದವು ಯಾವುವೂ ಇಲ್ಲದ ಒಂದು ಕೊರತೆಯನ್ನು ಲಕ್ಷಣದ ಉಲ್ಲಂಘನೆಯೆಂದು ತಿಳಿಯದೆ ಹೋಗುವ ಪಕ್ಷದಲ್ಲಿ, ಅವರ ಗ್ರಹಿಕೆ ತನ್ನ ಮಿತಿಯಲ್ಲಿ ಸಮಂಜಸವಾಗಿಯೇ ಇದೆ. ಕನ್ನಡದಲ್ಲಿ ಲಕ್ಷಣಗ್ರಂಥಗಳನ್ನೂ ಸಂಕಲನಗ್ರಂಥಗಳನ್ನೂ ಒಂದೇ ಬಗೆಯ ಛಂದಸ್ಸಿನಲ್ಲಿ ಅಲ್ಲದೆ, ಬಗೆಬಗೆಯ ಛಂದಸ್ಸುಗಳಲ್ಲಿ ನಡಸಿ ಅವನ್ನು ಸರಸವಾಗಿರುವಂತೆ ಮಾಡುವುದರ ಮೂಲಕ ಕಾವ್ಯಗ್ರಂಥಗಳೆಂಬಂತೆಯೇ ಅವನ್ನು ಕರ್ತೃಗಳು ತಿಳಿದಿದ್ದರೆಂಬುದಕ್ಕೆ ನಿದರ್ಶನಗಳಿವೆ. ಪ್ರಸ್ತುತ, 'ಕವಿರಾಜಮಾರ್ಗ'ದಲ್ಲಿಯೇ ಅದರ ಕರ್ತೃ ಅದನ್ನು ಕಾವ್ಯವೆಂಬಂತೆ ವ್ಯವಹರಿಸಿದ್ದು ವ್ಯಕ್ತವಾಗಿಯೇ ಒಂದೆರಡು ಕಡೆ ಕಂಡುಬಂದಿದೆ. ಉದಾಹರಣೆಗೆ, "ಪುರಾಣಕವಿಪ್ರಭುಪ್ರಯೋ । ಗಾವಿಳಸದ್ಗುಣೋದಯಮನಾಯ್ದವೞಂ ಸಮೆದೊಂದು ಕಾವ್ಯದಿಂ । ಶ್ರೀವಿಜಯ ಪ್ರಭೂತಮುದಮಂ ತನಗಾಗಿಸಿದೊಂ ಕವೀಶ್ವರಂ" (೨–೧೫೫), "ಕೂಡೆ ಪೇೞ್ದಿ ನುತಕಾವ್ಯಮನ್...." (೩–೨೨೩) ಈ ಮೊದಲಾದ ಮಾತುಗಳನ್ನು ನೋಡಬಹುದು. ಆದ್ದರಿಂದ ಕವಿರಾಜಮಾರ್ಗಕರ್ತೃವಿನ ದೃಷ್ಟಿಯಲ್ಲಿ ತನ್ನ ರಚನೆ 'ಚತ್ತಾಣ'ವೆಂಬ ಸಾಹಿತ್ಯರೂಪದಲ್ಲಿ ಕಟ್ಟಿದ್ದು ಎಂಬ ಅಭಿಪ್ರಾಯವಿದ್ದಿರಲೂ ಬಹುದು.

## ಕೃತಿಶರೀರ

'ಕವಿರಾಜಮಾರ್ಗ'ದಲ್ಲಿ ಬಳಕೆಯಾಗಿರುವ ಛಂದಸ್ಸುಗಳ ವಿವರಗಳನ್ನು ಆ ಗ್ರಂಥದ ಬೆಂಗಳೂರು ಪರಿಷ್ಕರಣದ (೧೯೬೮) ಸಂಪಾದಕರು ಗ್ರಂಥದ ಪೀಠಿಕಾಭಾಗದಲ್ಲಿ, ಕೊನೆಗೆ ಕೊಟ್ಟಿರುವ ಪರಿಶಿಷ್ಟದಲ್ಲಿ ತಿಳಿಸಿದ್ದಾರೆ. ಪ. ೧ರಲ್ಲಿ ೧೧೦ ಕಂದಗಳು, ೩೬ ವರ್ಣವೃತ್ತಗಳು, ೪ ಗೀತಿಕೆಗಳು—ಹೀಗೆ ಒಟ್ಟು ಪದ್ಯಸಂಖ್ಯೆ ೧೫೦ ; ಪ. ೨ರಲ್ಲಿ ೯೬ ಕಂದಗಳು, ೧೫ ವರ್ಣವೃತ್ತಗಳು, ೧೬ ಗೀತಿಕೆಗಳು, ೨೮ ಶ್ಲೋಕಗಳು—ಹೀಗೆ ಒಟ್ಟು ಪದ್ಯಸಂಖ್ಯೆ ೧೫೫; ಪ. ೩ರಲ್ಲಿ ಕಂದಗಳು ೨೦೭, ವರ್ಣವೃತ್ತಗಳು ೨೦, ಗೀತಿಕೆಗಳು ೪—ಹೀಗೆ ಒಟ್ಟು ಪದ್ಯಸಂಖ್ಯೆ ೨೩೧ ; ಅಧಿಕಪಾಠದ ಕಂದ ೫. ಗ್ರಂಥದ ಒಟ್ಟು ಪದ್ಯಸಂಖ್ಯೆ ೫೩೬+೫ ; ಇವುಗಳಲ್ಲಿ ಕಂದ ೪೧೩+೫, ವರ್ಣವೃತ್ತಗಳು ೭೧, ಗೀತಿಕೆಗಳು ೨೪, ಶ್ಲೋಕಗಳು ೨೮.

ವರ್ಣವೃತ್ತಗಳು: ಪ. ೧ರ ೨ ವರ್ಣವೃತ್ತಗಳು (೧೪೭, ೧೪೮), ಪ. ೩ರ ೧ ವರ್ಣವೃತ್ತ (೨೩೦) ಅರ್ಧಸಮವಾಗಿರುವುದರ ಹೊರತು ಉಳಿದೆಲ್ಲವೂ ಸಮಗಳೇ. ಈ ಸಮಗಳಲ್ಲಿ ಖ್ಯಾತಕರ್ಣಾಟಕಗಳೊಳಗಿನ ಚಂಪಕಮಾಲೆ ಉತ್ಪಲಮಾಲೆಗಳು ಸಂಖ್ಯೆಯಲ್ಲಿ ಉಳಿದವುಗಳಿಗಿಂತ ಸ್ವಲ್ಪ ಹೆಚ್ಚು. ಪ. ೧ರಲ್ಲಿ ೮ (೧೧೫, ೧೧೬, ೧೨೦–೨೪, ೧೪೯), ಪ. ೨ರಲ್ಲಿ ೭ (೧೦೪–೧೦) ಹೀಗೆ ಒಟ್ಟು ೧೫ ಚಂಪಕಮಾಲೆಗಳೂ, ಪ. ೧ರಲ್ಲಿ ೫ (೧೧೩, ೧೧೪, ೧೧೭–೧೯), ಪ. ೨ರಲ್ಲಿ ೬ (೯೯–೧೦೩, ೧೫೫) ಹೀಗೆ ಒಟ್ಟು ೧೧ ಉತ್ಪಲಮಾಲೆಗಳೂ ಇವೆ. ಪ. ೧, ೩ರಲ್ಲಿ ಮತ್ತೇಭವಿಕ್ರೀಡಿತ ಒಂದೊಂದೂ (೧೫೦ ; ೨೩೧) ಪ. ೨ರಲ್ಲಿ ಶಾರ್ದೂಲವಿಕ್ರೀಡಿತ ಒಂದೇ ಒಂದೂ (೧೪೨) ಇವೆ. ಸ್ರಗ್ಧರೆ ಮಹಾಸ್ರಗ್ಧರೆಗಳಿಗೆ ಗ್ರಂಥದಲ್ಲಿ ಒಂದಾದರೂ ನಿದರ್ಶನವಿಲ್ಲ.

ಇನ್ನು ವಿರಳವೃತ್ತಗಳಲ್ಲಿ ಪ. ೧ರಲ್ಲಿ ೧ (೧೪೦) ಅಚ್ಯುತವೂ, ಪ. ೧ರಲ್ಲಿ ೮ (೧೩೮, ೧೩೯, ೧೪೧–೪೬), ಪ. ೩ರಲ್ಲಿ ೨ (೨೧೮, ೨೧೯) ಹೀಗೆ ಒಟ್ಟು ೧೦ ದ್ರುತವಿಲಂಬಿತಗಳೂ, ಪ. ೩ರಲ್ಲಿ ೪ (೨೨೬–೨೯) ಋಷಭ ಅಥವಾ ವೃಷಭಗಳೂ, ಪ. ೧ರಲ್ಲಿ ೭ (೧೨೬–೨೯, ೧೩೧–೩೪), ಪ. ೩ರಲ್ಲಿ ೨ (೨೨೦, ೨೨೪) ಹೀಗೆ ಒಟ್ಟು ೯ ಮಣಿವಿಭೂಷಣಗಳೂ, ಪ. ೨ರಲ್ಲಿ ೧ (೧೫೪), ಪ. ೩ರಲ್ಲಿ ೮ (೨೦೯–೧೬) ಹೀಗೆ ಒಟ್ಟು ೯ ಮಾಲಿನಿಗಳೂ, ಪ. ೧ರಲ್ಲಿ (೧೩೦, ೧೩೩, ೧೩೫, ೧೩೬), ಪ. ೩ರಲ್ಲಿ ೨ (೨೨೧, ೨೨೨) ಹೀಗೆ ಒಟ್ಟು ೬ ಮಂಗಳಗಳೂ ಕಂಡುಬರುತ್ತವೆ.

ಅರ್ಧಸಮವೃತ್ತಗಳಲ್ಲಿ, ಪ. ೧ರಲ್ಲಿ ೨ (೧೪೭, ೧೪೮) ಮತ್ತು ಪ. ೩ರಲ್ಲಿ ೧ (೨೩೦)—ಹೀಗೆ ಒಟ್ಟು ೩ ಪುಷ್ಪಿತಾಗ್ರಗಳಿವೆ.

ಇನ್ನು ಶ್ಲೋಕಗಳು, ಪ. ೨ರಲ್ಲಿ ೧೧೨ರಿಂದ ೧೩೬ರ ವರೆಗೆ, ೧೩೯ರಿಂದ ೧೪೧ರ ವರೆಗೆ—ಒಟ್ಟು ೨೮ ಬಂದಿವೆ.

ಇವುಗಳ ಬಳಕೆಯ ವಿಧಿವಿಧಾನವನ್ನು ಕುರಿತಂತೆ ಕೆಲವಂಶಗಳು : ಖ್ಯಾತಕರ್ಣಾಟಕಗಳಲ್ಲಿ ಚಂಪಕೋತ್ಪಲಗಳ ಹೆಚ್ಚಳವೂ ಮತ್ತೇಭ ಶಾರ್ದೂಲಗಳ ಕೊರತೆಯೂ

ಉಳಿದೆರಡರ ಅಭಾವವೂ ಕಂಡುಬಂದಿದೆಯಷ್ಟೆ. ಇದಕ್ಕೆ ವಿಶೇಷ ಕಾರಣವೇನಾದರೂ ಉಂಟೇ ? ಪ್ರಾಯಃ ಪಂಪಾದ್ಯರಾದವರ ಈಚಿನ ಚಂಪೂ ಗ್ರಂಥಗಳಲ್ಲಿ ಕೂಡ ಈ ವೃತ್ತಗಳ ಬಳಕೆಯ ಪ್ರಮಾಣ ಒಟ್ಟಿನಲ್ಲಿ ಹೀಗೆಯೇ. ೮೫೦ರವರೆಗಿನ ಶಾಸನಸಾಹಿತ್ಯದ ಛಂದಸ್ಸಮೀಕ್ಷೆಯಲ್ಲಿ ಕೂಡ ಸ್ರಗ್ಧರೆಯ ಅಭಾವವನ್ನೇ ನಾವು ಗಮನಿಸಿದ್ದೇವೆ. ಚಂಪಕೋತ್ಪಲಗಳು ಕನ್ನಡದ ಜಾಯಮಾನಕ್ಕೆ ಒಗ್ಗುವ ಲಯವನ್ನುಳ್ಳ ಪದಬಂಧದಲ್ಲಿರುತ್ತದೆಯೆಂದೂ ಉಳಿದವು ಹಾಗಿರುವುದಿಲ್ಲವೆಂದೂ ಹೇಳಬಹುದೇ ? ಇದು ವಿಚಾರಯೋಗ್ಯವಾದ್ದು.

ಈ ವರ್ಣವೃತ್ತಗಳು ಆದಿಪ್ರಾಸಪಾಲನೆಯ ವಿಶೇಷ ಹೊರತಾಗಿ, ಉಳಿದಂತೆ ಸಂಸ್ಕೃತ ವರ್ಣವೃತ್ತಗಳ ಸಾಮಾನ್ಯ ಲಕ್ಷಣಗಳನ್ನು ಅಳವಡಿಸಿಕೊಂಡಿವೆ. ಸೂಚಿತ ಸ್ಥಾನ ಮತ್ತು ಪಾದಾಂತಗಳ ಯತಿ ಹಲವೆಡೆ ಗಮನಕ್ಕೆ ಬರುವಂತೆ ಪಾಲಿತವಾಗುವುದು ಉಲ್ಲೇಖನೀಯವಾಗಿದೆ. ವೃತ್ತಗಳು ಉತ್ತರಕಾಲೀನ ಚಂಪುಗಳಲ್ಲಿ ಕಂಡುಬರುವಂತೆ ಕಂದ ಮತ್ತು ಗದ್ಯಖಂಡಗಳ ನಡುನಡುವೆ ಬೆರತುಬರದೆ, ಅಲ್ಲಲ್ಲಿ ಹಿಂಡುಹಿಂಡಾಗಿ ಸಾಲುಗಟ್ಟಿ ಬರುವುದು ಕುತೂಹಲಕರವಾಗಿದೆ. ಒಂದೇ ಬಗೆಯ ಅಥವಾ ಸಮೀಪ ಸಾದೃಶ್ಯದ ವೃತ್ತಭೇದಗಳು ಹೀಗೆ ಬರುವುದನ್ನು ಕಂಡಾಗ ಕವಿ ಯಾವ ಉದ್ದೇಶದಿಂದಾಗಿ ಹೀಗೆ ಮಾಡಿದ್ದಾನೆಂದು ತಿಳಿಯುವ ಕುತೂಹಲ ಹುಟ್ಟುತ್ತದೆ. 'ಕವಿರಾಜಮಾರ್ಗ' ಪೂರ್ವಕಾಲೀನ ಕಾವ್ಯಸಾಹಿತ್ಯ ಅಥವಾ ಲಕ್ಷಣಸಾಹಿತ್ಯ ಯಾವ ಗ್ರಂಥಗಳೂ ದೊರೆಯದಿರುವುದರಿಂದ ಈ ವಿಷಯದಲ್ಲಿ ಏನನ್ನಾದರೂ ಹೇಳುವುದು ಕಷ್ಟ. ಕನ್ನಡ ಲಕ್ಷಣಗ್ರಂಥಗಳ ಚೌಕಟ್ಟಿನಲ್ಲಿ ಒಂದೇ ವಿಧದ ಛಂದಸ್ಸು ಬಳಕೆಯಾಗುವುದು ರೂಢಿಯಾದ್ದು ; ಆದರೆ ಇಲ್ಲಿ ಛಂದೋವೈವಿಧ್ಯವಿದೆ. ಲಕ್ಷಣಗ್ರಂಥವಾಗಿಯೂ 'ಕವಿರಾಜಮಾರ್ಗ' ಕರ್ತೃ ಅದನ್ನೊಂದು ಸಾಹಿತ್ಯಕೃತಿಯಾಗಿ ತಿಳಿದನೋ ಇಲ್ಲವೆ ಶಾಸ್ತ್ರಗ್ರಂಥರೂಢವಾದ ಛಂದೋವೈವಿಧ್ಯದ ಪರಿಪಾಠಿಯನ್ನು ಹಿಡಿದನೋ ಯಾವುದೂ ನಿಶ್ಚಯವಿಲ್ಲ.

'ಕವಿರಾಜಮಾರ್ಗ'ದಲ್ಲಿ ಬಳಸಿರುವ ಕೆಲವು ವರ್ಣವೃತ್ತಗಳು ಸಂಸ್ಕೃತ ಛಂದೋಗ್ರಂಥಗಳಲ್ಲಿಯೂ ಆ ಭಾಷೆಯ ಸಾಹಿತ್ಯ ಗ್ರಂಥಗಳಲ್ಲಿಯೂ ಕಂಡುಬರುವುದಿಲ್ಲವೆಂದು ಮದ್ರಾಸು ಪರಿಷ್ಕರಣದ ಸಂಪಾದಕರೂ ಅವರನ್ನನುಸರಿಸಿ ಗೋವಿಂದ ಪೈ ಅವರೂ ಅಭಿಪ್ರಾಯಪಟ್ಟಿರುವುದು ಕಾಣುತ್ತದೆ. ಕೆಲವು ವರ್ಣವೃತ್ತಗಳು ಪ್ರಾಚೀನ ಛಂದೋಲಕ್ಷಣಗ್ರಂಥಗಳಲ್ಲಿ ಉಕ್ತವಾದವಲ್ಲ ಎಂಬುದು ನಿಜ ; ಆದರೆ ಅವುಗಳ ಲಕ್ಷಣ ಜಯಕೀರ್ತ್ಯಾದಿ ಅರ್ವಾಚೀನರಲ್ಲಿ ಉಕ್ತವಾಗಿದೆ. ಸಂಸ್ಕೃತ ಸಾಹಿತ್ಯದಲ್ಲಿ ಇವು ವಿಶೇಷವಾಗಿ ಕಾಣದಿಲ್ಲವಾದ್ದರಿಂದ ಪೂರ್ವೋಕ್ತರು ದಾಕ್ಷಿಣಾತ್ಯ ಭಾಷಾಸಾಹಿತ್ಯಗಳನ್ನು ಲಕ್ಷಿಸಿ ಅವುಗಳಿಗೆ ಸ್ಥಾನಕಲ್ಪಿಸಿರಬಹುದೇ ಎನ್ನುವುದು ವಿಚಾರಣೀಯವಾದ್ದು. ಜಯಕೀರ್ತಿ ಕೇದಾರಭಟ್ಟರಂತೂ ದಾಕ್ಷಿಣಾತ್ಯರೇ ಆಗಿದ್ದಾರೆ.

'ಕವಿರಾಜಮಾರ್ಗ' ಮತ್ತು ಈಚೆಯ ಪಂಪಾದ್ಯರ ಕೃತಿಗಳಲ್ಲಿ ಹೀಗೆ ಬಳಕೆ

ಯಾಗಿರುವ ಸಂಸ್ಕೃತ ಸಾಹಿತ್ಯದ ಅಪ್ರಚುರವೃತ್ತಗಳನ್ನು ಗಮನಿಸಿ ಗೋವಿಂದ ಪೈ "....ಸಂಸ್ಕೃತದಲ್ಲಿ ವಾಡಿಕೆಯಾಗಿರುವ ವೃತ್ತಗಳನ್ನೇ ಕನ್ನಡ ಸಾಹಿತ್ಯದಲ್ಲಿ ಬಳಸಿದ ಯುಗವು ಕವಿರಾಜಮಾರ್ಗದ ಕಾಲಕ್ಕೆ ತಕ್ಕಷ್ಟು ಹಿಂದೆಯೇ ಮುಗಿದು, ಸಂಸ್ಕೃತ ಸಾಹಿತ್ಯದಲ್ಲಿ ಬಳಸದ ಸಂಸ್ಕೃತ ವೃತ್ತಗಳನ್ನು ಕನ್ನಡದಲ್ಲಿ ಬಳಸುತ್ತಿರುವ ಆ ಮಾರನೆಯ ಯುಗವು ಕನ್ನಡದಲ್ಲಿ ಆಗ್ಗೆ ನಿಯತವಾಗಿ ರೂಢಿಸಿರಬೇಕು ಎಂದು ಸಿದ್ಧವಾಗುವುದು ...." ಎಂದು ತಿಳಿಸಿದ್ದಾರೆ.[81] ವಾಡಿಕೆಯ ವೃತ್ತಗಳ ಜತೆಗೆ, ಅಪ್ರಚುರ ವೃತ್ತಗಳನ್ನು 'ಕವಿರಾಜಮಾರ್ಗ'ದಲ್ಲಿ ಬಳಸಿರುವುದು ನಿಶ್ಚಯವಾದರೂ ಅವುಗಳ ಸ್ವೀಕಾರದಲ್ಲಿ ಪೈ ಅವರು ಹೇಳುವ ಸ್ಥಿತ್ಯಂತರದ ಅವಧಿ ಅನುಕ್ರಮಗಳ ವಿಷಯ ಹೀಗೆಯೇ ಸರಿ ಎನ್ನುವಂತಿಲ್ಲ. ಈ ವಿಷಯವನ್ನು ಕೆಲಮಟ್ಟಿಗೆ ಹಿಂದೆಯೇ ವಿವೇಚಿಸಿದೆ.

ಇನ್ನು ಅರ್ಧಸಮವೃತ್ತದ ವಿಚಾರ. ಸಂಸ್ಕೃತ ಸಾಹಿತ್ಯ ಮತ್ತು ಛಂದೋಗ್ರಂಥಗಳಲ್ಲಿ ಗಣ್ಯ ಅರ್ಧಸಮವೃತ್ತವಾಗಿರುವಂತೆ ತೋರುವ ಪುಷ್ಪಿತಾಗ್ರವನ್ನೇ 'ಕವಿರಾಜಮಾರ್ಗ'ದಲ್ಲಿಯೂ ಬಳಸಿರುವುದು, ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ಸಂಸ್ಕೃತದ ವರ್ಚಸ್ಸು ಹೇಗೆ ಕೆಲಸ ಮಾಡುತ್ತಬಂದಿದೆ ಎನ್ನುವುದನ್ನು ಕೊಂಚಮಟ್ಟಿಗೆ ತೋರಿಸಿಕೊಡುತ್ತದೆ. ಕನ್ನಡ ಸಾಹಿತ್ಯದಲ್ಲಿ ಅರ್ಧಸಮಗಳ ಬಳಕೆಯೇ ತೀರ ವಿರಳವಾಗಿರುವಾಗ, 'ಕವಿರಾಜಮಾರ್ಗ'ದ ಈ ಕೊಡುಗೆ ನೆನೆಯತಕ್ಕದ್ದಾಗಿದೆ.

ಕಂದ: 'ಕವಿರಾಜಮಾರ್ಗ'ದ ಗ್ರಂಥಶರೀರದ ಪ್ರಾಣವೆಂದು ಹೇಳಬಹುದಾದ ಛಂದಸ್ಸು ಎಂದರೆ ಕಂದ. ಇದು ಲಕ್ಷಣಗ್ರಂಥಗಳಿಗೆ ಒಪ್ಪುವ ಛಂದಸ್ಸು. ಹಾಗೆಂದೇ 'ಕವಿರಾಜಮಾರ್ಗ'ದಲ್ಲಿ ಅದಕ್ಕೆ ಮಹತ್ತ್ವ ಸಂದಿರಬೇಕು. ಈ ಸಂಪ್ರದಾಯ ವಿಶೇಷವಾಗಿ ಇಮ್ಮಡಿ ನಾಗವರ್ಮ ಕೇಶಿರಾಜಾದ್ಯರ ಕಯ್ಯಲ್ಲಿ ಮುಂದೆ ಪ್ರಬಲಿಸಿದ್ದು ಸುವಿದಿತ. ವಸ್ತುನಿರೂಪಣೆಗೆ ಕಂದವನ್ನು ಕವಿರಾಜಮಾರ್ಗಕಾರ ತುಂಬ ಸಮರ್ಥ ರೀತಿಯಲ್ಲಿ, ಸೊಗಸಾಗಿ ಬಳಸಿದ್ದಾನೆಂದು ಎಲ್ಲರೂ ಸಾಮಾನ್ಯವಾಗಿ ಒಪ್ಪಿದ್ದಾರೆ. ಕಂದಪದ್ಯದ ನಿಯತ ಲಕ್ಷಣಗಳೆಲ್ಲ ಇಲ್ಲಿ ಕಂಡುಬರುತ್ತಿದ್ದು, ಅವುಗಳ ಬಂಧದಲ್ಲಿ ಸಹಜತೆ ಸರಳತೆಗಳೂ ಸ್ವಾರಸ್ಯಗುಣವೂ ಮಿಗಿಲಾಗಿ ಗೋಚರಿಸುತ್ತದೆ.

ಶ್ಲೋಕ: ಕೃತಿಯ ಚೌಕಟ್ಟಿನ ಚರ್ಚೆಯಲ್ಲಿ ಇನ್ನು ಉಳಿದದ್ದು ಶ್ಲೋಕ ಮತ್ತು ಕನ್ನಡ ಛಂದಸ್ಸಿನ ಗೀತಿಕೆ. ಪ. ೨ರಲ್ಲಿ ಒಟ್ಟು ೨೮ ಶ್ಲೋಕಗಳು ಒಟ್ಟಿಗೆ ಬಂದಿವೆ (೨-೧೧೨–೩೬, ೧೩೯–೪೧). ಈ ಪದ್ಯಗಳು ಮುಖ್ಯವಾಗಿ 'ದುಷ್ಕರಕಾವ್ಯ' ಎಂದರೆ ಚಿತ್ರಕವಿತ್ವದ ಭೇದಗಳನ್ನು ತಿಳಿಸುವ ಸೂತ್ರಗಳೂ (೧೧೨–೧೪, ೧೧೯, ೧೨೧) ಅವುಗಳಿಗೆ ಲಕ್ಷ್ಯಗಳೂ (೧೧೫–೧೮, ೧೨೦–೨೮, ೧೩೦–೩೬, ೧೩೯–೪೧) ಆಗಿವೆ. ಕೆಲವು ಪದ್ಯಗಳು ಕೇವಲ ಶಬ್ದಚಮತ್ಕಾರ ನಿದರ್ಶಕವಾಗಿರುವುದರಿಂದ, ಅವುಗಳ ಅರ್ಥವೂ ಸುಬೋಧವಾಗಿಲ್ಲದೆ ಪದ್ಯಪಾಠಗಳು ಅಲ್ಲಲ್ಲಿ ಕೆಟ್ಟು ಹೋಗಿರುವಂತಿವೆ. ಹೀಗೆ ೧೦ ಪದ್ಯಗಳು (೧೧೨, ೧೧೩, ೧೧೫, ೧೧೬, ೧೨೭, ೧೩೧, ೧೩೯, ೧೪೧) ಅಶುದ್ಧಗಳಾಗಿವೆ. ಉಳಿದ ೧೮ (೧೧೪, ೧೧೭–೨೦, ೧೨೩–೨೫,

೧೧೭, ೩೦, ೧೩೩, ೩೭, ೧೪೯) ಶುದ್ಧವಾಗಿವೆ. ಅಶುದ್ಧವೆಂದವುಗಳಲ್ಲಿ ಒಂದೆರಡಾದರೂ, ಸಾಮಾನ್ಯ ನಿಯಮವನ್ನು ಉದ್ದೇಶಪೂರ್ವಕವಾಗಿ ಮೀರಿದ ಅಪವಾದ ರೀತಿಯ ಪದ್ಯಗಳಿರುವುದು ಸಂಭವನೀಯ (ಉದಾ. ೧೧೨, ೧೧೫). ಲಕ್ಷಣಶುದ್ಧವೆಂದವುಗಳಲ್ಲಿ ಅರ್ಥಕ್ಲೇಶಗಳಿವೆಯೆಂಬುದೂ ನಿಜ. ಸಂಸ್ಕೃತದ ಶ್ಲೋಕಲಕ್ಷಣಕ್ಕೆ ಸಮರ್ಪಕವಾಗಿ ಅಳವಡುವ ಇಲ್ಲಿಯ ಶ್ಲೋಕಗಳಲ್ಲಿ ಒಂದು ವಿಶೇಷವೆಂದರೆ, ಕನ್ನಡದ ಜಾಯಮಾನವನ್ನನುಸರಿಸಿ, ದ್ವಿತೀಯಾಕ್ಷರಪ್ರಾಸ ಪಾಲಿತವಾಗಿರುವುದು. ಈ ಕಾರಣವಾಗಿ ಳ ಸಾಲುಗಳೂ ಒಡೆದು ತೋರುತ್ತವೆ. ಕೆಲವು ಶ್ಲೋಕಗಳಲ್ಲಿ ಸಂಸ್ಕೃತದ ಬಿಡಿಪದಗಳೂ ಸಮಾಸಪದಗಳೂ ಹೆಚ್ಚಾಗಿ ಬಂದು ಅಲ್ಲಲ್ಲ ಸಂಸ್ಕೃತ ಶ್ಲೋಕಗಳ ಧ್ವನಿಯೇ ಕೇಳುತ್ತದೆ (೧೧೨, ೧೯೯); ಇನ್ನು ಕೆಲವು ಕಡೆ ಕವಿರಾಜಮಾರ್ಗಕಾರನ ಶೈಲಿಗೆ ಸಹಜವಾಗಿ ಕನ್ನಡ ಮಾತಿನ ಧ್ವನಿ ಎದ್ದು ಕಂಡಿರುವುದೂ ಉಂಟು (೧೨೩, ೧೨೭). ಶ್ಲೋಕ ಛಂದಸ್ಸು ಕನ್ನಡ ಭಾಷೆಗೆ ಅಸಹಜವೇನಲ್ಲ ಎನ್ನುವುದನ್ನು ಇಂಥ ನಿದರ್ಶನಗಳು ತೋರಿಸಿಕೊಡುತ್ತವೆ. ಅವು ಚಿಕ್ಕ ನಕ್ಷತ್ರಗಳಂತೆ ಚೊಕ್ಕವಾಗಿ ಮಿನುಗುತ್ತವೆ. ಇಂಥ ಹಿನ್ನೆಲೆಯಲ್ಲಿ ನೋಡಿದಾಗ, "ಒಂದು ವೇಳೆ ಅನುಷ್ಟುಪ್ಪನ್ನು ಪ್ರಯೋಗಿಸಿ ನೋಡಿ ಕನ್ನಡ ಭಾಷೆಗೆ ಹೊಂದುವುದಿಲ್ಲವೆಂದು ಬಿಟ್ಟಿರಬಹುದು"—ಎಂಬ 'ಕನ್ನಡ ಕೈಪಿಡಿ'ಯೊಳಗಿನ ಗಮನಿಕೆಯನ್ನು ಒಪ್ಪುವುದು ಕಷ್ಟವಾಗುತ್ತದೆ.

ಗೀತಿಕೆ : ವಿರಳಪ್ರಯೋಗದ ದೇಶ್ಯ ಛಂದಸ್ಸುಗಳಲ್ಲಿ ಗೀತಿಕೆ ಕೂಡ ಒಂದು. ಹೀಗಿದ್ದೂ 'ಕವಿರಾಜಮಾರ್ಗ' ಒಂದರಲ್ಲಿಯೇ ೨೪ ಗೀತಿಕೆಗಳು ಬಳಕೆಯಾಗಿರುವುದು ಗಮನಾರ್ಹವಾಗಿದೆ. ಆ ಛಂದಸ್ಸಿನ ಮೊದಲ ರಂಗಪ್ರವೇಶ ಕೂಡ ಇಲ್ಲಿಯೇ. ಈ ಸಂಗತಿಯನ್ನು ಗಮನಿಸಿದಾಗ, ಜಯಕೀರ್ತಿ ಹೇಳುವ "ನಿಗದಿತಾ ಗೀತಿಕಾಲಂಕಾರೇ ಪ್ರಭುಸೇನಿಯೈಃ" ('ಛಂದೋನುಶಾಸನ', ೭–೨೦) ಎಂಬ ಉಲ್ಲೇಖವು 'ಕವಿರಾಜಮಾರ್ಗ'ವನ್ನು ಲಕ್ಷಿಸಿ ಹೇಳಿದ್ದಿರಬಹುದೇ, "ಪ್ರಭುಸೇನನ ಅನುಯಾಯಿಗಳು 'ಅಲಂಕಾರ'ದಲ್ಲಿ ವರ್ಣಿಸಿರುವುದು" ಎಂಬ ಆಶಯದ ಆ ಮಾತು ನೃಪತುಂಗ, ಶ್ರೀವಿಜಯ ಮತ್ತು 'ಕವಿರಾಜಮಾರ್ಗ' ಇವನ್ನು ಸೂಚಿಸುತ್ತಿರಬಹುದೇ ಎಂಬ ಸಂಶಯ ಮನಸ್ಸಿನಲ್ಲಿ ಸುಳಿಯುತ್ತದೆ.

ಪ್ರಸ್ತುತ ಈ ಗ್ರಂಥದ ಗೀತಿಕೆಗಳಲ್ಲಿ ಕೆಲವು, ನಾಗವರ್ಮ ಜಯಕೀರ್ತಿಗಳು ವಿವರಿಸಿರುವ ಗೀತಿಕೆಯ ಲಕ್ಷಣಕ್ಕೆ ಸರಿಯಾಗಿ ಅಳವಡುತ್ತವೆ ; ಕೆಲವು ಅಳವಡುವುದಿಲ್ಲ. ಏಕೆ ಎನ್ನುವುದು ಚಿಂತನೀಯ. ಕೆಲವು ಕಡೆ ನಿರ್ದಿಷ್ಟ ಗಣಸಂಖ್ಯೆಯ ಅಗತ್ಯಕ್ಕಿಂತ ಹೆಚ್ಚಾಗಿ ಕೆಲವು ಅಕ್ಷರಗಳು ಉಳಿದುಬಿಡುತ್ತಿರುವುದು ಗೀತಿಕೆಯನ್ನು ಒಂದು ಸಮಸ್ಯೆಯ ಛಂದೋಬಂಧವನ್ನಾಗಿ ಮಾಡಿದೆ. ಒಂದೆರಡೇ ಅಕ್ಷರಗಳು ಉಳಿಯುವಂತಿದ್ದರೆ, ಅದೊಂದು ಬಗೆಯಲ್ಲಿ ಸಮಾಧಾನವನ್ನು ಹೇಳಬಹುದು ; ಗೀತಿಕೆಯ ವೈಲಕ್ಷಣ್ಯದಲ್ಲಿ ಅಂಥವನ್ನು ಸೇರಿಸಬಹುದು. ಆದರೆ ಒಮ್ಮೊಮ್ಮೆ ದೀರ್ಘತರ ಪಾದಗಳ ಪದ್ಯಗಳು ಕೂಡ ಎದುರಾಗಿ, ಇವೇನು ದಿಟವಾಗಿ ಗೀತಿಕೆಗಳೋ ಎನ್ನುವ ಸಂಶಯವನ್ನು ಉಂಟುಮಾಡುತ್ತವೆ. ೨ ಮತ್ತು ೬ರ ಬ್ರಹ್ಮಗಣಗಳಿಗೆ ಅಪೂರ್ವವಾಗಿ ವಿಷ್ಣು (ಇಲ್ಲವೆ ರುದ್ರ)

ಬರಬಹುದು ಎಂಬ ಗ್ರಹಿಕೆಯಿಂದ ಮುನ್ನಡೆದರೆ, ತೊಡಕು ಕೆಲಮಟ್ಟಿಗೆ ಬಗೆಹರಿಯುತ್ತದೆಂದು ಹೇಳಬಹುದು. ಆದರೆ ಸಮಸ್ಯೆಯ ಪರಿಹಾರ ಈಗಿನ ಮಟ್ಟಿಗೆ ಅಶಕ್ಯ.

ಸಮಸ್ಯೆಯ ಪರಿಹಾರದ ಪ್ರಯತ್ನಗಳೇನೋ ಕೆಲವು ನಡೆದಿವೆ. ಆದರೆ ಇವು ಸಫಲವಾಗಿಲ್ಲ ಎನ್ನದೆ ವಿಧಿಯಿಲ್ಲ. ಗೀತಿಕೆಯ ಲಕ್ಷಣವನ್ನು ಪ್ರಾಚೀನ ಲಾಕ್ಷಣಿಕರು ನಿರ್ದಿಷ್ಟವಾಗಿ ನಿರೂಪಿಸಿಲ್ಲ, ಅದು ತಿಳಿಯದೆ 'ಕವಿರಾಜಮಾರ್ಗ'ದ ಗೀತಿಕೆಗಳ ಪಾಠದೋಷಗಳನ್ನು ಸರಿಪಡಿಸಿ ಲಕ್ಷಣಸಮನ್ವಯ ಮಾಡುವುದು ಕಷ್ಟವೆಂದೂ,[೮೨] 'ಕವಿರಾಜಮಾರ್ಗ'ದ ಗೀತಿಕೆಗಳಲ್ಲಿ ಪಾಠಸಂಸ್ಕರಣ ಮಾಡಿದರೆ ಲಕ್ಷಣಸಮನ್ವಯ ಸಾಧ್ಯವೆಂದೂ[೮೩] ಸಂಸ್ಕೃತ ಲಾಕ್ಷಣಿಕರ ಗುರುಭಂಗನಿಯಮದಂತೆ ಆದಿದ್ವಿಲಘುವಿಗೆ ಮಾತ್ರವಲ್ಲದೆ ನಡುವಣ ದ್ವಿಲಘುಗಳಿಗೂ ಒಂದೊಂದು ಅಂಶದ ಬೆಲೆಕೊಟ್ಟರೆ ಗೀತಿಕೆಯ ನಿದರ್ಶನಗಳನ್ನು ಲಕ್ಷಣಾನ್ವಿತ ಮಾಡಬಹುದೆಂದೂ[೮೪] ಮುಂತಾಗಿ ಅಭಿಪ್ರಾಯಗಳು ಆಗಾಗ ವ್ಯಕ್ತಪಟ್ಟಿವೆ. ನಾಗವರ್ಮ ಜಯಕೀರ್ತಿಗಳು ಹೇಳುವ ಗೀತಿಕೆಯ ಲಕ್ಷಣದಲ್ಲಿ ತೊಡಕಿಲ್ಲವೆಂದೂ 'ಕವಿರಾಜಮಾರ್ಗ'ದ ಗೀತಿಕೆಗಳಲ್ಲಿ ಪಾಠದೋಷಗಳಿವೆಯೆಂದು ತಿಳಿದು ತೋರಿದಂತೆ ತಿದ್ದುತ್ತ ಹೋಗುವುದಾಗಲಿ ಸಂಸ್ಕೃತ ಲಾಕ್ಷಣಿಕರ ಗುರುಭಂಗ ನಿಯಮದ ಅನ್ಯದೇಶ್ಯ ಲಕ್ಷಣವನ್ನು ಅಚ್ಚಕನ್ನಡ ಛಂದಸ್ಸಿನ ಪದ್ಯಬಂಧಕ್ಕೆ ಅನ್ವಯಿಸುವುದಾಗಲಿ ಸೂಕ್ತವಲ್ಲವೆಂದೂ ಇಲ್ಲಿ ಸೂಚಿಸಬಹುದು.

## ಕೃತಿಯಲ್ಲಿ ಛಂದಸ್ಸಿನ ಅಂಶಗಳು

ಇನ್ನು 'ಕವಿರಾಜಮಾರ್ಗ'ದೊಳಗೆ ಪ್ರಸ್ತಾವಗೊಂಡಿರುವ ಕೆಲವು ಛಂದಸ್ಸಿನ ಅಂಶಗಳನ್ನು ಇಲ್ಲಿ ಒಗ್ಗೂಡಿಸಬಹುದು. ಇವು ಮುಖ್ಯವಾಗಿ ಕೃತಿದೋಷ ಮತ್ತು ಶಬ್ದಾಲಂಕಾರ ವಿಷಯಗಳಿಗೆ ಸಂಬಂಧಿಸಿದವು; ಛಂದಶ್ಶಾಸ್ತ್ರದ ಸಂಜ್ಞಾಪ್ರಕರಣಕ್ಕೆ ಸಂಬಂಧಿಸಿದವು. ಯತಿವಿಚಾರ (೧–೭೧–೭೭), ಛಂದೋಭಂಗ (೧–೯೨–೯೪), ಗುರುಲಘು ದೋಷಗಳು (೧–೧೨೭–೩೦) ಮತ್ತು ಪ್ರಾಸವಿಚಾರ (೨–೩೦–೪೫; ೩–೨೩೨–೩೬ ವ.) ಇವು ಯಥಾನುಕ್ರಮವಾಗಿ ಬಂದಿರುವ ಛಂದೋವಿಷಯಗಳು. ಇವುಗಳಲ್ಲಿ ಒಂದೊಂದನ್ನೂ ಸ್ವಲ್ಪ ವಿವರದಲ್ಲಿ ಮುಂದೆ ಪರಿಶೀಲಿಸಬಹುದು.

**ಯತಿವಿಚಾರ:** ಯತಿಯ ಮೊದಲ ಪ್ರಸ್ತಾಪ 'ಕವಿರಾಜಮಾರ್ಗ'ದಲ್ಲಿಯೇ. ದಂಡಿ ಭಾಮಹರನ್ನು ಅನುಸರಿಸಿ ('ಕಾವ್ಯಾಲಂಕಾರ', ೪–೨೪ : ಯತಿಭ್ರಷ್ಟ; 'ಕಾವ್ಯಾದರ್ಶ', ೩–೧೫೨ : ಯತಿಭ್ರಷ್ಟ) ಇಲ್ಲಿ ಯತಿಭಂಗವನ್ನು ಕಾವ್ಯದೋಷಗಳಲ್ಲಿ ಒಂದಾಗಿ ಗಣಿಸಿದೆ (೧–೭೦, ೭೧). ಯತಿಯೆಂಬುದು 'ಉಸಿರುಬಿಡುವ ಸ್ಥಾನ', ಎಂದರೆ ವಾಚನದ ಸೌಕರ್ಯಕ್ಕಾಗಿ ನಡುವೆ ವಿಶ್ರಮಿಸುವ ಸ್ಥಾನ ಎಂತಲೂ ಆದು ವೃತ್ತ ಮತ್ತು ಜಾತಿಗಳ ಕೃತಿಪದ್ಧತಿಯಲ್ಲಿ ಬರುವುದೆಂತಲೂ ಅದನ್ನು ಛಂದಶ್ಶಾಸ್ತ್ರಗಳಲ್ಲಿ ಉಕ್ತವಾದ ಮಾರ್ಗದಿಂದ ತಿಳಿಯತಕ್ಕದ್ದೆಂತಲೂ ಅಲ್ಲಿ ಹೇಳಿದೆ (೧–೭೧). ಯತಿಭಂಗ ಲಕ್ಷ್ಯವಾಗಿ ಕಂದಪದ್ಯವೊಂದನ್ನು ಉದಾಹರಿಸಿ (೧–೭೨), ಅದರ ಸಂರೂಪವನ್ನು

ಮುಂದೆ ಕೊಟ್ಟಿದೆ (೧–೭೪). ಆದರೆ ಈ ತಪ್ಪು-ಸರಿ ರೂಪಗಳು ವಿಚಾರಣೀಯ. ಮೊದಲು ಯತಿನಿಯಮವನ್ನು ಪಾಲಿಸಿ, ಅದೇ ಪದ್ಯದಲ್ಲಿ ಉಳಿದ ಕಡೆ ಅದು ಕೆಡುವಂತೆ ಬರೆದರೆ ಯತಿಭಂಗವಾಗುವುದೆಂದೂ ಆದ್ದರಿಂದ ಆ ನಿಯಮವನ್ನು ಸಡಿಲಿಸದೆ, ಅಲಸದೆ ಸೂಚಿತಸ್ಥಾನದಲ್ಲಿ ಅದನ್ನು ಪಾಲಿಸಿದರೆ ಅದು ಅದೋಷವೆಂದೂ ಹೇಳಿದೆ (೧–೭೩). ಇದಾದ ಮೇಲೆ ಪೂರ್ವಾಚಾರ್ಯರು ದೋಷವನ್ನೇ ಗುಣದ ಹಾಗೆ ಮೆಚ್ಚಿ ಖಂಡಪ್ರಾಸವನ್ನು ದೇಸಿಯೆಂತಲೂ ಅತಿಶಯವಾದ್ದೆಂತಲೂ ನಿಲ್ಲಿಸಿಕೊಂಡು ಯತಿನಿಯಮವನ್ನು ಮೀರಿದರು ಎಂದಿದೆ (೧–೭೫). ಕವಿಜನರು ಯತಿ ಉಲ್ಲಂಘಿಸಿದ ಪ್ರಯೋಗಗಳನ್ನು ಮಾಡಿರುವುದು. ನೋಡಿದರೆ ಅದೂ ಚೆನ್ನಾಗಿರುವುದು ಕಂಡಿದೆ, 'ಕವಿರಾಜಮಾರ್ಗ'ದ ಕರ್ತೃವಿಗೆ. ಅಲ್ಲದೆ ಯತಿ ಬಾರದ ವೃತ್ತಪಾದದ ವಾಚನವು ಲೀಲಾಲಸ ಗತಿಯಿಂದಿರುವುದೆಂದು ಮೆಚ್ಚಿ ಸೂಚಿಸಿರುವಂತಿದೆ (೧–೭೬). ಆರ್ಯೆ, ಕಂದ ಇವುಗಳ ೨–ಳನೆಯ ಪಾದಗಳ ಅಂತ್ಯದಲ್ಲಿ ಸಾಧ್ಯವಿದ್ದ ಮಟ್ಟಿಗೆ ಯತಿಯನ್ನು ಪಾಲಿಸುವುದಾಗಲಿ ಎಂದು ಆಶಿಸಿದ್ದಾನೆ (೧–೭೭). ಕನ್ನಡ ಕಾವ್ಯಪದ್ಧತಿಯಲ್ಲಿ ಯತಿಯ ಬಳಕೆಯ ಐಚ್ಛಿಕತೆಯನ್ನು ಗಮನಿಸಿರುವ ಕವಿರಾಜಮಾರ್ಗಕಾರನು, ತನ್ನ ಒಲವು ನಿಯತಯತಿಯ ಕಡೆಗಿರುವುದನ್ನು ವ್ಯಕ್ತಮಾಡಿದ್ದಾನೆ; ತನ್ನ ರಚನೆಗಳಲ್ಲಿ, ಅದು ಕಂದವಿರಲಿ ವೃತ್ತವಿರಲಿ, ಆ ನಿಯತಯತಿಯನ್ನು ಬಲುಮಟ್ಟಿಗೆ ಪಾಲಿಸಿಯೂ ಇದ್ದಾನೆ.

ಛಂದೋಭಂಗ : ಗುರುಲಘುಗಳ ವಿನ್ಯಾಸಕ್ರಮದಲ್ಲಿ ಊನವೋ ಅತಿರೇಕವೋ ಆದಾಗ, ಎಂದರೆ ನ್ಯೂನಾಕ್ಷರವೋ ಅಧಿಕಾಕ್ಷರವೋ ಬಂದಾಗ ಅದು 'ಛಂದೋಭಂಗ' ಎನಿಸುವುದು (೧–೯೨, ೯೪). ಭಾಮಹ ದಂಡಿಗಳು ಈ ಬಗೆಯ ದೋಷವನ್ನು 'ಭಿನ್ನವೃತ್ತ'ವೆಂದು ಹೇಳಿದ್ದಾರೆ ('ಕಾವ್ಯಾಲಂಕಾರ', ೪–೨೫ ; 'ಕಾವ್ಯಾದರ್ಶ' ೩–೧೫೬)[85] ಇದಕ್ಕೆ ಒಂದು ಲಕ್ಷಣವನ್ನು 'ಕವಿರಾಜಮಾರ್ಗ'ದಲ್ಲಿ (೯೩) ತೋರಿಸಿದೆ.

ವಿಸಂಧಿ : ಹೀಗೆಯೇ ಸಂಧಿಮಾಡಿ ಹೇಳಿದರೆ ಛಂದಸ್ಸು ಕೆಡುವುದೆಂದು ತಿಳಿದು, ವ್ಯಾಕರಣಶಾಸ್ತ್ರಾನುಸಾರ ಸಂಧಿಯನ್ನು ಬಿಡಿಸಿ ಪದಪ್ರಯೋಗಮಾಡಿದರೆ ಅದು ವಿಸಂಧಿ ದೋಷವಾಗುತ್ತದೆ—ಎಂದು ಹೇಳಿ (೧–೯೫), ಅದಕ್ಕೆ ಹಾಗೆ ಪೂರ್ವಾರ್ಧದಲ್ಲಿ ದೋಷವಿರುವ ('ಭಿನ್ನ ಪ್ರಸ್ತಾರ ಭಿತ್ತಿದೋಷಾನುಗತಂ'), ಉತ್ತರಾರ್ಧದಲ್ಲಿ ಅದೋಷವಾದ ('ಶ್ಲಿಷ್ಟಾಕ್ಷರೋಪರಚಿತ') ಒಂದು ಕಂದಪದ್ಯವನ್ನು ಲಕ್ಷ್ಯವಾಗಿ ತೋರಿಸಿದೆ (೧–೯೬, ೯೭). 'ಮಾರ್ಗದೊಳುಳ್ಳ ಸಂಧಿಯಂ ಕಿಡಿಪುದುಮಾಗದು' ಎಂಬ 'ಶಬ್ದಮಣಿದರ್ಪಣ'ದ ಮಾತು (ಸೂ. ೭೨) ಇಂಥ ಸನ್ನಿವೇಶವನ್ನು ಲಕ್ಷಿಸಿಯೇ ಹೇಳಿದ್ದು. ಭಾಮಹ ದಂಡಿಗಳಲ್ಲಿಯೂ ಈ ದೋಷವನ್ನು 'ವಿಸಂಧಿ' ಎಂದಿದೆ (೪–೨೭ ; ೩–೧೫೯).

ಗುರುಲಘು ದೋಷಗಳು : 'ಛಂದೋಭಂಗ'ವು ಪಾದಗಳಲ್ಲಿ ನ್ಯೂನಾಕ್ಷರಗಳೂ ಅಧಿಕಾಕ್ಷರಗಳೂ ಘಟಿಸಿ ಉಂಟಾದರೆ, 'ಗುರುಲಘೂದಿತ ದೋಷ'ವೆಂಬುದು (೧–೧೧೩, ೧೫೯) ಪ್ರಸ್ತಾರಕ್ರಮದಲ್ಲಿ ಗುರುಲಘುಗಳ ಸ್ಥಾನೋಚಿತವಲ್ಲದ ಸಂಘಟನೆ

ಯಿಂದುಂಟಾಗುತ್ತದೆ. ಎಂದರೆ ಗುರುವಿರಬೇಕಾದೆಡೆ ಲಘುಬರುವಂತೆ, ಲಘುವಿರಬೇಕಾದ ಕಡೆ ಗುರುಬರುವಂತೆ ಅಕ್ಷರಸಂಘಟನೆಯಿರುತ್ತದೆ ಎಂದರ್ಥ. ಗುರುಸ್ಥಾನದಲ್ಲಿ ಲಘ್ವಕ್ಷರವಿದ್ದರೆ ಅದು 'ಲಾಘವ ದೋಷ', ಲಘುಸ್ಥಾನದಲ್ಲಿ ಗುರ್ವಕ್ಷರವಿದ್ದರೆ ಅದು 'ಗೌರವ ದೋಷ' (೧-೧೨೭). ಇವಕ್ಕೆ ಲಕ್ಷ್ಯಪದ್ಯಗಳನ್ನೂ ಕೊಟ್ಟಿದೆ. (೧-೧೨೯, ೧೩೦). ಲಕ್ಷಣಕ್ಕೆ ಹೊಂದಬೇಕಾದರೆ, ಈ ಪದ್ಯಗಳ ಸ್ಥಾನಕ್ರಮದಲ್ಲಿ ಅದಲುಬದಲಾಗಬೇಕಾಗಿದೆ; ಎಂದರೆ ಮಣಿಭೂಷಣವೃತ್ತವನ್ನು ಲಘುದೋಷಕ್ಕೂ ಮಂಗಳವೃತ್ತವನ್ನು ಗುರುದೋಷಕ್ಕೂ ಲಕ್ಷ್ಯವಾಗಿಟ್ಟುಕೊಳ್ಳಬೇಕು. ಪ್ರಸ್ತುತ ಈ ದೋಷವನ್ನು 'ಕವಿರಾಜಮಾರ್ಗ'ಕಾರ 'ಛಂದೋಭಂಗ'ದಿಂದ ಪ್ರತ್ಯೇಕವಾಗಿ ಎಂಬಂತೆ ನಿರೂಪಿಸಿದ್ದರೂ, ಭಾಮಹದಂಡಿಗಳು 'ಭಿನ್ನವೃತ್ತ'ದಲ್ಲಿಯೇ ಸೇರಿಸಿದ್ದಾರೆ.

ಪ್ರಾಸವಿಚಾರ: "ಪೂರ್ವಾಚಾರ್ಯರು ಕನ್ನಡ ಸಾಹಿತ್ಯದಲ್ಲಿ ಖಂಡಪ್ರಾಸ (=ಆದಿಪ್ರಾಸ)ವನ್ನು ದೇಶ್ಯಲಕ್ಷಣವೆಂದು ಗ್ರಾಹ್ಯಮಾಡಿ ಯತಿಯನ್ನು ಮೀರಿದರು" ಎಂಬುದಾಗಿ ಅಭಿಪ್ರಾಯವಾಗುವ ಮಾತನ್ನು ಹೇಳಿರುವುದು (೮-೭೫), ಕನ್ನಡಕವಿತ್ವ ಪದ್ಧತಿಯಲ್ಲಿ ಕವಿರಾಜಮಾರ್ಗಕಾರನಿಗೆ ಬಹಳ ಹಿಂದೆಯೇ ಆದಿಪ್ರಾಸಸ್ವೀಕಾರ, ಯತಿವಿಲಂಘನೆಗಳು ಜರುಗಿಹೋಗಿದ್ದುವೆಂಬುದನ್ನು ಸೂಚಿಸುತ್ತದೆ.

'ಕವಿರಾಜಮಾರ್ಗ'ದಲ್ಲಿ "ನುತ ಶಬ್ದಾಲಂಕಾರದೊಳತಿಶಯಮೀ ಕನ್ನಡಕ್ಕೆ ಸತತಂ ಪ್ರಾಸಂ" ಎಂದಿರುವುದು (೨-೩೦), ಅದು ಆರಂಭದಲ್ಲಿ ಕಾವ್ಯಶೋಭೆಗಾಗಿ ಬಳಸುತ್ತಿದ್ದ ಅಲಂಕಾರ ವಿಶೇಷವಾಗಿತ್ತೆಂದು ಭಾವಿಸಲು ಅವಕಾಶಕೊಡುತ್ತದೆ. ಕನ್ನಡ ಶಾಸನಸಾಹಿತ್ಯವನ್ನು ಪರಿಶೀಲಿಸಿದರೆ ಎಷ್ಟೋ ಹಿಂದೆಯೇ ಪ್ರಾಸ ಛಂದಸ್ಸಿನ ಅಂಶವಾಗಿ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡಿದ್ದುದು ತಿಳಿಯುತ್ತದೆ. ಕನ್ನಡದ ಬಹು ಪ್ರಾಚೀನ ಕಾಲದ ಪದ್ಯಶಾಸನಗಳಲ್ಲಿ ಪ್ರಾಸದ ಬಳಕೆಯಿರುವುದನ್ನು ಲಕ್ಷಿಸಿದೆ. ಸಂಸ್ಕೃತ ಕವಿತ್ವದಲ್ಲಿ ಒಂದು ನಿಯಮವಾಗಿ ಕಂಡುಬರದಿರುವ ಈ ಲಕ್ಷಣ ಕನ್ನಡಕವಿತ್ವದಲ್ಲಿ ಯಾವ ಪ್ರಭಾವದಿಂದಾಗಿ, ಯಾವ ಕಾಲದಲ್ಲಿ ತಲೆದೋರಿತೆಂಬುದನ್ನು ನಿಶ್ಚಿತಪಡಿಸುವುದು ಪ್ರಾಯಶಃ ಸಾಧ್ಯವಾಗಲಾರದು.

ಪ್ರಕೃತ ಗ್ರಂಥದಲ್ಲಿ ಪ್ರಾಸವನ್ನು ಕುರಿತ ಕೆಲವು ಸಂಗತಿಗಳು ದ್ವಿತೀಯ ಪರಿಚ್ಛೇದದಲ್ಲಿ ಈ ರೀತಿಯಾಗಿವೆ: ಪ್ರಾಸದಲ್ಲಿ ವಿನುತ, ಶಾಂತೋಪನತ, ವರ್ಗೋದಿತ, ಸಮೀಪಗತ, ಅನುಗತ, ಅಂತಗತ ಎಂಬ ೬ ಭೇದಗಳುಂಟು (೩೧). ಇವುಗಳಲ್ಲಿ-(i) ಅದ್ವಿತ್ವವಾದ ಪ್ರಾಸಾಕ್ಷರವು ಯಾವುದಾದರೊಂದು ನಿರ್ದಿಷ್ಟಸ್ವರದಿಂದ ಕೂಡಿ ಆಗಲಿ ಅಥವಾ ಆ ಸ್ವರ ಮತ್ತು ಅದರ ಸವರ್ಣದಿಂದ ಕೂಡಿ ಆಗಲಿ ಇದ್ದರೆ ವಿನುತ (೩೨, ೩೩); ಲಕ್ಷ್ಯಪದ್ಯದಲ್ಲಿ ಅದರ ಸ್ವರೂಪ ನೆ-ನೇ-ನೆ-ನೇ ಎಂದು ತೋರಿಸಿದೆ. (ಒಂದೇ ನಿರ್ದಿಷ್ಟಸ್ವರ ಅಥವಾ ಆ ಸ್ವರ ಮತ್ತು ಅದರ ಸವರ್ಣ ಸೇರಿದ ದ್ವಿತ್ವ ಪ್ರಾಸಾಕ್ಷರವೂ ಪ್ರಾಯಶಃ ವಿನುತವೇ). (ii) ಭಿನ್ನಸ್ವರದೊಡಗೂಡಿದ ದ್ವಿತ್ವ ಪ್ರಾಸಾಕ್ಷರ ಇದ್ದರೆ ಶಾಂತ (೩೫, ೩೬); ಲಕ್ಷ್ಯಪದ್ಯದಲ್ಲಿ ಅದರ ಸ್ವರೂಪ ತ್ತಿ-ತ್ಯ-

ತ್ರೀ–ತ್ರಿ ಎಂದು ತೋರಿಸಿದೆ. (iii) ವರ್ಗಾಕ್ಷರಗಳ ಪ್ರಾಸವೆಂಬುದು ವರ್ಗಪ್ರಾಸ (೩೭, ೩೮). ಲಕ್ಷ್ಯಪದ್ಯದಲ್ಲಿ ಅದರ ಸ್ವರೂಪ ಕ–ಖ–ಗ–ಘ ಎಂದು ತೋರಿಸಿದೆ. (iv) ಶಷಸಗಳನ್ನು ಪ್ರಾಸಾಕ್ಷರಗಳನ್ನಾಗಿ ಬಳಸಿದ್ದು ಸಮೀಪಪ್ರಾಸ (೩೯, ೪೦); ಲಕ್ಷ್ಯಪದ್ಯದಲ್ಲಿ ಅದರ ಸ್ವರೂಪ ಶ–ಷ–ಸ–ಸೆ ಎಂದು ತೋರಿಸಿದೆ. (v) ಸಮಾನಾಕ್ಷರ ಸರಣಿಗೊಂಡಂತೆ ಮೇಲಿಂದ ಮೇಲೆ ಬಂದರೆ ಅದು ಅನುಪ್ರಾಸ (೪೧, ೪೨); 'ಜನ ವಿನುತನನಘನನುಪಮ....' ಎಂದು ಮೊದಲಾಗುವ ಒಂದು ಲಕ್ಷ್ಯಪದ್ಯದಲ್ಲಿ ನಕಾರದ ಆವೃತ್ತಿಯನ್ನು ಹಾಗೆ ತೋರಿಸಿದೆ. (vi) ಪದ್ಯಪಾದದ ಅಂತ್ಯಾಕ್ಷರವು ಎಲ್ಲ ಪಾದ ಗಳಲ್ಲಿಯೂ ಒಂದೇ ಆಗಿರುವುದು ಅಂತ (ತ್ಯ) ಪ್ರಾಸ (೪೩, ೪೪); ಲಕ್ಷ್ಯಪದ್ಯದಲ್ಲಿ ತ್ತಂ–ತ್ತಂ–ತ್ತಂ–ತ್ತಂ ಎಂದು ಅಂತ್ಯಾಕ್ಷರಗಳನ್ನು ತೋರಿಸಿದೆ.

ಇವುಗಳಲ್ಲಿ ಪ್ರಾಸ (ಎಂದರೆ ವಿನುತ), ಅನುಪ್ರಾಸ ಮತ್ತು ಅಂತ್ಯಪ್ರಾಸಗಳೇ ಕನ್ನಡದಲ್ಲಿ ಅತಿಶಯವಾದುವು, ಉಳಿದವು ಎಂದರೆ ಶಾಂತ, ವರ್ಗ ಮತ್ತು ಸಮೀಪಗಳು ಪ್ರಾಸಾಭಾಸಗಳು—ಎಂಬುದು ಕವಿರಾಜಮಾರ್ಗಕಾರನ ಮತ (೪೫). ಇಲ್ಲಿ ಪ್ರಾಸಾ ಭಾಸಗಳು ಎಂದಿರುವುದರ ಅರ್ಥ, ಪ್ರಾಸಭೇದಗಳಂತೆ ತೋರುವ ಶಾಂತಾದಿ ಮೂರು ಪ್ರಾಸಗಳೂ ದಿಟವಾಗಿ ಪ್ರಾಸಭೇದಗಳಲ್ಲ, ಪ್ರಾಯಶಃ ವಿನುತವೆಂಬ ಆದಿಪ್ರಾಸದಲ್ಲೇ ಅಂತರ್ಗತವಾಗಬಹುದಾದವು ಎಂದು. ಅಲ್ಲದೆ ವರ್ಗ ಮತ್ತು ಸಮೀಪಪ್ರಾಸಗಳೆಂಬವು ಅಷ್ಟು ಪ್ರಚುರವಾದವೂ ಅಲ್ಲ. ಇನ್ನು 'ಕವಿರಾಜಮಾರ್ಗ'ದಲ್ಲಿಯೇ ತೃತೀಯ ಪರಿ ಚ್ಛೇದದ ಕೊನೆಗೆ ದ್ವಿಪ್ರಾಸ, ದ್ವಂದ್ವಪ್ರಾಸ, ತ್ರಿಪ್ರಾಸ, ಅಂತಾದಿ ಪ್ರಾಸಗಳೆಂಬ ಬೇರೆ ೪ ಬಗೆಯ ಪ್ರಾಸಗಳ ವಿಚಾರದ ಪ್ರಸ್ತಾಪವಿದೆ. ಆದರೆ ಇದು ಪ್ರಕ್ಷಿಪ್ತ ಭಾಗ ವಿರಬಹುದೆಂಬ ಅಭಿಪ್ರಾಯವಿರುವುದರಿಂದ ಇಲ್ಲಿ ಅದನ್ನು ಕುರಿತಿಲ್ಲ.

ಕನ್ನಡ ಛಂದೋಗ್ರಂಥಗಳ ಅಭ್ಯಾಸದಲ್ಲಿ 'ಕವಿರಾಜಮಾರ್ಗ'ವನ್ನು ಅವಶ್ಯವಾಗಿ ಲಕ್ಷಿಸಬೇಕು. ಮೊದಲ ಸಲ ಛಂದಸ್ಸಿನ ಸಂಜ್ಞಾಪ್ರಕರಣಕ್ಕೆ ಸಂಬಂಧಿಸಿದ ಕೆಲವಂಶ ಗಳನ್ನು ಇಲ್ಲಿ ಪ್ರಸ್ತಾಪಿಸಿರುವುದು ಕಾಣುತ್ತದೆ. ಕೆಲವು ಛಂದಸ್ಸುಗಳ ಲಕ್ಷ್ಯಪರಿಶೀಲನೆಯ ದೃಷ್ಟಿಯಿಂದಲೂ ಅದೊಂದು ಕುತೂಹಲಕರ ಆಕರಗ್ರಂಥವಾಗಿದೆ. ಭಾಮಹ ದಂಡಿ ಗಳ ನಿರೂಪಣೆಯಿಂದ ಭಿನ್ನವಾದ, ಕನ್ನಡ ಕವಿತ್ವಪದ್ಧತಿಯ ನೇರ ಪರಿಶೀಲನದಿಂದ ಲಭ್ಯವಾದ ಛಂದೋವಿಚಾರಗಳೂ ಇಲ್ಲಿರುವುದರಿಂದ, ಆಯಾ ಗ್ರಂಥಭಾಗದ ಗಮನಿಕೆ ಗಳೂ ಕಾಣಿಕೆಗಳೂ ಬೆಲೆಯುಳ್ಳವಾಗಿವೆ.

## ಅಲಂಕಾರ ವಿಚಾರಗಳು

### ಪ್ರವೇಶ

'ಕವಿರಾಜಮಾರ್ಗ' "ಕನ್ನಡಿಗರ ಕೈಪಿಡಿ"೬೬; "ಅದರ ಬೆಲೆಯನ್ನು ಚಾರಿತ್ರಿಕ, ಲಾಕ್ಷಣಿಕ ಇಲ್ಲವೆ ವಿಮರ್ಶವಿಷಯಕ ಹಾಗೂ ವಿವೇಕಪರ ಎಂದು ಮೂರು ಅಂಗಗಳಲ್ಲಿ

ಅರಿತುಕೊಳ್ಳಬಹುದು."[87] ಆದರೂ ಮುಖ್ಯವಾಗಿ ಅದೊಂದು ಲಕ್ಷಣಗ್ರಂಥ; "ಕನ್ನಡದಲ್ಲಿ ಕಾವ್ಯಮೀಮಾಂಸೆಯ ಪರಂಪರೆಗೆ ತಲಕಾವೇರಿ."[88]

'ಕವಿರಾಜಮಾರ್ಗ' ಪೂರ್ವದಲ್ಲಿ ಅಲಂಕಾರ ಗ್ರಂಥಗಳೂ ವ್ಯಾಕರಣ ಗ್ರಂಥಗಳೂ ಇದ್ದುವೆಂದು ಗೋವಿಂದ ಪೈ ಹೇಳುತ್ತಾರೆ. ಆದರೆ ಮುಳಿಯ ತಿಮ್ಮಪ್ಪಯ್ಯನವರು "ನೆಲಸಿದ ಕಾವ್ಯಂ ಕಾವ್ಯಕ್ಕೆ ಲಕ್ಷಣಂ" (೧-೪೮) ಎಂಬ 'ಕವಿರಾಜಮಾರ್ಗ'ದ ಮಾತನ್ನೆ ಆಧರಿಸಿ, 'ಕನ್ನಡದಲ್ಲಿ ಆವರೆಗೆ ಲಕ್ಷಣಗ್ರಂಥಗಳೇ ಇದ್ದಿಲ್ಲ' ಎಂದು ವಾದಿಸುತ್ತಾರೆ. "ಆಗ ಕನ್ನಡ ಸಾಹಿತ್ಯದಲ್ಲಿ ಲಕ್ಷಣಗ್ರಂಥದ ಅಭಾವವೇ ಹೊಳೆಯುತ್ತಿದ್ದುದು ವಿಶದವಾಗುತ್ತದೆ"[89] ಎಂಬುದು ಅವರ ಸ್ಪಷ್ಟೋಕ್ತಿ. 'ಚಿರಂತನಾಚಾರ್ಯರ್ಕಳ್', 'ಆಗಮಕೋವಿದ ನಿಗದಿತ ಮಾರ್ಗ', 'ಪೂರ್ವಾಚಾರ್ಯರ್', 'ಪೂರ್ವಶಾಸ್ತ್ರವಿಧಿ' ಮುಂತಾದ ಮಾತುಗಳು 'ಕವಿರಾಜಮಾರ್ಗ'ದಲ್ಲಿ ಅಲ್ಲಲ್ಲಿ ಕಂಡುಬರುತ್ತವೆ. "ಆದ್ದರಿಂದ ಕವಿರಾಜಮಾರ್ಗಕ್ಕೂ ಪೂರ್ವದಲ್ಲಿ ಕನ್ನಡ ಕಾವ್ಯಲಕ್ಷಣಜ್ಞರೂ ಗುರುಶಿಷ್ಯಪರಂಪರೆಯಿಂದ ಸಾಗಿಬಂದ ಕಾವ್ಯಲಕ್ಷಣ ಸಂಪ್ರದಾಯವೂ ಇದ್ದಿರಬಹುದೆಂದು ಊಹಿಸಲು ಅವಕಾಶವಿದೆ....ಆದರೆ ಇಷ್ಟರಿಂದಲೇ ಕನ್ನಡದಲ್ಲಿ ಲಕ್ಷಣಗ್ರಂಥ ಇದ್ದಿತೆಂದು ಊಹಿಸುವುದು ನಿರಾಧಾರವೆನಿಸುವುದು"[90] ಎಂದು ಎಂ. ವಿ. ಸೀತಾರಾಮಯ್ಯನವರು ಹೇಳುತ್ತಾರೆ. ಪೂರ್ವಶಾಸ್ತ್ರ ಇಲ್ಲವೆ ಪೂರ್ವಾಚಾರ್ಯರ ಉಲ್ಲೇಖ ಬಂದಾಗ ಅದು ಸಂಸ್ಕೃತ ಲಾಕ್ಷಣಿಕರನ್ನು ಕುರಿತಿದೆ ಎಂದು ತಿಳಿಯುವುದು ವಿಹಿತ—ಎಂಬುದು ಅವರ ಅಭಿಪ್ರಾಯ.

'ಕವಿರಾಜಮಾರ್ಗ' ಹುಟ್ಟಿದ್ದೇತಕ್ಕೆ, ಅದರ ಹಿನ್ನೆಲೆಯೇನು, ಅದರಿಂದ ಕನ್ನಡ ಸಾಹಿತ್ಯಕ್ಕುಂಟಾದ ಪ್ರಯೋಜನವೇನು ಎಂಬುದನ್ನು ಕುರಿತು ವಿದ್ವಾಂಸರು ವಿವೇಚಿಸಿದ್ದಾರೆ. ಈ ದೃಷ್ಟಿಯಿಂದ 'ಕವಿರಾಜಮಾರ್ಗ'ದ ಈ ಪದ್ಯಗಳು ಬಹಳ ಗಮನಾರ್ಹವಾಗಿವೆ:

ದೋಸಮಿನಿತೆಂದು ಬಗೆದು
ಧ್ಯಾಸಿಸಿ ತಱಿಸುದು ಕನ್ನಡಂಗಳೊಳೆಂದುಂ
ವಾಸುಗಿಯುಮಱಿಯಲಾಱದೆ
ಬೇಸಱುಗುಂ ದೇಶಿ ಬೇಱೆವೇಱಪ್ಪುದಱಿಂ॥

ಅಂತುಂ ಪುರಾಣಕವಿಗಳ
ಸಂತ[ತ]ಗತ ಮಾರ್ಗಗದಿತ ದೋಷಂಗಳುಮಂ
ಚಿಂತಿಸಿ ಮತ್ತೆನ್ನಱಿವುದು
ಮಂ ತಱಿಸ [ಲೆ] ಬುಧಜನಕ್ಕೆ ಕೆಲವಂ ಪೇೞ್ವೆಂ॥

ನೆಲಸಿದ ಕಾವ್ಯಂ ಕಾವ್ಯ
ಕ್ಕೆ ಲಕ್ಷಣಂ ಸತತಮೆಂದೆ ಪೞಗನ್ನಡಮಂ
ಪೊಲಗೆಡಿಸಿ ನುಡಿವರಾಗನು
ಬಲಹೀನರ್ ದೇಸಿಯಲ್ಲದೆಂದಱಿದಿರ್ದುಂ ॥ (೧-೪೬-೪೮)

'ಕವಿರಾಜಮಾರ್ಗ'ಕ್ಕೆ ಹಿಂದೆ ಮಾರ್ಗಾನುಸಾರಿಯಾದ ಗದ್ಯಸಾಹಿತ್ಯ ಮತ್ತು ದೇಶ್ಯ

ವಾದ ಪದ್ಯಸಾಹಿತ್ಯ ಇದ್ದಿತೆಂದೂ ಮಾರ್ಗಾನುಸಾರವಾದ ಪದ್ಯ ಕಾವ್ಯರಚನೆಗೆ ಮಾರ್ಗ ತೋರಿಸಲೆಂದು ಮೊದಲನೆಯ ಲಕ್ಷಣಗ್ರಂಥವಾಗಿ ಕವಿರಾಜಮಾರ್ಗದ ಉದಯವಾಯಿ ತೆಂದೂ' ಮುಳಿಯ ತಿಮ್ಮಪ್ಪಯ್ಯನವರ ವಾದ.[91] ಅವರ ಮಾತುಗಳನ್ನೆ ನೋಡಬಹುದು :

"ಕವಿರಾಜಮಾರ್ಗಕಾರನ ಕಾಲದಲ್ಲಿ ಮಾರ್ಗಕಾವ್ಯಗಳು ನೆಲಸಿದ್ದಂತೆ ತೋರುವುದೇ ಇಲ್ಲ, ಅವನಾಡುವ ಕನ್ನಡ ಕಾವ್ಯಗಳೆಂದರೆ, ಹಿಂದಿನ ಶ್ರೀವಿಜಯಾದಿಗಳಿಂದ ರಚಿತ ವಾದ 'ಬೆದಂಡೆ', 'ಚತ್ತಾಣ' ಎಂಬ ಭೇದದ ದೇಸಿಗಬ್ಬಗಳು ಮಾತ್ರವೇ."[91]

"ಕನ್ನಡದ ಮಾರ್ಗಸಾಹಿತ್ಯ ಸಂಸ್ಕೃತಿಗೆ ಆಧಾರವಾದ ಮೇಲ್ತರಗತಿಯ ಲಕ್ಷಣಗ್ರಂಥ ಗಳು ಆಗ ಇದ್ದಿಲ್ಲವೆಂಬುದು ವಿದಿತ....ಲಕ್ಷ್ಯ ಗ್ರಂಥಗಳಾದರೂ ಇದ್ದವುಗಳೆಂದರೆ ದೇಸಿ ಗಬ್ಬಕ್ಕೆ ಸೇರಿದವುಗಳು. ಈ ಸಂದರ್ಭದಲ್ಲಿ 'ದೇಸಿ', 'ಮಾರ್ಗ' ಎಂಬ ಕಾವ್ಯಭೇದಗಳ ಸ್ವರೂಪವನ್ನು ಒಂದಿಷ್ಟಾದರೂ ಸೂಚಿಸಿಯೇ ಮುಂಬರಿಯಬೇಕಾಗಿದೆ.

ದೇಶ್ಯ ಅಥವಾ ದೇಶಿ ಎಂಬ ಪದವೇ 'ದೇಸಿ' ಎಂದಾಗಿದೆ. ಯಾವ ಲಕ್ಷಣಕ್ಕೂ ಒಳಗಾಗದೆ, ದೇಸಿಗಬ್ಬಿಗರ ಪ್ರತಿಭಾಬಲ ಮಾತ್ರದಿಂದ ಪದ, ಹಾಡುಗಳ ರೂಪದಲ್ಲಿ ಉದಯಿಸಿದುದು ಎಂದು ಇದರ ತಾತ್ಪರ್ಯವಿರಬೇಕು. ಛಂದಸ್ಸು, ಗುಣಾಲಂಕಾರಾದಿ ಲಕ್ಷಣ ಸಂಸ್ಕಾರವನ್ನೊಳಗೊಂಡ ಕವಿಗಳ ಪ್ರತಿಭೆಯಿಂದುಕ್ಕಿದುದು ಮಾರ್ಗಸಾಹಿತ್ಯ. ಈ ಮಾರ್ಗಸಾಹಿತ್ಯಕ್ಕಾದರೂ ಮೊತ್ತಮೊದಲು, ಇತರ ಲಾಕ್ಷಣಿಕರು ಬರೆದ ಲಕ್ಷಣ ಗ್ರಂಥಗಳ ಆಧಾರವಿರಲಿಲ್ಲ."[92]

"ಕನ್ನಡ ವಾಙ್ಮಯದೊಳಗೆ ಆಗಿನ ಕಾಲದಲ್ಲಿ ಗದ್ಯಭಾಗವು ಬಹುಶಃ ಮಾರ್ಗಾನು ಸಾರವಾಗಿ ವೃದ್ಧಿಂಗತವಾಗಿತ್ತೆಂಬ ಗ್ರಂಥಕಾರನ ಭಾವನೆಯನ್ನು ಹಿಂದೆಯೇ ಸೂಚಿ ಸಿದ್ದೇವೆ. ಆದರೂ ಕನ್ನಡಸಾಹಿತ್ಯವು ಸರ್ವಾತ್ಮನಾ ಏಳಿಗೆಗೊಳ್ಳಬೇಕಾದರೆ ಮಾರ್ಗಾನು ಸಾರವಾಗಿ ಕನ್ನಡ ಪದ್ಯಕಾವ್ಯ ಸಂಸ್ಕೃತಿ ನಾಡಿನಲ್ಲಿ ಬೇರೂರಬೇಕಾಯಿತು. ಅದಕ್ಕಾ ಗಿಯೇ ಈ ಲಕ್ಷಣಗ್ರಂಥದ ಉದಯವಾದುದು....ಅಂಥ ಮಾರ್ಗ ಕಾವ್ಯರಚನೆಗೆ ಶಿಲ್ಪ ಶಾಸ್ತ್ರಸಮಾನವಾದ ಈ ಲಕ್ಷಣಗ್ರಂಥವನ್ನು ಮೊತ್ತಮೊದಲು ನಿರ್ಮಿಸಿದ ನಮ್ಮ ಕನ್ನಡದ ವಾಗಧಿಪನನ್ನೂ ಅಂಥವನನ್ನೇ ಈ ಮಹಾಕಾರ್ಯಕ್ಕೆ ಆರಿಸಿ ಕನ್ನಡ ಸಾಹಿತ್ಯೋದ್ಧಾರಕ ನಾದ ವಿವೇಕ ಬೃಹಸ್ಪತಿ ಉದಾರ ನೃಪತುಂಗದೇವನನ್ನೂ ಕನ್ನಡ ಸಾಹಿತ್ಯವು ಮರೆಯ ಲಾದೀತೆ ?"[93]

ಆರನೆಯ ಶತಮಾನದಿಂದ ಒಬ್ಬೊಬ್ಬರು ಕವಿಗಳು ಕನ್ನಡದಲ್ಲಿ ಕವಿತ್ವ ಮಾಡು ವುದಕ್ಕೆ ಆರಂಭಿಸಿದರೆಂದೂ ಅವರ ಗ್ರಂಥಗಳು ಅಷ್ಟು ದೊಡ್ಡವಾಗಿಯೂ ಪ್ರೌಢ ವಾಗಿಯೂ ಇರಲಿಲ್ಲವೆಂದೂ ನೃಪತುಂಗನು ಕವಿಶಿಕ್ಷಣಕ್ಕಾಗಿ ಸಂಸ್ಕೃತದಿಂದ ದಂಡಿಯ ಅಲಂಕಾರವನ್ನು ಕನ್ನಡಕ್ಕೆ ಪರಿವರ್ತಿಸಿದನೆಂದೂ ಬಿ. ಎಂ. ಶ್ರೀಕಂಠಯ್ಯನವರು ಮಾಡಿ ರುವ ಊಹೆ[94] ತಿಮ್ಮಪ್ಪಯ್ಯನವರ ವಾದಕ್ಕೆ ಪೋಷಕವಾಗಿದೆ. "ನೃಪತುಂಗನ ಕಾಲಕ್ಕೆ ಸಂಸ್ಕೃತ ಸಾಹಿತ್ಯವು ಪರಮಪದವನ್ನು ಮುಟ್ಟಿ ಕೆಳಮುಖವಾಗಿ ತಿರುಗಿದ್ದಿತು....ಈ ಸಾಹಿತ್ಯದ ಶಿಕ್ಷಣದ ಮತ್ತು ಹಿಮ್ಮೇಳದ ಬಲದಿಂದ ಕನ್ನಡದ ಚಿಕ್ಕ ಹೆಣ್ಣು ಕುಣಿಯು

ವುದಕ್ಕೆ ಹೊರಟು, ಆಗಾಗ್ಗೆ ತಪ್ಪು ಹೆಜ್ಜೆಗಳನ್ನು ಹಾಕುತ್ತಿದ್ದಳು. ನೃಪತುಂಗನೂ ಪಂಪನೂ ಆಕೆಯನ್ನು ಪ್ರೌಢದಶೆಗೆ ತಂದರು"[95] ಎಂದೂ 'ಶ್ರೀ'ಯವರು ಹೇಳುತ್ತಾರೆ.

ಎಂ. ವಿ. ಸೀ. ಅವರು ತಿಮ್ಮಪ್ಪಯ್ಯನವರ ವಾದವನ್ನೆ ಬೆಂಬಲಿಸಿದ್ದಾರೆ: "ನಿರ್ದುಷ್ಟ ಭಾಷಾ ಪ್ರಯೋಗಗಳಿಂದ ಕೂಡಿದ ಅಭಿಜಾತಮಾರ್ಗ ಕಾವ್ಯರಚನೆಗೆ ತಕ್ಕ ಲಕ್ಷ್ಯ ಲಕ್ಷಣ ನಿರ್ದಿಷ್ಟವಾದ 'ಮಾರ್ಗ' ನೇರ್ಪಟ್ಟಿರಲಿಲ್ಲವೆಂದು ಕಾಣುತ್ತದೆ. ಅದನ್ನು ಕಲ್ಪಿಸಿದ ಶ್ರೇಯಸ್ಸು ಶ್ರೀವಿಜಯನಿಗೂ ಅವನಿಗೆ ಸ್ಫೂರ್ತಿಯನ್ನೂ ಆಶ್ರಯವನ್ನೂ ಪಾಂಡಿತ್ಯದ ನೆರವನ್ನೂ ನೀಡಿದ ನೃಪತುಂಗನಿಗೂ ಸಲ್ಲುತ್ತದೆ[96] ಎಂದೂ, "ಅವನ ಕಾಲಕ್ಕೆ ದೇಶಿ ಬೇರೆಬೇರೆಯಾಗಿದ್ದು ಕನ್ನಡಂಗಳಲ್ಲಿ ವಾಸುಕಿಯೂ ಅರಿಯಲಾರದೆ ಬೇಸರಿಸುವ ಮಟ್ಟಿಗೆ ದೋಷಗಳು ತುಂಬಿಕೊಂಡಿದ್ದುವು; ಸಂಸ್ಕೃತ ಪ್ರಾಕೃತಗಳಲ್ಲಿದ್ದಂತೆ ಕನ್ನಡಕ್ಕೆ ಲಕ್ಷ್ಯ ಲಕ್ಷಣಗಳಿರಲಿಲ್ಲ; ನೆಲಸಿದ್ದ ದೇಸಿಗಬ್ಬ 'ಮಾರ್ಗಕಾವ್ಯ'ಕ್ಕೆ ಮೇಲ್ಪಂಕ್ತಿಯಾಗುವಂತಿರಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಕನ್ನಡದಲ್ಲಿ ಕಾವ್ಯನಿರ್ಮಾಣಕ್ಕೆ ಹೆದ್ದಾರಿಯನ್ನು ಹಾಕಬೇಕೆಂಬ ಘನೋದ್ದೇಶದಿಂದ ಶ್ರೀವಿಜಯನು 'ಪುರಾಣ ಕವಿಗಳ ಸಂತತಗತ ಮಾರ್ಗಗದಿತ ದೋಷಂಗಳುಮಂ ಚಿಂತಿಸಿ ಮತ್ತೆನ್ನಱಿವುದುಮಂ ಪೇೞ್ವೆಂ' ಎಂದು ನಿಶ್ಚಯಿಸಿ, ದೋಷಪ್ರಕರಣಕ್ಕೆ ಆದ್ಯತೆಯನ್ನೂ ಅಗ್ರಮಾನ್ಯತೆಯನ್ನೂ ಕೊಟ್ಟು ಅದನ್ನು ವಿಸ್ತಾರವಾಗಿ ಪ್ರತಿಪಾದಿಸಿರುವುದು ಕನ್ನಡ ಕಾವ್ಯಮೀಮಾಂಸೆಯ ಬೆಳವಣಿಗೆಗೆ, ಕನ್ನಡ ವ್ಯಾಕರಣ ನಿರ್ಮಾಣಕ್ಕೆ, ನಿರ್ದುಷ್ಟ ಕಾವ್ಯನಿರ್ಮಿತಿಗೆ ಅವನು ಹಾಕಿದ ಭದ್ರವಾದ ಅಡಿಪಾಯ"[97] ಎಂದೂ ಅವರು ಹೇಳುತ್ತಾರೆ.

'ಕವಿರಾಜಮಾರ್ಗ' ಎಂಬ ಸಮಾಸಪದದ ಅರ್ಥವನ್ನು ಇಲ್ಲಿ ಲಕ್ಷಿಸಬೇಕು. ಇದನ್ನು ಮೂರು ರೀತಿಯಲ್ಲಿ ಬಿಡಿಸಬಹುದು: (೧) ಕವಿಗಳ ರಾಜಮಾರ್ಗ (೨) ಕವಿರಾಜರ ಮಾರ್ಗ (೩) ಕವಿರಾಜನ ಮಾರ್ಗ. ಇವುಗಳಲ್ಲಿ ಒಂದನೆಯ ಮತ್ತು ಎರಡನೆಯ ಅರ್ಥಗಳೇ ಕರ್ತೃವಿವಕ್ಷಿತವೆನ್ನಬಹುದು; ಅದರಲ್ಲೂ ಎರಡನೆಯ ಅರ್ಥವೇ ಪ್ರಧಾನ. 'ಕವಿರಾಜಮಾರ್ಗ'ವನ್ನು ಜೆ. ಎಫ್. ಫ್ಲೀಟರು 'Path of Poets Laureate' ಎಂದು ಭಾಷಾಂತರಿಸಿರುವುದನ್ನು ನೆನೆಯಬಹುದು; 'The Path of excellent Poets' ಎಂದು ಆರ್. ನರಸಿಂಹಾಚಾರ್ಯರು ಅರ್ಥೈಸಿದ್ದಾರೆ. 'ಕವಿರಾಜ' ಎಂದರೆ ಮಹಾಕವಿ; ಅದಕ್ಕೆ ಸಮಾನಾರ್ಥಕವಾಗಿ ಪರಮಕವೀಶ್ವರ, ಕವಿವೃಷಭ, ಪರಮಕವಿವೃಷಭ, ಪರಮಕವಿಪ್ರಧಾನ, ಕವೀಶ, ಅಮಳಕವಿ ವೃಷಭ ಮುಂತಾದ ಪದಗಳನ್ನೂ 'ಕವಿರಾಜಮಾರ್ಗ'ಕಾರ ಪ್ರಯೋಗಿಸಿದ್ದಾನೆ. ಆದ್ದರಿಂದ, ಕವಿರಾಜಮಾರ್ಗವೆಂದರೆ ಮಹಾಕವಿಗಳು ಅನುಸರಿಸಬೇಕಾದ ಮಾರ್ಗ; ಅನುಸರಿಸಿದ ಮಾರ್ಗವೆಂದೂ ಇಟ್ಟುಕೊಳ್ಳಬಹುದು. ಕವಿಗಳಿಗೆ ನಿರ್ಮಿಸಿದ ರಾಜಮಾರ್ಗ ಎಂಬ ಅರ್ಥವೂ ಸಂಗತವಾಗುತ್ತದೆ. ಅಂತೂ "ಶ್ರೀವಿಜಯನು 'ಕವೀಶ್ವರರು' ಅಥವಾ 'ಕವಿಶ್ರೇಷ್ಠರು' ಎಂಬರ್ಥದಲ್ಲಿ 'ಕವಿರಾಜ'ರನ್ನು ಉದ್ದೇಶಿಸಿ ತನ್ನ ಲಕ್ಷಣಗ್ರಂಥವನ್ನು ಬರೆದಿದ್ದಾನೆನ್ನುವುದು ಸ್ಪಷ್ಟವಾಗಿದೆ. ಕವಿಗಳು ಕವೀಶ್ವರರೆನ್ನಿಸಿಕೊಳ್ಳಬೇಕಾದರೆ 'ಮಾರ್ಗ' ಕಾವ್ಯಗಳನ್ನು ರಚಿಸಬೇಕೆಂದು ಅವನ

ಆಶಯ. ಈ 'ಗ್ರಂಥವನ್ನು ನಿರ್ಮಿಸಿದುದು ಮಾರ್ಗೀಯ ವಿದ್ವತ್ಕವಿಗಳ ಮೀಸಲಾದ ಪ್ರಯೋಜನಕ್ಕಾಗಿ. ಆ ಮಟ್ಟಕ್ಕೇರದ ಕೆಳಗಿನ ತರಗತಿಯ ದೇಸಿಗಬ್ಬಿಗರನ್ನು ಗುರಿಯಿಟ್ಟು ಇದು ರಚಿತವಾದುದಲ್ಲ' ಎಂಬ ಮುಳಿಯ ತಿಮ್ಮಪ್ಪಯ್ಯನವರ ಮಾತು ಇದೇ ಅಭಿಪ್ರಾಯವನ್ನು ಹೊಂದಿದೆ."[98] "ದೂಷ್ಯವಲ್ಲದುದೆ ಮಾರ್ಗವೆಂದು ಈ ಗ್ರಂಥದಲ್ಲೇ ಉಕ್ತವಾಗಿದೆ....ಪುರಾತನ ಮಹಾಕವಿಗಳಲ್ಲಿ ಪ್ರಸಿದ್ಧವಾದ ನಿರ್ದುಷ್ಟ ಕಾವ್ಯಸ್ವರೂಪವೇ ಗ್ರಂಥದ ಪ್ರತಿಪಾದ್ಯ ವಿಷಯವೆಂಬುದು 'ಕವಿರಾಜಮಾರ್ಗ'ದ ಹೆಸರಿನಿಂದಲೇ ಪ್ರಕಟವಾಗುತ್ತದೆ."[99] "ಮಾರ್ಗವು ಪಂಡಿತ ಪ್ರಸಿದ್ಧ, ಗೌರವಾಸ್ಪದ ಹಾಗೂ ಆದರ್ಶ ಪರಂಪರೆ; ದೇಸಿಯು ಜಾನಪದ, ಪ್ರಚಲಿತ, ಕೆಳಮಟ್ಟದ, ಹಾಡಲು ಯೋಗ್ಯವಾದ ಕಾವ್ಯಜಾತಿ. ಸಂಸ್ಕೃತ ಮಹಾಕವಿಗಳು ಬಳಸಿದ 'ಮಾರ್ಗ'ವನ್ನು ವಿವರಿಸುವ ವಿವಕ್ಷೆಯೇ ನೃಪತುಂಗನದೆಂಬುದನ್ನು ಅವನ ಗ್ರಂಥದ ಹೆಸರೇ ಸೂಚಿಸುತ್ತದೆ. ಸಂಗೀತದಲ್ಲೂ 'ಮಾರ್ಗ'–'ದೇಸಿ'ಗಳ ವಿಭಾಗವಿರುವುದನ್ನು ನೆನೆಯಬೇಕು."[100]

'ಕವಿರಾಜಮಾರ್ಗ'ದ ಕಾಲದಲ್ಲಿ ಕನ್ನಡ ಭಾಷೆ ಸಾಹಿತ್ಯಗಳು ಹೇಗೆ ಅವ್ಯವಸ್ಥಿತವಾಗಿದ್ದುವೆಂಬುದನ್ನೂ ತನ್ನ ಕೃತಿಯ ಮೂಲಕ ಮಾರ್ಗಕಾರ ಆ ಪರಿಸ್ಥಿತಿಯನ್ನು ಹೇಗೆ ಸುಧಾರಿಸಿದನೆಂಬುದನ್ನೂ ಎಂ.ವಿ.ಸೀ. ಹೀಗೆ ವಿವರಿಸುತ್ತಾರೆ :

"ಕವಿರಾಜಮಾರ್ಗ ರಚನೆಯ ಕಾಲದಲ್ಲಿ 'ಆಗಮು ಬಲಹೀನ'ರಾದ ಕವಿಗಳು ಕಾವ್ಯರಚನೆಗೆ ತೊಡಗಿ, ಕಾವ್ಯಮಾರ್ಗ ಗುರಿತಪ್ಪಿತ್ತು; ದೇಸಿ ಮಾರ್ಗಗಳ ಸ್ಪಷ್ಟ ಕಲ್ಪನೆ ಕವಿಗಳ ದೃಷ್ಟಿಪಥದಿಂದ ಜಾರಿಹೋಗಿತ್ತು....ಪ್ರಾದೇಶಿಕ ಭಾಷಾ ಭೇದಗಳು ಕಾರಣವಾಗಿ ಹಲವು ಬಗೆಯ ದೇಸಿಗಳಲ್ಲಿ ಅಸಂಖ್ಯಾತ ದೋಷಗಳು ತುಂಬಿಕೊಂಡಿದ್ದುವು. ಎಲ್ಲ ಪ್ರದೇಶಗಳಿಗೂ ಸಮಾನವಾದ ಹಳಗನ್ನಡ ದೇಸಿಯಲ್ಲ ಎಂಬ ಅರಿವಿದ್ದರೂ ಅವ್ಯುತ್ಪನ್ನರು ರೂಢಿಗತವಾಗಿದ್ದ ಕಾವ್ಯವನ್ನೆ (ಲಕ್ಷ್ಯವನ್ನೆ) ಲಕ್ಷಣವೆಂದು ಭಾವಿಸಿ, ಹಳಗನ್ನಡವನ್ನು ಹೊಲಗೆಡಿಸುತ್ತಿದ್ದರು."[101]

"'ನೆಲಸಿದ ಕಾವ್ಯಂ ಕಾವ್ಯಕ್ಕೆ ಲಕ್ಷಣಂ ಸತತಂ' ಎಂದು ಕಾವ್ಯವನ್ನು ರಚಿಸಿದರೆ ಅದು 'ಮಾರ್ಗ'ದಿಂದಲೂ ಭ್ರಷ್ಟ; ದೇಸಿಯೂ ಆಗದು. ಒಂದು ಕಡೆ ಮಾರ್ಗದಲ್ಲಿ ನಡೆದ 'ಪುರಾಣಕವಿ'ಗಳ ರಚನೆಗಳೂ ದೋಷಪೂರ್ಣವಾಗಿದ್ದುವು; ಇನ್ನೊಂದು ಕಡೆ ಎಲ್ಲರಿಗೂ ಅರ್ಥವಾಗುವಂತಹ, ಎಲ್ಲ ಕವಿಗಳೂ ಬಳಸಬಹುದಾದಂತಹ ಕಟ್ಟಿಗೊಳಪಟ್ಟ ಕನ್ನಡ ನುಡಿ 'ದೇಸಿ' ಇರಲಿಲ್ಲ....ಕನ್ನಡ ಕಾವ್ಯರಚನೆಗೆ ಒಂದು ಕಟ್ಟುಪಾಡು ಬೇಕಾಗಿದ್ದಿತು."[102]

"ಕನ್ನಡದಲ್ಲಿ ಲಕ್ಷಣಗ್ರಂಥಗಳಿರಲಿಲ್ಲ. ಶ್ರೇಷ್ಠವಾದ ಕಾವ್ಯವನ್ನು (ಮಹಾಕಾವ್ಯವನ್ನು) ರಚಿಸಿ ಕವಿಶ್ರೇಷ್ಠರೆನಿಸಿಕೊಳ್ಳಬೇಕಾದರೆ ಕವಿಗಳು ನಡೆಯಬೇಕಾಗಿದ್ದ ಒಂದು ಹೆದ್ದಾರಿಯನ್ನು (ರಾಜಮಾರ್ಗವನ್ನು) ಹಾಕಬೇಕಾದ ಆಗತ್ಯವಿತ್ತು. ಸಂಸ್ಕೃತದಲ್ಲೇನೊ ಲಕ್ಷ್ಯ ಲಕ್ಷಣಸಮನ್ವಿತವಾದ 'ಕಾವ್ಯಮಾರ್ಗ'ವೇರ್ಪಟ್ಟಿತ್ತು; ಕನ್ನಡಕ್ಕೆ ಕವಿಗಳು ತುಳಿದ ಅಂಥದೊಂದು ಸಿದ್ಧಮಾರ್ಗವಿರಲಿಲ್ಲ. ಕನ್ನಡ ಕವಿಗಳು ಹೇಗೆ ಕಾವ್ಯರಚನೆ ಮಾಡಬೇಕು?

....ಕವಿರಾಜಮಾರ್ಗಕಾರನು....ಕನ್ನಡ ಕವಿಗಳಿಗೆ ಮೊತ್ತಮೊದಲಿಗೆ ಮಾರ್ಗಕಲ್ಪನೆ ಮಾಡಿಕೊಟ್ಟನು....ಕವಿಗಳು ಅನುಸರಿಸಬೇಕಾದ ಮಾರ್ಗ ಇದು, ಇದು ಅಮಾರ್ಗ ಎಂದು ಹೆಜ್ಜೆಹೆಜ್ಜೆಗೂ ನಿರ್ದೇಶಿಸುತ್ತಾ ಹೋಗುತ್ತಾನೆ. ಇದು ನೃಪತುಂಗನಿಗೆ ಒಪ್ಪಿತವಾದ ಕಾವ್ಯಮಾರ್ಗ; 'ಕವೀಶ್ವರ' ನೃಪತುಂಗದೇವ ಮಾರ್ಗ; ಕವೀಶ್ವರರಾಗಬೇಕಾದವರು, ಕವಿರಾಜರು ಅನುಸರಿಸಬೇಕಾದ ಮಾರ್ಗ. ಈ ಮಾರ್ಗವನ್ನು ತಿಳಿಯ ಹೇಳುವ ಗ್ರಂಥ ಕವಿರಾಜಮಾರ್ಗ; ಇದನ್ನು ರಚಿಸಿದಾತ ಬರಿಯ ಶಾಸ್ತ್ರಕಾರನಲ್ಲ; ಕವಿ; ಕವೀಶ್ವರ; ಲಕ್ಷ್ಯಲಕ್ಷಣಾಚಾರ್ಯ ('ಪ್ರತಿವಿತರ್ಕಿತ ಲಕ್ಷಣಲಕ್ಷ್ಯನ್', ೩.೨೧೯). ಹೇಗೂ ಇದು 'ಕವಿರಾಜಮಾರ್ಗ'ವೇ! ಕೃತಿಕಾರ ಯಾರೇ ಆಗಿರಲಿ, ಅವನ ಹೆಸರು ಏನೇ ಇರಲಿ, ಅವನು ಕನ್ನಡ ಕಾವ್ಯಮಾರ್ಗಪ್ರವರ್ತಕ; ಮಾರ್ಗಕಾರ."[103]

ವಿ. ಸೀತಾರಾಮಯ್ಯನವರು ಹೇಳುತ್ತಾರೆ: "ಕವಿಗಳ ರಾಜಮಾರ್ಗವೆನ್ನಿ; ಕವಿರಾಜನ/ರ ಮಾರ್ಗವೆನ್ನಿ; ಅಂಥದೊಂದು ರಚಿತವಾದ ಹಾಗಾಯಿತು. ಮುಂದೆ ಬರಲಿದ್ದ ಕವಿಗಳಿಗೂ ಸಾಹಿತಿಗಳಿಗೂ ಕೈದೀವಿಗೆಯಾಗಿ ಮೌಲ್ಯನಿರ್ದೇಶಕವಾಗಿ, ಮಹಾ 'ಕವಿಶಿಕ್ಷಾ' ಗ್ರಂಥವೇ ಆಯಿತು."[104]

"'ಕವಿರಾಜಮಾರ್ಗ' ಎಂಬ ನಾಮಕರಣಕ್ಕೆ ಇನ್ನೂ ಒಂದು ಕಾರಣವಿರುವಂತೆ ತೋರುತ್ತದೆ: ದಂಡಿಪ್ರೋಕ್ತವಾದ ವೈದರ್ಭ, ಗೌಡ ಮಾರ್ಗಗಳನ್ನು ಕವಿರಾಜ ಮಾರ್ಗಕಾರ ದಕ್ಷಿಣೋತ್ತರ ಮಾರ್ಗಗಳೆಂದು ಕರೆದಿದ್ದಾನೆ. "ಇವುಗಳ ವಿಶದ ನಿರೂಪಣೆ ಗ್ರಂಥದಲ್ಲಿ ಬರುವ ಕಾರಣದಿಂದಲೇ ಇದು ಕವಿರಾಜ 'ಮಾರ್ಗ'ವೆಂದು ಹೆಸರನ್ನು ಕೃತಿಗೆ ಸಾರ್ಥಕವಾಗಿಸಿದೆ. ಇವು ಸಂಸ್ಕೃತ ಲಕ್ಷಣಕಾರರು ಎಂದರೆ ದಂಡಿ ಒಪ್ಪಿರುವ ಗುಣಗಣಗಳಿಂದ ಮಂಡಿತವಾದ ಕಾವ್ಯಮಾರ್ಗಗಳು; ಇದಲ್ಲದ ಜಾನಪದ ಹಾಡುಗಬ್ಬಗಳಲ್ಲಿ 'ಮಾರ್ಗ'ದ ಬದಲು 'ದೇಸಿ'ಯೇ ಇರುತ್ತದೆಂದು ಊಹಿಸಬೇಕು. ಲಕ್ಷಣಶಾಸ್ತ್ರದಲ್ಲಿಯ ನಿಯಮಗಳು ದೇಸಿಗೆ ಸಂಪೂರ್ಣವಾಗಿ ಅನ್ವಯಿಸಲಾರವು; ಅವು ಸಂಪೂರ್ಣವಾಗಿ ಅನ್ವಯಿಸಿದಲ್ಲದೆ 'ಮಾರ್ಗ' ಕವಿತೆಯೂ ಸಿದ್ಧಿಸದು."[105]

'ಕವಿರಾಜಮಾರ್ಗ'ದ ನಿರ್ಮಿತಿಯಿಂದ ಕನ್ನಡ ಸಾಹಿತ್ಯಕ್ಕಾದ ಲಾಭವೇನು? "ಕವಿರಾಜಮಾರ್ಗವು ದಾರಿಮಾಡಿಕೊಟ್ಟಬಳಿಕ ಕೆಲವು ಕಾಲ ಕನ್ನಡ ಸಾಹಿತ್ಯವಾಹಿನಿ ತುಂಬು ಹೊಳೆಯಾಗಿ ಹರಿಯಿತು."[106] "ಕವಿರಾಜಮಾರ್ಗಕಾರನ ಮಾರ್ಗದರ್ಶನದಲ್ಲಿಯೇ ಕನ್ನಡದ ಮುಂದಿನ ಸಾಹಿತ್ಯ ತನ್ನ ವಿಶಿಷ್ಟರೂಪವನ್ನು ತಾಳಿತೆನ್ನಬಹುದಾಗಿದೆ."[107]

## ಆಕರಗಳು

'ಕವಿರಾಜಮಾರ್ಗ' ಅನನ್ಯ ಪರತಂತ್ರವಾದ ರಚನೆಯೇನಲ್ಲ. ಅದಕ್ಕೆ ಮುಖ್ಯವಾದ ಆಕರಗಳು, ಸಂಸ್ಕೃತ ಆಲಂಕಾರ ಶಾಸ್ತ್ರದ 'ಅಶ್ವಿನೀದೇವತೆ'ಗಳೆನ್ನಬಹುದಾದ ಭಾಮಹ, ದಂಡಿಯರ 'ಕಾವ್ಯಾಲಂಕಾರ' ಮತ್ತು 'ಕಾವ್ಯಾದರ್ಶ.' ಭಾಮಹನಿಗಿಂತ, ದಾಕ್ಷಿಣಾತ್ಯನಾದ ದಂಡಿಯೆ ಕವಿರಾಜಮಾರ್ಗಕಾರನ ಮೇಲೆ ಹೆಚ್ಚು ಪ್ರಭಾವ ಬೀರಿರುವುದು

ಸಹಜ. ಎಂತಲೇ 'ಕಾವ್ಯಾದರ್ಶ'ವನ್ನು 'ಕವಿರಾಜಮಾರ್ಗ' ವಿಶೇಷವಾಗಿ ಅನುಸರಿಸಿದೆ, ಅನುಕರಿಸಿದೆ. "ಕವಿರಾಜಮಾರ್ಗವು ರಚಿತವಾಗುವ ವೇಳೆಗೆ ಸಂಸ್ಕೃತದಲ್ಲಿ ಭಾಮಹ, ದಂಡಿ, ವಾಮನ, ಉದ್ಭಟ—ಇವರ ಗ್ರಂಥಗಳು ನಿಸ್ಸಂದೇಹವಾಗಿ ಪ್ರಚುರವಾಗಿದ್ದುವು. ಕವಿರಾಜಮಾರ್ಗಕಾರನು ಉದ್ಭಟವಾಮನರ ಕೃತಿಗಳನ್ನು ನೋಡಿದ್ದಂತೆ ತೋರುವುದಿಲ್ಲ"[108] ಎನ್ನುತ್ತಾರೆ ತೀ.ನಂ.ಶ್ರೀ. ಆದರೆ "ಕವಿರಾಜಮಾರ್ಗದ ಮೇಲೆ ಉದ್ಭಟನ ಪ್ರಭಾವ ಸ್ವಲ್ಪಮಟ್ಟಿಗೆ ಆಗಿರಬಹುದು ಎಂದು ಊಹಿಸಲು ಅವಕಾಶವಿದೆ"[109] ಎಂದು ಎಂ.ವಿ.ಸೀ. ಹೇಳುತ್ತಾರೆ. ಭೀಮರಾವ್ ಚಿಟಗುಪ್ಪಿಯವರು ಜಿನಸೇನಾಚಾರ್ಯನ 'ಪೂರ್ವಪುರಾಣ'ದ ಪ್ರಭಾವವನ್ನು 'ಕವಿರಾಜಮಾರ್ಗ'ದ ಕೆಲವು ಪದ್ಯಗಳಲ್ಲಿ ಗುರುತಿಸಿದ್ದಾರೆ.[110]

ದಂಡಿಭಾಮಹರನ್ನು ಮಾರ್ಗಕಾರ ಅವಲಂಬಿಸಿದ್ದರೂ ಅವನ ಕೃತಿಯ ಸ್ವಾತಂತ್ರ್ಯಕ್ಕೆ ಮತ್ತು ಸ್ವೋಪಜ್ಞತೆಗೆ ಧಕ್ಕೆಯುಂಟಾಗಿಲ್ಲವೆಂದು ಹೇಳಲಾಗಿದೆ. ಸ್ಥೂಲ ದೃಷ್ಟಿಗೆ 'ಕವಿರಾಜಮಾರ್ಗ' ಅನುವಾದವಾಗಿ ಕಂಡರೂ ಸೂಕ್ಷ್ಮದೃಷ್ಟಿಗೆ ಸ್ವತಂತ್ರಗ್ರಂಥದ ಲಕ್ಷಣಗಳನ್ನು ಅದು ಬಹಳ ಕಡೆ ವ್ಯಕ್ತಪಡಿಸುತ್ತದೆ. ಅದು ಮೂಲಗ್ರಂಥಗಳ ಪ್ರತಿಬಿಂಬವಲ್ಲ; ಶುದ್ಧ ನಕಲಲ್ಲ. ರಂ. ಶ್ರೀ. ಮುಗಳಿಯವರು ಹೇಳುತ್ತಾರೆ: "ಕವಿರಾಜಮಾರ್ಗವು ಸ್ವತಂತ್ರ ಹಾಗೂ ಪರಿಣತವಾದ ವಿಮರ್ಶನಶಕ್ತಿಯ ಫಲವಾಗಿದೆ; ಅದು ಒಟ್ಟಿನಲ್ಲಿ ಸಂಸ್ಕೃತಲಾಕ್ಷಣಿಕರಿಂದ ಸ್ಫೂರ್ತಿ ಪಡೆದು, ವಿಶೇಷವಾಗಿ ದಂಡಿಭಾಮಹರಿಂದ ಉಪಕೃತವಾದುದು ನಿಜ. ದಂಡಿಯ 'ಕಾವ್ಯಾದರ್ಶ'ವನ್ನು ಅನುವಾದಿಸಿದ್ದೂ ನಿಜ. ಆದರೂ ಅದರ ಸ್ವತಂತ್ರತೆಗೆ ಬಾಧೆಯಿಲ್ಲ. ಒಂದನೆಯ ಎರಡನೆಯ ಪರಿಚ್ಛೇದಗಳ ಒಟ್ಟು ಪದ್ಯಗಳಲ್ಲಿ ಸುಮಾರು ಮೂರು ನಾಲ್ಕಂಶದಷ್ಟು ಮೂಲದಿಂದ ಭಿನ್ನವಾಗಿವೆ. ಮೂರನೆಯ ಪರಿಚ್ಛೇದದಲ್ಲಿ 'ಕಾವ್ಯಾದರ್ಶ'ದ ಅನುಸರಣವು ಹೆಚ್ಚಿದೆ. ಇಲ್ಲಿಯೂ ಒಟ್ಟು ೨೩೭ ಪದ್ಯಗಳಲ್ಲಿ ಸು. ೯೮ ಸ್ವತಂತ್ರ ಪದ್ಯಗಳೂ ೨೧ ಮೂಲ ವ್ಯತ್ಯಾಸವುಳ್ಳ ಪದ್ಯಗಳೂ ಇರುತ್ತವೆ. ಅಲಂಕಾರಶಾಸ್ತ್ರಭಾಗದಲ್ಲಿ, ವಿಶೇಷವಾಗಿ ಲಕ್ಷಣ ನಿರೂಪಣೆಯಲ್ಲಿ ಸಾಮಾನ್ಯವಾಗಿ ದಂಡಿಭಾಮಹರ ಅನುವಾದವಿರುವುದಾದರೂ ಲಕ್ಷ್ಯಪದ್ಯಗಳಲ್ಲಿ ಸ್ವತಂತ್ರರಚನೆ ಇಲ್ಲವೆ ಉದ್ಧೃತಿಯೂ ಮೂಲವ್ಯತ್ಯಾಸ ಇಲ್ಲವೆ ವಿಸ್ತಾರವೂ ಕಂಡುಬಂದಿವೆ."[111]

ಹೀಗೆಯೆ ಎಂ. ವಿ. ಸೀ. ಅವರೂ ಮಾರ್ಗಕಾರನ ಸ್ವಂತಿಕೆ ಹಾಗೂ ಋಣವನ್ನು ಅಂಕಿಅಂಶಗಳ ಸಹಿತ ಮನಗಾಣಿಸುತ್ತಾರೆ: 'ಕವಿರಾಜಮಾರ್ಗದ ಒಟ್ಟು ಪದ್ಯಸಂಖ್ಯೆ ೫೩೭ (ಪ್ರಕ್ಷಿಪ್ತವಾದುವನ್ನು ಬಿಟ್ಟು); ಇವುಗಳಲ್ಲಿ ಸುಮಾರು ೪೫ ಪದ್ಯಗಳಿಗೆ ಭಾಮಹನ ಕಾವ್ಯಾಲಂಕಾರವೂ ಸುಮಾರು ೨೩೦ಕ್ಕೆ ದಂಡಿಯ ಕಾವ್ಯಾದರ್ಶವೂ ಆಕರಗ್ರಂಥಗಳು. ಎಂದಮೇಲೆ, ಸುಮಾರು ಅರ್ಧದಷ್ಟು ಗ್ರಂಥ ಸ್ವಂತರಚನೆ. ಉಳಿದರ್ಧದಲ್ಲಿ ಮಾರ್ಗಕಾರನು ಮೂಲ ಶ್ಲೋಕಗಳನ್ನು ಪದಶಃ ಭಾಷಾಂತರಮಾಡಿಲ್ಲ; ಭಾವವನ್ನು, ವಿಚಾರವನ್ನು, ಸ್ವೀಕರಿಸಿ ತನ್ನದೇ ಆದ ಧಾಟಿಯಲ್ಲಿ ಅಚ್ಚುಕಟ್ಟಾಗಿ ಬರೆ

ದಿದ್ದಾನೆ; ಹಲವು ಕಡೆ ಮೂಲಶ್ಲೋಕದ ಲಕ್ಷಣಸ್ವರೂಪವನ್ನು ವಿಶದಪಡುವಂತೆ ವಿಸ್ತರಿಸಿದ್ದಾನೆ; ಸಂಕ್ಷೇಪ ಮಾಡಿರುವ ಸಂದರ್ಭಗಳೂ ಉಂಟು. ಶಾಸ್ತ್ರವಿಚಾರವಾದ್ದರಿಂದ, ಮೂಲದ ಶಾಸ್ತ್ರೀಯ ಪದಪುಂಜಗಳನ್ನು ಸಂದರ್ಭೋಚಿತವಾಗಿ ಇದ್ದಹಾಗೆಯೆ ಬಳಸಿಕೊಂಡಿದ್ದಾನೆ. ಇದು ಸಹಜ, ಅನಿವಾರ್ಯ. ಲಕ್ಷ್ಯಪದ್ಯಗಳನ್ನು ಅನುವಾದ ಮಾಡುವಾಗ ಸಾಕಷ್ಟು ಸ್ವಾತಂತ್ರ್ಯ ವಹಿಸಿದ್ದಾನೆ: ಮೂಲಶ್ಲೋಕದ ಕಲ್ಪನೆಗಳಿಗೆ ತನ್ನವನ್ನು ಬೆರಸಿದ್ದಾನೆ, ಕೆಲವು ಕಡೆ ಕಳೆಯೇರಿಸಿದ್ದಾನೆ. ಪ್ರತಿ ಪ್ರಕರಣದಲ್ಲಿಯೂ ಸ್ವಂತ ಲಕ್ಷ್ಯಪದ್ಯಗಳಿಗೆ ಕೊರತೆಯಿಲ್ಲ. ಲಕ್ಷಣಪದ್ಯವಾಗಲಿ ಲಕ್ಷ್ಯಪದ್ಯವಾಗಲಿ, ಅನುವಾದ ಮಾಡಿರುವ ಸಂದರ್ಭಗಳಲ್ಲಿ ಕೂಡ ಅವನ್ನು 'ಅನುವಾದ' ಎಂದು ಹೇಳಲಾಗದಂತೆ 'ಸ್ವಂತಿಕೆ'ಯನ್ನು ಮೆರೆದು, ಮುಂದಿನ ಅನುವಾದಕರಿಗೆ ಮೇಲ್ಪಂಕ್ತಿಯೆನಿಸಿದ್ದಾನೆ."[112]

ಭೀಮರಾವ ಚಿಟಗುಪ್ಪಿಯವರು ಕವಿರಾಜಮಾರ್ಗಕಾರನನ್ನು 'ಸ್ವತಂತ್ರವಿಚಾರಿ' ಎಂದು ಕರೆದು, 'ಕವಿರಾಜಮಾರ್ಗ'ವು ಮೇಲುನೋಟಕ್ಕೆ ಭಾಮಹನ 'ಕಾವ್ಯಾಲಂಕಾರ' ಮತ್ತು ದಂಡಿಯ 'ಕಾವ್ಯಾದರ್ಶ' ಗ್ರಂಥಗಳ ಅನುವಾದದಂತೆ ತೋರುತ್ತಿದ್ದರೂ ಅದು ಒಂದು ಸ್ವೋಪಜ್ಞ ಮತ್ತು ಪೂರ್ಣಕೃತಿ; ಕನ್ನಡ ಕಾವ್ಯಮೀಮಾಂಸೆಗೆ ಉಪಕಾರಕವಿರುವಂತೆ ಸಂಸ್ಕೃತ ಕಾವ್ಯಮೀಮಾಂಸೆಗೂ ಉಪಕಾರಕವಿದೆ" ಎಂದೂ "....ಸ್ವಾಭಿಪ್ರಾಯ ಸೂಚಕ ಮಾತುಗಳು ಅಡಿಗಡಿಗೆ ಬರುತ್ತವೆ. ಈ ಮಾತುಗಳ ಮೂಲಕ ಲಕ್ಷ್ಯ-ಲಕ್ಷಣಗಳ ವಿಷಯದಲ್ಲಿ ಭಾಮಹ ದಂಡಿಯರ ಅನುಸರಣೆ ಇದ್ದರೂ ಅದು ಕವಿರಾಜಮಾರ್ಗವು ಸ್ವೋಪಜ್ಞತಾಪೂರ್ಣ ಗ್ರಂಥವೆಂಬುದಕ್ಕೆ ಅಡ್ಡಿ ಬರಬಾರದು"[113] ಎಂದೂ ಅಭಿಮಾನಪೂರ್ವಕವಾಗಿ ಹೇಳುತ್ತಾರೆ. ಅಷ್ಟೇ ಅಲ್ಲ, "ಒಂದೊಮ್ಮೆ ಸಂಸ್ಕೃತದಲ್ಲಿ ಇದ್ದಿದ್ದರೆ ಭಾಮಹ, ದಂಡಿ ಮೊದಲಾದ ಸುಪ್ರಸಿದ್ಧ ಲಾಕ್ಷಣಿಕರೊಂದಿಗೆ ಕವಿರಾಜಮಾರ್ಗಕಾರನೂ ಒಬ್ಬ ಗಣ್ಯವ್ಯಕ್ತಿಯಾಗುತ್ತಿದ್ದ"[114] ಎಂದೂ ಸೇರಿಸುತ್ತಾರೆ. ಚಿಟಗುಪ್ಪಿಯವರ ಅಭಿಪ್ರಾಯಕ್ಕೆ ಎಂ.ವಿ.ಸೀ. ಅವರ ವಿವರಣೆ ಇಂತಿದೆ: "ಕನ್ನಡಕ್ಕೂ ಒಂದು ಕಾವ್ಯಮೀಮಾಂಸೆಯ ಪರಂಪರೆಯಿದೆ. ಸಂಸ್ಕೃತದಿಂದ ಪುಷ್ಟವಾದರೂ ವಿಶಿಷ್ಟ ಲಕ್ಷಣಗಳುಳ್ಳ ಈ ಪರಂಪರೆಯಲ್ಲಿ ಕವಿರಾಜಮಾರ್ಗ ಆದ್ಯವೂ ಅಗ್ರಮಾನ್ಯವೂ ಆದ ಕೃತಿಯೆನ್ನುವುದು ವಸ್ತುಸ್ಥಿತಿಯನ್ನು ತಿಳಿಸತಕ್ಕ ಮಾತು ಎನ್ನಿಸುವುದು. ಭಾರತೀಯ ಕಾವ್ಯಮೀಮಾಂಸೆಯನ್ನೂ ಸಂಸ್ಕೃತ ಕಾವ್ಯಮೀಮಾಂಸೆಯನ್ನೂ ಸಮೀಕರಿಸುವ ಅಗತ್ಯವಿಲ್ಲ. ಭಾರತೀಯ ಕಾವ್ಯಮೀಮಾಂಸೆಯಲ್ಲಿ ಸಂಸ್ಕೃತದ್ದು ಪ್ರಧಾನವಾದ ಭಾಗ, ದೊಡ್ಡ ಭಾಗ. ಸಂಸ್ಕೃತದ ಮಾರ್ಗ, ಕನ್ನಡದ ದೇಸಿ—ಇವೆರಡೂ ಸಂಗಮಿಸಿವೆ ಕವಿರಾಜಮಾರ್ಗದಲ್ಲಿ. ಕನ್ನಡ ಕವಿಗಳಿಗಾಗಿ ಕನ್ನಡದಲ್ಲಿ ಬರೆದ ಈ ಕೃತಿ 'ಕನ್ನಡ ಕಾವ್ಯಮೀಮಾಂಸೆ'; ಹಾಗೆಂದೇ ಭಾರತೀಯ ಕಾವ್ಯಮೀಮಾಂಸೆಗೆ ಬೆಲೆಯುಳ್ಳ ಕಾಣಿಕೆ ಎನಿಸತಕ್ಕದ್ದು."[115]

"ಯಾವ ದೃಷ್ಟಿಯಿಂದ ವಿಚಾರ ಮಾಡಿದರೂ ಕನ್ನಡದಲ್ಲಿ 'ಪ್ರೌಢ' ಕಾವ್ಯರಚನೆಗೆ ಹೆದ್ದಾರಿಯನ್ನು ಹಾಕಿಕೊಟ್ಟ, ಬೆಲೆಯುಳ್ಳ ಸ್ವತಂತ್ರ ಕಾವ್ಯಮೀಮಾಂಸಾ ಗ್ರಂಥವೆನ್ನಿಸಿ

ಕೊಳ್ಳಲು ಅರ್ಹವಾಗಿದೆ ಕವಿರಾಜಮಾರ್ಗ" ಎಂದೂ "ಮೊತ್ತದಲ್ಲಿ ಕವಿರಾಜಮಾರ್ಗ ಒಂದು ಸ್ವತಂತ್ರ ಕೃತಿಯೆಂಬ ಮಾನ್ಯತೆ ಪಡೆಯಲು ಅರ್ಹವಾಗಿದೆ"[116] ಎಂದೂ ಎಂ.ವಿ.ಸೀ. ಅವರು ಕೈವಾರಿಸಿದ್ದಾರೆ. "ಸ್ವತಂತ್ರ ದೃಷ್ಟಿ-ಸೃಷ್ಟಿಗಳ ಸ್ವಾದು ಸಂಮಿಶ್ರಣ ಪಾಕ ಕವಿರಾಜಮಾರ್ಗದ ವೈಶಿಷ್ಟ್ಯ"[117] ಎಂದು ಅವರು ಮತ್ತೊಂದೆಡೆ ಹೇಳುತ್ತಾರೆ. ಹೀಗೆಲ್ಲ ಹೇಳುವಾಗ, "ಕವಿರಾಜಮಾರ್ಗವು ಇಡಿಯಾಗಿಲ್ಲದಿದ್ದರೂ ಬಿಡಿಭಾಗಗಳಲ್ಲಿ ಅನುವಾದಿತ ಗ್ರಂಥ" ಎಂಬುದನ್ನು ಅವರು ಮರೆತಿಲ್ಲ. "ಮೊತ್ತದಲ್ಲಿ ಕವಿರಾಜಮಾರ್ಗ ಕಾವ್ಯರತ್ನವೇನಲ್ಲ; ಹೇಳಿಕೇಳಿ ಶಾಸ್ತ್ರಗ್ರಂಥ; ಆದರೆ ತನ್ನ ಇತಿಮಿತಿಯಲ್ಲಿ ಅದು ಚಿನ್ನದಂಥ ಕೃತಿ. ಚಿನ್ನದ ಅರೆಪಾಲಿನ ಸ್ವಾಮ್ಯ ಸಂಸ್ಕೃತ ಲಾಕ್ಷಣಿಕರಿಗೆ ಸೇರಿದ್ದರೆ ಉಳಿದ ಅರೆಪಾಲು ಸ್ವಂತಗಳಿಕೆಯ ಆಸ್ತಿ"[118] ಎಂಬ ಅವರ ನಿರ್ಣಯ ಹೆಚ್ಚು ಅಂಗೀಕಾರಯೋಗ್ಯವಾಗಿದೆ.

ಮಾರ್ಗಕಾರನು ಸಂಸ್ಕೃತ ಅಲಂಕಾರ ಶಾಸ್ತ್ರಜ್ಞರಿಂದ ಸ್ವೀಕರಿಸಿದ ಎಷ್ಟೋ ವಿಚಾರಗಳನ್ನು ಕನ್ನಡಕ್ಕೆ ಅನ್ವಯಿಸಿ, ಅಳವಡಿಸಿ ಹೇಳುತ್ತಾನೆಂಬುದು ಮುಖ್ಯವಾಗಿ ಗಮನಿಸಬೇಕಾದ ಸಂಗತಿ. ಎಂ.ವಿ.ಸೀ. ಅವರು ಹೇಳುವಂತೆ, "ಶ್ರೀವಿಜಯನು ತನ್ನ ಕವಿರಾಜಮಾರ್ಗದಲ್ಲಿ ಬಹುಮಟ್ಟಿಗೆ ದಂಡಿಯ ಕಾವ್ಯಾದರ್ಶವನ್ನೂ ಕೆಲವು ವಿಚಾರಗಳಲ್ಲಿ ಭಾಮಹನನ್ನೂ ಅನುಸರಿಸಿರುವುದು ಸುಸ್ಪಷ್ಟವಷ್ಟೇ. ಆದರೆ ಅವನು ಅವರನ್ನು ಕಣ್ಣುಮುಚ್ಚಿಕೊಂಡು ಅನುಸರಿಸದೆ, ಸಂಸ್ಕೃತ ಕಾವ್ಯಲಕ್ಷಣವನ್ನು ಕನ್ನಡದ ಜಾಯಮಾನಕ್ಕೆ ಹೊಂದಿಕೊಳ್ಳುವಂತೆ ಹೇಳುವುದರಲ್ಲಿ ತನ್ನ ಸ್ವತಂತ್ರ ದೃಷ್ಟಿಯನ್ನು ಅಮೋಘವಾಗಿ ಮೆರೆದಿದ್ದಾನೆ; ತನ್ನ ವೈಶಿಷ್ಟ್ಯವನ್ನು ಪ್ರಸ್ಥಾಪಿಸಿದ್ದಾನೆ."[119]

"ಕನ್ನಡ ಲಕ್ಷಣಗ್ರಂಥಗಳು ಸಂಸ್ಕೃತ ಗ್ರಂಥಗಳ ಮಾದರಿಯಲ್ಲೇ ರಚಿತವಾಗಿದ್ದರೂ ಕವಿರಾಜಮಾರ್ಗಕಾರನು ಕನ್ನಡದ ವೈಶಿಷ್ಟ್ಯವನ್ನೂ ವಿವೇಚಿಸಿದ್ದಾನೆಂದು ಹೇಳಬಹುದಾಗಿದೆ" ಎಂದೂ, "ಕನ್ನಡದ ಮುನ್ನಡೆಗೆ ಸಹಾಯಕವಾಗುವಂತೆ ಸಂಸ್ಕೃತದ ಕಾವ್ಯತತ್ತ್ವಗಳನ್ನು ಕನ್ನಡದ ಮೂಲಕವೇ ಪ್ರತಿಪಾದಿಸುವ ಮಹತ್ತ್ವದ ಗ್ರಂಥವೇ ಕವಿರಾಜಮಾರ್ಗ"[120] ಎಂದೂ ಹೇಳುವ ಕೆ. ಕೃಷ್ಣಮೂರ್ತಿಯವರ ಮುಂದಿನ ಮಾತುಗಳು ಮನನೀಯವಾಗಿವೆ; "ಕವಿರಾಜಮಾರ್ಗಕಾರನು ಸಂಸ್ಕೃತ ಕನ್ನಡಗಳೆರಡಕ್ಕೂ ಸಮವಾದ ಕಾವ್ಯಲಕ್ಷಣಗಳನ್ನು ದಂಡಿ ಭಾಮಹರಿಂದ ಅನುವಾದ ಮಾಡಿಕೊಂಡಿರುವುದರ ಜೊತೆಗೆ ಕನ್ನಡಕ್ಕೆ ಮಾತ್ರ ಅನ್ವಯಿಸುವ ಛಂದಸ್ಸು ಮತ್ತು ವ್ಯಾಕರಣಗಳ ಅಂಶಗಳನ್ನೂ ಮೊಟ್ಟಮೊದಲು ವಿಧಿಸಿರುವುದು ವೇದ್ಯವಾಗುತ್ತದೆ. ಕನ್ನಡ ಭಾಷೆಯ ಅಂತಸ್ಸತ್ತ್ವವನ್ನು ಮರೆಯದೆ, ಸಂಸ್ಕೃತ ಆದರ್ಶಗಳ ಅಗತ್ಯವನ್ನೂ ತೃಣೀಕರಿಸದೆ, ಮುಂದಿನ ಕವಿಗಳಿಗೂ ಲಾಕ್ಷಣಿಕರಿಗೂ ಮಾರ್ಗದರ್ಶನ ಮಾಡಿದ ಮಹಾಗ್ರಂಥವೇ 'ಕವಿರಾಜಮಾರ್ಗ.' ಅದರ ಲಕ್ಷಣಗಳು ಸಂಸ್ಕೃತ ಪ್ರಸಿದ್ಧವಾಗಿದ್ದರೂ, ಲಕ್ಷ್ಯಗಳೇ ಮುಂದಿನವರ ಕನ್ನಡ ರಚನೆಗಳಿಗೆ ಕೈದೀವಿಗೆಗಳಾದುವು. ಕನ್ನಡದಲ್ಲಿ ಕಾವ್ಯಮೀಮಾಂಸೆಗೆ ಕವಿರಾಜಮಾರ್ಗಕಾರನೇ ಆದ್ಯಾಚಾರ್ಯ. ಅವನ ಅನಂತರದಲ್ಲಿ ಬಂದ

ಲಾಕ್ಷಣಿಕರು ಕೇವಲ ಸಂಸ್ಕೃತಾನುವಾದ ನಿರತರಾದರೇ ಹೊರತು ಅವನಂತೆ ಕನ್ನಡಕ್ಕೆ ಮಾತ್ರ ವಿಶಿಷ್ಟವಾದ ವಿವರಣೆಗಳಿಗೆ ಹೆಚ್ಚು ಗಮನ ಕೊಟ್ಟಂತೆ ಕಾಣುವುದಿಲ್ಲ."[131]

ತನ್ನ ಗ್ರಂಥಕ್ಕೆ 'ಕಾವ್ಯಾಲಂಕಾರ', 'ಕಾವ್ಯಾದರ್ಶ' ಇತ್ಯಾದಿಯಾಗಿ ಕಾವ್ಯಪರವಾದ ಯಾವ ಶೀರ್ಷಿಕೆಯನ್ನೂ ಕೊಡದೆ, ಕವಿಗಳ ಕೈಪಿಡಿ ಎಂಬರ್ಥದ 'ಕವಿರಾಜಮಾರ್ಗ' ಎಂಬ ಅಪೂರ್ವವಾದ ಹೆಸರನ್ನು ಕೊಟ್ಟಿರುವುದರಲ್ಲೆ ಮಾರ್ಗಕಾರನ ಸ್ವೋಪಜ್ಞತೆ ಎದ್ದು ಕಾಣುತ್ತದೆ; ಅವನು ಸಂಸ್ಕೃತ ಶಾಸ್ತ್ರಕಾರರ ಅಂಧಾನುಯಾಯಿಯಲ್ಲ ಎಂಬುದು ವ್ಯಕ್ತವಾಗುತ್ತದೆ.

ಈ ಹಿನ್ನೆಲೆಯಲ್ಲಿ, "ಹಳಗನ್ನಡದಲ್ಲಿರುವ ಅಲಂಕಾರ ಗ್ರಂಥಗಳೆಲ್ಲಾ ಸಂಸ್ಕೃತ ಗ್ರಂಥಗಳನ್ನು ಅನುಸರಿಸಿ ಬರೆಯಲ್ಪಟ್ಟವು. ಕನ್ನಡ ಆಲಂಕಾರಿಕರು ಪ್ರಾಯಶಃ ತಮ್ಮ ಗ್ರಂಥಗಳಲ್ಲಿ ಯಾವ ಹೊಸ ಸಂಗತಿಯನ್ನು ಎತ್ತಿಯಾಗಲಿ ವಿಚಾರಮಾಡಿಯಾಗಲಿ ಹೇಳಿಲ್ಲ"[122] ಎಂಬ ಎ. ಆರ್. ಕೃಷ್ಣಶಾಸ್ತ್ರಿಗಳ ಆಕ್ಷೇಪಣೆ ಪ್ರಶ್ನಿಸತಕ್ಕದ್ದಾಗಿದೆ.

ಕವಿರಾಜಮಾರ್ಗಕಾರ ಸಾಮಾನ್ಯವಾಗಿ ದಂಡಿಯ ಲಕ್ಷಣಗಳನ್ನೆಂತೊ ಅಂತೆ ಲಕ್ಷ್ಯಗಳನ್ನೂ ಅನುವಾದಿಸುತ್ತಾನಾದರೂ, ಎಷ್ಟೋ ಕಡೆ ಸ್ವತಂತ್ರ ಲಕ್ಷ್ಯಪದ್ಯಗಳನ್ನು ಕೊಟ್ಟಿದ್ದಾನೆಂಬುದು ಗಮನಾರ್ಹ. "ದಂಡಿಯ ಲಕ್ಷ್ಯಪದ್ಯಗಳ ಅನುವಾದಗಳನ್ನು ಬಿಟ್ಟು, ಉಳಿದೆಲ್ಲ ಲಕ್ಷ್ಯಪದ್ಯಗಳನ್ನೂ ದಂಡಿಯ ಪದ್ಧತಿಯನ್ನೆ ಅನುಸರಿಸಿ ಶ್ರೀವಿಜಯನೇ ಸ್ವತಃ ರಚಿಸಿರುವನೆಂದು ಹೇಳಬಹುದು. ಸದ್ಯದ ಮಟ್ಟಿಗೆ, ಅನ್ಯಕಾವ್ಯಗಳಿಂದ ಅವನು ಲಕ್ಷ್ಯಪದ್ಯಗಳನ್ನು ಸ್ವೀಕರಿಸಿದ್ದಾನೆ ಎಂದು ಹೇಳಲು ಸ್ಪಷ್ಟಸೂಚನೆ ಗ್ರಂಥದಲ್ಲಿಲ್ಲ"[123] ಎಂದು ಎಂ.ವಿ.ಸೀ. ಹೇಳುತ್ತಾರೆ. ಕೆ. ಕೃಷ್ಣಮೂರ್ತಿಯವರದೂ ಇದೇ ನಿಲುವು. ಭಾರವಿ, ಕಾಳಿದಾಸ, ಮಾಘಾದಿಗಳ ಪದ್ಯಗಳನ್ನು ಮಾರ್ಗಕಾರ ಅನುವಾದಿಸಿರುವುದನ್ನು ಅವರು ತೋರಿಸಿ, ಹೀಗೆ ತೀರ್ಮಾನಿಸಿದ್ದಾರೆ: "ನೃಪತುಂಗನು ಉದಾಹರಣ ಪದ್ಯಗಳನ್ನು ಸ್ವಯಂ ರಚಿಸುತ್ತಿದ್ದನೆನ್ನಲು ಇದು ಪ್ರಬಲ ಅಂತರ ಪ್ರಮಾಣವಾಗುತ್ತದೆ. ಈಗಾಗಲೇ ಕೆಲವರು ಊಹಿಸಿರುವಂತೆ ಅವನು ಅನುಪಲಬ್ಧ ಸಾಹಿತ್ಯದಿಂದಲೇ ಆಯ್ದಿರುವನೆನ್ನಲು ಬರಿಯ ಊಹೆಯೇ ವಿನಾ ಅದಕ್ಕೆ ಸಮರ್ಥಕವಾದ ಪ್ರಮಾಣವಾವುದೂ ಇಲ್ಲ."[124] ಸ್ವತಂತ್ರವಾದ ಲಕ್ಷ್ಯಪದ್ಯಗಳು ಪೂರ್ವಕಾವ್ಯಗಳಿಂದ ಎತ್ತಿಕೊಟ್ಟವು ಎನ್ನುವವರು, "ಪುರಾಣಕವಿ ಪ್ರಭುಪ್ರಯೋಗಾವಿಳಸದ್ಗುಣೋದಯಮನಾಯ್ದು ನಱಿಂ ಸಮೆದೊಂದು ಕಾವ್ಯದಿಂ...." ಇಂಥ ಆಧಾರವನ್ನು (೧-೧೫೩) ಅಲ್ಲಿಯೇ ತೋರಿಸಬಹುದು. ಈ ವಿಷಯದಲ್ಲಿ ಇನ್ನೂ ವಿಚಾರಕ್ಕೆ ಅವಕಾಶವಿರುವಂತೆ ತೋರುತ್ತದೆ.

'ಕವಿರಾಜಮಾರ್ಗ'ದಲ್ಲಿ ಮೂರು ಪರಿಚ್ಛೇದಗಳಿವೆ. ಮೊದಲನೆಯ ಪರಿಚ್ಛೇದದಲ್ಲಿ—ಇದು ಸಂಕೀರ್ಣವಾದ ಭಾಗ—ಕಾವ್ಯದೋಷಗಳೂ ಎರಡನೆಯ ಪರಿಚ್ಛೇದದಲ್ಲಿ ಶಬ್ದಾಲಂಕಾರಗಳೂ ಮೂರನೆಯ ಪರಿಚ್ಛೇದದಲ್ಲಿ ಅರ್ಥಾಲಂಕಾರಗಳೂ ನಿರೂಪಿತವಾಗಿವೆ.

## ಪೀಠಿಕಾ ವಿಷಯಗಳು

ಕವಿರಾಜಮಾರ್ಗಕಾರ ಉದ್ದಕ್ಕೂ ದಂಡಿಯನ್ನೆ ಬಹುಮಟ್ಟಿಗೆ ಅನುಸರಿಸಿದ್ದರೂ, ಕಾವ್ಯಪ್ರಯೋಜನ, ಪ್ರತಿಭೆಯ ಅಗತ್ಯ ಮುಂತಾದ ಪೀಠಿಕಾ ವಿಷಯಗಳಲ್ಲಿ ಭಾಮಹನಿಗೆ ಋಣಿಯಾಗಿದ್ದಾನೆ.

ಮೊದಲು ಮಾರ್ಗಕಾರ 'ನುಡಿಬಲ್ಮೆ'ಯನ್ನು ಕುರಿತು ಹೇಳುತ್ತಾನೆ. "ವಿಶಿಷ್ಟವಾದ 'ನುಡಿವಲ್ಮೆ'ಯುಳ್ಳವನು ಮಾತ್ರ ಕವಿಯಾಗಬಲ್ಲ. ಈ ನುಡಿಬಲ್ಮೆಯ ಸ್ವರೂಪವನ್ನು ಹಂತಹಂತವಾಗಿ ಮನೋಜ್ಞವಾಗಿ ವಿವರಿಸಿರುವ ವಿಧಾನ ದಂಡಿಭಾಮಹರಲ್ಲಿ ಕಂಡು ಬರುವುದಿಲ್ಲ. ಕಾವ್ಯಸಂಪದಕ್ಕೆ ಕಾರಣವಾದ ನೈಸರ್ಗಿಕ ಪ್ರತಿಭೆ, ಬುಧಜನೋಪಾಸನೆ, ಶ್ರುತಪರಿಚಯ, ಪೂರ್ವ ಕಾವ್ಯರಚನೆಗಳ ಅಭ್ಯಾಸ—ಇವುಗಳ ಪ್ರಸ್ತಾವವೇನೊ ದಂಡಿ ಭಾಮಹರಿಂದ ಸ್ವೀಕರಿಸಿದ್ದೆ. ಇನ್ನುಳಿದ ವಿಚಾರಗಳೆಲ್ಲ ಬಹ್ವಂಶದಲ್ಲಿ ಸ್ವಂತದ್ದು."[125]

ಪ್ರಾಣಿಗಳಿಗೆ ಸಹಜ ಭಾಷೆಯುಂಟು; ಅಂತೆಯೆ ಮಾನವರಲ್ಲೂ ಸಹಜವಾದ 'ಅಪ್ರಗಲ್ಭ ವಚನಪ್ರವೃತ್ತಿ'ಯುಂಟು (೧.೭). ಪ್ರಾಣಿಗಳಿಗೆ ಹೇಗೆ ಕಾಳು, ಕಡ್ಡಿ, ಹುಲ್ಲು ಎಂಬ ಭೇದ ಗೊತ್ತಿಲ್ಲವೊ ಹಾಗೆಯೆ 'ಅಶ್ರುತ ಪ್ರಕೃತಿ ಜನ'ಕ್ಕೆ (ಪಾಮರರಿಗೆ) ಗುಣದೋಷ ವಿವೇಕವಿಲ್ಲ (೧–೮).

ಎರಡನೆಯಂಶದ ಮೂಲ ದಂಡಿಯಲ್ಲಿ ಹೀಗಿದೆ: "ಶಾಸ್ತ್ರವನ್ನು ತಿಳಿಯದವನು ಇದು ಗುಣ, ಇದು ದೋಷ ಎಂದು ವಿಂಗಡಿಸಲು ಹೇಗೆ ತಾನೆ ಸಮರ್ಥನಾದಾನು? ಬಣ್ಣಗಳ ಭೇದಗಳನ್ನು ತಿಳಿಯಲು ಕುರುಡನಿಗೆ ಏನಾದರೂ ಸಾಧ್ಯವೆ?"[126]

ಆದ್ದರಿಂದ, ಕವಿಯಾಗಬಯಸುವವನು 'ಪರಮಾಗಮಕೋವಿದ'ನಾಗಬೇಕು; 'ಪೂರ್ವಕಾವ್ಯರಚನೆ'ಗಳನ್ನು ಅಭ್ಯಸಿಸಬೇಕು. ಆಗ ಅವನ ಪದಪ್ರಯೋಗದಲ್ಲಿ 'ಜಾಣು' ಮತ್ತು 'ಬೆಡಂಗು' ಉಂಟಾಗುತ್ತದೆ (೧.೯).

ಜಡಜನರೆಲ್ಲ ಗುರೂಪದೇಶ ಕ್ರಮದಿಂದ ಓದನ್ನು ಕಲಿಯಬಹುದು; ಆದರೆ ಅದು 'ನುಡಿವಲ್ಮೆ'ಯಲ್ಲ:

> ಜಡಜನಮುಮೆಲ್ಲಮೋದಂ
> ತಡೆಯದೆ ಕಲ್ಗುಂ ಗುರೂಪದೇಶಕ್ರಮದಿಂ
> ನುಡಿವಲ್ಮೆಯಲ್ತದೇಂ ಕ
> ಲ್ತೊಡನೋದುವುವಲ್ತೆ ಗಿಳಿಗಳುಂ ಪುರುಳಿಗಳುಂ ॥ (೧–೧೦)

ಇದಕ್ಕೆ ಮೂಲ ಭಾಮಹನಲ್ಲಿ ಹೀಗಿದೆ:

> ಗುರೂಪದೇಶಾದಧ್ಯೇತುಂ ಶಾಸ್ತ್ರಂ ಜಡಧಿಯೋಽಪ್ಯಲಂ
> ಕಾವ್ಯಂ ತು ಜಾಯತೇ ಜಾತು ಕಸ್ಯಚಿತ್ ಪ್ರತಿಭಾವತಃ ॥ (೧–೫)

(ಮಂದಬುದ್ಧಿಗಳು ಬೇಕಾದರೂ ಗುರುಗಳ ಉಪದೇಶದಿಂದ ಶಾಸ್ತ್ರವನ್ನು ಅಭ್ಯಾಸ ಮಾಡಬಹುದು. ಆದರೆ ಕಾವ್ಯ ಹುಟ್ಟುವುದು ಎಲ್ಲೋ ಲಕ್ಷಕ್ಕೊಬ್ಬ ಪ್ರತಿಭಾಶಾಲಿ ಯಿಂದ ಮಾತ್ರ).

'ವಾಗ್ವಿದಗ್ಧತಾನಿಪುಣತೆ'. ಸಿದ್ಧಿಸಬೇಕಾದರೆ ಏನೇನು ಬೇಕು ಎಂಬುದನ್ನು ಮಾರ್ಗಕಾರ ಹೇಳುತ್ತಾನೆ:

ಪ್ರತಿಭಾವತ್ವಮುಮಕೃತಕ
ಚತುರತೆಯುಂ ಪರಮಬುಧಜನೋಪಾಸನಮುಂ
ಶ್ರುತಪರಿಚಯಮುಂ ತರ್ಕುಂ
ಪ್ರತೀತಿಯಂ ವಾಗ್ವಿದಗ್ಧತಾ ನಿಪುಣತೆಯೊಳ್ ॥ (೧-೧೧)

ಮೂಲ, ದಂಡಿಯಲ್ಲಿ:

ನೈಸರ್ಗಿಕೀ ಚ ಪ್ರತಿಭಾ ಶ್ರುತಂ ಚ ಬಹುನಿರ್ಮಲಂ
ಅಮಂದಶ್ಚಾಭಿಯೋಗೋಽಸ್ಯಾಃ ಕಾರಣಂ ಕಾವ್ಯಸಂಪದಃ ॥ (೧-೧೦೩)

(ಸ್ವಭಾವಸಿದ್ಧವಾದ ಪ್ರತಿಭೆ, ಅಸ್ಖಲಿತವಾದ ವಿದ್ಯೆ, ಸಂತತವಾದ ಅಭ್ಯಾಸ ಈ ಮೂರೂ ಕಾವ್ಯಸಂಪತ್ತಿಗೆ ಕಾರಣ).

'ಅಕೃತಕ ಚತುರತೆ' ಹಾಗೂ 'ಬುಧಜನೋಪಾಸನ' ಮೂಲದಲ್ಲಿ ಉಕ್ತವಾಗಿಲ್ಲ. ಆದರೆ ಭಾಮಹನಲ್ಲಿ 'ತದ್ವಿದುಪಾಸನಂ' ಎಂದಿದೆ (೧.೧೦). 'ಅಮಂದಾಭಿಯೋಗ'ವನ್ನು ಬಿಟ್ಟಿದ್ದಾನೆ ಮಾರ್ಗಕಾರ.

'ಕವಿಕೃತಿಯಲ್ಲಿ ವ್ಯಾಪಿಸಿರುವ ಭಾವ ಓದುಗನ ಮನಸ್ಸನ್ನು ಹೊಸದಾಗಿಸಬಲ್ಲುದು'; ರಚಿಸಿದರೆ ಅಂಥ ಕಾವ್ಯವನ್ನು ರಚಿಸಬೇಕು. ಇಲ್ಲವಾದರೆ ಕಾವ್ಯರಚನೆಯ ವ್ಯಸನವೇಕೆ? ಆಯಾಸವೇಕೆ? ಕವಿಯಾಗದಿದ್ದರೆ ಕೊಳ್ಳೆಹೋಗುವುದೇನು?—

ಪಸರಿಸಿದಾ ಬಗೆ ಮನಮಂ
ಪೊಸತಾಗೆ ನೆಗಟ್ಟಲಱಿಯನಾ ರಚನೆಯೊಳೇಂ
ಬಸನಂ ತನಗಿನಿತಱ ಬೇ
ವಸಮೇಂ ಕವರ್ದರುಮೊಳರೆ ಕವಿಯಲ್ಲದರಂ ॥ (೧-೧೨)

ಮೂಲ, ಭಾಮಹನಲ್ಲಿ:

ನಾಕವಿತ್ವಮಧರ್ಮಾಯ ವ್ಯಾಧಯೇ ದಂಡನಾಯ ವಾ
ಕುಕವಿತ್ವಂ ಪುನಃ ಸಾಕ್ಷಾನ್ಮೃತಿಮಾಹುರ್ಮನೀಷಿಣಃ ॥ (೧-೧೨)

(ಕವಿತ್ವವನ್ನು ಮಾಡದಿದ್ದರೆ ಯಾವ ಪಾಪವೂ ಇಲ್ಲ; ಯಾವ ರೋಗವೂ ಬರುವುದಿಲ್ಲ; ಯಾರೂ ಶಿಕ್ಷೆ ವಿಧಿಸುವುದಿಲ್ಲ. ಆದರೆ ಕೆಟ್ಟ ಕವಿತ್ವವನ್ನು ಮಾಡುವುದು ಬದುಕಿದ್ದೂ ಮರಣವೇ ಸರಿ ಎಂದು ಬಲ್ಲವರು ಹೇಳುತ್ತಾರೆ.)

'ಕವಿರಾಜಮಾರ್ಗ'ದ ಈ ಪದ್ಯದಲ್ಲಿ (೧-೧೨) ವ್ಯಕ್ತವಾಗಿರುವ "ಕಾವ್ಯವು ಸಂಸ್ಕಾರಕಾರಕ ಎಂಬ ಈ ಭಾವನೆ ಪೂರ್ವಲಾಕ್ಷಣಿಕರಲ್ಲಿ ಇದ್ದಂತೆ ಕಾಣುವುದಿಲ್ಲ" ಎನ್ನುತ್ತಾರೆ ಎಂ.ವಿ.ಸೀ; ಆದರೆ ಅವರು ಕೊಡುವ ಪದ್ಯಾರ್ಥ ಸಮಂಜಸವಾಗಿಲ್ಲ.

ಬುಧರಿಗೆ ಸಂತೋಷವನ್ನುಂಟುಮಾಡಿ, ಅವರ ಹೃದಯದಲ್ಲಿ 'ಮಣಿಹಾರಂಬೋಲ್

ಸೊಗಯಿಸುವ ವಚನವಿರಚನೆ' ಪ್ರಸಿದ್ಧವಾಗುತ್ತದೆಂದೂ 'ಅದಱಿ ಪೆಂಪತಿಸುಲಭಂ' ಎಂದೂ ಹೇಳುತ್ತಾನೆ ಮಾರ್ಗಕಾರ (೧.೧೩). ಇಲ್ಲಿ ಕಾವ್ಯಕ್ಕೆ ಹೃದ್ಯತೆಯೆ ಒರೆಗಲ್ಲೆಂದೂ ಅದರ ಹಿರಿಮೆಯ ಅರಿವು ಅತಿ ಸುಲಭವೆಂದೂ ಹೇಳಲಾಗಿದೆ."

ಬೇರೆಯವರ ಮಾತುಗಳನ್ನೆ ತನ್ನ ಕೃತಿಯಲ್ಲಿಡುವವನು 'ನಗದ ಗುಹಾಧ್ವನಿಯುವೊಲ್ ಅನರ್ಥವಚನಂ' ಎನ್ನುತ್ತಾನೆ ಮಾರ್ಗಕಾರ (೧.೧೪). "ರಾಜಶೇಖರನು ತನ್ನ 'ಕಾವ್ಯಮೀಮಾಂಸೆ'ಯಲ್ಲಿ ವಿಸ್ತಾರವಾಗಿ ಪ್ರತಿಪಾದಿಸಿರುವ ಕೃತಿಚೌರ್ಯ ಪ್ರಕರಣದಲ್ಲಿನ ಶಬ್ದಹರಣದ ಸೂಚನೆ ಇಲ್ಲಿ ಹೊಳೆಯುತ್ತಿದೆ."[127]

ಮುಂದೆ ಮಾರ್ಗಕಾರ ಕವಿಗಳಲ್ಲಿ ವಿವಿಧ ಸ್ತರಗಳನ್ನು ಕಲ್ಪಿಸಿ, ಅವರನ್ನು ವರ್ಗೀಕರಿಸುತ್ತಾನೆ. ಈ ಭಾಗ ಮಾರ್ಗಕಾರನ ಸ್ವತಂತ್ರ ವಿವೇಚನಾಶಕ್ತಿಗೆ ದ್ಯೋತಕವಾಗಿದೆ; ಇಲ್ಲಿ ಅವನು ಯಾರಿಗೂ ಋಣಿಯಲ್ಲ. ಸಂಬಂಧಿಸಿದ ಪದ್ಯಗಳಿವು :

(೧) "ಕುಱಿತಂತು ಪೆಱರ ಬಗೆಯಂ...." ; (೨) "ನುಡಿಯಂ ಛಂದದೊಳೊಂದಿರೆ ...." ; (೩) "ಮಾತಱಿವರ್ ಕೆಲಬರ್...." ; (೪) "ಪಾಪಮಿದು ಪುಣ್ಯಮಿದು...." ; (೫) ಲೌಕಿಕ ಸಾಮಯಿಕೋರು...." (೧.೧೫-೧೯)

ಈ ಪದ್ಯಗಳ ಬಗೆಗೆ ಎಂ. ವಿ. ಸೀ. ಅವರ ವ್ಯಾಖ್ಯಾನ ಹೀಗಿದೆ :

"ವಾಗ್ವಿದಗ್ಧತೆ ಅಥವಾ ನುಡಿಬಲ್ಮೆ ಕವಿಪದವಿಯ ನೆಲೆಗಟ್ಟು. ಕವಿವೃಷಭ ಅಥವಾ ಕವಿಶ್ರೇಷ್ಠ ಎನ್ನಿಸಿಕೊಳ್ಳಬೇಕಾದರೆ ಈ ಕೆಳಹಂತದಿಂದ ಹಲವು ಹಂತಗಳನ್ನು ಹಾದು ಮೇಲೇರಬೇಕು. ಹೀಗೆ,ಕವಿಲೋಕದಲ್ಲಿ ಹಲವು ವರ್ಗಗಳು,ದರ್ಜೆಗಳು ಏರ್ಪಡುತ್ತವೆ. ಈ ಕವಿಜನತಾರತಮ್ಯವಿವಕ್ಷೆಯ ವಿನ್ಯಾಸ ಕವಿರಾಜಮಾರ್ಗದಲ್ಲಿ ಮನೋಜ್ಞವಾಗಿ ಮೂಡಿಬಂದಿದೆ. ಮಾತು ಆಡಬಲ್ಲ ಮಾತು ಅರಿತವರಲ್ಲ ; ಅರಿತು ಕುಱಿತು, ಅರಿತದ್ದು ಕುಱಿತದ್ದು ಇತರರ ಮನತಟ್ಟುವಂತೆ ತಿಳಿಯಹೇಳಬಲ್ಲವನೆ 'ಮಾತಱಿವಂ' (=ಶಬ್ದಕವಿ) ; ಕಿಱಿದರಲ್ಲಿ (ಮಿತವಚನದಲ್ಲಿ) ಹಿರಿದಾದ ಅರ್ಥವನ್ನು ತಿಳಿಯಹೇಳಬಲ್ಲವನು ಆತನಿಗಿಂತ ನಿಪುಣನು (=ಅರ್ಥಕವಿ) ; ಮಾತನ್ನು ಛಂದಸ್ಸಿನಲ್ಲಿ ಹೇಳಬಲ್ಲವನು ಆತನಿಗಿಂತ ಜಾಣ (=ಪದ್ಯಕವಿ) ; 'ಮಹಾಧ್ವಕೃತಿ'ಗಳನ್ನು ಎಂದರೆ ಮಾರ್ಗೀಯ ಮಹಾಕಾವ್ಯಗಳನ್ನು ನಿರ್ಮಿಸಬಲ್ಲವನು ( = ಮಹಾಮಾರ್ಗಕವಿ) ಇವರೆಲ್ಲರಿಗಿಂತಲೂ ಸಮರ್ಥನಾದವನು. ಲೋಕದಲ್ಲಿ ಮಾತರಿವವರು ಎಲ್ಲೋ ಕೆಲವರು ; ಅವರಲ್ಲಿ 'ಕವಿತಾನೀತಿ' ಸಮರ್ಥರೂ 'ನೀತಿವಿದ'ರೂ ಆದ 'ಪರಮಕವಿ ವೃಷಭರ್ಕಳ್' (=ಕವೀಶ್ವರರು, ಕವಿರಾಜರು) ಇನ್ನೂ ವಿರಳ. ....ಕವಿರಾಜಮಾರ್ಗದ ಈ ಕವಿಜನತಾರತಮ್ಯವಿವಕ್ಷೆ ಪೂರ್ವಲಾಕ್ಷಣಿಕರೂ ಸ್ಪಷ್ಟಪಡಿಸದಿರುವ ಒಂದು ಹೊಸ ವಿಚಾರ. ತರುವಾಯದ ಸಂಸ್ಕೃತ ಲಾಕ್ಷಣಿಕ ರಾಜಶೇಖರನು (೧೦ನೆಯ ಶತಮಾನ) ತನ್ನ 'ಕಾವ್ಯಮೀಮಾಂಸೆ'ಯಲ್ಲಿ ಕವಿಜನವರ್ಗ ವಿಶ್ಲೇಷಣೆಯನ್ನು ಹೆಚ್ಚು ಶಾಸ್ತ್ರೀಯವಾಗಿ ನಡೆಸಿದ್ದಾನೆ."

"ರಾಜಶೇಖರನು ಶಾಸ್ತ್ರಕವಿ, ಕಾವ್ಯಕವಿ, ಉಭಯಕವಿ ಎಂದು ಮೂರು ಸಾಮಾನ್ಯ ವರ್ಗಗಳನ್ನು ಹೇಳಿ, ಕಾವ್ಯಕವಿಗಳಲ್ಲಿ ರಚನಾಕವಿ, ಶಬ್ದಕವಿ, ಅರ್ಥಕವಿ, ಅಲಂಕಾರ

ಕವಿ, ಉಕ್ತಿಕವಿ, ರಸಕವಿ, ಮಾರ್ಗಕವಿ, ಶಾಸ್ತ್ರಾರ್ಥಕವಿ ಎಂಬ ಎಂಟು ಬಗೆಯ ಕವಿಗಳನ್ನು ವಿಂಗಡಿಸಿದ್ದಾನೆ. ರಾಜಶೇಖರನ ಎಣಿಕೆಯಂತೆ, ಈ ಎಂಟು ಬಗೆಯ ಕವಿಗಳ ಎಂಟು ಗುಣಗಳನ್ನೂ ಹೊಂದಿದವನೇ 'ಮಹಾಕವಿ'. 'ಕವಿರಾಜ' ಪದವಿ ಮಹಾಕವಿ ಪದವಿಗಿಂತ ಮೇಲಿನದು. ಕವಿರಾಜಮಾರ್ಗದಲ್ಲೂ ರಾಜಶೇಖರನ ಕಾವ್ಯಮೀಮಾಂಸೆಯಲ್ಲೂ ಕವಿಜನ ವರ್ಗೀಕರಣ ಸಂಬಂಧದಲ್ಲಿ ಕಂಡುಬರುವ ಸ್ಥೂಲ ಸಾಮ್ಯ ಗಮನಾರ್ಹ. ಕವಿರಾಜಮಾರ್ಗದ 'ಮಹಾಧ್ವಕೃತಿ'ಕಾರ (=ಮಹಾಮಾರ್ಗಕವಿ) ಬಹುಶಃ ರಾಜಶೇಖರನ 'ಮಾರ್ಗಕವಿ'ಗಿಂತ ಮೇಲಿನವನು; ಅವನು ಮಹಾಕವಿ. ಮಹಾಕವಿಗಿಂತ ಮೇಲಿನವನು ಕವಿವೃಷಭ ಅಥವಾ ಕವೀಶ್ವರ. ಈ ವಿಷಯದಲ್ಲಿ ರಾಜಶೇಖರನು ಕವಿರಾಜಮಾರ್ಗದಿಂದ ಸ್ಫೂರ್ತಿ ಪಡೆದಿರಬಹುದು ಎಂಬ ಊಹೆಗೆ ಅವಕಾಶವಿದೆ. ರಾಜಶೇಖರ ಕನ್ನಡನಾಡು ನುಡಿಗಳ ಪರಿಚಯಹೊಂದಿದ್ದನೆನ್ನುವುದಕ್ಕೆ ಆಧಾರವಿದೆ."[೧೨೮]

ರಾಜಶೇಖರನ ವರ್ಗೀಕರಣ ಹೆಚ್ಚು ಶಾಸ್ತ್ರೀಯವಾಗಿರಬಹುದು. ಆದರೆ ಅದು ಮಾರ್ಗಕಾರನ ನಿರೂಪಣೆಯಷ್ಟು ಅರ್ಥಗರ್ಭಿತವೂ ಔಚಿತ್ಯಪೂರ್ಣವೂ ಆಗಿಲ್ಲವೆನಿಸುತ್ತದೆ. ಆದ್ದರಿಂದ ರಾಜಶೇಖರನ ವರ್ಗೀಕರಣವನ್ನು ಬದಿಗಿರಿಸಿ, ಮಾರ್ಗಕಾರನ 'ಮಹಾಧ್ವಕವಿ', 'ಪರಮಕವಿವೃಷಭ', 'ಪರಮಕವಿ ಪ್ರಧಾನ', 'ಕವೀಶ' ಎಂಬ ಮಾತುಗಳೆಲ್ಲ ಸಮಾನಾರ್ಥಕವೆಂದೂ 'ಮಹಾಕವಿ' ಸೂಚಕವೆಂದೂ ಭಾವಿಸಿ, ಅವನ ಕವಿಸ್ತರ ಪ್ರತಿಪಾದನೆಯನ್ನು ಕುರಿತು ತುಸು ವಿಚಾರ ಮಾಡಬಹುದು.[೧೨೯]

ಕವಿಗಳೆಲ್ಲ ಸನಾಮರಾದರೂ ಸಮಾನರಲ್ಲ; ಅವರಲ್ಲಿ ತರತಮ ಭೇದಗಳುಂಟು, ವರ್ಗಗಳುಂಟು; ಅದಕ್ಕನುಸಾರವಾಗಿ ಕಾವ್ಯಪ್ರಯೋಜನಗಳಲ್ಲೂ ವಿಭಿನ್ನತೆಯುಂಟು ಎಂಬುದು ಈ ಭಾಗದಲ್ಲಿ ಸೊಗಸಾಗಿ ವಿದಿತವಾಗುತ್ತದೆ.

ಕವಿಲೋಕದ ಮೊದಲನೆಯ ಎರಡು ಸ್ತರಗಳು ೧–೧೫ನೆಯ ಪದ್ಯದಲ್ಲಿ ಪ್ರಸ್ತಾಪಗೊಂಡಿವೆ. 'ತನ್ನ ಮನಸ್ಸಿನಲ್ಲಿ ಮೂಡಿದ ಎಲ್ಲ ಭಾವಾಲೋಚನೆಗಳನ್ನು ಕೇಳುವವರ ಚಿತ್ತಕ್ಕೆ ನಾಟುವಂತೆ ಪರಿಣಾಮಕಾರಿಯಾಗಿ ಮಾತಿನಲ್ಲಿ ಅಭಿವ್ಯಕ್ತಿಗೊಳಿಸಲು ಸಮರ್ಥನಾದವನು ಮಾತುಬಲ್ಲವ (ಮಾತಱಿವಂ). ಇದು ಕವಿಯ ಮೊದಲ ಹಂತ. ಸಾಮಾನ್ಯರಲ್ಲೂ ಭಾವಗಳಿರುತ್ತವೆ, ತೀವ್ರವಾಗಿಯೆ ಇರುತ್ತವೆ; ಆದರೆ ಅವರು ಅವುಗಳನ್ನು ನುಡಿಯಲ್ಲಿ ಯಶಸ್ವಿಯಾಗಿ ಪ್ರಕಟಿಸಲಾರರು. ಅವರು ಒಂದು ರೀತಿಯಲ್ಲಿ ಮೂಕರು. ಕವಿಯಾದರೊ ವಾಚಾಲ. ಆದ್ದರಿಂದ ನಿವೇದನಶಕ್ತಿಯೆ (Communication) ಕಾವ್ಯದ ಪ್ರಥಮ ಲಕ್ಷಣ. ಇದನ್ನು ಪಡೆದಿದ್ದರೆ ಅಷ್ಟೇ ಸಾಕು, ವ್ಯಕ್ತಿ ಕವಿನಾಮಧೇಯಕ್ಕೆ ಯೋಗ್ಯ.

ಆದರೆ ಮಾತಿನ ಬಲ್ಮೆಯೊಂದೆ ಸಾಲದು. ಹೇಳಬೇಕಾದುದನ್ನು ಸಂಕ್ಷಿಪ್ತವಾಗಿ ಹೇಳುವುದು ಮುಖ್ಯ: ಅದು ಬೇರೆಯೇ ಒಂದು ಶಕ್ತಿ; ಅದರಿಂದ ಮುಂದಿನ ಹಂತ ಏರ್ಪಡುತ್ತದೆ. ಕಿರಿದರಲ್ಲಿ ಹಿರಿದಾದ ಅರ್ಥವನ್ನು ತುಂಬಿ ಹೇಳಬಲ್ಲವನು ಮಾತರಿವವನಿಗಿಂತ ನಿಪುಣ ಎನ್ನುವಲ್ಲಿ ಕವಿರಾಜಮಾರ್ಗಕಾರ ಧ್ವನಿ ಸಾಮರ್ಥ್ಯವನ್ನು ಸೂಚಿಸಿ

ದ್ದಾನೆ. ಮನಸ್ಸಿನಲ್ಲಿ ಹುಟ್ಟಿದ್ದನ್ನು ಇತರರು ಗ್ರಹಿಸುವಂತೆ ನುಡಿಯಲ್ಲಿ ಹೊಮ್ಮಿಸುವುದು ಸಾಧಾರಣ ಗುಣವೇನಲ್ಲ; ಆದರೆ ಅದನ್ನೆ ಧ್ವನಿಪೂರ್ಣವಾಗಿ ಹೇಳಿದಾಗ ಅರ್ಥ ರಮಣೀಯಾರ್ಥವಾಗಿ ಪರಿಣಮಿಸಿ, ಕೇಳುವವರಿಗೆ ಸಂತೋಷವಾಗುತ್ತದೆ. ಇದು ಮೊದಲನೆಯದಕ್ಕಿಂತ ಶ್ರೇಷ್ಠ ಗುಣ, ನಿಸ್ಸಂದೇಹವಾಗಿ.

ಈ ಧ್ವನಿಪೂರ್ಣವಾದ ಅಭಿವ್ಯಕ್ತಿ ಗದ್ಯದಲ್ಲಿ ಇರುವುದೂ ಸಾಧ್ಯ; ಗದ್ಯದಲ್ಲಿ ಕಾವ್ಯ ಇರಬಾರದೆಂದಿಲ್ಲ. ಆದರೆ ಕಾವ್ಯ ಇನ್ನೂ ಉತ್ತಮವಾಗುವುದು ಯಾವಾಗ ಎಂದರೆ ಅದು ಛಂದೋಬದ್ಧವಾದಾಗ. ಆದ್ದರಿಂದಲೇ ಕವಿರಾಜಮಾರ್ಗಕಾರ ಹೇಳುತ್ತಾನೆ, "ನುಡಿಯಂ ಛಂದದೊಳೊಂದಿರೆ ತೊಡರ್ಚಲಱಿವಾತನಾತನಿಂದಂ ಜಾಣಂ" ಎಂದು. ಕಿರಿದರಲ್ಲಿ ಹಿರಿದರ್ಥವನ್ನು ಹೇಳುವವನಿಗಿಂತ ಅದನ್ನು ಛಂದಸ್ಸಿನಲ್ಲಿ ಹೇಳುವವನ ಹಂತ ಮತ್ತೂ ಮುಂದಿನದು. ಛಂದಸ್ಸು ಕಾವ್ಯದ ಅನಿವಾರ್ಯಾಂಗ; ಮ್ಯಾಥ್ಯೂ ಆರ್ನಾಲ್ಡ್ ಹೇಳುವಂತೆ, ಅದರ 'ಪರಿಪೂರ್ಣತೆಯ ಒಂದು ಭಾಗ'. ಛಂದೋರಾಹಿತ್ಯದಿಂದ ಕಾವ್ಯತ್ವ ಅಷ್ಟರಮಟ್ಟಿಗೆ ಊನವಾಗುತ್ತದೆ. ಆದ್ದರಿಂದ ಛಂದೋಬದ್ಧವಾಗಿ ಕಾವ್ಯ ರಚನೆ ಮಾಡುವ ಕವಿ ಹಿಂದಿನವರಿಗಿಂತ ಎತ್ತರವಾಗಿ ತೃತೀಯ ಸ್ತರದಲ್ಲಿ ನಿಲ್ಲುತ್ತಾನೆ.

ಇನ್ನೂ ಮುಂದಿನ ಪರಮಸ್ತರವೊಂದಿದೆ; ಅದನ್ನು ಮುಟ್ಟಿದವರು ಮಹಾಕವಿಗಳು; ಕವಿರಾಜಮಾರ್ಗಕಾರನ ಮಾತಿನಲ್ಲಿ ಹೇಳುವುದಾದರೆ 'ಮಹಾಧ್ವಕೃತಿ' ನಿರ್ಮಾಪಕರು, 'ಪರಮಕವಿವೃಷಭರು', 'ಪರಮಕವಿ ಪ್ರಧಾನರು'. ಇವರು ಎಲ್ಲರಿಗಿಂತ ದೊಡ್ಡವರು. "ತಡೆಯದೆ ಮಹಾಧ್ವಕೃತಿಗಳನೊಡರಿಸಲಾರ್ಪಾತನೆಲ್ಲರಿಂದಂ ಬಲ್ಲಂ."

ಕಾವ್ಯದಲ್ಲಿ ಕವಿ ಉನ್ನತವಾದ ಅಭಿವ್ಯಕ್ತಿಸತ್ವವನ್ನು ಮೆರೆದಿರಬಹುದು; ಧ್ವನಿ ಮಹಿಮೆಯನ್ನು ತೋರ್ಪಡಿಸಿರಬಹುದು; ಅವನ ಛಂದಸ್ಸು ಲೋಕಮೋಹಕವಾಗಿರಬಹುದು. ಇಷ್ಟೆಲ್ಲ ಇದ್ದೂ ಅದು ಕಲೆಗಾಗಿ ಕಲೆ ಎಂಬ ಸೂತ್ರಕ್ಕೆ ಮಾತ್ರ ನಿದರ್ಶನವಾಗಿ ಪರಿಣಮಿಸಿ, ಅತ್ಯುದಾತ್ತವಾಗದಿರುವುದು ಸಾಧ್ಯ. ಆದರೆ ಪರಮಕವಿ ವೃಷಭರು, ಪರಮಕವಿ ಪ್ರಧಾನರು ಕಟ್ಟುವ ಕಾವ್ಯ ಈ ಎಲ್ಲ ಗುಣಗಳನ್ನೂ ಮೈಗೂಡಿಸಿಕೊಂಡು ಮತ್ತೂ ಮುಂದೆ ಹೋಗುತ್ತದೆ; 'ಮಹಾಧ್ವಕೃತಿ'ಯಾಗುತ್ತದೆ. ಅದು ಮುಂದೆ ಬರುವ ಕವಿಗಳಿಗೆ 'ಮಹಾಧ್ವ'ವೊಂದನ್ನು ತೆರೆಯುತ್ತದೆ; ಅದಕ್ಕಿಂತ ಮಿಗಿಲಾಗಿ ಜನ ಜೀವನಕ್ಕೆ 'ಮಹಾಧ್ವ'ವನ್ನು ತೋರುತ್ತದೆ. ಅಷ್ಟೇ ಅಲ್ಲ, ಪ್ರಾಚೀನ ಮಹಾಕವಿಗಳ 'ಮಹಾಧ್ವ'ವನ್ನೆ ಅದು ಅನುಸರಿಸುತ್ತದೆ. ಯಾವ ಅರ್ಥದಲ್ಲಿ ಭಾವಿಸಿದರೂ ಅದು ಮಾರ್ಗಕೃತಿಯೇ.

ಕವಿ-ಕಾವ್ಯದ ಈ ನಾಲ್ಕನೆಯ ಸ್ತರವನ್ನು ಕವಿರಾಜಮಾರ್ಗಕಾರ ೧-೧೭, ೧೮ನೆಯ ಪದ್ಯಗಳಲ್ಲಿ ನಿರೂಪಿಸಿದ್ದಾನೆ: ನಿವೇದನಶಕ್ತಿ, ಧ್ವನಿಶಕ್ತಿಗಳು ಸಿದ್ಧಿಸಿದರೆ ಕವಿಗೆ ಕವಿತಾನೀತಿ ವಶವಾದಂತೆಯೇ; ಆದರೆ ಜೀವನ ನೀತಿಯನ್ನು ಅವನು ಚಿತ್ರಿಸದಿದ್ದರೆ ಅದು ಉಚ್ಚವರ್ಗದ ಕಾವ್ಯವಾಗದು. ನೀತಿ ಕವಿತಾನೀತಿಗಳ ಸಮನ್ವಯದಿಂದ ಮಹಾಕಾವ್ಯ ಆವಿರ್ಭವಿಸುತ್ತದೆ. ಕಾವ್ಯಮೌಲ್ಯಗಳೇ ಸರ್ವಸ್ವವೆಂದು ತಿಳಿದುಕೊಂಡು

ವಿರಚಿಸಿದ ಕಾವ್ಯದಿಂದ ಬದುಕಿಗೆ ಪ್ರಯೋಜನವಿಲ್ಲ; ಜೀವನಮೌಲ್ಯಗಳನ್ನು ಕವಿ ಪ್ರತಿಪಾದಿಸಬೇಕು. ಪಾಪ-ಪುಣ್ಯ, ಹಿತ-ಅಹಿತ, ಸುಖ-ದುಃಖ ಇವುಗಳ ಅರಿವು, ವಿವೇಚನೆ ಕಾವ್ಯಾನುಶೀಲನದಿಂದ ಉಂಟಾಗಬೇಕು. ಅಂಥ ಕಾವ್ಯ ಲೋಕತಾರಕ ವಾಗುತ್ತದೆ. ಕೇವಲ ಮನೋರಂಜನದಲ್ಲಿ ವಿರಮಿಸದೆ ಬಾಳಿಗೆ ತುಷ್ಟಿಪುಷ್ಟಿಗಳನ್ನು ದಾನಮಾಡುತ್ತದೆ. ರಾಮಾಯಣ ಭಾರತ ಭಾಗವತ ಮಹಾಪುರಾಣಗಳಂತಹ ಕಾವ್ಯ ಗಳು ಈ ವರ್ಗದವು; ಇವುಗಳನ್ನು ಬರೆದವರು ಪರಮಕವಿ ವೃಷಭರು, ಪರಮಕವಿ ಪ್ರಧಾನರು. ಕವಿರಾಜಮಾರ್ಗಕಾರ ಹೇಳುವ ಈ ಚತುರ್ಥವರ್ಗದ ಕಾವ್ಯ ಚತುರ್ಥ ವರ್ಗದ ಪುರುಷಾರ್ಥಕ್ಕೆ ಸಾಧಕವಾಗುವಂಥದು. ಕವಿಯ ಗುರಿ ಈ ಬಗೆಯ ಕಾವ್ಯ ಗಳ ರಚನೆಯ ಕಡೆಗಿರಬೇಕು.

ಕಾವ್ಯನಿರ್ಮಿತಿಯಲ್ಲಿ ಮೂಲಭೂತವಾದುದು ನುಡಿಬಲ್ಮೆ. ಮಾತು ಬಂದವರೆಲ್ಲ ಮಾತು ಬಲ್ಲವರೆಂದು ಅರ್ಥವಲ್ಲ ಎಂಬುದನ್ನು ಕವಿರಾಜಮಾರ್ಗಕಾರ ಸ್ಪಷ್ಟಪಡಿಸಿ ದ್ದಾನೆ. ಎಲ್ಲ ಜಡಜನಕ್ಕೂ ಮಾತು ಬರುತ್ತದೆ; ಹೇಳಿಕೊಟ್ಟರೆ ಗಿಳಿಗಳೂ ಪುರುಳಿ ಗಳೂ ಮಾತು ಕಲಿಯುತ್ತವೆ. ಅದರಲ್ಲೇನಿದೆ ಮಹತ್ವ? ಮಾತು ಬಲ್ಲವನು ಮಾತ್ರ ಕವಿಯಾಗುತ್ತಾನೆ; ಮುಂದೆ ಮುಂದೆ ಹೋಗಿ ಮಹಾಕವಿಯಾಗುತ್ತಾನೆ. ನುಡಿ, ನುಡಿಬಲ್ಮೆ, ಕಿರಿದರಲ್ಲಿ ಹಿರಿದನ್ನಡಗಿಸುವಿಕೆ, ನುಡಿಗೆ ಛಂದಸ್ಸನ್ನು ಅಳವಡಿಸುವಿಕೆ, ಮಹಾರ್ಥ್ವಕೃತಿಗಳ ವಿರಚನೆ—ಹೀಗೆ ಮಾತಿನ ನಾನಾ ಹಂತಗಳನ್ನು ಕವಿರಾಜಮಾರ್ಗ ಕಾರ ಎಚ್ಚರಿಕೆಯಿಂದ ಗಮನಿಸಿ ವಿಶದಪಡಿಸಿದ್ದಾನೆ.

ಕಾವ್ಯದ ಕಾರ್ಯ, ಪ್ರಯೋಜನಗಳು ಹಿಂದಿನ ಪದ್ಯಗಳಲ್ಲೆ ಉಕ್ತವಾಗಿವೆ; ಮುಂದೆಯೂ ಅವನ್ನು ಹೇಳಿದ್ದಾನೆ ಮಾರ್ಗಕಾರ:

ಅಧಿಕೃತ ಸತ್ಪುರುಷಾರ್ಥ
ಪ್ರಧಾನ ಧರ್ಮಾರ್ಥಕಾಮಮೋಕ್ಷಂಗಳವಾ
ಬುಧಜನ ವಿವಿಕ್ತ ಕಾವ್ಯ
ಪ್ರಧಾರಿತಾರ್ಥಂಗಳಖಿಳಭುವನಹಿತಂಗಳ್ ॥

ಲೋಕದೊಳದಱಂ ಕಾವ್ಯ
ಶ್ರೀಕರಣೋದ್ಯುಕ್ತನಕ್ಕೆ ಕವಿ ತನ್ನಱವಂ
ತಾಕಲ್ಪಾಂತಸ್ಥಾಯಿ
ಶ್ರೀಕೀರ್ತಿವಧೂಪ್ರಧಾನವಲ್ಲಭನಕ್ಕುಂ ॥ (೧-೩೦, ೩೧)

ಭಾಮಹನಲ್ಲಿ, ಮೂಲದ ಆಶಯ ಹೀಗೆ: "ಒಳ್ಳೆಯ ಕಾವ್ಯವನ್ನು ಬರೆಯುವುದರಿಂದ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳ ವಿಷಯದಲ್ಲಿ ಪ್ರಾವೀಣ್ಯವುಂಟಾಗುವುದಲ್ಲದೆ ಕಲೆಗಳಲ್ಲಿಯೂ ಆಸಕ್ತಿ ಹೆಚ್ಚುತ್ತದೆ. ಆನಂದ ಲಭಿಸುವು ದಲ್ಲದೆ ಕೀರ್ತಿಯೂ ಹರಡುತ್ತದೆ; ಆದ್ದರಿಂದ ಭೂಮಿಯಿರುವವರೆಗೂ ಒಂದೇ ಸಮ

ನಾಗಿ ಉಳಿಯುವ ಕೀರ್ತಿಯನ್ನು ಬಯಸುವ ವಿದ್ವಾಂಸನು ಕಾವ್ಯ ಬರೆಯುವ ಕಾರ್ಯವನ್ನು ಕೈಕೊಳ್ಳಬೇಕು." (೧–೨೮)

ಕಾವ್ಯದ ಪರಮ ಪ್ರಯೋಜನವಾದ ಆನಂದ (ಪ್ರೀತಿ)ವನ್ನೆ ತನ್ನ ಪದ್ಯದಲ್ಲಿ ಮಾರ್ಗಕಾರ ಹೇಳದಿರುವುದು ಆಶ್ಚರ್ಯಕರವಾಗಿದೆ. ಆದರೆ ಹಿಂದೆಯೆ (೧.೧೩) ಅದನ್ನು 'ಬುಧರೊಲವು' ಎಂದು ಹೇಳಿರುವುದರಿಂದ, ಇಲ್ಲಿ ಕೈಬಿಟ್ಟಿರಬಹುದು.

ಕಾವ್ಯಲಕ್ಷಣವನ್ನು ಮಾರ್ಗಕಾರ ಹೀಗೆ ತಿಳಿಸುತ್ತಾನೆ:

ಕವಿಭಾವಕೃತಾನೇಕ
ಪ್ರವಿಭಾಗ ವಿವಿಕ್ತ ಸೂಕ್ತ ಮಾರ್ಗಂ ಕಾವ್ಯಂ
ಸವಿಶೇಷ ಶಬ್ದರಚನಂ
ವಿವಿಧಾರ್ಥವ್ಯಕ್ತಿವರ್ತಿತಾಲಂಕಾರಂ ॥ (೧.೨೨)

ಮೂಲ, ಭಾಮಹನಲ್ಲಿ:

ಶಬ್ದಾರ್ಥೌ ಸಹಿತೌ ಕಾವ್ಯಂ.... (೧–೧೬)
(ಶಬ್ದ, ಅರ್ಥ ಎರಡೂ ಸೇರಿದಾಗ ಕಾವ್ಯವಾಗುತ್ತದೆ)

ದಂಡಿಯಲ್ಲಿ:

ತೈಃ ಶರೀರಂ ಚ ಕಾವ್ಯಾನಾಮಲಂಕಾರಾಶ್ಚ ದರ್ಶಿತಾಃ
ಶರೀರಂ ತಾವದಿಷ್ಟಾರ್ಥ ವ್ಯವಚ್ಛಿನ್ನಾ ಪದಾವಲಿಃ ॥ (೧–೧೦)

"ಮಾರ್ಗಕಾರನು ಭಾಮಹ ದಂಡಿ ಇವರಿಬ್ಬರ ಆಶಯಗಳನ್ನೂ ಅಳವಡಿಸಿಕೊಂಡಿದ್ದಾನೆ ತನ್ನ ನಿರೂಪಣೆಯಲ್ಲಿ. ಅಲ್ಲದೆ, ಕಾವ್ಯಕ್ಕೆ ಸಂಬಂಧಪಟ್ಟಂತೆ 'ಶಬ್ದ' ಮತ್ತು 'ಅರ್ಥ' ಎಂಬ ಪದಗಳ ಅರ್ಥವ್ಯಾಪ್ತಿಯನ್ನು ಸೂಚ್ಯವಾಗಿ ವಿಶದಪಡಿಸಿದ್ದಾನೆ. ಇದು ಅವನ ಕಾವ್ಯಶಾಸ್ತ್ರಾಭಿಜ್ಞತೆಗೆ ಕುರುಹು."[130] "ಒಂದೇ ಕಾವ್ಯ ಅಥವಾ ಶಬ್ದಾರ್ಥಗಳ ಸಾಹಿತ್ಯ (= ಸಾಮರಸ್ಯ)ವು ಬೇರೆ ಬೇರೆ ದೃಷ್ಟಿಗಳಿಂದ ಎರಡು, ಮೂರು, ನಾಲ್ಕು, ಐದಾಗುವುದನ್ನು ಭಾಮಹನು ಮುಂದಿನ ಶ್ಲೋಕಗಳಲ್ಲಿ ತೋರಿಸುತ್ತಾನೆ. ಈ ಶಬ್ದಾರ್ಥ ಸಾಹಿತ್ಯವೆಂದರೆ ಶಬ್ದಾರ್ಥಾಲಂಕಾರಗಳ ಸಂಪರ್ಕವೆಂಬುದು ನೃಪತುಂಗನ.... ಶ್ಲೋಕದಿಂದ ತಿಳಿಯುತ್ತದೆ."[131]

ಮಾರ್ಗಕಾರನ ಪ್ರಕೃತ ಪದ್ಯವನ್ನು ಕುರಿತು ರಂ. ಶ್ರೀ. ಮುಗಳಿ ಹೀಗೆ ಬರೆಯುತ್ತಾರೆ: "ದಂಡಿ ಭಾಮಹರನ್ನು ಅನುಸರಿಸಿ ಶಬ್ದಾರ್ಥ ಅಲಂಕಾರಗಳಿಂದ ಕೂಡಿದ್ದು ಕಾವ್ಯವೆಂದಿದ್ದರೂ ಇಲ್ಲಿಯ ಲಕ್ಷಣವು ಕವಿಭಾವತತ್ತ್ವವನ್ನು ಪ್ರತಿಪಾದಿಸಿ ಕವಿರಾಜಮಾರ್ಗಕಾರನ ಸಹೃದಯತೆಯನ್ನು ಹೊರಗೆಡವಿದೆ."[132]

ಭೀಮರಾವ ಚಿಟಗುಪ್ಪಿಯವರು ಹೀಗೆ ಅಭಿಪ್ರಾಯಿಸುತ್ತಾರೆ: "ನೃಪತುಂಗನ ಕಾವ್ಯಲಕ್ಷಣನಿರೂಪಣೆಯು ಭಾರತೀಯ ಕಾವ್ಯಮೀಮಾಂಸೆಗೆ ಒಂದು ಮಹತ್ವದ ಕೊಡುಗೆಯೆನ್ನಬಹುದು"; ವಾಸ್ತವ ಮತ್ತು ವ್ಯಾವಹಾರಿಕ ದೃಷ್ಟಿಯಿಂದ ನೃಪ

ತುಂಗನ ಈ ನಿರೂಪಣೆಗಿಂತ ಬೇರೊಂದು ಯುಕ್ತ ಮತ್ತು ಸುವೇದ್ಯ ನಿರೂಪಣೆಯು ಸಮಗ್ರ ಭಾರತೀಯ ಕಾವ್ಯಮೀಮಾಂಸೆಯಲ್ಲಿ ದೊರೆಯದೆಂಬುದನ್ನು ಕಡೆಗಣಿಸು ವಂತಿಲ್ಲ"; "ಕವಿರಾಜಮಾರ್ಗವು ಒಂದೊಮ್ಮೆ ಸಂಸ್ಕೃತದಲ್ಲಿ ಇದ್ದಿದ್ದರೆ ಭಾಮಹ, ದಂಡಿ, ಉದ್ಭಟಾದಿಗಳೊಡನೆ ನೃಪತುಂಗನಾದರೂ ಒಬ್ಬ ಗಣ್ಯ ಲಾಕ್ಷಣಿಕನಾಗುತ್ತಿದ್ದ. ಶಬ್ದ-ಅರ್ಥ-ಅಲಂಕಾರಗಳೊಂದಿಗೆ ಭಾವತತ್ತ್ವವನ್ನು ಸೇರಿಸಿ ನಿರೂಪಿಸಿದ ಆತನ ಕಾವ್ಯಲಕ್ಷಣದಿಂದ ಭಾರತೀಯ ಅಂದರೆ ಸಂಸ್ಕೃತ ಲಾಕ್ಷಣಿಕರ ಮತ್ತು ಪಾಶ್ಚಿಮಾತ್ಯ ಕಾವ್ಯಲಕ್ಷಣಗಳಲ್ಲಿ ಇಂದು ಕಂಡುಬರುವ ಅಂತರಕ್ಕೆ ಇಂಬು ದೊರೆಯುತ್ತಿದ್ದಿಲ್ಲ."

ಚಿಟಗುಪ್ಪಿ ಮತ್ತೆ ಬರೆಯುತ್ತಾರೆ:

"ಭಾವವನ್ನು ಸೇರಿಸಿ ಕಾವ್ಯಲಕ್ಷಣವನ್ನು ನಿರೂಪಿಸಿದ ಶ್ರೇಯಸ್ಸು ನೃಪತುಂಗ ನೊಬ್ಬನಿಗೇ ಸಲ್ಲುವಂತಿಲ್ಲ. ಆತನ ಗುರು ಜಿನಸೇನನು ತನ್ನ ಮಹಾಪುರಾಣದಲ್ಲಿ ಕಾವ್ಯ ಲಕ್ಷಣವನ್ನು ಇವೇ ಶಬ್ದಗಳಲ್ಲಿ 'ಕರ್ವೆಭಾರ್ವೋಽಥವಾ ಕರ್ಮ ಕಾವ್ಯಂ' ಎಂದು ಕಾವ್ಯದ ನಿರ್ವಚನವನ್ನು ಹೇಳಿರುವನು. ನೃಪತುಂಗ ಜಿನಸೇನರ ಈ ನಿರೂಪಣೆಯು ಈವರೆಗೆ ವಿದ್ವಾಂಸರ ಲಕ್ಷ್ಯಕ್ಕೆ ಬಂದಿಲ್ಲವೆಂದಿಲ್ಲ. ಕೆ. ಕೃಷ್ಣಮೂರ್ತಿ 'ಪಾಶ್ಚಾತ್ಯ ಕಾವ್ಯಮೀಮಾಂಸೆಯಲ್ಲಿ ಭಾವಕ್ಕೆ ಇಂಬು ದೊರೆತಿರುವುದು ೧೭ನೆಯ ಶ.ದ ನಂತರ: ಭಾರತದಲ್ಲಿ ಅದು ಮೊದಲಿನಿಂದಲೂ ಇದ್ದಿತು' ಎಂದು ಪ್ರತಿಪಾದಿಸುವಾಗ ಜಿನಸೇನನ ಕಾವ್ಯಲಕ್ಷಣದ ಈ ಶ್ಲೋಕವನ್ನೂ ಇದರ ಮುಂದಣ ಎಂಟು ಶ್ಲೋಕಗಳನ್ನೂ ಉದಾ ಹರಿಸಿರುವರು.

ಪರಿಸ್ಥಿತಿ ಇಂತಿರುವಾಗ ಜಿನಸೇನ-ನೃಪತುಂಗರ ಈ ಕಾವ್ಯಲಕ್ಷಣ ನಿರೂಪಣೆಯು ಸಮಗ್ರ ಭಾರತೀಯ ಕಾವ್ಯಮೀಮಾಂಸೆಯಲ್ಲಿ ಅಪೂರ್ವವೆಂದು ಪ್ರತಿಪಾದಿಸುವದು ದೇವತೆಗಳು ಕಾಲಿಡಲು ಅಂಜುವಲ್ಲಿ ಹೆಡ್ಡರು ನಿರ್ಭಯದಿಂದ ಕಾಲಿರಿಸುವರು ಎನ್ನು ವಂತಾಗಬಹುದೆ ಎಂಬ ಸಂದೇಹ ಮೂಡುತ್ತದೆ."[133]

"ನೃಪತುಂಗನ ಕಾವ್ಯಲಕ್ಷಣ ನಿರೂಪಣೆಯು ಅಪೂರ್ವ, ಪಾಶ್ಚಾತ್ಯ ಕಾವ್ಯಲಕ್ಷಣ ಗಳೊಂದಿಗೆ ಹೋಲಿಸಿದಾಗ ಭಾರತೀಯ ಕಾವ್ಯಲಕ್ಷಣಗಳಲ್ಲಿ ಕಂಡುಬರುವ ಕೊರತೆ ಯನ್ನು ಬಲುಮಟ್ಟಿಗೆ ತುಂಬಿಕೊಡುವಂಥಹುದು ಎಂದು ಪ್ರತಿಪಾದಿಸುವುದು ಅಡ್ಡದಾರಿ ಹಿಡಿದು ಹಳ್ಳಕ್ಕೆ ಬಿದ್ದಂತಾಗದು."[134]

ಚಿಟಗುಪ್ಪಿಯವರು 'ಭಾವ ಪ್ರಸ್ಥಾನ'ವೆಂಬುದೊಂದನ್ನು ಕಲ್ಪಿಸಿ, ಮಾರ್ಗಕಾರ ನನ್ನು ಅದರಲ್ಲಿ ಸೇರಿಸುತ್ತಾರೆ. ಆದರೆ ಅವರ ನಿಲುವಿನಲ್ಲಿ ಅಸ್ಥಿರತೆ ಎದ್ದುಕಾಣು ತ್ತಿದೆ. ಈ ಬಗ್ಗೆ ಎಂ. ವಿ. ಸೀ. ಅವರ ಪ್ರತಿಕ್ರಿಯೆ ಹೀಗಿದೆ: "ಮುಗಳಿಯವರ ಅಭಿಪ್ರಾಯವನ್ನು ವಿಸ್ತಾರವಾಗಿ ಪ್ರತಿಪಾದಿಸುವ ಒಂದು ಶ್ಲಾಘ್ಯ ಪ್ರಯತ್ನ ಚಿಟಗುಪ್ಪಿ ಯವರ ವ್ಯಾಖ್ಯಾನದಲ್ಲಿ ಮೈದಾಳಿದೆ....'ಅಲಂಕಾರಗಳಿಂದ ಕೂಡಿದ್ದು ಕಾವ್ಯ' ಎಂದು ಹೇಳುವಂತಿಲ್ಲ. ಕಾವ್ಯವೇ ಅಲಂಕಾರ ಎಂದು ತಿಳಿಯಬೇಕು. ಹಾಗೆ ತಿಳಿದಾಗ ಅಲಂಕಾರ ಶಬ್ದಕ್ಕೆ ಸೌಂದರ್ಯ ಎಂಬ ವ್ಯಾಪಕವಾದ ಅರ್ಥವನ್ನು ಗ್ರಹಿಸಬೇಕಾಗುತ್ತದೆ. ಇದು

ಕಾವ್ಯದ ಸಹಜ ಸೌಂದರ್ಯ, ಬಾಹ್ಯಗಳಾದ ಶಬ್ದಾರ್ಥಾಲಂಕಾರಗಳಿಂದ ದೊರೆತ್ತು ದಲ್ಲ; ಕವಿಭಾವಜನ್ಯ ಎಂದಮೇಲೆ, ಕಾವ್ಯಸೌಂದರ್ಯ ಕವಿಭಾವದಲ್ಲಿಯೇ ನಿಹಿತ ವಾಗಿರಬೇಕು. ಹೀಗೆ ಅರ್ಥ ಮಾಡಿದಾಗ, ಕವಿರಾಜಮಾರ್ಗಕಾರ ದಂಡಿಭಾಮಹರನ್ನು ಅನುಸರಿಸಿ, ಕಾವ್ಯತತ್ತ್ವವನ್ನು ಚೆನ್ನಾಗಿಯೇ ಗ್ರಹಿಸಿದ್ದಾನೆ ಎನ್ನಬೇಕಾಗುತ್ತದೆ. ಅವರು ಸೂಚ್ಯವಾಗಿ, ಸೂತ್ರಪ್ರಾಯವಾಗಿ ಹೇಳಿರುವುದನ್ನು ಇವನು (ಬಹುಶಃ ಜಿನ ಸೇನನ ಉಕ್ತಿಯಿಂದ ಪ್ರಭಾವಿತನಾಗಿ) 'ಕವಿಭಾವ' ಎಂಬ ಮಾತನ್ನು ಸೇರಿಸಿ ವಿಶದ ಪಡಿಸಿದ್ದಾನೆ. ಇಷ್ಟು ಮಾತ್ರದಿಂದ, ಮಾರ್ಗಕಾರನ ಕಾವ್ಯಲಕ್ಷಣ ನಿರೂಪಣೆ ಭಾರತೀಯ ಕಾವ್ಯಮೀಮಾಂಸೆಗೆ ಮಹತ್ವದ ಕೊಡುಗೆ ಎನ್ನುವುದು ಹೆಚ್ಚಿನ ಮಾತಾಗ ಬಹುದು." ಭಾಮಹನ ಸೂತ್ರದಲ್ಲಾಗಲಿ ದಂಡಿಯ ಸೂತ್ರದಲ್ಲಾಗಲಿ "ಅರ್ಥ ಎಂಬ ಮಾತಿಗೆ 'ಕಾವ್ಯಾರ್ಥ' ಎಂದು ಅರ್ಥ ಮಾಡಬೇಕೇ ಹೊರತು 'ಶಬ್ದಾರ್ಥ' ಎಂದಲ್ಲ. ಅರ್ಥವಿಲ್ಲದ ಶಬ್ದ ಯಾವುದು? 'ಇಷ್ಟಾರ್ಥ' (= ಕವಿ ಹೇಳಬೇಕೆಂದು ಇಷ್ಟ ಪಟ್ಟ ಅರ್ಥ, ಉದ್ದಿಷ್ಟಾರ್ಥ, intended meaning) ಎಂದರೆ ಕವಿಭಾವವೇ"[135] ಎಂದು ಅವರ ವಿವರಣೆ. ಒಟ್ಟಿನಲ್ಲಿ ಎಂ. ವಿ. ಸೀ. ಅವರ ನಿಲುವೆ ಸಮತೂಕದ್ದಾಗಿದೆ. 'ಕಾವ್ಯಾದರ್ಶ'ದಲ್ಲೆ ಒಂದು ಕಡೆ (೧.೩೦) 'ಕವಿಭಾವಕೃತಂ' ಎಂಬ ಮಾತು ಬಂದಿರು ವುದೂ ಗಮನಾರ್ಹ.

ಮುಂದೆ ಮಾರ್ಗಕಾರ 'ಕಾವ್ಯಪುರುಷ'ನನ್ನು ಉಲ್ಲೇಖಿಸಿ, ಅವನ ಶರೀರವು ಗದ್ಯ ಪದ್ಯವೆಂದು ದ್ವಿವಿಧ ಎಂಬುದಾಗಿ ಹೇಳುತ್ತಾನೆ (೧–೨೩, ೨೪)

"ಕವಿರಾಜಮಾರ್ಗ ಪೂರ್ವ ಲಕ್ಷಣಗ್ರಂಥಗಳಲ್ಲಿ ಎಲ್ಲಿಯೂ ಕಾವ್ಯಪುರುಷನ ಉಲ್ಲೇಖ ವಿಲ್ಲ. ಕವಿರಾಜಮಾರ್ಗದಲ್ಲಿ ಕಾವ್ಯದ ಶರೀರ ಮತ್ತು ಅಲಂಕಾರಗಳ ಪ್ರಸ್ತಾಪ ಮಾಡಿ 'ಬಹು ಪರಿಕರಮಾ ಕಾವ್ಯವಸ್ತು ಪುರುಷಂಗೆಂದುಂ' ಎಂದು ಕಾವ್ಯವನ್ನು 'ಪುರುಷ' ಎಂದು ರೂಪಕ ಮಾಡಿರುವುದು ಗಮನಾರ್ಹ ಸಂಗತಿ....ಮಾರ್ಗಕಾರನು ಕಾವ್ಯವನ್ನು ಮುಂದೆಲ್ಲ 'ಕೃತಿವಧು', 'ಕೃತಿನಾರಿ' ಎಂದೇ ನಿರ್ದೇಶ ಮಾಡಿದ್ದಾನೆ"[136] ಎನ್ನುತ್ತಾರೆ ಎಂ. ವಿ. ಸೀ. "ಸಂಸ್ಕೃತ ಕಾವ್ಯಮೀಮಾಂಸೆಯಲ್ಲಿ ಮೊತ್ತಮೊದಲಿಗೆ ರಾಜಶೇಖರನ ಸಾರಸ್ವತೀಯ ಕಾವ್ಯಪುರುಷನ ಕಥೆ ವಿಸ್ತಾರವಾಗಿ ನಿರೂಪಿತವಾಗಿದೆ....ಪ್ರಥಮ ಕನ್ನಡ ಲಕ್ಷಣಗ್ರಂಥವಾದ ಕವಿರಾಜಮಾರ್ಗದಲ್ಲಿಯ ಕಾವ್ಯಪುರುಷ ಪ್ರಸಕ್ತಿಯಿಂದ ರಾಜ ಶೇಖರನು ಪ್ರೇರಣೆ ಪಡೆದಿರಬಹುದೆ?"[137] ಎಂಬುದು ಅವರ ಊಹೆ.

ದಂಡಿ "ಪದ್ಯಂ ಗದ್ಯಂ ಚ ಮಿಶ್ರಂ ಚ ತತ್ ತ್ರಿಧೈವ ವ್ಯವಸ್ಥಿತಂ" (೧–೧೧) ಎಂದು 'ಕಾವ್ಯಾದರ್ಶ'ದಲ್ಲಿ ಹೇಳಿರುವಂತೆ ಮಾರ್ಗಕಾರನೂ ಗದ್ಯ, ಪದ್ಯ (೧–೨೪) ಹಾಗೂ 'ಗದ್ಯಪದ್ಯಸಮ್ಮಿಶ್ರಿತ' (೧–೨೭)ವನ್ನು ಹೇಳಿದ್ದಾನೆ. ಆದರೆ 'ಕಾವ್ಯಾದರ್ಶ'ದಲ್ಲಿ ಉಕ್ತವಾಗಿರುವ (೧–೩೧) 'ಚಂಪೂ'ವಿನ ಪ್ರಸ್ತಾಪ 'ಕವಿರಾಜಮಾರ್ಗ'ದಲ್ಲಿಲ್ಲ ಎಂಬು ದನ್ನು ಗಮನಿಸಬೇಕು.

## ದೋಷಾದೋಷ ವಿವೇಚನೆ

ಇನ್ನು, 'ಕವಿರಾಜಮಾರ್ಗ'ದ ದೋಷಾದೋಷ ಪ್ರಕರಣವನ್ನು ಪರಿಗಣಿಸಬಹುದು. ಮಾರ್ಗಕಾರ ನಿರೂಪಿಸಿರುವ ದೋಷಗಳಲ್ಲಿ ಕೆಲವು ವ್ಯಾಕರಣ, ಛಂದಶ್ಶಾಸ್ತ್ರಗಳಿಗೆ ಸಂಬಂಧಿಸಿದ್ದರೆ, ಮತ್ತೆ ಕೆಲವು ಕಾವ್ಯಮೀಮಾಂಸೆಗೆ ಸಂಬಂಧಿಸಿವೆ. ಕೆಲವು ದೋಷಗಳು ಸಂಸ್ಕೃತ ಕನ್ನಡ ಎರಡಕ್ಕೂ ಸಮಾನವಾಗಿದ್ದರೆ, ಇನ್ನು ಕೆಲವು ಕನ್ನಡಕ್ಕೇ ವಿಶಿಷ್ಟವಾದವು. ಅಂತೂ ಮಾರ್ಗಕಾರನ ಪ್ರಮುಖವಾದ ಕೊಡುಗೆಯಿರತಕ್ಕದ್ದೇ ಈ ಪ್ರಕರಣದಲ್ಲಿ ಎನ್ನಬಹುದು. ಈ ಬಗ್ಗೆ ವಿದ್ವಾಂಸರ ಕೆಲವು ಹೇಳಿಕೆಗಳನ್ನು ಲಕ್ಷಿಸಬಹುದು :

"ನಮ್ಮ ಅಭಿಪ್ರಾಯದಲ್ಲಿ ಕವಿರಾಜಮಾರ್ಗದಲ್ಲಿ ಶ್ರೀವಿಜಯನ ಪ್ರತಿಭೆ ಬೆಳಗಿರುವುದು ಪ್ರಥಮ ಪರಿಚ್ಛೇದದಲ್ಲಿ—ಅದರಲ್ಲಿ ವಿಶೇಷವಾಗಿ ಈ ದೋಷಾದೋಷ ವಿಚಾರ ವಿಮರ್ಶೆಯಲ್ಲಿ; ಅವನ ಸ್ವೋಪಜ್ಞತೆ, ಸ್ವತಂತ್ರ ವಿಚಾರಧಾರೆ ಮೆರೆದಿರುವುದು ಇಲ್ಲಿ; ಕನ್ನಡದ ಜೀವನಾಡಿಯನ್ನು ಹಿಡಿದು, ತನ್ನ ಭಾಷಾಭ್ಯಾಸಬಲವನ್ನು ಪ್ರಯೋಗಿಸಿರುವುದು ಇಲ್ಲಿ."[138]

"ಮಾರ್ಗಕಾರನ ಸ್ವೋಪಜ್ಞತೆ ಪ್ರಕಾಶಕ್ಕೆ ಬಂದಿರುವುದು ಕನ್ನಡಕ್ಕೆ ಸಂಬಂಧಪಟ್ಟಂತೆ ಹೇಳಿರುವ ಸ್ವತಂತ್ರ ವಿಚಾರಗಳಲ್ಲಿ. ಪ್ರಥಮ ಪರಿಚ್ಛೇದದ ಕಾವ್ಯದೋಷಗಳನ್ನು ಕನ್ನಡಕ್ಕೆ ಅನ್ವಯಿಸಿ ಹೇಳುವಲ್ಲಿ ಮಾರ್ಗಕಾರನ ಶಾಸ್ತ್ರಪ್ರತಿಭೆ ಸ್ಫುಟಗೊಂಡಿದೆ; ಆ ಸಂದರ್ಭದಲ್ಲಿ ಪ್ರತಿಪಾದಿತವಾಗಿರುವ ವ್ಯಾಕರಣಾಂಶಗಳಂತೂ ಕನ್ನಡ ಕಾವ್ಯಮೀಮಾಂಸೆಗೆ ಮಾರ್ಗಕಾರನು ಮುಡಿಪಿಟ್ಟ ಮಿಾಸಲು ಕಾಣಿಕೆ. ವ್ಯಾಕರಣಕ್ಕೂ ಕಾವ್ಯಮೀಮಾಂಸೆಗೂ ಏನು ಸಂಬಂಧ ಎಂಬ ಸಂದೇಹದ ಪ್ರಶ್ನೆ ನಮ್ಮನ್ನು ಬಾಧಿಸಿದರೆ ಮಾರ್ಗಕಾರನು ಮಾಡಿರುವ ವ್ಯಾಕರಣ ದೋಷಗಳ ವಿವೇಚನೆಯಲ್ಲಿ ಅದಕ್ಕೆ ಪರಿಹಾರ ದೊರಕುತ್ತದೆ.

ಕಾವ್ಯದೋಷ ಪ್ರಕರಣಕ್ಕೆ ಕವಿರಾಜಮಾರ್ಗದಲ್ಲಿ ಅಗ್ರಮಾನ್ಯತೆ ಸಂದಿರುವುದಕ್ಕೆ ಮುಖ್ಯ ಕಾರಣ, ಕಾವ್ಯ ಎಲ್ಲ ದೃಷ್ಟಿಗಳಿಂದಲೂ—ವ್ಯಾಕರಣ ದೃಷ್ಟಿಯಿಂದ ಕೂಡ—ನಿರ್ದುಷ್ಟವಾಗಿರಬೇಕೆಂಬುದು ಮಾರ್ಗಕಾರನ ನಿಲುವು. ಕಾವ್ಯದೋಷಗಳ ವಿಚಾರಗಳನ್ನು ದಂಡಿ 'ಕಾವ್ಯಾದರ್ಶ'ದ ಮೂರನೆಯ ಪರಿಚ್ಛೇದದಲ್ಲಿ ಕಿಂಚಿತ್ ಸ್ಪರ್ಶ ಮಾಡಿದ್ದಾನೆ; ಭಾಮಹನು 'ಕಾವ್ಯಾಲಂಕಾರ'ದ ನಾಲ್ಕನೆಯ ಅಧ್ಯಾಯದಲ್ಲಿ ಅದನ್ನು ವಿಸ್ತಾರವಾಗಿ ವಿವೇಚಿಸಿದ್ದಾನೆ. ಮಾರ್ಗಕಾರನಾದರೊ ದೋಷಪ್ರಕರಣವನ್ನು ಪ್ರಥಮ ಪರಿಚ್ಛೇದದಲ್ಲಿ ಅಳವಡಿಸಿ, ಆ ಮೂಲಕ ದೋಷವರ್ಜನಕ್ಕೆ ಕಾವ್ಯಮೀಮಾಂಸೆಯಲ್ಲಿ ಸಲ್ಲಬೇಕಾದ ಪ್ರಾಮುಖ್ಯವನ್ನು ಎತ್ತಿಹಿಡಿದಿದ್ದಾನೆ....ಮಾರ್ಗಕಾರನು ಕನ್ನಡ ಕಾವ್ಯಮೀಮಾಂಸೆಯ ಬೆಳವಣಿಗೆಗೂ ಕನ್ನಡ ವ್ಯಾಕರಣ ನಿರ್ಮಾಣಕ್ಕೂ ನಿರ್ದುಷ್ಟ ಕಾವ್ಯರಚನಾಪದ್ಧತಿಗೂ ಭದ್ರವಾದ ಅಡಿಪಾಯ ಹಾಕಿದನು."[139]

"ಕನ್ನಡನಾಡಿನಲ್ಲಿ ಕವಿವೃಷಭರು ಹುಟ್ಟಿ ಮಹಾಧ್ವಕೃತಿಗಳು ನಿರ್ಮಾಣವಾಗಬೇಕು ಎಂಬ ಉನ್ನತ ಆದರ್ಶವಿಟ್ಟುಕೊಂಡು ರಚಿತವಾದ ಕವಿರಾಜಮಾರ್ಗದಲ್ಲಿ ಕಾವ್ಯದೋಷ ಪ್ರಕರಣಕ್ಕೆ ಅಗ್ರಮಾನ್ಯತೆ ಸಂದಿರುವುದು ಕವಿರಾಜಮಾರ್ಗಕಾರನ ಔಚಿತ್ಯ ಜ್ಞಾನಕ್ಕೆ

ಸಾಕ್ಷಿ. ಉತ್ತಮಕಾವ್ಯ ದೋಷರಹಿತವಾಗಿದ್ದು, ಗುಣಸಹಿತವಾಗಿರಬೇಕು ಎಂಬುದು ಅವನ ದೃಷ್ಟಿ. ಗುಣಸಾಹಿತ್ಯಕ್ಕಿಂತಲೂ ದೋಷರಾಹಿತ್ಯಕ್ಕೆ ಅವನು ಆದ್ಯಗಮನ ಹರಿಸ ಬೇಕಾಗಿದ್ದುದು ಸಮಕಾಲೀನ ಕನ್ನಡ ಭಾಷಾಸ್ಥಿತಿಗತಿಯ ದೃಷ್ಟಿಯಿಂದ ತೀರಾ ಅವಶ್ಯ ವಾಗಿದ್ದಿತು."[140]

ಸಂದರ್ಭಾನುಸಾರ ದೋಷವೆ ಗುಣವಾಗಬಹುದೆಂಬುದೂ ಮಾರ್ಗಕಾರನಿಗೆ ಗೊತ್ತು. ಭಾಮಹ ದಂಡಿಯರ ದೃಷ್ಟಿಯಲ್ಲಿ ದೋಷಗಳು ನಿತ್ಯವಲ್ಲ, ಅನಿತ್ಯ. "ಕೆಲವೊಮ್ಮೆ ದೋಷಯುಕ್ತ ಪ್ರಯೋಗಗಳು ಆಶ್ರಯದ ಸೌಂದರ್ಯದಿಂದಲೂ ಚೆಲುವನ್ನು ತಳೆಯು ತ್ತವೆ; ಇನಿಯಳ ಕಣ್ಣಿನಲ್ಲಿ ಹಚ್ಚಿದ ಕಪ್ಪು ಕಾಡಿಗೆಯಂತೆ" ಎಂಬ ಭಾಮಹನ ಮಾತನ್ನು (೧. ೫೫) ನೆನೆಯಬಹುದು. ಔಚಿತ್ಯವೆ ಗುಣ, ಅನೌಚಿತ್ಯವೆ ದೋಷ. ಈ ಅರಿವು ಮಾರ್ಗಕಾರನಲ್ಲುಂಟು.

ಮೊದಲು ನಾಲ್ಕು 'ಕೃತಿದೋಷ'ಗಳನ್ನು ಶ್ರುತದುಷ್ಟ, ಅರ್ಥದುಷ್ಟ, ಶ್ರುತಿಕಷ್ಟ, ಕಲ್ಪನೋಕ್ತಿಕಷ್ಟ ಎಂಬುದಾಗಿ ಹೇಳುತ್ತಾನೆ ಮಾರ್ಗಕಾರ; ಇವು ಶಬ್ದದೋಷಗಳೆನ್ನ ಬಹುದು: (೧.೬೨)

ಮೂಲ, ಭಾಮಹನಲ್ಲಿ:

> ಶ್ರುತಿದುಷ್ಟಾರ್ಥದುಷ್ಟೇ ಚ ಕಲ್ಪನಾದುಷ್ಟಮಿತ್ಯಪಿ
> ಶ್ರುತಿಕಷ್ಟಂ ತಥೈವಾಹುರ್ವಾಚಾಂ ದೋಷಂ ಚತುರ್ವಿಧಂ ‖ (೧–೪೭)

(ಕೇಳಿದೊಡನೆ ಜುಗುಪ್ಸೆ ತರುವಂತಹುದು (ಶ್ರುತಿದುಷ್ಟ), ಅರ್ಥ ಕಠಿಣವಾದುದು (ಅರ್ಥದುಷ್ಟ), ಕಲ್ಪನೆ ಅಸಂಭವವಾದುದು (ಕಲ್ಪನಾದುಷ್ಟ), ಕಿವಿಗಳಿಗೆ ಕರ್ಕಶ ವಾದುದು (ಶ್ರುತಿಕಷ್ಟ)—ಹೀಗೆ ಶಬ್ದಗಳ ದೋಷಗಳು ನಾಲ್ಕು ಬಗೆಯೆಂದು ಹೇಳು ತ್ತಾರೆ).

ಈ ನಾಲ್ಕು ದೋಷಗಳಿಗೂ ಮಾರ್ಗಕಾರ ಲಕ್ಷ್ಯಗಳನ್ನು ಕೊಟ್ಟಿದ್ದಾನೆ (೧. ೬೩–೬೭); ಅವುಗಳನ್ನು ನೋಡಿದರೆ 'ಶ್ರುತಿಕಷ್ಟ', 'ಅರ್ಥದುಷ್ಟ'ಗಳ ವಿನಾ ಉಳಿದೆರಡು ದೋಷಗಳ ವಿಷಯದಲ್ಲಿ ಭಾಮಹನ ಅಭಿಪ್ರಾಯಕ್ಕೂ ಮಾರ್ಗಕಾರನದಕ್ಕೂ ವ್ಯತ್ಯಾಸ ವಿರುವುದು ಕಂಡುಬರುತ್ತದೆ. ಭಾಮಹನ ಪ್ರಕಾರ 'ಶ್ರುತಿದುಷ್ಟ'ವೆಂದರೆ 'ಕೇಳಿದೊಡನೆ ಜುಗುಪ್ಸೆ ತರುವಂತಹುದು'; ಮಾರ್ಗಕಾರನ ಪ್ರಕಾರ 'ಶ್ರುತದುಷ್ಟ'ವೆಂದರೆ "ಪದ ಸಂಯೋಜನೆಯಲ್ಲಿ ಎಂದರೆ ಪದಗಳನ್ನು ಕೂಡಿಸಿ ಹೇಳುವಾಗ ಒಂದೆರಡು ಕಡೆ ಅವು ಕಿವಿಗೆ ಬೀಳುವ ರೀತಿಯಲ್ಲಿ ಅಸಭ್ಯವಾದ ಅರ್ಥವು ಬೋಧೆಯಾಗುವುದು." ಭಾಮಹನ ಪ್ರಕಾರ "ಯಾವ ವಾಕ್ಯದಲ್ಲಿ ಬೇರೆ ಬೇರೆ ಶಬ್ದಗಳೆಲ್ಲವೂ ಅಸಭ್ಯವಾದ ಅರ್ಥವನ್ನು ಸ್ಮರಣೆಗೆ ತರುವುವೋ ಆ ವಾಕ್ಯವು ಅರ್ಥದುಷ್ಟ" (೧. ೫೦); ಮಾರ್ಗಕಾರನದೂ ಇದೇ ಅಭಿಪ್ರಾಯ: "ಪದಗಳು ಅಸಭ್ಯವಾದ ಅರ್ಥಪ್ರತೀತಿಗೆ ಎಡೆಗೊಡುವುದು ಅರ್ಥ ದುಷ್ಟ." ಭಾಮಹನ ಪ್ರಕಾರ "ಎರಡು ಪದಗಳು ಸೇರಿದಾಗ ಅಸಭ್ಯಾರ್ಥವು ಸ್ಮರಣೆಗೆ ಬರುವಂತಿದ್ದರೆ ಆ ಪದಸಂಯೋಗವನ್ನು 'ಕಲ್ಪನಾದುಷ್ಟ'ವೆನ್ನುವರು" (೧. ೫೨);

ಮಾರ್ಗಕಾರನ ಪ್ರಕಾರ "ಕವಿಯ ಆಶಯವೇನೆಂಬುದನ್ನು ಕಲ್ಪನೆ ಮಾಡಿಕೊಳ್ಳುವುದೂ ಕಷ್ಟವಾಗಿರುವಲ್ಲಿ 'ಕಲ್ಪನೋಕ್ತಿಕಷ್ಟ' ಎಂಬ ದೋಷವುಂಟಾಗುವುದು."

ಇದರಿಂದ ಹೀಗೆ ತೀರ್ಮಾನಿಸಬಹುದು : ಮಾರ್ಗಕಾರನ 'ಕಲ್ಪನೋಕ್ತಿಕಷ್ಟ' ಮತ್ತು ಭಾಮಹನ 'ಕಲ್ಪನಾದುಷ್ಟ' ಅಭಿನ್ನವಲ್ಲ; ಮಾರ್ಗಕಾರ ಹೇಳಿರುವ ಒಂದು ಹೊಸ ದೋಷ 'ಕಲ್ಪನೋಕ್ತಿಕಷ್ಟ.' ಅಂತೆಯೇ ಮಾರ್ಗಕಾರನ 'ಶ್ರುತದುಷ್ಟ' ಮತ್ತು ಭಾಮಹನ 'ಶ್ರುತಿದುಷ್ಟ' ಅಭಿನ್ನವಲ್ಲ. ಮಾರ್ಗಕಾರನ 'ಶ್ರುತದುಷ್ಟ' ಭಾಮಹನ 'ಕಲ್ಪನಾದುಷ್ಟ'ಕ್ಕೆ ಸಂವಾದಿಯಾಗಿದೆ. ಭಾಮಹನ 'ಶ್ರುತಿದುಷ್ಟ' ಪ್ರತ್ಯೇಕವಾಗಿಯೆ ನಿಲ್ಲುತ್ತದೆ. ('ಅರ್ಥದುಷ್ಟ'ವನ್ನು 'ಅರ್ಥಕಠಿಣವಾದುದು' ಎಂದೂ 'ಕಲ್ಪನಾದುಷ್ಟ' ವನ್ನು 'ಕಲ್ಪನೆ ಅಸಂಭವವಾದುದು' ಎಂದೂ ಕೆ. ಕೃಷ್ಣಮೂರ್ತಿಯವರು ಅನುವಾದಿಸಿರುವುದು ವಿಚಾರಣೀಯ.)

ಈ ನಾಲ್ಕು ದೋಷಗಳಲ್ಲಿ 'ಶ್ರುತಿಕಷ್ಟ'ವೆಂಬುದು 'ದುಷ್ಕರ ಕಾವ್ಯ'ಗಳಲ್ಲೂ ಉಳಿದ ಮೂರು ದೋಷಗಳು ನಗಿಸುವುದರಿಂದ 'ಪಗರಣ'ದಲ್ಲೂ ಅದೋಷಗಳೆಂದು ಹೇಳುತ್ತಾನೆ ಮಾರ್ಗಕಾರ (೧. ೬೮)

"ಶ್ರುತದುಷ್ಟ, ಅರ್ಥದುಷ್ಟ, ಶ್ರುತಿಕಷ್ಟ, ಕಲ್ಪನೋಕ್ತಿಕಷ್ಟ—ಎಂಬ ನಾಲ್ಕು ಬಗೆಯ ಶಬ್ದದೋಷಗಳನ್ನು ತಿಳಿಸುವಲ್ಲಿ ಮಾರ್ಗಕಾರನು ಭಾಮಹನನ್ನೇ ಅನುಸರಿಸಿದ್ದಾನೆ. ಆ ಬಗೆಯ ದೋಷಗಳು ಕನ್ನಡ ಕಾವ್ಯರಚನೆಯ ಸಂದರ್ಭದಲ್ಲಿ ಹೇಗೆ ಸಂಭವಿಸಬಹುದು ಎಂದು ಲಕ್ಷ್ಯ ನಿರ್ಮಾಣ ಮಾಡಿ ತೋರಿಸುವುದರಲ್ಲಿ ಮಾರ್ಗಕಾರನ ಜಾಣ್ಮೆ ವ್ಯಕ್ತವಾಗಿದೆ"[141] ಎನ್ನುತ್ತಾರೆ ಎಂ. ವಿ. ಸೀ. ಅವನು ಭಾಮಹನಿಗಿಂತ ಸ್ವಲ್ಪ ಬೇರೆಯಾಗಿದ್ದಾನೆ ಎಂಬುದನ್ನೂ ಗಮನಿಸಬೇಕು.

ಮುಂದೆ ಹದಿನಾರು ವಿಭಿನ್ನ ರೀತಿಯ ದೋಷಗಳನ್ನು ಹೇಳಲಾಗಿದೆ : ಯತಿಭಂಗ, ಅರ್ಥಶೂನ್ಯ, ವಿರುದ್ಧಾರ್ಥ, ಉಕ್ತಪುನರುಕ್ತ, ಚ್ಯುತಯಾಥಾಸಂಖ್ಯ, ವ್ಯವಹಿತ, ಅಚ್ಛಂದ, ವಿಸಂಧಿ, ನೇಯಾರ್ಥ, ಆಗಮವಿರುದ್ಧ, ಸಮಯವಿರುದ್ಧ, ನ್ಯಾಯವಿರುದ್ಧ, ಕಳಾವಿರುದ್ಧ, ಕಾಲವಿರುದ್ಧ, ಲೋಕವಿರುದ್ಧ, ದೇಶವಿರುದ್ಧ (೧. ೬೯, ೭೦). ಈ ದೋಷನಿರೂಪಣೆಯಲ್ಲಿ ಮಾರ್ಗಕಾರನಿಗೆ ಭಾಮಹನೆ ಬಹುಮಟ್ಟಿಗೆ ಮಾದರಿ ; ಭಾಮಹನಲ್ಲಿ ದೋಷಗಳು ಹೀಗೆ ಉಕ್ತವಾಗಿವೆ:

ಅಪಾರ್ಥಂ ವ್ಯರ್ಥಮೇಕಾರ್ಥಂ ಸಸಂಶಯಮುಪಕ್ರಮಂ
ಶಬ್ದಹೀನಂ ಯತಿಭ್ರಷ್ಟಂ ಭಿನ್ನವೃತ್ತಂ ವಿಸಂಧಿ ಚ

ದೇಶಕಾಲಕಲಾಲೋಕ ನ್ಯಾಯಾಗಮವಿರೋಧಿ ಚ
ಪ್ರತಿಜ್ಞಾಹೇತು ದೃಷ್ಟಾಂತ ಹೀನಂ ದುಷ್ಟಂ ಚ ನೇಷ್ಯತೇ ॥ (೪–೧, ೨)

ಕೆಲವು ದೋಷಗಳ ಹೆಸರುಗಳು 'ಕವಿರಾಜಮಾರ್ಗ'ದಲ್ಲಿ ಬೇರೆಯಾಗಿವೆ. ಈಗ ಈ ದೋಷಗಳನ್ನು ಒಂದೊಂದಾಗಿ ನೋಡಬಹುದು.

೧. ಯತಿಭಂಗ: ಇದು ಛಂದಸ್ಸಿಗೆ ಸಂಬಂಧಿಸಿದ ದೋಷ. (ಇದರ ವಿಚಾರಕ್ಕೆ ಛಂದಸ್ಸಿನ ಭಾಗ ನೋಡಿ.)

೨. ಅರ್ಥಶೂನ್ಯ: "ವಾಕ್ಯದ ಸಮುದಾಯಾರ್ಥವನ್ನು ಎಂದರೆ ಒಟ್ಟಿನ ಅರ್ಥವನ್ನು ಕುರಿತು ವಿಚಾರ ಮಾಡಿದಾಗ ತೋರಬೇಕಾದ ಅರ್ಥಪ್ರತೀತಿಯೆಲ್ಲವೂ ತೋರದೆ ಹೋದರೆ 'ಅರ್ಥಶೂನ್ಯ' ದೋಷ" (೧–೭೮)

ಸ್ಥಿರಮರ್ಥಶೂನ್ಯಮೆಂಬುದು
ದುರುಕ್ತಮಿದನಿಂತು ಪೇೞ್ದುದೆಲ್ಲಂ ಪೀನಂ
ಮರುಳಂ ಮದಿರಾಪರವಶ
ಶರೀರನುಂ ಪೇೞ್ಗುಮಱಿವನಾವಂ ಪೇೞ್ಗುಂ ॥ (೧–೭೦)

ಈ ದೋಷ ಭಾಮಹ, ದಂಡಿಯರಲ್ಲಿ 'ಅಪಾರ್ಥ'ವೆನಿಸಿಕೊಂಡಿದೆ. ಮಾರ್ಗಕಾರ ಈ ದೋಷವನ್ನು ನಿರೂಪಿಸುವಲ್ಲಿ ದಂಡಿಯನ್ನೇ ಅನುಸರಿಸಿದ್ದಾನೆ. 'ಕಾವ್ಯಾದರ್ಶ'ದಲ್ಲಿ ಅಪಾರ್ಥ ಹೀಗೆ ಉಕ್ತವಾಗಿದೆ:

ಸಮುದಾಯಾರ್ಥಶೂನ್ಯಂ ಯತ್ ತದಪಾರ್ಥಮಿತೀಷ್ಯತೇ
ಉನ್ಮತ್ತ ಮತ್ತಬಾಲಾನಾಮುಕ್ತೇರನ್ಯತ್ರ ದೂಷ್ಯತೇ (೩–೧೨೮)

(ಯಾವುದಕ್ಕೆ ಒಂದು ಇಡಿಯಾದ ಅಥವಾ ಒಟ್ಟಾದ ಅರ್ಥವೇ ಇಲ್ಲವೋ ಅದೇ 'ಅಪಾರ್ಥ.' ಹುಚ್ಚರು, ಕುಡುಕರು, ಮತ್ತು ಮಕ್ಕಳ ಮಾತನ್ನು ಬಿಟ್ಟು ಮಿಕ್ಕ ಕಡೆಗಳಲ್ಲಿ ಅದು ದೋಷ).

೩. ವಿರುದ್ಧಾರ್ಥ: "ಒಂದು ವಾಕ್ಯದಲ್ಲಿ ಉಕ್ತವಾದ ಪೂರ್ವಾರ್ಧದ ಅರ್ಥಕ್ಕೂ ಅಪರಾರ್ಧದ ಅರ್ಥಕ್ಕೂ ಹೊಂದಿಕೆಯಾಗದೆ ವಿರೋಧವು ಕಂಡು ಬಂದರೆ ಅದು ವಿರುದ್ಧಾರ್ಥ". (೧–೭೧)

ದಂಡಿ ಭಾಮಹರು ಈ ದೋಷವನ್ನು 'ವ್ಯರ್ಥ'ವೆಂದಿದ್ದಾರೆ; ಅವರಲ್ಲಿ ಇದರ ಲಕ್ಷಣ ಹೀಗಿದೆ:

ವಿರುದ್ಧಾರ್ಥಂ ಮತಂ ವ್ಯರ್ಥಂ ವಿರುದ್ಧಂ ತೂಪದಿಶ್ಯತೇ
ಪೂರ್ವಾಪರಾರ್ಥವ್ಯಾಘಾತಾದ್ ವಿಪರ್ಯಯಕರಂ ಯಥಾ॥ (ಭಾಮಹ ೪–೯)

(ವಿರುದ್ಧವಾದ ಅರ್ಥವುಳ್ಳುದೇ 'ವ್ಯರ್ಥ'; ಹಿಂದಿನದಕ್ಕೂ ಮುಂದಿನದಕ್ಕೂ ಅರ್ಥದಲ್ಲಿ ಪರಸ್ಪರ ವಿರೋಧವಿರುವುದೇ ವಿರುದ್ಧವೆನಿಸುವುದು. ಇದರಿಂದ ಹೇಳಬೇಕಾದುದು ಪಲ್ಲಟವಾಗುವುದು).

ಏಕವಾಕ್ಯೇ ಪ್ರಬಂಧೇ ವಾ ಪೂರ್ವಾಪರಪರಾಹತಂ
ವಿರುದ್ಧಾರ್ಥತಯಾ ವ್ಯರ್ಥಮಿತಿ ದೋಷೇಷು ಪಠ್ಯತೇ ॥ (ದಂಡಿ ೩–೧೩೧)

(ಒಂದೇ ವಾಕ್ಯದಲ್ಲಿ ಅಥವಾ ಪ್ರಬಂಧದಲ್ಲಿ ಪೂರ್ವಾಪರ ವಿರುದ್ಧವಾದ ವಸ್ತುಗಳು

ವರ್ಣಿತವಾದರೆ ಅಲ್ಲಿ ಆ ವಿರುದ್ಧಾರ್ಥದ ಪ್ರಯುಕ್ತ 'ವ್ಯರ್ಥ'ವೆಂಬ ದೋಷ ಬರುತ್ತದೆ.)

೪. ಪುನರುಕ್ತ : "ಮೊದಲು ಹೇಳಿದ ಪದದ ಅರ್ಥಕ್ಕೆ ಸ್ವಲ್ಪವಾದರೂ ವಿಶೇಷಾರ್ಥವನ್ನು ಸೇರಿಸದೆ ಅದೇ ಅರ್ಥವನ್ನು ಕೊಡುವ ಪದಗಳನ್ನು ಪ್ರಯೋಗಿಸುತ್ತಾ ಹೋಗುವುದು ಪುನರುಕ್ತದೋಷ" (೧-೮೮)

ದಂಡಿ ಭಾಮಹರು ಈ ದೋಷವನ್ನು 'ಏಕಾರ್ಥ'ವೆಂದಿದ್ದಾರೆ. ದಂಡಿಯ ಈ ಪದ್ಯವೆ ಮಾರ್ಗಕಾರನಿಗೆ ಆಧಾರ :

ಅವಿಶೇಷೇಣ ಪೂರ್ವೋಕ್ತಂ ಯದಿ ಭೂಯೋಽಪಿ ಕೀರ್ತ್ಯತೇ
ಅರ್ಥತಃ ಶಬ್ದತೋ ವಾಪಿ ತದೇಕಾರ್ಥಂ ಮತಂ ಯಥಾ ॥ (೩-೧೩೫)

(ಹಿಂದೆ ಹೇಳಿಯಾದುದನ್ನೆ ಮತ್ತೆ ಯಾವ ವ್ಯತ್ಯಾಸವೂ ಇಲ್ಲದೆ ಅದೇ ಮಾತಿನಿಂದ ಇಲ್ಲವೇ ಅದೇ ಅರ್ಥವಿರುವ ಶಬ್ದಾಂತರಗಳಿಂದ ಹೇಳಿದ್ದೇ ಆದರೆ ಅದು 'ಏಕಾರ್ಥ' ವೆಂಬ ದೋಷ).

'ಪುನರುಕ್ತಿ' ಸಂದರ್ಭೋಚಿತವಾಗಿ ಅದೋಷವಾಗಬಹುದೆಂಬುದನ್ನು ಮಾರ್ಗಕಾರ ಹೇಳಿ, ಅದಕ್ಕೆ ಉದಾಹರಣೆಯಾಗಿ "ಪುಲಿ ಪುಲಿ ಪರಿ ಪರಿ ಪೋಪೋ...." (೨-೨೬) ಎಂಬೊಂದು ಕಂದವನ್ನು ಕೊಟ್ಟಿದ್ದಾನೆ.

"ಒಂದು ವೇಳೆ ಕವಿಗೆ ವಕ್ತೃವಿನಲ್ಲಿ ಅನುಕಂಪಾತಿಶಯ ಮುಂತಾದುವನ್ನು ಸೂಚಿಸುವ ಉದ್ದೇಶವಿದ್ದುದಾದರೆ ಆಗ ಈ ಪುನರುಕ್ತಿ ಕೂಡ ದೋಷವಾಗದು ; ಅದಕ್ಕೆ ಬದಲಾಗಿ ಅಲಂಕಾರವೇ ಆಗುವುದು" ಎಂದು ದಂಡಿ ಹೇಳಿದ್ದಾನೆ (೩-೧೩೭).

೫. ಚ್ಯುತಯಾಥಾಸಂಖ್ಯ : "ಉದ್ದಿಷ್ಟವಾದ ಕ್ರಮದಲ್ಲಿ ಅರ್ಥಗಳನ್ನುಳ್ಳ ಪದವರ್ಗ ಉದ್ದೇಶಿ ; ಅರ್ಥಾನುಗುಣವಾಗಿ ಅದೇ ಕ್ರಮಸಂಖ್ಯೆಯನ್ನು ಅನುಸರಿಸಿ ಬರುವ ಪದವರ್ಗ ಅನುದೇಶಿ. ಉದ್ದೇಶಿ ಅನುದೇಶಿಗಳ ಕ್ರಮಾನುಸರಣೆ ಯಾಥಾಸಂಖ್ಯ ; ಆ ಕ್ರಮ ತಪ್ಪಿದರೆ, ಕ್ರಮಚ್ಯುತಿಯಾಗಿ 'ಚ್ಯುತಯಾಥಾಸಂಖ್ಯ'ವೆಂಬ ದೋಷವಾಗುತ್ತದೆ." (೧-೮೬, ೮೭)

ಭಾಮಹ ದಂಡಿಯರಲ್ಲಿ ಈ ದೋಷ 'ಅಪಕ್ರಮ.' ಅದರ ವಿವರಣೆ ಭಾಮಹನಲ್ಲಿ ಹೀಗಿದೆ : "ಯಾವ ಅನುಕ್ರಮದಲ್ಲಿ ಪ್ರಾರಂಭವಾಗಿದೆಯೋ ಆ ಅನುಕ್ರಮವನ್ನೇ ಕಡೆಯವರೆಗೂ ಬಿಡದಿರುವುದೇ 'ಕ್ರಮ.' ಅದು ಅದಲುಬದಲಾದರೆ ಕ್ರಮವು ತಪ್ಪುವುದರಿಂದ 'ಅಪಕ್ರಮ'ವೆನಿಸುತ್ತದೆ." (೪-೨೦)

೬. ವ್ಯವಹಿತ : "ಅರ್ಥವು ವಿಶೇಷ ಅಲಂಕಾರ ಸಹಿತವಾಗಿದ್ದರೂ ಅರ್ಥಸಾಧಕಗಳಾದ ಪದಗಳು ಅಸ್ತವ್ಯಸ್ತವಾಗಿ ಅವುಗಳ ಸಮಾಹಿತತ್ವಕ್ಕೆ (ಅನ್ಯೋನ್ಯ ಸಂಬಂಧಕ್ಕೆ) ಭಂಗವುಂಟಾದರೆ, ಅದು ವ್ಯವಹಿತದೋಷ" (೧-೯೦). ಇದು ದಂಡಿ ಭಾಮಹರಲ್ಲಿಲ್ಲದ ದೋಷ.

೭. ಛಂದೋಭಂಗ : ಇದು ಛಂದಸ್ಸಿಗೆ ಸಂಬಂಧಿಸಿದ ದೋಷ (೧-೯೨). ಇದರ ವಿಚಾರಕ್ಕೆ ಛಂದಸ್ಸಿನ ಭಾಗ ನೋಡಿ.)

೮. ವಿಸಂಧಿ : ಇದೂ ಛಂದಸ್ಸಿಗೆ ಸಂಬಂಧಿಸಿದ ದೋಷ (೧–೯೫). (ಇದರ ವಿಚಾರಕ್ಕೆ ಛಂದಸಿನ್ನ ಭಾಗ ನೋಡಿ).

೯. ನೇಯಾರ್ಥ : "ವಿವಕ್ಷಿತವಾದ ಅರ್ಥವೆಲ್ಲವೂ ಪ್ರಯೋಗಿಸಿದ ಪದದಿಂದ ಪ್ರತೀತ ವಾಗದೆ, ಅರ್ಥವಿವಕ್ಷೆಗಾಗಿ ಬಲ್ಲವರು ಅಲ್ಲಿಲ್ಲದ ಬೇರೊಂದು ಪದವನ್ನು (ಅಧ್ಯಾಹಾರ ಮಾಡಿಕೊಂಡು) ಇಟ್ಟು ಅರ್ಥವಾಗುವಂತೆ ಹೇಳಿದರೆ ಅದು ನೇಯಾರ್ಥ"(೧–೧೦೧). ದಂಡಿ ಭಾಮಹರಲ್ಲಿ ಈ ದೋಷ ಬೇರೆ ಸಂದರ್ಭಗಳಲ್ಲಿ ಉಕ್ತವಾಗಿದೆ.

೧೦. ಆಗಮವಿರುದ್ಧ : "ರಾಗಾದಿ ದೋಷರಹಿತವಾಗಿರುವುದೂ ಅಖಿಲ ವಸ್ತುಗಳ ಪರಿಜ್ಞಾನವೂ ಯೋಗಿಗುಣ; ಇದನ್ನು ಅನುಸರಿಸತಕ್ಕದ್ದೇ ಆಗಮ. ಎಂದರೆ ಯೋಗಿ ಗಳಿಂದ ಪ್ರೋಕ್ತವಾಗಿ ಆಚರಿಸಲ್ಪಡುವುದೇ ಆಗಮ. ಇದಕ್ಕೆ ವಿರುದ್ಧವಾದ ವಚನವು ದೋಷ" (೧–೧೦೪).

ಇದಕ್ಕೆ ಮೂಲ ಭಾಮಹ ದಂಡಿಯರಲ್ಲಿ ಹೀಗಿದೆ ;

ಆಗಮೋ ಧರ್ಮಶಾಸ್ತ್ರಾಣಿ ಲೋಕಸೀಮಾ ಚ ತತ್ಕೃತಾ
ತದ್ವಿರೋಧಿ ತದಾಚಾರ ವ್ಯತಿಕ್ರಮಣತೋ ಯಥಾ ॥ (ಭಾಮಹ ೪–೪೭)

(ಆಗಮಗಳೆಂದರೆ ಧರ್ಮಶಾಸ್ತ್ರಗಳು. ಲೋಕದ ಕಟ್ಟಳೆಗಳಿಗೆಲ್ಲ ಅವೇ ಮೂಲ. ಅವು ಗಳಲ್ಲಿ ಹೇಳಿರುವ ಆಚರಣೆಗೆ ವಿರುದ್ಧವಾದುದು 'ಆಗಮವಿರೋಧಿ'). "ಸಸ್ಮೃತಿಃ ಶ್ರುತಿ ರಾಗಮಃ (ದಂಡಿ ೩. ೧೭೩) (ಸ್ಮೃತಿಯೊಂದಿಗೆ ಶ್ರುತಿಯೇ "ಆಗಮ').

೧೧. ಸಮಯವಿರುದ್ಧ : "ಪ್ರಸಿದ್ಧರಾದ ಕಪಿಲ, ಸುಗತ, ಕಣಚರ, ಲೋಕಾಯತಿಕ ಮುಂತಾದವರ ದರ್ಶನ ಸಿದ್ಧಾಂತಗಳ ಮಾರ್ಗಭೇದಗಳೇ ಬೇರೆ ಬೇರೆ ಸಮಯಗಳು. ಅವುಗಳನ್ನು 'ವಿರುದ್ಧವಿವೇಕ'ದಿಂದ ಎಂದರೆ ತಪ್ಪು ತಿಳಿವಳಿಕೆಯಿಂದ ತಿಳಿಸುವುದು ಸಮಯವಿರುದ್ಧದೋಷ" (೧. ೧೦೫). ಈ ದೋಷವನ್ನು ದಂಡಿ ಭಾಮಹರು ಹೇಳಿಲ್ಲ.

೧೨. ನ್ಯಾಯವಿರುದ್ಧ : "ಹೇಳಿದ ವಿಚಾರಗಳೆಲ್ಲವೂ ನ್ಯಾಯಶಾಸ್ತ್ರದ ಪ್ರಮಾಣ ಗಳಿಗೆ ಸಮ್ಮತವಾಗಿರಬೇಕು ; ಹಾಗಿಲ್ಲದಿದ್ದರೆ 'ನ್ಯಾಯವಿರುದ್ಧ'ವೆಂಬ ಮಹಾದೋಷ" (೧. ೧೦೭)

ಭಾಮಹ :

ನ್ಯಾಯಃ ಶಾಸ್ತ್ರಂ ತ್ರಿವರ್ಗೋಕ್ತಿರ್ದಂಡನೀತಿಂ ಚ ತಾಂ ವಿದುಃ
ಅತೋ ನ್ಯಾಯವಿರೋಧೀಷ್ಟಮಪೇತಂ ಯತ್ತಯಾ ಯಥಾ ॥ (೪–೩೪)

(ನ್ಯಾಯವೆಂದರೆ ಧರ್ಮ, ಅರ್ಥ, ಕಾಮಗಳನ್ನು ಕುರಿತ ಶಾಸ್ತ್ರಗಳು ಮತ್ತು ದಂಡ ನೀತಿ. ಈ ಶಾಸ್ತ್ರಗಳಿಗೆ ಸಮ್ಮತವಲ್ಲದ್ದು 'ನ್ಯಾಯವಿರೋಧಿ') ದಂಡಿ : "ಹೇತು ವಿದ್ಯಾತ್ಮಕೋ ನ್ಯಾಯಃ" (೩.೧೭೩) (ಹೇತುವಿದ್ಯೆಯೇ 'ನ್ಯಾಯ')

೧೩. ಕಲಾವಿರುದ್ಧ : "ನಿರುಪಮವಾದ ಗಂಧರ್ವಗತಿ ಸ್ವರಾದಿಕ ಎಂದರೆ ಗಾಂಧರ್ವ ವಿದ್ಯೆಯೆಂದು ಪ್ರಸಿದ್ಧವಾದ ನೃತ್ಯಗೀತ ಚಿತ್ರ ಶಿಲ್ಪವೇ ಮುಂತಾಗಿ ಕಲೆಗಳು ಚತುಷ್ಷಷ್ಟಿ

ವಿಧಗಳು. ಇವು ಎಲ್ಲಿ ದೊರೆಕೊಳ್ಳದೋ ಅಲ್ಲಿ ಕಲಾವಿರುದ್ಧ ದೋಷವು ಸಂಘಟಿಸುವುದು. ಜನರೆಲ್ಲ ಇದನ್ನು ನಿಂದಿಸುವರು" (೧–೧೦೭)

ಭಾಮಹ :

ಕಲಾ ಸಂಕಲನಾ ಪ್ರಜ್ಞಾ ಶಿಲ್ಪಾನ್ಯಸ್ಯಾಶ್ಚ ಗೋಚರಃ
ವಿಪರ್ಯಸ್ತಂ ತಥೈವಾಹುಸ್ತದ್ವಿರೋಧಕರಂ ಯಥಾ ॥ (೪. ೩೨)

(ಚೆನ್ನಾಗಿ ಒಟ್ಟಾಗಿಸುವ ಪ್ರಜ್ಞೆಯೇ ಕಲೆ. ಕುಶಲಕರ್ಮಗಳೇ ಮುಂತಾದುವು ಇದರಲ್ಲಿ ಅಡಕವಾಗುತ್ತದೆ. ಆ ನಿಯಮಕ್ಕೆ ವಿರುದ್ಧವಾಗಿ ಹೇಳಿದರೆ 'ಕಲಾವಿರೋಧಿ'ಯೆನ್ನುವರು.)

ದಂಡಿ :

ನೃತ್ಯಗೀತ ಪ್ರಭೃತಯಃ ಕಲಾಃ ಕಾಮಾರ್ಥಸಂಶ್ರಯಾಃ ॥ (೩–೧೬೨)

(ಕಾಮ ಹಾಗು ಅರ್ಥ ಎಂಬ ಪುರುಷಾರ್ಥಗಳಿಗೆ ಆಶ್ರಯವಾದ ಸಾಧನಗಳೇ ಕಲೆಗಳು.)

೧೪. ಕಾಲವಿರುದ್ಧ : "ಕಾಲ ಎಂದರೆ ಹಗಲು ಇರುಳು ಮುಂತಾದ ಕಾಲವಿಭಾಗಗಳು. ಇದಕ್ಕೆ ಹೊಂದದಿದ್ದರೆ 'ಕಾಲವಿರುದ್ಧ' ದೋಷಕ್ಕೆ ಅವಕಾಶವಾಗುತ್ತದೆ." (೧–೧೦೮)

ಭಾಮಹ :

ಷಣ್ಣಾಂ ಋತೂನಾಂ ಭೇದೇನ ಕಾಲಃ ಷೋಢೇವ ಭಿದ್ಯತೇ
ತದ್ವಿರೋಧ ಕೃದಿತ್ಯಾಹುಃ ವಿಪರ್ಯಾಸಾದಿದಂ ಯಥಾ ॥ (೪–೩೦)

(ಕಾಲವನ್ನು ಆರು ಋತುಗಳೆಂದು ಆರು ವಿಭಾಗ ಮಾಡಲಾಗಿದೆ. ಈ ನಿಯಮವನ್ನು ಭಂಗಿಸಿದರೆ 'ಕಾಲವಿರೋಧಿ' ಎಂಬ ದೋಷ).

ದಂಡಿ :

ಕಾಲೋ ರಾತ್ರಿಂ ದಿವರ್ತವಃ (೩. ೧೬೨)

(ಕಾಲವೆಂದರೆ ರಾತ್ರಿ ಹಗಲು ಋತು ಇತ್ಯಾದಿಗಳು)

೧೫. ಲೋಕವಿರುದ್ಧ :

ಲೋಕಮದೂಢ್ವಾರ್ಥೋಮ
ಧ್ಯಾಕಾಂಕ್ಷಿತಭೇದರೂಪದಿಂ ಮೂಜಿಕ್ಕುಂ
ಲೋಕವಿರುದ್ಧಂ ತದ್ವ್ಯಕ್ತಿ
ರೇಕೋಕ್ತಿ ವಿವೇಕಿಲೋಕಗರ್ಹಿತಮಾರ್ಗಂ ॥ (೧–೧೦೯)

"ಮಾರ್ಗಕಾರನು ತಾನು ಅನುಸರಿಸುತ್ತಿರುವ ಇಬ್ಬರು ಆಲಂಕಾರಿಕರನ್ನೂ ಇಲ್ಲಿ ಅನುಸರಿಸದೆ, 'ಲೋಕ' ಎಂಬುದಕ್ಕೆ ತನ್ನ ಮತಾನುಸಾರವಾದ ವಿವರಣೆಯನ್ನು ಕೊಟ್ಟಿದ್ದಾನೆ ಎಂದು ಊಹಿಸಬಹುದಾಗಿದೆ."

೧೬. ದೇಶವಿರುದ್ಧ : "ರಾಷ್ಟ್ರ ಮೊದಲಾದ ನಿವೇಶ ಎಂದರೆ ಸ್ಥಳಗಳಿಗೆ ವಿರುದ್ಧವಾದುದನ್ನು ತಿಳಿಸುವುದು ದೇಶವಿರುದ್ಧ" (೧. ೧೧೦).

ಭಾಮಹ :

ಯಾ ದೇಶೇ ದ್ರವ್ಯಸಂಭೂತಿರಪಿ ವಾ ನೋಪದಿಶ್ಯತೇ
ತತ್ತದ್ವಿರೋಧಿ ವಿಜ್ಞೇಯಂ ಸ್ವಭಾವಾತ್ ತದ್ಯಥೋಚ್ಯತೇ ॥ (೪-೨೮)

(ಯಾವ ಒಂದು ಸ್ಥಲದಲ್ಲಿ ಒಂದು ವಸ್ತುವು ಸಂಭವವೋ ಅಲ್ಲಿ ಅದನ್ನು ಹೇಳದೆ ಮತ್ತಾವುದೋ ಸ್ವಭಾವತಃ ವಿರುದ್ಧವಾದುದನ್ನು ಹೇಳುವುದು 'ದೇಶವಿರೋಧಿ').

ಆಗಮವಿರುದ್ಧ, ನ್ಯಾಯವಿರುದ್ಧ, ಕಲಾವಿರುದ್ಧ, ಕಾಲವಿರುದ್ಧ, ಲೋಕವಿರುದ್ಧ, ದೇಶವಿರುದ್ಧ—ಈ ದೋಷಗಳಿಗೆ ಮಾರ್ಗಕಾರ ಲಕ್ಷ್ಯಗಳನ್ನು ಕೊಟ್ಟಿಲ್ಲವೆಂಬುದು ಗಮನಾರ್ಹ; ಭಾಮಹ ದಂಡಿಯರು ಕೊಟ್ಟಿದ್ದಾರೆ.

ಈ 'ವಿರುದ್ಧ'ದ ಭೇದಗಳನ್ನು ಹೇಳುತ್ತಾ ಹೋದರೆ ಕೊನೆಯೇ ಇಲ್ಲವೆಂದು ಹೇಳಿ (೧. ೧೧೧), ಕವಿಗಳಿಗೆ ಹೀಗೆ ಎಚ್ಚರಿಕೆ ಕೊಡುತ್ತಾನೆ ಮಾರ್ಗಕಾರ :

ದೋಸಮೇನಾನುಂ ಸ್ವಲ್ಪಮಾದೊಡಂ
ಮಾಸಿಸಿರ್ಕುಮಣಂ ಕೃತಿವಧುವಂ
ಪೇಸದೆ ದುರ್ಜನದೊಳಾದ ಪರಿಚಯಂ
ಮಾಸಿಸಿ ಕಿಡಿಸುವವೊಲೊಪ್ಪುವ ಕುಲವಧುವಂ ॥ (೧. ೧೧೨)

ಹಿಂದೆ ಶ್ರುತದುಷ್ಟಾದಿ ನಾಲ್ಕು ದೋಷಗಳನ್ನು ಹೇಳುವ ಸಂದರ್ಭದಲ್ಲೂ ಅವನು "ತೊಱೆವುದು ತೊಱೆವಂತಸಾಧುಜನಸಂಗತಿಯಂ" (೧, ೬೭) ಎಂದಿರುವುದನ್ನೂ ಸ್ಮರಿಸಬಹುದು. ಈ ಎರಡು ಹೇಳಿಕೆಗಳಿಗೂ ಮೂಲ ದಂಡಿಯಲ್ಲಿ ಹೀಗಿದೆ :

ತದಲ್ಪಮಪಿ ನೋಪೇಕ್ಷ್ಯಂ ಕಾವ್ಯೇ ದುಷ್ಟಂ ಕಥಂಚನ
ಸ್ಯಾದ್ವಪುಃ ಸುಂದರಮಪಿ ಶ್ವಿತ್ರೇಣೈಕೇನ ದುರ್ಭಗಂ ॥ (೧. ೭)

(ಕಾವ್ಯದಲ್ಲಿ ಸ್ವಲ್ಪ ದೋಷ ಬಂದರೂ ಎಂದೂ ಉದಾಸೀನ ಮಾಡಬಾರದು. ಶರೀರವು ಸುಂದರವಾಗಿದ್ದರೂ ಒಂದು ತೊನ್ನಿನ ಕಲೆಯಿಂದ ಅದು ಅಸಹ್ಯವೆನಿಸುವುದು.)

ಇದುವರೆಗೆ ಉಕ್ತವಾದ ದೋಷಗಳ ಪಟ್ಟಿಯನ್ನು ನೋಡಿದರೆ, ದಂಡಿ ಭಾಮಹರಲ್ಲಿಲ್ಲದ 'ವ್ಯವಹಿತ', 'ನೇಯಾರ್ಥ', 'ಸಮಯವಿರುದ್ಧ' ದೋಷಗಳನ್ನು ಮಾರ್ಗಕಾರ ಸೇರಿಸಿರುವುದೂ ದಂಡಿ ಭಾಮಹರಲ್ಲಿರುವ ಸಂದಿಗ್ಧ, ಶಬ್ದಹೀನ, ಪ್ರತಿಜ್ಞಾಹೀನ, ಹೇತುಹೀನ, ದೃಷ್ಟಾಂತಹೀನ ದೋಷಗಳನ್ನು ಬಿಟ್ಟಿರುವುದೂ ಕಂಡುಬರುತ್ತದೆ. ('ನೇಯಾರ್ಥ' ವನ್ನು ಭಾಮಹ ಒಂದು ವ್ಯಾಕರಣದೋಷವಾಗಿ ಹೇಳಿದ್ದಾನೆ). (೧. ೩೮)

ಮುಂದೆ ಕಾರಕದೋಷ ಮುಂತಾದುವನ್ನು ಹೇಳುತ್ತಾನೆ ಮಾರ್ಗಕಾರ. "ಕಾವ್ಯದೋಷ ವಿವೇಚನೆಯಲ್ಲಿ ಮಾರ್ಗಕಾರನು ಬಹುಮಟ್ಟಿಗೆ ಸಂಸ್ಕೃತ ಲಾಕ್ಷಣಿಕರನ್ನು ಅನುಸರಿಸಿದ್ದರೂ ದೋಷಗಳನ್ನು ಕನ್ನಡಕ್ಕೆ ಅನ್ವಯಿಸಿ ಹೇಳುವಲ್ಲಿ ಸ್ವೋಪಜ್ಞತೆಯನ್ನು ಮೆರೆದಿರುವನಷ್ಟೆ. ಆದರೆ ಕಾರಕದೋಷ, ವಚನದೋಷ, ಸಮುಚ್ಚಯದೋಷ, ವಿಕಲ್ಪದೋಷ, ಅನವಧಾರಣಾದೋಷ, ವಿಶಂಕಾದೋಷ ಇವು ಕೆಲವು ಕನ್ನಡಭಾಷೆಗೆ ಮಾತ್ರ

ಸಂಬಂಧಪಟ್ಟವು. ಈ ದೋಷಗಳ ವಿವೇಚನೆಯ ಭಾಗ ಸಂಪೂರ್ಣವಾಗಿ ಮಾರ್ಗಕಾರನ ಸ್ವತಂತ್ರ ಸೃಷ್ಟಿ; ಕನ್ನಡ ಕಾವ್ಯಮೀಮಾಂಸೆಗೆ ಅವನ ಅತ್ಯಮೂಲ್ಯವಾದ ಕೊಡುಗೆ; ಅವನ ಶಾಸ್ತ್ರಪ್ರಜ್ಞೆಯನ್ನೂ ಕಾವ್ಯಪ್ರತಿಭೆಯನ್ನೂ ಏಕಕಾಲದಲ್ಲಿ ಬೆಳಗುವ ಲಕ್ಷ್ಯಲಕ್ಷಣ ದೀಪಿಕೆ."[142]

"ಗ್ರಂಥದಲ್ಲೆಲ್ಲ ಅತಿಮಹತ್ತ್ವದ ಭಾಗವೇ ಈ ಕನ್ನಡ ಮಾತ್ರ ನಿಯತವಾದ ದೋಷವಿವೇಚನೆ"[143]; "ನಿಜವಾಗಿಯೂ ಈ ವಿಸ್ತಾರವಾದ ಭಾಗವನ್ನು ಕನ್ನಡಭಾಷೆಯ ಆದ್ಯ ವ್ಯಾಕರಣವೆಂದು ಪರಿಗಣಿಸುವಂತಿದೆ."[144]

ಕಾರಕದೋಷ ಮುಂತಾದುವು ವಾಸ್ತವವಾಗಿ ವ್ಯಾಕರಣಕ್ಕೆ ಸಂಬಂಧಪಟ್ಟವಾದ್ದರಿಂದ ಇಲ್ಲಿ ಅಪ್ರಸ್ತುತ. ದ್ವಿತೀಯ ಪರಿಚ್ಛೇದದಲ್ಲೂ ಮಾರ್ಗಕಾರ ಕನ್ನಡಕ್ಕೆ ಸಂಬಂಧಿಸಿದ ಕೆಲವು ದೋಷಗಳನ್ನು ಉಲ್ಲೇಖಿಸಿ, ಅವುಗಳನ್ನು ನಿವಾರಿಸುವ ಬಗೆಯನ್ನು ಅರುಹುತ್ತಾನೆ; ದೋಷಾದೋಷಗಳೆರಡಕ್ಕೂ ಲಕ್ಷ್ಯಗಳನ್ನು ಕೊಡುತ್ತಾನೆ.

ಮುಳಿಯ ತಿಮ್ಮಪ್ಪಯ್ಯನವರು 'ಕವಿರಾಜಮಾರ್ಗ'ದಲ್ಲಿ ಹೇಳಿರುವ ಕಾವ್ಯದೋಷಗಳಲ್ಲಿ ದುಷ್ಟದೋಷವರ್ಗ, ಕಷ್ಟದೋಷವರ್ಗ ಎಂದು ಎರಡು ವಿಶಾಲವಾದ ವಿಭಾಗಗಳನ್ನು ಕಲ್ಪಿಸುತ್ತಾರೆ. ದುಷ್ಟದೋಷವರ್ಗದಲ್ಲಿ ಶ್ರುತದುಷ್ಟ, ಅರ್ಥದುಷ್ಟ ಎಂದು ಎರಡು ಒಳವಿಭಾಗಗಳು. ಶ್ರುತದುಷ್ಟವರ್ಗದಲ್ಲಿ ಯತಿಭಂಗ, ವಿಸಂಧಿಕ, ವಿರೂಪಸಂಧಿ ಮತ್ತು ಅಚ್ಚಗಂದ ಸೇರುತ್ತವೆ; ಅರ್ಥದುಷ್ಟವರ್ಗದಲ್ಲಿ ಅರ್ಥಶೂನ್ಯ, ವಿರುದ್ಧಾರ್ಥ, ಪುನರುಕ್ತ ಮುಂತಾದ ಹದಿಮೂರು ದೋಷಗಳು ಸೇರುತ್ತವೆ. ಕಷ್ಟದೋಷವರ್ಗದಲ್ಲಿ ಶ್ರುತಿಕಷ್ಟ, ಕಲ್ಪನೋಕ್ತಿಕಷ್ಟ ಎಂದು ಎರಡು ಒಳವಿಭಾಗಗಳು. ಹಿಂದೆ ಹೇಳಿದ ದೋಷಗಳೆಲ್ಲ ಬಹುಮಟ್ಟಿಗೆ ಆರ್ಥಿಕ ದೋಷಗಳು. ಆದರೆ ಕಾರಕದೋಷ, ವಚನದೋಷ, ಗುರುದೋಷ, ಲಘುದೋಷ ಮೊದಲಾದುವೆಲ್ಲ ಶಾಬ್ದಿಕ ದೋಷಗಳು. "ಈ ಕಾರಕದೋಷಾದಿಗಳೆಲ್ಲವೂ ಆ 'ಕಲ್ಪನೋಕ್ತಿಕಷ್ಟ'ದ ಸಂತತಿಗಳೆಂದು ತೋರುತ್ತದೆ" ಎಂದು ತಿಮ್ಮಪ್ಪಯ್ಯನವರ ಹೇಳಿಕೆ. ಇದು ಸಮಂಜಸವಾಗಿ ಕಾಣುವುದಿಲ್ಲ.

## ಅಲಂಕಾರ: ಶಬ್ದ, ಅರ್ಥ

ಅಲಂಕಾರಗಳನ್ನು ಕುರಿತು ಮಾರ್ಗಕಾರ ಹೀಗೆ ಹೇಳುತ್ತಾನೆ:

ಪರಮಶ್ರೀಕೃತಿವಧುವಾ
ಶರೀರ ಶೋಭಾಕರಂಗಳಪ್ಪ ಗುಣಂಗಳ್
ನಿರತಿಶಯಾಲಂಕಾರ
ಪ್ರರೂಪಿತಂಗಳ್ ಪುರಾಣಕವಿವಿದಿತಂಗಳ್ ‖

ಚಾರುಶ್ರೀ ನೃಪತುಂಗವಿ
ಚಾರಕ್ರಮ ಮಾರ್ಗಗಣನೆಯೊಳ್ ಪರಮಾಲಂ
ಕಾರ ವಿಭಾಗಂ ವಿವಿಧಾ
ಕಾರಂ ಶಬ್ದಾರ್ಥಭೇದದಿಂದೆರಡಕ್ಕುಂ ‖(೨-೧, ೨)

ಇದಕ್ಕೆ ಮೂಲ, ದಂಡಿಯ ಈ ಶ್ಲೋಕ :

ಕಾವ್ಯಶೋಭಾಕರಾನ್ ಧರ್ಮಾನಲಂಕಾರಾನ್ ಪ್ರಚಕ್ಷತೇ
ತೇ ಚಾದ್ಯಾಪಿ ವಿಕಲ್ಪ್ಯಂತೇ ಕಸ್ತಾನ್ ಕಾರ್ತ್ಸ್ನ್ಯೇನ ವಕ್ಷ್ಯತಿ ॥ (೨. ೧)

ಮಾರ್ಗಕಾರನ ಪೂರ್ವೋಕ್ತ ಪದ್ಯಗಳಲ್ಲಿ ಮೊದಲನೆಯದರ ಬಗೆಗೆ ಎಂ. ವಿ. ಸೀ. ಹೇಳುತ್ತಾರೆ : "ದಂಡಿಯ ಹೇಳಿಕೆಯನ್ನು ಮಾರ್ಗಕಾರನು ರೂಪಕಾಲಂಕಾರದಿಂದ ನಿರೂಪಿಸಿರುವುದರಿಂದ ಅದಕ್ಕೆ ಹೆಚ್ಚಿನ ಸೌಂದರ್ಯವು ಒದಗಿದ್ದರೂ, 'ಧರ್ಮ' ಎನ್ನುವ ಮಾತಿನ ವಿಶಾಲವಾದ ಅರ್ಥವ್ಯಾಪ್ತಿಯನ್ನು 'ಗುಣ' ಎಂಬ ಮಾತು ಹೊಂದಿಲ್ಲ. ಆದರೆ, 'ಶರೀರ' ಎಂಬ ಪದದೊಂದಿಗೆ, 'ಗುಣ' ಎಂಬ ಮಾತೇ ಹೆಚ್ಚು ಉಚಿತವೆಂದು ತೋರುತ್ತದೆ. ಅಲ್ಲದೆ, 'ದೋಷ'ವಲ್ಲದ 'ಗುಣ' ಕಾವ್ಯಕ್ಕೆ ಅಲಂಕಾರಪ್ರಾಯವಾದಾಗ ಅದು ಕಾವ್ಯದ ಧರ್ಮವೂ ಆಗಬಹುದು."[145]

ಚಿಟಗುಪ್ಪಿಯವರ ಹೇಳಿಕೆಯಿದು : "ದಂಡಿಯು 'ಕಾವ್ಯಶೋಭಾಕರಾನ್ ಧರ್ಮಾನಲಂಕಾರಾನ್ ಪ್ರಚಕ್ಷತೇ' ಉಕ್ತಿಯಲ್ಲಿ ಗುಣ, ರಸ, ರೀತಿ, ಸ್ವಲ್ಪದರಲ್ಲಿ ಕಾವ್ಯಕ್ಕೆ ಶೋಭೆಯನ್ನು ನೀಡುವ ಎಲ್ಲ 'ಧರ್ಮ'ಗಳನ್ನು ಅಲಂಕಾರಗಳಲ್ಲಿ ಸೇರಿಸಿ ವಿದ್ವಾಂಸರಲ್ಲಿ ಗೊಂದಲವನ್ನು ಎಬ್ಬಿಸಿರುವನು. ನೃಪತುಂಗನು ಗುಣಾಲಂಕಾರಗಳು 'ಕೃತಿವಧುವಿನ ಶರೀರಶೋಭಾಕರಂಗಳು' ಎಂದು ಸ್ಪಷ್ಟವಾಗಿ ಹೇಳಿ ಈ ಬಗೆಯ ಗೊಂದಲವನ್ನು ತಪ್ಪಿಸಿರುವನು. ದಂಡಿಯು ಕಾವ್ಯದ ಆತ್ಮವಾವುದೆಂಬುದನ್ನು ಹೇಳಿರದಿದ್ದರೂ ಆತನ 'ಕಾವ್ಯಶೋಭಾಕರಾನ್ ಧರ್ಮಾನ್' ಉಕ್ತಿಯಲ್ಲಿಯ ಕಾವ್ಯಪದವು ವ್ಯಾಪಕವಿದ್ದು ಅದರಲ್ಲಿ ಕಾವ್ಯದ ಆತ್ಮ, ಶರೀರ, ಎರಡೂ ಸೇರಿವೆ ಎಂಬ ಧ್ವನಿ ಇದೆ. ನೃಪತುಂಗನು ತನ್ನ ಉಕ್ತಿಯನ್ನು 'ಕೃತಿವಧುವಿನ ಶರೀರ' ಅಂದರೆ ಕಾವ್ಯಶರೀರ ಮತ್ತು ಅದಕ್ಕೆ ಶೋಭೆಯನ್ನು ಕೊಡುವ ಗುಣಾಲಂಕಾರಗಳಿಗೆ ಮಾತ್ರ ಮಿತಗೊಳಿಸಿರುವನು."[146] ಇದನ್ನು ಎಂ. ವಿ. ಸೀ. ಒಪ್ಪುತ್ತಾರೆ.

"ಪರಮಾಲಂಕಾರವಿಭಾಗಂ....ಶಬ್ದಾರ್ಥಭೇದದಿಂದೆರಡಕ್ಕುಂ" (ಶಬ್ದಾಲಂಕಾರ, ಅರ್ಥಾಲಂಕಾರ ಎಂದು ಅಲಂಕಾರಗಳಲ್ಲಿ ಎರಡು ವಿಧ) ಎಂಬ ಮಾರ್ಗಕಾರನ ಮಾತು ಹೊಸದು; ಭಾಮಹ ದಂಡಿಯರಲ್ಲಿ ಇಲ್ಲದ್ದು. ಈ ಬಗ್ಗೆ ಚಿಟಗುಪ್ಪಿಯವರು "ಅಲಂಕಾರಗಳ ವರ್ಗೀಕರಣಕ್ಕೆ ನೃಪತುಂಗನು ತಾನೇ ಆದ್ಯನೆಂದು ಭಾವಿಸಿದಂತಿದೆ ಮತ್ತು ಬಲುಮಟ್ಟಿಗೆ ಇದು ನಿಜವಿದೆ" ಎಂದೂ "ಅಲಂಕಾರಗಳ ವೈಜ್ಞಾನಿಕ ವಿಂಗಡನೆಗೆ ಶ್ರೀಕಾರ ಹಾಕಿದವರಲ್ಲಿ ನೃಪತುಂಗನೇ ಮೊದಲಿಗ"[147] ಎಂದೂ ಹೇಳುತ್ತಾರೆ. ಈ ಮಾತನ್ನು ಎಂ. ವಿ. ಸೀ. ಅವರು ತುಸು ತಿದ್ದುಪಡಿಯೊಡನೆ ಅನುಮೋದಿಸುತ್ತಾರೆ : "ಅಲಂಕಾರವನ್ನು....ಶಬ್ದಾಲಂಕಾರ, ಅರ್ಥಾಲಂಕಾರ ಎಂದು ವಿಭಾಗಿಸಿರುವುದರಲ್ಲಿ ಭಾಮಹಾದಿ ಪೂರ್ವಲಾಕ್ಷಣಿಕರಲ್ಲಿ ಕಂಡುಬರದ ಶಾಸ್ತ್ರೀಯ ದೃಷ್ಟಿಯನ್ನು ಗುರುತಿಸಬಹುದು."[148] ; "ವೈಜ್ಞಾನಿಕ ಎಂಬುದು ಹೆಚ್ಚಿನ ಮಾತಾಗಬಹುದು. 'ವ್ಯವಸ್ಥಿತ ವಿಂಗಡಣೆ' ಎಂದರೆ ವಸ್ತುಸ್ಥಿತಿಗೆ ಹೊಂದುತ್ತದೆ."[149]

ಶಬ್ದಾಲಂಕಾರ, ಅರ್ಥಾಲಂಕಾರಗಳಲ್ಲಿ ಅರ್ಥಾಲಂಕಾರವೆ ಪ್ರಧಾನವೆಂದೂ ತಾನು ಮೊದಲು ಶಬ್ದಾಲಂಕಾರಗಳನ್ನು ಹೇಳುವುದಾಗಿಯೂ ಮುಂದೆ ತಿಳಿಸುತ್ತಾನೆ ಮಾರ್ಗಕಾರ (೨-೩). ಈ ಬಗ್ಗೆ "ನೃಪತುಂಗನ ಪೂರ್ವಿಕರಲ್ಲಿ ಒಬ್ಬನಾದರೂ ಅಲಂಕಾರಗಳನ್ನು ಶಬ್ದಾರ್ಥಭೇದದಿಂದ ವಿಂಗಡಿಸಿರುವುದಕ್ಕೆ ಮತ್ತು ಮೊದಲು ಶಬ್ದಾಲಂಕಾರಗಳನ್ನು ಎತ್ತಿಕೊಂಡಿರುವುದಕ್ಕೆ ಕಾರಣವನ್ನು ಹೇಳಿಲ್ಲ. ನೃಪತುಂಗನೊಬ್ಬನೇ ಕಾರಣವನ್ನು ಹೇಳಿರುವದು...."[150] ಎಂಬ ಚಿಟಗುಪ್ಪಿಯವರ ಹೇಳಿಕೆ ಆಧಾರರಹಿತವಾದುದು. ಏಕೆಂದರೆ ಮಾರ್ಗಕಾರ ಕಾರಣವನ್ನೇನೂ ಹೇಳಿಲ್ಲ.

ಕನ್ನಡದ ವೈಶಿಷ್ಟ್ಯವಾದ ಪ್ರಾಸವನ್ನು ಮಾರ್ಗಕಾರ ಶಬ್ದಾಲಂಕಾರಗಳಲ್ಲಿ ಸೇರಿಸುತ್ತಾನೆ (ರುದ್ರಟನ ಪ್ರಕಾರ ಅನುಪ್ರಾಸವೊಂದು ಶಬ್ದಾಲಂಕಾರವೆಂಬುದನ್ನು ನೆನೆಯಬಹುದು); "ನುತಶಬ್ದಾಲಂಕಾರದೊಳತಿಶಯಮೀ ಕನ್ನಡಕ್ಕೆ ಸತತಂ ಪ್ರಾಸಂ" (೨-೩೦) ಎಂದಿದ್ದಾನೆ. ಪ್ರಾಸದಲ್ಲಿ ವಿನುತಪ್ರಾಸ (ಆದಿಪ್ರಾಸ), ಶಾಂತಪ್ರಾಸ, ವರ್ಗಪ್ರಾಸ, ಸಮೀಪಪ್ರಾಸ, ಅನು(ಗತ)ಪ್ರಾಸ, ಅಂತ್ಯಪ್ರಾಸ ಎಂದು ಆರು ಬಗೆಗಳನ್ನು ಕಲ್ಪಿಸಿ (೨-೩೧), ಅವಕ್ಕೆ ಲಕ್ಷ್ಯಗಳನ್ನು ಕೊಟ್ಟು, ಕಡೆಯಲ್ಲಿ "ಪ್ರಾಸಾನುಪ್ರಾಸಾಂತಪ್ರಾಸಂಗಳ್ ಮೂಱುಮತಿಶಯಂಗಳ್, ಪ್ರಾಸಾಭಾಸಂಗಳುೞಿದ ಮೂಱುಂ" ಎಂದಿದ್ದಾನೆ (೨-೪೫). ಇದು ಕನ್ನಡ ಕಾವ್ಯಮೀಮಾಂಸೆಯ ಕಲ್ಪನೆ ಎಂದು ಹೇಳಬಹುದಾದ ಸಂಗತಿ ಎನ್ನುತ್ತಾರೆ ಎಂ. ವಿ. ಸೀ.

ಶಬ್ದಾಲಂಕಾರವ್ಯಾಪ್ತಿಯಲ್ಲಿ ಬರುವ ಪದಗತಪ್ರತ್ಯಾಗತ, ಪಾದಗತಪ್ರತ್ಯಾಗತ, ಸಮಸ್ತಗತಪ್ರತ್ಯಾಗತ, ಅರ್ಥಗತಪ್ರತ್ಯಾಗತ, ಗೂಢಚತುರ್ಥ, ಏಕಾಕ್ಷರಿ, ದ್ವ್ಯಕ್ಷರಿ, ಅತಾಲವ್ಯ, ನಿರೋಷ್ಠ್ಯ, ಸರ್ವತೋಭದ್ರ, ನಿರುತ್ತರ, ಗೋಮೂತ್ರಿಕ, ಯಮಕ, ಅರ್ಧಭ್ರಮಣ, ಮುರಜಬಂಧ, ಕ್ರಿಯಾಗೋಪಕ, ಚಕ್ರ, ಹೇಳಿಕೆ—ಈ ದುಷ್ಕರಕಾವ್ಯ ಹಾಗೂ ಚಿತ್ರಬಂಧಗಳಿಗೆ (೨-೧೧೨-೧೫೨) ಲಕ್ಷ್ಯಗಳನ್ನು ಕೊಟ್ಟಿದ್ದಾನೆ ಮಾರ್ಗಕಾರ; ಲಕ್ಷಣಗಳನ್ನು ಹೇಳಿಲ್ಲ. ದಂಡಿಯ 'ಕಾವ್ಯಾದರ್ಶ'ದಲ್ಲಿ ಯಮಕ, ಗೋಮೂತ್ರಿಕೆ, ಅರ್ಧಭ್ರಮ, ಸರ್ವತೋಭದ್ರ, ಪ್ರಹೇಳಿಕೆ—ಇಷ್ಟೇ ಪ್ರಕಾರಗಳು ಲಕ್ಷಣ ಲಕ್ಷ್ಯಗಳೊಡನೆ ಉಕ್ತವಾಗಿರತಕ್ಕವು. ಉಳಿದ ಪ್ರಕಾರಗಳನ್ನು ಮಾರ್ಗಕಾರ ಬೇರಾವುದೋ ಮೂಲದಿಂದ ಸಂಗ್ರಹಿಸಿದ್ದಾನೆ. ಭಾಮಹನಲ್ಲಿ ದುಷ್ಕರಕಾವ್ಯಪ್ರಸಕ್ತಿಯೇ ಇಲ್ಲ (ಯಮಕವೊಂದೆ ಅವನು ಹೇಳತಕ್ಕದ್ದು; ಅದು 'ದುಷ್ಕರ'ವೇನಲ್ಲ).

ಮಾರ್ಗಕಾರನು 'ಯಮಕ'ವನ್ನು ದುಷ್ಕರಕಾವ್ಯವರ್ಗಕ್ಕೆ ಸೇರಿಸಿದ್ದೇಕೆ ಎಂಬ ಪ್ರಶ್ನೆಯೇಳುತ್ತದೆ. ಎಂ. ವಿ. ಸೀ. ಅವರು ಹೀಗೆ ಸಮಾಧಾನ ಹೇಳುತ್ತಾರೆ: "ದಂಡಿ ಯಮಕವನ್ನು ಕುರಿತು 'ತತ್ತುನೈಕಾಂತ ಮಧುರಂ' (ಅದು ಒಂದೇ ಸಮನಾಗಿ ಹಿತಕರವಾಗಿರುವುದಿಲ್ಲ) ಎಂದು ಅದರ ಮೇಲೆ ವಕ್ರದೃಷ್ಟಿ ಬೀರಿದ; ಭಾಮಹನು ಯಮಕದಲ್ಲಿ ಅರ್ಥಭೇದಕ್ಕೆ ಪ್ರಾಶಸ್ತ್ಯಕೊಟ್ಟಿದ್ದಾನೆ; ಉದ್ಭಟನು ಯಮಕವನ್ನು ಉಪೇಕ್ಷೆ ಮಾಡಿದ್ದಾನೆ. ಈ ಹಿನ್ನೆಲೆಯಲ್ಲಿ ವಿಚಾರಮಾಡಿದರೆ, ಸಂಸ್ಕೃತ ಭಾಷೆಯ ನೆರವಿಲ್ಲದೆ

ಕನ್ನಡದಲ್ಲಿ ಯಮಕವನ್ನು ಸಾರ್ಥಕವಾಗಿ ನಿರ್ವಹಿಸುವುದು ಕಷ್ಟಕರವಾದ್ದರಿಂದ (ಬಹುಶಃ ಉದ್ಘಟನ ಮಾರ್ಗವನ್ನು ಹಿಡಿದು) ಮಾರ್ಗಕಾರನು ಯಮಕವನ್ನು ಉಪೇಕ್ಷಿಸಿರುವುದು ಉಚಿತವಾಗಿಯೆ ಇದೆ."[151] ಯಮಕವನ್ನು ದಂಡಿಯೆ ದುಷ್ಕರಕಾವ್ಯ ಸಂತತಿಯಲ್ಲಿ ಸೇರಿಸಿರುವುದನ್ನೂ ಎಷ್ಟೋ ಮಂದಿ ಕನ್ನಡ ಕವಿಗಳು ಅದನ್ನು ಯಶಸ್ವಿಯಾಗಿ ಪ್ರಯೋಗಿಸಿರುವುದನ್ನೂ ಮರೆಯಲಾಗದು.

## ಮಾರ್ಗಭೇದಗಳು

ಮಾರ್ಗಕಾರ ದಂಡಿಯನ್ನನುಸರಿಸಿ ದಶಗುಣಗಳನ್ನೂ ಅವುಗಳಿಂದುಂಟಾಗುವ ಎರಡು 'ಮಾರ್ಗ'ಗಳನ್ನೂ ನಿರೂಪಿಸುವ ಭಾಗ 'ಕವಿರಾಜಮಾರ್ಗ'ದ ಅತಿಮುಖ್ಯ ಭಾಗಗಳಲ್ಲೊಂದು. "ದಂಡಿ ಮತ್ತು ನೃಪತುಂಗರ ಗ್ರಂಥಗಳಲ್ಲಿ 'ಮಾರ್ಗ'ವೆಂದರೆ ಬರಿಯ ಕವಿಗಳ ದಾರಿ ಎಂದು ಸಾಮಾನ್ಯವಾದ ಅರ್ಥವನ್ನು ಗ್ರಹಿಸಿದರೆ ಸರಿಯಾಗದು. ಅನೇಕ ಕವಿಗಳ ರಚನೆಗಳು ದಿಗ್ದರ್ಶಿಸುವ, ಸ್ಫುಟ ಗುಣ ವೈಲಕ್ಷಣ್ಯಗಳನ್ನು ಒಳಗೊಳ್ಳುವ ವೈದರ್ಭೀ ಗೌಡೀ ಮುಂತಾದ ರೀತಿ ಅಥವಾ ಶೈಲಿಗಳೆಂದೇ ವಿಶಿಷ್ಟಾರ್ಥವನ್ನು ಗ್ರಹಿಸಬೇಕು."[152]

ಭಾಮಹ ದಂಡಿಯರು ಅಲಂಕಾರಪ್ರಕರಣದಲ್ಲಿ ಪ್ರತಿಪಾದಿಸದಿರುವ ಗುಣಗಳನ್ನು ಮಾರ್ಗಕಾರ ಅಲಂಕಾರಪ್ರಕರಣದಲ್ಲಿ, ಅದರಲ್ಲೂ ಶಬ್ದಾಲಂಕಾರಪ್ರಕರಣದಲ್ಲಿ, ನಿರೂಪಿಸಿರುವುದರ ಔಚಿತ್ಯವೇನು ಎಂಬುದು ಮೊದಲೇ ಹುಟ್ಟುವ ಪ್ರಶ್ನೆ. ದಂಡಿಯ ದೃಷ್ಟಿಯಲ್ಲಿ ಗುಣಗಳೂ ಅಲಂಕಾರಗಳೇ ; ಆದರೆ ಅಲಂಕಾರಗಳು ಗುಣಗಳಲ್ಲ. ಆದ್ದರಿಂದ ಮಾರ್ಗಕಾರ ಗುಣಗಳನ್ನು ಅಲಂಕಾರಮಾಲಿಕೆಯಲ್ಲಿ ಪರಿಗಣಿಸಿರುವುದು ಸಕಾರಣವಾಗಿದೆ. ಇನ್ನು, ಅವುಗಳನ್ನು ಶಬ್ದಾಲಂಕಾರಗಳೆಂದು ಪರಿಗಣಿಸಿದ್ದೇಕೆ ? ಅರ್ಥಪ್ರಸಕ್ತಿಯಿದ್ದರೂ—ಅದು ಅನಿವಾರ್ಯ—ಗುಣಗಳು ಮುಖ್ಯವಾಗಿ ಶಾಬ್ದಿಕವಾದವು, ಪದರಚನೆಗೆ ಸಂಬಂಧಿಸಿದವು.[153] ಪಾಶ್ಚಾತ್ಯರ ಪ್ರಕಾರ ಯಾವುದನ್ನು ನಾವು 'ಶೈಲಿ' ಎಂದು ಕರೆಯುತ್ತೇವೊ ಅದಕ್ಕೂ ಭಾರತೀಯ ಆಲಂಕಾರಿಕರು ಹೇಳುವಗುಣ-ಮಾರ್ಗಗಳಿಗೂ ನಿಕಟಸಂಬಂಧವುಂಟು. "'ಶೈಲಿ'ಯೆನ್ನುವುದು ಭಾಷೆಯ ಗುಣ" ಪ್ರಧಾನವಾಗಿ ಕಾವ್ಯದ ಶರೀರವನ್ನು ಕುರಿತದ್ದೇ ಹೊರತು ಆತ್ಮವನ್ನಲ್ಲ. ಆದ್ದರಿಂದ, ಗುಣಗಳನ್ನು ಶಬ್ದಾಲಂಕಾರಗಳೆಂದು ಬಗೆಯುವುದರಲ್ಲಿ ಅರ್ಥವಿದೆ. ಎಂ. ವಿ. ಸೀ. ಅವರ ಈ ಸಮರ್ಥನೆಯನ್ನೂ ನೋಡಬಹುದು : "ದಂಡಿಯಲ್ಲಿ ಗುಣಗಳೂ ಕಾವ್ಯಶೋಭಾಕರಗಳಾದ ಅಲಂಕಾರಗಳು ಎಂಬ ದೃಷ್ಟಿಯೇ ಇದ್ದಿತು; 'ಕಾಶ್ಚಿನ್ಮಾರ್ಗವಿಭಾಗಾರ್ಥಮುಕ್ತಾಃ ಪ್ರಾಗಪ್ಯಲಂಕ್ರಿಯಾಃ' (ಕಾವ್ಯಾದರ್ಶ, ೧. ೨) ಎಂದು ಅರ್ಥಾಲಂಕಾರಪ್ರಕರಣಾರಂಭದಲ್ಲಿ ದಂಡಿ ಗುಣಗಳನ್ನು ಅಲಂಕ್ರಿಯೆಗಳು ಎಂದೇ ನಿರ್ದೇಶಿಸಿದ್ದಾನೆ. ದಂಡಿಯ ಒಲವು ವೈದರ್ಭಮಾರ್ಗದ ಕಡೆ ಇದ್ದು, ಗುಣಗಳನ್ನು ಆ ಮಾರ್ಗದ ಪ್ರಾಣಗಳೆಂದು ಹೇಳಿರುವಲ್ಲಿ ಗುಣಗಳು ಅಲಂಕಾರದಿಂದ ಬೇರೆಯಾದ ಕಾವ್ಯಾಂಶ ಎಂಬ

ನಿಲುವೂ ಗೋಚರವಾಗುತ್ತದೆ. ಮಾರ್ಗಕಾರನು ಮಾರ್ಗಭೇದಗಳು ಕವಿಪ್ರಸ್ಥಿತಗಳು ಎಂಬ ದಂಡಿಯ ಅಭಿಮತವನ್ನು ಅನುಮೋದಿಸಿ, ವಿಸ್ತರಿಸಿ, ವಿಶದಪಡಿಸಿದ್ದರೂ (ಕವಿರಾಜಮಾರ್ಗ : ೨. ೪೭–೫೦) ಹತ್ತು ಗುಣಗಳು ವೈದರ್ಭಮಾರ್ಗದ ಪ್ರಾಣಗಳು ಎಂಬ ಮಾತನ್ನು ಉದ್ದೇಶಪೂರ್ವಕವಾಗಿ ಬಿಟ್ಟುಬಿಟ್ಟಂತೆ ಕಾಣುತ್ತದೆ. ದಂಡಿಯ ನಿಲವಿನ ಅನಿಶ್ಚಿತತೆಯನ್ನು ಪರಿಹರಿಸುವ ಪ್ರಯತ್ನವನ್ನು ಮಾರ್ಗಕಾರನು ಕೈಕೊಂಡು, ಗುಣನಿರ್ಣೀತ ಮಾರ್ಗವಿಚಾರವನ್ನು ಶಬ್ದಾಲಂಕಾರಪ್ರಕರಣದಲ್ಲಿ ಅಡಕಮಾಡಿದ್ದಾನೆ ಎಂಬುದು ಸ್ಪಷ್ಟ. 'ಓಜೋಲಕ್ಷಣಂ ಉತ್ತಮಮಿದು ಗದ್ಯಕ್ಕಲಂಕ್ರಿಯಾನುಸಮೇತಂ' (೨–೮೫) ಎಂಬ ಮಾತಿನಿಂದಲೂ 'ಬುಧಗುಣ ಗಣನಾತೀತಾಂತರಂ ಶಬ್ದತತ್ತ್ವಾಂಬುಧಿ ವಿವಿಧವಿಧಾನಾಲಂಕ್ರಿಯಾವೀಚಿಮಾಲಾ' (೧–೧೫೪) ಎಂಬ ಪರಿಚ್ಛೇದಾಂತ ಉಪಸಂಹಾರ ವಾಕ್ಯಭಾಗದಿಂದಲೂ ಗುಣಗಳು ಮತ್ತು ಇತರ ಪದಪ್ರಯೋಗ ವಿಧಾನಗಳು ಅಲಂಕಾರ ಎಂಬ ಮತವನ್ನೇ ಮಾರ್ಗಕಾರನು ತಳೆದಿದ್ದಾನೆ. ಇಲ್ಲಿ 'ಅಲಂಕಾರ' ಎಂಬ ಪರಿಕಲ್ಪನೆಯನ್ನು (concept) ಕಾವ್ಯಸೌಂದರ್ಯಾಂಶ ಎಂಬ ವ್ಯಾಪಕಾರ್ಥದಲ್ಲಿ ಗ್ರಹಿಸಿ, ಗುಣನಿರೂಪಣೆಯನ್ನು ಶಬ್ದಾಲಂಕಾರಪ್ರಕರಣದಲ್ಲಿ ಅಡಕ ಮಾಡಿರುವುದು ಯಥೋಚಿತವಾಗಿದೆ ಎಂದು ಮಾರ್ಗಕಾರನ ಮತವನ್ನು ಸಮರ್ಥಿಸಬಹುದು."[156]

ದಂಡಿ 'ವೈದರ್ಭ' ಮತ್ತು 'ಗೌಡ' ಎಂದು ನಿರ್ದೇಶಿಸಿರತಕ್ಕ ಮಾರ್ಗಗಳನ್ನು ಕವಿರಾಜಮಾರ್ಗಕಾರ 'ದಕ್ಷಿಣಮಾರ್ಗ' ಮತ್ತು 'ಉತ್ತರಮಾರ್ಗ' ಎಂದು ಕರೆದಿದ್ದಾನೆ. ಸಂಸ್ಕೃತಕಾವ್ಯಪದ್ಧತಿಯಲ್ಲಿ ಪ್ರಚುರವಾಗಿದ್ದ ಎರಡು ಮಾರ್ಗಗಳನ್ನು ಕವಿರಾಜಮಾರ್ಗಕಾರ ಕನ್ನಡಕಾವ್ಯಗಳಿಗೂ ಅನ್ವಯಿಸುವಂತೆ ನಾಮಾಂತರದಿಂದ ಹೇಳುತ್ತಿದ್ದಾನೆಂಬುದು ಸ್ಪಷ್ಟ. "ಪೂರ್ವಶಾಸ್ತ್ರ ಪದವಿಧಿಯಂ ತೆಱದಿರೆ ಪೇೞ್ವೆನಿನಿಸಂ ಕನ್ನಡದೊಳ್" (೨–೪೭) ಎಂಬ ಅವನ ಹೇಳಿಕೆಯಲ್ಲಿ, 'ಪೂರ್ವಶಾಸ್ತ್ರವಿಧಿ' ಎಂದರೆ ಸಂಸ್ಕೃತ ಲಕ್ಷಣ ಗ್ರಂಥಗಳಲ್ಲಿ ಕಲ್ಪಿತವಾದದ್ದು ಎಂದು ಅರ್ಥಮಾಡಬೇಕಲ್ಲದೆ, ಕನ್ನಡದಲ್ಲಿ ತತ್ಪೂರ್ವದಲ್ಲಿ ಲಕ್ಷಣಶಾಸ್ತ್ರವಿತ್ತೆಂದು ಭಾವಿಸಬಾರದು; ಅಂತೆಯೆ, ಭಾಮಹಾದಿ ಸಂಸ್ಕೃತ ಕಾವ್ಯಶಾಸ್ತ್ರಜ್ಞರಿಂದ ಉಕ್ತವಾದ ಎರಡು ಮಾರ್ಗಗಳನ್ನು ಅವನು ಕನ್ನಡದಲ್ಲಿ ಹೇಳುತ್ತಿದ್ದಾನೆಂದು ತಿಳಿಯಬೇಕಲ್ಲದೆ, ಕನ್ನಡ ಕಾವ್ಯಪರಂಪರೆಯಲ್ಲಿ ಮಾತ್ರ ಬಳಕೆಯಲ್ಲಿದ್ದ ಎರಡು ಮಾರ್ಗಗಳನ್ನು ಹೇಳುತ್ತಿದ್ದಾನೆಂದು ಭಾವಿಸಬಾರದು. ಎಂ. ವಿ. ಸೀ. ಹೀಗೆ ಹೇಳುತ್ತಾರೆ :

"....ಶ್ರೀವಿಜಯನ ಕಾಲಕ್ಕಾಗಲೇ ಕನ್ನಡ ಭಾಷೆಯ ಹಾಗೂ ಕಾವ್ಯಸೃಷ್ಟಿಯ ಮೇಲೆ ಸಂಸ್ಕೃತದ ಪ್ರಭಾವವು ದೇಸಿಗಬ್ಬಗಳನ್ನು ಹಿಂದಿಕ್ಕುವಮಟ್ಟಿಗೆ ಪರಿಣಾಮ ಗೋಚರವಾಗಿದ್ದುದರಿಂದ, ಕಾವ್ಯರಚನೆಯ ಶೈಲಿಗೆ ನಿಕಟವಾಗಿ ಸಂಬಂಧಪಟ್ಟ 'ಗುಣ'ಗಳನ್ನು ಕನ್ನಡಕ್ಕೆ ಅಳವಡಿಸಿ ನಿದರ್ಶನಗೊಳಿಸುವಲ್ಲಿ ಅವನು ವೈಶಿಷ್ಟ್ಯವನ್ನೆ ಮೆರೆದಿದ್ದಾನೆ; ಅವನ ಕಾಲದ ಮತ್ತು ಅವನ ಕಾಲಕ್ಕೆ ಹಿಂದಿನ ಕಾವ್ಯಪ್ರಯೋಗಪದ್ಧತಿ

ಯಲ್ಲಿ ಮಾರ್ಗಭೇದಗಣನೆ ಇದ್ದಿತೋ ಇಲ್ಲವೋ, ಅದು ಹೇಗಾದರೂ ಇರಲಿ; ದಂಡಿಯನ್ನನುಸರಿಸಿ ಬಂಧಾನುಗತ ಗುಣನಿರೂಪಣೆ ಮಾಡುವ ಮೂಲಕ ಮುಂದಿನ ಕವಿಗಳಿಗೆ ಅವನು ಕವಿತಾಶೈಲಿಯ 'ಮಾರ್ಗ'ವನ್ನು ಕಲ್ಪಿಸಿದನೆಂಬುದನ್ನು ಒಪ್ಪಿಕೊಳ್ಳಬೇಕು.

ಇನ್ನು, ಕನ್ನಡ ಕಾವ್ಯಪದ್ಧತಿಯಲ್ಲಿ ದಕ್ಷಿಣೋತ್ತರ ಮಾರ್ಗಭೇದ ಇದ್ದಿತೆ ಇಲ್ಲವೆ ಎಂಬುದನ್ನು ಸ್ವಲ್ಪದರಲ್ಲಿ ವಿಚಾರಮಾಡಬಹುದು. ದಶಗುಣಗಳಿಗೆ ಸಂಬಂಧಪಟ್ಟಂತೆ ಮಾರ್ಗಭೇದಕಲ್ಪನೆಯ ವಿಷಯದಲ್ಲಿ ಶ್ರೀವಿಜಯನು ಸಂಪೂರ್ಣವಾಗಿ ದಂಡಿಯನ್ನೆ ಅನುಸರಿಸಿದ್ದಾನೆಯಷ್ಟೆ; ಅವನು ಕೊಡುವ ಲಕ್ಷ್ಯಗಳಲ್ಲಿ ಕೆಲವು ದಂಡಿಯ ಲಕ್ಷ್ಯಗಳ ಅನುವಾದಗಳು, ಇನ್ನುಳಿದವು, ಸ್ವನಿರ್ಮಿತ; ಯಾವುವೂ ಅನ್ಯಕಾವ್ಯಗಳಿಂದ ತೆಗೆದುಕೊಂಡುವಲ್ಲ, ಅನ್ಯಕಾವ್ಯಗಳ ಅಸ್ತಿತ್ವಸ್ಥಾಪನೆಗೆ ಆಧಾರಗಳೂ ದೊರಕಿಲ್ಲ. ಹೀಗಿರುವಲ್ಲಿ, ಶ್ರೀವಿಜಯನ ಕಾಲದ ಕನ್ನಡ ಕಾವ್ಯಪದ್ಧತಿಯ ಸ್ವರೂಪವೇ ತಿಳಿಯದಿರುವಲ್ಲಿ ಮಾರ್ಗಭೇದವಿಚಾರದಲ್ಲಿ ಶ್ರೀವಿಜಯನ ಮಾತನ್ನು ಒರೆಗೆ ಹಚ್ಚಿ ನೋಡಲು ಅವಕಾಶವೇ ಇಲ್ಲ. ಶ್ರೀವಿಜಯನು ಕನ್ನಡ ಕಾವ್ಯಪದ್ಧತಿಯಲ್ಲಿದ್ದಿರಬಹುದಾದ ಮಾರ್ಗಭೇದವನ್ನು ವಿಶ್ಲೇಷಣ ಮಾಡುತ್ತಿದ್ದಾನೆಂದು ತಿಳಿಯುವುದು ತಪ್ಪಾಗುತ್ತದೆ; ನಾವು ಈ ಹಿಂದೆ ಸೂಚಿಸಿದಂತೆ, ಕನ್ನಡ ಕವಿಗಳಿಗೆ ಅವನು ಮಾರ್ಗವನ್ನು ಹಾಕಿ ತೋರಿಸುತ್ತಿದ್ದಾನೆಂದು ತಿಳಿಯುವುದೇ ಸಾಧು."[155]

ಆದರೆ ಮುಳಿಯ ತಿಮ್ಮಪ್ಪಯ್ಯನವರ ಅಭಿಪ್ರಾಯವೇ ಬೇರೆ. ಅವರು ಹೇಳುತ್ತಾರೆ: "ದಂಡ್ಯಾದಿಗಳನ್ನು ಅನುಸರಿಸಿ ರಚಿತವಾದ 'ಕವಿರಾಜಮಾರ್ಗ'ದೊಳಗಿನ ಮಾರ್ಗಭೇದವೆಂಬುದೆಲ್ಲವೂ ಸಂಸ್ಕೃತ ಸಾಹಿತ್ಯದಿಂದಲೇ ಬಂದುದೆಂಬ ಅಭಿಪ್ರಾಯವನ್ನು ಒಪ್ಪುವುದು ಕಷ್ಟವೆಂದು ನಮ್ರತೆಯಿಂದ ಸೂಚಿಸಬಯಸುತ್ತೇವೆ". "ಕವಿರಾಜಮಾರ್ಗಕಾರನು ವಿಸ್ತರಿಸಿದ ದಕ್ಷಿಣೋತ್ತರಮಾರ್ಗಗಳೆಂದರೆ ಸ್ಫುಟಭೇದಯುತಗಳಾದ, ಕನ್ನಡ ಸಾಹಿತ್ಯದೊಳಗಿನ ಭೇದಗಳಲ್ಲದೆ ಸಂಸ್ಕೃತ ಲಾಕ್ಷಣಿಕರ ಮಾರ್ಗನಿರೂಪಣೆಯ ಪುರಶ್ಚರಣೆಯಲ್ಲವೆಂಬುದು ಹೊಳೆಯದಿರಲಾರದು."[156]

ತಿಮ್ಮಪ್ಪಯ್ಯನವರ ಅಭಿಪ್ರಾಯ ಸಮರ್ಥನೀಯವಲ್ಲವೆನ್ನಬೇಕಾಗಿದೆ. ತಮ್ಮ ವಾದದ ಬಗ್ಗೆ ಅವರಲ್ಲೇ ಅನಿಶ್ಚಿತತೆಯಿರುವುದು ಈ ಮಾತುಗಳಿಂದ ವ್ಯಕ್ತವಾಗುತ್ತದೆ: "ಇಷ್ಟು ಹೇಳಿದುದರಿಂದ, ಕನ್ನಡ ಸಾಹಿತ್ಯದಲ್ಲಿ ಮಾರ್ಗಭೇದಗಳುಂಟೆಂದು ವಾದಿಸಿದಂತಾಯಿತೇ ಹೊರತು ಆ ಭೇದಗಳ ಸ್ವರೂಪವನ್ನು 'ಇದಮಿತ್ಥಂ' ಎಂದು ಪರಿಚ್ಛೇದಿಸಿದಂತಾಗುವುದಿಲ್ಲ."[157] ಆದ್ದರಿಂದ ಅವರ ವಾದವನ್ನು ತಳ್ಳಿಹಾಕಬಹುದು.

ದಂಡಿಯ 'ವೈದರ್ಭ', 'ಗೌಡ' ಮಾರ್ಗಗಳು 'ಕವಿರಾಜಮಾರ್ಗ'ದಲ್ಲಿ 'ದಕ್ಷಿಣೋತ್ತರ' ಮಾರ್ಗಗಳಾದುದೆಂತು, ಈ ವ್ಯತ್ಯಾಸದ ಸಾಧಕಬಾಧಕಗಳೇನು ಎಂಬುದೊಂದು ಪ್ರಶ್ನೆ. ವೈದರ್ಭ, ಗೌಡ ಎಂಬ ಪದಗಳ ಬದಲು ಪ್ರಯುಕ್ತವಾಗಿರುವ ದಕ್ಷಿಣ, ಉತ್ತರ ಎಂಬ ಪದಗಳ ಸ್ವಾಮ್ಯ ಸಂಪೂರ್ಣವಾಗಿ ಮಾರ್ಗಕಾರನದಲ್ಲ. ದಂಡಿ

ಯಲ್ಲಿ 'ವೈದರ್ಭರು' ಎಂಬ ಅರ್ಥದಲ್ಲಿ 'ದಾಕ್ಷಿಣಾತ್ಯರು' ಎಂಬ ಶಬ್ದ ಬಂದಿದೆ (೧–೬೦); ಹಾಗೆಯೆ 'ಗೌಡರು' ಎಂಬ ಅರ್ಥದಲ್ಲಿ 'ಅದಾಕ್ಷಿಣಾತ್ಯರು' ಎಂಬ ಮಾತನ್ನೂ (೧–೮೦), 'ಪೌರಸ್ತ್ಯರು' ಎಂಬ ಮಾತನ್ನೂ (೧–೫೦, ೮೩) ದಂಡಿ ಪ್ರಯೋಗಿಸಿದ್ದಾನೆ. ಆದರೆ ಅವನು 'ಗೌಡ'ಮಾರ್ಗವನ್ನು ಎಲ್ಲೂ 'ಉತ್ತರಮಾರ್ಗ'ವೆಂದಿಲ್ಲ. ಹೀಗಿರುವಾಗ, ದಂಡಿಯ 'ವೈದರ್ಭಮಾರ್ಗ' ಕವಿರಾಜಮಾರ್ಗಕಾರನಲ್ಲಿ 'ದಕ್ಷಿಣಮಾರ್ಗ'ವಾದದ್ದು ಸಹಜವಾದರೂ, 'ಗೌಡಮಾರ್ಗ' ಎಂಬುದು 'ಉತ್ತರಮಾರ್ಗ' ಹೇಗಾಯಿತು ? ಕಾರಣ ಸ್ಪಷ್ಟ : ದಕ್ಷಿಣವಲ್ಲದ್ದು ('ಅದಾಕ್ಷಿಣಾತ್ಯ') ಸಾಮಾನ್ಯವಾಗಿ ಉತ್ತರವಾಗಬೇಕು ತಾನೆ. ಈ ಬಗ್ಗೆ ಚಿಟಗುಪ್ಪಿಯವರ ಊಹೆಯೂ ವಿಚಾರಾರ್ಹವಾಗಿದೆ : "ವೈದರ್ಭಿಯ ವಿಪರ್ಯಯ ಅಂದರೆ ವಿರುದ್ಧ ಲಕ್ಷಣಗಳಿರುವದು ಗೌಡಿ. ದಕ್ಷಿಣದ ವಿಪರ್ಯಯ ಉತ್ತರ ಮಾರ್ಗವೆಂದು ಹೆಸರಿಸಿದಂತಿದೆ. ಇದಕ್ಕೆ ಇನ್ನೂ ಒಂದು ಕಾರಣವಿರಬಹುದಾಗಿದೆ. ಪ್ರಖ್ಯಾತ ಜೈನಾಗಮ (ದಿಗಂಬರ) ಷಟ್ಖಂಡಾಗಮದ ವ್ಯಾಖ್ಯೆಯಲ್ಲಿ 'ದಕ್ಷಿಣಪ್ರತಿಪತ್ತಿ', 'ಉತ್ತರಪ್ರತಿಪತ್ತಿ' ಎಂಬ ಮತೀಯ ಮಾರ್ಗಭೇದಗಳ ಉಲ್ಲೇಖವಿದೆ. ಜಿನಸೇನನ ಗುರು, ಅಂದರೆ ನೃಪತುಂಗನ ಗುರುವಿನ ಗುರು, ವೀರಸೇನನು ಈ ವ್ಯಾಖ್ಯೆಯನ್ನು ರಚಿಸಿ ಇದಕ್ಕೆ ನೃಪತುಂಗನ ಗೌರವಾರ್ಥವಾಗಿ 'ಧವಲ' ಎಂದು ಹೆಸರಿಸಿರುವನು.... ದಕ್ಷಿಣಪ್ರತಿಪತ್ತಿ ಎಂದರೆ ಋಜು ಮತ್ತು ಸಂಪ್ರದಾಯಮಾನ್ಯ ಮಾರ್ಗ. ಉತ್ತರ ಪ್ರತಿಪತ್ತಿ ಇದರ ವಿಪರ್ಯಯ—ಅನೃಜು ಮತ್ತು ಸಂಪ್ರದಾಯವಿರುದ್ಧವಾದ ಮಾರ್ಗ. ಕವಿರಾಜಮಾರ್ಗದಲ್ಲಿ ಜೈನಧರ್ಮಪರ ಅನೇಕ ಉಲ್ಲೇಖಗಳು ಇರುವುದ ರಿಂದ ಈ ಹೆಸರುಗಳನ್ನು ಮಾರ್ಪಡಿಸಿ ವೈದರ್ಭಿಗೆ ಆಗಲೇ ಪ್ರಚಾರದಲ್ಲಿದ್ದ ದಕ್ಷಿಣ ಮಾರ್ಗವೆಂದೂ ಗೌಡಿಗೆ ಉತ್ತರಮಾರ್ಗವೆಂದೂ ಹೆಸರಿಸಿರುವದಾದರೂ ಅಸಂಭವ ವಿಲ್ಲ."[158]

ಮಾರ್ಗಕಾರ ಎಲ್ಲಿಯೂ 'ವೈದರ್ಭ', 'ಗೌಡ' ಎಂಬ ಮಾತುಗಳನ್ನು ಬಳಸಿಲ್ಲ ವೆಂಬುದು ಗಮನಾರ್ಹವಾದ, ಆಶ್ಚರ್ಯಕರವಾದ ಸಂಗತಿ ; ಇದಕ್ಕೆ ಕಾರಣ ಹೇಳುವುದು ಕಠಿಣ. ಎಂ. ವಿ. ಸೀ. ಅವರ ಹೇಳಿಕೆಗಳಿವು : "ಕನ್ನಡ ಕಾವ್ಯಮಾರ್ಗವನ್ನು ರೂಪಿ ಸಲು ಹೊರಟ ಮಾರ್ಗಕಾರನು ದಂಡಿ ಪ್ರಯೋಗಿಸಿದ ವೈದರ್ಭ, ಗೌಡ ಎಂಬ ಮಾತು ಗಳನ್ನು ಬಿಟ್ಟು ಅವನು ಒಂದೆರಡು ಕಡೆ ಪ್ರಯೋಗಿಸಿರುವ 'ದಾಕ್ಷಿಣಾತ್ಯ', 'ಅದಾಕ್ಷಿಣಾತ್ಯ' (ಉತ್ತರ) ಎಂಬ ಶಬ್ದಗಳಿಂದ ಸೂಚನೆ ಪಡೆದು, ತಾನು ನಿರೂಪಿಸಲಿರುವ ಮಾರ್ಗದ್ವಯವನ್ನು ದಕ್ಷಿಣೋತ್ತರ ಎಂದು ನಿರ್ದೇಶಿಸಿರುವುದರಲ್ಲಿ ವಿವೇಕವನ್ನೇ ಮೆರೆ ದಿದ್ದಾನೆ"; "ದಂಡಿ ಮಾರ್ಗಗಳನ್ನು ಗೌಡೀ ವೈದರ್ಭೀ ಎಂದು ಪ್ರಾದೇಶಿಕವಾಗಿ ನಿರ್ದೇಶಿಸಿರುವುದನ್ನು (ಕನ್ನಡ ನಾಡಿಗೆ ಅನ್ವಯಿಸದೆಂಬ ಸಕಾರಣದಿಂದ ದಂಡಿಯ ಸೂಚನೆಯನ್ನು ಹಿಡಿದು) ದಕ್ಷಿಣೋತ್ತರ ಮಾರ್ಗಗಳೆಂದು ನಿರ್ದೇಶಿಸಿದ್ದಾನೆ."[159]

ವೈದರ್ಭ, ಗೌಡ ಎಂಬವು ದೇಶವಾಚಕಗಳು ; ಅವುಗಳ ಬದಲು ದಕ್ಷಿಣ, ಉತ್ತರ ಎಂಬ ದಿಗ್ವಾಚಕಗಳನ್ನು ಮಾರ್ಗಕಾರ ಬಳಸಿದ್ದಾನೆ ; ಇದು ಔಚಿತ್ಯಪೂರ್ಣವಾಗಿದೆ—

ಎಂಬುದು ಎಂ. ವಿ. ಸೀ. ಅವರ ಒಟ್ಟಿನ ನಿಲುವು. ಇದನ್ನೊಪ್ಪುವುದರಲ್ಲಿ ಕೆಲವು ತೊಡಕುಗಳಿವೆ. ವೈದರ್ಭ, ಗೌಡ ಮುಂತಾದ ಮಾತುಗಳು ಮೂಲತಃ ಭೌಗೋಳಿಕ ಅರ್ಥವನ್ನು ಪಡೆದಿದ್ದುದು ನಿಜ; ವಿದರ್ಭದೇಶದವರದು ವೈದರ್ಭಮಾರ್ಗ, ಗೌಡದೇಶ ದವರದು ಗೌಡಮಾರ್ಗ ಇತ್ಯಾದಿ. ಆದರೆ ಕಾಲಕ್ರಮದಲ್ಲಿ ಅವುಗಳ ಭೌಗೋಳಿಕಾರ್ಥ ಕಳಚಿಹೋಗಿ, ಅವು ಎರಡು ನಿರ್ದಿಷ್ಟ ವಿಭಿನ್ನ ಕಾವ್ಯಮಾರ್ಗಗಳನ್ನು ಸೂಚಿಸುವಂತಾ ಯಿತು; ಪ್ರಾದೇಶಿಕತೆ ಹೆಸರಿನಲ್ಲಿ ಉಳಿಯಿತೇ ವಿನಾ ಉಸಿರಿನಲ್ಲಲ್ಲ. (ಭಾಮಹನ ಕಾಲಕ್ಕೇ ಈ ಬೆಳವಣಿಗೆಯುಂಟಾಗಿತ್ತು). ಆದ್ದರಿಂದ ಮಾರ್ಗಕಾರನೂ ವೈದರ್ಭ, ಗೌಡ ಎಂಬ ಮಾತುಗಳನ್ನೇ ಬಳಸಿದ್ದರೆ ಏನೂ ತಪ್ಪಾಗುತ್ತಿರಲಿಲ್ಲ. ದಕ್ಷಿಣ, ಉತ್ತರ ಎಂಬ ಶಬ್ದಗಳನ್ನು ಬಳಸಿ ಅವನು ಸಾಧಿಸಿದ ಹೆಚ್ಚಿನ ಔಚಿತ್ಯವಾದರೂ ಏನು? ದಿಗ್ವಾಚಕಗಳಲ್ಲೂ ಪ್ರಾದೇಶಿಕವಾದ ಅರ್ಥವೇ ಉಂಟಲ್ಲವೆ?[160] ಕನ್ನಡವನ್ನು ಅವನು ದೃಷ್ಟಿಯಲ್ಲಿಟ್ಟುಕೊಂಡಿದ್ದಾನೆ ಎಂದರೂ ಈ ಪ್ರಶ್ನೆ ಉಳಿದೇ ಉಳಿಯುತ್ತದೆ. 'ದಕ್ಷಿಣ' ಎಂದರೆ ಏನರ್ಥ? 'ಉತ್ತರ' ಎಂದರೆ ಏನರ್ಥ? ಉತ್ತರಿಸುವುದು ಸುಲಭವಲ್ಲ. ಆದ್ದರಿಂದ, ಮಾರ್ಗಕಾರ ಒಂದು ಸಮಸ್ಯೆಯಿಂದ ಪಾರಾಗಲು ಪ್ರಯತ್ನಿಸಿ—ಇದು ಎಂ. ವಿ. ಸೀ. ಅವರ ವಾದವನ್ನು ಲಕ್ಷಿಸಿ ಹೇಳಬಹುದಾದ ಮಾತು—ಮತ್ತೊಂದು ಸಮಸ್ಯೆಯನ್ನು ಎಬ್ಬಿಸಿದ್ದಾನಷ್ಟೆ. (ಹಾಗೆ ನೋಡಿದರೆ, ಈ ಸಮಸ್ಯೆಗಳಿಂದ ಪೂರ್ತಿ ಪಾರಾದವನು ಕುಂತಕನೊಬ್ಬನೇ). ಅಂತೂ ಈ ಬಗ್ಗೆ ನಿರ್ಣಾಯಕವಾಗಿ ಹೇಳುವುದು ಸದ್ಯಕ್ಕೆ ಅಶಕ್ಯವಾಗಿದೆ.

ಗುಣಗಳ ಚರಿತ್ರೆಯನ್ನು ನಾವು ನೋಡಿದರೆ, ಭರತನ 'ನಾಟ್ಯಶಾಸ್ತ್ರ'ದಲ್ಲಿ ಮತ್ತು ದಂಡಿಯ 'ಕಾವ್ಯಾದರ್ಶ'ದಲ್ಲಿ ಹತ್ತು ಗುಣಗಳೂ ಭಾಮಹನ 'ಕಾವ್ಯಾಲಂಕಾರ'ದಲ್ಲಿ ಮೂರೇ ಗುಣಗಳೂ ಉಕ್ತವಾಗಿರುವುದು ಕಂಡುಬರುತ್ತದೆ. (ವಾಮನನಲ್ಲಿ ಗುಣಗಳು ೨೦). ಮಾಧುರ್ಯ, ಓಜಸ್ಸು, ಪ್ರಸಾದಗಳನ್ನು ಭಾಮಹ, 'ಗುಣ'ಗಳೆಂದು ಕರೆಯದೆಯೆ, ಉಲ್ಲೇಖಿಸಿದ್ದಾನೆ; "ಮಾಧುರ್ಯ ಪ್ರಸಾದಗಳನ್ನು ಬಯಸುವ ಕಬ್ಬಿಗರು ಸಮಾಸಪದಗಳನ್ನು ಹೆಚ್ಚಾಗಿ ಪ್ರಯೋಗಿಸುವುದಿಲ್ಲ" ಎಂದೂ, "ಓಜಸ್ಸನ್ನು ತರಲೆಳಸುವ ಇತರ ಕವಿಗಳು ಹಲವು ಪದಗಳನ್ನಾದರೂ ಸಮಾಸಮಾಡುತ್ತಾರೆ" ಎಂದೂ "ವಿದ್ವಾಂಸ ರಿಂದ ಹಿಡಿದು ಹೆಂಗಸರು ಮಕ್ಕಳವರೆಗೆ ಎಲ್ಲರಿಗೂ ಅರ್ಥ ತಿಳಿಯುವಂತಹ ಕಾವ್ಯವು 'ಪ್ರಸಾದ' ಉಳ್ಳುದು" ಎಂದೂ ಕ್ವಚಿತ್ ವಿವರಣೆ ಕೊಟ್ಟಿದ್ದಾನೆ (೨–೧–೩). ವೈದರ್ಭ, ಗೌಡೀಯ ಎಂಬ ಎರಡು ಮಾರ್ಗಗಳನ್ನೂ ಅವನು, 'ಮಾರ್ಗ'ಗಳೆಂದು ಕರೆಯದೆಯೆ ಉಲ್ಲೇಖಿಸಿದ್ದಾನೆ. ಗುಣಗಳಿಗೂ ಮಾರ್ಗಗಳಿಗೂ ಅವನು ಸಂಬಂಧ ಕಲ್ಪಿಸಿಲ್ಲ. ಅವನ ಕಾಲಕ್ಕೆ ವೈದರ್ಭಮಾರ್ಗ ಮೇಲು, ಗೌಡಮಾರ್ಗ ಕೀಳು ಎಂಬ ಭಾವನೆ ನೆಲೆಗೊಂಡಿದ್ದಂತೆ ತೋರುತ್ತದೆ (ದಂಡಿಯಲ್ಲೂ ಅದು ಧ್ವನಿತವಾಗುತ್ತದೆ). ವೈದರ್ಭ, ಗೌಡ ಎಂಬ ಮಾರ್ಗಭೇದವೆ ಭಾಮಹನಿಗೆ ಸಮ್ಮತವಲ್ಲ; ಅದನ್ನವನು ನಿರಾಕರಿಸುತ್ತಾನೆ. ಅವುಗಳಲ್ಲಿ ತಾರತಮ್ಯ ಕಲ್ಪಿಸುವುದನ್ನಂತೂ ಅವನು ಉಗ್ರವಾಗಿ

ಪ್ರತಿಭಟಿಸುತ್ತಾನೆ. ಮಾರ್ಗಸಂಬಂಧವಾದ ಭಾಮಹನ ಶ್ಲೋಕಗಳ ಅನುವಾದವಿದು: "ಕೆಲವರು ವಿದ್ವಾಂಸರು ವೈದರ್ಭವೆಂಬ ಮತ್ತೊಂದು ಕಾವ್ಯಜಾತಿಯುಂಟೆಂದು ತಿಳಿಯುತ್ತಾರೆ. ಅದೇ ಬಹಳ ದೊಡ್ಡದಂತೆ. ಒಳ್ಳೆಯ ವಸ್ತುವಿದ್ದರೂ ಉಳಿದುದು ಅಲ್ಲವಂತೆ" (೧-೩೧); "ಇದು 'ಗೌಡೀಯ', ಇದು 'ವೈದರ್ಭ' ಎಂದು ಹೀಗೆ ಬೇರೆ ಬೇರೆ ವಿಂಗಡಿಸುವುದೇತಕ್ಕೆ? (ಕುರುಡರು) ಒಬ್ಬರನ್ನೊಬ್ಬರು ಹಿಂಬಾಲಿಸುವಂತೆ ಬುದ್ಧಿಯಿಲ್ಲದವರು ಹೀಗೆ ಬೇರೆ ಬೇರೆ ಹೆಸರುಗಳನ್ನು ಬಿತ್ತರಿಸುತ್ತಾರೆ" (೧-೩೨); "ಅಲಂಕಾರಗಳಿಂದ ಕೂಡಿದ್ದು, ಅರ್ಥಪುಷ್ಟಿಯಿಂದ ತುಂಬಿ, ಯುಕ್ತಿಯುಕ್ತವಾಗಿರುವುದಲ್ಲದೆ ಸರಳವೂ ಆಗಿದ್ದರೆ 'ಗೌಡೀಯ'ವೂ ಒಳ್ಳೆಯದೇ; 'ವೈದರ್ಭ'ವೂ ಒಳ್ಳೆಯದೇ" (೧-೩೫).

ನಾವು ದಂಡಿಯ 'ಕಾವ್ಯಾದರ್ಶ'ಕ್ಕೆ ಬಂದರೆ, ಅಲ್ಲಿ ಭರತಪ್ರೋಕ್ತವಾದ ದಶಗುಣಗಳ ವಿಶದವಾದ ನಿರೂಪಣೆಯೂ ಅವುಗಳ ಆಧಾರದ ಮೇಲೆ ರೂಪಗೊಂಡ 'ವೈದರ್ಭ', 'ಗೌಡ' ಎಂಬ ವಿಭಿನ್ನ ಮಾರ್ಗಗಳ ಪ್ರತಿಪಾದನೆಯೂ ಕಂಡುಬರುತ್ತದೆ. ಕವಿರಾಜಮಾರ್ಗಕಾರ ದಂಡಿಯನ್ನು ಮೇಲ್ಪಂಕ್ತಿಯಾಗಿಟ್ಟುಕೊಂಡು ಗುಣ-ಮಾರ್ಗಗಳನ್ನು ನಿರೂಪಿಸಿದ್ದಾನೆ; ಹೀಗೆ ಮಾಡುವಾಗ ಸ್ವಲ್ಪಮಟ್ಟಿಗೆ ಸ್ವಂತಿಕೆಯನ್ನೂ ಪ್ರಕಟಿಸಿದ್ದಾನೆ.

ಕಾವ್ಯಮಾರ್ಗಪ್ರಭೇದಗಳೂ ಪ್ರಕಾರಗಳೂ ಅನಂತವೆಂದೂ ಅವುಗಳಲ್ಲಿ ಪ್ರಸಿದ್ಧವಾದ ದಕ್ಷಿಣ, ಉತ್ತರ ಎಂಬ ಎರಡು ಮಾರ್ಗಗಳನ್ನು ತಾನು ವಿವರಿಸುವುದಾಗಿಯೂ ತಿಳಿಸುತ್ತಾನೆ ಮಾರ್ಗಕಾರ:

ಕರಚರಣಶರೀರಶಿರೋ
ದರವದನಾದ್ಯವಯವಂಗಳಿವು ತಂತಮ್ಮೊಳ್
ದೊರೆಕೊಂಡೆಡೆಗಳೊಳೊಳವಾ
ಗಿರೆಯುಂ ನರರೊರ್ವರೊರ್ವರಂ ಪೋಲದವೋಲ್ ॥

ವರಶಬ್ದಾಲಂಕಾರದ
ವಿರಚನೆಗಳ್ ನೋೞ್ಪೊಡೊಂದೆ ತೋರ್ಕೆಗಳಿಂತುಂ
ಪೊರೆದಿರಲೊಂದೊಂದಱೊಳಾ
ಪರಮಕವೀಶಪ್ರಯೋಗಗತಮಾರ್ಗಂಗಳ್ ॥

ಕವಿಗಳುಮನಾದಿಲೋಕೋ
ದ್ಭವರಪ್ಪುದಱಿಂದನಂತಗಣನಾನುಗತಂ
ಸವಿಶೇಷೋಕ್ತಿಗಳುಮನಂ
ತವಿಧಂಗಳನಂತಭೇದವದಱಿಂ ಮಾರ್ಗಂ ॥

ಜನಿತವಿಭಾಗಂಗಳ್ ವಾ
ಙ್ಮನಸಾತೀತಂಗಳಿಂತು ಮಾರ್ಗೋಕ್ತಿಗಳೊಳ್
ನೆನೆದಱಿಪಲಾರ್ಪರಾರದ
ನನಿಶ್ಚಿತಕ್ರಮವಿಶೇಷಗುಣಯುಕ್ತಕಮಂ ॥

ಅಂತುಂ ಭೇದಮನಿನಿಸಾ
ರ್ಪಂತುತ್ತರ ದಕ್ಷಿಣೋರು ಮಾರ್ಗದ್ವಯದಾ
ಚಿಂತಿತ ಪುರಾಣ ಕವಿ ವಿದಿ
ತಾಂತರವಮಂ ಪೇೞ್ವೆನಱಿವ ಮಾೞ್ಕೆಯೊಳೆನ್ನಾ ॥ (೨-೪೭-೫೧)

ಮಾರ್ಗದ್ವಯನಿರೂಪಣೆಯ ಅಂತ್ಯದಲ್ಲಿ ಬರುವ ಪದ್ಯವಿದು :

ಇಂತಿರೆ ಮಾರ್ಗದ್ವಿತಯ ಗ
ತಾಂತರವಮಂ ಪೇೞ್ದೆನೆಲ್ಲಿಯುಂ ಕ್ಷೀರಗುಡಾ
ದ್ಯಂತರರಸಾಂತರಂ ಜಾ
ತ್ಯಂತರಮಪ್ಪಂತನಂತಮಂತರ್ಭೇದಂ ॥ (೨-೯೭)

ಈ ಪದ್ಯಗಳಿಗೆ ಸಂವಾದಿಯಾದ 'ಕಾವ್ಯಾದರ್ಶ'ದ ಉಕ್ತಿಗಳಿವು :

ಅಸ್ತ್ಯನೇಕೋ ಗಿರಾಂ ಮಾರ್ಗಃ ಸೂಕ್ಷ್ಮಭೇದಃ ಪರಸ್ಪರಂ
ತತ್ರ ವೈದರ್ಭ ಗೌಡೀಯೌ ವರ್ಣ್ಯೇತೇ ಪ್ರಸ್ಫುಟಾಂತರೌ ॥ (೧-೪೦)

(ಮಾತುಗಳ ಮಾರ್ಗ ಅನೇಕವಾಗಿದೆ; ಒಂದೊಂದಕ್ಕೂ ಇರುವ ಭೇದಗಳು ಬಹಳ ಸೂಕ್ಷ್ಮ; ಆದ್ದರಿಂದ ಭೇದಗಳು ಸ್ಪಷ್ಟವಾಗಿರುವ 'ವೈದರ್ಭ' ಮತ್ತು 'ಗೌಡೀಯ' ಎಂಬ ಎರಡು ಮಾರ್ಗಗಳನ್ನು ಮಾತ್ರ ವಿವರಿಸುತ್ತೇವೆ.)

"ಹೀಗೆ ವೈದರ್ಭ, ಗೌಡ ಮಾರ್ಗಗಳು ಬೇರೆ ಬೇರೆಯಾಗಿವೆ. ಎರಡರ ಸ್ವರೂಪವೂ ಬೇರೆಯೆಂದು ತೋರಿಸಲು ಸಾಧ್ಯವಿದೆ. ಇನ್ನು ಒಬ್ಬೊಬ್ಬ ಕವಿಯಲ್ಲಿಯೂ ಬೇರೆಯಾಗಿ ಕಾಣುವ ಅದರ ಸೂಕ್ಷ್ಮಭೇದಗಳನ್ನು ಪ್ರತ್ಯೇಕವಾಗಿ ವಿವರಿಸುವುದು ಸಾಧ್ಯವಿಲ್ಲ. ಕಬ್ಬು, ಹಾಲು, ಬೆಲ್ಲ ಮುಂತಾದವುಗಳ ಸಿಹಿಯಲ್ಲಿ ಬೇಕಾದಷ್ಟು ಅಂತರವಿದೆ. ಆದರೆ ಅದನ್ನು ತಿಳಿಸುವುದು ಸರಸ್ವತಿಗೂ ಸಾಗದ ಕೆಲಸ." (೧-೧೦೧, ೧೦೨)

ದಂಡಿಯ ಅಭಿಪ್ರಾಯವನ್ನು ಮಾರ್ಗಕಾರ ಸ್ಪಷ್ಟೀಕರಿಸಿದ್ದಾನೆ; ಅದರಲ್ಲೂ "ಕರ ಚರಣ ಶರೀರ ಶಿರೋದರ...." ಎಂಬ ಪದ್ಯ ಸಂಪೂರ್ಣ ಸ್ವತಂತ್ರವಾಗಿದ್ದು, ಅರ್ಥ ಗರ್ಭಿತವಾಗಿಯೂ ಇದೆ. ಒಟ್ಟಿನಲ್ಲಿ, ದಂಡಿ ಕವಿರಾಜಮಾರ್ಗಕಾರರ ಪ್ರಕಾರ ಮಾರ್ಗ ಗಳು ಅಗಣಿತ; ಒಬ್ಬೊಬ್ಬ ಕವಿಯದೂ ಒಂದೊಂದು ವಿಶಿಷ್ಟ ಮಾರ್ಗ; ಎಷ್ಟು ಮಂದಿ ಕವಿಗಳೋ ಅಷ್ಟೂ ಕಾವ್ಯಮಾರ್ಗಗಳು.

ಪಾಶ್ಚಾತ್ಯರು ಹೇಳುವ 'ಶೈಲಿ'ಯ ಕಲ್ಪನೆ ಕಂಡುಬರತಕ್ಕದ್ದು ಕುಂತಕನಲ್ಲಿ ಮಾತ್ರ, ಅವನ ಪೂರ್ವಿಕರಲ್ಲಿ ಅದು ಕಾಣಿಸದೆಂಬುದು ಸಾಮಾನ್ಯವಾದ ತಿಳಿವಳಿಕೆ.[161] ಆದರೆ ಇದು ಪೂರ್ಣ ಸತ್ಯವಲ್ಲ. ದಂಡಿಯ ಮತ್ತು ಅವನ ಅನುಯಾಯಿಯಾದ ಕವಿ ರಾಜಮಾರ್ಗಕಾರನ ಪೂರ್ವೋಕ್ತ ಹೇಳಿಕೆಗಳಲ್ಲಿ 'ಶೈಲಿ'ಯ ಕಲ್ಪನೆ—style is individual ಎನ್ನುವಂಥದು—ಸ್ಥೂಲವಾಗಿಯಾದರೂ ಉಂಟೆಂದು ಹೇಳಬೇಕಾಗು ತ್ತದೆ, 'ಶೈಲಿ'ಗೆ ಮೂಲಭೂತವಾದ ಕವಿಸ್ವಭಾವವನ್ನು ಅವರು ಪ್ರಸ್ತಾಪಿಸದಿದ್ದರೂ. ("ನರರೊರ್ವರೊರ್ವರಂ ಪೋಲದವೋಲ್" ಎಂಬ ಮಾರ್ಗಕಾರನ ಮಾತಿನಲ್ಲಿ ರೂಪ

ಭೇದ ಮಾತ್ರವಲ್ಲದೆ ಸ್ವಭಾವಭೇದವೂ ಇಂಗಿತವಾಗಿರುವುದನ್ನು ಗಮನಿಸಬಹುದು.)

ಮಾರ್ಗಕಾರನ ಮುಂದಿನ ಪದ್ಯಗಳು ಲಕ್ಷ್ಯಯೋಗ್ಯವಾಗಿವೆ:

ನಿಗದಿತ ಕಾವ್ಯೋಕ್ತಿಗಳೊಳ್
ನೆಗಳ್ದುವು ಮಾರ್ಗಂಗಳಿಂತುಮೆರಡುಕ್ತಿಗಳುಂ
ಬಗೆವಾಗಳೆರಡು ಮಾಳ್ಕೆಯೊ
ಳೊಗೆದುವು ವಕ್ರ ಸ್ವಭಾವ ನಿಯತಿಕ್ರಮದಿಂ ॥

ಸತತಂ ದಕ್ಷಿಣಮಾರ್ಗೋ
ದಿತೋಕ್ತಿಭೇದಕ ಗುಣಂ ಸ್ವಭಾವಾಖ್ಯಾನಂ
ವಿತತೋತ್ತರ ಮಾರ್ಗಗತಂ
ಪ್ರತೀತ ವಕ್ರೋಕ್ತಿಕೃತಮನಲ್ಪವಿಕಲ್ಪಂ ॥ (೨–೫೨, ೫೩)

ಸ್ವಭಾವೋಕ್ತಿ ದಕ್ಷಿಣ ಮಾರ್ಗದ ವೈಶಿಷ್ಟ್ಯವೆಂದೂ ವಕ್ರೋಕ್ತಿ ಉತ್ತರ ಮಾರ್ಗದ ವೈಶಿಷ್ಟ್ಯವೆಂದೂ ಮಾರ್ಗಕಾರನ ಅಭಿಮತ. ಇದು ಹೊಸ ವಿಚಾರವೆಂದು ಎಂ. ವಿ. ಸೀ. ಹಾಗೂ ಚಿಟಗುಪ್ಪಿಯವರು ಹೇಳುತ್ತಾರೆ. "ಈ ಎರಡು ಉಕ್ತಿರೀತಿಗಳನ್ನು (ಸ್ವಭಾವೋಕ್ತಿ ಮತ್ತು ವಕ್ರೋಕ್ತಿ) ದಕ್ಷಿಣೋತ್ತರ ಮಾರ್ಗಗಳ ಭೇದಕ ಗುಣಗಳೆಂದು ಹೇಳಿ ಮಾರ್ಗನಿರೂಪಣೆ ಮಾಡಿದ್ದು ಮಾರ್ಗಕಾರನ ಸ್ವತಂತ್ರ ವಿಚಾರ ಕ್ರಮಕ್ಕೆ ಒಂದು ಗಮನಾರ್ಹ ನಿದರ್ಶನ"[162] ಎಂದು ಎಂ. ವಿ. ಸೀ. ಅವರೂ "ದಕ್ಷಿಣೋತ್ತರ ಮಾರ್ಗಗಳು ಸ್ವಭಾವೋಕ್ತಿ ವಕ್ರೋಕ್ತಿ ಪ್ರಧಾನಗಳೆಂದು ದಂಡಿಯಾಗಲಿ, ರೀತಿಯೇ ಕಾವ್ಯದ ಆತ್ಮ ಎಂದು ಸಾರಿದ ವಾಮನನಾಗಲಿ, ನೃಪತುಂಗನ ಪೂರ್ವವರ್ತಿ ಇತರ ಆಚಾರ್ಯರಾಗಲಿ ಹೇಳಿಲ್ಲ. ಮುಂದೆ ಅಂದರೆ ನೃಪತುಂಗನಿಂದ ತುಸು ಹೆಚ್ಚು ಕಡಿಮೆ ೨೫೦ ವರ್ಷಗಳ ನಂತರ ಆಗಿಹೋದ ಕುಂತಕನ 'ವಕ್ರೋಕ್ತಿ ಜೀವಿತ'ದಲ್ಲಿ ಮೊದಲ ಸಲ ಈ ಮಾತು ಬರುತ್ತದೆ"[163] ಎಂದು ಚಿಟಗುಪ್ಪಿಯವರೂ ಬರೆಯುತ್ತಾರೆ. ವಾಸ್ತವವಾಗಿ, ಕವಿರಾಜಮಾರ್ಗಕಾರನ ಹೇಳಿಕೆಗೆ ಸೂಚನೆ ದಂಡಿಯಲ್ಲೇ ಇದೆ ಎಂಬುದನ್ನು ಯಾರೂ ಗಮನಿಸದಿರುವುದು ಸೋಜಿಗ. ದಂಡಿ ಸೂಚ್ಯವಾಗಿ ಹೇಳಿರುವುದನ್ನೆ ಮಾರ್ಗಕಾರ ಸ್ಪಷ್ಟವಾಗಿ, ಖಚಿತವಾಗಿ, ಸಾಧಾರಣೀಕರಿಸಿ ಹೇಳಿದ್ದಾನಷ್ಟೆ. 'ಕಾಂತಿ' ಗುಣವನ್ನು ನಿರೂಪಿಸುವ 'ಕಾವ್ಯಾದರ್ಶ'ದ ಈ ಭಾಗವನ್ನು ನೋಡಬಹುದು: "ಸರ್ವ ಜನರಿಗೂ ಮೆಚ್ಚಾಗುವಂತಿರುವುದೇ ಕಾಂತಿಗುಣಯುಕ್ತವಾದ ಕಾವ್ಯ. ಲೋಕ ಪ್ರಸಿದ್ಧವಾದ ಅರ್ಥವನ್ನು ಅತಿಕ್ರಮಿಸದೆ, ಇದ್ದಂತೆ ಹೇಳುವುದೇ ಅದರ ಲಕ್ಷಣ. ಅದು ಲೋಕವಾರ್ತೆಯನ್ನು ಹೇಳುವಾಗ ಬರುವಂತೆ ವರ್ಣನೆಗಳಲ್ಲಿಯೂ ಬರಬಹುದು" (೧–೮೫). "ನಿಮ್ಮಂತಹ ತಪೋರಾಶಿಗಳು ಪಾವನವಾದ ಪಾದಪಾಂಸುಗಳಿಂದ ಯಾವುದನ್ನು ಪವಿತ್ರಗೊಳಿಸುವರೊ ಅದು ಮಾತ್ರ ನಿಜವಾಗಿಯೂ ಮನೆ" (೮೬). "ಹೀಗೆ ವಿಶೇಷ ಶ್ಲಾಘನೆಯಿಂದ ಮೂಡುವ 'ಕಾಂತಿ'ಯನ್ನು ಊಹಿಸಿಕೊಳ್ಳಬೇಕು. ಲೋಕ ವ್ಯವಹಾರದಲ್ಲಿರುವಂತೆ ಪ್ರತಿಯೊಂದು ವಸ್ತುವಿಶೇಷವನ್ನು ವರ್ಣಿಸುವಾಗಲೂ ಈ

ಕಾಂತಿಗುಣವು ಬರುತ್ತದೆ" (೮೮). "ಲೋಕವ್ಯವಹಾರದಲ್ಲಿಲ್ಲದ, ಅತ್ಯಂತ ಅಧ್ಯಾರೋಪ ಗಳನ್ನು ಕಲ್ಪಿಸುವ, ಅತ್ಯುಕ್ತಿಗಳು ಅತಿ ವಿದ್ವಾಂಸರಿಗೆ ಪ್ರಿಯವಾಗಬಹುದೇ ಹೊರತು ಎಲ್ಲ ಜನರಿಗೂ ಪ್ರಿಯವಾಗಲಾರವು" (೮೯). "ನಿಮ್ಮ ಪಾದಧೂಳಿಯಿಂದ ಕಲ್ಮಷವೆಲ್ಲವೂ ನಿಶ್ಶೇಷವಾಗಿ ತೊಳೆದುಹೋದ ನಮ್ಮ ಮನೆಯು ಇನ್ನು ಮುಂದೆ ದೇವಾಲಯದಂತೆ ಪೂಜ್ಯವಾಗುವುದು" (೯೦). "ಇದನ್ನೇ ಅತ್ಯುಕ್ತಿಯೆಂದು ಹೇಳುತ್ತಾರೆ. ಇದು ಗೌಡರಿಗೆ ಬಹಳ ಪ್ರಿಯ. ಆದರೆ ಮೊದಲು ತೋರಿಸಿದ ಕ್ರಮವು—ಶ್ಲೋಕ ೮೬ ಮತ್ತು ೮೭ರಲ್ಲಿ— ವೈದರ್ಭಮಾರ್ಗದ ಸಾರ." (೯೨)

ಇಲ್ಲಿ 'ಲೌಕಿಕಾರ್ಥ', 'ವಾರ್ತೆ' ಎಂಬ ಮಾತುಗಳು ಸ್ವಭಾವೋಕ್ತಿಯನ್ನೂ 'ಲೋಕಾ ತೀತ', 'ಅತ್ಯುಕ್ತಿ', ಎಂಬ ಮಾತುಗಳು ಅತಿಶಯೋಕ್ತಿ ಅಥವಾ ವಕ್ರೋಕ್ತಿಯನ್ನೂ ನಿಸ್ಸಂದೇಹವಾಗಿ ಸೂಚಿಸುವುದಿಲ್ಲವೆ? ಆದ್ದರಿಂದ ಸ್ವಭಾವೋಕ್ತಿ ವೈದರ್ಭ ಮಾರ್ಗದ ಸಾರ, ವಕ್ರೋಕ್ತಿ ಗೌಡಮಾರ್ಗದ ಲಕ್ಷಣ ಎಂದು ದಂಡಿಯ ಅಭಿಪ್ರಾಯ; ಅದನ್ನೆ ಮಾರ್ಗಕಾರ ದಕ್ಷಿಣೋತ್ತರ ಮಾರ್ಗಗಳಿಗೂ ಅನ್ವಯಿಸಿದ್ದಾನೆ.

ಈ ದೃಷ್ಟಿಯಿಂದ ವಿಚಾರ ಮಾಡಿದಾಗ, "ಶ್ರೀವಿಜಯನು ದಂಡಿಯ ಮಾರ್ಗದ್ವಯ ಲಕ್ಷಣನಿರೂಪಣೆಯನ್ನು ಅನುವಾದಿಸುವ ಸಂದರ್ಭದಲ್ಲಿ, ಭಾಮಹನು ಹೇಳುವ ವಕ್ರೋಕ್ತಿ ಸ್ವಭಾವೋಕ್ತಿಗಳೆಂಬ ಉಕ್ತಿರೀತಿಗಳನ್ನು ಗೌಡ ವೈದರ್ಭಮಾರ್ಗಗಳಿಗೆ ಸಮನ್ವಯಿಸಿ ವಿಷಯವನ್ನು ಜಟಿಲಗೊಳಿಸಿದ್ದಾನೆ. ದಂಡಿಯ ಮಾರ್ಗಭೇದ ಕಲ್ಪನೆಗೆ ಬಂಧಾನುಗತವಾದ ದಶಗುಣಗಳು ಆಧಾರಭೂತ; ಇವು ಶಾಬ್ದಿಕಗಳಾದ್ದರಿಂದ ಈ ಗುಣ-ಮಾರ್ಗವಿವೇಚನೆ ಶಬ್ದಾಲಂಕಾರ ಪ್ರಕರಣದಲ್ಲಿ ಸಮಾವೇಶಗೊಂಡಿದೆ. ವಕ್ರೋಕ್ತಿ-ಸ್ವಭಾವೋಕ್ತಿಗಳು ಪ್ರಮುಖವಾಗಿ ಆರ್ಥಿಕಗಳಾಗಿದ್ದು ಅರ್ಥಾಲಂಕಾರಗಳಿಗೆ ಸಂಬಂಧಪಟ್ಟವಾದ್ದರಿಂದ, ದಂಡಿಪ್ರೋಕ್ತವಾದ ಮಾರ್ಗಭೇದ ಕಲ್ಪನೆಗೆ ವಕ್ರೋಕ್ತಿ ಸ್ವಭಾವೋಕ್ತಿ ಪ್ರಕಾರಗಳನ್ನು 'ಕಸಿ' ಕಟ್ಟಲು ಮಾಡಿರುವ ಶ್ರೀವಿಜಯನ ಪ್ರಯತ್ನ ಫಲಕಾರಿಯಾಗಿದೆಯೆಂದು ತೋರುವುದಿಲ್ಲ"[164] ಎಂಬ ಎಂ. ವಿ. ಸೀ. ಅವರ ಆಕ್ಷೇಪಣೆಗೆ ಅವಕಾಶವಿಲ್ಲ. ಆದರೆ ಆವನು ಮಾರ್ಗದ್ವಯಕ್ಕೆ ಕೊಟ್ಟಿರುವ ಲಕ್ಷ್ಯಗಳಲ್ಲಿ ಆ ಉಕ್ತಿ ಪ್ರಕಾರಗಳಿಗೆ ಸಮರ್ಥನೆ ದೊರಕುವುದಿಲ್ಲ" ಎಂಬ ಅವರ ಮಾತು ಭಾಗಶಃ ನಿಜ (ಅದು ದಂಡಿಯ ಉದಾಹರಣೆಗಳಿಗೂ ಸ್ವಲ್ಪಮಟ್ಟಿಗೆ ಅನ್ವಯಿಸುತ್ತದೆ). ಈ ಆಕ್ಷೇಪಣೆ ಯನ್ನೂ ತೊಡೆದುಹಾಕುವಂತಿದೆ ಕೆ. ಕೃಷ್ಣಮೂರ್ತಿಯವರ ಈ ಮುಖ್ಯವಾದ ಹೇಳಿಕೆ :

"ನೃಪತುಂಗನು ಎರಡನೆಯ ಪರಿಚ್ಛೇದದಲ್ಲಿ ೪೬ರಿಂದ ೧೧೧ ಪದ್ಯಗಳವರೆಗೆ ವಿಸ್ತಾರ ವಾಗಿ ಈ ಮಾರ್ಗವಿವೇಕವನ್ನು ದಂಡಿಯ ಅನುಕ್ರಮದಲ್ಲಿಯೇ ನಿರೂಪಿಸಿದ್ದಾನೆ. ಮೊದಲನೆಯ ದಕ್ಷಿಣಮಾರ್ಗದ ಕವಿಗಳ ಸ್ವಭಾವ ಪ್ರಸನ್ನ ಹಾಗೂ ಮಧುರವಾದರೆ ಉತ್ತರಮಾರ್ಗದವರ ಮನೋಧರ್ಮ ಪಾಂಡಿತ್ಯಪ್ರದರ್ಶನ, ಕೃತಕ ಆಡಂಬರಗಳಿಗೆ ಮಾರುಹೋಗುತ್ತದೆಂಬುದನ್ನು ನೃಪತುಂಗ ಅನೇಕ ಉದಾಹರಣೆಗಳ ಮೂಲಕ ತೋರಿಸಿ

ದ್ದಾನೆ....ಮಾರ್ಗಭೇದಗಳಲ್ಲಿ ಮಾಧುರ್ಯದ ವ್ಯತ್ಯಾಸವನ್ನು ತೋರಿಸುವ ಈ ಎರಡು ಪದ್ಯಗಳನ್ನು ನೋಡಿ :

ದೆಸೆಗಳ್ ವಿಶಾಲಮಾದುವು
ಕೆಸಱಿಂ ಪಿಂಗಿತ್ತು ಧರಣಿ ತಿಳಿದುವು ಕೊಳಗಳ್
ಶ್ವಸನಪಥಮಮಳಮಾಯ್ತಿಂ
ದೊಸಗೆಗಳಂ ಬೀಱುವಂತೆ ಶರದಾಗಮದೊಳ್ ॥ (೨-೬೧)

ಇದು ದಕ್ಷಿಣ ಮಾರ್ಗದಲ್ಲಿರುವ ಶರತ್ಕಾಲದ ಸರಸ-ಲಲಿತ ವರ್ಣನೆ. ಇದೇ ಉತ್ತರ ಮಾರ್ಗದಲ್ಲಿ ಬಂದರೆ ಹೀಗಾಗುತ್ತದೆ :

ಧವಳಜಳಧರಕುಳಾಕುಳ
ಮವಿಕಳಮಂಬರತಳಂ ವಿನೀಳಚ್ಛಾಯಂ
ಕುವಳಯಕೀರ್ತಿಗೆ ಶಾರದ
ಮವಧಾರಿತಮಾಯ್ತ ದೆಂಬುದುತ್ತರಮಾರ್ಗಂ ॥ (೨-೬೩)

ಒಂದರಲ್ಲಿ ಪ್ರಾಸದ ಮೋಹವಿಲ್ಲ; ಸಮಾಸಗಳ ಆಡಂಬರವಿಲ್ಲ; ಶಿಥಿಲ ವರ್ಣಗಳ ಪುನಃಪುನರಾವೃತ್ತಿಯಿಲ್ಲ; ಇವೆಲ್ಲ ಇನ್ನೊಂದರಲ್ಲಿ ಉಂಟು. ಶೈಲಿ ಸ್ಪಷ್ಟವಾಗಿ ಭಿನ್ನ ವಾಗಿದೆ. ಒಂದು ಉತ್ತರ; ಇನ್ನೊಂದು ದಕ್ಷಿಣ. ಒಂದು ಸಾಮಾನ್ಯ ರಸಿಕರಿಗೆ ಹಿತ; ಇನ್ನೊಂದು ಪಂಡಿತರಿಗೆ ಪ್ರಿಯ. ಒಂದರಲ್ಲಿ ಸ್ವಭಾವೋಕ್ತಿಯೇ ಆಕರ್ಷಕ; ಇನ್ನೊಂದ ರಲ್ಲಿ ವಕ್ರೋಕ್ತಿ ಬೇಕೇಬೇಕು. ಅಂತೂ ಸಾಹಿತ್ಯದಲ್ಲಿ ಎರಡಕ್ಕೂ ಸ್ಥಾನವುಂಟು.”[165]

“ಮುಂದೆ ಮಾರ್ಗಕಾರ ಸಮ ಮಧುರ ನಿಬಿಡ ಕಾಂತ ಮುಂತಾಗಿ ದಕ್ಷಿಣ ಮಾರ್ಗದ ಹತ್ತು ಗುಣಗಳನ್ನು ಹೇಳಿ, ತದ್ವಿರುದ್ಧ ಗುಣಗಳನ್ನು—ಎಂದರೆ ದೋಷಗಳೆಂದು ಅರ್ಥ ವಲ್ಲ—ಉಳ್ಳುದೇ ಉತ್ತರ ಮಾರ್ಗವೆಂದು ತಿಳಿಸುತ್ತಾನೆ (೨-೫೪, ೫೫). ಇದಕ್ಕೆ ಮೂಲವಾದ ಶ್ಲೋಕಗಳು ‘ಕಾವ್ಯಾದರ್ಶ’ದಲ್ಲಿ “ಶ್ಲೇಷಃ ಪ್ರಸಾದಃ ಸಮತಾ....” (೧-೪೧), ಮತ್ತು “ಇತಿ ವೈದರ್ಭಮಾರ್ಗಸ್ಯ ಪ್ರಾಣಾ....” (೧-೪೨) ಎಂಬವಾಗಿವೆ.

“ಹತ್ತು ಗುಣಗಳು ವೈದರ್ಭಮಾರ್ಗದ ಪ್ರಾಣಗಳು” ಎಂಬ ಮಾತು ‘ಕವಿರಾಜ ಮಾರ್ಗ’ದಲ್ಲಿಲ್ಲದಿರುವುದು ಗಮನಾರ್ಹ. ದಂಡಿಯ ಮಾತುಗಳಲ್ಲಿ ಅವನ ವೈದರ್ಭ ಮಾರ್ಗ ಪಕ್ಷಪಾತ ಎದ್ದು ಕಾಣುತ್ತದೆ. (ವೈದರ್ಭಮಾರ್ಗದ ಸಾರವಾದ ಸ್ವಭಾವೋಕ್ತಿ ಅವನ ಪಾಲಿಗೆ ‘ಆದ್ಯಾಲಂಕೃತಿ’ ಎಂಬುದನ್ನು ಮರೆಯಬಾರದು). ಆದರೆ ಕವಿರಾಜ ಮಾರ್ಗಕಾರನಲ್ಲಿ ದಕ್ಷಿಣ ಮಾರ್ಗದ ಬಗೆಗೆ ಅಂಥ ಪಕ್ಷಪಾತವೇನೂ ಇದ್ದಂತಿಲ್ಲ, “ವೈದರ್ಭಿ-ಗೌಡಿಗಳ ವಿಷಯದಲ್ಲಿ ನೆಲಸಿದ್ದ ಶ್ರೇಷ್ಠ-ಕನಿಷ್ಠ ಭಾವನೆಯನ್ನು ಬದಿಗಿರಿಸಿ.... ತನ್ನ ‘ನಿರ್ಣೀತಿ’ಯಲ್ಲಿ ದಂಡಿ ಭಾಮಹರ ಅಭಿಪ್ರಾಯಗಳನ್ನು ಸಮನ್ವಯಿಸಿ ಒಂದಡಿ ಮುಂದಿಟ್ಟವನಾದರೂ ನೃಪತುಂಗನೇ”[166] ಎಂಬ ಚಿಟಗುಪ್ಪಿಯವರ ಮಾತಿನಲ್ಲಿ ತಥ್ಯ ವಿದೆ. ಬಹುಶಃ ಇದೇ ಅರ್ಥದಲ್ಲಿ ಎಂ. ವಿ. ಸೀ. ಅವರೂ ಹೀಗೆನ್ನುತ್ತಾರೆ : “ಭಾಮಹನು

ಹೇಳುವ ವಕ್ರೋಕ್ತಿ ಸ್ವಭಾವೋಕ್ತಿಗಳನ್ನು ಈ ಎರಡು ಮಾರ್ಗಗಳ 'ಭೇದಕ ಗುಣ' ಗಳೆಂದು ಹೇಳುವಲ್ಲಿ ಮಾರ್ಗಕಾರನ ಸಮನ್ವಯ ದೃಷ್ಟಿ ಕಂಡುಬರುತ್ತದೆ."[167]

"ದಕ್ಷಿಣೋತ್ತರ ಮಾರ್ಗಭೇದಕಗಳಾದ ಗುಣಗಳಿಗೆ ಕ್ರಮವಾಗಿ ಸ್ವಭಾವೋಕ್ತಿ-ವಕ್ರೋಕ್ತಿಗಳೆಂದು ಹೆಸರಿತ್ತವರು ದಾಕ್ಷಿಣಾತ್ಯ ಲಾಕ್ಷಣಿಕರೆಂದೇ ತೋರುವುದು" ಎಂದು ಮುಳಿಯ ತಿಮ್ಮಪ್ಪಯ್ಯನವರು ಹೇಳುತ್ತಾರೆ.[168]

ದಂಡಿ ಹೇಳುವ ಕೆಲವು ಗುಣಗಳ ಹೆಸರುಗಳು ಮಾರ್ಗಕಾರನಲ್ಲಿ ಅಲ್ಪವಾಗಿಯೊ ಪೂರ್ಣವಾಗಿಯೊ ಬದಲಾಗಿವೆ: ಕಾವ್ಯಾದರ್ಶ ಸಮತೆ, ಮಾಧುರ್ಯ, ಶ್ಲೇಷ, ಕಾಂತಿ, ಸುಕುಮಾರತೆ, ಸಮಾಧಿ, ಪ್ರಸಾದ, ಉದಾರತ್ವ, ಅರ್ಥವ್ಯಕ್ತಿ, ಓಜ; ಕವಿರಾಜ ಮಾರ್ಗ: ಸಮ, ಮಧುರ, ನಿಬಿಡ, ಕಾಂತ, ಸುಕುಮಾರ, ಸಮಾಹಿತ, ಪ್ರಸನ್ನ, ಉದಾರ, ಪ್ರಮಿತ ಗ್ರಾಮ್ಯ, ಓಜಸ್ವಿ. "ಶ್ಲೇಷ, ಸಮತಾ, ಸುಕುಮಾರತಾ, ಓಜಸ್—ಈ ನಾಲ್ಕು ಶಬ್ದಗುಣಗಳು; ಪ್ರಸಾದ, ಅರ್ಥವ್ಯಕ್ತಿ, ಉದಾರತಾ, ಕಾಂತಿ, ಸಮಾಧಿ—ಈ ಐದು ಅರ್ಥಗುಣಗಳು. ಮಾಧುರ್ಯವೊಂದು ಶಬ್ದ ಗುಣವಲ್ಲದೆ ಅರ್ಥ ಗುಣವೂ ಆಗುತ್ತದೆ ಎಂದು ದಂಡಿಯ ವ್ಯಾಖ್ಯಾಕಾರರು ತಿಳಿಯುತ್ತಾರೆ."[169]

ಈಗ ಮಾರ್ಗಕಾರ ನಿರೂಪಿಸುವ ಗುಣಗಳನ್ನು ಒಂದೊಂದಾಗಿ ಅವಲೋಕಿಸ ಬಹುದು.

೧. ಸಮ: "ಕೇಳುವುದಕ್ಕೆ ತೊಂದರೆಯಾಗದಂತೆ (ಎಂದರೆ, ಶ್ರವಣಸುಭಗವಾಗಿ) ಅಂದವನ್ನು ಹೊಂದಿ ಜೋಡಿಸಿದ ಪದಗಳ ಜೋಡಣೆಯ ಕ್ರಮವೆ 'ಸಮ' (ಎಂದರೆ ವಿಷಮವಲ್ಲದ್ದು)" (೨-೫೬). ಅದರಲ್ಲಿ ಮೃದುಬಂಧ, ಸ್ಫುಟಬಂಧ ಎಂದು ಎರಡು ವಿಧ. (ದಂಡಿಯಲ್ಲಿ ಮೃದು, ಸ್ಫುಟ, ಮಧ್ಯಮ ಎಂದು ಮೂರು ವಿಧ). 'ಸಮಬಂಧ' ದಕ್ಷಿಣ ಮಾರ್ಗದ ಗುಣವಾದರೆ, ಅದಕ್ಕೆ ವಿರುದ್ಧವಾದ 'ವಿಷಮಬಂಧ' ಉತ್ತರ ಮಾರ್ಗದ ಗುಣ. "ಸಮಂ ಬಂಧೇಷ್ವವಿಷಮಂ" (ಬಂಧಗಳಲ್ಲಿ ಅಸಮತ್ವವಿಲ್ಲದಿರುವುದೇ ಸಮತ್ವ ಗುಣಯುಕ್ತವಾದುದು) ಎಂದು ದಂಡಿ 'ಸಮತೆ'ಯ ಲಕ್ಷಣ ಹೇಳಿದ್ದಾನೆ (೧-೪೭).

೨. ಮಧುರ: "ಸಿಹಿಯಾದ ರಸವು ನಾಲಗೆಗೆ ಹೇಗೋ ಹಾಗೆ ಕಿವಿಗೆ ಇಂಪಾಗಿರುವ ಮಾತುಗಳ ಜೋಡಣೆಯೆ ಮಧುರ ಗುಣ" (೨-೬೦). ಇದು ಎರಡು ಮಾರ್ಗಗಳಲ್ಲೂ ಕಂಡುಬರುವುದಾದರೂ ಎರಡಕ್ಕೂ ಸೂಕ್ಷ್ಮವಾದ ಅಂತರವುಂಟು. "ಶಬ್ದದಲ್ಲಿ ಸವಿ ಯಿರುವುದೇ ಮಧುರ; ಸವಿಯು ಅರ್ಥದಲ್ಲಿಯೂ, ಇರುವುದು. ಮಧುಪಾನದಿಂದ ದುಂಬಿಗಳು ಮೈಮರೆಯುವಂತೆ ಈ ಸವಿಯಿಂದ ಬುದ್ಧಿವಂತರು ಮೈಮರೆಯುತ್ತಾರೆ" ಎಂಬುದು ದಂಡಿಯ ಮಾತು (೧-೫೧). 'ಮಾಧುರ್ಯ'ದಲ್ಲಿ ಗ್ರಾಮ್ಯತೆ (ಅಸಭ್ಯತೆ) ಇರಕೂಡದೆಂದು ದಂಡಿ ಹೇಳುತ್ತಾನೆ (೧-೬೨). ಮಾರ್ಗಕಾರ ಈ ಅಂಶವನ್ನು ಹೇಳಿಲ್ಲ.

೩. ನಿಬಿಡ: "ವರ್ಣಗಳು ಒಂದನ್ನೊಂದು ಅಗಲದೆ 'ತಗುಳಿ'ಕೊಂಡಿದ್ದರೆ

(ಒತ್ತಾಗಿದ್ದರೆ) ಅದು ನಿಬಿಡಬಂಧ" (೨–೬೪). ಇದು ದಕ್ಷಿಣ ಮಾರ್ಗದ ಗುಣ; ತದ್ವಿರುದ್ಧವಾದ 'ಶಿಥಿಲಬಂಧ' ಉತ್ತರ ಮಾರ್ಗದ ಗುಣ. ದಂಡಿ ಹೇಳಿರುವ 'ಶ್ಲೇಷ' ಗುಣವನ್ನು ಮಾರ್ಗಕಾರ 'ನಿಬಿಡ'ವೆಂದಿದ್ದಾನೆ, 'ಶ್ಲೇಷ'ವೆಂಬ ಅಲಂಕಾರದಿಂದ ಅದನ್ನು ಪ್ರತ್ಯೇಕಿಸುವುದಕ್ಕಾಗಿ.

"ಶ್ಲಿಷ್ಟಮಸ್ಪೃಷ್ಟಶೈಥಿಲ್ಯಮಲ್ಪಪ್ರಾಣಾಕ್ಷರೋತ್ತರಂ ಶಿಥಿಲಂ" (ಶೈಥಿಲ್ಯದ ಸ್ಪರ್ಶವಿಲ್ಲದಿರುವುದೇ ಶ್ಲೇಷ ಗುಣಯುಕ್ತವಾದುದು. ಅಲ್ಪಪ್ರಾಣಾಕ್ಷರಗಳು ಬಹಳವಾಗಿರುವ ಪ್ರಯೋಗವೇ ಶಿಥಿಲ) ಎಂದು ದಂಡಿಯ ನಿರೂಪಣೆ (೧–೪೩).

೪. ಕಾಂತ: "ಕಮನೀಯ ಗುಣಮಪ್ಪುದು ನಿಯತಂ ಕಾಂತಂ ಅಭಿಗೀತಾರ್ಥಂ" (೨–೬೬): ಇದು ದಕ್ಷಿಣಮಾರ್ಗದ 'ಕಾಂತ'ಗುಣದ ಲಕ್ಷಣ. "ಅಸಂಭಾವಿತಾರ್ಥಂ ಉದ್ದಾಮೋಕ್ತಂ" (೨–೬೮): ಇದು ಉತ್ತರಮಾರ್ಗದ 'ಕಾಂತ' ಗುಣದ ಲಕ್ಷಣ. (ದಂಡಿಯ ನಿರೂಪಣೆಯನ್ನು ಹಿಂದೆಯೇ ನೋಡಲಾಗಿದೆ).

೫. ಸುಕುಮಾರ: "ಸುಕುಮಾರವಾದ (ಕೋಮಲ, ಕರ್ಕಶವಲ್ಲದ) ಅಕ್ಷರಗಳಿಂದಲೂ ಪದಗಳಿಂದಲೂ ವಿಶಿಷ್ಟವಾದ ಪ್ರಯೋಗವು (ಬಂಧವು) ಸುಕುಮಾರವೆನಿಸುವುದು" (೨–೭೦). ಇದು ದಕ್ಷಿಣಮಾರ್ಗದ 'ಸುಕುಮಾರ' ಗುಣವಾದರೆ, 'ನಿಷ್ಠುರತೆ' ಉತ್ತರಮಾರ್ಗದ ಗುಣ. "ಅನಿಷ್ಠುರಾಕ್ಷರ ಪ್ರಾಯಂ ಸುಕುಮಾರಮಿತೀಷ್ಯತೇ" (ಕರ್ಕಶವಲ್ಲದ ವರ್ಣಗಳು ಹೆಚ್ಚಾಗಿರುವ ಕಾವ್ಯವು ಸೌಕುಮಾರ್ಯಗುಣಯುಕ್ತವಾದುದೆನ್ನುತ್ತೇವೆ) ಎಂದು ದಂಡಿಯ ಲಕ್ಷಣನಿರೂಪಣೆ (೧–೬೯).

೬. ಸಮಾಹಿತ: "ಒಂದು ಪದಾರ್ಥದ, ಎಂದರೆ ಅದಕ್ಕೆ ಸಂಬಂಧಪಟ್ಟ ಮಾತುಗಳನ್ನು ಇನ್ನೊಂದು ಪದಾರ್ಥದಲ್ಲಿ ಉದ್ದೇಶಪೂರ್ವಕವಾಗಿ ಆರೋಪಿಸಿ ಹೊಂದುವಂತೆ ಹೇಳಿದರೆ ಅದು ಸಮಾಹಿತವೆನಿಸುವುದು" (೨–೭೩). ಇದೇ ಅಂಶವು ದಂಡಿಯಲ್ಲಿ 'ಸಮಾಧಿ' ಎಂಬ ಹೆಸರಿನಲ್ಲಿದ್ದು, "ಲೋಕನ್ಯಾಯವನ್ನು ಮೀರದೆ ಒಂದರ ಧರ್ಮವನ್ನು ಮತ್ತೊಂದಕ್ಕೆ ಸರಿಯಾಗಿ ಆರೋಪಿಸುವುದೇ ಸಮಾಧಿಯೆಂಬ ಗುಣ....ಈ ಸಮಾಧಿಯೆಂಬ ಗುಣವೇ ಕಾವ್ಯದ ಜೀವಾಳ. ಕವಿಸಮೂಹವೆಲ್ಲವೂ ಇದನ್ನು ಬಳಸುತ್ತದೆ" ಎಂದು ಅದನ್ನು ವಿವರಿಸಿದೆ. (೧–೯೩, ೧೦೦)

೭. ಪ್ರಸನ್ನ: "ಲೋಕಪ್ರಸಿದ್ಧವಾದ ಅರ್ಥವನ್ನು ಸುಂದರವಾಗಿ ಸುಲಭವಾಗಿ ತಿಳಿಸುವ ವಿವೇಕದ ಮಾತುಗಾರಿಕೆಯೆ ಪ್ರಸನ್ನ" (೨–೭೭). ದಕ್ಷಿಣಮಾರ್ಗದಲ್ಲಿ ಪ್ರಸಿದ್ಧಾರ್ಥವನ್ನು ನೇರವಾದ ಸ್ಪಷ್ಟೋಕ್ತಿಗಳಿಂದ ತಿಳಿಸಿದರೆ ಉತ್ತರಮಾರ್ಗದಲ್ಲಿ ಅದನ್ನೆ ಕ್ಲಿಷ್ಟವಾದ ಶಬ್ದಗಳಿಂದ ತಿಳಿಸಲಾಗುತ್ತದೆ. "ಪ್ರಸಾದವತ್ ಪ್ರಸಿದ್ಧಾರ್ಥಂ" (ಪ್ರಸಿದ್ಧವಾದ ಅರ್ಥವುಳ್ಳ ಲಕ್ಷ್ಯವೇ ಪ್ರಸಾದ ಗುಣಯುಕ್ತವಾದುದು) ಎಂದೂ "ವ್ಯುತ್ಪನ್ನಮಿತಿ ಗೌಡೀಯೈರ್ನಾತಿರೂಢಮಪೀಷ್ಯತೇ" (ವ್ಯಾಕರಣಜ್ಞಾನವನ್ನು ಪ್ರದರ್ಶಿಸುವುದೆಂಬ ಕಾರಣದಿಂದ ಹೆಚ್ಚಾಗಿ ರೂಢವಲ್ಲದ ಶಬ್ದಗಳೂ ಗೌಡೀಯರಿಗೆ ಪ್ರಿಯ) ಎಂದೂ ದಂಡಿ ಹೇಳುತ್ತಾನೆ (೧–೪೫, ೪೬).

೮. ಉದಾರ : "ಒಂದು ವಸ್ತುವಿನಲ್ಲಿ ಅಡಗಿರುವ ಅದರ ನೈಜಸ್ವಭಾವವನ್ನು ಸಂಭಾವಿಸಿ ಅದನ್ನು ಅತಿಶಯವಾಗುವಂತೆ ನಿರೂಪಿಸಿದರೆ ಅದು ಉದಾರಗುಣ. ವಿಚಾರ ಮಾಡಿದಲ್ಲಿ, ಕಾವ್ಯದ ಪದವಿಯ 'ನೆಗಬ್ತಿ'ಗೆ ಅದು ಅಗತ್ಯ ಕಾರಣ" (೨-೭೯). ದಂಡಿಯಲ್ಲಿ "ಯಾವುದನ್ನು ಹೇಳಿದ ಮಾತ್ರದಿಂದ ಗುಣೋತ್ಕರ್ಷವೊಂದು ಸ್ಫುರಿಸುವುದೋ ಅದನ್ನು ಉದಾರತೆಯೆಂಬ ಗುಣವೆನ್ನುವರು. ಇದರಿಂದ ಕಾವ್ಯಮಾರ್ಗವೆಲ್ಲವೂ ಕಳೆಯೇರುತ್ತದೆ"—ಎಂಬುದಾಗಿ ಇದನ್ನು ಹೇಳಿದೆ (೧-೭೬). ದಂಡಿಯ ಲಕ್ಷಣ ನಿರೂಪಣೆಗೂ ಮಾರ್ಗಕಾರನದಕ್ಕೂ ಸೂಕ್ಷ್ಮ ವ್ಯತ್ಯಾಸವಿರುವುದನ್ನು ಗಮನಿಸಬಹುದು.

೯. ಪ್ರಮಿತ ಗ್ರಾಮ್ಯೋಕ್ತಿ : "ಗೋಪಾಲಕರು, ಹುಡುಗರು, ಸ್ತ್ರೀಲೋಲುಪರು, ಜೂಜುಕೋರರು, ಬಾಹ್ಲೀಕರು—ಮುಂತಾದವರ ವ್ಯಾಪಾರಗಳು ಗ್ರಾಮ್ಯಾಲಾಪಗಳು, ಎಂದರೆ ಹಳ್ಳಿಗಾಡಿನ ಅಸಂಸ್ಕೃತ ಮಾತುಕತೆಯಿಂದ ಕೂಡಿರುತ್ತವೆ. ಆದ್ದರಿಂದ ಎರಡು ಮಾರ್ಗಗಳಲ್ಲಿಯೂ ಅವುಗಳನ್ನು ವರ್ಜಿಸಬೇಕು" (೨-೮೨). ಗ್ರಾಮ್ಯತ್ವವು ಒಂದು ಮಿತಿಗೆ ಒಳಪಟ್ಟರೆ ಅದು 'ಪ್ರಮಿತಗ್ರಾಮ್ಯೋಕ್ತಿ' ಎಂಬ ಗುಣವೇ ಆಗುತ್ತದೆ. "ಶಬ್ದದೃಷ್ಟಿಯಿಂದಾಗಲಿ ಅರ್ಥದೃಷ್ಟಿಯಿಂದಾಗಲಿ ಅಸಭ್ಯವಾಗದಂತೆ, ಅತಿ ವಾಚಾಲತೆಯನ್ನು ಬಿಟ್ಟು, ಹಳ್ಳಿಗಾಡಿನವರು ಮುಂತಾದ ಅಸಂಸ್ಕೃತ ಜನರ ಮಾತಿನ ರೀತಿಯನ್ನು ಅಡಕವಾಗಿ ಹೇಳಿದಲ್ಲಿ, ಅದು ಉಭಯಮಾರ್ಗಗಳಲ್ಲಿಯೂ ಗುಣವೇ ಆಗುವುದು."

"ದಂಡಿ ಹೇಳುವ 'ಅರ್ಥವ್ಯಕ್ತಿ' ಎಂಬ ಗುಣವನ್ನು ಬಿಟ್ಟು, ಅದರೆಡೆಯಲ್ಲಿ ಈ ಪ್ರಮಿತ ಗ್ರಾಮ್ಯೋಕ್ತಿಯನ್ನು ಸೇರಿಸಿದ್ದಾನೆ ಮಾರ್ಗಕಾರ. ಮಾಧುರ್ಯಗುಣ ನಿರೂಪಣೆಯ ಸಂದರ್ಭದಲ್ಲಿ ಶಬ್ದಾರ್ಥ ಮಾಧುರ್ಯಸ್ವರೂಪವನ್ನು ವಿವೇಚಿಸುವಾಗ ದಂಡಿ, 'ಎಲ್ಲ ಅಲಂಕಾರಗಳೂ ಅರ್ಥಕ್ಕೆ ಸವಿಗೂಡಿಸುವವಾದರೂ ಅವು ಗ್ರಾಮ್ಯತಾದೋಷ ವಿವರ್ಜಿತವಾಗಿದ್ದರೆ ಆ ಕೆಲಸವನ್ನು ಹೆಚ್ಚು ಸಮರ್ಥವಾಗಿ ನಿರೂಪಿಸುತ್ತವೆ' ಎಂದು ಹೇಳಿ (೧-೬೨), ಗ್ರಾಮ್ಯತೆಯ ದೋಷ-ನಿರ್ದೋಷಗಳಿಗೆ ಉದಾಹರಣೆಗಳನ್ನು ಕೊಟ್ಟಿದ್ದಾನೆ. ಆತನು ಕೊಟ್ಟಿರುವ ಎರಡು ಲಕ್ಷ್ಯಪದ್ಯಗಳನ್ನೆ (೧-೬೩-೬೪) ಮಾರ್ಗಕಾರನು ಉಪಯೋಗಿಸಿಕೊಂಡು, 'ಪ್ರಮಿತಗ್ರಾಮ್ಯೋಕ್ತಿ'ಯನ್ನು ಕಲ್ಪಿಸಿದ್ದಾನೆ."[170]

ಈ ಬಗ್ಗೆ ಚಿಟಗುಪ್ಪಿಯವರ ಹೇಳಿಕೆಯಿದು : "ನೃಪತುಂಗನು ಗುಣಗಳ ದಂಡಿಪ್ರೋಕ್ತ ಸಂಖ್ಯೆಗೆ ಕೈಹಚ್ಚದೆ, ಅವುಗಳಲ್ಲಿಯ ಅರ್ಥವ್ಯಕ್ತಿಯನ್ನು ಅನವಶ್ಯಕವೆಂದು ಬಗೆದು, ಅದರ ಬದಲು ಮಾಧುರ್ಯದ ಅಂಗಭೂತಗುಣ ಅಗ್ರಾಮ್ಯತೆಯನ್ನು ಪೂರ್ಣಗುಣವಾಗಿಸಿ, ಪ್ರಮಿತ-ಗ್ರಾಮ್ಯವೆಂಬ ಹೆಸರಿನಿಂದ ಸೇರಿಸಿರುವನು. ಸಾಮಾನ್ಯವಾಗಿ ಗ್ರಾಮ್ಯವೆನಿಸುವ ನುಡಿಗಳನ್ನು ಶಿಷ್ಟಸಹ್ಯವಾಗುವಂತೆ ಹೇಳಿದರೆ ಅವು ರಸಾವಹ ಆಗುವವೆಂಬ ದಂಡಿಯ ಅಭಿಪ್ರಾಯವನ್ನು ಈ ರೀತಿ ಪುಷ್ಟೀಕರಿಸಿದವ ನೃಪತುಂಗನೊಬ್ಬನೇ. ದಂಡಿಯ ಈ

ಅಭಿಪ್ರಾಯವು ಇಂದಿಗೂ ಆತನ ಪರಾವರ್ತಿ ಲಾಕ್ಷಣಿಕರ ಕಣ್ಣು ತಪ್ಪಿಸಿ ಕುಳಿತಿದೆ."[171] 'ಅರ್ಥವ್ಯಕ್ತಿ'ಯನ್ನು ಮಾರ್ಗಕಾರ ಬಿಟ್ಟುದೇಕೆಂದರೆ, ಅದು ಕೇವಲ ಒಂದು ವ್ಯಾಕರಣ ದೋಷಾಭಾವವಾದುದರಿಂದ ಎಂದು ತೋರುತ್ತದೆ.

೧೦ ಓಜಸ್ಸು: "ಸಮಾಸಪದಗಳನ್ನು ಹೊಂದಿಕೊಳ್ಳುವಂತೆ, ಒಪ್ಪವಾಗಿಸಿ, ಚೆನ್ನಾಗಿ ಆಲೋಚನೆಮಾಡಿ ಹೇಳಿದರೆ, ಅದು ಓಜೋಲಕ್ಷಣವಾಗುವುದು. ಅಲಂಕಾರಸಹಿತವಾದ ಇದು ಗದ್ಯರಚನೆಗೆ ಶ್ರೇಷ್ಠ" (೨-೮೫). ಪದ್ಯದಲ್ಲಿಯೂ ಅದು ಗುಣವೇ; ಇದನ್ನು ಅಪಾರ ವಾಕ್‌ಸಾಮರ್ಥ್ಯವುಳ್ಳವರು ಮಾತ್ರ ಪ್ರಯೋಗಿಸಬೇಕು (೨-೮೬).

ದಂಡಿ:

ಓಜಸ್ಸಮಾಸಭೂಯಸ್ತ್ವಮೇತದ್ಗದ್ಯಸ್ಯ ಜೀವಿತಂ
ಪದ್ಯೇऽಪ್ಯದಾಕ್ಷಿಣಾತ್ಯಾನಾಮಿದಮೇಕಂ ಪರಾಯಣಂ ॥ (೧-೮೦)

(ಸಮಾಸಗಳ ಆಧಿಕ್ಯವೇ ಓಜಸ್ಸು. ಗದ್ಯಕ್ಕೆ ಇದೇ ಪ್ರಾಣ. ಆದರೆ ಗೌಡರ ಪದ್ಯದಲ್ಲಿಯೂ ಇದೊಂದೇ ಪ್ರಧಾನವಾಗಿರುತ್ತದೆ.)

"ಹೀಗೆಂದುದರಿಂದ, ಓಜೋಗುಣವನ್ನು ವೈದರ್ಭೀಯರು ಕೇವಲ ಗದ್ಯದಲ್ಲಿಯೂ ಗೌಡೀಯರು ಗದ್ಯ ಪದ್ಯಗಳೆರಡರಲ್ಲಿಯೂ ಬಳಸುವರು ಎಂದು ತಾತ್ಪರ್ಯ. ಮಾರ್ಗಕಾರನು ದಂಡಿಯನ್ನೆ ಅನುಸರಿಸುತ್ತಿರುವುದರಿಂದ, ಸಮಾಸಭೂಯಿಷ್ಠವಾದ ಗದ್ಯರಚನೆಗೆ ದಕ್ಷಿಣ ಮಾರ್ಗದ ಓಜೋಲಕ್ಷಣವೆಂದೂ ಅದೇ ರೀತಿಯ ಗದ್ಯ ಪದ್ಯಗಳೆರಡರ ರಚನೆ ಉತ್ತರ ಮಾರ್ಗದ ಓಜೋಲಕ್ಷಣವೆಂದೂ ಅರಿಯಬೇಕು."

ಮಾರ್ಗಕಾರನ ಇದುವರೆಗಿನ ಗುಣನಿರೂಪಣೆ ಸಂಸ್ಕೃತ, ಕನ್ನಡ ಎರಡಕ್ಕೂ ಸಮಾನವಾದುದು. ಮುಂದೆ ಅವನು ಕನ್ನಡಕ್ಕೇ ವಿಶಿಷ್ಟವಾದ ಕೆಲವಂಶಗಳನ್ನು ತಿಳಿಸುವುದು ಗಮನಾರ್ಹವಾಗಿದೆ. "ಕನ್ನಡ ಮಾರ್ಗದ ಕಾವ್ಯಗತಿ ಸಂಸ್ಕೃತದ್ದಕ್ಕಿಂತ ಭಿನ್ನವಾದುದರಿಂದ (ಸಮಾಸಪದ ಯೋಜನೆಯ ವಿಚಾರದಲ್ಲಿ) ಕನ್ನಡಕ್ಕೆ ಅನ್ವಯಿಸುವಂತೆ ಕೆಲವು ಸ್ಪಷ್ಟ ನಿರ್ದೇಶನಗಳನ್ನು ಕೊಟ್ಟು, ಸ್ವಂತ ಲಕ್ಷ್ಯಗಳನ್ನು ರಚಿಸಿ ತೋರಿಸಿ ತನ್ನ ಸ್ವತಂತ್ರ ದೃಷ್ಟಿಯನ್ನೂ ಸಾಮರ್ಥ್ಯವನ್ನೂ ಮೆರೆದಿದ್ದಾನೆ."[172] ಈ ದೃಷ್ಟಿಯಿಂದ ೨-೮೭-೧೦೦ ಈ ಪದ್ಯಗಳನ್ನು ನೋಡಬಹುದು.

ಗುಣಗಳಿಗೆ ರಸಪರತ್ವವನ್ನು ಕಲ್ಪಿಸಿರುವುದು ಮಾರ್ಗಕಾರನ ಸ್ವೋಪಜ್ಞತೆಗೆ ಒಂದು ಹೆಗ್ಗುರುತು. ಇದು ಭಾಮಹ, ದಂಡಿಯರಲ್ಲಿ ಕಂಡುಬರದ ಪ್ರಕ್ರಿಯೆ. ('ಮಧುರಂ ರಸವದ್ವಾಚಿ....' ಎನ್ನುವಲ್ಲಿ ದಂಡಿ ಗುಣಕ್ಕೂ ರಸಕ್ಕೂ ಸೂಚ್ಯವಾಗಿ ಸಂಬಂಧ ಕಲ್ಪಿಸಿದಂತಿದೆ.) ಹೀಗೆ ಹೇಳುತ್ತಾನೆ ಮಾರ್ಗಕಾರ:

ಬಗೆದು ಮಾರ್ಗದ್ವಿತಯ ಗತಿಗಳಂ
ಪ್ರಗುಣಗುಣಗಣೋದಯರ್ಕಳ್ ವಿತರ್ಕದಿಂ
ಸೊಗಯಿಸುವಂತು ವಚನರಚನೆಯಂ
ನೆಗೞ್ದಿರೆ ಬೆರಸಿ ಪೇೞ್ಗೆ ರಸವಿಶೇಷದೊಳ್ ॥

ವೀರರಸಂ ಸ್ಫುಟೋಕ್ತಿಯಿನುದಾರತಮಂ ಕರುಣಾರಸಂ ಮೃದೂ
ಚ್ಚಾರಣೆಯಿಂದಮದ್ಭುತರಸಂ ನಿಬಿಡೋಕ್ತಿಗಳಿಂದಮಲ್ತೆ ಶೃಂ
ಗಾರರಸಂ ಸಮಂತು ಸುಕುಮಾರತರೋಕ್ತಿಗಳಿಂ ಪ್ರಸನ್ನ ಗಂ
ಭೀರತರೋಕ್ತಿಯಿಂ ಪ್ರಕಟಮಕ್ಕೆ ರಸಂ ಸತತಂ ಪ್ರಶಾಂತದಂ ॥

ಉತ್ಸವದಿಂದೆ ಹಾಸ್ಯರಸಮಾ ಮಧುರೋಕ್ತಿಗಳಿಂದಮಲ್ತೆ ಬೀ
ಭತ್ಸರಸಾಂತರಂ ಶಿಥಿಲಬಂಧನದಿಂ ಸತತಂ ಭಯಾನಕೋ
ದ್ಯತ್ಸರಸಂ ಕರಂ ವಿಷಮಬಂಧನದಿಂ ನೃಪತುಂಗದೇವ ಮಾ
ರ್ಗೋತ್ಸವಮೂರ್ಜಿತೋಕ್ತಿಗಳಿನಕ್ಕತಿರೌದ್ರರಸಂ ರಸಾವಹಂ॥ (೩-೯೮-೧೦೦)

ಯಾವ ಯಾವ ಗುಣಗಳು ಯಾವ ಯಾವ ರಸಗಳಿಗೆ ಉಚಿತವೆಂಬುದನ್ನು ಇಲ್ಲಿ ವ್ಯಕ್ತ ಪಡಿಸಲಾಗಿದೆ.

ಕೆ. ಕೃಷ್ಣಮೂರ್ತಿಯವರು ಈ ಬಗ್ಗೆ ಹೀಗೆ ಹೇಳುತ್ತಾರೆ: "ಯಾವ ಮಾರ್ಗ ಯಾವ ರಸಪ್ರತಿಪಾದನೆಗೆ ಯೋಗ್ಯ ಸಾಧಕವೆಂಬ ರಸೋಚಿತ ಮಾರ್ಗವಿಧಿಯನ್ನು ನಮಗೆ ತಿಳಿದಂತೆ ಸಂಸ್ಕೃತದಲ್ಲಿ ಕೂಡ ರುದ್ರಟನವರೆಗೆ ಯಾರೂ ಸ್ಪಷ್ಟವಾಗಿ ಹೇಳಿಲ್ಲ ....ನೃಪತುಂಗನು ರುದ್ರಟನಿಗಿಂತ ಪ್ರಾಚೀನನಲ್ಲದಿದ್ದರೂ ರುದ್ರಟನನ್ನು ನೋಡಿದ್ದನೆನ್ನಲು ಯಾವುದೇ ಸುಳಿವೂ ಗ್ರಂಥದಲ್ಲಿಲ್ಲ"[173] ; "ನೃಪತುಂಗನಿಗೆ ಮಾರ್ಗಗಳು ರಸಪರತಂತ್ರ ವೆಂಬ ಪರಮಾರ್ಥತತ್ತ್ವ ಹೃದ್ಗತವಾಗಿದ್ದುದನ್ನು ಈ ಮಾತುಗಳು ಎತ್ತಿ ತೋರಿಸು ತ್ತವೆ."[174]

ಆನಂದವರ್ಧನ ಮತ್ತು ಮಮ್ಮಟ ಗುಣಗಳನ್ನು ರಸಧರ್ಮಗಳೆಂದಿದ್ದಾರೆ. ಗುಣಗಳ ರಸಾನುಗುಣ್ಯವನ್ನು ಹೇಳುವ ಮಾರ್ಗಕಾರನಿಗೂ ಧ್ವನಿಪ್ರಸ್ಥಾನದವರಿಗೂ ಉಕ್ತಿಭೇದವಿದೆಯೆ ಹೊರತು ಅಭಿಪ್ರಾಯಭೇದವೇನೂ ಇಲ್ಲ. ಅಂತೂ "ಕಾವ್ಯಸ್ವರೂಪ ನಿರ್ಣಯಮಾರ್ಗದಲ್ಲಿ ಮಾರ್ಗಕಾರನು ಭಾಮಹಾದಿಗಳಿಗಿಂತ ಒಂದು ಹೆಜ್ಜೆಯನ್ನಾದರೂ ಮುಂದಿಟ್ಟಿರುವನೆಂದು ಸಾರುತ್ತದೆ ಅವನ ರಸದೃಷ್ಟಿ"[175] ; "ಇದು ಅಭಿಮಾನಾಸ್ಪದ ವಾದ ಸಂಗತಿ, ಭಾರತೀಯ ಕಾವ್ಯಮೀಮಾಂಸೆಯ ಚರಿತ್ರೆಯಲ್ಲಿ ಅಗತ್ಯವಾಗಿ ಉಲ್ಲೇಖಿಸಬೇಕಾದ ಮಹತ್ವವನ್ನು ಪಡೆದದ್ದು."[176]

ಇನ್ನೊಂದು ಕುತೂಹಲಕರವಾದ ಸಂಗತಿಯೇನೆಂದರೆ, ಕವಿರಾಜಮಾರ್ಗಕಾರ ಕೆಲವು ಕನ್ನಡ ಕ್ರಿಯಾಪದ ರೂಪಗಳನ್ನು ಮಾರ್ಗಗಳ ತೆಕ್ಕೆಗೆ ಒಳಪಡಿಸಿರುವುದು (೧೦೩-೧೦೭). "ಕನ್ನಡಕ್ಕೆ ಮಾತ್ರ ಸಂಬಂಧಪಟ್ಟಂತೆ ಮಾಡಿರುವ ಈ ಮಾರ್ಗವಿವೇಚನೆ ಕಾವ್ಯಮೀಮಾಂಸೆಗೆ ಮಾರ್ಗಕಾರನ ಸ್ವತಂತ್ರವಾದ ಕೊಡುಗೆ"[177]; "ಕನ್ನಡದ ಪ್ರಾಂತ ಭಾಷಾಭೇದಗಳನ್ನು.... ಪೂರ್ವೋಕ್ತ 'ಮಾರ್ಗ'ಗಳಲ್ಲಿಯೇ ವಿಭಿನ್ನ ಧರ್ಮಗಳೆಂದು ಪ್ರಸ್ತಾಪಿಸಿರುವುದು ಕವಿರಾಜಮಾರ್ಗಕಾರನ ವೈಶಿಷ್ಟ್ಯ."[178] ಈ ಎಚ್ಚರಿಕೆಯ ಮಾತು ಗಳನ್ನೂ ಲಕ್ಷ್ಯದಲ್ಲಿರಿಸಬೇಕು : "ದಂಡಿಯ ಅಂಧಾನುಕರಣ ಮಾಡದೆ, ಅವನ ಮಾರ್ಗ ಭೇದಕಲ್ಪನೆಯನ್ನು ಕನ್ನಡಕ್ಕೂ ಅನ್ವಯಿಸಿ ವಿಸ್ತರಿಸುವಲ್ಲಿ ಶ್ರೀವಿಜಯನ ಸ್ವತಂತ್ರ

ದೃಷ್ಟಿಯ ವಿಚಾರಪ್ರಯತ್ನವನ್ನು ಮೆಚ್ಚಿಕೊಳ್ಳಬಹುದಾದರೂ ಅದು ಫಲಕಾರಿಯಾಗಿದೆಯೆನ್ನುವಂತಿಲ್ಲ."[179] ಮಾರ್ಗಕಾರನ ಪ್ರಯತ್ನವನ್ನು ಅರ್ಥಹೀನವೆಂದು ಒತ್ತರಿಸುವುದೂ ತಪ್ಪಾದೀತು. "ಈ ಭಾಗ ಸಂಪೂರ್ಣವಾಗಿ ಮಾರ್ಗಕಾರನ ಸ್ವತಂತ್ರರಚನೆ ಎಂಬುದನ್ನು ನಾವು ಮರೆಯಕೂಡದು. ಅವನ ತೀರ್ಮಾನಗಳ ತಪ್ಪುನೆಪ್ಪುಗಳು ಏನೇ ಇರಲಿ, ಹೊಸದೊಂದು ವಿಚಾರ ಪ್ರಣಾಳಿಕೆಯನ್ನು ನಮ್ಮ ಮುಂದಿಟ್ಟಿರುವುದು ಸ್ವಾಗತಾರ್ಹ. ಅವನ ನಿಲುವನ್ನು ಸಂಪೂರ್ಣವಾಗಿ ಸ್ವೀಕರಿಸುವುದಕ್ಕೇ ಆಗಲಿ, ತಿರಸ್ಕರಿಸುವುದಕ್ಕೇ ಆಗಲಿ ಹೆಚ್ಚಿನ ಸಂಶೋಧನೆ ಅಗತ್ಯ."[180]

ಒಟ್ಟಿನಲ್ಲಿ, "ದಕ್ಷಿಣೋತ್ತರ ಮಾರ್ಗಭೇದಕಲ್ಪನೆಯನ್ನು ಕವಿರಾಜಮಾರ್ಗಕಾರ ದಂಡಿಯಿಂದಲೇ ಸ್ವೀಕರಿಸಿದ್ದರೂ ಅದನ್ನು ಕನ್ನಡಕ್ಕೆ ಅನ್ವಯಿಸಿ ಹೇಳುವಲ್ಲಿ ಅದರ ವ್ಯಾಪ್ತಿಯನ್ನು ವಿಸ್ತರಿಸಿದ್ದಾನೆ"[181] ಎಂಬುದನ್ನೊಪ್ಪಬೇಕು. ಅದರ ಔಚಿತ್ಯಾನೌಚಿತ್ಯಗಳ ಪ್ರಶ್ನೆ ಬೇರೆ.

"ಪ್ರಮುಖವಾದ ಸೈತು ಕೊಂಕುಗಳಿಂದ ಹೊಳೆವ ಎರಡು ಮಾರ್ಗಗಳನ್ನು ವ್ಯಕ್ತವಾಗುವಂತೆ ಕಾಣಿಸುವುದೇ ಕವಿರಾಜಮಾರ್ಗಕಾರನ ಹೆಗ್ಗುರಿ"[182] ಎಂಬ ಮುಳಿಯ ತಿಮ್ಮಪ್ಪಯ್ಯನವರ ಮಾತುಗಳಿಂದ ಈ ಭಾಗವನ್ನು ಮುಗಿಸಬಹುದು.

## ಅರ್ಥಾಲಂಕಾರಗಳು

ಅರ್ಥಾಲಂಕಾರ ಪ್ರತಿಪಾದನೆಯಲ್ಲಿ ಮಾರ್ಗಕಾರ ಬಹುಮಟ್ಟಿಗೆ ದಂಡಿಯನ್ನು ಹಿಂಬಾಲಿಸಿದ್ದಾನೆ; ಆದರೆ ಭಾಮಹನ ಪ್ರಭಾವವೂ ಇಲ್ಲದಿಲ್ಲ. ಪ್ರಥಮ ದ್ವಿತೀಯ ಪರಿಚ್ಛೇದಗಳಲ್ಲಿ ಹೇಗೊ ಹಾಗೆ ತೃತೀಯ ಪರಿಚ್ಛೇದದಲ್ಲಿಯೂ ಮಾರ್ಗಕಾರ ಕೆಲವು ಸ್ವತಂತ್ರ ವಿಚಾರಗಳನ್ನು ಕೊಟ್ಟಿದ್ದಾನೆ. ದಂಡಿಯಲ್ಲಿ ಬರುವ ೩೫ ಅಲಂಕಾರಗಳ ಜೊತೆಗೆ ಮಾರ್ಗಕಾರ 'ಧ್ವನಿ'ಯನ್ನು ೩೬ನೆಯ ಅಲಂಕಾರವಾಗಿ ಪ್ರಸ್ತಾಪಿಸಿರುವುದು ಬಹಳ ಮುಖ್ಯವಾದ ಸಂಗತಿ. ರಸವದಲಂಕಾರವನ್ನು ಹೇಳುವಾಗ ಒಂಬತ್ತನೆಯ ರಸವಾಗಿ ಶಾಂತರಸವನ್ನು ಸೇರಿಸಿರುವುದೂ ಗಮನಾರ್ಹ. ಅರ್ಥಾಲಂಕಾರ ಪ್ರಕರಣದಲ್ಲಿ "ಶ್ರೀವಿಜಯನ ಲಕ್ಷಣನಿರೂಪಣೆ ಬಹುಮಟ್ಟಿಗೆ ದಂಡಿಭಾಮಹರನ್ನೇ ಅನುಸರಿಸಿದ್ದರೂ ಅಲ್ಲೊಮ್ಮೆ ಇಲ್ಲೊಮ್ಮೆ ಅವನ ಸ್ವತಂತ್ರ ವಿಚಾರಕಿರಣ ಹೊಸ ಬೆಳಕನ್ನು ಬೀರದಿಲ್ಲ.... ಕಾವ್ಯತತ್ತ್ವನಿರೂಪಣೆಯಲ್ಲಿ ಶ್ರೀವಿಜಯನು ಸಂಸ್ಕೃತ ಲಾಕ್ಷಣಿಕರನ್ನು 'ಮಕ್ಕಿಕಾಮಕ್ಕಿ' ಅನುಸರಿಸದೆ ಸ್ವಂತ ವ್ಯಕ್ತಿತ್ವವನ್ನು ತೋರ್ಪಡಿಸಿದ್ದಾನೆ....ಇಷ್ಟುಮಾತ್ರವಲ್ಲ. ದೋಷ ಪ್ರಕರಣದಲ್ಲಿ ಹೇಗೋ ಹಾಗೆ ಅಲಂಕಾರ ಪ್ರಕರಣಗಳಲ್ಲಿಯೂ ಅವನು ಚೆಲುವಾದ ಅನೇಕ ಲಕ್ಷ್ಯಪದ್ಯಗಳನ್ನು ಸ್ವಂತವಾಗಿ ವಿರಚಿಸಿ, ಕನ್ನಡ ಅಲಂಕಾರಶಾಸ್ತ್ರಕ್ಕೂ ಕಾವ್ಯ ಪ್ರಪಂಚಕ್ಕೂ ಮೊದಲ ಕಾಣಿಕೆಯನ್ನು ಸಲ್ಲಿಸಿದ್ದಾನೆ. ಇಂತು, ಶ್ರೀವಿಜಯನು ತನ್ನನ್ನು 'ಲಕ್ಷಣಲಕ್ಷ್ಯನ್' ಎಂದು ಕರೆದುಕೊಂಡಿರುವುದು (೩-೨೧೯) ಸಾರ್ಥಕವೆನಿಸಿದೆ. ಕನ್ನಡ ಸಾಹಿತ್ಯಲೋಕದಲ್ಲಿ ನಾಗವರ್ಮನ 'ಕಾವ್ಯಾಲೋಕನ'ವು ರಚಿತವಾಗುವವರೆಗೆ

ಸುಮಾರು ಮೂರು ಶತಮಾನಗಳ ಕಾಲ ಕವಿರಾಜಮಾರ್ಗದ ಲಕ್ಷಣಭಾಗ ಕವಿಜನದ 'ಕನ್ನಡಿ'ಯೂ ಲಕ್ಷ್ಯಭಾಗ 'ಕೈದೀವಿಗೆ'ಯೂ ಆಗಿ ಪ್ರಭಾವ ಬೀರಿದೆ."[183]

ಈಗ 'ಕವಿರಾಜಮಾರ್ಗ' ನಿರ್ದಿಷ್ಟವಾದ ಅರ್ಥಾಲಂಕಾರಗಳನ್ನು ಒಂದೊಂದಾಗಿ ಪರಿಶೀಲಿಸಬಹುದು :

೧. ಜಾತಿ (ಸ್ವಭಾವೋಕ್ತಿ) : "ಸಮಸ್ತ ವಸ್ತುಗಳ ಸ್ವಾಭಾವಿಕ ಗುಣವನ್ನು ಹೇಳುವುದು 'ಜಾತಿ' ಎಂಬ ಅಲಂಕಾರ"—

ಭಾವಿಸಿ ಸಮಸ್ತವಸ್ತು ವಿ
ಭಾವಿತ ಜಾತಿಕ್ರಿಯಾಗುಣದ್ರವ್ಯ ಸ್ವಾ
ಭಾವಿಕ ಗುಣಮಂ ಪೇೞ್ವುದು
ಕೇವಲಮಾ ಜಾತಿಯೆಂಬ ಸದಳಂಕಾರಂ ॥ (೩-೬)

ಮೂಲ, ದಂಡಿಯಲ್ಲಿ :

ನಾನಾವಸ್ಥಾ ಪದಾರ್ಥನಾಂ ರೂಪಂ ಸಾಕ್ಷಾದ್ವಿವೃಣ್ವತೀ
ಸ್ವಭಾವೋಕ್ತಿಶ್ಚ ಜಾತಿಶ್ಚೇತ್ಯಾದ್ಯಾ ಸಾಲಂಕೃತಿರ್ಯಥಾ ॥ (೨-೮)

ಜಾತಿಕ್ರಿಯಾ ಗುಣದ್ರವ್ಯ ಸ್ವಭಾವ್ಯಾಖ್ಯಾನಮೀದೃಶಂ
ಶಾಸ್ತ್ರೇಷ್ವಸ್ಯೈವ ಸಾಮ್ರಾಜ್ಯಂ ಕಾವ್ಯೇಷ್ವಪ್ಯೇತದೀಪ್ಸಿತಂ ॥ (೨-೧೩)

ದಂಡಿಯ ಪಾಲಿಗೆ ಸ್ವಭಾವೋಕ್ತಿ 'ಆದ್ಯಾಲಂಕಾರ' ; ಆದರೆ ಭಾಮಹನಿಗೆ ಅದರ ಬಗ್ಗೆ ಅಷ್ಟೇನೂ ಉತ್ಸಾಹವಿಲ್ಲ. ಮಾರ್ಗಕಾರನ ಒಲವು ದಂಡಿಯತ್ತ.

'ಜಾತಿ'ಯಲ್ಲಿ ಜಾತಿಸ್ವಭಾವಾಖ್ಯಾನ (೩-೭),[184] ಕ್ರಿಯಾಸ್ವಭಾವಾಖ್ಯಾನ (-೮), ಗುಣಸ್ವಭಾವಾಖ್ಯಾನ (-೯), ದ್ರವ್ಯ ಸ್ವಭಾವಾಖ್ಯಾನ (-೧೦) ಎಂದು ನಾಲ್ಕು ಪ್ರಭೇದಗಳು.

೨. ರೂಪಕ : "ವರ್ಣ್ಯವಲ್ಲದ ಬೇರೆಯ (=ಅಪ್ರಕೃತ) ವಸ್ತುಗಳ ರೂಪಾದಿ ಗುಣಗಳನ್ನು ವರ್ಣ್ಯವಾದ ವಿಷಯದಲ್ಲಿ (=ಪ್ರಕೃತ) 'ಅಭೇದೋಕ್ತಿಯಿಂದ' (ಎಂದರೆ 'ಅದರಂತೆ ಇದು ಇದೆ' ಎನ್ನದೆ 'ಅದೇ ಇದು' ಎನ್ನುವುದು) ರೂಪಿಸುವುದು ರೂಪಕ" (೩-೧೨). ದಂಡಿಯಲ್ಲಿ ಇದರ ಆಶಯವು "ಉಪಮಾನೋಪಮೇಯಗಳ ನಡುವೆ ಇರುವ ಭೇದವು ಮರೆಯಾಗುವಂತೆ ವರ್ಣಿತವಾಗುವ ಉಪಮೆಯೇ 'ರೂಪಕ'ವೆನಿಸುತ್ತದೆ. ಉದಾಹರಣೆಗೆ, 'ಬಾಹುಲತೆ', 'ಪಾಣಿಪದ್ಮ', 'ಚರಣಪಲ್ಲವ"—ಎಂದು ವ್ಯಕ್ತಪಟ್ಟಿದೆ (೨-೬೬).

ರೂಪಕದಲ್ಲಿ ಸಮಸ್ತರೂಪಕ (೩-೧೩), ವ್ಯಸ್ತರೂಪಕ (-೧೪), ಸಾವಯವ ರೂಪಕ (-೧೫), ಅವಯವಿರೂಪಕ (-೧೬), ವಿಷಮರೂಪಕ (-೧೭), ವಿಶೇಷಣ ರೂಪಕ (-೧೮), ವಿರುದ್ಧರೂಪಕ (-೧೯), ಹೇತುರೂಪಕ (-೨೦), ಶ್ಲೇಷರೂಪಕ (-೨೧), ವಿಭಿನ್ನರೂಪಕ (-೨೨), ರೂಪಕ ರೂಪಕ ಅಥವಾ ರೂಪಕೋರುರೂಪಕ

(–೨೩), ರೂಪಕಾಪಹ್ನುತಿ (–೨೪), ಯುಕ್ತರೂಪಕ (–೨೫), ವ್ಯಾಜರೂಪಕ (–೨೬)—ಎಂದು ಪ್ರಭೇದಗಳು. ಇವುಗಳಲ್ಲಿ ಕಡೆಯದು 'ವ್ಯಾಜಸ್ತುತಿ' ಎಂಬ ಪ್ರತ್ಯೇಕ ಅಲಂಕಾರವನ್ನು ಹೋಲುವುದರಿಂದ ದಂಡಿ ಅದನ್ನು ಹೇಳಿಲ್ಲ. ಅವನಲ್ಲಿ ಇನ್ನೂ ಕೆಲವು ರೂಪಕಭೇದಗಳು ಉಕ್ತವಾಗಿವೆ.

೩. ಅರ್ಥಾಂತರನ್ಯಾಸ : "ದೊರೆಕೊಳ್ಳುವಂತೆ ಮೊದಲು ಹೇಳಿದ ಅರ್ಥವನ್ನು ಸಾಧಿಸುವುದಕ್ಕಾಗಿ (ಸಮರ್ಥಿಸುವುದಕ್ಕಾಗಿ) ಬೇರೊಂದು ಅರ್ಥಾಂತರವನ್ನು ಹೇಳುವುದು (ನ್ಯಾಸಮಾಡುವುದು) ಅರ್ಥಾಂತರ (ವಿ) ನ್ಯಾಸ. (ಪ್ರಸ್ತುತಾರ್ಥವನ್ನು ಅಪ್ರಸ್ತುತಾರ್ಥದಿಂದ ಸಮರ್ಥಿಸುವುದು)"—

ದೊರೆಕೊಳೆ ಪೇೞ್ದರ್ಥಮನಾ
ದರದಿಂ ಸಾಧಿಸಲೆವೇಡಿ ಪೆಱತೊಂದರ್ಥಾಂ
ತರಮುಂ ಪೇೞ್ವುದದರ್ಥಾಂ
ತರವಿನ್ಯಾಸಾಖ್ಯಮದಱಿದೀ ಭೇದಂಗಳ್ ॥ (೩–೨೪)

ದಂಡಿ :

ಜ್ಞೇಯಃ ಸೋಽರ್ಥಾಂತರನ್ಯಾಸೋ ವಸ್ತು ಪ್ರಸ್ತುತ್ಯ ಕಿಂಚನ
ತತ್ಸಾಧನಸಮರ್ಥಸ್ಯ ನ್ಯಾಸೋ ಯೋಽನ್ಯಸ್ಯ ವಸ್ತುನಃ ॥ (೨–೧೬೯)

(ಯಾವುದೋ ಒಂದು ಪ್ರಕೃತ ವಸ್ತುವನ್ನು ಪ್ರಸ್ತಾಪಿಸಿ, ಅದನ್ನು ಸಿದ್ಧಪಡಿಸಲು ಸಮರ್ಥವಾಗಿರುವ ಇನ್ನೊಂದು ವಸ್ತುವನ್ನು ಇರಿಸುವುದೇ 'ಅರ್ಥಾಂತರನ್ಯಾಸ').

'ಅರ್ಥಾಂತರನ್ಯಾಸ'ದಲ್ಲಿ ಸಕಲವ್ಯಾಪಿ (೩–೩೦), ವಿಶೇಷ ಪ್ರಕಾಶಕ (–೩೧), ಯುಕ್ತಕಾರಿ (–೩೨), ಯುಕ್ತಾಯುಕ್ತ (–೩೩), ಪ್ರಕಟಶ್ಲೇಷ (–೩೪), ವಿರುದ್ಧಾರ್ಥಕ (–೩೫), ವಿಪರೀತ ಅಥವಾ ವಿಪರ್ಯಯ (–೩೯), ಯುಕ್ತಾರ್ಥ (–೩೭)— ಎಂದು ಪ್ರಭೇದಗಳು. 'ಸಕಲವ್ಯಾಪಿ'ಯನ್ನು ದಂಡಿ 'ವಿಶ್ವವ್ಯಾಪಿ' ಎಂದಿದ್ದಾನೆ; 'ಪ್ರಕಟಶ್ಲೇಷ' ಅವನಿಂದ ಉಕ್ತವಾಗಿಲ್ಲ.

೪. ವ್ಯತಿರೇಕ :"ಆದಿಪ್ರತೀತಿಯಿಂದ(ಎಂದರೆ, ಅರ್ಥಪ್ರತೀತಿ ಮೂಲಕವಾಗಿ) ಇಲ್ಲವೆ, ಶಬ್ದಾದರದಿಂ (ಶಬ್ದದ ಕಡೆ ಓಲುವುದರಿಂದ, ಶಬ್ದಮೂಲಕವಾಗಿ) ಸದೃಶವಾದ (ಒಂದನ್ನೊಂದು ಹೋಲುವ) ಎರಡು ವಸ್ತುಗಳಲ್ಲಿ ಭೇದವನ್ನು ತಿಳಿಸುವುದು 'ವ್ಯತಿರೇಕ'" (೩–೩೯). ಇದು ದಂಡಿಯಲ್ಲಿ "ಎರಡು ವಸ್ತುಗಳ ಸಾದೃಶ್ಯವು ಶಬ್ದತಃ ಇಲ್ಲವೆ ಅರ್ಥಾತ್ ತಿಳಿದಾದಮೇಲೆ ಅವುಗಳ ನಡುವೆ ಇರುವ ವ್ಯತ್ಯಾಸವನ್ನು ಹೇಳುವ ಅಲಂಕಾರವನ್ನು ವ್ಯತಿರೇಕವೆನ್ನುವರು"—ಎಂದು (೨–೧೮೦) ಉಕ್ತವಾಗಿದೆ.

'ವ್ಯತಿರೇಕ'ದಲ್ಲಿ ಏಕವ್ಯತಿರೇಕ (೩–೪೦), ಉಭಯ ವ್ಯತಿರೇಕ (–೪೧) ಎಂದು ಪ್ರಭೇದಗಳು.

೫. ಯಾಥಾಸಂಖ್ಯ : ಇದರ ಲಕ್ಷಣ ಹಿಂದೆ 'ಚ್ಯುತಯಾಥಾಸಂಖ್ಯ' ದೋಷವನ್ನು

ಹೇಳುವಾಗಲೇ ಬಂದಿದೆ. ಇದರಲ್ಲಿ ಅನುಗತ (೩-೫೦), ಅನನ್ವಿತ ಯಾಥಾಸಂಖ್ಯ (-೫೧) ಎಂದು ಎರಡು ಪ್ರಕಾರಗಳು.

೬. ದೀಪಕ: "ಜಾತಿ ಕ್ರಿಯಾ ಗುಣ ದ್ರವ್ಯ—ಇವುಗಳಲ್ಲಿ ಯಾವೊಂದರ ಅತಿಶಯ ವಿಶೇಷವನ್ನು ಸೂಚಿಸುವ ಪದವು ಒಂದು ನಿರ್ದಿಷ್ಟ ಸ್ಥಳದಲ್ಲಿ ನೆಲೆಗೊಂಡು, ಇಡಿಯ ವಾಕ್ಯವೆಲ್ಲವನ್ನೂ ಬೆಳಗುವ ಕಾರ್ಯವೆಸಗುತ್ತಿದ್ದರೆ, ಅದು ದೀಪಕವೆನಿಸುವುದು" (೩-೫೩). ಈ ಅಲಂಕಾರ ವಿಷಯ ದಂಡಿಯಲ್ಲಿ "ವಾಕ್ಯದ ಒಂದೆಡೆಯಲ್ಲಿರುವ ಜಾತಿವಾಚಕ, ಕ್ರಿಯಾವಾಚಕ, ಗುಣವಾಚಕ ಇಲ್ಲವೆ ದ್ರವ್ಯವಾಚಕವಾದ ಒಂದು ಪದವು ಆ ವಾಕ್ಯ ದಂತೆ ಬೇರೆ ವಾಕ್ಯಕ್ಕೆಲ್ಲ ಉಪಕಾರಕವಾಗುವಂತಿದ್ದರೆ, ಅದನ್ನು 'ದೀಪಕ'ವೆನ್ನುವರು" (೨-೯೭) ಎಂದು ಬಂದಿದೆ.

'ದೀಪಕ'ದಲ್ಲಿ ಆದಿದೀಪಕ, ಮಧ್ಯದೀಪಕ, ಅಂತದೀಪಕ ಎಂದು ಮೂರು ಪ್ರಕಾರ ಗಳು; ಈ ಒಂದೊಂದರಲ್ಲೂ ಜಾತಿ, ಕ್ರಿಯೆ, ಗುಣ, ದ್ರವ್ಯಗಳಿಗನುಸಾರವಾಗಿ ನಾಲ್ಕು ಪ್ರಭೇದಗಳು. ದಂಡಿಯಲ್ಲಿ ಎಲ್ಲಕ್ಕೂ ಲಕ್ಷ್ಯ ಪದ್ಯಗಳಿವೆ. ಮಾರ್ಗಕಾರ ಆದಿದೀಪಕ ಪ್ರಭೇದಗಳಿಗೆ ಮಾತ್ರ ಲಕ್ಷ್ಯಗಳನ್ನು ಕೊಟ್ಟಿದ್ದಾನೆ; ಮಧ್ಯದೀಪಕ, ಅಂತದೀಪಕ ಗಳನ್ನು ಹೆಸರಿಸಿದ್ದಾನಷ್ಟೆ (೩-೫೮).

೭. ಉಪಮೆ:

ನಾನಾ ವಸ್ತುವಿಭೇದಮ
ನೇನಾನುಂ ತೆಱದೆ ಪೋಲ್ಕೆ ಮಾಡುವುದುಪಮಾ
ಮಾನಿತ ಸದಳಂಕಾರಮ
ನೂನ ವಿಕಲ್ಪ ಪ್ರಪಂಚವಿಾ ತೆಱನದಱಾ ॥ (೩-೫೯)

ದಂಡಿ:

ಯಥಾ ಕಥಂಚಿತ್ ಸಾದೃಶ್ಯಂ ಯತ್ರೋದ್ಭೂತಂ ಪ್ರತೀಯತೇ
ಉಪಮಾ ನಾಮ ಸಾ ತಸ್ಯಾಃ ಪ್ರಪಂಚೋಽಯಂ ಪ್ರದರ್ಶ್ಯತೇ ॥ (೨-೧೪)

(ಎಲ್ಲಿ ಒಂದಿಲ್ಲೊಂದು ಸಾಮ್ಯವು ಅತ್ಯಂತ ಸ್ಫುಟವಾಗಿ ತೋರುತ್ತಿರುವುದೋ ಅದೇ 'ಉಪಮೆ' ಎಂಬ ಅಲಂಕಾರ. ಇದರ ವಿಸ್ತೃತ ವ್ಯಾಪ್ತಿಯನ್ನು ಈಗ ವಿವರಿಸುತ್ತೇವೆ).

'ಉಪಮಾ ಪ್ರಪಂಚ'ದಲ್ಲಿ ೨೬ ಪ್ರಕಾರಗಳು: ವಸ್ತೂಪಮೆ (೩.೬೦), ಧರ್ಮೋ ಪಮೆ (-೬೧), ವಿಪರ್ಯಯೋಪಮೆ (-೬೨), ಅನ್ಯೋನ್ಯೋಪಮೆ (-೬೩), ನಿಯಮೋ ಪಮೆ (-೬೪), ಅನಿಯಮೋಪಮೆ (-೬೫), ಅತಿಶಯೋಪಮೆ (-೬೬), ಉಪಮೋ ತ್ಪ್ರೇಕ್ಷೆ(-೬೭), ಅದ್ಭುತೋಪಮೆ(-೬೮), ಮೋಹೋಪಮೆ (-೬೯), ಸಂಶಯೋಪಮೆ (-೭೦), ಊರ್ಜಿತೋಪಮೆ (-೭೧), ಶ್ಲೇಷೋಪಮೆ (-೭೨), ನಿಂದೋಪಮೆ (-೭೩), ಪ್ರಶಂಸೋಪಮೆ (-೭೪), ವಿರೋಧೋಪಮೆ (-೭೫), ತತ್ತ್ವಾಖ್ಯಾ ನೋಪಮೆ (-೭೬), ಅಸಾಧಾರಣೋಪಮೆ (-೭೭), ಅಭೂತೋಪಮೆ (-೭೮), ಅಸಂಭವೋಪಮೆ (-೭೯), ಬಹೂಪಮೆ (-೮೦), ಮಾಲೋಪಮೆ (-೮೧), ವಾಕ್ಯೋ

ಪಮೆ (-೮೨), ಸಂಧಾನೋಪಮೆ (-೮೩), ಪ್ರತಿವಸ್ತೂಪಮೆ (-೮೪), ಹೇತೂಪಮೆ (-೮೫).

ಈಚಿನ ಆಲಂಕಾರಿಕರ ಪ್ರಕಾರ ವಿಪರ್ಯಯೋಪಮೆ 'ಪ್ರತೀಪಾಲಂಕಾರ'ವಾಗಿಯೂ ಅನ್ಯೋನ್ಯೋಪಮೆ 'ಉಪಮೇಯೋಪಮೆ'ಯಾಗಿಯೂ ಸಂಶಯೋಪಮೆ 'ಸಂದೇಹಾಲಂಕಾರ'ವಾಗಿಯೂ ನೆಲೆಗೊಂಡಿವೆ. ಮೋಹೋಪಮೆಗೂ ಈಚಿನ 'ಭ್ರಾಂತಿಮದಲಂಕಾರ'ಕ್ಕೂ ಸ್ವಲ್ಪ ಸಾದೃಶ್ಯವಿದೆ. ಮಾರ್ಗಕಾರನ 'ಊರ್ಜಿತೋಪಮೆ' ದಂಡಿಯಲ್ಲಿ 'ನಿರ್ಣಯೋಪಮೆ.'

ಉಪಮಾ ಗುಣದೋಷಗಳನ್ನು ದಂಡಿಯ ಪ್ರಕಾರ ಮಾರ್ಗಕಾರ ಹೇಳಿದ್ದಾನೆ: (೮೬-೮೯). ಈ ಎರಡು ಪದ್ಯಗಳನ್ನು ಗಮನಿಸಬಹುದು:

ಹೀನಾಧಿಕ ಗುಣದೋಷ ವಿ
ತಾನಮುಮಂ ಲಿಂಗವಚನ ಭೇದಂಗಳುಮಂ
ಮಾನಧನರಱಿದು ಪೇೞ್ಗೆನು
ಮಾನಕ್ಕವಿರುದ್ಧಮಾಗೆ ಲಕ್ಷ್ಯಗಮದೊಳ್ ॥ (೩-೮೬)

ಇಂತುಪಮಾಕ್ರಮಮನಪ
ರ್ಯಂತಂ ಗುಣಗಣಮನಱಿದು ಪೇೞ್ಗೆ ಕವೀಶರ್
ಸಂತತಮಿಂತಕ್ಕುಂ ಕಾಂ
ತಾಂತಿಕಮತಿಶಯದ ಲಕ್ಷ್ಯಲಕ್ಷಣಯುಗದಿಂ ॥ (೩-೯೦)

ದಂಡಿ:

ನ ಲಿಂಗವಚನೇ ಭಿನ್ನೇ ನ ಹೀನಾಧಿಕತಾಪಿ ವಾ
ಉಪಮಾದೂಷಣಾಯಾಲಂ ಯತ್ರೋದ್ವೇಗೋ ನ ಧೀಮತಾಂ ॥(೨-೫೧)

ಈದೃಶಂ ವರ್ಜ್ಯತೇ ಸದ್ಭಿಃ ಕಾರಣಂ ತತ್ರ ಚಿಂತ್ಯತಾಂ
ಗುಣದೋಷವಿಚಾರಾಯ ಸ್ವಯಮೇವ ಮನೀಷಿಭಿಃ ॥ (೨-೫೬)

೮. ಅತಿಶಯೋಕ್ತಿ:

ಮೇರೆಗಳೆದಿರೆ ವಿಶೇಷ ವಿ
ಚಾರಮನಧಿಕೋಕ್ತಿಯೊಳ್ ತಗುಳ್ಚುವುದಕ್ಕುಂ
ಸಾರತರಮತಿಶಯಾಲಂ
ಕಾರಂ.... ॥ (೩-೯೧)

ದಂಡಿ:

ವಿವಕ್ಷಾಯಾ ವಿಶೇಷಸ್ಯ ಲೋಕಸೀಮಾತಿವರ್ತಿನೀ
ಅಸಾವತಿಶಯೋಕ್ತಿಃ ಸ್ಯಾದಲಂಕಾರೋತ್ತಮಾ ಯಥಾ ॥ (೨-೨೧೪)

(ಲೋಕಪ್ರಸಿದ್ಧವಾದ ಎಲ್ಲೆಯನ್ನು ಮೀರಿದಂತೆ ಒಂದು ವಿಶೇಷವನ್ನು ಹೇಳುವ ಕವಿವಿವಕ್ಷೆಯೇ ಅತಿಶಯೋಕ್ತಿ. ಇದು ಅಲಂಕಾರಗಳಲ್ಲೆಲ್ಲ ಅತ್ಯುತ್ತಮ). ದಂಡಿ ಹೇಳಿರುವ

ಸಂಶಯಾತಿಶಯೋಕ್ತಿ, ನಿರ್ಣಯಾತಿಶಯೋಕ್ತಿ, ಆಧಿಕ್ಯಾತಿಶಯೋಕ್ತಿ ಎಂಬ ಪ್ರಭೇದಗಳನ್ನು ಮಾರ್ಗಕಾರ ಹೇಳಿಲ್ಲ.

೯. ಸದೃಶಯೋಗಿತಾ: "ಸ್ತುತಿಸುವ ಇಲ್ಲವೆ ನಿಂದಿಸುವ ಮೂಲಕ (ಒಂದು ವಸ್ತುವಿನ ಇಲ್ಲವೆ ವ್ಯಕ್ತಿಯು, ಎಂದರೆ 'ಪ್ರಕೃತ'ದ) ವಿವಕ್ಷಿತ ಗುಣವನ್ನು ಇನ್ನೊಂದರಲ್ಲಿ (ಎಂದರೆ ಅಪ್ರಕೃತದಲ್ಲಿ) ಸದೃಶವಾಗಿರುವಂತೆ (ಸಮೀಕರಿಸಿ) ಹೇಳುವುದು ಸದೃಶಯೋಗಿತಾಲಂಕಾರ." (೩–೯೫) ಇದೇ ದಂಡಿಯಲ್ಲಿ: "ವರ್ಣಿಸುತ್ತಿರುವ ಗುಣಗಳಲ್ಲಿ ಉತ್ಕೃಷ್ಟರಾಗಿರುವ ವಸ್ತು ಅಥವಾ ವ್ಯಕ್ತಿಗಳೊಂದಿಗೆ ಪ್ರಸ್ತುತದ ಸರಿಸಮಾನತೆಯನ್ನು ವರ್ಣಿಸಿ ನಿಂದೆ ಇಲ್ಲವೆ ಸ್ತುತಿಯನ್ನು ಸೂಚಿಸುವುದೇ 'ತುಲ್ಯಯೋಗಿತೆ.'" ದಂಡಿಯ 'ತುಲ್ಯಯೋಗಿತೆ'ಯನ್ನು ಮಾರ್ಗಕಾರ 'ಸದೃಶಯೋಗಿತೆ' ಎಂದು ಮಾರ್ಪಡಿಸಿದ್ದಾನೆ, ಅದು ಕನ್ನಡದಲ್ಲಿ ಶ್ರುತಿದುಷ್ಟವಾದುದರಿಂದ. "ಈ ಅಲಂಕಾರ 'ಧರ್ಮೋಪಮೆ' ಎಂಬ ಉಪಮಾಭೇದವನ್ನೇ ಹೋಲುತ್ತದೆ."

೧೦. ಆಕ್ಷೇಪ: "ಪ್ರಸಿದ್ಧವಾದ ಅರ್ಥವನ್ನು ವಿರೋಧಿಸುವುದು ಅಥವಾ ಅಲ್ಲಗಳೆಯುವುದು ಆಕ್ಷೇಪಾಲಂಕಾರ" (೩–೯೯).

ದಂಡಿ ಇದನ್ನು "'ಪ್ರತಿಷೇಧ' ಎಂದರೆ ನಿಷೇಧದ ಉಕ್ತಿಯೇ 'ಆಕ್ಷೇಪ.' ಈ ನಿಷೇಧವು ಭೂತ, ಭವಿಷ್ಯದ್, ವರ್ತಮಾನಕಾಲದ ವಸ್ತುಗಳನ್ನು ಕುರಿತಿರಬಹುದಾದ್ದರಿಂದ ಮೂರು ಬಗೆಯಾಗುತ್ತದೆ. ನಿಷೇಧ್ಯವಾದ ವಸ್ತುಗಳ ಭೇದವು ಅನಂತವಾದ್ದರಿಂದ ಆಕ್ಷೇಪದ ಭೇದಗಳೂ ಅನಂತವಾಗುತ್ತವೆ." (೩–೧೨೦) ಎಂದು ನಿರೂಪಿಸಿದ್ದಾನೆ.

'ಆಕ್ಷೇಪ'ದಲ್ಲಿ ವೃತ್ತಾಕ್ಷೇಪ (೩.೧೦೦),ಅನುಶಯಾಕ್ಷೇಪ (–೧೦೧), ಶ್ಲೇಷಾಕ್ಷೇಪ (–೧೦೨), ಉಪಮಾಕ್ಷೇಪ (–೧೦೩), ಸಂಶಯಾಕ್ಷೇಪ (–೧೦೪), ಹೇತ್ವಾಕ್ಷೇಪ (–೧೦೫)–ಎಂದು ಪ್ರಭೇದಗಳು. ದಂಡಿಯಲ್ಲಿ ಇನ್ನೂ ಹಲವಾರು ಪ್ರಭೇದಗಳ ಉಲ್ಲೇಖವಿದೆ.' ಆಕ್ಷೇಪ'ವನ್ನು ಮಾರ್ಗಕಾರ "ವ್ಯತಿರೇಕವಿಕಲ್ಪಮಿದು" (೩.೧೦೬) ಎಂದಿರುವುದು ಗಮನಾರ್ಹವಾಗಿದೆ. ದಂಡಿ ಹಾಗೆ ಹೇಳಿಲ್ಲ. "ಎರಡು ಅಲಂಕಾರಗಳ ಲಕ್ಷ್ಯಲಕ್ಷಣ ವಿವರಣೆಗಳನ್ನು ಪರಸ್ಪರ ಹೋಲಿಸಿ ಪರಿಭಾವಿಸಿದಲ್ಲಿ, ಮಾರ್ಗಕಾರನ ಮಾತಿನ ಯಥಾರ್ಥತೆ ವೇದ್ಯವಾಗುತ್ತದೆ."

೧೧. ಶ್ಲೇಷೆ: "ಒಂದೇ ರೂಪವನ್ನುಳ್ಳ ಪದದಲ್ಲಿ ಒಂದಕ್ಕಿಂತ ಹೆಚ್ಚು, ಅರ್ಥಗಳು ಅಡಕವಾಗಿದ್ದರೆ ಅದು ಶ್ಲೇಷೆ."

ನಾನಾರ್ಥಮೇಕರೂಪಾ
ಧೀನವಚೋರಚಿತಮುಪ್ಪೊಡಕ್ಕುಂ ಶ್ಲೇಷಂ... ॥ (೩–೧೦೮)

ದಂಡಿ:

ಶ್ಲಿಷ್ಟಮಿಷ್ಟಮನೇಕಾರ್ಥಮೇಕರೂಪಾನ್ವಿತಂ ವಚಃ
ತದಭಿನ್ನಪದಂ ಭಿನ್ನಪದ ಪ್ರಾಯಮಿತಿ ದ್ವಿಧಾ ॥ (೨–೩೧೦)

(ಒಂದೇ ಶಬ್ದರೂಪದಲ್ಲಿ ಅನೇಕಾರ್ಥಗಳು ಕೂಡಿರುವುದನ್ನೇ 'ಶ್ಲಿಷ್ಟ' (=ಶ್ಲೇಷ) ವೆನ್ನುವರು. ಅದು 'ಅಭಿನ್ನಪದ', 'ಭಿನ್ನಪದ' ಎಂದು ಎರಡು ಬಗೆಯಾಗಿದೆ.)

ಶ್ಲೇಷೆಯ ಅನೇಕ ಪ್ರಭೇದಗಳನ್ನು ದಂಡಿ ಮತ್ತು ಮಾರ್ಗಕಾರ ಹೇಳುತ್ತಾರೆ. ಈ ಸಂದರ್ಭದಲ್ಲಿ ದಂಡಿಯ ಈ ಉಕ್ತಿಯನ್ನೂ ಸ್ಮರಿಸಬಹುದು :

ಶ್ಲೇಷಃ ಸರ್ವಾಸು ಪುಷ್ಣಾತಿ ಪ್ರಾಯೋ ವಕ್ರೋಕ್ತಿಷು ಶ್ರಿಯಂ
ಭಿನ್ನಂ ದ್ವಿಧಾ ಸ್ವಭಾವೋಕ್ತಿರ್ವಕ್ರೋಕ್ತಿಶ್ಚೇತಿ ವಾಙ್ಮಯಂ ॥ (೨-೩೬೩)

(ಶ್ಲೇಷವು ಪ್ರಾಯಃ ಎಲ್ಲ ಅತಿಶಯಮೂಲ ಅಲಂಕಾರಗಳಿಗೂ ಸೊಬಗೇಂಸುವುದು. ಸಾಹಿತ್ಯವನ್ನೆಲ್ಲ 'ಸ್ವಭಾವೋಕ್ತಿ' ಮತ್ತು 'ವಕ್ರೋಕ್ತಿ' ಎಂದು ಎರಡು ಭಾಗಗಳಾಗಿ ವಿಂಗಡಿಸಬಹುದು).

೧೨. ಉತ್ಪ್ರೇಕ್ಷೆ: "ಪ್ರಸಿದ್ಧವಾದ ಒಂದು ವಸ್ತುವಿನ ಯಥಾಸ್ಥಿತಿಯನ್ನು ಮರಸಿ, ಬೇರೊಂದು ರೀತಿಯಿಂದ ತಿಳಿಸುವುದು ಉತ್ಪ್ರೇಕ್ಷೆ"—

ತಱಿಸಂದು ಪಲವು ತೆಱದಿಂ
ತೆಱಿದಿರೆ ನೆಗೞ್ದುರ್ದದೊಂದು ವಸ್ತುಸ್ಥಿತಿಯಂ
ಮಱಿಸಿ ಪೆಱತೊಂದು ನೂೞ್ಕೆಯಿ
ನಱಿಪುವುದುತ್ಪ್ರೇಕ್ಷೆಯೆಂಬುದು... ॥ (೩-೧೧೪)

ದಂಡಿ :

ಅನ್ಯಥೈವ ಸ್ಥಿತಾ ವೃತ್ತಿಶ್ಚೇತನಸ್ಯೇತರಸ್ಯ ವಾ
ಅನ್ಯಥೋತ್ಪ್ರೇಕ್ಷ್ಯತೇ ಯಾತ್ರ ತಾಮುತ್ಪ್ರೇಕ್ಷಾಂ ವಿದುರ್ಯಥಾ ॥ (೨-೨೨೧)

(ಒಂದು ಚೇತನ ವಸ್ತುವಿನ ಅಥವಾ ಅಚೇತನ ವಸ್ತುವಿನ ವಾಸ್ತವವಾದ ಗುಣಾದಿ ಗಳನ್ನು ಬಿಟ್ಟು ಬೇರೊಂದು ರೀತಿಯವೆಂದು ಉತ್ಪ್ರೇಕ್ಷಿಸಿ ವರ್ಣಿಸುವುದನ್ನು ಉತ್ಪ್ರೇಕ್ಷೆ ಯೆನ್ನುವರು).

೧೩. ಸೂಕ್ಷ್ಮ : "ರಹಸ್ಯವಾಗಿಟ್ಟುಕೊಂಡಿರುವ ಆಲೋಚನೆ ಮುಂತಾದುವನ್ನು ಬಗೆದು ಇಂಗಿತ, ಚೇಷ್ಟೆ, ಆಕಾರಗತವಾದ ಸೂಕ್ಷ್ಮಸಂಜ್ಞೆಗಳ ಮೂಲಕ ಸೂಚಿಸುವುದು ಸೂಕ್ಷ್ಮಾಲಂಕಾರ." (೩-೧೧೭) 'ಕಾವ್ಯಾದರ್ಶ'ದಲ್ಲಿ ಇದನ್ನು "ಇಂಗಿತ, ಆಕಾರ, ಇವು ಗಳ ಮೇಲಿಂದ ಸೂಚ್ಯವಾಗುವ ಅರ್ಥವೇ ಸೂಕ್ಷ್ಮಮತಿ ಸಂವೇದ್ಯವಾದ ಕಾರಣ ಸೂಕ್ಷ್ಮಾಲಂಕಾರವಾಗುತ್ತದೆ" ಎಂದಿದೆ (೨-೨೬೦).

೧೪. ವಿಶೇಷೋಕ್ತಿ (ವಿಶೇಷ) : "ವೈಕಲ್ಯ ಅಥವಾ ಕುಂದುಕೊರತೆಯನ್ನು ಅದಕ್ಕೆ ಅನುಗುಣವಾಗಿ ಹೇಳದೆ ಅವುಗಳಲ್ಲಿ ಕಂಡುಬರುವ ವಿಶೇಷವನ್ನೆ 'ಸಯ್ತೆಣಿಸಿ' ಹೇಳು ವುದು ವಿಶೇಷಾಲಂಕಾರ" (೩-೧೨೦). ಇದನ್ನು ದಂಡಿ "ಒಂದು ವಸ್ತುವಿನ ವಿಶೇಷ ವನ್ನು ಸೂಚಿಸುವುದಕ್ಕಾಗಿ ಅದರ ಕಾರ್ಯಸಿದ್ಧಿಯ ಕಾಲದಲ್ಲಿ ಗುಣ, ಜಾತಿ, ಕ್ರಿಯಾದಿ ಗಳ ವೈಕಲ್ಯ ಅಥವಾ ನ್ಯೂನತೆಯನ್ನು ಹೇಳುವುದೇ 'ವಿಶೇಷೋಕ್ತಿ' ಎಂಬ ಅಲಂಕಾರ" ಎಂಬುದಾಗಿ ನಿರೂಪಿಸಿದ್ದಾನೆ (೨-೩೨೩).

'ವಿಶೇಷ'ದಲ್ಲಿ ಗುಣವಿಶೇಷ, ಕ್ರಿಯಾವಿಶೇಷಗಳನ್ನು ಹೇಳಿದ್ದಾನೆ ಮಾರ್ಗಕಾರ. ದಂಡಿಯಲ್ಲಿ ಗುಣವೈಕಲ್ಯ, ಕ್ರಿಯಾವೈಕಲ್ಯ, ಜಾತಿವೈಕಲ್ಯ, ದ್ರವ್ಯವೈಕಲ್ಯ, ಸಾಧನ ವೈಕಲ್ಯ, ಹೇತು ವಿಶೇಷೋಕ್ತಿಗಳ ಉಲ್ಲೇಖವಿದೆ.

೧೫. ಸಮಾಹಿತ :

ಪರ [ವ] ಸದ ಬಗೆಯೊಳೊಂದಂ
ದೊರೆಕೊಳಿಸುವುದಜಿಗತರ್ಕಿತೋಪಸ್ಥಾನಂ
ನಿರುತಂ ಸಮಾಹಿತಾಳಂ
ಕರಣಾಂತರಮಕ್ಕುಂ... ॥ (೩-೧೨೩)

ದಂಡಿ :

ಕಿಂಚಿದಾರಭಮಾಣಸ್ಯ ಕಾರ್ಯಂ ದೈವವಶಾತ್ ಪುನಃ
ತತ್ಸಾಧನ ಸಮಾಪತ್ತಿರ್ಯಾ ತದಾಹುಃ ಸಮಾಹಿತಂ ॥ (೨-೨೯೮)

(ಒಂದು ಕಾರ್ಯವನ್ನು ಸ್ವಲ್ಪ ಆರಂಭಮಾಡುವ ಹೊತ್ತಿಗೇ ಅಕಸ್ಮಾತ್ ದೈವಸಹಾಯ ದಿಂದ ಆ ಕಾರ್ಯಸಿದ್ಧಿಗೆ ಅನುಕೂಲವಾದ ಸಾಧನಾಂತರಗಳು ಒದಗಿ ಬರುವುದನ್ನು 'ಸಮಾಹಿತ'ವೆನ್ನುವರು.) ಇಲ್ಲಿ ಮಾರ್ಗಕಾರನ ನಿರೂಪಣೆ ದಂಡಿಯದಕ್ಕಿಂತ ಸ್ವಲ್ಪ ಭಿನ್ನವಾಗಿರುವುದನ್ನು ಗಮನಿಸಬಹುದು.

೧೬. ಸಮಾಸೋಕ್ತಿ : "ಒಂದು ವಸ್ತುವನ್ನು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು, ಅದನ್ನೆ ಹೋಲುವ ಬೇರೊಂದು ವಸ್ತುವನ್ನು ಕುರುಹುಗಳ ಮೂಲಕ ಲಕ್ಷಿಸಿ ಹೇಳುವುದು ಸಮಾಸೋಕ್ತಿ" (೩-೧೨೬). "ಇಲ್ಲಿ ವಾಸ್ತವವಾಗಿ ಮನಸ್ಸಿನಲ್ಲಿ ಅಭಿಪ್ರೇತವಾಗಿರುವುದು ಪ್ರಸ್ತುತ; ಅಪ್ರಸ್ತುತದ ವರ್ಣನೆಯಲ್ಲಿ ಪ್ರಸ್ತುತ ಸೂಚಕವಾದ ಕುರುಹುಗಳ ಉಲ್ಲೇಖ ವಿರುತ್ತದೆ, ಅಷ್ಟೆ. ಇದರಿಂದಾಗಿ, ಒಟ್ಟಿನ ಉಕ್ತಿಯಲ್ಲಿ ಸಂಕ್ಷಿಪ್ತತೆ ಅಳವಡುತ್ತದೆ. ಈ ಸಂಕ್ಷಿಪ್ತತೆಯಿಂದಾಗಿಯೆ ಅಲಂಕಾರದ ಹೆಸರು 'ಸಮಾಸೋಕ್ತಿ' ಎಂದು."

ದಂಡಿ :

ವಸ್ತು ಕಿಂಚಿದಭಿಪ್ರೇತ್ಯ ತತ್ತುಲ್ಯಸ್ಯಾನ್ಯವಸ್ತುನಃ
ಉಕ್ತಿಃ ಸಂಕ್ಷೇಪರೂಪತ್ವಾತ್ ಸಾ ಸಮಾಸೋಕ್ತಿರಿಷ್ಯತೇ ॥ (೨-೨೦೫)

(ಯಾವುದೋ ಒಂದು ವಸ್ತುವನ್ನು ವ್ಯಂಗ್ಯವಾಗಿ ಪ್ರತಿಪಾದಿಸಲು ಉದ್ದೇಶಿಸಿ, ತತ್ಸದೃಶ ವಾದ ಮತ್ತೊಂದು ವಸ್ತುವನ್ನು ಬಣ್ಣಿಸಿದರೆ ಆಗ ಒಂದರಿಂದ ಎರಡರ್ಥ ಬರುವಂತೆ ಸಂಕ್ಷೇಪವಿರುವ ಕಾರಣ, ಅದು 'ಸಮಾಸೋಕ್ತಿ'ಯೆನಿಸುವುದು.)

೧೭. ಪರ್ಯಾಯೋಕ್ತ : "ತಿಳಿಸದಿದ್ದರೂ ಅದು ಉಪಾಯವಾಗಿ ನೆರವೇರುವ ರೀತಿ ಯನ್ನು ಸೂಚಿಸುವುದಕ್ಕಾಗಿ ಇನ್ನೊಂದನ್ನು ಹೇಳುವುದು, ಎಂದರೆ ಪರ್ಯಾಯವಾಗಿ ಅಥವಾ ಪ್ರಕಾರಾಂತರವಾಗಿ ಅದನ್ನೇ ಹೇಳುವುದು ಪರ್ಯಾಯೋಕ್ತ." (೩-೧೩೧)

ಭಾಮಹ :

ಪರ್ಯಾಯೋಕ್ತಂ ಯದನ್ಯೇನ ಪ್ರಕಾರೇಣಾಭಿಧೀಯತೇ ॥ (೩–೮)

(ಅಭಿಪ್ರಾಯವನ್ನು ಪ್ರಕಾರಾಂತರದಿಂದ ಹೇಳುವುದು 'ಪರ್ಯಾಯೋಕ್ತ').

ದಂಡಿ :

ಅರ್ಥಮಿಷ್ಟಮನಾಖ್ಯಾಯ ಸಾಕ್ಷಾತ್ ತಸ್ಯೈವ ಸಿದ್ಧಯೇ
ಯತ್ ಪ್ರಕಾರಾಂತರಾಖ್ಯಾನಂ ಪರ್ಯಾಯೋಕ್ತಂ ತದಿಷ್ಯತೇ ॥ (೨–೨೯೫)

(ವಿವಕ್ಷಿತವಾದ ಅರ್ಥವನ್ನು ನೇರವಾಗಿ ಹೇಳದೆ, ಅದರ ಪ್ರತೀತಿ ಬರುವಂತೆ ಪ್ರಕಾರಾಂತರ ದಿಂದ ಹೇಳುವುದನ್ನೇ 'ಪರ್ಯಾಯೋಕ್ತ'ವೆಂದು ತಿಳಿಯಬೇಕು).

೧೮. ವಿರೋಧ : "ವಿರುದ್ಧವಾದ ಪದಾರ್ಥಗಳನ್ನು ಸಂಸರ್ಗವಾಗುವಂತೆ ಮಾಡಿ, ಅವುಗಳೊಳಗಿನ ವಿಶೇಷವಾದ ಅಂತರವನ್ನು, ಎಂದರೆ ಅವುಗಳ ವಿಶಿಷ್ಟ ಭಿನ್ನ ಗುಣ ಗಳನ್ನು ಸ್ಪಷ್ಟವಾಗಿ ತಿಳಿಸುವುದು 'ವಿರೋಧ'ವೆಂಬ ಹೆಸರುಳ್ಳ ಅಲಂಕಾರವಾಗುವುದು" (೩–೧೩೪).

ಭಾಮಹ :

ಗುಣಸ್ಯ ವಾ ಕ್ರಿಯಾಯಾ ವಾ ವಿರುದ್ಧಾನ್ಯಕ್ರಿಯಾಭಿಧಾ
ಯಾ ವಿಶೇಷಾಭಿಧಾನಾಯ ವಿರೋಧಂ ತಂ ವಿದುರ್ಬುಧಾಃ ॥ (೩–೨೫)

(ಯಾವುದಾದರೊಂದು ಗುಣ ಇಲ್ಲವೆ ಕ್ರಿಯೆಗೆ ವಿರುದ್ಧವಾದ ಮತ್ತೊಂದು (ಗುಣ ಇಲ್ಲವೆ) ಕ್ರಿಯೆಯನ್ನು ಚಮತ್ಕಾರಪ್ರದರ್ಶನಕ್ಕಾಗಿ ವರ್ಣಿಸುವುದನ್ನೇ ವಿದ್ವಾಂಸರು 'ವಿರೋಧ'ವೆಂಬ ಅಲಂಕಾರವೆನ್ನುವರು).

ದಂಡಿ :

ವಿರುದ್ಧಾನಾಂ ಪದಾರ್ಥಾನಾಂ ಯತ್ರ ಸಂಸರ್ಗದರ್ಶನಂ
ವಿಶೇಷದರ್ಶನಾಯೈವ ಸ ವಿರೋಧಃ ಸ್ಮೃತೋ ಯಥಾ ॥ (೨–೩೩೩)

(ವರ್ಣ್ಯಮಾನ ವಿಷಯದ ಯಾವುದೋ ವೈಶಿಷ್ಟ್ಯಾತಿಶಯವನ್ನು ಸೂಚಿಸುವ ಉದ್ದೇಶ ದಿಂದ ಪರಸ್ಪರ ವಿರೋಧವಿರುವ ವಸ್ತುಗಳ ಸಂಪರ್ಕವನ್ನು ವರ್ಣಿಸಿದರೆ 'ವಿರೋಧಾ ಲಂಕಾರ'ವೆನ್ನುವರು).

ವಿಷಮವಿರೋಧ, ಅಸಂಗತಿ ವಿರೋಧ, ಶ್ಲೇಷ ಮೂಲವಿರೋಧ ಎಂಬ ಪ್ರಭೇದ ಗಳನ್ನು ದಂಡಿ ಹೇಳುತ್ತಾನೆ; ಅವು ಮಾರ್ಗಕಾರನಲ್ಲಿಲ್ಲ. ಆದರೆ "ಉಪಮಾದಿ ಅಲಂಕಾರ ಗಳಲ್ಲಿಯೂ ಕಂಡುಬರುವ ವಿರೋಧಲಕ್ಷಣವನ್ನು ಲಕ್ಷ್ಯಗಳ ಮೂಲಕ ಅರಿಯಿರಿ" (೩–೧೩೭) ಎಂದು ದಂಡಿ ಹೇಳದ ಒಂದು ವಿಶೇಷಾಂಶವನ್ನು ಮಾರ್ಗಕಾರ ತಿಳಿಸಿ ದ್ದಾನೆ. ವಿರುದ್ಧರೂಪಕ, ವಿರೋಧೋಪಮೆ—ಈ ಅಲಂಕಾರಗಳನ್ನು 'ವಿರೋಧ' ದೊಡನೆ ಹೋಲಿಸಬಹುದು."

೧೯. ಅಪ್ರಸ್ತುತಪ್ರಶಂಸೆ :

ಪ್ರಸ್ತುತಮಲ್ಲದುದನೆ ಮಿಗೆ
ವಿಸ್ತಾರಿಸಿ ನೆಗೞೆ ಪೇೞೊಡಕ್ಕುಂ ಮತ್ತ
ಪ್ರಸ್ತುತಮೆಂಬುದಳಂಕೃತಿ
ವಿಸ್ತರಮಿಂತಕ್ಕುಂ... ॥ (೩-೧೩೮)

ಭಾಮಹ :

ಅಧಿಕಾರಾದಪೇತಸ್ಯ ವಸ್ತುನೋಽನ್ಯಸ್ಯ ಯಾ ಸ್ತುತಿಃ
ಅಪ್ರಸ್ತುತಪ್ರಶಂಸೇತಿ ಸಾ ಚೈವಂ ಕಥ್ಯತೇ ಯಥಾ ॥ (೩-೨೯)

(ಪ್ರಸ್ತುತವಾದ ವಸ್ತುವಿಗೆ ವಾಚ್ಯವಾಗಿ ಅನ್ವಯಿಸದ ಅಪ್ರಸ್ತುತ ವಸ್ತುವಿನ ವರ್ಣನೆ ಅಪ್ರಸ್ತುತ ಪ್ರಶಂಸೆಯೆನಿಸುವುದು)

ದಂಡಿ :

ಅಪ್ರಸ್ತುತ ಪ್ರಶಂಸಾಸ್ಯಾದಪಕ್ರಾಂತೇಷು ಯಾ ಸ್ತುತಿಃ ॥ (೨-೩೪೦)

(ಅಪ್ರಸ್ತುತವಾಗಿರುವ ವಸ್ತುಗಳ ಹೊಗಳಿಕೆಯೇ 'ಅಪ್ರಸ್ತುತ ಪ್ರಶಂಸೆ,)

೨೦. ನಿದರ್ಶನ :

ಗುಣದೋಷಾದಿಗಳಿಂದನು
ಗುಣವಾಗಿರೆ ಪೇೞ್ದು ತದನುಸದೃಶದಿನೊಂದಂ
ಪ್ರಣಿಹಿತ ನಿದರ್ಶನಕ್ರಮ
ದೆಣಿಸುವುದಕ್ಕುಂ ನಿದರ್ಶನಾಲಂಕಾರಂ ॥ (೩-೧೪೧)

ದಂಡಿ :

ಅರ್ಥಾಂತರ ಪ್ರವೃತ್ತೇನ ಕಿಂಚಿತ್ ತತ್ಸದೃಶಂ ಫಲಂ
ಸದಸದ್ವಾ ನಿದರ್ಶ್ಯೇತ ಯದಿ ತತ್ ಸ್ಯಾತ್ ನಿದರ್ಶನಂ ॥ (೨-೩೪೮)

(ಕಾರ್ಯಾಂತರದಲ್ಲಿ ಪ್ರವೃತ್ತವಾದ ಒಂದು, ತತ್ಸಮಾನವಾದ ಮತ್ತೊಂದು ಪರಿಣಾಮವನ್ನು—ಒಳ್ಳೆಯದಿರಬಹುದು, ಕೆಟ್ಟದಿರಬಹುದು—ನಿದರ್ಶಿಸುವಂತಿದ್ದರೆ ಅದು 'ನಿದರ್ಶನ.')

ಇಲ್ಲಿ ಮಾರ್ಗಕಾರನ ಲಕ್ಷಣ ನಿರೂಪಣೆ ದಂಡಿಯ ನಿರೂಪಣೆಗಿಂತ ಭಿನ್ನವಾಗಿರುವುದು ಗಮನಾರ್ಹ; ಅಂತೆಯೆ ಅವನ ಲಕ್ಷ್ಯಪದ್ಯಗಳೂ ದಂಡಿಯ ಪದ್ಯಗಳಿಗಿಂತ ಬೇರೆಯಾಗಿವೆ. ಅವನ ಈ ಪದ್ಯವನ್ನೂ ಇಲ್ಲಿ ಗಣಿಸಬೇಕು :

ಇಂತುದಿತಭೇದಮಂ ದೃ
ಷ್ಟಾಂತಾಳಂಕಾರಮಾರ್ಗಮಂ ಕನ್ನಡದೊಳ್
ಸಂತತಗುಣಮಂ ಕೈಕೊ
ಳ್ವಂತಾಗಿರೆ ಬಗೆದು ಪೇೞ್ಗೆ ಪರಮಕವೀಶರ್ ॥ (೩-೧೫೩)

'ನಿದರ್ಶನ'ವನ್ನು ಹೇಳಹೊರಟ ಮಾರ್ಗಕಾರನ ನಿರೂಪಣೆ 'ದೃಷ್ಟಾಂತಾಲಂಕಾರ'ದಲ್ಲಿ ಪರ್ಯವಸಾನಗೊಂಡದ್ದೇಕೆ? ಮುಂದಿನ ಆಲಂಕಾರಿಕರ ಪ್ರಕಾರ ನಿದರ್ಶನ, ದೃಷ್ಟಾಂತಗಳು ಬೇರೆ ಬೇರೆ. ಆದರೆ ಕವಿರಾಜಮಾರ್ಗಕಾರನ ಪಾಲಿಗೆ ಅವೆರಡೂ ಅಭಿನ್ನ ಎಂದು ಚಿಟಗುಪ್ಪಿ ಮತ್ತು ಕೆ. ಕೃಷ್ಣಮೂರ್ತಿಯವರ ನಿಲವು. ಆದರೆ ಮಾರ್ಗಕಾರನ ದೃಷ್ಟಾಂತವು ನಿದರ್ಶನದ ಒಂದು ಪ್ರಭೇದವೆಂದು ಹೇಳುತ್ತಾರೆ ಎಂ. ವಿ. ಸೀ.

ಚಿಟಗುಪ್ಪಿಯವರ ಹೇಳಿಕೆಯಿದು: "ಪರಾವರ್ತಿ ಸಂಸ್ಕೃತ ಲಾಕ್ಷಣಿಕರಲ್ಲಿ ಕೆಲವರು ನಿದರ್ಶನ, ದೃಷ್ಟಾಂತ ಎರಡೂ ಅಲಂಕಾರಗಳನ್ನು ಲಕ್ಷಿಸುವರು. ನೃಪತುಂಗನು ಇವುಗಳಲ್ಲಿ ಭೇದವೆಣಿಸಿಲ್ಲ."[185]

ಕೆ. ಕೃಷ್ಣಮೂರ್ತಿಯವರು ಹೀಗೆನ್ನುತ್ತಾರೆ: "ಉಪಮಾದಿ ಅನೇಕ ಅರ್ಥಾಲಂಕಾರಗಳಿದ್ದರೂ, ಕನ್ನಡ ಭಾಷೆಯ ಜಾಯಮಾನಕ್ಕೆ ನಿದರ್ಶನಾಲಂಕಾರವು ಹೆಚ್ಚು ಒಗ್ಗುವುದೆಂದು ಮೊತ್ತಮೊದಲು ಎತ್ತಿ ಹೇಳಿರುವ ಯಶಸ್ಸು ಕವಿರಾಜಮಾರ್ಗಕಾರನಿಗೇ ಸಲ್ಲುತ್ತದೆ....ಸಾಮಾನ್ಯವಾಗಿ ಒಂದೊಂದು ಅಲಂಕಾರ ಪ್ರಕಾರಕ್ಕೆ ಒಂದೊಂದೇ ಲಕ್ಷ್ಯವನ್ನು ನೀಡುವ ಮತ್ತು ಪ್ರಾಯಿಕವಾಗಿ ಲಕ್ಷ್ಯಗಳನ್ನು ದಂಡಿಯಿಂದಲೇ ಭಾಷಾಂತರಿಸುವ ಈತನು ಈ ಅಲಂಕಾರವನ್ನು ಉದಾಹರಿಸುವಾಗ ತನ್ನ ಕ್ರಮವನ್ನು ಬಿಟ್ಟುಕೊಟ್ಟು, ತನ್ನದೇ ಆದ ಹನ್ನೊಂದು ಲಕ್ಷ್ಯಗಳನ್ನು ಬರೆದಿದ್ದಾನೆ. ಇಷ್ಟೇ ಅಲ್ಲ; ಇದಕ್ಕೇ 'ದೃಷ್ಟಾಂತ'ವೆಂದೂ ಹೆಸರೆಂದು ತಿಳಿಸಿ ಕನ್ನಡ ಕವಿಗಳು ಅಗತ್ಯವಾಗಿ ಇದನ್ನು ಬಳಸಬೇಕೆಂದು ಕಡೆಗೆ ಹೇಳಿದ್ದಾನೆ....ಈ ವಿಚಾರವನ್ನು ಸಂಸ್ಕೃತ ಲಾಕ್ಷಣಿಕರು ಈ ವಿಧವಾಗಿ ಎಲ್ಲಿಯೂ ಹೇಳಿಲ್ಲ. ಉದಾಹರಣೆಗಳನ್ನು ಗಮನಿಸಿದರೆ ಎಲ್ಲವೂ ರಾಜನೀತಿ ಇಲ್ಲವೆ ಲೋಕನೀತಿಯ ಉಪದೇಶಕ್ಕೆ ಹೊರಟ ಪದ್ಯಗಳು. ಎಲ್ಲೆಡೆಗಳಲ್ಲಿಯೂ ಪ್ರಸ್ತುತ ನೀತಿವಾಕ್ಯವನ್ನು ಪ್ರತಿಬಿಂಬಿಸುವ ಅನುಭವಸಿದ್ಧ ವಿಷಯಗಳ ಉಲ್ಲೇಖ ಬರುತ್ತದೆ. ಕನ್ನಡ ನುಡಿಯ ಜೀವಾಳವನ್ನೇ ಇಲ್ಲಿ ಬಿಚ್ಚಿ ತೋರಿಸಲಾಗಿದೆಯೆನಿಸುತ್ತದೆ."[186] "ನೃಪತುಂಗನಿಗೆ ಆಧಾರವಾಗಿ ದಂಡಿ ಭಾಮಹರಲ್ಲದೆ ಮತ್ತಾವ ಅಲಂಕಾರ ಗ್ರಂಥವಿದ್ದಿತೆಂಬ ಪ್ರಶ್ನೆ ಪ್ರಶ್ನೆಯಾಗಿಯೆ ಉಳಿಯುತ್ತದೆ. ಉದ್ಭಟ ರುದ್ರಟರಲ್ಲಿ ದೃಷ್ಟಾಂತವು ನಿದರ್ಶನ ಭಿನ್ನವಾದ ಅಲಂಕಾರ. ನೃಪತುಂಗ ನಾಗವರ್ಮರಲ್ಲಿ ನಿದರ್ಶನದ ನಾಮಾಂತರವೇ ದೃಷ್ಟಾಂತ" [187] ಎಂದೂ ಅವರು ಹೇಳುತ್ತಾರೆ.

ಎಂ. ವಿ. ಸೀ. ಅವರ ಗ್ರಹಿಕೆ ಹೀಗಿದೆ: "....ನಿದರ್ಶನಾಲಂಕಾರದಿಂದಲೇ ಹುಟ್ಟಿದ ಅಲಂಕಾರಭೇದ ದೃಷ್ಟಾಂತ ಎಂದು ಸ್ಪಷ್ಟವಾಗಿ ಹೇಳಿದ್ದಾನೆ. ದಂಡಿಭಾಮಹರು 'ದೃಷ್ಟಾಂತ'ದ ಉಲ್ಲೇಖವನ್ನು ಮಾಡದಿದ್ದರೂ, ಕವಿಪ್ರಯೋಗದಲ್ಲಿ 'ಬಿಂಬ-ಪ್ರತಿಬಿಂಬ ಭಾವ' ಲಕ್ಷಿತವಾದ, ನಿದರ್ಶನೋದಿತವೆನ್ನಬಹುದಾದ ಅಲಂಕಾರಭೇದವನ್ನು ಬಹುಶಃ ಮೊದಲು ಗುರುತಿಸಿದ ಗೌರವವು ಮಾರ್ಗಕಾರನಿಗೇ ಸಲ್ಲಬೇಕೆಂದು ಕಾಣುತ್ತದೆ. 'ಕನ್ನಡದೊಳ್ ಸಂತತಗುಣಮಂ ಕೈಕೊಳ್ವಂತಾಗಿದೆ ಬಗೆದು ಪೇೞ್ಗೆ ಕವೀಶರ್' ಎಂದಿರುವುದರಿಂದ, ತತ್ಪೂರ್ವದಲ್ಲಿ 'ದೃಷ್ಟಾಂತ' ಕನ್ನಡ ಕಾವ್ಯಪ್ರಯೋಗದಲ್ಲಿ ಇರಲಿಲ್ಲ

ವೆಂದೂ ಮಾರ್ಗಕಾರನು ಪ್ರಥಮತಃ ಕನ್ನಡ ಕವಿಗಳಿಗೆ ಮಾರ್ಗದರ್ಶನ ಮಾಡು ತ್ತಿರುವನೆಂದೂ ಊಹಿಸಬಹುದಾಗಿದೆ. ('ದೃಷ್ಟಾಂತ'ವು ಕನ್ನಡ ದೇಶಿ ಕಾವ್ಯದಲ್ಲಿ ಪ್ರಚುರವಾಗಿದ್ದಿರಬಹುದೆಂದು ಮುಳಿಯ ತಿಮ್ಮಪ್ಪಯ್ಯನವರ ಊಹೆ)....ಅಂತೂ 'ದೃಷ್ಟಾಂತ'ವು ಕನ್ನಡ ಕವಿ ಜನಪ್ರಿಯವಾಗಿ ಮಾರ್ಗಕಾರನ ಆಶಯವು ನೆರವೇರಿದೆ."[188]

ಎಂ. ವಿ. ಸೀ. ಅವರು ಮತ್ತೂ ವಿವರಿಸುತ್ತಾರೆ: "ಸಂಸ್ಕೃತ ಆಲಂಕಾರಿಕರಲ್ಲಿ ದೃಷ್ಟಾಂತವನ್ನು ಒಂದು ಪ್ರತ್ಯೇಕ ಅಲಂಕಾರವಾಗಿ ಹೇಳಿದವರಲ್ಲಿ ಉದ್ಭಟನೇ ಮೊದಲಿಗ. ದಂಡಿ ಭಾಮಹರು ನಿದರ್ಶನಾಲಂಕಾರವನ್ನು ಮಾತ್ರ ನಿರೂಪಣೆ ಮಾಡಿದ್ದಾರೆ. ಇವರಿಬ್ಬರ ನಿರೂಪಣೆಗಳಲ್ಲಿ ಸ್ವಲ್ಪ ಭೇದವುಂಟು. ಉದ್ಭಟನು 'ನಿದರ್ಶನ'ದ ನಿರೂಪಣೆ ಯಲ್ಲಿ ಭಾಮಹನನ್ನೆ ಅನುಸರಿಸುತ್ತಿದ್ದರೂ ನಿದರ್ಶನಭಿನ್ನವಾದ ದೃಷ್ಟಾಂತವನ್ನು ನಿರೂಪಿಸಿದ್ದಾನೆ. ಮಾರ್ಗಕಾರನು ಈ ಮೂವರಲ್ಲಿ ಯಾರನ್ನೂ ಅಂಧಾನುಸರಣೆ ಮಾಡದೆ 'ನಿದರ್ಶನ-ದೃಷ್ಟಾಂತ' ಸಮಸ್ಯೆಯನ್ನು ಸ್ವತಂತ್ರ ವಿಚಾರಕ್ರಮದಲ್ಲಿ ಪರಿ ಶೀಲಿಸಿದ್ದಾನೆ....ನಿದರ್ಶನಾಲಂಕಾರದಲ್ಲಿ ಉಪಮಾನೋಪಮೇಯಭಾವವೂ ದೃಷ್ಟಾಂತ ದಲ್ಲಿ ಬಿಂಬ ಪ್ರತಿಬಿಂಬ ಭಾವವೂ ಇರುವುವೆಂಬ ಉದ್ಭಟನ ವಿಸ್ಪಷ್ಟ ಭೇದಕಲ್ಪನೆ ಮಾರ್ಗಕಾರನ ಗಮನವನ್ನು ಸೆಳೆದಿದೆ. ಎರಡು ಅಲಂಕಾರಗಳಿಗೂ ಭೇದವಿಲ್ಲ, ದೃಷ್ಟಾಂತ ನಿದರ್ಶನದ ನಾಮಾಂತರ ಮಾತ್ರ ಎಂಬ ಅಭೇದ ದೃಷ್ಟಿಯಾಗಲಿ ಎರಡೂ ಬೇರೆ ಬೇರೆ ಎಂಬ (ಉದ್ಭಟನ) ಭೇದದೃಷ್ಟಿಯಾಗಲಿ ಅವನಿಗೆ ಸರಿಯೆನಿಸಿಲ್ಲ. ಆದ್ದರಿಂದ ಸಮನ್ವಯ ದೃಷ್ಟಿಯನ್ನು ತಳೆದು, ನಿದರ್ಶನದ ಲಕ್ಷಣ ಲಕ್ಷ್ಯಗಳ ನಿರೂಪಣೆಯ ಕಡೆಯಲ್ಲಿ '.... ಬಗೆದು ಪೇಟಿಗೆ ಪರಮ ಕವೀಶರ್' (೩-೧೫೩) ಎಂದು ಉಪಸಂಹಾರ ಮಾಡಿದ್ದಾನೆ.... ಮಾರ್ಗಕಾರನು ಉದ್ಭಟನಂತೆ ದೃಷ್ಟಾಂತಕ್ಕೆ ಪ್ರತ್ಯೇಕ ಸ್ಥಾನವನ್ನು ಕಲ್ಪಿಸದಿದ್ದರೂ ಅದು ನಿದರ್ಶನದಲ್ಲಿಯೇ ಹುಟ್ಟಿದ ಒಂದು ಭೇದವೆಂಬುದನ್ನು ಗುರುತಿಸಿ, ಕನ್ನಡದಲ್ಲಿ ಅದನ್ನು ಬಳಕೆಗೆ ತರುವುದು ಒಳಿತೆಂದು ನಿರ್ದೇಶ ನೀಡಿದ್ದಾನೆ. ಅವನ ನಿರ್ದೇಶವನ್ನು ಅನುಸರಿಸಿಯೋ ಇಲ್ಲವೆ ಸಹಜ ಪ್ರೇರಣೆಯಿಂದಲೋ, ಹೇಗಾದರೂ ಆಗಲಿ, ಮುಂದಿನ ಕನ್ನಡ ಕಾವ್ಯ ಪರಂಪರೆಯಲ್ಲಿ ದೃಷ್ಟಾಂತದ ಸುಂದರ ಪ್ರಾಚುರ್ಯವನ್ನು ನಾವು ಕಾಣು ತ್ತೇವೆ."[189]

೨೧. ಸಹೋಕ್ತಿ: "ಗುಣ ಜಾತಿ ಮೊದಲಾದುವುಗಳಲ್ಲಿ ಸಂಬಂಧವಿದ್ದು, ಅವು ಒಂದನ್ನೊಂದು ಹೋಲುತ್ತ ಒಡನಿರುವುವು (ಅಥವಾ ಕ್ರಿಯೆಯಾದಲ್ಲಿ, ಒಡನೆ ನಡೆಯು ವುವು) ಎಂದು ವರ್ಣಿಸಿದರೆ ಅದು ಸಹೋಕ್ತಿ" (೩-೧೫೪).

ದಂಡಿ:

ಸಹೋಕ್ತಿಃ ಸಹಭಾವೇನ ಕಥನಂ ಗುಣಕರ್ಮಣಾಂ ॥ (೨-೩೫೦)

(ಗುಣಗಳನ್ನು ಅಥವಾ ಕ್ರಿಯೆಗಳನ್ನು ಜೊತೆಜೊತೆಯಾಗಿ ವರ್ಣಿಸುವುದು 'ಸಹೋಕ್ತಿ')

ಭಾಮಹ :

ತುಲ್ಯಕಾಲೇ ಕ್ರಿಯೇ ಯತ್ರ ವಸ್ತುದ್ವಯಸಮಾಶ್ರಯೇ
ಪದೇನೈಕೇನ ಕಥ್ಯೇತೇ ಸಹೋಕ್ತಿಃ ಸಾ ಮತಾ ಯಥಾ ॥ (೩–೩೯)

(ಎರಡು ವಸ್ತುಗಳಲ್ಲಿ ಏಕಕಾಲದಲ್ಲಿ ನಡೆಯುವ ಕ್ರಿಯೆಗಳನ್ನು ಒಂದೇ ಪದದಿಂದ ಹೇಳಿದರೆ 'ಸಹೋಕ್ತಿ' ಎಂಬ ಅಲಂಕಾರ.)

೩೨. ಸಂಕೀರ್ಣ (ಸಂಸೃಷ್ಟಿ) :

ಸಂಕೀರ್ಣಮೆಂಬುದುಕ್ತಾ
ಳಂಕಾರಸಮೂಹಸಂಕರಕ್ರಮಮಕ್ಕುಂ
ಶಂಕಾವಿರಹಿತಚಿತ್ತರ
ದಂ ಕಾವ್ಯದೊಳಿಂತು ಪೇೞ್ಗೆ ಕವಿವೃಷಭರ್ ॥ (೩–೧೫೬)

ದಂಡಿ :

ನಾನಾಲಂಕಾರಸಂಸೃಷ್ಟಿಃ ಸಂಸೃಷ್ಟಿಸ್ತು ನಿಗದ್ಯತೇ ॥
ಅಂಗಾಂಗಿಭಾವಾವಸ್ಥಾನಾಂ ಸರ್ವೇಷಾಂ ಸಮಕಕ್ಷ್ಯತಾ
ಇತ್ಯಲಂಕಾರ ಸಂಸೃಷ್ಟೇರ್ಲಕ್ಷಣೀಯಾ ದ್ವಯೀ ಗತಿಃ ॥ (೨.೩೫೯, ೬೦)

(ಈಗ ಅನೇಕ ಅಲಂಕಾರಗಳು ಕೂಡಿ ಆಗುವ 'ಸಂಸೃಷ್ಟಿ'ಯನ್ನು ವಿವರಿಸಲಾಗುತ್ತದೆ. ಅಲಂಕಾರಗಳಲ್ಲಿ ಒಂದು ಗೌಣ, ಇನ್ನೊಂದು ಪ್ರಧಾನ ಎಂಬ ರೀತಿಯ ಸಂಬಂಧವಿದ್ದರೆ ಅದು 'ಅಂಗಾಂಗಿಭಾವ'ದ ಸಂಸೃಷ್ಟಿ. ಎಲ್ಲವೂ ಸಮನಾದ ಪ್ರಾಧಾನ್ಯವುಳ್ಳವಾಗಿದ್ದರೆ ಅದು 'ಸಮಕಕ್ಷ್ಯ ಸಂಸೃಷ್ಟಿ.') ದಂಡಿ ಹೇಳುವ ಎರಡು ಪ್ರಕಾರಗಳನ್ನು ಮಾರ್ಗಕಾರ ಹೆಸರಿಸದಿದ್ದರೂ ಎರಡಕ್ಕೂ ಉದಾಹರಣೆ ಕೊಟ್ಟಿದ್ದಾನೆ.

೩೩. ಪರಿವೃತ್ತಿ :

ಪರಿವೃತ್ತಿಯೆಂಬುದಕ್ಕುಂ
ನಿರುಪಮಮರ್ಥಸ್ವರೂಪವಿನಿಮಯವಚನಂ
ಪರಮಗುಣೋದಯಂ... ॥ (೧–೧೫೮)

ದಂಡಿ :

ಅರ್ಥಾನಾಂ ಯೋ ವಿನಿಮಯಃ ಪರಿವೃತ್ತಿಸ್ತು ಸಾ ಸ್ಮೃತಾ ॥ (೨–೩೫೧)

(ವಸ್ತುಗಳ ವಿನಿಮಯದ ವರ್ಣನೆಯೇ 'ಪರಿವೃತ್ತಿ' ಎಂಬ ಅಲಂಕಾರ)

೩೪: ವ್ಯಾಜಸ್ತುತಿ : ಗುಣಸಮೂಹವನ್ನು ದೋಷವೆಂದು ತೋರುವ ಹಾಗೆ ಅತಿಶಯವಾಗಿ ಹೇಳುವುದು ವ್ಯಾಜಸ್ತುತಿ ; ಇದು ಶಬ್ದಾರ್ಥಗಳಿಂದ ನಿಶ್ಚಿತಗೊಂಡಿದೆ" (೩–೧೬೦) ಇದು ದಂಡಿಯ 'ಕಾವ್ಯಾದರ್ಶ'ದಲ್ಲಿ ಹೀಗೆ ಬಂದಿದೆ : "ನಿಂದೆ ಮಾಡುವ ಸೋಗಿನಿಂದಲೇ ಸ್ತೋತ್ರ ಮಾಡಿದರೆ ಅದು 'ವ್ಯಾಜಸ್ತುತಿ'ಯೆನಿಸುತ್ತದೆ. ದೋಷಗಳಂತೆ ತೋರಿಸಿ

ಕೊಳ್ಳುತ್ತಾ ಗುಣಗಳೇ ಇಲ್ಲಿ ಸಾನ್ನಿಧ್ಯವನ್ನು ಹೊಂದಿರುತ್ತವೆ....ಹೀಗೆ ಶ್ಲೇಷದಿಂದ ಕೂಡಿದ ಹಾಗೂ ಬೇರೆ ಅಲಂಕಾರಗಳಿಂದ ಕೂಡಿದ 'ವ್ಯಾಜಸ್ತುತಿ' ಪ್ರಕಾರಗಳ ಅನಂತ ವಿಸ್ತಾರವನ್ನು ಓದುಗರೇ ಊಹಿಸಿಕೊಳ್ಳಬೇಕು" (೨–೩೪೩, ೩೪೭).

೨೫. ಹೇತೂಕ್ತಿ :

ಕಾರಣಮಾಗಿರ್ಪುದಳಂ
ಕಾರಂ ಹೇತೂಕ್ತಿಯೆಂಬುದದು ತಾಂ ನಾನಾ
ಕಾರಂ ಜ್ಞಾಪಕಸದಳಂ
ಕಾರಸುಮಾರ್ಗಂ... ॥ (೩–೧೬೩)

ದಂಡಿ :

ಹೇತುಶ್ಚ ಸೂಕ್ಷ್ಮಲೇಶೌ ಚ ವಾಚಾಮುತ್ತಮಭೂಷಣಂ
ಕಾರಕಜ್ಞಾಪಕೌ ಹೇತೂ ತೌ ಚಾನೇಕ ವಿಧೌ ಯಥಾ ॥ (೨–೨೩೫)

(ಹೇತು, ಸೂಕ್ಷ್ಮ, ಮತ್ತು ಲೇಶ—ಇವು ಮೂರೂ ಉತ್ತಮವಾದ ಅರ್ಥಾಲಂಕಾರಗಳು. ಮತ್ತೆ 'ಹೇತು' ಅಥವಾ ಕಾರಣ ಎಂಬುದು ಎರಡು ಬಗೆ: (೧) 'ಕಾರಕ' ಅಥವಾ ಉತ್ಪತ್ತಿಕಾರಕವಾದುದು ಮತ್ತು (೨) 'ಜ್ಞಾಪಕ' ಅಥವಾ ಸೂಚಕ ಅಥವಾ ಸಾಧಕವಾದುದು ಎಂದು. ಅವೆರಡೂ ಅನೇಕ ಪ್ರಕಾರಗಳನ್ನೊಳಗೊಳ್ಳುತ್ತವೆ.)

೨೬. ವಿಭಾವನೆ: "ಕಾರಣವನ್ನು ಬಿಟ್ಟು ನಿಜಸಂಸ್ಕಾರ ಗುಣವಿಶೇಷದಿಂದ, ಎಂದರೆ ಅದರ ಸಹಜ ಗುಣವಿಶೇಷದಿಂದಲೇ (ಕಾರ್ಯವನ್ನು ಅಥವಾ ಫಲವನ್ನು) ಸಂಗಡಿಸುವುದು ಅಥವಾ ಆದಂತೆ ಭಾವಿಸುವುದು (ವಿಭಾವಿಸುವುದು) ವಿಭಾವನೆ' (೩–೧೬೮). ಇದರ ಸಂವಾದಿ ಭಾಗ ದಂಡಿಯಲ್ಲಿ ಹೀಗಿದೆ: "ಲೋಕಪ್ರಸಿದ್ಧ ಕಾರಣದ ಅಭಾವವನ್ನು ಎತ್ತಿ ಹೇಳುವ ಮೂಲಕ ಒಂದು ಕಾರ್ಯಕ್ಕೆ ಮತ್ತಾವುದೋ (ಅತಿಗೂಢ ಅಥವಾ ಕಲ್ಪಿತ) ಕಾರಣಾಂತರವಿರುವುದೆಂದೋ ಇಲ್ಲವೇ ಆ ಕಾರ್ಯವು ಆ ವಸ್ತುವಿನ ಸ್ವಭಾವವಷ್ಟೇ ಎಂದೋ ಮನಸ್ಸಿನಲ್ಲಿ ಮಾಡಿಕೊಳ್ಳುವಂತಿದ್ದರೆ ಅದು 'ವಿಭಾವನೆ'" (೨–೧೯೯).

೨೭. ಲೇಶ :

ಗುಣದೊಳಮುಱಿಪುವುದಿನಿಸವ
ಗುಣಮುಂ ದೋಷದೊಳಮಿನಿಸು ಗುಣಮುಂ ತಂದಿ
ರ್ದಣಿಸುವುದು ಲೇಶಮೆಂಬುದು ॥ (೩–೧೭೦)

ದಂಡಿ :

ಲೇಶೋ ಲೇಶೇನ ನಿರ್ಭಿನ್ನವಸ್ತುರೂಪನಿಗೂಹನಂ ॥

(ಒಂದು ನೆವ ಹೇಳಿ ಪ್ರಕಟವಾದ ಗುಪ್ತ ವಿಷಯದ ನಿಜವನ್ನು ಮರೆಸುವುದೇ 'ಲೇಶ')

೨೮. ಉದಾತ್ತ : "ವಿಶೇಷವಾಗಿ ನಿರ್ದಿಷ್ಟ ವ್ಯಕ್ತಿಯ ಮನದ ಹಿರಿಮೆಯನ್ನು ಅದಕ್ಕೂ ಅತಿಶಯವಾಗಿ ವೈಭವದ ಹಿರಿಮೆಯನ್ನೂ ವಿಶ್ಲೇಷಿಸಿ ಹೇಳುವುದು ಉದಾತ್ತಾಲಂಕಾರ" (೩–೧೭೩).

"ಅಭಿಪ್ರಾಯದ ಇಲ್ಲವೆ ಸಮೃದ್ಧಿಯ ಅತ್ಯಂತ ಆಧಿಕ್ಯವನ್ನೆ ವಿದ್ವಾಂಸರು 'ಉದಾತ್ತ' ವೆಂಬ ಅಲಂಕಾರವೆನ್ನುವರು—ಎಂದು 'ಕಾವ್ಯಾದರ್ಶ'ದ ಮಾತು (೨–೩೦೦). ದಂಡಿ 'ಉದಾತ್ತ'ಕ್ಕೆ ಎರಡೇ ಲಕ್ಷ್ಯಪದ್ಯಗಳನ್ನು ಕೊಟ್ಟಿದ್ದರೆ ಮಾರ್ಗಕಾರ ಎಂಟನ್ನು ಕೊಟ್ಟಿದ್ದಾನೆ. ಇವು ಸ್ವತಂತ್ರ ಪದ್ಯಗಳು. ಬಹುಶಃ ಇವುಗಳಲ್ಲಿ ಕವಿ ನೃಪತುಂಗನ 'ಉದಾತ್ತ' ಗುಣಗಳನ್ನು ವರ್ಣಿಸಿರಬಹುದೆಂದು ಊಹೆ.

೨೯. ಅಪಹ್ನುತಿ : "ಅತಿಶಯವಾಗಿ ಕಾಣುವ ವಸ್ತುವಿನ ಯಥಾರ್ಥತೆಯನ್ನು ಮರೆಯಿಸಿ, ಇನ್ನೊಂದು ಅರ್ಥವನ್ನು ಮುಂದಿಟ್ಟು ಹೇಳುವುದು ಅಪಹ್ನುತ್ಯಲಂಕಾರ" (೩–೧೮೨).

ದಂಡಿ :

> ಅಪಹ್ನುತಿರಪಹ್ನುತ್ಯ ಕಿಂಚಿದನ್ಯಾರ್ಥದರ್ಶನಂ ॥ (೨–೩೦೪)

(ಇರುವ ಅಂಶವೊಂದನ್ನು ಅಲ್ಲಗಳೆದು ಮತ್ತಾವುದೋ ಒಂದನ್ನು ಇರುವಂತೆ ಕಲ್ಪಿಸುವುದೇ 'ಅಪಹ್ನುತಿ')

ಭಾಮಹ :

> ಅಪಹ್ನುತಿರಭೀಷ್ಟಾ ಚ ಕಿಂಚಿದಂತರ್ಗತೋಪಮಾ
> ಭೂತಾರ್ಥಾಪಹ್ನವಾದಸ್ಯಾಃ ಕ್ರಿಯತೇ ಚಾಭಿಧಾ ಯಥಾ (೩. ೨೧)

(ಸಾದೃಶ್ಯವನ್ನು ಪ್ರಕಾರಾಂತರದಿಂದ ಸೂಚಿಸುವುದಕ್ಕಾಗಿ ಇದ್ದುದನ್ನು ಇಲ್ಲವೆನ್ನುವುದೇ ಅಪಹ್ನುತಿ)

ದಂಡಿ 'ಅಪಹ್ನುತಿ'ಯಲ್ಲಿ 'ವಿಷಯನಿಹ್ನುತಿ', 'ಸ್ವರೂಪಾಪಹ್ನುತಿ' ಎಂದು ಎರಡು ಪ್ರಭೇದಗಳನ್ನು ಹೇಳಿದ್ದರೆ, ಮಾರ್ಗಕಾರ 'ಮೋಹಾಪೋಹ (೩–೧೮೩), 'ಧರ್ಮಾಪೋಹ' (–೧೮೫), 'ಸುಗುಣಾಪೋಹ (–೧೮೭) ಎಂದು ಪ್ರಕಾರಗಳನ್ನು ಹೇಳಿದ್ದಾನೆ.

೩೦. ರಸವದ್ : 'ರಸವದಲಂಕಾರ' ನಿರೂಪಣೆಯಲ್ಲಿ ಮಾರ್ಗಕಾರನು ಭಾಮಹ ದಂಡಿಯರನ್ನು ಅನುಸರಿಸಿದ್ದಾನೆ. ಭಾಮಹಾದಿ ಪ್ರಾಚೀನಾಲಂಕಾರಿಕರ ದೃಷ್ಟಿಯಲ್ಲಿ ರಸವೂ ಒಂದು ಅಲಂಕಾರವಾಗಿತ್ತು ; ಅದನ್ನು ಅವರು 'ರಸವದಲಂಕಾರ'ವೆಂದು ಕರೆದರು. ನವೀನಾಲಂಕಾರಿಕರ ಪ್ರಕಾರ ರಸ ಅಲಂಕಾರವಲ್ಲ, ಅಲಂಕಾರ್ಯ ; ಅಂಗವಲ್ಲ, ಅಂಗಿ. ಆದ್ದರಿಂದ, ಪ್ರಾಚೀನಾಲಂಕಾರಿಕರಿಗೆ ರಸತತ್ತ್ವದ ಸ್ಪಷ್ಟಕಲ್ಪನೆಯೇ ಇರಲಿಲ್ಲವೆಂದು ನವೀನಾಲಂಕಾರಿಕರ ಆಕ್ಷೇಪಣೆ. ಇದು ಸಂಪೂರ್ಣ ಸತ್ಯವಲ್ಲ. ಪ್ರಾಚೀನರ ಅಲಂಕಾರಕಲ್ಪನೆಯೇನೆಂಬುದನ್ನು ನಾವು ಗಮನಿಸಬೇಕು. 'ಅಲಂಕಾರ' ಶಬ್ದಕ್ಕೆ ಎರಡು ಅರ್ಥಗಳಿವೆ : ಉಪಮಾರೂಪಕಾದಿ ಶಬ್ದಾರ್ಥ ವೈಚಿತ್ರ್ಯಗಳು ಎಂಬ ಸಂಕುಚಿತಾರ್ಥ

ವೊಂದು; ಕಾವ್ಯಸೌಂದರ್ಯವೆಂಬ ವಿಶಾಲಾರ್ಥವೊಂದು (ಈ ಎರಡರ್ಥಗಳೂ ಪ್ರಾಚೀನಾಲಂಕಾರಿಕರಿಂದ ವಿವಕ್ಷಿತ). 'ಸೌಂದರ್ಯಮಲಂಕಾರಃ' (ಸೌಂದರ್ಯವೆ ಅಲಂಕಾರ —ವಾಮನ), 'ಚಾರುತ್ವಮಲಂಕಾರಃ' (ಚಾರುತ್ವವೆ ಅಲಂಕಾರ—ಮಹಿಮಭಟ್ಟ), 'ಕಾವ್ಯಶೋಭಾಕರಾನ್ ಧರ್ಮಾನಲಂಕಾರಾನ್ ಪ್ರಚಕ್ಷತೇ' (ಕಾವ್ಯಶೋಭಾಕರ ಧರ್ಮಗಳೆ ಅಲಂಕಾರಗಳು—ದಂಡಿ)—ಮುಂತಾದ ಮಾತುಗಳಲ್ಲಿ 'ಅಲಂಕಾರ'ಕ್ಕೆ ವ್ಯಾಪಕಾರ್ಥವಿದೆ. ಈ ಅರ್ಥದಲ್ಲಿ ಕಾವ್ಯಶೋಭಾಕರವಾದುದೆಲ್ಲ ಅಲಂಕಾರ; ರಸವೂ ಒಂದು ಅಲಂಕಾರ : 'ರಸವದಲಂಕಾರ'. ಆದ್ದರಿಂದ ಪ್ರಾಚೀನರು ತಪ್ಪನ್ನೇನೂ ಮಾಡ ಲಿಲ್ಲ. (ಅವರು ಕಾವ್ಯಕ್ಕೆ ಸೊಗಸು ಕೊಡತಕ್ಕುದ್ದನ್ನೆಲ್ಲ ಅಲಂಕಾರವರ್ಗದಲ್ಲಿ ಪಟ್ಟಿ ಮಾಡುತ್ತ ಹೋದರು, ಯಾವುದು ಮುಖ್ಯ ಯಾವುದು ಅಮುಖ್ಯ ಎಂಬ ತಾರತಮ್ಯ ವಿವೇಕವನ್ನು ತೋರಲಿಲ್ಲ ಎಂಬುದಷ್ಟೆ ನಾವು ಅವರ ಮೇಲೆ ಹೊಡಬಹುದಾದ ಆಕ್ಷೇಪಣೆ).

ಈ ಬಗ್ಗೆ ಕುವೆಂಪು ಅವರ ಕೆಲವು ವಿಚಾರಗಳನ್ನು ನೋಡಬಹುದು :

"ಯಾವ ಅನುಭವವನ್ನು ಪ್ರಾಚೀನ ಕಾವ್ಯಮೀಮಾಂಸಕರು ಸೌಂದರ್ಯ ಎಂಬ ಹೆಸರಿನಿಂದ ಗುರುತಿಸಿದರೂ ಅದನ್ನೆ ನವೀನರು ರಸ ಎಂಬ ಸಂಕೇತದಿಂದ ಕರೆದಿದ್ದಾರೆ. ಸೌಂದರ್ಯಾನುಭವ ಎಂದು ಸಹೃದಯರು ಗುರುತಿಸುವ ಪ್ರಜ್ಞಾವಸ್ಥೆಯನ್ನು ಶಾಸ್ತ್ರೀಯ ವಾಗಿ ಪರ್ಯಾಲೋಚಿಸಲು ಹೊರಟ ಕಾವ್ಯಮೀಮಾಂಸಕರು ಶಾಸ್ತ್ರಭಾಷೆಯ ಪ್ರಕ್ರಿಯಾ ಸೌಕರ್ಯಕ್ಕಾಗಿ 'ಅಲಂಕಾರ' ಎಂದು ಕರೆದರು. ಸೌಂದರ್ಯವೆ ಅಲಂಕಾರ; ಅನುಭವದ ಮತ್ತು ಅದನ್ನು ಅಭಿವ್ಯಕ್ತಗೊಳಿಸುವ ಉಕ್ತಿಯ ಸೌಂದರ್ಯಾಂಶದಿಂದಲೆ ಕಾವ್ಯತ್ವ ಉಂಟಾಗುತ್ತದೆ ಎಂದರು. ಆ ಸೌಂದರ್ಯಾಂಶವನ್ನು ಚಾರುತ್ವ, ರಮಣೀಯತೆ, ವಕ್ರತೆ, ಆಹ್ಲಾದ, ಆನಂದ ಎಂದು ನಾನಾ ಪದಗಳಿಂದ ನಿರ್ದೇಶಿಸಿದ್ದಾರೆ.

ಪ್ರಾಚೀನರಲ್ಲಿ ಸೌಂದರ್ಯ ಎಂಬ ಪದದ ಅರ್ಥವ್ಯಾಪ್ತಿ ವಿಶಾಲವಾಗಿತ್ತು; ಚಾರುತ್ವ, ರಮಣೀಯತೆ, ವಕ್ರತೆ, ಆಹ್ಲಾದ, ಆನಂದ ಮೊದಲಾದ ಪದಗಳಿಂದ ಸೂಚಿತವಾಗುವ ಅನುಭವ ವಿಶೇಷಗಳೆಲ್ಲವನ್ನೂ ಅದು ಒಳಕೊಳ್ಳುವಂತಿತ್ತು. ಆ ಅರ್ಥದಲ್ಲಿಯೆ ಸೌಂದರ್ಯಾನುಭವವಿಲ್ಲದೆ ಕಾವ್ಯವಿಲ್ಲ ಎಂದದ್ದು. ಕವಿಯ ಸೌಂದರ್ಯಾನುಭೂತಿಯೆ ಕಾವ್ಯಸಾಮಗ್ರಿ; ಆದ್ದರಿಂದ ಕಾವ್ಯವೆಲ್ಲ ಸೌಂದರ್ಯಾನುಭವ ಎಂದರು. ಸೌಂದರ್ಯ ಎಂಬ ಪದಕ್ಕೆ ಶಾಸ್ತ್ರದ ಪರಿಭಾಷೆ 'ಅಲಂಕಾರ' ಎಂದಿದ್ದುದರಿಂದ ಅಲಂಕಾರವಿಲ್ಲದೆ ಕಾವ್ಯವಿಲ್ಲವೆಂದರು; ಕಾವ್ಯವೆಲ್ಲ ಅಲಂಕಾರದಿಂದಲೆ ಗ್ರಾಹ್ಯವಾಗುತ್ತದೆ ಎಂದರು...."

"....'ರಸ' ಸ್ಥಾಯಿಭಾವದಿಂದಲೆ ನಿಷ್ಪನ್ನ. ನಿಸರ್ಗದ ಇತರ ಅನೇಕ ವ್ಯಾಪಾರ ವರ್ಣನೆಗಳಿಂದ ಉಂಟಾಗುವುದು ಸೌಂದರ್ಯಾನುಭವವಾದೀತೆ ಹೊರತು ರಸಾನುಭವ ವಾಗಲಾರದು. ಸ್ಥಾಯಿಭಾವದಿಂದ ನಿಷ್ಪನ್ನವಾಗುವ ರಸಾನುಭವವೂ ಆಹ್ಲಾದ ಕಾರಿಯೆ, ಅರಣ್ಯ ಪರ್ವತ ಪಕ್ಷಿ ಜಲಪಾತಾದಿ ವರ್ಣನೆಗಳಿಂದುಂಟಾಗುವ ಆಹ್ಲಾದ ದಂತೆಯೆ. ಮನುಷ್ಯನ ಸ್ಥಾಯಿಭಾವವ್ಯಾಪಾರ ಮತ್ತು ನಿಸರ್ಗದ ರಮಣೀಯ ವ್ಯಾಪಾರ ಎರಡರ ಆಹ್ಲಾದವನ್ನೂ ಸೌಂದರ್ಯಾನುಭವ ಎಂಬ ಶಬ್ದ ಒಳಕೊಳ್ಳುತ್ತದೆ. ಆದ್ದರಿಂದಲೆ

ಸೌಂದರ್ಯಾನುಭವವು ರಸಾನುಭವವನ್ನು ತನ್ನೊಂದು ಅಂಗವಾಗಿ ಸ್ವೀಕರಿಸುತ್ತದೆ. ಸೌಂದರ್ಯವನ್ನೆ ಅಲಂಕಾರ ಎಂಬ ಪರಿಭಾಷೆಯಿಂದ ಕರೆದ ಕಾವ್ಯಮೀಮಾಂಸಕರು ರಸಾನುಭವವನ್ನು ಆ ಅಲಂಕಾರದ ಒಂದಂಗವನ್ನಾಗಿ ಪರಿಗಣಿಸಿದುದು ಅತ್ಯಂತ ತರ್ಕಬದ್ಧವಾಗಿದೆ. ಆದ್ದರಿಂದಲೆ ರಸಾನುಭವವು ರಸವದಲಂಕಾರ ಎಂಬ ಹೆಸರಿನಿಂದ ಅಲಂಕಾರಗಳಲ್ಲಿ ಮಧ್ಯೆ ಪ್ರವೇಶ ಪಡೆದಿತ್ತು."[190]

ಭಾಮಹ 'ರಸವದಲಂಕಾರ'ದ ಲಕ್ಷಣ ಲಕ್ಷ್ಯಗಳನ್ನು ಹೀಗೆ ಹೇಳಿದ್ದಾನೆ: "ಶೃಂಗಾರವೇ ಮೊದಲಾದ ರಸಗಳು ಎಲ್ಲಿ ಸ್ಪಷ್ಟವಾಗಿ ಕಂಗೊಳಿಸುವುವೋ ಅಲ್ಲಿ 'ರಸವದ್' ಎಂಬ ಅಲಂಕಾರವಿರುತ್ತದೆ. 'ಮುಚ್ಚುಮರೆಯಿಲ್ಲದೆ ದೇವಿಯು ಯತಿ(?)ಯೊಡನೆ ಸಮಾಗಮವನ್ನು ಪಡೆದಳು' ಎಂಬುದು ಉದಾಹರಣೆ (೩-೬).

ಭಾಮಹ ಶೃಂಗಾರದ ವಿನಾ ಮತ್ತಾವ ರಸಗಳನ್ನೂ ಹೆಸರಿಸಿಲ್ಲ. ದಂಡಿಯಾದರೆ "ರಸವದ್ ರಸಪೇಶಲಂ" (೨–೨೭೫) (ರಸದಿಂದ ಹರ್ಷಕಾರಿಯಾಗಿರುವುದೇ 'ರಸವದ್' ಎಂಬ ಅಲಂಕಾರ) ಎಂದು ಹೇಳಿ, ಶೃಂಗಾರ ರೌದ್ರ ವೀರ ಕರುಣ ಬೀಭತ್ಸ ಹಾಸ್ಯ ಅದ್ಭುತ ಭಯಾನಕ ಎಂಬ ಎಂಟು ರಸಗಳಿಗೂ ಲಕ್ಷ್ಯಗಳನ್ನು ಕೊಟ್ಟು, ಕಡೆಯಲ್ಲಿ ಹೀಗೆ ಹೇಳುತ್ತಾನೆ: "ವಾಕ್ಯದ ಮಾಧುರ್ಯಗುಣವನ್ನು ಹೇಳುವಾಗ, ಅಗ್ರಾಮ್ಯತೆಯಿಂದ ಬರುವ ರಸವನ್ನು ನಿರ್ದೇಶಿಸಲಾಯಿತು. ಇಲ್ಲೆಂದರೆ, ಶೃಂಗಾರಾದಿ ಅಷ್ಟರಸಗಳಿಂದ ಉಂಟಾಗುವ ವಾಣಿಯ ರಸವತ್ತೆಯನ್ನು ಎಂದರೆ ರಸವದಲಂಕಾರವನ್ನು ವಿವರಿಸಲಾಗಿದೆ" (೨–೨೯).

ದಂಡಿಯಲ್ಲಿ ಎಂಟೇ ರಸಗಳು ಉಕ್ತವಾಗಿರುವುದನ್ನು ಗಮನಿಸಬೇಕು; ಶಾಂತರಸದ ಪ್ರಸಕ್ತಿ ಅವನಲ್ಲಿಲ್ಲ. ಆದರೆ ದಂಡಿಯನ್ನು ಅನುಸರಿಸುವ ಕವಿರಾಜಮಾರ್ಗಕಾರ 'ಶಾಂತ'ವನ್ನು ಸ್ವತಂತ್ರವಾಗಿ ಸೇರಿಸಿ ಒಂಬತ್ತು ರಸಗಳನ್ನು ಹೇಳಿ, ಅವುಗಳಿಗೆ ಲಕ್ಷ್ಯಪದ್ಯಗಳನ್ನು ಕೊಟ್ಟಿದ್ದಾನೆ. ಅಂತೂ ದಂಡಿಯ 'ಅಷ್ಟರಸ'ಗಳು ಮಾರ್ಗಕಾರನಲ್ಲಿ 'ನವರಸ'ಗಳಾಗಿವೆ:

ನವವಿಧರಸಂಗಳಂ ಮನ
ಕೆವರೆ ನಿರೂಪಿಸುವ ವಚನವಿರಚನೆ ರಸವದ್
ವಿವಿಧಾಳಂಕಾರಂ...॥

ವೀರಾದ್ಭುತ ಕರುಣಾ ಶೃಂ
ಗಾರ ಭಯಾನಕ ಸರೌದ್ರಬೀಭತ್ಸಮಹಾ
ಸಾರತರಹಾಸ್ಯ ಶಾಂತಾ
ಧಾರಂ ನವವಿಧವಿಕಲ್ಪಮಾ ರಸಮಾರ್ಗಂ ॥ (೩–೧೮೭, ೮೮)

ಶಾಂತರಸಕ್ಕೆ ಮಾರ್ಗಕಾರ ಕೊಟ್ಟಿರುವ ಉದಾಹರಣೆಯಿದು:

ಮಿಗೆ ರಣದೊಳ್ ಪರಿಚಿತಮಾ
ದ್ವಿಗುಣಮುದೋರಂತೆ ಮಟ್ಟಮಿರ್ದುದು ಮತ್ತಂ

ವಿಗತವಿಕಾರಾಕಾರಂ
ಸೊಗಯಿಸುಗುಂ ನಿನ್ನ ರೂಪು ಶಾಂತಾಧಾರಂ ॥ (೩-೧೯೭)

ಭರತನ 'ನಾಟ್ಯಶಾಸ್ತ್ರ'ದಲ್ಲಿ ಶಾಂತರಸದ ಸುಳಿವಿಲ್ಲ. ಅದನ್ನು ಹೇಳುವ ಭಾಗ ಪ್ರಕ್ಷಿಪ್ತವೆಂದು ವಿದ್ವಾಂಸರ ಮತ. ('ನವರಸಾಶ್ರಯಂ' ಎಂಬ ಮಾತು 'ನಾಟ್ಯಶಾಸ್ತ್ರ'ದಲ್ಲಿ ಒಂದೆಡೆ ಬರುತ್ತದೆ; ಅದು ತಪ್ಪು, 'ಭಾವರಸಾಶ್ರಯಂ' ಎಂಬುದು ಸರಿಯಾದ ಪಾಠ ಎಂದು ಹೇಳಲಾಗಿದೆ). 'ಅಮರಕೋಶ'ದಲ್ಲೂ ಎಂಟೇ ರಸಗಳು ಉಕ್ತವಾಗಿವೆ. ದಂಡಿ ಭಾಮಹರಲ್ಲಿ 'ಶಾಂತ'ದ ಪ್ರಸ್ತಾಪವಿಲ್ಲ; ಅಲಂಕಾರಶಾಸ್ತ್ರದಲ್ಲಿ ಅದರ ಉಲ್ಲೇಖ ಮೊಟ್ಟಮೊದಲಿಗೆ ಕಾಣಿಸಿಕೊಳ್ಳತಕ್ಕದ್ದು ಉದ್ಭಟನ 'ಕಾವ್ಯಾಲಂಕಾರ ಸಾರಸಂಗ್ರಹ'ದಲ್ಲಿ. ಹೀಗಿರುವಾಗ ಕವಿರಾಜಮಾರ್ಗಕಾರನ ಶಾಂತರಸನಿರೂಪಣೆಗೆ ಪ್ರೇರಣೆ ಯಾವುದು? "ಶಾಂತರಸದ ಚರಿತ್ರೆಯನ್ನು ನೆನೆದರೆ, ಇಲ್ಲಿ ಅದು ಹೊಸದಾಗಿ ಸೇರಿರುವುದಕ್ಕೆ ಈ ಗ್ರಂಥಕಾರನು ಜೈನನಾಗಿದ್ದುದು ಕಾರಣವಾಗಿರಬಹುದೆನಿಸುತ್ತದೆ. ಉದ್ಭಟನ ನಿರೂಪಣೆಯನ್ನು ನೋಡಿಕೊಂಡು ಈತನು ಬರೆದನೆಂದು ಹೇಳಲು ಸಾಕಾದಷ್ಟು ಆಧಾರವಿಲ್ಲ" ಎನ್ನುತ್ತಾರೆ ತೀ. ನಂ. ಶ್ರೀ.[191] "ಮಾರ್ಗಕಾರನು ಜೈನನಾಗಿದ್ದುದರ ಜೊತೆಗೆ ಕ್ರಿ.ಶ. ೫ನೆಯ ಶ.ದ 'ಅನುಯೋಗದ್ವಾರಸೂತ್ರ'ವೆಂಬ ಪ್ರಾಕೃತ ಜೈನಧರ್ಮಗ್ರಂಥವನ್ನು ಈ ವಿಚಾರದಲ್ಲಿ ಅನುಸರಿಸಿರಬಹುದೆಂದು ಊಹಿಸಬಹುದಾಗಿದೆ. ಆ ಗ್ರಂಥದಲ್ಲಿ 'ಶಾಂತರಸ'ವನ್ನು 'ಪ್ರಶಾಂತ' ಎಂಬ ನಾಮಾಂತರದಿಂದ ಕರೆದಿದೆ. ಮಾರ್ಗಕಾರನು....ರಸದ್ಯೋತಕ ವಚನವಿರಚನೆಯನ್ನು ವಿವರಿಸುವಾಗ "ಪ್ರಸನ್ನ ಗಂಭೀರತರೋಕ್ತಿಯಿಂ ಪ್ರಕಟಮಕ್ಕೆ ರಸಂ ಸಂತತಂ ಪ್ರಶಾಂತದಂ" ಎಂದು ಹೇಳಿ 'ಶಾಂತ'ವನ್ನು 'ಪ್ರಶಾಂತ' ಎಂದು ಹೆಸರಿಸಿರುವುದು ಈ ಊಹೆಗೆ ಬೆಂಬಲ ನೀಡುತ್ತದೆ"[192] ಎಂದು ಎಂ. ವಿ. ಸೀ. ಅವರು ಹೇಳುತ್ತಾರೆ.

ಆದರೆ ಉದ್ಭಟನಿಂದಲೇ ಪ್ರಭಾವಿತನಾಗಿ ಮಾರ್ಗಕಾರ ಶಾಂತರಸಕ್ಕೆ ಎಡೆಗೊಟ್ಟಿದ್ದಾನೆ ಎಂದರೆ ತಪ್ಪಾಗಲಾರದೇನೊ. ಎಂ. ವಿ. ಸೀ. ಅವರೆ ಮತ್ತೊಂದೆಡೆ ಹೀಗೆನ್ನುತ್ತಾರೆ: "ದಂಡಿ ರಸವದಲಂಕಾರವನ್ನು 'ಅಷ್ಟರಸಾಯತ್ತಾ' ಎಂದಿರುವಲ್ಲಿ ಮಾರ್ಗಕಾರನು (ಬಹುಶಃ ಉದ್ಭಟನಿಂದ ಸೂಚನೆಯನ್ನು ಸ್ವೀಕರಿಸಿ) ಶಾಂತರಸವನ್ನು ರಸಗಳ ಪಟ್ಟಿಗೆ ಸೇರಿಸಿ ನವರಸಕಲ್ಪನೆಯನ್ನು ನೆಲೆಗೊಳಿಸಿದ್ದು ಅತ್ಯಂತ ಗಮನಾರ್ಹ ಸಂಗತಿ."[193] ಚಿಟಗುಪ್ಪಿಯವರ ಊಹೆಯಿದು: "ದಂಡಿಯ ನಂತರ ಮತ್ತು ನೃಪತುಂಗನ ಪೂರ್ವಿಕನಾದ ಉದ್ಭಟನ ಕಾಲದಲ್ಲಿಯೇ ಭರತನ 'ನಾಟ್ಯಶಾಸ್ತ್ರ'ದಲ್ಲಿ ಅದು ಪ್ರಕ್ಷಿಪ್ತವಾಗಿತ್ತೆಂಬ ಅಭಿಪ್ರಾಯವನ್ನು ನೆನೆದರೆ ಕವಿರಾಜಮಾರ್ಗದಲ್ಲಿಯ ಶಾಂತರಸದ ಉಲ್ಲೇಖವು ಆ ಮೂಲಕ ಸಹ ಇರಬಹುದಾಗಿದೆ.[194]"

ಒಟ್ಟಿನಲ್ಲಿ, ರಸದ ವಿಷಯದಲ್ಲಿ ಭಾಮಹ ದಂಡಿಯರಿಗಿಂತ ಮುಂದೆ ಹೋಗಿದ್ದಾನೆ ಮಾರ್ಗಕಾರ. "ಕನ್ನಡ ಕವಿಗಳೂ ಲಾಕ್ಷಣಿಕರೂ 'ಕವಿರಾಜಮಾರ್ಗ'ದ ಕಾಲದಿಂದ

ಲಾದರೂ ಕಾವ್ಯದಲ್ಲಿ ನವರಸಗಳಿಗೆ ನಿರ್ವಿವಾದವಾದ ಸ್ಥಾನವನ್ನು ಕೊಟ್ಟಿದ್ದರೆಂಬುದು ತಿಳಿಯುತ್ತದೆ."[195]

ಇನ್ನೊಂದೆರಡು ಅಂಶಗಳನ್ನು ಲೆಕ್ಕಿಸಬೇಕು. 'ಕರುಣರಸ'ವನ್ನು ಮಾರ್ಗಕಾರ 'ಕರುಣಾರಸ'ವೆಂದಿದ್ದಾನೆ. ಶಾಸ್ತ್ರೀಯವಾಗಿ ನೋಡಿದರೆ ಇದು ತಪ್ಪು. ಆದರೆ ಕೆ. ಕೃಷ್ಣಮೂರ್ತಿಯವರು ತಮ್ಮದೇ ಆದ ವಾದವನ್ನು ಮುಂದಿಟ್ಟು, "ನೃಪತುಂಗನು ರಸಗಳ ವಿಷಯದಲ್ಲಿ ಕರುಣಾರಸದ ಒಂದು ಹೊಸ ಅಭಿಪ್ರಾಯವನ್ನೇ ಮಂಡಿಸಿರುವ ನೆಂಬ ತೀರ್ಮಾನಕ್ಕೆ ಬಂದು ಮುಟ್ಟಬೇಕಾಗಿದೆ"[196] ಎಂದಿದ್ದಾರೆ. ಆದರೆ ಛಂದ ಸ್ಸೌಕರ್ಯಕ್ಕಾಗಿ 'ಕರುಣಾರಸ' ಎಂಬ ಮಾತು ಬಂದಿದೆಯೆ ಹೊರತು ಅದರಲ್ಲಿ ವಿಶೇಷಾರ್ಥವಿದೆಯೆನಿಸುವುದಿಲ್ಲ. ೨-೯೯ರಲ್ಲೂ 'ಕರುಣಾರಸ' ಎಂದೇ ಇದೆ. ಕವಿ ರಸದ ಹೆಸರನ್ನು ವಾಚ್ಯವಾಗಿ ಹೇಳಿದರೆ 'ಸ್ವಶಬ್ದವಾಚ್ಯತ್ವ'ವೆಂಬ ದೋಷವುಂಟಾಗುತ್ತದೆಂದು ಕೆಲವರು ಆಲಂಕಾರಿಕರ ಹೇಳಿಕೆ.[197] ಮಾರ್ಗಕಾರ ನವರಸಗಳಿಗೆ ಕೊಟ್ಟಿರುವ ಬಹು ಪಾಲು ಲಕ್ಷ್ಯಪದ್ಯಗಳಲ್ಲಿ ಆಯಾ ರಸದ ಹೆಸರು ಉಕ್ತವಾಗಿದೆ. ಅವನು ಲಕ್ಷ್ಯಗಳನ್ನು ಸ್ವತಃ ಉದ್ದೇಶಪೂರ್ವಕವಾಗಿ ಕಲ್ಪಿಸಿದ್ದರಿಂದ ಹೀಗಾಗಿದೆ.

೩೧. ಊರ್ಜಿತ : "ಒಬ್ಬ ವ್ಯಕ್ತಿಯ ಆತ್ಮಾಭಿಮಾನದ ಹೆಚ್ಚಳವನ್ನು ಪ್ರಕಾಶ ಗೊಳಿಸುವುದು ಊರ್ಜಿತಾಲಂಕಾರದ ಲಕ್ಷಣ" (೧-೧೯೮). ದಂಡಿಯಲ್ಲಿ ಇದು 'ಊರ್ಜಸ್ವಿ' : 'ಊರ್ಜಸ್ವಿರೂಢಾಹಂಕಾರಂ' (೨-೨೭೫) (ಗರ್ವವು ಅಭಿವ್ಯಕ್ತವಾಗು ತ್ತಿರುವುದೇ 'ಊರ್ಜಸ್ವಿ' ಎಂಬ ಅಲಂಕಾರ).

೩೨. ವ್ಯಾವೃತ್ತಿ : "ಮತ್ತೆ ಮತ್ತೆ ಆ ಮಾತನ್ನು (ಎಂದರೆ ಒಮ್ಮೆ ಹೇಳಿದ ಮಾತನ್ನು) ಎತ್ತಿ ಕಾಣುವಂತೆ ಹೇಳಿದರೆ, ಅದು 'ವ್ಯಾವೃತ್ತಿ'ಯೆನಿಸುವುದು" (೩-೨೦೦).

ಇದು ದಂಡಿಯಲ್ಲಿ 'ಆವೃತ್ತಿ' :

> ಅರ್ಥಾವೃತ್ತಿಃ ಪದಾವೃತ್ತಿರುಭಯಾವೃತ್ತಿರೇವ ಚ
> ದೀಪಕಸ್ಥಾನ ಏವೇಷ್ಟಮಲಂಕಾರತ್ರಯಂ ಯಥಾ ॥ (೨-೧೧೬)

(ಅರ್ಥಾವೃತ್ತಿ, ಪದಾವೃತ್ತಿ, ಉಭಯಾವೃತ್ತಿ—ಈ ಮೂರು ಅಲಂಕಾರಗಳು ದೀಪಕದ ಸ್ಥಾನದಲ್ಲಿ ಬರಬಹುದು. ದೀಪಕದಲ್ಲಿ ಅಧ್ಯಾಹಾರವಿರುತ್ತದೆ ; ಆವೃತ್ತಿಯಿರುವುದಿಲ್ಲ ; ಆದುದರಿಂದ 'ಆವೃತ್ತಿ' ಬೇರೆಯಾದ ಅಲಂಕಾರ.)

"ಈ ಅಲಂಕಾರವನ್ನು ದಂಡಿಯಾಗಲಿ ಭಾಮಹನಾಗಲಿ ಹೇಳಿಲ್ಲ"ವೆನ್ನುತ್ತಾರೆ ಎಂ. ವಿ. ಸೀ.[198] ಇದು ವಿಚಾರಣೀಯ. 'ಆವೃತ್ತಿ'ಗೆ ದಂಡಿ ಕೊಟ್ಟಿರುವ ಲಕ್ಷ್ಯಗಳನ್ನು ನೋಡಿದರೆ ಅವುಗಳಲ್ಲಿ 'ವ್ಯಾವೃತ್ತಿ'ಯ ಲಕ್ಷಣವೇ ಇರುವುದು ಕಂಡುಬರುತ್ತದೆ :

> ವಿಕಸನ್ತಿ ಕದಂಬಾನಿ ಸ್ಫುಟನ್ತಿ ಕುಟಜದ್ರುಮಾಃ
> ಉನ್ಮೀಲನ್ತಿ ಚ ಕಂದಲ್ಯೋ ದಲನ್ತಿ ಕಕುಭಾನಿ ಚ ॥
>
> ಉತ್ಕಂಠಯತಿ ಮೇಘಾನಾಂ ಮಾಲಾವೃಂದಂ ಕಲಾಪಿನಾಂ
> ಯೂನಾಂ ಚೋತ್ಕಂಠಯತ್ಯೇಷ ಮಾನಸಂ ಮಕರಧ್ವಜಃ ॥ (೨-೧೧೮, ೧೯)

ವಿಗತವಿಕಾರಾಕಾರಂ
ಸೊಗಯಿಸುಗುಂ ನಿನ್ನ ರೂಪು ಶಾಂತಾಧಾರಂ ॥ (೩-೧೯೬)

ಭರತನ 'ನಾಟ್ಯಶಾಸ್ತ್ರ'ದಲ್ಲಿ ಶಾಂತರಸದ ಸುಳಿವಿಲ್ಲ. ಅದನ್ನು ಹೇಳುವ ಭಾಗ ಪ್ರಕ್ಷಿಪ್ತವೆಂದು ವಿದ್ವಾಂಸರ ಮತ. ('ನವರಸಾಶ್ರಯಂ' ಎಂಬ ಮಾತು 'ನಾಟ್ಯಶಾಸ್ತ್ರ'ದಲ್ಲಿ ಒಂದೆಡೆ ಬರುತ್ತದೆ; ಅದು ತಪ್ಪು, 'ಭಾವರಸಾಶ್ರಯಂ' ಎಂಬುದು ಸರಿಯಾದ ಪಾಠ ಎಂದು ಹೇಳಲಾಗಿದೆ). 'ಅಮರಕೋಶ'ದಲ್ಲೂ ಎಂಟೇ ರಸಗಳು ಉಕ್ತವಾಗಿವೆ. ದಂಡಿ ಭಾಮಹರಲ್ಲಿ 'ಶಾಂತ'ದ ಪ್ರಸ್ತಾಪವಿಲ್ಲ; ಅಲಂಕಾರಶಾಸ್ತ್ರದಲ್ಲಿ ಅದರ ಉಲ್ಲೇಖ ಮೊಟ್ಟಮೊದಲಿಗೆ ಕಾಣಿಸಿಕೊಳ್ಳತಕ್ಕದ್ದು ಉದ್ಭಟನ 'ಕಾವ್ಯಾಲಂಕಾರ ಸಾರಸಂಗ್ರಹ'ದಲ್ಲಿ. ಹೀಗಿರುವಾಗ ಕವಿರಾಜಮಾರ್ಗಕಾರನ ಶಾಂತರಸನಿರೂಪಣೆಗೆ ಪ್ರೇರಣೆ ಯಾವುದು? "ಶಾಂತರಸದ ಚರಿತ್ರೆಯನ್ನು ನೆನೆದರೆ, ಇಲ್ಲಿ ಅದು ಹೊಸದಾಗಿ ಸೇರಿರುವುದಕ್ಕೆ ಈ ಗ್ರಂಥಕಾರನು ಜೈನನಾಗಿದ್ದುದು ಕಾರಣವಾಗಿರಬಹುದೆನಿಸುತ್ತದೆ. ಉದ್ಭಟನ ನಿರೂಪಣೆಯನ್ನು ನೋಡಿಕೊಂಡು ಈತನು ಬರೆದನೆಂದು ಹೇಳಲು ಸಾಕಾದಷ್ಟು ಆಧಾರವಿಲ್ಲ" ಎನ್ನುತ್ತಾರೆ ತೀ. ನಂ. ಶ್ರೀ.[191] "ಮಾರ್ಗಕಾರನು ಜೈನನಾಗಿದ್ದುದರ ಜೊತೆಗೆ ಕ್ರಿ.ಶ. ೫ನೆಯ ಶ.ದ 'ಅನುಯೋಗದ್ವಾರಸೂತ್ರ'ವೆಂಬ ಪ್ರಾಕೃತ ಜೈನಧರ್ಮಗ್ರಂಥವನ್ನು ಈ ವಿಚಾರದಲ್ಲಿ ಅನುಸರಿಸಿರಬಹುದೆಂದು ಊಹಿಸಬಹುದಾಗಿದೆ. ಆ ಗ್ರಂಥದಲ್ಲಿ 'ಶಾಂತರಸ'ವನ್ನು 'ಪ್ರಶಾಂತ' ಎಂಬ ನಾಮಾಂತರದಿಂದ ಕರೆದಿದೆ. ಮಾರ್ಗಕಾರನು....ರಸದ್ಯೋತಕ ವಚನವಿರಚನೆಯನ್ನು ವಿವರಿಸುವಾಗ "ಪ್ರಸನ್ನ ಗಂಭೀರತರೋಕ್ತಿಯಿಂ ಪ್ರಕಟಮಕ್ಕೆ ರಸಂ ಸಂತತಂ ಪ್ರಶಾಂತದಂ" ಎಂದು ಹೇಳಿ 'ಶಾಂತ'ವನ್ನು 'ಪ್ರಶಾಂತ' ಎಂದು ಹೆಸರಿಸಿರುವುದು ಈ ಊಹೆಗೆ ಬೆಂಬಲ ನೀಡುತ್ತದೆ"[192] ಎಂದು ಎಂ. ವಿ. ಸೀ. ಅವರು ಹೇಳುತ್ತಾರೆ.

ಆದರೆ ಉದ್ಭಟನಿಂದಲೇ ಪ್ರಭಾವಿತನಾಗಿ ಮಾರ್ಗಕಾರ ಶಾಂತರಸಕ್ಕೆ ಎಡೆಗೊಟ್ಟಿದ್ದಾನೆ ಎಂದರೆ ತಪ್ಪಾಗಲಾರದೇನೊ. ಎಂ. ವಿ. ಸೀ. ಅವರೆ ಮತ್ತೊಂದೆಡೆ ಹೀಗೆನ್ನುತ್ತಾರೆ: "ದಂಡಿ ರಸವದಲಂಕಾರವನ್ನು 'ಅಷ್ಟರಸಾಯತ್ತಾ' ಎಂದಿರುವಲ್ಲಿ ಮಾರ್ಗಕಾರನು (ಬಹುಶಃ ಉದ್ಭಟನಿಂದ ಸೂಚನೆಯನ್ನು ಸ್ವೀಕರಿಸಿ) ಶಾಂತರಸವನ್ನು ರಸಗಳ ಪಟ್ಟಿಗೆ ಸೇರಿಸಿ ನವರಸಕಲ್ಪನೆಯನ್ನು ನೆಲೆಗೊಳಿಸಿದ್ದು ಅತ್ಯಂತ ಗಮನಾರ್ಹ ಸಂಗತಿ."[193] ಚಿಟಗುಪ್ಪಿಯವರ ಊಹೆಯಿದು: "ದಂಡಿಯ ನಂತರ ಮತ್ತು ನೃಪತುಂಗನ ಪೂರ್ವಿಕನಾದ ಉದ್ಭಟನ ಕಾಲದಲ್ಲಿಯೇ ಭರತನ 'ನಾಟ್ಯಶಾಸ್ತ್ರ'ದಲ್ಲಿ ಅದು ಪ್ರಕ್ಷಿಪ್ತವಾಗಿತ್ತೆಂಬ ಅಭಿಪ್ರಾಯವನ್ನು ನೆನೆದರೆ ಕವಿರಾಜಮಾರ್ಗದಲ್ಲಿಯ ಶಾಂತರಸದ ಉಲ್ಲೇಖವು ಆ ಮೂಲಕ ಸಹ ಇರಬಹುದಾಗಿದೆ.[194]"

ಒಟ್ಟಿನಲ್ಲಿ, ರಸದ ವಿಷಯದಲ್ಲಿ ಭಾಮಹ ದಂಡಿಯರಿಗಿಂತ ಮುಂದೆ ಹೋಗಿದ್ದಾನೆ ಮಾರ್ಗಕಾರ. "ಕನ್ನಡ ಕವಿಗಳೂ ಲಾಕ್ಷಣಿಕರೂ 'ಕವಿರಾಜಮಾರ್ಗ'ದ ಕಾಲದಿಂದ

ಲಾದರೂ ಕಾವ್ಯದಲ್ಲಿ ನವರಸಗಳಿಗೆ ನಿರ್ವಿವಾದವಾದ ಸ್ಥಾನವನ್ನು ಕೊಟ್ಟಿದ್ದರೆಂಬುದು ತಿಳಿಯುತ್ತದೆ."[195]

ಇನ್ನೊಂದೆರಡು ಅಂಶಗಳನ್ನು ಲೆಕ್ಕಿಸಬೇಕು. 'ಕರುಣರಸ'ವನ್ನು ಮಾರ್ಗಕಾರ 'ಕರುಣಾರಸ'ವೆಂದಿದ್ದಾನೆ. ಶಾಸ್ತ್ರೀಯವಾಗಿ ನೋಡಿದರೆ ಇದು ತಪ್ಪು. ಆದರೆ ಕೆ. ಕೃಷ್ಣಮೂರ್ತಿಯವರು ತಮ್ಮದೇ ಆದ ವಾದವನ್ನು ಮುಂದಿಟ್ಟು, "ನೃಪತುಂಗನು ರಸಗಳ ವಿಷಯದಲ್ಲಿ ಕರುಣಾರಸದ ಒಂದು ಹೊಸ ಅಭಿಪ್ರಾಯವನ್ನೇ ಮಂಡಿಸಿರುವ ನೆಂಬ ತೀರ್ಮಾನಕ್ಕೆ ಬಂದು ಮುಟ್ಟಬೇಕಾಗಿದೆ"[196] ಎಂದಿದ್ದಾರೆ. ಆದರೆ ಛಂದ ಸ್ಸೌಕರ್ಯಕ್ಕಾಗಿ 'ಕರುಣಾರಸ' ಎಂಬ ಮಾತು ಬಂದಿದೆಯೆ ಹೊರತು ಅದರಲ್ಲಿ ವಿಶೇಷಾರ್ಥವಿದೆಯೆನಿಸುವುದಿಲ್ಲ. ೨-೯೯ರಲ್ಲೂ 'ಕರುಣಾರಸ' ಎಂದೇ ಇದೆ. ಕವಿ ರಸದ ಹೆಸರನ್ನು ವಾಚ್ಯವಾಗಿ ಹೇಳಿದರೆ 'ಸ್ವಶಬ್ದವಾಚ್ಯತ್ವ'ವೆಂಬ ದೋಷವುಂಟಾಗುತ್ತದೆಂದು ಕೆಲವರು ಆಲಂಕಾರಿಕರ ಹೇಳಿಕೆ.[197] ಮಾರ್ಗಕಾರ ನವರಸಗಳಿಗೆ ಕೊಟ್ಟಿರುವ ಬಹು ಪಾಲುಃ ಲಕ್ಷ್ಯಪದ್ಯಗಳಲ್ಲಿ ಆಯಾ ರಸದ ಹೆಸರು ಉಕ್ತವಾಗಿದೆ. ಅವನು ಲಕ್ಷ್ಯಗಳನ್ನು ಸ್ವತಃ ಉದ್ದೇಶಪೂರ್ವಕವಾಗಿ ಕಲ್ಪಿಸಿದ್ದರಿಂದ ಹೀಗಾಗಿದೆ.

೩೧. ಊರ್ಜಿತ: "ಒಬ್ಬ ವ್ಯಕ್ತಿಯ ಆತ್ಮಾಭಿಮಾನದ ಹೆಚ್ಚಳವನ್ನು ಪ್ರಕಾಶ ಗೊಳಿಸುವುದು ಊರ್ಜಿತಾಲಂಕಾರದ ಲಕ್ಷಣ" (೧-೯೮). ದಂಡಿಯಲ್ಲಿ ಇದು 'ಊರ್ಜಸ್ವಿ' : 'ಊರ್ಜಸ್ವಿರೂಢಾಹಂಕಾರಂ' (೨-೨೭೫) (ಗರ್ವವು ಅಭಿವ್ಯಕ್ತವಾಗು ತ್ತಿರುವುದೇ 'ಊರ್ಜಸ್ವಿ' ಎಂಬ ಅಲಂಕಾರ).

೩೨. ವ್ಯಾವೃತ್ತಿ : "ಮತ್ತೆ ಮತ್ತೆ ಆ ಮಾತನ್ನು (ಎಂದರೆ ಒಮ್ಮೆ ಹೇಳಿದ ಮಾತನ್ನು) ಎತ್ತಿ ಕಾಣುವಂತೆ ಹೇಳಿದರೆ, ಅದು 'ವ್ಯಾವೃತ್ತಿ'ಯೆನಿಸುವುದು" (೩-೨೦೦).

ಇದು ದಂಡಿಯಲ್ಲಿ 'ಆವೃತ್ತಿ' :

> ಅರ್ಥಾವೃತ್ತಿಃ ಪದಾವೃತ್ತಿರುಭಯಾವೃತ್ತಿರೇವ ಚ
> ದೀಪಕಸ್ಥಾನ ಏವೇಷ್ಟನುಲಂಕಾರತ್ರಯಂ ಯಥಾ ॥ (೨-೧೧೬)

(ಅರ್ಥಾವೃತ್ತಿ, ಪದಾವೃತ್ತಿ, ಉಭಯಾವೃತ್ತಿ—ಈ ಮೂರು ಅಲಂಕಾರಗಳು ದೀಪಕದ ಸ್ಥಾನದಲ್ಲಿ ಬರಬಹುದು. ದೀಪಕದಲ್ಲಿ ಅಧ್ಯಾಹಾರವಿರುತ್ತದೆ ; ಆವೃತ್ತಿಯಿರುವುದಿಲ್ಲ ; ಆದುದರಿಂದ 'ಆವೃತ್ತಿ' ಬೇರೆಯಾದ ಅಲಂಕಾರ.)

"ಈ ಅಲಂಕಾರವನ್ನು ದಂಡಿಯಾಗಲಿ ಭಾಮಹನಾಗಲಿ ಹೇಳಿಲ್ಲ"ವೆನ್ನುತ್ತಾರೆ ಎಂ. ವಿ. ಸೀ.[198] ಇದು ವಿಚಾರಣೀಯ. 'ಆವೃತ್ತಿ'ಗೆ ದಂಡಿ ಕೊಟ್ಟಿರುವ ಲಕ್ಷ್ಯಗಳನ್ನು ನೋಡಿದರೆ ಅವುಗಳಲ್ಲಿ 'ವ್ಯಾವೃತ್ತಿ'ಯ ಲಕ್ಷಣವೇ ಇರುವುದು ಕಂಡುಬರುತ್ತದೆ :

> ವಿಕಸನ್ತಿ ಕದಂಬಾನಿ ಸ್ಫುಟನ್ತಿ ಕುಟಜದ್ರುಮಾಃ
> ಉನ್ಮೀಲನ್ತಿ ಚ ಕಂದಲ್ಯೋ ದಲನ್ತಿ ಕಕುಭಾನಿ ಚ ॥
>
> ಉತ್ಕಂಠಯತಿ ಮೇಘಾನಾಂ ಮಾಲಾವೃಂದಂ ಕಲಾಪಿನಾಂ
> ಯೂನಾಂ ಚೋತ್ಕಂಠಯತ್ಯೇಷ ಮಾನಸಂ ಮಕರಧ್ವಜಃ ॥ (೨-೧೧೮, ೧೯)

೩೩. ಪ್ರಿಯತರ : "ಒಬ್ಬರ ಮನಸ್ಸಿಗೆ ತುಂಬ ಹಿತಕರವಾಗುವಂತೆ ಹೇಳುವುದೇ ಪ್ರೇಯಸ್ಸು" (೩-೨೦೩). ದಂಡಿಯಲ್ಲಿದು 'ಪ್ರೇಯಸ್' : 'ಪ್ರೇಯಃ ಪ್ರಿಯತರಾಖ್ಯಾನಂ' (೨-೨೭೫). ದಂಡಿ ಪ್ರೇಯಸ್ಸಿಗೆ ಲಕ್ಷ್ಯವನ್ನು ಕೊಟ್ಟಿಲ್ಲ; ಮಾರ್ಗಕಾರ ಕೊಟ್ಟಿದ್ದಾನೆ. ಭಾಮಹನಲ್ಲಿ ಲಕ್ಷ್ಯವಿದೆ; ಲಕ್ಷಣವಿಲ್ಲ. 'ಇದು ಅಲಂಕಾರವೇ ಅಲ್ಲವೆಂಬ ಮತವೂ ಇದೆ.'

೩೪. ಆಶೀಃ : "ಹಿರಿಯರು (ತಮ್ಮನ್ನು ಆದರದಿಂದ ಬರಮಾಡಿಕೊಂಡವರ) ಮನಸ್ಸಿನ ಬಗೆಯನ್ನು (ಇಷ್ಟಾರ್ಥವನ್ನು) ಗ್ರಹಿಸಿಕೊಂಡು ಅವರಿಗೆ 'ಒಸಗೆ'ಯನ್ನು (ಎಂದರೆ ಶುಭವನ್ನು) ಕೋರುವುದೆ ಆಶೀರಲಂಕಾರ" (೩-೨೦೫). ದಂಡಿಯಲ್ಲಿ : "ಆಶೀರ್ನಾಮಾಭಿಲಷಿತೇ ವಸ್ತುನ್ಯಾಶಂಸನಂ ಯಥಾ" (೨. ೩೫೭). ಈ ಅಲಂಕಾರವನ್ನು "ನವೀನರು ಒಪ್ಪುವುದಿಲ್ಲ. ಸಂಸ್ಕೃತ ನಾಟಕಗಳ ಭರತವಾಕ್ಯಗಳಲ್ಲೆಲ್ಲ ಈ ಅಲಂಕಾರವನ್ನು ನೋಡಬಹುದು."

೩೫. ಭಾವಿಕ : "ಕವಿಗಳು ಭಾವಿಸಿಕೊಂಡ ಅರ್ಥವು ಅವರ ಮನಸ್ಸಿನ ಬಗೆಗೆ ಹೊಂದಿಕೊಂಡು 'ಭಾವ'ವೆನಿಸುವುದು ; ಆ ಭಾವವು ಅಲಂಕಾರಿಕವಾಗಿ ಪ್ರಕಟಗೊಂಡಾಗ 'ಭಾವಿಕ' ಎಂಬ ಅಲಂಕಾರವಾಗುವುದು." (೩-೨೦೭)

ದಂಡಿಯಲ್ಲಿ : "ಇಡಿಯ ಪ್ರಬಂಧವ್ಯಾಪಿಯಾದ ಗುಣವನ್ನೇ 'ಭಾವಿಕ'ವೆನ್ನುವರು. ಭಾವ ಎಂದರೆ ಕಾವ್ಯಗಳಲ್ಲಿ ಆದಿಯಿಂದ ಅಂತ್ಯದವರೆಗೂ ಅನುಸ್ಯೂತವಾಗಿ ಬರುವ ಕವಿಯ ಅಭಿಪ್ರಾಯವೇ ಆಗಿದೆ. ಕಾವ್ಯದ ಕಥಾವಸ್ತುವಿನ ಸಕಲ ಅಂಶಗಳಲ್ಲಿಯೂ ಪರಸ್ಪರ ಉಪಕಾರ್ಯೋಪಕಾರಕ ಭಾವವಿರುವುದು ; ವ್ಯರ್ಥ ವಿಶೇಷಣಗಳ ಪ್ರಯೋಗಾಭಾವ, ಪ್ರಕೃತೋಪಯುಕ್ತಗಳಾದ ವರ್ಣನೆಗಳು ; ವಚನಾನುಕ್ರಮದ ಸಾಮರ್ಥ್ಯದಿಂದಲೇ ಗೂಢವಾದ ಅರ್ಥಗಳ ಅಭಿವ್ಯಕ್ತಿ—ಇವೆಲ್ಲ ಕವಿಯ ಭಾವಕ್ಕೆ ಅಧೀನವಿರುವುದರಿಂದ ಅದು 'ಭಾವಿಕ'ವೆನಿಸುವುದು." (೨-೩೬೪,೬೬).

ಭಾಮಹನಲ್ಲಿ: "ಪ್ರಬಂಧವನ್ನೆಲ್ಲ ವ್ಯಾಪಿಸುವ ಗುಣವು ಭಾವಿಕವೆಂದು ಹೇಳುತ್ತಾರೆ. ಹಿಂದಿನ ಮತ್ತು ಮುಂದಿನ ಸಂಗತಿಗಳೆಲ್ಲ ಕಣ್ಣೆದುರಿಗೆ ಈಗ ನಡೆಯುವಂತೆ ವರ್ಣಿಸುವುದೇ ಅದರ ಲಕ್ಷಣ. ವಿಚಿತ್ರವೂ ಉದಾತ್ತವೂ ಅದ್ಭುತವೂ ಆದ ಸಂಗತಿಗಳಿರುವುದು, ಕಥೆಯಲ್ಲಿ ಸುಂದರವಾದ ಸಂಯೋಜನೆ ಕಾಣುತ್ತಿರುವುದು, ಶಬ್ದಗಳಲ್ಲಿ ಕಿವಿಗೆ ಅಹಿತವಾಗುವ ಅಂಶಗಳಿಲ್ಲದಿರುವುದು—ಇದೇ ಭಾವಿಕ ಗುಣಕ್ಕೆ ಕಾರಣವೆಂದೂ ಹೇಳುವರು."

ದಂಡಿ, ಭಾಮಹರ ಭಾವಿಕ ನಿರೂಪಣೆಯಲ್ಲಿ ಸಾಮ್ಯವಿರುವುದನ್ನೂ ಅವರಷ್ಟು ವಿವರಪೂರ್ಣವಾಗಿ ಮಾರ್ಗಕಾರ ಅದನ್ನು ನಿರೂಪಿಸಿಲ್ಲವೆಂಬುದನ್ನೂ ಗಮನಿಸಬಹುದು. "ಭಾಮಹನ ಪ್ರಕಾರ ಈ ಅಲಂಕಾರದ ಹೆಸರು 'ಭಾವಿಕತ್ವ'ವೇ ಹೊರತು ನವೀನರೆನ್ನುವಂತೆ 'ಭಾವಿಕ'ವಲ್ಲ. ಪ್ರಬಂಧವ್ಯಾಪಿಯಾದ ಈ ಅಲಂಕಾರದ ವೈಶಾಲ್ಯವು ಮುಂದಿನವರ ನಿರೂಪಣೆಗಳಲ್ಲಿ ಸಂಕುಚಿತವಾಗುತ್ತಾ ಹೋಗುತ್ತದೆ. ವಾಮನ ರುದ್ರಟರು ಇದನ್ನು ಒಪ್ಪುವುದೇ ಇಲ್ಲ."[199]

ಭಾವಿಕಾಲಂಕಾರಕ್ಕೆ ಯಾರೂ ಲಕ್ಷ್ಯವನ್ನು ಕೊಟ್ಟಿಲ್ಲವೆಂಬುದು ಕುತೂಹಲಕರ ಸಂಗತಿ. ಸಮಗ್ರ ಕಾವ್ಯವನ್ನು ವ್ಯಾಪಿಸುವ ಅಲಂಕಾರಕ್ಕೆ ಉದಾಹರಣೆ ಕೊಡುವುದಾದರೂ ಹೇಗೆ? ಆದರೆ ಮುಳಿಯ ತಿಮ್ಮಪ್ಪಯ್ಯನವರು ಹೀಗೆನ್ನುತ್ತಾರೆ: "ಭಾವಿಕಾಲಂಕಾರಕ್ಕೆ ಗ್ರಂಥಕಾರನು ಉದಾಹರಣವನ್ನು ಕೊಟ್ಟಿಲ್ಲವೆಂಬುದೇನೋ ನಿಜ. ಆದರೆ, ಅಲ್ಲಲ್ಲಿ ಉದಾಹರಣವಾಗಿ ನೃಪತುಂಗನ ವರ್ಣನಪರವಾದ ಅನೇಕ ಪದ್ಯಗಳನ್ನು ಕೊಟ್ಟಿದ್ದಾನಷ್ಟೆ; ಅವುಗಳಲ್ಲಿ ತೋರುವ, ಗ್ರಂಥಕಾರನಿಗೆ ತನ್ನೊಡೆಯನಲ್ಲಿರುವ ಪೂಜ್ಯಭಾವನೆಯೇ 'ಭಾವಿಕ' ದೃಷ್ಟಾಂತವೆಂದು ಎಣಿಸಬೇಕು."[200] ಇದನ್ನೊಪ್ಪುವುದು ಕಷ್ಟ.

"ದಂಡಿಯ ಭಾವಿಕತ್ವದಲ್ಲಿಯ 'ಭಾವಃ ಕವೇರಭಿಪ್ರಾಯಃ' ಉಕ್ತಿಯು ನೃಪತುಂಗನ ಕೈಯಲ್ಲಿ ಭಾವಿಕಾಲಂಕಾರವಾಗಿ ಧ್ವನಿಪುರಸ್ಕರ್ತರಿಗೆ ಅದೆಂತು ಉಪಕಾರಕವಾಗಿದೆ...." ಎಂದೂ "ನೃಪತುಂಗೋಕ್ತ ಭಾವಿಕಾಲಂಕಾರವು ಕಾಶ್ಮೀರದಲ್ಲಿ ಹುಟ್ಟಿ ಬೆಳೆದ ಧ್ವನಿ ಪ್ರಸ್ಥಾನಕ್ಕೆ ಉಪಕಾರಕವಾಗಿರುವುದು ಅದರಿಂದ ಭಿನ್ನವಿರದ ರುದ್ರಟನ ಭಾವಾಲಂಕಾರದ ಮೂಲಕ" ಎಂದೂ "ಉಪಲಬ್ಧ ಸಂಸ್ಕೃತ ಕನ್ನಡ ಗ್ರಂಥಗಳನ್ನು ಮುಂದಿಟ್ಟುಕೊಂಡು ನೋಡಿದಾಗ ಭಾಮಹನ ಭಾವಿಕತ್ವವನ್ನು ಮಾರ್ಪಡಿಸಿ ಭಾವಿಕಾಲಂಕಾರವೆಂಬ ಹೆಸರಿನಿಂದ ಅದಕ್ಕೊಂದು ನಿಶ್ಚಿತರೂಪವನ್ನು ಕೊಟ್ಟವರಲ್ಲಿ ಉದ್ಭಟನು ಮೊದಲಿಗನೆಂದು ಹೇಳುವದರೊಂದಿಗೆ, ದಂಡಿಯು ಭಾವಿಕತ್ವವನ್ನು ಹೀಗೆಯೆ ಮಾರ್ಪಡಿಸಿ ನಿರೂಪಿಸಿದವರಲ್ಲಿ ನೃಪತುಂಗನು ಮೊದಲಿಗ"[201] ಎಂದೂ ಭೀಮರಾವ ಚಿಟಗುಪ್ಪಿ ಬರೆಯುತ್ತಾರೆ. ಅವರ ಅಭಿಪ್ರಾಯವೇನೆಂಬುದು ಸ್ಪಷ್ಟವಾಗುವುದಿಲ್ಲ.

೩೬. ಧ್ವನಿ: ಧ್ವನಿಯ ಲಕ್ಷಣಲಕ್ಷ್ಯಗಳನ್ನು ಒಂದೇ ಒಂದು ಕಂದಪದ್ಯದಲ್ಲಿ ಹೇಳಿ ಮುಗಿಸಿದ್ದಾನೆ ಮಾರ್ಗಕಾರ.

ಧ್ವನಿಯೆಂಬುದಳಂಕಾರಂ
ಧ್ವನಿಯಿಸುಗುಂ ಶಬ್ದದಿಂದಮರ್ಥದೆ ದೂಷ್ಯಂ
ನೆನೆವುದಿದನಿಂತು ಕಮಳದೊ
ಳನಿಮಿಷಯುಗಮೊಪ್ಪಿ ತೋರ್ಪುದಿಂತಿದು ಚೋದ್ಯಂ ॥ (೩-೨೦೮)

"ಈ ಗ್ರಂಥದಲ್ಲಿಯೂ ಕನ್ನಡ ಕಾವ್ಯಮೀಮಾಂಸೆಯ ಬೆಳವಣಿಗೆಯನ್ನು ಕುರಿತ ವಿವೇಚನೆಯಲ್ಲಿಯೂ ಈ ಪದ್ಯಕ್ಕೆ ವಿಶೇಷವಾದ ಪ್ರಾಮುಖ್ಯವುಂಟು."[202] ವಿದ್ವಾಂಸರಿಗೆಸೆದ ಒಂದು ಮುಡಿಗೆಯಾಗಿದೆ ಈ ಪದ್ಯ. ಮಾರ್ಗಕಾರನಿಗೆ ಆಕರಗಳನ್ನೊದಗಿಸಿದ ಭಾಮಹ, ದಂಡಿಯರಲ್ಲಿ 'ಧ್ವನಿ'ಯ ಸುಳಿವಿಲ್ಲ; ಅಷ್ಟೇ ಅಲ್ಲ, ಸಂಸ್ಕೃತದ ಯಾವ ಆಲಂಕಾರಿಕನೂ 'ಧ್ವನಿ'ಯನ್ನು ಒಂದು ಅಲಂಕಾರವೆಂದು ಹೀಗೆ ಖಚಿತವಾಗಿ, ಘಂಟಾ ಘೋಷವಾಗಿ ಕರೆದಿಲ್ಲ. ಎಂತಲೇ ಮಾರ್ಗಕಾರನ ಈ ಹೇಳಿಕೆ 'ನ ಭೂತೋ ನ ಭವಿಷ್ಯತಿ' ಎನಿಸುವಂತಿದ್ದು, ಕುತೂಹಲಾಶ್ಚರ್ಯ ಪ್ರಚೋದಕವಾಗಿದೆ. "ದಂಡಿ ಭಾಮಹಂಗೆ ಹೊಲಬೂ ಇಲ್ಲದಿದ್ದ 'ಧ್ವನಿ'ಯನ್ನು ನೃಪತುಂಗನು ಮೊದಲಿಗೆ ಹೇಳಿರುವುದು ಭಾರತೀಯ ಕಾವ್ಯಮೀಮಾಂಸೆಯ ಇತಿಹಾಸದಲ್ಲೇ ಚಿರಸ್ಮರಣೀಯವಾದ ಅಂಶವಾಗಿದೆ."[203]

ಮಾರ್ಗಕಾರ ಹೇಳಿರುವ 'ಧ್ವನಿ'ಯ ಲಕ್ಷಣ ಲಕ್ಷ್ಯಗಳೆರಡೂ ವಿಪುಲವಾದ ಚರ್ಚೆಗೆ ಎಡೆಗೊಟ್ಟಿವೆ. ಈ ಚರ್ಚೆಯಲ್ಲಿ ಮುಖ್ಯವಾಗಿ ಭಾಗವಹಿಸಿರುವ ವಿದ್ವಾಂಸರೆಂದರೆ, ಕಾಲಕ್ರಮದಲ್ಲಿ, ಮುಳಿಯ ತಿಮ್ಮಪ್ಪಯ್ಯ, ಕೆ. ಕೃಷ್ಣಮೂರ್ತಿ, ತೀ. ನಂ. ಶ್ರೀಕಂಠಯ್ಯ, ಎಂ. ವಿ. ಸೀತಾರಾಮಯ್ಯ ಮತ್ತು ಭೀಮರಾವ ಚಿಟಗುಪ್ಪಿ. ಇವರೆಲ್ಲರ ವಾದಗಳನ್ನು ಇಲ್ಲಿ ಸಂಗ್ರಹಿಸಬಹುದು.

ಮಾರ್ಗಕಾರನಿಗೆ ಧ್ವನಿತತ್ತ್ವದ ಸ್ಪಷ್ಟವಾದ ಕಲ್ಪನೆಯಿತ್ತೇ ಎಂಬುದು ಮೊದಲೇ ಉದ್ಭವಿಸುವ ಪ್ರಶ್ನೆ; ಇರಲಿಲ್ಲ ಎಂಬುದು ಕೆ. ಕೃಷ್ಣಮೂರ್ತಿಯವರ ಮತ್ತು ತೀ. ನಂ. ಶ್ರೀ. ಅವರ ಮತವಾದರೆ, ಸ್ಥೂಲವಾಗಿಯಾದರೂ ಇತ್ತು ಎಂದು ಎಂ. ವಿ. ಸೀ. ಅವರ ನಿಲವು; ಧ್ವನಿತತ್ತ್ವದ ಅರಿವು ಅವನಿಗಿತ್ತೆಂದೆ ಚಿಟಗುಪ್ಪಿಯವರು ಹೇಳುತ್ತಾರೆ. ಪದ್ಯದ ಅರ್ಥವಿವರಣೆಗೆ ಸಂಬಂಧಿಸಿದಂತೆ ಕೆ. ಕೃಷ್ಣಮೂರ್ತಿಯವರಿಗೂ ತೀ. ನಂ. ಶ್ರೀ. ಅವರಿಗೂ ತೀವ್ರವಾದ ಅಭಿಪ್ರಾಯಭೇದಗಳಿವೆ. ಆ ವಿಷಯದಲ್ಲಿ ಮುಳಿಯ ತಿಮ್ಮಪ್ಪಯ್ಯನವರ ಮತ್ತು ಕೆ. ಕೃಷ್ಣಮೂರ್ತಿಯವರ ವ್ಯಾಖ್ಯಾನವನ್ನು ಬೆಂಬಲಿಸಿದ್ದಾರೆ ಎಂ. ವಿ. ಸೀ. ಅವರು.

ಮಾರ್ಗಕಾರನ ಪೂರ್ವೋಕ್ತ ಪದ್ಯವನ್ನು ಕುರಿತು ಮೊದಲು ವಿಚಾರ ಮಾಡಿದವರು ಮುಳಿಯ ತಿಮ್ಮಪ್ಪಯ್ಯನವರು. ಅವರು ಹೀಗೆ ಬರೆದಿದ್ದಾರೆ :

"ಪದ್ಯಭಾಗವಿದು ಸುಂದರಿಯೊಬ್ಬಳ ಮುಖವನ್ನು ವರ್ಣಿಸುವುದು. 'ಕಮಲದಲ್ಲಿ ಎರಡು ಮೀನುಗಳು ಶೋಭಿಸುತ್ತವೆ; ಇದು ಆಶ್ಚರ್ಯ'—ಇದು ಪದ್ಯಭಾಗದ ವಾಚ್ಯಾರ್ಥ. ಕಮಲಪುಷ್ಪವು ನೀರಲ್ಲಿರುವುದಷ್ಟೆ; ಅದರಿಂದ, ಮೀನುಗಳೆರಡು ಬಂದು ಅದರ ದಳಗಳನ್ನೊಂದಿಬಿಡುವುದೇನೋ ಅಸಂಭವವಲ್ಲ. ಆದರೆ 'ಒಪ್ಪಿತೋರ್ಪುದು' ಎಂಬ ಕ್ರಿಯಾಪದಭಾಗವು, ಆ ಮೀನುಗಳು ಪ್ರವಾಹದೊಳಗಿರುವುದಕ್ಕಿಂತಲೂ ಹೆಚ್ಚಿನ ಆನಂದದಿಂದ ಕಮಲದೊಳಗಿರುತ್ತವೆ ಎಂಬರ್ಥವನ್ನು ಕೊಡುವುದು. ಇದು ಅಸಂಭವನೀಯವೇ ಸರಿ. ಆದರಿಂದಲೇ 'ಇಂತಿದು ಚೋದ್ಯಂ' ಎನ್ನಬೇಕಾಯಿತು. ವಾಚ್ಯಾರ್ಥ ಅಲ್ಲವೆ ಅಭಿಧಾವೃತ್ತಿಯಿಂದ ಒದಗುವರ್ಥ ಇಷ್ಟೆ. ಆದರಿಂದ ಆ ವಾಕ್ಯದಿಂದೊದಗುವ ನಿಷ್ಕೃಷ್ಟಾರ್ಥವು ವ್ಯಕ್ತವಾದಂತಾಗುವುದಿಲ್ಲ. ಅದರಿಂದ ಬೇರೆ ಮಾರ್ಗವನ್ನು ಹುಡುಕಬೇಕಾಯಿತು. ಕವಿ 'ಮೀನದ್ವಯ' ಇತ್ಯಾದಿಯಾಗಿ ಹೇಳಿಲ್ಲ—ಹೇಳಿರುವುದು 'ಅನಿಮಿಷಯುಗಂ' ಎಂದು. 'ಅನಿಮಿಷಯುಗ' ಎಂದರೆ 'ರೆಪ್ಪೆಯಿಲ್ಲದ ಯುಗ್ಮ.' ಅಂಥ 'ಯುಗ್ಮ'ವೆಂದರೆ 'ಮೀನದ್ವಯವೂ' ಆಗಬಹುದು; ಅಮರ (ಅನಿಮಿಷ)ದ್ವಯವೂ ಆಗಬಹುದು; ಅಥವಾ ಸ್ವಲ್ಪ ಸಮಯಕ್ಕಾದರೂ ನಿಮೇಷಸಂಚಾರವನ್ನುಳಿದ 'ನಯನದ್ವಯ'ವೂ ಆಗಬಹುದು, ಮೊದಲಿನ ಅರ್ಥವು ಅಸಂಭವವೆಂದು ಹಿಂದೆಯೇ ಸೂಚಿಸಿದೆವಷ್ಟೆ. ಎರಡನೆಯ 'ಅಮರಯುಗ್ಮವು ಕಮಲದೊಳಗಿರುವುದು' ಎಂಬುದು ಅದಕ್ಕಿಂತಲೂ ಹೆಚ್ಚು ಅಸಂಭವ. ಆದರಿಂದ 'ಕಮಲದೊಳ್' ಎಂಬುದಕ್ಕೆ 'ಕಮಲಸಮಾನವಾದ' ಮುಖದಲ್ಲಿ ಎಂದೂ 'ಅನಿಮಿಷಯುಗಂ' ಎಂಬುದಕ್ಕೆ 'ಮೀನದ್ವಯಸಮಾನವಾದ ನಯನಯುಗ್ಮ'ವೆಂದೂ ಅರ್ಥ

ಮಾಡಿದರೆ ವಾಕ್ಯಾರ್ಥವು ರಮಣೀಯವಾಗುವುದು. ಈ ಅರ್ಥವು ವಾಚ್ಯವೃತ್ತಿಯಿಂದೊದಗದೆ ವ್ಯಂಜನಾವೃತ್ತಿ ಮಾತ್ರದಿಂದಲೇ ಒದಗುವುದರಿಂದ, ಇದು 'ಧ್ವನಿ'. ಆದರೆ ಔಪಮ್ಯಸೂಚಕವಾದ ಉಕ್ತಿವೈಚಿತ್ರ್ಯವೇ ಪ್ರಧಾನವಾದುದರಿಂದ, ಇದು 'ಧ್ವನ್ಯಲಂಕಾರ.'"[204]

ತಿಮ್ಮಪ್ಪಯ್ಯನವರ ಧ್ವನಿವಿವೇಚನೆಯ ಭಾಗ ಈಚೆಗೆ ಪ್ರಕಟವಾದುದರಿಂದ, ಮಾರ್ಗಕಾರನ ಪದ್ಯದತ್ತ ಮೊದಲು ಗಮನ ಸೆಳೆದವರು ಕೆ. ಕೃಷ್ಣಮೂರ್ತಿಯವರೆನ್ನಬೇಕು. ಅವರು ಹೀಗೆ ಬರೆದರು :

"ಕನ್ನಡದಲ್ಲಿ ಅತಿ ಪ್ರಾಚೀನವಾದ ಲಕ್ಷಣಗ್ರಂಥವೆಂದರೆ ರಾಷ್ಟ್ರಕೂಟ ರಾಜನಾದ ನೃಪತುಂಗನ 'ಕವಿರಾಜಮಾರ್ಗ'. ಇವನ ಕಾಲ ಕ್ರಿ.ಶ ೮೧೪ರಿಂದ ೮೭೭ರವರೆಗೆ. ಸುಮಾರು ಅದೇ ಕಾಲದಲ್ಲಿ ಕಾಶ್ಮೀರದ ಆನಂದವರ್ಧನನು ಬರೆದ 'ಧ್ವನ್ಯಾಲೋಕ'ವನ್ನು ಇವನು ನೋಡಿರುವುದು ಅಸಂಭವ. ಆದರೂ 'ಧ್ವನಿಯು ಕಾವ್ಯದ ರಹಸ್ಯ'ವೆಂಬ ಸ್ಥೂಲ ಪ್ರಕ್ರಿಯೆಯು ಅದಕ್ಕೂ ಮೊದಲೇ ಕಾಶ್ಮೀರದಲ್ಲಿ ಹುಟ್ಟಿ ಕರ್ಣಾಕರ್ಣಿಯಾಗಿ ಕರ್ಣಾಟಕವನ್ನೂ ಮುಟ್ಟಿರಬೇಕು. ಅದರ ವಿಷಯವಾಗಿ ಯಾವ ಹೆಚ್ಚಿನ ವಿವರಗಳೂ ನೃಪತುಂಗನಿಗೆ ತಿಳಿದಿದ್ದಂತೆ ಭಾಸವಾಗುವುದಿಲ್ಲ. 'ಧ್ವನಿ'ಯೂ ಕಾವ್ಯದಲ್ಲಿ ಗಣನೆಗೆ ಯೋಗ್ಯವಾದ ಧರ್ಮವೆಂದಿಷ್ಟೇ ಅವನ ಮನಸ್ಸಿನಲ್ಲಿದ್ದಂತೆ ತೋರುತ್ತದೆ.... ಈ ಕಂದಕ್ಕೆ ಹೀಗೆ ಅರ್ಥ ಮಾಡಬಹುದು :

'ಮೇಲೆ ಹೇಳಿದ ಅಲಂಕಾರಗಳಲ್ಲದೆ 'ಧ್ವನಿ'ಯೆಂಬ ಮತ್ತೊಂದು ಅಲಂಕಾರವುಂಟು. ಮುಖ್ಯವಾದ ಅರ್ಥವು ಅಸಂಗತ, ಆತ ಏವ ದೂಷ್ಯ ಎನ್ನುವಂತಿದ್ದರೂ ಧ್ವನಿಯೆಂಬ ವ್ಯಾಪಾರಾಂತರದಿಂದ ಶಬ್ದವು ಅರ್ಥಾಂತರವನ್ನು ಬೋಧಿಸುವುದರಲ್ಲಿ ಇರುವ ಚಮತ್ಕಾರವೇ ಈ ಅಲಂಕಾರದ ಲಕ್ಷಣ. ಉದಾಹರಣೆಗೆ—'ಕಮಲದಲ್ಲಿ ಅನಿಮಿಷ ಯುಗ್ಮ'ವು ಶೋಭಿಸುತ್ತಿದೆ; ಇದೇನಾಶ್ಚರ್ಯ!' ಎಂಬ ವಾಕ್ಯವನ್ನು ತೆಗೆದುಕೊಳ್ಳಬಹುದು. ಇಲ್ಲಿ 'ಅನಿಮಿಷ' ಎಂದರೆ ಮೀನು ಎಂದು ಅರ್ಥ. ಕಮಲದ ಹೂವಿನಲ್ಲಿ ಮೀನುಗಳೆರಡು ಶೋಭಿಸುವುದು ಅಸಂಭವವಾದುದರಿಂದ ಇದು ದೂಷ್ಯವೆನಿಸಿದರೂ 'ಕಮಲ'ವೆಂದರೆ ಕಮಲೋಪಮವಾದ ನಾಯಿಕೆಯ ಮುಖವೆಂದೂ ಮೀನುಗಳೆರಡೆಂದರೆ ಮೀನಿನಂತೆ ತಳತಳ ಬೆಳಗುವ ಎರಡು ಕಣ್ಣುಗಳೆಂದೂ ಅಸಂಕೇತಿಕವಾದ ಅರ್ಥಾಂತರವು ಗೋಚರವಾಗುವುದು. ಇದೇ ಧ್ವನಿಯೆಂಬ ಅಲಂಕಾರ. 'ನೇಯಾರ್ಥ'ವನ್ನು ಕಾವ್ಯದೋಷವೆಂದು ಪರಿಗಣಿಸಿರುವುದರಿಂದ ನೃಪತುಂಗನು ಇಲ್ಲಿರುವ ಮುಖ್ಯಾರ್ಥಬಾಧೆಯನ್ನೂ 'ದೂಷ್ಯ'ವೆಂದಿದ್ದಾನೆ'.

ವಸ್ತುತಃ ನವೀನಾಲಂಕರಿಕರು 'ಅತಿಶಯೋಕ್ತಿ' ಅಥವಾ 'ರೂಪಕಾತಿಶಯೋಕ್ತಿ' ಎನ್ನುವ ಅಲಂಕಾರಕ್ಕೂ ಈ ಬಗೆಯ ಧ್ವನ್ಯಲಂಕಾರಕ್ಕೂ ಯಾವ ಬಗೆಯ ವ್ಯತ್ಯಾಸವೂ ಇಲ್ಲ. ಧ್ವನಿಪ್ರಸ್ಥಾನಕ್ಕೆ ಸಾಧಕವಾದ ವ್ಯಂಗ್ಯಾರ್ಥ ಪ್ರಾಧಾನ್ಯವಾದರೂ ಇಲ್ಲಿ ಸಿದ್ಧಿಸುವುದಿಲ್ಲ. ನೃಪತುಂಗನ ಪ್ರಕಾರ ಆಪಾತತಃ ದೂಷ್ಯವೆನಿಸಿದರೂ ವಸ್ತುತಃ ದೂಷ್ಯವಲ್ಲದ

ಅರ್ಥಬೋಧಕ ಶಬ್ದ ಚಮತ್ಕಾರದಲ್ಲಿಯೇ ಧ್ವನಿಯ ಅಲಂಕಾರತ್ವವಿರುವುದು."[205]

ಅನಂತರ ಮಾರ್ಗಕಾರನ ಪದ್ಯವನ್ನು ಕುರಿತು ವಿವೇಚಿಸಿದವರು ತೀ. ನಂ. ಶ್ರೀ. ಅವರು. ಅವರ ವಿಚಾರಧಾರೆ ಹೀಗಿದೆ :

"....ಕನ್ನಡದ ಕವಿರಾಜಮಾರ್ಗವೂ ಸಂಸ್ಕೃತದ ಧ್ವನ್ಯಾಲೋಕವೂ ಬಹುಶಃ ಏಕ ಕಾಲದಲ್ಲಿ ರಚಿತವಾದವೆಂಬುದನ್ನೂ ಕನ್ನಡನಾಡಿಗೂ ಕಾಶ್ಮೀರಕ್ಕೂ ಇರುವ ಸಾವಿರಾರು ಮೈಲಿಗಳ ದೂರವನ್ನೂ ನೆನೆದರೆ, ಧ್ವನಿಯ ಮಾತು ಇಷ್ಟೊಂದು ಬೇಗ ಕನ್ನಡದ ಗ್ರಂಥದಲ್ಲಿ ಬಂದಿರುವುದು ಸೋಜಿಗವೆನಿಸುತ್ತದೆ. ಆನಂದವರ್ಧನನಿಗೆ ಹಿಂದೆಯೇ ಧ್ವನಿಯ ಪ್ರಸ್ತಾವ ಎದ್ದಿತ್ತೆಂಬ ವಾದಕ್ಕೆ ಇದು ಪುಷ್ಟಿ ಕೊಡುತ್ತದೆ. ಕವಿರಾಜಮಾರ್ಗಕಾರನು ಧ್ವನ್ಯಾಲೋಕವನ್ನು ನೋಡಿದ್ದನೆಂಬುದಕ್ಕೆ ಯಾವ ನಿದರ್ಶನವೂ ಅವನ ಗ್ರಂಥದಲ್ಲಿ ದೊರೆಯುವುದಿಲ್ಲ. ಅಲಂಕಾರಗಳ ಮಾಲೆಯ ಕೊನೆಯಲ್ಲಿ ಭಾವಿಕಾಲಂಕಾರವಾದ ಬಳಿಕ, ಈ 'ಧ್ವನ್ಯಳಂಕಾರ'ವನ್ನು ಸೇರಿಸಿ ಅದರ ಲಕ್ಷ್ಯಲಕ್ಷಣವನ್ನೆಲ್ಲಾ ಒಂದೇ ಕಂದಪದ್ಯ ದಲ್ಲಿ ಅವನು ಮುಗಿಸಿಬಿಟ್ಟಿದ್ದಾನೆ. ಅವನ ಉಕ್ತಿಗೆ ಸರಿಯಾಗಿ ಅರ್ಥವಾಗದೆ, ಧ್ವನಿ ಯೆಂದರೆ ಏನೆಂದು ಅವನು ಭಾವಿಸಿದ್ದನೆಂಬುದು ಸ್ಪಷ್ಟವಾಗಿ ಗೊತ್ತಾಗದೆ, ಪೇಚಾಟಕ್ಕೆ ಕಾರಣವಾಗಿದೆ. 'ಧ್ವನಿಯೆಂಬುದು ಅಳಂಕಾರಂ' ಎಂಬುದರ ಅಭಿಪ್ರಾಯವೇನೋ ಸ್ಪಷ್ಟ ; ಕವಿರಾಜಮಾರ್ಗಕಾರನ ಭಾಗಕ್ಕೆ ಇದು ಮೂವತ್ತೈದರ ಜೊತೆಗೆ ಮೂವತ್ತಾರ ನೆಯ 'ಅಲಂಕಾರ.' ಇದರ ಸ್ವರೂಪವೇನು ? "ಧ್ವನಿಯಿಸುಗುಂ ಶಬ್ದದಿಂದೆ, ಅರ್ಥದೆ ದೂಷ್ಯಂ"—ಅರ್ಥದಿಂದ ಧ್ವನಿತವಾದರೆ ದೋಷವಾಗುತ್ತದೆ—ಎಂದರೇನು ? ಸಂಸ್ಕೃತ ಲಕ್ಷಣಗ್ರಂಥಗಳಲ್ಲಿ ನಮಗೆ ಪರಿಚಿತವಾಗಿರುವ ಯಾವ ವಿವರಣೆಯನ್ನೂ ಇಲ್ಲಿಗೆ ಹೊಂದಿಸಲು ಆಗುವುದಿಲ್ಲ. ಒಂದುವೇಳೆ 'ಶಬ್ದಶಕ್ತಿಮೂಲಧ್ವನಿ'ಯನ್ನೇನಾದರೂ ಕವಿರಾಜಮಾರ್ಗಕಾರನು ಮನಸ್ಸಿನಲ್ಲಿ ಇಟ್ಟುಕೊಂಡಿರಬಹುದೆ ? ಉದಾಹರಣೆಯಿಂದ ಲಾದರೂ ವಿಷಯಪರಿಷ್ಕಾರವಾದೀತೆ, ನೋಡೋಣ, ಎಂದರೆ, "ನೆನೆವುದು ಇದಂ ಇಂತು"ಎಂಬ ಪ್ರವೇಶಿಕೆಯೊಡನೆ, "ಕಮಳದೊಳ್ ಅನಿಮಿಷಯುಗಂ ಒಪ್ಪಿ ತೋರ್ಪುದು, ಇಂತು ಇದು ಚೋದ್ಯಂ" ಎಂದು ಉದಾಹರಣೆ ಕೊಡುತ್ತಾನೆ. ಇದು ತೊಡಕನ್ನು ಬಿಡಿಸುವ ಬದಲು ಇನ್ನಷ್ಟು ಜಟಿಲಗೊಳಿಸುತ್ತದೆ. "ಅಂದವಾದ ಮುಖದಲ್ಲಿ ಹೊಳೆಯುವ ಎರಡು ಕಣ್ಣುಗಳಿವೆ" ಎನ್ನುವುದಕ್ಕಿಂತ "ಕಮಲದಲ್ಲಿ ಜೋಡಿಮೀನುಗಳು ಒಪ್ಪಿ ತೋರುತ್ತವೆ" ಎಂದು ಹೇಳುವುದರಲ್ಲಿ ಚಮತ್ಕಾರ ಹೆಚ್ಚು. ಆದರೆ ಇಷ್ಟಕ್ಕೇ ಅದು ಪರ್ಯವಸಾನವಾದರೆ, ಈಚಿನ ಆಲಂಕಾರಿಕರು ಹೇಳುವ 'ರೂಪಕಾತಿಶಯೋಕ್ತಿ'ಯನ್ನೇ ಕವಿರಾಜಮಾರ್ಗಕಾರನು 'ಧ್ವನ್ಯಳಂಕಾರ'ವೆಂದು ಕರೆದನೆನ್ನಬೇಕಾಗುತ್ತದೆ. ಆದರೆ ಅದಕ್ಕೆ ಅನ್ವಯವಾಗುವಂಥ ಲಕ್ಷಣ ಮೇಲೆ ಉಕ್ತವಾಗಿಲ್ಲ. ಅಷ್ಟೇ ಅಲ್ಲ; 'ಧ್ವನಿ ಯಿಸುಗುಂ ಶಬ್ದದಿಂದೆ' ಎಂಬ ವಾಕ್ಯಕ್ಕೂ ಉಪಪತ್ತಿ ತಪ್ಪಿಹೋಗುತ್ತದೆ. 'ಸ್ಥಿತಸ್ಯ ಗತಿಶ್ಚಿಂತನೀಯಾ' ಎಂದುಕೊಂಡು ಪರ್ಯಾಲೋಚನೆ ಮಾಡುವಾಗ, ಮುಂದಕ್ಕೆ ಇನ್ನೊಂದು ಹೆಜ್ಜೆ ಹೊಳೆಯುತ್ತದೆ. ಉದಾಹರಣವಾಕ್ಯದಲ್ಲಿ, ಮೀನ, ಮತ್ಸ್ಯ

ಮೊದಲಾದ ಪರ್ಯಾಯ ಪದಗಳನ್ನು ಉಪಯೋಗಿಸದೆ, 'ಅನಿಮಿಷ' (=ಎವೆಯಿಕ್ಕದ್ದು) ಎಂಬುದನ್ನು ಕವಿ ಉಪಯೋಗಿಸಿದ್ದಾನೆ. ಇದರ ಸ್ವಾರಸ್ಯವೇನು? ವಾಸ್ತವವಾಗಿ 'ನಿಮೇಷ'ವುಳ್ಳ (ಎಂದರೆ ಎವೆಯಿಕ್ಕುವ) ಮಾನವಿಯೊಬ್ಬಳ ಕಣ್ಣುಗಳಿಗೆ ಅವುಗಳ ಸ್ವಭಾವಕ್ಕೆ ಅತ್ಯಂತ ವ್ಯತಿರಿಕ್ತವಾದ 'ಅನಿಮಿಷ' ಎಂಬ ಶಬ್ದ ಇಲ್ಲಿ ಸೂಚಕವಾಗುತ್ತದೆ; ದೇವತೆಗಳು 'ಅನಿಮಿಷ'ರಾಗಿರುವುದರಿಂದ, ಅವಳು ಮಾನವಿಯಲ್ಲ, ದೇವಿ ಎಂಬ ಅರ್ಥವೂ ಇಲ್ಲಿ ಸ್ಫುರಿಸಬಹುದು. ಇದೇ ಇಲ್ಲಿಯ 'ಚೋದ್ಯ'ವಾಗಿರಬಹುದೆ? ಇದು 'ಶಬ್ದ' ಶಕ್ತಿಯಿಂದ ಧ್ವನಿಸುವುದೆಂಬುದನ್ನೂ ಲಕ್ಷಿಸಬೇಕು.

ಈಗ ನಾವು ಊಹಿಸಬಲ್ಲಮಟ್ಟಿಗೆ ಹೇಳುವುದಾದರೆ, ಧ್ವನ್ಯಾಲೋಕವನ್ನು ಮಾತ್ರವಲ್ಲ, ಧ್ವನಿಕಾರಿಕೆಗಳನ್ನು ಕೂಡ ಕವಿರಾಜಮಾರ್ಗಕಾರನು ನೋಡಿರಲಾರನು. ಅವನ ಭಾಗಕ್ಕೆ ಧ್ವನಿ 'ಪ್ರವಾದ ಮಾತ್ರ'ವಾಗಿದ್ದಿರಬೇಕು. ಕಾಶ್ಮೀರದಲ್ಲಿ ಧ್ವನಿಯೆಂಬ ಕೂಗು ಈಚೆಗೆ ಎದ್ದಿದೆ; ಇದನ್ನು 'ಕಾವ್ಯಶೋಭಾಕರ'ವೆಂದು ಗಣಿಸುತ್ತಿದ್ದಾರೆ—ಎಂದು ಯಾರಿಂದಲೋ ಕೇಳಿ, ಹಾಗಾದರೆ ತನ್ನ ಅಲಂಕಾರಗಳ ಪಟ್ಟಿಗೆ ಇದನ್ನೂ ಸೇರಿಸಬೇಕೆಂಬ ಸ್ವಾಭಾವಿಕವಾದ ಆಶಯದಿಂದ ಕವಿರಾಜಮಾರ್ಗಕಾರನು ತನಗೆ ತಿಳಿದುಬಂದ ಸ್ವಲ್ಪ ವಿಷಯದ ಅವಲಂಬನದಿಂದ ಅದನ್ನು ಕುರಿತು ಒಂದು ಮಾತನ್ನು ಹೇಳಿದನೆಂದು ತೋರುತ್ತದೆ. ಅವನ ಭಾವನೆಗೂ ಧ್ವನಿಯ ತಿರುಳಿಗೂ ಎಷ್ಟು ದೂರವೆಂದು ಯಾರಿಗಾದರೂ ಹೊಳೆಯದಿರದು."[206]

"ಧ್ವನಿಯಿಸುಗುಂ ಶಬ್ದದಿಂದಮರ್ಥದೆ ದೂಷ್ಯಂ" ಎಂಬುದಕ್ಕೆ ಕೆ. ಕೃಷ್ಣಮೂರ್ತಿಯವರು ಕೊಟ್ಟಿರುವ ವಿವರಣೆಯನ್ನು ಕುರಿತು ತೀ. ನಂ. ಶ್ರೀ. ಅವರು "ಇಷ್ಟು ಅರ್ಥವು ಮೂಲವಾಕ್ಯದಿಂದ ಹೊರಡಲಾರದೆಂದು ನಮಗೆ ತೋರುತ್ತದೆ."[207] ಎಂದೂ ಹೇಳುತ್ತಾರೆ.

ತೀ. ನಂ. ಶ್ರೀ. ಅವರ ವಿವೇಚನೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಕೆ. ಕೃಷ್ಣಮೂರ್ತಿಯವರು ಮತ್ತೆ ಹೀಗೆ ಬರೆಯುತ್ತಾರೆ:

"....ನನ್ನ ಅಲ್ಪಬುದ್ಧಿಗೆ ತೋರುವಂತೆ 'ಅನಿಮಿಷ' ಎಂಬ ನಾನಾರ್ಥಕ ಶಬ್ದಕ್ಕೆ 'ದೇವ', 'ಮೀನು' ಎಂಬೆರಡೂ ಮುಖ್ಯಾರ್ಥಗಳು....ಇಲ್ಲಿಯಾದರೂ 'ಎವೆಯಿಕ್ಕದ' ಎಂಬ ಅರ್ಥಪ್ರಸಕ್ತಿ ಕಡಿಮೆ.'ಅನಿಮಿಷಲೋಚನ' (೨–೭೬) ಎಂದಾಗ ಕಣ್ಣಿಗೆ ವಿಶೇಷಣವಾಗಿ ಬರುವ ಪ್ರಯುಕ್ತ, ಈ ಪ್ರಸಕ್ತಿಯುಂಟು. ಇಲ್ಲಿ 'ದೇವಯುಗ್ಮ'ವೆಂದು ಅರ್ಥ ಮಾಡಬೇಕು; ಇಲ್ಲವೆ 'ಮೀನದ್ವಯ'ವೆಂದು ಅರ್ಥ ಮಾಡಬೇಕು. ಮೂರನೆಯ ದಾರಿಯಿಲ್ಲ. ಕಮಲದಲ್ಲಿ ಶೋಭಿಸುತ್ತಿರುವ ಎರಡು ದೇವದ್ವಂದ್ವವೇ ಎಂದರೆ ಅಪ್ರಸಿದ್ಧಾರ್ಥ; ಎರಡು ಮೀನುಗಳೇ ಎಂದರೆ ತಪ್ಪೇನು? ಇದನ್ನು ಸ್ವೀಕರಿಸಲು ಅನುಪಪತ್ತಿಯೆಂದರೆ—'ಅದಕ್ಕೆ ಅನ್ವಯವಾಗುವಂತಹ ಲಕ್ಷಣ ಮೇಲೆ ಉಕ್ತವಾಗಿಲ್ಲ'ವೆಂದು. 'ಧ್ವನಿಯೆಂಬುದಳಂಕಾರಂ, ಧ್ವನಿಯಿಸುಗುಂ ಶಬ್ದದಿಂದಮರ್ಥದೆ ದೂಷ್ಯಂ' ಎಂಬ ಲಕ್ಷಣ ಮುಂಚೆ ಅರ್ಥವಾದಮೇಲಷ್ಟೆ ಅದರ ಅನ್ವಯದ ಪ್ರಶ್ನೆ? 'ಅರ್ಥದಿಂದ ಧ್ವನಿತ

ವಾದರೆ ದೋಷವಾಗುತ್ತದೆ' ಎಂದರೇನು ? 'ಸಂಸ್ಕೃತ ಲಕ್ಷಣಗ್ರಂಥಗಳಲ್ಲಿ ನಮಗೆ ಪರಿಚಿತವಾಗಿರುವ ಯಾವ ವಿವರಣೆಯನ್ನೂ ಇಲ್ಲಿಗೆ ಹೊಂದಿಸಲು ಆಗುವುದಿಲ್ಲ' ಎಂದೊಪ್ಪಿದ ಮೇಲೆ ಉದಾಹರಣೆಯನ್ನು ಹಿಗ್ಗಿಸಿ ಎಳೆದರೆ ಲಕ್ಷಣವನ್ನು ಅನ್ವಯಿಸಿದಂತಾಗುತ್ತದೆಯೇ? 'ಧ್ವನ್ಯಾಲೋಕ' ಗ್ರಂಥವೇ ಪರಿಚಿತವಾಗಿರುವ ಸಂಭವವಿಲ್ಲದ ಕವಿರಾಜಮಾರ್ಗಕಾರನಿಗೆ 'ಶಬ್ದಶಕ್ತಿ ಮೂಲಧ್ವನಿ' ಗೊತ್ತಿದ್ದಿತೆಂದು ಇದರ ಮೇಲಿಂದ ಸಾಧಿಸಲು ಶಕ್ಯವೆ?

ಈ ಪ್ರಸಂಗದಲ್ಲಿ ನಮ್ಮ ವಿವರಣೆಯಿಷ್ಟೆ : ಲಕ್ಷಣದಲ್ಲಿ ಅರ್ಥ ಅಸ್ಪಷ್ಟವೆಂದರೂ ಲಕ್ಷ್ಯದಲ್ಲಿ ಅರ್ಥ ಅಸ್ಪಷ್ಟವಲ್ಲ : 'ಕಮಲದಲ್ಲಿ ಮೀನದ್ವಯವು ಶೋಭಿಸುತ್ತಿದೆ' ಎಂಬ ವಾಕ್ಯದಲ್ಲಿ ನಾಯಿಕೆಯ ಮುಖಕಮಲದಲ್ಲಿ ಹೊಳೆಯುವ ನೇತ್ರದ್ವಯದ ಕಲ್ಪನೆ ಅಲಂಕಾರಮಯವಾಗಿ ಬರುತ್ತಿದೆ. ಈ ಅಲಂಕಾರಕ್ಕೆ ಕವಿರಾಜಮಾರ್ಗಕಾರನು 'ಧ್ವನಿ' ಎಂಬ ಹೆಸರನ್ನು ಕೊಟ್ಟಿದ್ದಾನೆ; ಇದು ಅಲಂಕಾರದ 'ಪ್ರಕರಣ'ದಲ್ಲಿ ಬಂದಿರುವ ವಾಕ್ಯವಾದ್ದರಿಂದ 'ಧ್ವನಿ' ಎಂಬುದು ಶಬ್ದಾಲಂಕಾರವಂತೂ ಅಲ್ಲ ; ಅರ್ಥಾಲಂಕಾರವೇ. ಕವಿ ಮುಖವನ್ನು ಕಮಲವೆಂದೂ ಕಣ್ಣುಗಳನ್ನು ಮೀನುಗಳೆಂದೂ ಬಾಯಿಬಿಟ್ಟು ಹೇಳದೆ ಇದ್ದರೂ ಆ ಅರ್ಥ ಇಲ್ಲಿ ರಸಿಕರಿಗೆ ಹೊಳೆಯುತ್ತದೆ. ಇದು 'ನವ್ಯ' ಆಲಂಕಾರಿಕರ ಭಾಷೆಯಲ್ಲಿ ರೂಪಕಾತಿಶಯೋಕ್ತಿಯೇ ಆದರೂ, ಕವಿರಾಜಮಾರ್ಗಕಾರನ 'ಅತಿಶಯೋಕ್ತಿ' ಗಿಂತ ಭಿನ್ನವಾಗಿದೆ (೨-೯೨). ಇನ್ನು 'ಅರ್ಥದೆ ದೂಷ್ಯಂ' ಎಂದರೇನು ? ಪ್ರಸಕ್ತ ವಾಕ್ಯದ ಮುಖ್ಯ ಅರ್ಥವು ಒಗಟೆಯಂತೆ ಕಾಣುತ್ತಾ 'ವ್ಯರ್ಥ' ದೋಷವೆನಿಸುವುದೇ. ಈ ವಿವರಣೆ ಕನ್ನಡ ವಿದ್ವಾಂಸರಿಗೆ ಏಕೆ ಅಗ್ರಾಹ್ಯವೆನಿಸುತ್ತಿದೆಯೋ ನನಗೆ ತಿಳಿಯುವುದಿಲ್ಲ. ಒಂದು ವಸ್ತುವು ಮತ್ತೊಂದನ್ನು ಸೂಚಿಸುವುದನ್ನೇ ಇಲ್ಲಿ 'ಧ್ವನಿ' ಯೆಂದಂತಿದೆ."

ಮುಂದೆ ಅವರು ಸೇರಿಸುತ್ತಾರೆ : "ಧ್ವನಿಯೆಂಬುದಳಂಕಾರಂ ಎಂಬ ಘೋಷಣೆಯನ್ನು ನೋಡಿದರೆ, ಇತರರು ಅಲಂಕಾರಾತಿರಿಕ್ತವಾದ ಯಾವುದೋ ಕಾವ್ಯರಹಸ್ಯವೆ ಧ್ವನಿಯೆನ್ನುವುದು ಸರಿಯಲ್ಲವೆಂದು ನಿರಾಕರಿಸುವಂತಿದೆ."[208]

ಮುಳಿಯ ತಿಮ್ಮಪ್ಪಯ್ಯ, ಕೆ. ಕೃಷ್ಣಮೂರ್ತಿ, ತೀ. ನಂ. ಶ್ರೀ.—ಮೂವರ ವಿಚಾರ ವಿಮರ್ಶೆಗಳನ್ನೂ ಆಧಾರವಾಗಿಟ್ಟುಕೊಂಡು ಎಂ. ವಿ. ಸೀ. ಅವರು ತಮ್ಮ ವಾದವನ್ನು ಮುಂಡಿಸಿದ್ದಾರೆ. ಮಾರ್ಗಕಾರನ ಧ್ವನಿ ಸಿದ್ಧಾಂತವನ್ನು ಕುರಿತು ಅವರು ಊಹಿಸುತ್ತಾರೆ : "ನಮಗೆ ತೋರುವುದು ಹೀಗೆ : ಧ್ವನಿಸಿದ್ಧಾಂತವು ಸಾಕಲ್ಯವಾಗಿ ಇದ್ದಕ್ಕಿದ್ದಂತೆ 'ಧ್ವನ್ಯಾಲೋಕ'ದಲ್ಲಿ ರೂಪುಗೊಂಡಿತೆಂದರೆ ಅಸಂಭಾವ್ಯವಾಗಿ ಕಾಣುತ್ತದೆ. ತೀ. ನಂ. ಶ್ರೀ. ಅವರು ಅಭಿಪ್ರಾಯಪಟ್ಟಿರುವಂತೆ 'ಆನಂದವರ್ಧನನಿಗೆ ಹಿಂದೆಯೇ ಧ್ವನಿಯ ಪ್ರಸ್ತಾವ ಎದ್ದಿದ್ದಿತು.' 'ಧ್ವನಿ' ವಿಷಯಕವಾದ ಒಂದು ಸ್ಥೂಲವಾದ ಪ್ರಾಕೃತ ಸ್ವರೂಪ ಕಾಶ್ಮೀರದಲ್ಲಿ ಮಾತ್ರವಲ್ಲದೆ ಭರತಖಂಡದ ಇತರ ಜ್ಞಾನಕೇಂದ್ರಗಳಲ್ಲಿಯೂ ಪ್ರಚಲಿತವಾಗಿದ್ದಿರಬೇಕು. ನೃಪತುಂಗನ ತಂದೆ ಮೂರನೆಯ ಗೋವಿಂದನ ಕಾಲದಲ್ಲಿ ರಾಷ್ಟ್ರಕೂಟ ಸಾಮ್ರಾಜ್ಯವು ಉತ್ತರಾಪಥದ ಸೆರಗನ್ನು ಸೋಕಿತ್ತೆಂಬುದನ್ನು ನೆನೆಯ

ಬೇಕು. ನೃಪತುಂಗನ ಕಾಲದಲ್ಲಿ ಮಾನ್ಯಖೇಟನಗರವು ಕವಿಗಳನ್ನೂ ವಿದ್ವಾಂಸರನ್ನೂ ಆಕರ್ಷಿಸುತ್ತಿದ್ದ ಅಂಥ ಒಂದು ಜ್ಞಾನಕೇಂದ್ರವಾಗಿತ್ತೆಂಬುದು ಇತಿಹಾಸ ಪ್ರಸಿದ್ಧವಾದ ಸಂಗತಿ. ದಂಡಿ ದಕ್ಷಿಣಾತ್ಯನಾಗಿದ್ದಿರಬಹುದೆಂಬ ಅಭಿಪ್ರಾಯವೂ ಇದೆಯಷ್ಟೆ. ಹೀಗಿರುವಲ್ಲಿ, ಕಾಶ್ಮೀರದ ಆನಂದವರ್ಧನನ ಕೈಯಲ್ಲಿ ಪರಿಷ್ಕಾರಗೊಂಡು ಒಂದು ವ್ಯವಸ್ಥಿತ ರೂಪವನ್ನು ಪಡೆದ ಧ್ವನಿತತ್ತ್ವದ ಪ್ರಾಕೃತರೂಪ ಕಾವ್ಯಶಾಸ್ತ್ರದ ಬೆಳವಣಿಗೆಯು ಒಂದು ಮಜಲಾಗಿ ದಕ್ಷಿಣ ಭಾರತದಲ್ಲಿಯೂ ವಿದ್ವನ್ಮಂಡಲಿಗೆ ಪರಿಚಿತವಾಗಿದ್ದಿರಬೇಕು. ಬಹುಶಃ ನೃಪತುಂಗನ ಸಭೆಯಲ್ಲಿ ಧ್ವನಿವಿಷಯಕವಾದ ಚರ್ಚೆಯೂ ನಡೆದು, 'ಧ್ವನಿಯೆಂಬುದಳಂಕಾರಂ' ಎಂಬ 'ನೃಪತುಂಗದೇವ ಮತ'ಕ್ಕೆ ಮನ್ನಣೆ ದೊರೆತು, ಕವಿರಾಜಮಾರ್ಗದ ಅಲಂಕಾರಮಾಲಿಕೆಯಲ್ಲಿ ಸೇರ್ಪಡೆಯಾಗಿರಬೇಕು....ಅಲಂಕಾರಗಳಿಗೆ ಪ್ರಾಧಾನ್ಯವಿದ್ದ ಆ ಕಾಲದಲ್ಲಿ 'ರಸ'ವೂ ಒಂದು ಅಲಂಕಾರವೆನಿಸಿದ ಹಾಗೆ 'ಧ್ವನಿ'ಯೂ ಒಂದು ಅಲಂಕಾರವೆನಿಸಿದ್ದರಲ್ಲಿ ಸೋಜಿಗವಿಲ್ಲ."[೨೦೯]

ಮಾರ್ಗಕಾರನ ಲಕ್ಷ್ಯದ ಬಗ್ಗೆ ಎಂ. ವಿ. ಸೀ. ಅವರ ವಿವರಣೆಯಿದು :

"....ಕಮಲದಂಥ ಮುಖ; ಮೀನಿನಂಥ ಕಣ್ಣು ಎಂಬ ಉಪಮೆ (ಅರ್ಥಾಲಂಕಾರ) ಇಲ್ಲಿ ವ್ಯಂಗ್ಯವಾಗಿದೆ. (ಮುಖಕಮಲದಲ್ಲಿ ಮೀನನೇತ್ರ ಎಂದರೆ 'ರೂಪಕ'ವಾಗುತ್ತದೆ.) ಇದೇ ಇಲ್ಲಿನ ವ್ಯಂಗ್ಯಾರ್ಥ. ಇದು ಶಬ್ದಶಕ್ತಿಮೂಲವಾದ 'ಅಲಂಕಾರ ಧ್ವನಿ' ಎಂಬಲ್ಲಿ ಸಂದೇಹಕ್ಕೆ ಎಡೆಯಿಲ್ಲ ಎಂದು ನಮ್ಮ ಅಭಿಪ್ರಾಯ. ಹೀಗೆ, ವಾಚ್ಯವಾಗಿರಬಹುದಾದ ಉಪಮಾಲಂಕಾರವು ಇಲ್ಲಿ ಸೂಚ್ಯವಾಗಿರುವುದರಿಂದ, ಈ 'ಧ್ವನಿ' ಪ್ರಧಾನವಾದ ಉಕ್ತಿವೈಚಿತ್ರ್ಯವನ್ನೆ ಮಾರ್ಗಕಾರನು 'ಅಲಂಕಾರ' ಎಂದು ಕರೆದಿದ್ದಾನೆ.

ಮೇಲ್ಕಂಡ ಲಕ್ಷ್ಯದ ವಿವರಣೆಯಲ್ಲಿ ಹೆಚ್ಚಿನ ಕ್ಲೇಶವೇನೂ ಕಂಡುಬರುವುದಿಲ್ಲ. ಮಾರ್ಗಕಾರನು ಹೇಳುವ ಲಕ್ಷಣಕ್ಕೆ ಇದು ಅನುಗುಣವಾಗಿದೆಯೇ ಎಂಬುದನ್ನು ಪರಿಶೀಲಿಸುವಲ್ಲಿ ಕ್ಲೇಶ ಕಂಡುಬಂದಿದೆ....ಲಕ್ಷ್ಯವಾಕ್ಯದಲ್ಲಿ ಔಪಮ್ಯವು ಧ್ವನಿತವಾಗುತ್ತಿದೆ ಎಂಬ ಅವರ (ಮುಳಿಯ ತಿಮ್ಮಪ್ಪಯ್ಯನವರ) ಗ್ರಹಿಕೆಯನ್ನೆ ನಾವು ಸ್ವೀಕರಿಸಿದ್ದೇವೆ ....ಧ್ವನಿತತ್ತ್ವದ ಪ್ರಕ್ರಿಯೆಯನ್ನು ಅನ್ವಯಿಸಿ, ನಮಗೆ ಸಮ್ಮತವಾದ ಕೃಷ್ಣಮೂರ್ತಿಯವರ ಅರ್ಥವಿವರಣೆಯನ್ನೇ ವಿಸ್ತಾರವಾಗಿ ಮೇಲೆ ಪ್ರತಿಪಾದಿಸಲು ಪ್ರಯತ್ನಿಸಿದ್ದೇವೆ. ಲಕ್ಷಣವಾಕ್ಯವನ್ನು ವಿವರಿಸುತ್ತಾ 'ಶಬ್ದಶಕ್ತಿ ಮೂಲಧ್ವನಿಯನ್ನೇನಾದರೂ ಕವಿರಾಜಮಾರ್ಗಕಾರನು ಮನಸ್ಸಿನಲ್ಲಿ ಇಟ್ಟುಕೊಂಡಿರಬಹುದೇ?' ಎಂಬ ಸಂದೇಹವನ್ನೂ ತೀ. ನಂ. ಶ್ರೀ.ಯವರೇ ವ್ಯಕ್ತಪಡಿಸಿದ್ದಾರೆ. 'ಏಕೆ ಇಟ್ಟುಕೊಂಡಿರಬಾರದು?' ಎಂಬ ಪ್ರಮೇಯದ ಮೇಲೆಯೆ ನಮ್ಮ ಮೇಲ್ಕಂಡ ಪ್ರತಿಪಾದನೆ ಸಾಗಿದೆ. ಅವರೂ ಈ ಪ್ರಮೇಯವನ್ನಿಟ್ಟುಕೊಂಡು, ಲಕ್ಷ್ಯವಾಕ್ಯದ 'ಅನಿಮಿಷ' ಶಬ್ದದ ಶ್ಲೇಷಾರ್ಥದ ಆಧಾರದ ಮೇಲೆ, 'ದೇವತೆಗಳು ಅನಿಮಿಷರಾಗಿರುವುದರಿಂದ ಅವಳು ಮಾನವಿಯಲ್ಲ, ದೇವಿ ಎಂಬ ಅರ್ಥವೂ ಇಲ್ಲಿ ಸ್ಫುರಿಸಬಹುದು. ಇದೇ ಇಲ್ಲಿಯ ಚೋದ್ಯವಾಗಿರಬಹುದೆ? ಇದು ಶಬ್ದಶಕ್ತಿಯಿಂದ ಧ್ವನಿಸುವುದೆಂಬುದನ್ನೂ ಲಕ್ಷಿಸಬೇಕು' ಎಂದು ಲಕ್ಷ್ಯ ಲಕ್ಷಣ

ಸಮನ್ವಯ ಮಾಡಿದ್ದಾರೆ. ಮೀನ, ಮತ್ಸ್ಯ ಎಂಬ ಪರ್ಯಾಯ ಪದಗಳಿರುವಲ್ಲಿ 'ಅನಿಮಿಷ' ಎಂಬ ಪದವನ್ನು ಕವಿ ಉದ್ದೇಶಪೂರ್ವಕವಾಗಿ ಉಪಯೋಗಿಸುವನೆಂಬ ಅವರ ಗ್ರಹಿಕೆ ಸಮರ್ಥನೀಯ. ಆದರೆ ಡಾ. ಕೆ. ಕೃಷ್ಣಮೂರ್ತಿಯವರು ಶಂಕೆಪಟ್ಟಿರುವಂತೆ, ತೀ. ನಂ. ಶ್ರೀ. ಯವರು ಲಕ್ಷ್ಯದ ಅರ್ಥವನ್ನು ಹಿಗ್ಗಿಸಿ ಎಳೆದಿರುವಂತೆ ಕಾಣುತ್ತದೆ. ಶ್ಲೇಷಾರ್ಥವನ್ನು ಅಂಗೀಕರಿಸಿ, ಶಬ್ದಶಕ್ತಿ ಮೂಲಧ್ವನಿ ಹೇಗೆ ವರ್ತಿಸಿದೆ ಎಂಬುದನ್ನು ನಾವು ಈ ಮೊದಲೇ ಸೂಚಿಸಿದ್ದೇವೆ."[210]

'ಧ್ವನಿಯೆಂಬುದಳಂಕಾರಂ' ಎಂಬುದರ ಬಗ್ಗೆ ಎಂ. ವಿ. ಸೀ. ಅವರ ನಿಲವಿಗೂ 'ಧ್ವನಿಯಿಸುಗುಂ ಶಬ್ದದಿಂದಮರ್ಥದೆ ದೂಷ್ಯಂ' ಎಂಬುದರ ಅರ್ಥದ ಬಗ್ಗೆ ಕೆ. ಕೃಷ್ಣಮೂರ್ತಿಯವರ ನಿಲವಿಗೂ ಪೋಷಕವಾಗಿದೆ ಡಿ. ಎಲ್. ನರಸಿಂಹಾಚಾರ್ಯರ ಅಭಿಪ್ರಾಯ: "ಧ್ವನಿಯೆಂಬ ಒಂದು ವಿಷಯ ಕವಿರಾಜಮಾರ್ಗಕ್ಕಿಂತ ಹಿಂದೆಯೇ ಪ್ರಸಿದ್ಧವಾಗಿದ್ದಿರಬಹುದು—ಇದಕ್ಕೆ ಆಧಾರವನ್ನು ಹೇಳಬೇಕು. ಇದನ್ನು ನೃಪತುಂಗನೂ ಅವನ ಹಿಂದಿನವರೂ ಒಂದು ಅಲಂಕಾರವೆಂದು ಪರಿಗಣಿಸಿದ್ದರು—ರಸವದಲಂಕಾರದಂತೆ. ಅನಂತರ ಅದು ಆನಂದವರ್ಧನನ ಕೈಯಲ್ಲಿ ಒಂದು ಸಾರ್ವತ್ರಿಕ ತತ್ತ್ವವಾಗಿ ಪರಿಣಮಿಸಿರಬಹುದು....ಕವಿರಾಜಮಾರ್ಗದ ಪದ್ಯಕ್ಕೆ ನನ್ನ ಅರ್ಥ ಹೀಗೆ: ಧ್ವನಿಯೆಂಬುದು ಒಂದು ಅಲಂಕಾರ; ಅದು ಕವಿಪ್ರಯುಕ್ತವಾದ ಶಬ್ದದಿಂದ ಹೊರಹೊಮ್ಮುತ್ತದೆ; ಆ ವಾಚ್ಯಾರ್ಥವನ್ನೇ ಹಿಡಿದುಕೊಂಡು ಹೋದರೆ ಅರ್ಥಹೀನವಾಗಿ ದೂಷ್ಯವಾಗುತ್ತದೆ. 'ಕಮಳದಲ್ಲಿ ಅನಿಮಿಷಯುಗ' ಎಂದರೆ ಕಮಲದಲ್ಲಿ ಎರಡು ಮೀನುಗಳು ಎಂಬ ವಾಚ್ಯಾರ್ಥ ದೂಷ್ಯ. 'ಮುಖದಲ್ಲಿ ಎರಡು ಕಣ್ಣುಗಳು' ಎಂಬ ಧ್ವನಿತಾರ್ಥ ಸುಂದರ, ಇದು ಧ್ವನಿಯೆಂಬ ಅಲಂಕಾರ."[211]

ಇನ್ನೊಂದೆಡೆ ಎಂ. ವಿ. ಸೀ. ಅವರು ಹೀಗೆಂದಿದ್ದಾರೆ: "ಕವಿರಾಜಮಾರ್ಗದ ಧ್ವನಿ ಪ್ರಸ್ತಾವಕ್ಕೆ ದೂರದ ಧ್ವನ್ಯಾಲೋಕ ನಿಮಿತ್ತವಾಗಬೇಕಾಗಿಲ್ಲ. ಆನಂದವರ್ಧನನು ಮೊದಲ ಕಾರಿಕೆಯಲ್ಲೇ 'ಧ್ವನಿ ಕಾವ್ಯದ ಆತ್ಮವೆಂದು ವಿದ್ವಾಂಸರು ಹಿಂದೆಯೇ ಹೇಳಿದ್ದಾರೆ' ಎಂದು ತಿಳಿಸಿದ್ದಾನೆ. ಇದರಿಂದ ಧ್ವನಿತತ್ತ್ವ ಬಹು ಹಿಂದೆಯೇ ವಿದ್ವಾಂಸರಲ್ಲಿ ಪ್ರಚುರವಾಗಿತ್ತು ಎಂದು ಹೇಳಬಹುದು. ಉದ್ಭಟನ ಕಾವ್ಯಾಲಂಕಾರ ಸಾರಸಂಗ್ರಹದಲ್ಲಿ ಧ್ವನಿತತ್ತ್ವದ ಅರಿವಿನ ಸುಳಿವು ಹಾಯ್ದಿದೆ. ಮತಂಗನ (ಸು. ೧೦ನೆಯ ಶತಮಾನ) 'ಬೃಹದ್ದೇಶಿ'ಯ ಆಧಾರದಿಂದ ಅವನಿಗಿಂತ ಪೂರ್ವದಲ್ಲಿ ಸಂಗೀತ ಶಾಸ್ತ್ರಕ್ಕೆ ಸಂಬಂಧಪಟ್ಟಂತೆ ಧ್ವನಿತತ್ತ್ವ ಗ್ರಾಹ್ಯವಾಗಿತ್ತೆಂದು ಹೇಳಬಹುದು. ಇಷ್ಟು ಪ್ರಾಚೀನವಾದ ತತ್ತ್ವವನ್ನು ಪರ್ಯಾಯೋಕ್ತಿ, ಸಮಾಸೋಕ್ತಿ, ಅಪ್ರಸ್ತುತ ಪ್ರಶಂಸೆ—ಈ ಕೆಲವು ಅಲಂಕಾರಗಳಲ್ಲಿ ಗುರುತಿಸಿದ್ದ ವಿದ್ವಾಂಸರು 'ಧ್ವನಿ'ಯನ್ನು ಅಲಂಕಾರ ಎಂದೇ ಭಾವಿಸಿದ್ದಿರಬೇಕು. ಕನ್ನಡನಾಡಿನ ವಿದ್ವಾಂಸರಲ್ಲಿ ಪ್ರಚುರವಾಗಿದ್ದ ಈ ಭಾವನೆಗೆ ಮಾರ್ಗಕಾರ ಮೊತ್ತಮೊದಲು ವ್ಯಕ್ತರೂಪವನ್ನು ಕೊಟ್ಟಿದ್ದಾನೆ."[212]

ತೀ. ನಂ. ಶ್ರೀ., ಎಂ. ವಿ. ಸೀ.—ಇಬ್ಬರ ಅಭಿಪ್ರಾಯಗಳನ್ನೂ ಗಮನಿಸಿ

ಕೆ. ಕೃಷ್ಣಮೂರ್ತಿಯವರು ಪುನಃ ಹೀಗೆ ವಾದಿಸುತ್ತಾರೆ :

"ಇಲ್ಲಿ ಧ್ವನಿತವಾಗಿರುವ ಅಂಶವು 'ವಸ್ತು'ವೇ ವಿನಾ 'ಅಲಂಕಾರಂತರ'ವಲ್ಲ; 'ರಸಾದಿ'ಯೂ ಅಲ್ಲ. ಇಂತಹ ವಸ್ತುಧ್ವನಿ 'ಪರ್ಯಾಯೋಕ್ತ', 'ಅಪ್ರಸ್ತುತ ಪ್ರಶಂಸಾ', 'ಸಮಾಸೋಕ್ತಿ' 'ವ್ಯಾಜಸ್ತುತಿ' ಮುಂತಾದ ಎಷ್ಟೋ ಅಲಂಕಾರಗಳಲ್ಲಿ ಉಂಟು. ಅಲ್ಲೆಲ್ಲ ವ್ಯಂಗ್ಯಾರ್ಥದ ಸಂಸ್ಪರ್ಶವಿದೆ ಎಂಬುದನ್ನು ಸಕಲರೂ ಒಪ್ಪುತ್ತಾರೆ. ಆದರೆ ಆ ವ್ಯಂಗ್ಯಾರ್ಥ ಸಂಸ್ಪರ್ಶವನ್ನು ಧ್ವನಿವಾದಿಗಳು 'ಧ್ವನಿ'ಯೆನ್ನದೆ ಇರಲು ಕಾರಣ, ಅದಕ್ಕೆ ಪ್ರಾಧಾನ್ಯವಿಲ್ಲ; ಅದು ವಾಕ್ಯಾರ್ಥದ ಸೌಂದರ್ಯಕ್ಕೆ ಪೋಷಕವೇ ಹೊರತು ತಾನೇ ಸುಂದರತರವಲ್ಲ ಎಂಬದು. ಈ ಮಾತು ಪ್ರಕೃತ ಉದಾಹರಣೆಗೂ ಅಷ್ಟೇ ತರ್ಕಬದ್ಧವಾಗಿ ಅನ್ವಯಿಸುತ್ತದೆ. ಪರ್ಯಾಯೋಕ್ತಾದಿಗಳಲ್ಲಿ ಭಾಮಹಾದಿಗಳೇ ಒಪ್ಪಿರುವ ವ್ಯಂಗ್ಯಾರ್ಥವನ್ನು ಅಲಂಕಾರಾಂತರವೆನ್ನದೆ ಇರುವ ನೃಪತುಂಗನು ಅತಿಯೋಕ್ತಿಯಲ್ಲಿರುವ ವ್ಯಂಗ್ಯವಸ್ತುವನ್ನು 'ಧ್ವನಿ'ಯೆಂಬ ಅಲಂಕಾರವೆಂದು ಹೇಳಿದ್ದು ಹೇಗೆ? ಇದು ತಾತ್ವಿಕ ಪ್ರಶ್ನೆ.

ಈ ಪ್ರಶ್ನೆಗೆ ಉತ್ತರ ಹೇಳುವಾಗ ಅವನಿಗೆ ಧ್ವನ್ಯಾಲೋಕದ 'ಧ್ವನಿ'ಯ ಖಚಿತ ಪರಿಜ್ಞಾನವಿರಲಿಲ್ಲವೆಂದೇ ಊಹೆಮಾಡಬೇಕಾಗುತ್ತದೆ. ಆದರೆ ಸಂಸ್ಕೃತದಲ್ಲಿಯೇ ತತ್ಪೂರ್ವದಲ್ಲಿ 'ಧ್ವನಿ' ಸಂಜ್ಞೆಯ ವ್ಯವಹಾರವನ್ನು ಯಾವ ಲಾಕ್ಷಣಿಕರೂ ಮಾಡಿಲ್ಲ; ಕವಿಗಳೆಲ್ಲ ಸುಮ್ಮನೆ 'ಸದ್ದು' ಎಂಬರ್ಥದಲ್ಲಿಯೇ ಅದನ್ನು ಬಳಸಿದ್ದಾರೆ. ಆದ್ದರಿಂದ ಸಮಕಾಲೀನನಾದ ನೃಪತುಂಗನಿಗೆ ಕರ್ಣಾಕರ್ಣಿಕೆಯಾಗಿ 'ಧ್ವನಿ'ಯೂ ಕಾವ್ಯದ ಸೌಂದರ್ಯತತ್ತ್ವವೆಂಬ ಹೇಳಿಕೆ ಮುಟ್ಟಿ, ಅದನ್ನೂ ಅವನು ಒಂದಲಂಕಾರವೆಂದು ತನ್ನ ನಿರೂಪಣೆಯಲ್ಲಿ ಸೇರಿಸಿಕೊಂಡನೆಂದು ತೀರ್ಮಾನಿಸಬೇಕಾಗುತ್ತದೆ.

ಇಲ್ಲಿ ಇನ್ನೊಂದು ಅಂಶ: ಲಕ್ಷಣ ಹೇಳುವಾಗ 'ಅರ್ಥದೆ ದೂಷ್ಯಂ' ಎಂದರೇನು? ಇದು ತೊಡಕಾಗಿದೆ. ವಾಚ್ಯಾರ್ಥಕ್ಕೆ ಬಾಧೆ ಬರುವುದನ್ನು ದೋಷವೆಂದು ಧ್ವನಿಲಾಕ್ಷಣಿಕರು ಸಾಮಾನ್ಯವಾಗಿ ಹೇಳುವುದಿಲ್ಲ. ಆದರೆ ಈ ಅನುಪಪತ್ತಿಯನ್ನೇ ನೃಪತುಂಗನು ವ್ಯಾವಹಾರಿಕ ದೃಷ್ಟಿಯಿಂದ 'ದೂಷ್ಯ'ವೆಂದಿರಬೇಕು. ಇದಕ್ಕೆ ಮತ್ತಾವ ಸಮಾಧಾನವೂ ಸುಕರವಲ್ಲ.

ತೀ. ನಂ. ಶ್ರೀಕಂಠಯ್ಯನವರು ಹೇಳುವಂತೆ 'ಅನಿಮಿಷ' ಎಂಬ ಇಲ್ಲಿಯ ಪದದಿಂದ 'ಅವಳು ಮಾನವಿಯಲ್ಲ, ದೇವಿ', ಎಂಬರ್ಥ ಖಂಡಿತವಾಗಿಯೂ ಸ್ಫುರಿಸುವುದಿಲ್ಲ.

ಅಲ್ಲಿಯೇ ಅವರು 'ಅರ್ಥ'ದಿಂದ ಧ್ವನಿತವಾದರೆ ದೂಷ್ಯವಾಗುತ್ತದೆ—ಎಂದರೇನು? ಸಂಸ್ಕೃತ ಲಕ್ಷಣ ಗ್ರಂಥಗಳಲ್ಲಿ ನಮಗೆ ಪರಿಚಿತವಾಗಿರುವ ಯಾವ ವಿವರಣೆಯನ್ನೂ ಇಲ್ಲಿಗೆ ಹೊಂದಿಸಲು ಆಗುವುದಿಲ್ಲ' ಎಂದು ಹೇಳಿದ್ದಾರೆ.

'ಅರ್ಥದಿಂದ ಧ್ವನಿತವಾದರೆ ದೋಷ'—ಇದು ತೀ. ನಂ. ಶ್ರೀ. ಅವರು ನೃಪತುಂಗನ ಬಾಯಲ್ಲಿ ಹಾಕಿರುವ ಮಾತು; ನೃಪತುಂಗ ಹಾಗೆ ಹೇಳಿಯೇ ಇಲ್ಲವಲ್ಲ! ನೃಪತುಂಗ ಹೇಳಿರುವುದಿಷ್ಟೇ : 'ಧ್ವನಿಯಿಸುಗುಂ ಶಬ್ದದಿಂದ; ಅರ್ಥದೆ ದೂಷ್ಯಂ.' ಅರ್ಥವೇ

ಎಂದರೆ ವಾಚ್ಯಾರ್ಥವೇ ದೋಷದಂತೆ ಕಾಣುತ್ತದೆ; ಧ್ವನಿತವಾದ ಅರ್ಥಾಂತರವನ್ನು ದೂಷ್ಯವೆನ್ನುವ ಸಂದರ್ಭವೂ ಇಲ್ಲ; ಪ್ರಸಕ್ತಿಯೂ ಇಲ್ಲ. ಇಲ್ಲಿ ಆಕ್ಷೇಪಣೆಯೇ ಸಲ್ಲದು....

ಇಲ್ಲಿ ತೀ. ನಂ. ಶ್ರೀಕಂಠಯ್ಯನವರ ಶಬ್ದಶಕ್ತಿ ಮೂಲಧ್ವನಿಯ ಸೂಚನೆಯನ್ನಾಶ್ರಯಿಸಿ ರೂಪಾಲಂಕಾರಧ್ವನಿಯೇ ಇಲ್ಲಿಯ ವಿವಕ್ಷಿತಾರ್ಥವೆಂದು ಆನಂದವರ್ಧನನು ಹೇಳಿರುವ ಶಬ್ದಶಕ್ತಿ ಮೂಲಧ್ವನಿಗೆ ಎಂ. ವಿ. ಸೀತಾರಾಮಯ್ಯನವರು ಅನ್ವಯಿಸಿದ್ದಾರೆ. ನಿಜವಾದರೆ ವ್ಯಂಗ್ಯವಾಗಿರುವುದು ವಸ್ತುವಲ್ಲ; ಮತ್ತೊಂದು ಅಲಂಕಾರ. ಅದು ವಾಚ್ಯವಲ್ಲದ್ದರಿಂದ ಅಲಂಕಾರಧ್ವನಿಯೆನಿಸುತ್ತದೆ. ಈ ತಾತ್ಪರ್ಯ ನೃಪತುಂಗನಿಗೆ ಕನಸಿನಲ್ಲಿಯಾದರೂ ಇದ್ದಿದ್ದರೆ, ಅವನು 'ಧ್ವನಿಯೆಂಬುದು ಅಲಂಕಾರಂ' ಎನ್ನಲವಕಾಶವಿರುತ್ತಿರಲಿಲ್ಲ....

....ನೃಪತುಂಗನಿಗೆ ಧ್ವನ್ಯಾಲೋಕದ ಅತ್ಯಂತ ಸೂಕ್ಷ್ಮ ಪ್ರಕ್ರಿಯೆಗಳಲ್ಲಿ ಒಂದಾದ 'ಶಬ್ದಶಕ್ತಿ ಮೂಲಧ್ವನಿ'ಯ ಪರಿಚಯವನ್ನು ಆರೋಪಿಸುವುದು ಸಾಹಸವಾದೀತು. ಅದೂ ಅಲ್ಲದೆ, ರೂಪಕಾಲಂಕಾರ ಧ್ವನಿಯಿದೆಯೆಂದರೆ ರೂಪಕಾಲಂಕಾರದಲ್ಲಿ ವಾಚ್ಯಾಂಶಕ್ಕಿಂತ ಸೌಂದರ್ಯ ಹೆಚ್ಚೆಂದು ಸಾಧಿಸಿದಲ್ಲದೆ 'ಧ್ವನಿ'ತ್ವವೇ ಸಿದ್ಧಿಸದು. ಹೀಗೆ ಸಾಧಿಸಿದರೂ ಅದು 'ಅರ್ಥ' ಶಕ್ತಿ ಮೂಲಧ್ವನಿಯೆನಿಸೀತೇ ವಿನಾ ಎಂದಿಗೂ 'ಶಬ್ದ' ಶಕ್ತಿ ಮೂಲಧ್ವನಿಯಾಗದು: ಏಕೆಂದರೆ ಒಂದೇ ಶಬ್ದಕ್ಕೆ ಎರಡರ್ಥಗಳಿದ್ದು ಅವೆರಡಕ್ಕೂ ಅಸಂಬದ್ಧತೆಯಾಗದಂತೆ ಕಲ್ಪಿಸುವ ಅಲಂಕಾರ ಮಾತ್ರ ಶಬ್ದಶಕ್ತಿ ಮೂಲಧ್ವನಿ. ಇಲ್ಲಿ ಎರಡರ್ಥದ ಶಬ್ದಗಳಿಲ್ಲ; ಅದರ ಪ್ರಸಕ್ತಿಯೂ ಇಲ್ಲ; ಮುಖವೇ ಕಮಲವೆಂಬ ರೂಪಕಾಂಶದಲ್ಲಿ ಸೌಂದರ್ಯಾಂಶದ ಅತಿಶಯ ಮೊದಲೇ ಇಲ್ಲ."[213]

ಭೀಮರಾವ ಚಿಟಗುಪ್ಪಿಯವರ ಪ್ರಕಾರ, ಕವಿರಾಜಮಾರ್ಗಕಾರ ಧ್ವನಿವಿರೋಧಿ ಅಥವಾ ಅಂತರ್ಭಾವವಾದಿ; ಅವರು ಹೀಗೆ ಅಭಿಪ್ರಾಯಿಸುತ್ತಾರೆ: "ಒಂದೇ ಒಂದು ಕಂದಪದ್ಯದಲ್ಲಿದ್ದರೂ ಧ್ವನಿ ಒಂದು ಅಲಂಕಾರವೆಂದು ಬಗೆದು ಯುಕ್ತ ಲಕ್ಷ್ಯದೊಡನೆ ಅದನ್ನು ಆ ರೀತಿ ನಿರೂಪಿಸಿದವರಲ್ಲಿ ನೃಪತುಂಗನನ್ನು ಬಿಟ್ಟರೆ ಬೇರೊಬ್ಬನಿಲ್ಲ. ಧ್ವನಿತತ್ತ್ವದ ಉಗಮ ವಿಕಾಸಗಳ ಇತಿಹಾಸದಲ್ಲಿ ಆತನ ಈ ಪದ್ಯ ಸಂಸ್ಕೃತದಲ್ಲಿ ಇದ್ದಿದ್ದರೆ ಒಂದು ಮಹತ್ವದ ಮೈಲುಗಲ್ಲಾಗುತ್ತಿತ್ತು. ಪ್ರತೀಹಾರೇಂದುರಾಜ ಮೊದಲಾದ ಧ್ವನಿವಿರೋಧಿ, ಅಲಂಕಾರ-ಅಂತರ್ಭಾವವಾದಿಗಳ ಅಗ್ರಗಣ್ಯ, ಇಷ್ಟೇ ಅಲ್ಲದೆ ಅದೊಂದು ವಿಶಿಷ್ಟ ಅಲಂಕಾರವೆಂದು ಬಗೆದವರ ಅಗ್ರಗಣ್ಯನಾಗಿ ಮೆರೆಯುತ್ತಿದ್ದ"; "ಧ್ವನಿಯೆಂಬುದು ಹೊಸದಲ್ಲ. ಅದು ಅಲಂಕಾರಗಳಲ್ಲಿಯೇ ಸಮಾವೇಶವಾಗಿದೆ ಎಂಬುದು ಪ್ರತೀಹಾರೇಂದು ರಾಜನ ನಿಲುಮೆ. ನೃಪತುಂಗನದಾದರೂ ಇದೇ ನಿಲುಮೆ-ಆದರೆ ಆತ ಇಷ್ಟಕ್ಕೇ ತೃಪ್ತನಾಗದೆ ಒಂದು ಹೆಜ್ಜೆ ಮುಂದೆ ಹೋಗಿ ಅದನ್ನು ಶಬ್ದ-ಶಕ್ತಿ-ಜನ್ಯ ವಿಶಿಷ್ಟ ಅಲಂಕಾರದಲ್ಲಿ ಮಾರ್ಪಡಿಸಿರುವನು"; "ನೃಪತುಂಗನು ಕಟ್ಟಾ ಧ್ವನಿವಿರೋಧಿಯೆಂಬುದು ಆತನ 'ಕಮಳದೊಳನಿಮಿಷಯುಗ' ಲಕ್ಷ್ಯದಿಂದ ಸ್ಪಷ್ಟ

ವಾಗುವುದು....ವಾದಗ್ರಸ್ತವಿರುವ ಮತ್ತು ಪ್ರಹೇಳಿಕೆಗಳಲ್ಲಿ ಶೋಭಿಸುವಂಥ ಉಕ್ತಿ ವೈಚಿತ್ರ್ಯ ಪ್ರಧಾನ 'ಕಮಳದೊಳನಿಮಿಷಯುಗ' ಮಾತನ್ನು ಲಕ್ಷ್ಯವೆಂದು ತನ್ನ ಧ್ವನಿಪದ್ಯದಲ್ಲಿ ಸೇರಿಸಿ ನೃಪತುಂಗನು ತನ್ನ ಕಾಲದ ಧ್ವನಿವಾದಿಗಳನ್ನು ಮೂದಲಿಸಿರುವನು"; "ಭಾಮಹಾದಿ ಪ್ರಾಚೀನ ದಿಗ್ದಂತಿಗಳ ಗ್ರಂಥದಲ್ಲಿರದ ಮತ್ತು ಮುಂದೆ ಕಾವ್ಯಪ್ರಪಂಚದಲ್ಲಿ ಕಾವ್ಯತತ್ವವೆಂಬ ಅರ್ಥದಲ್ಲಿ ಕ್ರಾಂತಿಯನ್ನೆಬ್ಬಿಸಿದ ಧ್ವನಿಯ ಪ್ರಥಮ ಉಲ್ಲೇಖವು, ನೃಪತುಂಗನ ಗ್ರಂಥದಲ್ಲಿ, ಕನ್ನಡದಲ್ಲಿ ದೊರೆಯುವದೆಂಬುದು ಅಭಿಮಾನಾಸ್ಪದ ಮಾತೆಂಬಲ್ಲಿ ಸಂದೇಹವಿಲ್ಲ".[214]

ಇತ್ತೀಚೆಗೆ ಎಂ. ವಿ. ಸೀ. ಅವರು ಹೀಗೆ ಹೇಳುತ್ತಾರೆ: "....ಧ್ವನಿಸಿದ್ಧಾಂತವನ್ನು ಶಾಶ್ವತವಾಗಿ ಸ್ಥಾಪಿಸಿದ ಕೀರ್ತಿ ಆನಂದವರ್ಧನನದು. ಈ ಸಿದ್ಧಾಂತದ ಪ್ರಕ್ರಿಯೆಯ ವಿವರಗಳೆಲ್ಲವೂ ಕವಿರಾಜಮಾರ್ಗಕಾರನಿಗೆ ತಿಳಿದಿತ್ತೋ ಇಲ್ಲವೋ ಎಂದು ತೀರ್ಮಾನಿಸಲು ನಮಗೆ ಯಾವ ಆಧಾರವೂ ಇಲ್ಲ. ಆದರೆ ಅವನಿಗೆ ಪೂರ್ವದ ಭಾಮಹಾದಿಗಳು ಧ್ವನಿಯ ಸೊಲ್ಲನ್ನೂ ಎತ್ತದಿರುವಾಗ, 'ಧ್ವನಿ ಕಾವ್ಯದ ಆತ್ಮ' ಎಂಬುದಕ್ಕೆ ಪ್ರತಿಕಕ್ಷಿಯಾಗಿ ಎಂಬಂತೆ 'ಧ್ವನಿಯೆಂಬುದಲಂಕಾರಂ' ಎಂದು ಅಷ್ಟೇ ನಿಶ್ಚಿತಧ್ವನಿಯಿಂದ ಹೇಳಿ, 'ಧ್ವನಿ' ಮೂಲಗಳಾದ 'ಶಬ್ದ', 'ಅರ್ಥ'ಗಳನ್ನು ಉಲ್ಲೇಖಿಸಿ, ಧ್ವನಿ ಶಬ್ದದಿಂದ ಹುಟ್ಟುವುದೆಂದೂ ಅರ್ಥ ಮೂಲದಿಂದಾದರೆ ದೂಷ್ಯವೆಂದೂ ವಿವರಿಸಿ, ತನ್ನ ಅಭಿಮತಕ್ಕೆ ಅನುಗುಣವಾದ ಲಕ್ಷ್ಯವನ್ನೂ ಕೊಟ್ಟಿರಬೇಕಾದರೆ, ಧ್ವನಿಸಿದ್ಧಾಂತದ ಬಹುಸ್ಥೂಲವಾದ ರೂಪರೇಷೆಯಾದರೂ ಅವನಿಗೆ ತಿಳಿದಿದ್ದಿರಬೇಕೆಂದು ಧಾರಾಳವಾಗಿ ಊಹಿಸಬಹುದು."[215]

ಮಾರ್ಗಕಾರನ ಪದ್ಯವನ್ನು ಕುರಿತು ಇದುವರೆಗೆ ವಿದ್ವಾಂಸರು ವ್ಯಕ್ತಪಡಿಸಿರುವ 'ಭಿನ್ನಾಭಿಪ್ರಾಯಗಳ ಪರಾಮರ್ಶೆಯ ಫಲವಾಗಿ ರೂಪಗೊಂಡ ಹೊಸವಿವರಣೆಯೊಂದನ್ನು ಜಿಜ್ಞಾಸುಗಳ ಪರಿಶೀಲನೆಗಾಗಿ' ಮುಂದಿಡುತ್ತಾರೆ ಎಂ. ವಿ. ಸೀ. ಅವರು (ಚಿಟಗುಪ್ಪಿಯವರಲ್ಲೆ ಇದರ ಸೂಚನೆಯಿದೆ):

"ಆನಂದವರ್ಧನನಿಗಿಂತ ಹಿಂದೆಯೇ ಧ್ವನಿತತ್ತ್ವಪ್ರತಿಪಾದಕರೂ ವಿರೋಧಿಗಳೂ ಇದ್ದರಷ್ಟೆ. ಈ ವಿರೋಧಿ ಪಂಥದವರಲ್ಲಿ 'ಧ್ವನಿ ಕಾವ್ಯದ ಆತ್ಮವಲ್ಲ, ಇತರ ಅಲಂಕಾರಗಳಂತೆ ಅದೂ ಒಂದು ಅಲಂಕಾರ-ರಸವದಲಂಕಾರದಂತೆ' ಎಂದು ವಾದಿಸುವ ಒಂದು ಪಂಥವೂ ಇದ್ದಿರಬೇಕು. ಈ ಪಂಥದವರು 'ಧ್ವನಿ (ಎಂಬ ಅರ್ಥಾಂತರ) ವಾಚ್ಯಾರ್ಥಕ್ಕೆ ಸೌಂದರ್ಯವನ್ನು ಕೊಡತಕ್ಕದ್ದು. ಆದ್ದರಿಂದ, ಅದೂ ಒಂದು ಅಲಂಕಾರವೇ, ಅಲಂಕಾರದಿಂದ ಭಿನ್ನವಾದ ಕಾವ್ಯಾಂಶವಲ್ಲ' ಎಂದು ಭಾವಿಸಿದ್ದರೆಂದು ಕಾಣುತ್ತದೆ. ಉದ್ಭಟನ 'ಕಾವ್ಯಾಲಂಕಾರಸಾರ ಸಂಗ್ರಹ'ಕ್ಕೆ ವ್ಯಾಖ್ಯಾನವನ್ನು ಬರೆದಿರುವ ಪ್ರತೀಹಾರೇಂದುರಾಜನು ಈ ಧ್ವನ್ಯಲಂಕಾರ ಸಿದ್ಧಾಂತದ ಪ್ರವರ್ತಕತ್ವವನ್ನು ಉದ್ಭಟನಿಗೆ ಆರೋಪಿಸಿದ್ದಾನೆ. ಹೀಗೆ ಆರೋಪಿಸಲು ಯಾವ ಆಧಾರವೂ ಇಲ್ಲದಿದ್ದರೂ, ಬಹುಶಃ ಪಾರಂಪರ್ಯವಾಗಿ ಸಾಗಿಬಂದ ಪ್ರವಾದದ ಆಧಾರದ ಮೇಲೆ ಇಂದು

ರಾಜನು ಹಾಗೆ ಮಾಡಿರಬಹುದು. ಅಲಂಕಾರಶಾಸ್ತ್ರದಲ್ಲಿ ಉದ್ಭಟೀಯ ಪಂಥ ಒಂದು ಇದ್ದಂತೆ ಕಾಣುತ್ತದೆ. ಈ ಪಂಥದ ಮುಖ್ಯ ಸಿದ್ಧಾಂತಗಳಲ್ಲಿ 'ಧ್ವನ್ಯಲಂಕಾರ' ಸಿದ್ಧಾಂತವೂ ಒಂದು. ಇನ್ನೊಂದು ಮುಖ್ಯ ಸಿದ್ಧಾಂತದ ಆಶಯ ಹೀಗೆ: 'ಶ್ಲೇಷೆಯೂ ಯಾವುದಾದರೂ ಇನ್ನೊಂದು ಅಲಂಕಾರವೂ ಒಡಗೊಂಡಿದ್ದರೆ, ಶ್ಲೇಷೆಗೆ ಪ್ರಾಧಾನ್ಯ; ಅಲಂಕಾರ ಗೌಣ'. ಈ ಎರಡು ಸಿದ್ಧಾಂತಗಳ ತತ್ತ್ವಗಳನ್ನೂ ಸಮಾವೇಶಗೊಳಿಸುವ ಪ್ರಯತ್ನ ಕವಿರಾಜಮಾರ್ಗದ ಪದ್ಯದಲ್ಲಿ ನಡೆದಿರುವಂತೆ ಕಂಡುಬರುತ್ತದೆ. ಈ ಸಂದರ್ಭದಲ್ಲಿ ನಾವು ಗಮನಿಸಬೇಕಾದದ್ದು—ಅನಿಮಿಷಯುಗ ಎಂಬ (ಶಬ್ದನಿಷ್ಠ) ಶ್ಲೇಷೆ; ಪದ್ಯದಲ್ಲಿ ಇದಕ್ಕೆ ಪ್ರಾಧಾನ್ಯ; ಇದರಿಂದಲೇ—ಹಾಗೂ 'ಇದು ಚೋದ್ಯಂ' ಎಂಬ ಶಬ್ದಪ್ರಯೋಗದಿಂದ—ವಾಕ್ಯಸೌಂದರ್ಯಕ್ಕೆ ಪೋಷಕವಾದ, ಉಪಮಾದ್ಯೋತಕ ವಾದ, 'ಕಮಲಸದೃಶವಾದ ಮುಖದಲ್ಲಿ ಮೀನದ್ವಯ (=ಅನಿಮಿಷಯುಗ) ಸದೃಶ ವಾದ ನಯನದ್ವಯವು' ಎಂಬ ಅರ್ಥವು ಧ್ವನಿತವಾಗಿರುವುದು. ಹೀಗೆ, ಶಬ್ದನಿಷ್ಠವಾಗಿ ಧ್ವನಿತವಾಗುವ ಕಾವ್ಯಶೋಭಾಕರವಾದ (ಎಂದರೆ ಅಲಂಕಾರಪ್ರಾಯವಾದ) ಅರ್ಥವೇ ಧ್ವನಿ; ಈ ಅರ್ಥವನ್ನು ಮೀರಿ, ಇಲ್ಲದ ಒಂದು ಅರ್ಥ ಅದರಿಂದ (ಎಂದರೆ, ಧ್ವನಿತ ವಾದ ಅರ್ಥದಿಂದ) ಪ್ರತೀಯಮಾನವಾಗುತ್ತದೆ ಎನ್ನುವುದು ದೂಷ್ಯ (ಎಂದರೆ ಖಂಡ ನಾರ್ಹ). ಇದಿಷ್ಟು 'ಧ್ವನ್ಯಲಂಕಾರ' ವಿಷಯಕ ಪದ್ಯದ ಅರ್ಥವಿವರಣೆ, ಮಾರ್ಗ ಕಾರನ ಆಶಯವೇನಿರಬಹುದೆಂಬುದರ ವಿವೇಚನೆ; ಅವನ ಸಿದ್ಧಾಂತದ ಸಮರ್ಥನೆಯಲ್ಲ. ಅದು ಹೇಗಿದ್ದರೂ, ಈ ಪದ್ಯದ ವಿಷಯ ಭಾರತೀಯ ಕಾವ್ಯಮೀಮಾಂಸೆಯ ಇತಿ ಹಾಸದಲ್ಲಿ ಉಲ್ಲೇಖಿಸಲರ್ಹವಾದ ಒಂದು ಪ್ರಮುಖ ವಿಚಾರ."[216]

ಕವಿರಾಜಮಾರ್ಗಕಾರನಿಗೆ ಧ್ವನಿತತ್ತ್ವದ ನಿಖರವಾದ ಪರಿಜ್ಞಾನವಿತ್ತೇ ಎಂಬುದು ಕಡೆಗೂ ನಿಲ್ಲುವ ಪ್ರಶ್ನೆ. 'ಧ್ವನಿಯೆಂಬುದಳಂಕಾರಂ' ಎಂಬ ಹೇಳಿಕೆಯೇನೋ ತರ್ಕಬದ್ಧ ವಾಗಿದೆ; ರಸ ಹೇಗೆ ಒಂದು ಅಲಂಕಾರವೊ ಧ್ವನಿಯೂ ಹಾಗೆ ಒಂದು ಅಲಂಕಾರ ಎಂದು ಸಮರ್ಥಿಸಬಹುದು. ಆದರೆ ಈ ತರ್ಕಬದ್ಧತೆ ಆಕಸ್ಮಿಕವಾಗಿ ಉಂಟಾದುದೊ ಪ್ರಜ್ಞಾಪೂರ್ವಕವಾಗಿ ಉಂಟಾದುದೊ ಹೇಗೆ ಹೇಳುವುದು? ಮಾರ್ಗಕಾರನಿಗೆ ಧ್ವನಿಯ ಸ್ಪಷ್ಟವಾದ ಅರಿವು ಇದ್ದುದೇ ಆದ ಪಕ್ಷದಲ್ಲಿ, ಈ ಮುಖ್ಯವಾದ ತತ್ತ್ವಕ್ಕೆ ಅಂಥ ಅತೃಪ್ತಿಕರವಾದ ಲಕ್ಷ್ಯವನ್ನು ಅವನು ಕೊಡುತ್ತಿದ್ದನೇ? ಕೆಲವು ಅಲಂಕಾರಗಳಿಗೆ ಹಲವಾರು ಉದಾಹರಣಪದ್ಯಗಳನ್ನು ಕೊಟ್ಟಿರುವ ಮಾರ್ಗಕಾರ ಧ್ವನಿಯಂತಹ ಕ್ರಾಂತಿಕಾರಕ, ವ್ಯಾಪಕ ತತ್ತ್ವಕ್ಕೆ ಒಂದೇ ಒಂದು ಗೌಣವೆನಿಸುವ ಉದಾಹರಣೆ ಯನ್ನಿತ್ತು ಕೈಬಿಡುತ್ತಿದ್ದನೇ? ಅವನ ಏಕೈಕ ಪದ್ಯ ಧ್ವನಿಯ ಲಕ್ಷ್ಯಲಕ್ಷಣಗಳನ್ನೆಲ್ಲ ಒಳಗೊಂಡಿರುವುದು ಸಹಜವಾಗಿ ತೋರುತ್ತದೆಯೆ? (ಅಥವಾ ಧ್ವನಿಯ ಬಗ್ಗೆ ಮಾರ್ಗ ಕಾರನ ಅನಾದರ ಇದಕ್ಕೆಲ್ಲ ಕಾರಣವೊ?) ಸದ್ಯಕ್ಕೆ ನಾವು 'ಇದಮಿತ್ಥಂ' ಎಂದು ಏನನ್ನೂ ಹೇಳುವ ಸ್ಥಿತಿಯಲ್ಲಿಲ್ಲ; ಊಹೆಗಳಿಗೇನೊ ಬೇಕಾದಷ್ಟು ಅವಕಾಶವಿದೆ. ಅಂತೂ ಕವಿರಾಜಮಾರ್ಗಕಾರ "ಕನ್ನಡದ ಕಾವ್ಯಮೀಮಾಂಸೆಯಲ್ಲಿ ಧ್ವನಿತತ್ತ್ವದ

ಆದ್ಯಪ್ರವರ್ತಕ" ಎನಿಸಿಕೊಂಡಿದ್ದಾನೆ, ಧ್ವನಿಸಂಬಂಧವಾದ ತನ್ನ ಒಂದೇ ಒಂದು ಪದ್ಯದಿಂದ.

## ಮಹಾಕಾವ್ಯಲಕ್ಷಣ

ಗ್ರಂಥಾಂತ್ಯದಲ್ಲಿ ಮಾರ್ಗಕಾರ 'ಮಹಾಕಾವ್ಯ' ಲಕ್ಷಣವನ್ನು ಹೇಳುತ್ತಾನೆ. ಭಾಮಹ ದಂಡಿಯರಲ್ಲಿ ಮಹಾಕಾವ್ಯಲಕ್ಷಣ ಹೇಗೆ ನಿರೂಪಿತವಾಗಿದೆಯೆಂಬುದನ್ನು ಮೊದಲು ನೋಡಬಹುದು.

ಭಾಮಹ: ಅನೇಕ ಸರ್ಗಗಳು ಕೂಡಿ ಆದುದಕ್ಕೆ ಮಹಾಕಾವ್ಯವೆಂದು ಹೆಸರು. ಅದು ಮಹಾಪುರುಷರನ್ನು ಕುರಿತಿರುವುದಲ್ಲದೆ ಪರಿಮಾಣದಲ್ಲಿಯೂ ಮಹತ್ತಾಗಿರುವುದು. ಅದರ ಶಬ್ದಗಳಲ್ಲಿ ಗ್ರಾಮ್ಯ ಅಥವಾ ಅಶ್ಲೀಲ ದೋಷವಿರುವುದಿಲ್ಲ; ಅರ್ಥದಲ್ಲಿ ಗೌರವವಿರುತ್ತದೆ. ಅಲಂಕಾರಗಳಿಂದ ಭೂಷಿತವಾಗಿರುವುದಲ್ಲದೆ ಉತ್ತಮವಾದ ವಸ್ತುವನ್ನಾಶ್ರಯಿಸಿರುತ್ತದೆ. ಮಂತ್ರಾಲೋಚನೆ, ದೂತರು, ಪ್ರಯಾಣ, ಯುದ್ಧ, ನಾಯಕಾಭ್ಯುದಯಗಳಿಂದಲೂ ಪಂಚಸಂಧಿಗಳಿಂದಲೂ ಸಮನ್ವಿತವಾಗಿರುತ್ತದೆ. ಕಷ್ಟಪಟ್ಟು ಅರ್ಥ ಮಾಡುವಂತಿರುವುದಿಲ್ಲ; ಎಲ್ಲ ರೀತಿಯಿಂದಲೂ ಸಮೃದ್ಧವಾಗಿರುತ್ತದೆ. ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನೂ ಪ್ರತಿಪಾದಿಸುತ್ತಿದ್ದರೂ, ವಿಶೇಷವಾಗಿ ಐಹಿಕವಾದ ಅರ್ಥದ ಉಪದೇಶಕ್ಕೆ ಪ್ರಾಧಾನ್ಯವಿರುತ್ತದೆ. ಲೋಕಸ್ವಭಾವವನ್ನು ಚಿತ್ರಿಸುವುದಲ್ಲದೆ ಬೇರೆಬೇರೆ ರಸಗಳೆಲ್ಲವನ್ನೂ ಒಳಗೊಂಡಿರುತ್ತದೆ (೧-೧೯-೨೧).

ದಂಡಿ: ಒಂದಕ್ಕಿಂತ ಹೆಚ್ಚು ಸರ್ಗಗಳು ಸೇರಿ ಆಗುವ ಪ್ರಬಂಧ 'ಮಹಾಕಾವ್ಯ'ವೆನಿಸುತ್ತದೆ. ಅದರ ಲಕ್ಷಣವನ್ನೀಗ ಹೇಳುತ್ತೇವೆ: ಅದರ ಆದಿಯಲ್ಲಿ ಹಾರೈಕೆ ಇಲ್ಲವೆ ನಮಸ್ಕಾರ ಇಲ್ಲವೆ ಕಥಾನಿರ್ದೇಶವು ಬರುತ್ತದೆ. ಇತಿಹಾಸವಾಗಲಿ ಕಥೆಯಾಗಲಿ ಅದಕ್ಕೆ ಮೂಲವಾಗಬಹುದು; ಇವಲ್ಲದೆ ಬೇರೆ ಸತ್ಪುರುಷರನ್ನು ಕುರಿತೂ ಇರುವುದುಂಟು. ಅದು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳ ಫಲಪ್ರಾಪ್ತಿಗೆ ಅಧೀನವಾಗಿರುತ್ತದೆ. ನಾಯಕನು ಚತುರನೂ ಉದಾತ್ತನೂ ಆಗಿರುತ್ತಾನೆ. ಊರು, ಕಡಲು, ಬೆಟ್ಟ, ಋತು, ಚಂದ್ರೋದಯ, ಸೂರ್ಯೋದಯ ಇವುಗಳ ವರ್ಣನೆಗಳಿಂದಲೂ ವನವಿಹಾರ, ಜಲಕ್ರೀಡೆ, ಮಧುಪಾನ ವಿನೋದ, ಸುರತೋತ್ಸವಗಳಿಂದಲೂ ವಿಯೋಗಗಳಿಂದಲೂ ವಿವಾಹಗಳಿಂದಲೂ ಕುಮಾರಜನನದ ವರ್ಣನೆಗಳಿಂದಲೂ ಮಂತ್ರಾಲೋಚನೆ, ದೂತಕಾರ್ಯ, ವಿಜಯಯಾತ್ರೆ, ಯುದ್ಧ, ನಾಯಕನ ವಿಜಯಗಳಿಂದಲೂ ಅಲಂಕೃತವಾಗಿ, ಸಂಕ್ಷೇಪವಾಗಿರದೆ, ರಸಭಾವಗಳಿಂದ ನಿಬಿಡವಾಗಿರುತ್ತಾ, ಅತಿ ವಿಸ್ತಾರವಲ್ಲದ, ಕಿವಿಗಿಂಪಾದ ವೃತ್ತಗಳಿಂದ ಕೂಡಿದ, ಒಳ್ಳೆಯ ಸಂಧಿಗಳಿರುವ ಮತ್ತು ಮೊದಲಿನ ವೃತ್ತಗಳಿಂದ ಬೇರೆಯಾದ ವೃತ್ತಗಳು ಕಡೆಯಲ್ಲಿ ಬರುವಂತೆಯೇ ಪ್ರತಿಯೊಂದೂ ಇರುವ ಸರ್ಗಗಳಿಂದ ಕೂಡಿದ್ದಾಗಿರುವ, ಅಲಂಕಾರ ಸಹಿತವಾದ ಕಾವ್ಯ

ಲೋಕರಂಜನೆಯನ್ನು ಮಾಡುವುದಲ್ಲದೆ ಕಲ್ಪಾಂತದವರೆಗೂ ಚಿರಸ್ಥಾಯಿಯಾಗಿ ನಿಲ್ಲುವುದು (೧–೧೪–೧೯).

'ಕವಿರಾಜಮಾರ್ಗ'ಪ್ರೋಕ್ತವಾದ ಮಹಾಕಾವ್ಯಸ್ವರೂಪವನ್ನು ಟಿ. ವಿ. ವೆಂಕಟಾಚಲಶಾಸ್ತ್ರಿಗಳು ಹೀಗೆ ಬಿಡಿಸಿದ್ದಾರೆ:[217] "ಮಹಾಕಾವ್ಯವೆಂಬುದು ಪ್ರಸಿದ್ಧವಾದ ಇತಿಹಾಸವನ್ನು ಆಶ್ರಯಿಸಿರುತ್ತದೆ; ಅಥವಾ ಕಥೆಯ ವಿಶ್ರುತವೂ ಚತುರವೂ ಆದ ವಿಕಾಸದಿಂದ ಉತ್ಪಾದ್ಯವಾಗುವ ಅರ್ಥೋತ್ಕರವನ್ನು (ಬುದ್ಧಿಗೆ ವೇದ್ಯವಾಗುವ ವರ್ಣ್ಯಮಾನ ವಿಷಯವನ್ನು) ಆಶ್ರಯಿಸಿರುತ್ತದೆ; ಅಥವಾ ಅತಿಕುಶಲನೂ ಬಲೀಯನೂ (?) ಆಚಾರವಂತನೂ ಲೋಕೋಪಕಾರಿಯೂ ಗುಣಸಂಪನ್ನನೂ ಉದಾರನೂ ಧೀರನೂ ಆದ ಮಹಾಪುರುಷನನ್ನು ಆಶ್ರಯಿಸಿರುತ್ತದೆ. (೨೧೦) ಪರಮ ಸುಖಪದಗಳಾದ ಚತುರ್ವರ್ಗಗಳನ್ನು ಪ್ರತಿಪಾದಿಸುವಂಥ ಲೋಕಪ್ರಸಿದ್ಧವಾದ ಆಖ್ಯಾನದಿಂದ ವಿಖ್ಯಾತವಾದುದು (?). ಪುರ, ಜನಪದ, ಶೈಲ, ಆದಿತ್ಯೋದಯ—ಅಸ್ತ, ಚಂದ್ರೋದಯ—ಅಸ್ತ, ಮೃಗಗಣ—ಇವುಗಳ ವ್ಯಾವರ್ಣನೆಗಳಿಂದ ನಿರ್ಣೀತಾರ್ಥವುಳ್ಳದ್ದು (೨೧೧). ಪುಷ್ಪಸೌರಭವನ್ನು ಹೊರಸೂಸಲಿರುವ ಉದ್ಯಾನದಲ್ಲಿ ಕ್ರೀಡೆ, ಕ್ರಮವಾಗಿ ಮುಂದಿನ ಜಲಕ್ರೀಡಾವಿನೋದಾದಿಗಳು ಮದಾವಿಷ್ಟರಾದ ಯುವತಿಯರ ಯೌವನವಿಲಾಸ, ಮಧುಪಾನ (?), ಪ್ರಿಯಸಂಯೋಗ—ಇವುಗಳಿಂದ ಸುಸಂಬದ್ಧವಾದುದು (೨೧೨). ವಿವಿಧ ವೈಭವಶೋಭೆಗಳಿಂದ ಮೊದಲಾದ ವಿಪ್ರಲಂಭ, ಅದರಿಂದ ಬೆಳೆದ ಪೂರ್ಣವಿಧಾನದ ವಿವಾಹೋತ್ಸವ, ಉತ್ತಮನಾದ ನೃಪಕುಮಾರನ ಜನನದಿಂದ ಹೊಮ್ಮುವ ಸಂತೋಷಾಧಿಕ್ಯವನ್ನು ಅನುಭವಿಸುವಾಗ ಶತ್ರುಗಳೂ ತನ್ನನ್ನು ಸೇವಿಸುತ್ತಿರುವಿಕೆ (?) (೨೧೩), ಚತುರ್ವಿಧ ಉಪಾಯಾದಿ ವಿಧಾನದಿಂದ ಮಂತ್ರಾಲೋಚನೆ, ದೂತಕಾರ್ಯ, (ರಣ) ಪ್ರಯಾಣ, ಶತ್ರುಸಂಹಾರಕಾರ್ಯದಿಂದ ವಿಜೃಂಭಿಸುವ ಸಂಗ್ರಾಮನಿರ್ಭಯನೂ ವೀರ್ಯ ಔದಾರ್ಯ ಗಂಭೀರಕಾರ್ಯಾಶ್ರಯನೂ ನಿರ್ಮಲಗುಣಸಂಪನ್ನನೂ ಆದ ನಾಯಕನ ಉತ್ಕರ್ಷ ಇವುಗಳಿಂದ ವಿದಿತವಾದದ್ದು (೨೧೪). ಸದಲಂಕಾರಗಳಿಂದಲೂ ಕೋಮಲ ಪದಪ್ರಯೋಗಗಳಿಂದಲೂ ಶೋಭಿಸುವಂಥದು, ಲಾಲಿತ್ಯವಿರುವ ನಾನಾ ವೃತ್ತಜಾತಿಗಳನ್ನು ಬಳಸಿರುವಂಥದು; ನಿರಂತರವಾದ ರಸವಿಶೇಷಗಳಿಗೆ ಉಪಾಶ್ರಯವಾಗಿ ಸಂಪದ್ಭರಿತವಾದ್ದು (೨೧೫). ನಯವಿದರಿಂದ ಹೇಳಲ್ಪಟ್ಟ ಸ್ಪಷ್ಟವಾದ ಯುಕ್ತಿ ಹಾಗೂ ಲೋಕಪ್ರತೀತಿ ಇವುಗಳ ಆಶ್ರಯದಿಂದ ಕೂಡಿದ್ದು; ಸಕಲಕಲೆಗಳಿಂದಲೂ ಅಭಿರಾಮವಾದದ್ದು; ಅನತಿ ವಿಸ್ತಾರವಾದದ್ದು; ಅಂತಿಮ ಪುರುಷಾರ್ಥ ಸಾಧನೆಗೆ ಸಹಕಾರಿಯಾದದ್ದು (೨೧೬). ದೋಷರಹಿತವಾಗಿ, ಪ್ರಾಚೀನರ ಸಾರ್ಥಕ ಅರ್ಥಗಳಿಂದ ಉಪಾತ್ತವಾದದ್ದು; ನಾನಾ ಶಬ್ದಗಳೆಂಬ- ವೀಚಿಪ್ರಪಂಚವನ್ನುಳ್ಳದ್ದು. ಇಂಥ ಮಹಾಕಾವ್ಯವು ಗುಣರತ್ನಾಕರವಾಗಿ, ರತ್ನಾಕರವಾದ ಸಾಗರದಂತೆ ಶೋಭಿಸಿ ಭೂವ್ಯೋಮಾಕಾಶವ್ಯಾಪ್ತವಾಗಿರುತ್ತದೆ (೨೧೭). ಹೀಗೆ ಅತಿಶಯವಾದ ವರ್ಣನೆಗಳನ್ನು ಎಡೆಬಿಡದೆ ಒಂದೆಡೆ ತಂದು ರಚಿಸಿದ ಕಾವ್ಯವು

ಆಕಲ್ಪಾಂತವೂ ಅವಿಚ್ಛಿನ್ನವೂ ಆಗಿ ಅಮೋಘವರ್ಷನ ಯಶಕ್ಕೆ ಸದೃಶವಾಗಿ ನಿಲ್ಲುತ್ತದೆ (೨೧೮).

ದಂಡಿ ಭಾಮಹರ ನಿರೂಪಣೆಯನ್ನೆ ಕವಿರಾಜಮಾರ್ಗಕಾರ ವಿಸ್ತರಿಸಿದ್ದರೂ, ಅವರಲ್ಲಿಲ್ಲದ ಕೆಲವು ಅಂಶಗಳನ್ನು ಅವನು ಹೇಳಿದ್ದಾನೆ.

ಕಡೆಯದಾಗಿ ಈ ಪದ್ಯವನ್ನು ನೋಡಬಹುದು :

ಸಕಳ ಲೌಕಿಕ ಸಾಮಯಿಕೋರು ವೈ
ದಿಕ ವಿಶೇಷ ವಿವೇಕ ಪರಾಯಣಂ
ಪ್ರಕಟಿತೋಕ್ತಿ ವಿವಿಕ್ತ ಕಳಾಕಳಾ
ಪಕ[ನು]ಸಾಹಿತ ಸಾಹಿತ್ಯವಿದ್ಯೆಯೊಳ್ ॥ (೩-೨೧೮)

ಕಡೆಯ ಪಾದದಲ್ಲಿರುವ 'ಸಾಹಿತ್ಯವಿದ್ಯೆಯೊಳ್' ಎಂಬುದರ ಸರಿಯಾದ ಪಾಠ 'ಸಾಹಿತವಿದ್ಯೆಯೊಳ್' ಎಂದು ಚಿಟಗುಪ್ಪಿಯವರ ಹೇಳಿಕೆ. ಅದಕ್ಕೆ ಅವರ ವ್ಯಾಖ್ಯಾನ ಹೀಗಿದೆ : "ಭಾಮಹನ 'ಸಹಿತೌ' ಶಬ್ದ ಸಾಹಿತ್ಯವೆಂದು ರೂಪುಗೊಳ್ಳುವ ಮೊದಲು ಸಾಹಿತೌ, ಸಾಹಿತ ಎಂದು ಬಳಕೆಯಲ್ಲಿದ್ದು ರಾಜಶೇಖರನ ಕೈಯಲ್ಲಿ 'ಸಾಹಿತ್ಯ ವಿದ್ಯೆ' ಯಾಗಿ ಇಂದು 'ಸಾಹಿತ್ಯ'ವಾದಂತಿದೆ"; "ಭಾಮಹನ 'ಸಹಿತೌ' ಶಬ್ದ 'ಸಾಹಿತ್ಯ ವಿದ್ಯೆ'ಯಾಗಿ ಲಲಿತವಾಙ್ಮಯಕ್ಕೆ ಪ್ರತಿಶಬ್ದವಾಗುವ ಮೊದಲು 'ಸಾಹಿತ್ಯವಿದ್ಯೆ' ಎಂದು ಇದೇ ಅರ್ಥದಲ್ಲಿ ಬಳಕೆಯಲ್ಲಿ ಇದ್ದಿತೆಂಬುದು ತಿಳಿಯುವುದಾದರೂ ಕವಿರಾಜಮಾರ್ಗ ದಿಂದಲೇ."[218]

## ಮೌಲ್ಯ, ಕೊಡುಗೆ

ಕೆ. ಕೃಷ್ಣಮೂರ್ತಿಯವರು ಹೇಳುತ್ತಾರೆ: "ನೃಪತುಂಗನು ಕನ್ನಡ ವಾಙ್ಮಯ ತೀರ್ಥಂಕರ"; "ಆದಿ ತೀರ್ಥಂಕರನೇ ಲೋಕಾನುಗ್ರಹಾರ್ಥವಾಗಿ ಮೊದಲು ಉಪಮಾದಿ ಅಲಂಕಾರಗಳು, ಉತ್ತರ-ದಕ್ಷಿಣ ಕಾವ್ಯಮಾರ್ಗಗಳು, ಅವುಗಳ ಪ್ರಾಣವಾದ ದಶಗುಣಗಳು ಎಲ್ಲವನ್ನೂ ವಿವರಿಸಲು ಅಲಂಕಾರ ಶಾಸ್ತ್ರವನ್ನು ಸಂಕ್ಷೇಪವಾಗಿ ಹೇಳಿದನಂತೆ. ಕನ್ನಡ ಭಾಷೆಯಲ್ಲಿ, ಕನ್ನಡದ ವೈಶಿಷ್ಟ್ಯವನ್ನು ಮನದಂದು, ತೀರ್ಥಂಕರನಂತೆ ಮೊತ್ತಮೊದಲಿಗೆ ಇದೆಲ್ಲವನ್ನೂ ಹೇಳಿರುವ ಕಾರಣ ಅವನು ಗ್ರಂಥದ ಸಮಾಪ್ತಿವಾಕ್ಯದಲ್ಲಿ 'ಪರಮಸರಸ್ವತೀತೀರ್ಥಾವತಾರ' ಎಂದು ತನ್ನನ್ನು ವಿಶೇಷಿಸಿಕೊಂಡಿರುವುದು ಅತ್ಯಂತ ಸಾರ್ಥಕವೆನ್ನಬಹುದಲ್ಲವೆ?"[219]

ಎಂ. ವಿ. ಸೀತಾರಾಮಯ್ಯನವರ ಮಾತುಗಳಿವು: "ನಾನಾ ಕಾರಣಗಳಿಂದ 'ಕವಿರಾಜ ಮಾರ್ಗ'ದ ಹಿರಿಮೆ ಬಲು ಹಿರಿದು. ಕನ್ನಡ ಕಾವ್ಯಮೀಮಾಂಸೆಯ ಚರಿತ್ರೆಯಲ್ಲಿ ಇದರದು ಅಗ್ರಸ್ಥಾನ; ವರಿಷ್ಠಸ್ಥಾನ; ಭಾರತೀಯ ಕಾವ್ಯಮೀಮಾಂಸೆಯಲ್ಲಿ ಕೂಡ ಇದಕ್ಕೆ ಗಣ್ಯಸ್ಥಾನ ಮೀಸಲು—ಅಂಥದೊಂದು ವಿಶಾಲಭೂಮಿಕೆಯ ಮಹಾಗ್ರಂಥ ಸಿದ್ಧವಾದಾಗ."[220]

ಇಂಥ ಉಕ್ತಿಗಳೆಲ್ಲ ಒಂದು ದೃಷ್ಟಿಯಿಂದ ಒಪ್ಪತಕ್ಕವೇ ಆದರೂ, 'ಕವಿರಾಜಮಾರ್ಗ'ದ ಮಹತ್ತ್ವವನ್ನು ವಿದ್ವಾಂಸರು ಉತ್ಪ್ರೇಕ್ಷಿಸಿದ್ದಾರೆಂದು ತಿಳಿಯಲೂ ಸ್ವಲ್ಪ ಅವಕಾಶವಿದೆ. ಮುಂದಿನ ಕನ್ನಡ ಕವಿಗಳಿಗೆ ಅದು ಹೆದ್ದಾರಿಯನ್ನು ಹಾಕಿಕೊಟ್ಟಿತು, ಮುಂದಿನ ಕನ್ನಡ ಸಾಹಿತ್ಯವೆಲ್ಲ ಅದರ ಬೆಳಕಿನಲ್ಲಿ ರೂಪುಗೊಂಡಿತು ಎಂಬುದು ಅತ್ಯುಕ್ತಿಯೆನಿಸುತ್ತದೆ. ಪಂಪನಂಥ ಮಹಾಕವಿಗೆ 'ಕವಿರಾಜಮಾರ್ಗ' ಮೇಲ್ಪಂಕ್ತಿಯಾಯಿತು, ಅದರ ಮಾರ್ಗದರ್ಶನದಲ್ಲಿ ಅವನು ಕಾವ್ಯರಚನೆ ಮಾಡಿದ ಎಂದರೆ ನಂಬುವುದು ಕಷ್ಟ. ಕನ್ನಡ ಕವಿಗಳು ಸಂಸ್ಕೃತದಲ್ಲೂ ಪಾರಂಗತರಾಗಿದ್ದರು; ಅವರಿಗೆ ಸಂಸ್ಕೃತ ಅಲಂಕಾರ ಗ್ರಂಥಗಳ ಮತ್ತು ಕಾಳಿದಾಸ ಭಾರವಿ ಮಾಘ ಬಾಣಾದಿ ಸಂಸ್ಕೃತಕವಿಗಳ ಪ್ರೌಢಕಾವ್ಯಗಳ ಶ್ರೀಮಂತಪರಂಪರೆ ಹಿನ್ನೆಲೆಯಾಗಿತ್ತು. ('ಕವಿರಾಜಮಾರ್ಗ'ದಲ್ಲಿ ಆ ಸಂಸ್ಕೃತ ಕವಿಗಳ ಉಲ್ಲೇಖವಿದೆ). ಹೀಗಾಗಿ, ಅವರು ಮಾರ್ಗಕೃತಿರಚನೆಗೆ 'ಕವಿರಾಜಮಾರ್ಗ'ದ ಲಕ್ಷಣ ಲಕ್ಷ್ಯ ಸೂತ್ರ ನಿಯಮಗಳನ್ನು ಅವಲಂಬಿಸಬೇಕಾಗಿತ್ತೆ ಎಂಬ ಪ್ರಶ್ನೆ ಏಳದಿರದು.

"ಅದು ವಿಚಾರ ಸಂಪತ್ತಿಯಿಂದ ಕೂಡಿದ ಬೆಲೆಯುಳ್ಳ ಕೃತಿಯಾಗಿದೆ. ಅಂದಿನಂತೆ ಇಂದಿಗೂ ಮಾರ್ಗದರ್ಶಕವಾಗಿದೆ"[221] ಎಂಬ ಮುಗಳಿಯವರ ಮಾತಿನಲ್ಲಿ ಸತ್ಯವಿದ್ದರೂ, 'ಕವಿರಾಜಮಾರ್ಗ'ದ ಮೌಲ್ಯ ಮುಖ್ಯವಾಗಿ ಚಾರಿತ್ರಿಕವಾದುದೆಂದೇ ಹೇಳಬೇಕು. ಅದರ ಶ್ಲಾಘ್ಯವಾದ ಕೊಡುಗೆಯಿರುವುದು ಬಹುಮಟ್ಟಿಗೆ ಶಾಸ್ತ್ರೇತರ ಭಾಗದಲ್ಲೇ ವಿನಾ ಶಾಸ್ತ್ರಭಾಗದಲ್ಲಲ್ಲ. ಶಾಸ್ತ್ರಭಾಗವನ್ನು ತೆಗೆದುಕೊಂಡರೆ, ಅದರಲ್ಲಿ ಬರುವ ಅಲಂಕಾರ ವಿಷಯಗಳಿಗಿಂತ ವ್ಯಾಕರಣ ವಿಚಾರಗಳು ಹೆಚ್ಚು ಬೆಲೆಯುಳ್ಳವಾಗಿ ತೋರುತ್ತವೆ. 'ಕವಿರಾಜಮಾರ್ಗ'ದಲ್ಲಿ ಎಷ್ಟೇ ನೂತನಾಂಶಗಳಿದ್ದರೂ ಅದು ಸಂಪೂರ್ಣ ಸ್ವತಂತ್ರವೂ ಸ್ವೋಪಜ್ಞವೂ ಆದ ಗ್ರಂಥವಲ್ಲವೆಂಬುದನ್ನು ನೆನಪಿಡಬೇಕು: ಅನುವಾದದ ಪಾತ್ರವೇ ಅದರಲ್ಲಿ ಮಿಗಿಲು. ಭಾರತೀಯ ಕಾವ್ಯಮೀಮಾಂಸೆಗೆ ಮಾರ್ಗಕಾರನ ಕೊಡುಗೆ ತಕ್ಕಮಟ್ಟಿಗಿದ್ದರೂ, ಅದು ಪ್ರೋಜ್ವಲವೂ ಘನವೂ ಆದುದೇನಲ್ಲ ಎಂದರೆ ತಪ್ಪಾಗಲಾರದು; ಈ ಕಾರಣಗಳಿಂದ, 'ಕವಿರಾಜಮಾರ್ಗ'ವನ್ನು ಒಂದು 'ಮಹಾಗ್ರಂಥ' ಎಂದು ಕರೆಯಲು ಹಿಂಜರಿಯಬೇಕಾಗುತ್ತದೆ.[221ಅ] ಆದರೆ ಅದೊಂದು ಬಹಳ ಗಣ್ಯವೂ ವಿಶಿಷ್ಟವೂ ಉಪಾದೇಯವೂ ಆದ ಕೃತಿಯೆಂಬುದನ್ನು ಮಾತ್ರ ಯಾರೂ ಅಲ್ಲಗಳೆಯುವಂತಿಲ್ಲ.

## ಚಾರಿತ್ರಿಕ ಅಂಶಗಳು

ಕನ್ನಡ ಸಾಹಿತ್ಯದಲ್ಲಿ ಐತಿಹಾಸಿಕ ಪರಂಪರೆಯ ಉಗಮವನ್ನು ಕುರಿತು ಮಾತಾಡುವಾಗಲೆಲ್ಲ, ನಮ್ಮ ಮೊದಲ ಗಮನಕ್ಕೆ ಬರುವುದು 'ಕವಿರಾಜಮಾರ್ಗ'ವೇ. ಮೊದಲ ಉಪಲಬ್ಧ ಕೃತಿಯಲ್ಲಿಯೇ ಚರಿತ್ರಾಂಶಗಳ ಉಲ್ಲೇಖವಿರುವುದು ಮಹತ್ತ್ವದ ವಿಷಯ. ಇದಕ್ಕಿಂತ ಹಿಂದೆ ಕಾವ್ಯಗಳಿದ್ದುದು ನಿಜವಾದರೂ, ಚಾರಿತ್ರಿಕ ವಿಷಯಗಳ ಉಲ್ಲೇಖಕ್ಕೆ ಆಧಾರ ದೊರೆಯುವುದಿಲ್ಲ. ಆದರೆ ನಾಗವರ್ಮನ 'ಕಾವ್ಯಾವಲೋಕನ'ದ ಈ ಪದ್ಯದ

ಕಡೆಗೆ ಗಮನ ಸೆಳೆಯುತ್ತಾರೆ, ಮುಳಿಯ ತಿಮ್ಮಪ್ಪಯ್ಯನವರು:

ಕಾಯಲುಂ ಬಲಗರ್ವದಿಂ ನೆಲನೆಲ್ಲಮುಂ ನೆಲಕೆಲ್ಲಮಾ
ರ್ತೀಯಲುಂ ತನಗಾ ಚತುರ್ಭುಜಮುಂ ಭುಜದ್ವಯಮಾದನಿ
ತ್ತಾಯದಾಯತಿ ತೋಳೊಳೊಪ್ಪಿರೆ ಮಿಕ್ಕ ಪೆಂಪಿನ ಕೀರ್ತಿನಾ
ರಾಯಣಂ ದಯೆಗೆಯ್ಗೆ ಚಾಗಚತುರ್ಭುಜಂ ಗರುಡಧ್ವಜಂ ॥ (೩೫೮)

ಈ ಪದ್ಯದಲ್ಲಿ ಬರುವ "ಕೀರ್ತಿನಾರಾಯಣಂ ದಯೆಗೆಯ್ಗೆ ಚಾಗಚತುರ್ಭುಜಂ ಗರುಡ ಧ್ವಜಂ" ಎಂಬ ಮಾತು ನೃಪತುಂಗನ ತಂದೆಯಾದ ಮೂರನೆಯ ಗೋವಿಂದನಿಗೆ ಸಂಬಂಧಿಸಿದುದೆಂಬುದು ಸ್ಪಷ್ಟವಾಗಿದೆ. ಗೋವಿಂದನಿಗೆ 'ಕೀರ್ತಿನಾರಾಯಣ' ಎಂಬ ಬಿರುದಿತ್ತೆಂಬುದಕ್ಕೆ ಶಾಸನಾಧಾರವಿದೆ. ರಾಷ್ಟ್ರಕೂಟ ರಾಜರಿಗೆಲ್ಲ 'ಗರುಡಧ್ವಜ' ಎಂಬ ಬಿರುದಿತ್ತೆಂಬುದಕ್ಕೂ ಸಾಕ್ಷಿಗಳಿವೆ. ಈ ಪದ್ಯ ಭಾರತಕಾವ್ಯವೊಂದಕ್ಕೆ ಸಂಬಂಧಿಸಿದು ದೆಂದು ತರ್ಕಿಸಿ ಮುಳಿಯ ತಿಮ್ಮಪ್ಪಯ್ಯನವರು, "ಈ ಕೀರ್ತಿನಾರಾಯಣ ಗೋವಿಂದ ನನ್ನೇ ಗರುಡಧ್ವಜ ಶ್ರೀಕೃಷ್ಣನೊಡನೆ ಅಭಿನ್ನವನ್ನಾಗಿ ಮಾಡಿ ಬಣ್ಣಿಸಿದ ಆ ಭಾರತ ಕಾವ್ಯದ ಆದಿಯ ಶ್ಲೋಕವೇ ಇದಾಗಿರಬಹುದು"ಎಂದು ಅಭಿಪ್ರಾಯಿಸಿದ್ದಾರೆ.[222] ಇದು ನಿಜವಿದ್ದ ಪಕ್ಷದಲ್ಲಿ, ಐತಿಹಾಸಿಕ ಪರಂಪರೆಯು ಉದಯ ರಾಷ್ಟ್ರಕೂಟ ಗೋವಿಂದನ ಪರ ವಾದ ಆ ಕೃತಿಗೆ ಸಲ್ಲಬೇಕಾಗುತ್ತದೆ. ಆದರೆ ಇದು ಊಹೆ. ಪೂರ್ವೋಕ್ತ ಪದ್ಯದ ಆಕರ, ಕಾಲ, ಕರ್ತೃತ್ವ ಎಲ್ಲವೂ ಅನಿರ್ದಿಷ್ಟ. 'ಕವಿರಾಜಮಾರ್ಗ'ದ ಚಾರಿತ್ರಿಕ ವಿಚಾರಗಳೆಲ್ಲ ಸಾಮಾನ್ಯವಾಗಿ ನೃಪತುಂಗನ ಮಹಿಮಾನ್ವಿತ ವ್ಯಕ್ತಿತ್ವವನ್ನು ಚಿತ್ರಿಸಲು ಬಂದವೆಂದು ತೋರುತ್ತದೆ. ಈ ವಿಚಾರಗಳು ಕೆಲವು ಸಾರಿ ನೇರವಾಗಿ ಪ್ರಕಟಗೊಂಡರೆ, ಇನ್ನು ಕೆಲವು ಸಾರಿ ಧ್ವನಿತಗೊಳ್ಳುತ್ತವೆ. ಇವು ಬರುವುದು ಲಕ್ಷ್ಯಪದ್ಯಗಳಲ್ಲಿಯೇ. 'ಕವಿರಾಜಮಾರ್ಗ'ದ ದೃಷ್ಟಾಂತ ಪದ್ಯಗಳಲ್ಲಿ ಬೇರೆ ಬೇರೆ ಗ್ರಂಥಗಳಿಂದ ತೆಗೆದು ಕೊಂಡವು ಕೆಲವು ಇರಬಹುದು. ಆದರೆ ಚಾರಿತ್ರಿಕ ಸಂಗತಿಗಳಿರುವ ಪದ್ಯಗಳು ಹಾಗೆ ಆಗಿರಲಿಕ್ಕಿಲ್ಲ. "ಅವುಗಳೊಳಗೆ ಹಲವು ಸ್ವತಃ ನೃಪತುಂಗನ ಜೀವನವನ್ನೇ ವಾಚ್ಯ ವಾಗಿಯೋ ವ್ಯಂಗ್ಯವಾಗಿಯೋ ಚಿತ್ರಿಸಿದ ಯಾವುದೋ ಪ್ರಬಂಧದಿಂದ ಆರಿಸಿಕೊಂಡವು ಗಳೇ ಆಗಿರಬಹುದು"[223] ಎಂದು ಮುಳಿಯ ತಿಮ್ಮಪ್ಪಯ್ಯನವರು ವಾದಿಸಿದ್ದರೂ, ನೃಪತುಂಗನ ಆಸ್ಥಾನಿಕನಾದ ಕವಿರಾಜಮಾರ್ಗಕಾರ ತನ್ನ ದೊರೆಯನ್ನು ಕುರಿತು ತಾನೇ ಸ್ವತಂತ್ರವಾಗಿ ರಚಿಸಿರಬಹುದಾದ ಸಾಧ್ಯತೆ ಹೆಚ್ಚು.

'ಕವಿರಾಜಮಾರ್ಗ'ದ ಮೂರು ಪರಿಚ್ಛೇದಗಳಲ್ಲಿಯೂ ಚಾರಿತ್ರಿಕವಿಚಾರಗಳು ಅಲ್ಲಲ್ಲಿ ಹರಡಿದಂತೆ ಕಾಣಿಸಿಕೊಳ್ಳುತ್ತದೆ. ಮೊದಲ ಪರಿಚ್ಛೇದದ ಮೊದಲೆರಡು ಪದ್ಯ ಗಳಲ್ಲಿಯೇ ಚಾರಿತ್ರಿಕ ಧ್ವನಿ ಇರುವಂತಿದೆ. ನಾರಾಯಣನಿಗೂ ನೃಪತುಂಗನಿಗೂ ಅಭೇದ ಕಲ್ಪಿಸಿ ಪ್ರಶಂಸಿಸಿದ ಸ್ತುತಿರೂಪದ ಪದ್ಯಗಳಿವು. ನೃಪತುಂಗನ ಮತದ ಮೇಲೂ ಇವು ಬೆಳಕು ಚೆಲ್ಲುವುದು ಸಾಧ್ಯವಿದೆ.

ಈ ಪದ್ಯಗಳಲ್ಲಿ ಉಲ್ಲೇಖವಾಗಿರುವ ನೀತಿನಿರಂತರಂ, ಉದಾರಂ, ಕೃತಕೃತ್ಯಮಲ್ಲಂ,

ಅಪ್ರತಿಹತವಿಕ್ರಮಂ, ವೀರನಾರಾಯಣಂ, ಅತಿಶಯಧವಳಂ ಈ ವಿಶೇಷಣಗಳು ನೃಪತುಂಗನ ಬಿರುದುಗಳು. ಹಾಗೆಯೇ ನರಲೋಕಚಂದ್ರ (೧–೩೩), ಕೃತಕೃತ್ಯ ಮಲ್ಲವಲ್ಲಭ (೧–೬೨) ಮತ್ತು ಗುಣೋದಯ (೩–೨೨೦, ೨೨೧) ಇವೂ ನೃಪತುಂಗನ ಬಿರುದುಗಳೇ. 'ಕೃತಕೃತ್ಯಮಲ್ಲವಲ್ಲಭ' ಸೇರಿದ ಪದ್ಯ ಭಾಮಹನ 'ಕಾವ್ಯಾಲಂಕಾರ'ದ ಅನುವಾದ (೧–೪೭)ವಾಗಿದ್ದು, ಮೂಲದಲ್ಲಿಲ್ಲದ ಈ ಮಾತನ್ನು ಕವಿರಾಜಮಾರ್ಗಕಾರ ಸ್ವತಂತ್ರವಾಗಿ ಸೇರಿಸಿರುವುದು ಸ್ಪಷ್ಟ. ನೃಪತುಂಗ, ಅಮೋಘವರ್ಷ ಎಂಬಿವೂ ಬಿರುದುಗಳಾಗಿರುವಂತೆ ತೋರುತ್ತವೆ, ತಂದೆ ಗೋವಿಂದನಿಗೆ 'ಜಗತ್ತುಂಗ' ಮತ್ತು 'ಪ್ರಭೂತ ವರ್ಷ'ಗಳಿದ್ದಂತೆ. ಆದರೆ ನೃಪತುಂಗನ ನಿಜವಾದ ಹೆಸರು 'ಶರ್ವ'. ಬಿರುದುಗಳಲ್ಲಿ 'ಉದಾರ', 'ವೀರನಾರಾಯಣ' ಮತ್ತು 'ಅತಿಶಯಧವಳ' ಮುಖ್ಯವಾದವು. ನೃಪತುಂಗನ ಸರ್ವಮತಸಮಾನತೆಯನ್ನು 'ಉದಾರ' ಎಂಬುದು ಪ್ರತಿಬಿಂಬಿಸುತ್ತದೆ ಎಂದು ಕೆಲವರು ಹೇಳುತ್ತಾರೆ. ಈ ಹಿರಿಮೆ ಸಂಜಾನ ಶಾಸನದಲ್ಲಿಯೂ ಬರುತ್ತದೆ.[224] ರಾಷ್ಟ್ರಕೂಟ ಮೂರನೆಯ ಇಂದ್ರನ ಬೇಗುಮ್ರಾ ಶಾಸನದಲ್ಲಿ, "ಅಮೋಘವರ್ಷನು ಚಾಳುಕ್ಯಾಬ್ಧಿಯಲ್ಲಿ ಮುಳುಗಿಹೋಗಿದ್ದ ರಾಷ್ಟ್ರಕೂಟ ರಾಜ್ಯಶ್ರೀಯನ್ನು ಉದ್ಧಾರಮಾಡಿ ವೀರನಾರಾಯಣನೆಂಬ ಬಿರುದನ್ನುಧರಿಸಿದನು"ಎಂದು ಹೇಳಿದೆ.[225] ನೀಲಗುಂದ ಮತ್ತು ಶಿರೂರು ಶಾಸನಗಳಲ್ಲಿನ "ವೆಂಗೀಶ್ವರಾರ್ಚಿತೋಽತಿಶಯಧವಳಃ"[226] ಎಂಬ ಮಾತು, ವೆಂಗಿರಾಜನಿಂದ ನೃಪತುಂಗ ಪೂಜಿತನಾಗಿದ್ದನೆಂದು ತಿಳಿಸುತ್ತದೆ. ಇದರಿಂದ ನೃಪತುಂಗ ವೆಂಗಿಯ ಚಾಳುಕ್ಯರನ್ನು ಸೋಲಿಸಿದ ವಿಷಯ ತಿಳಿಯುತ್ತದೆ. ಇದು ನಡೆದ ಕಾಲ ಸು. ೮೬೫ ಆಗಿರಬಹುದೆಂದು ಅಲ್ತೇಕರರ ಅಭಿಪ್ರಾಯ.[227]

'ಕವಿರಾಜಮಾರ್ಗ'ಕಾರ ಹೇಳಿರುವ ಪದ್ಯಕಾರರಲ್ಲಿ ಲೋಕಪಾಲ, ನೃಪತುಂಗನ ಸಾಮಂತ ಬಂಕರಸನ ಮಗ ಲೋಕಾದಿತ್ಯನಾಗಿರಬೇಕೆಂದು ಬಿ. ಎಲ್. ರೈಸ್ ಅವರು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ರಾ. ನರಸಿಂಹಾಚಾರ್ಯರು ಇದನ್ನು ಒಪ್ಪದೆ, ಈತನ ವಿಷಯವಾಗಿ ನಮಗೇನೂ ತಿಳಿಯದೆಂದೂ ಲೋಕಾದಿತ್ಯ ಹಾಗೂ ಲೋಕಪಾಲ ಬೇರೆಯೆಂದೂ ಸೂಚಿಸಿದ್ದಾರೆ. ಇನ್ನು ಕೆಲವರು 'ಭುವನ ಪ್ರದೀಪಿಕಾ'ದಲ್ಲಿ ಉಕ್ತವಾಗಿರುವ ತುಂಡೀರದೇಶದ ರಾಜರಲ್ಲೊಬ್ಬನಾದ ಲೋಕಪಾಲನಿಗೂ ಕವಿರಾಜಮಾರ್ಗೋಕ್ತ ಲೋಕಪಾಲನಿಗೂ ಸಂಬಂಧ ಕಲ್ಪಿಸಲು ಪ್ರಯತ್ನಿಸಿದ್ದಾರೆ. ಆದರೆ ಈ ಬಗ್ಗೆ ನಿರ್ಣಯ ಇನ್ನೂ ಆಗಬೇಕಾಗಿದೆ.

ಇಲ್ಲಿ ಕವಿರಾಜಮಾರ್ಗಕಾರ ಮತ್ತು ನೃಪತುಂಗನಿಗೆ ಇರಬಹುದಾದ ಸಂಬಂಧವನ್ನು ಕುರಿತು ಮುಳಿಯ ತಿಮ್ಮಪ್ಪಯ್ಯನವರ ಪ್ರಸ್ತಾಪವೊಂದಿದೆ. ಅವರ ಪ್ರಕಾರ ಕವಿರಾಜಮಾರ್ಗಕಾರ "ರಾಜವಂಶೀಯನೂ ರಾಜನ ಮಾತೃಪಕ್ಷವನ್ನೊಂದಿದ ಬಂಧುವೂ" ಆಗಬೇಕಾಗುತ್ತದೆ. ಇದು ನಿಜವಿರಬಹುದು. ಆದರೆ "ಹಿಂದೆ ಗೋವಿಂದರಾಜನ ಮರಣಾನಂತರ ರಾಜ್ಯಭ್ರಂಶವನ್ನೊಂದಿದ್ದ ನೃಪತುಂಗನ ಪುನರುದಯಕ್ಕೆ ಕಾರಣಪುರುಷನೂ ಈತನೇ ಆಗಿದ್ದನೆಂದು ಭಾಸವಾಗುತ್ತಿದೆ" ಎನ್ನುವ ಮಾತು ಉತ್ಪ್ರೇಕ್ಷಿತ[229]. ತಮ್ಮ

ಅಭಿಪ್ರಾಯ ಸಮರ್ಥನೆಗೆ ಅವರು ಮೂರನೆಯ ಪರಿಚ್ಛೇದದ ೨೨ನೆಯ ಪದ್ಯದ 'ಉದಾರಚರಿತೋದಯನೇಕರೂಪಂ' ಮತ್ತು 'ಗುಣೋದಯನಕಾರಣಮಿತ್ರಧುರ್ಯಂ' (ಮೂಲ: 'ಧುರ್ಯಮಿತ್ರಂ') ಎಂಬ ಮಾತುಗಳನ್ನು ಬಳಸಿಕೊಳ್ಳುತ್ತಾರೆ. ಈ ತರ್ಕದಿಂದಲೇ ಸಂಜಾನ ಶಾಸನದ ೪೧ನೆಯ ಶ್ಲೋಕವನ್ನು ವ್ಯಾಖ್ಯಾನಿಸಲು ಹೊರಡುತ್ತಾರೆ.[229] ಅದರ ಮೊದಲ ಸಾಲನ್ನು 'ಗುರುಬುಧಮನುಯಾತಸ್ಸಾಮಪಾದಾಳ್ವಮಲ್ಲಾತ್' ಎಂಬುದಾಗಿ ತಿದ್ದಿಕೊಂಡು, ಇಲ್ಲಿಯ 'ಆಳ್ವಮಲ್ಲ'ನೇ ನೃಪತುಂಗನ ಪುನರುದಯಕ್ಕೆ ಕಾರಣನಾದವನೆಂದೂ ಕವಿರಾಜಮಾರ್ಗಕಾರ 'ಜಯಾಬ್ಬೆ' ಆತನೆಂದೂ ವಾದಿಸುತ್ತಾರೆ. ಆದರೆ ಇಲ್ಲಿ, 'ಪಾತಾಲಮಲ್ಲ' ಎಂಬ ರೂಪವೇ ಸರಿಯಾಗಿದ್ದು, ನೃಪತುಂಗನ ಚಿಕ್ಕಪ್ಪನೂ ಗುಜರಾತ್ ಶಾಖೆಯ ರಾಷ್ಟ್ರಕೂಟ ರಾಜನೂ ಆಗಿದ್ದ ಕರ್ಕ ಸುವರ್ಣವರ್ಷನೇ ಅವನಾಗಿರಬೇಕೆಂಬ ಅಲ್ತೇಕರರ ಮಾತೇ ಸರಿಯಾದುದೆಂದು ತೋರುತ್ತದೆ.[230]

'ಕವಿರಾಜಮಾರ್ಗ'ದ ಪ್ರಥಮಪರಿಚ್ಛೇದದ "ಕಾವೇರಿಯಿಂದಮಾ ಗೋದಾವರಿವರಮಿರ್ಪ ನಾಡದಾ ಕನ್ನಡದೊಳ್" (೩೬) ಎಂಬ ಮಾತು ರಾಷ್ಟ್ರಕೂಟ ಸಾಮ್ರಾಜ್ಯದ, ಅದರಲ್ಲಿಯೂ ನೃಪತುಂಗನ ಕಾಲದ, ಎಲ್ಲೆಕಟ್ಟನ್ನು ತೋರಿಸುತ್ತದೆ. ಗೋದಾವರಿ ಉತ್ತರದ ಮೇರೆ ಆಗಬಹುದು; ಆದರೆ ಕಾವೇರಿಯನ್ನು ದಕ್ಷಿಣದ ಮೇರೆಯೆಂದು ಹೇಳುವುದು ಕಷ್ಟವಾಗುತ್ತದೆ. ಕಾವೇರಿಯ ದಕ್ಷಿಣದ ಮೇರೆಯಲ್ಲಿ ಆಳುತ್ತಿದ್ದ ಗಂಗರಾಜರೂ ಕನ್ನಡಿಗರೇ ಆದುದರಿಂದ, ಕನ್ನಡ ಪ್ರದೇಶ ಕಾವೇರಿಯನ್ನೂ ದಾಟಿತ್ತೆಂದೇ ಅರ್ಥವಾಗುತ್ತದೆ. ಹಾಗಿದ್ದರೆ, ಕವಿರಾಜಮಾರ್ಗದ ಉಕ್ತಿಗೆ ಅರ್ಥ? ಪ್ರಾಯಶಃ ಕಾವೇರಿನದಿ ರಾಷ್ಟ್ರಕೂಟ ರಾಜ್ಯದ ಎಲ್ಲೆಕಟ್ಟೆಂದು ತೋರುತ್ತದೆ. ಕೊಣ್ಣೂರು ಶಾಸನದಲ್ಲಿ ಬರುವ "ಕಾವೇರೀಂ ಗುರುಪೂರದುರ್ಗಮತಮಾಮುಲ್ಲಂಘ್ಯ ಸಿಂಹಕ್ರಮಾತ್"[231] ಎಂಬ ಬಂಕೆಯನ ಪರವಾದ ಮಾತು ಇದನ್ನೇ ಸಮರ್ಥಿಸುತ್ತದೆ.

ಕವಿರಾಜಮಾರ್ಗೋಕ್ತ ರಾಜಕೀಯ ವಿಚಾರಗಳಲ್ಲಿ ಒಂದು ಅನುಕ್ರಮವನ್ನು ಸಾಧಿಸುವುದು ಕಷ್ಟ. ಆದರೆ ಗೋವಿಂದನ ಮರಣ ಮತ್ತು ಬಾಲಕ ದೊರೆ ನೃಪತುಂಗನಿಗೆ ಸಂಬಂಧಿಸಿದ ವಿಚಾರಗಳಲ್ಲಿ ಅದು ಸಾಧ್ಯ. ನೃಪತುಂಗನ ತಂದೆ ಮೂರನೆಯ ಗೋವಿಂದನ ಮರಣ ಸನ್ನಿವೇಶವನ್ನು ಈ ಪದ್ಯಗಳು ಚಿತ್ರಿಸುತ್ತವೆ ಎನ್ನಲಾಗಿದೆ:

ಸತತೋದಯನಪ್ರತಿಹತ
ಗತಿತೀವ್ರಂ ತದ್ದಿನಾಧಿನಾಥನುಮಸ್ತಂ
ಗತನಾದನಂತೆ ನಿಯತ
ಪ್ರತೀತಿಯಂ ಕಳೆಯಲಕ್ಕುಮೇ ವ್ಯಾಪಕಂ ॥ (೩-೩೦)

ಸರಸಿಜಬಾಂಧವನಸ್ತಾಂ
ತರಗತನಾಗಿರೆ ಸರೋಜಿನೀವನಮಾದಂ

ಕೊರಗುತ್ತೆ ಮುಗಿಗುಮೀಶ್ವರ
ವಿರಹದೆ ಶೋಕಾಕುಲಂ ವಿಶೇಷಾಪ್ತಜನಂ ॥ (೩–೩೧)

ಮಂಡಲ ಶಾಸನದ ಪ್ರಕಾರ ಗೋವಿಂದನಿಗೆ 'ನಿತ್ಯೋದಯ' ಎಂಬ ಬಿರುದಿದ್ದಿತು. ಪೂರ್ವೋಕ್ತ ಪದ್ಯವೊಂದರಲ್ಲಿನ 'ಸತತೋದಯ' ಎಂಬುದು ಈ 'ನಿತ್ಯೋದಯ' ಬಿರುದನ್ನೇ ಸೂಚಿಸುತ್ತದೆ ಎಂಬುದಾಗಿ ಮುಳಿಯ ತಿಮ್ಮಪ್ಪಯ್ಯನವರು ಅನುಮಾನಿಸಿದ್ದಾರೆ.೩೩೩ ಆದ್ದರಿಂದ ಸೂರ್ಯಪ್ರತಿಮನಾದ ಗೋವಿಂದನ ಅವಸಾನವನ್ನು ಧ್ವನಿಸುವುದು ಈ ದೃಷ್ಟಾಂತದ ಆಶಯವಿರಬಹುದು. ಮುಂದಿನ ಪದ್ಯದ "ಈಶ್ವರ ವಿರಹದೆ ಶೋಕಾಕುಲಂ ವಿಶೇಷಾಪ್ತಜನಂ" ಎಂಬ ಹೇಳಿಕೆ ಗೋವಿಂದನ ರಾಜಪರಿವಾರದ ಆಪ್ತಜನ ಶೋಕಾಕುಲವಾದ ವಿಶಿಷ್ಟ ಸಂದರ್ಭವನ್ನು ಸೂಚಿಸುತ್ತಿರಬಹುದು. ಮುಂದುವರಿದು ಗೋವಿಂದನು ತೀರಿಕೊಂಡಮೇಲೆ ಅಂತಃಪುರದ ಅಂಗನೆಯರಿಗೆ ಒದಗಿದ ವಿಯೋಗಾವಸ್ಥೆಯನ್ನು ಪದ್ಯ ೩೨ರಲ್ಲಿ ವರ್ಣಿಸಿರಬಹುದೆಂದು ಶಂಕಿಸಲಾಗಿದೆ.

ನೃಪತುಂಗ ಪಟ್ಟಕ್ಕೆ ಬಂದಾಗ ಇನ್ನೂ ಬಾಲಕ. ಇಂತಹ ಸಮಯವನ್ನೇ ಕಾಯುತ್ತಿದ್ದ ಶತ್ರುಗಳು ರಾಷ್ಟ್ರಕೂಟ ಸಾಮ್ರಾಜ್ಯವನ್ನು ಕಬಳಿಸಲು ಪ್ರಯತ್ನಿಸಿದರು. ಇದರ ಫಲವಾಗಿ ಬಾಲಕ ದೊರೆ ಅಮೋಘವರ್ಷ ರಾಜ್ಯವನ್ನು ಕಳೆದುಕೊಳ್ಳಬೇಕಾಗಿ ಬಂದಿತು. ಇಂತಹ ಕಷ್ಟದ ಪರಿಸ್ಥಿತಿಯನ್ನು ಚಿತ್ರಿಸುವಂತೆ ತೋರುವ ಪದ್ಯಗಳೆರಡು (೧೨೯–೧೩೦) ಮೂರನೆಯ ಪರಿಚ್ಛೇದದಲ್ಲಿ ಬರುತ್ತವೆ:

ದಾನಪರನಂ ನಿಜೋನ್ನತ
ಮಾನನನಾರೂಢವಿಪುಳವಂಶನನಂತೊಂ
ದಾನೆಯನಪಾಯಪಂಕದೊ
ಳೇನುಂ ತಳ್ವಿಲ್ಲದಿರ್ದುದಂ ಕಾಣಿಸಿದಂ ॥

ತ್ಯಾಗಾದಿ ಗುಣಗಣೋದಯ
ಭಾಗಿಯನೇನಾನುಮೊಂದುಪಾಯಾಂತರಮ[ದಿ]ಂ
ನೀಗಲ್ ನೆಱಿಯದೆಯನುಪಮ
ನೀ ಗಣೆದದಿನಾನೆವಾಡಿ ನುಡಿದಂ ಬಗೆಯಂ ॥

ಅಪಾಯಪಂಕದಲ್ಲಿ ಆನೆಯೊಂದು ಸಿಲುಕಿದುದನ್ನು ಶ್ಲೇಷೆಯಿಂದ ಮೊದಲಪದ್ಯ ವರ್ಣಿಸುತ್ತದೆ; ಆ ಮೂಲಕ ರಾಜನೊಬ್ಬನು ಅಪಾಯಸ್ಥಿತಿಗೆ ಸಿಲುಕಿದುದನ್ನು ಸೂಚಿಸುತ್ತದೆ. ಹೀಗೆ ಅಪಾಯಪಂಕದಲ್ಲಿ ಸಿಕ್ಕಿದವನನ್ನು ಯಾವ ರೀತಿಯಿಂದಲೂ ಪಾರು ಮಾಡಲು ಸಾಧ್ಯವಾಗದೆ, ಆನೆಯ ಅವಸ್ಥೆಗೆ ಹೋಲಿಸಿ ನುಡಿದುದರ ಅರ್ಥವನ್ನು ಎರಡನೆಯ ಪದ್ಯ ಹೇಳುತ್ತದೆ. ಹಗೆಗಳ ಬಲೆಗೆ ಸಿಕ್ಕಿದ ನೃಪತುಂಗನ ಅವಸ್ಥೆಯನ್ನು ಈ ಎರಡು ಪದ್ಯಗಳೂ ಸಾಹಿತ್ಯಿಕವಾಗಿ ಬಣ್ಣಿಸುವಂತೆ ತೋರುತ್ತದೆ.

ನೃಪತುಂಗನು ೮೧೪ರಲ್ಲಿ ತನ್ನ ಹದಿನಾರನೆಯ ವಯಸ್ಸಿನಲ್ಲಿ ಸಿಂಹಾಸನವೇರಿರ

ಬೇಕೆಂದು ತೋರುತ್ತದೆ. ಕ್ರಿ.ಶ. ೮೧೭ರಲ್ಲಿ ಅವನ ಆಳ್ವಿಕೆ ಅಬಾಧಿತವಾಗಿತ್ತು ಎನ್ನುವುದಕ್ಕೆ ನವಸಾರಿ ಶಾಸನ ಸಾಕ್ಷಿಯಾಗಿದೆ. ೮೧೭ರಲ್ಲಿ ರಾಜ್ಯದಲ್ಲಿ ಸಂಕ್ಷೋಭೆಯೊಂದು ಸಂಭವಿಸಿರಬೇಕು. ಹೀಗೆ ವಿಪ್ಲವದಿಂದ ನೃಪತುಂಗನು ದುರವಸ್ಥೆಗೀಡಾಗುವಂತೆ ಮಾಡಿದ ರಾಜರುಗಳಾರು ಎಂಬುದು ತಿಳಿಯುವುದಿಲ್ಲ. ಇವರಲ್ಲಿ ಸಾಮಂತರೂ ದಾಯಾದಿಗಳೂ ಬಂಧುಗಳೂ ಇದ್ದರೆಂಬುದನ್ನು ಸಂಜಾನ ಶಾಸನ ಹೇಳುತ್ತದೆ. ಪ್ರಾಯಶಃ ವೆಂಗಿಯ ಅಥವಾ ಮೂಡಣ ಚಾಳುಕ್ಯವಂಶದ ಎರಡನೆಯ ವಿಜಯಾದಿತ್ಯ ಅಥವಾ ಅವನ ಮಗ ಕಲಿ ವಿಷ್ಣುವರ್ಧನ ಕಾರಣವಾಗಿರಬೇಕೆಂದು ತೋರುತ್ತದೆ. ಗೋವಿಂದ ತೀರಿಕೊಂಡ ಕೂಡಲೆ ವಿಜಯಾದಿತ್ಯ ರಾಷ್ಟ್ರಕೂಟ ರಾಜಧಾನಿಯನ್ನು ಸೂರೆ ಮಾಡಿದನೆಂದು ಇತಿಹಾಸಕಾರರು ಅಭಿಪ್ರಾಯಪಡುತ್ತಾರೆ. ಈ ಕ್ಷೋಭೆಯಲ್ಲಿ ಸ್ತಂಭನ ಮಗ ದಾಯಾದಿ ಶಂಕರಗಣನೂ ಗಂಗರ ಶಿವಮಾರ ಮತ್ತು ರಾಜಮಲ್ಲರೂ ಸೇರಿಕೊಂಡಿರಬೇಕೆಂದು ಊಹಿಸಬಹುದಾಗಿದೆ.

ಮೇಲಿನ ಎರಡನೆಯ ಪದ್ಯದಲ್ಲಿ ಅಪಾಯದಿಂದ ಪಾರುಮಾಡುವ ಉಪಾಯವನ್ನು ಕಾಣದೆ ಕೊರಗುತ್ತಿದ್ದ 'ಅನುಪಮ'ನೊಬ್ಬನ ಪ್ರಸ್ತಾಪ ಬಂದಿದೆ. ಇವನು ಶಾಸನೋಕ್ತ 'ಪಾತಾಲಮಲ್ಲ'ನಿರಬಹುದು. ಈತ ಹಿಂದೆ ಉಲ್ಲೇಖಿಸಿರುವಂತೆ, ಬಾಲಕ ನೃಪತುಂಗನ ಪಾಲಕನಾಗಿ ಗೋವಿಂದನಿಂದ ನಿಯಮಿತನಾದ ಅವನ ಸೋದರ ಕರ್ಕ ಸುವರ್ಣವರ್ಷನೇ ಎಂಬುದು ಸ್ಪಷ್ಟವಿದೆ. ಅಮೋಘವರ್ಷ ಪುನಃ ಸಿಂಹಾಸನಸ್ಥನಾಗುವುದಕ್ಕೆ ಕಾರಣನಾದವನು ಇವನು.

'ಕವಿರಾಜಮಾರ್ಗ'ದಲ್ಲಿ ನೃಪತುಂಗನ ಕಾಲದ ರಾಜಕೀಯ ಬಿಕ್ಕಟ್ಟಿಗೆ ಸಂಬಂಧಿಸಿದಂತಹ ಸಂಗತಿಗಳು ಬರುತ್ತವೆ. ಇವುಗಳಿಂದ ನೃಪತುಂಗ ಮೇಲಿಂದ ಮೇಲೆ ಶತ್ರುಗಳ ಆಕ್ರಮಣಕ್ಕೆ ಒಳಗಾಗಿದ್ದನೆಂದೂ ರಾಜಕೀಯ ವಿಕ್ಷುಬ್ಧ ಪರಿಸ್ಥಿತಿಯೊಂದು ತಲೆದೋರಿತ್ತೆಂದೂ ತಿಳಿದುಬರುತ್ತದೆ. ಇದನ್ನು ತೋರಿಸುವ ಪದ್ಯವೊಂದು (೮೨) ಪ್ರಥಮ ಪರಿಚ್ಛೇದದಲ್ಲಿ ಇರುವಂತೆ ತೋರುತ್ತದೆ :

ಅರಿನೃಪಬಲಮಂ ಗೆಲ್ದರು
ಪರಾಕ್ರಮಕ್ರಮದೆ ಶೌರ್ಯಮಂ ಪ್ರಕಟಿಸು ನೀಂ
ನರಮಹಿತಾ ನಿನಗೇನಹಿ
ತರುಮೊಳರೇ ಸತತ ಪರಹಿತಾಚಾರಪರಾ ॥

ಈ ಹೇಳಿಕೆ ನೃಪತುಂಗನ ಆಳ್ವಿಕೆ ಶತ್ರುಗಳಿಂದ ಅಬಾಧಿತವಾಗಿರಲಿಲ್ಲವೆಂಬುದನ್ನು ಸಮರ್ಥವಾಗಿ ಅರುಹುತ್ತದೆ. ಪರಾಕ್ರಮದಲ್ಲಿ ಧ್ರುವ ನಿರುಪಮ ಮತ್ತು ಮೂರನೇ ಗೋವಿಂದರ ಸರಿದೊರೆಗೆ ನೃಪತುಂಗ ಮೊದಲ ಇಬ್ಬರು ದೊರೆಗಳ ಕಾಲದಲ್ಲಿ ರಾಷ್ಟ್ರಕೂಟ ಸಾಮ್ರಾಜ್ಯ ಆಸೇತುಹಿಮಾಚಲ ಪ್ರಭಾವವನ್ನು ಇರಿಸಿಕೊಂಡಿತ್ತು. ಆದರೆ ನೃಪತುಂಗನ ಕಾಲದಲ್ಲಿ ಆ ಹಿಡಿತ ಸಡಿಲಗೊಂಡಿತು. ನೃಪತುಂಗ ಶತ್ರುರಾಜರನ್ನು ಎದು

ರಿಸುವುದರಲ್ಲಿ ಮೊದಮೊದಲು ವಿಫಲನಾದಂತೆ ತೋರುತ್ತದೆ. ಸ್ವಭಾವತಃ ಶಾಂತಿಪ್ರಿಯನಾಗಿದ್ದ ಆತನಿಗೆ ಪರಾಕ್ರಮ ಪ್ರದರ್ಶನವಾಗಲಿ, ರಾಜ್ಯವಿಸ್ತಾರಣಾಕಾಂಕ್ಷೆಯಾಗಲಿ ಮುಖ್ಯವಾಗಿರಲಿಲ್ಲ, ಪ್ರಜಾಕ್ಷೇಮ ಮತ್ತು ಆಡಳಿತಗಳು ಪ್ರಮುಖವಾಗಿದ್ದುವು. ಈ ಬಗೆಯ ವ್ಯಕ್ತಿತ್ವವೇ-ಅವನನ್ನು ಉದಾತ್ತನನ್ನಾಗಿ ಮಾಡಿದ್ದು. ಆದರೆ ರಾಜಕೀಯ ದೃಷ್ಟಿಯಿಂದ ಇದೇ ದೌರ್ಬಲ್ಯವೂ ಆಗಿತ್ತು. ಆದ್ದರಿಂದಲೇ ಕವಿರಾಜಮಾರ್ಗಕಾರ, "ಪರಹಿತದಲ್ಲಿಯೇ ಯಾವಾಗಲೂ ಆಸಕ್ತನಾದ ನಿನಗೂ ಶತ್ರುಗಳು ಇದ್ದಾರೆಯೇ" ಎಂದು ವಿಷಾದಪಟ್ಟಹಾಗೆ ಕಾಣುತ್ತದೆ. ಈ ವಿಷಾದದ ಹಿಂದೆ ಇರುವ ರಾಜಕೀಯ ಬಿಕ್ಕಟ್ಟು ಯಾರೂ ಊಹಿಸಬಹುದಾಗಿದೆ. ಇಂತಹ ಸಮಯದಲ್ಲಿ ರಾಜ್ಯವನ್ನು ನಿಷ್ಕಂಟಕಗೊಳಿಸಲು ಶಾಂತಿಯ ಜೊತೆಗೆ ಶೌರ್ಯವೂ ಬೇಕಾಗುತ್ತದೆ. ಆದ್ದರಿಂದಲೇ, "ಅನ್ಯನೃಪಬಲಮಂ ಗೆಲ್ದುರುಪರಾಕ್ರಮಕ್ರಮದೆ ಶೌರ್ಯಮಂ ಪ್ರಕಟಿಸು" ಎಂಬುದಾಗಿ ಆಪ್ತರು ಹೇಳಿರಬೇಕೆಂದು ತೋರುತ್ತದೆ. ಆಮೇಲೆ ಆತ ಶತ್ರುಗಳನ್ನು ಬಗ್ಗುಬಡಿದ ಹಲವು ಸಂದರ್ಭಗಳು ಇತಿಹಾಸದಲ್ಲಿ ಉಲ್ಲೇಖಿತವಾಗಿವೆ. ನೃಪತುಂಗನಿಗೆ ಕಿರುಕುಳ ಕೊಟ್ಟ ಶತ್ರುರಾಜರು ನಾಲ್ವರು: ವೆಂಗಿಯ ಚಾಲುಕ್ಯರ ಇಮ್ಮಡಿ ವಿಜಯಾದಿತ್ಯ, ಗಂಗರ ಶಿವಮಾರ ಮತ್ತು ರಾಜಮಲ್ಲ, ರಾಷ್ಟ್ರಕೂಟ ಗುಜರಾತ್ ಶಾಖೆಯ ಕರ್ಕನ ಮಗ ಧ್ರುವ ಮತ್ತು ಶ್ರೀಮಂತಸಾಮಂತರ ನೆರವಿನಿಂದ ತನ್ನ ತಂದೆಗೇ ವಿರೋಧವಾಗಿ ನಿಂತ ಯುವರಾಜ ಕೃಷ್ಣ. ಇದೇ ಪರಿಚ್ಛೇದದ ೭೭ನೆಯ ಪದ್ಯದಲ್ಲಿ ಹೋರಾಟದ ಚಿತ್ರವೊಂದು ಧ್ವನಿತವಾಗಿದ್ದರೂ, "ಸಮಂಜಸನಿಕ್ಕಿ ಮಿಕ್ಕನರಿವಾಹಿನಿಯಂ" ಎಂಬ ಮಾತನ್ನು ಪದ್ಯದ ಸಂದರ್ಭದಲ್ಲಿ ಅನ್ವಯಿಸಿ ಅರ್ಥಮಾಡುವುದು ಕಷ್ಟವಾಗುತ್ತದೆ.

ನೃಪತುಂಗನು ಪಟ್ಟ ಪಾಡುಗಳನ್ನು ಚಿತ್ರಿಸುವಂತೆ ತೋರುವ ಅನೇಕ ದೃಷ್ಟಾಂತ ಪದ್ಯಗಳಲ್ಲಿ, ಹಗೆಗಳನ್ನು ಗೆಲ್ಲಲು ಅನುಸರಿಸಬೇಕಾದ ರಾಜನೀತಿ ತತ್ತ್ವಗಳನ್ನು ಕುರಿತಾದ ಉದಾಹರಣೆಗಳು ಕೆಲವು ಬರುತ್ತವೆ (೩-೧೪೫-೧೫೦). ಇವು ನೃಪತುಂಗ ಅನುಭವಿಸಿದ ಅವಸ್ಥೆಗಳಿಗೆ ಸೂಚಕವಾದರೂ, ಅಧಿಕೃತವಾಗಿ ಗೊತ್ತಾಗುವುದಿಲ್ಲ. ಆದರೆ ಕಡೆಯ ಎರಡು ಪದ್ಯಗಳು ಗಮನಾರ್ಹ:

ಒಳಗಿರ್ದ ವೈರಿಗಳ್ ಮೊ
ಕ್ಕಳಮಿಾಯರ್ ಪೆರ್ಚಲಧಿಕವಿಭವರ್ಕಳುಮಂ
ತಳರದೊಡನಿರ್ದು ಬಡಬಾ
ನಳನೆಂದುಂ ಪೆರ್ಚಲೀಯದಂತಂಬುಧಿಯಂ ॥

ಪರಪಕ್ಷಮುಳ್ಳೊಡಂ ತನ
ಗಿರವುಬ್ಬಸಮುದಜೀನಜೀವುದದನೇಗೆಯ್ದುಂ
ಪರೆದ ಪುಡಿಯೆಲ್ಲಮಂ ನೀರ್
ನೆರೆದು ಕೆಸರ್ಮಾಡದನ್ನೆಗಂ ನೆಲಸುಗುಮೇ।

ಮೊದಲ ಪದ್ಯದಲ್ಲಿ ಮುಖ್ಯವಾಗಿ ಗಮನಿಸಬೇಕಾದುದು 'ಒಳಗಿರ್ದ ವೈರಿಗಳ್' ಎಂಬ ಮಾತನ್ನು. ಇದು ಸೂಚಿಸುವ ಒಳಶತ್ರುಗಳು ಯಾರಾಗಿರಬೇಕೆಂಬುದು ನಿಜಕ್ಕೂ ಶೋಧಿಸಬೇಕಾದ ವಿಷಯ. ಬಾಲಕ ನೃಪತುಂಗ ಕಳೆದುಕೊಂಡ ರಾಜ್ಯವನ್ನು ಪುನಃ ಪಡೆದುಕೊಂಡುದು ಸರಿಯಷ್ಟೇ. ಆಮೇಲೆ ಅವನು ಸುಮಾರು ೬೪ ವರ್ಷಗಳ ಕಾಲ ರಾಜ್ಯವಾಳಿದನೆಂದು ಶಾಸನಗಳು ಸಾರುತ್ತವೆ. ಆದರೆ ಈ ಮಧ್ಯೆ ಅಂತಶ್ಶತ್ರುಗಳು ಹೆಚ್ಚಿಕೊಂಡು, ನೃಪತುಂಗ ಅವರನ್ನು ನಿಗ್ರಹಿಸಲು ನಿಶ್ಚಯಿಸಲೇಬೇಕಾಯಿತು. ಇಂತಹ ಅಂತಶ್ಶತ್ರುಗಳಲ್ಲಿ ನೃಪತುಂಗನ ಸಾಮಂತನೇ ಆಗಿದ್ದ ಗಂಗರಾಜ ಮತ್ತು ಗುಜರಾತಿನಲ್ಲಿ ಆಳುತ್ತಿದ್ದ ರಾಷ್ಟ್ರಕೂಟ ಧ್ರುವ ಮುಖ್ಯರು. ಅದರಲ್ಲಿಯೂ ಗಂಗರಾಜನು ನೃಪತುಂಗನ ಮಗನಾದ ಎರಡನೆಯ ಕೃಷ್ಣರಾಜನನ್ನೇ ತನ್ನ ಕಡೆಗೆ ಸೆಳೆದುಕೊಂಡುದು ನೃಪತುಂಗನಿಗೆ ಮತ್ತಷ್ಟು ದುಃಖಕ್ಕೆ ಕಾರಣವಾಯಿತು. ಇದೇ ಪರಿಚ್ಛೇದದ ೨೨೭ನೆಯ ಪದ್ಯದ "ಅಂತರಂಗರಿಪುವರ್ಗ ಜಯಾವತಾರಂ' ಎಂಬ ಮಾತನ್ನಿಲ್ಲಿ ವಿಶ್ಲೇಷಣೆಗೆ ತೆಗೆದುಕೊಳ್ಳಬಹುದು. ಇದು ಚಾರಿತ್ರಿಕ ಸಂಗತಿಯೊಂದನ್ನು ಧ್ವನಿಸುತ್ತದೆ ಎಂದು ಅರ್ಥೈಸುವುದಾದರೆ, 'ಅಂತರಂಗರಿಪುವರ್ಗ' ಎಂಬುದು ನೃಪತುಂಗನಿಗಿದ್ದಿರಬಹುದಾದ ಪೂರ್ವೋಕ್ತ ಒಳಶತ್ರುಗಳನ್ನು ಹೇಳುತ್ತದೆಂದೂ 'ಜಯಾವತಾರ' ಎಂಬುದು ಅವರನ್ನು ಗೆದ್ದ ನೃಪತುಂಗನಿಗೆ ಅನ್ವಯಿಸುತ್ತದೆಂದೂ ಭಾವಿಸಬಹುದಾಗಿದೆ.

'ಕವಿರಾಜಮಾರ್ಗ'ದಲ್ಲಿ ಯುದ್ಧಚಿತ್ರಗಳಿಗೆ ಸಂಬಂಧಿಸಿದ ಪದ್ಯಗಳು ಅಲ್ಲಲ್ಲಿ ಕಾಣಿಸಿಕೊಳ್ಳುತ್ತವೆ. ಇವು ನೃಪತುಂಗನ ಯುದ್ಧವಿಷಯಗಳಿಗೆ ನೇರವಾಗಿ ಸಂಬಂಧಿಸಿರಬಹುದು. ಪ್ರಥಮ ಪರಿಚ್ಛೇದದ ೧೩೦ ಮತ್ತು ೧೩೪ನೆಯ ಪದ್ಯಗಳಲ್ಲಿ ಎರಡು ಕಡೆಯವರೂ ಯುದ್ಧನಡಸಲು ಸನ್ನದ್ಧರಾಗಿರುವ ಚಿತ್ರವೊಂದು ಲಭಿಸುತ್ತದೆ. ಪ್ರಥಮ ಪದ್ಯದಲ್ಲಿ, "ನೆರೆದು ಬಂದ ಅವರ ಸೈನ್ಯವೆಲ್ಲವನ್ನೂ ಹತ್ತಿರಕ್ಕೆ ಬರಗೊಡದಂತೆ ನಿಶ್ಚಯವಾಗಿಯೂ ಕೊಂದುಹಾಕುವನು, ಆದ್ದರಿಂದ ನಮ್ಮವರನ್ನು ವ್ಯೂಹದಲ್ಲಿ ಸ್ಥಿರವಾಗಿರುವಂತೆ ಹೇಳು"—ಎಂಬರ್ಥದ ಪ್ರಸ್ತಾಪ ಬರುತ್ತದೆ. ಮುಖ್ಯವಾದ ಯುದ್ಧವೊಂದನ್ನು ಕುರಿತಿರುವಂತಿದೆ. ಯುದ್ಧರಂಗದಲ್ಲಿ ನಾಯಕ ವೀರನೊಬ್ಬನು ತನ್ನ ಪಡೆಯ ಸೈನಿಕರಿಗೆ ಎಚ್ಚರ ಸಿದ್ಧತೆಗಳನ್ನು ಹೇಳಿ ಕಳಿಸುತ್ತಿರುವ ಚಿತ್ರವಿದು. ಇದು ನೇರವಾಗಿ ನೃಪತುಂಗನ ಯುದ್ಧಕ್ಕೋ ಅಥವಾ ಅವನ ಸೇನಾಪತಿಯಾದ ಬಂಕೆಯನ ಯುದ್ಧಕ್ಕೋ ಸಂಬಂಧಿಸಿರಬಹುದಾಗಿದೆ. ಇದರಲ್ಲಿ ಬರುವ 'ಅವರ್' ಮತ್ತು 'ನಮ್ಮವರ್' ಎಂಬ ಮಾತುಗಳು ವಿರೋಧಿ ಮತ್ತು ಪರಪಕ್ಷಗಳನ್ನೇ ಕುರಿತಂತಿವೆ. ಎರಡನೆಯ ಪದ್ಯದಲ್ಲಿ ಬರುವ, "ಆನೆಯನ್ನು ಸಿದ್ಧಗೊಳಿಸಿದರೆ, ನೃಪ ತಾನೇ ಏರುವನು—ಎಂಬುದಾಗಿ ಆನೆಯವರಿಗೆ ಸಾರಿ ಹೇಳಿರಿ" ಎಂಬ ಮಾತು ಇಂಥದೇ ಪರಿಸ್ಥಿತಿಯದಾಗಿದೆ. ಇವೆರಡು ಪದ್ಯಗಳಲ್ಲಿಯೂ ಸಮರಸಂದರ್ಭದ ಆದೇಶಗಳನ್ನು ನೋಡುತ್ತೇವೆ.

ಪ್ರಥಮ ಪರಿಚ್ಛೇದದ ೧೨೦ನೆಯ ಪದ್ಯದಲ್ಲಿ ಬರುವ, "ಕುದುರೆ ತಗುಳ್ದುವಾದೆಸೆಯ ಬಿಲ್ಲವರಂ ಸುಟಿದಾನೆ ನಿಂದು ಮೆಟ್ಟಿದುವೆಲೆ", "ಕುದಿಕುದಿದತ್ತಣಿಂ ಕುದುರೆ ನೂಱಿ

ಅಚೂಳಾ ಬಲದಾನೆ ಪತ್ತು ತಾಗಿದುವೆನೆ"—ಎಂದು ಘುಂತಾಗಿ ಬರುವ ಹೇಳಿಕೆಗಳು ಗಮನಾರ್ಹವಾದವಾಗಿವೆ. ಒಂದು ಕಡೆಯ ಸೈನ್ಯ ಇನ್ನೊಂದು ಕಡೆಯ ಸೈನ್ಯಕ್ಕೆ ತಾಗಿದುದರ ಚಿತ್ರಗಳಿವೆ ಇಲ್ಲಿ. ಈ ಊಹೆಯನ್ನು 'ಆ ದೆಸೆಯ' ಎಂಬ ಮಾತು ಸಮರ್ಥಿಸುತ್ತದೆ. ನೃಪತುಂಗನ ಪರವಾದ ಕವಿ ಇದನ್ನು ಹೇಳುತ್ತಿರುವುದರಿಂದ, ಇಲ್ಲಿನ 'ಆ ದೆಸೆ' ಎಂಬ ಮಾತಿಗೆ ನೃಪತುಂಗನ ವಿರೋಧಿಗಳೆಂದೇ ಅರ್ಥವಾಗುತ್ತದೆ. ಇದನ್ನು ಹೇಳುತ್ತಿರುವಾಗ ಕವಿಯ ಮನಸ್ಸಿನಲ್ಲಿ ಯಾವುದೋ ಹಿಂದಿನ ಘಟನೆಯ ನೆನಪಿರಬೇಕೆಂದು ತೋರುತ್ತದೆ.

ಇದಕ್ಕಿಂತ ದಟ್ಟವಾದ ಯುದ್ಧ ಚಿತ್ರವೊಂದು ಇದೇ ಪರಿಚ್ಛೇದದ ೧೪೪ನೆಯ ಪದ್ಯದಲ್ಲಿ ಕಾಣಿಸಿಕೊಳ್ಳುತ್ತದೆ. ಮಹತ್ತಾದ ಯುದ್ಧವೊಂದರ ವರ್ಣನೆ ಕಾರ್ಗಾಲದ ಕಾವ್ಯಮಯವಾದ ಹೋಲಿಕೆಯೊಡನೆ ಇಲ್ಲಿ ಪ್ರಸ್ತಾಪಿತವಾಗಿರುವಂತಿದೆ.

ಪೊಳೆವ ಮಿಂಚುಗಳಂತಿರೆ ಕೇತುಗಳ್  
ಜಳದ ವೃಂದದವೋಲಿರೆ ಹಸ್ತಿಗಳ್  
ಗಳಿತಧಾರೆಗಳಂತಿರೆ ಪತ್ತಿಗಳ್  
ಬಳಸಿ ಕಾರ್ಗಣೆಯಾಯ್ತು ಮಹಾಹವಂ ॥

ಹೊಳೆಯುವ ಮಿಂಚಿನಂತೆ ಧ್ವಜಗಳು, ಮೋಡದ ಸಮೂಹದಂತೆ ಆನೆಗಳು, ಧಾರಾವರ್ಷದಂತೆ ಕಾಲಾಳುಗಳು ಕಾಣಿಸಿಕೊಂಡುವೆಂದು ಕವಿರಾಜಮಾರ್ಗಕಾರ ಬಣ್ಣಿಸಿದ್ದಾನೆ. ಇಲ್ಲಿ ಉಲ್ಲೇಖಿತವಾಗಿರುವ 'ಮಹಾಹವ' ಯಾವುದಿರಬಹುದು? ಅದು ಕ್ರಿ.ಶ. ೮೩೦ರಲ್ಲಿ ರಾಷ್ಟ್ರಕೂಟರಿಗೂ ಚಾಳುಕ್ಯರಿಗೂ ನಡೆದ ವಿಂಗವಳ್ಳಿ ಸಂಗ್ರಾಮವಿರಬಹುದೇ? ಅಥವಾ ಗಂಗರಿಗೂ ರಾಷ್ಟ್ರಕೂಟರಿಗೂ ನಡೆದ ಕಾಗಿಮೊಗಿಯೂರು ಯುದ್ಧವಿರಬಹುದು? ಆಲೋಚಿಸಬೇಕಾಗಿದೆ. ಈ ಪದ್ಯವನ್ನು ಕುರಿತು ಮುಳಿಯ ತಿಮ್ಮಪ್ಪಯ್ಯನವರು ವಿಶ್ಲೇಷಿಸುತ್ತ, "ಇದು ಗೋವಿಂದರಾಜನೆಸಗಿದ, ಅಥವಾ ನೃಪತುಂಗನಿಗೆ ಇಲ್ಲವೆ ಬಂಕೆಯನಿಗೆ ವೈರಿಗಳಲ್ಲೊದಗಿದ ಹೋರಾಟವನ್ನು ಬಣ್ಣಿಸುವ ಆವುದೋ ಒಂದು ಕಾವ್ಯದೊಳಗಿನ ಇಲ್ಲವೆ ಶಾಸನದ ಪದ್ಯಗಳಲ್ಲೊಂದಾಗಿರಬಹುದೆ?" ಎಂದು ಸಂದೇಹಿಸುತ್ತಾರೆ.[೨೩೩] ಈ ಹೇಳಿಕೆಯ ಪೂರ್ವಾರ್ಧವೇನೋ ಸರಿಯೇ, ಆದರೆ ಉತ್ತರಾರ್ಧದ ಅವರ ಊಹೆಯನ್ನು ಒಪ್ಪಲಾಗುವುದಿಲ್ಲ. ಕವಿರಾಜಮಾರ್ಗದ ಇತಿಹಾಸಪರವಾದ ಲಕ್ಷ್ಯಪದ್ಯಗಳು ಅನ್ಯಮೂಲದಿಂದ ತೆಗೆದುಕೊಂಡವುಗಳೆಂಬ ಅವರ ಎಂದಿನ ನಿಲುವನ್ನೇ ಇದೂ ಸಮರ್ಥಿಸುತ್ತದೆ.

ಈ ಸಂದರ್ಭದಲ್ಲಿ ವಿಜಯಿಯಾದ ರಾಜನನ್ನು ಸ್ವಾಗತಿಸುವ ಚಿತ್ರವೊಂದನ್ನು (೧-೯೬) ಇಲ್ಲಿ ಉಲ್ಲೇಖಿಸಬಹುದು. ಇದರಲ್ಲಿ, "ಜನಪತಿಗೆ ಒಸಗೆಯನ್ನು ಪುರಜನರೆಲ್ಲ ಬೀರುತ್ತಿರಲು ಧ್ವಜಸಮೂಹಗಳು ಕೂಡ ಗಾಳಿಯ ಹೊಡೆತಕ್ಕೆ ಉತ್ಸವದಿಂದ ಕುಣಿಯುವಂತೆ ತೋರುತ್ತಿದ್ದುವು" ಎಂಬ ಮಾತು ಬರುತ್ತದೆ. ಯುದ್ಧದಲ್ಲಿ ಗೆದ್ದು ಹಿಂದಿರುಗಿದ

ದೊರೆಯೊಬ್ಬನನ್ನು ಪುರಜನರು ಪುರಸ್ಕರಿಸುವ ಚಿತ್ರವಿದೆಂದು ತೋರುತ್ತದೆ. ಇಲ್ಲಿನ 'ಜನಪತಿ' ನೃಪತುಂಗನೇ ಇರಬೇಕು.

ನೃಪತುಂಗನ ಸಾಹಸ, ದಯೆ, ಸಂಪನ್ನತೆ, ಕೀರ್ತಿ ಮೊದಲಾದ ವ್ಯಕ್ತಿತ್ವ ಗುಣ ವಿವರಣೆಗೆ ಸಂಬಂಧಿಸಿದ 'ಕವಿರಾಜಮಾರ್ಗದ' ಅಂಶಗಳು ಒಂದು ಆಕರ್ಷಕ ಭಾಗ. ಇವನ್ನು ಮೂರು ಪರಿಚ್ಛೇದಗಳಲ್ಲಿಯೂ ಕಾಣಬಹುದು. 'ಕವಿರಾಜಮಾರ್ಗ'ದಲ್ಲಿನ ಚಾರಿತ್ರಿಕ ವಿಚಾರಗಳಲ್ಲಿ ಇವುಗಳದೇ ದೊಡ್ಡ ಪಾತ್ರವೆನ್ನಬೇಕು. ಇವುಗಳ ಅಧ್ಯಯನ ದಿಂದ ನೃಪತುಂಗ ಪರವಾದ ಸ್ಪಷ್ಟಚಿತ್ರವೊಂದು ರಮ್ಯ ರೀತಿಯಲ್ಲಿ ರೂಪುಗೊಳ್ಳು ತ್ತದೆ.

ಮೊದಲಿಗೆ, ಪ್ರಥಮ ಪರಿಚ್ಛೇದದ ಇಂತಹ ಎರಡು ಪದ್ಯ (೧೧೫, ೧೨೩)ಗಳನ್ನಿಲ್ಲಿ ತೆಗೆದುಕೊಳ್ಳಬಹುದು. ಪದ್ಯ ೧೧೫ರಲ್ಲಿ ಬರುವ ದೊರೆಯ ಚಿತ್ರವನ್ನು ಗಮನಿಸಿ: "ನರಪತಿ ಬಂದಾಗ ಪ್ರೀತಿಯಿಂದ ಕಾಣುವುದು. ಈ ನರೇಂದ್ರನಿಂದ ಧರಣಿ ಸನಾಥೆ ಯಾದಳು. ದೊರೆಗೆ ಕಪ್ಪವನ್ನಿತ್ತು ಅವನಿಂದ ಬರಬಹುದಾದ ಪರಿಭವವನ್ನು ನೀಗಿ ಕೊಳ್ಳುವುದು. ಅಧೀಶ್ವರನ ದಯೆಯೇ ಸಾಕು." ಇದು ಮಹಾಪ್ರತಾಪಶಾಲಿ ಮೂರನೆಯ ಗೋವಿಂದನನ್ನು ಕುರಿತದ್ದಾಗಿರಬಹುದೆ? ಸನಾಥೆ, ದಯೆ ಮುಂತಾದ ಪದಗಳಿಂದ ವ್ಯಕ್ತವಾಗುವ ವ್ಯಕ್ತಿತ್ವಸೂಚನೆಯನ್ನು ಗಮನಿಸಿದರೆ ನೃಪತುಂಗನ ಪರ ವಾದುದೆಂದು ಊಹಿಸಬಹುದಲ್ಲವೆ? ಒಂದು ಪಕ್ಷ ಹಾಗಿದ್ದರೆ, ನೃಪತುಂಗನ ಆಳ್ವಿಕೆಯ ಮೊದಲ ವರ್ಷಗಳ ಮಾತಲ್ಲ ಇದು. ಹಗೆಗಳನ್ನು ನಿಗ್ರಹಿಸಲು ಪರಾಕ್ರಮ ಮಾರ್ಗ ವನ್ನು ಅನುಸರಿಸಿದ ಮೇಲೆ, ಸಾಮಂತರು ಶತ್ರುರಾಜರು ವ್ಯಕ್ತಪಡಿಸಿರಬಹುದಾದ ಮಾತಿರಬೇಕು.

ಇಲ್ಲಿಯೇ ನೃಪತುಂಗನ ಅಥವಾ ಬಂಕೆಯನ ಉದಾರವ್ಯಕ್ತಿತ್ವಕ್ಕೆ ಸಂಬಂಧಿಸಿದ ನಿದರ್ಶನವೊಂದನ್ನು (೧೨೩) ಉಲ್ಲೇಖಿಸಬಹುದು:

> ಗುಣಯುತನಪ್ಪನಂ ಸುಭಟನಪ್ಪನನಾಯುಧಯುಕ್ತನಪ್ಪನಂ
> ಪ್ರಣುತ ಸಮಸ್ತವೈರಿಗಣನಪ್ಪನನುಜ್ವಲಕೀರ್ತಿಯಪ್ಪನಂ
> ಗಣಿದಮನೇನುಮಂ ಬಗೆಯದಾಗಡುಮಂತೆ ಪರೋಪಕಾರಕಾ
> ರಣಪರನಪ್ಪನಂ ಮನದೆ ಮೆಚ್ಚದರಾರಭಿಮಾನಿಯಪ್ಪನಂ ॥

'ಪರೋಪಕಾರಕಾರಣಪರ'ನಾದ ಸುಭಟನೊಬ್ಬನನ್ನು ಬಣ್ಣಿಸುವ ಪದ್ಯವಿದು. ಗುಣ ಸಮನ್ವಿತನೂ ಸುಭಟನೂ ಆಯುಧಸಹಿತನೂ ಆಗಿ ಸಮಸ್ತ ವೈರಿಸಮೂಹಗಳಿಂದ ಸ್ತುತಿಸಲ್ಪಟ್ಟು ಉಜ್ವಲ ಕೀರ್ತಿವಂತನಾಗಿದ್ದರೂ, ಅದಾವುದನ್ನೂ ಲೆಕ್ಕಾಚಾರಕ್ಕೆ ತಂದು ಕೊಳ್ಳದೆ ಪರೋಪಕಾರದಲ್ಲಿಯೇ ಮನಸ್ಸನ್ನು ನಿಲ್ಲಿಸಿರುವಂಥವನನ್ನು ಯಾರು ತಾನೆ ಮೆಚ್ಚುವುದಿಲ್ಲ? ಈ ಉಕ್ತಿಯಲ್ಲಿ ನೃಪತುಂಗಸ್ತುತಿಪರವಾದ ಆ ಕಾಲದ ಜನಪದ ಪ್ರತಿಕ್ರಿಯೆ ಇರುವಂತೆ ಭಾಸವಾಗುತ್ತದೆ. ಆದರೆ 'ಸುಭಟ' ಎನ್ನುವ ಪದ ಬಂದಿರುವುದ ರಿಂದ, ಇಲ್ಲಿ ಸೂಚಿಸಲಾಗಿರುವ ವ್ಯಕ್ತಿ ವೀರಸೇನಾನಿ ಬಂಕೆಯನಾಗಿರಬಹುದೇ ಎಂಬ

ಸಂದೇಹವೂ ಸುಳಿಯುತ್ತದೆ. ಈ ಊಹೆ ಸರಿಯಾಗುವುದಾದರೆ, ಕೊಣ್ಣೂರು ಶಾಸನದಲ್ಲಿ ಬರುವ ಬಂಕೆಯನ ಚಿತ್ರವನ್ನು ಇಲ್ಲಿ ಹೋಲಿಸಿಕೊಳ್ಳಬಹುದಾಗಿದೆ.

ಎರಡನೆಯ ಪರಿಚ್ಛೇದದಲ್ಲಿ ಪರೋಪಕಾರಿಯೂ ವಿಪುಲ ಗುಣಸಂಪನ್ನಾಢ್ಯನೂ ಆದ ನೃಪನೊಬ್ಬನ ಚಿತ್ರ ಬರುತ್ತದೆ (೨೪). ಇಲ್ಲಿನ ನೃಪತಿ ನೃಪತುಂಗನೇ ಇರಬೇಕೆಂದು ಊಹಿಸಬಹುದಾಗಿದೆ. ಅಮೋಘವರ್ಷನು ಧರ್ಮವೀರನೂ ಯುದ್ಧವೀರನೂ ಆಗಿದ್ದನೆಂಬ ಸಂಗತಿ ಈ ಪದ್ಯದ ಮೂಲಕ ಧ್ವನಿತವಾಗುತ್ತದೆ. ಇದೇ ಪರಿಚ್ಛೇದದ ೭೭ನೆಯ ಪದ್ಯದ "ವಿನಿಹತ ಸಮಸ್ತರಿಪುಕುಳರ್" ಎಂಬ ಮಾತಾದರೂ ಹಾಗೆಯೇ.

ಹಗೆಗಳ ಸಮೂಹವನ್ನು ಕೊಂದೂ, ಅವರನ್ನು ಸುರಸುಂದರಿಯರೊಡನೆ ಸುರತ ಸುಖದಲ್ಲಿ ನೆಲೆಗೊಳಿಸಿರುವ ನಿನ್ನಂತಹ ಉದಾರಪುರುಷೋತ್ತಮರು ಯಾರಿದ್ದಾರೆ–ಎಂದು ವರ್ಣಿತವಾಗಿರುವ (೨–೮೦) ದೊರೆಯ ಉದಾರಗುಣ ಸ್ವಾಭಾವಿಕವಾದುದು. ಶತ್ರುಗಳನ್ನು ಕೊಂದಮೇಲೂ ಔದಾರ್ಯವನ್ನು ಪ್ರಕಟಿಸಿದನೆಂಬುದು ನೃಪತುಂಗನ ವ್ಯಕ್ತಿತ್ವವನ್ನೆ ಕುರಿತು ಹೇಳಿದಂತಾಗಿದೆ. ಆದ್ದರಿಂದ, "ವೆಂಗಿರಾಜಾದಿಗಳನ್ನು ನಿರ್ನಾಮವೆಸಗಿದ 'ಪುರುಷೋತ್ತಮ', 'ಉದಾರ' ಮೊದಲಾದ ಬಿರುದುಗಳುಳ್ಳ ಅಮೋಘವರ್ಷನ ಮಹಿಮೆಯೇ ಈ ಪದ್ಯದಲ್ಲಿ ವರ್ಣಿತವಾಗಿರುವಂತಿದೆ" ಎಂಬ ಮುಳಿಯ ತಿಮ್ಮಪ್ಪಯ್ಯನವರ ಮಾತನ್ನು ಒಪ್ಪಬಹುದು.[234]

ಇದೇ ಪರಿಚ್ಛೇದದ ೧೦೨ನೇ ಪದ್ಯದಲ್ಲಿ ಪ್ರಯೋಗವಾಗಿರುವ 'ಅರ್ಥಿಗಣಾರ್ಥಿತ ಕಲ್ಪವೃಕ್ಷ', 'ಉದಾತ್ತಚಾರುಗುಣ' ಎಂಬ ವಿಶೇಷಣಗಳು 'ಮಹೀಪತಿ'ಯೊಬ್ಬನನ್ನು ಕುರಿತು ಹೇಳುತ್ತಿದ್ದು, ಆ 'ಮಹೀಪತಿ'ಯೂ ನೃಪತುಂಗನೇ ಇರಬೇಕೆಂದು ತರ್ಕಿಸಬಹುದಾಗಿದೆ. ಅವನ 'ಉದಾರ' ಬಿರುದನ್ನು ಇಲ್ಲಿ ನೆನೆಯಬಹುದು.

ಪದ್ಯ ೧೧೭ ಒಂದು ವಿಲಕ್ಷಣ ರಚನೆಯಾಗಿದ್ದು, ಅದರಲ್ಲಿ ಚಾರಿತ್ರಿಕ ಅಂಶಗಳನ್ನು ಅನ್ವೇಷಿಸಲು ಪ್ರಯತ್ನಿಸಲಾಗಿದೆ. ಇದರ ಮೊದಲ ಸಾಲನ್ನು ಕೊನೆಯಿಂದ ಓದಿದರೆ ಎರಡನೆಯ ಸಾಲೂ ಎರಡನೆಯ ಸಾಲನ್ನು ಕೊನೆಯಿಂದ ಓದಿದರೆ ಮೊದಲ ಸಾಲೂ ಬರುವಂತೆ ಸಂಯೋಜಿತವಾಗಿದೆ. ಇದರ ಐತಿಹಾಸಿಕ ಧ್ವನಿಯನ್ನು ಕುರಿತು ಮಾತನಾಡುತ್ತ ತಿಮ್ಮಪ್ಪಯ್ಯನವರು, "ಇದು ನೃಪತುಂಗನ ಅಲ್ಲವೆ ಒಬ್ಬ ಧನುರ್ವಿದ್ಯಾನಿಪುಣ ವೀರನ ವರ್ಣನೆಯಾಗಿರುವಂತೆ ತೋರುತ್ತಿದೆ"[235] ಎಂಬುದಾಗಿ ಅಭಿಪ್ರಾಯಪಟ್ಟಿದ್ದಾರೆ.

ಇದೇ ಬಗೆಯ ವ್ಯಕ್ತಿತ್ವದ ೧೨೭ನೆಯ ಪದ್ಯವನ್ನು ಇಲ್ಲಿ ಲಕ್ಷಿಸಬೇಕು :

> ಪೆಜ[ನಾ]ವಂ ಧರಾಚಕ್ರಕ್ಕೆಱಯಂ ಕೆಳೆಯಪ್ಪವಂ
> ನೆಱೆಯಾರೆಣೆಯೆಂಬನ್ನಂ ಕುಱೀತಬ್ಧಿಗೆ ಬನ್ನಮಂ ॥

ಸಮುದ್ರಕ್ಕೆ ಭಂಗವನ್ನು ತರುವ ಭೂವಲ್ಲಭ ಬೇರೆ ಯಾರಿದ್ದಾರೆ ಎಂಬರ್ಥದ ಈ ಪದ್ಯ ರಾಮಾಯಣದ ಕಥೆಗೆ ಸಂಬಂಧಿಸಿರಬಹುದೆಂದು ಎಂ. ವಿ. ಸೀ. ಅವರು ಊಹಿಸಿದ್ದಾರೆ.[236] ತಿಮ್ಮಪ್ಪಯ್ಯನವರಾದರೊ, ಗೋವಿಂದ ಅಥವಾ ನೃಪತುಂಗಪ್ರಸಕ್ತಿಯೂ ಇಲ್ಲಿರಬಹುದೆಂದು ಊಹಿಸಿದ್ದಾರೆ.[237] 'ಅಬ್ಧಿಗೆ ಬನ್ನಮಂ' ಎಂಬ ಮಾತು ಗೋವಿಂದನು

ಲಂಕೆಯನ್ನು ವಶಪಡಿಸಿಕೊಂಡದನ್ನು ಹೇಳುವುದೆಂದು ಭಾವಿಸಿದ್ದಾರೆ. ಇಲ್ಲಿ ಊಹೆಗೆ ಹೆಚ್ಚು ಎಡೆದೊರೆತಿದೆ.

೨-೧೪೨ರ ಚಕ್ರಶ್ಲೋಕವನ್ನು ವ್ಯಾಖ್ಯಾನಿಸುತ್ತ ತಿಮ್ಮಪ್ಪಯ್ಯನವರು, ಅದರ ಅರ್ಥವನ್ನು ಹೀಗೆ ವಿವರಿಸಿದ್ದಾರೆ : “ಸೌಜನ್ಯವನ್ನೊಂದಿದವನಾದ (ನೀನು), ಪರಗುಣದ ಉದಾರತೆಯಲ್ಲಿ (ಬಹುಶಃ ‘ಉದಾರ’ವೆಂಬ ಸಾರ್ಥಕ ಬಿರುದಾಂಕಿತ ನೃಪತುಂಗನ ಔದಾರ್ಯದಲ್ಲಿ) ಅಭಿಮಾನವನ್ನಿರಿಸಿ ಆ ನರಪಾಲಕನಲ್ಲಿ ಸಾಮದಿಂದ ಬಾಳುವುದೇ ಉತ್ತಮ. ಹಿಂದಿನ ಹಗೆತನವನ್ನು ನೋಡದೆ, ಹಗೆತನದಿಂದ ಬಾಳುತ್ತಿದ್ದ ನಿನ್ನ ಅಯ್ಯನ (ತಂದೆಯ) ಆ ಹಿಂದಣ ವಿಚಾರವನ್ನು ಭಾವಿಸದೆ, ಶಾಂತತೆಯಿಂದ ವರ್ತಿಸು. ಹಾಗಿದ್ದರೆ ಉದಾರನಾದ ಭೂಪನ ಪ್ರೇಮವು ನಿನ್ನಲ್ಲಿ ಸುರಿವುದು.”[೨೩೮] ಇದರಲ್ಲಿ ಹೊಸದಾಗಿ ಪಟ್ಟವೇರಿದ ವಿರೋಧಿ ರಾಜಪುತ್ರನೊಬ್ಬನಿಗೆ, ಚಕ್ರವರ್ತಿ ಅಮೋಘವರ್ಷನಲ್ಲಿ ವರ್ತಿಸಬೇಕಾದ ರೀತಿಯನ್ನು ಬೋಧಿಸಿದ ಸೂಚನೆ ಇರುವಂತಿದೆ. ಆದರೆ ಆ ವಿರೋಧಿ ರಾಜಪುತ್ರ ಯಾರೆಂಬುದನ್ನು ಊಹಿಸಲು ಸಾಧ್ಯವಿಲ್ಲ.

೩-೨೧, ೨೨ರ ಪದ್ಯಗಳು ಇಂತಹ ಚಾರಿತ್ರಿಕ ಅಂಶಗಳನ್ನು ರೂಪಕರೂಪದಲ್ಲಿ ಕೊಡುತ್ತವೆ. ಪ. ೨೧ ಬಹುಶಃ ನೃಪತುಂಗನನ್ನೇ ಕುರಿತಿರಬಹುದು. “ಉದಾರಂ ನಿನ್ನಾ ವಿಮಳ ಯಶೋವಿಧು” ಎಂಬ ಮಾತು ಈ ಭಾವನೆಗೆ ಕಾರಣ. ಪ. ೨೨ರಲ್ಲಿ ರಾಜನೊಬ್ಬನ ಪರಾಕ್ರಮದ ವರ್ಣನೆಯಿದೆ. ಇದು ಕೂಡ ನೃಪತುಂಗನನ್ನೇ ಗಮನಿಸಿ ಹೇಳಿದಂತಿದೆ.

ಮೂರನೆಯ ಪರಿಚ್ಛೇದದಲ್ಲಿಯೇ ಪದ್ಯ ೪೦ರಿಂದ ೪೪ರವರೆಗೆ ರಾಜನೊಬ್ಬನಿಗೂ ಸಮುದ್ರ, ಸೂರ್ಯ, ಚಂದ್ರ, ಮೇರು, ಕಲ್ಪವೃಕ್ಷಗಳಿಗೂ ಇರುವ ಸಮಾನ ಗುಣಗಳನ್ನು ವರ್ಣಿಸಿ, ಭೇದಕಗುಣವನ್ನೂ ತಿಳಿಸಿದೆ. ಈ ರಾಜವರ್ಣನೆ ನೃಪತುಂಗನನ್ನೇ ಕುರಿತಿದ್ದಿರಬೇಕೆಂದು ಎಂ. ವಿ. ಸೀ. ಅವರು ಅಭಿಪ್ರಾಯಪಟ್ಟಿದ್ದಾರೆ.[೨೩೯] ಪದ್ಯ ೮೧ರಲ್ಲಿ ಮಾಲೋಪಮೆಯನ್ನು ವಿಸ್ತರಿಸುತ್ತ, ರಾಜನೊಬ್ಬನನ್ನು ಧೈರ್ಯದಲ್ಲಿ, ಗೌರವದಲ್ಲಿ, ಮಹಿಮೆಯಲ್ಲಿ, ಉದಾರತೆಯಲ್ಲಿ, ಅನುಪಮ ಗುಣದಲ್ಲಿ ವಿಷ್ಣುವಿಗೆ ಸಮಾನವೆಂದು ಹೇಳಲಾಗಿದೆ. ಇದು ದಂಡಿಯ ಮಾಲೋಪಮೆಯ ಕ್ರಮದಿಂದ ಭಿನ್ನವಾದುದು. ಆದ್ದರಿಂದ ಕವಿರಾಜಮಾರ್ಗಕಾರ ಇದರಲ್ಲಿ ನೃಪತುಂಗನನ್ನು ವಿಷ್ಣುವಿಗೆ ಸಮಾನವೆಂದು ವರ್ಣಿಸಿರುವ ಹಾಗೆ ತೋರುತ್ತದೆ. ‘ಉದಾರತೆಯೊಳ್’ ಎಂಬ ಮಾತು ಇದನ್ನು ಸಮರ್ಥಿಸುತ್ತದೆ.

ಹಾಗೆಯೇ, ೮೪ ಮತ್ತು ೮೭ನೆಯ ಪದ್ಯಗಳಲ್ಲಿ ರಾಜನೊಬ್ಬನನ್ನು ಸೂರ್ಯ ಚಂದ್ರ ಸುರೇಶ್ವರ ಜಲನಿಧಿಗಳೊಡನೆ ಹೋಲಿಸಿದೆ. ಆ ರಾಜ ನೃಪತುಂಗನೇ ಇರಬಹುದು. ದಂಡಿಯ ಲಕ್ಷ್ಯಪದ್ಯವನ್ನು ಅನುಸರಿಸಿಯೂ ಬೇರೆಯಾದ ೯೪ನೆಯ ಪದ್ಯ ರಾಜನೊಬ್ಬನ ಯಶೋರಾಶಿಯನ್ನು ವರ್ಣಿಸುತ್ತದೆ. ಇಲ್ಲಿ ವಿವಕ್ಷಿತನಾದ ದೊರೆಯೂ ನೃಪತುಂಗನೇ ಇರಬಹುದು. ಆತನನ್ನು ಅಷ್ಟದಿಕ್ಪಾಲಕರಂತೆ ನವಮಲೋಕಪಾಲನೆಂದು ಸ್ತುತಿಸುವ ಚಿತ್ರವಿದೆ ಪ. ೯೭ರಲ್ಲಿ. ಪ. ೧೧೨ರಲ್ಲಿ ‘ಉಮಾವರಂ’ (ದಂಡಿಯಲ್ಲಿ ‘ಶಂಕರ’) ಎಂಬ

ಒಂದು ಮಾತಿದೆ. ಇಲ್ಲಿ 'ಉಮಾ' ಶಬ್ದವು ಶ್ಲೇಷೆಯಿಂದ ನೃಪತುಂಗನ ರಾಣಿಯಾಗಿದ್ದಿರ ಬಹುದಾದ 'ಉಮಾದೇವಿ'ಯನ್ನೇ ಕುರಿತು ಹೇಳಿರಬೇಕೆಂದು ಮುಳಿಯ ತಿಮ್ಮಪ್ಪಯ್ಯನವರು ಊಹಿಸಿದ್ದಾರೆ.[240]

ಈ ಪದ್ಯ ೧೫೫ರಲ್ಲಿ ಪ್ರಯೋಗವಾಗಿರುವ 'ಅತಿಧವಳ' ಎಂಬುದು 'ಅತಿಶಯಧವಳ' ಎಂಬ ನೃಪತುಂಗನ ಬಿರುದನ್ನೇ ಹೇಳುತ್ತದೆ. ಇದರಲ್ಲಿ ಬರುವ 'ಪರಮೋದಯ' ಎಂಬುದೂ ಅವನ ಇನ್ನೊಂದು ಬಿರುದಾಗಿದೆ. ಪದ್ಯ ೧೫೭ರಲ್ಲಿ ವರ್ಣಿತನಾಗಿರುವ 'ನೃಪವೃಷಭ' ಬಹುಮಟ್ಟಿಗೆ ನೃಪತುಂಗನೇ. ಈ ನೃಪವೃಷಭನು ಮುನಿಪತಿಯ ಹಾಗೆ ಅಪರಾಗನೂ ವಿಪುಲ ಯಶೋಧನ ಲೋಭಿಯೂ ಅರಾತಿಸಮೂಹತರುಗಳಿಗೆ ದಾವಾನಲನೂ ಆಗಿದ್ದಾನೆಂದು ಅಲ್ಲಿ ವರ್ಣಿಸಲಾಗಿದೆ. ೧೫೯ನೆಯ ಪದ್ಯದಲ್ಲಿ ಪರಾಕ್ರಮಶಾಲಿಯೊಬ್ಬನು ಶತ್ರುಗಳನ್ನು ಸಂಹಾರಮಾಡಿ ಗೆಲವನ್ನು ಪಡೆದ ಉಲ್ಲೇಖವಿದೆ. ಈ ಪದ್ಯ ಎರಡನೆಯ ಪರಿಚ್ಛೇದದ ೮೦ನೆಯ ಪದ್ಯದ ನೆನಪನ್ನು ತರುತ್ತದೆ. ಎರಡರಲ್ಲೂ ಒಂದೇ ಬಗೆಯ ವಿಷಯ ನಿರೂಪಿತವಾಗಿದೆ. ೧೬೧ ಮತ್ತು ೧೬೨ನೆಯ ಪದ್ಯಗಳು ಕ್ರಮವಾಗಿ ಶ್ರೀದೇವಿ ಭೂದೇವಿಯರ ವರ್ಣನೆಯನ್ನು ಹೇಳುತ್ತಿದ್ದು, ಆ ಮೂಲಕ ವಿಷ್ಣುವಿನ ಸ್ತೋತ್ರವೂ ನೃಪತುಂಗನ ಪ್ರಶಂಸೆಯೂ ಅಡಕಗೊಂಡಿದೆ. ಮೊದಲ ಪದ್ಯದಲ್ಲಿ ವರ್ಣಿತನಾಗಿರುವ ರಾಜನು ವಕ್ಷಃಸ್ಥಲದಲ್ಲಿ ಲಕ್ಷ್ಮಿಯನ್ನು ಧರಿಸಿರುವ ನಾರಾಯಣನೇ ಆಗಿದ್ದಾನೆ ಎಂಬ ರೀತಿಯಲ್ಲಿ ಸ್ತುತಿಸಲ್ಪಟ್ಟಿದ್ದಾನೆ. ಈ ಪದ್ಯ 'ಕವಿರಾಜಮಾರ್ಗ'ದ ಪ್ರಾರಂಭದ ಎರಡು ಪದ್ಯಗಳನ್ನು ನೆನಪಿಗೆ ತರುತ್ತದೆ. ವಿಷ್ಣು ಮತ್ತು ನೃಪತುಂಗರಲ್ಲಿ ಅಭೇದ ಕಲ್ಪನೆಯಿದೆ. ನಾರಾಯಣನಿಗೆ ಸಮ ಎಂಬ ಸ್ತೋತ್ರದ ಮೂಲಕ ನೃಪತುಂಗನಿಗೆ 'ವೀರನಾರಾಯಣ' ಎಂಬ ಬಿರುದಿತ್ತೆಂಬುದನ್ನು ಜ್ಞಾಪಕಕ್ಕೆ ತರುತ್ತದೆ. 'ಎಂತುದಾರಚರಿತನೆ ಅಪ್ಪಯ್' ಎಂಬ ಮಾತಿನಲ್ಲಿ ನೃಪತುಂಗನ 'ಉದಾರ' ಬಿರುದಿನ ಉಲ್ಲೇಖವಿದೆ. ಈ ಪದ್ಯ ದಂಡಿಯ ಲಕ್ಷ್ಯಪದ್ಯದಿಂದ ಭಿನ್ನವಾಗಿದ್ದು, ನೃಪತುಂಗನ ಪ್ರಶಂಸೆಯಿರುವುದು ಸಹಜವೇ ಆಗಿದೆ. ಆದರೆ ಎರಡನೆಯ ಪದ್ಯ ದಂಡಿಯ ಲಕ್ಷ್ಯಪದ್ಯದ ಅನುವಾದವೇ ಆಗಿದೆ. ಇಷ್ಟಾದರೂ, 'ಉದಾರಚರಿತ ಕ್ರಮದಿಂ' ಪ್ರಯೋಗ, ಭೂದೇವಿಯ ಸ್ತೋತ್ರದ ಮರೆಯಲ್ಲಿ ನೃಪತುಂಗನನ್ನು ನಿರ್ದೇಶಿಸಿರುವುದು ಸ್ಪಷ್ಟವಾಗುತ್ತದೆ.

ಮೂರನೆಯ ಪರಿಚ್ಛೇದದ ೧೭೪ರಿಂದ ೧೮೧ರವರೆಗಿನ ಎಂಟು ಪದ್ಯಗಳು ಗಮನಾರ್ಹವಾದವು. ಇವು ಕವಿರಾಜಮಾರ್ಗಕಾರನ ಸ್ವತಂತ್ರ ರಚನೆಗಳು. ನೃಪತುಂಗನ ಉದಾತ್ತ ಗುಣಗಳನ್ನೆ ಇಲ್ಲಿ ಪ್ರಶಂಸಿಸಿದೆ. ಮೊದಲ ಪದ್ಯದಲ್ಲಿ ವರ್ಣಿತನಾಗಿರುವ ರಾಜ, ಚಲ ಹಿಡಿದಾಗ ಧೂಳಿನ ಕಣವನ್ನು ಕೂಡ ಶತ್ರುಗಳಿಂದ ಪಡೆಯದೆ ಬಿಡನಂತೆ; ಹಾಗೆಯೇ, ದಾನಮಾಡುವಾಗ ಎಷ್ಟೇ ಹಿರಿದಾಗಿದ್ದರೂ ಕಿರಿದೆಂದೆ ದಾನಮಾಡುವನಂತೆ. "ಈ ಪದ್ಯದಲ್ಲಿ ರಾಜನ 'ಛಲ' ನಿಷ್ಠವಾದ ಪರಾಕ್ರಮವನ್ನೂ, 'ಪ್ರಿಯ' ನಿಷ್ಠವಾದ ಔದಾರ್ಯ ಹಾಗೂ ತ್ಯಾಗ ಗುಣಗಳನ್ನೂ ವರ್ಣಿಸಿದೆ."[241] ಐಶ್ವರ್ಯಲಕ್ಷ್ಮಿಯನ್ನು ತೊತ್ತೆಂದು

ತ್ಯಾಗಮಾಡುವ ರಾಜನ 'ಮಹಾಪುರುಷ' ಲಕ್ಷಣವನ್ನು ೧೭೫ನೆಯ ಪದ್ಯ ಹೇಳಿದರೆ, ಪರರ ವಿಚಾರವನ್ನೂ ಧರ್ಮವನ್ನೂ ಸಹಿಸಲು ಸಾಮರ್ಥ್ಯವಿರುವ ರಾಜನ ಸಹನೆಯ ಗುಣವನ್ನು ೧೭೬ನೆಯ ಪದ್ಯ ಹೇಳುತ್ತದೆ. ಗುಣವಂತರೆನಿಸಿ ಕೀರ್ತಿಶಾಲಿಯಾಗಿ ಬದುಕುವುದೇ ನಿಜವಾದ ಬದುಕು, ಆ ಕ್ರಮವನ್ನು ಗುಣದಲ್ಲಿ ಶ್ರೇಷ್ಠರೆನಿಸಿದವರು ಮಾಡುತ್ತಾರೆ ಎಂದು ಮುಂದಿನ ಪದ್ಯದಲ್ಲಿ ಹೇಳುವುದರ ಮೂಲಕ, ನೃಪತುಂಗನ ಗುಣವಂತಿಕೆಯನ್ನೇ ಅಲ್ಲಿ ವರ್ಣಿಸಿದೆ. ಪದ್ಯ ೧೭೮, ೧೭೯ ಪರಸ್ಪರ ಪೂರಕವಾಗಿದ್ದು, ರಾಜನಾದವನು ಜನನಿಂದೆಗೂ ಜನಸ್ತುತಿಗೂ ಗಮನಕೊಡದೆ, ಧರ್ಮಮಾರ್ಗದಲ್ಲಿ ನಡೆಯಬೇಕೆಂಬ ಅರ್ಥವನ್ನು ಒದಗಿಸುತ್ತದೆ. ಇದೇ ನೃಪತುಂಗನ ಆದರ್ಶಮಾರ್ಗವೆಂಬುದು ಮಾರ್ಗಕಾರನ ಲಕ್ಷ್ಯವಾಗಿದೆ.

ಪ. ೧೮೦, ೧೮೧ ಕ್ರಮವಾಗಿ 'ವೀರನಾರಾಯಣ' ಮತ್ತು 'ನರಲೋಕಚಂದ್ರ' ಎಂಬ ನೃಪತುಂಗನ ಬಿರುದುಗಳನ್ನು ಹೇಳುವುದರಿಂದ, ಇವುಗಳಲ್ಲಿ ನೃಪತುಂಗನ ಪ್ರಶಂಸೆಯೇ ಇದೆಯೆನ್ನಬಹುದು. ಶತ್ರುರಾಜರು ವೀರನಾರಾಯಣನಿಗೆ ನಮಸ್ಕಾರ ಮಾಡಿದಾಗ ಅವರ ಶಿರೋಭೂಷಣಗಳಿಂದ ಉದುರಿದ ಮುತ್ತುರತ್ನಗಳಿಂದಾಗಿ ಸಭೆಯ ಅಂಗಳವೆಲ್ಲ ಚಿಕ್ಕೆ ತುಂಬಿದ ಬಾನಿನಂತೆ ಶೋಭಾಯಮಾನವಾಯಿತಂತೆ. ಹಾಗೆಯೇ, ಶತ್ರುಮಂಡಲದ ರಾಜರು ಕಾಣಿಕೆಯಾಗಿ ಕಳಿಸಿಕೊಟ್ಟ ಆನೆಗಳ ಮದೋದಕದಿಂದ ನರಲೋಕಚಂದ್ರನ ಅರಮನೆಯೆಲ್ಲ ಕೆಸರಾಯಿತಂತೆ. ಶತ್ರುಗಳನ್ನು ಗೆದ್ದು ನೃಪತುಂಗ 'ವೀರನಾರಾಯಣ' ಬಿರುದಿಗೆ ಪಾತ್ರನಾದನೆಂಬ ಮತ್ತು ಶತ್ರುರಾಜರು ಅವನಿಗೆ ಆನೆಗಳನ್ನು ಉಡುಗೊರೆಯಾಗಿ ಕಳುಹಿಸುತ್ತಿದ್ದರೆಂಬ ಎರಡು ಐತಿಹಾಸಿಕ ಅಂಶಗಳು ಇಲ್ಲಿ ಸ್ಪಷ್ಟವಾಗುತ್ತವೆ. ಹಿಂದೆ ಉಲ್ಲೇಖಿಸಿದ ಬೇಗುಮ್ರಾ, ನೀಲಗುಂದ ಮತ್ತು ಶಿರೂರು ಶಾಸನಗಳ ವಿಷಯವನ್ನಿಲ್ಲಿ ಅನ್ವಯಿಸಿಕೊಳ್ಳಬಹುದು. ಅದರಲ್ಲಿಯೂ, ನೀಲಗುಂದ ಮತ್ತು ಶಿರೂರು ಶಾಸನಗಳಲ್ಲಿ ಬರುವ "ಅರಿನೃಪತಿಮಕುಟಘಟ್ಟಿತಚರಣಃ' ಎಂಬ ಮಾತನ್ನು[242] "ಪ್ರಣತಾರಿಘಟಿತಮುಕ್ತಾಮಣಿಗಣಮುತ್ತಂಸದಿಂ" ಎಂಬುದರೊಡನೆ ಹೋಲಿಸಬಹುದು. ಸಂಜಾನ ಶಾಸನದ "ಯಸ್ಯಾಜ್ಞಾಂ ಪರಚಕ್ರಿಣಃ ಪ್ರಜಮಿವಾಜಸ್ರಂ ಶಿರೋಭಿರ್ವಹಂತಿ" ಮತ್ತು "ಯದ್ದ್ವಾರೇ ಪರಮಂಡಲಾಧಿಪತಯಃ" ಎಂಬೀ ಮಾತುಗಳನ್ನೂ ನೆನೆಯಬಹುದು. "ಒಟ್ಟನಲ್ಲಿ ಇವುಗಳಲ್ಲಿ ನೃಪತುಂಗನ 'ವಿಭವದ ಪೆಂಪ'ನ್ನು ವರ್ಣಿಸಿದೆ. ಇವಕ್ಕೆ ಹಿಂದಿನ ಆರು ಪದ್ಯಗಳಲ್ಲಿ ಆತನ 'ಮನದ ಪೆಂಪ'ನ್ನು ವರ್ಣಿಸಿದೆ. ಎಂದು ಊಹಿಸಿದರೆ ತಪ್ಪಾಗದು."[243]

ಅಲ್ಲದೆ "ರಣರಂಗದಲ್ಲಿ ಪರಿಚಿತವಾದ ಕ್ಷಾತ್ರವನ್ನೆ ಮೆರೆದರೂ, ಶಾಂತಸ್ವಭಾವಕ್ಕೆ ಆಶ್ರಯವಾದ ನಿನ್ನ ರೂಪು ಸೊಗಯಿಸುತ್ತಿದೆ" ಎಂಬ ಭಾಗ (ಪ. ೧೯೭) ನೃಪತುಂಗನನ್ನೇ ಕುರಿತಂತೆ ತೋರುತ್ತದೆ.

ಇಲ್ಲಿಯವರೆಗೆ 'ಕವಿರಾಜಮಾರ್ಗ'ದಲ್ಲಿ, ಮುಖ್ಯವಾಗಿ ಅಲ್ಲಿಯ ಲಕ್ಷ್ಯಪದ್ಯಗಳಲ್ಲಿ ಅಂತರ್ಗತವಾಗಿರುವ ಐತಿಹಾಸಿಕ ಅಂಶಗಳನ್ನು ಒಗ್ಗೂಡಿಸುವ ಕೆಲಸವನ್ನು ಮಾಡ

ಲಾಗಿದೆ. ಈ ಎಲ್ಲ ವಿಷಯಗಳಿಗೂ ನಿರ್ದಿಷ್ಟ ಶಾಸನಾಧಾರಗಳು ದೊರಕುವುದಿಲ್ಲವಾದ್ದರಿಂದ, ಪದ್ಯಗಳಲ್ಲಿ ವರ್ಣಿತನಾಗಿರುವ ವ್ಯಕ್ತಿಯ ಸ್ವರೂಪ, ಬಳಸಲಾಗಿರುವ ಪದಗಳ ಯಥಾರ್ಥತೆ ಹಾಗೂ ಸೃಷ್ಟಿಗೊಳ್ಳುವ ಪರಿಸರದ ಅಧ್ಯಯನದ ಮೂಲಕ ನೃಪತುಂಗ ಪರವಾದ ಸಂಭವನೀಯ ಚಾರಿತ್ರಿಕ ಸಂಗತಿಗಳನ್ನು ಪುನರ್ರಚಿಸಲು ಇಲ್ಲಿ ಕೆಲಮಟ್ಟಿಗೆ ಯತ್ನಿಸಿದೆ.

ಚಾರಿತ್ರಿಕ ಸಂಗತಿಗಳನ್ನು ಹೇಳುವ ಪದ್ಯಗಳನ್ನು ಕವಿರಾಜಮಾರ್ಗಕಾರ ಸಮಕಾಲೀನ ನೃಪತುಂಗಪರ ಚಾರಿತ್ರಿಕ ಕೃತಿಯೊಂದರಿಂದ ತೆಗೆದು ಉದಾಹರಿಸಿದ್ದಾನೆ ಎಂದಾಗಲಿ ಅಥವಾ ಕವಿರಾಜಮಾರ್ಗಕಾರನೇ ಅಂಥದೊಂದು ಗ್ರಂಥವನ್ನು ರಚಿಸಿದ್ದಾನೆ ಎಂದಾಗಲಿ ಹೇಳಲು ನಮಗೆ ತಕ್ಕ ಆಧಾರಗಳಿಲ್ಲ.[244] ಆದರೆ 'ಕವಿರಾಜಮಾರ್ಗ'ದ ಪ್ರಸ್ತುತ ಪದ್ಯಗಳನ್ನೆಲ್ಲ ಒಂದೆಡೆ ಸೇರಿಸಿದರೆ ಕೆಲಮಟ್ಟಿಗೆ ವಸ್ತುನಿಷ್ಠವಾದ, ಆದರೆ ಬಹುಮಟ್ಟಿಗೆ ಭಾವನಿಷ್ಠವಾದ ನೃಪತುಂಗಪರವಾದ ಪುಟ್ಟಕಾವ್ಯವೊಂದು ರೂಪುಗೊಳ್ಳುವುದು ಸಾಧ್ಯವಿದೆ. ಪ್ರಾಚೀನ ಕರ್ಣಾಟಕದ ಇತಿಹಾಸರಚನೆಗೆ ತನ್ನ ಮಿತಿಯಲ್ಲಿ 'ಕವಿರಾಜಮಾರ್ಗ'ವೂ ಒಂದು ಗಣ್ಯ ಆಕರಗ್ರಂಥವಾಗಿದೆ.

## ಧಾರ್ಮಿಕ ಮತ್ತು ಸಾಮಾಜಿಕ ಅಂಶಗಳು

'ಕವಿರಾಜಮಾರ್ಗ' ಪ್ರಥಮತಃ ಒಂದು ಅಲಂಕಾರಶಾಸ್ತ್ರ ಗ್ರಂಥವಾದರೂ ಅದರ ಕರ್ತೃ ಆನುಷಂಗಿಕವಾಗಿ ಸಮಕಾಲೀನ ಧಾರ್ಮಿಕ ಮತ್ತು ಸಾಮಾಜಿಕ ಸಂಗತಿಗಳನ್ನು ಅಲ್ಲಲ್ಲಿ ಪ್ರತಿಬಿಂಬಿಸಿದ್ದಾನೆ. ಮೊದಲು ಧಾರ್ಮಿಕವಾದ ಕೆಲವಂಶಗಳ ಬಗೆಗೆ ಗಮನಿಸಬಹುದು.

### ಧಾರ್ಮಿಕ ಅಂಶಗಳು

ಕವಿರಾಜಮಾರ್ಗಕಾರನ ಪ್ರಕಾರ ಕಾವ್ಯದ ಆದರ್ಶ ಚತುರ್ವಿಧ ಪುರುಷಾರ್ಥಗಳ ಗಳಿಕೆ. ಅದು ಪ್ರಾಚೀನ ಕಾವ್ಯಗಳ ಉದ್ದೇಶವೂ ಆಗಿತ್ತು ಎಂಬುದನ್ನು ಆತ ಹೀಗೆ ವ್ಯಕ್ತಪಡಿಸಿದ್ದಾನೆ:

ಅಧಿಕೃತ ಸತ್ಪುರುಷಾರ್ಥ
ಪ್ರಧಾನ ಧರ್ಮಾರ್ಥಕಾಮಮೋಕ್ಷಂಗಳವಾ
ಬುಧಜನ ವಿವಿಕ್ತ ಕಾವ್ಯ
ಪ್ರಧಾರಿತಾರ್ಥಂಗಳಖಿಳಭುವನಹಿತಂಗಳ್ ॥ (೧–೨೦)

ಈ ಅಭಿವ್ಯಕ್ತಿ ತ್ರಿವರ್ಗಗಳನ್ನೇ ಎತ್ತಿಹೇಳುವ ಜೈನಶ್ರದ್ಧೆಯಿಂದ ಭಿನ್ನವಾದದ್ದು, ವೈದಿಕ ಪರವಾದದ್ದು ಎಂದು ತೋರುತ್ತದೆ.

'ಕವಿರಾಜಮಾರ್ಗ'ದ ಕರ್ತೃವಿನ ಬಗೆಗೆ, ಆಶ್ರಯದಾತನಾದ ನೃಪತುಂಗನ ಬಗೆಗೆ, ತಕ್ಕ ಸಂಗತಿಗಳನ್ನು ಒದಗಿಸುವುದು ಧಾರ್ಮಿಕ ಸ್ಥಿತಿಗತಿಯೇ. ಆ ಆಶ್ರಯದಾತನು

ವೈದಿಕಮತಾವಲಂಬಿ, ಹಾಗೂ ಕೃತಿಕರ್ತೃ ಜೈನಮತಾವಲಂಬಿ ಎಂಬುದು ಗ್ರಂಥದಲ್ಲಿನ ಇಬ್ಬಗೆಯ ವಿವರಗಳನ್ನು ಹೊತ್ತಿರುವ ಹಲವಾರು ಪದ್ಯಗಳಿಂದ ಸ್ಪಷ್ಟವಾಗುತ್ತದೆ. ನೃಪತುಂಗನನ್ನು ಆಶೀಪದ್ಯಗಳಲ್ಲಿ ಲಕ್ಷ್ಮಿಯ ಭರ್ತೃ ಎಂದು ವರ್ಣಿಸಲಾಗಿದೆ. ಆತ ಲಕ್ಷ್ಮೀಭಕ್ತನೆಂಬುದು ಸಂಜಾನ ಶಾಸನದಿಂದಲೂ ಸ್ಪಷ್ಟವಿದೆ:

ಸರ್ಪಂ ಪಾತುಮಸೌ ದದೌ ನಿಜತನುಂ ಜೀಮೂತಕೇತೋಸ್ಸುತಃ
ಶ್ಯೇನಾ ಯಥ ಶಿಬಿಃ ಕಪೋತ ಪರಿರಕ್ಷಾರ್ಥಂ ದಧೀಚೋರ್ಥಿನೇ
ತೇಪ್ಯೇಕೈಕಮತರ್ಪಯನ್ ಕಿಲ ಮಹಾಲಕ್ಷ್ಮ್ಯೈ ಸ್ವವಾಮಾಂಗುಲಿಂ
ಲೋಕೋಪದ್ರವಶಾಂತಯೇ ಸ್ಮದಿಶತಿ ಶ್ರೀವೀರನಾರಾಯಣಃ ॥ 245

ನೃಪತುಂಗನು ಜೈನಮತಾವಲಂಬಿಯಾಗಿದ್ದರೆ, ಆತ ತನ್ನ ಅಂಗುಲಿಯನ್ನು ದೇವತೆಗೆ ಬಲಿಯಾಗಿ ಅರ್ಪಿಸುವುದು ಸಮಂಜಸವೆಂದು ತೋರದು. ಏಕೆಂದರೆ ಜೈನಧರ್ಮದಲ್ಲಿ ಹಿಂಸೆ ಸಲ್ಲದು.

ಮನದೆ ನೆನೆದವರ ಕಿಡುಗುಂ
ಜಿನಾಧಿಪಾ ನಿನ್ನ ಪಾಪನಿಚಯಂ ಗುಣಮಂ
ಮುನಿಗಳುಮದಱಿಂ ತ್ವತ್ಸೇ
ವನೆಯಿಂ ಕಿಡಿಪಲ್ಕೆ ಪತ್ತಿದಸ್ಸಂಸೃತಿಯಂ ॥ (೧-೯೧)

ಜಿನಚರಣ ನಖಾದರ್ಶಂ
ವಿನತಾಮರರಾಜ ರಾಜವದನಪ್ರತಿಮಂ
ಮನದೊಳ್ ಸಲೆ ನಿಲ್ಕೆಂಬುದು
ವಿನಿಶ್ಚಿತ ವಿಶೇಷಣೋರು ರೂಪಕಮಕ್ಕುಂ ॥ (೩-೧೮)

—ಎಂಬ ಈ ಎರಡು ಪದ್ಯಗಳಲ್ಲಿ ಜೈನಧರ್ಮದ ಸ್ಪಷ್ಟ ಪ್ರಸ್ತಾಪವಿದೆ. 'ಜಿನಾಧಿಪಾ', 'ಜಿನಚರಣ ನಖಾದರ್ಶ' ಇವನ್ನು ಗಮನಿಸಬೇಕು. ಜಿನನ ಸ್ಮರಣೆ, ಜಿನನ ದರ್ಶನ ಇವನ್ನು ಮಾಡುವವರಿಗೆ ಪಾಪನಿಚಯ ನಿಲ್ಲದು. ಅದು ಅವರಿಂದ ತಂತಾನೆ ಬಿಟ್ಟು ದೂರವಾಗುತ್ತದೆ. ಅಂತೆಯೆ ಮುನಿಗಳೂ ಆತನ ಸೇವನೆಯಿಂದ ಖಳಕರ್ಮ ಬಂಧನಕರವಾದ ಸಂಸಾರವನ್ನು ದೂರಮಾಡಿಕೊಳ್ಳಲು ಆರಂಭಿಸಿದರು. ಎರಡನೆಯ ಪದ್ಯವು ದಂಡಿಯ

ಹರಿಪಾದಶ್ಶಿರೋಲಗ್ನಜಹ್ನುಕನ್ಯಾಜಲಾಂಶುಕ
ಜಯತ್ಯುಸುರನಿಶ್ಶಂಕ ಸುರಾನಂದೋತ್ಸವಧ್ವಜಃ ॥ (೩-೮೧)

—ಎಂಬ ವಿಷ್ಣುಪರವಾದ ಸ್ತುತಿಪದ್ಯಕ್ಕೆ ಪ್ರತಿಯಾಗಿ ಬಂದುದೂ ಗಮನಿಸಬೇಕಾದ ಸಂಗತಿಯೇ.

ಆದರೆ

ಶ್ರೀವಿಶದವರ್ಣೆ ಮಧುರಾ
ರಾವೋಚಿತೆ ಚತುರ ರುಚಿರ ಪದರಚನೆ ಚಿರಂ

ದೇವಿ ಸರಸ್ವತಿ ಹಂಸೀ
ಭಾವದೆ ನೆಲೆಗೊಳ್ಗೆ ಕೂರ್ತು ಮನ್ಮಾನಸದೊಳ್ ॥ (೧-೩)

—ಈ ಪದ್ಯ ವಿದ್ವಾಂಸರಲ್ಲಿ ಕೆಲವರ ಪ್ರಕಾರ ಜೈನಪರವಾಗಿದ್ದರೆ, ಮತ್ತೆ ಕೆಲವರ ಪ್ರಕಾರ ವೈದಿಕಪರವಾಗಿಯೂ ಇದೆ. ಡಿ. ಕೆ. ಭೀಮಸೇನರಾಯರೂ ಮತ್ತು ಭೀಮರಾವ ಚಿಟಗುಪ್ಪಿಯವರೂ ವೈದಿಕಪರವಾಗಿದೆಯೆಂಬವರಲ್ಲಿ ಪ್ರಮುಖರು.[246] ಎಂ. ವಿ. ಸೀತಾರಾಮಯ್ಯ ಮೊದಲಾದವರು ಜೈನಪರವಾಗಿದೆ ಎನ್ನುವರಲ್ಲಿ ಪ್ರಮುಖರು.[247] ಅವರ ಪ್ರಕಾರ ದಂಡಿಯ ಶ್ಲೋಕದಲ್ಲಿನ (೧–೧) 'ಚತುರ್ಮುಖ' ಎಂಬಲ್ಲಿರುವ ವೈದಿಕ ಬ್ರಹ್ಮಭಾವದ ಸ್ಪಷ್ಟ ಹೇಳಿಕೆಯನ್ನು ಕೈಬಿಟ್ಟಿರುವುದು ಗಮನಾರ್ಹವಾದ ಸಂಗತಿಯೇ. ಆದರೆ ಈ ಪದ್ಯವನ್ನು ಎರಡೂ ಧರ್ಮಕ್ಕೆ ಅನ್ವಯಿಸಿ ಅರ್ಥ ಹೇಳಬಹುದು. ಸರಸ್ವತಿಯು ಸರ್ವಸಮಯಗಳ ಅನುಯಾಯಿಗಳಿಂದ ಮಾನಿತಳಾದ ದೇವತೆಯಾದುದರಿಂದ ಇಲ್ಲಿ ಯಾವುದೇ ಏಕಸಮಯದ ಪರವಾಗಿ ಅರ್ಥಮಾಡುವುದು ಅಷ್ಟು ಸಮಂಜಸವಲ್ಲ.

'ಕವಿರಾಜಮಾರ್ಗ'ಕಾರ ಲಕ್ಷ್ಮಿಯನ್ನಂತೂ ವೈದಿಕಪರಂಪರೆಯ ದೇವತೆಯೆಂದೇ ವರ್ಣಿಸಿದ್ದಾನೆ; ವಿಡಂಬನೆಯನ್ನೂ ಮಾಡಿದ್ದಾನೆ. ಇದೇ ಬಗೆಯ ವಿಡಂಬನೆ ಭೂದೇವಿಯನ್ನು ಕುರಿತೂ ಇದೆ (೨–೧೬೧,೧೬೨). ಇಲ್ಲಿ ನೃಪತುಂಗನ 'ವ್ಯಾಜಸ್ತುತಿ' ಇದೆಯೆಂಬುದೇನೋ ನಿಶ್ಚಿತ ಸಂಗತಿ. ಆದರೆ ಮಹಾಲಕ್ಷ್ಮಿಯ ಭಕ್ತನಾದ ನೃಪತುಂಗ, ಆ ದೇವತೆಯನ್ನು ಹೀಗೆ ವಿಡಂಬಿಸುತ್ತಿದ್ದನೇ ? ಇದು ವಿಚಾರಣೀಯ. ಪಂಪ, ರನ್ನ ಮೊದಲಾದ ಕೆಲವು ಜೈನಕವಿಗಳು ವೈದಿಕಪರಂಪರೆಯ ಈ ದೇವತೆಯನ್ನು ವಿಡಂಬಿಸಿದುದನ್ನು ಇಲ್ಲಿ ಜ್ಞಾಪಕಕ್ಕೆ ತಂದುಕೊಂಡರೆ ಸೂಕ್ಷ್ಮಮತಿಗೆ 'ಕವಿರಾಜಮಾರ್ಗಕಾರ' ಜೈನನೆಂಬ ಹೊಳಹು ತೋರದಿರದು. ಮತಮತಗಳ ಖಂಡನೆ ಮಂಡನೆ ಆಗಲೂ ನಡೆದಿರಬಹುದು. ಅದು ಸರ್ವಮತಸಹಿಷ್ಣು ರಾಜರ ಎದುರಿನಲ್ಲಿ ವಿಕೋಪಕ್ಕೆ ಹೋಗುವಂತೆ ವರ್ತಿಸಲಿಲ್ಲವೆಂದು ತೋರುತ್ತದೆ.

ದೇವರುಂ ಗೊರವರುಂ ಗುಣವೃದ್ಧರನಾರತಂ
ಕಾವರಕ್ಕರಸನಂ ಪ್ರಜೆಯಂ ಪರಿವಾರಮಂ
ಏವಮಂ ಬಗೆಯದಂತಿರೆ ಪೇೞ್ದ ಸಮುಚ್ಚಯೋ
ದ್ಭಾವಕಕ್ರಮವಿಚಾರದೆ ದೋಷಮಿದಗ್ಗಳಂ ॥ (೧–೧೩೨)

—ದೇವತೆಗಳು, ಗುರುಗಳು, ಗುಣವೃದ್ಧರು ದ್ವೇಷವನ್ನು ಬಗೆಯದಂತೆ ಸದಾ ರಕ್ಷಿಸಬೇಕು ಎಂಬ ಈ ಸಮುಚ್ಚಯದೋಷದ ಉದಾಹರಣೆಯೂ ಅದರ ತಿದ್ದಿದ ರೂಪವೂ (೧–೧೩೩) ರಾಜ, ಪ್ರಜೆ, ಪರಿವಾರದವರಲ್ಲಿ ಕೇವಲ ಪ್ರೇಮವೇ ಇರಬೇಕೆಂದು ಸೂಚಿಸುತ್ತದೆ. ಅನೇಕ ಬಗೆಯ ದೇವತೆಗಳೂ ಗುರುಗಳೂ ಆಗಿನ ಕಾಲಕ್ಕೆ ಇದ್ದರೆಂಬುದೂ ಸ್ಪಷ್ಟವಾಗುತ್ತದೆ.

ದಿವಿಜ, ಸುರಗಣಾಧಿಪ (ಇಂದ್ರ) ಹಾಗೂ ಫಣಿನಾಥ—ಇವರು ವೈದಿಕ ಹಾಗೂ ಜೈನಧರ್ಮಗಳೆರಡರಲ್ಲೂ ಇರುವುದರಿಂದ ಅವರ ಬಗೆಗೆ ಎಲ್ಲ ಕಡೆಯಲ್ಲೂ ಹೀಗೇ ಎಂದು

ಹೇಳಲು ಬರದಿದ್ದರೂ, ಇಲ್ಲಿನ 'ಸ್ಮರ' ಮಾತ್ರ ವೈದಿಕ ದೇವತೆಯೆಂಬುದು "ಸ್ಮರನೈದಂಬುಗಳಲ್ಲಿವು" (೩–೧೮೬) ಎಂಬಂತಹ ಪದ್ಯಗಳಿಂದ ವಿಶದವಾಗುತ್ತದೆ. ಶಿವ, ವಿಷ್ಣು, ಇಂದ್ರ, ಅಗ್ನಿ, ಯಮ,ನೈರ್ಋತ,ವರುಣ,ವಾಯು,ಕುಬೇರ ಮತ್ತು ಈಶಾನರೂ ವೈದಿಕವಲಯದ ದೇವತೆಗಳೇ ಆಗಿದ್ದಾರೆ; ಲೋಕಪಾಲರಾಗಿ ಮೆರೆದಿದ್ದಾರೆ (೩–೯೬). ಆದರೆ ಇವರಲ್ಲಿ ಇಂದ್ರನು ಕೇವಲ ಒಂದು ಧರ್ಮದ ವಲಯದ ದೇವತೆಯೆಂದು ಹೇಳಲು ಬರುವದಿಲ್ಲ. ದಕ್ಷಿಣೋತ್ತರಮಾರ್ಗಗಳ ವಿವರಣೆ ಹಾಗೂ ಉದಾಹರಣೆಗಳನ್ನು ಕೊಡುವಲ್ಲಿ ಬಂದಿರುವ "ತ್ರಿದಶಗಣೇಶಮೌಳಿ ಮಣಿಪೀಠನಿಷೇವಿಗಳೊಳ್ ಮುನೀಂದ್ರನಾ ಪದಯುಗಳ...."(೨–೧೦೯) ಎಂಬಲ್ಲಿನ 'ಮುನೀಂದ್ರನಾ' ಶಬ್ದಕ್ಕೆ 'ಜಿನೇಂದ್ರನಾ' ಎಂದೇ 'ಶಬ್ದಮಣಿದರ್ಪಣ'ದ ಒಂದು ಹಸ್ತಪ್ರತಿಯಲ್ಲಿ ಪಾಠಾಂತರವಿದೆ.[248] ಇದನ್ನು ಮನದಂದಾಗ ಇಂದ್ರನು ಜೈನಧರ್ಮದಲ್ಲಿ ಬರುವ ದೇವತೆ ಎಂದೂ ವ್ಯಕ್ತವಾಗುತ್ತದೆ. ಈ ಪದ್ಯ ಜೈನಪರವಾಗಿಯೂ ಇದೆ.

'ಕವಿರಾಜಮಾರ್ಗ'ದಲ್ಲಿ ರಾಮನ ಬಗೆಗೆ ಮಾತ್ರ ಕೃತಿಕಾರನ ದೃಷ್ಟಿ ಬೇರೆಯೆ ಆಗಿದೆಯೆಂದು ತೋರುತ್ತದೆ. ಕೆಲವು ಪದ್ಯಗಳಾದರೂ ಜೈನರಾಮಾಯಣದ ಸಂಪ್ರದಾಯಕ್ಕೆ ಅನುಗುಣವಾಗಿವೆ. ಕೆಲವನ್ನು ಇಲ್ಲಿ ಪರಿಶೀಲಿಸಬಹುದು.

ಪರಿದೆಯ್ದಿ ತಾಗಿದ ಭಾ
ಸುರತರ ರಘುಕುಲ ಲಲಾಮ ಲಕ್ಷ್ಮೀಧರನೊಳ್
ಪರಕೋಪ ವಿಧೃತ ವಿಸ್ಫುರ
ದುರುರಕ್ತ ಕಠೋರ ನಯನಯುತ ದಶವದನಂ ॥ (೩–೯೪)

—ಈ ಪದ್ಯದ 'ರಘುಕುಲಲಲಾಮ ಲಕ್ಷ್ಮೀಧರನೊಳ್' ಎಂಬುದು ಗಮನಾರ್ಹವಾದ ಪ್ರಯೋಗ. ಲಕ್ಷ್ಮಣನನ್ನು 'ಲಕ್ಷ್ಮೀಧರ'ನೆಂದು ಹೇಳಿದುದೂ ಆತ ರಾವಣನೊಂದಿಗೆ ಕಾದಿದನೆಂಬುದೂ ಜೈನರಾಮಾಯಣದ ಸಂಪ್ರದಾಯಕ್ಕೆ ಹೆಚ್ಚು ಹತ್ತಿರವಾಗಿದೆ. 'ಕವಿರಾಜಮಾರ್ಗ'ದಲ್ಲಿ "ವಾಲ್ಮೀಕಿ ರಾಮಾಯಣಕ್ಕೂ ಜೈನರಾಮಾಯಣಕ್ಕೂ ಸಮಾನವಾದ ಸಂನಿವೇಶಗಳಿವೆ"[249] ಎಂಬ ಹೇಳಿಕೆಯನ್ನೂ ಇಲ್ಲಿ ಸ್ಮರಿಸಿಕೊಳ್ಳಬಹುದು. ಹೀಗೆಯೇ ಇನ್ನೊಂದು ಪದ್ಯದಲ್ಲಿನ'ತಾರಾದಿವಿಜಯೋದಯಾಂ' ಎಂಬಂತಹ ಪ್ರಯೋಗ ಜೈನರಾಮಾಯಣಕ್ಕೆ ವಿಶಿಷ್ಟವೆಂದು ಕೆ. ಜಿ. ಕುಂದಣಗಾರ್ ಮುಂತಾದವರು ತಿಳಿದಿದ್ದಾರೆ.

'ಪುರುಷವ್ರತ' ಎಂಬ ವ್ರತದ ಉಲ್ಲೇಖ ಕೆಲವು ಪದ್ಯಗಳಲ್ಲಿ (೩–೧೬೨, ೧೮೯, ೨೩೩) ಬಂದಿರುವ ಗಮನಾರ್ಹ ಸಂಗತಿಯಾಗಿದೆ. ಈ 'ವ್ರತ' ಜೈನಧರ್ಮದಲ್ಲಿ ಶ್ರಾವಕರ ಬ್ರಹ್ಮಚರ್ಯಾಣುವ್ರತವೆನಿಸುತ್ತದೆ.[250] ಈ ವ್ರತವನ್ನು ವಾಲ್ಮೀಕಿ ರಾಮಾಯಣದಲ್ಲಿ ಆದರ ನಾಯಕ ಶ್ರೀರಾಮಚಂದ್ರನು ಆಚರಿಸುವದಿಲ್ಲ. ಆದುದರಿಂದ ಇದು ಜೈನ ರಾಮಾಯಣದ ಜಾಡಿನ ಪದ್ಯವೆನ್ನುವುದು ನಿಶ್ಚಿತ ಸಂಗತಿ. ಈ 'ಪುರುಷವ್ರತ' ಜೈನ ಧರ್ಮದ ದ್ವಾದಶಾನುಪ್ರೇಕ್ಷೆಗಳಲ್ಲಿ ಒಂದು. ಅದು 'ಶೌಚವ್ರತಂ' 'ಸ್ವದಾರ ಸಂತೋಷ

ರತಿವ್ರತಂ' 'ಗೃಹೀತದಾರವ್ರತಂ' ಮತ್ತೆ 'ಪರದಾರನಿವೃತಿ' ಎಂಬುದಾಗಿ ಜನತೆಯಲ್ಲಿ ಪ್ರಚಾರದಲ್ಲಿತ್ತೆಂದು ಇತರ ಕೃತಿಗಳಿಂದ ತಿಳಿದುಬರುತ್ತದೆ.[251] ಈ 'ವ್ರತ' ಜನತೆಯ ನಡೆನುಡಿಯಲ್ಲಿ ಶೀಲವಾಗಿ ಬೆರೆತು ನಿಂತಿತ್ತು ಎಂಬುದು 'ಕವಿರಾಜಮಾರ್ಗ'ದ ಇನ್ನೊಂದು ಪದ್ಯದಲ್ಲಿ ವ್ಯಕ್ತವಾಗಿದೆ :

ಕೂಡೆ ಪೇೞ್ದ ನುತಕಾವ್ಯಮನಿಂತಭಿಮಾನಿ ತಾಂ ನಿರ
ಗೀಡಿತ ಮಹಾಪುರುಷವ್ರತನಿಶ್ಚಿತಂ
ಕೂಡದಂತೆ ಪೆಱರೊ[ಳ್ಮೆ]ಚ್ಚಿನೊಳೀತೆಱನಪ್ಪೊಡಂ
ನೋಡದಂ ಕುಱಿತಾವ[ನು]ಮೇನುಮಂ ॥ (೩-೨೨೩)

ಜೈನಧರ್ಮದ ಅಭಿವ್ಯಕ್ತಿ "ಮದ ಮಾನ ಮಾಯ ಭಯ ಲೋಭ ವಿಷಾದ ಹರ್ಷಾ| ಭ್ಯುದಿತಾಂತರಂಗರಿಪುವರ್ಗಜಯಾವತಾರಂ...." ಎಂದು ಒಂದು ಪದ್ಯದಲ್ಲಿ ವರ್ಣಿಸಿದ ನೃಪತುಂಗನ ವರ್ಣನೆಯಲ್ಲಿ ಒಡಮೂಡಿನಿಂತಿದೆ. ಇಲ್ಲಿ ಹೇಳಿರುವ ಮದ, ಮಾನ ಮುಂತಾದುವು 'ಆಸ್ರವ' ಎಂದರೆ ಕರ್ಮ ಜೀವದೊಳಕ್ಕೆ ಹರಿದು ಬರುವ ಸಂಗತಿಗೆ ಕಾರಣಗಳಾದ 'ಕಷಾಯ' ಇತ್ಯಾದಿಗಳೇ ಆಗಿವೆ.

'ಕವಿರಾಜಮಾರ್ಗ'ದಲ್ಲಿ ವೈದಿಕ ಹಾಗೂ ಜೈನಧರ್ಮಗಳ ದರ್ಶನಗಳ ಜೊತೆಗೆ ಇತರ ದರ್ಶನಗಳ ಉಲ್ಲೇಖವೂ ದೊರೆಯುತ್ತದೆಂಬುದು ಗಮನಿಸತಕ್ಕದಾಗಿದೆ.

ಆ ಕಪಿಲ ಸುಗತ ಕಣಚರ
ಲೋಕಾಯತಿಕಾದಿ ಮಾರ್ಗಭೇದಂ ಸಮಂ
ಪ್ರಾಕಟಮದಂ ವಿರುದ್ಧವಿ
ವೇಕದಿನಱಿಪುವೊಡೆ ನಾಡೆ ಸಮಯ ವಿರುದ್ಧಂ ॥ (೧-೧೦೫)

ಇಲ್ಲಿಯ ಅಂಶಗಳು ಕ್ರಮವಾಗಿ 'ಸಾಂಖ್ಯ' 'ಬೌದ್ಧ' 'ವೈಶೇಷಿಕ' ಹಾಗೂ 'ಚಾರ್ವಾಕ' ಈ ದರ್ಶನಗಳನ್ನು ಸೂಚಿಸುತ್ತವೆ. ಇನ್ನೂ ಅನೇಕ ಸಮಯಗಳೂ ಆ ಕಾಲಕ್ಕೆ ಇದ್ದ ವೆಂಬುದು 'ಆದಿ' ಶಬ್ದದಿಂದ ವ್ಯಕ್ತವಾಗುತ್ತದೆ.

'ಕವಿರಾಜಮಾರ್ಗ' ಮೋಕ್ಷಸುಖವನ್ನು ಕೊಡಬಲ್ಲ ಸಾಧನವಾದ ಪರಮಧರ್ಮ ವನ್ನು ಪ್ರೀತಿಯಿಂದ ಪಾರಾಯಣ ಮಾಡಿದ, ಸಕಳ ಲೌಕಿಕ, ಸಾಮಯಿಕ, ವೈದಿಕ ವಿಷಯಗಳನ್ನು ತಿಳಿದುಕೊಂಡ ವಿಶಾಲ ಹೃದಯದ ವ್ಯಕ್ತಿಯಿಂದ ರಚಿತವಾದ ಗ್ರಂಥ. ಮತ್ತೆ ಅದರಲ್ಲಿ 'ನೀತಿನಿರಂತರನೂ' 'ಉದಾರನೂ' ಆದ ನೃಪತುಂಗ ಸರ್ವಸಮಯ ಗಳನ್ನೂ ಸಮದೃಷ್ಟಿಯಿಂದ ನೋಡಿದ ಹಾಗೆ ವ್ಯಕ್ತವಾಗುತ್ತದೆ. ಇದು ಕೆಳಗಿನ ಪದ್ಯ ದಿಂದ ಖಚಿತವಾಗುತ್ತದೆ :

ಕಸವರಮೆಂಬುದು ಮಿಗೆ ಸೈ
ರಿಸಲಾರ್ಪೊಡೆ ಪರವಿಚಾರಮುಂ ಧರ್ಮಮುಮಂ
ಕಸವೇಂ ಕಸವರಮೇನು
ಬ್ಬಸಮುಂ ಬಸಮಲ್ಲದಿರ್ದು ಮಾಡುವರೆ[ವೆ?]ಲ್ಲಂ ॥ (೩-೧೭೬)

ಐಶ್ವರ್ಯ ಎಂದರೇನು? ಅನ್ಯರ ವಿಚಾರಗಳನ್ನೂ ಅನ್ಯಧರ್ಮಗಳನ್ನೂ ಸಹಿಸಿಕೊಳ್ಳುವುದು, ಎಂದರೆ ಸಹಾನುಭೂತಿಯಿಂದ ಕಾಣುವುದು; ಹಾಗಲ್ಲವಾದರೆ, ಕಸವೂ ಒಂದೇ ಕಸವರವೂ ಒಂದೇ, ಎರಡರಿಂದಲೂ ತೊಂದರೆಯೇ ಎನ್ನುವುದು ಇಲ್ಲಿಯ ಆಶಯವಿರುವಂತಿದೆ. "ನೃಪತುಂಗನ ಸರ್ವಮತಸಮಾನತಾಬುದ್ಧಿ ಹೇಗೆ ಸಮರಸವಾಗಿ ಪಸರಿಸಿಕೊಂಡಿದ್ದುದೆಂಬುದು ಈ ಪದ್ಯದಿಂದ ಹೊಳೆದು ತೋರುತ್ತಿದೆ. ಇದನ್ನು ಪರಾಂಬರಿಸಿದ ಮೇಲೆ ನೃಪತುಂಗನ ಧರ್ಮವಾವುದು ಎಂದು ಪ್ರಶ್ನಿಸುವ ಸಂದರ್ಭವೂ ತಲೆದೋರಲಾರದೆಂದು ನಮ್ಮ ಭಾವನೆ. ಸರ್ವಮತಗಳನ್ನೂ ಸಹಿಷ್ಣುತೆಯಿಂದ ನೋಡಿದ, ಆ ಎಲ್ಲ ಮತಗಳೊಳಗಿನ ಸಾರವೆನ್ನಿಸಿ ಅವನೆದೆಗೆ ಹರಿದ, ಉದಾರವಾದ ಮತವೇ ಅವನ ಮತವೆಂಬುದು ಇಲ್ಲಿ ವ್ಯಕ್ತವಾಗುತ್ತದೆ" ಎಂದಿದ್ದಾರೆ ಮುಳಿಯ ತಿಮ್ಮಪ್ಪಯ್ಯನವರು.[252] ಇದಕ್ಕೆ ನೃಪತುಂಗನ ಕೊಣ್ಣೂರು, ಸಂಜಾನ ಹಾಗೂ ಕಾನ್ಹೇರಿ ಮೊದಲಾದ ಸ್ಥಳಗಳಲ್ಲಿನ ಶಾಸನಗಳು ಬಾಹ್ಯಪ್ರಮಾಣಗಳಾಗಿವೆ. ಅವು ಆಗಿನ ಕಾಲದಲ್ಲಿ ಜೈನ, ಬೌದ್ಧ ಹಾಗೂ ವೈದಿಕ ಧರ್ಮಗಳಲ್ಲಿ ಸಾಮರಸ್ಯತೆ ಇದ್ದುದನ್ನು ತಿಳಿಸುತ್ತವೆ.

## ಸಾಮಾಜಿಕ ಅಂಶಗಳು

'ಕವಿರಾಜಮಾರ್ಗ'ದಲ್ಲಿ ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಂಗತಿಗಳೂ ಧಾರ್ಮಿಕ ವಿವರಗಳ ಹಾಗೆಯೇ ಮುಖ್ಯವಾಗಿ ಉದಾಹರಣ ಪದ್ಯಗಳಲ್ಲಿ ಹರಡಿಕೊಂಡಿವೆ. ಅವನ್ನು ಪರಿಶೀಲಿಸಿದರೆ ಕಾವೇರಿಯಿಂದ ಗೋದಾವರಿವರೆಗೆ ಹಬ್ಬಿದ ಕನ್ನಡನಾಡಿನಲ್ಲಿ ಕನ್ನಡ ಜನತೆ ಆ ಕಾಲದಲ್ಲಿ, ಅದರ ಮೊದಲಲ್ಲಿ ಯಾವ ಬಗೆಯ ಸಮಾಜವನ್ನು ಕಟ್ಟಿಕೊಂಡು ಬಾಳಿತು ಎಂಬುದು ಕೆಲಮಟ್ಟಿಗಾದರೂ ತಿಳಿಯುತ್ತದೆ. ವಿಸ್ತಾರವಾದ ದೇಶದಲ್ಲಿ ಅಲ್ಲಲ್ಲಿ ಸ್ವಲ್ಪ ಬೇರೆಯಾದ ನಡೆವಳಿಕೆಗಳು ಆಗಲೂ ಇದ್ದಿರಬಹುದು. ಆದರೆ ಅದರ ಹೊಳಹು ಹೀಗೆಯೇ ಎಂದು ಸ್ಪಷ್ಟವಾಗಿ ಈಗ ತಿಳಿಯಲು ಸಾಧ್ಯವಿಲ್ಲ; ಒಂದು ಸ್ಥೂಲ ಚಿತ್ರ ಮಾತ್ರ ದೊರೆಯಬಹುದು. ಅಂದಿನ ಸಮಾಜವೆಂದರೆ ರಾಜರು, ಪ್ರಜೆಗಳು; ಇವರಿಂದ ಅಂದಿನ ಜನಜೀವನ. ಒಂದು ಆಳುವ ವರ್ಗ, ಇನ್ನೊಂದು ಆಶ್ರಿತ ವರ್ಗ. ಬ್ರಾಹ್ಮಣರು, ಅರಸರು, ವೈಶ್ಯರು, ಕುಡಿಯರು—ಇದು ಆ ವರ್ಗಗಳ ಚೌಕಟ್ಟಾಗಿತ್ತು. ಇದು ನಾಲ್ಕು ವರ್ಣಗಳನ್ನು ಸೂಚಿಸುತ್ತದೆ. ಕ್ರಮವಾಗಿ ಅಧ್ಯಯನ-ಅಧ್ಯಾಪನ, ಪ್ರಜಾರಕ್ಷಣೆ, ವ್ಯಾಪಾರ-ವಾಣಿಜ್ಯ ಹಾಗೂ ಕೃಷಿ ಇವು ಕಾರ್ಯಕ್ಷೇತ್ರಗಳು. ಈ ಚೌಕಟ್ಟಿನಲ್ಲಿಯ ಸಮಾಜ ಅನೇಕ ಒಳಪಂಗಡಗಳನ್ನು ಕೂಡ ಹೊಂದಿದ್ದುದಕ್ಕೆ ನಿದರ್ಶನಗಳಿವೆ. ಆದರೂ ಒಟ್ಟು ಜನಜೀವನದಲ್ಲಿ ಹೊಂದಾಣಿಕೆಯಿದ್ದಿತು. ಆ ಕಾಲದ ನಾಡವರು ಸಮಾಜದ ಸದಸ್ಯರು. ಅವರನ್ನು "ಸುಭಟರ್ಕಳ್ ಕವಿಗಳ್ ಸುಪ್ರಭುಗಳ್ ಚೆಲ್ವರ್ಕಳ್ ಅಭಿಜನರ್ಕಳ್ ಗುಣಿಗಳ್ ಅಭಿಮಾನಿಗಳ್ ಅತ್ಯುಗ್ರರ್ ಗಂಭೀರಚಿತ್ತರ್ ವಿವೇಕಿಗಳ್" (೧–೫೩) ಎಂದು 'ಕವಿರಾಜಮಾರ್ಗ'ಕಾರ ಮೆಚ್ಚಿ ಕೊಂಡಾಡಿದ್ದಾನೆ.

ಇಡೀ ಭರತಖಂಡಕ್ಕೆ ಅತ್ಯಂತ ಶ್ರೇಷ್ಠ ರಾಜಮನೆತನವಾಗಿ ಬಾಳುವ ಗೌರವ ನೃಪತುಂಗನ ಹಿರಿಯರ ಕಾಲಕ್ಕೇ ಒದಗಿದುದರಿಂದ ಭಾರತದ ಅನೇಕ ಪ್ರದೇಶಗಳಿಂದ ಪಂಡಿತಜನರು, ಶೂರ ದಂಡನಾಯಕರು ಮಾನ್ಯಖೇಟಕ್ಕೆ ವಲಸೆ ಬಂದು ನೆಲಸಿ ನಿಂತುದು ಸಹಜವಾಗಿಯೇ ಇದೆ.

ವ್ಯಾಕರಣೆ ಕಾವ್ಯ ನಾಟಕ
ಲೋಕಕಳಾ ಸಮಯಯಮಾದಳಂಕೃತಿಗಳೊಳಂ
ವ್ಯಾಕುಳನಲ್ಲದನೇಕೆ ವಿ
ವೇಕಬೃಹಸ್ಪತಿಯ ನಗರಮಂ ಪುಗುತರ್ಪಂ ॥ (೧–೬)

—ಎನ್ನುವಂತೆ ಆ ನಗರವು ವಿದ್ಯಾವಂತರ, ಬುದ್ಧಿವಂತರ ಆಶ್ರಯಸ್ಥಾನವಾಗಿತ್ತು. ಕೊಣ್ಣೂರು ಹಾಗೂ ಸಂಜಾನ ಶಾಸನಗಳನ್ನು ಬರೆದ ವಾಳಭಕಾಯಸ್ಥ ವಂಶಜರು ಹೀಗೆ ಬಂದು ನೆಲಸಿ ನಿಂತವರೇ. ವಲಸೆ ಬಂದವರು ಈ ನೆಲದ ಭಾಷೆಯನ್ನೂ ಕಲಿತಿರುತ್ತಿದ್ದರು. ಬೇರೆ ಭಾಷೆಗಳನ್ನೂ ಆ ಭಾಷೆಗಳಲ್ಲಿಯ ಸಂಗತಿಗಳನ್ನೂ ಬಲ್ಲವರಾಗಿರುತ್ತಿದ್ದರು. "ಅಶೇಷ ಭಾಷಾವಿಶೇಷ ವಿಷಯಾತಿಶಯಾಮಳ ಕೌಶಳಃ" (೩–೨೨೦) ಎಂಬುದು ಇದನ್ನು ಸೂಚಿಸುತ್ತದೆ.

ವಿಸ್ತಾರವಾದ ಕನ್ನಡನಾಡಿನಲ್ಲಿ ಹಲವು ಬಗೆಯ ಕನ್ನಡಗಳನ್ನು (೧–೩೬, ೩೭, ೪೨, ೪೬, ೫೭) ಆಡುತ್ತಿದ್ದ ಕನ್ನಡ ಜನರಲ್ಲಿ ಅನೇಕರು "ಕಾವ್ಯಪ್ರಯೋಗ ಪರಿಣತ ಮತಿಗಳ್" ಆಗಿರುತ್ತಿದ್ದರು. ಕುರಿತವರಷ್ಟೇ ಅಲ್ಲ, ಸಣ್ಣಮಕ್ಕಳೂ ವಿವೇಕ ಹೇಳಬಲ್ಲವರಾಗಿದ್ದರು; ಮೂಗರು ಮಾತಾಡಬಲ್ಲವರಾಗಿದ್ದರು (೧–೩೮, ೩೯). ಇದರಲ್ಲಿ ಇನಿತು ಉತ್ಪ್ರೇಕ್ಷೆ ಇರಬಹುದು. ಆದರೆ ಕನ್ನಡ ಜನರ ಸಂಸ್ಕೃತಿ ಪಕ್ವವೂ ಪ್ರೌಢವೂ ಎನ್ನುವುದರಲ್ಲಿ ಸಂಶಯವಿರಲಾರದು. ಆ ಜನರು ದೇವತೆಗಳ ಜಾತ್ರೆ ಮುಂತಾದ ಕಾಲಗಳಲ್ಲಿ ನಾಟಕಗಳನ್ನು ಆಡುತ್ತಿದ್ದರು; ಗಂಧರ್ವರು ಆಡುತ್ತಿದ್ದ 'ಆಟ'ಗಳನ್ನು ನೋಡುತ್ತಿದ್ದರು. ಆಗ 'ಪಗರಣ'ಗಳು (< ಪ್ರಕರಣ) ನಡೆಯುತ್ತಿದ್ದವು (೧–೬೮). ಇಂತಹ ನಾಟಕಗಳಿಂದ, ಆಟಗಳಿಂದ, ಆ ಜನತೆ ತಮ್ಮ ಅರಿವಿನ ಆಳ ಅಗಲಗಳನ್ನು ಬೆಳೆಸಿಕೊಂಡು ಒಂದು ಪರಂಪರೆಯಾಯಿತು.

ಧರ್ಮಪ್ರಚಾರಕ್ಕಾಗಿ ಪರ್ಯಟನಗೆಯ್ಯುತ್ತಿದ್ದ ಆಚಾರ್ಯಪುರುಷರು ಒಂದು ವಿಧದಲ್ಲಿ ಸಾಂಸ್ಕೃತಿಕ ಸಂಪರ್ಕವನ್ನು ಕಲ್ಪಿಸುವ ಧುರೀಣರಾಗಿದ್ದರು. ಆ ಮಹಾನುಭಾವರು ಅಲ್ಲಲ್ಲಿನ ಸೈತನ್ನು (೧–೪೨) ಬಲ್ಲವರಾಗಿದ್ದರು. ಉತ್ತರದ ಗಡಿಯ ಆಚಾರ್ಯರು ದಕ್ಷಿಣಕ್ಕೂ ದಕ್ಷಿಣದ ಕಡೆಯ ಆಚಾರ್ಯರು ಉತ್ತರಕ್ಕೂ ಪರ್ಯಟನ ಮಾಡಿ ಜನಪದ ಸಂಸ್ಕೃತಿಯ ಬೆಳೆವಣಿಗೆಗೆ ಅಮೋಘವರ್ಷವೇ ಆಗಿದ್ದರು. ಆ ವಿಸ್ತಾರವಾದ ಕನ್ನಡನಾಡಿನಲ್ಲಿ ಬಾಳಿ ಬದುಕಿದ ಇಂಥ ಜನಜೀವನದ ಚಿತ್ರ 'ಕವಿರಾಜಮಾರ್ಗ' ಎಂಬ ಕನ್ನಡಿಯಲ್ಲಿ ಪ್ರತಿಫಲಿಸಿ ನಿಂತಿದೆ.

ಕನ್ನಡನಾಡು ಕಾವೇರಿನದಿಯಿಂಧ ಗೋದಾವರೀ ನದಿಯವರೆಗೆ ಹಬ್ಬಿತ್ತು. ಆ ನಾಡು ಆ ಕಾಲಕ್ಕೆ ದೇಶ, ರಾಷ್ಟ್ರ, ನಿವೇಶ, ವಿಷಯ ಮುಂತಾಗಿ ವಿಭಜನೆಗೊಂಡಿತ್ತೆಂದು ತಿಳಿದುಬರುತ್ತದೆ (೧-೧೧೦, ೩೯, ೩೭). 'ರಾಷ್ಟ್ರಪತಿ' 'ವಿಷಯಪತಿ' 'ಗ್ರಾಮಕೂಟ' ಮೊದಲಾದ ಮಾತುಗಳು ಸಂಜಾನ ಶಾಸನದಲ್ಲಿವೆ. ಅಷ್ಟು ವಿಸ್ತಾರವಾಗಿ ಹಬ್ಬಿದ್ದ ನಾಡಿನಲ್ಲಿ ಕವಿರಾಜಮಾರ್ಗಕಾರನ ಪ್ರಕಾರ 'ಕಿಸುವೊಳಲ್' (ಪಟ್ಟದಕಲ್ಲು) 'ಕೊಪಣನಗರ', 'ಪುಲಿಗೆಱೆ' (ಲಕ್ಷ್ಮೇಶ್ವರ) ಹಾಗೂ 'ಒಂಕುಂದ' ಇವುಗಳ ನಡುವಣ ನಾಡು ತಿರುಳ್ಗನ್ನಡದ ಪ್ರದೇಶವಾಗಿತ್ತು. ಇದರಲ್ಲಿ ನೃಪತುಂಗನ ರಾಜಧಾನಿ ಮಾನ್ಯಖೇಟ ಮೊದಲಾದ ಇತರ ನಗರಗಳು ಸೇರಿಲ್ಲ, ನಿಜ. ಆದರೆ ನಾಂದೇಡ್, ಮಹಬೂಬನಗರ, ನಲ್ಗೊಂಡ, ಮೇದಕ್, ನಿಜಾಮಾಬಾದ್, ಆದಿಲಾಬಾದ್, ಕರೀಮ್ ನಗರ, ವಾರಂಗಲ್ ಮೊದಲಾದ ಜಿಲ್ಲೆಗಳಲ್ಲಿ ಸಹ ಆ ಕಾಲದಲ್ಲಿ ಸೊಗಸಾದ ಕನ್ನಡ ಇದ್ದಿತೆಂದು ಅಲ್ಲಿ ದೊರೆತಿರುವ ಶಾಸನಗಳಿಂದ ಸ್ಪಷ್ಟವಿದೆ. ಕಾರಣ ಆರ್. ಎಸ್. ಪಂಚಮುಖಿ ಅವರು ಪಂಪನ 'ಪುಲಿಗೆಱೆಯ ತಿರುಳ ಕನ್ನಡದೊಳ್' ಎಂಬುದರ ಸಂಬಂಧದಲ್ಲಿ ಹೇಳಿದ ಮಾತನ್ನೇ[253] (Standard Kannada) ಇಲ್ಲಿಗೂ ಅನ್ವಯಿಸಬಹುದು.

'ಕವಿರಾಜಮಾರ್ಗ'ದಲ್ಲಿ ರಾಜಕೀಯ ಪರಿಸರದ ಜೀವನ ಒಡಮೂಡಿದಷ್ಟು ದಟ್ಟವಾಗಿ ಶ್ರೀಸಾಮಾನ್ಯರ ಜೀವನದ ಚಿತ್ರ ಮೂಡಿಲ್ಲ. ಏಕೆಂದರೆ ಅಲ್ಲಿ ಬರುವ ಹೋಲಿಕೆಗಳು ವಿಶೇಷವಾಗಿ ರಾಜನಿಗೆ, ಆತನ ಪರಿವಾರಕ್ಕೆ ಸಂಬಂಧಿಸಿವೆ. ಇದಕ್ಕೆ ಕಾರಣ ಆ ಗ್ರಂಥದ ಕರ್ತೃ ನೃಪತುಂಗನೇ ಆಗಿರದೆ, ಆತನ ಒಬ್ಬ ಸಭಾಸದನಾಗಿದ್ದುದು.

ರಾಜರು, ತಮ್ಮ ರಾಜ್ಯದಲ್ಲಿ ಪ್ರಜೆಗಳ ಯೋಗಕ್ಷೇಮ ವಿಚಾರಣೆಗೆ, ತಮ್ಮ ರಾಜ್ಯದ ಗಡಿಭದ್ರತೆಗೆ, ಪರರಾಜ್ಯದ ಮೇಲೆ ದಿಗ್ವಿಜಯಕ್ಕೆ ಹೋಗುವಾಗ ಅಲ್ಲಲ್ಲಿ ತಂಗುತ್ತಿದ್ದುದು ರೂಢಿಯೇ. ಹಾಗೆ ರಾಜನು ಬಂದಾಗ ಆ ಸ್ಥಳದ ಜನರಿಗೆ ಅದೊಂದು ದೊಡ್ಡ ಸಂಭ್ರಮವೇ; ಆಗ ಜನತೆ ರಾಜನಿಗೆ ಅತ್ಯಂತ ಆದರ ಗೌರವಗಳನ್ನು ತೋರುತ್ತಿದ್ದರು. "ನರಪತಿ ಬಂದನಾ ನೃಪನನಟ್ಟಿಯೆ ಕಾಣ್ಬುದು....", "ಬಂದುದು ಪಾವುಡಂ...." (೧-೧೧೪, ೧೧೭)ಎಂಬ ಕೆಲವು ಪದ್ಯಗಳಲ್ಲಿ ಇದನ್ನು ಗಮನಿಸಬಹುದು. ಪ್ರಜೆಗಳು ಕಪ್ಪಕಾಣಿಕೆ ಕೊಡುತ್ತಿದ್ದ ಪ್ರಸಂಗ ಈ ಪದ್ಯಗಳಲ್ಲಿದೆ. ರಾಜನು ಬಂದಾಗ ಆಚರಿಸುವಂತೆ ಆತನು ಇದ್ದ ರಾಜಧಾನಿಯಲ್ಲೇ ಪುರಜನರು ಅನೇಕ ಸಲ, ಉದಾಹರಣೆಗೆ ಹೇಳುವುದಾದರೆ ಪಟ್ಟಬಂಧಮಹೋತ್ಸವ, ತುಲಾಪುರುಷ ಮುಂತಾದ ಸಂದರ್ಭಗಳಲ್ಲಿ, ಒಸಗೆಗಳನ್ನು ಆಚರಿಸುತ್ತಿದ್ದುದುಂಟು. ಆಗ ರಾಜನೂ ಆತನ ಪರಿವಾರದವರೂ ಪುರಜನರೂ ಆ ಒಸಗೆಗಳಲ್ಲಿ ಪಾಲ್ಗೊಳ್ಳುತ್ತಿದ್ದರು. "....ನರಪತಿಯುಂ ನೃಪಾಂಗನೆಯರ್ಕಳುಂ ನೆರೆದಟ್ಟಿಯಿನಾಡಿಪೋದರಾ ಪರಿಜನಮುಂ ಮಹೋತ್ಸವದೊಳೊಂದಿದುದು" (೧-೧೨೦) ಇಂತಹ ಮಾತುಗಳಲ್ಲಿ ಅದು ಕಾಣುತ್ತದೆ. ರಾಜನಿಗೆ ಪುರಜನವು ಒಸಗೆಯನ್ನು ಬೀರುತ್ತಿದ್ದ ಸಮಯದಲ್ಲಿ ಆ ಪುರದ ಬಾವುಟಗಳು ಗಾಳಿಯ ಕಿರಿಸುಳಿ ತಟ್ಟಲು ತಾವೂ ಉತ್ಸಾಹದಿಂದ ಹಾರಾಡಿ ಸೊಗಸಿದುವಂತೆ !

"ಸತತೋದಯನಪ್ರತಿಹತ...." ಎಂಬ, "ಸರಸಿಜ ಬಾಂಧವನಸ್ತಾಂತರ...." ಎಂಬ ಪದ್ಯಗಳಲ್ಲಿ (೩-೩೦, ೩೧), ರಾಜನ ಸುಖದಲ್ಲಿ ಪಾಲ್ಗೊಂಡ ಹಾಗೆ ರಾಜನ ದುಃಖ ದಲ್ಲೂ ಪಾಲ್ಗೊಳ್ಳುತ್ತಿದ್ದರು ಆ ಜನತೆ ಎಂಬುದನ್ನು ನಾವು ಗಮನಿಸಬಹುದಾಗಿದೆ. ಈ ಪದ್ಯಗಳಲ್ಲಿ 'ಕವಿರಾಜಮಾರ್ಗ'ಕಾರ ನೃಪತುಂಗನ ತಂದೆ ಗೋವಿಂದನನ್ನೇ ಕುರಿ ತಿದ್ದಾನೆಂದು ವಿವರಿಸಿದ್ದಾರೆ ಮುಳಿಯ ತಿಮ್ಮಪ್ಪಯ್ಯನವರು.[254]

ರಾಜನ ಆದರ ಪ್ರೇಮಗಳಿಗೆ ಪಾತ್ರರಾದವರು ಹೊಗಳುವುದೂ ಆಗದವರು ತೆಗಳು ವುದೂ ಸಹಜವೇ. ಹಾಗೆಯೇ ಜನತೆಯಲ್ಲಿ ರಾಜನ ನಡೆವಳಿ, ಕೆಲವರಲ್ಲಿ ಒಸಗೆಯನ್ನು ಉಂಟುಮಾಡಿದರೆ, ಮತ್ತೆ ಕೆಲವರಲ್ಲಿ ವಿರುದ್ಧ ಪರಿಸರವನ್ನು ಸೃಜಿಸುವುದುಂಟು. ಜನರ ಮುನಿಸು ಒಸಗೆಗಳಂತೆ ಹೊಗಳಿಕೆಗಳು ತೆಗಳಿಕೆಗಳು. ಆದರೆ ಒಳ್ಳೆಯ ನಡೆವಳಿಕೆಯೆಂದರೆ

ಮಿಗೆ ಪೞೞುವರೆನ್ನನೆನ್ನದೆ
ಪೊಗೞ್ವರ್ ನೆರೆದೆಲ್ಲರೆನ್ನನೆನ್ನದೆ ತನ್ನೊಳ್
ಬಗೆದುಭಯಲೋಕಹಿತದೊಳ್
ನೆಗೞ್ಗೆ ಜನಂ ಪೞುಗೆ ಪೊಗೞ್ಗೆ ತನಗೇನಜೞ್ಕೂಳ್ ॥ (೩-೧೭೯)

ಎನ್ನುವಂತೆ ಇರಬೇಕು. ಇದು ಸಜ್ಜನರ ಜೀವಿತಸಾರ, ಅನುಭವ ರಸಾಯನ.

'ಕವಿರಾಜಮಾರ್ಗ'ದಲ್ಲಿ ರಾಜನ ಸುತ್ತಮುತ್ತ ಬಾಳುವ ಆಳುಗಳ ಬಾಳಿನ ಬಗೆಗೆ ಹೀಗೆ ಬರೆದಿದೆ: ಸತತ ಮನುಷ್ಯನು ನಂಬಿಕಸ್ತನಾಗಿ ಬಾಳಬೇಕು. ರಾಜನು ಒಂದೊಮ್ಮೆ ಸಿರಿಯ ಗರ ಹೊಡೆದು ಮದಾಂಧನಾಗಿರಬಹುದು. ಆ ವಿಷಯವನ್ನು ಆಳು ಚೆನ್ನಾಗಿ ಪರಿಶೀಲಿಸಿ ಪರಗುಣೌದಾರ್ಯಗಳನ್ನು ಅಭಿಮಾನದಿಂದ ಸ್ವೀಕರಿಸಿ ಅನುವು ಆಪತ್ತು ಗಳಲ್ಲಿ ಒಂದಾಗಿ ಸಮಯ ಬಂದರೆ ಪ್ರಾಣವನ್ನೂ ಅರ್ಪಿಸಿ ಬಾಳಬೇಕು. ಇಂಥ ಆಳು ಗಳು ಬಾಳುವುದಕ್ಕೆ ರಾಜರು ಉಂಬಳಿಗಳನ್ನು ಹಾಕಿಕೊಟ್ಟಿರುತ್ತಿದ್ದರು. ಪಾಳಿ ನಿಲ್ಲು ವಂತೆ ಬಾಳುವುದೇ ಬಾಳು; ಗುಣಗೇಡಿಯಾಗಿ ತೆಗಳಿಕೆಗೆ ಗುರಿಯಾಗುವ ಹಾಗೆ ಬಾಳುವ ಬಾಳೇನು ಶಾಶ್ವತವೇ? (೨-೧೪೨, ೩-೧೭೭)—ಎಂಬುದು ಅಂದಿನ ಜೀವನ ಮೌಲ್ಯ ವಾಗಿತ್ತು. ಅರಸರು, ಆಳುಗಳು—ಇವರ ಹೊಂದಾಣಿಕೆ ನಿತ್ಯಜೀವನದಲ್ಲಿ ಒಂದೇ ಬಗೆಯ ದ್ದಾದರೂ ಯುದ್ಧದಲ್ಲಿ ಅದು ಇನ್ನಷ್ಟು ಗಾಢವಾಗಿರಬೇಕಿತ್ತು. ಯುದ್ಧ ಆಗಿನ ಕಾಲದ ಜನಜೀವನದ ಒಂದು ಬಹುಮುಖ್ಯ ಅಂಗವಾಗಿತ್ತು.

ಮಿಂಚುಗಳ ಹಾಗೆ ಬಾವುಟಗಳು, ಮೋಡಗಳ ಹಾಗೆ ಆನೆಗಳು, ಮಳೆಯ ಹಾಗೆ ಕಾಲಾಳು—ಎಂದು ಮುಂತಾಗಿ ರಣರಂಗದ ಒಂದು ಸೊಗಸಾದ ವರ್ಣನೆ ಕೆಳಗಿನ ಪದ್ಯದಲ್ಲಿದೆ:

ಪೊಳೆವ ಮಿಂಚುಗಳಂತಿರೆ ಕೇತುಗಳ್
ಜಳದ ವೃಂದದವೋಲಿರೆ ಹಸ್ತಿಗಳ್
ಗಳಿತ ಧಾರೆಗಳಂತಿರೆ ಪತ್ತಿಗಳ್
ಬಳಸಿ ಕಾರ್ಗೆಣೆಯಾಯ್ತು ಮಹಾಹವಂ ॥ (೧-೧೪೪)

ಇಂಥ ಯುದ್ಧಭೂಮಿಯಲ್ಲಿ ಕೈಗೆ ಕೈಹತ್ತಿದಾಗ ಗೆದ್ದವರ ಆಟೋಪ, ಸೋತವರ ಸುಯ್ಲು ಸಹಜ ವ್ಯಾಪಾರಗಳು. ಯುದ್ಧದಲ್ಲಿ ಮೇಲುಗೈ ಪಡೆದವರು ಕೆಳಗೈಯಾದವರನ್ನು ಹಂಗಿಸುತ್ತಿದ್ದರು (೩–೧೯೯). ಸೋತವರು ತಮ್ಮನ್ನು, ಗೆದ್ದವರು ಕೊಲ್ಲಬಾರದೆಂದು ತಮ್ಮ ಆಯುಧಗಳನ್ನು ಬಿಸಾಡುವುದು, ಹುಲ್ಲನ್ನು ಕಚ್ಚುವುದು, ಹುತ್ತವನ್ನು ಏರುವುದು, ವೈರಿಗಳಿಗೆ ಶರಣಾಗತರಾಗುವುದು ಆಗಿನ ಕಾಲದ ಪದ್ಧತಿಯಾಗಿತ್ತು. ಹಾಗೆ ಮಾಡಿದವರನ್ನು ಕೊಲ್ಲಬಾರದೆಂಬ ರಣನಿಯಮವೂ ಇದ್ದಿತು. ಯುದ್ಧಗಳಲ್ಲಿ ಧರ್ಮಯುದ್ಧಗಳೂ ಕೂಟಯುದ್ಧಗಳೂ ಆಗ ಪ್ರಚಲಿತವಾಗಿದ್ದವು. ನೃಪತುಂಗನ ದಂಡನಾಯಕ ಬಂಕೆಯರಸನನ್ನು "ಸತ್ಯಸಮರ ಸಂಘಟ್ಟಣೋಪಲಬ್ಧ ವಿಜಯಲಕ್ಷ್ಮೀ ನಿವಾಸಿತ ಚೆಲ್ಲಕೇತನ"[255] ಎಂದಿರುವಲ್ಲಿನ 'ಸತ್ಯಸಮರ' ಎಂಬ ಮಾತನ್ನು ಇಲ್ಲಿ ನೆನೆಯಬಹುದು.

ಅರಸರಿಗೆ ಇಬ್ಬಗೆಯ ವೈರಿಗಳಿದ್ದಿರಬಹುದು—ಹೊರಗಿನ ವೈರಿಗಳು, ಒಳಗಿನ ವೈರಿಗಳು. ಒಳಗಿನ ವ್ಯಕ್ತಿಗಳು ಅಧಿಪತಿಗೆ ವಿಶೇಷವಾಗಿ ಸಮುದ್ರದಲ್ಲಿನ ಬಾಡಬಾಗ್ನಿಯಂತೆ ಇರುತ್ತಿದ್ದರಂತೆ (೩–೧೪೪). ವೈರಿ ಇನ್ನೂ ಸಣ್ಣವನೆಂದು ಅಲಕ್ಷಿಸದೆ, ನೆರವು ನೀಡದೆ, ಅವನನ್ನು ಹೆಚ್ಚಲು ಬಿಡದೆ ನಾಶಮಾಡಬೇಕು ; ಇಲ್ಲದಿದ್ದರೆ ಕಾಲಾಂತರದಲ್ಲಿ ಆತ ತನಗೆ ವಿಪತ್ಕರನಾಗುತ್ತಾನೆ ಎಂಬ ಜಾಗ್ರತೆ ಅವರಿಗೆ ಇರಬೇಕಾಗಿತ್ತು (೩–೧೪೭)—ಎಂದು ಹೇಳಿದ್ದಾನೆ 'ಕವಿರಾಜಮಾರ್ಗ'ಕಾರ. ಈ ರಾಜರಿಗೆ ಅವರ ಕಾರ್ಯದಲ್ಲಿ ನೆರವಾಗುವುದು ಮಂತ್ರಿಯ ಕೆಲಸ. ಆತ ತುಂಬ ಜಾಣನೂ ಮುಂಬರುವುದನ್ನು ಮೊದಲೇ ತಿಳಿದುಕೊಳ್ಳಬಲ್ಲವನೂ ಹಾಗೂ ಅದರ ನಿವಾರಣೆಗೆ ಸೂಕ್ತಕ್ರಮ ತೆಗೆದುಕೊಳ್ಳಬಲ್ಲ ವ್ಯಕ್ತಿಯೂ ಆಗಿರಬೇಕಿತ್ತು. ಆತ ಕೇವಲ 'ನಗಧ್ವನಿಯವೋಲನುಕರಣವಾರ್ತೆ'ಯವನಾಗಿರಬಾರದು (೩–೧೪೩) ಎಂದಿದ್ದಾನೆ 'ಕವಿರಾಜಮಾರ್ಗ'ಕಾರ.

ಆಡಳಿತ ಜೀವನದ ಒಂದು ಅಂಗವಾದಂತೆ ಆ ರಾಜರುಗಳಿಗೆ ಆಟಪಾಟಗಳೂ ಬೇಟೆ ವಿನೋದಗಳೂ ಜೀವನದ ಅಂಗಗಳೇ ಆಗಿದ್ದವು. ಅವರು ಆಡುತ್ತಿದ್ದ ಆಟಗಳಲ್ಲಿ 'ಕಂದುಕ ಕ್ರೀಡೆ'ಯ ಪ್ರಸಕ್ತಿ ಮಾತ್ರ ಕವಿರಾಜಮಾರ್ಗದಲ್ಲಿದೆ (೧–೯೯). ಅರಮನೆಯಲ್ಲಿ ಜ್ಯೋತ್ಸ್ನಾವಿಲಾಸಕ್ಕಾಗಿ ಏನೆಲ್ಲವನ್ನೂ ಸೃಷ್ಟಿಸಬಹುದಾಗಿತ್ತು. ನಾಟಕ, ಪಗರಣ ಇತ್ಯಾದಿಗಳೂ ಆ ವಿನೋದದಲ್ಲಿ ನಡೆಯುತ್ತಿದ್ದವು. ನಿತ್ಯಜೀವನದ ಕೆಲಭಾಗವಾದರೂ ಸುಖಸಂಕಥಾ ವಿನೋದದಲ್ಲಿ ಕಳೆಯುತ್ತಿತ್ತು.

ಬೇಟೆ ರಾಜರಿಗೆ ಆಟದ ವಸ್ತುವಾದರೆ, ಶಬರಾದಿ ಜನಾಂಗಗಳಿಗೆ ಜೀವನೋಪಾಯವಾಗಿತ್ತು. ಅಂತೆಯೆ ಆಸ್ಥಾನ ಭೂಷಣಕಾಣದ ಕವಿಗಳಿಂದ ಅದು ಅವರ ಕಾವ್ಯಗಳಲ್ಲಿ ಕಡ್ಡಾಯವಾಗಿ ಬರಬೇಕಾದ ಅಷ್ಟಾದಶವರ್ಣನೆಗಳಲ್ಲಿ ಒಂದಾಗಿ ಸೇರಿಕೊಂಡು ಹೋಯಿತು. 'ಕವಿರಾಜಮಾರ್ಗ'ಕಾರ ಅದನ್ನು ಅಷ್ಟಾದಶವರ್ಣನೆಗಳನ್ನು ಹೇಳುವಲ್ಲಿ "ಸಮೃಗಗಣವ್ಯಾವರ್ಣನಾ ನಿರ್ಣಯಾರ್ಥಂ" ಎಂದು ವಿವರಿಸಿದ್ದಾನೆ (೩–೨೧). 'ಕವಿರಾಜಮಾರ್ಗ'ದಲ್ಲಿ ಬೇಟೆಯ ಚಿತ್ರವೊಂದು ಸೊಗಸಾಗಿ ಬಂದಿದೆ :

ಪುಲಿಪುಲಿ ಪರಿಪರಿ ಪೋಪೋ
ಗೆಲೆಯೆಲೆ ಪೆಜಿಪಂಗು ಪಿಂಗು ನಿಲ್‌ನಿಲ್ ಬಾಬಾ
ಬಲಿ ಮನಮುನಂಜದಂಜದೆ
ತೊಲತೊಲಗೀ ಮೆಳೆಗೆ ಪುಲಿಯದು... ॥ (೨–೨೬)

ಪ್ರತಿಯೊಂದು ಜೀವ, ಜೀವನದಲ್ಲಿ ಸುಖವನ್ನೇ ಬಯಸುತ್ತದೆ. ಅದನ್ನು ಪಡೆಯಲು ಅನುಕೂಲಗಳನ್ನು ಸೃಜಿಸಿಕೊಳ್ಳುತ್ತದೆ. ಅನುಕೂಲತೆ ಇದ್ದಲ್ಲಿ ವಿಲಾಸ ಜೀವನ ನಡಸ ಬಹುದು. ರಾಜರಿಗೆ ಸಕಲ ಅನುಕೂಲಗಳು ಇದ್ದ ಕಾರಣದಿಂದ ಅವರಿಗೆ 'ವಿಲಾಸ ಜೀವನ' ಬಹು ಸುಲಭಸಾಧ್ಯ ಸಂಗತಿಯಾಗಿತ್ತು. ವಿಲಾಸಜೀವನದ ವರ್ಣನೆ 'ಕವಿರಾಜ ಮಾರ್ಗ'ದಲ್ಲಿ ಅನೇಕ ಪದ್ಯಗಳಲ್ಲಿ ದೊರೆಯುತ್ತದೆ. ಆದರೂ ಅದರ ಕರ್ತೃ ಅದನ್ನು ಮೆಚ್ಚಿಕೊಂಡವನಲ್ಲ; ವಿಲಾಸಿನಿಯರ ನಲ್ಮೆಯಾಗಲಿ ಸಂಗವಾಗಲಿ ಮೆಚ್ಚತಕ್ಕದಲ್ಲ; ಅದು ಮಿಂಚಿನಂತೆ ಚಂಚಲವಾದದ್ದು (೩–೯೭). ಮರುಳನೂ ಮದ್ಯಪಾನಾಸಕ್ತನೂ ಅರ್ಥವಲ್ಲದ ಮಾತನಾಡುತ್ತಾರೆ. (೧–೮೦); ಜ್ಞಾನಿಗಳ ಜತೆ ಸೇರದೆ ಅಜ್ಞಾನಿಗಳ ಸಹವಾಸದಿಂದ ಇಂದ್ರಿಯ ಚಾಪಲ್ಯಗಳಿಗೆ ಒಳಗಾಗಿ ಜನ ವ್ಯಸನಪೀಡಿತರಾಗು ತ್ತಾರೆ (೩-೧೬೫) ಎಂದು ಮುಂತಾಗಿ ವಿವೇಕಪರವಾದ ಮಾತುಗಳನ್ನು 'ಕವಿರಾಜ ಮಾರ್ಗ'ಕಾರ ನುಡಿದಿದ್ದಾನೆ. ಯಾವುದು ಸುಖ, ಯಾವುದು ಅಸುಖ—ಇವುಗಳಲ್ಲಿ ಪೂರ್ವಾಪರ ವಿಚಾರಗೈದು ಸರಿಯಾದುದನ್ನು ಸ್ವೀಕರಿಸಬೇಕು ಎಂಬುದು ಆತನ ಆಶಯ ವಾಗಿತ್ತು. ಏಕೆಂದರೆ ಕುಲವಂತರು, ಶೀಲವಂತರು, ಸಾಧುಪುರುಷರು, ದುರ್ಜನರು ಸಮಾಜದಲ್ಲಿ ಸದಾ ಇದ್ದವರೇ, ಇರುವವರೇ.

ವಿದ್ಯೆಗೆ 'ಕವಿರಾಜಮಾರ್ಗ'ಕಾರ ವಿಶೇಷ ಸ್ಥಾನವನ್ನು ಕೊಟ್ಟಿದ್ದಾನೆ; "ಧನಮಂ ನೆರಪದೆ ವಿದ್ಯಾಧನಮಂ ಮಾಡದೆ ತಗುಳ್ದು ನೆಗೞದೆ ತಪದೊಳ್ ಮನುಜತ್ವಮಫಲ ಮಾಯ್ತು" (೩-೧೦೧) ಎಂದಿದ್ದಾನೆ. ಹಣವನ್ನು ಗಳಿಸಬೇಕು, ವಿದ್ಯಾಧನವನ್ನು ಸಂಪಾದಿಸಬೇಕು. ತಪಸ್ಸನ್ನು ಹಿಡಿಯಬೇಕು, ಹಾಗಲ್ಲದೆ ಮನುಷ್ಯ ಜನ್ಮವು ನಿಷ್ಫಲ ವಾಯಿತಲ್ಲ ಎಂದು ಬರಿ ಕೊರಗುವದರಲ್ಲಿ ಅರ್ಥವಿಲ್ಲ ಎಂಬುದು ಆತನ ಆಶಯ. ಆತನ ಪ್ರಕಾರ ಅಂದಿನ ಜನತೆ ವ್ಯಾಕರಣ, ಛಂದಸ್ಸು, ಅಲಂಕಾರ, ಕಾವ್ಯ, ನಾಟಕ, ಸಂಗೀತ—ಚಿತ್ರಾದಿ ಅನೇಕ ಕಲೆಗಳಲ್ಲಿ, ಜ್ಯೋತಿಷ, ವೈದ್ಯ, ಗಣಿತ, ಮೃಗಪಶು ಶಕುನಶಾಸ್ತ್ರ ಮುಂತಾಗಿ ಹಲವು ವಿದ್ಯೆಗಳಲ್ಲಿ ಅವರು ಅಭಿರುಚಿಯನ್ನೂ ಪ್ರೌಢಿಮೆಯನ್ನೂ ಉಳ್ಳವರಾಗಿದ್ದರು. ೬೪ ಕಲೆಗಳೂ ಅಂದು ಪ್ರಚಾರದಲ್ಲಿ ಇದ್ದುದಾಗಿ ತಿಳಿದುಬರುತ್ತದೆ (೧-೧೦೭). ಆ ಎಲ್ಲ ವಿದ್ಯೆಗಳ ಪರಮಗುರಿ ಚತುರ್ವರ್ಗ ಪುರುಷಾರ್ಥಗಳ ಸಾಧನೆಯೇ ಆಗಿತ್ತು.

"ನಿರುಪಮ ಗಂಧರ್ವಗತಿ ಸ್ವರಾದಿಕ ಕಳಾಗುಣಂ ಚತುಃಷಷ್ಟಿವಿಧಂ" "ವರಗೀತ ಗುಣೋದ್ವೃತ್ತ ಕಾಂತ...."—ಇಂಥ ಕಡೆಗಳಲ್ಲಿ ಕಲೆಯ ಬಗ್ಗೆ ಸೂಚನೆಗಳಿವೆ. 'ಗಂಧರ್ವ' ಎಂಬುದು ಏನನ್ನು ಸೂಚಿಸುತ್ತದೆ ಎಂಬುದರ ಬಗೆಗೆ ನಿಶ್ಚಿತವಾಗಿ ಹೇಳಲು ಬರುವುದಿಲ್ಲ.

ಅದು ಕೇವಲ ಸಂಗೀತವೆ ಆಗಿರಬಹುದು; ಇಲ್ಲವೆ 'ವೇಷಾಗಾರರು' ಎಂದು ಸುಪ್ರಸಿದ್ಧವಿರುವ ಬೀದಿನಾಟಕವಾಡುವ ಜನಾಂಗವನ್ನೂ ಸೂಚಿಸಬಹುದು. ಅವರನ್ನು ಗಂಧರ್ವರೆಂದು ಕರ್ನಾಟಕದ ಉತ್ತರಭಾಗದ ಬಿಜಾಪುರ, ಗುಲ್ಬರ್ಗ ಜಿಲ್ಲೆಗಳಲ್ಲಿ ಇಂದಿಗೂ ಗುರುತಿಸಲಾಗುತ್ತದೆ. ಪಟ್ಟದಕಲ್ಲಿನ ಬಾದಾಮಿ ಚಾಲುಕ್ಯರ ಶಾಸನವೊಂದರಲ್ಲಿ ಗಂಧರ್ವರಿಗೆ ದಾನ ಕೊಟ್ಟ ಸಂಗತಿ ಇದೆ.[256] ಅದು ಪೂರ್ವಕಾಲದಿಂದಲೂ ನಡೆದುಬಂದಿತ್ತೆಂದೂ ತಿಳಿದುಬರುತ್ತದೆ. ಇದನ್ನು ಮನದಂದರೆ "ನಿರುಪಮಗಂಧರ್ವಗತಿ ಸ್ವರಾದಿಕ" ಇದರಲ್ಲಿ ಕೇವಲ ಸಂಗೀತವನ್ನಷ್ಟೆ ಅಲ್ಲ ಗೀತ, ಅಭಿನಯ, ಹಾಗೂ ನರ್ತನಗಳನ್ನೂ ಸೂಚಿಸುವಂತೆ ತೋರುತ್ತದೆ. ಇನ್ನು ನಾಟಕ (ರೂಪಕ) ವಿವಿಧ ಕಲೆಗಳ ಸಂಕೀರ್ಣ ಸೃಷ್ಟಿ. 'ಕವಿರಾಜಮಾರ್ಗ'ದಲ್ಲಿ 'ಪಗರಣ' ಎಂಬುದರ ಪ್ರಸ್ತಾಪವಿದೆ. ಇದು ಒಂದು ವಿಧವಾದ 'ಪ್ರಕರಣ' ಸ್ವರೂಪವೆಂದು ಅನೇಕ ವಿದ್ವಾಂಸರ ಮತ. ಪುನ್ನಾಟ ರಾಜರ ಶಾಸನವೊಂದರಲ್ಲಿ 'ನಟ ನರ್ತಕಾದ್ಯುತ್ಸವೇಷು' ಎಂದು ಜನರ ವರ್ಣನೆ ಬಂದಿರುವುದರಿಂದ[257] ನಾಟಕಗಳು 'ಕವಿರಾಜಮಾರ್ಗ' ಕಾಲಕ್ಕಿಂತ ಪೂರ್ವದಿಂದಲೇ ಪ್ರಯೋಗದಲ್ಲಿದ್ದವೆಂದು ನಿಸ್ಸಂದೇಹವಾಗಿ ಹೇಳಬಹುದು. ಅವು ಜನಪದ ನಾಟಕಗಳಾಗಿರಬಹುದು. ನೃತ್ಯವನ್ನು ಕುಣಿತವೆಂದು ಹೇಳುತ್ತಿದ್ದರು. ಕುಣಿತಗಳಲ್ಲಿ ಹಲವು ಬಗೆಗಳು ಇದ್ದವೆಂದೂ ಭಯಾನಕರಸದ ಪ್ರದರ್ಶನಕ್ಕೆ ಬೇತಾಳ ಕುಣಿತ "ತಳತಾಳಲಯಕ್ರಮ"ದಿಂದ ಬಳಸುತ್ತಿದ್ದರೆಂದೂ ತಿಳಿದು ಬರುತ್ತದೆ (೩-೧೯೩). ಚಿತ್ರಕಾರನು ಹೇಗೆ ವಿವಿಧ ಬಣ್ಣಗಳ ಬೆರಕೆಯಿಂದ ಚಿತ್ರ ಸುಂದರವಾಗಿ ಕಂಗೊಳಿಸುವಂತೆ ಮಾಡುತ್ತಾನೆಯೋ ಹಾಗೆಯೇ 'ವರ್ಣಕ್ರಮಾವೃತ್ತಿಯಿಂದ' ಎಂದರೆ ಅಕ್ಷರ ವಿನ್ಯಾಸ ಕ್ರಮದಿಂದ 'ಕವಿರಾಜಮಾರ್ಗ' ಗ್ರಂಥವನ್ನು ರಚಿಸಲಾಗಿದೆಯೆಂದು ಹೇಳುವ ಮಾತಿನಲ್ಲಿ ಚಿತ್ರಕಲೆಯ ಪ್ರಸ್ತಾಪವಿದೆ.

ಕೃಷಿಯ ಬಗೆಗೆ ಹೆಚ್ಚೇನೂ ತಿಳಿಯದು. ಒಂದು ಪದ್ಯದಲ್ಲಿ ಬತ್ತದ ಪೈರನ್ನು 'ಬೆಳೆದೊಱಗಿದ ಕಟಿಮೆಗಳುಂ' ಎಂದು ಪ್ರಸ್ತಾಪಿಸಿದೆ. ಇನ್ನೊಂದು ಪದ್ಯದಲ್ಲಿ 'ವಿಳಸಿತ ಸಸ್ಯಸಂಪದಭಿರಾಮಗುಣೋದಯೆ' ಎಂದು ಧರಾಲಲನೆಯನ್ನು ವರ್ಣಿಸಲಾಗಿದೆ. ಈ ಮಾತುಗಳಿಂದ ಈ ಗ್ರಂಥ ಹುಟ್ಟಿದ ಕವಿ ಇದ್ದ ಪ್ರದೇಶದಲ್ಲಿ ಸುಭಿಕ್ಷವಿದ್ದಿತೆಂದು ಮಾತ್ರ ಊಹಿಸಬಹುದು.

"ನೆಲ್ಲಂ ಪುರಿದು ಮಾಱಿದೆ ಕಾಣದಂತಿರಿಸಂಗಡಿಯೊಳ್" (೨-೧೩೨) ಇಂಥ ಕಡೆಯಲ್ಲಿ ವ್ಯಾಪಾರ ವ್ಯವಹಾರದ ಅಂಶಗಳು ಮಿಂಚುತ್ತವೆ. "ಆರ್ತನ ತೆಱನನಱಿಯದೆ ಮದ್ದುವೇೞ್ವ ಬೆಜ್ಜನ ತೆಱದಿಂ (=ರೋಗಿಯ ಸ್ಥಿತಿಗತಿಯನ್ನು ತಿಳಿಯದೆ ಔಷಧವನ್ನು ಗೊತ್ತುಮಾಡುವ ವೈದ್ಯನ ಹಾಗೆ) (೩-೧೫೧) ಇಂಥ ಕಡೆ ವೈದ್ಯವೃತ್ತಿಯ ಸೂಚನೆಯಿದೆ. "ತಲೆಯಂ ಕಿ [ರಿ]ಯಿಸಿ ದಿವಸಮನಲಸದೆ ಬೆಸಗೊಳ್ವನಂತು ಗಾವಿಲನಕ್ಕುಂ" (೩-೧೪೪) ಇಂಥ ಕಡೆ ಜ್ಯೋತಿಷದ ಸೂಚನೆಯಿದೆ.

ಒಟ್ಟಾರೆ 'ಕವಿರಾಜಮಾರ್ಗ' ಗ್ರಂಥ 'ಸಕಳ ಕಳಾ ಭಾಷಾಲೌಕಿಕ ಸಾಮಯಿಕಾದಿ' ಸಂಗತಿಗಳನ್ನು ಅರಿದು ರಚಿಸಿದ ಕೃತಿ, ಪ್ರಮುಖವಾಗಿ ಅದು ಅಲಂಕಾರ ಗ್ರಂಥ. ಅದರಲ್ಲಿ

ಇತರ ವಿಷಯಗಳ ವಿಶೇಷ ವಿವರಗಳನ್ನು ಬಯಸುವುದು ಹೆಚ್ಚಾದೀತು. ಕಾರಣ ಅದನ್ನು ಲಕ್ಷ್ಯಗಳಲ್ಲಿ, ಹಲವು ಸ್ವತಂತ್ರ ಹೇಳಿಕೆಗಳಲ್ಲಿ "ಕನ್ನಡ ಜೀವನಸಾರವನ್ನು ಅನುವಾದ ಮಾಡಿದ ಚಿತ್ರಕೃತಿಯೆಂದೂ"[258] ಪಡಿಮೂಡಿಸಿದ ಕನ್ನಡಿಯೆಂದೂ ಮೆಚ್ಚ ಬಹುದು.

## ಉತ್ತರಕಾಲೀನ ಸಾಹಿತ್ಯದ ಮೇಲೆ ಪ್ರಭಾವ

ಯಾವುದೇ ಸಾಹಿತ್ಯದಲ್ಲಿ ಪರಂಪರೆ ಹಾಗೂ ಅದರ ಪ್ರಭಾವ ಸ್ವಾಭಾವಿಕವಾಗಿ ಸಂಘಟಿಸುವ ಕ್ರಿಯೆ. ಒಂದು ಕೃತಿಯ ಮೇಲೆ ಮತ್ತೊಂದು ಕೃತಿ ಪ್ರಭಾವ ಬೀರುವುದು, ಇಲ್ಲವೆ ಹಿಂದಿನ ಕೃತಿಗಳ ಸಾರಭೂತ ಅಂಶವನ್ನು ಮುಂದಿನ ಕೃತಿಗಳು ಅನುಸರಣೆಯ ಮೂಲಕ ಅರಗಿಸಿಕೊಳ್ಳುವುದು ಅನೂಚಾನವಾಗಿ ನಡೆದುಬಂದ ಪದ್ಧತಿ. ಈ ಪದ್ಧತಿ ಒಬ್ಬ ಕವಿಯ ಸಾಮರ್ಥ್ಯವನ್ನೂ ಒಂದು ಕೃತಿಯ ಸಾರಸತ್ತ್ವವನ್ನೂ ದ್ಯೋತಿಸುತ್ತದೆ ಎನ್ನಬಹುದು. ಕನ್ನಡ ಸಾಹಿತ್ಯದ ಪ್ರಥಮ ಗ್ರಂಥವೂ ಲಕ್ಷಣ ಗ್ರಂಥಗಳಲ್ಲಿ ಗಣ್ಯಸ್ಥಾನದಲ್ಲಿರುವುದೂ ಆದ 'ಕವಿರಾಜಮಾರ್ಗ'ದ ಸಂಭವನೀಯವಾದ ಪ್ರಭಾವವನ್ನು ಉತ್ತರಕಾಲೀನ ಕನ್ನಡಸಾಹಿತ್ಯದಲ್ಲಿ ಗುರುತಿಸುವುದು ಈ ದೃಷ್ಟಿಯಿಂದ ಸೂಕ್ತವಾದುದು. ಆದರೆ ಈ ಗ್ರಂಥಕ್ಕೆ ತನ್ನದೇ ಆದ ಪರಿಮಿತಿಗಳೂ ಇರುವುದರಿಂದ ಇದರ ಪ್ರಭಾವವನ್ನು ಮುಂದಿನ ಕೃತಿಗಳ ಮೇಲೆ ದಟ್ಟವಾಗಿ ಕಾಣುವುದು ಸ್ವಲ್ಪ ಕಷ್ಟವೇ.

'ಕವಿರಾಜಮಾರ್ಗ' ಒಂದು ಲಕ್ಷಣಗ್ರಂಥವಾಗಿರುವುದರಿಂದ ಅದು ಕಾವ್ಯವಸ್ತುವೊಂದನ್ನು ಕರ್ಷಣಕೇಂದ್ರವಾಗಿರಿಸಿಕೊಂಡು ತನ್ನ ಗ್ರಂಥಶಿಲ್ಪವನ್ನು ರೂಪಿಸಿಕೊಂಡಿಲ್ಲ ಎಂಬುದು ಸ್ಪಷ್ಟ. ಎಂತಲೇ ಉತ್ತರಕಾಲೀನ ಕನ್ನಡಸಾಹಿತ್ಯದ ಮೇಲೆ ವಸ್ತುವಿನ್ಯಾಸ, ಶೈಲಿ ಮುಂತಾದ ಯಾವುದೇ ಸಾಹಿತ್ಯಿಕ ದೃಷ್ಟಿಗಳಿಂದ ಇದರ ಪ್ರಭಾವವನ್ನು ಗುರುತಿಸುವುದು ಸಾಧ್ಯವಿಲ್ಲ. ಇನ್ನು ಅದರ ಪ್ರಭಾವವನ್ನು ಲಕ್ಷಣಗ್ರಂಥಗಳಲ್ಲಿ ಕಾಣುವುದೆ ಫಲಕಾರಿಯಾದದ್ದು ಎಂಬುದು ಸರಿ. ಆದರೆ ಇಲ್ಲಿಯೂ ಅನಂತರದ ಕನ್ನಡ ಲಾಕ್ಷಣಿಕರು ಸಂಸ್ಕೃತಭಾಷೆಯ ಲಕ್ಷಣಗ್ರಂಥಗಳನ್ನೇ ವಿಶೇಷವಾಗಿ ಅನುಸರಿಸಿರುವುದು ಸಹಜವಾದ್ದರಿಂದ ಉತ್ತರಕಾಲೀನ ಲಕ್ಷಣಗ್ರಂಥಗಳಲ್ಲಿಯೂ ವಿಪುಲವಾಗಿ 'ಕವಿರಾಜಮಾರ್ಗ'ದ ಪ್ರಭಾವವಾಗಿರಬಹುದು ಎನ್ನುವಂತಿಲ್ಲ.

ಅನಂತರದ ಲಾಕ್ಷಣಿಕರು ಕವಿರಾಜಮಾರ್ಗದ ರಚನಾಪದ್ಧತಿಯನ್ನೇ ಪೂರ್ಣವಾಗಿ ಅನುಸರಿಸಿ ತಮ್ಮ ಗ್ರಂಥಗಳ ಚೌಕಟ್ಟನ್ನು ಕಟ್ಟಿರದಿದ್ದರೂ, ಅಲ್ಲಿ ಇಲ್ಲಿ ಸೂಕ್ತರೀತಿಯಲ್ಲಿ ಅದನ್ನು ಸಂದರ್ಭಾನುಸಾರವಾಗಿ ಬಳಸಿಕೊಂಡಿದ್ದಾರೆ ಎಂದು ಹೇಳಬಹುದು. ಮುಂದಿನ ಛಂದಶ್ಶಾಸ್ತ್ರಕಾರರು, ಆಲಂಕಾರಿಕರು, ವೈಯಾಕರಣರು ಇಲ್ಲಿನ ಮೂಲಭೂತ ವಿಷಯಗಳನ್ನೇ ತಕ್ಕಷ್ಟು ವಿವರಗಳೊಂದಿಗೆ ತಮ್ಮ ಲಕ್ಷಣಗ್ರಂಥಗಳಲ್ಲಿ ವಿಸ್ತೃತವಾಗಿ

ವಿವರಿಸಿದ್ದಾರೆ ; ವ್ಯತ್ಯಾಸಗಳೊಡನೆ ಅಳವಡಿಸಿಕೊಂಡಿದ್ದಾರೆ; ಯಥಾವತ್ತಾಗಿ ಅನುವಾದಿಸಿಯೂ ಇದ್ದಾರೆ. ಲಕ್ಷಣಲಕ್ಷ್ಯಗಳೆರಡರಲ್ಲೂ ಇದನ್ನು ಗಮನಿಸಬಹುದಾಗಿದೆ. ವ್ಯಾಕರಣಗಳು, ಛಂದೋಗ್ರಂಥಗಳು, ಅಲಂಕಾರಗ್ರಂಥಗಳು, ಕಾವ್ಯಗಳು—ಈ ನಾಲ್ಕು ಸಾಹಿತ್ಯ ಶಾಖೆಗಳ ಮೇಲೆ ಕವಿರಾಜಮಾರ್ಗದ ಪ್ರಭಾವವನ್ನು ಮುಂದೆ ಸಾಧ್ಯವಿದ್ದ ಮಟ್ಟಿಗೆ ಗಮನಿಸಬಹುದು.

## ವ್ಯಾಕರಣಗಳ ಮೇಲೆ ಪ್ರಭಾವ

'ಕವಿರಾಜಮಾರ್ಗ'ದಲ್ಲಿ ಆನುಷಂಗಿಕವಾಗಿ ಪ್ರಸ್ತಾಪಿತವಾಗಿರುವ ಕೆಲವು ವ್ಯಾಕರಣ ವಿಚಾರಗಳು ಮುಂದಿನ ವ್ಯಾಕರಣಗ್ರಂಥಗಳ ಮೇಲೆ ಬೀರಿರುವ ಅಷ್ಟಿಷ್ಟು ಪ್ರಭಾವವನ್ನು ಇಲ್ಲಿ ಗುರುತಿಸಬಹುದು.

'ಕಾವ್ಯಾವಲೋಕನ'ದ ಶಬ್ದಸ್ಮೃತ್ಯಧಿಕರಣ ಒಂದು ರೀತಿಯಲ್ಲಿ ಕನ್ನಡದ ಮೊದಲನೆಯ ವ್ಯಾಕರಣ. ಆದರೆ ಕಾವ್ಯಮೀಮಾಂಸೆಯ ವಿವೇಚನೆಯೇ ಪ್ರಧಾನವಾಗಿರುವ 'ಕಾವ್ಯಾವಲೋಕನ'ದಲ್ಲಿ ವ್ಯಾಕರಣ ವಿಷಯಗಳನ್ನು ನಿರೂಪಿಸುವುದು ಸಮಂಜಸವೇ ಎಂಬ ಪ್ರಶ್ನೆ ಏಳಬಹುದು. ಇದರ ಬಗ್ಗೆ ಎಂ. ವಿ. ಸೀತಾರಾಮಯ್ಯನವರು 'ಕವಿರಾಜಮಾರ್ಗ'ದ ಪ್ರಥಮ ಪರಿಚ್ಛೇದದಲ್ಲಿ ಶ್ರೀವಿಜಯನ ಸ್ವತಂತ್ರದೃಷ್ಟಿಯನ್ನು ವಿವೇಚಿಸುತ್ತ "ವ್ಯಾಕರಣಕ್ಕೂ ಕಾವ್ಯಮೀಮಾಂಸೆಗೂ ಸಂಬಂಧವಿಲ್ಲದೆ ಇಲ್ಲ ಎಂಬ ಅಂಶ ವಿಶದಪಡುವುದು ಈ ಪ್ರಕರಣದಲ್ಲಿ; ನಾಗವರ್ಮನ 'ಶಬ್ದಸ್ಮೃತಿ' ವಿಭಾಗ ರಚನೆಗೆ ಈ ಪ್ರಕರಣದಿಂದ ಸ್ಫೂರ್ತಿಯೊದಗಿದ್ದರೆ ಆಶ್ಚರ್ಯವಿಲ್ಲ" ಎಂದು ಹೇಳಿರುವುದರಲ್ಲಿ[೨೮೨] ಆ ಸಾಮಂಜಸ್ಯದ ಸಮರ್ಥನೆಯಿದೆ.

೯೬ ಸೂತ್ರಗಳಷ್ಟು ವ್ಯಾಪ್ತಿಯನ್ನು ಪಡೆದಿರುವ ಈ ಅಧಿಕರಣದಲ್ಲಿ 'ಕವಿರಾಜಮಾರ್ಗ'ದ ವ್ಯಾಕರಣವಿಷಯಕವಾದ ೬ ವಿಚಾರಗಳನ್ನು ೯ ಸೂತ್ರಗಳಲ್ಲಿ ವಿವರಿಸಿದೆ. ಸಮಸಂಸ್ಕೃತದೊಡನೆ ಕನ್ನಡವನ್ನು ಬೆರಸಿ ಸಮಾಸ ಮಾಡಿದರುಂಟಾಗುವ ವಿರುದ್ಧಸಮಾಸ, ಕಾರಕಗಳು, ವಚನದೋಷಾಪವಾದ, ದ್ವಿತೀಯಾ, ಷಷ್ಠೀ, ಸಂಬೋಧನಾ ದೀರ್ಘ—ಇವು ಅನುಕ್ರಮವಾಗಿ ೬೩ ; ೧೫, ೧೬, ೧೭, ೪೮ ; ೩೫ ; ೩೧ ; ೩೨ ; ೩೦ ಈ ಸೂತ್ರಗಳಲ್ಲಿ ಪ್ರಸ್ತಾಪಿಸಲ್ಪಟ್ಟಿವೆ. ಕಾವ್ಯಮೀಮಾಂಸೆಗೆ ಸಂಬಂಧಿಸಿದ ಉಳಿದಧಿಕರಣಗಳಲ್ಲಿ 'ಕವಿರಾಜಮಾರ್ಗ'ದ ಲಕ್ಷ್ಯ ಹಾಗೂ ಲಕ್ಷಣಗಳನ್ನು ನೇರವಾಗಿ ಬಳಸಿಕೊಂಡಿರುವ ನಾಗವರ್ಮನು ಇಲ್ಲಿ ಮಾರ್ಗಕಾರನ ವ್ಯಾಕರಣಾಶಯವನ್ನು ಪ್ರತಿಫಲಿಸಿದ್ದಾನೆಯೇ ಹೊರತು, ಅನುಸರಿಸಿದ್ದಾನೆ ಎನ್ನಲು ಪುರಾವೆಗಳಿಲ್ಲ.

ನಾಗವರ್ಮನ 'ಭಾಷಾಭೂಷಣ'ದಲ್ಲಿಯ ವ್ಯಾಕರಣಾಂಶಗಳ ಮೇಲೆ ಅಥವಾ ಇತರ ಅಂಶಗಳ ಮೇಲೆ ಕವಿರಾಜಮಾರ್ಗದ ಪ್ರಭಾವವಾಗಿರುವಂತೆ ಕಂಡುಬರುವುದಿಲ್ಲ. ಆದರೆ ಆ ಗ್ರಂಥದ ಅಜ್ಞಾತಕರ್ತೃಕವಾದೊಂದು ಹಳಗನ್ನಡವೃತ್ತಿಯಲ್ಲಿ ವೃತ್ತಿಕಾರ 'ಕವಿರಾಜಮಾರ್ಗ', 'ಕಾವ್ಯಾವಲೋಕನ', 'ಶಬ್ದಮಣಿದರ್ಪಣ'ಗಳಿಂದ ಸೂತ್ರಗಳನ್ನು

ವಿಷಯೋಚಿತವಾಗಿ ಆಯ್ದುಕೊಂಡು ನಾಗವರ್ಮನ ಸೂತ್ರಾರ್ಥವನ್ನು ವಿವರಿಸಲು ಪ್ರಯತ್ನಿಸಿರುವುದು ಬರುತ್ತದೆ. ಈ ವಿಷಯವನ್ನು ಆ ಗ್ರಂಥದ ಸಂಪಾದಕರಾದ ರಾ. ನರಸಿಂಹಾಚಾರ್ಯರು ಗುರುತಿಸಿದ್ದಾರೆ. "ದ್ವಿತೀಯಾಂತಸ್ಯ ವಾ ಸ್ವರೇ" ಎಂಬ ೩೮ನೆಯ ಸೂತ್ರದ ಕೆಳಗೆ 'ಶಿಷ್ಟಪ್ರಯೋಗಂ' ಎಂದು ಹೇಳಿ "ನೃಪನನಭಿನುತಮದನಾಂ...." ಎಂಬ, "ನೃಪನನಭಿಮಾನಧನನಂ...." ಎಂಬ 'ಕವಿರಾಜಮಾರ್ಗ'ದ ದ್ವಿತೀಯ ಪರಿಚ್ಛೇದದ ೧೭, ೧೮ನೆಯ ಪದ್ಯಗಳನ್ನು ಉದ್ಧರಿಸಿ ಕೊಟ್ಟಿರುವುದು ಕಂಡುಬರುತ್ತದೆ. ಇದರಿಂದ 'ಭಾಷಾಭೂಷಣ'ದ ಮೇಲೆ ಅದರ ವೃತ್ತಿಕಾರನ ವ್ಯಾಖ್ಯಾನದ ಮೂಲಕ 'ಕವಿರಾಜಮಾರ್ಗ'ದ ಪ್ರಭಾವವಾಗಿದೆ ಎಂದು ಹೇಳಬಹುದು.[೨೬೦]

ಈಚೆಗೆ 'ಶಬ್ದಮಣಿದರ್ಪಣ'ದ ಮೇಲೆ 'ಕವಿರಾಜಮಾರ್ಗ'ದ ಪ್ರಭಾವವನ್ನು ಸ್ಪಷ್ಟವಾಗಿ ಗುರುತಿಸಬಹುದು. 'ಶಬ್ದಮಣಿದರ್ಪಣ'ದಲ್ಲಿ ಬಹುಮಟ್ಟಿಗೆ 'ಕವಿರಾಜಮಾರ್ಗ'ದಲ್ಲಿ ನಿರೂಪಿತವಾಗಿರುವ ಎಲ್ಲ ವ್ಯಾಕರಣ ವಿಚಾರಗಳೂ ಇನ್ನಷ್ಟು ವಿವರಗಳೊಡನೆ ಪ್ರಸ್ತಾಪಿತವಾಗಿದೆ. ಕೇಶಿರಾಜನು 'ಕವಿರಾಜಮಾರ್ಗ'ವನ್ನು ಗಮನಿಸಿದ್ದಾನೆ ಎಂಬುದು ಅವನು 'ಶಬ್ದಸ್ಮೃತಿ' 'ಭಾಷಾಭೂಷಣ'ಗಳಲ್ಲಿ ಪ್ರಸ್ತಾಪಿತವಾಗದಿರುವ ಆದರೆ 'ಕವಿರಾಜಮಾರ್ಗ'ದಲ್ಲಿ ಪ್ರಸ್ತಾಪಿತವಾಗಿರುವ ಕೆಲವು ಅಂಶಗಳನ್ನು ಗಣನೆಗೆ ತೆಗೆದುಕೊಂಡಿರುವುದರಿಂದ ತಿಳಿದುಬರುತ್ತದೆ. ಇದಲ್ಲದೆ 'ಕವಿರಾಜಮಾರ್ಗ'ದ ಹಲವು ಪದ್ಯಗಳನ್ನು ಹಾಗೆಯೇ ಉದಾಹರಿಸಿರುವುದು, ಕೆಲವನ್ನು ಅಲ್ಪಸ್ವಲ್ಪ ಮಾರ್ಪಾಟುಗಳಿಂದ ಉಪಯೋಗಿಸಿಕೊಂಡಿರುವುದು ಇವನ್ನು ನೋಡಿದರೆ ಅವನ ಅನುಸರಣೆ ದೃಢಪಡುತ್ತದೆ.

ಕವಿರಾಜಮಾರ್ಗಕಾರನು ಕನ್ನಡ ಕಾವ್ಯರಚನೆಯಲ್ಲಿ ಕನ್ನಡ ಪದಗಳೊಂದಿಗೆ ಸಂಸ್ಕೃತ ಪದಗಳನ್ನು ಹೇಗೆ ಪ್ರಯೋಗ ಮಾಡಬಹುದು, ಹೇಗೆ ಮಾಡಕೂಡದು ಎಂದು ವಿವರಿಸುವ ಹವಣಿನಲ್ಲಿ ಸಮಸಂಸ್ಕೃತದ ಪ್ರಸ್ತಾಪಮಾಡಿ, ಕಾವ್ಯಾಗಮ ಪಂಡಿತರು ಹೇಳುವ ಮಾರ್ಗಕ್ಕನುಗುಣವಾಗಿ ಕನ್ನಡ ಪದಗಳನ್ನು ಸಮಸಂಸ್ಕೃತ ಪದಗಳೊಂದಿಗೆ ಹೊಂದಿಕೆಯಾಗುವಂತೆ ಅರಿತು, ಬೆರಸಿ ಹೇಳಬಹುದು, ಆದರೆ ಸಮಸಂಸ್ಕೃತವಾಗಿ ಪರಿವರ್ತಿತವಾಗಿರದ ಈ ಅಹರಹಃ, ಉಚ್ಚೈಃ, ನೀಚ್ಚೈಃ, ಮುಹುರ್ಮುಹುಃ, ಮೊದಲಾದ ಸಂಸ್ಕೃತಾವ್ಯಯಗಳನ್ನು ಕನ್ನಡ ಪದಗಳೊಡನೆ ಸೇರಿಸಿ ಸಮಾಸ ಮಾಡಲಾಗದು ಎಂದು ಹೇಳುತ್ತಾನೆ. ಇಲ್ಲಿ ಅವನು ಕೊಡುವ ಲಕ್ಷ್ಯವಾದ "ಅರಸುಕುಮಾರನ ನಾಯತ...." (೧-೫೫) ಎಂಬ ಕಂದಪದ್ಯವು ಇದೇ ಲಕ್ಷಣಾಂಶಗಳನ್ನೊಳಗೊಂಡ ಶಬ್ದಮಣಿದರ್ಪಣದ ೯೦ನೆಯ ಸೂತ್ರದ ಲಕ್ಷ್ಯವಾಗಿ ಹಾಗೆಯೇ ಉದ್ಧೃತಗೊಂಡಿದೆ. ಒಂದು ಗಮನಾರ್ಹ ಸಂಗತಿ ಎಂದರೆ ಮಾರ್ಗಕಾರನು ಸಮಸಂಸ್ಕೃತ ಎಂದರೇನು ಎಂದು ವಿವರಣೆ ನೀಡುವುದಿಲ್ಲ; ಕೇಶಿರಾಜನು ಅದನ್ನು ಸ್ಪಷ್ಟವಾಗಿ ವಿವರಿಸುತ್ತಾನೆ. ಮಾರ್ಗಕಾರನ

ಅಹರಹರುಚ್ಚೈರ್ನೀಚೈ
ರ್ಮುಹುರ್ಮುಹುರಿತಸ್ತತಃ ಪುನಃಪುನರಂತ
ರ್ಬಹಿರಾದಿಹ ಪ್ರಾದುರಹೋ
ಸಹಸಾದಿಗಳವ್ಯಯಂಗಳಸಹಾಯಂಗಳ್ ॥ (೧-೫೨)

ಎಂಬ ಪದ್ಯವು ಕೇಶಿರಾಜನ ೯೧ನೆಯ ಸೂತ್ರದ ಪ್ರಯೋಗಭಾಗದಲ್ಲಿ ಹೀಗೆ ಪ್ರತಿಬಿಂಬಿತವಾಗಿದೆ : "ಅಂತರ್, ಬಹಿರ್, ಉಚ್ಚೈಸ್, ನೀಚೈಸ್, ಮುಹುರ್, ಪುನರ್, ಅಹಸ್, ಈಷತ್, ಯುಗಪತ್, ಪೃಥಕ್—ಇವು ಮೊದಲಾದ ಸಹಜಾವ್ಯಯಂಗಳಂ ನಿಱಿಸಿ ವಿಭಕ್ತಿಯಂ ಪತ್ತಿಸಲಾಗದು." ಈ ರೀತಿ ಸಂಸ್ಕೃತಾವ್ಯಯಗಳಿಗೆ ಕನ್ನಡ ವಿಭಕ್ತಿ ಪ್ರತ್ಯಯಗಳನ್ನು ಹಚ್ಚಿದರೆ ಅದು "ಒತ್ತುಂಗರಡೆಯ ಮದ್ದಳೆಯ ಜರ್ಝರ ಧ್ವನಿಗಳವೋಲ್" ಇರುತ್ತದೆ ಎಂದು ಮಾರ್ಗಕಾರ ಹೇಳುವುದು ಸಹಜವಾಗಿಯೇ ಕೇಶಿರಾಜನು ಶ್ರುತಿಕಷ್ಟ ಸಂಧಿಯನ್ನು ನಿರೂಪಿಸುವಾಗ ಹೇಳುವ "ಕರಡೆಯ ಗಿರ್ಗಟದ ಧ್ವನಿವೊಲ ಮರವವೆಂದುಂ" ಎಂಬುದನ್ನು ನೆನವರಿಸಿಕೊಡುತ್ತದೆ.

ಕೇಶಿರಾಜನು ಸರ್ವನಾಮಾದಿಗಳಲ್ಲಿ ಅಱಾಗಮ, ಅಣಾಗಮಗಳು ಉಂಟಾಗುತ್ತವೆ ಎಂದು ಹೇಳಿ, ಅವಕ್ಕೆ ಉದಾಹರಣೆಗಳನ್ನು ಕೊಡುವಲ್ಲಿ ಗುಣವಚನಕ್ಕೆ

ಕಿಱಿದಱಿಕೊಳೆ ಪಿರಿದುಮರ್ಥಮ
ನಱಿಪಲ್ ನೆಱೆವಾತನಾತನಿಂದಂ ಜಾಣಂ ॥

ಎಂಬ 'ಕವಿರಾಜಮಾರ್ಗ'ದ ಉದಾಹರಣೆಯನ್ನು ಲಕ್ಷ್ಯವಾಗಿ ಕೊಟ್ಟಿರುವುದು ಕಾಣುತ್ತದೆ. ಹಾಗೆಯೇ ಪುಲ್ಲಿಂಗ, ಸ್ತ್ರೀಲಿಂಗ, ಸಂಖ್ಯೆ, ಸರ್ವನಾಮ, ಗುಣವಚನ, ಕೃತ್, ತದ್ಧಿತ, ಇವುಗಳಿಗೆ ಪರದಲ್ಲಿ ಬಹುವಚನ ಪ್ರತ್ಯಯ 'ಅರ್' ಬರುವುದನ್ನು ೧೦೮ನೆಯ ಸೂತ್ರದಲ್ಲಿ ವಿವೇಚಿಸುತ್ತ ಕವಿರಾಜಮಾರ್ಗದ "ನುಡಿಗೆಲ್ಲಂ ಸಲ್ಲದ ಕನ್ನಡದೊಳ್....." ಎಂಬ ಪ್ರಸಿದ್ಧ ಪದ್ಯವನ್ನು ಪೂರ್ಣವಾಗಿ ಉದಾಹರಿಸಿದ್ದಾನೆ. ಇದು ಕೇಶಿರಾಜನಿಗೆ 'ಕವಿರಾಜಮಾರ್ಗ'ದ ನೇರ ಪರಿಚಯವಿತ್ತು ಎಂಬುದನ್ನು ದೃಢಪಡಿಸುತ್ತದೆ.

ಮಾರ್ಗಕಾರ ಹ್ರಸ್ವಾಂತಪದದ ಮುಂದೆ, ದ್ವಿತ್ವಾಕ್ಷರದಿಂದಾರಂಭವಾಗುವ ಪದವನ್ನು ತರುವುದು ಶ್ರುತಿಹಿತವಲ್ಲ; ಅದು "ಕೂಸಿನ ತಲೆಯೊಳ್ ಬಿಣ್ಪೊರೆಯನಿಟ್ಟವೊಲಸುಖಕರಂ" ಎಂದು ಹೇಳುತ್ತಾನೆ. ಕೇಶಿರಾಜನಾದರೂ ಇದೇ ವಿಷಯವನ್ನು ಸಂಧಿದೋಷ ಎಂಬ ಶೀರ್ಷಿಕೆಯಲ್ಲಿ ಹುದುಗಿಸುತ್ತ, ಪೂರ್ವಪದದ ಚರಮ ಹ್ರಸ್ವಾಕ್ಷರವಾಗಿದ್ದು, ಪರಪದದ ಪೂರ್ವ ದ್ವಿತ್ವಾಕ್ಷರವಾಗಿದ್ದರೆ ಸಂಧಿದೋಷ ಎಂದು ಹೇಳುತ್ತ, ಅಲ್ಲಿ ಮಾರ್ಗಕಾರನು ಕೊಡುವ ಉದಾಹರಣೆಯನ್ನೇ ಬಹುಮಟ್ಟಿಗೆ ಅನುಸರಿಸಿದ್ದಾನೆ. "ಬರಿಸಿ ಕ್ಷಿತಿಪತಿಯಂ ಸಯ್ತಿರಿಸಿ ಪ್ರಿಯಕುಶಲವಾರ್ತೆಯಂ ಬೆಸಗೊಂಡು" (೨-೭) ಎಂಬ ಈ ಸಂದರ್ಭದ 'ಕವಿರಾಜಮಾರ್ಗ'ದ ಪದ್ಯವನ್ನು "ಬರಿಸಿ ಪ್ರಧಾನರಂ ಕುಳ್ಳಿರಿಸಿ ಪ್ರಿಯ ಕುಶಲವಾರ್ತೆಯಂ ನೆಱೆ ಕೇಳ್ದು" (ಸೂ. ೬೯) ಎಂದು ಮುಂತಾಗಿ ತನ್ನ ಸೂತ್ರಕ್ಕನುಗುಣವಾಗಿ ತಿದ್ದಿಕೊಂಡು ಬಳಸಿರುವಂತೆ ತೋರುತ್ತದೆ.

ಈ ಮೇಲಿನ ಪರಿಶೀಲನೆಯಿಂದ 'ಶಬ್ದಮಣಿದರ್ಪಣ'ದ ರಚನೆಯಲ್ಲಿ ಅದರ ಕರ್ತೃ 'ಕವಿರಾಜಮಾರ್ಗ'ದ ಸಹಾಯವನ್ನು ಪಡೆದಿದ್ದಾನೆಂಬುದು ವಿಶದಪಡುತ್ತದೆ.

ಇಲ್ಲಿ ಒಂದು ಕುತೂಹಲಕರವಾದ ಅಂಶವೆಂದರೆ ಉಸ್ಮಾನಿಯ ವಿಶ್ವವಿದ್ಯಾನಿಲಯದ 'ಶಬ್ದಮಣಿದರ್ಪಣ'ದ ಪ್ರತಿಯಲ್ಲಿ ಅದರ ವ್ಯಾಖ್ಯಾನಕಾರ 'ಕವಿರಾಜಮಾರ್ಗ'ದಿಂದ ಅಲ್ಲಲ್ಲಿ ಪದ್ಯಗಳನ್ನು ಉದಾಹರಿಸಿ ಕೊಟ್ಟಿರುವುದಾಗಿದೆ. ಆ ಪ್ರತಿಯ ವಿಷಯವನ್ನು ಒಂದು ಉಪನ್ಯಾಸದಲ್ಲಿ ವಿವರಿಸುತ್ತ ಡಿ. ಕೆ. ಭೀಮಸೇನರಾಯರು ಕೆಲವು ಅಂಶಗಳನ್ನು ಗುರುತಿಸಿರುವುದನ್ನು ಗಮನಿಸಬಹುದು. ಪ್ರಾಸವಿವರಣ ಸಂದರ್ಭದಲ್ಲಿ "ವ್ಯಾಖ್ಯಾನ ಕಾರನು ಪ್ರಾಸವಿಷಯಕವಾದ ಸಾಧಾರಣಜ್ಞಾನವು ವ್ಯಾಕರಣಾಭ್ಯಾಸಿಗಳಿಗೆ ಇರ ಬೇಕೆಂದು ಬಗೆದು ನೃಪತುಂಗನ ಕವಿರಾಜಮಾರ್ಗದಲ್ಲಿ ಉಕ್ತವಾದಂತೆ ಷಟ್ಪ್ರಾಸ ಗಳನ್ನು ಅವುಗಳ ಪ್ರಯೋಗೋದಾಹರಣೆಗಳೊಡನೆ ನಿರೂಪಿಸಿದ್ದಾನೆ. ಕವಿರಾಜಮಾರ್ಗದ ಎರಡನೆಯ ಪರಿಚ್ಛೇದದಲ್ಲಿ, ನಿರೂಪಿತವಾದ ಪ್ರಾಸಸಂಬಂಧವಾದ ಪದ್ಯಗಳನ್ನು ಸೂತ್ರ ಗಳೆಂದು ಕರೆದು ಅವುಗಳಿಗೆ ವೃತ್ತಿಯನ್ನು ಕೊಟ್ಟಿದ್ದಾನೆ....ಕವಿರಾಜಮಾರ್ಗದ ದ್ವಿತೀಯ ಪರಿಚ್ಛೇದದ ಪದ್ಯಗಳು ೨೮, ೨೯, ೩೦, ೪೩ ಇವುಗಳಿಗೆ ವೃತ್ತಿ ಇದೆ....ಕವಿರಾಜ ಮಾರ್ಗದ ದ್ವಿತೀಯ ಪರಿಚ್ಛೇದದಿಂದ ೩೪, ೩೬, ೩೮, ೪೨ನೆಯ ಪದ್ಯಗಳನ್ನು ಶಾಂತ ಪ್ರಾಸ, ವರ್ಗಪ್ರಾಸ, ಸಮೀಪಪ್ರಾಸ ಅಂತ್ಯಪ್ರಾಸಗಳಿಗನುಕ್ರಮವಾಗಿ ಉದಾಹರಿಸಿ ದ್ದಾನೆ....ಕವಿರಾಜಮಾರ್ಗದ ಎರಡನೆಯ ಪರಿಚ್ಛೇದದ ಪದ್ಯ ೪೩ಕ್ಕೆ "ಸುಪ್ರಾಸಮು ಮನುಪ್ರಾಸಮುಮಂತ್ಯಪ್ರಾಸಮುಮುತ್ತಮಂ, ಶಾಂತ, ವರ್ಗ್ಗ, ಸಮೀಪಗತ ಪ್ರಾಸಂಗಳ್ ಪ್ರಾಸಾಭಾಸಂಗಳ್" ಎಂದು ವೃತ್ತಿಯನ್ನು ಕೊಟ್ಟು ಈ ಪ್ರಾಸ ಪ್ರಪಂಚದ ಪೀಠಿಕೆಯನ್ನು ಮುಗಿಸಿದೆ."[261]

ಱಳಪ್ರಾಸಕ್ಕಾಗಿ ಉದಾಹೃತವಾಗಿರುವ ನಾಲ್ಕು ಪದ್ಯಗಳಲ್ಲಿ 'ಕವಿರಾಜಮಾರ್ಗ'ದ "ಗೞಯಿಸಿದರ್ಥಮಂ...." ಎಂಬ ಪದ್ಯವೂ ಇದ್ದು, ಅದು ಉತ್ತರಾರ್ಧದಲ್ಲಿ ಮಾತ್ರ "ಮುತ್ತುಂಮೆಱಸುಂ ಕೋದಂತಿರೆ ಪೇೞ್ವಿೞಗವಿಗಳ ಕವಿತೆ ಬುಧರನೆರ್ದೆಗೊಳಿಸುಗುಮೇ" ಎಂಬ ಪಾಠಾಂತರ ಹೊಂದಿದೆ. ಮುಂದೆ ಬಂದರೆ ಸಹಜ ಱಳಗಳ ಪಟ್ಟಿಯನ್ನು ೧೦ ಕಂದಪದ್ಯಗಳಲ್ಲಿ ಕೊಟ್ಟು, ಆದೇಶ ಱಳ ಸಮಾಸ ಹಾಗೂ ಸಂಸ್ಕೃತದಿಂದ ಕನ್ನಡಕ್ಕೆ ಬಂದ ತದ್ಭವಗಳಲ್ಲಿ ಕಾಣಬರುತ್ತದೆ ಎಂದು ಹೇಳಿ ಪೂರ್ವೋಕ್ತ ವ್ಯಾಖ್ಯಾನಕಾರನು ಅಲ್ಲಿಯೇ "ಱಳಾದೇಶಂಗೆಯ್ದೊಡೆ ದಕ್ಷಿಣಮಾರ್ಗ್ಗಮೆಂಬ ಗುಣಂ" ಎಂಬಲ್ಲಿ "ದಕ್ಷಿಣೋ ತ್ತರಮಾರ್ಗ್ಗಂಗಳೆಂತೆಂದೊಡೆ ನೃಪತುಂಗನ ಪ್ರಯೋಗಂ" ಎಂದು 'ಕವಿರಾಜಮಾರ್ಗ'ದ ದ್ವಿತೀಯ ಪರಿಚ್ಛೇದದಿಂದ ೧೦೦, ೧೦೬, ೧೦೧ನೆಯ ಪದ್ಯಗಳನ್ನು ಕ್ರಮವಾಗಿ ಉದ್ಧ ರಿಸಿದ್ದಾನೆ.[262]

೮೦ನೆಯ ಸೂತ್ರದಲ್ಲಿ ಸಮಸಂಸ್ಕೃತವನ್ನು ಕುರಿತು ಹೇಳುವಾಗ ವ್ಯಾಖ್ಯಾಕಾರನು ವಿವರಣೆಯಲ್ಲಿ "ಸಮಸಂಸ್ಕೃತ ಪದಂಗಳನಚ್ಚಗನ್ನಡದೊಳ್ ಬೆರಸಿ ನಡೆಸುವುದು" ಎಂದು ಹೇಳಿ 'ಕವಿರಾಜಮಾರ್ಗ'ದ ಪ್ರಥಮ ಪರಿಚ್ಛೇದದ ಪದ್ಯ ೫೧–೫೨ನ್ನು ಉದಾಹರಿಸಿ

ದ್ದಾನೆ. ಇಷ್ಟಲ್ಲದೆ "ಅಹರಹರುಚ್ಚೈರ್ನಿರೀಕ್ಷ್ಯೈ...." "ಬಹಿರಿತರಮುಪವನಂಗಳೊಳ್...." ಎಂಬೆರಡು 'ಕವಿರಾಜಮಾರ್ಗ'ದ ಪದ್ಯಗಳನ್ನು ಕೊಟ್ಟಿದೆ; ಜೊತೆಗೆ ಪ್ರಥಮ ಪರಿಚ್ಛೇದದ ೫೩, ೫೫ನೆಯ ಪದ್ಯಗಳನ್ನೂ ಉದಾಹರಿಸಿದೆ. ಕುತೂಹಲಕರ ಅಂಶವೆಂದರೆ 'ಕವಿರಾಜಮಾರ್ಗ'ದ "ಅರಸುಕುಮಾರನನಾಯತ...." ಪದ್ಯ ಇಲ್ಲಿ ಉದಾಹರಿಸಲ್ಪಟ್ಟಿಲ್ಲ. ಆದರೆ ಕಿಟ್ಟೆಲ್, ಸಾಹಿತ್ಯಪರಿಷತ್ ಹಾಗೂ ಡಿ. ಎಲ್. ನರಸಿಂಹಾಚಾರ್ ಮುದ್ರಣಗಳಲ್ಲಿ ಈ ಪದ್ಯ ಪ್ರೋಕ್ತವಾಗಿದೆ. ಇಷ್ಟಲ್ಲದೆ ಸೂತ್ರ ೧೪೯ರ ಕೆಳಗೆ ಮತ್ತೆ 'ಕವಿರಾಜಮಾರ್ಗ'ದ ಪ್ರಥಮ ಪರಿಚ್ಛೇದದಿಂದ ೧೧೭, ೧೧೮, ೧೧೯ನೆಯ ಪದ್ಯಗಳು ಉದಾಹೃತವಾಗಿವೆ.[263]

ಈ ಮೇಲಿನ ವಿವರಣೆಯಿಂದ 'ಛಂದೋಂಬುಧಿ' ಮುಂತಾದ ಲಕ್ಷಣ ಗ್ರಂಥಗಳ ಪ್ರತಿಕಾರರು ಹಾಗೂ 'ಭಾಷಾಭೂಷಣ'ದ ಒಬ್ಬ ವ್ಯಾಖ್ಯಾನಕಾರ 'ಕವಿರಾಜಮಾರ್ಗ'ದ ಲಕ್ಷ್ಯಲಕ್ಷಣದ ಮಹತ್ತ್ವವನ್ನೂ ಗುರುತಿಸಿದಂತೆ ಶಬ್ದಮಣಿದರ್ಪಣದ ಒಂದು ಪ್ರತಿಯ ವ್ಯಾಖ್ಯಾನಕಾರನೂ ಗುರುತಿಸಿದ್ದಾನೆ ಎಂದು ನಿರ್ಧರಿಸಬಹುದು.

ಈ ಶ್ರೇಣಿಯಲ್ಲಿ ಅಂತಿಮವಾಗಿ ಪರಿಶೀಲಿಸಬೇಕಾದುದು ಭಟ್ಟಾಕಳಂಕನ(ಸು.೧೬೦೪) 'ಶಬ್ದಾನುಶಾಸನ'ವನ್ನು. ಇಲ್ಲಿ 'ಕವಿರಾಜಮಾರ್ಗ'ದ ದಟ್ಟವಾದ ಪ್ರಭಾವನ್ನೇನೂ ಕಾಣಲಾಗುವುದಿಲ್ಲ. ಆದರೂ ಭಟ್ಟಾಕಳಂಕ ಕವಿರಾಜಮಾರ್ಗವನ್ನು ಗಮನಿಸಿದ್ದಾನೆ ಎಂಬುದನ್ನು ಸೂಚಿಸಲು' ಎರಡು ಆಧಾರಗಳಿವೆ. 'ಶಬ್ದಾನುಶಾಸನ'ದ ೨೮೮ನೆಯ ಸೂತ್ರವಾದ "ಆದೇನಃ" ಎಂಬುದರ ಕೆಳಗೆ ಮಂಜರೀಮಕರಂದ ವ್ಯಾಖ್ಯಾನದೊಳಗೆ "ದಕ್ಷಿಣೋತ್ತರ ಮಾರ್ಗಭೇದ ಭಿನ್ನಪ್ರಯೋಗ ಚಾತುರೀ ಪ್ರಪಂಚೋ ನೃಪತುಂಗಗ್ರಂಥೇ ದೃಷ್ಟವ್ಯಃ" ಎಂದು ಹೇಳಿರುವುದು ಭಟ್ಟಾಕಳಂಕ ಸ್ಪಷ್ಟವಾಗಿ 'ಕವಿರಾಜಮಾರ್ಗ'ವನ್ನು ಗಮನಿಸಿದ್ದಾನೆ ಎಂಬುದನ್ನು ತಿಳಿಸುತ್ತದೆ. ಹೀಗೆಯೇ ಮುಂದೆ ೨೦೨ನೆಯ ಸೂತ್ರವಾದ "ಅರಸ್ಯಾದಯಃ" ಎಂಬುದರ ಕೆಳಗೆ "ಅರಸರೊಳೆಲೆ ನೀಂ ಸರಸಮನ್...." ಎಂಬ ಪದ್ಯವನ್ನು 'ಕವಿರಾಜಮಾರ್ಗ'ದಿಂದ ಯಥಾವತ್ತಾಗಿ ಎತ್ತಿಕೊಟ್ಟಿರುವುದು ಕಾಣುತ್ತದೆ.[264]

## ಛಂದೋಗ್ರಂಥಗಳ ಮೇಲೆ ಪ್ರಭಾವ

'ಕವಿರಾಜಮಾರ್ಗ' ಪ್ರಥಮತಃ ಒಂದು ಅಲಂಕಾರಗ್ರಂಥ; ಆದ್ದರಿಂದ ಇಲ್ಲಿ ಛಂದಃ ಸಂಬಂಧಿಯಾದ ವಿಷಯಗಳು ವಿವರವಾಗಿ ನಿರೂಪಿತವಾಗದಿರುವುದು ಒಂದು ಅರಕೆಯೇನಲ್ಲ. ಆದರೂ ಇಲ್ಲಿಯ ಗುರುಲಘುದೋಷಗಳು, ಛಂದೋಭಂಗ, ಯತಿವಿಲಂಘನ, ಪ್ರಾಸ ವಿಚಾರ ಇವುಗಳಲ್ಲಿ ಕೆಲವಂಶಗಳು ಮುಂದಿನ ಛಂದಶ್ಶಾಸ್ತ್ರಕಾರರ ಗಮನ ಸೆಳೆದಿವೆ. ಅವರಲ್ಲಿ ಕೆಲವರು ಇಲ್ಲಿನ ವಿಷಯಗಳನ್ನೇ ಬಳಸಿಕೊಂಡು ವಿಸ್ತೃತ ವಿವೇಚನೆ ನಡಸಿರುವಂತೆ ತೋರುತ್ತದೆ.

ಮೊದಲನೆಯ ನಾಗವರ್ಮನ(ಸು.೯೯೦) 'ಛಂದೋಂಬುಧಿ'ಯಲ್ಲಿ 'ಕವಿರಾಜಮಾರ್ಗ'ದಲ್ಲಿ ಉಕ್ತವಾಗಿರುವ ಛಂದೋಭಂಗ, ಗುರುಲಘುದೋಷ ಇವುಗಳ ಸ್ಥೂಲ ವಿವೇಚನೆ

ಯಿದೆ. ಇಲ್ಲಿ ಕವಿರಾಜಮಾರ್ಗಕಾರನ ವಿಷಯ ವಿವೇಚನೆಯನ್ನು ನಾಗವರ್ಮನು ಗಮನಿಸಿದ್ದಿರಬಹುದಾದರೂ, ಅವನಿಂದ ನೇರವಾಗಿ ಪ್ರಭಾವಿತನಾಗಿದ್ದಾನೆ ಎಂದು ಹೇಳಲು ಆಧಾರಗಳಿಲ್ಲ. ಆದರೆ 'ಛಂದೋಂಬುಧಿ'ಯಲ್ಲಿನ ಪ್ರಾಸವಿಚಾರವನ್ನು ಗಮನಿಸಿದರೆ ಅಲ್ಲಿ 'ಕವಿರಾಜಮಾರ್ಗ'ದ ಅನುಸರಣೆಯಿದೆಯೆಂದು ಮೊದಲ ನೋಟದಲ್ಲಿ ತೋರುತ್ತದೆ.ಅಲ್ಲಿಯ ಪದ್ಯಗಳೇ ಬಹುಮಟ್ಟಿಗೆ ಯಥಾರೀತಿಯಲ್ಲೇ ಇಲ್ಲಿ ಬಳಸಲ್ಪಟ್ಟಿರುವುದನ್ನು ಲಕ್ಷ್ಯಲಕ್ಷಣಗಳೆರಡರಲ್ಲಿಯೂ ಗಮನಿಸಬಹುದು. ಕವಿರಾಜಮಾರ್ಗದ ದ್ವಿತೀಯ ಪರಿಚ್ಛೇದದ ಕೆಲವು ಪದ್ಯಗಳು (೩೦–೪೫) 'ಛಂದೋಂಬುಧಿ'ಯ ಪ್ರಥಮಾಧಿಕಾರದ ಕೆಲವು ಪದ್ಯಗಳೊಡನೆ (೪೮–೫೫) ಲಕ್ಷ್ಯಲಕ್ಷಣಗಳಾಗಿ ಬಳಸಲ್ಪಟ್ಟಿವೆಯೆಂದು ಮುದ್ರಿತ ಪ್ರತಿಗಳ ಪಾಠಗಳನ್ನು ಪರಿಶೀಲಿಸಿದರೆ ತಿಳಿಯುವುದು. ಅಲ್ಪ ಪಾಠವ್ಯತ್ಯಾಸಗಳ ಒಂದು ಉದಾಹರಣೆ: 'ಕವಿರಾಜಮಾರ್ಗ'ದಲ್ಲಿ—

> ಸುತ ಶಬ್ದಾಲಂಕಾರದೊ
> ಳತಿಶಯಮಿಾ ಕನ್ನಡಕ್ಕೆ ಸತತಂ ಪ್ರಾಸಂ
> ಕೃತಕೃತ್ಯಮಲ್ಲವಲ್ಲಭ
> ಮತದಿಂದ[ಱಾ] ಪ್ರಪಂಚಮೀ ತೆಱನಕ್ಕುಂ ॥ (೨-೩೦)

'ಛಂದೋಂಬುಧಿ'ಯಲ್ಲಿ—

> ಸುತ ಶಬ್ದಾಲಂಕಾರದೊ
> ಳತಿಶಯಮದು ಕನ್ನಡಕ್ಕೆ ಸತತಂ ಪ್ರಾಸಂ
> ಕೃತಕೃತ್ಯಮಪ್ಪುದೆಲ್ಲರ
> ಮತದಿಂದದು ತಪ್ಪೆ ಕಾವ್ಯಮೇಂ ಶೋಭಿಪುದೇ ॥ (೧–೪೮)

ಹಾಗೆಯೇ "ಅತಿವಿಶದಯಶೋವೃತ್ತಂ..." ಎಂದು ಆರಂಭವಾಗುವ 'ಕವಿರಾಜಮಾರ್ಗ'ದ ೨–೪೪ನೆಯ ಪದ್ಯದ ನಾಲ್ಕನೆಯ ಪಾದ ಪಾಠಕರ ಪ್ರತಿಯಲ್ಲಿ "ಸತತಂ ನೃಪತುಂಗ ದೇವನೊಲವಿಂ ಪೊತ್ತಂ...." ಎಂದಿದ್ದರೆ, 'ಛಂದೋಂಬುಧಿ'ಯಲ್ಲಿ "ಶತಮುಖ ಸದೃಶಾನುಭಾವವಿಭವಂಬೆತ್ತಂ" ಎಂದಿದೆ; ಅದೇ ರೀತಿಯಲ್ಲಿ "ಪ್ರಾಸಾನುಪ್ರಾಸಂ...." ಎಂದು ಆರಂಭವಾಗುವ 'ಕವಿರಾಜಮಾರ್ಗ'ದ ೨–೪೫ನೆಯ ಪದ್ಯದ ನಾಲ್ಕನೆಯ ಪಾದ 'ಕವಿರಾಜಮಾರ್ಗ'ದಲ್ಲಿ "ಭಾಸುರ ನೃಪತುಂಗದೇವ ವಿದಿತ ಕ್ರಮದಿಂ" ಎಂದಿದ್ದರೆ, ಛಂದೋಂಬುಧಿಯಲ್ಲಿ "ಭಾಸುರ ಕಂಜಾಯತಾಕ್ಷಿ ಕೇಳದನೊರೆವೆಂ" ಎಂದು ಬಂದಿರುವುದು ಕಾಣುತ್ತದೆ.

ಪ್ರಾಸ ಸಂಬಂಧಿಯಾದ ಈ ಕೆಲವು ಪದ್ಯಗಳು 'ಛಂದೋಂಬುಧಿ'ಯ ಹಲವು ಹಸ್ತಪ್ರತಿಗಳಲ್ಲಿ ದೊರೆಯುತ್ತವೆ. ಈ ಪದ್ಯಸಮುದಾಯವನ್ನು ಸೂಕ್ಷ್ಮವಾಗಿ ಪರೀಕ್ಷಿಸಿ ಪ್ರಕ್ಷಿಪ್ತ ಎಂದು ಕೆಲವು ವಿದ್ವಾಂಸರು ಪರಿಗಣಿಸಿದ್ದಾರೆ. ಇದರಿಂದ 'ಛಂದೋಂಬುಧಿ'ಯಲ್ಲಿ 'ಕವಿರಾಜಮಾರ್ಗ'ದ ನೇರ ಪ್ರಭಾವವಿಲ್ಲ ಎಂದು ವಿಶದಪಟ್ಟರೂ, ಆ ಗ್ರಂಥದ ಅಭ್ಯಾಸಿಗಳು ಮತ್ತು ಪ್ರತಿಕಾರರು ಕಾರಣವಾಗಿ ಅದರ ಪ್ರಭಾವ ಬೇರೊಂದು ವಿಧದಲ್ಲಿ

ಆಗಿದೆಯೆನ್ನಬಹುದು. ಇದಕ್ಕೆ ಕಾರಣವೇನು? ಪ್ರಾಸವಿಚಾರವು ಪ್ರಧಾನವಾಗಿ ಅಲಂಕಾರ ಶಾಸ್ತ್ರ ವಿಷಯವಾದ್ದರಿಂದ, ಅದನ್ನು ನಾಗವರ್ಮನು ತನ್ನ ಗ್ರಂಥದಲ್ಲಿ ಪ್ರಸ್ತಾಪಿಸಿರಲಾರ. ಆದರೆ ಅನಂತರದಲ್ಲಿ ಪ್ರಾಸವಿಚಾರ ಕೂಡ ಛಂದೋವಿಷಯವೆಂದು ಪರಿಗಣಿಸಲ್ಪಟ್ಟು, ಅದಕ್ಕೆ ಕನ್ನಡ ಕವಿತ್ವಪದ್ಧತಿಯಲ್ಲಿ ಒತ್ತುಬಿದ್ದ ಕಾರಣ ಅಭ್ಯಾಸಿಗಳೂ ಪ್ರತಿಕಾರರೂ ಕಾರಣವಾಗಿ ಅವು ಛಂದೋಂಬುಧಿಯ ಮೂಲ ಪಾಠದೊಳಗೆ ಅವಶ್ಯವಾದೊಂದು ಅಭ್ಯಾಸವಿಷಯವಾಗಿ ಸೇರಿಹೋದವು ಎಂದು ಹೇಳಬೇಕಾಗುತ್ತದೆ.

ಈಶ್ವರ ಕವಿಯ (ಸು. ೧೫೦೦) 'ಕವಿಜಿಹ್ವಾಬಂಧನ'ದಲ್ಲಿ ಪ್ರಾಸದ ಭೇದ ಪ್ರಭೇದಗಳ ಪರಿಶೀಲನೆಯಿದೆ. ಈ ವಿವರಣೆಗೆ ಕವಿರಾಜಮಾರ್ಗ ಸ್ಫೂರ್ತಿ ನೀಡಿದ್ದಿರಬಹುದು. ಮಾರ್ಗಕಾರ ಒಂಬತ್ತು ಪ್ರಾಸಗಳನ್ನು ಲಕ್ಷ್ಯಲಕ್ಷಣಗಳೊಡನೆ ವಿವರಿಸಿ, ವಿಷಯ ವಿವೇಚನೆ ಮುಗಿಸಿದರೆ, ಇವನು ಪ್ರಾಸದಲ್ಲಿನ ವಿವಿಧ ನಮೂನೆಗಳನ್ನು ಬೇರೆ ಬೇರೆ ಹೆಸರುಗಳಲ್ಲಿ ವಿವರಿಸಿದ್ದಾನೆ. "ಕವಿಜಿಹ್ವಾಬಂಧನದಲ್ಲಿ ಹರಿ, ಕರಿ ಮೊದಲಾದ ಷಟ್ಪ್ರಾಸ ಭೇದಗಳನ್ನೇ ಅಲ್ಲದೆ ಇನ್ನೂ ಏಳು ಭೇದಗಳನ್ನು ಇದೇ ರೀತಿಯಲ್ಲಿ ಲಕ್ಷಣಿಸಿದೆ. ಇವುಗಳಲ್ಲಿ ಯುಗ್ಮವರ್ಣಪ್ರಾಸ, ತ್ರ್ಯಕ್ಷರಪ್ರಾಸ, ಅನುಪ್ರಾಸ, ಅಂತ್ಯಪ್ರಾಸ ಎಂಬುವು 'ಕವಿರಾಜಮಾರ್ಗ' ಮೂಲವಾಗಿ ಬಂದಿರಬಹುದೇನೋ"—ಎಂದು ಕೆಲವರು ಶಂಕಿಸಿದ್ದರೆ,[265] ಇನ್ನು ಕೆಲವರು "ಈಶ್ವರ ಕವಿಯು ಕವಿರಾಜಮಾರ್ಗ ಛಂದೋಂಬುಧಿ ಮತ್ತು ಅಗ್ನಿಪುರಾಣ, ಕವಿಕಂಠಪಾಶ, ಕವಿಜನಾಶ್ರಯವನು ಇವುಗಳಿಂದಲೂ ರಸಾಲಂಕಾರ ಗ್ರಂಥಗಳಿಂದಲೂ ತನಗೆ ಬೇಕಾದ ಮಾತುಗಳನ್ನು ಎತ್ತಿ ೩, ೪ನೆಯ ಅಧ್ಯಾಯಗಳಲ್ಲಿ ಸೇರಿಸಿದ್ದಾನೆ" ಎಂದು ಅಭಿಪ್ರಾಯ ಪಟ್ಟಿರುತ್ತಾರೆ.[266] 'ಛಂದೋಂಬುಧಿ'ಯ ಪ್ರತಿಕಾರರು 'ಕವಿರಾಜಮಾರ್ಗ'ದ ಪದ್ಯಗಳನ್ನು ಬಳಸಿಕೊಂಡಿರುವಂತೆ, ಉಸ್ಮಾನಿಯ ವಿಶ್ವವಿದ್ಯಾನಿಲಯದ 'ಕವಿಜಿಹ್ವಾಬಂಧನ'ದ ಒಂದು ಹಸ್ತಪ್ರತಿಯಲ್ಲಿ 'ಕವಿರಾಜಮಾರ್ಗ'ದಲ್ಲಿನ ಪ್ರಾಸ ವಿವರಣೆಯ ಪದ್ಯಗಳನ್ನು ಯಥಾವತ್ತಾಗಿ ನಕಲಿಸಿದೆ. 'ಕವಿರಾಜಮಾರ್ಗ'ದ ಒಂಬತ್ತು ಪ್ರಾಸಗಳ ಲಕ್ಷ್ಯಲಕ್ಷಣಗಳು ವಿರಳವಾದ ಪಾಠಾಂತರಗಳೊಡನೆ ಇಲ್ಲಿ ಕಾಣಿಸಿಕೊಂಡಿದೆ.[267] 'ಕವಿಜಿಹ್ವಾಬಂಧನ'ದ ಮೂಲಪಾಠ ಮತ್ತು ಪ್ರಕ್ಷಿಪ್ತ ಪಾಠ ಎರಡರಲ್ಲಿಯೂ ಕವಿರಾಜಮಾರ್ಗ ತನ್ನ ಪ್ರಭಾವ ಬೀರಿದೆಯೆಂದು ಈ ವಿವೇಚನೆಯಿಂದ ಊಹಿಸಬಹುದು.

## ಅಲಂಕಾರಗ್ರಂಥಗಳ ಮೇಲೆ ಪ್ರಭಾವ

"ಕನ್ನಡದಲ್ಲಿ ಕಾವ್ಯಮೀಮಾಂಸೆಗೆ ಕವಿರಾಜಮಾರ್ಗಕಾರನೇ ಆದ್ಯಾಚಾರ್ಯ" ಎಂದು ಒಂದು ಅಭಿಪ್ರಾಯವಿದೆ.[268] ಆದರೆ ಇವನು ಭಾಮಹ, ದಂಡಿ ಇವರ ಗ್ರಂಥಗಳನ್ನು ಮಾದರಿಯಾಗಿರಿಸಿಕೊಂಡಿರುವುದಲ್ಲದೆ, ಅವುಗಳಲ್ಲಿನ ಲಕ್ಷ್ಯಲಕ್ಷಣಗಳನ್ನು ಯಥೋಚಿತವಾಗಿ ಅನುವಾದಿಸುವ ಮೂಲಕ ಬಳಸಿಕೊಂಡಿದ್ದಾನೆ. ಅನಂತರದ ಲಾಕ್ಷಣಿಕರು ಕೂಡ ಇವನ ಮಾರ್ಗವನ್ನೇ ಹಿಡಿದು ನಡೆದು, ಪ್ರಾಚೀನ ಸಂಸ್ಕೃತ ಲಾಕ್ಷಣಿಕರ

ಗ್ರಂಥಗಳನ್ನು ಅನುಸರಿಸಿದ್ದಾರೆ. ಕೆಲವೊಂದು ಅಲಂಕಾರ ಪ್ರಕ್ರಿಯೆಗಳ ಲಕ್ಷ್ಯಲಕ್ಷಣಗಳಿಗೆ ಮಾರ್ಗಕಾರನಿಗೂ ಅನಂತರದ ಲಾಕ್ಷಣಿಕರಿಗೂ ಸಂಸ್ಕೃತ ಲಕ್ಷಣಗ್ರಂಥಗಳೇ ಸಮಾನ ಆಕರಗಳಾಗುವುದರಿಂದ, ಅವರು ಕವಿರಾಜಮಾರ್ಗವನ್ನು ಅನುಸರಿಸಿದ್ದಾರೆಯೋ, ಮೂಲ ಸಂಸ್ಕೃತಗ್ರಂಥವನ್ನು ಅನುಸರಿಸಿದ್ದಾರೆಯೋ ಹೇಳುವುದು ಕಷ್ಟವಾಗುತ್ತದೆ. ಈ ಕವಲಿನ ಲಕ್ಷಣಗ್ರಂಥಗಳಲ್ಲಿ ಕವಿರಾಜಮಾರ್ಗದ ಪ್ರಭಾವ ಅಷ್ಟಿಷ್ಟು ಕಾಣುವುದು ಎರಡನೆಯ ನಾಗವರ್ಮನ 'ಕಾವ್ಯಾವಲೋಕನ'ದಲ್ಲಿ. ಉಳಿದವುಗಳ ಮೇಲೆ ಆ ಪ್ರಭಾವದ ಪ್ರಮಾಣ ಇನ್ನೂ ಶೋಧಿತವಾಗಬೇಕಾಗಿದೆ.

ಉತ್ತರ ದಕ್ಷಿಣ ಮಾರ್ಗಗಳ ಪ್ರಸ್ತಾವನೆಯಲ್ಲಿ, ನಾಗವರ್ಮನು "ಇವು ನಿಯತಂ ದಕ್ಷಿಣದೇಶವರ್ತಿ ಕವಿರಾಜಮಾರ್ಗದೊಳ್ ನೆಗಳ್ದಿಂ...." (೩-೫೨೧) ಎಂದು ಹೇಳಿರುವುದರಲ್ಲಿ 'ಕವಿರಾಜಮಾರ್ಗ' ಗ್ರಂಥವನ್ನು ಸ್ಪಷ್ಟವಾಗಿಯೇ ಸೂಚಿಸುತ್ತಿದ್ದಾನೆ ಎಂದು ತೀ. ನಂ. ಶ್ರೀಕಂಠಯ್ಯ,[269] ಕೆ. ಕೃಷ್ಣಮೂರ್ತಿ[270] ಅಭಿಪ್ರಾಯಪಟ್ಟಿದ್ದಾರೆ. ಆದರೆ ರಾ. ನರಸಿಂಹಾಚಾರ್ಯರು "ಇಲ್ಲಿ ಸೂಚಿತವಾಗಿರುವುದು 'ಕವಿರಾಜಮಾರ್ಗ' ಗ್ರಂಥವಲ್ಲ, ಕವಿರಾಜರ ಮಾರ್ಗ (The path of excellent poets)" ಎಂದಿದ್ದಾರೆ.[271] ಮುಂದೆ ಭಟ್ಟಾಕಳಂಕನಾದರೂ ಈ ವಿಷಯದಲ್ಲಿ 'ಕವಿರಾಜಮಾರ್ಗ'ವನ್ನೇ ಬೊಟ್ಟು ಮಾಡಿರುವುದರಿಂದ, ಬಹುಮಟ್ಟಿಗೆ ಈ ವಿಷಯದಲ್ಲಿ ಎಲ್ಲರೂ 'ಕವಿರಾಜಮಾರ್ಗ'ವನ್ನೇ ಪ್ರಮಾಣ ಗ್ರಂಥವಾಗಿ ಪರಿಗಣಿಸುತ್ತಿದ್ದರು ಎಂದು ತೋರುತ್ತದೆ. ಬಹುಶಃ ನಾಗವರ್ಮ ಶ್ಲೇಷೆಯಿಂದ ಇಲ್ಲಿ 'ಕವಿರಾಜಮಾರ್ಗ' ಗ್ರಂಥವನ್ನು ಕುರಿತಿದ್ದಿರಬಹುದು ಎನಿಸುತ್ತದೆ.

ಈ ವಿಷಯದ ಪ್ರಸ್ತಾವನೆಯಲ್ಲಿಯೇ ರಾ. ನರಸಿಂಹಾಚಾರ್ಯರು, ನಾಗವರ್ಮ 'ಕವಿರಾಜಮಾರ್ಗ'ದ ಬಗ್ಗೆ ಯಾವುದೇ ಪ್ರಸ್ತಾಪ ಮಾಡದಿರುವುದೂ ಅದರಿಂದ ಒಂದೇ ಒಂದು ಪದ್ಯವನ್ನಾದರೂ ಆಯ್ದುಕೊಂಡು ಉದಾಹರಿಸದಿರುವುದೂ ಅಚ್ಚರಿಯನ್ನುಂಟು ಮಾಡುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾರೆ.[272] ಆದರೆ ಮುಂದುವರಿದು ಅವರೇ—

Though the *Kavyavalokana* does not allude to the *Kavirajamarga*,, still there occur in the two works many striking coincidences which cannot be due to mere chance. Some of them may be the result of the identity of subject matter, but there are others which cannot be so accounted for''.

ಎಂದು ಹೇಳಿ[273] ಅಂಥ ಕೆಲವು ಉದಾಹರಣೆಗಳನ್ನಿತ್ತು ವಿವರ ಪರಿಶೀಲನೆಯ ನಂತರ 'ಕಾವ್ಯಾವಲೋಕನ'ದ ಕೆಲವು ಪದ್ಯಗಳು 'ಕವಿರಾಜಮಾರ್ಗ'ದಿಂದ ಪ್ರೇರಿತವಾದುವೆಂದು ತಿಳಿಯುವುದು ಯುಕ್ತಿಯುಕ್ತವೆಂದು ತಮ್ಮ ನಿರ್ಣಯವನ್ನೂ ಕೊಟ್ಟಿದ್ದಾರೆ.[274]

ಈ ಹಿನ್ನೆಲೆಯಲ್ಲಿ, ಸಾದೃಶ್ಯ ಪರಿಶೀಲನೆಯನ್ನು ಈ ಎರಡು ಮುಖಗಳಲ್ಲಿ ಮುಂದೆ ಗಮನಿಸಬಹುದು :

ಅ) ಒಂದೇ ಮೂಲದಿಂದ ಕವಿರಾಜಮಾರ್ಗಕಾರ, ನಾಗವರ್ಮರಿಬ್ಬರೂ ಲಕ್ಷ್ಯ

ಲಕ್ಷಣಗಳನ್ನು ಆಯ್ದುಕೊಂಡಿದ್ದರೂ, 'ಕವಿರಾಜಮಾರ್ಗ'ದ ಪ್ರಭಾವವನ್ನು 'ಕಾವ್ಯಾವಲೋಕನ'ದ ಮೇಲೆ ಗುರುತಿಸಬಹುದಾಗಿ ಇರುವಂಥವು. ಆ) ಸಮಾನವಿಷಯನಿರೂಪಣೆಯಲ್ಲಿ ಇಬ್ಬರೂ ಬಳಸಿರುವ ಲಕ್ಷ್ಯಗಳು ಒಂದೇ ರೀತಿಯವಾಗಿದ್ದು, 'ಕವಿರಾಜಮಾರ್ಗ'ವನ್ನುಳಿದು ಬಹುಶಃ ಬೇರೆ ಆಕರವಿಲ್ಲದಂಥವು.

ಅ) ವಿರುದ್ಧಾರ್ಥ ದೋಷದ ಲಕ್ಷ್ಯ : 'ಕವಿರಾಜಮಾರ್ಗ'ದಲ್ಲಿ—

ಅರಿನೃಪಬಲಮಂ ಗೆಲ್ದರ್
ಪರಾಕ್ರಮುಕ್ರಮದೆ ಶೌರ್ಯಮಂ ಪ್ರಕಟಿಸು ನೀಂ
ನರವುಹಿತಾ ನಿನಗೇನಹಿ
ತರುಮೊಳರೇ ಸತತ ಪರಹಿತಾಚಾರಪರಾ ॥ (೧–೮೩)

ವಿರುದ್ಧಾರ್ಥ ದೋಷದ ಲಕ್ಷ್ಯ : 'ಕಾವ್ಯಾವಲೋಕನ'ದಲ್ಲಿ—

ಎಱಗಿಸು ಭುಜವಿಜಯದಿನಣ
ಮುಱದೆ ಬಿಗುರ್ತಿರ್ಪರ್ಕಾತಿನೃಪರಂ ಧರ್ಮ
ಕ್ಕೆಱಕವಟ್ಟಾಗಿರ್ದಯ್ ನೀಂ
ಪೆಱರಾರುಂ ನಿನಗೆ ಪಗೆವರೆಂಬರುಮೊಳರೇ ॥ (೩–೪೬೬)

ಇಲ್ಲಿಯ ಪರಸ್ಪರ ಸಾದೃಶ್ಯ ಸ್ಪಷ್ಟವಾಗಿದ್ದರೂ, ಇವೆರಡಕ್ಕೆ ಮೂಲ 'ಕಾವ್ಯಾದರ್ಶ'ದ ಈ ಶ್ಲೋಕ :

ಜ ಹಿ ಶತ್ರುಬಲಂ ಕೃತ್ಸ್ನಂ ಜಯ ವಿಶ್ವಂಭರಾಮಿಮಾಂ
ತವ ನೈಕೋಽಪಿ ವಿದ್ವೇಷ್ಟಾ ಸರ್ವಭೂತಾನುಕಂಪಿನಃ ॥ (೩-೧೩೨)

ಆದರೆ ನಾಗವರ್ಮನ ಪದ್ಯದ ಧಾಟಿಧೋರಣೆಗಳು 'ಕವಿರಾಜಮಾರ್ಗ'ದ ಪದ್ಯಕ್ಕೆ ಸಮೀಪವಾಗಿ ಹೋಲುತ್ತವೆಂದು ತೋರುತ್ತದೆ.

ii) ಗುಣಸ್ವಭಾವಾಖ್ಯಾನಕ್ಕೆ 'ಕವಿರಾಜಮಾರ್ಗ'ದಲ್ಲಿ ಕೊಟ್ಟಿರುವ ಉದಾಹರಣೆ :

ಆಮೀಳನಮಂ ಕಣ್ಗಳೊ
ಳಾ ಮನದೊಳೊಸಗೆಯಂ ಶರೀರದೊಳೆತ್ತಂ
ರೋಮಾಂಚಕ ಕಂಚುಕದಿಂ ಮದಿ
ರಾಮದವಾಗಿಸೆ ತೆಗಟ್ಟಿ ನಾಕೆಯ ನುಡಿಯೊಳ್ ॥ (೩-೯)

'ಕಾವ್ಯಾವಲೋಕನ'ದಲ್ಲಿನ ಗುಣಸ್ವಭಾವಾಖ್ಯಾನದ ಸದೃಶ ಪದ್ಯ :

ಮನದೊಳ್ ಮುದಮಂ ಕೋಮಳ
ತನುವಿನೊಳತ್ಯಂತರೋಮಹರ್ಷಣಮಂ ಕ
ಣ್ಗೆ ನಿಸಿನಿಸಾಮೀಳನಮಂ
ಜನಿಯಿಸುತುಂ ಪ್ರಿಯೆಯ ಸೋಂಕು ಪಡೆದುದಲಂಪಂ ॥ (೩–೩೧೨)

'ಕವಿರಾಜಮಾರ್ಗ'ದ ಪದ್ಯದ ಭಾವವೇ ಇಲ್ಲಿ ಅನುರಣಿತವಾಗಿದ್ದು, ಅಲ್ಲಿನ "ಆಮೀಳನಮಂ ಕಂಗಳೊಳ್" "ಮನದೊಳಗೊಸಗೆಯಂ" "ಶರೀರದೊಳೆತ್ತಂ ರೋಮಾಂಚಕ

ಕಂಚುಕದಿಂ" ಎಂಬುವು "ಕಣ್ಗೆ ನಿಸಿನಿಸಾಮೀಳನಮಂ ಜನಿಯಿಸುತುಂ", "ಮನದೊಳ್ ಮುದಮಂ" "ತನುವಿನೊಳತ್ಯಂತ ರೋಮಹರ್ಷಣಮಂ" ಎಂಬ ಉಕ್ತಿಗಳಲ್ಲಿ ಪರಿವರ್ತಿತ ರೂಪವನ್ನು ತಳೆದಿವೆ. ಇವೆರಡಕ್ಕೂ ಮೂಲವಾದ ದಂಡಿಯ 'ಕಾವ್ಯಾದರ್ಶ'ದ ಶ್ಲೋಕ ಈ ರೀತಿ ಇದೆ :

ಬಧ್ನನ್ನಂಗೇಷು ರೋಮಾಂಚಂ ಕುರ್ವನ್ ಮನಸಿ ನಿರ್ವೃತಿಂ
ನೇತ್ರೇ ಚಾಮೀಲಯನ್ನೇಷ ಪ್ರಿಯಾಸ್ಪರ್ಶಃ ಪ್ರವರ್ತತೇ (೨-೧೧)

ದಂಡಿಯ ಶ್ಲೋಕವೇ ಇಬ್ಬರ ಪದ್ಯಗಳಿಗೂ ಆಕರವಾಗಿದ್ದರೂ, ನಾಗವರ್ಮನ ಪದ್ಯ ರಚನೆಯಲ್ಲಿನ ಭಾವಾಭಿವ್ಯಕ್ತಿಯ ವಿನ್ಯಾಸ, ಪದಪುಂಜಗಳು ಕವಿರಾಜಮಾರ್ಗದ ಪದ್ಯವನ್ನು ಹೆಚ್ಚು ಹೋಲುವುವೆನಿಸುತ್ತದೆ.

ಇದೇ ರೀತಿಯಲ್ಲಿ 'ಏಕವ್ಯತಿರೇಕ'ಕ್ಕೆ ಕವಿರಾಜಮಾರ್ಗಕಾರ "ಶ್ರೀವನಿತಾಪ್ರಸವದಿನಾ ಲಾವಣ್ಯದಿನ್...."(೩-೪೦) ಎಂಬ ಕಂದಪದ್ಯ ಕಟ್ಟಿದ್ದರೆ, ಅದರ ಬೀಸುಬಳುಕುಗಳನ್ನೂ ಭಾವಸೌಕ್ಷ್ಮವನ್ನೂ ಕಾವ್ಯಾವಲೋಕನಕಾರ ವ್ಯತಿರೇಕೋದಾಹರಣೆಗೆ "ಗಂಭೀರ ಮಮಳಲಕ್ಷ್ಮೀಸಂಭವಪದಂ...." (೩-೬೪೩) ಎಂಬುದರಲ್ಲಿ ಬಳಸಿಕೊಂಡಿದ್ದಾನೆ. ಎರಡಕ್ಕೂ ಮೂಲ 'ಕಾವ್ಯಾದರ್ಶ'ದ"ತ್ವಂ ಸಮುದ್ರಶ್ಚ ದುರ್ವಾರೌ ಮಹಾಸತ್ತ್ವೌ...." (೨-೧೮೫) ಎಂಬ ಶ್ಲೋಕ. ಆದರೆ ನಾಗವರ್ಮನ ಪದ್ಯರಚನಾ ಸಂವಿಧಾನ 'ಕವಿರಾಜ ಮಾರ್ಗ'ದ ಪದ್ಯವನ್ನು ಹೋಲುತ್ತದೆ. ಹಾಗೆಯೇ 'ಸಮಯೋಗ'ಕ್ಕೆ ನಾಗವರ್ಮ ತನ್ನ 'ಕಾವ್ಯಾವಲೋಕನ'ದಲ್ಲಿ "ಮೃಗನಯನೆಯರೊಲವುಂ ಬಳ್ಳಿಗೊಂಡು ತಳ್ತಡರೆ...." (೩-೭೨೦) ಎಂದು ಕೊಟ್ಟಿರುವ ಲಕ್ಷ್ಯ, 'ಕವಿರಾಜಮಾರ್ಗ'ದ "ಜಲದದ ನೆಬಿಲುಂ ಪರೆಪುಂ ವಿಲಾಸಮುಂ...." ಎಂಬುದನ್ನು ನೆನಪಿಗೆ ತರುತ್ತದೆ. ಇವೆರಡಕ್ಕೂ ದಂಡಿಯ "ಸಂಗತಾನಿ ಮೃಗಾಕ್ಷೀಣಾಂ...." ಎಂಬುದು ಮೂಲವಾಗಿದ್ದರೂ ನಾಗವರ್ಮನ ಪದ್ಯದ ಭಾವದ ಬೀಸು 'ಕವಿರಾಜಮಾರ್ಗ'ದ ಪದ್ಯವನ್ನು ಹೆಚ್ಚು ಹೋಲುತ್ತದೆ. ಗಾಢವಸ್ತು ಸಾಮ್ಯ ಹಾಗೂ ಕೆಲಮಟ್ಟಿಗಾದರೂ ಉಕ್ತಿಸಾಮ್ಯಗಳಿಂದ ಈ ಉದಾಹರಣೆಗಳು 'ಕವಿರಾಜಮಾರ್ಗ' 'ಕಾವ್ಯಾವಲೋಕನ'ಗಳನ್ನು ಹತ್ತಿರಕ್ಕೆ ತರುತ್ತದೆ; ಮೊದಲನೆಯದರ ಪ್ರಭಾವ ಎರಡನೆಯದರ ಮೇಲೆ ಆಗಿರುವ ಸಾಧ್ಯತೆಗಳನ್ನು ಇವು ಹೊಳೆಯಿಸಬಲ್ಲ ವಾಗಿವೆ.

ಆ (i) ಪರ್ಯಾಯೋಕ್ತಾಲಂಕಾರಕ್ಕೆ ಮಾರ್ಗಕಾರನು ಕೊಡುವ ಉದಾಹರಣೆ :

ನೀಮಿರ್ವರುಮನ್ನೆಗಮಿಂ
ತೀ ಮಾಚಿಕ್ಕೆಯೊಳಿನಿಸು ಪೊಲ್ತು ನುಡಿಯುತ್ತಿರಿಮಾ
ನಾಮೋದಕುಸುಮಸಮಿತಿಯ
ನಾಮರಗಳೊಳಾಯ್ದು ಕೊಯ್ದು ಮಿಲ್ಲಿಗೆ ಬರ್ಪೆಂ ॥ (೩-೧೩೨)

ಈ ಭಾವದ-ನಾದವನ್ನೇ ನಿನದಿಸುವ, ಮೇಲಿನ ಪದಪ್ರಯೋಗಗಳನ್ನು ತುಸುಮಟ್ಟಿಗೆ ನೆನಪಿಸುವ ಕಾವ್ಯಾವಲೋಕನದ ಪದ್ಯವನ್ನಿಲ್ಲಿ ಉದ್ಧರಿಸಬಹುದು :

ಬನದೊಳಗೆ ಪೋಗಿ ಪೊಸಪೂ
ವಿನ ಗೊಂಚಲನಕ್ಕ ನಿನಗೆ ತಂದಪ್ಪೆಂ ನೀ
ನಿತೊಂದು ಬೇಗಮಂ ನಿ
ನ್ನಿನಿಯನ ಪಕ್ಕದೊಳಿರೆಂದು ಸಖಿ ತೊಲಗುವುದುಂ ॥ (೩-೬೨)

(ii) ಈ ರೀತಿಯ ಮತ್ತೊಂದು ಉದಾಹರಣೆಯನ್ನು ಲಕ್ಷಿಸುವುದಾದರೆ, ನೇಯಾರ್ಥ ದೋಷವಿವೇಚನೆಯಲ್ಲಿ ಮಾರ್ಗಕಾರ ಕೊಡುವ ಲಕ್ಷ್ಯ:

ಪರೆದಿರೆ ರಾಗಂ ತನ್ನೊ
ಳ್ನಿರಂತರಂ ಗಗನ ವಿವರಮೊಪ್ಪಿತ್ತಾದಂ
ವರ ಪಾರಿಜಾತ ಕುಸುಮೋ
ತ್ಕರ ಸಾಂದ್ರ ಪರಾಗ ನಿಸರ ಪಿಂಜರಿತಂಬೋಲ್ ॥ (೧-೧೦೨)

ನಾಗವರ್ಮನು ಕೊಡುವ ಲಕ್ಷ್ಯ:

ಅರಕ್ತಮಾಗಿ ನೇಱಿಲ
ದೋರೆಯನನುಕರಿಪುದಾದುದಾಗಸಮನೆ ಸಂ
ಧ್ಯಾರುಚಿಯಿನಕ್ಕುಮೆಂದವ
ಧಾರಿಸಿ ನೆಱೆಯಱಿದುಕೊಳ್ವುದಿದು ನೇಯಾರ್ಥಂ ॥ (೩-೫೦೮)

'ಕವಿರಾಜಮಾರ್ಗ'ದ ಪದ್ಯದ ಆಕರ ಎಲ್ಲಿಯದೋ ತಿಳಿಯದು. ಆದರೆ ನಾಗವರ್ಮನ ಪದ್ಯ 'ಕವಿರಾಜಮಾರ್ಗ'ದಿಂದಲೇ ಇಂಬು ಪಡೆದಿರಬೇಕೆಂದು ಆಕಾಶದ ಬಣ್ಣವನ್ನು ವರ್ಣನೆಗೆ ವಿಷಯವಾಗಿ ಇಬ್ಬರೂ ತಂದಿರುವುದರಿಂದ ಊಹಿಸಬಹುದಾಗಿದೆ.

ಇದೇ ರೀತಿಯಲ್ಲಿ ಕವಿರಾಜಮಾರ್ಗದ ಇನ್ನೂ ಹಲವಾರು ಪದ್ಯಗಳು ಅಲ್ಲಿನದೇ ಆಶಯ, ಉಕ್ತಿವಿನ್ಯಾಸಗಳನ್ನು ತುಂಬಿಕೊಂಡಿರುವುದು ನಾಗವರ್ಮನ 'ಕಾವ್ಯಾವಲೋಕನ'ದಲ್ಲಿ ಕಂಡುಬರುತ್ತವೆ. ಅವುಗಳ ಮಾತಿನ ವೇಷ ಬೇರೆ, ಭಾವಶರೀರ ಒಂದೇ ಎನ್ನುವಂತಿವೆ.[275]

ಇಷ್ಟಲ್ಲದೆ ಪ್ರತಿಪಾದ್ಯ ವಿಷಯ, ಅದರ ನಿರೂಪಣೆಗೆ ಆಯ್ದುಕೊಂಡ ಛಂದಸ್ಸು, ಭಾಷಾಶೈಲಿಗಳು ಈ ದೃಷ್ಟಿಯಿಂದ ತೋರಿಸಬಹುದಾದ ಹಲವು ಸಾಮ್ಯಗಳಲ್ಲಿ ಎರಡೂ ಅಲಂಕಾರ ಗ್ರಂಥಗಳಲ್ಲಿಯೂ ನಿರೂಪಿತವಾಗಿರುವ ಚಿತ್ರಕವಿತ್ವದ ಲಕ್ಷಣಭಾಗ ಪ್ರಭಾವದ ದೃಷ್ಟಿಯಿಂದ ಒಂದು ಸಮರ್ಥವಾದ ಉದಾಹರಣೆಯಾಗಿದೆ. ಈ ಸಂದರ್ಭವನ್ನು ವಿವರವಾಗಿ ಪರಿಶೀಲಿಸಿರುವ ಟಿ.ವಿ. ವೆಂಕಟಾಚಲಶಾಸ್ತ್ರಿಗಳು "ಕವಿರಾಜಮಾರ್ಗದ ಸೂತ್ರೋದಾಹರಣೆಗಳ ಛಾಯಾನುಸರಣೆಗಳು ಕಾವ್ಯಾವಲೋಕನದಲ್ಲಿ ಅಲ್ಲಲ್ಲಿ ಕಾಣುತ್ತಿರುವುದರಿಂದ . ಶ್ಲೋಕಪದ್ಯಗಳ ಈ ಭಾಗದಲ್ಲಿಯೂ ಆ ಗ್ರಂಥದ ಪ್ರಭಾವ ಈ ಗ್ರಂಥದ ಮೇಲೆ ಆಗಿರಬಹುದು"[276]—ಎಂದು ಹೇಳುವುದು ಗಮನಾರ್ಹವಾಗಿದೆ.

ಈ ಮೇಲಿನ ವಿವೇಚನೆಯಿಂದ ನಾಗವರ್ಮ ಕವಿರಾಜಮಾರ್ಗದಿಂದ ತಕ್ಕಮಟ್ಟಿಗೆ ಪ್ರಭಾವಿತನಾಗಿದ್ದಾನೆ ಎಂದು ಹೇಳಬಹುದು.

## ಕಾವ್ಯಗಳಲ್ಲಿಯ ಪದ್ಯಗಳ ಮೇಲೆ ಪ್ರಭಾವ

'ಕವಿರಾಜಮಾರ್ಗ' ಪ್ರಥಮತಃ ಲಕ್ಷಣ ಗ್ರಂಥವಾದುದರಿಂದ ಉತ್ತರಕಾಲೀನ ಕನ್ನಡ ಸಾಹಿತ್ಯದ ಕಾವ್ಯಕೃತಿಗಳ ಮೇಲೆ ಅದರ ಪ್ರಭಾವವನ್ನು ಗುರುತಿಸುವುದು ಕಷ್ಟವಾದ ಕೆಲಸವೆನ್ನಬಹುದು. ಆದರೆ ತೀರ ವಿರಳವಾಗಿ 'ಕವಿರಾಜಮಾರ್ಗ'ದ ಬಿಡಿಪದ್ಯಗಳ ಛಾಯೆ ಕೆಲವೊಂದು ಕಾವ್ಯಗಳ ಪದ್ಯಗಳಲ್ಲಿ ಅಸ್ಪಷ್ಟವಾಗಿ ಕಂಡುಬಂದಿರುವಂತೆ ತೋರುತ್ತದೆ. ಅದನ್ನು ಈಗ ನೋಡಬಹುದು:

'ಕವಿರಾಜಮಾರ್ಗ'ದ ಸರಸ್ವತಿಸ್ತುತಿಯ ಪದ್ಯವಾದ

ಶ್ರೀವಿಶದವರ್ಣೆ ಮಧುರಾ
ರಾವೋಚಿತೆ ಚತುರ ರುಚಿರ ಪದರಚನೆ ಚಿರಂ
ದೇವಿ ಸರಸ್ವತಿ ಹಂಸೀ
ಭಾವದೆ ನೆಲೆಗೊಳ್ಗೆ ಕೂರ್ತು ಮನ್ಮಾನಸದೊಳ್ ॥ (೧–೩)

ಎಂಬುದರ ಭಾವ, ಪಂಪಕವಿಯ 'ವಿಕ್ರಮಾರ್ಜುನ ವಿಜಯ'ದ

ಮಾನಸದೊಳ್ ಹಂಸೆಯವೋಲ್
ಮಾನಸವಾಗ್ವನಿತೆ ತನ್ನ ಮಾನಸದೊಳಿವಂ
ಮಾನಸನೆಂದಗಲದೆ ನಿಲೆ
ಮಾನಸನಾದಂ ಸರಸ್ವತೀಕಳಹಂಸಂ ॥ (೩–೩೬)

ಎಂಬ ಪದ್ಯದ ಭಾವದೊಡನೆ ಕೆಲಮಟ್ಟಿಗೆ ಹೋಲುವಂತೆ ತೋರುತ್ತದೆ. ಹಂಸೆಯು ಮಾನಸ ಸರಸ್ಸಿನಲ್ಲಿ ನೆಲಸುವ ಹಾಗೆ, ಸರಸ್ವತಿಯು ತಮ್ಮ ಮಾನಸದಲ್ಲಿ (ಮಾನಸವೆಂಬ ಸರಸ್ಸಿನಲ್ಲಿ) ಆ ಹಂಸೆಯ ಭಾವದಿಂದ ನೆಲೆಸುವುದಾಗಲಿ ಎಂಬುದು ಕವಿರಾಜಮಾರ್ಗಕಾರ ಮತ್ತು ಪಂಪ ಇಬ್ಬರಿಗೂ ಸಮಾನವಾದ ಆಶಯವಾಗಿದೆ. ಇಲ್ಲಿ ದಂಡಿಯ "ಚತುರ್ಮುಖ ಮುಖಾಂಭೋಜವನ...." (೧–೧) ಎಂಬ ಶ್ಲೋಕವನ್ನು ಕವಿರಾಜಮಾರ್ಗಕಾರ ಅನುಸರಿಸಿರುವುದು ಸಹಜವೇ ಆದರೂ, ಪಂಪನಿಗೆ 'ಕಾವ್ಯಾದರ್ಶ' ಹಾಗೂ 'ಕವಿರಾಜಮಾರ್ಗ'ಗಳಲ್ಲಿ ಯಾವುದು ಆಕರ ಎಂಬುದನ್ನು ನಿಶ್ಚಯಿಸುವುದು ಕಷ್ಟ. ಆತ ದಂಡಿಯಿಂದ ಪ್ರೇರಿತನಾಗಿರುವ ಸಂಭವ ಹೆಚ್ಚು; ಆದರೆ 'ಕವಿರಾಜಮಾರ್ಗ'ದ ಪದ್ಯವನ್ನೂ ಆತ ಬಲ್ಲವನಾಗಿರಬಹುದು.

'ಆದಿಪುರಾಣ'ದ ವಿಜಯಾರ್ಧ ಪರ್ವತದ ವರ್ಣನಾಸಂದರ್ಭದಲ್ಲಿ ಬರುವ "ಧ್ವನಿಯೆನಿಸಿದಳಂಕಾರಧ್ವನಿಯೆಸೆವಿನಂ...." (೯–೧೧೯) ಎಂಬ ಪದ್ಯವು ಕವಿರಾಜಮಾರ್ಗದ "ಧ್ವನಿಯೆಂಬುದಳಂಕಾರಂ...." (೩–೨೦೮) ಎಂಬ ಪ್ರಸಿದ್ಧವಾದ ಪದ್ಯವನ್ನು ನೆನಪಿಗೆ ತರುತ್ತದೆ. ಈ ಎರಡು ಪದ್ಯಗಳ ನಡುವೆ ದಟ್ಟವಾದ ಸಾದೃಶ್ಯಗಳೇನೂ ಕಾಣುವುದಿಲ್ಲ. ಆದರೆ ಈ ಸಂದರ್ಭದಲ್ಲಿ ತೀ. ನಂ. ಶ್ರೀ ಅವರ ಈ ಹೇಳಿಕೆ ಗಮನಿಸತಕ್ಕದ್ದಾಗಿದೆ: "....ಧ್ವನಿಪ್ರಕಾರಗಳಲ್ಲಿ ಒಂದಾದ 'ಅಲಂಕಾರ ಧ್ವನಿ'ಯ ಪ್ರತೀತಿ ಇಲ್ಲಿಯ ಉಕ್ತಿಬಲ

ದಿಂದ ಸಹಜವಾಗಿ ನಮಗೆ ಉಂಟಾಗುತ್ತದೆ. ಪಂಪನ ಮನಸ್ಸಿನಲ್ಲಿ ಈ ಪಾರಿಭಾಷಿಕ ಶಬ್ದವೂ ಇದ್ದಿತೆ? ಇಲ್ಲವೆ "ಧ್ವನಿಯೆಂಬುದಳಂಕಾರಂ ಧ್ವನಿಯಿಸುಗುಂ ಶಬ್ದದಿಂದೆ" ಎಂದು 'ಕವಿರಾಜಮಾರ್ಗ'ದಲ್ಲಿ ಉಕ್ತವಾಗಿರುವುದನ್ನು ನೆನಪಿನಲ್ಲಿಟ್ಟುಕೊಂಡು "ಧ್ವನಿಯೆನಿಸಿದಲಂಕಾರಧ್ವನಿಯಿಸೆವಿನಂ" ಎಂಬುದರಿಂದ ಕಾವ್ಯಾಲಂಕಾರ ದೇಹಾಲಂಕಾರಗಳೆರಡನ್ನೂ ಒಟ್ಟಿಗೆ ಪ್ರತೀತಿಗೆ ತರುವುದು ಮಾತ್ರವೇ ಪಂಪನ ತಾತ್ಪರ್ಯವಾಗಿದ್ದಿತೆ? ಇದನ್ನು ನಿರ್ಣಯಿಸುವುದು ಸುಲಭವಲ್ಲ."[277] ಈ ಸಂದರ್ಭದಲ್ಲಿ ಪ್ರಭಾವದ ದೃಷ್ಟಿಯಿಂದ ಹೆಚ್ಚು ವಿವೇಚನೆಗೆ ಅವಕಾಶವಿಲ್ಲವೆನ್ನಬಹುದು.

ಪೊನ್ನನ (ಸು. ೯೫೦) 'ಶಾಂತಿಪುರಾಣ'ದ "ಪಱಿಗಾಂಪರ ನುಡಿ ಮುತ್ತುಂ। ಮೆಱಿಸುಂಗೋದಂದಕ್ಕೆ...." ಮತ್ತು "ಸಾರತರೋಕ್ತಿಗೆ ನೆಲ್ಲುಂ। ಮೋರುಂಗೋದಂತೆ" (೧೦-೧೮೧, ೧೮೨)—ಎಂಬ ಪದ್ಯಗಳು ಪದಶಃ ಅಲ್ಲದಿದ್ದರೂ ಸ್ಥೂಲವಾಗಿ 'ಕವಿರಾಜಮಾರ್ಗ'ದ (ಸು. ೮೫೦) "ಗಱಿಯಿಸಿದರ್ಥಂ ಸಲೆ ಪಾಂಗಱಿಯದೆಯುಂ.... ಮುತ್ತುಂ। ಮೆಱಿಸುಂಗೋದಂತಿಕ್ಕುಂ...." ಮತ್ತು "ಇಲ್ಲಿಗಿದು ತಕ್ಕುದಿಲ್ಲಿಗೆ। ಪೊಲ್ಲದಿದೆಂದಱಿದು....। ನೆಲ್ಲುಂ ಮೊಸರುಂಗುಡಿದಂ। ತಲ್ಲದೆ...." (೨-೪, ೫), ಎಂಬ ಪದ್ಯಗಳನ್ನು ಹೋಲುತ್ತವೆ. ಇವು 'ಕವಿರಾಜಮಾರ್ಗ'ದ ಎರಡು ಪದ್ಯಗಳ ಅನುಕ್ರಮದಲ್ಲಿಯೇ ಬರುವುದು ಗಮನಾರ್ಹ. ಇವುಗಳ ಬಗ್ಗೆ ಎಚ್. ಶೇಷಯ್ಯಂಗಾರ್ ಮತ್ತು ಎ. ವೆಂಕಟರಾವ್ ಅವರು ಈ ರೀತಿ ಅಭಿಪ್ರಾಯ ಪಟ್ಟಿದ್ದಾರೆ.[278] "ಉಭಯಕವಿ ಚಕ್ರವರ್ತಿಯೆನಿಸಿದ ಪೊನ್ನನು ತನ್ನ ಶಾಂತಿಪುರಾಣದಲ್ಲಿ ಈ ಗ್ರಂಥದ (ಕವಿರಾಜಮಾರ್ಗದ) ಶಬ್ದಾರ್ಥಗಳ ಆನುರೂಪ್ಯವನ್ನು ನಿದರ್ಶನಗಳೊಡನೆ ವಿವರಿಸುವ ಎರಡು ಪದ್ಯಗಳ ಭಾವವನ್ನು ಸಂಪೂರ್ಣವಾಗಿ ಅನುವದಿಸಿ ಹೇಳಿರುವುದನ್ನು ನೋಡಿದರೆ ಈ ಗ್ರಂಥಕರ್ತೃವು (ಕವಿರಾಜಮಾರ್ಗಕಾರ) ಕರ್ಣಾಟಕ ಕವಿಸಾರ್ವಭೌಮಂಗೆ ಎಷ್ಟರ ಮಟ್ಟಿಗೆ ಪ್ರಮಾಣಾರ್ಹನಾಗಿದ್ದಾನೆಂಬುದನ್ನು ನಾವು ಇಲ್ಲಿ ಕಂಠೋಕ್ತವಾಗಿ ಹೇಳಬೇಕಾದುದಿಲ್ಲ." ಆದರೆ ಶಾಂತಿಪುರಾಣದ ಪದ್ಯಗಳು ಕವಿರಾಜಮಾರ್ಗದ ಪದ್ಯಗಳ ಭಾವಾನುವಾದ ಎನ್ನುವುದು ಕಷ್ಟ. ಪೊನ್ನ ತನ್ನ ಪದ್ಯ ರಚನೆಗೆ ಅಲ್ಲಿಂದ ಪ್ರೇರಣೆ ಪಡೆದಿರುವ ಸಾಧ್ಯತೆಯನ್ನು ಇಲ್ಲಿಯ ನಾಣ್ಣುಡಿಗಳ ಪ್ರಯೋಗಗಳು ಸ್ವಲ್ಪಮಟ್ಟಿಗೆ ಸೂಚಿಸುತ್ತವೆ ಎನ್ನಬಹುದು.

ರನ್ನ (ಸು. ೯೯೦) 'ಕವಿರಾಜಮಾರ್ಗ'ದಿಂದ ಪ್ರಭಾವಿತನಾಗಿದ್ದಾನೆ ಎಂದು ಹೇಳಲು ಸ್ಪಷ್ಟ ಸೂಚನೆಗಳಾವುವೂ ದೊರೆಯದಿದ್ದರೂ, ಅವನು 'ಕವಿರಾಜಮಾರ್ಗ'ವನ್ನು ಗಮನಿಸಿರಲು ಸಾಧ್ಯವೆಂಬುದಕ್ಕೆ ಆಧಾರವೊಂದು ದೊರೆಯುತ್ತದೆ. 'ಗದಾಯುದ್ಧ'ದ ಪ್ರಥಮಾಶ್ವಾಸದಲ್ಲಿ ಹೇಳುವ

> ಪದಿನಾಱಿಲ್ಲವಲಂಕ್ರಿಯಾರಚನೆ ಮೂವತ್ತಾಱು ನೇರ್ಪಟ್ಟುವೊಂ
> ದಿದ ಶೃಂಗಾರಮದಲ್ಲಮೊಂದೆ ರಸಮೊಂಬತ್ತೆಯ್ದೊಡಂಬಟ್ಟುವು ॥ (೧-೭)

ಎನ್ನುವಲ್ಲಿ ಅಲಂಕಾರಗಳು ೩೬ ಎಂದೂ ರಸಗಳು ೯ ಎಂದೂ ಸ್ಪಷ್ಟೀಕರಿಸಿದ್ದಾನೆ. ಈ

ಸಂದರ್ಭದಲ್ಲಿ ಎಂ. ವಿ. ಸೀ. ಅವರು ಹೇಳುವ[279] "ರನ್ನನಿಗೆ ದಂಡಿ ಭಾಮಹರ ಗ್ರಂಥಗಳ ಪರಿಚಯವಿದ್ದಿರಬಹುದಾದರೂ, ರನ್ನನು ಹೇಳುವ ಅಲಂಕಾರಗಳ ಹಾಗೂ ರಸಗಳ ಸಂಖ್ಯೆಗೆ ಅವುಗಳಲ್ಲಿ ಸಮರ್ಥನೆ ದೊರೆಯುವುದಿಲ್ಲ. (ದಂಡಿ ಹೇಳಿರುವುದು ೩೫ ಅರ್ಥಾಲಂಕಾರಗಳನ್ನು ಮಾತ್ರ.) ಕವಿರಾಜಮಾರ್ಗದಲ್ಲಿ ನವರಸಗಳ ಪ್ರಸ್ತಾಪವೂ ೩೬ ಅರ್ಥಾಲಂಕಾರಗಳ ವಿವರಣೆಯೂ ಸ್ಪಷ್ಟವಾಗಿ ಬಂದಿವೆ. (ರನ್ನನು ಶಬ್ದಾಲಂಕಾರಗಳನ್ನು ತೆಗೆದುಕೊಂಡಿಲ್ಲವೆಂದು ಭಾವಿಸಬೇಕು.) ಆದ್ದರಿಂದ, ರನ್ನನು 'ಕವಿರಾಜಮಾರ್ಗ'ದಲ್ಲಿ ಹೇಳಿರುವ ಅಲಂಕಾರಗಳ ಸಂಖ್ಯೆಯನ್ನು ನೆನೆದೇ ಈ ಮಾತು ಹೇಳಿದ್ದಾನೆಂದು ತೋರುತ್ತದೆ" ಎಂಬ ಸಾಧ್ಯತೆಯನ್ನು ಒಪ್ಪಬಹುದು.

ಮಾರ್ಗಕಾರನ ಪ್ರಸಿದ್ಧ ಪದ್ಯವಾದ

ಕಾವೇರಿಯಿಂದಮಾ ಗೋ
ದಾವರಿವರಮಿರ್ದ್ದ ನಾಡದಾ ಕನ್ನಡದೊಳ್
ಭಾವಿಸಿದ ಜನಪದಂ
ವಸುಧಾವಲಯ ವಿಲೀನ ವಿಶದ ವಿಷಯ ವಿಶೇಷಂ ॥ (೧–೩೬)

ಎಂಬುದರ ಭಾವ ಹಾಗೂ ಪದಸಮುದಾಯವನ್ನು ಪ್ರತಿಧ್ವನಿಸುವ ನಂಜುಂಡನ 'ರಾಮನಾಥ ಚರಿತೆ'ಯ ಪದ್ಯ ಹೀಗಿದೆ :

ಕಾವೇರಿಯಿಂದ ಗೋದಾವರಿವರೆಗಮಿ
ರ್ದಾ ವಸುಧಾತಳವಳಯ
ಭಾವಿಸೆ ಕರ್ಣಾಟಕ ಜನಪದವದ
ನಾವನೊಲಿದು ಬಣ್ಣಿಸುವನು ॥ (೧–೨–೨೧)

ಎರಡರಲ್ಲಿಯೂ ಕಾಣಬರುವ ಸ್ಪಷ್ಟಸಾದೃಶ್ಯವನ್ನು ಗಮನಿಸಿದರೆ ನಂಜುಂಡನು 'ಕವಿರಾಜಮಾರ್ಗ'ದ ಪದ್ಯವನ್ನು ನೆನೆದೇ ತನ್ನ ಪದ್ಯವನ್ನು ಕಟ್ಟಿರಬೇಕು ಎಂದು ಹೇಳಬಹುದು.

ಇಡಿಯಾಗಿ ಈ ಸಮೀಕ್ಷೆಯ ಫಲಿತವನ್ನು ಹೀಗೆ ಹೇಳಬಹುದು : ಕವಿರಾಜಮಾರ್ಗ ಕನ್ನಡ ಸಾಹಿತ್ಯದ ಒಂದು ಗಣ್ಯಕೃತಿಯಾಗಿ, ಲಕ್ಷಣಗ್ರಂಥವಾಗಿ, ಉತ್ತರಕಾಲೀನ ಕನ್ನಡ ಸಾಹಿತ್ಯದ ವ್ಯಾಕರಣ, ಛಂದಸ್ಸು, ಅಲಂಕಾರ ವಿಷಯಗಳನ್ನು ಕುರಿತ ಲಕ್ಷಣ ಗ್ರಂಥಗಳ ಮೇಲೆ ಹಾಗೂ ಕೆಲವು ಕೃತಿಗಳಲ್ಲಿನ ಪದ್ಯಗಳ ಮೇಲೆ ತನ್ನ ಪ್ರಭಾವವನ್ನು ಅಲ್ಪಪ್ರಮಾಣದಲ್ಲಾದರೂ ಬೀರಿರುವುದು ನಿಶ್ಚಯ. ಈ ಗ್ರಂಥದ ಉಪಯುಕ್ತತೆಯನ್ನು ಬಲ್ಲವರಾದ ಶಾಸ್ತ್ರಪಕ್ಷಪಾತಿಗಳಾದ ಕೆಲವರು ತಮ್ಮ ಪ್ರಾಚೀನ ಲಕ್ಷಣಗ್ರಂಥಗಳ ವ್ಯಾಖ್ಯಾನಗಳಲ್ಲಿಯೂ ಮೂಲಗ್ರಂಥಗಳ ಹಸ್ತಲಿಖಿತ ಪ್ರತಿಗಳಲ್ಲಿಯೂ ಅಲ್ಲಿನ ಕೆಲವು ಪದ್ಯಗಳನ್ನು ಹೆಕ್ಕಿಕೊಂಡು ಯಥೋಚಿತವಾಗಿ ಬಳಸಿದ್ದಾರೆ; ಅದರ ಜನಪ್ರಿಯತೆಯನ್ನೂ ಪ್ರಾಮಾಣ್ಯವನ್ನೂ ಸಹಜವಾಗಿಯೇ ರುಜುವಾತು ಮಾಡಿದ್ದಾರೆ. 'ಕವಿರಾಜಮಾರ್ಗ'ದ

ಅಂಥ ಪದ್ಯಗಳು ಹಿಂಡನಗಲಿದ ಗಜದಂತೆ ಆಯಾ ಕೃತಿಗಳೊಳಗೆ ಸೇರಿದ್ದು ಗ್ರಂಥದ ಮಹತ್ತ್ವವನ್ನು ಶ್ರುತಪಡಿಸುತ್ತಿವೆ.

## ಸಾಹಿತ್ಯಮೌಲ್ಯ

'ಕವಿರಾಜಮಾರ್ಗ'ವು ಶಾಸ್ತ್ರಗ್ರಂಥವಾಗಿದ್ದರೂ ಲೇಖಕನ ಕವಿಹೃದಯದಿಂದಾಗಿ ಅದರ ಸಾಹಿತ್ಯಮೌಲ್ಯವು ಸಹೃದಯರ ಗಮನ ಸೆಳೆಯಲು ಸಾಧ್ಯವಾಗಿದೆ. ಅನೇಕರು ಲೇಖಕನ ಈ ಗುಣವನ್ನು ಕೊಂಡಾಡಿದ್ದಾರೆ. "ಶಾಸ್ತ್ರಕೃತಿಯಾದರೂ ಅದರಲ್ಲಿಯ ಸ್ವತಂತ್ರ ಭಾಗಗಳನ್ನು ಕಣ್ಣಿಟ್ಟು ನೋಡಿದರೆ ಕವಿತ್ವದಂಶಗಳು ಅದರಲ್ಲಿ ಮಿನುಗಿ ಮನ ಸೆಳೆಯುತ್ತವೆ. ಗ್ರಂಥದ ತುಂಬ ಸಮುಚಿತವಾದ ಹೋಲಿಕೆಗಳೂ ಸುಂದರ ಚಿತ್ರಗಳೂ ತೆರೆತೆರೆಯಾಗಿ ಬಂದು ಕವಿರಾಜಮಾರ್ಗಕಾರನು ಮೇಲಾದ ಕವಿ ಎಂಬುದನ್ನು ತಿಳಿಸುತ್ತವೆ" ಎಂದು ರಂ. ಶ್ರೀ. ಮುಗಳಿಯವರು ಹೇಳುತ್ತಾರೆ.[೨೮೦] "ಒಟ್ಟಿನಲ್ಲಿ 'ಕವಿರಾಜಮಾರ್ಗ'ದ ಬರೆವಣಿಗೆ ಲಲಿತವಾಗಿದೆ" ಎಂಬುದು ತೀ. ನಂ. ಶ್ರೀಕಂಠಯ್ಯನವರ ತೀರ್ಪು.[೨೮೧] "ಇಲ್ಲಿಯ ಕಂದಗಳು ಸುಂದರವಾಗಿವೆ. ಬಂಧದಲ್ಲಿ ದೇಸಿಯ ಸೊಬಗು ಎಲ್ಲೂ ಮಾಸುವುದಿಲ್ಲ. ಅನುವಾದಗಳಲ್ಲಿಯೂ ಕನ್ನಡದ ಸಾಹಿತ್ಯ ಗುಣ ಕಡಿಮೆಯಾಗುವುದಿಲ್ಲ" ಎನ್ನುವುದು ಕೆ. ಕೃಷ್ಣಮೂರ್ತಿಗಳ ಅಭಿಪ್ರಾಯ.[೨೮೨] ಎಂ. ವಿ. ಸೀತಾರಾಮಯ್ಯನವರ ದೃಷ್ಟಿಯಲ್ಲಿ "ಮೂಲ ಶ್ಲೋಕದ ಕಲ್ಪನೆಗಳಿಗೆ ತನ್ನವನ್ನು ಬೆರಸಿದ್ದಾನೆ, ಕೆಲವು ಕಡೆ ಕಳೆಯೇರಿಸಿದ್ದಾನೆ. ಪ್ರತಿ ಪ್ರಕರಣದಲ್ಲಿಯೂ ಸ್ವಂತ ಲಕ್ಷ್ಯಪದ್ಯಗಳಿಗೆ ಕೊರತೆಯಿಲ್ಲ. ಲಕ್ಷಣಪದ್ಯವಾಗಲಿ ಲಕ್ಷ್ಯಪದ್ಯವಾಗಲಿ, ಅನುವಾದಮಾಡಿರುವ ಸಂದರ್ಭಗಳಲ್ಲಿ ಕೂಡ ಅವನ್ನು ಅನುವಾದ ಎಂದು ಹೇಳಲಾಗದಂತೆ 'ಸ್ವಂತಿಕೆ'ಯನ್ನು ಮೆರೆದು, ಮುಂದಿನ ಅನುವಾದಕರಿಗೆ ಮೇಲ್ಪಂಕ್ತಿಯೆನಿಸಿದ್ದಾನೆ. ಅನಪೇಕ್ಷಣೀಯವೆಂದು ತೋರುವ ಸಂಸ್ಕೃತ ಭಾಷಾಪ್ರಾಚುರ್ಯ ಕೆಲವೆಡೆ....ಅವನ ಪಾಂಡಿತ್ಯಪ್ರವಣತೆಯನ್ನು ಸಾರುತ್ತಿದ್ದರೂ, ಮೆಲ್ಪುವೆತ್ತ ನುಡಿಗಳ ಅಚ್ಚಗನ್ನಡದ ಬರೆವಣಿಗೆ ಅವನಿಗೆ ಮೆಚ್ಚು....ಅಂಥ ಬರೆವಣಿಗೆ ಅನೇಕ ವೇಳೆ ಪಂಪನ ಶೈಲಿಯನ್ನು ನೆನಪಿಗೆ ತರುತ್ತದೆ."[೨೮೩] "ಶಾಸ್ತ್ರಜ್ಞನಾದ ಕವಿರಾಜಮಾರ್ಗಕಾರನ ಹೃದಯದಲ್ಲಿ ಒಬ್ಬ ರಸಿಕಕವಿ ಅಡಗಿರುವನೆನಿಸುತ್ತದೆ" ಎಂಬುದು ಎಂ. ಎಂ. ಕಲಬುರ್ಗಿ ಅವರ ಪ್ರಶಂಸೆ.[೨೮೪]

ಈ ಬಗೆಯ ಅಭಿಪ್ರಾಯಗಳು 'ಕವಿರಾಜಮಾರ್ಗ'ಕಾರನ ಬರೆವಣಿಗೆಯಲ್ಲಿ ಎದ್ದು ತೋರುವ ಸಾಹಿತ್ಯಿಕ ಗುಣವನ್ನು ಗುರುತಿಸುತ್ತವೆ. ಸ್ವಂತ ರಚನೆಗಳಲ್ಲಿ ಕಂಡುಬರುವ ಸ್ವೋಪಜ್ಞತೆಯನ್ನೂ ಅನುವಾದದಲ್ಲಿ ಅನುಸರಿಸಿರುವ ಆದರ್ಶಮಾರ್ಗವನ್ನೂ ಒಟ್ಟಿನಲ್ಲಿ ಶೈಲಿ ನಿರೂಪಣೆಗಳ ಪ್ರಾಸಾದಿಕತೆಯನ್ನೂ ಈ ಅಭಿಪ್ರಾಯಗಳು ಆದರಿಸಿವೆ. ಶಾಸ್ತ್ರಕಾರನೊಬ್ಬನ ಬರೆವಣಿಗೆಗೆ ಸಂದ ಇಂಥ ಮೆಚ್ಚುಗೆ ಪ್ರಶಂಸೆಗಳು ಅವನ ಶಕ್ತಿಯ ಮಹತ್ತ್ವವನ್ನು ತೋರುತ್ತವೆ. ಬಿ. ಎಂ. ಶ್ರೀಕಂಠಯ್ಯನವರೇನೋ "*Kavirajamarga*

is not a wonderful masterpiece in either matter or style" ಎಂದು ಹೇಳಿದ್ದುಂಟು.[285] ಈ ಹೇಳಿಕೆಯಲ್ಲಿ 'ಶ್ರೀ'ಯವರು ತಮ್ಮ ವಿಮರ್ಶನಪ್ರಜ್ಞೆಯನ್ನು ಸರಿಯಾಗಿ ತೋರಿಲ್ಲವೆಂದು ವಿಮರ್ಶಕರು ಟೀಕಿಸಿರುವುದೂ ಉಂಟು.[286] 'ಕವಿರಾಜ ಮಾರ್ಗ'ವನ್ನು ಅಥವಾ ಅದರಂಥ ಕೃತಿಯನ್ನು 'ಅದ್ಭುತ ಆಚಾರ್ಯಕೃತಿ'ಯಾಗಿರಬೇಕೆಂದು ನಿರೀಕ್ಷಿಸುವುದೇ ಸರಿಯಲ್ಲ. ಯಾವುದಕ್ಕೆ ಯಾವುದು ಸರಿಯಾದ ಮಾನದಂಡವೆಂಬು ದನ್ನು ನಿರ್ಧರಿಸಿಕೊಳ್ಳದಿದ್ದರೆ ಅಂಥ ವಿಮರ್ಶೆಯಿಂದ ಕೃತಿಗೆ ನ್ಯಾಯ ದೊರೆಯುವುದಿಲ್ಲ. ಬಿ. ಎಂ. ಶ್ರೀಯವರಿಂದ 'ಕವಿರಾಜಮಾರ್ಗ'ಕ್ಕೆ ಇಂಥ ಅನ್ಯಾಯವಾಗಿದೆಯೆಂದು ಅನಿಸುತ್ತದೆ. 'ಕವಿರಾಜಮಾರ್ಗ' ಈವರೆಗೆ ದೊರೆತ ಕನ್ನಡ ಗ್ರಂಥಗಳಲ್ಲೆಲ್ಲ ಮೊದಲನೆಯದಾಗಿರುವುದರಿಂದ ಸಹಜವಾಗಿಯೇ ಅದರ ಮಹತ್ತ್ವ ಹೆಚ್ಚಿನದಾಗಿದೆ. ಅದರಲ್ಲಿ ಹೆಚ್ಚಿನ ಗುಣಗಳನ್ನು ಅರಸುವುದರಲ್ಲಿ ಅನೇಕರು ಆಸಕ್ತರಾಗಿರುವುದೂ ತೃಪ್ತಿ ಪಡುವುದೂ ನಿರಾಶರಾಗುವುದೂ ಅಷ್ಟೇ ಸಹಜವಾಗಿದೆ. ಈ ಕೃತಿಗೆ ಅದರದೇ ಆದ ಸೀಮಿತಗಳಿವೆ. ಆ ಸೀಮಿತಗಳ ಚೌಕಟ್ಟಿನಲ್ಲಿಯೇ ಅದರ ರೂಪ ಸ್ವರೂಪಗಳನ್ನೂ ಗುಣ ಮಹತ್ತ್ವಗಳನ್ನೂ ನಿರ್ಧರಿಸುವುದು ಸೂಕ್ತ.

'ಕವಿರಾಜಮಾರ್ಗ' ಒಂದು ಶಾಸ್ತ್ರಗ್ರಂಥ; ಅರ್ಧದಷ್ಟು ಮಟ್ಟಿಗಾದರೂ ಅನುವಾದ ಗ್ರಂಥ. ಶಾಸ್ತ್ರದ ನಿರೂಪಣೆಯಲ್ಲಿ, ಅನುವಾದ ಕಾರ್ಯದ ನಿರ್ವಹಣೆಯಲ್ಲಿ ಅದರ ಸೊಗಸು ಯಶಸ್ಸುಗಳನ್ನು ಲಕ್ಷಿಸುವ ಯಾರೂ ನಿರಾಶರಾಗಬೇಕಾಗಿಲ್ಲ. ಒಂದು ಸಾಹಿತ್ಯದ ಎಲ್ಲ ಕೃತಿಗಳೂ ಅದ್ಭುತ ಆಚಾರ್ಯ ಕೃತಿಗಳೇ ಆಗಿರುವುದಿಲ್ಲ; ಆಗಬೇಕಾಗಿಲ್ಲ. ಸಮಗ್ರ ಸಾಹಿತ್ಯದ ದೃಷ್ಟಿಯಿಂದ ಉತ್ತಮವಾದ ಎಲ್ಲ ದರ್ಜೆಯ ಕೃತಿಗಳೂ ಮಹತ್ತ್ವ ಪಡೆದಿರು ತ್ತವೆಂಬುದನ್ನು ನಾವು ಮರೆಯಬಾರದು. ಇಂಥ ಕೃತಿಗಳ ಸಮೂಹದಿಂದಲೇ ಒಂದು ಸಾಹಿತ್ಯಕ್ಕೆ ಬೆಲೆ ಬರುತ್ತದೆ. 'ಕವಿರಾಜಮಾರ್ಗ' ಕನ್ನಡ ಸಾಹಿತ್ಯಕ್ಕೆ ಹೀಗೆ ಬೆಲೆ ತಂದ ಒಂದು ಗ್ರಂಥವಾಗಿದೆ. ಅದರಲ್ಲಿ ಸಮಾವೇಶಗೊಂಡಿರುವ ಅಲಂಕಾರ, ವ್ಯಾಕರಣ, ಚರಿತ್ರೆ, ಭೂಗೋಳ, ಸಮಾಜ ಮುಂತಾದ ವಿಷಯಗಳಿಂದಾಗಿ ಅದಕ್ಕೆ ಲಭಿಸಿರುವ ಮಹತ್ತ್ವ ಒಂದು ಪಾಲು; ಈ ವಿಷಯಗಳ ನಿರೂಪಣೆಯಲ್ಲಿ ವ್ಯಕ್ತಗೊಳ್ಳುವ ಸಾಹಿತ್ಯಾಂಶದ ಮಹತ್ತ್ವ ಇನ್ನೊಂದು ಪಾಲು. ಈ ಕೃತಿಯಲ್ಲಿ ವೈವಿಧ್ಯ ಸಾಹಿತ್ಯಗುಣ ಗಳನ್ನು ಸ್ಥೂಲವಾಗಿ ಪರಿಚಯಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

ಶಾಸ್ತ್ರವಿಷಯಗಳನ್ನು ಕುರಿತು ಬರೆಯುವ ಲೇಖಕ ಯಾವಾಗಲೂ ನಿರ್ದುಷ್ಟತೆ ಖಚಿತತೆಗಳ ಕಡೆಗೇ ಕಣ್ಣಿಡಬೇಕಾಗುತ್ತದೆ. ಎಷ್ಟೋ ಸಂದರ್ಭಗಳಲ್ಲಿ ಅವನ ಬರವಣಿಗೆ ನೀರಸವಾಗಿರಬಹುದು. ಅದರಲ್ಲಿ ಯಾವುದೇ ಕಾವ್ಯಾಂಶಗಳು ಕಾಣಿಸದೆ ಇರಬಹುದು. ಕೆಲವು ಬರೆಹಗಳಲ್ಲಿ ಓದುಗರನ್ನು ಆಕರ್ಷಿಸುವ ಗುಣಗಳೆಲ್ಲ ಇದ್ದರೂ, ಶಾಸ್ತ್ರವಿಷಯ ಗಳು ಸಮಾಧಾನಕರವಾಗಿ ನಿರೂಪಣೆಗೊಂಡಿರದ ಉದಾಹರಣೆಗಳೂ ದೊರೆಯುತ್ತವೆ. ಶಾಸ್ತ್ರೀಯವಾಗಿಯೂ ಆಕರ್ಷಕವಾಗಿಯೂ ಇರುವ ಬರವಣಿಗೆ ಅತ್ಯುತ್ತಮವಾದದ್ದು. ನಮ್ಮ ಹಳೆಯ ಸಾಹಿತ್ಯದಲ್ಲಿ 'ಕವಿರಾಜಮಾರ್ಗ' ಇಂಥ ಬರವಣಿಗೆಗೊಂದು ವಿರಳವಾದ

ಸಾಕ್ಷಿಯಾಗಿದೆ. ಶಾಸ್ತ್ರಗ್ರಂಥಗಳಿರಲಿ, ಎಷ್ಟೋ ಸಾಹಿತ್ಯಿಕ ಕೃತಿಗಳಲ್ಲಿಯೇ ಇಲ್ಲಿನ ಬರೆವಣಿಗೆಯ ಲಾಲಿತ್ಯ ಕಾಣಿಸುವುದಿಲ್ಲ. ತನ್ನ ಈ ಗುಣದಿಂದಾಗಿಯೂ 'ಕವಿರಾಜಮಾರ್ಗ' ತನಗಿಂತಲೂ ಹಿಂದೆ ಸಾಕಷ್ಟು ಸಾಹಿತ್ಯಕೃಷಿ ನಡೆದಿರುವುದನ್ನು ಸ್ಥಾಪಿಸುತ್ತದೆ.

'ಕವಿರಾಜಮಾರ್ಗ'ದ ಸಾಹಿತ್ಯಿಕ ಯಶಸ್ಸನ್ನು ಮಾರ್ಗಕಾರನ ಸ್ವಂತ ರಚನೆಯ ಆಧಾರದ ಮೇಲೆಯೇ ನಿರ್ಧರಿಸಬೇಕು. ಆದರೆ ಈ ಸ್ವಂತ ರಚನೆಗಳು ಯಾವುವೆಂಬುದನ್ನು ಹೆಕ್ಕಿ ತೆಗೆಯುವುದು ಮಾತ್ರ ಕಷ್ಟ. ಲಕ್ಷ್ಯಪದ್ಯಗಳು ಅವನ ಸ್ವಂತ ರಚನೆಗಳೆಂದು ಹೇಳಿದರೂ, ಹಾಗೆಂದು ಒಪ್ಪಿಕೊಳ್ಳುವುದು ಸುಲಭವಲ್ಲ. ಅವು ಅನ್ಯರಚನೆಗಳು ಏಕಿರಬಾರದೆಂಬುದು ಮುಖ್ಯ ಪ್ರಶ್ನೆಯಾಗಿ ನಿಲ್ಲುತ್ತದೆ. 'ಕವಿರಾಜಮಾರ್ಗ' ಶ್ರೀವಿಜಯಕೃತ ಎನ್ನುವುದು ಈಗ ಬಹುಮಟ್ಟಿಗೆ ಸ್ಥಾಪಿತ ವಿಷಯವಾಗಿದೆ. ಈಚೆಗೆ ದೊರೆತಿರುವ ಎರಡನೆಯ ನಾಗವರ್ಮನ 'ವರ್ಧಮಾನ ಪುರಾಣ'ದಲ್ಲಿನ ಉಲ್ಲೇಖವೊಂದರಿಂದ ಶ್ರೀವಿಜಯನು 'ರಘುವಂಶ ಮಹಾಪುರಾಣ'ವನ್ನು ರಚಿಸಿದ್ದನೆಂಬ ಸಂಗತಿ ತಿಳಿಯುತ್ತದೆ. ಆದರೆ ಈ ಇಬ್ಬರು ಶ್ರೀವಿಜಯರು ಅಭಿನ್ನರೆನ್ನಲು ಆಧಾರಗಳಿಲ್ಲ. 'ಕವಿರಾಜಮಾರ್ಗ'ದಲ್ಲಿ ಬರುವ ರಾಮಾಯಣಕ್ಕೆ ಸಂಬಂಧಿಸಿರುವ ಲಕ್ಷ್ಯಪದ್ಯಗಳು ಮಾರ್ಗಕಾರನವೇ ಎಂದು ಪ್ರತಿಪಾದಿಸಿದ ಎಂ. ವಿ. ಸೀತಾರಾಮಯ್ಯನವರು, ಇವು 'ರಘುವಂಶ ಮಹಾಪುರಾಣ'ದಿಂದಲೇ ತೆಗೆದವಿರಬಹುದೆಂದು ಊಹಿಸಿದ್ದಾರೆ.[೨೮೭] ಈ ರಾಮಾಯಣ ಪದ್ಯಗಳು ವಿಶೇಷ ಸಂದರ್ಭಕ್ಕಾಗಿ ರಚಿತವಾದ ಲಕ್ಷ್ಯಪದ್ಯಗಳು ಎನ್ನುವುದಕ್ಕಿಂತ ಕಾವ್ಯವೊಂದರಿಂದ ಆಯ್ದವು ಎಂಬುದರಲ್ಲಿ ಔಚಿತ್ಯವಿದೆ. ಏಕೆಂದರೆ ಈ ಪದ್ಯಗಳು ಸಾಮಾನ್ಯವಾಗಿ ಲಕ್ಷ್ಯಪದ್ಯಗಳಲ್ಲಿ ಕಾಣುವ ಮುಕ್ತಕ ರೂಪದವಾಗಿರದೆ, ಸಂದರ್ಭಬದ್ಧವಾದವಾಗಿವೆ. ಒಂದು ವೇಳೆ ಈ ಪದ್ಯಗಳು ಶ್ರೀವಿಜಯನವೇ ಎಂದು ಇಟ್ಟುಕೊಂಡರೂ, ಕಾವ್ಯವೊಂದರಿಂದ ಆಯ್ದವು ಎಂದು ಭಾವಿಸಿದರೂ ನಮಗೆ ಹೆಚ್ಚಿನ ಉಪಯೋಗವಾಗುವುದಿಲ್ಲ. ಕಾರಣ, ಇವುಗಳಲ್ಲಿ ಅಂಥ ಕಾವ್ಯಗುಣಗಳೇನೂ ಕಾಣಿಸುವುದಿಲ್ಲ. ಇವುಗಳಿಗಿಂತ ಮಿಗಿಲಾಗಿ ಮುಕ್ತಕರೂಪದ ಕೆಲವು ಲಕ್ಷ್ಯಪದ್ಯಗಳಲ್ಲಿ ಕಾವ್ಯಲೇಪನವನ್ನೂ ಕವಿಹೃದಯದ ಸುಳಿವನ್ನೂ ನೋಡಬಹುದು.

ಮಾರ್ಗಕಾರನ ಸಾಹಿತ್ಯಿಕ ಯಶಸ್ಸನ್ನು ನೋಡಬಹುದಾದ ಇನ್ನೊಂದು ಅವಕಾಶ ಅವನ ಅನುವಾದ ಕ್ರಮದಲ್ಲಿದೆ. ಮೂಲವನ್ನು ಕನ್ನಡಿಸಿರುವ ರೀತಿಯಿಂದಲೆ,—ಕೈಬಿಟ್ಟ, ಸೇರಿಸಿದ, ಮಾರ್ಪಡಿಸಿದ ವಿಧಾನಗಳಿಂದಲೆ—ಅವನ ಸಾಹಿತ್ಯಶಕ್ತಿಯ ಸ್ವರೂಪ ದರ್ಶನವಾಗಬಲ್ಲುದಾದರೂ ಅಂಥ ಸಂದರ್ಭಗಳು ವಿಶೇಷವಾಗಿಲ್ಲವೆಂದೇ ಹೇಳಬೇಕು. ಅವನು ಕೊಡುವ ಹೋಲಿಕೆ ದೃಷ್ಟಾಂತಗಳಲ್ಲಿ ಈ ಶಕ್ತಿ ಸ್ಪಷ್ಟವಾಗಿ ಅಭಿವ್ಯಕ್ತಗೊಳ್ಳುತ್ತದೆ. ಬರೆವಣಿಗೆಯ ಈ ಭಾಗ ಅವನದೇ ಎನ್ನಲು ಅಡ್ಡಿಯಿಲ್ಲ. ಈ ತುಣುಕುಗಳಲ್ಲಿ 'ನಾಣ್ನುಡಿಯ ಬೆಡಂಗು' ಧಾರಾಳವಾಗಿ ಹೊಮ್ಮುತ್ತದೆ; ಮಾರ್ಗಕಾರನ ಕಾವ್ಯಶಕ್ತಿ ಮಿನುಗುತ್ತದೆ. ಅದರ ಸಮಕಾಲೀನ ಬರೆವಣಿಗೆಯೊಂದಿಗೆ 'ಕವಿರಾಜಮಾರ್ಗ'ದ ಬರೆವಣಿಗೆಯನ್ನು ಹೋಲಿಸಿ ನೋಡಿದಾಗ ಅದರ ಪ್ರಸಾದಗುಣ ನಿಚ್ಚಳವಾಗಿ ಕಂಡುಬರು

ತ್ತದೆ. ಕನ್ನಡ ಭಾಷೆಯ ಅಂತಃಸತ್ತ್ವ ಆರಂಭದ ಕೃತಿಯೊಂದರಲ್ಲಿಯೇ ಈ ಬಗೆಯಾಗಿ ಮೈದೋರಿರುವುದು ನಾಡಿನ ಪುಣ್ಯ. ಕೆಲವು ಉದಾಹರಣೆಗಳು ಈ ಮಾತನ್ನು ಸ್ಪಷ್ಟ ಪಡಿಸಬಹುದು.

ದಂಡಿ ಹೇಳುತ್ತಾನೆ: "ಶಾಸ್ತ್ರವನ್ನು ತಿಳಿಯದವನು ಇದು ಗುಣ, ಇದು ದೋಷ ಎಂದು ವಿಂಗಡಿಸಲು ಹೇಗೆ ತಾನೆ ಸಾಮರ್ಥ್ಯ ಪಡೆದಾನು? ರೂಪಗಳ ಭೇದಗಳನ್ನು ತಿಳಿಯಲು ಕುರುಡನಿಗೆ ಸಾಧ್ಯವಾದೀತೆ?" (೧-೮). ಮಾರ್ಗಕಾರ ಈ ಹೋಲಿಕೆಯನ್ನು ಬದಲಾಯಿಸಿಕೊಂಡು ಹೇಳುತ್ತಾನೆ: "ತೃಣಸಸ್ಯಘಾಸವಿಷಯ। ಪ್ರಣಯಂ ಸಮವೃತ್ತಿಯಪ್ಪವೋಲ್ ಮೃಗಗಣದೊಳ್" (೧-೮). ಈ ಬದಲಾವಣೆಯಲ್ಲಿ ಮೂಲದ ತೀರ ಸಾಮಾನ್ಯವಾದ ಹೋಲಿಕೆ ಅಪರೂಪದ್ದಾಗುತ್ತದೆ; ಹೆಚ್ಚಿನ ಪರಿಣಾಮವನ್ನುಂಟು ಮಾಡುತ್ತದೆ. ಭಾಮಹನ ಪ್ರಭಾವವನ್ನು ಕಾಣಬಹುದಾದರೂ (೧-೫) ಈ ಪದ್ಯವನ್ನು ಸ್ವತಂತ್ರವಾದುದೆಂದೇ ಗಣಿಸಬಹುದು:

ಜಡಜನಮುಮೆಲ್ಲವೋದಂ
ತಡೆಯದೆ ಕಲ್ಗುಂ ಗುರೂಪದೇಶಕ್ರಮದಿಂ
ನುಡಿವಲ್ಮೆಯಲ್ತದೇಂ ಕ
ಲ್ತೊಡನೋದುವುವಲ್ತೆ ಗಿಳಿಗಳುಂ ಪುರುಳಿಗಳುಂ॥ (೧-೧೦)

'ನುಡಿವಲ್ಮೆ' ಎನ್ನುವ ಮಾತು ಚೆಲುವಾದುದು. "ಕಲ್ತೊಡನೋದುವುವಲ್ತೆ ಗಿಳಿಗಳುಂ ಪುರುಳಿಗಳುಂ" ಎಂದು ಕೇಳುವುದು ಹೃದ್ಯವಾಗಿದೆ. ಪ್ರತಿಭೆ ಎನ್ನುವುದು ಗಿಳಿಪಾಠವಲ್ಲ ಎನ್ನುವುದನ್ನು ಇದಕ್ಕಿಂತಲೂ ಸೊಗಸಾಗಿ ಹೇಳುವುದು ಹೇಗೆ? ಪ್ರತಿಭಾ ದಾರಿದ್ರ್ಯರಿಗೆ ಕಾವ್ಯ ಸಿದ್ಧಿಸುವುದಿಲ್ಲ. ಅಂಥವರು ಕಾವ್ಯರಚನೆಗೆ ತೊಡಗಿದರೆ ಕೃತಿಚೌರ್ಯವೊಂದೇ ಅವರಿಗೆ ಉಳಿಯುವ ಮಾರ್ಗ. ಹೀಗೆ ಬೇರೆ ಕವಿಗಳ ಮಾತುಗಳನ್ನೇ ತನ್ನ ಕೃತಿಗಳಲ್ಲಿ ತುಂಬುವವನು "ನಗದ ಗುಹಾಧ್ವನಿಯವೊಲನರ್ಥವಚನಂ" (೧-೧೪). ಅವನಿಗೆ ಅವನದೇ ಆದ ವಾಕ್ಚಾತುರ್ಯವೆಂಬುದು ಇಲ್ಲ. ವ್ಯರ್ಥ ಮರುದನಿಯಲ್ಲದೆ ಸೊಗಯಿಸುವ ವಚನವಿರಚನೆ "ಹೃದಯದೊಳೆ ತಾಳ್ದ ಮಣಿಹಾರ"ವಾಗುತ್ತದೆ (೧-೧೩).

ನಮ್ಮ ದೋಷ ನಮಗೆ ಕಾಣಿಸದೆಂಬುದಕ್ಕೆ ಮಾರ್ಗಕಾರನ ಹೋಲಿಕೆ "ಕಾಣ ದಂತೆಂದುಂ ಕಣ್ಗಳ್ ತಮ್ಮ ಕಾಡಿಗೆಯಂ" (೧-೪೫). ಹೇಳಬಾರದ ಅರ್ಥಶೂನ್ಯ ಮಾತುಗಳನ್ನು "ಮರುಳಂ ಮದಿರಾಪರವಶಶರೀರನುಂ" ಮಾತ್ರ ಹೇಳಿಯಾರು (೧-೮೦). ಕಾವ್ಯಕ್ಕೆ ಕುಂದುಂಟುಮಾಡುವ ಸಂಧಿಗಳು ವಿರೂಪಸಂಧಿಗಳು. ಇವು "ದೋಷಾ ಬಂಧುಗೆ ಶಶಲಕ್ಷ್ಮದಂತೆ ಕಱಿಯಂ ತರ್ಕ್ಕುಂ" (೧-೯೪).

ಕೆಟ್ಟವರ ಪರಿಚಯ ಮಾತ್ರದಿಂದಲೇ ಕುಲವಧುವಿನ ಹೆಸರಿಗೆ ಕಳಂಕ ತಗಲುತ್ತದೆ; ಅಲ್ಪದೋಷದಿಂದಲೇ ಕಾವ್ಯವಧುವಿನ ಸೊಗಸು ಮಾಸುತ್ತದೆ (೧-೧೧೨). ಯಾವ ತಂದೆ ಇದಕ್ಕೆ ಸಿದ್ಧನಾಗುತ್ತಾನೆ? ಜಳ್ಳನ್ನು ತೂರಿ ಕಾಳುಗಳನ್ನಿಟ್ಟುಕೊಳ್ಳಬೇಕು. ಗುಣಗಳನ್ನುಳಿಸಿಕೊಂಡು ದೋಷಗಳನ್ನು ದೂರಮಾಡಬೇಕು: "ತೂಱಿ ಪಿಂಗಿಸುವ

ವೋಲ್ ಪೊಸನೆಲ್ಲಿರೆ ಪೊಳ್ಗಳಂ" (೧–೧೩೧). ಇಂಥ ಮಾತುಗಳಲ್ಲೆಲ್ಲ ಕಾವ್ಯ ಉಸಿರಿಡುತ್ತದೆ.

ಸರಿಯಾದ ಜಾಗದಲ್ಲಿ ಸರಿಯಾದ ಪದವನ್ನಿಡುವುದೇ ಕವಿಕರ್ಮದ ಒಂದು ಮುಖ್ಯ ಲಕ್ಷಣ. ಕವಿ ಪ್ರಯೋಗಪರಿಣತನಾಗಿರಬೇಕು. ಔಚಿತ್ಯಪ್ರಜ್ಞೆಯಿಂದ ಅವನು ಎಂದಿಗೂ ವಂಚಿತನಾಗಬಾರದು. ಅತ್ಯುತ್ತಮ ಕಾವ್ಯದಲ್ಲಿ ಶಬ್ದ ಅರ್ಥಗಳ ಬೆಸುಗೆಯಾಗಿರುತ್ತದೆ. ಈ ವಿಷಯಗಳನ್ನು ಮಾರ್ಗಕಾರ ಎರಡು ಪದ್ಯಗಳಲ್ಲಿ ಮನೋಜ್ಞವಾಗಿ ತಿಳಿಸಿದ್ದಾನೆ:

ಇಲ್ಲಿಗಿದು ತಕ್ಕುದಿಲ್ಲಿಗೆ
ಪೊಲ್ಲದಿದೆಂದಱಿದು ಸಮಱಿ ಬಲ್ಲಂತೆಲ್ಲಂ
ನೆಲ್ಲುಂ ಮೊಸರುಂ ಗುಡಿಪಂ
ತಲ್ಲದೆ ತಲ್ಲಣಿಸದಲಸದಿಡು ಮೃದುಪದಮುಂ ॥ (೨–೪)

ಗಱಿಯಿಸಿದರ್ಥಂ ಸಲೆ ಪಾಂ
ಗಱಿಯದೆಯುಂ ಶಬ್ದಮೊಂದದಿರ್ದೊಡೆ ಮುತ್ತುಂ
ಮೆಱಿಸುಂ ಕೋದಂತಿರ್ಕುಂ
ಕಱಿಲ್ಚಿ ಕಳೆಗೊಂದಿ ಮುಂದೆ ಬಾರದ ಪದಮುಂ ॥ (೨–೫)

ನೆಲ್ಲನ್ನೂ ಮೊಸರನ್ನೂ ಬೆರಸಿದಂತೆ, ಮುತ್ತನ್ನೂ ಮೆಣಸನ್ನೂ ಕೋದಂತೆ ಎಂಬ ಹೋಲಿಕೆಗಳು ಈ ಸಾವಿರ ವರ್ಷದಲ್ಲಿ ಎಷ್ಟೊಂದು ವಿಧದಲ್ಲಿ ಮರುರೂಪ ತಾಳಿವೆಯೆಂಬುದನ್ನು ಯೋಚಿಸಿದರೆ, ಮಾರ್ಗಕಾರ ಜನರ ಆಡುನುಡಿಯ ಆಯ್ಕೆಯಲ್ಲಿ ಎಂಥ ಪರಿಣತಿ ಪಡೆದಿದ್ದಾನೆಂಬುದು ಗೊತ್ತಾಗುತ್ತದೆ. ಮಾತೆಲ್ಲವೂ ಒಂದು ರೀತಿಯಲ್ಲಿ ಸಮೆದ ಕಾವ್ಯ. ಅದನ್ನು ಮತ್ತೆ ಮತ್ತೆ ಉಜ್ಜಿ ಹೊಳಪಿಡುವಂತೆ ಮಾಡುವುದು ಕವಿಯ ಕೆಲಸ. ಇಂಥ ಕೆಲಸವನ್ನು ಮಾರ್ಗಕಾರ ಧಾರಾಳವಾಗಿ ಮಾಡಿದ್ದಾನೆಂಬುದು ಇಂಥ ಸಾಮಾನ್ಯವಾದ ಹೋಲಿಕೆಗಳಿಂದಲೂ ಸುವ್ಯಕ್ತವಾಗುತ್ತದೆ.

ಅವನು ಕೊಡುವ ದೃಷ್ಟಾಂತಗಳು ದೈನಂದಿನ ಜೀವನವನ್ನು ಕಣ್ಣಿಟ್ಟು ಕಂಡಿರುವುದರ ಫಲ ಎನ್ನುವುದಕ್ಕೆ ಮುಂದಿನ ಎರಡು ಉದಾಹರಣೆಗಳನ್ನು ನೋಡಬಹುದು. 'ಲಘುಪದ'ದ ಮುಂದೆ 'ಒತ್ತಿ ಬರ್ಪ ಪದ'ವನ್ನು ಇಡಬಾರದು. ಇಟ್ಟರೆ ಏನಾಗುತ್ತದೆ? "ಕೂಸಿನ ತಲೆಯೊಳ್ ಬಿಣ್ಪೊಱೆಯನಿಟ್ಟವೋಲಸುಖಕರಂ" (೨–೭). ಒಂದು ಕ್ರಿಯೆಯೊಡನೆ ಎರಡು ಕ್ರಿಯಾವಿಶೇಷಣಗಳನ್ನು ಪ್ರಯೋಗಿಸುವುದು "ಎರಡಕ್ಕೆ ಬಿಟ್ಟ ಕಱುವಂ ಪೋಲ್ಗುಂ" (೨–೯). ಇಲ್ಲಿ ನಮ್ಮ ಕಣ್ಣೆದುರು ಹೊರಲಾರದ ಹೊರೆಯನ್ನು ಹೊತ್ತ ಮಗುವಿನ, ಎರಡು ಹಸುಗಳಲ್ಲಿ ತನ್ನ ತಾಯನ್ನೆ ಹುಡುಕಿ ಸೇರುವ ಎಳಗರುವಿನ ಎರಡು ಸೊಗಸಾದ ಸಂದರ್ಭ ಚಿತ್ರಗಳು ಮೂಡಿನಿಲ್ಲುತ್ತವೆ.

ಬಲ್ಲವರು ಬಳಸುವ ಸಲ್ಲದ ಸಂಬೋಧನೆ "ಬಾಯಱಿದೂಳ್ವವೋಲ್ ಕರಂ ವಿರಸತರಂ" (೨–೨೩). ಶಬ್ದಾಲಂಕಾರದ ವಿರಚನೆಗಳು ಮೂಲತಃ ಒಂದೇ ಆದರೂ ಅವುಗಳ ಸ್ವರೂಪ "ನರರೊರ್ವರೊರ್ವರಂ ಪೋಲದವೋಲ್" (೨–೪೭). ಸಮಾಸದ

ಮುಂದೆ ಅಸಮಾಸ ಬರುವುದು "ಕರ್ಪ್ಪಿನ ತುದಿಯುಂತಿರೆ ವಿರಸಂ" (೨–೮೮).

ಶಾಸ್ತ್ರವಿಷಯಗಳನ್ನು ಸ್ಪಷ್ಟಪಡಿಸುವಾಗ ಮಾರ್ಗಕಾರ ಕೊಡುವ ಈ ಬಗೆಯ ಹೋಲಿಕೆಗಳಲ್ಲಿ ಅನಾಯಾಸವಾಗಿ ಕವಿಕಾರ್ಯ ಈಡೇರಿದೆ. ಇದರಿಂದ ಶಾಸ್ತ್ರವೂ ಆಕರ್ಷಕ ವಾಗುತ್ತದೆ; ಹೃದ್ಯವಾಗುತ್ತದೆ. ಓದುಗರ ಮನಸ್ಸಿನಲ್ಲಿ ನಿಲ್ಲಬೇಕಾದ ಮಾತು ತಳ ವೂರಿ ನಿಲ್ಲುತ್ತದೆ.

ಮಾತು ವರವೂ ಹೌದು; ಶಾಪವೂ ಹೌದು. ಅದರ ವ್ಯಾಪ್ತಿ ತುಂಬ ದೊಡ್ಡದು. ಮಗುವಿನ ತೊದಲಿನಿಂದ ಹಿಡಿದು ಅತ್ಯುನ್ನತ ಚಿಂತನೆಯ ಅಭಿವ್ಯಕ್ತಿಯ ತನಕ ಅದು ಹರಡಿಕೊಂಡಿದೆ. ಅದರ ಬಳಕೆಯ ವಿವಿಧ ಸ್ತರಗಳನ್ನು (೧–೧೫, ೧೬, ೧೭) ಮಾರ್ಗ ಕಾರ ಹೇಳಿರುವ ರೀತಿ ವಿಶೇಷ ಉಲ್ಲೇಖಕ್ಕೆ ಅರ್ಹವಾಗಿದೆ. ಮನಸ್ಸಿನಲ್ಲಿರುವ ಭಾವನೆ ಗಳನ್ನು ಮತ್ತೊಬ್ಬರಿಗೆ ಸ್ಪಷ್ಟಪಡಿಸಲು ಶಕ್ತನಾದವನು ಮಾತುಬಲ್ಲವನು; ಕಿರಿದರಲ್ಲಿ ಹಿರಿಯ ಅರ್ಥವನ್ನು ತುಂಬಿ ಆಡುವವನು ಅವನಿಗಿಂತ ನಿಪುಣ; ಮಾತನ್ನು ಛಂದಸ್ಸಿನ ಚೌಕಟ್ಟಿನಲ್ಲಿಡಬಲ್ಲವನು ಈ ನಿಪುಣನಿಗಿಂತ ಜಾಣ; ಮಹಾಕೃತಿಗಳನ್ನು ರಚಿಸುವ ಸಾಮರ್ಥ್ಯ ಪಡೆದವರು ಈ ಎಲ್ಲರಿಗಿಂತ ಉತ್ತಮರು. ಅವರು ಪರಮಕವಿವೃಷಭರು. ಆದರೆ ಅಂಥವರು ಲೋಕದಲ್ಲಿ ಬಹು ವಿರಳ. ಆದುದರಿಂದಲೇ ಮಹಾಕೃತಿ 'ಭುವನದ ಭಾಗ್ಯದಿಂದ' ಮಾತ್ರ ಸಾಧ್ಯವಾಗುತ್ತದೆಂದು ಮುಂದಿನ ಒಬ್ಬ ಕವಿ ಸಾರಿದ. ಮಾತಿನ ಬಳಕೆಯ ಸ್ತರಗಳನ್ನು ಸೂಚಿಸುವುದರಲ್ಲಿಯೇ ಕವಿ ಸಾಮರ್ಥ್ಯದ ಸ್ತರಗಳನ್ನೂ ಕಾವ್ಯ ಸಫಲತೆಯ ಮೆಟ್ಟಲುಗಳನ್ನೂ ಹೇಳಿರುವ ಕ್ರಮ ಮಾರ್ಗಕಾರನ ಅಭಿವ್ಯಕ್ತಿ ಸಾಮರ್ಥ್ಯ ಕ್ಕೊಂದು ಉಜ್ಜ್ವಲ ಉದಾಹರಣೆಯಾಗಿದೆ.

ಕಾವ್ಯಸ್ವರೂಪಕ್ಕೆ ಸಂಬಂಧಿಸಿದ ತುಂಬ ಪ್ರಸಿದ್ಧವಾದ ಈ ಪದ್ಯ ಮಾರ್ಗಕಾರನ ನಿರೂಪಣೆಯ ಲಾಲಿತ್ಯವನ್ನು ತೋರಿಸುತ್ತದೆ:

ಪಾಪಮಿದು ಪುಣ್ಯಮಿದು ಹಿತ
ರೂಪಮಿದಹಿತಪ್ರಕಾರಮಿದು ಸುಖಮಿದು ದುಃ
ಖೋಪಾತ್ತಮಿದೆಂದಱಿಪುಗು
ಮಾ ಪರಮಕವಿಪ್ರಧಾನರಾ ಕಾವ್ಯಂಗಳ್ ॥ (೧–೧೮)

ಕನ್ನಡದ ಪದಗಳೊಂದಿಗೆ ಸಂಸ್ಕೃತ ಪದಗಳನ್ನು ಹೇಗೆ ಸೇರಿಸಬೇಕು, ಹೇಗೆ ಸೇರಿಸ ಬಾರದು ಎಂದು ವಿಚಾರಮಾಡುವ ಭಾಗಗಳಲ್ಲಿ (೧–೫೧–೬೧) 'ಕವಿರಾಜಮಾರ್ಗ' ಕಾರನು ಕೊಡುವ ಹೋಲಿಕೆಗಳು ಔಚಿತ್ಯಪೂರ್ಣವೂ ಆಕರ್ಷಕವೂ ಆಗಿವೆ. ಹಳ ಗನ್ನಡದ ಪ್ರಯೋಗ ಅಂದಿನ ಕಾಲಕ್ಕೆ ಉಚಿತವಾದದ್ದು; ಹೊಸಗನ್ನಡದ ದೇಸಿಗೆ ಹೊಂದುವಂಥದಲ್ಲ. ಹೀಗೆ ಹದತಪ್ಪಿದ ಶೈಲಿಯ ಬಳಕೆ "ಜರದ್ವಧೂ ವಿಷಯ ಸುರತ ರಸರಸಿಕತೆ"ಯುಂಥದು (೧–೫೦). ಈ ಹೋಲಿಕೆಯಲ್ಲಿ ಇಂಥ ಶೈಲಿಯನ್ನು ನವುರಾಗಿ ಹಾಸ್ಯಮಾಡಿದ್ದಾನೆ. ಎರಡೂ ಸಂದರ್ಭಗಳು ಅರಸಿಕತೆಯನ್ನು ವ್ಯಕ್ತಪಡಿಸುತ್ತವೆ. ಸಂಸ್ಕೃತ ಅವ್ಯಯಗಳ ಹಾಗೂ ಕನ್ನಡ ಪದಗಳ ಸಮಾಸ "ಒತ್ತುಂಗರಡೆಯ

ಮದ್ದಳೆಯ ಜರ್ಝರಧ್ವನಿಗಳ" (೧-೫೩) ಹಾಗೆ ಕಿವಿಗೆ ಹಿತವಾದುದಲ್ಲ, ಕಠೋರವೆ. ಕರಡಿವಾದ್ಯವೆ ಸಾಕಾಗಿತ್ತು; ಅದನ್ನು ಒತ್ತಿ ಬಾರಿಸಿದ ಮೇಲೆ ಏನಾಗುತ್ತದೆಂಬುದನ್ನು ಊಹಿಸಿಕೊಳ್ಳುವುದು ಕಷ್ಟವಲ್ಲ. 'ಕರ್ಣಕಠೋರ' ಎಂಬ ಮಾತನ್ನು ಮಾರ್ಗಕಾರ ಈ ಉಪಮಾನದಲ್ಲಿ ಅನುಭವವೇದ್ಯವಾಗಿಸಿದ್ದಾನೆ. ಇದಕ್ಕೆಪ್ರತಿಯಾದ ಸಮಾಸ "ಮೃದಂಗ ಸಂಗೀತಕಾದಿ ಮಧುರರವ"ದಂತೆ ಕಿವಿಗೆ ಹಿತವಾದುದು (೧-೫೫). ಮಾತಿನಲ್ಲಿ ಅಡಕ ವಾಗಿರುವ ಸಂಗೀತ ಗುಣಗಳೇ ಅದನ್ನು ಕಿವಿಗೆ ಒಗ್ಗುವಂತೆ ಮಾಡುವುದು ಅಥವಾ ಕರ್ಕಶವೆನಿಸುವುದು. ಇದನ್ನು ಎರಡು ವಿರುದ್ಧ ವಾದ್ಯಗಳ ಹೋಲಿಕೆ ಇಲ್ಲಿ ಸ್ಪಷ್ಟ ಪಡಿಸಿದೆ. ಸಂಸ್ಕೃತ ಪದಗಳನ್ನೂ ಕನ್ನಡ ಪದಗಳನ್ನೂ ಸಮಾಸಗಳಲ್ಲಿ ಬೆರಸಬಾರದೆಂದು ಹೇಳುವ ಈ ಪದ್ಯ ಸುಂದರವಾಗಿದೆ :

ತಱಿಸಂದಾ ಸಕ್ಕದಮುಮ
ನಱಿಯದೆ ಕನ್ನಡಮುಮಂ ಸಮಾಸೋಕ್ತಿಗಳೊಳ್
ಕುಱಿತು ಬೆರಸಿದೊಡೆ ವಿರಸಂ
ಮಱುಗುವ ಪಾಲ್ಗಳೆಯ ಪನಿಗಳಂ ಬೆರಸಿದವೋಲ್ ॥ (೧-೫೮)

ಕುದಿಯುವ ಹಾಲಿಗೆ ಮಜ್ಜಿಗೆ ಹನಿಗಳನ್ನು ಬೆರಸಿದಂತೆ–ಎಂಬ ಸಾಮಾನ್ಯಾನುಭವದ ಆಡುನುಡಿಯನ್ನು ಮಾರ್ಗಕಾರ ಈ ಸಂದರ್ಭದಲ್ಲಿ ಸಾರ್ಥಕವಾಗಿ ಬಳಸಿದ್ದಾನೆ. ಹಾಳತವಾದ ಸಮಾಸ, "ಕನಕರಚನೆಯೊಳ್ ಮಣಿನಿಕರಂ" ಹೊಂದಿಕೊಂಡ ಹಾಗೆ ಸುಂದರವಾದುದು (೧-೬೧) ಎಂಬುದನ್ನು ಹೇಳಲೂ ಅವನು ಮರೆಯುವುದಿಲ್ಲ. ಯಾವುದು ಹಿತ ಯಾವುದು ಅಹಿತ, ಯಾವುದು ಸರಿ ಯಾವುದು ತಪ್ಪು ಎಂಬುದನ್ನು ಹೇಳುವಾಗ, ಸಾದೃಶ್ಯ ವೈದೃಶ್ಯಗಳನ್ನು ಸ್ಥಾಪಿಸುವಾಗ ಮಾರ್ಗಕಾರ ಸಮತೂಕವನ್ನು ಕಾಯ್ದುಕೊಳ್ಳುತ್ತಾನೆ. ಕರಡಿವಾದ್ಯ—ಮೃದಂಗ ಇವುಗಳನ್ನು ಬಳಸಿಕೊಂಡು ಅವನು ಯಾವುದು ಮಧುರ, ಯಾವುದು ಕರ್ಕಶ ಎಂಬುದನ್ನು ಹೇಳುತ್ತಾನೆ. ಕುದಿಯುವ ಹಾಲಿಗೆ ಮಜ್ಜಿಗೆ ಬೆರಸುವುದು, ಚಿನ್ನದ ಒಡವೆಯಲ್ಲಿ ರತ್ನ ಖಚಿತಗೊಳ್ಳುವುದು ವಿರಸ-ಒಪ್ಪಗಳನ್ನು ಚಿತ್ರಿಸುತ್ತವೆ. ಪರ-ವಿರುದ್ಧವಾದ ಇಂಥ ಸಂದರ್ಭಗಳು ಒಟ್ಟೊಟ್ಟಿಗೆ ಬರುವುದರಿಂದ ಉಂಟಾಗುವ ಪರಿಣಾಮ ಹೆಚ್ಚಿನದಾಗುತ್ತದೆ. ಒಂದು ಉಪಮಾನ ಯಾವುದು ಸರಿ ಎಂಬುದನ್ನು ಹೇಳಿದರೆ ಇನ್ನೊಂದು ಹೋಲಿಕೆ ಯಾವುದು ಸರಿಯಲ್ಲ ಎಂಬುದನ್ನು ಹೇಳುತ್ತದೆ. ಇದರಿಂದ ಯಾವುದು ಸರಿ ಎಂಬ ಅಭಿಪ್ರಾಯಕ್ಕೇ ಹೆಚ್ಚಿನ ಪೋಷಣೆ ದೊರೆತಂತಾಗುತ್ತದೆ. ಮಾರ್ಗಕಾರನ ಈ ನಿರೂಪಣೆಯ ವಿಧಾನದಲ್ಲಿ ಓದುಗರ ಮನಸ್ಸಿನ ಮೇಲೆ ವಿಷಯ ಅಚ್ಚೊತ್ತಿ ನಿಲ್ಲುವ ಸಾಧ್ಯತೆ ಹೆಚ್ಚಾಗಿರುತ್ತದೆಂಬುದನ್ನು ಗಮನಿಸಬಹುದು.

ಮಾರ್ಗಕಾರ ದಂಡಿ ಭಾಮಹರನ್ನು ಭಾಷಾಂತರಿಸುವಾಗ ಕುರುಡನಾಗಿ ಕಾರ್ಯ ನಿರ್ವಹಿಸುವುದಿಲ್ಲ. ತನ್ನ ವೈಯಕ್ತಿಕ ರುಚಿಯ ಕಾರಣದಿಂದಲೋ, ವಿಷಯಸ್ಪಷ್ಟನೆಯ ದೃಷ್ಟಿಯಿಂದಲೋ ಆಗಾಗ ಸಣ್ಣಪುಟ್ಟ ಮಾರ್ಪಾಡುಗಳನ್ನು ಮಾಡಿಕೊಳ್ಳುತ್ತಾ

ನೆಂಬುದು ಗಮನಾರ್ಹ. "ಅನುವಾದದಲ್ಲಿ ಮೂಲದ ವಾಕ್ಯಗಳ ಸೊಗಸು ತಪ್ಪದೆ ಬಂದಿದೆಯೆಂದು ಎಲ್ಲ ಸಂದರ್ಭಗಳಲ್ಲೂ ಹೇಳಲಾಗುವುದಿಲ್ಲ" ಎಂದು ತೀ. ನಂ. ಶ್ರೀಕಂಠಯ್ಯನವರು ಹೇಳುತ್ತಾರೆ."[೨೩೮] "ತೀ. ನಂ. ಶ್ರೀ. ಯವರ ಮಾತಿನಲ್ಲಿಯೆ ಕೆಲವು ಸಂದರ್ಭಗಳಲ್ಲಿಯಾದರೂ ಬಂದಿದೆ ಎಂಬ ಧ್ವನಿ ಇದ್ದೇ ಇದೆ" ಎಂದು ಎಂ. ವಿ. ಸೀತಾ ರಾಮಯ್ಯ ಸಮಾಧಾನ ತಾಳಿದ್ದಾರೆ."[೨೩೯] ಎಂ. ಎಂ. ಕಲಬುರ್ಗಿಯವರ ಅಭಿಪ್ರಾಯ ದಲ್ಲಿ "ಕೆಲವು ವಾಕ್ಯಗಳ ಸೊಗಸು ಮೂಲಕ್ಕಿಂತ ಮಿಗಿಲಾಗಿದೆ."[೨೪೦] ಒಟ್ಟಿನಲ್ಲಿ ಇದೆಲ್ಲ ದರ ಸಾರವಾಗಿ ಮಾರ್ಗಕಾರನನ್ನು ಒಳ್ಳೆಯ ಭಾಷಾಂತರಕಾರನೆಂದು ಇಟ್ಟುಕೊಂಡರೆ ತಪ್ಪಾಗುವುದಿಲ್ಲ. ಭಾಷಾಂತರದ ಒಳ್ಳೆಯ ಗುಣಗಳನ್ನು ನಾವು ಸಾಹಿತ್ಯಿಕ ಮೌಲ್ಯ ಗಳೆಂದು ಧಾರಾಳವಾಗಿ ಭಾವಿಸಬಹುದು.

ಶಾಸ್ತ್ರಗಳನ್ನು ಅರಿಯದವರು ಗುಣದೋಷಗಳನ್ನು ಹೇಗೆ ವಿಂಗಡಿಸುತ್ತಾರೆಂಬುದನ್ನು ಹೇಳುವಲ್ಲಿ ದಂಡಿ ಕೊಡುವ ಉಪಮಾನ: ರೂಪಭೇದಗಳನ್ನು ಅರಿಯಲು ಕುರುಡನಿಗೆ ಹೇಗೆ ಸಾಧ್ಯ? (೧-೮). ಮಾರ್ಗಕಾರ ಈ ಹೋಲಿಕೆಯನ್ನು ಸಂಪೂರ್ಣವಾಗಿ ಮಾರ್ಪಡಿಸಿಕೊಂಡು, ಎಲ್ಲವನ್ನೂ ಸಮವಾಗಿ ಭಾವಿಸುವ, ತರತಮಗಳನ್ನರಿಯದ, ಮೃಗಸಮೂಹವನ್ನು ಉಲ್ಲೇಖಿಸಿದ್ದಾನೆ (೧-೮). ಕಾವ್ಯದಲ್ಲಿ ಅಲ್ಪಸ್ವಲ್ಪ ದೋಷ ಗಳಿಗೂ ಅವಕಾಶಕೊಡಬಾರದೆಂದು ಹೇಳುತ್ತ ದಂಡಿ ನೀಡುವ ಹೋಲಿಕೆ: ದೇಹ ಸುಂದರವಾಗಿದ್ದರೂ ಒಂದು ತೊನ್ನಿನ ಕಲೆಯಿಂದಲೆ ಅದು ಅಸಹ್ಯವಾಗುತ್ತದೆ (೧-೭). ಇದಕ್ಕೆ ಬದಲಾಗಿ ಮಾರ್ಗಕಾರ ಹೆಣ್ಣಿನ ಕೆಟ್ಟ ಸಹವಾಸದ ಹೋಲಿಕೆ ಕೊಡುತ್ತಾನೆ. ಕೃತಿವಧುವಿಗೂ ಕುಲವಧುವಿಗೂ ಸಂಬಂಧವನ್ನು ಕಲ್ಪಿಸಿ ವಿಷಯವನ್ನು ಸಮರ್ಥಿಸು ತ್ತಾನೆ (೧-೧೧೨). ಕಬ್ಬು, ಹಾಲು, ಬೆಲ್ಲ ಮೊದಲಾದವುಗಳ ಸಿಹಿಯಲ್ಲಿ ಬೇಕಾದಷ್ಟು ಅಂತರವಿದೆ. ಅದನ್ನು ಸರಸ್ವತಿಯೂ ವಿವರಿಸಲಾರಳು ಎಂಬ ದಂಡಿಯ ಪದ್ಯದ (೧-೧೦), ಆಶಯವನ್ನು ವಿವರಿಸುವಲ್ಲಿ, ಮಾರ್ಗಕಾರ ನೀಡುವ ಉಪಮಾನ: ಮೇಲುನೋಟಕ್ಕೆ ಒಂದೇ ಲಕ್ಷಣವನ್ನುಳ್ಳವರಾದರೂ ಮನುಷ್ಯರು ಒಬ್ಬರನ್ನೊಬ್ಬರು ಹೋಲರು (೨-೪೭). ಜಾತಿ ಸ್ವಭಾವಾಖ್ಯಾನಕ್ಕೆ ದಂಡಿ ಕೊಟ್ಟ ದೃಷ್ಟಾಂತ (೨-೯)ದಲ್ಲಿ ಮಾಡಿರುವ ಗಿಳಿಯ ವರ್ಣನೆಯನ್ನು ಮಾರ್ಗಕಾರ ನವಿಲ ಕುಣಿತವನ್ನಾಗಿ ಪರಿವರ್ತಿಸಿದ್ದಾನೆ (೩-೭).

ಈ ಬಗೆಯ ಪರಿವರ್ತನೆ ಮಾರ್ಪಾಡುಗಳ ಪಟ್ಟಿಯನ್ನು ಇನ್ನೂ ಬೆಳೆಸಬಹುದು. ಇಲ್ಲೆಲ್ಲ 'ಕವಿರಾಜಮಾರ್ಗ'ಕಾರನ ಲೋಕಾನುಭವ ಕವಿಹೃದಯಗಳು ಒಂದಾಗಿ ಬೆಸೆದು ಅಭಿವ್ಯಕ್ತಗೊಂಡಿರುವುದು ಗೋಚರಿಸುತ್ತದೆ. 'ಕವಿರಾಜಮಾರ್ಗ'ದಲ್ಲಿ ಸಮಾವೇಶವಾಗಿ ರುವ ಲಕ್ಷ್ಯಪದ್ಯಗಳೆಲ್ಲ ಅವನವೇ ಸ್ವಂತ ರಚನೆಗಳೆಂದು ದೃಢವಾದಾಗ ಈ ಗುಣಗಳು ಇನ್ನೂ ಧಾರಾಳವಾಗಿ ಬೆಳಗಬಹುದು.

ಕೇವಲ ಶುದ್ಧ ಸಾಹಿತ್ಯದ ಮೌಲ್ಯಗಳ ದೃಷ್ಟಿಯಿಂದಲೇ 'ಕವಿರಾಜಮಾರ್ಗ'ವನ್ನು ವಿವೇಚಿಸಿದರೆ, ಮಾರ್ಗಕಾರನಿಗೆ 'ವಾಗಧಿಪ'ನೆಂಬ ಪ್ರಶಂಸೆ ತುಂಬ ಭಾರವಾಗುತ್ತದೆ, ನಿಜ. ಆದರೆ,

ನುಡಿಗಳೊಡಂಬಡಲ್ ಬಗೆದವೋಲ್ ಬಗೆಯಂ ಮಿಗಲೀಯದೊಂದೆ ನಾ
ಋ್ನುಡಿಯ ಬೆಡಂಗೆ ಕನ್ನಡದ ಮಾತಿನೊಳಾ ವಿಕಟಾಕ್ಷರಂಗಳೊಳ್
ತೊಡರದೆ ಸಕ್ಕದಂಗಳ ಪದಂ ಪವಣಾಗಿರೆ ಮೆಲ್ಪುವೆತ್ತು ದಾಂ
ಗುಡಿವಿಡುವಂತೆ ನೀಳ್ದು ನಿಲೆ ಪೇೞ್ವುದು ನೀತಿನಿರಂತರಕ್ರಮಂ॥ (೧-೧೪೯)

ಎಂಬ ಮಾತಿಗೆ ಉದ್ದಕ್ಕೂ ಸಹೃದಯರಿಗೆ ಸಾಕ್ಷ್ಯಗಳು ದೊರೆಯುತ್ತವೆ. 'ಕವಿರಾಜಮಾರ್ಗ' ತನ್ನ 'ನಾೞ್ನುಡಿಯ ಬೆಡಂಗಿ'ನಿಂದ 'ಪದ್ಯಂ ಸಮಸ್ತಜನತಾ ಹೃದ್ಯಂ' ಎಂಬ ಮಾತಿಗೊಂದು ಉದಾಹರಣೆಯಾಗಿದೆ. ಕನ್ನಡದ ಈ ಆದ್ಯಗ್ರಂಥ ಶಾಸ್ತ್ರಗ್ರಂಥವಾಗಿದ್ದರೂ ಅದು ಕಾವ್ಯದ ಪನ್ನೀರಿನಿಂದ ಚಿಮುಕಿತವಾಗಿರುವುದು ನಮ್ಮ ಸಾಹಿತ್ಯ ಚರಿತ್ರೆಯ ಸೊಗಸುಗಳಲ್ಲಿ ಒಂದಾಗಿದೆ.

## ಅಡಿಟಿಪ್ಪಣಿಗಳು

1 ಎಂ. ವಿ. ಸೀತಾರಾಮಯ್ಯ (ಸಂ.), 'ಕವಿರಾಜಮಾರ್ಗ', ಬೆಂಗಳೂರು, ೧೯೬೮, ೧-೧೪೭, ೧೪೮, ೩-೨೨೪; ಪರಿಚ್ಛೇದಾಂತ ಗದ್ಯ ಇತ್ಯಾದಿ.
2 'ಪಂಚತಂತ್ರ', ೧-೨೧, 'ಶಬ್ದಾನುಶಾಸನ', ಸೂ. ೨೮೮ ವ್ಯಾ.
3 *Kavirajamarga*, 1898, Intro.
4 Kavisvara's Kavirajamarga, *IA.*, XXXIII, Nov. 1904, pp. 258–80.
5 Nripatunga and Authorship of the Kavirajamarga (A Reply to Dr. Fleet), *JBBRAS.*, XII-II, p. 81.
6 ಕಕಚ., I, ಬೆಂಗಳೂರು, ೧೯೬೧, ಪು. ೧೯-೨೦.
7 ಕವಿರಾಜಮಾರ್ಗದ ಕರ್ತೃವು ಯಾರು? ಕಸಾಪ., ೬-೨, ೧೯೨೧, ಪು. ೯೯-೧೧೩.
8-10 'ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಇತರ ಲೇಖನಗಳು', ಮೈಸೂರು, ೧೯೫೮, ಪು. ೩೬-೪೧; ೫೮-೫೫; ೨೧.
11 'ಕವಿರಾಜಮಾರ್ಗ', ಮದರಾಸು, ೧೯೩೦, ಅವತರಣಿಕೆ, ಪು. ೪-೯.
12 ಒಂದು ಹಸ್ತಪ್ರತಿಯಲ್ಲಿಲ್ಲದ ಮಾತ್ರಕ್ಕೆ ಈ ನಿರ್ಣಯ ಸಾಧುವೆನ್ನಿಸದು.
13 ಎ. ವೆಂಕಟರಾವ್, ಎಚ್. ಶೇಷ ಅಯ್ಯಂಗಾರ್ (ಸಂ.), ಪೂರ್ವೋಕ್ತ, ಪು. ೯-೧೧.
14 'ಕನ್ನಡ ಕೈಪಿಡಿ', II, ೧೯೪೭, ಪು. ೪೮೦-೮೧.
15 'ಕವಿರಾಜಮಾರ್ಗವಿವೇಕ', ಭಾಗ ೧, ಮಂಗಳೂರು, ೧೯೪೮, ಪು. ೭೬-೧೧೨.
16-17 'ಕವಿರಾಜಮಾರ್ಗವಿವೇಕ', ಮೈಸೂರು, ೧೯೭೩, ಪು. ೭೦-೯೮; ೯೭-೯೮.
18 ಸಮಂತಭದ್ರನೇ ಶ್ರೀವಿಜಯನಿರಬಹುದೇ? 'ಸಾಹಿತ್ಯದ ವಿರಾಟ್‌ಸ್ವರೂಪ', ೧೯೭೪, ಪು. ೨೫೦.
19 'ಕನ್ನಡ ಸಾಹಿತ್ಯ ಚರಿತ್ರೆ', ಮೈಸೂರು, ೧೯೭೧, ಪು. ೧೮.
20-21 'ಶಬ್ದಮಣಿದರ್ಪಣದ ಪಾಠಾಂತರಗಳು ಮತ್ತು ಅನುಭವಾಮೃತವೂ ಹರಿಕಥಾಮೃತ ಸಾರವೂ', ಧಾರವಾಡ, ೧೯೫೧, ಪು. ೩೭; ೪೩.
22 ಕವಿರಾಜಮಾರ್ಗದ ಕವಿ ಯಾರು? 'ಸಾಹಿತ್ಯದ ಹಿನ್ನೆಲೆ', ಹುಬ್ಬಳ್ಳಿ, ೧೯೫೭, ಪು. ೨೬-೩೩.

23 ‘ಕನ್ನಡ ಸಾಹಿತ್ಯ ಚರಿತ್ರೆ’, ಮೈಸೂರು, ೧೯೫೩, ಪು. ೫೨-೫೮.

24-25 ‘ಕವಿರಾಜಮಾರ್ಗ’, ಬೆಂಗಳೂರು, ೧೯೬೮, ಪೀಠಿಕೆ, ಪು. xxiv–lv ; li–lv.

26 ಕವಿರಾಜಮಾರ್ಗದಲ್ಲಿನ ರಾಮಾಯಣದ ಪದ್ಯಗಳು, ಕಸಾಪ., ೫೧-೧, ೨, ಜೂನ್-ಡಿಸೆಂಬರ್ ೧೯೬೬, ಪು. ೧-೮.

27 ‘ಪುರುಷವ್ರತ’ ಮತ್ತು ‘ಕವಿರಾಜಮಾರ್ಗ’, ಕಸಾಪ., ೫೪-೨, ೧೯೬೯.

28 ಎಂ. ವಿ. ಸೀತಾರಾಮಯ್ಯನವರು, ‘ಕವಿರಾಜಮಾರ್ಗ’ದ ಕರ್ತೃತ್ವದ ಬಗೆಗೆ ಈಚೆಗೆ ನಡೆದ ಕೆಲವು ಚರ್ಚೆಗಳನ್ನು ಉಲ್ಲೇಖಿಸಿ, ವಿಮರ್ಶಿಸಿರುವುದಕ್ಕೆ ನೋಡಿ: ವಿ. ಸೀತಾರಾಮಯ್ಯ (ಸಂ.), ‘ಕವಿರಾಜಮಾರ್ಗ’, ಐಬಿಎಚ್., ಪ್ರಕಾಶನ, ೧೯೭೩, ಪು. ೩೭-೯೮.

29-30 ‘ಕವಿರಾಜಮಾರ್ಗಪ್ರಶಸ್ತಿ’, ಮನ್ವಂತರ, ಸಂ. ೯, ಧಾರವಾಡ, ೧೯೭೨ ; ಪು. ೯೫-೧೭೨.

31 ನೋಡಿ : ವಿ. ಸೀತಾರಾಮಯ್ಯ (ಸಂ.), ಪೂರ್ವೋಕ್ತ, ಪು. ೮೦-೮೧.

32 ವಿ. ಸೀತಾರಾಮಯ್ಯ (ಸಂ.), ಪೂರ್ವೋಕ್ತ, ಪು. ೮೧.

33-34 ‘ಕವಿರಾಜಮಾರ್ಗಪ್ರಶಸ್ತಿ’, ಪು. ೧೧೧-೧೩ ; ೧೧೩.

35 ನೋಡಿ : ‘ಶಬ್ದಮಣಿದರ್ಪಣ’ದ ಸೂ. ೮೭.

36-39 ‘ಕವಿರಾಜಮಾರ್ಗಪ್ರಶಸ್ತಿ’, ಪು. ೧೧೩-೧೪ ; ೧೧೫-೧೭ ; ೧೨೦-೨೧ ; ೧೨೪.

40 ಎಂ. ಎಂ. ಕಲಬುರ್ಗಿ, ‘ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ’, ಧಾರವಾಡ, ೧೯೭೩, ಪು. ೩೦-೩೧.

40ಅ ಜಿ. ವೆಂಕಟಸುಬ್ಬಯ್ಯ, ‘ಕವಿರಾಜಮಾರ್ಗದ ಕರ್ತೃ’, ಸಕಸಾಚ., I, ಪು. ೮೩.

41 ಇಲ್ಲಿಯ ವಿವೇಚನೆಯಲ್ಲಿ ಸಾಮಾನ್ಯವಾಗಿ ಅನುಸರಿಸಿರುವ ಗ್ರಂಥಪಾಠ ಈ ಮೂಲದ್ದಾಗಿದೆ: ಎಂ. ವಿ. ಸೀತಾರಾಮಯ್ಯ (ಸಂ.), ‘ಕವಿರಾಜಮಾರ್ಗ’, ಬೆಂಗಳೂರು, ೧೯೬೮.

ಹಿಂದಿನ ಪರಿಷ್ಕರಣಗಳಲ್ಲಿ ಅಂಗೀಕೃತವಾಗಿರುವುದು ‘ಗೋದಾವರಿವರಮಿರ್ದ’ ಎಂಬ ಪಾಠ. ಇಲ್ಲಿ ‘ಇರ್ಪ’ ಪಾಠವನ್ನು ಎಂ. ವಿ. ಸೀ. ಒಪ್ಪಿದ್ದಾರೆ. ಆದರೂ “ನೃಪತುಂಗನ ಕಾಲಕ್ಕೆ ಕರ್ಣಾಟಕದ ಸಾಮ್ರಾಜ್ಯವು ‘ಕಾವೇರಿಯಿಂದ ಗೋದಾವರಿವರಂ’ ‘ಇರ್ಪ’ ನಾಡು ಎಂದಾಗದೆ ‘ಇರ್ದ’ ನಾಡು ಎಂದೆನ್ನುವ ಮಟ್ಟಿಗೆ ತನ್ನ ಉತ್ತರದ ಸೀಮೆಯಿಂದ ಕೆಳಕ್ಕೆ ಸರಿದಿತ್ತು” ಎಂದು ಹೇಳಿರುವುದು ವಿಚಾರಣೀಯ. ನಂಜುಂಡಕವಿಯ ‘ರಾಮನಾಥ ಚರಿತೆ’ಯೊಳಗಿನ ಸದೃಶ ಪದ್ಯದ ಪಾಠವೂ ‘ಇರ್ದ’ ಎಂಬುದನ್ನು ಪೋಷಿಸುತ್ತದೆ. ಆದರೆ ಪ್ರಸ್ತುತ ವಿವೇಚನೆಯಲ್ಲಿ ಸನ್ನಿವೇಶಬಲದಿಂದಾಗಿ ‘ಇರ್ಪ’ ಪಾಠವನ್ನೇ ಸರಿಯಿರಬಹುದೆಂದು ಊಹಿಸಿ ಇಟ್ಟಿದೆ.

42-43 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪೀಠಿಕೆ, ಪು. xii ; xiii.

44 *HKL.*, 1969, pp. 53–54.

45 ‘ಕನ್ನಡ ಸಾಹಿತ್ಯ ಚರಿತ್ರೆ’, ಮೈಸೂರು, ೧೯೭೪, ಪು. ೧೭.

46 ಗೋದಾವರೀತೀರದ ಕನ್ನಡ, ‘ಸಂಶೋಧನ ತರಂಗ’, II, ಬೆಂಗಳೂರು, ೧೯೭೦, ಪು. ೩೦-೩೩.

47 ನೋಡಿ : ಅ.ಟಿ. ೪೨.

48-51 ಎಂ. ಎಂ. ಕಲಬುರ್ಗಿ, ‘ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ’, ಪು. ೪೪-೪೫.

52 ಕಳಸಂ ಕಸಾಚ., I, ೧೯೭೪, ಪು. ೨೨೫.
53 'ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ', ಮೈಸೂರು, ೧೯೬೪, ಪು. ೬.
54 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. lxv.
55–57 *HKL.*, 1969, p. 174 ; 175 ; 175.
58 B. L. Rice (ed.), *Karnataka Sabdanusasanam*, 1890, p. 146.
59-60 'ಕನ್ನಡ ಕೈಪಿಡಿ', I, ಪು. ೩೦೧-೦೨.
61 ಎಂ. ಎಂ. ಕಲಬುರ್ಗಿ, ಪೂರ್ವೋಕ್ತ, ಪು. ೯೮.
62 ಕಕಚ., II, ಪು. ೪೫.
63 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. xlvi.
64 ಪ್ರ. ಗೋ. ಕುಲಕರಣಿ, 'ಕನ್ನಡ ಭಾಷೆಯ ಚರಿತ್ರೆ', ಬೆಳಗಾಂ, ೧೯೬೭, ಪು. ೮೯.
65 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೧೩.
66-67 ಎಂ. ಎಂ. ಕಲಬುರ್ಗಿ, ಪೂರ್ವೋಕ್ತ, ಪು. ೯೦.
68 'ಕನ್ನಡ ಕೈಪಿಡಿ', I, ಪು. ೩೧೩.
69 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೧೨.
70-71 ಎಂ. ಎಂ. ಕಲಬುರ್ಗಿ, ಪೂರ್ವೋಕ್ತ, ಪು. ೯೬.
72 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೧೪೪.
73 ಎಂ. ಎಂ. ಕಲಬುರ್ಗಿ, ಪೂರ್ವೋಕ್ತ, ಪು. ೯೬.
74 ಮುಳಿಯ ತಿಮ್ಮಪ್ಪಯ್ಯ, 'ಕವಿರಾಜಮಾರ್ಗವಿವೇಕ', ಪು. ೧೨೯.
75 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪೀಠಿಕೆ, ಪು. lxix.
76 ಮುಳಿಯ ತಿಮ್ಮಪ್ಪಯ್ಯ, ಪೂರ್ವೋಕ್ತ, ಪು. ೧೪೪-೧೪೭.
77 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೧೪೧.
78-80 ಮುಳಿಯ ತಿಮ್ಮಪ್ಪಯ್ಯ, ಪೂರ್ವೋಕ್ತ, ಪು. ೧೨೮ ; ೧೫೩ ; ೨೩೦.

81 'ಮೂರು ಉಪನ್ಯಾಸಗಳು', ೧೯೬೦, ಪು. ೧೦೨.
82 ಎಂ. ವಿ. ಸೀತಾರಾಮಯ್ಯ (ಸಂ.), 'ಕವಿರಾಜಮಾರ್ಗ', ೧೯೬೮, ಪೀಠಿಕೆ, ಪು. xcvii.
83 ಕ. ಪು. ಸೀತಾರಾಮ ಕೆದಿಲಾಯ, 'ಕನ್ನಡ ಗೀತಿಕೆಯ ಸ್ವರೂಪ', ಕಭಾ., ೬-೪, ಪು. ೧೩೭-೧೫೦.
84 ಭೀಮರಾವ್ ಚಿಟಗುಪ್ಪಿ, 'ಸಂಶೋಧನ ಪಂಚದಶಿ', ಮೈಸೂರು, ೧೯೭೪, ಪು. ೧೫೩-೫೯.
85 ಗಮನಿಸಿರುವ ಪರಿಷ್ಕರಣ: ಕೆ. ಕೃಷ್ಣಮೂರ್ತಿ, 'ಭಾಮಹ ಮತ್ತು ದಂಡಿ ಕನ್ನಡ ಕಾವ್ಯಾಲಂಕಾರ ಮತ್ತು ಕನ್ನಡ ಕಾವ್ಯಾದರ್ಶ', ಮೈಸೂರು, ೧೯೭೫.

86-87 ರಂ. ಶ್ರೀ. ಮುಗಳಿ, 'ಕನ್ನಡ ಸಾಹಿತ್ಯ ಚರಿತ್ರೆ', ಮೈಸೂರು, ೧೯೫೩, ಪು. ೫೮.
88 ಎಂ. ವಿ. ಸೀತಾರಾಮಯ್ಯ, 'ಕವಿರಾಜಮಾರ್ಗ', ಬೆಂಗಳೂರು, ೧೯೬೮, ಪೀಠಿಕೆ, ಪು. xi.
89 'ಕವಿರಾಜಮಾರ್ಗವಿವೇಕ', ಮೈಸೂರು, ೧೯೭೩, ಪು. ೧೦೧.
90 ಸಕಸಾಚ., I, ಪು. ೯೬.
91-93 'ಕವಿರಾಜಮಾರ್ಗವಿವೇಕ', ಪು. ೧೦೬-೦೭ ; ೧೦೭-೦೮ ; ೧೧೩.

94-95 'ಕನ್ನಡ ಕೈಪಿಡಿ', II, ಪು. ೪೭೩ ; ೪೭೪.
96-98 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪೀಠಿಕೆ, ಪು. lxiii, lxviii, lvi.
99 ಕೆ. ಕೃಷ್ಣಮೂರ್ತಿ, 'ಕನ್ನಡದಲ್ಲಿ ಕಾವ್ಯತತ್ತ್ವ', ಮೈಸೂರು, ೧೯೬೪, ಪು. ೩೦.
100 ವಿ. ಸೀತಾರಾಮಯ್ಯ (ಸಂ.), 'ಕವಿರಾಜಮಾರ್ಗ', ಐಬಿಎಚ್., ಪ್ರಕಾಶನ, ಬೆಂಗಳೂರು, ೧೯೭೩, ಪು. ೧೧೦.
101 ಸಕಸಾಚ., I, ಪು. ೧೧೦.
102-4 ವಿ. ಸೀತಾರಾಮಯ್ಯ (ಸಂ.), ಪೂರ್ವೋಕ್ತ, ಪು. ೩೮ ; ೧೯-೪೦ ; ೧೫೮ ; ೧೨೧-೨೨.
106 ತೀ. ನಂ. ಶ್ರೀಕಂಠಯ್ಯ, 'ಭಾರತೀಯ ಕಾವ್ಯಮೀಮಾಂಸೆ', ಮೈಸೂರು, ೧೯೫೩, ಪು. ೪೪೪.
107 ಕೆ. ಕೃಷ್ಣಮೂರ್ತಿ, ಪೂರ್ವೋಕ್ತ, ಪು. ೧೪.
108 ತೀ. ನಂ. ಶ್ರೀಕಂಠಯ್ಯ, ಪೂರ್ವೋಕ್ತ, ಪು. ೪೩೯.
109 ಸಕಸಾಚ., I, ಪು. ೮೭.
110 'ಕವಿರಾಜಮಾರ್ಗಪ್ರಶಸ್ತಿ', ಪು. ೧೧ ; ೧೫೭-೬೧. ಕೆ. ಬಿ. ಪಾಠಕರು, ಧರ್ಮಕೀರ್ತಿಗೂ ಕವಿರಾಜಮಾರ್ಗಕಾರ ಋಣಿಯಾಗಿದ್ದಿರಬಹುದು ಎಂದು ಊಹಿಸಿದ್ದರು. ಆದರೆ ಆ ಬೌದ್ಧಲೇಖಕನ ಪ್ರಭಾವ 'ಕವಿರಾಜಮಾರ್ಗ'ದಲ್ಲಿ ಎಷ್ಟರಮಟ್ಟಿಗೆ ಆಗಿದೆಯೆಂಬುದನ್ನು ಯಾರೂ ವಿಮರ್ಶಿಸಿಲ್ಲ. ಭಾಮಹನ ಮೇಲೆ ಧರ್ಮಕೀರ್ತಿಯ ಪ್ರಭಾವವಿದೆಯೆಂಬುದೊಂದು ಊಹೆ. ನೋಡಿ : ಕೆ. ಕೃಷ್ಣಮೂರ್ತಿ, 'ಕನ್ನಡ ಕಾವ್ಯಾಲಂಕಾರ', ಪು. ೯೦-೯೨. ಆದ್ದರಿಂದ 'ಕವಿರಾಜಮಾರ್ಗ' ಧರ್ಮಕೀರ್ತಿಯಿಂದ ಪರೋಕ್ಷವಾಗಿ ಪ್ರಭಾವಿತವಾಗಿರಬಹುದು.
111 ರಂ. ಶ್ರೀ. ಮುಗಳಿ, ಪೂರ್ವೋಕ್ತ, ಪು. ೫೯.
112 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪೀಠಿಕೆ, ಪು. lxiii–iv.
113-14 'ಕವಿರಾಜಮಾರ್ಗಪ್ರಶಸ್ತಿ', ಪು. ೩ ; ನಿವೇದನ, ಪು. i.
115-16 ಸಕಸಾಚ., I, ಪು. ೮೬-೮೭.
117 ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೪೧.
118-19 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. lxxvi ; lxvii–viii.
120-21 ಕೆ. ಕೃಷ್ಣಮೂರ್ತಿ, ಪೂರ್ವೋಕ್ತ, ಪು. ೧೯ ; ೩೮.
122 'ಕನ್ನಡ ಕೈಪಿಡಿ', I, ಪು. ೧೬೭.
123 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪೀಠಿಕೆ, ಪು. lxix.
124 ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೧೨೯.
125 ಸಕಸಾಚ., I, ಪು. ೮೭, ೮೮.
126 ಈ ಲೇಖನದಲ್ಲಿ ಕೊಟ್ಟಿರುವ ದಂಡಿ ಭಾಮಹರ ಶ್ಲೋಕಗಳ ಗದ್ಯಾನುವಾದ ಕೆ. ಕೃಷ್ಣಮೂರ್ತಿಯವರದು.
127-28 ಸಕಸಾಚ., I, ಪು. ೯೭ ; ೮೮-೯೭.
129 ಸಿ.ಪಿ.ಕೆ., 'ಪರಿಭಾವನೆ', ಮೈಸೂರು, ೧೯೬೯, ಪು. ೬-೯.
130 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೧೨೭.
131 ಕೆ. ಕೃಷ್ಣಮೂರ್ತಿ, 'ಕನ್ನಡ ಕಾವ್ಯಾಲಂಕಾರ', ಪು. ೮ ಅ.ಟಿ.

132 'ಕನ್ನಡ ಸಾಹಿತ್ಯ ಚರಿತ್ರೆ', ಪು. ೬೦.
133-34 'ಕವಿರಾಜಮಾರ್ಗಪ್ರಶಸ್ತಿ', ಪು. ೭-೧೯.
135-37 ಸಕಸಾಚ., I, ಪು. ೮೯; ೮೯; ೯೭.
138 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪೀಠಿಕೆ, ಪು. lxix.
139 ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೪೨-೪೩.
140 ಸಕಸಾಚ., I, ಪು. ೯೦.
141-42 ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೪೫; ೪೮.
143 ಕೆ. ಕೃಷ್ಣಮೂರ್ತಿ, 'ಕನ್ನಡದಲ್ಲಿ ಕಾವ್ಯತತ್ತ್ವ', ಪು. ೩೫.
144 ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೧೨೫.
145 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೧೮೯.
146-47 'ಕವಿರಾಜಮಾರ್ಗಪ್ರಶಸ್ತಿ', ಪು. ೩೬; ೩೮-೩೯.
148-49 ಸಕಸಾಚ., I, ಪು. ೯೧; ೯೮.
150 'ಕವಿರಾಜಮಾರ್ಗಪ್ರಶಸ್ತಿ', ಪು. ೪೧.
151 ಸಕಸಾಚ., I, ಪು. ೯೨.
152 ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೧೨೧.
153 ವಾಮನನ 'ವಿಶಿಷ್ಟ ಪದರಚನಾ ರೀತಿಃ' ಎಂಬ ಉಕ್ತಿಯನ್ನು ನೆನೆಯಬಹುದು.
154 ಸಕಸಾಚ., I, ಪು. ೯೧-೯೨.
155 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪೀಠಿಕೆ, ಪು. lxvi.
156-57 'ಕವಿರಾಜಮಾರ್ಗವಿವೇಕ', ಪು. ೧೬೫; ೧೬೬.
158 'ಕವಿರಾಜಮಾರ್ಗಪ್ರಶಸ್ತಿ', ಪು. ೪೪.
159 ಸಕಸಾಚ., I, ಪು. ೯೨.
160 ಕಾವ್ಯಮಾರ್ಗಗಳನ್ನು ದಿಗ್ವಾಚಕಗಳಿಂದ ಹೆಸರಿಸುವುದು ಹೊಸದೇನಲ್ಲ; ಅದು ಬಾಣನ 'ಹರ್ಷಚರಿತ'ದಲ್ಲೇ ಕಂಡುಬರುತ್ತವೆ (ನೋಡಿ: ಪ್ರಸ್ತಾವನಾ ಶ್ಲೋಕ ೭).
161-62 "ಗುಣ-ಮಾರ್ಗವನ್ನು ಪೂರ್ತಿಯಾಗಿ ಪಾಶ್ಚಾತ್ಯರು ಹೇಳುವ 'ಶೈಲಿ'ಗೆ ಸಮೀಕರಿಸಲಾಗದು. ಮಾರ್ಗವು ಕವಿಸ್ವಭಾವನಿಷ್ಠವೆಂಬ ಕುಂತಕನ ನಿಲುವು styleನ ಕಲ್ಪನೆಯ ಹತ್ತಿರಕ್ಕೆ ಬರುತ್ತದೆ" ಎಂದು ಎಂ. ವಿ. ಸೀ. ಅವರೂ ಹೇಳುತ್ತಾರೆ (ಸಕಸಾಚ., I, ಪು. ೯೮).
163 'ಕವಿರಾಜಮಾರ್ಗಪ್ರಶಸ್ತಿ', ಪು. ೪೬.
164 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪೀಠಿಕೆ, ಪು. lxv.
165 ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೧೨೨-೨೩.
166 'ಕವಿರಾಜಮಾರ್ಗಪ್ರಶಸ್ತಿ', ಪು. ೧೭೫.
167 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೨೦೩ ಅ.ಟಿ. ಆದರೆ "ದಂಡಿಯಂತೆ ಮಾರ್ಗಕಾರನೂ ದಕ್ಷಿಣಮಾರ್ಗಪಕ್ಷಪಾತಿಯೆಂಬುದು ಸುವಿದಿತ"ಎನ್ನುತ್ತಾರೆ ಎಂ. ವಿ. ಸೀತಾರಾಮಯ್ಯ (ಅದೇ, ಪು. ೨೦೯).
168 'ಕವಿರಾಜಮಾರ್ಗವಿವೇಕ', ಪು. ೨೬೨.
169 ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೧೨೨.
170 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೨೨೧.

171 'ಕವಿರಾಜಮಾರ್ಗಪ್ರಶಸ್ತಿ', ಪು. ೧೭೫.
172-74 ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೫೦ ; ೧೩೩-೩೪ ; ೧೩೪.
175-76 ಸಕಸಾಚ., I, ಪು. ೯೩ ; ೯೩.
177 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೨೩೩.
178 ಕೆ. ಕೃಷ್ಣಮೂರ್ತಿ, 'ಕನ್ನಡದಲ್ಲಿ ಕಾವ್ಯತತ್ತ್ವ', ಪು. ೩೬.
179 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. lxvii.
180-81 ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೫೧ ; ೫೦.
182 'ಕವಿರಾಜಮಾರ್ಗವಿವೇಕ', ಪು. ೩೧೬.
183 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪೀಠಿಕೆ, ಪು. lxx–lxxi.
184 'ಸ್ವಭಾವೋಕ್ತಿ' ಎಂಬ ಅರ್ಥದಲ್ಲಿ 'ಜಾತಿ' ಎಂಬುದು ಪಾರಿಭಾಷಿಕ ಶಬ್ದ; 'ಜಾತಿ ಸ್ವಭಾವಾಖ್ಯಾನ' ಎನ್ನುವಲ್ಲಿ 'ಜಾತಿ' ಎಂದರೆ 'ವರ್ಗ' ಎಂದರ್ಥ.
185 'ಕವಿರಾಜಮಾರ್ಗಪ್ರಶಸ್ತಿ', ಪು. ೬೯.
186 ಕೆ. ಕೃಷ್ಣಮೂರ್ತಿ, ಪೂರ್ವೋಕ್ತ, ಪು. ೧೩.
187 ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೧೩೯.
188 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೩೨೦ ; ಅಲ್ಲದೆ ನೋಡಿ ; ಪೀಠಿಕೆ, ಪು. lxx, ಸಾಲು ೧೯.
189 ಸಕಸಾಚ., I, ಪು. ೯೩-೯೪.
190 'ರಸೋ ವೈ ಸಃ', ಪು. ೧೮-೨೧.
191 ತೀ. ನಂ. ಶ್ರೀಕಂಠಯ್ಯ, ಪೂರ್ವೋಕ್ತ, ಪು. ೪೪೧.
192 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ೩೪೬.
193 ಸಕಸಾಚ., I, ಪು. ೯೩.
194 'ಕವಿರಾಜಮಾರ್ಗಪ್ರಶಸ್ತಿ', ಪು. ೭೦.
195 'ಕನ್ನಡ ಸಾಹಿತ್ಯ ಚರಿತ್ರೆ', ಪು. ೬೧.
196 ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೧೩೦.
197 ನೋಡಿ : ತೀ. ನಂ. ಶ್ರೀಕಂಠಯ್ಯ, ಪೂರ್ವೋಕ್ತ, ಪು. ೩೦೬.
198 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೩೫೩.
199 ಕೆ. ಕೃಷ್ಣಮೂರ್ತಿ, 'ಕನ್ನಡ ಕಾವ್ಯಾಲಂಕಾರ', ಪು. ೬೯ ಅ.ಟಿ.
200 'ಕವಿರಾಜಮಾರ್ಗವಿವೇಕ', ಪು. ೩೧೦.
201 'ಕವಿರಾಜಮಾರ್ಗಪ್ರಶಸ್ತಿ', ಪು. ೭೯.
202 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೩೫೭ ಅ.ಟಿ.
203 ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೧೩೧.
204 'ಕವಿರಾಜಮಾರ್ಗವಿವೇಕ', ಪು. ೩೧೧-೧೩.
205 'ಆನಂದವರ್ಧನನ ಕಾವ್ಯಮೀಮಾಂಸೆ ಮತ್ತು ಕನ್ನಡ ಧ್ವನ್ಯಾಲೋಕ', ಪು. ೫೦-೫೩.
206-07 'ಭಾರತೀಯ ಕಾವ್ಯಮೀಮಾಂಸೆ', ಪು. ೪೫೫-೬೧ ; ೪೬೧ ಅ.ಟಿ.
208 'ಕನ್ನಡದಲ್ಲಿ ಕಾವ್ಯತತ್ತ್ವ', ಪು. ೧೦, ೧೧, ೩೭ ಅ.ಟಿ.
209-10 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೩೫೮, ೩೫೫ ಅ.ಟಿ. ; ೩೬೩-೬೫.
211 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೩೬೫ ಅ.ಟಿ.

212-13 ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೫೨ ; ೧೩೨-೩೪.

214 'ಕವಿರಾಜಮಾರ್ಗಪ್ರಶಸ್ತಿ', ಪು. ೧೭೫-೭೬ ; ೮೩ ; ೮೭-೮೮ ; ೮೮.

215-16 ಸಕಸಾಚ., I, ಪು. ೯೪ ; ೯೪-೯೫.

217 'ಮಹಾಕಾವ್ಯಲಕ್ಷಣ', ಮೈಸೂರು, ೧೯೬೯, ಪು. ೫೪-೫೫.

218 'ಕವಿರಾಜಮಾರ್ಗಪ್ರಶಸ್ತಿ', ಪು. ೯೦.

219 ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೧೩೮-೩೯.

220 ಸಕಸಾಚ., I, ಪು. ೯೫.

221 'ಕನ್ನಡ ಸಾಹಿತ್ಯ ಚರಿತ್ರೆ', ಪು. ೫೮.

221ಅ 'ಕವಿರಾಜಮಾರ್ಗ' ವಸ್ತು ಅಥವಾ ಶೈಲಿಯಲ್ಲಿ ಒಂದು ಅದ್ಭುತವಾದ ಮಹಾಕೃತಿಯೇನೂ ಅಲ್ಲ ಎಂಬ 'ಶ್ರೀ'ಯವರ ಉಕ್ತಿಯನ್ನಿಲ್ಲಿ ನೆನೆಯಬಹುದು.

222-23 ಮುಳಿಯ ತಿಮ್ಮಪ್ಪಯ್ಯ, 'ಕವಿರಾಜಮಾರ್ಗವಿವೇಕ', ಮೈಸೂರು, ೧೯೭೩, ಪು. ೨೯-೩೦ ; ೩೪.

224 *EI.*, XVIII, p. 234.

225 ನಿಮಗ್ನಾಂ ಯಶ್ಚಲುಕ್ಯಾಬ್ಧೌ ರಟ್ಟರಾಜ್ಯಶ್ರಿಯಂ ಪುನಃ
ಪೃಥ್ವೀಮಿವೋದ್ಧರನ್ ಧೀರೋ ವೀರನಾರಾಯಣೋऽಭವತ್ ॥
('ಕವಿರಾಜಮಾರ್ಗ', ಐಬಿಎಚ್. ಪ್ರಕಾಶನ, ಪು. ೬೫.)

226 *EI.*, VI, p. 68 ; VII, p. 202.

227 A. S. Altekar, *Rashtrakutas and their Times*, p. 74.

228 ಮುಳಿಯ ತಿಮ್ಮಪ್ಪಯ್ಯ, ಪೂರ್ವೋಕ್ತ, ಪು. ೮೨-೯೦.

229 ಗುರುಬುಧಮುಪಯಾತಃ ಸಾರ್ಯಪಾತಾಲಮಲ್ಲಾ
ದುದಯಗಿರಿಮಹಿಮ್ನೋ ರಟ್ಟಮಾರ್ತಂಡದೇವಃ
ಪುನರುದಯಮುಪೇತ್ಯೋದ್ವೃತ್ತ ತೇಜಸ್ವಿ ಚಕ್ರಂ
ಪ್ರತಿಹತಮಥ ಕೃತ್ವಾಲೋಕಮೇಕಃ ಪುನಾತಿ ॥ (*EI.*, XIII, p. 234.)

230 A. S. Altekar, op. cit., p. 72.

231 *EI.*, VI, No. 4.

232 ಪರಘಾನಂದಕರಃ ಪ್ರತಾಪಸಹಿತೋ ನಿತ್ಯೋದಯಸ್ಸೋನ್ನತೇಃ । (ಮಂಡಲ ಶಾಸನ, ಪ. ೧೬) ('ಕವಿರಾಜಮಾರ್ಗವಿವೇಕ'ದಲ್ಲಿ ಉದ್ಧೃತ, ಪು. ೨೭೨.)

233-35 ಮುಳಿಯ ತಿಮ್ಮಪ್ಪಯ್ಯ, ಪೂರ್ವೋಕ್ತ, ಪು. ೧೬೦ ; ೧೮೯ ; ೨೪೦-೪೧.

236 ಎಂ. ವಿ. ಸೀತಾರಾಮಯ್ಯ, 'ಕವಿರಾಜಮಾರ್ಗ', ಪು. ೨೪೧.

237-38 ಮುಳಿಯ ತಿಮ್ಮಪ್ಪಯ್ಯ, ಪೂರ್ವೋಕ್ತ, ಪು. ೨೪೩-೪೪ ; ೭೯-೮೦.

239 ಎಂ. ವಿ. ಸೀತಾರಾಮಯ್ಯ; ಪೂರ್ವೋಕ್ತ, ಪು. ೨೭೩.

240 ಮುಳಿಯ ತಿಮ್ಮಪ್ಪಯ್ಯ, ಪೂರ್ವೋಕ್ತ, ಪು. ೨೮೯.

241 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೩೩೮.

242 *EI.*, II, p. 98 ; 202.

243 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೨೪೧-೪೨.

244 'ಕಾವ್ಯಾವಲೋಕನ', 'ಶಬ್ದಮಣಿದರ್ಪಣ' ಮತ್ತು 'ಶಬ್ದಾನುಶಾಸನ'ಗಳಲ್ಲಿ ನೃಪತುಂಗ ಪರವಾದ ಕೆಲವು ಪದ್ಯಗಳು ಕಂಡುಬರುತ್ತವೆ. ಇವುಗಳ ಗ್ರಥನಕಾಲ, ಕರ್ತೃತ್ವ, ಆಕರ ಗಳ ಬಗೆಗೆ ನಿಶ್ಚಿತವಾಗಿ ಏನೂ ತಿಳಿಯದು. ಆ ಪದ್ಯಗಳು ಕ್ರಮವಾಗಿ :

ಕರಿವೋಲ್ ಗುಣಭದ್ರಂ ಕೇ
ಸರಿವೋಲ್ ನಿರ್ವ್ಯಾಜಶೌರ್ಯನಂಭೋನಿಧಿವೋಲ್
ಶರಣಾಗತರಕ್ಷಣಪಟು
ಗಿರಿವೋಲ್ ನಿಷ್ಕಂಪನಾ ನೃಪತುಂಗಂ ॥ (ಪ. ೩೩೯)

ವೀರನುದಾರಂ ಶುಚಿಗಂ
ಭೀರಂ ನಯಶಾಲಿ ಕೈದುವೊತ್ತರದೇವಂ
ಗಾರೆಜಿಗರ್ ನೃಪತುಂಗಂಗೆ....॥ (ಸೂ. ೧೫೧)

ಇರ್ಮಡಿ ಬಲಿಗೆ ದಧೀಚಿಗೆ
ಮೂರ್ಮಡಿ ಜೀಮೂತವಾಹನಂಗಂ ಬಗೆಯಲ್
ನೂರ್ಮಡಿ ಶಿಬಿಗಂ ದಿಟಂ ಸಾ
ಸಿರ್ಮಡಿ ಮಿಗಿಲಿಳೆಗೆ ಚಾಗದೊಳ್ ನೃಪತುಂಗಂ ॥ (ಸೂ. ೩೫೨)

245 *EI.*, XVIII, p. 234f.
246 ಭೀಮರಾವ್ ಚಿಟಗುಪ್ಪಿ, 'ಕವಿರಾಜಮಾರ್ಗಪ್ರಶಸ್ತಿ', ಧಾರವಾಡ, ೧೯೭೨, ಪು. ೧೦೦-೦೨.
247 ಎಂ. ವಿ. ಸೀತಾರಾಮಯ್ಯ, 'ಕವಿರಾಜಮಾರ್ಗ', ಬೆಂಗಳೂರು, ೧೯೬೮, ಪು. ೧೨೨.
248 'ಶಬ್ದಮಣಿದರ್ಪಣ', ಸೂ. ೪೫ (ಉಸ್ಮಾನಿಯ ವಿಶ್ವವಿದ್ಯಾನಿಲಯದ ಓಲೆಪ್ರತಿ).
249 ರಂ. ಶ್ರೀ. ಮುಗಳಿ, 'ಕನ್ನಡ ಸಾಹಿತ್ಯ ಚರಿತ್ರೆ', ಮೈಸೂರು, ೧೯೫೩, ಪು. ೨೨.
250-51 ಆ. ನೇ. ಉಪಾಧ್ಯೆ, ಪುರುಷವ್ರತದ ನಿಶ್ಚಿತ ಅರ್ಥ, ಕಸಾಪ., ೫೯-೧, ಪು. ೬೭.
252 'ಕವಿರಾಜಮಾರ್ಗವಿವೇಕ', ಮೈಸೂರು, ೧೯೭೩, ಪು. ೫೭.
253 ಆರ್. ಎಸ್. ಪಂಚಮುಖಿ, ಅರಿಕೇಸರಿಯೂ ಪಂಪನ ಯುಗವೂ, ಕಸಾಪ., ೩೦-೨.
254 'ಕವಿರಾಜಮಾರ್ಗವಿವೇಕ', ಪು. ೨೭೧-೭೩.
255 *EI.*, VII, p. 212; *KI.*, I, pp. 17–18.
256 ಎ. ಎಂ. ಅಣ್ಣಿಗೇರಿ, 'ಪಟ್ಟದಕಲ್ಲ ಗುಡಿಗಳು', ಧಾರವಾಡ, ೧೯೬೦, ಪು. ೮೦.
257 *EC.*, XIV, 175.
258 ರಂ. ಶ್ರೀ. ಮುಗಳಿ, ಪೂರ್ವೋಕ್ತ, ಪು. ೬೨.

259 ಎಂ. ವಿ. ಸೀತಾರಾಮಯ್ಯ, 'ಕವಿರಾಜಮಾರ್ಗ', ಬೆಂಗಳೂರು, ೧೯೬೮, ಪೀಠಿಕೆ, ಪು. lxix.
260 ರಾ. ನರಸಿಂಹಾಚಾರ್ಯ (ಸಂ.), 'ನಾಗವರ್ಮ ಕವಿ ವಿರಚಿತ ಕಾವ್ಯಾವಲೋಕನಂ ಮತ್ತಂ ತತ್ಕವಿಕೃತ ಕರ್ಣಾಟಕ ಭಾಷಾಭೂಷಣಂ', ಬೆಂಗಳೂರು, ೧೯೦೩, ಪು. ೩೧.
261-63 'ಶಬ್ದಮಣಿದರ್ಪಣದ ಪಾಠಾಂತರಗಳು', ಧಾರವಾಡ, ೧೯೭೪, ಪು. ೩೯, ೪೧; ೫೪-೫೫; ೭೪-೭೫.

264 ಈ ಪದ್ಯವನ್ನು 'ಕವಿರಾಜಮಾರ್ಗ'ದ ಪ್ರಕ್ಷಿಪ್ತ ಪದ್ಯಗಳಲ್ಲಿ ಒಂದು ಎಂದು ಪರಿಗಣಿಸಿರುವ ಎಂ. ವಿ. ಸೀತಾರಾಮಯ್ಯನವರು ಭಟ್ಟಾಕಳಂಕ (ಅಥವಾ 'ಶಬ್ದಾನುಶಾಸನ'ದ ವ್ಯಾಖ್ಯಾನಕಾರನು) 'ಕವಿರಾಜಮಾರ್ಗ'ದಿಂದಲೇ ಇದನ್ನು ಉದ್ಧರಿಸುವ ಸಂಭವ ಹೆಚ್ಚು ಎಂದು ಹೇಳುವುದು ಗಮನಾರ್ಹವಾಗಿದೆ. ನೋಡಿ: ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪು. ೪೨೫.

265 ಟಿ. ವಿ. ವೆಂಕಟಾಚಲ ಶಾಸ್ತ್ರೀ, 'ಕನ್ನಡ ಛಂದಸ್ಸು', ಮೈಸೂರು, ೧೯೭೦, ಪು. ೧೦೯.

266 ರಾ. ಸ್ವ. ಪಂಚಮುಖಿ, 'ಕವಿಜಿಹ್ವಾಬಂಧನಂ', ಧಾರವಾಡ, ೧೯೫೦, ಉಪೋದ್ಘಾತ, ಪು. ೩೦.

267 ಅದೇ, ಪು. ೩೧-೩೪ ; ಉಪೋದ್ಘಾತ, ಪು. ೫.

268 ಕೆ. ಕೃಷ್ಣಮೂರ್ತಿ, 'ಕನ್ನಡದಲ್ಲಿ ಕಾವ್ಯತತ್ತ್ವ', ಮೈಸೂರು, ೧೯೬೪, ಪು. ೩೮.

269 ತೀ. ನಂ. ಶ್ರೀಕಂಠಯ್ಯ, 'ಭಾರತೀಯ ಕಾವ್ಯಮೀಮಾಂಸೆ', ಮೈಸೂರು, ೧೯೬೮, ಪು. ೪೭೭.

270 ಕೆ. ಕೃಷ್ಣಮೂರ್ತಿ, ಪೂರ್ವೋಕ್ತ, ಪು. ೪೨.

271-74 ರಾ. ನರಸಿಂಹಾಚಾರ್ಯ, ಪೂರ್ವೋಕ್ತ, ಪು. ೧೬ ; ೧೭ ; ೧೮.

275 ಹೋಲಿಸಿ :

| ಕವಿರಾ., : ಕಾವ್ಯಾವ | ಕವಿರಾ., : ಕಾವ್ಯಾವ |
|---|---|
| ೨– ೬೭ : ೫೦೨ | ೩– ೭ : ೬೦೯ |
| ೨– ೭೪ : ೫೨೦ | ೩– ೯೭ : ೭೨೦ |
| ೨–೧೪೫ : ೫೯೭ | ೩–೧೨೧ : ೭೫೨ |
| ೨–೧೪೬ : ೫೯೫ | ೩–೧೩೯ : ೭೨೨ |

276 Sloka Metre in Kannada Literature, *Srikanthika*, Mysore, 1973, p. 203.

277 ತೀ. ನಂ. ಶ್ರೀಕಂಠಯ್ಯ, ಪೂರ್ವೋಕ್ತ, ಪು. ೪೯೪.

278 ಎ. ವೆಂಕಟರಾವ್, ಎಚ್. ಶೇಷ ಅಯ್ಯಂಗಾರ್, 'ಕವಿರಾಜಮಾರ್ಗ', ಮದರಾಸು, ೧೯೩೦, ಪೀಠಿಕೆ ಪು. ix.

279 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಟಿಪ್ಪಣಿಗಳು, ಪು. ೩೬೦.

280 'ಕನ್ನಡ ಸಾಹಿತ್ಯ ಚರಿತ್ರೆ', ಮೈಸೂರು, ೧೯೭೧, ಪು. ೫೭.

281 'ಭಾರತೀಯ ಕಾವ್ಯಮೀಮಾಂಸೆ', ಮೈಸೂರು, ೧೯೭೩, ಪು. ೩೫೦.

282 'ಕನ್ನಡದಲ್ಲಿ ಕಾವ್ಯತತ್ತ್ವ', ಮೈಸೂರು, ೧೯೬೪, ಪು. ೩೮.

283 'ಕವಿರಾಜಮಾರ್ಗ', ಬೆಂಗಳೂರು, ೧೯೬೮, ಪೀಠಿಕೆ, ಪು. lxxiii–lxxiv.

284 'ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ', ಧಾರವಾಡ, ೧೯೭೩, ಪು. ೧೭.

285 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ', ೧೯೬೨, ಪು. ೩೩೧.

286 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ಪೀಠಿಕೆ, ಪು. lxxv ; ಎಂ. ಎಂ. ಕಲಬುರ್ಗಿ, ಪೂರ್ವೋಕ್ತ, ಪು. ೧೫.

287 ಎಂ. ವಿ. ಸೀತಾರಾಮಯ್ಯ, ಕವಿರಾಜಮಾರ್ಗದಲ್ಲಿನ ರಾಮಾಯಣ ಪದ್ಯಗಳು, ಕಸಾಪ., ೫೧-೧, ೨ ; ಕವಿರಾಜಮಾರ್ಗ : ಶ್ರೀವಿಜಯ ಕರ್ತೃತ್ವದ ಬಗೆಗೆ ಹೊಸ ಬೆಳಕು, ಪ್ರಕ., ೫೫-೩.

288 ತೀ. ನಂ. ಶ್ರೀಕಂಠಯ್ಯ, ಪೂರ್ವೋಕ್ತ, ಪು. ೩೫೦.

289 ಎಂ. ವಿ. ಸೀತಾರಾಮಯ್ಯ, ಪೂರ್ವೋಕ್ತ, ೧೯೬೮, ಪೀಠಿಕೆ, ಪು. lxxiv.

290 ಎಂ. ಎಂ. ಕಲಬುರ್ಗಿ, ಪೂರ್ವೋಕ್ತ, ಪು. ೧೪.

## ಅಧ್ಯಾಯ ಎಂಟು

# ವೈಶಿಷ್ಟ್ಯ, ಸಾಧನೆ

ಕನ್ನಡ ಸಾಹಿತ್ಯದ ಚರಿತ್ರೆಯನ್ನು ಪರಿಚಯ ಮಾಡಿಕೊಳ್ಳುವ ಮೊದಲು, ಅದರ ಮೂಲಸಾಮಗ್ರಿಯೂ ಪ್ರೇರಕಶಕ್ತಿಯೂ ಆಗಿರುವ ಭಾರತೀಯ ಜನಜೀವನವನ್ನು ಹಿನ್ನೆಲೆಯಾಗಿ ತಿಳಿಯುವುದು ಪ್ರಸ್ತುತವಾಗುತ್ತದೆ. ಆ ಜನಜೀವನ ಐತಿಹಾಸಿಕ, ಧಾರ್ಮಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಎಂಬ ನಾಲ್ಕು ಮುಖಗಳನ್ನುಳ್ಳದ್ದು. ಹಲವು ಶತಮಾನಗಳ ಹಿಂದಿನಿಂದಲೂ ಕಾಲಪಾತ್ರವನ್ನು ತುಂಬಿ ಹರಿಯುತ್ತಿರುವ ಭಾರತದ ಜೀವವಾಹಿನಿ ಅದು. ಇದರಿಂದ ವಿಶಿಷ್ಟವಾದೊಂದು ವ್ಯಕ್ತಿತ್ವ ಈ ದೇಶಕ್ಕೆ ಸಾಧ್ಯವಾಗಿದೆ. ಸಹಸ್ರಾರು ವರ್ಷಗಳ ಹಿಂದಿನ ಶಿಲಾ ಮತ್ತು ಲೋಹಯುಗಗಳೂ ಈಚೆಯ ಸೈಂಧವ ಮತ್ತು ಆರ್ಯಸಂಸ್ಕೃತಿಯ ಯುಗಗಳೂ ಈ ನೆಲದಮೇಲೆ ಕಾಲದ ಮೆರೆವಣಿಗೆಯಂತೆ ಸಾಗಿಹೋಗಿವೆ; ಇಲ್ಲಿಯ ಸಮಾಜ, ಸಂಸ್ಕೃತಿ ಸಾಹಿತ್ಯಗಳು ಇತಿಹಾಸಗತಿಯ ಪ್ರತಿಹಿಡಿದು ಕಾಲಕಾಲಕ್ಕೆ ಮಹತ್ತ್ವದ ಹಜ್ಜೆಗಳನ್ನಿಡುವಂತೆ, ಅವು ತಮ್ಮ ಪ್ರಭಾವ ಪರಿಣತಿಗಳನ್ನು ಸರ್ವತೋಮುಖವಾಗಿ ಬೆಳಸಿಕೊಳ್ಳುವಂತೆ ಮಾಡಿವೆ.

ಆರ್ಯ ದ್ರಾವಿಡ ಸಂಸ್ಕೃತಿಗಳು ಎರಡು ಮಹಾಪ್ರವಾಹಗಳಿಗೆ ಸದೃಶವಾದವು. ತನಿಗವಲುಗಳಾಗಿ ಒಮ್ಮೆ, ಕೂಡಲುಗಳಾಗಿ ಇನ್ನೊಮ್ಮೆ, ಏಳಿಳಿತಗಳನ್ನು ಪಡೆದು ನಿರಂತರವಾಗಿ ಹರಿಯುತ್ತ ಅವು ಭಾರತವೆಂಬ ಕ್ಷೇತ್ರವನ್ನು ಸಸ್ಯಶಾಲಿನಿಯನ್ನಾಗಿ ಮಾಡಿವೆ. ಫಲವಾಗಿ ಭಾರತೀಯ ಸಂಸ್ಕೃತಿಯೆಂಬುದು ರೂಪಗೊಂಡಿದೆ; ಜೀವನಸೌಖ್ಯದ ಸಾಧನಗಳೂ ದೈವಿಕ ಧಾರ್ಮಿಕ ಕಲ್ಪನೆಗಳೂ ಸೃಷ್ಟಿಯಾಗಿವೆ.

ಈ ಯಾವುದೋ ಘಟ್ಟದಲ್ಲಿ, ಸಂಸ್ಕೃತಭಾಷೆ ಭರತಖಂಡದ ಸಂಸ್ಕೃತಿಯ ಮುಖವಾಣಿಯಾಗಿ, ವೈದಿಕ ಸಂಸ್ಕೃತಿ ಸಾಹಿತ್ಯಗಳು ಪಲ್ಲವಿಸಿದುವು. ಆಧ್ಯಾತ್ಮಿಕ ಸತ್ಯಾನ್ವೇಷಣೆಯ ಪ್ರಯತ್ನವನ್ನು ಪ್ರಕಟಿಸುವ ಉಪನಿಷತ್ತುಗಳಲ್ಲಿ ಆ ಸಂಸ್ಕೃತಿಯೂ ಭಾಷೆಯೂ ಉಚ್ಚಕೋಟಿಯನ್ನು ಮುಟ್ಟಿದುವು. ಕಾಲಕ್ರಮದಲ್ಲಿ ಜೀವನವಿಧಾನದ ವೃತ್ತಿಭೇದಗಳು ಸಾಮಾಜಿಕ ಸ್ಥಾನಮಾನಗಳಿಗೆ ಎಡೆಮಾಡಿದುವು; ವರ್ಣಪದ್ಧತಿ ಕಾಲಿಟ್ಟಿತು.

ವೈದಿಕ ಸಂಸ್ಕೃತಿ ಶ್ರುತಿಸ್ಮೃತಿಗಳ ಮೂಲಕ ವಿಹಿತಕರ್ಮಗಳ ಆಚಾರವಿಚಾರಗಳನ್ನು ಪ್ರತಿಪಾದಿಸಿ ಭಾರತೀಯ ಐಕ್ಯವನ್ನು ಸಾಧಿಸುವಲ್ಲಿ ಕೃತಕೃತ್ಯವಾದಮೇಲೆ, ಅದರ ಜನಪ್ರಿಯತೆ ತಗ್ಗಿತು. ಈ ಸಂಧಿಕಾಲದಲ್ಲಿ, ಕಾರಣಪುರುಷರೊಬ್ಬರ ಕ್ರಾಂತದರ್ಶಿತ್ವದ

ಫಲವಾಗಿ ಬೌದ್ಧ ಮತ್ತು ಜೈನಧರ್ಮಗಳು ಭರತಖಂಡದಲ್ಲಿ ತಲೆಯೆತ್ತಿದುವು. ಅವು ಜನೋಪಯುಕ್ತವಾದ ಸರಳವಾದ ಜೀವನಸಂಹಿತೆಗಳನ್ನು ಪ್ರಚಾರಮಾಡಿದುವು; ಆಧ್ಯಾತ್ಮಿಕ ಚಿಂತನೆಗಳನ್ನು ಸರಳಗೊಳಿಸಿದುವು. ಜನಸಾಮಾನ್ಯಕ್ಕೆ ಅವನ್ನು ಮುಟ್ಟಿಸಲು ಅವರ ದೈನಂದಿನದ ಆಡುನುಡಿಗಳನ್ನೇ ಮಾಧ್ಯಮವನ್ನಾಗಿ ಅವರು ಸಂಕೋಚವಿಲ್ಲದೆ ಬಳಸಿದ್ದು, ನಾಡಿನ ಪುಣ್ಯದ ಪೂರ್ವದಿಗಂತದಲ್ಲಿ ನವ ಅರುಣೋದಯವಾದಂತಾಯಿತು. ಪ್ರಾಕೃತ ಭಾಷೆಗಳೇ ಈಗ ದೇವವಾಣಿಗಳಾದುವು, ಪರಿಪುಷ್ಟಗೊಂಡುವು. ದೇಶೀಯ ಭಾಷೆಗಳ ಸಾಹಿತ್ಯೇತಿಹಾಸದಲ್ಲಿ ಇದೊಂದು ಅಮೃತ ಮುಹೂರ್ತ.

ಈ ದೃಷ್ಟಿಯಿಂದ, ಕ್ರಿ.ಪೂ. ೩ನೆಯ ಶತಮಾನ ಬಹುಮುಖ್ಯವಾದೊಂದು ಕಾಲಘಟ್ಟ. ಮೌರ್ಯಚಕ್ರವರ್ತಿ ಅಶೋಕನ ಉದಾರಾಶ್ರಯದಿಂದ ಬೌದ್ಧಧರ್ಮ ಭಾರತವನ್ನೆಲ್ಲ ವ್ಯಾಪಿಸಿತು. ಅವರೆಗೆ ಮೌಖಿಕವಾಗಿದ್ದ ವಿದ್ಯೆ, ಲಿಪಿಯ ಆಸರೆ ಪಡೆದು ಲಿಖಿತಗೊಳ್ಳತೊಡಗಿದ್ದು ಈ ಕಾಲದಲ್ಲಿ. ವ್ಯಾಪಕ ಧರ್ಮಪ್ರಸಾರಕಾರ್ಯಕ್ರಮದ ಫಲವಾಗಿ ಅಶೋಕ ಹೊರಡಿಸಿದ ಅನೇಕ ಶಿಲಾಶಾಸನಗಳು, ಬೌದ್ಧಧರ್ಮದ ಸಾರ ಸಂಪನ್ನ ನೈತಿಕಮೌಲ್ಯಗಳನ್ನು ಕರ್ಣಾಟಕದ ಜನತೆಯ ಕಣ್ಣು ಕಿವಿಗಳಲ್ಲಿ ತುಂಬಿದುವು. ಅಲ್ಲಿಂದಿತ್ತ ಆ ಧರ್ಮ ಸು. ೪ ಶತಮಾನಗಳ ಕಾಲ ಇಲ್ಲಿಯ ಸಾಮಾಜಿಕ ಸಾಂಸ್ಕೃತಿಕ ಕ್ಷೇತ್ರಗಳನ್ನು ಹದಗೊಳಿಸಿತು. ಆ ಮೊದಲಿನ ವೈದಿಕ, ಪೌರಾಣಿಕ ಮತ್ತು ಜನಪದ ಧರ್ಮಗಳ ಜೊತೆಗೆ ಪ್ರಭಾವಶಾಲಿಯಾಗಿ ತಾನೂ ಸೇರಿತು.

ಈಯವಧಿಯಲ್ಲಿ ಕರ್ಣಾಟಕದಲ್ಲಿ ಕನ್ನಡ ಭಾಷಾ ಸಾಹಿತ್ಯಗಳ ಸ್ಥಿತಿಗತಿಗಳು ಹೇಗಿದ್ದುವು ಎಂಬುದನ್ನು ತಿಳಿಯಲು ಈಗ ನಮಗೆ ದೊರೆಯುವ ಮಾಹಿತಿಗಳು ಅತ್ಯಲ್ಪ. ವಿಚಾರಣೀಯವಾದವನ್ನು ಹೊರತುಪಡಿಸಿದರೂ, ಕೆಲವಾದರೂ ಸ್ಪಷ್ಟಸಾಕ್ಷ್ಯಗಳು ಭಾಷೆಯ ಅಸ್ತಿತ್ವವನ್ನು ಸಿದ್ಧಪಡಿಸಲು ಸಮರ್ಥವಾಗಿವೆ. ಕ್ರಿ.ಶ. ಸು. ೨ನೆಯ ಶತಮಾನದ ಗ್ರೀಕ್ ಭೂಗೋಲಶಾಸ್ತ್ರಜ್ಞ ಟಾಲೆಮಿಯ ಭೂಗೋಲದಲ್ಲಿ ಉಲ್ಲೇಖಿಸಲಾಗಿರುವ ಗ್ರೀಕ್ ರೂಪಗಳ ಕನ್ನಡ ಸ್ಥಲನಾಮಗಳು ಕೆಲವು ಅಂಥ ಸಾಕ್ಷ್ಯಗಳಲ್ಲಿ ಬಹುಮುಟ್ಟಿಗೆ ನಿರ್ವಿವಾದವಾದವು. ಆದರೆ ಲಿಖಿತ ಸಾಕ್ಷ್ಯಗಳ ಕಾಲಕ್ಕೂ ಮೊದಲು, ಎಷ್ಟೋ ಮೊದಲು ಭಾಷೆಯಿತ್ತೆಂದು ತಿಳಿಯುವುದು ಅತಾರ್ಕಿಕವೇನಲ್ಲ.

ಹೀಗೆಯೇ ಕನ್ನಡ ಸಾಹಿತ್ಯದ ಅಸ್ತಿತ್ವವನ್ನೂ ಉಪಲಬ್ಧವಾಗಿರುವ ಐತಿಹಾಸಿಕ ಮತ್ತು ಅನ್ಯರೀತಿಯ ಸಾಕ್ಷ್ಯಾಧಾರಗಳನ್ನು ಆಶ್ರಯಿಸಿ ಅನುಮಾನಿಸಲು ಸಾಧ್ಯವಿದೆ. ಈ ಅನುಮಾನದ, ವಿವೇಚನೆಯ ಮೂಲಸ್ಥಾನ ಎಂದರೆ ಕನ್ನಡ ಭಾಷೆಯಲ್ಲಿ, ಅದರ ಸಾಹಿತ್ಯೋದಯ ಕಾಲದಲ್ಲಿ, ಬೌದ್ಧಸಾಹಿತ್ಯದ ಒಂದು ಘಟ್ಟವಿದ್ದಿರಬೇಕು ಎನ್ನುವುದು. ಅದಕ್ಕಿಂತ ಮೊದಲು ಸಾಂಸ್ಕೃತಿಕ ಕಾರಣಗಳಿಂದ ಕರ್ಣಾಟಕದಲ್ಲಿ ಒಂದು ಜನಪದ ಸಾಹಿತ್ಯದ ಘಟ್ಟವಿದ್ದಿರಬೇಕು ಎನ್ನುವುದು ತಾರ್ಕಿಕವಾಗಿದೆಯೆಂದು ಹೇಳಬಹುದು. ಆದರೆ ಜನಪದ ಸಾಹಿತ್ಯ ಘಟ್ಟದ ಅಸ್ತಿತ್ವವನ್ನು ತರ್ಕಸಮ್ಮತವೆಂದು ಒಪ್ಪುವರೆಲ್ಲರೂ, ಆ ಮುಂದಿನ ಬೌದ್ಧಸಾಹಿತ್ಯ ಘಟ್ಟದ ಅಸ್ತಿತ್ವವನ್ನು ಒಪ್ಪುವರೆಂದು ಹೇಳುವಂತಿಲ್ಲ;

ಅಸ್ತಿತ್ವವನ್ನು ಸ್ಥಿರೀಕರಿಸುವ ದಾಖಲೆಗಳು ದೊರೆತಲ್ಲದೆ ಈ ಸಂದಿಗ್ಧತೆ ದೂರವಾಗುವಂತೆಯೂ ಇಲ್ಲ. ಅಂಥ ದಾಖಲೆಗಳು ದೊರೆಯುವ ಸಾಧ್ಯತೆ ಪ್ರಾಯಃ ಕಡಿಮೆ.

ಕನ್ನಡ ಭಾಷೆ, ಕಾಲಗಣನೆ ಸಾಧ್ಯವಿಲ್ಲದ ಹಳಗಾಲದಿಂದಲೂ ಕನ್ನಡ ನಾಡಿನಲ್ಲಿ ಬಳಕೆಯಾಗುತ್ತ ಬಂದಿರುವ ಭಾಷೆ. ಕದಂಬ, ಬಾದಾಮಿ ಚಾಲುಕ್ಯ ಇಂಥ ಪ್ರಬಲ ಅಚ್ಚಕನ್ನಡ ರಾಜಮನೆತನಗಳು ಇಲ್ಲಿ ಪ್ರವರ್ಧಮಾನಕ್ಕೆ ಬಂದಮೇಲೆ ಅದು ಒಳ್ಳೆಯ ದೆಸೆಗೇರಿದಂತೆ ಕಾಣುತ್ತದೆ; ಹೆಚ್ಚು ಹೆಚ್ಚು ಜನಾದರಣೆ ರಾಜಮನ್ನಣೆಗಳನ್ನು ಗಳಿಸಿ ಸಾಹಿತ್ಯಶಕ್ತಿಯನ್ನು ಮೈಗೂಡಿಸಿಕೊಂಡಂತೆ ತೋರುತ್ತದೆ. ಬೆಳೆವಣಿಗೆಗೆ ಒಳ್ಳೆಯ ಸನ್ನಿವೇಶವಿದ್ದರೂ, ಇದು ಸಾಧ್ಯವಾದುದು ಸ್ವಲ್ಪ ತಡವಾಗಿಯೇ. ಸಂಸ್ಕೃತ ಪ್ರಾಕೃತಗಳು ರಾಜಾಸ್ಥಾನಗಳಲ್ಲಿಯೂ ಪಂಡಿತವರ್ಗದಲ್ಲಿಯೂ ಪಡೆದಿದ್ದ ಹಿರಿಮೆಗರಿಮೆಗಳಿಂದಾಗಿಯೋ ಏನೋ, ಕನ್ನಡ ಭಾಷೆ ಪೂರ್ವೋಕ್ತ ಭಾಷೆಗಳಲ್ಲಿ ಲಿಖಿತವಾಗುತ್ತಿದ್ದ ಶಾಸನಸಾಹಿತ್ಯದ ನೆರಳಿನಲ್ಲಿ ಸ್ವಲ್ಪಸ್ವಲ್ಪವೇ ತಲೆಯೆತ್ತಲು ಯತ್ನಿಸಿದ್ದು ಕಾಣುತ್ತದೆ. ಪ್ರಾಯಃ ಆ ಬೆಳೆವಣಿಗೆಯು ನಡುನಡುವೆ ಒಂದೊಂದು ಕನ್ನಡ ಶಬ್ದ, ಕೊನೆಯಲ್ಲಿ ಎಲ್ಲೋ ಒಂದೋ ಎರಡೋ ಕನ್ನಡ ವಾಕ್ಯಗಳು, ಒಂಟೊಂಟಿ ಪದ್ಯಗಳು, ಕೆಲವೇ ಪದ್ಯಗಳ ಸಣ್ಣಪುಟ್ಟ ರಚನೆಗಳು—ಈ ಅನುಕ್ರಮದಲ್ಲಿ ಸಾಗಿರಬೇಕು; ಹೀಗೆ ಸಾಗುತ್ತ ಸಾಗುತ್ತ, ಕನ್ನಡ ಭಾಷೆಗೆ ಸಾಹಿತ್ಯದ ಹದ ಹರಹುಗಳು ಮೈಗೂಡಿರಬೇಕು.

ಸಂಸ್ಕೃತ ಪ್ರಾಕೃತ ಭಾಷಾನಿಬದ್ಧವಾದ ಶಾಸನಗಳು ಸು. ೬–೭ನೆಯ ಶತಮಾನಗಳಲ್ಲಿ ಕನ್ನಡ ಶಾಸನಗಳ ಪ್ರಾಚುರ್ಯಕ್ಕೆ ದಾರಿಮಾಡಿದ ಮೇಲೆ, ಕನ್ನಡ ಸಾಹಿತ್ಯ ಒಂದು ಗಟ್ಟಿಯಾದ ನೆಲೆಗಟ್ಟಿನ ಮೇಲೆ ನಿಂತ ಹಾಗೆ ಭಾಸವಾಗುತ್ತದೆ. ಈ ಶಾಸನಸಾಹಿತ್ಯಯುಗದಲ್ಲಿ ತೊಡಗಿ, ಅನಂತರಕಾಲದಲ್ಲಿ ಬೆಳೆಯುತ್ತ ಹೋದ ಜೈನಧರ್ಮವು ಆ ಧರ್ಮದ ಮತಾಚಾರ್ಯರ ಧರ್ಮಶ್ರದ್ಧೆ, ಪಾಂಡಿತ್ಯಶೀಲ ಮತ್ತು ಮತಪ್ರಸಾರಕಾಂಕ್ಷೆಗಳಿಂದ ತಾನೂ ಪುಟಗೊಂಡಿತು, ಕನ್ನಡಿಗರಲ್ಲಿ ಕಾವ್ಯಧರ್ಮವನ್ನೂ ಪ್ರಚೋದಿಸಿತು. ಅವರು, ವಿಖ್ಯಾತ ಜೈನಾಚಾರ್ಯರು ಸಂಸ್ಕೃತ ಪ್ರಾಕೃತ ಭಾಷೆಗಳಲ್ಲಿ ರಚಿಸಿದ್ದ ಹಲವು ಧಾರ್ಮಿಕ ಸೈದ್ಧಾಂತಿಕ ಗ್ರಂಥಗಳ ವಿಷಯಗಳನ್ನೂ ಉದಾತ್ತ ವ್ಯಕ್ತಿಚರಿತೆಗಳನ್ನೂ ದೇಶೀಯರ ಉಪಯೋಗಕ್ಕಾಗಿ ದೇಶೀಯ ಭಾಷೆಯಲ್ಲಿ ವಿವರಿಸುವುದು ಸೂಕ್ತವೆಂದರಿತರು. ಈ ಅರಿವು ದಿಟವಾಗಿ ದೇಶೀಯ ಭಾಷೆಯಲ್ಲಿ ಸಾಹಿತ್ಯ ಸೃಷ್ಟಿಗೆ ಪ್ರಚೋದನೆಯೇ ಆಯಿತು.

ಬೌದ್ಧ ಮತ್ತು ವೈದಿಕ ಧರ್ಮಗಳ ಪ್ರಭಾವ ಕ್ರಮಕ್ರಮವಾಗಿ ತಗ್ಗುತ್ತಹೋದಂತೆ, ರಾಜಾಶ್ರಯ ಜನಾದರಣೆಗಳು ಹೆಚ್ಚಿ, ಪೌರಾಣಿಕ ಧರ್ಮದ ಜೊತೆಗೆ ಜೈನಧರ್ಮ ಪ್ರಾಬಲ್ಯಕ್ಕೆ ಬಂದುದು ಕರ್ಣಾಟಕದ ಇತಿಹಾಸದಿಂದ ತಿಳಿಯುತ್ತದೆ. ಸ್ವತಃ ವೈದಿಕ ಮತಾನುಯಾಯಿಗಳಾಗಿಯೂ ಕದಂಬರೂ ಬಾದಾಮಿ ಚಾಲುಕ್ಯರೂ ಜೈನಧರ್ಮವನ್ನು ಉದಾರವಾಗಿ ಪೋಷಿಸಿ, ಅದು ಮುಂದಿನ ಅವಧಿಯಲ್ಲಿ ನೆಮ್ಮದಿಯಿಂದ ಅಲ್ಲಿ ನೆಲೆಗೊಳ್ಳುವಂತೆ ಮಾಡಿದ್ದರು. ಇದು ಖ್ಯಾತರಾದ ಸ್ಥಳೀಯ ಜೈನಾಚಾರ್ಯರ ಕೈಯಲ್ಲಿ

ವೃದ್ಧಿಂಗತವಾಯಿತು. ಶ್ರವಣಬೆಳ್ಗೊಳದಂತಹ ಜೈನಕ್ಷೇತ್ರದ ನಿಸಿದಿಗಲ್‌ಬರೆಹಗಳು ಬರಲಿದ್ದ ಕಾರ್ಗಾಲದ ಸುವೃಷ್ಟಿಗೆ ಮೊದಲ ಹನಿಗಳಾಗಿ ಸಮರ್ಥರಾದ ಸಾಹಿತ್ಯಕೃಷಿ ಕಂಗೆ ಕರೆಗೊಟ್ಟವು. ಕನ್ನಡಿಗರ ಪುಣ್ಯ, ಕನ್ನಡ ನುಡಿಯ ತಪಸ್ಸು ಫಲಿಸಿದುವು.

ವಸ್ತುಸ್ಥಿತಿಯನ್ನು ಗಮನಿಸಿದರೆ, ಕನ್ನಡ ಸಾಹಿತ್ಯಕ್ಕೆ ಜೈನರೇ ಆದಿಕವಿಗಳೆನ್ನುವ ಮಾತು ಇನ್ನೂ ನಿಲ್ಲತಕ್ಕದ್ದಾಗಿದೆ. ಶ್ರವಣಬೆಳ್ಗೊಳದ ಜೈನಯತಿಗಳ ನಿಸಿದಿಗಲ್ ಬರೆಹಗಳು ಸಂಸ್ಕೃತ ಪ್ರಾಕೃತ ಭಾಷಾ ಸಾಹಿತ್ಯಗಳನ್ನು ಬಲ್ಲವರಾಗಿದ್ದ ಜೈನಕವಿಗಳ ರಚನೆಗಳೇ ಇರಬಹುದು. ಇಂತಹ ಜೈನಕವಿಗಳು, ಖ್ಯಾತ ಪ್ರಾಚೀನ ಮತಾಚಾರ್ಯರು ಸಂಸ್ಕೃತ ಪ್ರಾಕೃತ ಭಾಷೆಗಳಲ್ಲಿ ಆ ಮೊದಲು ಸಮೃದ್ಧವಾಗಿ ರಚಿಸಿದ್ದ ಗಣ್ಯ ಧಾರ್ಮಿಕ ಸೈದ್ಧಾಂತಿಕ ಗ್ರಂಥಗಳಿಗೆ ಕನ್ನಡ ವ್ಯಾಖ್ಯಾನಗಳನ್ನು ಬರೆಯುವುದರ ಮೂಲಕ, ತಮಗರಿವಿಲ್ಲದೆಯೇ ಕನ್ನಡಸಾಹಿತ್ಯಕ್ಷೇತ್ರವನ್ನು ಪ್ರವೇಶಿಸಿದರು. ಬರುಬರುತ್ತ ಜೈನಧರ್ಮ ಎಲ್ಲ ಸಾಮಾಜಿಕ ಸಾಂಸ್ಕೃತಿಕ ಸ್ತರಗಳ ಜನರನ್ನೂ ಒಲಿಸಿದ್ದರ ಪರಿಣಾಮವಾಗಿ ಆ ಧರ್ಮದ ಅನುಯಾಯಿಗಳು ಹೆಚ್ಚಿದರು; ರಾಜಾಶ್ರಯ ಬಲಗೊಂಡಿತು; ಸಂಸ್ಕೃತ ಪ್ರಾಕೃತ ಭಾಷಾತಜ್ಞರಾದ ಪ್ರತಿಭಾವಂತರೂ ಬುದ್ಧಿವಂತರೂ ತಾವೂ ಉತ್ಕೃಷ್ಟ ಸಾಹಿತ್ಯಕೃತಿಗಳನ್ನು ಕನ್ನಡದಲ್ಲಿ ರಚಿಸಲಾರಂಭಿಸಿದರು. ಆ ವೇಳೆಗೆ ವೈದಿಕ ಸಾಹಿತ್ಯ ಯುಗ ಕಳೆದು, ಇತಿಹಾಸ-ಪುರಾಣಗಳ, ಕಾವ್ಯಸ್ಥ ಸಂಸ್ಕೃತ ಸಾಹಿತ್ಯದ ಕಾಲದಲ್ಲಿ ಉತ್ಕೃಷ್ಟವಾದವಧಿಯ ಪ್ರಭಾವ ಕನ್ನಡ ನಾಡಿನ ಜನಜೀವನವನ್ನು ಸಾರವತ್ತಾಗಿ ಮಾಡಿದ್ದಿರಬೇಕು; ಕನ್ನಡ ಜನರ ಸಾಹಿತ್ಯಾಭಿರುಚಿಯನ್ನು ಚೆನ್ನಾಗಿ ಕುದುರಿಸಿದ್ದಿರ ಬೇಕು. ಇದನ್ನು ಪೋಷಿಸಲು ತಕ್ಕ ರಾಜಕೀಯ ಸಾಮಾಜಿಕ ಸಾಕ್ಷ್ಯಾಧಾರಗಳು ಅಂದಿನ ಶಾಸನಸಾಹಿತ್ಯದಲ್ಲಿ ಕಂಡುಬರುವಂತೆ ತೋರುತ್ತವೆ.

ವಸ್ತು, ಭಾಷೆ ಶೈಲಿಗಳ ದೃಷ್ಟಿಯಿಂದ ಸು. ೬–೭ನೆಯ ಶತಮಾನಗಳ ಕನ್ನಡ ಶಾಸನಗಳನ್ನು ಪರಿಶೀಲಿಸಿದರೆ, ಕನ್ನಡ ಜನರ ಸಂಸ್ಕೃತಿ ಸಾಹಿತ್ಯಾಭಿರುಚಿಗಳು ಆಗ ತಾನೇ ಒಂದು ಹದವನ್ನು ಪಡೆಯಲು ಪ್ರಯತ್ನಿಸುತ್ತಿದ್ದಂತೆ ತೋರುತ್ತದೆ. ಸಾಹಿತ್ಯದೃಷ್ಟಿ ಯನ್ನಷ್ಟೇ ಲಕ್ಷಿಸಿ ಹೇಳುವುದಾದರೆ, ಕನ್ನಡ ಗದ್ಯಶಾಸನಗಳು ಹೆಚ್ಚು ಸರಳ, ಸಹಜ ಎನ್ನುವುದೂ ಪದ್ಯಶಾಸನಗಳು ಹೆಚ್ಚು ಸಂಕೀರ್ಣ, ಆಲಂಕಾರಿಕ ಎನ್ನುವುದೂ ಮೊದಲು ಗಮನಕ್ಕೆ ಬರುವ ವಿಷಯ. ವ್ಯಾಪ್ತಿ ಮತ್ತು ರಚನೆಗಳ ದೃಷ್ಟಿಯಿಂದ ಪದ್ಯಲೇಖಗಳು ಈಚಿನವು, ಕೆಲವು ಸಂಕೋಚ ಸೀಮಿತಗಳಿಗೆ ಒಳಗಾದವು; ಆದರೆ ಹೆಚ್ಚು ಸಾಹಿತ್ಯಾಂಶ ಗಳನ್ನು ಪ್ರಕಟಿಸಿರತಕ್ಕವು. ಗದ್ಯಪದ್ಯಗಳಿಗೆ ಪ್ರತ್ಯೇಕವಾದ ಪದವಾಕ್ಯಬಂಧ ಭಾಷಾ ಸ್ವರೂಪದ ದೃಷ್ಟಿಯಿಂದ ಸಹಜರೀತಿಯೇ ಆಗಿದ್ದು, ಉತ್ತರಕಾಲೀನ ಗದ್ಯಪದ್ಯ ಸಾಹಿತ್ಯಗಳ ರೂಪರೇಷೆಗಳ ಹೊಳಹು ಅಲ್ಲಿ ಮುಂದಾಗಿಯೇ ಮೂಡಿರುವಂತೆ, ಮುಂಬೆಳಗು ಚೆಲ್ಲಿರುವಂತೆ ತೋರುತ್ತದೆ.

ಹೀಗಿದ್ದೂ, ಆರಂಭಕಾಲದ ಶಾಸನಸಾಹಿತ್ಯದ ಭಾಷೆಯಲ್ಲಿ, ಭಾಷಾರೂಪಗಳ ದೃಷ್ಟಿಯಿಂದ ಅಸ್ಥಿರತೆ, ವ್ಯಾಕರಣದೃಷ್ಟಿಯಿಂದ ಅವ್ಯುತ್ಪನ್ನತೆ, ಸಾಹಿತ್ಯದೃಷ್ಟಿಯಿಂದ

ನಿರಲಂಕಾರತೆ ಇವು ಅಧಿಕಪ್ರಮಾಣದಲ್ಲಿಯೇ ಗೋಚರಿಸುತ್ತಿರುವುದು ನೋಡಿದರೆ, ಸಂಸ್ಕೃತದಂತಹ ಸಂಪನ್ನ ಭಾಷೆಯಲ್ಲಿ ಕಂಡಂತಹ, 'ಸಾಹಿತ್ಯ'ವೆಂದು ಹೇಳಬಹುದಾದಂತಹ ರಚನೆಗಳು ಕನ್ನಡದಲ್ಲಿ ಎಷ್ಟರಮಟ್ಟಿಗೆ ಆಗಿದ್ದಿತೆಂದು ಹೇಳುವುದು ಕಷ್ಟ. ಶಾಸನ ಮತ್ತು ಕಾವ್ಯಸಾಹಿತ್ಯಗಳು ಪರಸ್ಪರವಾಗಿ ಸಾದೃಶ್ಯವೈದೃಶ್ಯಗಳ ಲಕ್ಷಣಗಳನ್ನು ಸಮಾನವಾಗಿಯೇ ತೋರಿಸುವುದರಿಂದ, ಈ ವಿಷಯದಲ್ಲಿ ನಿರ್ಣಯ ಸ್ವಲ್ಪ ಕಷ್ಟವೇ. ಕಾವ್ಯಸಾಹಿತ್ಯವಿದ್ದುದರ ಬಗೆಗೆ ವಿದ್ವಾಂಸರು ಮಾಡಿರುವ ಊಹೆಗಳು ಪ್ರಮಾಣಿಸಲ್ಪಡಬೇಕಾಗಿವೆ. ಒಂದು ಪಕ್ಷ ಅಂಥವು ದೊರೆಯುವುದಿದ್ದಲ್ಲಿ, ಅವು ಪೂರ್ವದ ಹಳಗನ್ನಡ ಹಳಗನ್ನಡವಾಗುತ್ತಿದ್ದ ಸಂಕ್ರಮಣಕಾಲದ ಭಾಷೆಯಲ್ಲಿ ಬರೆದವಾಗಿರುವ ಸಾಧ್ಯತೆ ಹೆಚ್ಚು; ಆದರೆ ದೊರೆಯುವ ಸಂಭವ ತೀರ ಕಡಿಮೆ.

ಈಚೆಗೆ ವ್ಯಾಖ್ಯಾನಕಾರರೋ ಕವಿಗಳೋ ಆದ ಕೆಲವರ ಹೆಸರುಗಳೂ ಅವರ ರಚನೆಗಳ ಸೂಚನೆಗಳೂ ಸ್ವಲ್ಪಮಟ್ಟಿಗೆ ತಿಳಿದುಬಂದಿರುವುದು ನಿಜ. ಆದರೆ ರಚನೆಗಳಾಗಲಿ ಅವುಗಳ ಭಾಗಗಳಾಗಲಿ ದೊರೆಯದೆ, ಕನ್ನಡ ಸಾಹಿತ್ಯ ಪರಂಪರೆಯ ತಿಳಿವಳಿಕೆಗೆ ಅಷ್ಟುಮಟ್ಟಿಗೆ ದೊಡ್ಡನಷ್ಟವೇ ಆಗಿದೆ. ನಿರ್ದಯಿ ಕಾಲಪುರುಷನ ಹಾವಳಿಗೆ ಸಿಕ್ಕು ಅವೆಲ್ಲ ಹಾಳಾಗಿರುವ ಸಂಭವವೇ ಹೆಚ್ಚು. ಅಂತರ ಬಾಹ್ಯಸಾಕ್ಷ್ಯಗಳಿಂದ ಆದಿಕಾಲದ, ಜೈನಧರ್ಮೀಯರಾದ ಕನ್ನಡ ವ್ಯಾಖ್ಯಾನಕಾರರ ಅಥವಾ ಕವಿಗಳ ಇತಿವೃತ್ತ ವಿವರಗಳ ಮತ್ತು ರಚನೆಗಳ ಸಂಬಂಧದಲ್ಲಿ ಹೊಸ ಬೆಳಕು ಬೀಳುವ ಸಂಗತಿಗಳೇನಾದರೂ ದೊರೆತರೆ, ಕನ್ನಡ ಸಾಹಿತ್ಯ ಪರಂಪರೆಯ ತಿಳಿವಳಿಕೆ ಹೆಚ್ಚು ಸ್ಪಷ್ಟವಾಗುವುದು ಸಾಧ್ಯ.

ಆದಿಕಾಲದ ಕನ್ನಡ ಸಾಹಿತ್ಯದ ಆರಂಭವೂ ಸ್ವರೂಪವೂ ಇನ್ನೂ ದಟ್ಟವಾದ ಮಬ್ಬುಗತ್ತಲೆಯೊಳಗೇ ಅಡಗಿದೆ. ಹದಗೊಂಡ ಭಾಷೆ ಸಾಹಿತ್ಯಸೃಷ್ಟಿಗೂ ಸಾಹಿತ್ಯಸೃಷ್ಟಿ ಭಾಷೆ ಹದಗೊಳ್ಳುವುದಕ್ಕೂ ಅನುವಾದ ಕಾಲವನ್ನು ನಿರ್ದಿಷ್ಟವಾಗಿ ಗುರುತಿಸುವುದಕ್ಕೆ ಈ ಸಾಹಿತ್ಯದ ಪರಂಪರೆಯಲ್ಲಿ ಕಳಚುಕೊಂಡಿಗಳನ್ನು ಇನ್ನೂ ಗುರುತಿಸಬೇಕಾಗಿದೆ. ಮೊದಲು ಸಹಜಭಾವಾಭಿವ್ಯಕ್ತಿಯ ಮಾಧ್ಯಮವಾಗಿ ಪ್ರಚಲಿತವಿದ್ದ, ಕಾಲದೇಶಗಳು ತಿಳಿಯದ, ಜನಪದ ಕವಿತ್ವದ ಲಲಿತಸುಂದರವಾದ ಗೇಯಬಂಧಗಳು ಬರೆಹಕ್ಕೆ ಬಾರದೆ ನಾಡವರ ನಾಲಗೆಯ ಮೇಲೆ ನರ್ತಿಸುತ್ತಿದ್ದಿರಬೇಕು. ಕನ್ನಡ ನುಡಿಗೆ ಸಂಸ್ಕೃತ ಪ್ರಾಕೃತ ಭಾಷಾಸಾಹಿತ್ಯಗಳ ಸಂಪರ್ಕವೊದಗಿ, ಪ್ರಭಾವವೂ ಹೆಚ್ಚಿದ ಒಂದು ಸಂಧಿಕಾಲದಲ್ಲಿ ಆ ಗೇಯಬಂಧಗಳು ಆ ಮೊದಲೇ ಕನ್ನಡದೊಳಗೆ ಸ್ಥಿರವಾಗಿ ಆಳವಟ್ಟಿರಬಹುದಾದ ಸಂಸ್ಕೃತ ಪ್ರಾಕೃತಾದಿ ಭಾಷೆಗಳ ಅನ್ಯದೇಶ್ಯ ಬಂಧಗಳ ಜೊತೆಗೂಡಿದಂತೆ ತೋರುತ್ತದೆ. ಇವುಗಳ. ಪೌರ್ವಾಪರ್ಯವಿಚಾರ ಜಿಜ್ಞಾಸೆಯ ವಿಷಯವಾಗಿರುವುದುಂಟು. ಹೀಗೆಯೇ ಶಾಸನಪ್ರಚುರ ಗದ್ಯರಚನೆಗಳ ಬಂಧವೂ ಭಾಷೆ ಶೈಲಿಗಳೂ ಅನ್ಯಪ್ರಭಾವದ ಫಲವೇ ಇರಬಹುದಾದ ಗದ್ಯಕಥೆಯಂತಹ ರೂಪಗಳಲ್ಲಿ ಸಮಾವಿಷ್ಟಗೊಂಡು ಕೃತಕೃತ್ಯವಾಗಿರಬೇಕು.

ಸಾಹಿತ್ಯೋದಯ ಕಾಲದ ಕೃತಿಗಳಲ್ಲಿ ಒಂದಾದರೂ ಈಗ ದೊರೆತಿಲ್ಲ; ಆದರೆ ಆ

ಕೃತಿಗಳು ರಚಿತವಾಗಿದ್ದ ರೀತಿಯ ವಿಷಯದಲ್ಲಿ ಕೆಲವು ಸೂಚನೆಗಳು ದೊರೆತಿವೆ. ಪದ, ಪಾಡು, ಮೆಲ್ವಾಡು, ಬೆದಂಡೆಗಬ್ಬ, ಚತ್ತಾಣ ಎಂಬ ಹೆಸರಿನ ಪದ್ಯಕೃತಿಗಳಲ್ಲಿ ಕೆಲವೂ ಗದ್ಯಕಥೆಯಂತಹ ಗದ್ಯಕೃತಿಗಳೂ ಪ್ರಸ್ತುತ ವಿವೇಚನೆಯ ಅವಧಿಯಿಂದೊಳಗೆ, ಎಷ್ಟೋ ಹಿಂದಿನಿಂದ ಕನ್ನಡದಲ್ಲಿ ರಚಿತವಾಗಿದ್ದುವೆಂದು ತಿಳಿಯಲು ಸಾಧ್ಯವಿದೆ. ಇವುಗಳ ಲಕ್ಷಣ ಗಳನ್ನು ತಿಳಿಸುವ ಉಲ್ಲೇಖಗಳನ್ನು ಪರಿಶೀಲಿಸಿದರೆ, ವಸ್ತು ಮತ್ತು ರೀತಿಗಳಲ್ಲಿ ಅಚ್ಚಕನ್ನಡ ಎನ್ನಬಹುದಾದ 'ದೇಸಿ', ಸಂಸ್ಕೃತಾದಿ ಅನ್ಯಕವಿತ್ವ ಪದ್ಧತಿಯ 'ಮಾರ್ಗ' ಇವೆರಡರ ಸರಸ ಸಂಯೋಜನೆಯ ಫಲವಾಗಿ ಅವು ನಿರ್ಮಾಣವಾಗುತ್ತಿದ್ದುವೆಂದು ಭಾವಿಸುವುದಕ್ಕೂ ಅವಕಾಶವಿದೆ.

ಪ್ರಾಚೀನ ಭಾಷೆ, ಸಾಹಿತ್ಯರೂಪಗಳು, ಕವಿಗಳು, ಕೃತಿಗಳು—ಈ ಸಂಬಂಧವಾಗಿ ಸು. ೯-೧೦ನೆಯ ಶತಮಾನದ ಕೆಲವು ಕನ್ನಡ ಕೃತಿಗಳಲ್ಲಿ ಕೆಲವು ಸ್ಪಷ್ಟ ಆಧಾರಗಳು ದೊರೆಯುತ್ತವೆ. ಇವುಗಳಲ್ಲಿ ಹೆಚ್ಚಿನ ಸಹಾಯ ಒದಗಿರುವುದು ಕನ್ನಡದ ಉಪಲಬ್ಧ ಗ್ರಂಥಗಳಲ್ಲಿ ಪ್ರಾಚೀನತಮವಾಗಿರುವ 'ಕವಿರಾಜಮಾರ್ಗ'ದಿಂದ (ಸು. ೮೫೦). ಈ ಕಾವ್ಯಲಕ್ಷಣ ಗ್ರಂಥದ ಕರ್ತೃ ನೃಪತುಂಗನೋ ಮತ್ತಾವನೋ ಇರಲಾರ, ನೃಪತುಂಗನ ಆಸ್ಥಾನಿಕನಾಗಿದ್ದ ಶ್ರೀವಿಜಯನೆಂಬವನಿರಬೇಕು ಎಂದು ಹಲವರ ಗ್ರಹಿಕೆ.

ಈ ಗ್ರಂಥದಲ್ಲಿ ಸಂದರ್ಭೋಚಿತವಾಗಿ ಆ ಮೊದಲಿನ ಕನ್ನಡ ಭಾಷೆ, ಸಾಹಿತ್ಯ ರೂಪಗಳು, ಕವಿಗಳು, ಕನ್ನಡ ನಾಡು, ನಾಡವರ ಸಂಸ್ಕೃತಿ ಇಂಥ ಕೆಲವು ಉಪಯುಕ್ತ ವಿಷಯಗಳು ಸೇರಿವೆ. ಪೂರ್ವಕಾಲೀನ ಕನ್ನಡ ಭಾಷಾಶೈಲಿಗಳ, ಛಂದೋ ವ್ಯಾಕರಣ ಗಳ ಮತ್ತು ಸಾಹಿತ್ಯದ ಗುಣಲಕ್ಷಣ ವಿಮರ್ಶೆ ಕೆಲಮಟ್ಟಿಗಾದರೂ ದೊರೆಯುವುದು ಇದ ರಿಂದ ಸಾಧ್ಯವಾಗಿದೆ. ಆ ವಿಮರ್ಶೆ ಸಮಗ್ರವೇ, ಸ್ಪಷ್ಟವೇ, ನಿರ್ದುಷ್ಟವೇ ಎನ್ನುವ ವಿಷಯ ದಲ್ಲಿ ಅಭಿಪ್ರಾಯಭೇದಗಳಿವೆ; ಲಕ್ಷ್ಯಗಳು ದೊರೆತಲ್ಲದೆ ಏನನ್ನು ಹೇಳುವುದೂ ಕಷ್ಟ. ತನ್ನಮಟ್ಟಿಗೆ ಆ ಗ್ರಂಥ ಕನ್ನಡ ಭಾಷಾಶೈಲಿಗಳ ಪಕ್ವತೆಯನ್ನೂ ಸಾಹಿತ್ಯದ ಸಂಪನ್ನತೆ ಯನ್ನೂ ಚೆನ್ನಾಗಿಯೇ ತೋರಿಸುತ್ತಿರುವುದನ್ನು ಗಮನಿಸಿದರೆ, ಪ್ರಾಯಃ ಕನ್ನಡ ಸಾಹಿತ್ಯದ ಸೃಷ್ಟಿ ಒಂದೆರಡು ಶತಮಾನಗಳ ಕಾಲವನ್ನಾದರೂ ದಾಟಿ, ಒಂದೆರಡು ಘಟ್ಟಗಳನ್ನಾದರೂ ಮೀಟಿ ಮುನ್ನಡೆದಿರುವುದು ಸಾಧ್ಯ ಎನ್ನುವುದರಲ್ಲಿ ಸಂದೇಹವಿರ ಲಾರದು.

'ಕವಿರಾಜಮಾರ್ಗ' ಶಬ್ದಾರ್ಥಾಲಂಕಾರಗಳ ನಿರೂಪಣೆಗೆ ಪ್ರಾಚೀನ ಸಂಸ್ಕೃತ ಕಾವ್ಯಲಕ್ಷಣ ಗ್ರಂಥಗಳನ್ನು ಆಧರಿಸಿದ್ದರೂ, ಸ್ವಂತವೂ ಬೆಲೆಯುಳ್ಳವೂ ಆದ ಕಾವ್ಯ ಮೀಮಾಂಸೆಯ ಅಂಶಗಳೂ ಅದರಲ್ಲಿ ಅಷ್ಟಿಷ್ಟು ಕಂಡುಬರುತ್ತಿವೆಯೆಂಬುದು ಶೋಧಿತ ವಾಗಿರುವ ವಿಚಾರ. ನಾಡುನುಡಿಗಳ ವಿವರಣೆ ವರ್ಣನೆಗಳಲ್ಲಿ, ತತ್ಕಾಲೀನ ಐತಿಹಾಸಿಕ ಸಾಮಾಜಿಕ ಆದಿ ಸಂಗತಿಗಳ ಪ್ರತಿಫಲನಗಳಲ್ಲಿ ಗ್ರಂಥಕರ್ತೃ ತೋರಿರುವ ಮನೋಧರ್ಮ ಸುಕುಮಾರವಾದ್ದು, ಸರಸವಾದ್ದು, ಸಂಪನ್ನವಾದ್ದು. ಆ ಮೊದಲು ಕನ್ನಡ ಜನ ದೃಢ ವಾಗಿ, ಸುಂದರವಾಗಿ ಬೆಳಸಿಕೊಂಡು ಬಂದಿರಬಹುದಾದ ಸಾಹಿತ್ಯ ಸಾಹಿತ್ಯಶಕ್ತಿಗಳ,

ಪ್ರತಿಭೆ ವ್ಯುತ್ಪತ್ತಿಗಳ ಪ್ರತಿಬಿಂಬವನ್ನೇ ಆ ಗ್ರಂಥದಲ್ಲಿ ಕಾಣಬಹುದೆಂದು ತೋರುತ್ತದೆ.

ಉತ್ತರಕಾಲೀನ ಕವಿಗಳೂ ಲಾಕ್ಷಣಿಕರೂ ಕಾಲದಿಂದ ಕಾಲಕ್ಕೆ ಮೆಚ್ಚಿಕೊಂಡು ಬಂದಿರುವ, ಯಥೋಚಿತವಾಗಿ ಬಳಸುತ್ತ ಬಂದಿರುವ, 'ಕವಿರಾಜಮಾರ್ಗ' ಕನ್ನಡ ಸಾಹಿತ್ಯದ ಸೊಬಗಿನ ಕೈಗನ್ನಡಿ, ಚಿನ್ನದ ಬೆಳಗೆ ಆಸೆಯ ಗರಿಯೊಡೆಯಿಸಿದ ಚೆಂಗುಡಿ.

---

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಬೋಧನ ಸಂಶೋಧನ ವಿಭಾಗಗಳ ಸದಸ್ಯರಿಂದ, ಅಗತ್ಯವೆನಿಸಿದಾಗ ವಿಶ್ವವಿದ್ಯಾನಿಲಯದ ಇತರ ವಿಭಾಗಗಳ ಸದಸ್ಯರಿಂದ, ಬರೆಸಿದ ಲೇಖನಗಳಿಂದ ಪ್ರಕೃತ ಸಾಹಿತ್ಯಚರಿತ್ರೆ ಸಿದ್ಧಗೊಳ್ಳುತ್ತಿದೆ.

ಇದುವರೆಗೆ ಗಮನಿಸಲಾಗಿರುವ ಪ್ರತಿಯೊಬ್ಬ ಕವಿಯ ಕಾಲ ದೇಶ ಜೀವನ ಸಾಧನೆ ಮೊದಲಾದ ವಿಷಯಗಳನ್ನು ಚರ್ಚಿಸುವುದು; ಸಮಯೋಚಿತ ಉದ್ಧರಣಗಳೊಡನೆ ಪ್ರತಿಯೊಂದು ಕೃತಿಯನ್ನೂ ಪರಿಚಯ ಮಾಡಿಕೊಡುವುದು ; ಕವಿಕೃತಿಗಳ ವಿಷಯದಲ್ಲಿ ಇದುವರೆಗೆ ನಡೆದಿರುವ ಚರ್ಚೆ ಎಲ್ಲವನ್ನೂ ಇರಬಹುದಾದ ಹೊಸ ಸಂಶೋಧನೆಗಳೊಡನೆ ಸಂಕ್ಷಿಪ್ತವಾಗಿ ನಿರೂಪಿಸುವುದು; ಸಾಧ್ಯವಾದ ಮಟ್ಟಿಗೂ ವಿಮರ್ಶಾತ್ಮಕವಾಗಿ ಕೃತಿಗಳ ಮೌಲ್ಯವನ್ನು ನಿರ್ಧರಿಸುವುದು—ಈ ಸಾಹಿತ್ಯ ಚರಿತ್ರೆಯ ಮುಖ್ಯ ಉದ್ದೇಶ. ಈ ಉದ್ದೇಶವನ್ನು ಈಡೇರಿಸುವಾಗ ಅತ್ಯುತ್ತಮ ಇತಿಹಾಸಕಾರನ, ಲೇಖಕನ, ವಿಮರ್ಶಕನ ಆದರ್ಶಗಳನ್ನು ಗಮನದಲ್ಲಿಟ್ಟುಕೊಂಡು ಕೆಲಸ ಮಾಡಲಾಗುವುದು.

## ಕನ್ನಡ ಅಧ್ಯಯನ ಸಂಸ್ಥೆಯ

# ಕನ್ನಡ ಸಾಹಿತ್ಯ ಚರಿತ್ರೆ

(ಹತ್ತು ಸಂಪುಟಗಳಲ್ಲಿ)

ಸಂಪುಟ ೧ : ಹಿನ್ನೆಲೆ
ಸಂಪುಟ ೨ : ಆದಿಕಾಲದಿಂದ ಕ್ರಿ. ಶ. ಸು. ೮೫೦
ಸಂಪುಟ ೩ : ಕ್ರಿ. ಶ. ಸು. ೮೫೦ ರಿಂದ ಸು. ೧೧೫೦
ಸಂಪುಟ ೪ : ಕ್ರಿ. ಶ. ಸು. ೧೧೫೦ ರಿಂದ ಸು. ೧೩೫೦
ಸಂಪುಟ ೫ : ಕ್ರಿ. ಶ. ಸು. ೧೩೫೦ ರಿಂದ ಸು. ೧೬೫೦
ಸಂಪುಟ ೬ : ಕ್ರಿ. ಶ. ಸು. ೧೬೫೦ ರಿಂದ ಸು. ೧೮೫೦
ಸಂಪುಟ ೭-೮: ಕ್ರಿ. ಶ. ಸು. ೧೮೫೦ ರಿಂದ ಸು. ೧೯೭೦
ಸಂಪುಟ ೯ : ಕೆಲವು ವಿಶೇಷ ರೂಪಗಳು, ವಿಷಯಗಳು
ಸಂಪುಟ ೧೦ : ಅನುಬಂಧಗಳು

ಮೈಸೂರು ವಿಶ್ವವಿದ್ಯಾನಿಲಯ : ಮೈಸೂರು